# ಹಳಗನ್ನಡ ಸಾಂಸ್ಕೃತಿಕ ಪದಕೋಶ

ಪ್ರೊ. ಕೇಶವ ಶರ್ಮ




ಪ್ರಸಾರಾಂಗ
ಮಂಗಳೂರು ವಿಶ್ವವಿದ್ಯಾನಿಲಯ

ಮಂಗಳ ಪದಕೋಶ ಮಾಲಿಕೆ

# ಹಳಗನ್ನಡ ಸಾಂಸ್ಕೃತಿಕ ಪದಕೋಶ

ಪ್ರೊ. ಕೇಶವ ಶರ್ಮ




ಪ್ರಸಾರಾಂಗ
ಮಂಗಳೂರು ವಿಶ್ವವಿದ್ಯಾನಿಲಯ
ಮಂಗಳಗಂಗೋತ್ರಿ

**Halagannada Samskrithika Padakosha**
Key Concept of Halagannada
by
**Prof. Keshava Sharma**
Professor, Kannada Bharathi
Kuvempu University
Vijnana Sahyadri, Shankaragatta
Bhadravathi
Mob : 9448730611

Editorial Committee :
**Dr. Padekallu Vishnu Bhatta**
**Prof. Lokesh K.M.**
**Dr. Dhananjaya Kumble**

Published by :
**Prof. Ismail B.**
Director, Prasaranga
Mangalore University
Mangalagangothri - 574 199
Tel. : 0824 2287592

First Impression : 2018

Size : Demy 1/8    Paper : 70 gsm NS Maplitho
Pages : xxii+730
Copies : 1000
Price : Rs. 625

Cover Design
**Kallur Nagesh**

Page Designed
**Aakrithi Prints**
Light House Hill Road,Mangaluru-1 Tel.: 2443002

Printed at
**Poornima Printers**
Govindarajanagara, Bengaluru

# ಕುಲಪತಿಗಳ ಮಾತು

ಜ್ಞಾನಪ್ರಸರಣ ಮತ್ತು ಪ್ರಕಟಣೆಯ ಆಶಯವನ್ನಿಟ್ಟುಕೊಂಡು ರಾಷ್ಟ್ರಕವಿ ಕುವೆಂಪು ಅವರ ಪರಿಕಲ್ಪನೆಯಿಂದ ಮೈಸೂರು ವಿಶ್ವವಿದ್ಯಾನಿಲಯದಲ್ಲಿ 'ಪ್ರಸಾರಾಂಗ' ಮೊದಲು ಜನ್ಮತಾಳಿತು. ಆ ಬಳಿಕ ರಾಜ್ಯದ ಹೆಚ್ಚಿನ ಎಲ್ಲಾ ವಿಶ್ವವಿದ್ಯಾನಿಲಯಗಳಲ್ಲೂ 'ಪ್ರಸಾರಾಂಗ' ಆರಂಭಗೊಂಡು ಆಯಾಯ ವಿಶ್ವವಿದ್ಯಾನಿಲಯದ ಪ್ರಕಟಣಾಂಗವಾಗಿ ಬೆಳೆಯಿತು. ಮಂಗಳೂರು ವಿಶ್ವವಿದ್ಯಾನಿಲಯವು ಸ್ಥಾಪನೆಗೊಂಡು ಹತ್ತು ವರ್ಷ ತುಂಬಿದಾಗ ದಶಮಾನೋತ್ಸವ ಆಚರಣೆಯ ಸಾರ್ಥಕ ನೆನಪಿಗಾಗಿ ಇಲ್ಲಿ ಪ್ರಸಾರಾಂಗವನ್ನು ಆರಂಭಿಸಲಾಯಿತು.

ಸ್ಥಾಪನೆಗೊಂಡ ಬಳಿಕ ಕಳೆದ ೨೭ ವರ್ಷಗಳಲ್ಲಿ ನಮ್ಮ ವಿಶ್ವವಿದ್ಯಾನಿಲಯದಲ್ಲಿ ಪ್ರಸಾರಾಂಗವು ಜ್ಞಾನ ಪ್ರಸಾರ, ಪ್ರಕಟಣೆ ಮತ್ತು ಪುಸ್ತಕ ಮಾರಾಟದ ಕಾರ್ಯವನ್ನು ಮುತುವರ್ಜಿಯಿಂದ ನಡೆಸುತ್ತಾ ಬರುತ್ತಿದೆ.

ವಿದ್ಯಾರ್ಥಿಗಳಲ್ಲಿ ಅಧ್ಯಯನಾಕಾಂಕ್ಷಿಗಳಲ್ಲಿ ಹಾಗೂ ಸಾರ್ವಜನಿಕರಲ್ಲಿ ಅರಿವನ್ನು ವಿಸ್ತರಿಸುವ, ಜಾಗೃತಿ ಹುಟ್ಟಿಸುವ ಉದ್ದೇಶದಿಂದ ಹಲವು ಉಪನ್ಯಾಸಗಳನ್ನು ಪ್ರಸಾರಾಂಗವು ನಡೆಸುತ್ತಾ ಬರುತ್ತಿದೆ. ವಿಶ್ವವಿದ್ಯಾನಿಲಯದ ವ್ಯಾಪ್ತಿಯ ದಕ್ಷಿಣಕನ್ನಡ, ಉಡುಪಿ ಮತ್ತು ಕೊಡಗಿನ ಪರಿಸರದ ವಿವಿಧ ಶಾಲಾ ಕಾಲೇಜುಗಳಲ್ಲಿ, ಸಾರ್ವಜನಿಕ ಪ್ರದೇಶಗಳಲ್ಲಿ ಈ ಪ್ರಚಾರೋಪನ್ಯಾಸ ಕಾರ್ಯಕ್ರಮಗಳು ನಡೆಯುತ್ತವೆ. ಭಾಷೆ, ಸಾಹಿತ್ಯ, ಶಿಕ್ಷಣ, ಕಲೆ, ವಿಜ್ಞಾನ, ವಾಣಿಜ್ಯ, ಪರಿಸರ, ರಂಗಭೂಮಿ, ಆರೋಗ್ಯ ಹೀಗೆ ಹಲವು ಸಾರ್ವಜನಿಕ ಆಸಕ್ತಿಯ ಮತ್ತು ಅಗತ್ಯದ ವಿಚಾರಗಳನ್ನು ಮುಂದಿಟ್ಟುಕೊಂಡು ತಜ್ಞ ಸಂಪನ್ಮೂಲ ವ್ಯಕ್ತಿಗಳಿಂದ ಈ ಉಪನ್ಯಾಸ ಕಾರ್ಯಕ್ರಮವನ್ನೂ ನಡೆಸುವುದಲ್ಲದೇ, ಅದನ್ನು ಕೃತಿ ರೂಪದಲ್ಲಿ ಪ್ರಕಟಿಸಿ ಹೆಚ್ಚಿನ ಓದುಗರಿಗೆ ತಲಪಿಸುವ ಕಾರ್ಯವನ್ನೂ ಪ್ರಸಾರಾಂಗ ಮಾಡುತ್ತಾ ಬಂದಿದೆ. ಈಗಾಗಲೇ ಸುಮಾರು ೧೩೮ ಪ್ರಚಾರೋಪನ್ಯಾಸ ಗಳನ್ನು ಪ್ರಸಾರಾಂಗವು ಸಂಘಟಿಸಿದ್ದು, ಪ್ರಚಾರೋಪನ್ಯಾಸ ಮಾಲಿಕೆಯಲ್ಲಿ ೫೧ ಕೃತಿಗಳನ್ನು ಪ್ರಕಟಿಸಿರುತ್ತದೆ.

ಮೌಲಿಕ ಕೃತಿಗಳ ಪ್ರಕಟಣೆ ಪ್ರಸಾರಾಂಗದ ಮುಖ್ಯ ಧ್ಯೇಯ. ಸಂಶೋಧನೆ, ಅಧ್ಯಯನಪೂರ್ಣ ಕೃತಿಗಳು, ವಿಮರ್ಶೆ, ಸೃಜನಶೀಲ ಸಾಹಿತ್ಯ, ಮಾನವಿಕ, ವಾಣಿಜ್ಯ, ವಿಜ್ಞಾನ ಸಂಬಂಧಿ ಕೃತಿಗಳು, ಜಾನಪದ, ರಂಗಭೂಮಿ ಕುರಿತ ಕೃತಿಗಳು – ಹೀಗೆ ವೈವಿಧ್ಯಪೂರ್ಣ ನೆಲೆಗಳ ಪ್ರಕಾರಗಳ ಮಹತ್ತರ ಕೃತಿಗಳನ್ನು ಮಂಗಳೂರು

ವಿಶ್ವವಿದ್ಯಾನಿಲಯದ ಪ್ರಸಾರಾಂಗವು ಪ್ರಕಟಿಸುತ್ತಾ ಬರುತ್ತಿದೆ. ಈಗಾಗಲೇ ೧೫೮ ಕೃತಿಗಳನ್ನು ಪ್ರಸಾರಾಂಗವು ಪ್ರಕಟಿಸಿದೆ. ಅದರಲ್ಲಿ ರಜತಗ್ರಂಥ ಸರಣಿಯ ಅಪೂರ್ವ ೨೫ ಕೃತಿಗಳೂ ಸೇರಿವೆ.

ಪದವಿ ತರಗತಿಗಳಿಗಿರುವ ಕನ್ನಡ ಭಾಷಾ ಪಠ್ಯಪುಸ್ತಕಗಳನ್ನು ಹಲವು ವರ್ಷಗಳಿಂದ ಪ್ರಸಾರಾಂಗವೇ ಪ್ರಕಟಿಸುತ್ತಾ ಬರುತ್ತಿರುವುದು ಅಭಿನಂದನಾರ್ಹ ವಿಷಯ. ಈಗಾಗಲೇ ಮಂಗಳ ಪಠ್ಯಪುಸ್ತಕಮಾಲಿಕೆಯಡಿ ೭೫ ಕೃತಿಗಳು ಪ್ರಕಟವಾಗಿದೆ. ಕೃತಿ ಪ್ರಕಟಣೆಯ ಜೊತೆಗೆ ಓದುಗರ ಕೈಗೆ ಪುಸ್ತಕಗಳನ್ನು ತಲುಪಿಸುವ ಉದ್ದೇಶದಿಂದ ಅಲ್ಲಲ್ಲಿ ಪುಸ್ತಕ ಪ್ರದರ್ಶನ ಮತ್ತು ಮಾರಾಟದ ಜವಾಬ್ದಾರಿಯನ್ನು ಪ್ರಸಾರಾಂಗ ನಿರ್ವಹಿಸುತ್ತಿದೆ. ಸಂಚಾರಿ ಗ್ರಂಥಾಲಯ ಮತ್ತು ಮಾರಾಟ ವ್ಯವಸ್ಥೆಯನ್ನು ಸದ್ಯದಲ್ಲೇ ಪ್ರಸಾರಾಂಗವು ಹೊಂದಲಿದೆ. ಈ ಎಲ್ಲ ಕಾರ್ಯಚಟುವಟಿಕೆಗಳನ್ನು ಅತ್ಯಂತ ಜವಾಬ್ದಾರಿಯಿಂದ ನಿರ್ವಹಿಸುತ್ತಿರುವ ಪ್ರಸಾರಾಂಗದ ನಿರ್ದೇಶಕರಾದ ಪ್ರೊ. ಇಸ್ಮಾಯಿಲ್ ಬಿ. ಮತ್ತು ಸಹಾಯಕ ನಿರ್ದೇಶಕ ಡಾ.ಧನಂಜಯ ಕುಂಬ್ಳೆ ಇವರನ್ನು ನಾನು ಅಭಿನಂದಿಸುತ್ತೇನೆ.

ಪ್ರಸ್ತುತ ಈ ಕೃತಿಯನ್ನು ಕನ್ನಡದ ಮುಖ್ಯ ಚಿಂತಕರೂ, ಬರಹಗಾರರೂ ಆದ ಶಿವಮೊಗ್ಗ ಕುವೆಂಪು ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರಾದ ಡಾ. ಕೆ. ಕೇಶವ ಶರ್ಮ ಇವರು ಸಿದ್ಧಪಡಿಸಿದ್ದಾರೆ. ಹಳೆಗನ್ನಡ ಕಾವ್ಯದ ಓದು, ಅರ್ಥೈಸುವಿಕೆ ಮತ್ತು ವಿಶ್ಲೇಷಣೆಗೆ ತುಂಬಾ ಉಪಕಾರಿಯಾಗುವ ಈ ಸಾಂಸ್ಕೃತಿಕ ಪದಕೋಶವು ವಿದ್ವತ್‌ಲೋಕಕ್ಕೆ ಒಂದು ಅಪೂರ್ವ ಕೊಡುಗೆ. ಇದನ್ನು ಪ್ರಕಟಣೆಗೆ ಒದಗಿಸಿದ ಪ್ರೊ. ಕೇಶವ ಶರ್ಮರಿಗೆ ನಾವು ಆಭಾರಿಗಳು.

ಮುಂದೆಯೂ ಪ್ರಸಾರಾಂಗದ ಎಲ್ಲ ಚಟುವಟಿಕೆಗಳಿಗೆ ವಿಶ್ವವಿದ್ಯಾನಿಲಯದ ಸಕಲ ಸಹಕಾರ ಮತ್ತು ಪ್ರೋತ್ಸಾಹವಿದೆ ಎಂಬ ಭರವಸೆಯೊಂದಿಗೆ ಪ್ರಸಾರಾಂಗದ ಮುಂದಿನ ಕಾರ್ಯಯೋಜನೆಗಳಿಗೆ ಶುಭ ಹಾರೈಸುತ್ತೇನೆ.

ಮಂಗಳೂರು ವಿಶ್ವವಿದ್ಯಾನಿಲಯ<br>
ಫೆಬ್ರವರಿ ೨೦೧೮

**ಪ್ರೊ. ಕೆ. ಭೈರಪ್ಪ**<br>
ಕುಲಪತಿಗಳು

# ನಿರ್ದೇಶಕರ ಮಾತು

ಪ್ರಸಾರಾಂಗವು ವಿಶ್ವವಿದ್ಯಾನಿಲಯದ ಪ್ರಕಟಣಾಂಗ. ಮಂಗಳೂರು ವಿಶ್ವವಿದ್ಯಾನಿಲಯದ ಸ್ಥಾಪನೆಯ ದಶಮಾನೋತ್ಸವದ ಸಂದರ್ಭದಲ್ಲಿ ಆರಂಭಗೊಂಡ ಈ ಪ್ರಸಾರಾಂಗವು ಅನೇಕ ಮೌಲಿಕ ಕೃತಿಗಳ ಪ್ರಕಟಣೆಯ ಮೂಲಕ ರಜತ ಸಂಭ್ರಮವನ್ನು ಅರ್ಥಪೂರ್ಣಗೊಳಿಸಿದೆ. ಹೊಸ ಯೋಜನೆ, ಇನ್ನಷ್ಟು ಕ್ರಿಯಾಶೀಲತೆಯೊಂದಿಗೆ ಮುಂದಿನ ದಿನಗಳಲ್ಲಿ ಪ್ರಸಾರಾಂಗವು ಕಾರ್ಯನಿರ್ವಹಿಸಲಿದೆ.

ಗುಣಮಟ್ಟದ ಕೃತಿಗಳ ಪ್ರಕಟಣೆ ಪ್ರಸಾರಾಂಗದ ಮುಖ್ಯ ಗುರಿ. ಸಂಶೋಧನೆ, ಅಧ್ಯಯನಪೂರ್ಣ ಕೃತಿಗಳು, ವಿಮರ್ಶೆ, ಸೃಜನಶೀಲ ಸಾಹಿತ್ಯ, ಮಾನವಿಕ, ವಾಣಿಜ್ಯ, ವಿಜ್ಞಾನ ಸಂಬಂಧಿ ಕೃತಿಗಳು, ಜಾನಪದ, ರಂಗಭೂಮಿ ಕುರಿತ ಕೃತಿಗಳು – ಹೀಗೆ ವೈವಿಧ್ಯಪೂರ್ಣ ವಿಷಯಗಳ ಕುರಿತು ಮಹತ್ವದ ಕೃತಿಗಳನ್ನು ಮಂಗಳೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗವು ಪ್ರಕಟಿಸುತ್ತಾ ಬರುತ್ತಿದೆ. ಈಗಾಗಲೇ ಸುಮಾರು ೧೬೦ ಕೃತಿಗಳನ್ನು ಪ್ರಸಾರಾಂಗವು ಪ್ರಕಟಿಸಿದೆ.

ಜ್ಞಾನ ಪ್ರಸರಣದ ಮಹತ್ವದ ಜವಾಬ್ದಾರಿಯನ್ನು ನಿರ್ವಹಿಸುತ್ತಿರುವ ಪ್ರಸಾರಾಂಗವು ವಿದ್ಯಾರ್ಥಿಗಳಲ್ಲಿ ಸಾರ್ವಜನಿಕರಲ್ಲಿ ತಿಳುವಳಿಕೆಯನ್ನು ಮೂಡಿಸುವ, ಜಾಗೃತಿಯನ್ನುಂಟು ಮಾಡುವ ಉದ್ದೇಶದಿಂದ ಹಲವು ಉಪನ್ಯಾಸಗಳನ್ನು ನಡೆಸುತ್ತಾ ಬರುತ್ತಿದೆ. ವಿಶ್ವವಿದ್ಯಾನಿಲಯದ ವ್ಯಾಪ್ತಿಯ ದಕ್ಷಿಣಕನ್ನಡ, ಉಡುಪಿ ಮತ್ತು ಕೊಡಗಿನ ಪರಿಸರದ ವಿವಿಧ ಶಾಲಾ ಕಾಲೇಜುಗಳಲ್ಲಿ, ಸಾರ್ವಜನಿಕ ಪ್ರದೇಶಗಳಲ್ಲಿ ಈ ಪ್ರಚಾರೋಪನ್ಯಾಸ ಕಾರ್ಯಕ್ರಮಗಳು ನಡೆಯುತ್ತವೆ. ತಜ್ಞ ಸಂಪನ್ಮೂಲ ವ್ಯಕ್ತಿಗಳಿಂದ ಈ ಉಪನ್ಯಾಸ ಕಾರ್ಯಕ್ರಮವನ್ನೂ ನಡೆಸಿ ಅದರ ಲಿಖಿತ ರೂಪವನ್ನು ಪ್ರಕಟಿಸಿ ಹೆಚ್ಚಿನ ಓದುಗರಿಗೆ ತಲಪಿಸುವ ಕಾರ್ಯವನ್ನೂ ಪ್ರಸಾರಾಂಗ ಮಾಡುತ್ತಾ ಬಂದಿದೆ. ಈಗಾಗಲೇ ಸುಮಾರು ೧೩೮ ಪ್ರಚಾರೋಪನ್ಯಾಸಗಳನ್ನು ಪ್ರಸಾರಾಂಗವು ಸಂಘಟಿಸಿದ್ದು, ಪ್ರಚಾರೋಪನ್ಯಾಸ ಮಾಲಿಕೆಯಲ್ಲಿ ೫೧ ಕೃತಿಗಳನ್ನು ಪ್ರಕಟಿಸಿರುತ್ತದೆ.

ಮಂಗಳ ಪಠ್ಯಪುಸ್ತಕ ಮಾಲಿಕೆಯಡಿ ಕನ್ನಡ ಪದವಿ ಪಠ್ಯ ಪುಸ್ತಕಗಳನ್ನು ಕಳೆದ ಹಲವು ವರ್ಷಗಳಿಂದ ಪ್ರಸಾರಾಂಗವು ಪ್ರಕಟಿಸುತ್ತಿದ್ದು ಅದನ್ನು ಮುಂದುವರಿಸುತ್ತಿದೆ. ಈಗಾಗಲೇ ಅದರಲ್ಲಿ ೭೫ ಪುಸ್ತಕಗಳು ಪ್ರಕಟಗೊಂಡಿವೆ.

ಹಳೆಗನ್ನಡದ ಈ ಸಾಂಸ್ಕೃತಿಕ ಪದಕೋಶವು ಅತ್ಯಂತ ಮಹತ್ವದ ಕೃತಿಯಾಗಿದ್ದು

ಶಿವಮೊಗ್ಗ ಕುವೆಂಪು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದ ಹಿರಿಯ ಪ್ರಾಧ್ಯಾಪಕರಾಗಿರುವ ಡಾ. ಕೆ. ಕೇಶವ ಶರ್ಮ ಇವರು ಇದನ್ನು ತಯಾರಿಸಿ ಕೊಟ್ಟಿದ್ದಾರೆ. ಅವರ ಶ್ರದ್ಧೆ, ಪರಿಶ್ರಮ ಹಾಗೂ ವಿದ್ವತ್‌ಗೆ ನಾವು ಗೌರವವನ್ನು ಸಮರ್ಪಿಸುತ್ತೇವೆ. ಪ್ರಕಟಣೆಗೆ ಒದಗಿಸಿದ್ದಕ್ಕೆ ಕೃತಜ್ಞರಾಗಿದ್ದೇವೆ.

ವಿಶ್ವವಿದ್ಯಾನಿಲಯದ ಗೌರವಾನ್ವಿತ ಕುಲಪತಿಗಳಾದ ಪ್ರೊ. ಕೆ. ಭೈರಪ್ಪ ಅವರ ಮಾರ್ಗದರ್ಶನದಂತೆ ಪ್ರಸಾರಾಂಗವು ಕಾರ್ಯನಿರ್ವಹಿಸುತ್ತಿದ್ದು ಪ್ರಸಾರಾಂಗದ ಭವಿಷ್ಯದ ದೃಷ್ಟಿಯನ್ನಿಟ್ಟುಕೊಂಡು ಮುತುವರ್ಜಿಯಿಂದ ಕುಲಪತಿಗಳು ಹಲವು ಯೋಜನೆಗಳನ್ನು ರೂಪಿಸಿದ್ದಾರೆ. ಪ್ರಸಾರಾಂಗಕ್ಕೆ ವಿಸ್ತೃತವಾದ ಮಾರಾಟ ಮಳಿಗೆಯನ್ನು ರೂಪಿಸುವುದು ಹಾಗೂ ಸಂಚಾರಿ ಗ್ರಂಥಾಲಯ ಮತ್ತು ಮಾರಾಟ ವ್ಯವಸ್ಥೆಯನ್ನು ಕಲ್ಪಿಸುವುದು ಅದರಲ್ಲಿ ಮುಖ್ಯವಾದುದು. ಸದಾ ಪ್ರೋತ್ಸಾಹಿಸುತ್ತಿರುವ ಕುಲಪತಿಗಳಿಗೆ ನಾನು ಕೃತಜ್ಞತೆಗಳನ್ನು ಸಮರ್ಪಿಸುತ್ತೇನೆ. ಅಂತೆಯೇ ಪ್ರಸಾರಾಂಗದ ಚಟುವಟಿಕೆಗಳನ್ನು ಬೆಂಬಲಿಸುತ್ತಿರುವ ಕುಲಸಚಿವರಾದ ಪ್ರೊ. ಬಿ.ಎಸ್. ನಾಗೇಂದ್ರ ಪ್ರಕಾಶ್ ಇವರಿಗೆ ವಂದನೆಗಳನ್ನು ಸಮರ್ಪಿಸುತ್ತೇನೆ.

ಪ್ರಸಾರಾಂಗದ ಎಲ್ಲ ಕಾರ್ಯವನ್ನು ಸುಗಮವಾಗಿ ನಿರ್ವಹಿಸಲು ನನ್ನ ಜೊತೆಗೆ ಬೆಂಬಲವಾಗಿ ನಿಂತಿರುವ ಸಹಾಯಕ ನಿರ್ದೇಶಕ ಡಾ. ಧನಂಜಯ ಕುಂಬ್ಳೆಯವರಿಗೆ, ಕಛೇರಿ ನಿರ್ವಹಣೆಯ ಜವಾಬ್ದಾರಿಯನ್ನು ಅಚ್ಚುಕಟ್ಟಾಗಿ ನಡೆಸುತ್ತಿರುವ ಶ್ರೀಮತಿ ಭಾರತಿ ಮತ್ತು ಭರತ್ ಇವರಿಗೆ ನನ್ನ ವಂದನೆಗಳು. ಎಂದಿನಂತೆ ಸುಂದರವಾಗಿ ವಿನ್ಯಾಸಗೊಳಿಸಿದ ಆಕೃತಿ ಪ್ರಿಂಟ್ಸ್‌ನ ಕಲ್ಲೂರು ನಾಗೇಶ ಮತ್ತು ಬಳಗಕ್ಕೆ, ಮುದ್ರಿಸಿದ ಪೂರ್ಣಿಮಾ ಪ್ರಿಂಟರ್ಸ್, ಬೆಂಗಳೂರು ಇವರಿಗೆ ವಂದನೆಗಳು.

ಮಂಗಳೂರು ವಿಶ್ವವಿದ್ಯಾನಿಲಯ
ಫೆಬ್ರವರಿ ೨೦೧೮

**ಪ್ರೊ. ಇಸ್ಮಾಯಿಲ್ ಬಿ.**
ನಿರ್ದೇಶಕರು

## ಲೇಖಕರ ಮಾತು

ಈ ಪುಸ್ತಕವನ್ನು ಬರೆದಿಟ್ಟು ಹೆಚ್ಚು ಕಡಿಮೆ ಆರೇಳು ವರ್ಷಗಳಾದವು. ಪ್ರಕಟಣೆಗೆ ಅನೇಕ ಸಮಸ್ಯೆಗಳು ಎದುರಾದವು. ವಾಸ್ತವವಾಗಿ ಈ ಯೋಜನೆ ಪ್ರಸ್ತಾವನೆಯನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರಕ್ಕೆ ಕೊಟ್ಟಿದ್ದೆ. ಆಗ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾಗಿದ್ದ ಶ್ರೀ ಮುಖ್ಯಮಂತ್ರಿ ಚಂದ್ರು ಅವರು ಇದರ ಮಹತ್ವವನ್ನು ಅರಿತುಕೊಂಡು ಯೋಜನೆಗೆ ಸಹಾಯ ನೀಡಲು ಮುಂದಾದರು. ಆಗ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಸದಸ್ಯರಾಗಿದ ಶ್ರೀಗಳಾದ ವಿಷ್ಣುನಾಯಕರು, ಬಿ.ಸುರೇಶ್ ಅವರು ಹಾಗೂ ಹಿರಿಯರಾದ ಕಾ.ತ. ಚಿಕ್ಕಣ್ಣ, ಆಗಿನ ಅಕಾಡೆಮಿಯ ಅಧ್ಯಕ್ಷರಾಗಿದ್ದ ಶ್ರೀ ಎಂ.ಎಚ್. ಕೃಷ್ಣಯ್ಯ, ಪರಿಶೀಲಕರಾದ ವೀರಣ್ಣ ರಾಜೂರ, ಜಮೀರುಲ್ಲಾ ಶರೀಫ್ ಇದರ ಅಗತ್ಯವನ್ನು ಮನಗಂಡರು. ಇಂಥ ಯೋಜನೆಯನ್ನು ಬೆಂಬಲಿಸಿದ ಈ ಹಿರಿಯರನ್ನು ಕೃತಜ್ಞತೆಯಿಂದ ನೆನೆಯುತ್ತೇನೆ. ಆದರೆ ಕೊಂಕುನುಡಿ, ಅಪಸ್ವರಗಳನ್ನು ಎತ್ತಿದವರೂ ಇದ್ದಾರೆ. ಕೆಲವರಿಗೆ ಪರಿಕಲ್ಪನೆಯೆಂದರೇನು ಎಂದೂ ಗೊತ್ತಿಲ್ಲ. ಸಾಮಾನ್ಯ ಮನುಷ್ಯರು ಇಂಥ ಕೋಶದ ಅಗತ್ಯವನ್ನು ತಿಳಿಯದಿದ್ದರೆ ತೊಂದರೆಯಿಲ್ಲ. ಆದರೆ ಸಾಹಿತ್ಯವನ್ನು ಬೋಧಿಸುವವರಿಗೂ ಹಳೆಗನ್ನಡದ ಪರಿಭಾಷೆಗಳು, ಅದರ ಹಿಂದಿನ ಚರಿತೆಯ ತಿಳುವಳಿಕೆ ಇಲ್ಲದೆ ಹೋಗಿರುವುದು ಸಮಕಾಲೀನ ದುರಂತಗಳಲ್ಲಿ ಒಂದು. ಅಂಥವರಿಂದ ಈ ಕೋಶವು ಅಭಿವೃದ್ಧಿ ಪ್ರಾಧಿಕಾರದಲ್ಲಿ ಪ್ರಕಟವಾಗುವುದು ತಪ್ಪಿಹೋಯಿತು. ಈ ವಿಷಯದಲ್ಲಿ ನನಗೆ ಖೇಧವಿದೆ. ಅನಂತರ ನನ್ನ ಪರಿಕಲ್ಪನೆಗಳ ಕೋಶಗಳು ಪ್ರಕಟವಾದವು. ಮತ್ತೆ ಮರುಜೀವ ಪಡೆದುಕೊಂಡಿರುವುದು ಈಗ. ಇದನ್ನು ಪ್ರಕಟಣೆಗೆ ಕೈಗೆತ್ತಿಕೊಂಡ ಮಂಗಳೂರು ವಿಶ್ವವಿದ್ಯಾನಿಲಯ ಪ್ರಸಾರಾಂಗದ ಆಗಿನ ನಿರ್ದೇಶಕರಾದ ನನ್ನ ಆತ್ಮೀಯ ಮಿತ್ರರಾದ ಡಾ. ಶ್ರೀಪತಿ ಕಲ್ಲೂರಾಯರಿಗೆ ಮತ್ತು ಮಂಗಳೂರು ವಿಶವಿದ್ಯಾನಿಲಯದ ಕುಲಪತಿಯವರಿಗೆ, ಹಾಗೂ ಕುಲಸಚಿವರಿಗೆ, ಪ್ರಸಾರಾಂಗದ ಈಗಿನ ನಿರ್ದೇಶಕರಾದ

ಪ್ರೊ. ಇಸ್ಮಾಯಿಲ್ ಬಿ. ಹಾಗೂ ಸಹಾಯಕ ನಿರ್ದೇಶಕರಾದ ಡಾ. ಧನಂಜಯ ಕುಂಬ್ಳೆಯವರಿಗೆ ವಂದನೆಗಳು.

ಪರಿಕಲ್ಪನೆಗೆ ಕಲ್ಪನೆಯನ್ನು ವ್ಯವಸ್ಥಿತವಾಗಿ ಕಟ್ಟು, ಸರಿಯಾಗಿ ಜೋಡಿಸು ಎಂಬ ಅರ್ಥಗಳಿವೆ. ಹಾಗೆಯೇ ಪರಿಭಾಷೆಯೆಂದರೆ ಆಯಾ ಕಾಲದ ಸಾಹಿತ್ಯ, ಧರ್ಮ, ಸಮಾಜವು ತನಗೆ ಬೇಕಾದ ಪದಗಳನ್ನು ವಿಶಿಷ್ಟವಾಗಿ ಬಳಸುವುದು. ಈ ಕೃತಿಯು ಅದನ್ನು ಹೇಳುತ್ತದೆ. ಅನ್ಯ ಲೇಖಕರು ಹೇಳಿರುವ ವಿವರಗಳನ್ನೂ ನಮೂದಿಸಿದ್ದೇನೆ. ಈ ಕೆಲಸವನ್ನು ಮಾಡುವಾಗ ನಾವು ಒಂದು ತಂಡವನ್ನು ಮಾಡಿಕೊಂಡಿದ್ದೇವೆ.

೧. ಸಹಾಯ : ಡಾ. ರಮೇಶ್ ಆಚಾರ್, ಉಪನ್ಯಾಸಕರು, ಬ್ರಹ್ಮಾವರ
೨. ಕರಡು ತಿದ್ದುಪಡಿ : ಶ್ರೀಮತಿ ಕಾವ್ಯ
೩. ರಾಜಶೇಖರ್, ಉಪನ್ಯಾಸಕರು, ಸಿಲ್ವರ್ ಜ್ಯುಬಿಲಿ ಜೂನಿಯರ್ ಕಾಲೇಜು ಭದ್ರಾವತಿ
೪. ಬೆರಳಚ್ಚು : ಶ್ರೀಮತಿ ಸುಮ ಹಾಗೂ ಶ್ರೀಮತಿ ಅರ್ಪುದಮೇರಿ

ಈ ಎಲ್ಲರಿಗೂ ನಾನು ಕೃತಜ್ಞನಾಗಿದ್ದೇನೆ.

**ಕೇಶವ ಶರ್ಮ ಕೆ.**

# ಪುಟನೋಟ

# ಅ

## ೧. ಅಂಕವಣಿ

*ನಕುಳನುಂ **ಅಂಕವಣಿಯುಂ** ಬಾಳುಂ ಬಾರು ಚಮ್ಮಟಿಕೆಯುಮನೊರ್ವ ಕೇಟಾಳಿಂ ಪಿಡಿಯಿಸಿಕೊಂಡು ಬಂದು ವಿರಾಟನಂ ಕಂಡೆಂತಪ್ಪ ದುಷ್ಟಾಶ್ವಂಗಳುಮನೇಱಲುಂ ತಿರ್ದಲುಂ ಬಲ್ಲೆನು ಎಂದು ಪೇೞ್ದಾಳಾಗಿ.......... (ಪಂ.ಭಾ. ೮–೫೪. ವಚನ)*

ನಕುಲನು ಕುದುರೆಯ ಮೇಲಿನ ತಡಿಯನ್ನು (ಅಂಕವಣಿ) ಕತ್ತಿಯನ್ನು (ಬಾಳು) ಚರ್ಮದ ಲಗಾಮನ್ನು ಚಾವಟಿಯನ್ನು ಒಬ್ಬ ಸೇವಕನಿಂದ ತರಿಸಿ ಎಂಥ ದುಷ್ಟ ಕುದುರೆಯನ್ನೂ ಏರಿ ಅದನ್ನು ಸರಿದಾರಿಗೆ ತರಬಲ್ಲೆನು ಎಂದು ಹೇಳುತ್ತಾನೆ.

ಅಂಕವಣಿ ಎಂದರೆ ಕುದುರೆಯ ಮೇಲಣ ತಡಿ.

ಕುದುರೆಯ ಮೇಲೆ ಹಾಗೆಯೇ ಕುಳಿತುಕೊಳ್ಳಲು ಬರುವುದಿಲ್ಲ. ಯಾಕೆಂದರೆ ಕುದುರೆಯ ಮೇಲೆ ಎರಡು ಆವಶ್ಯಕ ಸಂಗತಿಗಳಿವೆ: ಒಂದು ಅದರ ಮೂಗುದಾರ. ಇದರಿಂದ ನಿಯಂತ್ರಣ ಸಾಧ್ಯ. ಎರಡನೆಯದು ತಡಿ. ಇದು ಕುದುರೆಯ ಸವಾರನಿಗೆ ಕುಳಿತುಕೊಳ್ಳಲು ಸರಿಯಾದ ಅವಕಾಶ ಮತ್ತು ಕುದುರೆಯು ಹಾರಿದಾಗಲೂ ನಿಯಂತ್ರಣ ಸಾಧಿಸಲು ಒಂದು ಹಿಡಿತವನ್ನು ಕೊಡುತ್ತದೆ. ಲಗಾಮು ಮತ್ತು ಚಾವಟಿ ಕುದುರೆಯ ನಿಯಂತ್ರಣಕ್ಕೆ ಆವಶ್ಯಕವಾಗಿದೆ.

## ೨. ಅಂಗ ಹಾರ

*ಭರತಾಗಮದೊಳ್ ಮೂವತ್ತರಡೆನೆ **ನೆಗಟ್ದಂಗಹಾರಮುಂ** ನೂಱೆಂಟುಂ ಕರಣಮುಮನ್.......... (ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೯–೨೯)*

ಭರತ ಶಾಸ್ತ್ರೋಕ್ತವಾದ ಮೂವತ್ತೆರಡು ಅಂಗಹಾರಗಳೂ, ನೂರೆಂಟು ಕರಣಗಳೂ ನೀಲಾಂಜನೆಯ ಪೀಕದಾನಿಯನ್ನು ಹಿಡಿಯುವ ಪರಿಚಾರಿಕೆಗೂ ಗೊತ್ತಿರುವ ವಿಚಾರ ಇಲ್ಲಿದೆ. ಅಂಗಹಾರವೆಂದರೆ ಆಂಗಿಕ ಅಭಿನಯವೆಂದು ಅರ್ಥ. ಅಂಗಗಳ ಮೂಲಕ ಭಾವ ಪ್ರಕಟಣೆಯೇ ಅಂಗಹಾರ.

"ಹಸ್ತಾಭಿನಯವು ಪತಾಕ, ತ್ರಿ–ಪತಾಕ, ಕರ್ತರೀಮುಖ, ಅರ್ಧಚಂದ್ರ, ಅರಾಲ, ಶುಕತುಂಡ, ಮುಷ್ಟಿ, ಶಿಖರ, ಕಪಿತ್ಥ, ಕಟಕಾಮುಖ, ಸೂಚ್ಯಾಸ್ಥ, ಪದ್ಮಕೋಶ, ಸರ್ಪಶೀರ್ಷಕ, ಮೃಗಶೀರ್ಷ, ಕಾಂಗೂಲ, ಅಲಪದ್ಮ, ಚತುರ, ಭ್ರಮರ, ಹಂಸಾಸ್ಯ, ಹಂಸಪಕ್ಷ, ಸಂದಂಶ, ಮುಕುಲ, ಊರ್ಣನಾಭ ಮತ್ತು ತಾಮ್ರಚೂಡ ಎಂದು ೨೪ ವಿಧಗಳದಾಗಿದೆ. ಇವು ಒಂದು ಕೈಯ ಅಭಿನಯ. ಎರಡೂ ಕೈಗಳನ್ನು ಜೋಡಿಸಿ ಅಂಜಲಿ, ಕಪೋತ, ಕರ್ಕಟ, ಸ್ವಸ್ತಿಕ, ಕಟಕಾವರ್ಧಮಾನ, ಉತ್ಸಂಗ, ನಿಷೇಧ, ದೋಲ, ಪುಷ್ಪಪುಟ, ಮಕರ, ಗಜದಂತ, ಅವಹಿಥ, ಮತ್ತು ವರ್ಧಮಾನ ಎಂದು ೧೩ ತರದ ಅಭಿನಯ. ಪ್ರತಿಯೊಂದು ತರವನ್ನು ಒಂದೊಂದು ಭಾವಕ್ಕಾಗಿ ಬಳಸಬೇಕು. (ಉದಾ:

ಶುಕತುಂಡ ಇದನ್ನು ತಿರಸ್ಕಾರ ಸೂಚನೆಗೆ, ಧಿಕ್ಕಾರ ಎನ್ನಲಿಕ್ಕೆ ಬಳಸಬಹುದು. ಅಂಜಲಿ– ಎರಡೂ ಕೈಗಳದು, ದೇವತೆಗಳನ್ನು ವಂದಿಸಲು ತಲೆಯ ಮೇಲೆ, ಗುರುಗಳನ್ನು ವಂದಿಸಲು ಮುಖದ ಎದುರು, ಮಿತ್ರರಿಗಾಗಿ ಎದೆಯ ಎತ್ತರಕ್ಕೆ, ಮಿಕ್ಕವರಿಗಾಗಿ ಮನಸ್ಸಿಗೆ ಬಂದಂತೆ ಕೈ ಮುಗಿಯಬಹುದು) ಮೊದಲು ಪ್ರತಿಯೊಂದು ಹಸ್ತಾಭಿನಯಕ್ಕಾಗಿ ಕೈ ಮತ್ತು ಬೆರಳುಗಳನ್ನು ಯಾವ ರೀತಿ ಇಟ್ಟುಕೊಳ್ಳಬೇಕೆಂದು ಹೇಳಿ ಆಮೇಲೆ ಅದನ್ನು ಯಾವ ಸಂದರ್ಭದಲ್ಲಿ ಬಳಸಬೇಕು ಎಂಬುದನ್ನು ಹೇಳಲಾಗಿದೆ. ಇಲ್ಲಿನ ವೃತ್ತದ ೬೪ ಹಸ್ತಾಭಿನಯಗಳ ಉಲ್ಲೇಖವೂ ಇದೆ.

ಹಸ್ತಾಭಿನಯದ ತರುವಾಯ 'ಉರಸ್' ಎಂದರೆ ಎದೆಯ ಅಭಿನಯವಿದೆ. ಆಭುಗ್ನ, ನಿರ್ಭುಗ್ನ, ಪ್ರತಂಪಿತ, ಉದ್ವಾಹಿತ, ಸಮ ಎಂದು ಅಯ್ದು ವಿಧಗಳು. ವಿಷಾದ, ಮೂರ್ಚ್ಛಾ ಶೋಕ, ಭಯ, ಶೀತಸ್ಪರ್ಶ ಮುಂತಾದುವುಗಳನ್ನು ಸೂಚಿಸಲು ಎದೆಯನ್ನು ಒಳಗೆಳೆದುಕೊಳ್ಳುವುದು ಆಭುಗ್ನ; 'ನಾನು' ಎಂದು ದರ್ಪ ತಳೆವಾಗ ಎದೆ ಸೆಟೆಸುವುದು ನಿರ್ಭುಗ್ನ ಮುಂತಾಗಿ ಅಯ್ದನ್ನೂ ವರ್ಣಿಸಿ ಅವುಗಳ ಭಾವಸೂಚಕತ್ವ ವನ್ನು ಹೇಳಿದೆ. ಅದರಂತೆ ನಕ, ಸಮುನ್ನತ, ಪ್ರಸಾರಿತ, ವಿವರ್ತಿತ ಮತ್ತು ಅಪಸೃತ ಎಂಬ ಅಯ್ದು ಪಕ್ಕದ ಅಭಿನಯಗಳು; ಛಿನ್ನ, ನಿವೃತ್ತ, ರೇಚಿತ, ಕಂಪಿತ ಮತ್ತು ಉದ್ವಾಹಿತ ಎಂದು ಕಟಿ (ಸೊಂಟದ) ಅಭಿನಯಗಳು ಕೊನೆಯದಾಗಿ, ಪಾದದ ಅಭಿನಯ ಆರು ವಿಧದಲ್ಲಿದೆ, ಉದ್ಘಟಿತ, ಸಮ, ಅಗ್ರತಲಸಂಚರ, ಅಂಚಿತ, ಕುಂಚಿತ ಮತ್ತು ಸೂಚೀಪಾದ ಎಂದು.

ಅಗುರುಲಘುತ್ವಗುಣವನ್ನು ತಿಳಿಯುವುದರಿಂದ ಈ ಕೆಳಗೆ ಹೇಳಿದ ಪ್ರಕಾರ ನಮಗೆ ಅನೇಕ ಲಾಭಗಳಾಗುತ್ತವೆ.

ಸ್ಥಿರಹಸ್ತ, ಪರ್ಯಾಷ್ಟಕ, ಸೂಚೀವಿದ್ದೆ, ಅಪವಿದ್ಧ, ಆಕ್ಷಿಪ್ತಕ, ವಿದ್ಘಟ್ಟಿತ, ವಿಷ್ಕಂಭ, ಅಪರಾಜಿತ, ವಿಷ್ಕಂಭಾಪಸ್ಸೃತ, ಮತ್ತಾಕ್ರೀಡ, ಸ್ವಸ್ತಿಕ, ರೇಚಿತ, ಪಾರ್ಶ್ವಸ್ವಸ್ತಿಕ, ವೃಶ್ಚಿಕಭ್ರಮರ ಮತ್ತಸ್ಖಲಿತಕ, ಮದವಿಲಸಿತ, ಗತಿಮಂಡಲ, ಪರಿಚ್ಛಿನ್ನ, ಪರಿವೃತ್ತ, ರೇಚಿತ, ವೈಶಾಖರೇಚಿತ, ಪರಾವೃತ್ತ, ಅಲಾತಕ, ಪಾರ್ಶ್ವಚ್ಛೇದ, ವಿದ್ಯುದ್ಭಾಂತ, ಉದ್ಧೃತಕ ಅಲೀಢ, ರೇಚಿತ, ಆಚ್ಛುರಿತ, ಆಕ್ಷಿಪ್ತರೇಚಿತ, ಸಂಭಾಂತ, ಉಪಸಪೀತ, ಅರ್ಧನಿಕ್ಕುಟಕ ಇವು ಎಂಬ ಮೂವತ್ತೆರಡು ರೀತಿಯ ಅಂಗಹಾರಗಳನ್ನು ಭರತನು ನಾಟ್ಯ ಶಾಸ್ತ್ರದಲ್ಲಿ ಹೇಳಿದ್ದಾನೆ.

*ವಿವರಗಳಿಗೆ ನೋಡಿ: ಆಮೂರ ಜಿ. ಎಸ್. ೨೦೦೬ ಶ್ರೀರಂಗ ಸಾರಸ್ವತ (ಸಂಪುಟ. ೮)*

*ಆದ್ಯರಂಗಾಚಾರ್ಯ ೧೯೮೩ ಶ್ರೀರಂಗ ನಾಟ್ಯಶಾಸ್ತ್ರ ಸಂಗ್ರಹ ಪುಟ. ೪, ೧೯, ೨೭*

**೩. ಅಂಚೆ**

*ಎನ್ನ ನುಡಿಯಂ ನೀಂ ಕೇಳ್ದುಮೊಂ**ದಂಚೆ**ಯಂ ಪೊದೆದೊಂ**ದಂಚೆ**ಯನುಟ್ಟ ನಿನ್ನಿರವಿದೇನಂಭೋಜಪತ್ರೇ ಕ್ಷಣೇ........... (ಪಂಪಭಾರತ. ೮–೬೬)*

ನನ್ನ ಮಾತನ್ನು ಕೇಳಿ ಒಂದು ವಸ್ತ್ರ (ಅಂಚೆ) ಹೊದೆದುಕೊ. ಎಲೆ ಕಮಲದಳದಂತೆ

ಕಣ್ಣುವಳ್ಳವಳೇ ಏಕವಸ್ತ್ರವನ್ನು (ಅಂಚೆ-ವಸ್ತ್ರ) ಉಟ್ಟಿರುವ ನಿನ್ನ ದುರವಸ್ಥೆ ಏನಿದು? ಇಲ್ಲಿ ಅಂಚೆಯೆಂದರೆ ವಸ್ತ್ರ. ಇದು ಕೀಚಕ ದ್ರೌಪದಿಗೆ ಹೇಳುವ ಮಾತು.

ಸಂಸ್ಕೃತದ 'ಹಂಸ'ದ ತದ್ಭವ ರೂಪ ಅಂಚೆ. ಇಲ್ಲಿ ವಸ್ತ್ರ ಎಂಬರ್ಥದಲ್ಲಿ ಬಳಕೆಯಾಗಿದೆ. ಇದು ವಿಶೇಷ. ಅಂಚು ಎಂದರೆ ತುದಿ. ಏಕವಸ್ತ್ರವನ್ನು ಧರಿಸಿರುವುದು ದುರವಸ್ಥೆಯನ್ನು ಸೂಚಿಸುತ್ತದೆ. ಏಕ ವಸ್ತ್ರಧಾರಣೆಯು ದುರವಸ್ಥೆಯನ್ನು ಸೂಚಿಸುವುದು ಮಾತ್ರವಲ್ಲ. ಶ್ರೀಮಂತರು ಬಹು ವಸ್ತುಗಳನ್ನು ಧರಿಸುತ್ತಿದ್ದರು ಎಂಬುದನ್ನು ಮೇಲಿನ ಮಾತುಗಳು ಹೇಳುತ್ತವೆ.

ಪಂಚೆ ಮತ್ತು ಧೋತ್ರವನ್ನು ಅಂಚೆಯೆಂದು ಕರೆಯಲಾಗಿದೆ.

*ವಿವರಗಳಿಗೆ ನೋಡಿ: ಮರಿಯಪ್ಪ ಭಟ್ಟ ಎಂ. ೧೯೬೯ ಕಿಟ್ಟೆಲ್‌ರ ಕನ್ನಡ-ಇಂಗ್ಲಿಷ್ ನಿಘಂಟು*

**೪. ಅಂಜನ**

*........ಪಾಂಡವರ್ಗಾಭಿಚಾರ ಮಾಗೆ ಬೇಳ್ವ ಬೇಳ್ವೆಯ ಕೊಂಡದೊಳಗಣಿಂದಮಂಜನ ಪುಂಜದಂತಪ್ಪ ಮೆಯ್ಯುಂ ಸಿಡಿಲ ನಡೆಸಿದಂತಪ್ಪ ದಾಡೆಯುಮುರುಯುರುಳಿಯಂತಪ್ಪ ಕಣ್ಣಂ ಕೃತಾಂತನಂತಾಕಾರಮಾಗಿ ತಟಿತಟಿಸಿ ಪೊಳೆವ ಕತ್ತಿಗೆಯುಂ ಬೆರಸು ಕೀರ್ತಿಗೆಯೆಂಬುದಗ್ರದೇವತೆ.........(ಪಂಪ ಭಾರತಂ ೮-೪೨ವ)*

ದುರ್ಯೋಧನನ ಆಜ್ಞೆಯಿಂದ ಆತನ ಪುರೋಹಿತನಾದ ಕನಕಸ್ವಾಮಿಯೆಂಬುವನು ಪಾಂಡವರಿಗೆ ಮಾಟ ಮಾಡಲು ಒಂದು ಹೋಮ ಮಾಡುತ್ತಿದ್ದನು. ಆ ಯಜ್ಞ ಕುಂಡದಿಂದ ಕತ್ತಲೆಯ ಸಮೂಹದಂತಿರುವ ಶರೀರವೂ ಸಿಡಿಲನ್ನು ತುಂಬಿಕೊಂಡ ಹಾಗಿದ್ದ ಕೋರೆಯ ಹಲ್ಲುಗಳೂ ಬೆಂಕಿಯ ಉಂಡೆಯ ಹಾಗಿದ್ದ ಕಣ್ಣೂ ಯಮನ ಹಾಗಿರುವ ಸ್ವರೂಪವೂ ಇವುಗಳನ್ನು ತಾಳಿ ಥಳ ಥಳನೆ ಹೊಳೆಯುತ್ತಿರುವ ಕತ್ತಿಯಿಂದ ಕೂಡಿ ಕೀರ್ತಿಗೆಯೆಂಬ ಒಂದು ಭಯಂಕರವಾದ ದೇವತೆಯೂ....................

ಪಂಪ ಹೇಳುವ ಎರಡು ಅಂಶಗಳು ಗಮನಾರ್ಹ:

೧. ಕನಕಸ್ವಾಮಿಯು ಪಾಂಡವರಿಗೆ ಮಾಟ ಮಾಡಲು ನಡೆಸಿದ ಹೋಮ.

೨. ಎರಡನೆಯದು ಕಣ್ಣಿಗೆ ಅಂಜನ ಹಾಕುವುದು. ಕಣ್ಣಿಗೆ ಅಂಜನ ಹಾಕುವುದರಿಂದ ಸಕಲದೃಷ್ಟಿ ಒದಗುತ್ತದೆ.

ಇದರೊಂದಿಗೆ ಶತ್ರು ದಮನಕ್ಕೆ ಅಂಜನ ಹಾಕುವುದು ಕೂಡಾ ಅಭಿಚಾರ ಕ್ರಿಯೆಯ ಒಂದು ಭಾಗವಾಗಿದೆ. ಸಾಧಕನಿಗೆ ಅಮಾನುಷ ಶಕ್ತಿಯನ್ನು ಕೊಡುವ ಅಂಜನಕ್ಕೆ ಸಿದ್ಧಾಂಜನವೆಂದು ಹೆಸರು.

ಅಂಜನವೆಂದರೆ ಕಾಡಿಗೆ. ಮೂರು ವಿಧದ ಅಂಜನಗಳು-ಕಾಲಾಂಜನ, ರಸ, ಪುಷ್ಪ. ಕಾಲಾಂಜನವೆಂದರೆ ಪ್ರತ್ಯೇಕ- ಶೋತ್ರ, ರಸ, ಸೌವೀರ, ನೇತ್ರ. ಅಂಜನವು ಕಾಡಿಗೆಯನ್ನು ಸೂಚಿಸುತ್ತದೆ. ದೈನಂದಿನ ಕಾಡಿಗೆ ತಯಾರಿಕೆಯು ಸರಳ. ಅಭಿಚಾರ ಕರ್ಮದ ಕಾಡಿಗೆಯು ಬೇರೆ. ತುಳುವಿನಲ್ಲಿ ಈಗಲೂ ಅಂಜನವು ಸಕಲದೃಷ್ಟಿಯನ್ನು

ಸೂಚಿಸಲು ಬಳಕೆಯಾಗುತ್ತದೆ. ಅಂಜನ ಹಾಕುವುದಕ್ಕೆ ಕಣ್ಕಟ್ಟು ವಿದ್ಯೆಯೆಂದೂ ಕರೆಯುತ್ತಾರೆ.

*ವಿವರಗಳಿಗೆ ನೋಡಿ: ಜಿ.ಎನ್. ಚಕ್ರವರ್ತಿ ೨೦೦೯ ಸಂಸ್ಕೃತ –ಕನ್ನಡ ನಿಘಂಟು*

*ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ ೧೯೯೯ ಶ್ರೀವತ್ಸ ನಿಘಂಟು*

*ಹ.ವೆ. ನಾರಾಯಣಶಾಸ್ತ್ರಿ ೧೯೯೯ ನಾಗವರ್ಮ ವಿರಚಿತ ಕರ್ಣಾಟಕ ಕಾದಂಬರಿ (೮–೩೦ವ)*

**೫. ಅಂತಕ**

*ಆರ್ ಕಾವರ**ಂತಕ**ರಾಜಂ ಬಲಗರ್ವಿತಂ ಮುಳಿದೊಡಂ ತಾಯ್ವಾಲೆ ನಂಜಾದೊಡಂ*

*(ಶಾಂತಿಪುರಾಣ ೬–೯೩)*

ಮಹಾಬಲಶಾಲಿಯಾದ ಯಮರಾಜನೇ ದರ್ಪದಿಂದ; ಕೋಪದಿಂದ ಕೈಯಿಕ್ಕಿದಾಗ ಬಿಡಿಸಿಕೊಳ್ಳುವವರಾರು? ತಾಯಿಯ ಹಾಲೇ ವಿಷವಾದರೆ ಕಾಯುವವರು ಯಾರು? ಅಂತಕನೆಂದರೆ ಯಮ. ಅವನಿಗೆ ನಮ್ಮ ಜೀವವನ್ನು ಕಾಯುವ ಶಕ್ತಿಯಿದೆ. ಯಾವಾಗ ಯಮಕಿಂಕರರು ಬಂದು ನಮ್ಮನ್ನು ಸೆಳೆದೊಯ್ಯುತ್ತಾರೋ ಆಗ ನಮಗೆ ಸಾವು ಬರುತ್ತದೆ. ತಾಯಿ ಮೊಲೆ ಹಾಲು ನಂಜಾದರೆ ಕಾಪಾಡುವವರು ಯಾರು ಎಂಬುದು ಪೊನ್ನನ ಪ್ರಶ್ನೆ.

'ಹರ ಕೊಲ್ಲಲ್ ಪರಕಾಯ್ವನೇ' ಎಂಬುದಾಗಿ ಪುಲಿಗೆರೆಯ ಸೋಮೇಶ್ವರನು ಹೇಳಿದ್ದನ್ನು ಸ್ಮರಿಸಬಹುದು.

ಯಮನನ್ನು ದಕ್ಷಿಣ ದಿಕ್ಕಿನ ಒಡೆಯನೆಂದು ಪುರಾಣದಲ್ಲಿ ಕರೆಯಲಾಗಿದೆ. ಶೈಮಿನಿ ಇವನ ರಾಜಧಾನಿ. ಯಮನಿಂದ ಕುಂತಿಯಲ್ಲಿ ಧರ್ಮರಾಜ ಹುಟ್ಟಿದ ಯಮನು ಧರ್ಮಶಾಸ್ತ್ರ ಸರಿಯಾಗಿ ತಿಳಿದವನು ಎಂದು ಹೇಳಲಾಗುತ್ತದೆ. ಇವನ ತಂದೆ ಸೂರ್ಯ. ತಾಯಿ ಸಂಜ್ಞಾದೇವಿ. ಸತ್ತವರನ್ನು ಯಮ ನರಕಕ್ಕೆ ಕರೆದೊಯ್ಯುತ್ತಾನೆಂದು ಹೇಳುತ್ತಾರೆ. ಯಮ–ಯಮಿ ಸಂವಾದ ಋಗ್ವೇದದಲ್ಲಿ ಬರುತ್ತದೆ. ಅವರ ನಡುವೆ ನಡೆದ ಚರ್ಚೆಯು ನೈತಿಕತೆಗೆ ಸಂಬಂಧಿಸಿದ್ದು ಎಂಬುದು ಗಮನಾರ್ಹ.

*ವಿವರಗಳಿಗೆ ನೋಡಿ: ಯಜ್ಞನಾರಾಯಣ ಉಡುಪ ೧೯೭೪ ಪುರಾಣ ಭಾರತಕೋಶ*

*ಎಚ್. ಪಿ. ವೆಂಕಟರಾವ್ ೨೦೦೯ ಋಗ್ವೇದ ಸಂಹಿತಾ.*

**೬. ಅಂತರ್ಮುಹೂರ್ತ**

*ಆ ಜೀವಂ ನೆಲಸಿ ಬಳಿಯ**ಮಂತರ್ಮುಹೂರ್ತ**ದೊಳಾ*

*ಹಾರಶರೀರೇಂದ್ರಿಯೋಚ್ಛ್ವಾಸಭಾಷಾಮನಃಪರ್ಯಾಪ್ತಿಗಳೊಳ್ ನೆರೆದು...........*

*(ಆದಿಪುರಾಣ ೫– ೮೩ ವ)*

ಇಲ್ಲಿ ಬಳಕೆಯಾಗಿರುವ ಅಂತರ್ಮುಹೂರ್ತವೆಂದರೆ; ಆವಲಿಯ ಮೇಲೆ ಮತ್ತು ಮುಹೂರ್ತದ ಒಳಗೆ ಇರುವ ಸಮಯ. ಇದು ೪೮ ನಿಮಿಷಗಳದು; ಒಂದು

ಗಳಿಗೆಯಿಂದ ನಲವತ್ತೇಳು ನಿಮಿಷದವರೆಗಿನ ಕಾಲ.

ಮುಹೂರ್ತ–ಶುಭಗಳಿಗೆ ಎಂದು ಚಾಲ್ತಿಯಲ್ಲಿದೆ. ಮುಹೂರ್ತ ನಿಶ್ಚಯವು ಪಂಚಾಂಗದ ಮೂಲಕ ನಿರ್ಣೀತವಾಗುತ್ತದೆ. ರಾಹುಕಾಲ, ಗುಳಿಕಕಾಲಗಳು ಶುಭಕಾಲ ವಲ್ಲವೆಂದು ಹೇಳಲಾಗುತ್ತದೆ.

ಎರಡನೆಯದಾಗಿ ರಾಹುಕಾಲ; ಗುಳಿಕ ಕಾಲ; ಮುಂತಾದ ಕಾಲಗಳಲ್ಲಿ ಮಾಡುವ ಕಾರ್ಯಗಳು. ಭವಿಷ್ಯತ್ತಿನಲ್ಲಿ ಇವು ದುಷ್ಪರಿಣಾಮ ಬೀರುತ್ತದೆಯೆಂದು ನಂಬುತ್ತಾರೆ. ಅಂತರ್ಮುಹೂರ್ತ ಜೈನ ಧರ್ಮದ ವಿಶಿಷ್ಟವಾದ ಕಾಲಗಳು. ಆವಲಿಯ ಮೇಲೆ ಮುಹೂರ್ತದೊಳಗಿನ ಒಂದುಗಳಿಗೆಯಿಂದ ನಲವತ್ತೇಳು ನಿಮಿಷದವರೆಗಿನ ಕಾಲಗಳು. ಇಲ್ಲಿಯೂ ಗಳಿಗೆಯೆನ್ನುವುದು ಒಂದು ಮಾನದಂಡವಾಗಿದೆ. 'ಗಳಿಗೆ'ಯ ಪರಿಕಲ್ಪನೆಯು ಭಾರತೀಯ ಕಾಲಮಾನವನ್ನು ಅಳೆಯುವ ಒಂದು ಪದ್ಧತಿ.

ಋಷಿಯರ್ಗ್ಗಲ್ಲದೆ ಪೇೞಲುಂ ಕಲಲುಮಾಗದೆಂದೊಡೆ ಅಂತಪ್ಪ ದೀಕ್ಷೆಯಂ ದಯೆಗೆಯ್ಯಿಮೆಂದು ಬೇಡಿದೊಡೊಳ್ಳಿತಪ್ಪ **ಮೂಹೂರ್ತ**ದೊಳ್ ದೀಕ್ಷೆಯಂ ಕೊಟ್ಟು... (ಡಿ.ಎಲ್.ಎನ್.೨೦೦೯ ಪು.೫೦). ವಡ್ಡಾರಾಧನೆಯಲ್ಲಿ ಒಳ್ಳಿತಪ್ಪ ಮುಹೂರ್ತದ ಕುರಿತು ಬರುತ್ತದೆ.

ಮುಹೂರ್ತದ ವಿಷಯವು ಪಂಚಾಂಗದಲ್ಲಿ ಬರುತ್ತದೆ. ಶುಭ ಮುಹೂರ್ತ ಮತ್ತು ಅಶುಭ ಮುಹೂರ್ತವೆಂದು ಎರಡು ಬಗೆ. ಶುಭ ಮುಹೂರ್ತದಲ್ಲಿ ಕೆಲಸ ಮಾಡಿದ ಕೆಲಸವು ಕೈಗೂಡುತ್ತಿದೆ. ಅಶುಭ ಮುಹೂರ್ತದಲ್ಲಿ ಕೆಲಸ ಕಾರ್ಯಗಳನ್ನು ಕೈಗೊಂಡರೆ ಅದರ ಫಲವೂ ಕೆಟ್ಟದಾಗುತ್ತದೆ. ಶುಭ, ಅಶುಭ ಫಲಗಳು ಮುಹೂರ್ತಕ್ಕೆ ಸಂಬಂಧಿಸಿದಂತೆ ಇರುತ್ತದೆ. ರಾಹುಕಾಲ, ಗುಳಿಕ ಕಾಲಗಳು ಅಶುಭಗಳೆಂದು ಪರಿಗಣಿಸಲ್ಪಟ್ಟಿವೆ. ದಿನದ ಹದಿಮೂರು ಭಾಗಮಾಡಿದ ಕಾಲ.ಹೆಚ್ಚು ಕಡಿಮೆ ಮುಹೂರ್ತ ಕಾಲವೆಂದರೆ ೪೫ ನಿಮಿಷಗಳು. ಇದು ಕಾಲಸಂಬಂಧಿತವಾದುದು. ಗ್ರಾಮೀಣ ಪ್ರದೇಶದಲ್ಲಿ ಸಮಯ ಕೂಡಿಬರಬೇಕು ಎಂದು ಹೇಳುವುದುಂಟು. ಸಮಯವೆಂದರೆ ಮುಹೂರ್ತ ವೆಂದೇ ಅರ್ಥ. ಒಂದು ಮುಹೂರ್ತಕಾಲ ನಲುವತ್ತೆಂಟು ನಿಮಿಷಗಳ ಕಾಲ, ಹಗಲಿನ ಹದಿನೈದನೆ ಒಂದುಭಾಗ, ಒಂದು ಕ್ಷಣಕಾಲ; ಅಲ್ಪ ಕಾಲವೆಂಬ ಅರ್ಥಗಳಿವೆ.

ಭಿನ್ನಮುಹೂರ್ತ – ಮುಹೂರ್ತದ ಅಂತ್ಯದಲ್ಲಿರುವ ಒಂದು ಸಮಯವನ್ನು ಕಳೆದರೆ ಆಗುವ ಕಾಲ. ಮುಹೂರ್ತದ ನಡುವಿನ ಕಾಲವು ಅಂತರ್ಮುಹೂರ್ತ. ಮುಹೂರ್ತದ ಆದಿಸಮಯ ಮತ್ತು ಅಂತ್ಯಸಮಯವನ್ನು ಬಿಟ್ಟು ನಡುವಿನ ಕಾಲ.

ಹತ್ತು ನಿಮೇಷಗಳು (ಕಣ್ಣು ಎವೆಯಿಕ್ಕುವ ಸಮಯ) ಮತ್ತು ಎಂಟು ಅಂದರೆ ಹದಿನೆಂಟು ನಿಮೇಷಗಳು ಒಂದು ಕಾಷ್ಠಾ ಮೂವತ್ತುಕಾಷ್ಠಾ ಒಂದು ಕಲಾ. ಮೂವತ್ತು ಕಲಾ ಒಂದು ಮುಹೂರ್ತ.

*ವಿವರಗಳಿಗೆ ನೋಡಿ: ಮಹದೇವ ಪ್ರಭಾಕರ ಪೂಜಾರ ೧೯೭೬ ಜೈನಧರ್ಮದ ಪರಿಭಾಷೆ.*

**೭. ಅಂತೇವಾಸಿ**

*ಭಟ್ಟಾರಕರ್ಬೆಸಸುವುದುಂ **ತದಂತೇವಾಸಿ** ವಿಸ್ಮಯೋದಾತ್ತಚಿತ್ತನಾಗಿ.......(ಸುಕುಮಾರ ಚರಿತಂ. ೫-೫ ವ)*

ವೈದಿಕಯುಗದಲ್ಲಿ 'ವಿದ್ಯಾಸಂಸ್ಥೆ'ಗಳೆಂದು ಕರೆಯಿಸಿಕೊಳ್ಳುವ ಕೇಂದ್ರಗಳಿದ್ದಿಲ್ಲ. ಗುರುವಿನ ಮನೆಯೇ ಪಾಠಶಾಲೆ. ವಿದ್ಯಾರ್ಥಿಯು ಗುರುವಿನ ಮನೆಯಲ್ಲಿ ಗುರುಸೇವೆ ಮಾಡುತ್ತಾ ಗುರುವಿನಿಂದ ವಿದ್ಯೆಯನ್ನು ಕಲಿಯುತ್ತಿದ್ದನು. ಇಂತಹ ವಿದ್ಯಾರ್ಥಿಯನ್ನು 'ಅಂತೇವಾಸಿ' ಎಂದು ಕರೆಯುತ್ತಿದ್ದರು. ಗುರುವಿನೊಡನೆ ಒಂದೇ ಮನೆಯಲ್ಲಿ ವಾಸಿಸುತ್ತಿದ್ದುದರಿಂದ ಆ ಹೆಸರು ಬಂದಿದೆ. ಗುರುವಾದವನು ಸಂಭಾವನೆಯನ್ನು ನಿರೀಕ್ಷಿಸದೆ ಜ್ಞಾನದಾನ ಮಾಡುತ್ತಿದ್ದನು. 'ವಿದ್ಯೆ ಮುಗಿಯುವ ತನಕ ವಿದ್ಯಾರ್ಥಿಯು ಗುರುವಿಗೆ ಯಾವ ರೀತಿಯ ಸಂಭಾವನೆಯನ್ನು ಕೊಡಕೂಡದು ಎನ್ನುತ್ತಾನೆ ಯಮ (II. ೨೪೫)

ಅರ್ಥೋಪಜೀವಿಯಾದ ಉಪಾಧ್ಯಾಯನು ಉಪಪಾತಕಿಯಾಗುತ್ತಾನೆ ಎನ್ನುತ್ತಾನೆ ಯಾಜ್ಞವಲ್ಕ್ಯ (III – ೨೩೬) ಕಾಳಿದಾಸನು ಧನ ಸಂಪಾದನೆ ಬಯಸುವ ವಿದ್ವಾಂಸನನ್ನು 'ಜ್ಞಾನವನ್ನು ಮಾರುವ ವ್ಯಾಪಾರಿ' ಎಂದು 'ಮಾಲವಿಕಾಗ್ನಿಮಿತ್ರದಲ್ಲಿ (೧. ೧೭) ಹಾಸ್ಯ ಮಾಡಿದ್ದಾನೆ – "ಯಸ್ಯಾಗಮಃ ಕೇವಲ ಜೀವಿಕಾಯೈತಂ ಜ್ಞಾನ ಪಣ್ಯಂ ವಣಿಜಂವದಂತಿ"

ಅಂತೇವಾಸಿ ಮತ್ತು ಗುರುವಿನ ಸಂಬಂಧ ನೇರವಾದುದು. ಇಲ್ಲಿ ಯಾವ ಸಂಸ್ಥೆಯ ಮಧ್ಯಸ್ಥಿಕೆಯೂ ಇಲ್ಲ. ವಿದ್ಯಾರ್ಥಿಯೂ ಯಾವ ಸಂಸ್ಥೆಗೂ ಸೇರಿದವನಲ್ಲ. ತನ್ನ ಉಪಾಧ್ಯಾಯನಿಗೆ ಸೇರಿದವನು. ಇದರಿಂದ ಒಬ್ಬೊಬ್ಬ ವ್ಯಕ್ತಿಯ ಶೀಲಾದಿಗಳಿಗೂ ಗಮನವೀಯಲು ಸಾಧ್ಯವಾಯಿತು. ವಿನಯ ಪಿಟಕದಲ್ಲಿ 'ಅಂತೇವಾಸಿ' ಎಂಬ ಪದವು ಸೇವಕ ಅಥವಾ ದಾಸ ಎಂಬರ್ಥದಲ್ಲಿ ಬಂದಿದೆ.

*ವಿವರಗಳಿಗೆ ನೋಡಿ Devaras charana? Slavery in Ancient India. P. 136*

*ಡಾ. ಎಂ. ಚಿದಾನಂದ ಮೂರ್ತಿ ೨೦೦೬ ಬೃಹತ್ ಕರ್ನಾಟಕ: ಭಾಷಿಕ ಸಾಂಸ್ಕೃತಿಕ ಪುಟ. ೨೨೭*

**೮. ಅಕೃಷ್ಟಪಚ್ಯ**

*......ಪ್ರಜಾ ಜೀವನೋಪಾಯ ಹೇತುಗಳ **ಕೃಷ್ಟಪಚ್ಯಂ**ಗಳಾಗಿ.....*

*(ಆದಿಪುರಾಣ ೬-೭೨.)*

ಮತ್ತೊಂದು ಕಡೆ *'ಯಾವನಾಳ ಕಂಗು ಕೋದ್ರವಾದಿ ಸರ್ವೌಷಧಿಗಳುಂ ಮುನ್ನಮ**ಕೃಷ್ಟಪಚ್ಯಂ**ಗಳಪ್ಪುವಂದು ವಿಳವಾಗಿಯಂ (೮-೬೧ .ವ.)*

ಅಕೃಷ್ಟಪಚ್ಯವೆಂದರೆ ಕೃಷಿ ಮಾಡದೆ ಬೆಳೆಯುವ ಸಹಜ ಗಿಡ-ಮರಗಳ ಉತ್ಪತ್ತಿಗಳು, ಕೃಷಿಯೆಂದರೆ ಅದು ಸಹಜವಾದುದಲ್ಲ. ಕೃತಕವಾದುದು. ಕೃಷಿಯು ಮೂಲಭೂತವಾಗಿ ಉಳುಮೆಗೆ ಸಂಬಂಧಿಸಿದ್ದು. ಮನುಷ್ಯನ ಅಗತ್ಯಕ್ಕಾಗಿ ಕೃಷಿ ಪದ್ಧತಿಯು ರೂಪುಗೊಂಡಿದೆ.

ಕೃಷಿ: ನಿಸರ್ಗ, ಮನುಷ್ಯರ ನಡುವಣ ಸಂಬಂಧ ದ್ವಂದ್ವಾತ್ಮಕವಾದುದು. ಆದಿಪುರಾಣದಿಂದ ಉಲ್ಲೇಖಿಸಿದ ಎರಡನೆಯ ಪದ್ಯಭಾಗ ನಿಸರ್ಗದ ಸಹಜತೆಯ ಕುರಿತು ಹೇಳುತ್ತದೆ. ಕೃಷ್ಟ ಅಂದರೆ ಉಳಿಯದಿರುವುದು.

ಕೃಷ್ಟಪದವು ಕೃಷಿಯನ್ನು ಸೂಚಿಸುತ್ತದೆ. ಕೃಷ್ಟಪಚ್ಯವೆಂದರೆ ಉತ್ತಭೂಮಿಯಲ್ಲಿ ಬೆಳೆದು ತಾನಾಗಿಯೇ ಹಣ್ಣಾಗುವ ಧಾನ್ಯ ಇತ್ಯಾದಿ. ಇದನ್ನೇ ಈಗ ನಿಸರ್ಗ ಕೃಷಿಯೆಂದು ಕರೆಯುತ್ತಾರೆ. ಕೃಷಿಯು ಸಂಸ್ಕೃತಿಯಭಾಗ. ಭಾರತೀಯ ಜೀವನ ಕ್ರಮದಲ್ಲಿ ನಿಸರ್ಗ>ಕೃಷಿ>ಸಂಸ್ಕೃತಿಯ ನಡುವೆ ಅಂತರ್ಗತ ಸಂಬಂಧವಿದೆ. ಕೃಷಿಯು ನಿಸರ್ಗವನ್ನು ಮಣಿಸಿ ತನಗೆ ಬೇಕಾದಂತೆ ಸಂಪತ್ತನ್ನು ರೂಪಿಸಿಕೊಳ್ಳುತ್ತದೆ. ಕೃಷಿಯಲ್ಲಿ ಎರಡು ವಿಧ: ಒಂದು ಕೃಷಿಯ ಮೂಲಕ ವಾಣಿಜ್ಯೋದ್ಯಮ ರೂಪಿಸುವುದು. ಎರಡು: ಆಹಾರೋತ್ಪಾದನೆಯನ್ನು ಪಡೆಯುವುದು. ಮೇಲಿನ ಮಾತು ಎರಡನೆಯದನ್ನು ದೃಢೀಕರಿಸುತ್ತದೆ.

**೯. ಅಕ್ಕರಗೊಟ್ಟಿ**

*ಚಾಗದ ಭೋಗದ**ಕ್ಕರದ** ಗೇಯದ **ಗೊಟ್ಟಿ**ಯಲಂಪಿನಿಂಪು* .................. ಎಂದು *ಪಂಪಭಾರತದಲ್ಲಿ ಬರುತ್ತದೆ. (೪-೨೯)*

ಅಕ್ಷರ ಗೋಷ್ಠಿಯೆಂದರೆ ಅಕ್ಷರಸ್ಥರ ನಡುವೆ ನಡೆಯುವ ಚರ್ಚೆ. ಪಂಪನು ಅಕ್ಷರಗೋಷ್ಠಿ ಎಂಬುದನ್ನು ಕನ್ನಡೀಕರಿಸಿ ಅಕ್ಕರ ಗೊಟ್ಟಿಯೆಂದು ಕರೆದಿರುವುದು ಗಮನಾರ್ಹ. ಅಕ್ಕರಗೊಟ್ಟಿ ನಡೆಯುತ್ತಿತ್ತು ಎಂಬುದು ಸಾಂಸ್ಕೃತಿಕವಾಗಿ ಮಹತ್ವದ್ದು. ಗೇಯದ ಗೊಟ್ಟಿಯೆಂದರೆ ಗಾಯನ ಗೋಷ್ಠಿ. ಗಾಯನ ಗೋಷ್ಠಿಗಳ ಬಗೆಗೆ ಹಳೆಗನ್ನಡ ಕಾವ್ಯಗಳಲ್ಲಿ ಅನೇಕ ರೀತಿಯ ವಿವರಗಳು ದೊರೆಯುತ್ತವೆ. ಯಜುರ್ವೇದದಲ್ಲಿ "ನೃತ್ತಾಯ ಸೂತಮ್ ಗೀತಾಯ ಶೈಲೂಷಮ್ ಧರ್ಮಾಯ ಸಭಾಚರಂ (ಯಜುರ್ವೇದ ೩೦-೬) ಎನ್ನುವ ಮಂತ್ರದಲ್ಲಿ ರಾಜನಾದವನು ನೃತ್ಯಕ್ಕಾಗಿ ಸೂತನನ್ನು ನಿಯುಕ್ತಿಗೊಳಿಸಬೇಕು. ಸಂಗೀತಕ್ಕಾಗಿ ಶೈಲೂಷನನ್ನು (ಶೈಲೂಷ ಎಂಬ ಗಾಯಕ ವಿಶೇಷ ವ್ಯಕ್ತಿಯನ್ನು) ನಿಯತಗೊಳಿಸಬೇಕೆಂದು ಹೇಳಿದೆ. ಸೂತಮ್ ಅನ್ನುವುದು ಪ್ರಾಯಶಃ ಸೂತ್ರಧಾರ ಎಂಬ ಅರ್ಥದಲ್ಲಿ ಬಳಕೆಯಾಗಿರಬೇಕು. "ವೀಣಾವಾದಂ ಪಾಣಿಘ್ನಂ ತೂಣವಧ್ಮಂ ತಾನ್ನೃತ್ತಾಯಾ ನಂದಾಯ ತಲವಮ್" (ಯಜುರ್ವೇದ ೩೦-೨೦) ಎಂದು ಹೇಳಲಾಗಿದೆ. ವೀಣಾವಾದಕನನ್ನು ತೂಣವವೆಂಬ ವಾದ್ಯಕಾರನನ್ನು; ತಲವಮ್ ಎಂಬ ವಾದ್ಯ ವಿಶೇಷ (ತವಲಮ್-ತಬಲಂ ಎಂದು ಪರ್ಯಾಯಗೊಳ್ಳುತ್ತದೆ). ಹಾಗೆಯೇ ಡಮರುಗ ವಾದಕನನ್ನು, ಶಂಖದ ಮೂಲಕ ಧ್ವನಿ ಮೊಳಗಿಸುವವನು (ಯಜುರ್ವೇದ ೩೦-೧೯೦) ರಾಜನು ನಿಯುಕ್ತಗೊಳಿಸಲಿ ಎಂದು ಯಜುರ್ವೇದದಲ್ಲಿ ಬರುತ್ತದೆ. ಅಕ್ಷರಭೇದ ಎರಡು ರೀತಿಯದು. ಅದರಲ್ಲಿ ಶ್ರವಣ ಮತ್ತು ಚಾಕ್ಷುಷ, ಚಾಕ್ಷುಷವೆಂದರೆ ಕಣ್ಣಿಗೆ ಕಾಣಿಸುವ ಅಕ್ಷರಗಳು. ಮತ್ತೊಂದು ಕೇಳಬಹುದಾದ ಅಕ್ಷರಗಳು, ಅಕ್ಷರಗಳನ್ನು

ತ್ರ್ಯಕ್ಷರವೆಂದು ಗುರುತಿಸುತ್ತಾರೆ. (ಅಕ್ಷರತ್ರಯ ಬೀಜಾಕ್ಷರತ್ರಯ, ಓಂಕಾರತ್ರಯ) ಅಕಾರ, ಊಕಾರ, ಮಕಾರಗಳು.

*ವಿವರಗಳಿಗೆ ನೋಡಿ: ವೇದವ್ರತ ವೈಶಂಪಾಯನ ೧೯೮೪ ಋಗ್ವೇದ: ಒಂದು ಅಧ್ಯಯನ ಪುಟ. ೨೦೫.*

## ೧೦. ಅಕ್ಷಕ್ರೀಡೆ

*"ತನಗೆ ಸಾವಂ ಸಮಗಟ್ಟುವಂತೆ ಪಿಂಗಾಕ್ಷನಕ್ಷಕ್ರೀಡೆಯಿಂ ಶಕುನಿಯೊಳ್ ಸಮಕಟ್ಟಿ" ಎಂದು ಪಂಪಭಾರತದಲ್ಲಿ ಬರುತ್ತದೆ. (ಪಂಪ ಭಾರತ ೬-೬೯ ವ) ಅಕ್ಷಕ್ರೀಡೆಯೆಂದರೆ ಅಕ್ಷದೊಳು ಆಡುವ ಕ್ರೀಡೆಯೆಂದರ್ಥ. ಅಕ್ಷ=ರೇಖೆ ಕ್ರೀಡೆ=ಆಟ. ಅಕ್ಷದೊಳಗೆ ಆಡುವ ಆಟ ಪಗಡೆಯಾಟ. ಇದು ರೇಖೆಯೊಳಗೆ ನಡೆಯುತ್ತದೆ ಎಂಬುದು ಗಮನಾರ್ಹ.*

*.........ಎಂದು ನಾಟಿವಾಸಗೆಗಳಂ ಮುನ್ನಮೆ ಸಮಕಟ್ಟಿ' ಎಂದು ಪಂಪಭಾರತದಲ್ಲಿ ಬರುತ್ತದೆ.*

*(ಪಂಪ ಭಾರತ ೬-೬೮ ವ)*

ನಾಟಿವಾಸಗೆಯೆಂದರೆ ಮೋಸದ ದಾಳ. ಮಹಾಭಾರತದಲ್ಲಿ ಕೌರವನು ಶಕುನಿಯ ಮೂಲಕ ಮೋಸದ ನೆತ್ತವನ್ನು ಆಡುತ್ತಾನೆ. ಅದನ್ನು ಪಂಪ ಇಲ್ಲಿ ಪ್ರಕಟಪಡಿಸಿದ್ದಾನೆ.

ಕರೆದೊಡೆ **ಜೂದಿಂಗಂ** ಧುರ<br>
ಭರಕಾಖೇಟಕ್ಕೆ ಭೂಭುಜಂಗಾಗದು ಮೆ ।<br>
ಯ್ಗರೆದಿರಲೆಂಬ ಪುರಾತನ<br>
ಗುರುವಚನಂ ತನಗೆ ನಿಟ್ಟೆಪಟ್ಟುದಜೆಂದಂ ॥ (ಪಂಪ ಭಾರತ ೬-೭೧)

ಜೂಜಿಗೂ, ರಣಕ್ಕೂ, ಬೇಟೆಗೂ ಕರೆದರೆ ರಾಜನಾದವನು ಮೈಮರೆಸಿಕೊಂಡಿರುವುದು ಯೋಗ್ಯವಲ್ಲ ಎಂಬ ಪುರಾತನವಾದ ಹಿರಿಯರ ಮಾತು ವ್ರತವಾಗಿ ಬಿಟ್ಟಿತ್ತು. ಇದು ರಾಜನೀತಿಯನ್ನು ಕೂಡಾ ಸೂಚಿಸುತ್ತದೆ.

ದ್ಯೂತವನ್ನು ಮನುವು ವರ್ಜಿಸಿದ್ದಾನೆ.

ರನ್ನನ ಸಾಹಸ ಭೀಮ ವಿಜಯದಲ್ಲಿ ದ್ಯೂತಕ್ಕೆ ದುರ್ಯೋದರ ಎಂದೂ ಬಳಸಲಾಗಿದೆ. ದ್ಯೂತ, ಜನವಾದ, ಪರಿವಾದ, ಸುಳ್ಳು, ಸ್ತ್ರೀಪ್ರೇಕ್ಷಣೆ ಇತ್ಯಾದಿಗಳು ವಿದ್ಯಾರ್ಥಿಗೆ ಅಧಿಕಪ್ರಸಂಗಗಳು. ಅವುಗಳಲ್ಲಿ ತನ್ಮಯನಾದಂತೆ ಆತನ ವಿದ್ಯಾಭಂಗವಾಗುತ್ತದೆ ಎಂದು ಮನು ಹೇಳುತ್ತಾನೆ.

ಅನರ್ಥ ದಂಡಗಳಲ್ಲಿ ಮಹಾ ಅನರ್ಥ ಮಾಡುವಂಥದು ಜೂಜು ಆಗಿದೆ. ಜೂಜು ಸಮಸ್ತ ವ್ಯಸನಗಳಲ್ಲಿ ಮುಖ್ಯವಾದುದು, ಸಮಸ್ತ ಪಾಪಗಳ ಸಂಕೇತ ಸ್ಥಾನವಾಗಿದೆ, ಮಹಾನ್ ವಿಪತ್ತದ ಕಾರಣವಾಗಿದೆ, ಸಮಸ್ತ ಅನೀತಿಗಳಲ್ಲಿ ಮಹಾ ಅನೀತಿ ಇದಾಗಿದೆ. ಜೂಜುಗಾರನ ಪರಿಣಾಮವೇ ಮಹಾ ದುಷ್ಟವಿರುತ್ತದೆ. ಅವನು ತನ್ನ ಸಮಸ್ತ ಮನೆ, ಸಂಪತ್ತುಗಳನ್ನು ಜೂಜಿನಲ್ಲಿ ಸೋತು ಕೂಡ ಇತರರ ಧನ ಪಡೆಯಲಪೇಕ್ಷಿಸುತ್ತಾನೆ. ಜೂಜುಗಾರನಿಗೆ ಎಷ್ಟು ಅಧಿಕ ಲೋಭವಿರುತ್ತದೆಯೆಂದರೆ

ಅವನು "ಇತರರ ಧನವು ನನ್ನ ಹತ್ತಿರ ಬರಲೇಬೇಕು!" ಅದರ ಸಲುವಾಗಿ ಏನು ಬೇಕಾದರೂ ಆಗಲಿ, ನನ್ನ ಧನವು ಹೋಗುತ್ತಿದ್ದರೆ ಹೋಗಲಿ, ಅಪಯಶವು ಬರುತ್ತಿದ್ದರೆ ಬರಲಿ, ದರಿದ್ರತೆ ಬರುತ್ತಿದ್ದರೆ ಬರಲಿ, ಯಾವುದೇ ಪ್ರಕಾರದಿಂದ ನಾನು ಇತರರ ಧನವನ್ನು ಗೆದ್ದುಕೊಂಡಾಗಲೇ ನಾನು ಜೀವಂತವಾಗಿರುವಿಕೆಗೆ ಸಾರ್ಥಕತೆಯಿದೆಯೆಂಬ ವಿಚಾರವನ್ನು ಯಾವಾಗಲೂ ಮಾಡುತ್ತಿರುತ್ತಾನೆ.

'ಅಕ್ಷ' ಮೊದಲು ದಿವ್ಯ ದೈವತ. ಬಳಿಕ ಇದೇ ದ್ಯೂತ (ದಿವ್ಯ), ವಸನಧಾರಣಾದಿ ನಡೆವಳಿ ರೂಢಿಗೆ ಬರುವ ಮುಂಚಿನ ಯುಗದ 'ಸಮಯ'. ಆಧುನಿಕರಲ್ಲೂ ಹಲವರು ದೇವತಾರಾಧನೆಗೆ ಕೌಪೀನ ಧರಿಸಿ ಮಡಿಯಿಂದ ಪೂಜಾ ಪುನಸ್ಕಾರಾದಿ ನಡೆಸುವ ವಾಡಿಕೆಯಿದೆ.

ಈ 'ಅಕ್ಷ' ದಿವ್ಯ : ದ್ಯೂತ ನಾಗಸಂಪ್ರದಾಯದ ವೈಶಿಷ್ಟ್ಯವಾಗಿ ಆವರೆಗೂ ನಡೆದು ಬಂದಿರಲಿಕ್ಕೇ ಬೇಕು. ಅಂದು ಈ ಆಟದಲ್ಲಿ ಇದ್ದ ಲೆತ್ತವು ಮೋಡಿ – ಮಾಟದ್ದೇ ಆಗಿತ್ತೆಂದು, ಕೌರವರೇ ಮಾಡಿಸಿ ಅದನ್ನು ತಂದಿದ್ದರೆಂದು ಸಂಪ್ರದಾಯ ಹೇಳುತ್ತದೆ. ಈ ಮಾಟ : ಯಾತು : ಸರ್ಪ–ಸಂಪ್ರದಾಯದ ವಿರೋಧಿಗಳ ಸದ್ದು ಆಗಲೆ ಅಡಗಿಹೋಗಿತ್ತು. ಋಗ್ವೇದ ಕಾಲದಲ್ಲಿಯೇ : ತ್ರಿತ, ಆಪ್ತ್ಯ ಮಾನವನು, ಇಂದ್ರನ ತೇಜೋವಧೆಯೊಡನೆ ತೃತೀಯ (ನಪುಂಸಕ) ಪುರುಷ : ನರನಾಗಿ ಪರಿವರ್ತಿತನಾದನು. ಜೀವನದೊಳಗಿನ ಸಾಮಾಜಿಕ ಹಾಗೂ ಕೌಟುಂಬಿಕ ನೈತಿಕಮೂಲ್ಯಗಳ ಸಲುವಾಗಿ. ಈ ಬಗೆಯ ಭ್ರಷ್ಟಾಚಾರದ ಸರ್ಪವು ಸರ್ವತ್ರ ವ್ಯಾಪಿಸದಂತೆ, ಕಣ್ಣೆದುರು ನಡೆದ ಅನ್ಯಾಯಗಳನ್ನು ವಿರೋಧಿಸಲು ಪ್ರಾಣಪಣದಿಂದ ಹೋರಾಟಕ್ಕೆ ಮುನ್ನುಗ್ಗುವ 'ಧೀರ' ವೀರರ ಸಂಪ್ರದಾಯವು, ಸಾರ್ಪರಾಜ್ಞಿ ಅದಿತಿಯ ವಿಜಯದೊಡನೆಯೆ ಮಣ್ಣು ಮುಕ್ಕಿದ್ದನ್ನು ಇಂದಿನ ಋಗ್ವೇದ ಸಂಹಿತೆಯೆ ಸಾರುತ್ತಿದೆ. ಅಕ್ಷ–ದ್ಯೂತದ ಬಗೆಗಿನ 'ಸಮಯ'ದ (ಆಚಾರದ) ಆಕೃತಿಯು, ಮಹಾಭಾರತ ಕಾಲದಲ್ಲಿ ಸಹ ಋಗ್ವೇದ ಸೂಕ್ತದಲ್ಲಿ ವ್ಯಕ್ತವಾಗಿ ಕಾಣುತ್ತಿರುವ ಸಮಯಾಚಾರಕ್ಕಿಂತ ಭಿನ್ನವಾಗಿರಲಿಲ್ಲ ಎಂದೇ ಭೀಷ್ಮ ದ್ರೋಣಾದಿ ಧೀಮಂತರೂ, ಸಂಪ್ರದಾಯ ತಿಳಿದವರೂ ಎಂಬುವರ ತಟಸ್ಥ ವೃತ್ತಿಯ ನಡೆವಳಿಕೆಯಿಂದಲೂ ಸಿದ್ಧವಾಗುತ್ತಿದೆ.

ಋಗ್ವೇದ ಸಂಹಿತೆಯ ಇಂದಿನ ಆಕೃತಿಗೆ (Form) ಕಾರಣನಾಗಿರುವ ಅದರ ಸಂಯೋಜಕನೂ, ಅಕ್ಷ: ಸರ್ಪ ಪಕ್ಷಪಾತಿಯಾಗಿದ್ದನು. ಇದಕ್ಕೆ 'ಅಕ್ಷ–ದ್ಯೂತ'ದ ಬಗೆಗೆ ಬಹಿರಂಗದಲ್ಲಿ ತಿರಸ್ಕಾರವನ್ನು ಪ್ರದರ್ಶಿಸುತ್ತಿರುವ ಈ ಸೂಕ್ತದ ವ್ಯಾಮಿಶ್ರ ಶಿಲ್ಪ ಕೌಶಲ್ಯವೇ ಸಾಕ್ಷಿ. 'ಅಕ್ಷ'–ದ್ಯೂತ, ಈ 'ದಿ(ೀ)ವ್ಯ' ಇದು ನಿಶಾ–ಕ್ರೀಡೆ. ಈ ಕಾರಣದಿಂದಾಗಿ 'ಜಾಗೃವಿಃ' (ಜಾಗರ–ಮಾಡುವವನು) ಎಂಬುದು ಜೂಜುಗಾರನ ಪರ್ಯಾಯನಾಮವು, ಅತ್ಯಂತ ಸಾರ್ಥವಿದೆ. ಜೀವನ ಸೌಖ್ಯವನ್ನೇ ಭೇದಿಸಿ–ಭೇದಿಸಿ ಬಿಡುವ ಅಥವಾ ವಿಭೀತಕವಾದ 'ಅಕ್ಷ' : ಲೆತ್ತಕ್ಕೆ 'ವಿಭೇದಕಃ' ಎಂದಿರುವುದು ಔಚಿತ್ಯಪೂರ್ಣವಿದೆ. ಇಂತಹ ಇನ್ನೂ ಹಲವು ಸುಂದರ ಶಿಲ್ಪದ ಮಾದರಿಗಳು ಈ ಸೂಕ್ತದಲ್ಲಿವೆ.

ಪಂಚಮಾಶ್ವಾಸಂತ್ರಿದಶಕುಮಾರರ್ ನೆತ್ತದ
ಚದುರಂಗದ ಮುಟ್ಟನಟ್ಟೆಯಿಂ ಮರವಟ್ಟ
ಪದಪೊದವೆ ಸಗ್ಗದಿಂ ತಂದು
ತಂದು ಕೆಲಗೆಲದೊಳಾಡುವರ್ ಜಿನಪತಿಯಾ

(ಅಜಿತ ತೀರ್ಥಂಕರ ಪುರಾಣತಿಲಕಂ ೫-೮೦)

ನೆತ್ತದ (ಚದುರಂಗದ) ಆಟ ಬಹಳ ಹಿಂದಿನಿಂದಲೂ ಇತ್ತು. ಪಂಪ ಭಾರತದಲ್ಲಿಯೂ 'ನೆತ್ತಮನಾಡಿ ಭಾನುಮತಿ ಸೋಲ್ತೊಡೆ' ಎಂದು ಬರುತ್ತದೆ.

ಋಗ್ವೇದಲ್ಲಿ ಅಕ್ಷಸೂಕ್ತದ ಉಲ್ಲೇಖವಿದೆ. ಅದರಲ್ಲಿ ಜೂಜಿನ ಪ್ರಸ್ತಾವವಿದೆ. 'ಜೂಜು' ಎನ್ನುವುದು ಜನಪ್ರಿಯ ಕ್ರೀಡೆಯೆನ್ನುವುದು ಅನೇಕ ಕಾವ್ಯಗಳಲ್ಲಿ ವ್ಯಕ್ತವಾಗಿದೆ. ಅಂದಿನ ಜನಪ್ರಿಯ ಕ್ರೀಡೆಯಾದ ಇದನ್ನು ಮಹಾಭಾರತದಲ್ಲಿ ಉಲ್ಲೇಖಿಸಲಾಗಿದೆ 'ದ್ಯೂತ'ದಿಂದ ಧರ್ಮರಾಜ ರಾಜ್ಯ ಕಳೆದುಕೊಳ್ಳುತ್ತಾನೆ. ನಳ ಚರಿತ್ರೆಯಲ್ಲಿಯೂ ದ್ಯೂತ ಉಲ್ಲೇಖವಿದೆ.

"ಅಕ್ಷ-ಸೂಕ್ತದ'ದ (೧೦-೩೪) ಮೂಲಕ 'ಜೂಜು' ಆ ಕಾಲದ ಜನಪ್ರಿಯ ಕ್ರೀಡೆಯಾಗಿತ್ತು ಎಂದು ತಿಳಿದುಬರುತ್ತದೆ. ಈ ಕ್ರೀಡೆಯನ್ನು ನಿಂದ್ಯವೆಂದು ಪರಿಗಣಿಸ ಲಾಗಿದ್ದರೂ ಈ ಕ್ರೀಡೆಯ ಜನಪ್ರಿಯತೆ ಕುಂಠಿತವಾಗಿರಲಿಲ್ಲವೆಂದು ಹೇಳಬಹುದು. ದೇವಾಲಯಗಳ ನಿರ್ಮಾಣ ಹಾಗು ವಿಗ್ರಹ ಪ್ರತಿಷ್ಠಾಪನದ, ಮೂರ್ತಿ-ಪ್ರಜೆಯ ನಿಖರ ಉಲ್ಲೇಖಗಳು ಋಗ್ವೇದದಲ್ಲಿ ದೊರೆತಿಲ್ಲ. ಋಗ್ವೇದೀಯ ಸಮಾಜದಲ್ಲಿ ಮೂರ್ತಿ ಪೂಜೆಗೆ ಪ್ರಾಶಸ್ತ್ಯವಿರಲಿಲ್ಲವೆಂದು ಹೇಳಬಹುದು. ಆದರೆ ಸಾಮೂಹಿಕ ಪ್ರಾರ್ಥನಾದಿಗಳು ನಡೆಯುತ್ತಿದ್ದುದರ ಉಲ್ಲೇಖವಿದೆ. (ಋಗ್ವೇದ ೧೦-೩೪) ಕನಕದಾಸರ 'ನಳಚರಿತೆ' ಯಲ್ಲಿಯೂ ನಳನು ದ್ಯೂತದಿಂದ ತನ್ನ ರಾಜ್ಯವನ್ನು ಕಳೆದುಕೊಳ್ಳುವ ವಿಷಯ ಪ್ರಸ್ತಾವಗೊಂಡಿದೆ. ಇದಕ್ಕೆ ಭಿನ್ನವಾದುದನ್ನು ಶಂಬಾ ಜೋಶಿ ಹೇಳಿದ್ದಾರೆ.

ಋಗ್ವೇದದಲ್ಲಿ 'ಅಕ್ಷ'ದ ಆಟವನ್ನು ದ್ಯೂತ (>ಜೂಜು) ಎಂದು ಬಗೆಯಲಾಗಿದೆ. ಋಗ್ವೇದಕಾಲೀನ ಶಿಷ್ಯರು ಪ್ರತಿಷ್ಠಿತರು, ಜೂದು ಮತ್ತು ಜಾದು>ಯಾತು ಇವನ್ನು ನಿಂದ್ಯ, ತಾಜ್ಯ-ತಿರಸ್ಕಾರಾರ್ಹ ಎಂದು ಬಗೆದಿದರೆಂಬುದು ತೀರ ಸುಳ್ಳಲ್ಲ. ಆದರೆ, ಈ ಬಗೆಯ ಗ್ರಹಿಕೆಯಾಗುವುದಕ್ಕಾಗಿ ಬರೆದ 'ಅಕ್ಷದ್ಯೂತ'ದ ಸೂಕ್ತದಲ್ಲಿಯೆ ಕವಡು ಇರುವುದನ್ನು ಕಾಣಬಹುದಾಗಿದೆ. 'ಅಕ್ಷ'ವು 'ಜ್ಞಾನ' ದೃಷ್ಟಿ ಎಂಬ ಅರ್ಥಪಡೆದ ಸಮಯದಲ್ಲಿ 'ಅಕ್ಷಣ್ವಾನ್,' 'ಅಕ್ಷಣ್ವಂತಃ' ಸ್ತೋತ್ರಾರ್ಹರಾದಾಗ 'ಅಕ್ಷ'ದ ಆಟ ತಿರಸ್ಕಾರಕ್ಕೆ ಪಾತ್ರವಾದ ಪರಿಸರವು, 'ಅಕ್ಷ' ಪಂಥದ ವಿರೋಧಿಗಳದಿರಬೇಕು. ವರುಣನ ಅಕ್ಷ: ವನಸ್ತೋಪ; ವಿಷ್ಣುವಿನ ಪದ್ಮ-ಅಕ್ಕ : ಪರಮಪದ ಪೂಜಾರ್ಹವಿದ್ದಾಗಲೆ 'ಶಿಶ್ನ-ದೇವಾಃ' ಎಂಬ ವರ್ಗವೂ ಇದ್ದೀತೆಂಬುದು ಅತ್ಯಂತ ಸುಸಂಗತವೂ ಸುಸಂಬದ್ಧವೂ ಆದ ಘಟನೆಯಾಗಿದೆ. ಆದರೆ, ಈ ಕಾರಣದಿಂದಾಗಿಯೆ ಶಿಶ್ನ ದೇವರನ್ನು ಕೊಲ್ಲಲು ಇಂದ್ರನಿಗೆ ಬೇಡಿಕೊಂಡದ್ದು ಮೇಲ್ತೋರಿಕೆಯ ಮಾತು ಇರಲಾರದೇ ಎಂಬ ಸಂಶಯ ಹುಟ್ಟುವಂತಿದೆ. ಋಗ್ವೇದ ಕಾಲದ 'ಅಕ್ಷ' ಪೂಜಕರಲ್ಲಿ ಸನ್ಮಾನ್ಯರು, ಗೌರವಸ್ಥರು

ಎಂಬವರು ಯಾರೂ ಇರಲಾರರು ಎಂಬ ಹಾಗಿನ ಗ್ರಹಿಕೆಯಾಗುವುದಲ್ಲಿ ಈ ಶಿಶ್ನದೇವರ ವಿಚಾರ ಹಾಕಿರುವ ಈ ಶಕ್ಯತೆಯಿದೆ. ಈ ಬಗೆಯಲ್ಲಿ ಸಂಹಿತಾ ಸಂಕಲನದ ಅದ್ಭುತ ಮೋಡಿಕಾರಿಗೆ ಇನ್ನೂ ಒಂದು ನಿದರ್ಶನ: ಮಹರ್ಷಿ ವಸಿಷ್ಠನ 'ಶಿಪಿವಿಷ್ಟ' ರೂಪದಲ್ಲಿ ವಿಷ್ಣು-ದರ್ಶನದ ಬಗೆಗಿನ ಆರ್ತ ಪ್ರಾರ್ಥನೆ." ಈ ದೃಷ್ಟಿಯಿಂದ ಅಕ್ಷಕ್ರೀಡೆಯು ತುಂಬಾ ಪ್ರಾಚೀನವಾದುದು ಮತ್ತು ಅದಕ್ಕೆ ದುರ್ವ್ಯಸನ ಪಟ್ಟವಿದೆ ಎಂಬುದು ಗಮನಾರ್ಹ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯*

*ಸಂಪುಟ. ೪ ಪುಟ. ೩೮೮, ೩೮೯, ೩೯೩, ೪೦೨-೪೦೩*

*ಯುಗಯಾತ್ರೀ ಭಾರತೀಯ ಸಂಸ್ಕೃತಿ ೧೯೭೧ ಸಂಪುಟ. ೨ ಪುಟ. ೨೨೫*

*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೨-೧೭೯*

### ೧೧. ಅಕ್ಷಸೂತ್ರ

*ಪರಶು**ಫಳಾಕ್ಷಸೂತ್ರ**ವರದೋಚಿತಚಿಹ್ನಚತುರ್ಭುಜಂ (ಆದಿಪುರಾಣ ೧-೮)*

ಅಕ್ಷವೆಂಬ ಶಬ್ದಕ್ಕೆ ಅಚ್ಚು, ನೆಲ್ಲಿಯ ಮರ, ರುದ್ರಾಕ್ಷ, ಶಕಟ ಬಂಡಿ ಮೊದಲಾದ ಅರ್ಥಗಳಿವೆ. ಅಕ್ಷಮಾಲೆಯೆಂದರೆ ಜಪಮಾಲೆ, ರುದ್ರಾಕ್ಷಿಯಿಂದ ಸುತ್ತಿಸಿದ ಮಾಲೆಯನ್ನು ಅಕ್ಷಸೂತ್ರವೆಂದು ಕರೆಯುತ್ತಾರೆ.

ಧ್ಯಾನ ಸಮಯದಲ್ಲಿ ಜಪಸರವನ್ನು ಹಿಡಿದುಕೊಂಡು ಜಪಿಸುವುದು ಬಹುತೇಕ ಎಲ್ಲಾ ಮತಗಳಲ್ಲಿಯೂ ಕಾಣಿಸಿಕೊಂಡಿದೆ. ಜಪಮಾಲೆಯಿಂದ ಎರಡು ಉಪಯೋಗ;

೧) ಧ್ಯಾನವನ್ನು ಏಕಾಗ್ರಗೊಳಿಸುವುದಕ್ಕೆ ಜಪಮಾಲೆಯು ಅವಶ್ಯಕ ಇದರಿಂದ ಚಿತ್ತ ಸ್ಥಿತಿಯೂ ಚಂಚಲವಾಗುವುದಿಲ್ಲ. ೨) ಜಪಮಾಲೆಯಲ್ಲಿ ಇರುವ ಜಪಮಣಿಗಳು ಸಂಖ್ಯಾ ಸೂಚಕಗಳು ಕೂಡ ಹೌದು. ರುದ್ರನನ್ನು ೧೦೮ ಬಾರಿ ಸ್ತುತಿಸಬೇಕೆಂದಿದ್ದರೆ ೧೦೮ ಮಣಿಗಳಿರುವ ಜಪಮಾಲೆಯ ಮೂಲಕ ಮಣಿಗಳನ್ನು ಮುಟ್ಟುತ್ತಾ ಹೋಗಬಹುದು. ವಿಶೇಷವಾಗಿ ಕೆಲವು ಮಂತ್ರಗಳಿಗೆ ಮತ್ತು ಸೋತ್ರಗಳಿಗೆ ಸಂಖ್ಯಾ ಮಿತಿ ಇವೆ. ಉದಾ: ಗಾಯತ್ರಿ ಜಪಕ್ಕೆ ೧೧, ೧೦೮ ಇತ್ಯಾದಿ.

### ೧೨. ಅಕ್ಷೋಹಿಣಿ

*ಬಲದೇವಾದಿಗಳಾದಾಗದೊದೆಯಲ್ಕೇ**ಕಾದಶಾಕ್ಷೋಹಿಣೀ** ಬಲ ಲಕ್ಷ್ಮೀಪತಿಯಂ.......।*

*(ಸಾಹಸ ಭೀಮ ವಿಜಯ ೮-೩೯)*

ಏಘೇ ! ಕೂಡದು. ಒದೆಯಕೂಡದು ಹನ್ನೊಂದಕ್ಷೌಹಿಣೀ ಸೈನ್ಯಾಧಿಪತಿಯಾದ ರಾಜನನ್ನು ಅವಮಾನಗೊಳಿಸಬೇಡ ಎಂಬುದಾಗಿ ಬಲರಾಮನೇ ಮೊದಲಾದವರೆಲ್ಲ ಹೇಳುತ್ತಿದ್ದ ಸಂದರ್ಭವಿದು. ಕೌರವರದು ಹನ್ನೊಂದು ಅಕ್ಷೌಹಿಣೀ ಬಲ, ಪಾಂಡವರದು ಏಳು ಅಕ್ಷೌಹಿಣೀ ಬಲ ಆದರೂ ಪಾಂಡವರಿಗೇ ಗೆಲುವು. ಒಂದು ಅಕ್ಷೌಹಿಣೀ ಬಲವೆಂದರೆ ೨೧,೮೭೦ ಗಜ – ಅಷ್ಟೇ ಸಂಖ್ಯೆಯಲ್ಲಿ ರಥಗಳು ಇದಕ್ಕೆ ಮೂರರಷ್ಟು

ಕುದುರೆಗಳು, ಐದರಷ್ಟು ಕಾಲಾಳುಗಳಿರುವ ಪಡೆ ಅಂದರೆ ೨೧,೮೭೦ ಆನೆಗಳು; ೨೧,೮೭೦ ರಥ, ೬೫,೬೧೦ ಕುದುರೆಗಳು ೧,೦೯,೩೫೦ ಕಾಲಾಳುಗಳು ಆಗುತ್ತವೆ.

ಅಕ್ಷೋಹಿಣಿ ಬಲ ಸೈನಿಕರ ಸಂಖ್ಯೆ; ರಥಸಂಖ್ಯೆ, ಆನೆ, ಕುದುರೆಗಳ ಸಂಖ್ಯೆಯನ್ನು ಸೂಚಿಸುತ್ತವೆ ಮತ್ತು ಇದರ ಆಧಾರದ ಮೇಲೆ ರಾಜನ ಶಕ್ತಿ ನಿರ್ಣೀತವಾಗುತ್ತದೆ.

*ವಿವರಗಳಿಗೆ ನೋಡಿ: ಮರಿಯಪ್ಪ ಭಟ್ಟ ಎಂ. ೧೯೬೯ ಕಿಟ್ಟೆಲ್‌ರ ಕನ್ನಡ-ಇಂಗ್ಲಿಷ್ ನಿಘಂಟು ಪುಟ. ೯.*

**೧೩. ಅಗುಂದಲೆ**

*..........ಮೂಲೋಕಕ್ಕೆ ಪೆಂಪಿಂ**ದಗುಂದಲೆ**ಯಾಗಿರ್ದುದು ದೇವದಂಪತಿ ರತ ಶ್ರೀಸುಂದರಂ ಮಂದರ (ಆದಿಪುರಾಣ ೧-೫೦)*

ಅಗುಂದಲೆಯೆಂದರೆ ಅತಿಶಯ

ಅಗುರ್ವು ಎಂದರೂ ಅತಿಶಯವೇ. ಆದರೆ ಕರ್ಣಾಟಕ ಕಾದಂಬರಿಯಲ್ಲಿ... 'ಕರ್ವೊಗೆಯಿಂದಮುಗುರ್ವನಾಳ್ದು ಕತ್ತಲಿಸುವ ಚಂಡಿಕಾ ಭವನದೊಳ್.....' (ಕಪ್ಪು ಹೊಗೆಯಿಂದ ಅತಿಶಯವನ್ನು ಪಡೆದು)....ಎಂದು ಬರುತ್ತದೆ. ಒಟ್ಟಿನಲ್ಲಿ ಅತಿಶಯ, ತೀವ್ರತೆ, ಭಯಂಕರತೆಯನ್ನು ಹೇಳುವಲ್ಲಿ ವಿಶೇಷಣವಾಗಿ ಈ ಶಬ್ದ ಬಳಕೆಯಾಗುತ್ತದೆ. ಅಗುಂದಲೆಯೆಂಬ ಪ್ರಯೋಗವು ತುಂಬಾ ವಿಶಿಷ್ಟವಾಗಿದೆ.

*ವಿವರಗಳಿಗೆ ನೋಡಿ: ಅತಿಶಯ ಡಾ. ಟಿ.ವಿ.ವೆಂಕಟಾಚಲಶಾಸ್ತ್ರೀ ೧೯೯೯*
*ಶ್ರೀವತ್ಸ ನಿಘಂಟು ಪುಟ. ೧೫, ೧೬.*

**೧೪. ಅಗುರುಲಘುತ್ವ ಗುಣ**

ಯಾವ ಶಕ್ತಿಯ ಕಾರಣದಿಂದ ದ್ರವ್ಯದ ದ್ರವ್ಯತ್ವವು ಯಾವತ್ತೂ ಉಳಿಯುತ್ತದೆ. ಎಂದರೆ ೧) ಒಂದು ದ್ರವ್ಯವು ಇನ್ನೊಂದು ದ್ರವ್ಯರೂಪವಾಗುವುದಿಲ್ಲ ೨) ಒಂದು ಗುಣವು ಇನ್ನೊಂದು ಗುಣ ರೂಪವಾಗುವುದಿಲ್ಲ ೩) ದ್ರವ್ಯದಲ್ಲಿರುವ ರೂಪ ಅನಂತ ಗುಣಗಳು ಚದುರಿ ಭಿನ್ನ ಭಿನ್ನವಾಗುವುದಿಲ್ಲ. ಆ ಶಕ್ತಿಯನ್ನು **ಅಗುರುಲಘುತ್ವ**ಗುಣವೆಂದು ಹೇಳುತ್ತಾರೆ. ಅ=ಇಲ್ಲ, ಗುರು = ದೊಡ್ಡದು (ಹಿರಿದು), ಲಘು = ಚಿಕ್ಕದು (ಕಿರಿದು) ಎಂದರೆ ಪ್ರತಿಯೊಂದು ದ್ರವ್ಯವು ತನ್ನಲ್ಲಿ ಪರಿಪೂರ್ಣವಿದೆ. ಎಂದರೆ ದ್ರವ್ಯವು ಎಷ್ಟಿದೆ ಅಷ್ಟೇ ಮತ್ತು ಹಾಗೆಯೇ ಯಾವತ್ತೂ ಉಳಿಯುತ್ತದೆ. ಇನ್ನೊಂದು ದ್ರವ್ಯದಲ್ಲಿ ಕೂಡಿ ಕೊಂಡು ದೊಡ್ಡದು ಅಥವಾ ಗುಣಗಳು ಚದುರಿ ಹೋಗಿ ಚಿಕ್ಕದೂ ಆಗುವುದಿಲ್ಲ.

ಅಗುರುಲಘುತ್ವ ಗುಣವನ್ನು ಮನ್ನಿಸದೆ ಹೋದರೆ ದ್ರವ್ಯ-ಗುಣ-ಪರ್ಯಾಯಗಳ ನಾಶವಾಗುವ ಪ್ರಸಂಗವು ಬಂದು ಬಿಡುವುದು.

**೧೫. ಅಗ್ಗಳ**

*ನೆಗಟ್ತೆವೆತ್ತ ಪತಿಭಕ್ತಿಯ ಮೈಮೆಯ ಮಾನಸಿಕ್ಕೆಯ**ಗ್ಗಲ**ದ ಪೊಗಟ್ತೆ ತನ್ನದೆನೆ*

*ಪೆಂಪು ಮನೋಹರಿಗಲ್ಲದಕ್ಕುಮೇ ॥*

(*ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೧-೭೨*)

"ಮಾನಸಿಕ್ಕೆಯ ಅಗ್ಗಳದ ಪೊಗಳ್ತೆ ತನ್ನದೆನೆ ಪೆಂಪು ಮನೋಹರಿಗೆ" ಎಂದು ಪಂಪ ವರ್ಣಿಸುತ್ತಾನೆ. ಅಗ್ಗಲವೆಂದರೆ ಅಗ್ಗಳ. ಅಗ್ಗಳವೆಂದರೆ ಅತಿಶಯ; ಅಧಿಕವೆಂಬ ಅರ್ಥವೂ ಇದೆಯೆಂಬುದು ಗಮನಾರ್ಹ.

"ಅಗ್ಗಲಿಸಿದ ಮದದಿಂ ನಾಲಗೆ ಕುಲಮಂ ತುಬ್ಬುವವೋಲ್." ಎಂಬ ದ್ರೋಣನ ಮಾತನ್ನು ನೆನಪಿಸಿಕೊಳ್ಳಬಹುದು. (ಪಂಪಭಾರತ) ಹೆಚ್ಚುಗಾರಿಕೆ, ಅತಿಶಯವಾದುದನ್ನು ಅಗ್ಗಳವೆಂದು ಕರೆಯುವುದು ರೂಢಿ.

**೧೬. ಅಗ್ನಿಸಾಕ್ಷಿ**

*ಪಸೆಯೊಳ್ ಪಸುರ್ವಂದರೊಳ ।*
*ಗ್ನಿಸಾಕ್ಷಿಯೊಳ್ ಕೊಂಡ ಪಾಂಡುಪತಿಯಿರೆ ದೋಷಾ ॥*
*ವಸಥರ್ ಪಾದರದಿಂ ಜನಿ ।*
*ಯಿಸಿದರ್ ಪಾಂಡವರೊಳಲ್ಲದೆಮ್ಮೊಳಮುಂಟೇ ॥*

(*ಸಾಹಸ ಭೀಮ ವಿಜಯ ೩-೩೮*)

ಮದುವೆಯ ಸಂದರ್ಭದ ಅಗ್ನಿಸಾಕ್ಷಿ ಇವುಗಳ ಕುರಿತು ಮೇಲಿನ ಪದ್ಯ ವಿವರಿಸುತ್ತದೆ. ಅಗ್ನಿಸಾಕ್ಷಿಯು ಆಚರಣೆಯನ್ನು ಸೂಚಿಸುತ್ತದೆ. ಹೋಮಾಗ್ನಿಗೆ ಕೈಹಿಡಿದು ಗಂಡ ಹೆಂಡಿರು ಸುತ್ತು ಬಂದು ಗಂಡ ಪರಸ್ಪರ 'ಧರ್ಮೇಚ ಅರ್ಥೇಚ. ಕಾಮೇಚ ನಾತಿ ಚರಾಮಿ' ಎಂದು ಹೇಳುತ್ತಾರೆ. ಧರ್ಮ ಅರ್ಥ ಕಾಮದಲ್ಲಿ ಪರಸ್ಪರ ಜೊತೆಯಾಗಿ ಅನುಸರಿಸುತ್ತೇವೆ ಎಂದು ದಂಪತಿಗಳು ಹೇಳುತ್ತಾರೆ.

ಅವು ದಾಂಪತ್ಯಜೀವನಕ್ಕೆ ಅಡಿಯಿರಿಸುವಾಗ ಕೈಗೊಳ್ಳುವ ಈ ಪ್ರತಿಜ್ಞೆಗೆ ಅಗ್ನಿಯು ಸಾಕ್ಷಿಯಾಗುತ್ತದೆ. ಎರಡನೆಯದಾಗಿ ಪಾಂಡವರು ಹಾದರದಿಂದ ಹುಟ್ಟಿದವರು ಎಂಬ ಅಂಶ. ಅವಕ್ಕೆ ಕಾರಣವಿದೆ. ಒಂದು ದಿನ ಕುಂತಿಭೋಜನು ಇಲ್ಲದಿರುವ ಸಂದರ್ಭದಲ್ಲಿ ದೂರ್ವಾಸ ಮುನಿಯು ಕುಂತಿ ಭೋಜನ ಮನೆಗೆ ಬರುತ್ತಾನೆ. ಬಾಲಕಿಯಾದ ಕುಂತಿಯು ಅವನ ಸೇವೆ ಮಾಡುತ್ತಾಳೆ. ಆ ಸಂದರ್ಭದಲ್ಲಿ ಅವಳಿಗೆ ದೂರ್ವಾಸನು ಮಂತ್ರೋಪದೇಶ ನೀಡುತ್ತಾನೆ.

ರಹಸ್ಯ ಮಂತ್ರದೀಕ್ಷೆಯಿಂದ ಕುಂತಿಗೆ ಅನುಕ್ರಮವಾಗಿ ಯಮನಿಂದ ಧರ್ಮರಾಯ; ವಾಯುವಿನಿಂದ – ಭೀಮ; ದೇವೇಂದ್ರನಿಂದ ಅರ್ಜುನ; ಅಶ್ವಿನೀ ಕುಮಾರರಿಂದ ನಕುಲ ಸಹದೇವರು ಹುಟ್ಟುತ್ತಾರೆ. ರನ್ನನ ಸಾಹಸಭೀಮ ವಿಜಯದಲ್ಲಿ ಕೌರವನು ಪಾಂಡವರು ಹಾದರಕ್ಕೆ ಹುಟ್ಟಿದರು ಎಂದು ಹೇಳುತ್ತಾನೆ ಹಾಗೂ ಕ್ಷತ್ರಿಯ ಧರ್ಮಕ್ಕೆ ಅದು ವಿರೋಧವೆಂದು ಪ್ರತಿ ಪಾದಿಸುತ್ತಾನೆ.

ಗೃಹ್ಯಸೂತ್ರವು ಸಂಸ್ಕಾರಗಳನ್ನು ವಿವರಿಸುವಾಗ ವಿವಾಹವು ಎಲ್ಲ ಸಂಸ್ಕಾರಗಳಿಗೆ

ಮೂಲವೆಂದು ಹೇಳುತ್ತದೆ. ಯಾಕೆಂದರೆ ಎಲ್ಲ ಆಚಾರ ನಿಯಮಗಳು ಯಜ್ಞ-ಯಾಗಗಳು ಗೃಹಸ್ಥನ ಸುತ್ತ ಹೆಣೆದುಕೊಂಡಿವೆ.

೧. ವಾಗ್ದಾನ ೨. ವರನ ಸಮ್ಮತಿ ೩. ಕನ್ಯಾದಾನ ೪. ವಿವಾಹ ಹೋಮ ೫. ಪಾಣಿಗ್ರಹಣ ೬. ಹೃದಯ ಸ್ಪರ್ಶ ೭. ಸಪ್ತಪದಿ ೮. ಸ್ಥಿರತೆಯ ಸೂಚಕವಾಗಿ ಬಂಡೆಯೇರುವುದು ೯. ಸೂರ್ಯದರ್ಶನ ೧೦. ಧ್ರುವದರ್ಶನ ೧೧. ಸಂಯಮದ ಮೂರು ರಾತ್ರಿಗಳು ೧೨. ಚತುರ್ಥಿಕರ್ಮ

ನಿಶ್ಚಿತಾರ್ಥ-ಸಾಂಕೇತಿಕ ವಿಧಿ, ವಾಗ್ದಾನ ಒಂದು ಒಪ್ಪಂದ. ವರವರಣವು ವರನನ್ನು ಆರಿಸಲಾಗಿದೆಯೆಂದು ಸೂಚಿಸುತ್ತದೆ. ಕನ್ಯಾದಾನದಲ್ಲಿ ವಧು ಅಗ್ನಿಸಾಕ್ಷಿಯಾಗಿ ವರನಿಗೆ ಒಪ್ಪಿಸಲಾಗುತ್ತದೆ. ಹೋಮಕ್ಕೆ ಸುತ್ತು ಬರುವುದು (ಅಗ್ನಿಸಾಕ್ಷಿ). ವಧೂವರರನ್ನು ಒಂದು ಕೂಡಿಸುವ ಸಂಕೇತ. ಕೈ ಹಿಡಿಯುವುದು ಪರಿಗ್ರಹವನ್ನು ಸೂಚಿಸುತ್ತದೆ. ಸಪ್ತಪದಿಯಲ್ಲಿ ಮೊದಲ ಹೆಜ್ಜೆ ರಸದ ಸೂಚಕ ಎರಡನೆಯದು ಸವಿ. ಮೂರನೆಯದು ಧನವೃದ್ಧಿ ನಾಲ್ಕನೆಯದು ಸೌಲಭ್ಯ, ಐದನೆಯದು ಗೋಸಂಪತ್ತು, ಆರನೆಯದು ಋತುಮಾನ, ಏಳನೆಯದು ಪರಸ್ಪರ ಅನುರಕ್ತರಾಗುವುದನ್ನು ಸೂಚಿಸುತ್ತದೆ.

ವಿವಾಹದ ಅನಂತರ ಸ್ಮಾರ್ತ ಅಗ್ನಿ ಸ್ಥಾಪನೆಯ ವಿಷಯವನ್ನು ದೇವಲನು ಹೇಳುತ್ತಾನೆ.

## ೧೭. ಅಗ್ನಿಹೋತ್ರ

*ವನದೇವೀಪ್ರಾಸಾದಮಿ*
*ದೆನಿಪಗಕುಳದೊಳ್ ಕಪೋತಸಂಹತಿ ನೆಗೆದ*
*ತ್ತೆನಿಪುವು ಧರ್ಮಪತಾಕೆಗ*
*ಳೆನಿಸಿದ ಮುನಿಪಾಗ್ನಿಧೂಮತತಿ ತದ್ದಿನದೊಳ್*

*(ಕರ್ಣಾಟಕ ಕಾದಂಬರಿ ೧-೩೧)*

ಹೋತಾರದಿಂದ ಹೋತೃಬಂದಿದೆ. ಹೋತೃ ಎಂದರೆ ಸಮರ್ಪಿಸುವವನು ಎಂದರ್ಥ. ಅಗ್ನಿಹೋತ್ರವೆಂದರೆ ಅಗ್ನಿಯನ್ನು ಉದ್ದೇಶಿಸಿ ಮಾಡುವ ಹೋಮ. ಅಗ್ನಿಗೆ ಚರು, ತುಪ್ಪ ಮುಂತಾದವುಗಳನ್ನು ಹೋಮದ ಸಂದರ್ಭದಲ್ಲಿ ಅರ್ಪಿಸುವ ಅಧಿಕಾರ ವಿರುವುದು ಅಗ್ನಿಹೋತೃವಿಗೆ ಮಾತ್ರ. ಆದುದರಿಂದ ಅವನು ಯಾಗದ ಎದುರು ಭಾಗದಲ್ಲಿ ಕುಳಿತಿರುತ್ತಾನೆ. ಹೋಮದ ಸಂದರ್ಭದಲ್ಲಿ ಋಕ್ಕುಗಳನ್ನು ಹಾಡುವ ಋಗ್ವೇದಿಗಳು (ಋತ್ವಿಜರು) ಹೋಮದ ಬಲಭಾಗದಲ್ಲಿಯೂ, ಯಜುರ್ವೇದಿಗಳು ಹೋಮದ ಎಡಭಾಗದಲ್ಲಿಯೂ ಕುಳಿತಿರುತ್ತಾರೆ. ಅಗ್ನಿಹೋತೃವೇ ಯಜ್ಞಕ್ಕೆ ಸಂಪೂರ್ಣ ಅಧಿಕಾರಿಯಾಗಿರುತ್ತಾನೆ. ಯಜುರ್ವೇದದಲ್ಲಿ ದರ್ಶಪೌರ್ಣಮಾಸ, ಚಾತುರ್ವಾಸ, ಅಗ್ನಿಷ್ಟೋಮ, ಅಗ್ನಿಚಯನ, ಕಾಮೇಷ್ಠಿ ವಾಜಪೇಯಿ, ಸೌತ್ರಮ್ಮಣಿ, ರಾಜಸೂಯ, ಅಶ್ವಮೇಧ ಇವೇ ಮೊದಲಾದ ಯಜ್ಞ ವಿಧಿಗಳಿವೆ. ಹಾಗೆಯೇ ಗಾಯನ ಮಾಡದೇ

ಪಠಿಸುವ ಸ್ತುತಿಗೆ ಶಾಸ್ತ್ರವೆನ್ನುತ್ತಾರೆ. ಗಾಯನದಿಂದ ಪಠಿಸುವ ಸ್ತುತಿಗೆ ಸ್ತೋತ್ರವೆನ್ನುತ್ತಾರೆ. ಆದರೆ ಮನುವು ಬೇರೆ ರೀತಿ ಹೇಳುತ್ತಾನೆ.

ಸ್ತ್ರೀಯರಿಗೆ ವಿವಾಹವು ಮಂತ್ರಸಹಿತವು. ಅದು ವೈದಿಕ ಸಂಸ್ಕಾರವು. ಪುರುಷನಿಗೆ ಉಪನಯನದ ಬಳಿಕ ಗುರುಕುಲವಾಸದಂತೆ ಸ್ತ್ರೀಗೆ ಪತಿಕುಲವಾಸವು. ಗೃಹಕೃತ್ಯವೇ ಅಗ್ನಿಕಾರ್ಯವು. ಬೇರೆಯಿಲ್ಲ.

ಅಂದರೆ ಸ್ತ್ರೀಯು ಪ್ರತ್ಯೇಕ ಅಗ್ನಿಕಾರ್ಯ ಮಾಡಬೇಕಾಗಿಲ್ಲವೆಂದಾಯಿತು. ಮತ್ತು ಸ್ತ್ರೀಯರ ಅಧಿಕಾರವನ್ನು ಮನುಸ್ಮೃತಿಯು ಮೊಟಕುಗೊಳಿಸುತ್ತದೆ. ಮನು ಮತ್ತೊಂದು ಅಭಿಪ್ರಾಯ ನೀಡಿದ್ದಾನೆ:

ದೇವಯಜ್ಞವೆಂದರೆ ದೇವತೆಗಳಿಗೆ ಅಗ್ನಿಯ ಮೂಲಕ ಆಹುತಿಯನ್ನು ಅರ್ಪಿಸುವುದು. ಪಶು–ಪಕ್ಷಿ–ಮಾನವರಿಗೆ ಆಹಾರ ನೀಡುವುದು ಭೂತಯಜ್ಞ, ಅತಿಥಿಗಳನ್ನು ಬರಮಾಡಿಕೊಂಡು ಸತ್ಕರಿಸುವುದು ನೃಯಜ್ಞ, ಇಲ್ಲಿ ಯಜ್ಞಗಳಿರುವ ಭಿನ್ನತೆಗಳು ಗಮನಾರ್ಹ.

ಅಶೋಕನು ಧರ್ಮಸಾಮ್ರಾಟನೆನಿಸಿ, ಅಜರಾಮರ ಕೀರ್ತಿಭಾಗಿಯಾಗಿದ್ದಾನೆ. ಆತನ ಧರ್ಮರಾಜ್ಯವು ಕೊನೆಗೊಂಡಿತು. ಪರಕೀಯರ ಧಾಳಿಗಳು ಹೆಚ್ಚಾದವು. ಬೌದ್ಧಧರ್ಮದ ಅಹಿಂಸಾತತ್ವ ಮತ್ತು ವಿರಕ್ತಿಮಾರ್ಗ ಇವೆರಡೂ ಭಾರತೀಯ ಸಮಾಜದೊಳಗಿನ ಪೌರುಷ ವೃತ್ತಿಯನ್ನು ದುರ್ಬಲಗೊಳಿಸಿದ್ದಾಗಿ ಬಗೆಯಲಾಯಿತು. ಆ ಬಳಿಕ ಮತ್ತೆ ಯಜ್ಞ–ಸಂಪ್ರದಾಯವು ತಲೆಯೆತ್ತಿ ವಿಜಿಗೀಷುವೃತ್ತಿಯ ರಾಜರ ಬೆಂಬಲವನ್ನು ಪಡೆದಿತು. ಸಾತಕರ್ಣಿಗಳು, ಗುಪ್ತರು, ವಾಕಾಟಕರು, ಕದಂಬರು, ವಾತಾಪಿ ಚಾಲುಕ್ಯರು ಯಜ್ಞಗ್ಗಳನ್ನು ಜರುಗಿಸಿದ್ದು ಸುಪ್ರಸಿದ್ಧವಿದೆ. ಬೌದ್ಧ–ಜೈನಧರ್ಮಗಳು ಎಂದಿನಿಂದಲೂ ಯಜ್ಞಸಂಪ್ರದಾಯಕ್ಕೆ ವಿರೋಧಿಸುತ್ತಲೇ ಇದ್ದುವು.

ಪೂರ್ವಮೀಮಾಂಸೆಯು ಷಡ್ದರ್ಶನಗಳಲ್ಲಿ ಒಂದು. ಇದು 'ಯಜ್ಞಪ್ರಾಧ್ಯಾನ್ಯತೆ'ಯನ್ನು ಸ್ಥಾಪಿಸುತ್ತದೆ. ಉತ್ತರ ಮೀಮಾಂಸೆಯು ಉಪನಿಷತ್ ತತ್ವದ ಮೂಲಕ 'ಜ್ಞಾನ ಮೀಮಾಂಸೆ'ಯನ್ನು ಪ್ರಸ್ತಾಪಿಸುತ್ತದೆ.

ಋಗ್ವೇದದಲ್ಲಿ 'ಅನ್ಯವ್ರತಿ'ಗಳ ಉಲ್ಲೇಖವಿದೆ. ಯಾಜಕ ಸಂಪ್ರದಾಯ ಮತ್ತು ಅನ್ಯವ್ರತ ನೋಂಪಿಗಳ ಸಂಪ್ರದಾಯ, ಇವೆರಡರಲ್ಲಿ ಸಂಘರ್ಷವು ಇದ್ದಿತೆಂದು ಊಹಿಸಲು ಅವಕಾಶವಿದೆಯೆಂದು ಶಂಬಾ ಊಹಿಸುತ್ತಾರೆ. ಯಜ್ಞದ ದಿವ್ಯತೆಯ ಕುರಿತು ಅವರೇ ಹೇಳುತ್ತಾರೆ.

ಚಂದ್ರ ಮತ್ತು ಸೋಮಗಳು ಸಮಾನಾರ್ಥಕ ಪದಗಳಲ್ಲ. ಸೋಮವು ಒಂದು ಬಳ್ಳಿಯ ರಸ. ಚಂದ್ರನು ಓಷಧೀಶ. ಋಗ್ವೇದದಲ್ಲಿ ಇವೆರಡರ ಸಾಹಸಚರ್ಯವು ಕಾಣತೊಡಗುತ್ತದೆ. ಬರುಬರುತ್ತ ಸೋಮ ಅದೃಶ್ಯವಾಗಿ ಅದು ಚಂದ್ರನಲ್ಲಿ ಆಶ್ರಯ ಹೊಂದುತ್ತದೆ. ಚಂದ್ರನ ಪರ್ಯಾಯ ನಾಮ ಸೋಮ ಆಗುತ್ತದೆ. ಚಂದ್ರವಾರ, ಸೋಮವಾರ ಆಗುತ್ತದೆ. ಚಂದ್ರನು ಸುಧಾಂಶು; ಅಮೃತ–ಕಲಾನಿಧಿ; ಒಂದೊಂದು ಕಲೆಯನ್ನು

ದೇವತೆಗಳು ಪಾನಮಾಡುತ್ತಾರೆ. ಬ್ರಾಹ್ಮಣಗಳ ರಚನಾಕಾಲದ ಸುಮಾರಿಗೆ ಸೋಮವಲ್ಲಿ ದುರ್ಮಿಳವಾಗುತ್ತದೆ. ಉದಾತ್ತೀಕರಣದಲ್ಲಿ ಯಜ್ಞವು ಒಂದು ದಿವ್ಯ ವಿಚಾರವಾಗುತ್ತದೆ. ಸೋಮವು ದಿವಂಗತವಾಗಿ ಚಂದ್ರಲೋಕಕ್ಕೆ ಹೋಗುತ್ತದೆ.

ಅಗ್ನಿಹೋತ್ರಿಯೆಂದರೆ ಯಾರು ಎಂಬುದನ್ನು ಶಂಬಾ ಹೀಗೆ ವಿವರಿಸಿದ್ದಾರೆ: ಶುದ್ಧವೈದಿಕ ಮಾರ್ಗ ಯತಿಪಂಥಕ್ಕೆ ವಿರೋಧಿಯಾಗಿದೆ ಕಾರಣವೆಂದರೆ ಯಜ್ಞ ಸಂಸ್ಥೆ ವೈದಿಕ ಮಾರ್ಗದ ತಳಹದಿಯಾಗಿದೆ ಮತ್ತು ಅಗ್ನಿ ಹೋತ್ರಿಯಾದವನು ಗೃಹಸ್ಥಾಶ್ರಮಿಯಾಗಿರಲೇಬೇಕಾಗುತ್ತದೆ. ಪೂರ್ವಮೀಮಾಂಸೆ ನಿಷ್ಠುರ ವೈದಿಕ ಮತಾನುಯಾಯಿಯಾಗಿದ್ದು ಸನ್ಯಾಸಪಂಥಕ್ಕೆ ವಿರುದ್ಧವಾಗಿದೆ. ಋಗ್ವೇದ, ಯಜುರ್ವೇದ, ಸಾಮವೇದ ಇವುಗಳ ನಂತರದ ಕಾಲದಲ್ಲಿ ಉಪನಿಷತ್ತು ಮುಂದೆ ಬಂದವು. ಉಪನಿಷತ್ತುಗಳಲ್ಲಿಯ ತತ್ವಜ್ಞಾನ ಬೇರೆ ದಿಕ್ಕಿಗೆ ಕವಲೊಡೆಯಿತು. ಉಪನಿಷತ್ತುಗಳು ಯತಿಪಂಥಕ್ಕೆ ಪೋಷಕವಾಗಿದೆ. ಈ ತತ್ವಜ್ಞಾನ ವೇದಗಳ ವೈಚಾರಿಕತೆಗಿಂತ ಭಿನ್ನವಾದದ್ದು.

*ವಿವರಗಳಿಗೆ ನೋಡಿ: ಚಿದಂಬರಾನಂದ ೧೯೭೭ ಋಗ್ವೇದ ರಹಸ್ಯ*

*ಶಂಬಾ ಜೋಶಿ ೧೯೯೯ ಸಂಪುಟ. ೧ ಪುಟ. ೧೯೯, ಸಂಪುಟ. ೩*

*ಹಾಲುಮತ ದರ್ಶನ ಪುಟ. ೪೬, ೪೭, ೭೭, ೯೯*

*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೨-೬೭, ೩: ೬-೮-೮೧: ೩: ೧೨೨ - ೨೮೫*

## ೧೮. ಅಗ್ನಿಹೋತ್ರ ಶಾಲೆ

*......ಬೀಡಿಂಗೆ ಪೋಗಲ್ವೇಳ್ದಗ್ನಿ**ಹೋತ್ರ ಶಾಲೆ**ಗೆ* ಎಂದು *ದರ್ಭಶಯನ ತಳದೊಳೊಱಗಿ......*

*(ಪಂಪ ಭಾರತ ೧೩-೩೨ವ)*

ಅಗ್ನಿ ಹೋತ್ರವೆಂದರೆ ಯಜ್ಞಶಾಲೆ. ಅಗ್ನಿ ಕಾರ್ಯವನ್ನು ಮಾಡುವವನು ಅಗ್ನಿಹೋತ್ರಿ ಇಲ್ಲಿ ಅಗ್ನಿ ಹೋತ್ರಕ್ಕೆ ಅಗ್ನಿ ಶಾಲೆಯೆಂಬ ಪ್ರತ್ಯೇಕ ಶಾಲೆಯಿರುವುದು ಗಮನಾರ್ಹ. ಯಾಗ ಶಾಲೆಯ ಪ್ರತ್ಯೇಕ ನಿರ್ಮಾಣವು ಅದರ ಪಾವಿತ್ರ್ಯತೆಯನ್ನು ಉಳಿಸಿಕೊಳ್ಳುವುದಕ್ಕಾಗಿ ಬಂದಿರಬೇಕು. ಎರಡನೆಯದಾಗಿ ವ್ರತಧಾರಿಗಳು ದರ್ಭೆಯ ಮೇಲೆ ಮಲಗುವುದು ಕೂಡಾ ಅಷ್ಟೇ ಗಮನಾರ್ಹ. ಅಗ್ನಿಹೋತ್ರ ಕಾರ್ಯವು ವೈದಿಕ ಸಂಸ್ಕೃತಿಯಿಂದ ಬಂದಿದೆ. ಅಗ್ನಿಶಾಲೆಯು ವಾಸ್ತುಶಿಲ್ಪಕ್ಕೂ ಸಂಬಂಧವಿರಿಸಿಕೊಂಡಿರುತ್ತದೆ. ಅಗ್ನಿಕಾರ್ಯ ಪವಿತ್ರ ವಾಗಿರುವುದರಿಂದ ಅದಕ್ಕೆ ಮೈಲಿಗೆಯಾಗಬಾರದು. ಅಗ್ನಿಕಾರ್ಯದಲ್ಲಿ ವಿಶಾಲ ಹೋಮಕುಂಡವು ಇರುತ್ತದೆ. ಅಗ್ನಿ ಕಾರ್ಯದಲ್ಲಿ ಯಜಮಾನನು ಪೂರ್ವದಿಕ್ಕಿಗೆ ಕೂರುತ್ತಾನೆ. ಅಗ್ನಿಹೋತ್ರದಲ್ಲಿ ಬೇರೆ ಬೇರೆ ವಿಧಗಳಿರುತ್ತವೆ. ಅಗ್ನಿಕಾರ್ಯದಲ್ಲಿ ತೆಂಗಿನಕಾಯಿ ಅರ್ಪಣೆಯಾಗಿರುತ್ತದೆ. ಅದಕ್ಕೆ ನೂರೆಂಟು ಕಾಯಿ ಗಣಹೋಮ ಇತ್ಯಾದಿ ಕರೆಯುವ ಕ್ರಮವಿದೆ. ಈಗ ಹೆಚ್ಚು ಪ್ರಚಲಿತವಿರುವುದು ಗಣಹೋಮ. ಹೋಮಗಳಲ್ಲಿ ಪ್ರಾಣಿಬಲಿ ಇರುತ್ತಿತ್ತು. ಗೋಘ್ನವೆಂಬ ಪದವಿದೆ. ಗೋಘ್ನ ಎಂದರೆ ಗೋವಿನ ಊಟ.

ಯಜ್ಞಗಳಲ್ಲಿ ಅಧಿಕ ಪ್ರಮಾಣದಲ್ಲಿ ಪ್ರಾಣಿ ಬಲಿ, ಮುಖ್ಯವಾಗಿ ಗೋ ಸಂಪತ್ತಿನ ನಾಶ ಜರುಗುತ್ತಿತ್ತು. ಆಗ ಅತಿಥಿಯನ್ನು ಗೋಘ್ನಾ ಎಂದರೆ ಗೋವಿನ ಊಟ ನೀಡಲ್ಪಡುವವನು ಎಂದೇ ಕರೆಯುತ್ತಿದ್ದರು.

*ವಿವರಗಳಿಗೆ ನೋಡಿ: ಆರ್.ಎಸ್. ಶರ್ಮ ೧೯೯೭ ಪ್ರಾಚೀನ ಭಾರತ ಪುಟ. ೭, ೮೭.*

## ೧೯. ಅಗ್ನೀಧ್ರ

*ಬ್ರಹ್ಮಾದ್ವರ್ಯ್ವಾಗ್ನೀಧ್ರ.......... ಪಂಪನ ಪ್ರಯೋಗ. (ಪಂಪ ಭಾರತ ೬-೩೩ ವ)*

ಯಾಗದ ಬೆಂಕಿಯನ್ನು ಉರಿಯುವ ಹಾಗೆ ಮಾಡುವವನು ಎನ್ನುವ ಅರ್ಥದಲ್ಲಿ ಪಂಪ ಬರೆದಿದ್ದಾನೆ. ವಾಸ್ತವವಾಗಿ ಪಂಪನು ಇದನ್ನು ವಿವರಿಸುವಾಗ ಅನೇಕ ಸಾಂಸ್ಕೃತಿಕ ವಿವರಣೆಗಳನ್ನು ನೀಡಿದ್ದಾನೆ. ಮಹಾವೈಭವದಿಂದ ಬನ್ನಿಮರದ ಪಕ್ಕದಲ್ಲಿ ಇದ್ದ ದಕ್ಷಿಣ ಶಾಲೆಯಲ್ಲಿ ಹಿರಣ್ಯದಾನ ಮಾಡಿ, ಜಗುಲಿಗಳ ಮೇಲೆ ಆಹವನೀಯ, ದಕ್ಷಿಣ, ಗಾರ್ಹಪತ್ಯಗಳೆಂಬ ಮೂರು ಕುಂಡಗಳಲ್ಲಿ ಉತ್ತರ ಜಗಲಿಯಲ್ಲಿ ಅಗ್ನಿಸಂಧಾನ ಮಾಡಿದರು. ವ್ಯಾಸ, ಕಶ್ಯಪ, ವಿಶ್ವಾಮಿತ್ರ, ಭಾರದ್ವಾಜ, ಬ್ರಹ್ಮ, ಅಧ್ವರ್ಯು, ಅಗ್ನೀರ್ಧ, ಮೈತ್ರಾವರುಣ, ಅಗ್ನಿಪರಿಚಾರಕ, ಉದ್ಗಾಗ್ತ್ರ, ನೇತ್ರ, ಹೋತೃ, ಜಮದಗ್ನಿಗಳೇ ಮೊದಲಾದ ಋತ್ವಿಜರಿಂದ ಯಜ್ಞ ಮಾಡಲು ಹೇಳಿ ಎಂದು ಬರುತ್ತದೆ. ಇಲ್ಲಿ ಮೂರು ಅಗ್ನಿಕುಂಡಗಳು, ಋತ್ವಿಜರ ವಿಷಯವು ಉಕ್ತವಾಗಿರುವುದು ಗಮನಾರ್ಹವಾಗಿದೆ. ಯಾಗಕ್ಕೂ ವೇದಗಳಿಗೂ ಸಂಬಂಧವಿದೆ. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣ ವೇದಗಳು ಸಂಹಿತೆಗಳಾಗಿವೆ. ಸಂಹಿತ ಎಂದರೆ ಕಟ್ಟು. ನಾಲ್ಕು ವೇದಗಳು ಮಂತ್ರಗಳ ಕಟ್ಟು. ಋಗ್ವೇದ ಋಕ್ ನಿಂದ ತುಂಬಿದೆ. ಋಕ್ ಧಾತುವಿನಿಂದ ಹುಟ್ಟಿದೆ. ಋಚ್ ಎಂದರೆ ದೇವರನ್ನು ಸ್ತುತಿಸು. ಋಗ್ವೇದದ ಮಂತ್ರಗಳನ್ನು ಹೋತ್ರವು ಯಜ್ಞದಲ್ಲಿ ವಿನಿಯೋಗ ಮಾಡುತ್ತಾನೆ. ಯಜ್ಞಗಳನ್ನು ಅದೃಢವಾದ ನೌಕೆಗಳಿದ್ದಂತೆ ಎಂದು ಹೇಳುತ್ತಾರೆ. ಛಾಂದೋಗ್ಯದಲ್ಲಿ ಶಾವಲುದ್ಗೀತವೆಂದು ಬರುತ್ತದೆ. ಅದರಲ್ಲಿ ಋತ್ವಿಜರನ್ನು ನಾಯಿಗೆ ಹೋಲಿಸಲಾಗಿದೆ.

ಈ ವಿಚಾರ ಪಾರಸಿ ಭಾಷೆಯಲ್ಲಿಯೂ ಬಂದಿದೆ:

ಪಾರಸಿಯಲ್ಲಿ ಅಗ್ನಿಯನ್ನು ನೋಡುವ ಋತ್ವಿಜ ಅಗ್ನೀರ್ಧನಿಗೆ ಪ್ರತಿಯಾಗಿ ಅಂತರವೆಕ್ತ, ಯಜ್ಞಾಗ್ನಿಯ ಮೇಲೆ ಸದಾ ಕಟ್ಟಿರುವವನು ಇದ್ದಾನೆ. ಪಾರ್ಸಿ ಭಾಷೆಯಲ್ಲಿ ಅಗ್ನಿ ಎಂಬ ಅರ್ಥವಿರುವ ಅತಷ್ ಎಂಬ ಶಬ್ದವಿದೆ. ಇದು ಸಂಸ್ಕೃತದಲ್ಲಿ ಅಥರ್ವಸ್ ಮತ್ತು ಅಥರ್ವಾಂಗೀರಸ್.

ಮಹಾಯಜ್ಞಗಳು ಐದು –

(೧) ದೇವಯಜ್ಞ, ಪಿತೃಯಜ್ಞ, ಭೂತಯಜ್ಞ, ಮನುಷ್ಯಯಜ್ಞ, ಬ್ರಹ್ಮಯಜ್ಞ (ಆರಣ್ಯಕ. ೨ನೆಯ ಪ್ರಶ್ನೆ-೧೦ನೆಯ)

*ವಿವರಗಳಿಗೆ ನೋಡಿ: ಟಿ.ವಿ. ವೆಂಕಟಾಚಲಶಾಸ್ತ್ರೀ -ಶ್ರೀವತ್ಸ ನಿಘಂಟು*

*ಯುಗಯಾತ್ರೀ ಭಾರತೀಯ ಸಂಸ್ಕೃತಿ ೧೯೭೧ ಸಂಪುಟ. ೨ ಪುಟ. ೨೩೮*
*ಚಿದಂಬರಾನಂದ ೧೯೭೭ ಋಗ್ವೇದ ರಹಸ್ಯ ಪುಟ. ೫*
*ಪಿ.ವಿ. ಕಾಣೆ ೧೯೮೦ ಧರ್ಮಶಾಸ್ತ್ರದ ಇತಿಹಾಸ*

## ೨೦. ಅಗ್ರಹಾರ

*ಅಂತುಸೊಗಯಿಸುವಗ್ರಹಾರದೊಳ್ ತರ್ಕವ್ಯಾಕರಣ ವಾತ್ಸ್ಯಾಯನಾದ್ಯಶೇಷ ವಿದ್ಯಾಪ್ರಕರಣನುಂ ಸಕಲಧರ್ಮಕ್ಕೆಲ್ಲಂ ಕೆಯ್ಯಾಲ್ ಮೂಡಿದಂತೆ ದುರ್ಗಸಿಂಹ ಬ್ರಾಹ್ಮಣನುಂಟು. ಆತನ ಪತ್ನಿ ರೇವಕಬ್ಬೆ ಗೌರೀದೇವಿಯೋಪಾದಿಯೊಳ್ ತನ್ನ ಪತಿಭಕ್ತಿಯಿಂದಿರಲ್, ಆ ದಂಪತಿಗಳ್ಗೆ ತಮ್ಮ ಕುಲಕ್ಕೆ ಪ್ರದೀಪನುಮಾಗಿ ಗೌತಮ ಕುಲದೊಳ್ ಸಮುದ್ರದೊಳ್ ಚಂದ್ರಂ ಪುಟ್ಟುವಂತೆ ಪುಟ್ಟಿ.................*

*(ಪಂಚತಂತ್ರ ಪೀಠಿಕಾ ಪ್ರಕರಣ, ೪೧ ವ)*

ಅಗ್ರಹಾರವೆಂದರೆ ಬ್ರಾಹ್ಮಣರ ವಾಸಸ್ಥಳ. ಅಗ್ರಹಾರ ಬೀದಿ ಎಂದರೆ ಬ್ರಾಹ್ಮಣರ ಬೀದಿಯೆಂದರ್ಥ. ಅಗ್ರ ಜನ್ಮನೆಂದರೆ ಬ್ರಾಹ್ಮಣ. ಅಗ್ರವೆಂದರೆ ಮುಖ್ಯವಾದ, ಅಧಿಕವಾದ, ತುದಿ, ಪ್ರಾರಂಭವೆಂದು ಅರ್ಥಬರುತ್ತದೆ. ದುರ್ಗಸಿಂಹನು ತನ್ನ ಪಂಚತಂತ್ರದಲ್ಲಿ ತನ್ನ ಪರಿಚಯವನ್ನು ಹೇಳುವಾಗ ಸೊಗಯಿಸುವ ಅಗ್ರಹಾರದೊಳ್ ಎಂದು ಬಳಸುತ್ತಾನೆ. ರಾಜ ಕೇಂದ್ರಿತ ಸರಕಾರದಲ್ಲಿ ಪುರೋಹಿತರಿಗೆ (ಪುರದ ಹಿತವನ್ನು ಕಾಪಾಡುವವರು), ಅಗ್ರಸ್ಥಾನವಿತ್ತು ಎಂಬುದು ಗಮನಾರ್ಹ. ಅಗ್ರವೆನ್ನುವುದು ಸಂಸ್ಕೃತದ ಪದ. ಅಗ್ರಾಸನವೆಂದರೆ ಅಗ್ರಹಾರ, ಬ್ರಾಹ್ಮಣರಿಗೆ ದಾನ ಕೊಟ್ಟ ಭೂಮಿ. ಎರಡನೆಯದು ತರ್ಕ, ವ್ಯಾಕರಣ, ವಾತ್ಸಾಯನ, ಶೇಷ ವಿದ್ಯಾ ಪ್ರಕರಣನುಂ ಎಂದು ಬರುತ್ತದೆ. ವ್ಯಾಕರಣ, ಕಾಮಸೂತ್ರ, (ಕಾಮಸೂತ್ರ ಕಲಿಸುವುದು ಆಗ ಅನಗತ್ಯವೆಂದು ಅನಿಸಿರಲಿಲ್ಲ). ಮೂರನೆಯದು, ಗೌತಮ ಕುಲದ ಪ್ರಶ್ನೆ. ಬ್ರಾಹ್ಮಣರಲ್ಲಿ ಕುಲವನ್ನು ಗೋತ್ರವೆಂದು ಕರೆಯುತ್ತಾರೆ. ಕುಲಕ್ಕೂ ಗೋತ್ರಕ್ಕೂ ವ್ಯತ್ಯಾಸವಿದೆ. ವಾಸ್ತವವಾಗಿ ಗೋತ್ರ ಬ್ರಾಹ್ಮಣರು ಬಳಸುವುದು ಜಾಸ್ತಿ.

ಇದರಲ್ಲಿಯೇ ಶ್ರುತಿವಿಹಿತವೆಂದು ಬರುತ್ತದೆ. ವೇದ, ಆಗಮಗಳನ್ನು ಶ್ರುತಿಯೆಂದು ಕರೆಯುತ್ತಾರೆ. ಶ್ರುತಿ ಜ್ಞಾನವೆಂದರೆ ಶಾಸ್ತ್ರಜ್ಞಾನ, ಯಾರು ಶಾಸ್ತ್ರಕ್ಕೆ ಅನುಸಾರವಾಗಿ ಜೀವನ ನಡೆಸುತ್ತಾರೋ ಅವರನ್ನು ಶ್ರುತಿಜ್ಞಾನಿಗಳೆಂದು ಕರೆಯುತ್ತಾರೆ. ಕೆಲವರ ಪ್ರಕಾರ ಗ್ರಾಮವೆಂದರೆ ಈಗಿನಂತೆ ಆಡಳಿತ ಸೌಕರ್ಯಕ್ಕೆ ಕಲ್ಪಿಸಿದ ಭೂ ಪ್ರದೇಶವಲ್ಲ. ಅಗ್ರಹಾರವೆನ್ನಲಾಗಿದೆ.

ಮನುವು ಮತ್ತು ಪಂಚತಂತ್ರಗಾರ–ಇವರೂ ವೈದಿಕ ಮತಾವಲಂಬಿಗಳು ಮತ್ತು ಅವರಿಬ್ಬರೂ ಅಗ್ರಹಾರಕ್ಕೆ ಹೆಚ್ಚಿನ ಮಹತ್ವ ಕೊಟ್ಟಿದ್ದಾರೆ ಎಂಬುದಕ್ಕೆ ಮೇಲಿನ ಮಾತುಗಳು ಸಾಕ್ಷಿಯಾಗಿವೆ. ಶಂಬಾ ಜೋಶಿ ಹೀಗೆ ಹೇಳುತ್ತಾರೆ:

'ಅಗ್ರ+ಹಾರ ಎಂಬುದಕ್ಕೆ ಈಗ ಕೋಶಗಳಲ್ಲಿ ಹೇಳಿದ ಅರ್ಥವು ಅಸಮರ್ಪಕವಾಗಿದೆ

ಯೆಂಬ ನನ್ನ ಅಭಿಪ್ರಾಯಕ್ಕೆ ಅವರ ಬೆಂಬಲವೂ ದೊರೆತಿದೆ. ಅಗ್ರ ಎಂದರೆ ಬ್ರಾಹ್ಮಣ. ಹಾರವೆಂದರೆ ಸ್ಥಳ, ಊರು; ಎಂಬ ನನ್ನ ವಿಚಾರವೇ ಅವರ ಸಂಶೋಧನೆಯಲ್ಲಿಯೂ ದೃಢವಾಗಿ ಸ್ಥಾಪಿತವಾದುದು ಸಂತೋಷದ ಸಂಗತಿ. 'ಹಾರ' ಶಬ್ದದ ನಿರುಕ್ತದ ಬಗೆಗೆ ಮಾತ್ರ ಭಿನ್ನಾಭಿಪ್ರಾಯವು ಉಳಿದಿದೆ. 'ಆಹಾರ' ಎಂಬುದು ಪ್ರಾಚೀನತಮ ರೂಪವೆಂದು ಶಾಸನಗಳಿಂದ ಗೊತ್ತಾಗುತ್ತದೆ. ಹಾರವು ಆಹಾರದ ಸವೆದರೂಪ; ಎಂದು ಅಭಿಪ್ರಾಯ ವಿದೆ. ಈ ಕಾರಣದಿಂದ ಪಾಡು-ಪಾಡ-ಪಾರ ಇದರಿಂದ ಬಳಿಕ ಹಾರವಾಯ್ತೆಂಬುದು ಅವರಿಗೆ ಸಮ್ಮತವಿಲ್ಲ.

ಅಗ್ರಹಾರವೆಂಬುದು ಕಂನಾಡಿನಲ್ಲಿಯೆ ಮೊದಲು ಅಸ್ತಿತ್ವದಲ್ಲಿ ಬಂದಿರಬೇಕೆಂದು ನನ್ನ ಎಣಿಕೆ. ಏಕೆಂದರೆ ಕೇವಲ ಸಂಸ್ಕೃತದಿಂದ ಇದರ ಅರ್ಥವು ಪೂರ್ಣವಾಗಿ ಹೊರಡುವುದಿಲ್ಲ. ಅಗ್ರ+ಹಾರ ಎಂಬ ಎರಡು ಪದಗಳು ಇದರಲ್ಲಿ ಇದ್ದುದರ ಬಗೆಗೆ ಭಿನ್ನಾಭಿಪ್ರಾಯವಿಲ್ಲ.

'ಅಗ್ರಂ' ಎಂದರೆ 'ಬ್ರಾಹ್ಮಣ ಭೋಜನಂ' ಎಂಬುದು ಇಲ್ಲಿ ಸರಿಹೋಗುವುದು. ಆದರೆ, ಮೇಲೆ 'ಹಾರ' ಎಂದರೆ 'ಹರತಿ' ಅಥವಾ 'ಹ್ರಿಯತೇ' ಎಂದು ಹೇಳಿದಂತೆ ಖಟಕ್ಕೆ ಹೇಗೆ ಅರ್ಥ ಮಾಡುವುದು ಸಾಧ್ಯ?

'ಹಾರ' ಇದಕ್ಕೆ 'ಹ್ರಿಯತೆ' ಅಥವಾ 'ಹರತಿ' ಎಂದು ಸ್ಪಷ್ಟೀಕರಿಸುವುದಾದರೆ, 'ಪ್ರೇಹಾರ' 'ಶೀಲಾಹಾರ' ಎಂಬುವು ಪ್ರದೇಶದ ಹೆಸರೆಂದು ತಿಳಿದುಬರುತ್ತದೆ. (ಮೈಸೂರು ಶಾಸನ ಇಲಾಖೆಯ ವರದಿ ೧೯೨೯.)

*ವಿವರಗಳಿಗೆ ನೋಡಿ: ಜಾತಿ: ಜನಾಂಗ: ಚಕ್ರಕೋಡಿ ಈಶ್ವರಶಾಸ್ತ್ರೀ ೧೯೬೭ ಮನುಸ್ಮೃತಿ ೪-೧೦೮.*
*ಶಂಬಾ ಜೋಶಿ ೧೯೯೯ ಸಂಪುಟ. ೨ ಪುಟ. ೧೧೬, ೧೮೨-೧೮೩.*

**೨೧. ಅಗಳ್**

*"ಲವಣಾಬ್ಧಿಯೆ ಬಳಸಿದುದೆನಿ**ಸುವಗಟ**ಬಳಸೆಸೆದಿರೆ" ಎಂದು ಪಂಪಭಾರತದಲ್ಲಿ ಬರುತ್ತದೆ. (ಪಂಪಭಾರತ ೪-೧೦) ಅಗಳ್ ಎನ್ನುವುದಕ್ಕೆ ಖನನ ಎಂಬ ಅರ್ಥವಿದೆ.*

'ಅಗಳು' ಎಂಬುದು ಈಗಲೂ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಚಾಲ್ತಿಯಲ್ಲಿರುವ ಪದ. ಅಗಳು ಎಂದರೆ ಕಂದಕವೆಂದು ಅರ್ಥ. ಹಿಂದೆ ಕೋಟೆಯ ಸುತ್ತ ಅಗಳು ಅಥವಾ ಕಂದಕವನ್ನು ತೆಗೆಯುತ್ತಿದ್ದರು ಎಂಬುದಕ್ಕೆ ಮೇಲಿನ ವಾಕ್ಯ ಸಾಕ್ಷಿಯಾಗಿದೆ.

ಕೌಟಿಲ್ಯನ ಅರ್ಥಶಾಸ್ತ್ರದಲ್ಲಿಯೂ ಕಂದಕ ತೆಗೆಯುವುದರ ಕುರಿತು ಬರುತ್ತದೆ:

ಅದರ ಸುತ್ತಲೂ ಮೂರು ಬಾರಿ ಸುತ್ತಿರುವಂತೆ ಮೂರು ಅಗಳು (ಕಂದಕ)ಗಳನ್ನು ಪರಸ್ಪರವಾಗಿ ಒಂದೊಂದು ದಂಡ (ಒಂದುನೂರ ಅರವತ್ತೆಂಟು ಅಂಗುಲ) ಅಂತರ ವಿರುವಂತೆಯೂ, ಹದಿನಾಲ್ಕು ಹನ್ನೆರಡು ಇಲ್ಲವೇ ಹತ್ತು ದಂಡಗಳಷ್ಟು ಅಗಲವಿರು ವಂತೆಯೂ ಮಾಡಿಸಬೇಕು. ಆ ಅಗಳಿನ ಅಗಲದ ಪರಿಮಾಣಕ್ಕಿಂತ ಕಾಲು ಅಥವಾ ಅರ್ಧದಷ್ಟು ಕಡಿಮೆಯಿರುವಂತೆ ಅದರ ಆಳವಿರಬೇಕು. ಮೂರನೇ ಒಂದು

ಭಾಗದಷ್ಟಾದರೂ ಆಳವಿರಬಹುದು. ಬುಡದಿಂದ ಮೇಲಕ್ಕೆ ಒಂದೇ ಚಚ್ಚೌಕವಿರಬೇಕು. ಅದರ ಬುಡ ಮತ್ತು ಪಾರ್ಶ್ವಪ್ರದೇಶವು ಕಲ್ಲುಗಳಿಂದಲೂ ಅಥವಾ ಕಲ್ಲು ಇಟ್ಟಿಗೆಗಳಿಂದಲೂ ಕಟ್ಟಿದುದಾಗಿರಬೇಕು. ನೀರು ಬರುವವರೆಗೆ ತೋಡಿದ್ದರಿಂದ ಅದೇ ಸ್ವತಃ ಚಿಲುಮೆಯುಳ್ಳ ದಾಗಿಯೂ ಇಲ್ಲದಿದ್ದರೆ ಮತ್ತೊಂದೆಡೆಯಿಂದ ಹರಿದು ಬರುವ ನೀರುಳ್ಳದ್ದಾಗಿಯೂ, ಹಾಗೆ ಬಂದ ನೀರು ಹೊರಟು ಹೋಗಲಿಕ್ಕನುಕೂಲಿಸುವಂತೆ ಅವಕಾಶವುಳ್ಳದಾಗಿಯೂ, ತಾವರೆ, ಮೊಸಳೆ, ಮುಂತಾದವುಗಳಿಗೆ ನೆಲೆವೀಡಾಗಿಯೂ ಇರಬೇಕು. ನಾಡಿನ ರಕ್ಷಣೆಯೇ ಇದರ ಹಿಂದಿರುವ ದೃಷ್ಟಿಕೋನವಾಗಿದೆ.

*ವಿವರಗಳಿಗೆ ನೋಡಿ: ಎಂ. ವಿ. ಕೃಷ್ಣರಾವ್ ೧೯೫೩ ಕೌಟಿಲ್ಯ ಪುಟ. ೨೫.*

**೨೨. ಅಘಮರ್ಷಣ**

*ಅಂತೆನ್ನಂ ಸಪ್ರಾಣನಪ್ಪಂತು ಮಾಡಿ ಸಕಲ ಪರಿಶ್ರಮಂಗಳನಾಜೆಸಿ ಮುನಿಕುಮಾರಂ ಕೃತಸ್ನಾನನಾಗಿ ಪ್ರಾಣಾಯಾಮಪೂರ್ವಕಮ**ಘಮರ್ಷಣ**ಕ್ರಿಯೆಗಳಂ ನಿರ್ವರ್ತಿಸಿ ನಳಿನೀದಳಪುಟದೆ*

*ಕೆಂದಾವರೆಯಲರ್ಗಳಿಂದಿವಸಕರಂಗರ್ಘ್ಯಮನೆತ್ತಿಗೃಹೀತಧವಳವಲ್ಕಲನುಂ ನಿರ್ಧೂತಜಟಾಕಳಾಪನುಂ ಪೂರ್ಣಕಮಂಡಳಾಕಲಿತ ಕರತಳನುಮಾಗೆನ್ನಂ ಪರ್ಣಪುಟದೊಳ್ ತಳೆದು ನಿರ್ವರ್ತಿತ ನಿಯಮರಪ್ಪ ಮುನಿಕುಮಾರರ್ ಬೆರಸು ನಿಜಾಶ್ರಮಕ್ಕೆ ಪೋಗೆವೋಗೆ (ಕರ್ಣಾಟಕ ಕಾದಂಬರಿ, ೧–೧೭೮ ವ.)*

*ಅಂತು ಚಿಂತಿಸುತಿರ್ದಿರುಳಂ ಕಳೆದು ಬೆಳಗಪ್ಪುದುಂ ಕೃತಪ್ರಾಭಾತಿಕ ನಿಯಮನಾಗೆ ಮಹಾಶ್ವೇತೆಯುಮ**ಘಮರ್ಷಣ** ನಿಯಮ ಜಪಂಗಳಂ ಮಾಡುತಿರ್ದಳನ್ನೆಗಂ...... (ಕರ್ಣಾಟಕ ಕಾದಂಬರಿ ೧–೧೦ವ)*

ಪ್ರಾಣಾಯಾಮ, ಸ್ನಾನ, ಪೂಜೆ, ಹೋಮ, ಮಂತ್ರಪಠಣ, ಮೂರು ಕಾಲಗಳಲ್ಲಿ (ಬೆಳಗ್ಗೆ, ಮಧ್ಯಾಹ್ನ, ಸಾಯಂಕಾಲದಲ್ಲಿ ಜಪ) ಮಾಡುವುದು ನಿತ್ಯ ಕರ್ಮ ಅನುಷ್ಠಾನವೆನಿಸಿಕೊಳ್ಳುತ್ತದೆ. ಅಘಮರ್ಷಣವೆಂದರೆ ಪಾಪ ವಿಮೋಚನೆಗೆ ಕೈಗೊಳ್ಳುವ ವಿಧಿಯೆಂಬಂತೆ ರಾಮಚಂದ್ರ ಚರಿತ ಪುರಾಣದಲ್ಲಿಯೂ ಚಿತ್ರಿತವಾಗಿದೆ (೭–೧೧೭). ಪಾಪನಾಶಕ್ಕಾಗಿ ಸೂರ್ಯನಿಗೆ ಅರ್ಘ್ಯಜಲವನ್ನು ನೀಡುವುದು ಇಲ್ಲಿ ಗಮನಾರ್ಹ.

ಪಾಪವನ್ನು ತೊಳೆಯುವುದು. ಸ್ನಾನಮಾಡುವಾಗ ಪಠಿಸುವ ಮಂತ್ರವೆನ್ನುವ ಅರ್ಥದಲ್ಲಿ ಪಂಪ ಅಘಮರ್ಷಣವನ್ನು ಬಳಸಿದ್ದಾನೆ. (ಪಂಪ ಭಾರತ ೯–೭೨ ವ)

ಅಘವೆಂದರೆ ಪಾಪ; ದುಃಖ; ನೋವು ಎಂಬ ಅರ್ಥಗಳಿವೆ. ಪಾಪ ನಿವಾರಣೆಗೆ ಜಲದಲ್ಲಿ ನಿಂತು ಅರ್ಘ್ಯವನ್ನು ಸೂರ್ಯನಿಗೆ ಜಲವನ್ನು ನೀಡುವುದರಿಂದ ಪಾಪ ನಿವಾರಣೆಯಾಗುತ್ತದೆ.

ಅಘಮರ್ಷಣ ಮಂತ್ರವು ಯಜುರ್ವೇದದಲ್ಲಿ ಬರುತ್ತದೆ. ವೈಭವಯುತನಾಗಿ ವ್ಯಾಪ್ತನಾಗಿರುವ ತಮಸ್ಸಿನ ಆಚೆಗಿರುವ, ಸರ್ವಶ್ರೇಷ್ಠನೂ, ಆನಂದಮಯನೂ ಆಗಿರುವ

ಜ್ಞಾನಜ್ಯೋತಿಯೂ ನಮಗೆ ಪ್ರಾಣದಾತನಾದ ಸೂರ್ಯಸ್ವರೂಪನೂ ಆಗಿರುವ ಆ ದೇವದೇವನನ್ನು ನಾವು ಹೊಂದುವಂತಾಗಲಿ. (ಯಜುರ್ವೇದ ೩೫-೧೪)

ಪ್ರಪಂಚದ ಪ್ರತಿಯೊಂದು ಪದಾರ್ಥವೂ ಆ ಸೂರ್ಯನಾಮಕ ಭಗವಂತನ ಮಹಿಮಾತಿಶಯವನ್ನು ತೋರುವ ಕೀರ್ತಿಧ್ವಜದಂತಿದೆ. 'ದೃಶೇ ವಿಶ್ವಾಯ' ಸಮಸ್ತ ವಿಶ್ವಕ್ಕೂ ಆ ಮಹಿಮಾವಂತನ ವೈಭವ ಪ್ರದರ್ಶನ ಮಾಡುತ್ತವೆ. ಅವನಿಂದ (ಯಜುರ್ವೇದ ೩೩-೩೧)

ಸೂರ್ಯನೇ ಜಗತ್ತಿನ ಆತ್ಮ (ಯಜುರ್ವೇದ ೭-೪೨) ಸುಜನಲೋಕ ಹಿತಾರ್ಥವಾಗಿ ನಿರಂತರ ಕರುಣ ನೇತ್ರೋನ್ಮೇಹಿತನಾದ ಭಗವಾನ್. ನೂರು ಶರದಗಳವರೆಗೆ ಮಾತಾಡುತ್ತಿರುವಂತಾಗಲಿ, ನೂರು ಶರದಗಳವರೆಗೆ ಕೇಳುವಂತಾಗಲಿ. ಅಧೀನರಾಗಿ ನಾವು ನೂರು ಶರದಗಳವರೆಗೆ ಜೀವಿಸುವಂತಾಗಲಿ. (ಯಜುರ್ವೇದ ೩೬-೨೪) (ವೇದವ್ರತ ವೈಶಂಪಾಯನ ೧೯೮೪ ಪು.೭೭)

*ವಿವರಗಳಿಗೆ ನೋಡಿ: ವೇದವ್ರತ ವೈಶಂಪಾಯನ ೧೯೮೪ ಋಗ್ವೇದ ಪುಟ. ೭೭.*

**೨೩. ಅಘ ವಿಘಾತ**

*ನಾನಾ ವಿಧವಾದ್ಯಂಗಳೊಳಂ ಆಂಗಿಕಾಭಿನಯಂಗಳೊಳವೆಸೆಯೆ* ***ಮಘವನಘವಿಘಾತಾರ್ಥ*** *ಮುದ್ಧತಾಭಿನಯಪ್ರಾಯಮುಮಾರಭಟೀ ವೃತ್ತಿಯುಕ್ತ ಮುಮಪ್ಪತಾಂಡವಮನಾಡಲುದ್ಯೋಗಂಗೆಯ್ದು ಮಂಗಳಾಳಂಕಾರಾಲಂಕೃತನಾಗಿ ನಾಟ್ಯವಿದ್ಯಾಚಾರ್ಯನಂ ಪೋಲ್ತು ರಂಗಂಬೊಕ್ಕು..........*

*(ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೭)*

ಭರತನ ನಾಟ್ಯಶಾಸ್ತ್ರದಲ್ಲಿ ಬರುವ ನೃತ್ಯಪದ್ಧತಿಯ ವಿಷಯವನ್ನು ಪಂಪನು ಇಲ್ಲಿ ಹೇಳಿದ್ದಾನೆ. ಅಂಗಗಳ ಚಲನೆಯ ಮೂಲಕ ಅಭಿವ್ಯಕ್ತಿಸುವ ಕ್ರಮವನ್ನು ಆಂಗಿಕಾಭಿನಯ ವೆಂದು ಕರೆಯುತ್ತಾರೆ. ಆಂಗಿಕ, ವಾಚಿಕ, ಸಾತ್ವಿಕ, ಆಹಾರ್ಯ ಎಂಬುದು ನಾಲ್ಕು ಬಗೆಯ ಅಭಿನಯದ ಅಂಗಗಳು. "ಅಘ ವಿಘಾತಾರ್ಥಂ ಉದ್ಧತಾಭಿನಯ" ವೆಂದರೆ ಪಾಪನಾಶದ ಉದ್ಧತ ಅಭಿನಯ. (ಅನುಕರಣೆ) ಆರಭಟೀ ವೃತ್ತಿಯೆಂದರೆ ವಿವಿಧ ಭಾವಗಳ ಅಭಿನಯ. ತಾಂಡವವೆಂದರೆ ಇಲ್ಲಿ ತಾಂಡವ ನೃತ್ಯವೆಂದು ಅರ್ಥ. ದಾಕ್ಷಾಯಣಿಯು ದಕ್ಷನ ಯಜ್ಞಕ್ಕೆ ಆಹುತಿಯಾದಾಗ ಶಿವನು ಸಿಟ್ಟು ಡಮರುಗವನ್ನು ಬಾರಿಸುತ್ತಾ ರುದ್ರನರ್ತನವಾಡುತ್ತಾನೆ. 'ಜಗತ್ತನ್ನೇ ತಾಂಡವವಾಡುತ್ತೇನೆ" ಎಂದು ಹೇಳುತ್ತಾನೆ. ಇಲ್ಲಿಂದ ತಾಂಡವ ನೃತ್ಯ ಪ್ರಾರಂಭವಾಯಿತು ಎಂದು ಪುರಾಣಗಳು ಹೇಳುತ್ತವೆ. ಭರತನಾಟ್ಯವನ್ನು ಮೂರು ವಿಭಾಗ ಮಾಡಿದ್ದಾನೆ. ೧) ನೃತ್ತ ೨) ನೃತ್ಯ ೩) ನಾಟ್ಯ.

ಸಂಗೀತದ ಹಿನ್ನೆಲೆಯಲ್ಲಿ ಸಮ್ಮಿಳಿತವಾಗಿ ತಾಳ ಬದ್ಧವಾದ ಸರಳ ಸ್ಪಷ್ಟ ನರ್ತನವೇ ನೃತ್ತವು. ನೃತ್ಯವು ಸ್ಪಷ್ಟ ಆಂಗಿಕ ಅಭಿನಯ ಹೊಂದಿರುತ್ತದೆ. ಅಭಿನಯಕ್ಕೆ ಪ್ರಾಶಸ್ತ್ಯವಿದೆ.

ನೃತ್ಯದಲ್ಲಿ ಭಾವ, ರಸ ವ್ಯಂಜನಕ್ಕೆ ಪ್ರಾಶಸ್ತ್ಯವಿದೆ. ವಾಕ್ಯಾಭಿನಯ, ಭಾವಾಭಿನಯ ಪದಾರ್ಥಾಭಿನಯ ಮುಖ್ಯ. ನಾಟ್ಯವು ಮಾತು, ಸಂಗೀತ; ಅಭಿನಯದಿಂದ ಕೂಡಿದ್ದು ಕಥಾ ಪ್ರಧಾನವಾಗಿರುತ್ತದೆ.

ಭರತನಾಟ್ಯದಲ್ಲಿ ಎರಡು ವಿಧವಿದೆ. ತಾಂಡವ ಮತ್ತು ಲಾಸ್ಯ. ಶಿವನಿಂದ ಬಂದಿರುವ ಪೌರುಷದ ನೃತ್ಯ ತಾಂಡವ. ಪಾರ್ವತಿಯಿಂದ ಲಲಿತವಾದ ಸೊಗಸಾದ ನೃತ್ಯ ಬಂದಿರುವುದನ್ನು ಲಾಸ್ಯವೆಂದು ಕರೆಯುತ್ತಾರೆ. ನೃತ್ಯ ಕಲೆಗಿರುವ ಮುಖ್ಯ ಅಂಶಗಳಲ್ಲಿ ಪಾಪನಾಶವೂ ಒಂದು ಎಂಬುದಿಲ್ಲಿ ಗಮನಾರ್ಹ.

*ವಿವರಗಳಿಗೆ ನೋಡಿ: ಯು. ಎಸ್. ಕೃಷ್ಣರಾವ್ ೧೯೭೧ ಆಧುನಿಕ ಭಾರತದಲ್ಲಿ ನೃತ್ಯಕಲೆ ಪುಟ. ೩೨.*

## ೨೪. ಅಚ್ಚಾಳ್ತನ

*"ಪರಿವಕರೆವೆರೆವ ಸೂಱೂಯ್ತರ ಸೂಳುಗಳ್ತುಱುಂಗಿದಚ್ಚುಳಾಯ್ತರ ಕಳಕಳರವದಿಂ ಭೋರ್ಗರೆದುಲಿವಂಬುಧಿಯನಂತದೇಂ ಮಗಳಿಸಿತೋ"* ಆಳುತನ ಎನ್ನುವುದು ಮುಖ್ಯ. ಅಚ್ಚು ಎಂದರೆ ಪ್ರಿಯವೆಂದೂ ಅರ್ಥ ಬರುತ್ತದೆ. *(ಶಾಂತಿನಾಥ ಕವಿ – ಸುಕುಮಾರ ಚರಿತ ೧೧–೨೫)*




ಯಜಮಾನಿಕೆಯ ಮೂಲ ಸ್ವರೂಪವಿದು. ಮೇಲೆ ಸೂಚಿಸಿರುವಂತೆ ಯಜಮಾನ ಮತ್ತು ಇತರ ಸದಸ್ಯರ ಸಂಬಂಧಗಳು ಏಕಮುಖಿಯಾಗಿರುವುದಿಲ್ಲ. ಯಜಮಾನ ಅಧಿಕಾರ ಕೇಂದ್ರಿಕರಣದ ಸಂಕೇತ. ಇತರ ಸದಸ್ಯರು ಅನಧಿಕಾರವನ್ನು ಹೊಂದಿರುತ್ತಾರೆ. ಅಧಿಕಾರ ಹೊಂದಿದವರು–ನಿರ್ಧಾರ ಮತ್ತು ಆರ್ಥಿಕ ನಿರ್ವಹಣೆಯ ಜವಾಬ್ದಾರಿ ಹೊಂದಿರುತ್ತಾರೆ. ಪ್ರಾಚೀನ ಕನ್ನಡ ಸಾಹಿತ್ಯ ಇದಕ್ಕೆ ಸಂಬಂಧಿಸಿದಂತೆ ಹೇರಳ ಉದಾಹರಣೆಗಳು ದೊರೆಯುತ್ತವೆ.

*ವಿವರಗಳಿಗೆ ನೋಡಿ: Ranajith guha 1998 Dominance without hegemony*

## ೨೫. ಅಚ್ಯುತ ಕಲ್ಪ

*...............................ಆಂ ನಿಮ್ಮಿಂಮುನ್ನ**ಮಚ್ಯುತಕಲ್ಪ**ದಿಂ ಪರಿಚ್ಯುತನೆನಾಗಿ ಬಂದಿಲ್ಲಿ ಯಶೋಧರಮಹೀಭುಜಂಗಂ ತದ್ವನಿತೆ ವಸುಮತಿಗಂ ವಜ್ರದಂತನಾದಂ; ನಿನ್ನ*

*ದೇವನುಮಪ್ಪ ಲಲಿತಾಂಗದೇವನುಮೀಶಾನಕಲ್ಪದಿಂ ಬಂದುತ್ಪಳಖೇಟಮನಾಳ್ವ ಎನ್ನ ಮೆಯ್ದುನನಪ್ಪ ವಜ್ರಬಾಹುಗಮೆನ್ನ ತಂಗೆಯಪ್ಪ ವಸುಂಧರೆಗಂ ವಜ್ರಜಂಘನೆಂಬ ತನುಜನಾದಂ;............ (ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೩-೮೩ವ)*

ಕಲ್ಪವೆಂದರೆ ಸ್ವರ್ಗ. ವೈದಿಕ ಪರಿಭಾಷೆಯಲ್ಲಿ ಒಟ್ಟು ನಾಲ್ಕು ಯುಗಗಳನ್ನು ಕಾಲಾವಧಿಯೆಂದು ಗುರುತಿಸಲಾಗಿದೆ. ಕೃತ; ತ್ರೇತ; ದ್ವಾಪರ ಮತ್ತು ಕಲಿಯುಗಗಳು ನಾಲ್ಕು ಎಂದು ವೈದಿಕ ಪುರಾಣಗಳ ನಂಬಿಕೆ. ಜೈನರ ನಂಬಿಕೆಯಲ್ಲಿ ಕಾಲಗಳನ್ನು ಉತ್ಸರ್ಪಿಣಿ ಮತ್ತು ಅವಸರ್ಪಿಣಿ ಎಂದು ಎರಡು ಬಗೆಯೆಂದು ಹೇಳಿದ್ದಾರೆ. ಹಾಗೆಯೇ ಸೌಧರ್ಮ, ಈಶಾನ, ಸನತ್ಕುಮಾರ, ಮಾಹೇಂದ್ರ, ಬ್ರಹ್ಮ, ಬ್ರಹ್ಮೋತ್ತರ, ಲಾಂಸವ, ಕಾಪಿಷ್ಠ, ಶುಕ್ರ, ಮಹಾಶುಕ್ರ, ಶತಾರ, ಸಹಸ್ರಾರ, ಆನತ, ಪ್ರಣತ, ಅರುಣ, ಅಚ್ಯುತ ಎಂಬ ಹದಿನಾಲ್ಕು ಬಗೆಗಳ ಸ್ವರ್ಗ. ಆದಿಪುರಾಣದಲ್ಲಿ ಅಚ್ಯುತ ಕಲ್ಪದ ಕುರಿತ ವಿವರಣೆಯಿದೆ. ಯಶೋಧರ ಮತ್ತು ವಸುಮತಿಗೆ ಅಚ್ಯುತಕಲ್ಪದಿಂದ ಚ್ಯುತನಾಗಿ ವಜ್ರದಂತನಾಗಿ ಹುಟ್ಟಿದೆನು ಎಂದು ವಜ್ರದಂತನು ತನ್ನ ತಾಯಿ-ತಂದೆಯರಿಗೆ ಹೇಳುತ್ತಾನೆ. ಚ್ಯುತವಾಗದಿರುವುದು ಯಾವುದೋ ಅದು ಅಚ್ಯುತಕಲ್ಪ.

*ವಿವರಗಳಿಗೆ ನೋಡಿ: ಎಂ. ಬಿ. ಪಾಟೀಲ ೨೦೦೯*

*ಶ್ರೀ ಮದ್‌ಭಗವತ್ಕುಂದಕುಂದಾಚಾರ್ಯದೇವ ವಿರಚಿತ ಪ್ರವಚನಸಾರ*

*ಮಹದೇವ ಪ್ರಭಾಕರ ಪೂಜಾರ ೧೯೭೬ ಜೈನಧರ್ಮದ ಪರಿಭಾಷೆ*

**೨೬. ಅಜಾತ**

*............ಮೀರಲ್ಕ ಜಾತ ದೊರೆಯಲ್ಲವಲ್ಲ............ (ಪಂಪ ಭಾರತ ೯-೨೧)*

ಅಜಾತನೆಂದರೆ ಹುಟ್ಟಿಲ್ಲದವನು, ಕೃಷ್ಣ ಎಂದರ್ಥ.

ಪಂಪನು ಕೃಷ್ಣನ ದೈವತ್ವ ಅಥವಾ ಅಲೌಕಿಕ ವ್ಯಕ್ತಿತ್ವವನ್ನು ಮನಗಂಡಿದ್ದಾನೆ ಎನಿಸುತ್ತದೆ. ಇದೇ ಕೃಷ್ಣನನ್ನು ಬೇರೆ ಸಂದರ್ಭಗಳಲ್ಲಿ ಅಚ್ಯುತ, ಅನಂತ, ಮುಕುಂದ, ಮುರಾರಿ ಮುಂತಾದ ಹೆಸರುಗಳಿಂದ ಕರೆದಿರುವುದನ್ನು ಗಮನಿಸಿದರೆ ಪಂಪನಿಗೆ ಹಿನ್ನೆಲೆಯಾಗಿರುವ ವೈದಿಕ ಧರ್ಮ ವಾಙ್ಮಯದ ಪ್ರಭಾವವನ್ನು ಗುರುತಿಸಲು ಸಾಧ್ಯವಿದೆ.

ಕೃಷ್ಣನದು ಜಾತರೂಪವಲ್ಲ. ದೇವರಿಗೂ ಮನುಷ್ಯರಿಗೂ ಇರುವ ವ್ಯತ್ಯಾಸವಿದು. ದೇವರು ಉದ್ದೇಶಪೂರ್ವಕವಾಗಿ ಭೂಮಿಯನ್ನು ಉದ್ಧರಿಸಲು ಅವತಾರವೆತ್ತುತ್ತಾನೆ. ಇಲ್ಲಿ ಅವತರಿಸುವುದು ಮುಖ್ಯ. ಸಾಮಾನ್ಯ ಮನುಷ್ಯರು ಹುಟ್ಟುತ್ತಾರೆ ಮತ್ತು ಸಾಯುತ್ತಾರೆ. ಅವತಾರ ಪ್ರಜ್ಞಾಪೂರ್ವಕವಾದುದು. ಆದುದರಿಂದ ಕೃಷ್ಣ ಅವತಾರವೆತ್ತಿದ್ದಾನೆ. ಅವನ ಹುಟ್ಟು ಸಾಮಾನ್ಯವಾದುದಲ್ಲ. ಸಾವೂ ಸಾಮಾನ್ಯವಾದುದಲ್ಲ. ದೇವರು ತನ್ನ ಅವತಾರದ ಕರ್ಮ ಮುಗಿದ ಮೇಲೆ ತಾನೇ ಸಾವನ್ನು ಆಹ್ವಾನಿಸುತ್ತಾನೆ. ಸಾಯುತ್ತೇನೆ ಎಂಬುದರ ಅರಿವು ಅವನಿಗಿರುತ್ತದೆ.

## ೨೭. ಅಜ್ಞಾತವಾಸ

*'ಧರ್ಮಪುತ್ರಂ ಪನ್ನೆರಡು ವರುಷಂಬರಂ ನಾಡಂ ಪುಗದರಣ್ಯದೊಳಿರ್ಪಂತುಮಜ್ಞಾತವಾಸಮೆಂದೊಂದು*

*ವರುಷದೊಳಾರಾನುಮಱಿದರಪ್ಪೊಡೆ ....(ಪಂಪ ಭಾರತ ೭-೩ ವ)*

ಅಜ್ಞಾತವಾಸವೆಂದರೆ ಯಾರಿಗೂ ತಿಳಿಯದಂತೆ ವಾಸ ಮಾಡುವುದು. ಪಂಪ ಪಾಂಡವರ ಅಜ್ಞಾತವಾಸದ ಬಗ್ಗೆ ಇಲ್ಲಿ ಹೇಳಿದ್ದಾನೆ. ಜ್ಞಾತವೆಂದರೆ ತಿಳಿಯುವುದು. ಅಜ್ಞಾತವಾಸವೆಂದರೆ ತಿಳಿಯದಂತೆ ವಾಸಿಸುವುದು. ಮಹಾಭಾರತದಲ್ಲಿ ಬರುವ ಅಜ್ಞಾತವಾಸದ ಪರಿಕಲ್ಪನೆಯು ವಿಶಿಷ್ಟವಾಗಿದೆ. ಕೌರವರಿಗೆ ತಿಳಿಯದಂತೆ ಪಾಂಡವರು ಅಜ್ಞಾತವಾಸಕ್ಕೆ ತೆರಳುತ್ತಾರೆ. ಅದು ದ್ಯೂತದ ಪಣವೂ ಹೌದು ಎಂಬುದಿಲ್ಲಿ ಗಮನಾರ್ಹವಾಗಿದೆ. ಪಂಪನು ಹೇಳುವಂತೆ ಧರ್ಮ ಪುತ್ರಾದಿಗಳು ಹನ್ನೆರಡು ವರ್ಷದ ತನಕ 'ನಾಡಂ ಪುಗದೆ' ಅರಣ್ಯದಲ್ಲಿದ್ದು ಅಜ್ಞಾತವಾಸಿಗಳಾಗುತ್ತಾರೆ. ಅಲ್ಲಿ ಅಜ್ಞಾತವಾಸಕ್ಕೆ ಸೂಕ್ತ ಪ್ರದೇಶವೆಂದು ಆರಿಸಿಕೊಂಡಿದ್ದು ವಿರಾಟನಗರಿಯನ್ನು. ಅಲ್ಲದೆ ಅಜ್ಞಾತಕ್ಕಾಗಿ ವೇಷ ಮರೆಯಿಸಿಕೊಂಡು, ಕಂಕಭಟ್ಟ, ವಲಲ, ಬೃಹನ್ನಳೆ ಮುಂತಾಗಿ ಕಾಣಿಸಿಕೊಂಡಿದ್ದು ವಿಶೇಷ. 'ಅಂತೂ ಇಂತೂ ಕುಂತೀ ಮಕ್ಕಳಿಗೆ ವನವಾಸ'ವೆಂಬ ಮಾತು ಈಗಲೂ ಚಾಲ್ತಿಯಲ್ಲಿದೆ.

ಇನ್ನೊಬ್ಬರಿಗೆ ತಿಳಿಯದಂತೆ ವಾಸಿಸುವುದು ತುಂಬಾ ಕಷ್ಟಕರ. ಇದನ್ನು ಈಗ ಭೂಗತರು ಎಂದೂ ಕರೆಯುತ್ತಾರೆ. ಭಾರತೀಯ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅನೇಕ ಹೋರಾಟಗಾರರು ಅಜ್ಞಾತವಾಸಿಗಳಾಗಿದ್ದರು ಎಂಬುದು ಗಮನಾರ್ಹ.

*ವಿವರಗಳಿಗೆ ನೋಡಿ: ಬಸವರಾಜ ಕಟ್ಟೀಮನಿಯವರ ಅಜ್ಞಾತವಾಸಿ ಕತೆ.*

## ೨೮. ಅಜ್ಞಾನ

*ಅಜ್ಞಾನಿಗಳ ಬುದ್ಧಿ ಪೌರುಷಹೀನಂ (ಶಾಂತಿಪುರಾಣ ೮-೧೩೧)*

ಅಜ್ಞಾನಿಗಳ ಬುದ್ಧಿಯು ಪೌರುಷಹೀನವಾದುದು. ಜ್ಞಾನವೆಂದರೇನು ಎಂಬುದರ ಕುರಿತು ಭಾರತೀಯ ಮತ್ತು ಪಾಶ್ಚಾತ್ಯ ತತ್ವಜ್ಞಾನಿಗಳಲ್ಲಿ ಬಹುದೊಡ್ಡ ಚರ್ಚೆಯಾಗಿದೆ. ಸರ್ವೇಂದ್ರಿಯಗಳನ್ನು ಗೆದ್ದವನು ಜ್ಞಾನಿ, ಅವಿದ್ಯೆಯಿಂದ ಹೊರಗೆ ಬಂದವನು ಜ್ಞಾನಿ. ಬುದ್ಧಿವಂತನಾದವನು ಜ್ಞಾನಿ ಎಂಬುದರಿಂದ ತೊಡಗಿ ಜ್ಞಾನವೇ ಅಧಿಕಾರವೆಂಬಲ್ಲಿಯ ವರೆಗೆ ಈ ಚರ್ಚೆಯಿದೆ. ವೇದಾಂತಸಾರದಲ್ಲಿ ಈ ರೀತಿ ಬರುತ್ತದೆ:

ಈ ಅಜ್ಞಾನಕ್ಕೆ ಆವರಣ ಮತ್ತು ವಿಕ್ಷೇಪ ಎಂಬ ಹೆಸರಿನ ಎರಡು ಶಕ್ತಿಗಳಿವೆ. (ವೇದಾಂತಸಾರ ೧೯೭೩ ಪುಟ.೩೮)

ಆವರಣ ಎಂದರೆ ಮರೆಮಾಡುವುದು. ವಿಕ್ಷೇಪ ಎಂದರೆ ವಿವಿಧವಾಗಿ, ಭಿನ್ನವಾಗಿ ತೋರುವಂತೆ ಮಾಡುವುದು.

ಅಜ್ಞಾನ ಮರೆ ಅಥವಾ ಭ್ರಾಂತಿಯಿಂದ ಬಳಲುತ್ತದೆ. ಅಜ್ಞಾನ 'ಆವರಣ' ಮತ್ತು

ವಿಕ್ಷೇಪದಿಂದ ನರಳುತ್ತದೆ. ಆವರಣವೆಂದರೆ ಇಲ್ಲಿ ಅಜ್ಞಾನದ ಸುತ್ತ ಇರುವ ಒಂದು ರೀತಿಯ ಕೋಟೆ. ಅದು ಹೊರಜಗತ್ತನ್ನು ಜ್ಞಾನವನ್ನು; ಬ್ರಹ್ಮವನ್ನು; ಸರಿಯಾದ ರೀತಿಯಲ್ಲಿ ಅರ್ಥ ಮಾಡಿಕೊಳ್ಳದ ಹಾಗೆ ನೋಡಿಕೊಳ್ಳುತ್ತದೆ. ವಿಕ್ಷೇಪ ಅಜ್ಞಾನದ ಮತ್ತೊಂದು ರೀತಿಯ ಆವರಣ ಇದರ ದೆಸೆಯಿಂದ ಬಾಹ್ಯವು ಬಹುತ್ವದಿಂದ ಕೂಡಿರುವಂತೆ ಭಾಸವಾಗುತ್ತದೆ. ಅದ್ವೈತದಲ್ಲಿ ಏಕ ಅನೇಕಕ್ಕೆ ವ್ಯತ್ಯಾಸವಿದೆ. ಎಲ್ಲಿ ಸರಿಯಾದ ಜ್ಞಾನವು ದೊರೆಯುತ್ತದೆಯೋ ಆಗ ಅದು ಬ್ರಹ್ಮ ಮತ್ತು ಜೀವದ ಏಕತೆಯನ್ನು ಸಾಧಿಸುತ್ತದೆ. ಹೀಗಾಗಬೇಕಾದರೆ ಅದು ಆವರಣ ಮತ್ತು ವಿಕ್ಷೇಪವೆರಡನ್ನು ಕಳೆದುಕೊಳ್ಳುವುದು ಅವಶ್ಯ. ಅಜ್ಞಾನದ ಭ್ರಾಂತಿಯು ಹೇಗೆ ಕೆಲಸ ಮಾಡುತ್ತದೆಯೆಂದು ವೇದಾಂತಿಗಳು ಹೇಳುತ್ತಾರೆ.

ಇದೇ ಆವರಣ ಶಕ್ತಿಯಿಂದ ಕೂಡಿದ ಆತ್ಮನಿಗೆ ಕರ್ತೃತ್ವ ಭೋಕ್ತೃತ್ವ, ಸುಖ ದುಃಖ ಮೋಹರೂಪವಾದ ಅಸತ್ಯವಾದ ಸಂಸಾರದ ಭಾವವು ಕೂಡ, ಹಗ್ಗದ ಅಜ್ಞಾನದಿಂದ ಹಗ್ಗದಲ್ಲಿ ಹಾವಿನ ಭಾವನೆಯಂತೆ, ಇದೆ ಎನಿಸುತ್ತದೆ. (ವೇದಾಂತಸಾರ ೧೯೭೩ ಪುಟ.೪೦) ಅಜ್ಞಾನವು ಕ್ರಿಯೆಯನ್ನು ಮಾಡುವ ಸ್ವಭಾವ. ಅಜ್ಞಾನದಿಂದಲೇ ಕ್ರಿಯೆ.

ಎರಡನೆಯದಾಗಿ ಮಾಡಿದ ಕ್ರಿಯೆಯು ಫಲವನ್ನು ಅನುಭವಿಸುವ ಸ್ವಭಾವ. ಅಜ್ಞಾನಕ್ಕಿರುತ್ತದೆ. ಮೂರನೆಯದಾಗಿ ಕರ್ತೃತ್ವ ಮುಂತಾದವು ಸಂಸಾರದ ಗುಣಗಳು, ಆತ್ಮನವಲ್ಲ. ಅಸತ್ಯವು ಪಾರಮಾರ್ಥಿಕವಾಗಿ ಇಲ್ಲದಿರುವುದರಿಂದ ಅಜ್ಞಾನದ ಭ್ರಾಂತಿ ಅಸತ್ಯವನ್ನು ನಂಬುತ್ತದೆ. ನಾಲ್ಕನೆಯದಾಗಿ ಹಗ್ಗವನ್ನು ಹಗ್ಗ ಎಂದು ತಿಳಿಯದೆ ಇರುವುದರಿಂದ. ಅಜ್ಞಾನದ ಭ್ರಾಂತಿಯು ಹಗ್ಗವನ್ನು ಹಗ್ಗವೆನ್ನುವುದಿಲ್ಲ. ಐದನೆಯದಾಗಿ ಆತ್ಮನಿಗೆ ಸಂಸಾರದ ಸಂಬಂಧ ಅಜ್ಞಾನದಿಂದ ತೋರುವ ವಿಷಯವೇ ವಿನಾ, ನಿಜವಾದುದಲ್ಲ. ಹೀಗಾಗಿ ಅಜ್ಞಾನವನ್ನು ಮರೆ ಮಾಡುವ ಆವರಣ ಶಕ್ತಿಯು ವ್ಯಾಮೋಹವನ್ನು; ವಿಷಯ ಸುಖವನ್ನು; ಭ್ರಮೆಯನ್ನು ಹೊಂದಿರುತ್ತದೆ. ಅಜ್ಞಾನದ ಜೊತೆಗಿರುವ ವಿಕ್ಷೇಪ ಶಕ್ತಿಯು ಮತ್ತೊಂದು ರೀತಿಯಲ್ಲಿ ಕೆಲಸ ಮಾಡುತ್ತದೆ. ವಿಕ್ಷೇಪ ಶಕ್ತಿಯ ಸ್ವರೂಪವು ಹೀಗಿದೆ:

"ಹೇಗೆ ಹಗ್ಗದ ಅಜ್ಞಾನವು ತಾನು ಆವರಿಸಿರುವ ಹಗ್ಗದಲ್ಲಿ, ತನ್ನ ಶಕ್ತಿಯಿಂದ ಹಾವು ಮುಂತಾದವನ್ನು ಹುಟ್ಟಿಸುತ್ತದೆಯೋ; ಹಾಗೆಯೇ ಅಜ್ಞಾನವು ತಾನು ಆವರಿಸಿರುವ ಆತ್ಮನಲ್ಲಿ(ತನ್ನ) ವಿಕ್ಷೇಪಶಕ್ತಿಯಿಂದ ಆಕಾಶ ಮೊದಲಾದ ಪ್ರಪಂಚವನ್ನು ಸೃಷ್ಟಿಸುತ್ತದೆ. ಅಂಥ ಶಕ್ತಿ(ಅದು). ಅದನ್ನು ಹೀಗೆ ಹೇಳಿದೆ–"ವಿಕ್ಷೇಪ ಶಕ್ತಿಯು ಲಿಂಗ(ಶರೀರ)ದಿಂದ ಪ್ರಾರಂಭಿಸಿ ಬ್ರಹ್ಮಾಂಡದವರೆಗಿನ ಜಗತ್ತನ್ನು ಸೃಷ್ಟಿಸುತ್ತದೆ." (ವೇದಾಂತಸಾರ ೧೯೭೩ ಪುಟ.೪೧)

ಹಗ್ಗದ ವಿಷಯವಾಗಿ ಅಜ್ಞಾನವು ತಪ್ಪಾದ ಅರ್ಥವನ್ನು ಮಾಡಿಕೊಳ್ಳುತ್ತದೆ. ತನ್ನನ್ನು ಆವರಿಸಿಕೊಂಡಿರುವ ವಿಕ್ಷೇಪದಿಂದಾಗಿ ಅದು ಸೃಷ್ಟಿಶೀಲವೂ ಆಗಿರುತ್ತದೆಯೆಂಬುದನ್ನು

ಮರೆಯಬಾರದು.

ಅಜ್ಞಾನವು ಹಗ್ಗದ ವಿಷಯವಾಗಿ, ಹಗ್ಗವನ್ನು ಕುರಿತು ಇರುವುದರಿಂದ ಅಜ್ಞಾನ ಹಗ್ಗದ್ದು ಎಂದು ಹೇಳಿದೆ. ಆದರೆ ವಾಸ್ತವವಾಗಿ ಹಗ್ಗ ಜಡವಸ್ತುವಾಗಿರುವುದರಿಂದ ಅದಕ್ಕೆ ಜ್ಞಾನವಾಗಲೀ ಅಜ್ಞಾನವಾಗಲೀ ಇರುವುದು ಸಾಧ್ಯವಿಲ್ಲ. ಜ್ಞಾನ ಮತ್ತು ಅಜ್ಞಾನ ಚೈತನ್ಯದ ಗುಣಗಳೇ ವಿನಾ ಜಡದ ಗುಣಗಳಲ್ಲ. ಅಜ್ಞಾನದಿಂದ ಅಮೃತವಾಗಿರುವ ಚೈತನ್ಯದಲ್ಲಿ ಹಗ್ಗ ಕಲ್ಪಿತವಾಗಿದೆ. ಯಾವ ಚೈತನ್ಯಾಂಶದಲ್ಲಿ ಹಗ್ಗ ಕಲ್ಪಿತವಾಗಿದೆಯೋ ಅದು ಹಗ್ಗಕ್ಕೆ ಆಧಾರವಾಗಿರುತ್ತದೆ. ಹಗ್ಗಕ್ಕೆ ಆಧಾರವಾದ ಚೈತನ್ಯಾಂಶದಲ್ಲಿರುವ ಅಜ್ಞಾನವನ್ನು "ಹಗ್ಗದ ಅಜ್ಞಾನ" ಎಂದು ವ್ಯವಹರಿಸುತ್ತಾರೆ. ಇದು ವಿಕ್ಷೇಪದ ಸ್ಥೂಲ ಪರಿಚಯ.

ಅಜ್ಞಾನವು ಮಾಯೆ, ಮೂಲಾಜ್ಞಾನ ಅಥವಾ ಮೂಲಾವಿದ್ಯೆ ಕಾರಣವಾಗುತ್ತದೆ.

ಅಜ್ಞಾನಕ್ಕೆ ವಿಸ್ತಾರವಾದ ಭೇದ ವಿಭೇದಗಳನ್ನು ಮಾಡುವ ಶಕ್ತಿಯಿಲ್ಲ.

ಎರಡು ಶಕ್ತಿಗಳಿಂದ ಕೂಡಿದ ಅಜ್ಞಾನದಿಂದ ಉಪಹಿತವಾದ ಚೈತನ್ಯವು ತನ್ನ ದೃಷ್ಟಿಯಿಂದ (ಜಗತ್ತಿಗೆ) ನಿಮಿತ್ತ(ಕಾರಣ)ವೂ ತನ್ನ ಉಪಾಧಿಯ ದೃಷ್ಟಿಯಿಂದ (ಜಗತ್ತಿಗೆ) ಉಪಾದಾನ(ಕಾರಣ)ವೂ ಆಗುತ್ತದೆ. ಜೇಡರಹುಳುವು ತನ್ನ ಕಾರ್ಯವಾದ ಬಲೆಯ ವಿಷಯದಲ್ಲಿ ತನ್ನ ದೃಷ್ಟಿಯಿಂದ ನಿಮಿತ್ತ(ಕಾರಣ)ವೂ, ತನ್ನ ಶರೀರದ ದೃಷ್ಟಿಯಿಂದ ಉಪಾದಾನ(ಕಾರಣ)ವೂ ಹೇಗೆ ಆಗಿರುತ್ತದೆಯೋ, ಹಾಗೆ. (ವೇದಾಂತಸಾರ ೧೯೭೩ ಪುಟ.೪೭) ಇಲ್ಲಿ ಎರಡು ಶಕ್ತಿಗಳೆಂದರೆ ಆವರಣ ಮತ್ತು ವಿಕ್ಷೇಪ ಎಂದು ಅರ್ಥ ಮಾಡಿಕೊಳ್ಳಬೇಕು.

ಉಪಾದಾನ ಎಂದರೆ ನಿಮಿತ್ತ ಕಾರಣವೂ ಉಪಾದಾನ ಕಾರಣವೂ ಆಗುತ್ತದೆ. ಪ್ರತಿಯೊಂದು ಕಾರ್ಯಕ್ಕೂ ಎರಡು ಕಾರಣಗಳು ಆವಶ್ಯಕ. ಅದನ್ನು ಕರ್ತೃ ಸಂಸಾರದಲ್ಲಿ ಸಿಕ್ಕಿರುವವನು. ಆದುದರಿಂದ ಸಮ್ಯಕ್ ಜ್ಞಾನವು ಅವನಿಗೆ ಇರುವುದಿಲ್ಲ. ಪಾರಮಾರ್ಥಿಕ ವಲ್ಲದ ಸ್ವರೂಪ; ವ್ಯವಹಾರಕ್ಕೆ  ಕಾರಣವಾದ ಸಂಗತಿಗಳ ಬಗ್ಗೆ ಮಾತ್ರ ಯೋಚಿಸಿದರೆ (ವಿಜ್ಞಾನಮಯಕೋಶ ಎಂದರೆ) ವಿಜ್ಞಾನಮಯಕೋಶದಿಂದ ಕೂಡಿರುವ ಜೀವ, ಜೀವನ ಕರ್ತೃತ್ವಾಭಿಮಾನಕ್ಕೆ ವಿಜ್ಞಾನ ಕಾರಣ ಎನ್ನುವುದಕ್ಕೆ "ವಿಜ್ಞಾನಂ ಯಜ್ಞಂ ತನುತೇ, ಕರ್ಮಾಣಿ ತನುತೇಪಿ ಚ– "ವಿಜ್ಞಾನ(ಬುದ್ಧಿ)ವು ಯಜ್ಞವನ್ನು ಮಾಡುತ್ತದೆ, ಕರ್ಮಗಳನ್ನೂ ಮಾಡುತ್ತದೆ"– ಎಂಬ ಶ್ರುತಿ (ತೈ.ಉ..೨.೫) ಪ್ರಮಾಣವಿದೆ. ಜ್ಞಾನವೂ ಒಂದು ರೀತಿಯ ಶಕ್ತಿಯೆಂದು ಮೈಕೆಲ್ ಫುಕೋ ಚರ್ಚಿಸುತ್ತಾನೆ. ಬುದ್ಧಿವಂತಿಕೆಯ ಕುರಿತು ಚರ್ಚಿಸುವಾಗ ಗ್ರಾಮ್ಸಿಯು ಎರಡು ರೀತಿಯ ಜ್ಞಾನಮಾದರಿ ಗಳನ್ನು ಗುರುತಿಸುತ್ತಾನೆ. ಒಂದು ನಗರ ಕೇಂದ್ರಿತ ಬುದ್ಧಿ ಜೀವಿ ವರ್ಗ. ಮತ್ತೊಂದು ಹಳ್ಳಿ ಕೇಂದ್ರಿತ ಬುದ್ಧಿಜೀವಿ ವರ್ಗ. ನಗರ ಕೇಂದ್ರಿತ ಬುದ್ಧಿಜೀವಿ ವರ್ಗದ ಜ್ಞಾನ ಮಾದರಿಗಳು ನಗರಕ್ಕೆ ಅನುಗುಣವಾಗಿ ರೂಪುಗೊಂಡಿರುತ್ತವೆ. ಹಳ್ಳಿ ಕೇಂದ್ರಿತ ಬೌದ್ಧಿಕ ರೂಪಗಳು ಬೇರೆ. ಬೇಸಾಯ ಮಾಡುವುದು:  ಮಡಿಕೆ ಮಾಡುವುದು ಕೂಡಾ ಜ್ಞಾನ ರೂಪಗಳೇ.

ಮಡಿಕೆ ಮಾಡಲು ನಮಗೆ ತಿಳಿಯದೆ ಹೋದರೆ ಅಷ್ಟರ ಮಟ್ಟಿಗೆ ನಾವು ಅಜ್ಞಾನಿಗಳು. ಅದೇ ರೀತಿ ನಗರ ಕೇಂದ್ರಿತ ಬೌದ್ಧಿಕ ರೂಪಗಳು ಹಳ್ಳಿಯವರನ್ನು ಅಜ್ಞಾನಿಗಳು ಎಂದು ಕರೆಯುತ್ತದೆ. ಆದುದರಿಂದ ಜ್ಞಾನ ಮತ್ತು ಅಜ್ಞಾನವೆರಡೂ ಸಂವಾದಿ ರೂಪಗಳೇ.

*ವಿವರಗಳಿಗೆ ನೋಡಿ: ಜಡ, ಶೂನ್ಯವಾದ; ಸತ್ಯ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳವರು ೧೯೭೩ ಶ್ರೀ ಶಾಂಕರ ಭಾಷ್ಯಸಮೇತ ತೈತ್ತರೀಯಾ ಉಪನಿಷತ್ತು ೧೯೪೬ ಪುಟ. ೨, ೫.*

*Michel Foucault 1972 Archaeology of knowledge Antnio Gramshi? Prison Note book*

## ೨೯. ಅಟ್ಟಟ್ಟಿ

*ಅಟ್ಟಿದ ನಿಮ್ಮ ಪೆರ್ಗಡೆ ಬರ್ದುಂಕಿದನೆಂಬುದ ನಿಂದ್ರ ಜಾಲಮಂ*
*ತೊಟ್ಟನೆತೋಱಿ ಬಂದು ಬರ್ದುಕಾಡಿದ ನಿನ್ನಳಿಪಿಂದಟ್ಟುವ ।*
*ಟ್ಟಟ್ಟಿಗಳಂ ಬಿಸುಟ್ಟುದೆಮಗಂ ತಮಗಂ ಮುಳಿಸಿಂದಮೀಗಳ*
*ಟ್ಟಟ್ಟಿಗಳಪ್ಪುವೆಂದಿದನೆ ದಲ್ ನುಡಿದಟ್ಟದನೆಮ್ಮ ಭೂಭುಜಂ ॥*

*(ಪಂಪಭಾರತಂ ೯–೮೯)*

ಧರ್ಮರಾಯನಲ್ಲಿಗೆ ಬಂದು ಸಂಜಯನು ಈ ರೀತಿಯಲ್ಲಿ ಹೇಳುತ್ತಾನೆ: ನೀವು ಕಳಿಸಿದ ಹೆಗ್ಗಡೆಯು ಇಂದ್ರಜಾಲವನ್ನು ತೋರಿ ಬದುಕಿ ಬಂದಿದ್ದಾನೆ. ಇನ್ನು ದೂತರನ್ನು ಕಳಿಸುವುದನ್ನು ನಿಲ್ಲಿಸಿರಿ. ಇನ್ನು ಮೇಲೆ ಕೋಪದಿಂದ ನಮಗೂ ನಿಮಗೂ ಅಟ್ಟಿಯಾಡುವ ಯುದ್ಧ ಕಾರ್ಯವು ಪ್ರಾಪ್ತವಾಗುವುದು ಎಂಬ ಸಂದೇಶ ಹೇಳಿ ನಮ್ಮ ರಾಜನು (ಸುಯೋಧನ) ನಮ್ಮನ್ನು ನಿಮ್ಮಲ್ಲಿಗೆ ಕಳಿಸಿದ್ದಾನೆ. ಇದು ಭಾವಾರ್ಥ. ಮೇಲಿನ ಪದ್ಯದಲ್ಲಿ ಗಮನಿಸಬೇಕಾದ ಕೆಲವು ಅಂಶಗಳಿವೆ. ೧. ಪೆರ್ಗಡೆ, ೨. ಇಂದ್ರಜಾಲ, ೩. ಅಟ್ಟಟ್ಟಿ, ೪. ರಾಜಸಂಧಾನ, ೫. ಮತ್ತೆ ಮತ್ತೆ ದೂತರನ್ನು ಅಟ್ಟುವುದು ಬೇಡ.

ಪಂಪನು ಪದ್ಯದ ಮೊದಲಿಗೆ 'ಅಟ್ಟಿದ ನಿಮ್ಮಪೆರ್ಗಡೆ'ಯೆಂದು ಬಳಸಿದ್ದಾನೆ. ಪೆರ್ಗಡೆಯೆಂದರೆ ಹೆಗ್ಗಡೆ. ಧರ್ಮರಾಯನು ಮೊದಲು "ಅಟ್ಟಿದ್ದು" ಪೆರ್ಗಡೆಯನ್ನು. ಅಟ್ಟುವುದು ಎಂದರೆ ಇಲ್ಲಿ ಓಡಿಸುವುದು: ಹೇಳಿಕಳಿಸುವುದು ಎಂಬರ್ಥ ಬರುತ್ತದೆ. ಪೆರ್ಗಡೆಯು ಇಂದ್ರಜಾಲವನ್ನು ತೋರಿಸಿ ಬದುಕಿ ಬಂದಿದ್ದಾನೆ ಎನ್ನುವುದಕ್ಕೆ ಇಲ್ಲಿ ಒತ್ತು ಇದೆ. ಇಲ್ಲಿ ಪ್ರಯೋಗಗೊಂಡಿರುವ ಪೆರ್ಗಡೆ ಪದವು ಕೃಷ್ಣನನ್ನು ಸೂಚಿಸಿದೆ. ಕೃಷ್ಣನೇ ವಾಪಾಸು ಧರ್ಮರಾಯನಲ್ಲಿ ಬಂದು 'ನಾನು ಸಾಮ (ಸಾಮೋಪಾಯ)ವನ್ನು ಮುಂದಿಟ್ಟು ಐದು ಗ್ರಾಮವನ್ನು ಕೇಳಿದಾಗ ಕೌರವನು ಪರಾಕ್ರಮ ತೋರಿಸಿದ. ಅದಕ್ಕಾಗಿ ನಾನು 'ವಿಶ್ವರೂಪಮನಾಂತೋಱಿದೆನಿಂ' ಎಂದು ಹೇಳುತ್ತಾನೆ. ವಿಶ್ವರೂಪವನ್ನೇ ಸಂಜಯನು ಇಂದ್ರಜಾಲವೆಂದು (ಕಣ್ಕಟ್ಟು ವಿದ್ಯೆ) ಕರೆದಿದ್ದಾನೆ. ಮತ್ತೊಂದು ಗಮನಾರ್ಹ ಅಂಶವೆಂದರೆ ಯುದ್ಧದ ಸಂದೇಶಗಳನ್ನು ದೂತರ ಮೂಲಕ ತಿಳಿಸುವುದು. ಇದರಲ್ಲಿ ರಾಜನೀತಿ ಇದೆ. ಮೂರನೆಯದು ಅಟ್ಟಟ್ಟಿ ಎಂಬುದು ದೌತ್ಯವನ್ನು ಅಟ್ಟಟ್ಟಿ ವಿಶಿಷ್ಟ

ಪ್ರಯೋಗ. ಅಟ್ಟಿ+ಅಟ್ಟಿ–ಅಟ್ಟಟ್ಟಿ ಎಂದಾಗಿದೆ. ದಕ್ಷಿಣ ಕನ್ನಡದಲ್ಲಿ ಈಗಲೂ ಈ ಪ್ರಯೋಗವಿದೆ. ಅ) ದನಗಳನ್ನು ಅಟ್ಟಿ ಓಡಿಸಿದೆ, ಆ) ಯಕ್ಷಗಾನದಲ್ಲಿ ಪ್ರಯೋಗ – ಯುದ್ಧಕ್ಕೆ ತಯಾರಾಗುವಂತೆ ದೂತರನ್ನು ಅಟ್ಟಿ, ಇ) ಅವನನ್ನು ಅಟ್ಟಟ್ಟಿ ಬಡಿದು ಹಾಕಿದೆ. ಅಟ್ಟಟ್ಟಿ ಸಂದೇಶವಾಹಕನೆಂಬ ಅರ್ಥವಿದೆ.

*ವಿವರಗಳಿಗೆ ನೋಡಿ: ರಾಜನೀತಿ; ರಾಜರು; ರಾಜಧರ್ಮ; ನೃಪನೀತಿ.*

**೩೦. ಅಟ್ಟವಣಿಕೋಲ್**

*"**ಅಟ್ಟವಣಿ ಕೋಲ್ಗ**ಳ ಮೇಲೆಸೆದಿರ್ದ ವೀರಸಿದ್ಧಾಂತರ ಶಾಸನದ ಬರೆದ ಪೊತ್ತಗೆಯಂತೆ"*

*(ಪಂಪ ಭಾರತ ೧೧–೪೬)*

'ಅಟ್ಟವಣೆ ಕೋಲ್' ಎನ್ನುವುದು ಪುಸ್ತಕವನ್ನಿಡುವ ಪೀಠ–ವ್ಯಾಸಪೀಠ. ಪಂಪ ಭಾರತದಲ್ಲಿ **'ಅಟ್ಟವಣಿಕೋಲ್'** ಎಂದು ಬರುತ್ತದೆ. ದಕ್ಷಿಣ ಕನ್ನಡದಲ್ಲಿ **'ಅಟ್ಟಳಿಗೆ'** ಎಂಬ ಪದ ಪ್ರಯೋಗವಿದೆ. ಅಡಿಕೆ ಗರಿಯನ್ನು; ತೆಂಗಿನ ಗರಿಯನ್ನು ಹೇರಿಡಲು ಅಟ್ಟಳಿಗೆಯನ್ನು ಮಾಡುತ್ತಾರೆ. ನಾಲ್ಕು ಕಲ್ಲಿಟ್ಟು ಅದರ ಮೇಲೆ ಉದ್ದಕ್ಕೂ; ಅಗಲಕ್ಕೂ ರೆಂಬೆಗಳನ್ನೋ; ಒಣಗಿದ ಅಡಿಕೆಯ ಸಲಾಕೆಗಳನ್ನೋ ಜೋಡಿಸುತ್ತಾರೆ. ಅದರ ಮೇಲೆ ಅಡಿಕೆಗರಿ ಮತ್ತು ತೆಂಗಿನ ಗರಿಯನ್ನು ಜೋಡಿಸುತ್ತಾರೆ. ಇಲ್ಲಿ ಭೀಷ್ಮನು ಶರ ಶಯ್ಯೆಯಲ್ಲಿ ಮಲಗಿದ ಸಂಗತಿಯನ್ನು ಗಮನಿಸಬೇಕು. ಭೀಷ್ಮನ ಶರಶಯ್ಯೆಯು ವ್ಯಾಸಪೀಠದ ರೀತಿಯಲ್ಲಿ ಕಾಣಿಸುತ್ತಿತ್ತು. ಭೀಷ್ಮ ಇಚ್ಛಾ ಮರಣಿ. ಯುದ್ಧದಿಂದ ಆದ ಆಘಾತಗಳಿಂದ ಅವನು ನೆಲದ ಮೇಲೆ ಒರಗುವುದಿಲ್ಲ. ಬಾಣಗಳ ಮೇಲೆ ಮಲಗುತ್ತಾನೆ. ಮಹಾಭಾರತದಲ್ಲಿ ಭೀಷ್ಮನ ಶರಶಯ್ಯೆ ಸುಪ್ರಸಿದ್ಧವಾದುದು.

**೩೧. ಅಟ್ಟಾಲ**

*ಆಕಾಶಾಂತಮನೆಯ್ದ ನೀಳ್ದ ವಿಕ**ಟಾಟ್ಟಾಲ**ಂಗಗಳೊಳ್ ಕೇತನಾ ನೀಕಂಗಳ ರವಿರಶ್ಮಿಗಳ ಪುಗಲ್ವೇಡಿ ರಶ್ಮಿಗಳ್ ಸಾಲ್ಗುಮಿಂ ..... (ಆದಿಪುರಾಣ ೬–೧೦೪)*

ಅಟ್ಟಾಲವೆಂದರೆ ಕೋಟೆಯ ಬುರುಜು. ಆದಿಪುರಾಣದಲ್ಲಿ ಆಕಾಶದ ಎತ್ತರಕ್ಕೆ ಬೆಳೆದುನಿಂತ ಕೋಟೆ ಬುರುಜುಗಳು ಎಂದು ಬರುತ್ತದೆ. ಕೋಟೆಯಿರುವುದು ಒಂದು ರಾಜ್ಯದ ರಕ್ಷಣೆಗಾಗಿ. ಅದನ್ನು ಆಯಾ ರಾಜ್ಯದ ನಿರ್ದಿಷ್ಟ ಗಡಿ ರೇಖೆಯೆಂದು ಹೇಳಬಹುದು. ಚಿತ್ರದುರ್ಗದ ಕಲ್ಲಿನ ಕೋಟೆಯನ್ನು ಇಲ್ಲಿ ಉದಾಹರಣೆಯಾಗಿ ತೆಗೆದುಕೊಳ್ಳಬಹುದು. ಆ ಕೋಟೆಯ ಒಳಗೆ ಪ್ರಜೆಗಳು ಮತ್ತು ರಾಜರು ಇರುತ್ತಾರೆ. ಪ್ರತಿಯೊಂದು ಕೋಟೆಗೂ ಪಹರೆ ಕಾಯುವುದಕ್ಕೆ ಸೈನಿಕರಿಗಾಗಿ ಒಂದು ಬುರುಜು ಕಟ್ಟಿಸಲಾಗುತ್ತದೆ. ಅದು ಅತ್ಯಂತ ಎತ್ತರದಲ್ಲಿ ಇರುತ್ತದೆ. ದೂರದಿಂದ ಶತ್ರುಸೈನ್ಯವೇನಾದರೂ ಬರುವುದಿದ್ದರೆ ಅದು ಬುರುಜುವಿನ ಮೇಲಿದ್ದ ಸೈನಿಕರಿಗೆ ತಿಳಿಯುತ್ತದೆ. ಪಂಪ ಇದೇ

ಬುರುಜನ್ನು "ಅಟ್ಟಾಲ"ವೆಂದು ಕರೆದಿದ್ದಾನೆ.

ಬುರುಜಿನ ಮೇಲೆ ನಿಂತು ಕಾಳಗ ನಡೆಸಿದರೆ ಅದನ್ನು ಬುರುಜು ಕಾಳಗವೆಂದು ಕರೆಯಲಾಗುತ್ತದೆ. ಯುದ್ಧದ ಒಂದು ವಿಧಾನವಿದು. ಅಟ್ಟಾಲ 'ಅರಮನೆ', ಕೋಟೆ-ಕೊತ್ತಲ, ಬುರುಜು, ಎದೆಯುದ್ದ ಗೋಡೆ ಎಂಬರ್ಥವೂ ಇದೆ.

**೩೨. ಅಡಪ**

*ಮರದ ಕುಂಚ**ದಡಪ**ದಡವಕೆಯ ವಾರವಿಳಾಸಿನಿಯರೆರೆಡುಂ ಕೆಲದೊಳ್ ಸುತ್ತಿಱಿದು ಬಳಸಿ ಬರೆ.................... (ಪಂಪ ಭಾರತ ೩-೪೮ ವ) (೪-೬೬ ವ).*

ಅಡಪ ಎಂದರೆ ಎಲೆ ಅಡಿಕೆಯ ಚೀಲ. ಎಲೆಯಡಿಕೆಯ ಚೀಲದವರು. ಪೀಕದಾನಿ ಹಿಡಿದವರು ಮಂಗಲ ಕಾರ್ಯದಲ್ಲಿ ಭಾಗವಹಿಸುತ್ತಿದ್ದರು ಎಂದು ಇದರಿಂದ ತಿಳಿಯುತ್ತದೆ.

ಹಡಪ ಎಂದೂ ಬಳಸುತ್ತಾರೆ. ಹಡಪದ ಊಳಿಗದವರು ಮಾಡುವ ವೃತ್ತಿ ಇದಾಗಿದೆ. 'ಸಂಚಿ' ಎಂದೂ ಬಳಕೆಯಿದೆ. ಹೊನ್ನಮ್ಮ-ಸಂಚಿಯ ಊಳಿಗದವಳು ಎಂಬುದನ್ನು ನೆನಪಿಸಿಕೊಳ್ಳಬಹುದು.

ಕ್ಷೌರಿಕರು ತಮ್ಮ ಕತ್ತರಿ, ಹಣಿಗೆ; ಬಾಳು ಇಟ್ಟುಕೊಂಡು ಯಾರಿಗೆ ಕ್ಷೌರ ಮಾಡಬೇಕೋ ಅಲ್ಲಿಗೆ ಹೋಗುತ್ತಿದ್ದರು. ಅವರಿಟ್ಟುಕೊಳ್ಳುತ್ತಿದ್ದ ಸಾಮಗ್ರಿಯ ಪೆಟ್ಟಿಗೆಗೆ ಕ್ಷೌರಿಕರ ಹಡಪವೆಂದು ಬಳಸುತ್ತಿದ್ದರು. ಅಡಪವೆನ್ನುವುದು ಬೇರೆ ಅರ್ಥದಲ್ಲಿಯೂ ಬಳಕೆಯಾಗಿರುವುದು ಗಮನಾರ್ಹ.

ಅಡಪವೆಂದರೆ ಅಡಕೆ ಎಲೆಯ ಚೀಲ. ತಾಂಬೂಲ ಅನ್ನುವುದು ಹಳೆಗನ್ನಡದಲ್ಲಿ ಮತ್ತೆ ಮತ್ತೆ ಉಕ್ತವಾಗುತ್ತದೆ. ಅಡಿಕೆಯ ಚೀಲ ಹಿಡಿದು ಕೊಳ್ಳುವವರು. ಪೀಕದಾನಿ ಹಿಡಿದು ಕೊಳ್ಳುವವರು (ಪರಿವಾರದವರು) ಅಲ್ಲದೆ ಕುಂಚದಂತಹ ಚಾಮರವನ್ನು ಹಿಡಿದುಕೊಳ್ಳುವುವವರು. ಸದಾ ರಾಜರ ರಾಣಿಯರ ಹಿಂದೆ ಇರುತ್ತಿದ್ದರು. ಕುಂಚದ ಅಡಪವನ್ನು ಹಿಡಿದಿರುವ ವಾರ ವಿಳಾಸಿನಿಯರು (ವಾರಾಂಗನೆಯರು) ಗಮನಾರ್ಹವಾಗಿದೆ. ಊಟದ ಅನಂತರ ಎಲೆಯಡಿಕೆಯನ್ನು ತಿನ್ನುವುದು ಆರೋಗ್ಯದ ದೃಷ್ಟಿಯಿಂದ ಹಿತಕಾರಿಯೆಂದು ಹೇಳುತ್ತಾರೆ. ಎಲೆಯಡಿಕೆಗೆ ಜೀರ್ಣ ಮಾಡುವ ಶಕ್ತಿಯಿದೆಯೆಂದು ಅಭಿಪ್ರಾಯವಾಗಿದೆ. ಎಲೆಯಡಿಕೆ ತಿನ್ನುವುದರಿಂದ ಬಾಯಿಯ ವಾಸನೆಯೂ ಹೋಗುತ್ತದೆ. ಎಂದು ಜನ ತಿಳಿದುಕೊಂಡಿದ್ದಾರೆ. ಊಟವಾದ ಬಳಿಕ ಎಲೆಯಡಿಕೆ ತಿನ್ನುವುದು ಸಂಪ್ರದಾಯವೂ ಹೌದು.

*ವಿವರಗಳಿಗೆ ನೋಡಿ: ಕದಂಬದಂಬುಲ.*

**೩೩. ಅಡಿವಜ್ಜೆ**

*ಹಲಕುಶಕಮಲಶಂಖಚಕ್ರಲಾಂಛನ**ಮಡಿವಜ್ಜೆ**ಯಂ ಕೊಳದ ತಡಿಯೊಳ್ ಕಂಡವಲ್ಲಿ ಪೊಱಮಟ್ಟ ಪಜ್ಜೆಯಲ್ಲದೆ ಪೊಕ್ಕ ಪಜ್ಜೆಯಂ ಕಾಣೆವೆನೆ ಪವನತನಯನವರನೊಡಗೊಂಡು.....*

*(ಸಾಹಸ ಭೀಮ ವಿಜಯ ೬-೪೦ ವ)*

ಅವನ ರಕ್ತದಿಂದ ನನ್ನ ಕೋಪಾಗ್ನಿಯನ್ನು ಆರಿಸಿದೆನು. ಉದ್ಧಟನಾಗಿ ಕೋಪದಿಂದ ನೂರಾರು ಅಪರಾಧಗಳನ್ನು ಮಾಡಿದ ದುರ್ಯೋಧನನನ್ನು ನುಂಗಲೆಂದು ಈಗ ಬಂದಿರುವೆನು. ಅಲ್ಲಿ ಕೌರವನ ಹೆಜ್ಜೆ ಗುರುತುಗಳ ವರ್ಣನೆಗಳಿವೆ ಅವನ ಪಾದಗಳ ಗುರುತಿನಲ್ಲಿ ನೇಗಿಲು; ಕಮಲ; ಚಕ್ರ; ಶಂಖ ಕುಲಿಶ (ವಜ್ರ) ಇದ್ದವು.

ಕಾಲ ಹೆಜ್ಜೆಯ ಗುರುತುಗಳಲ್ಲಿ ಇರುವ ಚಿಹ್ನೆಗಳನ್ನು ಹೇಳಿರುವುದು ಇಲ್ಲಿ ಗಮನಾರ್ಹವಾಗಿದೆ. ನಮ್ಮ ಬೆರಳುಗಳಲ್ಲಿ ಶಂಖ ಚಕ್ರ ಗುರುತುಗಳು ಇರುತ್ತವೆ. ಚಕ್ರದ ಗುರುತು ಇರುವವರು ಹೆಚ್ಚು ತಿರುಗಾಡುತ್ತಾರೆ. ಬೆರಳುಗಳಲ್ಲಿ ಶಂಖದ ಗುರುತು ಇರುವವರು ಬುದ್ಧಿವಂತರಾಗುತ್ತಾರೆ. ಇದರಲ್ಲಿಯೂ ಪ್ರಭೇದಗಳಿವೆ. ಕೈಯಲ್ಲಿ ಒಂದು ಚಕ್ರದ ಸುಳಿಯಿರುವವರು ಎರಡು ಚಕ್ರದ ಸುಳಿಯಿರುವವರು ಮೂರು ನಾಲ್ಕು ಐದು ಹೀಗೆ. ಇವಕ್ಕೆ ಸಂಬಂಧಿಸಿದಂತೆ ಬೇರೆ ಬೇರೆ ಲಕ್ಷಣಗಳನ್ನು ಹೇಳಲಾಗಿದೆ. ಪಾದದ ಬೆರಳುಗಳಿಗೂ ಇದು ಅನ್ವಯವಾಗುತ್ತದೆ. ಇವು ಹಸ್ತ ಸಾಮುದ್ರಿಕ ಶಾಸ್ತ್ರದಲ್ಲಿಯೂ ಬರುತ್ತದೆ. ತುರಿಯಂಚ ಶಂಖಂ ನೃಪತಿ ಪ್ರಭುತ್ವಂ.

ಕೈ ಬೆರಳುಗಳಲ್ಲಿ ಒಂದು ಶಂಖವಾದರೆ (ಶಂಖದ ಗುರುತು) ಅಧ್ಯಯನ ಶೀಲ, ಎರಡು ಶಂಖವಾದರೆ ದರಿದ್ರ ಮೂರು ಶಂಖವಾದರೆ ರೋದನ ಸ್ವಭಾವದವನು ನಾಲ್ಕು ಶಂಖವಾದರೆ ರಾಜ. ಕೈಬೆರಳುಗಳ ತುದಿಯಲ್ಲಿ ಸುಳಿ ಅಥವಾ ಚಕ್ರಾಕಾರದ ಚಿಹ್ನೆಗಳಿದ್ದರೆ ಚಕ್ರವೆಂದೂ, ಮೊಟ್ಟೆಯ ಆಕಾರದಲ್ಲಿ ಗೆರೆಗಳಿರುವುದಕ್ಕೆ ಶಂಖವೆಂದೂ ಕರೆಯುತ್ತಾರೆ.

ಆರು ಶಂಖಗಳಿದ್ದರೆ ಅತಿವಿಚಕ್ಷಣ: ಏಳು ಶಂಖವಿದ್ದರೆ ದರಿದ್ರ, ಎಂಟು ಶಂಖವಿದ್ದರೆ ಸೌಖ್ಯಜೀವಿ, ಒಂಬತ್ತು ಶಂಖವಿದ್ದರೆ ಸ್ತ್ರೀ ಸ್ವಭಾವ ಪ್ರಕೃತಿ, ಹತ್ತು ಶಂಖವಿದ್ದರೆ ರಾಜ ಅಥವಾ ಯೋಗಿ, ಒಂದು ಚಕ್ರ ಪಟುತ್ವ, ಎರಡು ಚಕ್ರವಿದ್ದರೆ ಸುಂದರ, ಮೂರು ಚಕ್ರವಿದ್ದರೆ ವಿಲಾಸಿ, ನಾಲ್ಕು ಚಕ್ರವಿದ್ದರೆ ದರಿದ್ರ, ಐದು ಚಕ್ರವಿದ್ದರೆ ಮಹಾಜ್ಞಾನಿ, ಆರು ಚಕ್ರವಿದ್ದರೆ ಪಂಡಿತರಲ್ಲಿ ಶ್ರೇಷ್ಠ

ಏಳು ಚಕ್ರವಿದ್ದರೆ ಪರ್ವತದಲ್ಲಿ ತಿರುಗುವವನು, ಎಂಟು ಚಕ್ರವಿದ್ದರೆ ವರಾಟಕ (ದರಿದ್ರ), ಒಂಬತ್ತು ಚಕ್ರವಿದ್ದರೆ ನೃಪತಿ, ಹತ್ತು ಚಕ್ರವಿದ್ದರೆ ರಾಜಸೇವಕ.

**೩೪. ಅತಿಚಾರ**

ಜೈನ ಸಾಹಿತ್ಯದಲ್ಲಿ ಅತಿಚಾರದ ಪರಿಕಲ್ಪನೆಯು ಬಂದಿದೆ.

೫: ಸಮ್ಯಗ್ದೃಷ್ಟಿಗೆ: ಶಂಕೆ, ಕಾಂಕ್ಷೆ, ನಿರ್ವಿಚಿಕಿತ್ಸೆ (ವಿಚಿಕಿತ್ಸೆ), ಅನ್ಯದೃಷ್ಟಿ ಪ್ರಶಂಸೆ, ಅನ್ಯದೃಷ್ಟಿ ಸಂಸ್ತವನ (ಸಂಸ್ತವನ), (ಧರ್ಮಾಮೃ ೧ ೫-೧೨೪ ; ತತ್ವಪ್ರ. ೭-೨೭೯ ವ).

ಜೈನಧರ್ಮದಲ್ಲಿ ಅತಿಚಾರ ಅರುವತ್ತು ಬಗೆಯೆಂದು ಹೇಳಲಾಗಿದೆ.

೬೦: ೧) ಅಹಿಂಸೆಯ: ಬಂಧ, ವಧ, ಛೇದ, ಅತಿಭಾರಾರೋಪಣ, ಅನ್ನಪಾನ

ನಿರೋಧ. ೨) ಸತ್ಯದ: ಮಿಥ್ಯೋಪದೇಶ, ರಹೋಭ್ಯಾಖ್ಯಾನ, ಕೂಟಲೇಖನ ಕ್ರಿಯಾ, ನ್ಯಾಸಾಪಹಾರ, ಸಾಕಾರ ಮಂತ್ರಭೇದ. ೩) ಅಸ್ತೇಯದ: ಸ್ತೇನಪ್ರಯೋಗ, ತದಾಹಹೃತಾದಾನ, ವಿರುದ್ಧರಾಜ್ಯಾತಿಕ್ರಮ, ಹೀನಾಧಿಕ ಮನೋನ್ಮಾನ, ಪ್ರತಿರೂಪಕ ವ್ಯವಹಾರ. ೪) ಬ್ರಹ್ಮಚರ್ಯದ: ಪರವಿವಾಹ ಕರಣ, ಇತ್ವರಿಕಾ ಪರಿಗೃಹೀತಾಗಮನ, ಇತ್ವರಿಕಾ ಅಪರಿಗೃಹೀತಾಗಮನ, ಅನಂಗಕ್ರೀಡಾ, ಕಾಮತೀವ್ರಾಭಿನಿವೇಶ. ೫) ಅಪರಿಗ್ರಹದ: ಕ್ಷೇತ್ರವಾಸ್ತು, ಹಿರಣ್ಯ ಸುವರ್ಣ, ಧನಧಾನ್ಯ, ದಾಸೀದಾಸ, ಕುಪ್ಯಭಾಂಡ–ಇವುಗಳ ಅತಿಕ್ರಮ. ೬) ದಿಗ್ವಿರತಿವ್ರತದ: ಊರ್ಧ್ವ–ಅಧಃತಿರ್ಯಕ್ ವ್ಯತಿಕ್ರಮ, ಕ್ಷೇತ್ರವೃದ್ಧಿ, ಸ್ಮೃತ್ಯಂತರಾಧಾನ. ೭) ದೇಶವಿರತಿವ್ರತದ: ಆನಯನ, ಪ್ರೇಷ್ಯಪ್ರಯೋಗ, ಶಬ್ದಾನುಪಾತ, ರೂಪಾನುಪಾತ, ಪುದ್ಗಲಕ್ಷೇಪ. ೮) ಅನರ್ಥದಂಡ ವಿರತಿವ್ರತದ: ಕಂದರ್ಪ, ಕೌತ್ಕುಚ್ಯ, ಮೌಖರ್ಯ, ಅಸಮೀಕ್ಷ್ಯಾಧಿಕರಣ, ಉಪಭೋಗ ಪರಿಭೋಗಾನರ್ಥತ್ವ ೯) ಸಾಮಯಿಕ ಶಿಕ್ಷಾವ್ರತದ: ಕಾಯದುಷ್ಪ್ರಣಿಧಾನ, ವಾಗ್ದುಷ್ಪ್ರಣಿಧಾನ, ಮನೋದುಷ್ಪ್ರಣಿಧಾನ ಅನಾದರ, ಸ್ಮೃತ್ಯನುಪಸ್ಥಾನ. ೧೦) ಪ್ರೋಷಧೋಪವಾಸವೆಂಬ ಶಿಕ್ಷಾವ್ರತದ: ಅಪ್ರತ್ಯವೇಕ್ಷಿತಾ ಪ್ರಮಾರ್ಜಿತೋತ್ಸರ್ಗ, ಅಪ್ರಮಾರ್ಜಿತಾದಾನ, ಅಪ್ರತ್ಯವೇಕ್ಷಿತಾ ಪ್ರಮಾರ್ಜಿತಾದಾನ, ಅಪ್ರತ್ಯವೇಕ್ಷಿತಾ ಪ್ರಮಾರ್ಜಿತ ಸಂಸ್ತರೋಪಕ್ರಮ, ಅನಾದರ, ಸ್ಮೃತ್ಯನುಪಸ್ಥಾನ. ೧೧) ಉಪಭೋಗ ಪರಿಭೋಗ ಪರಿಮಾಣವೆಂಬ ಶಿಕ್ಷಾವ್ರತದ: ಸಚಿತ್ತಾಹಾರ, ಸಚಿತ್ತಸಂಬಂಧಾಹಾರ, ಸಚಿತ್ತ ಸಮ್ಮಿಶ್ರಾಹಾರ, ಅಭಿಷವಾಹಾರ, ದುಷ್ಪಕ್ವಾಹಾರ. ೧೨)ಅತಿಥಿ ಸಂವಿಭಾಗ ಶಿಕ್ಷಾವ್ರತದ: ಸಚಿತ್ತ ನಿಕ್ಷೇಪ, ಸಚ್ಚಿತ್ತಾಪಿಧಾನ, ಪರವ್ಯಪದೇಶ, ಮಾತ್ಸರ್ಯ, ಕಾಲಾತಿಕ್ರಮ (ಧರ್ಮಾಮೃ.೧–೫–೧೩೧; ತತ್ವಪ್ರ. ೭–೨೮೦–೨೮೪).

*ವಿವರಗಳಿಗೆ ನೋಡಿ: ಡಾ. ಟಿ. ವಿ. ವೆಂಕಟಾಚಲಶಾಸ್ತ್ರೀ ೧೯೯೯ ಶ್ರೀವತ್ಸ ನಿಘಂಟು.*

**೩೫. ಅತಿರಥರು**

*ನರನುಂ ನರನಂದನನುಂ*
*ಗುರುವುಂ ಗುರುಸುತನುಮಾರ್ಯಭೂರಿಶ್ರವನುಂ ।*
*ಸುರಸಿಂಧುಸುತನುಮಿಂತಱು*
*ವರು**ಮತಿರಥರಲ್ತೆ** ಕುರುಕುಲಾಂಬರಭಾನೂ ॥*

*(ಸಾಹಸ ಭೀಮ ವಿಜಯ ೩–೫೦)*

ಅರ್ಜುನ, ಅಭಿಮನ್ಯು, ದ್ರೋಣ, ಅಶ್ವತ್ಥಾಮ, ಭೂರಿಶ್ರವ ಹಾಗೂ ಭೀಷ್ಮ–ಈ ಆರು ಜನ ಅತಿರಥರಲ್ಲವೆ? ಅಪರಿಮಿತ ಸಂಖ್ಯೆಯ ಶತ್ರುಗಳೊಡನೆ ಏಕಾಕಿಯಾಗಿ ಯುದ್ಧಮಾಡಬಲ್ಲ ರಥಿಕನಿಗೆ ಅತಿರಥನೆಂಬ ಹೆಸರು. ಹತ್ತು ಸಾವಿರ ಬಿಲ್ಲಾಳುಗಳೊಡನೆ ಒಬ್ಬಂಟಿಗನಾಗಿ ಯುದ್ಧ ಮಾಡಬಲ್ಲ ಶಸ್ತ್ರಶಾಸ್ತ್ರ ಪ್ರವೀಣನು ಮಹಾರಥ, ಪರಿಣತನಲ್ಲದ ಇನ್ನೊಬ್ಬನನ್ನು ಬದಿಯಲ್ಲಿರಿಸಿಕೊಂಡು ಯುದ್ಧಮಾಡಬಲ್ಲ ರಥಿಕನು 'ಅರ್ಧರಥ'; ಬಹುಶಃ ತನಗೆ ಸಮನಾದ ಒಬ್ಬ ರಥಿಕನೊಡನೆ ಮಾತ್ರ ಯುದ್ಧಮಾಡಬಲ್ಲವನು'

ಸಮರಥನು.

ದಶದಿಕ್ಕುಗಳಿಗೆ ರಥವನ್ನು ಓಡಿಸಬಲ್ಲವನನ್ನು ದಶರಥನೆಂದು ಕರೆಯುತ್ತಾರೆ. ಯುದ್ಧದ ರಥಿಕರಲ್ಲಿ ಇರುವ ಪ್ರಭೇದಗಳನ್ನು ಇದು ಸೂಚಿಸುತ್ತದೆ. ಮೇಲಿನ ಪದ್ಯದಲ್ಲಿ ಆರು ಜನ ಅತಿರಥರ ಪ್ರಸ್ತಾಪವಿದೆ.

*ವಿವರಗಳಿಗೆ ನೋಡಿ: ಸಮರಥಿ; ಅರ್ಧರಥಿ.*

**೩೬. ಅತಿಶಯ**

ಹಳೆಗನ್ನಡದಲ್ಲಿ ಇದು ಪದೇ ಪದೇ ಉಕ್ತವಾಗಿದೆಯೆಂಬುದು ಗಮನಾರ್ಹ.

ಅಪಾಯಾಗಮಾತಿಶಯ, ಜ್ಞಾನ-, ಪೂಜಾ-, ವಚನ

(ಜೈನಪರಿಭಾಷೆ ಪುಟ. ೬೫)

ನಿಃಸ್ವೇದತ್ವ, ನಿರ್ಮಲಗಾತ್ರತ್ವ ದುಗ್ಧಧವಲರುಧಿರತ್ವ, ಆದಿಯ ವಜ್ರರ್ಷಭನಾರಾಚ ಸಂಹನನತ್ವ, ಸಮಚತುರಸ್ರರೂಪ ಶರೀರ ಸಂಸ್ಥಾನ, ಅನುಪಮರೂಪತ್ವ, ನವಚಂಪಕ ವರಸುರಭಿಗಂಧಧಾರತ್ವ, ಅಷ್ಟೋತ್ತರ ಸಹಸ್ರ ವರ ಲಕ್ಷಣಧಾರಿತ್ವ, ಅನಂತಬಲವೀರ್ಯತ್ವ, ಮಿತಹಿತಮಧುರಾಲಾಪ,-ಈ ಹತ್ತು ಸ್ವಾಭಾವಿಕ ಅತಿಶಯಗಳು. ಇವು ತೀರ್ಥಂಕರನು ಜನ್ಮಗ್ರಹಣ ಮಾಡಿದಾಗಲೇ ಉತ್ಪನ್ನವಾಗಿರುತ್ತವೆ.

ತಾನು ಇರುವಲ್ಲಿಂದ ನಾಲ್ಕು ದಿಕ್ಕುಗಳಲ್ಲಿ ನೂರು ಯೋಜನಗಳವರೆಗೆ ಸುಭಿಕ್ಷತೆ, ನಭಗಮನ, ಅಹಿಂಸೆ, ಭೋಜನವಿಲ್ಲದಿರುವುದು, ಉಪಸರ್ಗವಿಲ್ಲದಿರುವುದು, ಸರ್ವಾಭಿಮುಖಸ್ಥಿತತ್ವ, ಅಚ್ಛಾಯತ್ವ, ಅನಿಮಿಷತ್ವ, ವಿದ್ಯೆಗಳ ಈಶತ್ವ, ಸಜೀವವಿದ್ದೂ ನಖರೋಮಗಳು ಸಮವಾಗಿಯೇ (ಬೆಳೆಯದೆ) ಇರುವುದು, ೧೮ ಮಹಾ ಭಾಷೆಗಳು ೭೦೦ ಕ್ಷುದ್ರಭಾಷೆಗಳು ಹಾಗೂ ಸಂಜ್ಞೀಜೀವರ ಉಳಿದೆಲ್ಲಾ ಅಕ್ಷರ-ಅನಕ್ಷರಾತ್ಮಕ ಭಾಷೆಗಳು ಇವುಗಳಲ್ಲಿ ತಾಲು ದಂತ ಓಷ್ಠಕಂಠ ವ್ಯಾಪಾರವಿಲ್ಲದೆಯೇ, ಏಕಕಾಲದಲ್ಲಿ ಭವ್ಯಜನರಿಗೆ ದಿವ್ಯೋಪದೇಶವನ್ನು ಕೊಡುವುದು ಇತ್ಯಾದಿ-ಇವು ಘಾತಿಕರ್ಮಗಳು ನಾಶವಾದ ಬಳಿಕ ಉತ್ಪನ್ನವಾಗುವ ಹನ್ನೊಂದು ಅತಿಶಯಗಳು. ಇವು ತೀರ್ಥಂಕರನಿಗೆ ಕೇವಲ ಜ್ಞಾನೋತ್ಪತ್ತಿಯಾದ ಮೇಲೆ ಪ್ರಕಟವಾಗುತ್ತವೆ.

ಸಂಖ್ಯಾತ ಯೋಜನಗಳವರೆಗೆ ಅಕಾಲದಲ್ಲಿಯೂ ವನವು ಪತ್ರಪುಷ್ಪಫಲಗಳ ಸಂವೃದ್ಧಿಯಿಂದ ಕೂಡಿರುವುದು, ಕಂಟಕಾದಿಗಳನ್ನು ದೂರಮಾಡುತ್ತ ಸುಖ ದಾಯಕವಾದ ವಾಯುವು ಬೀಸುವುದು, ಜೀವಿಗಳು ಪೂರ್ವವೈರವನ್ನು ಬಿಟ್ಟು ಮೈತ್ರಿಭಾವದಿಂದಿರುವುದು, ಅಷ್ಟು ಭೂಮಿ ಕನ್ನಡಿಯಂತೆ ಸ್ವಚ್ಛವೂ ರತ್ನಮಯವೂ ಆಗುವುದು, ಸೌಧರ್ಮೇಂದ್ರನ ಆಜ್ಞೆಯಂತೆ ಮೇಘಕುಮಾರನು ಗಂಧೋದಕವನ್ನು ವರ್ಷಿಸುವುದು, ದೇವತೆಗಳು ವಿಕ್ರಿಯೆಯಿಂದ ಶೀತಲವಾದ ಗಾಳಿಯನ್ನು ಬೀಸುವುದು, ಕೂಪತಟಾಕಾದಿಗಳು ನಿರ್ಮಲೋದಕದಿಂದ ತುಂಬಿಕೊಳ್ಳುವುದು, ಆಕಾಶವು ಹೊಗೆಯೂ ಉಲ್ಕಾಪಾತಾದಿ ಗಳೂ ಇಲ್ಲದೆ ತಿಳಿಯಾಗಿರುವುದು, ಸಕಲ ಜೀವರಿಗೂ ರೋಗಾದಿ ಬಾಧೆಗಳು

ಇಲ್ಲವಾಗುವುದು, ಯಕ್ಷೇಂದ್ರರ ಮಸ್ತಕಗಳ ಮೇಲೆ ಸ್ಥಿತವಾದವೂ ಕಿರಣೋಜ್ವಲವಾದವೂ ಆದ ನಾಲ್ಕು ದಿವ್ಯ ಧರ್ಮಚಕ್ರಗಳನ್ನು ನೋಡಿ ಜನರಿಗೆ ಆಶ್ಚರ್ಯವಾಗುವುದು, ತೀರ್ಥಂಕರರ ನಾಲ್ಕು ದಿಕ್ಕುಗಳಲ್ಲಿಯೂ ೫೬ ಸುವರ್ಣ ಕಮಲಗಳೂ, ಒಂದು ಪಾದಪೀಠವೂ ಹಾಗೂ ದಿವ್ಯವೂ ವಿವಿಧವೂ ಆಗಿರುವ ಅರ್ಚನಾದ್ರವ್ಯಗಳೂ ಇರುವುದು. ಇವು ತೀರ್ಥಂಕರ ಮಾಹಾತ್ಮ್ಯದಿಂದ ದೇವಕೃತವಾದ ಅತಿಶಯಗಳು.

ವಿವರಗಳಿಗೆ ನೋಡಿ: ತಿಲೋಯ ಪಣ್ಣತ್ತಿ ೪-೮೯೬-೯೧೪

**೩೭. ಅಧರ್ಮ**

*ಎನೆ ಧರ್ಮನಂದನಂ ಧೃತರಾಷ್ಟ್ರನಂದನಂ ಮುನ್ನೆ ಗೆಯ್ದ* ***ಅಧರ್ಮ****ಮಂ ನೆನೆಯದೆ ನಿರ್ಮಲ ಕ್ಷತ್ರಧರ್ಮಮ[ನೆ] ನೆನೆದು (ಸಾಹಸಭೀಮ ವಿಜಯ ೭-೪೩ ವ)*

**ಅಧರ್ಮ** (ಆದಿಪುರಾಣ ೧೦-೬೩.ವ) ಆರು ದ್ರವ್ಯಗಳಲ್ಲಿ ಒಂದು. ಜೀವ ಮತ್ತು ಪುದ್ಗಲಗಳ ಸ್ಥಿತಿಗೆ ಸಹಾಯಮಾಡುವ ದ್ರವ್ಯ. ಜೈನಧರ್ಮದಲ್ಲಿ ಧರ್ಮದಂತೆ ಅಧರ್ಮದ ವ್ಯಾಖ್ಯೆಯೂ ಬೇರೆಯಾಗಿದೆ. ಧರ್ಮದಂತೆ ಅಧರ್ಮವೂ – ಅಮೂರ್ತ, ನಿಷ್ಕ್ರಿಯ, ನಿತ್ಯವಾದುದಾಗಿದೆ. ಉದಾ: ಎದುರಿಗೆ ಕವಿದಿರುವ ಕತ್ತಲೆಯನ್ನು ಕಂಡು ದಾರಿತಪ್ಪಿದ ಪಥಿಕ ರಾತ್ರಿಯಲ್ಲಿ ಅಲ್ಲೇ ತಂಗುವನು. ತಂಗುವುದಕ್ಕೆ ಕಾರಣ ಕತ್ತಲೆ. ಹಾಗೆಯೇ ಜೀವ, ಪುದ್ಗಲಗಳ ಸ್ಥಿತಿಗೆ ಅಧರ್ಮವು ಸಹಾಯಕವಾದುದು.

ಇಲ್ಲಿ ಅಧರ್ಮವೆಂದರೆ ಅನ್ಯಾಯ, ಅಗತ್ಯ, ವಂಚನೆಗಳಿಂದ ಕೂಡಿದ ಮನುಷ್ಯ ವರ್ತನೆ ಎಂದು ಅರ್ಥ. ಧರ್ಮರಾಜನು ಪರಿಶುದ್ಧ ಕ್ಷಾತ್ರಧರ್ಮವನ್ನೇ ಆಶ್ರಿಯಿಸಿದ್ದಾನೆ.

*ವಿವರಗಳಿಗೆ ನೋಡಿ: ರಾಜರು. ರಾಜನೀತಿ, ರಾಜಧರ್ಮ*

*ಮಹದೇವ ಪ್ರಭಾಕರ ಪೂಜಾರ ೧೯೭೬ ಜೈನಧರ್ಮ ಪರಿಭಾಷೆ*

**೩೮. ಅಧಿಷ್ಠಾನ**

*ಪಂಪನ ವಿಕ್ರಮಾರ್ಜುನ ವಿಜಯದಲ್ಲಿ ಹೀಗೆ ಬರುತ್ತದೆ; ಶಂತನು ದಿವಂಗತನಾದ ಮೇಲೆ "ಗಾಂಗೇಯಂ ತದುಂಸ ಪರಲೋಕ ಕ್ರಿಯೆಗಳಂ ಮಾಡಿ ಮುನ್ನೆಮೆ ತನ್ನ ನುಡಿದ ನುಡಿವಳಿಯಂತೆ ಪ್ರಸಾ***ದಕ್ಕಧಿಷ್ಠಾ***ನಂಗಟ್ಟುವಂತೆ ಚಿತ್ರಾಂಗದಂಗೆ ಪಟ್ಟಮಂ ಕಟ್ಟಿ ..." (ಪಂಪಭಾರತ ೧ ೭೩).*

ಬುನಾದಿ, ತಳಹದಿ, ನೆಲ ಎಂಬ ಅರ್ಥಗಳಿವೆ. ಅದ್ವೈತವೇದಾಂತದಲ್ಲಿ ಅಧಿಷ್ಠಾನಕ್ಕೆ ಬೇರೆ ಅರ್ಥವಿದೆ, ಅದರ ಪ್ರಕಾರ ಬ್ರಹ್ಮಮಾತ್ರ ಅಧಿಷ್ಠಾನದ ಸಂಕೇತ. ಪ್ರಾಸಾದಕ್ಕಧಿಷ್ಠಾನಂ ಗಟ್ಟುವಂತೆ ಅಂದರೆ ಅರಮನೆಗೆ ಭದ್ರವಾದ ತಳಹದಿಯನ್ನು ಹಾಕುವಂತೆ ಎಂದರ್ಥ. ಬುನಾದಿಗೆ ಅಡಿಕಟ್ಟು ಎಂದೂ ಕರೆಯುತ್ತಾರೆ. ಅಡಿಗಟ್ಟು ಸರಿಯಿಲ್ಲವಾದ ಕಟ್ಟಡ ಸರಿಯಾಗಿ ನಿಲ್ಲುವುದಿಲ್ಲ. ಅಡಿಕಟ್ಟು ಎನ್ನುವುದು ಮಾತಿಗೂ ಸಂಬಂಧಪಡುತ್ತದೆ. ಮಾತಿನ ತಳಪಾಯ ಸರಿಯಿದ್ದರೆ ಮಾತಿಗೆ ಅರ್ಥವಿರುತ್ತದೆ. ಆಗಮದಲ್ಲಿ ದೇವರನ್ನು

ಅಧಿಷ್ಠಾಪಿಸು ಎಂದರೆ ಪ್ರತಿಷ್ಠಾಪಿಸು ಎಂದು ಅರ್ಥ ಬರುತ್ತದೆ.

## ೩೯. ಅಧ್ವಗ

*........ಅಧ್ವಗಗೋದ್ವೇಗಕರ ವೀಣಾಸ್ವನಂಗಳಿಂ..........*

*(ಕರ್ಣಾಟಕ ಕಾದಂಬರಿ ೮-೩)*

ಕರ್ಣಾಟಕ ಕಾದಂಬರಿಯಲ್ಲಿ ಅಧ್ವಗನೆಂದರೆ ದಾರಿಗ. ಪ್ರಯಾಣಿಕ ಎಂಬರ್ಥದ ಪದವು ಪ್ರಯೋಗಗೊಂಡಿದೆ.

ಪ್ರಯಾಣಗಳಿಗೆ ನಮ್ಮ ಸಾಂಸ್ಕೃತಿಕ ಪರಂಪರೆಯಲ್ಲಿ ವಿಶೇಷ ಅರ್ಥಗಳಿವೆ. ಪ್ರಯಾಣವು ಬೇರೆ ಬೇರೆ ಉದ್ದೇಶಗಳಿಗೆ ನಡೆಯುತ್ತವೆ. ಅವುಗಳನ್ನು ಈ ಕೆಳಗಿನಂತೆ ವಿವರಿಸಬಹುದು. ೧.ವ್ಯಾಪಾರದ ಉದ್ದೇಶ, ೨.ಬಂಧು ಬಾಂಧವರನ್ನು ಕಾಣಲು, ೩.ತೀರ್ಥ ಕ್ಷೇತ್ರಗಳಿಗೆ ಭೇಟಿ, ೪.ಅನ್ಯಪ್ರದೇಶವನ್ನು ಕಾಣಲು.

ಪ್ರಯಾಣದಲ್ಲಿಯೂ ಕೆಲವು ನಿಯಮಾಚಾರಗಳಿವೆ. ಪ್ರಯಾಣವನ್ನು ಶುಭ ಮುಹೂರ್ತದಲ್ಲಿ ಕೈಗೊಳ್ಳಬೇಕು. ಪ್ರಯಾಣದ ಸಂದರ್ಭದಲ್ಲಿ ಅಪಶಕುನವಾಗಬಾರದು ತೀರ್ಥಕ್ಷೇತ್ರಗಳ ಪ್ರಯಾಣ ಸಂದರ್ಭದಲ್ಲಿ ಶುಚಿರ್ಭೂತರಾಗಬೇಕು. ಪ್ರಯಾಣದ ಸಂದರ್ಭದಲ್ಲಿ ಅವಘಡಗಳಾದರೆ ಬಂಡಿಯ ಮಾಲಿಕನಿಗೆ ದಂಡ ವಿಧಿಸಬೇಕು.

*ವಿವರಗಳಿಗೆ ನೋಡಿ: ಶ್ರೀ ಶ್ರೀ ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳು ೨೦೧೦*
*ಕೌಟಲೀಯ ಅರ್ಥಶಾಸ್ತ್ರ.*

## ೪೦. ಅಧ್ವರ್ಯು

*............ವ್ಯಾಸಕಶ್ಯಪ ವಿಶ್ವಾಮಿತ್ರ ಭಾರದ್ವಾಜ ಬ್ರಹ್ಮಾಧ್ವರ್ಯ್ವಾಗ್ನೀಧ್ರ............ (ಪಂಪ ಭಾರತ ೬-೩೩)*

ಯಾಗದ ಮುಖ್ಯಸ್ಥನಿಗೆ ಅಧ್ವರ್ಯು ಎಂದು ಕರೆಯುತ್ತಾರೆ. ಯಜುರ್ವೇದದಲ್ಲಿ ಇದರ ಕುರಿತು ವಿವರಗಳಿವೆ. ಹೋತೃ; ಉದ್ಗಾತೃ; ಬ್ರಹ್ಮ ಹಾಗೂ ಅಧ್ವರ್ಯು ಎಂದು ನಾಲ್ಕು ವಿಭಾಗಗಳು. ಹವಿಸ್ಸನ್ನು ಅರ್ಪಿಸುವವನು ಹೋತೃವಾದರೆ ಯಾಗದ ಮುಖಂಡತ್ವವನ್ನು ವಹಿಸುವವನು ಅಧ್ವರ್ಯು. ಯಾಗದಲ್ಲಿ ಅಧ್ವರ್ಯುಗೆ ಪ್ರಮುಖ ಸ್ಥಾನವಿದೆ. ಯಜ್ಞದಲ್ಲಿ ಅಧ್ವರ್ಯುಯಾದವನು ಉಪಯೋಗಿಸುವ ಗದ್ಯಾತ್ಮಕ ಮಂತ್ರಗಳನ್ನು 'ಯಜುಸ್' ಎಂದು ಕರೆಯುತ್ತಾರೆ.

*ವಿವರಗಳಿಗೆ ನೋಡಿ: ವೇದವ್ರತ ವೈಶಂಪಾಯನ ೧೯೮೪ ಯಜುರ್ವೇದ: ಒಂದು ಅಧ್ಯಯನ.*

## ೪೧. ಅನಗಾರಕೇವಲಿ

*ಧರ್ಮಚಕ್ರಚ್ಛತ್ರತ್ರಿಯಂಗಳಂ ಬಳಸಿಯುಮುಪಾಶ್ರಯಂಬಡೆಯೆನಿಜೆಸಿತೀರ್ಥಕರಗಣ ಧರಾನಗಾರಕೇವಳಿಗಳಪರಿನಿರ್ವಾಣಕ್ಷೇತ್ರದೊಳ್ ಶರೀರಸಂಸ್ಕಾರಾದಿಗಾರ್ಹಪತ್ಯ*

*ದಕ್ಷಿಣಾಗ್ನ್ಯಾಹವನೀಯಮೆಂಬ ಪೆಸರಂ.....................* (ಆದಿಪುರಾಣ ೧೫-೧೬ ವ).

ಕೇವಲಿಪ್ರಾಪ್ತಿ ಪಡೆದ ತೀರ್ಥಂಕರರನ್ನೂ ಗಣಧರರನ್ನೂ ಬಿಟ್ಟು ಉಳಿದ ಸಾಮಾನ್ಯಮುನಿಗಳು, ಅನಗಾರರು. ಇದು ಜೈನಧರ್ಮದ ಪರಿಭಾಷೆಯಾಗಿದೆ.

**೪೨. ಅನಶನ ವಿಧಿ**

*ಕೃತಾನುಶಯನ**ನಶನವಿಧಾನ**ದಿನಸುವಂ ವಿಸರ್ಜಿಸಿ ಸೌಧರ್ಮಕಲ್ಪದೊಳ್ ದೇವನಾಗಿ...........*

(ಆದಿಪುರಾಣ ೨-೧೭ ವ)

ಇದೊಂದು ತಪಸ್ಸು. ಸಂಯಮ ಸಿದ್ಧಿಯಾಗಬೇಕು. ರಾಗ ನಾಶವಾಗಬೇಕು. ಕರ್ಮ ನಾಶವಾಗಬೇಕು, ಸ್ವಾಧ್ಯಾಯ ಸಿದ್ಧಿಯಾಗಬೇಕು ಎಂದು ಉದ್ದೇಶಿಸಿ ನಾಲ್ಕು ತೆರದ ಆಹಾರವನ್ನು ತ್ಯಾಗಮಾಡುವುದು.

ಆಹಾರದ ತ್ಯಾಗ ಅನಶನವೆನಿಸಿಕೊಳ್ಳುತ್ತದೆ. ಅಶನವೆಂದರೆ ಅನ್ನವೆಂಬ ಅರ್ಥವಿದೆ. ಈಗಲೂ 'ಅಶನ' ಪದವು ಹವ್ಯಕ ಕನ್ನಡದಲ್ಲಿ ಬಳಕೆಯಲ್ಲಿದೆ. 'ಅನಾಹಾರ' ಸಂಸ್ಕೃತ ಪದವಾಗಿದ್ದು ಅದು ಅನಶನವನ್ನೇ ಸೂಚಿಸುತ್ತದೆ. 'ಅಶನ' 'ಅನಶನ' ಆಹಾರ-ನಿರಾಹಾರ(ಅನಾಹಾರ)ವನ್ನು ಸೂಚಿಸುತ್ತದೆ. ಗಾಂಧೀಜಿಯಿಂದ ಉಪವಾಸ ಸತ್ಯಾಗ್ರಹದ ಪರಿಕಲ್ಪನೆಯು ಇದರಿಂದ ಹುಟ್ಟಿದೆಯೆಂಬುದು ಗಮನಾರ್ಹ.

**೪೩. ಅನಾತ್ಮ**

ಆತ್ಮದ ಸ್ವರೂಪ ಮತ್ತು ಭವಿಷ್ಯವನ್ನು ಕುರಿತ ಅನ್ವೇಷಣೆ ಬುದ್ಧನ ಕಾಲದಲ್ಲಿ ಒಂದು ಹುಚ್ಚಿನಂತಾಗಿತ್ತು. ಅನ್ವೇಷಣೆ ಅದರ ನೈತಿಕ ಅಥವಾ ಆಧ್ಯಾತ್ಮಿಕ ಬಾಳುವೆಯ ಅಡಚಣೆಗಳನ್ನು ಮಾತ್ರ ಕುರಿತಾಗಿರಲಿಲ್ಲ. ಅದು ದೇಹದೊಡನೆ ಸಂಬಂಧಿಸಿರುವ ಬಗೆ, ಅದರ ಸ್ವರೂಪ ಇವುಗಳನ್ನು ಕುರಿತುದಾಗಿತ್ತು. ಸ್ಥೂಲವಾಗಿ ಹೇಳುವುದಾದರೆ. ಉಪನಿಷತ್ತುಗಳಲ್ಲಿ ದೇಹ-ಮನಸ್ಸುಗಳ ಸಂಬಂಧ ಒಂದು ರೀತಿಯಲ್ಲಿ ನೇತ್ಯಾತ್ಮಕವೆಂದು ಪರಿಗಣಿತವಾಗಿತ್ತು. ಉಪನಿಷತ್ತುಗಳಿಂದಲೇ ವೇದಾಂತ ಮತ್ತು ಸಾಂಖ್ಯಗಳು ಉಗಮ ಹೊಂದಿದವು. ಜೈನ ಮತ್ತು ಬೌದ್ಧ ಧರ್ಮಗಳಲ್ಲೂ ಹಾಗೆಯೇ ದೇಹದ ಅಂಗಾಂಗಗಳ ಜುಗುಪ್ಸಾಹ ಲಕ್ಷಣ. ಕೇವಲ ಚರ್ಮದಾಳದಷ್ಟೇ ಆದ ದೈಹಿಕ ಸೌಂದರ್ಯದ ಭ್ರಮಾತ್ಮಕ ಸ್ವರೂಪ. ಐಂದ್ರಿಯಾನುಭವಗಳಿಂದ ಮತ್ತು ದೈಹಿಕ ಅಗತ್ಯಗಳಿಂದ ಪ್ರಚೋದಿತವಾದ ಭಾವೋದ್ವೇಗಗಳು ಕೊಡುವ ತೊಂದರೆ, ದೇಹದ ಸೆರೆಯಿಂದ ಅಂತಿಮವಾಗಿ ಆತ್ಮವನ್ನು ಬಿಡುಗಡೆಗೊಳಿಸಬೇಕಾದ ಅಗತ್ಯ, ಮತ್ತು ಅದಕ್ಕೆ ಸಿದ್ಧತೆಯಾಗಿ ಉಗ್ರ ತಪಸ್ಸಿನ ಆಚರಣೆಗಳು, ಉದ್ದೇಶಪೂರ್ವಕ ದೇಹದಂಡನೆ ಇವೆಲ್ಲ ಮೇಲೆ ಹೇಳಿದ ನೇತ್ಯಾತ್ಮಕ ಸಂಬಂಧವನ್ನು ಧ್ವನಿಸಲು ಸಹಕಾರಿಯಾದುವು. ಆತ್ಮ ಸ್ವರೂಪವನ್ನು ಕುರಿತ ಪರಿಶೀಲನೆಯಿಂದ ಆಶ್ಚರ್ಯಕರವಾದ ಚಿಂತನೆಗಳು ಮೂಡಿದುವು. ಆಶಾಶ್ವತ ಆತ್ಮವು

ಸತ್ಯವೆನಿಸಿದ ದ್ರವ್ಯವಾಸ್ತವತಾವಾದ ಮತ್ತು ಬ್ರಹ್ಮವಾದಗಳು, ತನ್ನ ಸ್ವತಂತ್ರ ಅಸ್ತಿತ್ವವನ್ನು ಉಳಿಸಿಕೊಂಡ ದ್ವೈತವಾದ ಮುಂತಾದುವು (ಒಂದೇ ತರನಾದ ಲಕ್ಷಣಗಳನ್ನು ಹೊಂದಿರದಿದ್ದರೂ ಬೇರೆ ಬೇರೆ ಚಿಂತನಾಧಾರೆಗಳಿಗೆ ತಕ್ಕಂತೆ) ಮೂಡಿದವು.

ಒಂದಕ್ಕೊಂದು ವಿರುದ್ಧವಾದ ನಿತ್ಯವಾದ (ಅದ್ವೈತವಾಗಲಿ ಅಥವಾ ದ್ವೈತವಾಗಲಿ) ಮತ್ತು ಉಚ್ಛೇದವಾದಗಳಿಗೆ ನಡುವೆ ಬುದ್ಧನ ಧರ್ಮ ನಿಲ್ಲುತ್ತದೆ. ಬದಲಾವಣೆ ಹೊಂದದ ಆತ್ಮ ಇಲ್ಲವಾದರೂ ಅದು ಕೇವಲ ಜಡವಸ್ತುವಿನ ಕ್ರಿಯೆಯಲ್ಲ. ಯಾವುದೋ ಒಂದು ದೈಹಿಕ ರೂಪಧಾರಣವು ಕೊನೆಗೊಂಡಾಗಲೂ ಎಲ್ಲ ಬಗೆಯ ಕಾರಣ – ಪರಿಣಾಮಗಳಿಂದ ಹೊರಗಾಗುವುದಿಲ್ಲ. ಆತ್ಮವು ಇಲ್ಲವೆಂದುದು (ಅನಾತ್ಮವಾದ) ಇಷ್ಟನ್ನು ಮಾತ್ರ ಹೇಳುತ್ತದೆ: ಅದಕ್ಕೆ ನಿತ್ಯ ಅಸ್ತಿತ್ವ (ಶಾಶ್ವತ ಅಸ್ತಿತ್ವ) ಇಲ್ಲವೆಂದು ಮಾತೃಗರ್ಭದಲ್ಲಿ ನೂತನ ಜೀವಿಯನ್ನು ರೂಪಿಸಲು (ನಾಮ – ರೂಪ) ಕೆಲಸಮಾಡುವ ವಿಜ್ಞಾನ ಪುನರ್ಜನ್ಮ ಹೊಂದುವ ಆತ್ಮವಲ್ಲ. ಅದರಂತೆ ಭೌತಿಕ ವಸ್ತುಗಳ ಸಂಗ್ರಹವನ್ನು ನಿಯಂತ್ರಿಸುತ್ತದೆ ನಿಜ. ಆದರೆ ಅದು ಬದಲಾವಣೆ ಹೊಂದಬಲ್ಲ ಸಂಗತಿ. ದೈಹಿಕ ಮಾನಸಿಕ ಅಂಶಗಳ ಸಂಕಿರಣ. ಎರಡೂ ಅಂತಿಮವಾಗಿ ಅವುಗಳ ಮೂಲಾಂಶಗಳ ಸ್ವರೂಪಕ್ಕೆ ಕರಗಿಹೋಗುವಂಥವು.

ಆತ್ಮ ಮತ್ತು ಅನಾತ್ಮದ ಬಗೆಗೆ ಬೇರೆ ಮತಗಳೂ ಚರ್ಚಿಸಿದೆ. ಆತ್ಮದ ಬಗ್ಗೆ ಅದ್ವೈತ ಬಗೆಗಿನ ನಿಲುವುಗಳು ಬೇರೆ. ಉಪನಿಷತ್ತಿನಲ್ಲಿಯೂ ಆತ್ಮದ ಬಗೆಗಿನ ವಿವರ ಬರುತ್ತದೆ. ಜೈನತತ್ವದಲ್ಲಿ ಆತ್ಮತತ್ವವೆಂದರೆ ಆತ್ಮದ ಸ್ವರೂಪ ತಿಳಿಯುವುದು. ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಆತ್ಮನಾಥ ಎಂದರೆ ಆತ್ಮದ ಒಡೆಯ; ಆತ್ಮಜೆಯೆಂದರೆ ಆತ್ಮದ ಸ್ವರೂಪ ತಿಳಿಯುವುದು; ಆತ್ಮ ತತ್ವ–ಆತ್ಮದ ಸ್ವರೂಪ ಎಂಬರ್ಥಗಳಲ್ಲಿ ಬಳಕೆಯಾಗಿವೆ.

*ವಿವರಗಳಿಗೆ ನೋಡಿ: ಆತ್ಮ; ಜಡ*

*ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦ ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ*

### ೪೪. ಅನಿಚ್ಚ

ಪಾಳೀಸೂತ್ರಗಳಲ್ಲಿ ಅಸ್ತಿತ್ವವನ್ನು ಅನಿಚ್ಚ (ಅನಿತ್ಯ) ಅನತ್ತ (ಅನಾತ್ಮ) ಮತ್ತು ದುಃಖ ಎಂದು ಉದ್ಘೋಷಿಸಲಾಗಿದೆ. ಇದರ ಸಾಧನೆಗೆ ಸಹಾಯವಾಗಿರುವುದು ಅಂತರ್ಜ್ಞಾನ ಮತ್ತು ನಿರೀಕ್ಷಣಗಳೇ ವಿನಾ ಜಟಿಲವಾದ ಪೂರ್ವಸಿದ್ಧವಾದಗಳಲ್ಲ. ಮುಂದೆ ವಿಶೇಷವಾಗಿ ಸೌತ್ರಾಂತ್ರಿಕರು ಅವುಗಳನ್ನು ಬಳಸಿದರು. ಆತ್ಮವನ್ನಂಗೀಕರಿಸುವ ದರ್ಶನಗಳು ಯಾವ ಆತ್ಮವನ್ನು ನಿತ್ಯ, ಸಾರ್ವತ್ರಿಕ ಮತ್ತು ಸತ್ಯವೆಂದು ಸಾರಿದರೋ ಆ ಆತ್ಮತತ್ವಕ್ಕೆ ವಿರುದ್ಧವಾಗಿ ಬಳಸಿದ ತಾರ್ಕಿಕವಾದವಾಗಿದೆ ಬೌದ್ಧಸಂಪ್ರದಾಯಗಳೆಲ್ಲದರ ನೈರಾತ್ಮ್ಯದೃಷ್ಟಿ. ಅದು ಧರ್ಮಗಳೆಲ್ಲಕ್ಕೂ ಕ್ಷಣಿಕತ್ವ, ಅನಾತ್ಮತ್ವ ಮತ್ತು ಸ್ವಲಕ್ಷಣತ್ವ ಎಂಬ ಪರಸ್ಪರ ಸಂಬಂಧವಾದ ಮೂರು ಭಾವನೆಗಳನ್ನು ಒತ್ತಿಹೇಳುತ್ತದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಆತ್ಮದ ಕ್ಷಣಿಕತ್ವ ಅನಾತ್ಮತ್ವ ಮತ್ತು ಸ್ವಲಕ್ಷಣತ್ವ, ಭಾರತೀಯ ತತ್ವಜ್ಞಾನಗಳಲ್ಲಿ

ಬರುವ ಆತ್ಮದ ಕ್ಷಣಿಕತ್ವವು ಬೇರೆ ಬೇರೆ ವಾದಗಳಿಗೆ ಅವಕಾಶ ಕಲ್ಪಿಸಿದೆ. ಶಂಕರರು ಆತ್ಮತತ್ವವನ್ನು; ಅದರ ಸ್ವರೂಪವನ್ನು ಬೇರೆ ರೀತಿಯಲ್ಲಿ ಮಂಡಿಸಿದ್ದಾರೆ.

*ವಿವರಗಳಿಗೆ ನೋಡಿ: ಅದ್ವೈತ; ದ್ವೈತ; ವಿಶಿಷ್ಟಾದ್ವೈತ ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦ ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ ಪುಟ. ೧೯೬.*

**೪೫. ಅನುಕರಣೆ**

ಕವಿರಾಜಮಾರ್ಗದಲ್ಲಿ ಕವಿಯು ಹೀಗೆ ಹೇಳುತ್ತಾನೆ. 'ಇತರ ಕವಿಗಳ ಮಾತುಗಳನ್ನೇ ನೆನೆದು, ಅವರನ್ನು ಅನುಕರಿಸುವವನು ವಾಕ್ಚಾತುರ್ಯ ಇಲ್ಲದವನು. ಇಂಥವನ ಮಾತುಗಳು ಬೆಟ್ಟದ ಗುಹೆಯಲ್ಲಿನ ಪ್ರತಿಧ್ವನಿಯ ಹಾಗೆ ವ್ಯರ್ಥ.(ಕವಿರಾಜಮಾರ್ಗ ೧-೧೪)

ಕಾವ್ಯದ ದೃಷ್ಟಿಯಿಂದ ಅನುಕರಣೆಯು ಬೇರೆ ಬೇರೆ ರೀತಿಯಲ್ಲಿರುತ್ತದೆ. ಅನುಕರಣೆಗೆ ಸೈದ್ಧಾಂತಿಕ ವ್ಯಾಖ್ಯೆಯನ್ನು ಕೊಟ್ಟವನು ಅರಿಸ್ಟಾಟಲ್. ಅವನ ಅನಂತರ ಅನೇಕರು ಅನುಕರಣೆಯ ಕುರಿತು ಬರೆದಿದ್ದಾರೆ. ಅನುಕರಣೆಯು ವಾಸ್ತವತಾವಾದದಲ್ಲಿ ವಾಸ್ತವದ ಅನುಕರಣೆಯಾಗಿರುತ್ತದೆ. ಸಹಜವಾದ ಅನುಕರಣೆ; ಕಾವ್ಯಮಾರ್ಗಗಳ ಅನುಕರಣೆ (ಪಂಪನನ್ನು ರನ್ನ ಅನುಕರಿಸಿದಂತೆ) ಶೈಲಿಯ ಅನುಕರಣೆ-ಹೀಗೆ ಅನೇಕ ವಿಧಗಳಿರುತ್ತವೆ. ಶಾಬ್ದಿಕ ಅನುಕರಣೆಯನ್ನು ಕವಿರಾಜಮಾರ್ಗಕಾರನು ಟೀಕಿಸಿದ್ದಾನೆ. ಇಲ್ಲಿ ಗ್ರೀಕ್ ಸಾಹಿತ್ಯದಲ್ಲಿ ಬಳಕೆಯಾದ 'ಅನುಕರಣೆ' ಕುರಿತ ಚರ್ಚೆಯನ್ನು ಗಮನಿಸಬಹುದು. ಗ್ರೀಕ್‌ನ ಸಾಹಿತ್ಯ ಮತ್ತು ರಾಜಕೀಯದ ಚರ್ಚೆಯನ್ನ ಮೊದಲು ಶುರುಮಾಡಿದ ಪ್ಲೇಟೋ ಮತ್ತು ಅರಿಸ್ಟಾಟಲರು 'ಅನುಕರಣೆ'ಯೆಂಬ ಪದವನ್ನು ಬಳಸುತ್ತಾರೆ. ಸಾಹಿತ್ಯ ಚರ್ಚೆಯಲ್ಲಿ ಪ್ರಧಾನವಾಗಿ ಒಡಮೂಡಿರುವ ಈ ಭಾಷೆಯು ಅನಂತರದಲ್ಲಿ ಬೇರೆ ಮಾದರಿಯ ಅರ್ಥವಂತಿಕೆಯನ್ನು ಒಳಗೊಂಡಿತು. ಗ್ರೀಕ್ ನಲ್ಲಿ 'ಮೈಮೆಸಿಸ್' ಎಂದರೆ (Mimesis) ಇನ್ನೊಬ್ಬರು ಮಾಡಿದ್ದನ್ನು ಅನುಕರಿಸುವುದು ಅಥವಾ ಯಾವುದೋ ಒಂದರಂತೆ ಮತ್ತೊಂದನ್ನು ನಿರ್ಮಿಸುವುದು. ಇದು ನರ್ತಕರಿಗೆ, ಹಾಡುಗಾರರಿಗೆ, ಸಂಗೀತತಜ್ಞರಿಗೆ, ಚಿತ್ರ ಕಲಾವಿದರಿಗೆ, ನಾಟಕಕಾರರಿಗೆ ಅನ್ವಯವಾಗುತ್ತಿತ್ತು. ಇವರು ಇನ್ನೂ ಯಾವುದನ್ನೋ ಅನ್ವಯಿಸಿಕೊಂಡು ಪ್ರತಿನಿಧೀಕರಿಸುತ್ತಿದ್ದರು. ಈ ರೀತಿಯ ಪ್ರಾತಿನಿಧೀಕರಣವನ್ನು (Representation) ಕುರಿತು ಹೇಳುವುದು ಹೀಗೆ:

ಅನುಕರಣೆಯೆನ್ನುವುದು ಮನುಷ್ಯರಿಗೆ ಅವರ ಬಾಲ್ಯದಿಂದಲೂ ಸಹಜವಾಗಿ ಒಡಮೂಡಿ ಬಂದಿರುತ್ತದೆ. ಹಾಗೆ ನೋಡುವುದಿದ್ದರೆ ಉಳಿದೆಲ್ಲ ಪ್ರಾಣಿಗಳಿಗಿಂತ ಹೆಚ್ಚಾಗಿ ಮನುಷ್ಯನೇ ಅನುಕರಣೆಯನ್ನು ತುಂಬಾ ಹೆಚ್ಚು ಮಾಡುತ್ತಿರುತ್ತಾನೆ. ಮನುಷ್ಯ ಕಲಿಯುವುದು ಕೂಡಾ ಅನುಕರಣೆಯಿಂದಲೇ. ಮನುಷ್ಯನ ಪ್ರತಿಯೊಂದು ಚಟುವಟಿಕೆಯಲ್ಲಿಯೂ ಈ ಅನುಕರಣೆಯ ಅಂಶವು ಎದ್ದು ಕಾಣುತ್ತದೆ. ಇದು ಗಮನಿಸಬೇಕಾದ ಮೊದಲನೆಯ ಅಂಶವಾಗಿದೆ. ಎರಡನೆಯ ಅಂಶವನ್ನು ಅನುಭವದ ಆಧಾರದ ಮೇಲೆ ವಿವರಿಸಬಹುದು.

ಈ ರೀತಿಯ ಅನೇಕ ಘಟನೆಗಳಿಂದ ಕಲಿಯುವುದು ಬಹಳವಿರುತ್ತದೆ ಮತ್ತು ಕಲಿಯುವಾಗ ಖುಷಿಯನ್ನು ಅನುಭವಿಸುವುದು ಕೇವಲ ಒಬ್ಬ ತತ್ವಜ್ಞಾನಿಗೆ ಮಾತ್ರ ಸಂಬಂಧಿಸಿದ ಕ್ರಿಯೆಯೂ ಅಲ್ಲ. ಒಂದು ಕಲೆಯು ಕಲಿಯುವ ಮತ್ತು ಅರ್ಥಗಳನ್ನು ಜೋಡಿಸುವ ಕೆಲಸವನ್ನು ಮಾಡುತ್ತದೆ. ಈಗಾಗಲೇ ಅಸ್ತಿತ್ವದಲ್ಲಿರುವ ವಾಸ್ತವವೊಂದನ್ನು ಕಲೆಯು ಪ್ರಾತಿನಿಧಿಕಗೊಳಿಸುತ್ತದೆ ಮತ್ತು ಹೊರಜಗತ್ತನ್ನು ಅನುಕರಿಸುತ್ತದೆಯೆಂಬುದರಲ್ಲಿ ಯಾವ ರೀತಿಯ ಅನುಮಾನವೂ ಇಲ್ಲ. ಕಲಾವಿದನು ಹೊರಜಗತ್ತನ್ನು ಅನುಕರಿಸುತ್ತಾನೆ ಮತ್ತು ಕಲಾವಿದನು ಅನುಕರಣೆಯ ಮೂಲಕ ಸೃಷ್ಟಿಸಿದ ಕಲೆಯನ್ನು ಅನುಕರಣೆಯ ಅರ್ಥವನ್ನು ನಾವು ಹುಡುಕುತ್ತೇವೆ. ಭಾರತೀಯ ಕಾವ್ಯಮೀಮಾಂಸೆಯಲ್ಲಿ ವಸ್ತುವನ್ನು ಹೊಸ ವಿಧದಲ್ಲಿ ಕಾಣುವ ಶಕ್ತಿಯೇ ಪ್ರತಿಭೆಯಾಗಿದೆಯೆಂದು ಹೇಳುವವರು ವಾದ ಮಂಡಿಸುತ್ತಾರೆ. ಪ್ರತಿಭೆಯು ನವ ನವ ಉನ್ಮೇಷಶಾಲಿಯಾಗಿರುವುದರಿಂದ ಹೊಸದನ್ನು ಕಾಣುವುದಕ್ಕೆ ಸಾಧ್ಯ. ಇದು ಈ ದೃಷ್ಟಿಯಿಂದ ಕವಿಗೆ ಸೀಮಿತವಾದುದ್ದಲ್ಲ. ಎಲ್ಲರಿಗೂ ಇರುವ ಕೌಶಲ್ಯವೇ ಪ್ರತಿಭೆ. ಕವಿರಾಜ ಮಾರ್ಗಕಾರನು ಹೇಳುವ ಅನುಕರಣೆಯು ಈ ದೃಷ್ಟಿಯಿಂದ ಮಹತ್ವದ ವಿಷಯವಾಗಿದೆ.

*ವಿವರಗಳಿಗೆ ನೋಡಿ: ಎನ್. ಬಾಲಸುಬ್ರಹ್ಮಣ್ಯ ೧೯೭೨ ಅರಿಸ್ಟಾಟಲನ ಕಾವ್ಯಮೀಮಾಂಸೆ*

*Raymond Williams 1983 Keywords*

**೪೬. ಅನುಗ್ರಹಾರ್ಥ**

*ತನ್ನೊಡಮೆಯಂ ಪೆಱರ್ಗೆ ಕುಡುವರೆಂಬುದು* **ಅನುಗ್ರಹಾರ್ಥ***ಮೆಂದು ಋಷಿವಚನವು ಇದೆಯೆಂದು ಚಾವುಂಡರಾಯನು ಬಣ್ಣಿಸುತ್ತಾನೆ.*

*(ಚಾವುಂಡರಾಯ ಪುರಾಣ – ಮೇಘರಥ ಚರಿತಂ ಪು.೧೨೭)*

ಅನುಗ್ರಹಾರ್ಥವೆಂದರೆ ಅನುಗ್ರಹದ ಕಾರಣವಾಗಿ; ತನ್ನೊಡವೆಯೆಂದರೆ ತನ್ನ ಸಂಪತ್ತು. ಇದನ್ನು ಬೇರೆಯವರಿಗೆ ಹಂಚುವುದರಿಂದ ಅನುಗ್ರಹವು ದೊರೆಯುವುದೆಂದು ಇಲ್ಲಿಯ ಅಭಿಪ್ರಾಯವಾಗಿದೆ. ಅನುಗ್ರಹವೆಂದರೆ ಅನುಕೂಲವನ್ನು ಉಂಟುಮಾಡುವುದು; ಉಪಕರಿಸು; ಅಂಗೀಕಾರ; ಒಪ್ಪಿಗೆಯೆಂದಾಗುತ್ತದೆ.

**೪೭. ಅನುಚಿತ**

*ಈಯದೆ ಕೊಂಡೊಯ್ವು***ದನುಚಿತಂ** *(ಶಾಂತಿಪುರಾಣ ೩-೮೧)*

ಕೊಡದೆ ಕೊಂಡೊಯ್ಯುವುದು ಅನುಚಿತ. ಉಚಿತ ಮತ್ತು ಅನುಚಿತವೆನ್ನುವುದು ಇಲ್ಲಿ ಸಾಮಾಜಿಕ ಸಂಹಿತೆಯ ಹಿನ್ನೆಲೆಯಲ್ಲಿ ಬಳಕೆಯಾಗಿದೆ. ಅನುಚಿತವೆಂದರೆ ಅಯೋಗ್ಯವೆಂಬ ಅರ್ಥವಿದೆ. ಯಾರೂ ಕೊಡದೆ ಯಾವುದನ್ನಾದರೂ ಕೊಂಡೊಯ್ಯುವುದು ಅಯೋಗ್ಯ ಕೆಲಸವೆಂದು ಪೊನ್ನನು ಹೇಳುತ್ತಾನೆ. ಔಚಿತ್ಯ ಪ್ರಜ್ಞೆಯೆಂದರೆ ಉಚಿತಾನುಚಿತ ವಿವೇಕ. ಅಂದರೆ ಸಂದರ್ಭಕ್ಕೆ ಸರಿಯಾಗಿ ವಿವೇಕಯುತವಾಗಿ

ವ್ಯವಹರಿಸುವುದು. ಕೊಡದೆ ಕೊಂಡೊಯ್ಯುವುದು ಎರಡು ಅಂಶಗಳಿಗೆ ಕಾರಣವಾಗುತ್ತದೆ: ಬಲತ್ಕಾರ ಮತ್ತು ಅಪಹರಣ. ಇನ್ನೊಂದು ಅಂಶವೆಂದರೆ – ಆಮಂತ್ರಣ ನೀಡಿದವರ ಮನೆಗೆ ಹೋಗುವುದು ಉಚಿತ. ಆಮಂತ್ರಿಸದೇ ಹೋದರೆ ಅನುಚಿತ. ಗುರುವಿನ ಗೃಹಕ್ಕೆ; ತಾಯಿಯ ಗೃಹಕ್ಕೆ; ಗಂಡನ ಗೃಹಕ್ಕೆ ಕರೆಯಬೇಕೆಂಬುದಿಲ್ಲ. ಕರೆಯದಿದ್ದರೂ ಹೋಗಬಹುದು. ಇಲ್ಲಿ ಉಚಿತ–ಅನುಚಿತವೆಂಬ ಪ್ರಶ್ನೆಯು ಬರುವುದಿಲ್ಲ. ಉಚಿತ ಮತ್ತು ಅನುಚಿತವೆನ್ನುವುದು ಸಾಮಾಜಿಕ ನಡವಳಿಕೆಯ ಸಂಹಿತೆಯಾಗಿರುವುದು ಗಮನಾರ್ಹ.

**೪೮. ಅನುಪ್ರೇಕ್ಷೆ**

*ಅನುಪ್ರೇಕ್ಷೆ ನೆನೆಯುತ್ತುಮನುಪ್ರೇಕ್ಷೆಯೆ*

*ಮನದೊಳ್ ತಣ್ಮಲೆಯೆ ಸೇಸೆಗೊಳ್ ಖಚರಪತೀ ॥ (ಆದಿಪುರಾಣ. ೨–೫೭)*

ಅನುಪ್ರೇಕ್ಷೆಯ ಕುರಿತು ಜೈನ ಧರ್ಮದ ನಿಲುವು ಈ ಕೆಳಗಿನಂತಿದೆ.

ಎಂದಿಂತಧ್ರುವಮಶರಣಮೇಕತ್ವಮನ್ಯತ್ವಮಶುಚಿತ್ವಂ, ಸಂಸಾರಂ, ಲೋಕಮಾಸ್ರವಂ ಸಂವರೆ, ನಿರ್ಜರೆ, ಬೋಧಿದುರ್ಲಭ, ಧರ್ಮಸ್ವಾಖ್ಯಾತಮೆಂಬುವ ಪನ್ನೆರಡು **ಮನುಪ್ರೇಕ್ಷೆ**ಯಂ ಕ್ರಮದಿನನುಸರಿಸುತ್ತುಮಿರ್ಪನ್ನೆಗಂ; (ಅಜಿತತೀರ್ಥಂಕರ ಪುರಾಣ ತಿಲಕಂ ೬. ೬೧.ವ) ಅನುಪ್ರೇಕ್ಷೆಯು ಪಂಪ–ರನ್ನರಲ್ಲಿ ಒಂದೇ ಅರ್ಥದಲ್ಲಿ ಬಂದಿದೆ.

ಅನುಪ್ರೇಕ್ಷೆ ಎಂದರೆ ಯತಿಗಳು ಧ್ಯಾನಮಾಡಬೇಕಾದ ಅನಿತ್ಯತ್ವ, ಅಶರಣತ್ವ, ಸಂಸಾರ, ಏಕತ್ವ, ಅನ್ಯತ್ವ, ಅಶುಚಿ, ಆಸ್ರವ, ಸಂವರ, ನಿರ್ಜರ, ಲೋಕ, ಬೋಧಿದುರ್ಲಭತ್ವ, ಧರ್ಮ ಎಂಬ ಹನ್ನೆರಡು ತತ್ವಗಳ ಚಿಂತನೆ. ಪುನಃ ಪುನಃ ಮಾಡುವ ಚಿಂತನೆ. ಶರೀರಾದಿ ಪರದ್ರವ್ಯಗಳು ಮತ್ತು ಧರ್ಮಾದಿಗಳು ಇದನ್ನು ಮತ್ತೆ ಮತ್ತೆ ಚಿಂತಿಸುವುದು; ಪರಮಾಗಮಗಳ ಶಬ್ದಾರ್ಥಗಳನ್ನು ಮನಸ್ಸಿನಲ್ಲಿ ಧಾರಣಮಾಡಿ ಅವುಗಳನ್ನು ಆಗಾಗ ಚಿಂತಿಸುವುದು.

ಅನುಪ್ರೇಕ್ಷೆ– ಪುನಃ ಚಿಂತನೆ ಮಾಡುವುದು ಶರೀರಾದಿ ಪರದ್ರವ್ಯಗಳು, ಧರ್ಮಾದಿಗಳು ಇವುಗಳನ್ನು ಮೇಲೆ ಚಿಂತಿಸುವುದು– ಅನುಪ್ರೇಕ್ಷೆಯು.

೧. ಅನಿತ್ಯಾನುಪ್ರೇಕ್ಷೆ ಎಂದರೆ ಶರೀರೇಂದ್ರಿಯವಿಷಯಗಳೂ, ಭೋಗೋಪಭೋಗ ವಸ್ತುಗಳೂ ನೀರಿನ ಗುಳ್ಳೆಯಂತೆ ಅಸ್ಥಿರವಾದವುಗಳೆಂದು ಚಿಂತಿಸುವುದು. ೨. ಅಶರಣಾನುಪ್ರೇಕ್ಷೆ ಅಡವಿಯಲ್ಲಿ ಹುಲಿಯ ಕೈಗೆ ನಿಲುಕಿದ ಜಿಂಕೆಗೆ ಹೇಗೆ ರಕ್ಷಕರಿಲ್ಲವೋ ಹಾಗೆ ಸಂಸಾರದಲ್ಲಿ ಜೀವನಿಗೆ ಮಂತ್ರೌಷಧ ಬಂಧ–ಮಿತ್ರ ಮೊದಲಾದವರಾರೂ ರಕ್ಷಕರಲ್ಲವೆಂದೂ, ಧರ್ಮವೊಂದೇ ರಕ್ಷಕವೆಂದೂ ಚಿಂತಿಸುವುದು. ೩. ಸಂಸಾರಾನುಪ್ರೇಕ್ಷೆ– ದ್ರವ್ಯ ಕ್ಷೇತ್ರ ಕಾಲಭವಭಾವರೂಪ ಸಂಸಾರದಲ್ಲಿ ಜೀವನು ಕರ್ಮಾಧೀನನಾಗಿ ರಂಗಭೂಮಿಯಲ್ಲಿ ನಟನು ಬೇರೆ ಬೇರೆ ರೂಪಗಳನ್ನು ಧರಿಸಿ ನಟಿಸುವಂತೆ ಬೇರೆ ಬೇರೆ ಜನ್ಮಗಳಲ್ಲಿ ಪಿತೃ, ಭ್ರಾತೃ, ಪುತ್ರ, ಪ್ರಭು, ಸೇವಕ ಮುಂತಾದ ರೂಪಗಳಿಂದ

ನಟಸುತ್ತಿರುವನೆಂದು ಚಿಂತಿಸುವುದು. ೪.ಏಕತ್ವಾನುಪ್ರೇಕ್ಷೆ- ಜನ್ಮ ಜರಾ ಮರಣಾದಿ ಮಹಾದುಃಖವನ್ನನುಭವಿಸುವವನೂ ಜನ್ಮಾಂತರವನ್ನೈದುವವನೂ ತಾನೊಬ್ಬನಲ್ಲದೆ ಈ ದುಃಖಕ್ಕೆ ಇನ್ನೊಬ್ಬರು ಪಾಲುಗಾರರಲ್ಲವೆಂದೂ, ಧರ್ಮವೊಂದೇ ಸಹಾಯಕವೆಂದೂ ಚಿಂತಿಸುವುದು. ೫.ಅನ್ಯತ್ವಾನುಪ್ರೇಕ್ಷೆ ಶರೀರ,ಪುತ್ರದಾರಾದಿ ಪರಿಗ್ರಹ ಇವುಗಳಿಂದ ಆತ್ಮನು ಭಿನ್ನನೆಂದು ಭಾವಿಸುವುದು. ೬.ಅಶುಚಿತ್ವಾನುಪ್ರೇಕ್ಷೆ-ಶರೀರವು ಅತ್ಯಂತ ಅಪವಿತ್ರವಾದುದೆಂದು ಭಾವಿಸುವುದು. ೭. ಆಸ್ರವಾನುಪ್ರೇಕ್ಷೆ- ಮಿಥ್ಯಾತ್ವ, ಅವಿರತಿ, ಕಷಾಯಗಳಿಂದ ಕರ್ಮಾಸ್ರವವುಂಟಾಗುವುದೆಂದೂ ಆ ಆಸ್ರವವೇ ಸಂಸಾರಕಾರಣವೆಂದೂ ಆತ್ಮಗುಣ ಘಾತುಕವೆಂದೂ ಭಾವಿಸುವುದು. ೮. ಸಂವರಾನುಪ್ರೇಕ್ಷೆ- ಆತ್ಮನಲ್ಲಿ ಕರ್ಮಪುದ್ಗಲಗಳು ಬಂದು ಸೇರುವ ಮಾರ್ಗಗಳಾದ ಕಷಾಯಾದಿಗಳನ್ನು ತಡೆದರೆ ಶ್ರೇಯಸ್ಸಾಗುವುದೆಂದು ಭಾವಿಸುವುದು. ೯. ನಿರ್ಜರಾನುಪ್ರೇಕ್ಷೆ- ಕರ್ಮನಿರ್ಜರೆಯು ಏತರಿಂದಾದೀತೆಂದು ಭಾವಿಸುವುದು. ೧೦. ಲೋಕಾನುಪ್ರೇಕ್ಷೆ- ಲೋಕವೆಂಬುದು ಎಷ್ಟು ದೊಡ್ಡದು, ಅದರಲ್ಲಿರುವ ಜೀವಗಳು ಯಾವ ಯಾವುವು? ಇದು ನಾದಿಯೋ ಅನಾದಿಯೋ ಮೊದಲಾದುವನ್ನು ಭಾವಿಸುವುದು. ೧೧ ಬೋಧಿ ದುರ್ಲಭಾನುಪ್ರೇಕ್ಷೆ-ಬೋಧಿಯು (ಸಮ್ಯಗ್ದರ್ಶನ ಜ್ಞಾನ ಚಾರಿತ್ರ್ಯಗಳು) ದುರ್ಲಭವೆಂದು ಭಾವಿಸುವುದು. ೧೨. ಧರ್ಮಾನುಪ್ರೇಕ್ಷೆ- ಧರ್ಮಪ್ರಾಪ್ತಿಯಿಂದ ಅಭ್ಯುದಯ ನಿಶ್ರೇಯಸಗಳು ದೊರೆವುದೆಂದು ಭಾವಿಸುವುದು.

*ವಿವರಗಳಿಗೆ : ಮಹದೇವ ಪ್ರಭಾಕರ ಪೂಜಾರ ೧೯೭೬ ಜೈನಧರ್ಮ ಪರಿಭಾಷೆ.*

## ೪೯. ಅನುಭೂತಿ

ಶಂಕರರ ಭಾಷ್ಯ ಪದ್ಧತಿ ಗ್ರಂಥಗಳ ಅರ್ಥವನ್ನು ಅಕ್ಷರಶಃ ಹೇಳುವುದಕ್ಕಿಂತ ಅವುಗಳ ತಾತ್ಪರ್ಯದಲ್ಲಿಯೇ ಪ್ರಧಾನವಾದ ಅಭಿಪ್ರಾಯವುಳ್ಳದ್ದು. ತಮ್ಮ ಸಿದ್ಧಾಂತವು ಶ್ರುತಿಸಮ್ಮತವೆಂದು ಮಾತ್ರವಲ್ಲ ಯುಕ್ತಿಯುಕ್ತವೆಂದೂ, ಅನುಭವಸಿದ್ಧವೆಂದೂ ಅವರು ಪ್ರತಿಪಾದಿಸಿದ್ದಾರೆ. ಈ ಮೂರು ಪ್ರಮಾಣಗಳಿಂದಲೂ ಉಂಟಾಗುವ ಜ್ಞಾನಗಳು ಪರಸ್ಪರ ವಿರುದ್ಧವಲ್ಲ. ಕಾರ್ಯಕಾರಣ ನಿಯಮದಿಂದ ಮೂಲ ಕಾರಣ ಒಂದಿದೆ ಎಂದು ಸಾಧಿಸಬಹುದು. ಜಗತ್ತನ್ನು ಕಾರ್ಯವೆಂದಿಟ್ಟುಕೊಂಡು ಇದಕ್ಕೆ ಕಾರಣವಿರಲೇಬೇಕೆಂಬ ಈ ಅನುಮಾನವು ಆ ಕಾರಣದ (ಅಸ್ತಿತ್ವವನ್ನು ಸ್ಥಾಪಿಸುವುದೇ ಹೊರತು) ಸ್ವರೂಪವನ್ನು ತೋರಿಸಲಾರದು. ಸತ್ಯದ ಅರಿವು ಪ್ರತ್ಯಕ್ಷಾನುಭವದಿಂದ ಮಾತ್ರ ಆಗುವುದು. ಸತ್ಯವು ಕೇವಲ ತಾತ್ವಿಕ ಕಲ್ಪನೆಯಲ್ಲ, ಆತ್ಮದ ಇರವು. ಇದು ಸ್ವತಃಸಿದ್ಧವಾದ 'ಅಪರೋಕ್ಷಾನುಭೂತಿ', ಅನುಮಾನ ಸಾಧ್ಯವಾದ ವಿಷಯವಲ್ಲ. ಶಂಕರರು ಶ್ರುತಿಯನ್ನು ಪ್ರತ್ಯಕ್ಷವೆಂದಾಗ ಅದು ಋಷಿಗಳ ಅಖಂಡಾನುಭವದ ನಿರೂಪಣೆ ಎಂಬರ್ಥದಲ್ಲಿ ಪ್ರಯೋಗವಾಗಿದೆ. ಶ್ರುತಿಯ ಪ್ರಮಾಣ್ಯವು ಸ್ವತಃಸಿದ್ಧವೆನ್ನುವುದೂ ಅದರಲ್ಲಿ ಉಲ್ಲಿಖಿತವಾಗಿರುವ ಅನುಭವದ ಸ್ವತಃಸಿದ್ಧ ಸ್ವರೂಪದಿಂದಲೇ ದೃಶ್ಯವಸ್ತುಗಳನ್ನು ಸೂರ್ಯನು

ಬೆಳಗುವಂತೆ ಶ್ರುತಿಯೂ ತನ್ನ ಅರ್ಥವನ್ನು (ಅನನ್ಯಾಪೇಕ್ಷವಾಗಿ) ಬೆಳಗುತ್ತದೆ. ಶ್ರುತಿಯು ಜ್ಞಾಪಕ, ಕಾರಕವಲ್ಲ. ವಿಚಾರವು ಸ್ವಯಂಪ್ರಕಾಶಕ್ಕೆ ದಾರಿ. ಸ್ವತಃಸಿದ್ಧವಾದ ಅನುಭವಗಳ ಉಲ್ಲೇಖವೇ ಶ್ರುತಿ.

ಅದ್ವೈತದಲ್ಲಿ ಅನುಭೂತಿ ಮತ್ತು ಅನುಭವ ಪ್ರಮಾಣದ ಬಗ್ಗೆ ವಿಶಿಷ್ಟ ಹೊಳಹುಗಳಿವೆ. ಶಂಕರಾಚಾರ್ಯರು ಶ್ರುತಿಯನ್ನು ಪ್ರತ್ಯಕ್ಷವೆಂದು ಕರೆಯುತ್ತಾರೆ. ಅದು ಅನುಭವ ಪ್ರಮಾಣದಿಂದ ವೇದ್ಯವಾದುದು. ವಿಚಾರಗಳಿಗೆ ಅದು ದಾರಿ ಎಂಬುದು ಅದ್ವೈತದ ನಿಲುವು. ಇದರಿಂದ ತಾತ್ವಿಕ ಚರ್ಚೆಗಳಿಗೆ ಹೊಸ ಆಯಾಮ ದೊರೆಯಿತು.

*ವಿವರಗಳಿಗೆ ನೋಡಿ: ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦*

*ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ ಪುಟ. ೨೮೭*

*ಪಿ.ವಿ. ಕಾಣೆ ೧೯೮೦ ಧರ್ಮಶಾಸ್ತ್ರದ ಇತಿಹಾಸ ಸುಕುಮಾರ ಅಟಿಕ್ಕೋಡ್ ೨೦೦೫ ತತ್ವಮಸಿ*

### ೫೦. ಅನುಲೋಮ ಪ್ರತಿಲೋಮ

ಧರ್ಮಸೂತ್ರಗಳು ಅನುಲೋಮ ಒಪ್ಪಿದರೂ ಪ್ರತಿಲೋಮ (ಕೆಳಜಾತಿ ಗಂಡು ಮೇಲು ಜಾತಿ ಹೆಣ್ಣನ್ನು ಮದುವೆಯಾಗುವುದು)ವನ್ನು ತುಂಬ ಹೇಯವಾಗಿ ಕಂಡವು. ಗೌತಮನ ಪ್ರಕಾರ (IV. ೨೭) ಶೂದ್ರ ಮತ್ತು ಮೇಲುಜಾತಿ ಹೆಣ್ಣಿನಲ್ಲಿ ಹುಟ್ಟಿದವನು 'ಪತಿತ'. ಇಂತಹ ಸಂಬಂಧದಲ್ಲೇ ಹತ್ತು ಹನ್ನೆರಡು 'ವರ್ಣ ಸಂಕರ'ದ ಜಾತಿಗಳ ಮೂಲವನ್ನು ಗುರುತಿಸಲಾಗಿದೆ. ಶೂದ್ರನಿಗೆ ಕ್ಷತ್ರಿಯಳಲ್ಲಿ ಕ್ಷತ್ತೃ, ವೈಶ್ಯಳಲ್ಲಿ ಮಾಗಧ, ಬ್ರಾಹ್ಮಣಿಯಲ್ಲಿ ಚಂಡಾಲ ಹುಟ್ಟಿದರೆ (ಬೌ. ಧ. ಸೂ. I. ೯.೧೭.೭ ಇತ್ಯಾದಿ), ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಗಂಡಿಗೆ ಶೂದ್ರಳಲ್ಲಿ ಹುಟ್ಟಿದ ಗಂಡಸಿಗೆ ಕ್ರಮವಾಗಿ ಪಾರಶವ, ಯವನ, ಕರಣ, ಶೂದ್ರ ಎಂಬ ಹೆಸರಿದೆ (ವಸಿಷ್ಠ IV. ೨೧). ಬ್ರಾಹ್ಮಣನಿಗೆ ಶೂದ್ರಳಲ್ಲಿ ಹುಟ್ಟಿದವನು ನಿಷಾದ, ನಿಷಾದನಿಗೆ ಶೂದ್ರಳಲ್ಲಿ ಹುಟ್ಟಿದವನು ಪುಲ್ಕಸ, ಶೂದ್ರನಿಗೆ ನಿಷಾದಳಲ್ಲಿ ಹುಟ್ಟಿದ್ದು ಕುತ್ಕುಟಕ, ಇತ್ಯಾದಿ (ಬೌ.ಧ.ಸೂ. I. ೯.೭.೧೩-೧೪). ಹೀಗೆ ಅನುಲೋಮ ಪ್ರತಿಲೋಮಗಳಿಂದ ವರ್ಣ ಸಂಕರವಾಗಿ ಅನೇಕ ಅಸ್ಪೃಶ್ಯ ಕುಲಗಳಾದವೆಂದು ಸೂತ್ರಕಾರರ ಅಭಿಪ್ರಾಯ. ನಿಜಕ್ಕೂ ಹಿಂದುಳಿದ ಬಣ-ಬುಡಕಟ್ಟುಗಳಿಗೆ ಪಂಚಮತ್ವ ನೀಡುವ ಕಟ್ಟು ಕತೆ ಇದಾದರೂ ವರ್ಣ ಸಂಕರದಲ್ಲಿ ಹೊಸ ಜಾತಿ ಕಲ್ಪಿಸುವ ಈ ಮಾದರಿ ಇತ್ತೀಚಿನವರೆಗೂ ಬಳಕೆಯಲ್ಲಿತ್ತು.

*ವಿವರಗಳಿಗೆ ನೋಡಿ: ನಿಯೋಗ; ಪಾಣಿಗ್ರಹಣ ಪಿ.ವಿ. ಕಾಣೆ ೧೯೮೦ ಧರ್ಮಶಾಸ್ತ್ರದ ಇತಿಹಾಸ*

*ಆರ್. ಎಸ್. ಶರ್ಮ ೨೦೦೪ ಪ್ರಾಚೀನ ಭಾರತದಲ್ಲಿ ಶೂದ್ರರು*

### ೫೧. ಅನೇಕಾಂತವಾದ

ನ್ಯಾಯ ವೈಶೇಷಿಕವು ಕಟ್ಟುನಿಟ್ಟಾಗಿ ವಾಸ್ತವಿಕತಾವಾದ ಹಾಗೂ ಅನೇಕತ್ವವಾದ. ಅದು ಯಂತ್ರಾನುಗುಣವಾಗಿ ಕಾರ್ಯಕಾರಣ ಭಾವವನ್ನು ಸಮರ್ಥಿಸುತ್ತದೆ; ದ್ರವ್ಯ

ಗುಣಗಳ, ಅವಯವ ಅವಯವಿ ಮುಂತಾದುಗಳಲ್ಲಿನ ಭೇದದ ತರ್ಕಕ್ಕೆ ಅದು ಬದ್ಧವೇ ಹೊರತು ಏಕತೆಯದಕ್ಕಲ್ಲ. ಆತ್ಮ, ಪ್ರಕೃತಿ ಎಂಬ ಎರಡು ತತ್ತ್ವಗಳ ಪಾರಮ್ಯ ಪ್ರತ್ಯೇಕತೆಗಳನ್ನೊಪ್ಪಿರುವ ಸಾಂಖ್ಯ-ಯೋಗ ಒಂದು ದ್ವೈತದರ್ಶನ. ಕಾರ್ಯಕಾರಣಗಳ ಅಭೇದ ಅವಿಚ್ಛಿನ್ನತೆಗಳನ್ನು ಒತ್ತಿ ಹೇಳುವ ಅದು ಭೇದ, ಉತ್ಪತ್ತಿ ಇವನ್ನು ವರ್ಜಿಸುವುದಿಲ್ಲ. ಭೇದಾಭೇದದ ತರ್ಕಕ್ಕೆ ಅಥವಾ ವಸ್ತುಗಳ ಅಂಗಿತ್ವ ಕಲ್ಪನೆಗೆ ಅದರ ಬೆಂಬಲ. ವಾಸ್ತವಿಕತಾವಾದಿತ್ವ ನಿಷ್ಠವಾದರೂ ಸಾಂಖ್ಯವು ನ್ಯಾಯದರ್ಶನಕ್ಕೆ ಹೋಲುವಂತಹ ಪರಮ ವಾಸ್ತವಿಕತಾವಾದವಲ್ಲ. ಅದ್ವೈತ ವೇದಾಂತವಾದರೋ ದ್ವೈತವನ್ನು ನಿರಾಕರಿಸುತ್ತದೆ; ಆತ್ಮ ಏಕೈಕ ತತ್ತ್ವ; ಜಡ ಅವಾಸ್ತವಿಕ. ಆತ್ಮವು ಸರ್ವಾತೀತವೆಂಬ ಅದ್ವೈತದರ್ಶನದೃಷ್ಟಿ ಶುದ್ಧೈಕತ್ವದ ತತ್ತ್ವಕ್ಕೊಳಪಟ್ಟಿದೆ; ಭೇದ ಪರಿವರ್ತನೆಗಳು ತೋರಿಕೆಯ ಲಕ್ಷಣವುಳ್ಳವು.

ಸರ್ವಸಾರಗ್ರಾಹಿತ್ವವುಳ್ಳ ಅಥವಾ ಎಲ್ಲ ದೃಷ್ಟಿಕೋನಗಳ ಸಮನ್ವಯರೂಪದ ಜೈನ ದಾರ್ಶನಿಕ ಪದ್ಧತಿಯನ್ನು ಮೂಲಭೂತ ದರ್ಶನವೆಂದು ಪರಿಗಣಿಸದೆ ಇರಬಹುದು. ಆದರೆ ಹಲವು ದೃಷ್ಟಿಗಳ ಸಂಯೋಗವೆಂದರೆ ಅಲ್ಲಿ ಒಂದು ಹೊಸ ಮಾದರಿ ಏರ್ಪಡುವುದಲ್ಲದೆ ಅಂಶಗಳಲ್ಲಿನ ಒಂದೊಂದಕ್ಕೂ ಭಿನ್ನವಾಗಿರುವ ದೃಷ್ಟಿಯೊಂದು ಅದರಲ್ಲಿ ಅಧ್ಯಾಹೃತವಾಗುತ್ತದೆ. ಜೈನಮತದಲ್ಲಿ ವಾಸ್ತವಿಕತೆಯೆಂಬುದು ಅನೇಕವಲ್ಲ, ಅನೇಕಾಂತ. ಆದ್ದರಿಂದ ಅದರ ಪ್ರತಿಪಾದನೆ ಸ್ಯಾದ್ವಾದ, ಸಪ್ತಭಂಗಿನಯ ಎನಿಸಿಕೊಂಡಿದೆ. ಆ ಕಾರಣದಿಂದ ಜೈನದರ್ಶನವು ಶುದ್ಧೈಕತ್ವದ ಅಥವಾ ಭೇದದ ತರ್ಕವನ್ನು ಗ್ರಹಿಸದೆ ಎಲ್ಲ ಪರ್ಯಾಯಗಳ ಪ್ರತ್ಯೇಕತೆಯನ್ನೂ ಒಪ್ಪಿದೆ.

ಜೈನ ದರ್ಶನವು ಅನೇಕಾಂತವಾದವೆಂದು ಹೇಳಿಕೊಳ್ಳುತ್ತದೆ: ಏಕಾಂತವಾದದ ಹಲವು ಶಾಖೆಗಳಾಗಿರುವ ಇತರ ದರ್ಶನಗಳಿಗಿಂತ ಇದು ವಿಶಿಷ್ಟವಾಗಿದೆ. ಆತ್ಯಂತಿಕ ಸತ್ಯ ತನ್ನ ರಚನೆಯಲ್ಲಿ ಜಟಿಲವಾಗಿದೆಯೆಂದೂ, ಅದರ ಸ್ವಭಾವ ಪರಿಜ್ಞಾನಕ್ಕಾಗಿ ಅದನ್ನು ಹಲವು ದೃಷ್ಟಿಗಳಿಂದ ಪರೀಕ್ಷಿಸಬೇಕೆಂದೂ ಜೈನ ತತ್ತ್ವಶಾಸ್ತ್ರವು ಹೇಳುತ್ತದೆ. ಸತ್ಯದ ಇತರ ಮುಖಗಳನ್ನು ಬಿಟ್ಟು ಯಾವುದೋ ಒಂದನ್ನು ಮಾತ್ರ ಒಂದು ವಿಶಿಷ್ಟ ಉದ್ದೇಶದಿಂದ ಗಣನೆಗೆ ತಂದುಕೊಳ್ಳುವುದು ಸಾಧ್ಯವೆಂಬುದರಲ್ಲಿ ಸಂಶಯವಿಲ್ಲ. ಖಚಿತೋದ್ದೇಶ ಮೂಲವನ್ನುಳ್ಳ ಈ ಬಗೆಯ ಸೂಕ್ಷ್ಮ ಸತ್ಯಪರೀಕ್ಷೆ ತನ್ನಷ್ಟಕ್ಕೆ ತಾನೆ ಪ್ರಯೋಜನಕಾರಿಯಾಗಬಹುದು: ಆದರೆ ಅದನ್ನು ತತ್ತ್ವಶಾಸ್ತ್ರದಲ್ಲಿ ಪ್ರಮುಖ ಪದವಿಗೆ ಏರಿಸಬಾರದು. ಯಾವ ಸಂದರ್ಭಗಳಲ್ಲಿ ಈ ದೃಷ್ಟಿ ಅಂಗೀಕೃತವಾಯಿತೆಂಬುದನ್ನು ಗಮನಿಸದಿದ್ದರೆ ಅದು ತತ್ತ್ವಶಾಸ್ತ್ರದಲ್ಲಿ ಪ್ರಮಾದವಾಗುತ್ತದೆ. ಒಂದು ವಿಶಿಷ್ಟ ಲಕ್ಷಣವನ್ನು ಅತಿಯಾಗಿ ಒತ್ತಿಹೇಳಿ ಅದನ್ನು ಸತ್ವದ ಅಂತಿಮ ಸ್ವಭಾವವೆಂದು ಹೇಳುವುದು ಸತ್ಯದ ದರ್ಶನದಲ್ಲಿ ಅಪೂರ್ಣವೂ ಪಾಕ್ಷಿಕವೂ ಆಗುತ್ತದೆ. ಸತ್ಯದ ಇಂಥ ದೃಷ್ಟಿಯನ್ನು ಜೈನ ತತ್ತ್ವಜ್ಞಾನಿಗಳು ತೆಗಳುತ್ತಾರೆ. ಈ ದೃಷ್ಟಿ ಪೂರ್ಣವಾಗಿ ನಿರಾಕರಿಸಲಾಗದ ಇತರ ಗುಣಗಳ ವಿಷಯದಲ್ಲಿ ವ್ಯಾವರ್ತಕವಾಗಿದ್ದು ಏಕಾಂತವನ್ನೇ ಒತ್ತಿ ಹೇಳುತ್ತದೆಯೆಂದು

ಅವರ ಅಭಿಪ್ರಾಯ. ಆದ್ದರಿಂದ ಇಂಥ ಪಾಕ್ಷಿಕ ದೃಷ್ಟಿಯನ್ನು ಏಕಾಂತವಾದವೆಂದು ಕರೆಯುತ್ತಾರೆ. ಉದಾಹರಣೆಗಾಗಿ: ಒಂದು ಬಗೆಯ ತತ್ವ ಪ್ರಸ್ಥಾನ ಇತರ ದೃಷ್ಟಿಗಳನ್ನು ಬಿಟ್ಟು ಸತ್ಯದ ಏಕತ್ವವನ್ನೂ, ಆತ್ಯಂತಿಕ ಐಕ್ಯತೆಯನ್ನೂ ಮಿಗಿಲಾಗಿ ಒತ್ತಿ ಹೇಳಬಹುದು. ಅದಕ್ಕೆ ವಿರುದ್ಧವಾದ ಇನ್ನೊಂದು ಪ್ರಸ್ಥಾನ ಪರಿವರ್ತನೆಯನ್ನು ಒತ್ತಿಹೇಳಿ ಸತ್ಯವನ್ನು ನಿತ್ಯವೂ ಅನುಸ್ಯೂತವೂ ಆದ ಪರಿವರ್ತನೆಯೇ ಹೊರತು ಬೇರೇನೂ ಅಲ್ಲವೆಂದು ವರ್ಣಿಸಬಹುದು. ಇಂಡಿಯಾದೇಶದ ದರ್ಶನ ಶಾಸ್ತ್ರಗಳಲ್ಲಿ ಅದ್ವೈತ ವೇದಾಂತ ಪ್ರಸ್ಥಾನವು ಬ್ರಹ್ಮತತ್ವದ ಏಕತೆಯನ್ನು ಒತ್ತಿ ಹೇಳುವುದರಿಂದ ಅದು ಮೊದಲು ಹೇಳಿರುವ ವಿಧಾನಕ್ಕೆ ಸೇರುತ್ತದೆ: ಬೌದ್ಧತತ್ವ ಪ್ರಸ್ಥಾನವು ಪರಿವರ್ತನವೊಂದನ್ನೇ ಪರಿಗಣಿಸಿ ಮೂಲಭೂತವಾದ ಐಕ್ಯತೆಯನ್ನು ನಿರಾಕರಿಸುವುದರಿಂದ ಅದು ಎರಡನೆಯ ವಿಧಾನಕ್ಕೆ ಪ್ರತಿನಿಧಿಯಾಗಿದೆ. ಮೊದಲಿನ ಪ್ರಸ್ಥಾನವನ್ನು ಜೈನರು ಬ್ರಹ್ಮ –ಏಕಾಂತವಾದವೆಂದೂ, ಎರಡನೆಯದನ್ನು ಕ್ಷಣಿಕ ಏಕಾಂತವಾದವೆಂದೂ ಕರೆಯುತ್ತಾರೆ.

ಏಕಾಂತವಾದವು ಒಂದನ್ನೇ ಕೇಂದ್ರೀಕರಿಸುತ್ತದೆ. ಏಕಾಂತವಾದದಲ್ಲಿ ಬಹುತ್ವಕ್ಕೆ ಅರ್ಥವಿಲ್ಲ. ಜೈನದರ್ಶನದಲ್ಲಿ ಅನೇಕಾಂತವಾದಕ್ಕೆ ವಿಶೇಷ ಅರ್ಥಗಳಿವೆ. ಮತ್ತು ಈ ವಾದವು ವಿಶಿಷ್ಟವಾಗಿದೆಯೆಂಬುದು ಗಮನಾರ್ಹ.

*ವಿವರಗಳಿಗೆ ನೋಡಿ: ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦*

*ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ ಪುಟ. ೧೪೦*

*ಹರಿದಾಸ ಭಟ್ಟಾಚಾರ್ಯ ೧೯೭೫ ಯುಗಯಾತ್ರೀ ಭಾರತೀಯ ಸಂಸ್ಕೃತಿ ಸಂಪುಟ. ೩ ಪುಟ. ೧೬-೧೯.*

### ೫೨. ಅನೈತಿಕ ಸಂಬಂಧಗಳು

ನಾಗವರ್ಮನ 'ಕರ್ಣಾಟಕ ಕಾದಂಬರಿ'ಯಲ್ಲಿ ಒಂದು ಮಾತು ಹೀಗೆ ಬರುತ್ತದೆ:

*'ಗುರುಜನಮೀಯದೆಯುಂ ಮು*
*ನ್ನೆರೆವಾತನ ನೆಯ್ದಿಯ್ಯೆದೆಯಪ್ಪೊಡೆ ದೋಷಂ'*

*(ನಾರಾಯಣ ಶಾಸ್ತ್ರಿ:ಹ.ವೆ. (ಅನು) ೧೯೭೭. ೩-೧೩೨).*

ವಿವಾಹೇತರ ಲೈಂಗಿಕ ಸಂಬಂಧವು ದೋಷ ಎನ್ನುವ ಈ ಮಾತು ಮೂಲತಃ ನಾಗವವರ್ಮನದೇ ಎಂದು ಹೇಳುವಂತಿಲ್ಲ. ಬಾಣನ ಕಾದಂಬರಿಯ ಕೇಂದ್ರ ಆಶಯವೂ ಇದೇ ಆಗಿದೆ. ಮದುವೆಯಾಗುವ ಮೊದಲೇ ಪ್ರಿಯಕರನನ್ನು ಸೇರುವುದು ಅಪರಾಧ ಎನ್ನುವ ಮನೋಭಾವವು ವೈದಿಕ ಮತದ ಪ್ರಾಬಲ್ಯದಿಂದ ಉಂಟಾದುದು ಎಂದು ತಿಳಿದು ಬರುತ್ತದೆ. ಇದಕ್ಕೆ ಅನುಗುಣವಾಗಿ ನಾಗವರ್ಮನ ಕೃತಿಯು ಹುಟ್ಟಿದುದರಿಂದ ಇಲ್ಲಿ ವಿವಾಹೇತರ ಲೈಂಗಿಕ ಸಂಬಂಧವು ಅಪರಾಧ ಎನ್ನುವ ವಿಚಾರ ಬರುತ್ತದೆ. ಲೈಂಗಿಕ ಸಂಬಂಧವನ್ನು ನೆರೆಯುವುದು ಎಂದು ಕರೆದಿರುವುದು ಗಮನಾರ್ಹ. ನೆರೆಯುವುದು ಎಂದರೆ ಕೊಡುವುದು ಎಂಬ ಅರ್ಥದಲ್ಲಿ ಬಳಕೆಯಾಗಿರುವುದು ಮಾತ್ರವಲ್ಲ. ಅನೈತಿಕ ಸಂಬಂಧವನ್ನೂ ಇದು ಸೂಚಿಸುತ್ತದೆ.

ಪೊನ್ನನ 'ಶಾಂತಿಪುರಾಣ'ದಲ್ಲಿ ಇನ್ನೊಂದು ವಿಶಿಷ್ಟ ಲೈಂಗಿಕ ಸಂಬಂಧದ ಉಲ್ಲೇಖವು ಸಿಗುತ್ತದೆ (ನಾಗರಾಜಯ್ಯ. ಹಂ. ಪ. (ಅನು) ೧೯೮೨. ೬-೭೫, ೮೪): ಅಣ್ಣನ ಹೆಂಡತಿಯೊಂದಿಗೆ ಬಳುವಳಿಯಾಗಿ ಬಂದ ವಸಂತ ಸೇನೆಯನ್ನು ತಮ್ಮನಾದ ಉಪೇಂದ್ರನು ನೆರೆಯುತ್ತಾನೆ. ಇದರಿಂದ ಸಿಟ್ಟುಗೊಂಡ ಅಣ್ಣ (ಇಂದ್ರ) ತಮ್ಮನ ಮೇಲೆ ಯುದ್ಧ ಸಾರುತ್ತಾನೆ. ಯುದ್ಧವನ್ನು ತಡೆದ ಮಣಿಕುಂಡಲನೆಂಬ ಖೇಚರನು ವಸಂತ ಸೇನೆಯು ನಿಮಗಿಬ್ಬರಿಗೂ ತಂಗಿಯಾಗಬೇಕೆಂದು ಹೇಳಿದಾಗ, ಅದು ಹೇಗೆ ಎಂದು ಕೇಳುತ್ತಾರೆ. ಖೇಚರನು ಅವರ ಪೂರ್ವಭವದ ವಿವರಗಳನ್ನು ಹೇಳುತ್ತಾನೆ.

ಈ ಸಂದರ್ಭದಲ್ಲಿ ಕೃತಿಯಲ್ಲಿ ಸೂಚಿತವಾದ ಅಂಶಗಳು ಹೀಗಿವೆ:

೧. ಅಣ್ಣನ ಹೆಂಡತಿಯೊಂದಿಗೆ ಬಳುವಳಿಯಾಗಿ ಬಂದ ದಾಸಿ ಹೆಣ್ಣನ್ನು ತಮ್ಮ ಕೂಡುವುದು. ಪೊನ್ನನು ಈ ಸನ್ನಿವೇಶದಲ್ಲಿ ಹೀಗೆ ಹೇಳುತ್ತಾನೆ: 'ಕೋಟ್ಟುಗ್ಗಿದಿಗೊಳೆ ಸೈರಿಸದುಪೇಂದ್ರನವಳೊಳ್ **ನೆರೆದಂ**' (ಅದೇ. ೬-೭೪, ೭೫). ಈ ಮಾತಿನ ಆಧಾರದಂತೆ ಗಂಡಿನ ಕಾಮದ ಅಪೇಕ್ಷೆಯನ್ನು ಮಾತ್ರವೇ ಕೃತಿಕಾರನು ಗುರುತಿಸುತ್ತಾನೆ. ದಾಸಿಯನ್ನು ಬಳುವಳಿ ಕೊಡುವುದು, ಆಕೆಯನ್ನು ಗಂಡು ಭೋಗಿಸುವುದು ಇಲ್ಲಿ ಕಾಣಿಸುತ್ತದೆ.

೨. ಕೃತಿಯಲ್ಲಿ ಸೂಚಿತವಾದಂತೆ ಅಣ್ಣನು ತಮ್ಮನ ಮೇಲೆ ಆಕ್ರಮಣವನ್ನು ನಡೆಸುತ್ತಾನೆ. ಹೀಗೆ ಆಕ್ರಮಣವನ್ನು ನಡೆಸಲು ಅಣ್ಣನಿಗೆ ಸಹಾಯಕವಾಗಿ ಕೆಲವು ಅಂಶಗಳಿವೆ:

ಅ. ಅವನು ಸೋದರ ಅರಸಿಯನ್ನು ಸೋದರಿಯೆನ್ನದೆ ತಾಯೆನ್ನದೆ ಬಯಸಿ ಕರೆಯುವುದು. (೬-೮೦)

ಆ. ಅಣ್ಣನ ಹೆಂಡತಿಯೊಂದಿಗೆ ವಸಂತ ಸೇನೆಯು ಬಳುವಳಿಯಾಗಿ ಬಂದ ಹೆಣ್ಣು. ಇದರಿಂದ ಆಕೆಯು ಅಣ್ಣನ ಅಧಿಕಾರ ವ್ಯಾಪ್ತಿಗೆ ಸೇರುತ್ತಾಳೆ.

ಇ. ರಾಜ್ಯದಲ್ಲಿ ನಡೆಯುವ ಅನೈತಿಕ ವ್ಯವಹಾರಗಳನ್ನು ರಾಜನಿಗೆ ಪ್ರಶ್ನಿಸುವ ಹಕ್ಕು ಇದೆ.

೩. ಕೃತಿಯಲ್ಲಿ ಉಕ್ತವಾದಂತೆ – ಈ ಘಟನೆಯ ಕೊನೆಯಲ್ಲಿ ಮಣಿಕುಂಡಲನೆಂಬ ಖೇಚರನ ಪ್ರವೇಶವಾಗುತ್ತದೆ. ಈ ಪಾತ್ರದ ಪ್ರವೇಶವು ಕತೆಗೆ ಮುಖ್ಯ ತಿರುವನ್ನು ಕೊಡುತ್ತದೆ. ಈ ಪಾತ್ರದ ಪ್ರವೇಶಕ್ಕಿಂತ ಮೊದಲು ಎಲ್ಲೂ ಸೂಚಿತವಾಗದಿದ್ದ ಅಂಶವು ಈ ಪಾತ್ರದ ಪ್ರವೇಶದೊಂದಿಗೆ ಬೆಳಕಿಗೆ ಬರುತ್ತದೆ: ವಸಂತ ಸೇನೆಯು ಬಳುವಳಿಯಾಗಿ ಬಂದ ಹೆಣ್ಣು ಎನ್ನುವ ಭಾವನೆಯು ಈ ಸಂದರ್ಭದಲ್ಲಿ ಸುಳ್ಳಾಗುತ್ತದೆ. ಆಕೆಯು ಇಂದ್ರ – ಉಪೇಂದ್ರನಿಗೆ ತಂಗಿಯೆನ್ನುವುದನ್ನು ಹೇಳುವುದರ ಮೂಲಕ ಕತೆಗೆ ಮುಖ್ಯ ತಿರುವನ್ನು ಕೊಡಲಾಗಿದೆ. ಈ ಸಂದರ್ಭದಲ್ಲಿ ಬರುವ ಪೂರ್ವಭವದ ವೃತ್ತಾಂತ ಈ ತಿರುವಿಗೆ ಪೂರಕವಾಗಿ ಬರುವ ಅಂಶ.

೪. ಕೃತಿಯು ಇಡಿಯ ಉದ್ದೇಶವನ್ನು ಲಕ್ಷಿಸಿದಲ್ಲಿ ಈ ಘಟನೆಯು ಕೇವಲ ಅನುಷಂಗಿಕ ಮಾತ್ರ. ಧರ್ಮಪರ ತಾತ್ವಿಕ ಚೌಕಟ್ಟು ಉಳ್ಳ ಕೃತಿಗಳಲ್ಲಿ ಈ ರೀತಿಯ ಸಂಬಂಧಗಳು ಸಾಮಾನ್ಯವಾಗಿ ನಿರಾಕರಣೆಯ ಸ್ವರೂಪದಲ್ಲಿರುತ್ತವೆ.

೫. 'ಶಾಂತಿ ಪುರಾಣ'ದಲ್ಲಿ ಬರುವ ಸ್ತ್ರೀಯರ ವಿವಾಹೇತರ ಲೈಂಗಿಕ ಸಂಬಂಧವನ್ನು 'ಅನೈತಿಕತೆ' ಎನ್ನುವ ಅರ್ಥದಲ್ಲಿಯೇ ಗ್ರಹಿಸಲಾಗಿದೆ.

**೫೩. ಅನ್ವಯ**

ಅನ್ವಯವೆಂದರೆ ವಂಶ ಅಥವಾ ಕುಲ. ಅಮೃತದಿಂದ ಅಪ್ಸರಸ್ತ್ರೀಯರ ವಂಶವು ಹುಟ್ಟಿತೆಂದು 'ಕರ್ಣಾಟಕ ಕಾದಂಬರಿ'ಯಲ್ಲಿ ಬರುತ್ತದೆ. (೬-೧) ನಾವು ವಂಶ ಮತ್ತು ಕುಲವನ್ನು ಒಂದೇ ಅರ್ಥದಲ್ಲಿ ಬಳಸುತ್ತೇವೆ. ಆದರೆ ವಂಶವೆಂಬುದಕ್ಕೆ ಸಾಮಾಜಿಕ ಮಾನ್ಯತೆಯು ಒಂದು ರೀತಿಯಲ್ಲಿದ್ದರೆ ಕುಲದ ಸಾಮಾಜಿಕ ಮಾನ್ಯತೆಯು ಮತ್ತೊಂದು ರೀತಿಯಲ್ಲಿರುತ್ತದೆ. ಮಾದಿಗಕುಲ, ಚಾಂಡಾಲಕುಲವೆಂದು ಕರೆಯುತ್ತೇವೆ. ಇಲ್ಲಿ ವಂಶವೆಂಬ ಪದವು ಬಳಕೆಯಲ್ಲಿಲ್ಲ. ಆದರೆ ಬ್ರಾಹ್ಮಣರಲ್ಲಿ ಕುಲ ಪದ್ಧತಿಯಲ್ಲಿ ಗೋತ್ರ ಪದ್ಧತಿಯಿದೆ. ಅದೇ ರೀತಿ ರಾಜರ ಕುರಿತು ಹೇಳುವಾಗ ಅದರ ವಂಶಾವಳಿಗಳನ್ನು ಹೇಳುತ್ತವೆ. ಸಾಮಾನ್ಯವಾಗಿ ಇದು ಶಾಸನಗಳಲ್ಲಿ ಕಂಡು ಬರುತ್ತದೆ. ವಂಶದ ಕುರಿತು ಹೇಳುವಾಗ ಅಗ್ಗಳಿಕೆಯ ಮಾತುಗಳು ಕೂಡಾ ಬರುತ್ತವೆ. ಯಕ್ಷಗಾನದಲ್ಲಿ ಅನ್ವಯವೆಂಬುದನ್ನು ಕುಲವೆಂಬ ಅರ್ಥದಲ್ಲಿಯೇ ಬಳಸಿದ್ದಾರೆ. 'ಕುರುಕುಲಾನ್ವಯ ತಿಲಕ ಬಾಬಾ'. ಇದಕ್ಕೆ ಒಂದು ಉದಾಹರಣೆ.

ವಾಕ್ಯದಲ್ಲಿ ಕರ್ತೃ ಕರ್ಮ ಕ್ರಿಯಾಪದಗಳಿಗೆ ಮತ್ತು ಅವುಗಳ ವಿಶೇಷಣಗಳಿಗಿರುವ ಕ್ರಮವಾದ ಸಂಬಂಧವನ್ನು ಅನ್ವಯವೆಂದು ಕರೆಯುತ್ತಾರೆ.

ಅನ್ವಯವೆಂದರೆ ಹೊಂದಿಕೆ, ಹೊಂದಾವಣೆ, ಸಂಬಂಧ ಅನುಸರಿಸಿ ನಡೆಯುವುದು.

**೫೪. ಅಪರಾಧ**

ವಡ್ಡಾರಾಧನೆಯಲ್ಲಿ ಅಪರಾಧದ ಕುರಿತು ಬರುತ್ತದೆ.

(ಸುಕುಮಾರ ಸ್ವಾಮಿಯ ಕತೆ ೨೦೧೦ ಪುಟ.೧೮)

ರಾಜನು ಜನರ ಅಪರಾಧದ ಪ್ರಮಾಣ ಸ್ವರೂಪಗಳನ್ನು, ಅದರ ದಂಡನೆಯ ತೂಕವನ್ನು ಶಾಸ್ತ್ರದಿಂದ ವಿಮರ್ಶಿಸಿ ನ್ಯಾಯವಾಗಿ ವಿನಿಯೋಗಿಸಬೇಕು ಎಂದು ಮನು ಹೇಳುತ್ತಾನೆ.

ಆ ದಂಡವು ರಾಜನು, ಗಂಡಸು, ನಾಯಕ, ಶಾಸಕ, ಸಕಲ ಧರ್ಮಗಳಿಗೂ ಹೊಣೆ ಆಗಿದೆ. ದಂಡವಿಲ್ಲದೆ ಹೋದರೆ ರಾಜನು ರಾಜನಲ್ಲ. ಇತರ ಅವನ ಪರಿಕರವೂ ವೃಥಾ.

ವಿಚಾರಪೂರ್ವಕ ಕೆಲಸ ಮಾಡುವ ಪ್ರಜ್ಞೆಯಿರುವ ಧರ್ಮ, ಅರ್ಥ, ಕಾಮಗಳ

ಸಾಧನೆಗೆ ನಿಪುಣನಾದ ರಾಜನು ಅಂತಹ ದಂಡವನ್ನು ಪ್ರಯೋಗಿಸಬೇಕು, ಎಂದು ಮನು ಮುಂತಾದ ಧರ್ಮಜ್ಞರು ಹೇಳುತ್ತಾರೆ.

ಹಿಂದೆ ವರ್ಗ ಭೇದಗಳನ್ನು ಪರಿಗಣಿಸದೆ ಇರುವ ಬಣೀಯ ನ್ಯಾಯ ಪದ್ಧತಿಯು ಅನುಷ್ಠಾನದಲ್ಲಿತ್ತು. ಆದರೆ ಈಗ ಸಮುದಾಯವು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ವರ್ಣಗಳಾಗಿ ವಿಂಗಡಗೊಂಡಿತ್ತು. ಆದ್ದರಿಂದ ಧರ್ಮಶಾಸ್ತ್ರಗಳು ಪ್ರತಿಯೊಂದು ವರ್ಣದ ಕರ್ತವ್ಯಗಳನ್ನೂ ಮತ್ತು ವರ್ಣ ವಿಭಜನೆಯ ಆಧಾರದ ಮೇಲಿನ ಪೌರ ಅಪರಾಧ ಕಾಯಿದೆಗಳನ್ನೂ ರೂಪಿಸಿದವು. ವರ್ಣವು ಉನ್ನತವಾದಷ್ಟೂ ಉನ್ನತ ಮಟ್ಟದ ನೈತಿಕ ನಡವಳಿಕೆಯು ಅವರಿಂದ ನಿರೀಕ್ಷಿಸಲ್ಪಟ್ಟಿತು. ಶೂದ್ರರ ಮೇಲೆ ಹಲವು ಹತ್ತು ಅನರ್ಹತೆಗಳು ವಿಧಿಸಲ್ಪಟ್ಟುವು. ಮತಧಾರ್ಮಿಕ ಹಾಗೂ ನ್ಯಾಯಶಾಸ್ತ್ರೀಯ ವಾಗಿ ಅವರ ಹಕ್ಕುಗಳು ಕಸಿಯಲ್ಪಟ್ಟು ಅವರು ಸಮಾಜದ ಅತ್ಯಂತ ಕೆಳ ಹಂತಕ್ಕೆ ತಳ್ಳಲ್ಪಟ್ಟರು. ಅವರು ಉಪನಯನ ವಿಧಿಯನ್ನು ಪಡೆಯುವಂತಿರಲಿಲ್ಲ. ಬ್ರಾಹ್ಮಣರು ಹಾಗೂ ಇತರ ಮೇಲುವರ್ಣಗಳ ವಿರುದ್ಧವಾಗಿ ಅವರು ಮಾಡುವ ಅಪರಾಧಗಳಿಗಾಗಿ ತೀವ್ರತರ ಶಿಕ್ಷೆಗಳನ್ನು ನೀಡುತ್ತಿದ್ದರು. ಪ್ರತಿಯಾಗಿ ಶೂದ್ರರ ವಿರುದ್ಧವಾದ ಅಪರಾಧಕ್ಕೆ ಹಗುರವಾದ ಶಿಕ್ಷೆಗಳನ್ನು ದೊರೆಯುತ್ತಿದ್ದುವು. ಧರ್ಮಶಾಸ್ತ್ರಕಾರರು, ಶೂದ್ರರು ಸೃಷ್ಟಿಕರ್ತನ ಪಾದಗಳಿಂದ ಹುಟ್ಟಿದವರು ಎಂಬ ಕಟ್ಟುಕಥೆಯನ್ನು ಹರಡಿದರು. ಇದರಿಂದಾಗಿ ಮೇಲುವರ್ಣದವರು, ಅವರಲ್ಲಿಯೂ ಮುಖ್ಯವಾಗಿ ಬ್ರಾಹ್ಮಣರು ಶೂದ್ರರ ಸಹವಾಸವನ್ನು ತುಚ್ಛವಾಗಿ ಪರಿಗಣಿಸಿ, ಅವರು ಮುಟ್ಟಿದ ಆಹಾರವನ್ನೂ ಹಾಗೂ ಅವರೊಂದಿಗೆ ವಿವಾಹ ಬಾಂಧವ್ಯವನ್ನೂ ನಿರಾಕರಿಸತೊಡಗಿದರು. ಶೂದ್ರನನ್ನು ಉನ್ನತ ಸ್ಥಾನಗಳಿಗೆ ನೇಮಿಸುವಂತಿರಲಿಲ್ಲ. ಅದಕ್ಕಿಂತ ಮಿಗಿಲಾಗಿ ಶೂದ್ರನು ಜೀತಗಾರನಾಗಿ, ಕಸುಬುಗಾರ ನಾಗಿ ಹಾಗೂ ಕೃಷಿ ಕಾರ್ಮಿಕನಾಗಿ ದ್ವಿಜರ ಅಂದರೆ ಮೇಲು ವರ್ಣಗಳವರ ಸೇವೆ ಮಾಡಬೇಕೆಂದು ಹೇಳಲಾಯಿತು. ಈ ಸಂಬಂಧವಾಗಿ ಜೈನ ಮತ್ತು ಬೌದ್ಧಮತಗಳು ಸಹ ಅವರ ಪರಿಸ್ಥಿತಿಯನ್ನು ಸುಧಾರಿಸಲಿಲ್ಲ. ಆ ಹೊಸ ಮತಧರ್ಮಗಳ ಮಠಗಳಿಗೆ ಅವರುಗಳು ಸೇರಿಕೊಳ್ಳಬಹುದಾಗಿತ್ತಾದರೂ ಸಾಮಾನ್ಯರ ಸ್ಥಿತಿ ಹೀನವಾಗಿಯೇ ಉಳಿಯಿತು. ಗೌತಮ ಬುದ್ಧನು ಬ್ರಾಹ್ಮಣರ, ಕ್ಷತ್ರಿಯರ ಹಾಗೂ ಗೃಹಪತಿಗಳ ಅಥವಾ ವೈಶ್ಯರ ಸಮಾವೇಶಗಳಲ್ಲಿ ಪಾಲುಗೊಂಡನೆಂಬುದು ಹೇಳಲ್ಪಟ್ಟಿದ್ದರೂ, ಶೂದ್ರರ ಸಮಾವೇಶದ ಪ್ರಸ್ತಾಪವೇ ಬರುವುದಿಲ್ಲ. ಅಪರಾಧಗಳಿಗೂ ಶಿಕ್ಷೆಗಳಿದ್ದವು:

ಪೌರ ಹಾಗೂ ಅಪರಾಧ ಕಾಯಿದೆಗಳನ್ನು ರಾಜನ ನಿಯೋಗಿಗಳು ಜಾರಿ ಮಾಡುತ್ತಿದ್ದರು. ಅವರು ವಿಧಿಸುತ್ತಿದ್ದ ಶಿಕ್ಷೆಗಳು ಚಾವಟಿಯೇಟು, ಶಿರಚ್ಛೇದನ, ನಾಲಗೆ ಹರಿಯುವುದು ಮುಂತಾದ ಒರಟು ಹಾಗೂ ಕ್ರೂರವಾದಂತಹವು. ಹಲವು ಸಂದರ್ಭಗಳಲ್ಲಿ ಪಾತಕ ಕೃತ್ಯಗಳಿಗೆ ನೀಡುತ್ತಿದ್ದ ಶಿಕ್ಷೆ ಸೇಡಿನ ಮನೋಭಾವದ್ದಾಗಿತ್ತು.

*ವಿವರಗಳಿಗೆ ನೋಡಿ: ಆರ್.ಎಸ್. ಶರ್ಮ ೧೯೯೭ ಪ್ರಾಚೀನ ಭಾರತ ಪುಟ. ೧೨೬-೧೨೭*

*ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ ೧೯೯೯ ಶ್ರೀವತ್ಸ ನಿಘಂಟು ಪುಟ. ೨೪-೨೫*

ಎಚ್. ತಿಪ್ಪೇರುದ್ರಸ್ವಾಮಿ ೨೦೦೭ ಕರ್ನಾಟಕ ಸಂಸ್ಕೃತಿ ಸಮೀಕ್ಷೆ ಪುಟ. ೧೮೭
ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೭-೧೬

**೫೫. ಅಪಸಿದ್ಧಾಂತ**

*ಪರಲೋಕಮೆತ್ತಲಾನುಮಾದಪ್ಪುದೋ ಆಗದೋ ಎಂಬ ಸಂದೆಯಮುಳ್ಳೊಡಂ ಬುದ್ಧಿವಂತರಪ್ಪರ್ ಪಾಪಮಂ ಮಾಡಲಾಗದು; ಪರಲೋಕಮೆತ್ತಲಾನುಮಿಲ್ಲದಿರ್ದೊಡಂ ಅಧರ್ಮಮಂ ಬಿಟ್ಟುದಱಿಂದದಾವ ಹಾನಿಯಪ್ಪುದು? ಏಗೆಯ್ದುಂ ಪರಲೋಕಮಿಲ್ಲವೆಂಬ ನಾಸ್ತಿಕಂ ಕಿಡುವಂಎಂಬುದು ತತ್ವವಾಕ್ಯಮುಂಟಪ್ಪುದಱಿಂ ಪರಮಿಲ್ಲೆಂಬವನಾ* ***ಅಪಸಿದ್ಧಾಂತ****ಮನೆ ಪ್ರಮಾಣಮಂ ಮಾಡಿ ಕೇವಲ ಪಾಪಪರನಪ್ಪಂ; ಪರಮುಂಟಾದ ಪಕ್ಷಂ ನಿಷ್ಫಲಂಕಿಡುಗುಂ: ಧರ್ಮಪರನಪ್ಪಂ ಪರಮುಳ್ಳೊಡಮಿಲ್ಲದೊಡಂ ಕಿಡಂ,.................*

*(ಕರ್ನಾಟಕ ಪಂಚತಂತ್ರ, ಭೇದ ಪ್ರಕರಣ, ೩೧ ವಚನ)*

ಪರಲೋಕ ಎಲ್ಲಿಯಾದರೂ ಸಿಕ್ಕಿತೋ ಇಲ್ಲವೋ ಎಂಬ ಸಂದೇಹವಿರುವುದಾದರೆ ಬುದ್ಧಿವಂತರಾದವರು ಪಾಪಕರ್ಮಗಳಲ್ಲಿ ನಿರತರಾಗಿರಬಾರದು. ಪರಲೋಕವು ಇಲ್ಲದಿದ್ದರೂ ಅಧರ್ಮವನ್ನು ತ್ಯಜಿಸುವುದರಿಂದ ಆಗುವ ಹಾನಿ ಏನು? ಏನು ಮಾಡಿದರೂ ಪರಲೋಕವಿಲ್ಲ ಎನ್ನುವ ನಾಸ್ತಿಕನು ಕೆಡುವನು. ಪರವುಂಟಾದಲ್ಲಿ ನಿಷ್ಫಲವಾಗಿ ಕೆಡುವುದು. ಧರ್ಮಪರನಾದವನು ಪರವಿದ್ದರೂ ಇಲ್ಲದಿದ್ದರೂ ಕೆಡನು (ಗದ್ಯಾನುವಾದ, ಗುಂಡ್ಮಿಚಂದ್ರಶೇಖರ ಐತಾಳ) ಪಂಚತಂತ್ರವು ಸಂದೇಹವಾದಿಗಳನ್ನು ಮತ್ತು ಪರಲೋಕವಿಲ್ಲವೆನ್ನುವವರನ್ನು (ನಾಸ್ತಿಕರನ್ನು) ಅಪಸಿದ್ಧಾಂತಿಗಳು ಎಂದು ಕರೆಯುತ್ತದೆ. ಒಂದು ಸಿದ್ಧಾಂತಕ್ಕೆ ವಿರುದ್ಧವಾದುದನ್ನು ಅಪಸಿದ್ಧಾಂತವೆಂದು ಕರೆಯಲಾಗಿರುವುದು ಗಮನಾರ್ಹ.

**೫೬. ಅಪಹರಣ ವಿವಾಹ**

'ಪಂಪ ಭಾರತ'ದಲ್ಲಿ ಬರುವ ಅಂಬೆ, ಅಂಬಿಕೆ, ಅಂಬಾಲಿಕೆಯರ ವಿವಾಹದ ಕ್ರಮವನ್ನು ನೋಡಬಹುದು. (ಅನಂತರಂಗಾಚಾರ್ ಎನ್. (ಅನು) ೧೯೭೭. ಪು.೯೪)

ಹೆಣ್ಣಿನ ಅಪಹರಣದ ಮೂಲಕ ವಿವಾಹ ನಡೆಯುವುದು ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಕಂಡುಬರುವ ಮತ್ತೊಂದು ರೀತಿಯ ವಿವಾಹ ಕ್ರಮವಾಗಿದೆ. ಅಪಹರಣ ವಿವಾಹ ಕ್ರಮದಲ್ಲಿಯೂ ಎರಡು ರೀತಿಯ ವಿವಾಹ ಕ್ರಮಗಳನ್ನು ಕವಿಗಳು ವರ್ಣಿಸಿದ್ದಾರೆ.

೧. ಒಂದು ಮುಖಾಮುಖಿಯಾದ ಹೋರಾಟದ ಮೂಲಕ ಹೆಣ್ಣನ್ನು ಅಪಹರಿಸುವುದು. ಹೆಣ್ಣಿನ ತಂದೆ ಮತ್ತು ತಾಯಿಯರ ಎದುರಿನಲ್ಲಿಯೇ ಈ ಅಪಹರಣವು ನಡೆಯುತ್ತದೆ.

'ವ್ಯಾಸಭಾರತ'ದಲ್ಲಿ ಕೂಡಾ ಈ ರೀತಿಯ ವಿವಾಹ ಪದ್ಧತಿಯ ಬಗೆಗೆ ಉಲ್ಲೇಖವಿದೆ. ಇದರ ಒಟ್ಟು ಆಶಯವಿರುವುದು ಹೆಣ್ಣನ್ನು ಗಂಡು ಸೆಳೆದು ತರುತ್ತಾನೆ ಎಂಬುದರಲ್ಲಿ

ಸಾಮಾಜಿಕ ಮಾನವ ಶಾಸ್ತ್ರಜ್ಞರು ಹೇಳುವ ಅಪಹರಣ ವಿಧಾನದ ಮದುವೆಯ ರೂಪವಿದೆಂದು ಹೇಳಬಹುದಾಗಿದೆ.

ಈ ವಿಧಾನವು ನಾನಾ ಜನಾಂಗದಲ್ಲಿ ಬಿಹಾರದ ಹೋಗಳಲ್ಲಿ, ಮಧ್ಯಪ್ರದೇಶದ ಬಿಲ್ ಮತ್ತು ಗೋಂಡಾ ಜನಾಂಗಗಳಲ್ಲಿ ಇಂದಿಗೂ ಉಳಿದುಕೊಂಡು ಬಂದಿದೆ. ಗೊಂಡರಲ್ಲಿ ಕನ್ಯೆಯ ತಂದೆ ತಾಯಿಯರು ಈ ಅಪಹರಣಕ್ಕೆ ಅನುಮತಿ ಕೊಡುತ್ತಾರೆ. ಮತ್ತು "ಅನಂತರ ಕನ್ಯೆ ಮತ್ತು ಯುವಕನ ಸಂಬಂಧಿಕರ ಮಧ್ಯೆ ತೋರಿಕೆಯ ಹೊಡೆದಾಟ, ಚೀರಾಟ ನಡೆಯುತ್ತವೆ. ಅಣಕಯುದ್ಧ, ವಧು ಅಳುವುದು, ಶೋಕ ತಪ್ತಳಾಗಿ ವರನ ಮನೆಗೆ ಹೋಗುವುದು. ಇವೆಲ್ಲವೂ ಈ ವಿವಾಹದ ಅಂಗವಾಗಿದೆ. (ನಂಜಮ್ಮಣ್ಣಿ: ಎಂ.೧೯೭೭ ಪು.೭೦) ಆದರೂ ಇಂತಹ ಕಡೆ ಅಕ್ರಮ ಪ್ರವೇಶವನ್ನು ಗಂಡು ಮಾಡುತ್ತಾನೆ. ಪುರುಷ ಪ್ರಧಾನ ಸಮಾಜದಲ್ಲಿ ಈ ರೀತಿಯ ವಿವಾಹ ಕ್ರಮವು ಜರುಗುತ್ತದೆ.

೨. ಇನ್ನೊಂದು ರೀತಿಯ ವಿವಾಹ ಕ್ರಮದಲ್ಲಿ ಹೆಣ್ಣಿನ ತಂದೆಗಾಗಲೀ ತಾಯಿಗಾಗಲೀ ತಿಳಿದಿರುವುದಿಲ್ಲ. ಇದರಲ್ಲಿಯೂ ಎರಡು ವಿಧಗಳನ್ನು ಕಾಣಬಹುದು.

ಅ. ಹೆಣ್ಣನ್ನು ಒಲಿಸಿ ಅಪಹರಿಸುವುದು.

ಆ. ಹೆಣ್ಣನ್ನು ಬಲಾತ್ಕರಿಸಿ ಅಪಹರಿಸುವುದು.

ಅ. ಹೆಣ್ಣನ್ನು ಒಲಿಸಿ ಅಪಹರಿಸುವುದಕ್ಕೆ ಕನ್ನಡ ಸಾಹಿತ್ಯದಲ್ಲಿ ಹೇರಳ ಉದಾಹರಣೆಗಳು ಸಿಗುತ್ತವೆ.

ತಾತ್ವಿಕವಾಗಿ, ಇದನ್ನು ಕನ್ನಡದ ಕವಿಗಳು ಒಪ್ಪಿಕೊಂಡಿದ್ದಾರೆ ಕೂಡ ಉದಾಹರಣೆಗೆ, ಪೊನ್ನನ ಶಾಂತಿ ಪುರಾಣದಲ್ಲಿ ಬರುವ ದಮಿತಾರಿಯ ಮಗಳಿನ ಅಪಹರಣವನ್ನು ಗಮನಿಸಬಹುದು. (ನಾಗರಾಜಯ್ಯ ಹಂ.ಪ. (ಅನು) ೧೯೮೨ ೩-೭೬) ಈ ರೀತಿಯ ಉಲ್ಲೇಖಗಳನ್ನು ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಇನ್ನಿತರ ಕಡೆಗಳಲ್ಲಿಯೂ ಕಾಣಬಹುದಾಗಿದೆ. ಇಂತಹ ಕಡೆಯೂ ಗುಂಪಿನ ಹೊರಗಣ ಸಂಬಂಧವು ಏರ್ಪಡುತ್ತದೆಯಾದರೂ ಈ ರೀತಿಯ ಅಪಹರಣಗಳಲ್ಲಿ ಹೆಣ್ಣಿನ ಒಪ್ಪಿಗೆಯೂ ಇರುತ್ತದೆ.

ಆ. ಹೆಣ್ಣಿನ ಒಪ್ಪಿಗೆಯಿಲ್ಲದೆ ನಡೆಯುವ ಅಪಹರಣವು ಮತ್ತೊಂದು ರೀತಿಯ ವಿವಾಹದ

ಕ್ರಮವಾಗಿದೆ. ಕವಿಗಳು ಇದನ್ನು ತಾತ್ವಿಕವಾಗಿ ಸಮರ್ಥಿಸಿಕೊಳ್ಳುವುದಿಲ್ಲ.

ಈ ರೀತಿಯ ವಿವಾಹದ ಮೂಲರೂಪವನ್ನು 'ಎಂಗೆಲ್ಸ್ ಹೀಗೆ ವಿಶ್ಲೇಷಿಸುತ್ತಾನೆ'

'ಸ್ತ್ರೀಯರನ್ನು ಅಪಹರಿಸಿಕೊಂಡು ಹೋಗಿ ವಿವಾಹವಾಗುವ ಪದ್ಧತಿಯು ಇಲ್ಲಾಗಲೇ ವೈಯಕ್ತಿಕ ವಿವಾಹ ಪದ್ಧತಿಗೆ ಪರಿವರ್ತನೆಯಾದ ಲಕ್ಷಣವನ್ನು ಹೊರಗೆಡಹುತ್ತದೆ. ಈ ವೈಯಕ್ತಿಕ ವಿವಾಹ ಪದ್ಧತಿಯು ಕೊನೆಯ ಪಕ್ಷ ಯುಗ್ಮ ವಿವಾಹದ ರೂಪದಲ್ಲಿ ಅಸ್ತಿತ್ವಕ್ಕೆ ಬಂದಿತೆನ್ನಬಹುದು. ಯುವಕನೊಬ್ಬ ತನ್ನ ಮಿತ್ರರ ಸಹಾಯದಿಂದ ಯುವತಿಯನ್ನು ಅಪಹರಿಸಿಕೊಂಡು ಹೋಗುತ್ತಾನೆ. ಅಥವಾ ಆಕೆಯೊಂದಿಗೆ ಪಲಾಯನ

ಮಾಡುತ್ತಾನೆ. ಅನಂತರ ಅವರೆಲ್ಲರೂ ಆಕೆಯೊಂದಿಗೆ ಒಬ್ಬರ ನಂತರ ಒಬ್ಬರು ಸಂಭೋಗಿಸುತ್ತಾರೆ. ಆದರೆ ಅನಂತರ ಆಕೆಯು ಈ ಅಪಹರಣಕ್ಕೆ ಕಾರಣನಾದ ಯುವಕನ ಪತ್ನಿಯೆಂದು ಭಾವಿಸಲ್ಪಡುತ್ತಾಳೆ. (ಎಂಗೆಲ್ಸ್, ಮೂಲ)

**೫೭. ಅಪಹಾರತೂರ್ಯ**

*"ಆಗಳೆರಡುಂ ಪಡೆಯ ನಾಯಕರಪ**ಹಾರ ತೂರ್ಯ**ಂಗಳಂ ಬಾಜಿಸಿ"*

*(ಪಂಪ ಭಾರತ ೧೦-೧೨೪)*

*"**ಅಪಹಾರ ತೂರ್ಯ**ಮಂ ಪೊಯಿಸಿ ಪಡೆಗಳೆರಡುಂ ರಣೋರ್ವಿಯಿಂದಂ"*

*(ಪಂಪ ರಾಮಾಯಣ ೧೩-೧೧೧)*

ಯುದ್ಧವನ್ನು ನಿಲ್ಲಿಸಲು ಸೂಚಿಸುವ ಕೊಂಬಿನ ಶಬ್ದ ಎಂದು ಪಂಪ ಭಾರತದಲ್ಲಿ ಬರುತ್ತದೆ.

ಯುದ್ಧವನ್ನು ನಿಲ್ಲಿಸಲು ಕೂಡಾ ಕೆಲವು ಸಂಕೇತಗಳಿದ್ದವು. ಕೊಂಬಿನ ಶಬ್ದ ಯುದ್ಧ ನಿಲ್ಲಿಸಲು ಕೊಡುವ ಒಂದು ಸೂಚನೆ. ಯುದ್ಧದ ಪ್ರಾರಂಭ ಮತ್ತು ಯುದ್ಧದ ಅಂತ್ಯಕ್ಕೆ ಕಹಳೆಯನ್ನೋ  ಶಂಖವನ್ನೋ ಊದುವುದು ಸೂಚನೆಗಳಾಗಿವೆ. ಕೃಷ್ಣ ಯುದ್ಧ ಪ್ರಾರಂಭದಲ್ಲಿ ಪಾಂಚಜನ್ಯವನ್ನು ಊದಿರುವುದು ಸುಪ್ರಸಿದ್ಧವಾಗಿದೆ. ಭಗವದ್ಗೀತೆಯಲ್ಲಿಯೂ ಇದರ ಉಲ್ಲೇಖ ಬರುತ್ತದೆ. "ಆಗಳ್ ಕುರುಧ್ವಜಿನಿಯುಮನೇಕ ಶಂಖ ಕಾಹಳ ಭೇರಿ ಪಣವ ಝಲ್ಲರೀ ಮೃದಂಗ, **ತೂರ್ಯ**ಂಗಳಿಂಕಾಳಾಂತಕ ವಿಕಟಾಟ್ಟಹಾಸಂಗಳೆಂಬಂತೆ ಮೊಟಿಗೆ ಮಲೆದು ಬಂದೊಡ್ಡಿ ನಿಂದಾಗಳ್". (೧೧-೩೩ವ) "ಆಗಳೆರಡುಂ ಪಡೆಗಳಪ**ಹಾರ ತೂರ್ಯ**ಂಗಳಂ ಬಾಜಿಸಿ". (೧೧-೨೪) ಶಂಖ: ಕಹಳೆ: ಭೇರಿ: ಪಣವ: ಝಲ್ಲರೀ ಮೃದಂಗಗಳು ಯುದ್ಧ ಸಮಯದಲ್ಲಿ ಬಳಕೆಯಲ್ಲಿದ್ದವು ಎಂಬುದು ಗಮನಾರ್ಹ.

*ವಿವರಗಳಿಗೆ ನೋಡಿ: ಡಾ. ಆರ್. ಶೇಷಶಾಸ್ತ್ರಿ ೨೦೦೪ ಕರ್ನಾಟಕದ ವೀರಗಲ್ಲುಗಳು ಪುಟ. ೨೧೯*

**೫೮. ಅಪುತ್ರಸ್ಯಗತಿರ್ನಾಸ್ತಿ**

*ಅದಲ್ಲದೆಯುಮಿಂದುವರಂ ದೇವರ ಮನಂ ನೊಂದಪುದೆಂದು ಮನಂದೋಱದಿರ್ಪಱಿಂದು ಮಹಾಕಾಳದೇವರಂ ಪೂಜಿಸುತ್ತಮಿರ್ಪಲ್ಲಿ ಭಾರತಕಥಾಶ್ರವಣದೊಳ್ ಪುನ್ನಾಮೋ ನರಕಾತ್ತ್ರಾಯತ ಇತಿ ಪುತ್ರಃ **ಅಪುತ್ರಾಣಾಂಕಿಲ ಗತಿರ್ನಾಸ್ತಿ** ನವಾಸಂತಿ ಲೋಕಾಃ ಶುಭಾಃ ಎಂಬೀ ವಾಕ್ಯಾರ್ಥಮಂ ಕೇಳ್ದು (ಕರ್ಣಾಟಕ ಕಾದಂಬರಿ, ೨-೪೬ ವ.)*

ಸತ್ತ ಮೇಲೆ ಮಗನು ತಂದೆ-ತಾಯಿಯರಿಗೆ ತಿಥಿ ಕರ್ಮಾದಿಗಳನ್ನು ಮಾಡುತ್ತಾನೆ. ಆಗ ಅವನು ಪಿಂಡ ಪ್ರಧಾನ ಮಾಡುತ್ತಾನೆ. ಪಿಂಡ ಪ್ರಧಾನ, ಮತ್ತು ತಿಲಾಂಜಲಿಗಳಿಂದ ಪಿತೃ-ಪಿತಾಮಹರು ಸ್ವರ್ಗ ಸೇರುತ್ತಾರೆ ಎಂಬ ನಂಬಿಕೆಯಿದೆ. ಪುತ್ರನು ಪಿಂಡ ಪ್ರಧಾನ ಮತ್ತು ತಿಲಾಂಜಲಿಯಿಂದ ಪಿತೃಗಳಿಗೆ ಗತಿಯನ್ನು ಕಾಣಿಸುವುದರಿಂದ ಅವನನ್ನು

ಪಿತೃಗಳಿಗೆ ಗತಿಯನ್ನು ಕಾಣಿಸುವವನು ಎಂಬರ್ಥದಲ್ಲಿಯೇ ಕರೆಯಲಾಗಿದೆ. ಇನ್ನೊಂದರ ಪ್ರಕಾರ (ಗರುಡ ಪುರಾಣ) 'ಪುಂ' ಎಂಬ ನರಕದಿಂದ ಪಾರು ಮಾಡುವವನೇ ಪುತ್ರ.

*ವಿವರಗಳಿಗೆ ನೋಡಿ: ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ*

**೫೯. ಅಪ್ರಾಸುಕ**

*ತಳಿಯೆ ಕೆಸರಾದ ಧರೆ ಪೂ*
*ಗಳ ತುರುಗಲೊಳೆಸೆಯೆ ಪೊಟಲಿದ**ಪ್ರಾಸುಕ**ಮೆಂ ।*
*ದೊಳಪುಗದೆ ನಿಯಮದಿಂ ನಿ*
*ರ್ಮಳಚರಿತಂ ಚರಿಗೆವೊಕ್ಕನರಸನ ಬೀಡಂ ॥ (ಆದಿಪುರಾಣ. ೫-೧೦)*

ಪ್ರಾಸುಕ=ಶುದ್ಧ ಅಪ್ರಾಸುಕ=ಅಶುದ್ಧ

ಜೀವಿಗಳು ಉತ್ಪನ್ನವಾಗಿರುವ ಹೂ, ಹಣ್ಣು, ನೀರು ಮುಂತಾದ ಪದಾರ್ಥಗಳುಳ್ಳದ್ದು; ಅಶುದ್ಧವಾದ ಇಂತಹ ಪ್ರದೇಶಗಳಲ್ಲಿ ಮುನಿಗಳು ನಡೆದಾಡುವುದಿಲ್ಲ.

ಮೇಲೆ ಅಪ್ರಾಸುಕವೆಂಬುದರ ವಿವರಣೆ ಕೊಡಲಾಗಿದೆ. ಪಂಪನು ಹೇಳುವಂತೆ ಕೆಸರಾದ ಭೂಮಿಯ ಮೇಲೆ; ಹೂಗಳು ಇರುವ ಪ್ರದೇಶದಲ್ಲಿ ನಡೆಯದೆ ಪೊಟಲಿದ ಪ್ರಾಸುಕಮೆಂಬ ಕಾರಣದಿಂದ ಕ್ರಮವಾಗಿ ನಿರ್ಮಳ ಚರಿತನಾದ ಆತನು ಚರಿಗೆಗಾಗಿ ಅರಸನ ಬೀಡನ್ನು ಹೊಕ್ಕನು. ಸಾಮಾಜಿಕವಾಗಿ ಪವಿತ್ರ-ಅಪವಿತ್ರವೆಂಬ ಸಂಗತಿಯನ್ನು ಇದು ನಿರೂಪಿಸುತ್ತದೆ.

**೬೦. ಅಪ್ರಿಯ ಹಿತವಚನ**

*ಅರಸಿಂಗೆ ಎಲ್ಲಾ ಹೊತ್ತು ಹಿತವಂ ನುಡಿವ ಮನುಷ್ಯರ್ ಹಲವರುಂಟು;* ***ಅಪ್ರಿಯವಾಗಿ****ಯುಂ ಹಿತವಂ ನುಡಿವವನುಂ ಕೇಳಬಲ್ಲವನುಂ ದುರ್ಲಭಂ. (ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ, ಶ್ಲೋಕ ೬೩ ವಚನ)*

ಅರಸನಿಗೆ ಅಪ್ರಿಯವಾದರೂ ಹಿತವನ್ನು ನುಡಿಯುವವರು ವಿರಳ. ಅರಸರಿಗೆ ಎಲ್ಲಾ ಹೊತ್ತು ಹಿತವನ್ನು ನುಡಿಯುವ ಮನುಷ್ಯರು ಹಲವರಿದ್ದಾರೆ.

ಅರಸನಿಗೆ ಅಪ್ರಿಯವಾದರೂ ಹಿತವನ್ನು ನುಡಿಯಬೇಕು. ಹಿತವು ಕಹಿಯೆನಿಸಿದರೂ ಅದರ ಅಂಗೀಕಾರ ಅಗತ್ಯ. ಹಿತ-ಅಹಿತ ಎಂಬುದು ಮನೋವ್ಯಾಪಾರಕ್ಕೆ ಸಂಬಂಧಿಸಿದ್ದು. ಪ್ರಿಯ ವಚನವು(ಹೊಗಳುವಿಕೆ) ಎಲ್ಲರಿಗೂ ಹಿತವುಂಟು ಮಾಡುತ್ತದೆ. ಅಪ್ರಿಯ ವಚನವು ಅಹಿತವೆನಿಸುತ್ತದೆ. ಎರಡನೆಯದು ದೈಹಿಕ ಹಿತದ ಪ್ರಶ್ನೆ. ದೈಹಿಕವಾಗಿ ಹಿತವಾಗುವುದು ರುಚಿ ಇತ್ಯಾದಿಗಳಿಂದ. ಇದರಲ್ಲಿ ಜಿಹ್ವಾಚಾಪಲ್ಯವೂ ಒಂದು. ನಾಲಿಗೆಯ ಹಿತವು ದೇಹಕ್ಕೆ ಹಿತವುಂಟು ಮಾಡುವುದು ಎಂಬುದಕ್ಕೆ ಯಾವ ಸಾಕ್ಷಿಯೂ ಇಲ್ಲ. ಆದುದರಿಂದಲೇ ಇಂದ್ರಿಯ ಸುಖಗಳನ್ನು ಗೆಲ್ಲಬೇಕೆಂದು ವೇದಾಂತವು ಹೇಳುತ್ತದೆ.

'ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್ ನ ಬ್ರೂಯಾತ್ ಸತ್ಯಮಪ್ರಿಯಂ'

ಎಂಬ ಉಕ್ತಿಯುಂಟು. ಸತ್ಯವು ಯಾವಾಗಲೂ ಕಹಿಯಾಗಿರುತ್ತದೆಯೆಂಬ ಸಾಮಾಜಿಕ ಸಂಹಿತೆಯನ್ನು ಇದು ಪ್ರತಿಪಾದಿಸುತ್ತದೆ.

*ವಿವರಗಳಿಗೆ ನೋಡಿ: ಎನ್. ಬಾಲಸುಬ್ರಹ್ಮಣ್ಯ ೧೯೭೩ ವೇದಾಂತಸಾರ*

**೬೧. ಅಪ್ಸರೆಯರು**

*ಎಂದು **ದೇವಾಪ್ಸರೋವೃಂದಮನ್**................ ಎಂದು ಪಂಪ ಭಾರತದಲ್ಲಿ ಬರುತ್ತದೆ.*

*(ಪಂಪ ಭಾರತ ೭-೮೧ವ)*

ಅಪ್ಸರೆ; ಸಂಸ್ಕೃತದ 'ಅಪ್ಸರಸ್' ಶಬ್ದದಿಂದ ಬಂದಿದೆ. ಅಪ್ಸರೆಯರು ದೇವತಾಸ್ತ್ರೀಯರಲ್ಲಿ ಒಂದು ಪಂಗಡ. ಅದಕ್ಕಾಗಿಯೇ ಪಂಪ ದೇವಾಪ್ಸರೋವೃಂದಮನ್ ಎಂದು ಬಳಸಿದ್ದಾನೆ. ಇವರು ಸುರಗಣಿಕೆಯರಾಗಿದ್ದಾರೆ. ರಂಭೆ, ಊರ್ವಶಿ, ಮೇನಕೆ, ತಿಲೋತ್ತಮೆ, ಘೃತಾಚಿ ಮೊದಲಾದವರನ್ನು ಹೆಸರಿಸಬಹುದು.

ಅಪ್ಸರೆಯರ ಕುರಿತು ಶಂಬಾ ಜೋಶಿಯವರು ಹೀಗೆ ಹೇಳುತ್ತಾರೆ.

ಋಗ್ವೇದದಲ್ಲಿ ಊರ್ವಶಿಯ ಉಲ್ಲೇಖವಿದೆ. ಇವಳು 'ಅಪ್-ಸರೆ' ಎಂಬ ವೇದಕಾಲದ ಸಂಕೇತವೆ ಮಹಾಭಾರತದಲ್ಲಿ 'ನಾಗಕನ್ಯೆ'ಯ ರೂಪ ತಾಳುತ್ತದೆ. ಅಲ್ಲದೆ, ಪುರಾಣಕಥೆಯ ಮೇರೆಗೆ ಅಪ್-ಸರೆ: ಊರ್ವಶಿ, ನಾರಣ ಕನ್ಯೆ! ನಾರಣ ದೈವತ ನಾಗ ಸ್ವರೂಪದ ಬಗೆಗಿನ ಸಂದೇಹಕ್ಕೆ ಅವಕಾಶವೇ ಇಲ್ಲ. (ಶಂಬಾ ಜೋಶಿ ೧೯೯. ಸಂ.೪ ಪು. ೧೮೫)

ಅಪ್ಸರೆಯರು ಬಹಳ ಸುಂದರಿಯೆಂದೂ ಹೇಳುತ್ತಾರೆ. ಅನೇಕ ಋಷಿಯರ ತಪೋಭಂಗ ಮಾಡಿದವರು ಅಪ್ಸರೆಯರು. ಮೂಲತಃ ಅಪ್ಸರೆಯರಿಗೆ ಒಬ್ಬ ಗಂಡನೆಂದಿಲ್ಲ. ಅಪ್ಸರೆಯರು ಮಾತೃಪ್ರಧಾನ ಕುಟುಂಬ ವ್ಯವಸ್ಥೆಗೆ ಸೇರಿದವರು ಎಂದು ಹೇಳಲಾಗುತ್ತದೆ. ಅನಂತರ ಪಿತೃಪ್ರಧಾನ ವ್ಯವಸ್ಥೆಯು ಬಂದಾಗ ಮಾತೃಪ್ರಧಾನ ದೇವತೆಯರ ಪ್ರಾಬಲ್ಯವು ಕಡಿಮೆಯಾಯಿತು.

*ವಿವರಗಳಿಗೆ ನೋಡಿ: ಡಾ. ಟಿ.ವಿ.ವೆಂಕಟಾಚಲಶಾಸ್ತ್ರೀ ೧೯೯ ಶ್ರೀವತ್ಸ ನಿಘಂಟು ಪುಟ. ೨೬*

*ಡಿ.ಡಿ. ಕೊಸಾಂಬಿ ೨೦೦೩ ಪುರಾಣ ಮತ್ತು ವಾಸ್ತವ*

*Devi Prasad Chattopadyaya 1981 Lokayata.*

**೬೨. ಅಬ್ರಹ್ಮಣ್ಯಂ**

*ಈಯಲ್ ಇಜಿಯಲ್ ಶರಣ್ಬುಗೆ*
*ಕಾಯಲ್ ಕ್ಷತ್ರಿಯರೆ ಬಲ್ಲರಬ್ರಹ್ಮಣ್ಯಂ*
*ಭೋಯೆನಲುಂ ಬ್ರಾಹ್ಮಣರವಿ*
*ಧಾಯೆನಲುಂ ಬಲ್ಲರಿಜಿಯಲವರೆಂತಜಿಿವರ್ (ಗದಾಯುದ್ಧ ೨-೧೬)*

ಅಬ್ರಹ್ಮಣ್ಯಂ ಎಂಬ ಶಬ್ದವನ್ನು ಬ್ರಾಹ್ಮಣರು ಆಪತ್ಕಾಲದಲ್ಲಿ ಬಳಸುತ್ತಾರೆ. ಇವನು

ಕೊಲ್ಲಲ್ಪಡತಕ್ಕವನಲ್ಲ ಎಂದು ಅರ್ಥ.

ದ್ರೋಣನು ಬ್ರಾಹ್ಮಣನಾಗಿ ಕ್ಷತ್ರಿಯ ವೃತ್ತಿಯನ್ನವಲಂಬಿಸಿದ್ದು ಕ್ಷತ್ರಿಯ ಧರ್ಮಕ್ಕೇ ಅವಮಾನ ಮಾಡಿದಂತಾಯಿತೆಂದು ದುರ್ಯೋಧನ ಹೇಳುತ್ತಿದ್ದಾನೆ. ದಾನ, ಯುದ್ಧ, ಶರಣಾಗತ ರಕ್ಷಣೆ ಮಾಡಲು ಕ್ಷತ್ರಿಯರೇ ಬಲ್ಲರು. ಬ್ರಾಹ್ಮಣರು ಅಬ್ರಹ್ಮಣ್ಯಂ (ಕೊಲ್ಲಕೂಡದು, ಅನುಚಿತವಾದದ್ದು) ಮಹಾಪಾಪ ಎಂದಲ್ಲ ಮೊರೆಯಿಡುವುದಕ್ಕೆ ಬಲ್ಲರೇ ಹೊರತು ಯುದ್ಧ ಮಾಡಲು ಅಸಮರ್ಥರು ಎನ್ನುತ್ತಾನೆ. ರನ್ನನಿಗೆ ವೈದಿಕರ ಮೇಲಿದ್ದ ಆಕ್ರೋಶವನ್ನು ಇದು ಸಂಕೇತಿಸುತ್ತದೆ.

ಅಬ್ರಹ್ಮಣ್ಯಮೆಂದು ಬಿಡೆ ಪುಯ್ಯಲ್ಚಲ್...........(ಕರ್ಣಾಟಕ ಕಾದಂಬರಿ, ೫–೧೬೮)

"ಅಬ್ರಹ್ಮಣ್ಯಮವಧ್ಯೋಕ್ತೌ" (ಅಮರ ಕೋಶ)

"ವರ್ಣದ ಮೊದಲಲ್ಲಿ ಉಚ್ಚನಾಗಿ ಬ್ರಾಹ್ಮಣನಿದ್ದರೂ ಅವನ ವೀರತ್ವದ, ಪೌರುಷದ ಬಗ್ಗೆ ಒಂದು ರೀತಿಯ ತಿರಸ್ಕಾರ ಭಾವ ಅಂದಿನ ಜನತೆಗೆ ಇದ್ದಂತೆ ತೋರುತ್ತದೆ. ಅಂದ ಮಾತ್ರಕ್ಕೆ ಬ್ರಾಹ್ಮಣರು ಯಾರೂ ಯುದ್ಧ ಮಾಡುತ್ತಿರಲಿಲ್ಲ ಎಂಬ ಅರ್ಥವಲ್ಲ. "ಬ್ರಾಹ್ಮಣರು ಕೈಯಲ್ಲಿ ಕತ್ತಿಗಳನ್ನು ಹಿಡಿಯುತ್ತಿದ್ದರು. ದಾನಕ್ಕೆ ಯುದ್ಧಕ್ಕೆ ಕ್ಷತ್ರಿಯರೇ ಸಮರ್ಥರು, "ಅಬ್ರಹ್ಮಣ್ಯಂ ಭೋಃ' ಎನ್ನಲು 'ಅವಿಧಾ' ಎಂದು ಕೂಗಿಕೊಳ್ಳಲು ಮಾತ್ರ ಬ್ರಾಹ್ಮಣರು ಸಮರ್ಥರು ಎಂಬ ರನ್ನನ ದುರ್ಯೋಧನನ ಹೇಳಿಕೆ ಎಲ್ಲ ಕಾಲಕ್ಕೆ ಅನ್ವಯಿಸುವುದಿಲ್ಲ.

ಮಾಣೆಯಣಂ ಕಯ್ಪೆಸೊರೆಯ ಕುಡಿಯೇಂ ಮಿಡಿಯೇಂ

(ಸಾಹಸ ಭೀಮ ವಿಜಯ ೩–೬೧)

ಕಹಿಸೋರೆಯು ಕುಡಿಯಾದರೇನು ಮಿಡಿಯಾದರೇನು ಎರಡೂ ಕಹಿಯೇ. ಇದು ಗಾದೆ ಮಾತು. ರನ್ನನು ಈ ನುಡಿಗಟ್ಟನ್ನು ಇಲ್ಲಿ ಬಳಸಿಕೊಂಡಿದ್ದಾನೆ. ಕೆಟ್ಟ ಸ್ವಭಾವದವರನ್ನು ಕುರಿತು ಆಡುವ ಚೊಕ್ಕ ಗಾದೆಯಾಗಿ ಬಿಟ್ಟಿದೆ ಈ ಮಾತು. 'ಕಯ್ಪೆ' ತುಳುವಿನಲ್ಲಿ ಇಂದಿಗೂ ಕಯ್ಪೆಯಾಗಿಯೇ ಉಳಿದಿದೆ. ಇದು ಕೂಡಾ ರನ್ನನು ಬ್ರಾಹ್ಮಣರ ಕುರಿತು ವ್ಯಕ್ತಪಡಿಸುವ ಅಭಿಪ್ರಾಯವಾಗಿದೆ.

ನಿಘಂಟುವಿನ ಪ್ರಕಾರ ಅವಧ್ಯ, ಕೊಲ್ಲಲಾಗದ ವ್ಯಕ್ತಿ ಬ್ರಾಹ್ಮಣ. ಬ್ರಾಹ್ಮಣರ ಶ್ರೇಷ್ಠತೆಯನ್ನು ಸಾರಲು ಈ ವಾಕ್ಯ ಹುಟ್ಟಿರಬೇಕು.

*ವಿವರಗಳಿಗೆ ನೋಡಿ: ಡಾ. ಆರ್. ಶೇಷಶಾಸ್ತ್ರಿ ೨೦೦೪ ಕರ್ನಾಟಕದ ವೀರಗಲ್ಲುಗಳು ಪುಟ. ೩೦.*

### ೬೩. ಅಭಕ್ಷ್ಯ

*ಪಂಚಮಹಾಪಾತಕಂಗಳಂಗೆಯ್ದವರುಮಗಮ್ಯಾಗನಮಪೇಯಪೇಯಮ***ಭಕ್ಷ್ಯಾ***...... ಮೊದಲಾಗೊಡೆಯ ಪೊಲ್ಲಮೆಗಳೊಳ್ ನೆಗಟ್ಟಿ ಘೋರಮುಂ ಪಿರಿಯುವುಮಪ್ಪ ಪಾಪಂಗಳಂಗೆಯ್ದೇಟಿನೆಯ ನರಕದೊಳ್*.......... (ಡಿ.ಎಲ್.ಎನ್.೨೦೦೯ ಪು.೧೪೦).

ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯ, ಪಾನೀಯ, ಅತಿರಥ, ಹೋಳಿಗೆ, ಲಡ್ಡು, ಜಿಲೇಬಿ, ಅಪ್ಪಂ ಭಕ್ಷ್ಯಗಳು.

ಅಭಕ್ಷ್ಯವೆಂದರೆ ತಿನ್ನಬಾರದ ಪದಾರ್ಥಗಳು – ಜೇನು: ಅತ್ತಿಹಣ್ಣು, ಅರಳಿಹಣ್ಣು, ಆಲದಹಣ್ಣು, ಹಲಸಿನ ಹಣ್ಣು, ಬಸರಿಮರದ ಹಣ್ಣು. ಇವುಗಳನ್ನು ಉಪಯೋಗಿಸುವುದು. ಜೈನಧರ್ಮದ ಪ್ರಕಾರ ಇವು ಪಾಪ ಮತ್ತು ಹೊಲಸು. ಮುಂದೆ ಮುನಿ ಅಥವಾ ಸಾಧುವಾಗಲಿರುವ ಜೈನ ನೈಷ್ಠಿಕ ಶ್ರಾವಕರು ಇಂತಹ ಪಾಲ್ಮರದ ಹಣ್ಣುಗಳನ್ನು ಸೇವಿಸಬಾರದೆಂದು ವಿಧಿಸಲಾಗಿದೆ. ಸೇವಿಸಬಹುದಾದುದು ಸೇವಿಸಲಾಗದ್ದು ಎಂಬ ವರ್ಗೀಕರಣವು ಇಲ್ಲಿ ಗಮನಾರ್ಹ.

*ವಿವರಗಳಿಗೆ ನೋಡಿ: ಪಾಪ–ಪುಣ್ಯ*

**೬೪. ಅಭಯ**

ಭಯ ಎಂದರೆ ಹೆದರಿಕೆ. ಅಭಯವೆಂದರೆ ಹೆದರಿಕೆಯಿಲ್ಲದಿರುವುದು. "ಅಭಯವ ನೀಡೆ" ಎಂಬಂಥ ವಾಕ್ಯಗಳು ಹಳೆಗನ್ನಡ ಕಾವ್ಯಗಳಲ್ಲಿ ಹೇರಳವಾಗಿ ಬಂದಿವೆ. ಆಧ್ಯಾತ್ಮಿಕ ಸಾಧನೆಯಿಂದ ಆಂತರಿಕ – ಬಾಹ್ಯ ಹೆದರಿಕೆಯು ಇಲ್ಲವಾಗುತ್ತದೆ. ಅಭಯ ಮುದ್ರೆಯು ಸಂಕೇತವಾಗಿದೆ. ಆಶೀರ್ವದಿಸುವಂತೆ ಕೈಮುದ್ರೆ ಸೂಚಿಸುವುದು ಅಭಯದ ಸಂಕೇತ ಅದ್ವೈತ ವೇದಾಂತದ ಪ್ರಕಾರ ಅಭಯವೆಂದರೆ ಮೋಕ್ಷ, ಅಂಗೈಯನ್ನು ಆಶೀರ್ವದಿಸುವಂತೆ ಬಳಸುವ ಮುದ್ರೆಯು ಅಭಯವನ್ನು ಸೂಚಿಸುತ್ತದೆ. ದೈವ, ದೇವರು, ಋಷಿಗಳು ಈ ಮುದ್ರೆಯನ್ನು ಬಳಸುತ್ತಾರೆ. ಯಾವುದೇ ರೀತಿಯ ಭಯವು ಅಗತ್ಯವಿಲ್ಲ. ಭಯಕ್ಕೆ ತಳಹದಿಯಿಲ್ಲ ಎಂದು ಅಭಯವು ಹೇಳುತ್ತದೆ.

ದಾನಗಳಲ್ಲಿ ಅಭಯ ದಾನವೂ ಒಂದೆಂಬುದನ್ನು ಗಮನಿಸಬೇಕು. ಅಭಯದ ಮುದ್ರೆಯು ಸಾಮಾನ್ಯವಾಗಿ ಮೂರ್ತಿ ಶಿಲ್ಪದಲ್ಲಿ ಕಾಣಬಹುದು. ಅಭಯವು ಶಂಕೆಯನ್ನು ದೂರ ಮಾಡುತ್ತದೆ. ಎರಡನೆಯದಾಗಿ ಅಭಯ ನಮ್ಮಲ್ಲಿ ಸುರಕ್ಷತೆಯ ಭಾವನೆಯನ್ನು ನೀಡುತ್ತದೆ. ವಿಧಿವಾದಿಗಳು ದೈವ/ದೇವತೆಯರ ಅಭಯವನ್ನು ನಿರೀಕ್ಷಿಸುತ್ತಾರೆ. ಇದಕ್ಕೆ ಬೇಕಾದ ಆಚರಣೆಯ ವಿಧಿಗಳಾದ ಪೂಜೆ, ಉಪವಾಸವ್ರತ, ಇತ್ಯಾದಿಗಳನ್ನು ಅವಲಂಬಿಸುತ್ತಾರೆ. ಒಂದರ್ಥದಲ್ಲಿ ನಿರಾಹಾರ ಸೇವನೆಯೂ ಸಮಾಧಿ ಮರಣವು ವಿಧಿವಾದವೇ. ಯಾರು ವಿಧಿವಾದವನ್ನು ನಿರಾಕರಿಸುತ್ತಾರೋ ಅವರನ್ನು ನಾಸ್ತಿಕರು ಎಂದು ಕರೆಯುತ್ತಾರೆ. ನಾಸ್ತಿಕರು ಮೂಲತಃ ನಂಬುವುದು ಆತ್ಮಸ್ಥೈರ್ಯವನ್ನು ಎಂಬುದನ್ನು ಗಮನಿಸಬೇಕು. ಮಗುವಿಗೆ ತಾಯಿಯ ತೊಡೆಯ ಮೇಲೆ ಮಲಗಿಕೊಂಡಿರುವುದು ಸುರಕ್ಷಿತಭಾವನೆಯನ್ನು ಕೊಡುತ್ತದೆ. ಆದುದರಿಂದ ಎಲ್ಲಾ ಸ್ತ್ರೀದೇವತೆಯರನ್ನು ಅಮ್ಮ ಎಂದು ಕರೆಯುತ್ತಾರೆ.

ವಿವರಗಳಿಗೆ ನೋಡಿ: ಬಾದುಬ್ಬೆ; ಮಾತೃದೇವತೆಯರು.

**೬೫. ಅಭವ್ಯ**

*ಎಂದು ಬೆಸಗೊಂಡೊಡೆ **ಆತನಭವ್ಯನಲ್ಲಂ ಭವ್ಯನೇ**..................*

*(ಆದಿಪುರಾಣ. ೨–೩೫.ವ)*

ಇದು ಜೈನ ಕಾವ್ಯಗಳಲ್ಲಿ ಅನೇಕ ಕಡೆ ಬಂದಿದೆ. ಅಭವ್ಯನೆಂದರೆ ಯಾರು ಜೈನಸದ್ಗೃಹಸ್ಥನಲ್ಲವೋ ಅವನಿಗೆ ಮೋಕ್ಷ ಸಿಗಲಾರದು ಎಂದು ಜೈನಧರ್ಮ ಹೇಳುತ್ತದೆ. ಸುಕುಮಾರಸ್ವಾಮಿಯ ಕಥೆಯಲ್ಲಿ ಅಗ್ನಿಭೂತಿ ಹೇಳುವ 'ಇದೇಂಭವ್ಯಜೀವನೋ ಅಭವ್ಯನೋ' ಎಂಬ ಮಾತಿನಲ್ಲಿ ವ್ಯಕ್ತವಾಗುತ್ತದೆ. ಸಿದ್ಧಸ್ಥಿತಿಗೇರದ ಜೀವವೇ ಅಭವ್ಯಜೀವ.

ಸಂಸಾರದಿಂದ ಬಿಡುಗಡೆಯಿಲ್ಲದಂತೆ, ಸಮ್ಯಕ್ತ್ವವು ದೊರೆಯದ ಮಟ್ಟಿಗೆ ಕರ್ಮದ ಹೊರೆ ಹೊತ್ತ ಜೀವ.

ಭವ–ಅಭವ್ಯ; ಹಿಂಸೆ–ಅಹಿಂಸೆ; ನ್ಯಾಯ–ಅನ್ಯಾಯ ಹೀಗೆ ಜೋಡಿ ಪದಗಳು ಬೇಕಾದಷ್ಟು ನಮಗೆ ಸಿಗುತ್ತವೆ. ಭವ್ಯ ಎಂದರೆ ದಿವ್ಯತೆಯೆಂಬ ಅರ್ಥವಿದೆ. ಅಭವ್ಯ ಜೀವದ ಪರಿಕಲ್ಪನೆಯು ಕೂಡಾ ಜೈನಧರ್ಮದ್ದೇ. ಕರ್ಮ ಬಂಧನದಿಂದ ನರಳುತ್ತಿರುವ ಜೀವಿಗೆ ಅಭವ್ಯವೆಂದು ಕರೆಯುತ್ತಾರೆ. ಸ್ತ್ರೀಗೆ ಭವ್ಯೆ ಎಂದು ಕರೆಯುತ್ತಾರೆ. ಅತ್ತಿಮಬ್ಬೆಯು ಆಸನ್ನ ಭವ್ಯೆ ಎಂದು ರನ್ನ ಕರೆಯುತ್ತಾನೆ. ಅಂದರೆ ಮೋಕ್ಷಕ್ಕೆ ಹತ್ತಿರಳಾದವಳು ಎಂದರ್ಥ.

ವಿವರಗಳಿಗೆ ನೋಡಿ : ಕರ್ಮ.

**೬೬. ಅಭಾವ**

ಅಸ್ತಿತ್ವದಲ್ಲಿರುವುದು: ಗೈರುಹಾಜರಿ, ನಿರಾಕರಣೆ, ಏನೂ ಆಗದಿರುವುದು, ಏನು ಅಲ್ಲದಿರುವುದು.

೧. ನ್ಯಾಯ, ವೈಶೇಷಿಕ, ಭಟ್ಟಾಮೀಮಾಂಸಾ, ದ್ವೈತ ವೇದಾಂತದಲ್ಲಿ ಅಸ್ತಿತ್ವಗಳಿಗೆ ಬೇರೆ ಬೇರೆ ರೂಪಗಳಿರುತ್ತವೆ. ಅವುಗಳು ವರ್ಗೀಕರಣಗಳಿಗೆ ಗುರಿಯಾಗುತ್ತದೆ. ಬೌದ್ಧ ಪಂಥದಲ್ಲಿ, ಪ್ರಭಾಕರ ಮೀಮಾಂಸೆಯಲ್ಲಿ ವೇದಾಂತದಲ್ಲಿ ಅಭಾವದ ಕುರಿತ ಚರ್ಚೆಗಳು ಬರುತ್ತದೆ.

೨. ಅಸ್ತಿತ್ವದಲ್ಲಿ ಇಲ್ಲದಿರುವಿಕೆಯು ಮೂರು ರೀತಿಯಲ್ಲಿರುತ್ತದೆ.

ಅ) ಸಂಸರ್ಗ ಅಭಾವ – ಮೊದಲು ಅಸ್ತಿತ್ವದಲ್ಲಿ ಇಲ್ಲದಿರುವುದರ ಅಭಾವ.

ಆ) ಪ್ರಾಧ್ವಂಶ ಅಭಾವ – ಅಸ್ತಿತ್ವ ಚಾಂಚಲ್ಯತೆ,

ಇ) ಅತ್ಯಂತ ಅಭಾವ – ಯಾವುದೂ ಇಲ್ಲದಿರುವುದು.

ಇವು ಮೂರು ಸಂಸರ್ಗ ಅಭಾವಕ್ಕೆ ಸೇರಿರುತ್ತದೆ. ಮತ್ತೊಂದು ರೀತಿಯ ಅಭಾವವಿದೆ. ಅನೋನ್ಯಭಾವ ಅಂದರೆ ಪರಸ್ಪರ ಸಂಬಂಧ ಸಹಯೋಗ ಇಲ್ಲದಿರುವುದ ರಿಂದ ಅನ್ಯೋನ್ಯ ಅಭಾವ ಹುಟ್ಟಿಕೊಳ್ಳುತ್ತದೆ. ಅಭಾವ ಎನ್ನುವ ಪದವು ಈಗಲೂ ಇದೇ ಅರ್ಥದಲ್ಲಿ ಬಳಕೆಯಾಗುತ್ತದೆ.

ಎಲ್ಲ ನಿಷೇಧಾತ್ಮಕ ಸಂಗತಿಗಳನ್ನೂ ಒಳಗೊಳ್ಳುವ ಪದಾರ್ಥ "ಅಭಾವ". 'ಭಾವ'ಕ್ಕಿಂತ ಭಿನ್ನವಾಗಿ 'ಅಭಾವ'ವುಂಟೆಂಬುದನ್ನು ಅಲ್ಲಗಳೆಯುವಂತಿಲ್ಲ. ಒಂದು ವಸ್ತು ಯಾವುದೋ ಒಂದು ಸಮಯದಲ್ಲಿ ಎಲ್ಲಿಯೋ ಒಂದು ಕಡೆ ಇರುವುದಿಲ್ಲವೆನ್ನುವುದೂ ಮತ್ತೊಂದು ವಸ್ತು ಅಲ್ಲಿರುವುದು ಎಷ್ಟು ನಿಜವೋ ಅಷ್ಟೇ ನಿಜ. ನಾಲ್ಕು ಬಗೆಯಾದ ಅಭಾವಗಳಿಗೆ

– 'ಪ್ರಾಗಭಾವ', 'ಪ್ರಧ್ವಂಸಾಭಾವ', 'ಅತ್ಯಂತಾಭಾವ' ಮತ್ತು 'ಅನ್ಯೋನ್ಯಾಭಾವ', ಒಂದು ವಸ್ತುವಿನ ಉತ್ಪತ್ತಿಗೂ ಮುಂಚೆ ಕಾರಣದಲ್ಲಿ ಕಾರ್ಯದ ಪ್ರಾಗಭಾವ. ಉದಾಹರಣೆಗೆ – ಕಾರ್ಯ ಹುಟ್ಟುವುದಕ್ಕೂ ಮುಂಚೆ ಕಾರಣದಲ್ಲಿ ಕಾರ್ಯದ ಪ್ರಾಗಭಾವವಿರುತ್ತದೆ. ಉತ್ಪತ್ತಿಯ ನಂತರ ವಸ್ತು ನಾಶವಾಗಿಬಿಟ್ಟಾಗ ಉಂಟಾಗುವ ಅಭಾವ 'ಪ್ರಧ್ವಂಸಾಭಾವ', ಉದಾಹರಣೆಗೆ – ಗಡಿಗೆಯನ್ನೊಡೆದಮೇಲೆ ಉಂಟಾಗುವ ಗಡಿಗೆಯ ಅಭಾವ, ಎರಡು ವಸ್ತುಗಳ ನಡುವೆ ಯಾವ ಕಾಲದ್ದೂ ಸಂಸರ್ಗವೇ ಇಲ್ಲವಾದರೆ 'ಅತ್ಯಂತಾಭಾವ', ಉದಾಹರಣೆಗೆ – ಗಾಳಿಯ ಒಳಗೆ ರೂಪದ ಅಭಾವ, ಪರಸ್ಪರವಾದ ಅಭಾವ 'ಅನ್ಯೋನ್ಯಾಭಾವ'. ಒಂದು ವಸ್ತು ಮತ್ತೊಂದು ವಸ್ತುವಿಗಿಂತ ಬೇರೆಯಾಗಿರುವಾಗ, ಅವು ಪರಸ್ಪರವಾಗಿ ಒಂದನ್ನೊಂದು ವ್ಯವಚ್ಛೇದ ಮಾಡುತ್ತವೆ. ಒಂದು ಇನ್ನೊಂದಾಗಿ ಇರುವುದಿಲ್ಲವೆಂಬುದು ಎರಡಕ್ಕೂ ಅನ್ವಯಿಸುತ್ತದೆ. ಆಕಳು ಕುದುರೆಗಿಂತ ಭಿನ್ನ. ಇದರರ್ಥ – ಆಕಳು ಕುದುರೆಯಾಗಿ ಇರುವುದಿಲ್ಲ: ಕುದುರೆ ಆಕಳಾಗಿ ಇರುವುದಿಲ್ಲ. ನ್ಯಾಯ–ವೈಶೇಷಿಕ ಪಂಥದಲ್ಲಿ ಈ ರೀತಿಯ ಅಭಿಪ್ರಾಯ ವ್ಯಕ್ತವಾಗಿದೆ.

ಅಭಾವ–ಅನುಪಲಬ್ಧಿ–ಕಾಣದಿರುವುದು. ಇದು ಇತರ ಐದು ಪ್ರಮಾಣಗಳ ಅಭಾವ. ಅಭಾವ ಜ್ಞಾನಕ್ಕೆ ವಸ್ತುವಿನ ಅಭಾವವೇ ವಿಷಯ. ಅದರಲ್ಲಿ ಇಂದ್ರಿಯ ಸಂನಿಕರ್ಷವೂ ಇಲ್ಲ. ಅಭಾವವನ್ನು ಪ್ರಭಾಕರನು ಸ್ವತಂತ್ರಪದಾರ್ಥವನ್ನಾಗಿ ಅಂಗೀಕರಿಸುವುದಿಲ್ಲ. ಅಭಾವ ಕೇವಲ ಅಧಿಕರಣ (ಆಶ್ರಯ) ರೂಪವಾದ್ದರಿಂದ ಅದು ಅನುಪಲಬ್ದಿ ಜ್ಞಾನಕ್ಕೆ ಕಾರಣವೆಂದು ಒಪ್ಪುವುದಿಲ್ಲ. ಕುಮಾರಿಲನು ಅಭಾವವನ್ನು ಬೇರೆ ಪದಾರ್ಥವೆಂದು ಭಾವಿಸಿ ಅದನ್ನು 'ಅನುಪಲಬ್ಧಿ ತಿಳಿಸುತ್ತದೆಯೆನ್ನುತ್ತಾನೆ. ಅಭಾವವನ್ನು (ಇಂದ್ರಿಯಗಳ ಮೂಲಕ) ಕಾಣಬಹುದೆಂಬ ನೈಯಾಯಿಕ ಮತವು ಅವನಿಗೆ ಒಪ್ಪಿಗೆಯಿಲ್ಲ ಅಂದ ಮೇಲೆ ಭಾವವಸ್ತುಗಳ ಜ್ಞಾನವನ್ನು ಉಂಟುಮಾಡುವ ಮೊದಲು ಐದು ಪ್ರಮಾಣಗಳು ಭಾವಪ್ರಮಾಣಗಳು ಅಭಾವ ವಸ್ತುವನ್ನು ತೋರಿಸುವುದರಿಂದ ಅನುಪಲಬ್ಧಿ ಅಭಾವ ಪ್ರಮಾಣವಾಗುತ್ತದೆ. ಸಾಂಖ್ಯ ತತ್ವಶಾಸ್ತ್ರದಲ್ಲಿ ತುಂಬಾ ಸುಪ್ರಸಿದ್ಧನಾದ ಪ್ರಭಾಕರನ ನಿಲುವಿದು. ಇದಕ್ಕೆ ಶಂಕರರು ಉತ್ತರವನ್ನು ಕೊಟ್ಟಿರುವುದು ಗಮನಾರ್ಹ.

*ವಿವರಗಳಿಗೆ ನೋಡಿ: ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦*
*ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ ಪುಟ. ೨೩೮, ೨೭೮*
*ಮಹೇಶ ಅಡಕೋಳಿ ೧೯೯೨ ಅನ್ನಂಭಟ್ಟ ವಿರಚಿತ ತರ್ಕಸಂಗ್ರಹ*

**೬೭. ಅಭಿಚಾರ**

*"........ಅಭಿಚಾರ ಕ್ರಿಯಾಕ್ರೂರ"ವೆಂದು ಕರ್ಣಾಟಕ ಕಾದಂಬರಿಯಲ್ಲಿ ಬರುತ್ತದೆ.*
*(ಕರ್ಣಾಟಕ ಕಾದಂಬರಿ ೩–೧೦೩ ವ)*

*"ವಿವಿಧ ನವಪ್ರಸೂನಫಳಪುಣ್ಯನದೀಜಳ ನೂತರತ್ನಪಲ್ಲವನಿವಹಂಗಳಿಂದೆಸೆವ ಪೊಂಗಳಸಂಗಳನೆತ್ತಿ ಸುತ್ತುಮುತ್ಸವದೊಳೆ ಬಂದು ಗೋಪವನಿತಾನಿಕರಂ*

*ಮಿಸಿಸಲ್ಲವತ್ಸಧೇನುವಿನಡಿಯೊಳ್ ವಿಲಾಸವತಿ ಮೀವಳನಾಕುಲ ಗೋಕುಲಂಗಳೊಳ್. ಸಲೆ ನಿಲೆ ಬೇವ ಗುಗ್ಗುಳದ ಕರ್ವೊಗೆಯಿಂದಮುಗುರ್ವನಾಳ್ದು ಕತ್ತಲಿಸುವ ಚಂಡಿಕಾಭವನದೊಳ್ ಧವಳಾಂಶುಕೆ ಶುದ್ದಮೂರ್ತಿ ನಿಶ್ಚಳತರಮಪ್ಪ ಭಕ್ತಿಯಿನುಪೋಷಿತೆಯಾಗಿ ಕುಶೋಪಧಾನಮಂಗಳ ವಸುಧಾತಳೀಶಯನಸುವ್ರತಮಂ ಲಲಿತಾಂಗಿ ತಾಳ್ದಿದಳ್ ಪತಿಲಿಖಿತಮಂಡಲಸ್ಥಿತೆ ಕೃತಾಷ್ಟ ದಿಗ್ದೇವತಾರ್ಚನಪ್ರಕರೆ ದೃಢವ್ರತೆ ಬಹುಳ ಚತುರ್ದಶಿಯೊಳ್ ಚತುಷ್ಪಥಸ್ಥಾನವಿಧಿಯನಿರುಳೊಳ್ ತಳೆದಳ್ ತಿಲಪಾತ್ರಪ್ರಕರಂಗಳಂ ಕುಡುವಳಶ್ವತ್ಥಾದಿ ಭೂಜಂಗಳಂ ಬಲವರ್ಪಳ್ ಬಲಿಭುಗ್ಜಜಕ್ಕೆ ಬಲಿಯಂ ತಾನಿಕ್ಕುವಳ್ ಮಾತೃಮಂಡಳಮಂ ಪೂಜಿಸುವಳ್ ಪ್ರಸಿದ್ಧಮಿವು ಲೋಕಕ್ಕೆಂಬನಾಗ್ರಹದಂಗಳೊಳಾಮಾನಿನಿ ಮಂಗಳಾಚರಣದಿಂ ಮೀವಳ್ ಮಹೋತ್ಸಾಹದಿಂ." (ಕರ್ಣಾಟಕ ಕಾದಂಬರಿ, ೨-೬೪, ೬೫, ೬೬, ೬೭)*

ಬಳಿಕ ವಿಲಾಸವತಿಯು ನಾನಾ ವಿಧವಾದ ಹೂವುಗಳಿಂದಲೂ, ಹಣ್ಣುಗಳಿಂದಲೂ, ಪುಣ್ಯಕರವಾದ ನದೀಜಲಗಳಿಂದಲೂ ಹೊಸ ರತ್ನಗಳಿಂದಲೂ ಚಿಗುರುಗಳಿಂದಲೂ ಶೋಭಿಸುವ ಸುವರ್ಣಕಳಶಗಳನ್ನು ಎತ್ತಿ ಸುತ್ತಲೂ ಗೊಲ್ಲರ ಹಳ್ಳಿಗಳಲ್ಲಿ ಕರುವಿನೊಂದಿ ಗಿರುವ ಗೋವಿನ ಅಡಿಯಲ್ಲಿ ಸ್ನಾನ ಮಾಡಿದಳು. ಆ ಆಚರಣೆಯು ಈಗಲೂ ನಡೆಯುತ್ತದೆಯೆಂದು ಹೇಳುತ್ತಾರೆ.

ಅವಿಚ್ಛಿನ್ನವಾಗಿ ಉರಿಯುತ್ತಿರುವ ಗುಗ್ಗುಳದ ಕಪ್ಪು ಹೊಣೆಯಿಂದ ಅತಿಶಯವನ್ನು ಪಡೆದು ಕತ್ತಲಾಗಿರುವ ಚಂಡಿಕಾದೇವಾಲಯದಲ್ಲಿ ಸ್ನಾನದಿಂದ, ಪರಿಶುದ್ಧವಾದ ಶರೀರವುಳ್ಳವಳಾಗಿ ಬಿಳಿಯ ಸೀರೆಯನ್ನುಟ್ಟುಕೊಂಡು ನಿಚ್ಚಟವಾದ ಭಕ್ತಿಯಿಂದ ಕೂಡಿದವಳಾಗಿ ಉಪವಾಸ ಮಾಡಿ ದರ್ಭೆಯನ್ನು ಹಾಸಿರುವ ಶುಭಕರವಾದ ನೆಲದಲ್ಲಿ ಮಲಗುವ ವ್ರತವನ್ನು ಕೋಮಲಾಂಗಿಯಾದ ರಾಣಿಯು ಮಾಡಿದಳು. ದರ್ಭೆಯಿಂದ ನೆಯ್ದಿರುವ ಚಾಪೆಯ ಮೇಲೆ ಈಗಲೂ ಮಲಗುವ ರೂಢಿಯಿದೆ. ಅದು ಶ್ರೇಷ್ಠವೆಂದು ಹೇಳುತ್ತಾರೆ.

ಕೃಷ್ಣಪಕ್ಷದ ಚತುರ್ದಶಿಯ ರಾತ್ರಿಯಲ್ಲಿ ಗಂಡನಿಂದ ಬರೆಯಲ್ಪಟ್ಟ ದುಂಡುಗೆರೆ (ಮಂಡಲ)ಯ ಒಳಗೆ ಕುರಿತು ಅಷ್ಟದಿಕ್ಪಾಲಕರಿಗೆ ವಿಶೇಷ ಪೂಜೆಯನ್ನು ಮಾಡಿ ನಾಲ್ಕು ಬೀದಿ ಸೇರುವ ಚೌಕಾಕಾರದಲ್ಲಿ ಸ್ನಾನ ಮಾಡುವ ನೋಹಿಯನ್ನೂ ಮಾಡಿದಳು. ಇದು ವಾಮಾಚಾರದ ಕ್ರಿಯೆಗಳನ್ನು ಸೂಚಿಸುತ್ತವೆ.

ತಿಲಪಾತ್ರೆಯನ್ನು ಬ್ರಾಹ್ಮಣರಿಗೆ ದಾನ ಮಾಡಿದಳು. ಅಶ್ವತ್ಥವೇ ಮೊದಲಾದ ಪವಿತ್ರ ವೃಕ್ಷಗಳಿಗೆ ಪ್ರದಕ್ಷಿಣೆ ಮಾಡಿದಳು. ಕಾಗೆಗಳಿಗೆ ಬಲಿಯನ್ನು ಹಾಕುತ್ತಿದ್ದಳು. ಬ್ರಾಹ್ಮೀ, ಮಾಹೇಶ್ವರೀ ಮೊದಲಾದ ಸಪ್ತಮಾತೃಕೆಗಳ ಗುಡಿಗಳಿಗೆ ಹೋಗಿ ಬರುತ್ತಿದ್ದಳು. ಬಂಜೆತನವನ್ನು ಪರಿಹರಿಸುವ ವಿಷಯದಲ್ಲಿ ಹೆಸರುವಾಸಿಯಾದ ನಾಗರ ಮಡುವುಗಳಲ್ಲಿ ಸ್ನಾನ ಮಾಡಿದಳು. ಎಳ್ಳು ಶನಿಯ ಪರಿಹಾರಾರ್ಥವಾಗಿ. ನಾಗಪೂಜೆ ಪುತ್ರಜನನಕ್ಕಾಗಿ.

"ಮತ್ತಂ ಗೋರೋಚನಾರಚಿತ ಭೂರ್ಜಪತ್ರಗರ್ಭರಕ್ಷಾಮಣಿಗಳಂ ತಾಳ್ದಿಯುಂ

ಓಷಧಿಸೂತ್ರಚಯಮಂ ತಳೆದುಂ ಉಪಶ್ರುತಿಗಳಂಕೇಳ್ದುಮಧ್ವಂಗಳೊಳ್‌ಜಂಬುಕಂಗಳ್ಗೆ ಮಾಂಸಬಲಿ ಸಮನ್ವಿತೋಪಹಾರಂಗಳಂ ಮಾಡಿಸಿಯುಮಿಂತನೇಕವಿಧದಿಂ ವಿಳಾಸವತಿಮಹಾದೇವಿ ಪುತ್ರೋತ್ಪತ್ತಿನಿಮಿತ್ತಂ ಪಲವು ದಿವಸಮಾಚರಿಸುತ್ತಮಿರ್ಪುದು ಮೊಂದುದಿವಸಂ........." (ಕರ್ಣಾಟಕ ಕಾದಂಬರಿ ೨-೬೮ ವ.)

ಮತ್ತು ಗೋರೋಚನದಿಂದ ಬರೆಯಲ್ಪಟ್ಟ ಭೂರ್ಜಪತ್ರವನ್ನಿಟ್ಟಿರುವ ಯಂತ್ರದ ತಾಯಿತಗಳನ್ನು ಕಟ್ಟಿಕೊಂಡಳು ಮತ್ತು ಮೂಲಿಕೆಗಳನ್ನು ಕಟ್ಟಿರುವ ಮಂಗಳ ಸೂತ್ರವನ್ನು ಕೈಗೆ ಕಟ್ಟಿಸಿಕೊಂಡಳು. ಉಪಾಸಕರನ್ನು ಕರೆಸಿ ಭವಿಷ್ಯವನ್ನು ಕೇಳಿದಳು. ದಾರಿಯಲ್ಲಿ ನರಿಗಳಿಗೆ ಮಾಂಸಬಲಿಯಿಂದ ಕೂಡಿದ ಆಹಾರವನ್ನು ಇಕ್ಕಿಸಿದಳು. ಹೀಗೆ ಮಕ್ಕಳಾಗು ವುದಕ್ಕೆ ಸಾಧಕವಾದ ಬಗೆಬಗೆಯ ವಿಧಿಗಳನ್ನೆಲ್ಲಾ ಕೆಲವು ದಿನಗಳು ಆಚರಿಸುತ್ತಿದ್ದಳು. ತಿಲಪಾತ್ರೆಯ ದಿನ ಶನಿದೋಷ ನಿವಾರಣೆಗೆ ಅಶ್ವತ್ಥ ಪ್ರದಕ್ಷಿಣೆ ಪುತ್ರ ಸಂತಾನಕ್ಕೆ ಸಪ್ತಮಾತೃಕೆಗಳ ದರ್ಶನ ಮಾತೃತ್ವಕ್ಕೆ; ನಾಗಪೂಜೆಯೂ ಪುತ್ರ ಸಂತಾನಕ್ಕೆ ನಾಗದೋಷ ವಿದ್ದರೆ ಮಕ್ಕಳಾಗುವುದಿಲ್ಲವೆಂಬ ನಂಬಿಕೆಯಿದೆ. ತಾಯಿತ ಕಟ್ಟುವುದು ಅಭಿಚಾರದ ಕ್ರಿಯೆ-ಕಣ್ಣು ತಾಗದಿರಲಿ ಎಂದು. ಮಾಟವೆಂಬುದು ವಾಮಾಚಾರ ಕ್ರಿಯೆಗಳಲ್ಲಿ ಒಂದು.

'ಕಾದಂಬರಿ'ಯಲ್ಲಿ ದಕ್ಷಿಣ ಭಾರತದ ಒಬ್ಬ ತಾಂತ್ರಿಕ ಯತಿಯನ್ನು ಬಲು ವಿಸ್ತಾರದಿಂದ ಬಣ್ಣಿಸಲಾಗಿದೆ. ಈ 'ದ್ರವಿಡ ಧಾರ್ಮಿಕ'ನು ಉಜ್ಜಯನಿಯ ದಾರಿಯ ಮೇಲಿದ್ದ ಚಂಡಿಕಾ ದೇವಾಲಯದ ಆಡಳಿತಗಾರನಾಗಿರುವನು. ಈ ದೇವಾಲಯದ ಒಂದು ಸ್ಥಳದಲ್ಲಿ 'ಹಣ್ಣುಗಳಂತಿರುವ ತಲೆ ಬುರುಡೆಗಳ ರಾಶಿಗಳೊಂದಿಗೆ..... ಪಶುಬಲಿಯನ್ನು ಕೊಡುವುದನ್ನು ತೋರಿಸಲಾಗಿದೆ. ಅಲ್ಲಿಯ ಧಾರ್ಮಿಕನು ಮೂರ್ಖತನದ ಪ್ರಾಯಶ್ಚಿತ್ತಗಳಿಂದಾಗಿ ಕುಂಟನೂ, ಅಂಗವಿಹೀನನೂ ಆಗಿದ್ದು ಅವನು ಪ್ರಯಾಣಿಕರೊಂದಿಗೂ, ಕಾಡುಪ್ರಾಣಿಗಳೊಂದಿಗೂ ಕಾದಾಡುವನು. ಅವನ ಪೂಜಾವಿಧಾನದ ತಾಂತ್ರಿಕ ಲಕ್ಷಣಗಳಿಗೆ ಈ ಕೆಳಗಿನ ಕೆಲವು ವಿಶೇಷಣ ಪದಗಳಿಂದ ಒತ್ತು ದೊರಕುತ್ತದೆ.

ಅವನ ಹಣೆಯ ಮೇಲೊಂದು ಗಂಟು ಬೆಳೆಯಹತ್ತಿತ್ತು. ಅವನು (ಒಂದೇ ಸವನೆ) ಅಂಬಿಕೆಯ (ಚಂಡಿಕಾ ವಿಗ್ರಹದ) ಪಾದಗಳಿಗೆ ಬೀಳುತ್ತಿದ್ದ ಕಾರಣ ಅದು ಕಪ್ಪುಗಟ್ಟಿತ್ತು..... ಅವನು ಪಾದರಸದ ಮದ್ದುಗಳನ್ನು ಸೇವಿಸುತ್ತ ಬೇಕೆಂದೇ ಬೇಗನೆ ಜ್ವರ ಬರುವ ಹಾಗೆ ಮಾಡಿಕೊಂಡಿದ್ದನು. ಅವನು ಮುಪ್ಪಿನವನಾಗಿದ್ದರೂ ತನ್ನನ್ನು ದಕ್ಷಿಣ ನಾಡಿನ ಸಾರ್ವಭೌಮನನ್ನಾಗಿ ಮಾಡಬೇಕೆಂದು ದುರ್ಗೆಯನ್ನು ಪೀಡಿಸುತ್ತಿದ್ದನು...... ಅವನು ಕೆಂಬಣ್ಣದ ಅರಗಿನ ಅಕ್ಷರಗಳಿಂದ (ಬರೆಯಲಾದ) ಕಣ್ಕಟ್ಟು, ತಂತ್ರ ಮತ್ತು ಮಂತ್ರಗಳದಾದ ಹೊಗೆ (ಬಣ್ಣದ)ಯ ತಾಳೆ ಗರಿಗಳ ಮೇಲಿನ ಕೈ ಬರಹಗಳ ಒಂದು ಸಂಗ್ರಹವನ್ನು ತಯಾರಿಸಿಕೊಂಡಿದ್ದನು. ಅವನು ಮಹಾಪಾಶುಪತರ ಪುರಾತನ ಬೋಧನೆಯಾದ ಮಹಾಕಾಲ ಸಿದ್ಧಾಂತವನ್ನು ಬರೆದಿಟ್ಟಿದ್ದನು..... ಅವನು (ಕುಬೇರನ ಒಂಬತ್ತು) ಸಂಪತ್ತುಗಳ ಬಗೆಗೆ (ಒಂದೇ ಸವನೆ) ಬಡಬಡಿಸುವ ಕಾಯಿಲೆಯನ್ನು

ಮೈದಳೆದು ಬಂದಿದ್ದನಲ್ಲದೆ ಧಾತುವಿದ್ಯೆಯ (ವಿಷಯ) ಬಗೆಗೆ ಗಾಳಿಯ ಹೊಡೆತಕ್ಕೆ ಸಿಕ್ಕಿದವನಂತೆ ಆಗುತ್ತಿದ್ದನು..... ಅವನು ಅದೃಶ್ಯನಾಗುವುದನ್ನು ಕುರಿತಾದ ಮಂತ್ರ ಸಾಧನೆಯ ತನ್ನ ಗ್ರಹಿಕೆಯನ್ನು ಹೆಚ್ಚಿಸಿಕೊಂಡಿದ್ದನಲ್ಲದೆ ಶ್ರೀಪರ್ವತವನ್ನು ಕುರಿತಾದ ಸಾವಿರಾರು ಅದ್ಭುತವಾದ ಕಥೆಗಳನ್ನು ತಿಳಿದಿದ್ದನು..... ಅವನು ಅದೆಷ್ಟೋ ಸಲ (ದೇವಾಲಯದಲ್ಲಿ ವಾಸಿಸುತ್ತಿದ್ದ) ವಿದೇಶೀಯರಾದ ಮುಪ್ಪಿನ ಸಂನ್ಯಾಸಿನಿಯರ ಮೇಲೆ ಸ್ತ್ರೀವಶೀಕರಣದ ಪುಡಿಯನ್ನು ಬಳಸುತ್ತಿದ್ದನು.....

ಅಥರ್ವವೇದಿಯ ಕೌಶಿಕ ಸೂತ್ರಗಳಿಗೆ ಅನುಸಾರಿಯಾದ ಅಥರ್ವವೇದ ಭಾಷ್ಯವನ್ನು ಬರೆಯುತ್ತಾ ಆಚಾರ್ಯ ಸಾಯಣರು ಅಥರ್ವವೇದದಲ್ಲಿ ಅಮಾಂಗಳಿಕವಾದ ಅಭಿಚಾರ ಕರ್ಮಗಳ ನಿರೂಪಣೆಯಿದೆಯೆಂದು ಒಪ್ಪಿದ್ದಾರೆ.

''ಆದರೆ, ಮೋಡಿಗಾರಿಕೆಯ ಮಾಟದ ಈ ಮಂತ್ರಗಳಲ್ಲಿ ಈ ರೇತ ಸ್ವರೂಪ ಅಗ್ನಿಯನ್ನೇ, ಮೂಲ ಋಗ್ವೇದದ ಚೌಕಟ್ಟಿನೊಳಗಿನ ಹವ್ಯವಾಹನ ಜಾತವೇದ ಅಗ್ನಿ, ಮತ್ತು ಅಪ್ಸು, 'ಓಷಧಿಷು ಬಹುಧಾ ಪ್ರವಿಷ್ಟಂ ತಂ ಐಚ್ಛಾಮ' ಎಂಬ ಪ್ರಾರ್ಥನೆಯಲ್ಲಿ ಕಾಣಿಸಿಕೊಳ್ಳುತ್ತಿರುವ ಅಗ್ನಿಯು, ಒಂದೇ ಅಲ್ಲ. ಈ ಭೇದ ಕಾಣದಿರಲು ಕವಿಯ ಮಂಕು ಕಾರಣವೊ? ಅಥವಾ ಕೊಂಕು ಮನೀಷೆಯು ಕಾರಣವೋ? ಅಗ್ನಿಯು ಹವ್ಯವಾಹನನ ಕಾರ್ಯಮಾಡಲು ಹೆದರಿದ್ದೇಕೆ? ಅಗ್ನ್ಯಾರಾಧನೆಯಲ್ಲಿ, ಅಹಿ: ವೃತ್ರಸಂಹಾರ ಕಾರ್ಯನಿರತ ಇಂದ್ರನನ್ನು, ಬೃಹಸ್ಪತಿಯನ್ನು ಆಮಂತ್ರಿಸಿ ಆರಾಧಿಸುವ ತನ್ನ 'ಪೂರ್ವೇಭ್ರಾತರಃ' ಹತರಾದುದನ್ನು ಕಂಡು ಇನ್ನು ತನ್ನ ಪಾಡು ಏನು ಎಂದು ಅಗ್ನಿ ಹೆದರಿದನು, ಎಂದು ಈ ಸಂಹಿತಾಪಾಠದಲ್ಲಿಯೆ ಉಕ್ತವಾಗಿದೆ! ಹವ್ಯವಾಹನನು ನೀರಲ್ಲಿ ಇಳಿದರೆ ಆ ಅಗ್ನಿ ಇದ್ದಿಲು ಆದೀತೇ ಹೊರತು 'ಅಗ್ನಿ' ಎನಿಸದು. ಆದಕಾರಣ, ಇಲ್ಲಿ ವರ್ಣಿತನಾದ 'ನಚಿಕೇತ' ಅಗ್ನಿಯು ದಿಕ್ಕಾಲದ ಸಂದರ್ಭದಲ್ಲಿ ಪ್ರತೀತಿಗೆ ಬರುವ ಅಗ್ನಿಯೇ ಅಲ್ಲ. ಇವನು 'ಜಾದೂ' ಅಗ್ನಿ. ಈ ಸೂಕ್ತದಲ್ಲಿ ನಚಿಕೇತ ಅಗ್ನಿ ಎಂದು ಮೆಲ್ಲನೆ ನಮೂದಿಸಿದ್ದೂ ಉಂಟು! ಸೂಚಕ>ಸೌಚಿಕ, ಸೂಚಿ>ಸೂಜಿ! ಸೂಜಿಯಿಂದ ಹೊರಬಂದು ಉಲ್ಬ (ಗರ್ಭ)ದಲ್ಲಿ ಸೇರುವ ಅಗ್ನಿ ಇವನು ಎಂದರೆ ವಿಶೇಷ ತಪ್ಪಲ್ಲ! ಏಕೆಂದರೆ ಈ ಸೂಕ್ತದ ಆರಂಭವೆ ಹೀಗಿದೆ: ಎಲೈ ಅಗ್ನಿಯೇ 'ಸ್ಥವಿರಂ ಮಹತ್ ಉಲ್ಬಂ' ಹೊಕ್ಕು (ಬಸುರಿಯ) ಆಪ: ರಸದಲ್ಲಿ (ಪೋಷಿಸಲ್ಪಡುತ್ತ) ಕುಳಿತಿದ್ದೀಯೆ!''

ಅಭಿಚಾರ ಕ್ರಿಯೆಯೆನ್ನುವುದು ಈಗಲೂ ಚಾಲ್ತಿಯಲ್ಲಿದೆ. ಮಂತ್ರವಾದದ ಮೂಲಕ ಇನ್ನೊಬ್ಬರನ್ನು ಪೀಡಿಸುವ ವಿದ್ಯೆಯನ್ನು ಅಭಿಚಾರ ವಿದ್ಯೆಯೆಂದು ಕರೆಯುತ್ತಾರೆ.

*ವಿವರಗಳಿಗೆ ನೋಡಿ: ಮಾಟ; ಅಂಜನ*

*ಶಂಬಾ ಜೋಶಿ ೧೯೯೯ ನಾಗಪ್ರತಿಮಾ ವಿಚಾರ ಸಂಪುಟ. ೪ ಪುಟ. ೪೫೩*

*ಶೇಷನವರತ್ನ ೧೯೮೯ – ನಾಲ್ಕು ವೇದಗಳು ಪುಟ. ೧೩೬*

*ಡೇವಿಡ್ ಎನ್. ಲಾರೆಂಜೆನ್ ೨೦೦೫ ಕಾಪಾಲಿಕರು ಮತ್ತು ಕಾಳಾಮುಖರು ಪುಟ. ೨೫*

೬೮. ಅಭಿಜಾತ

**ಅಭಿಜಾತಂ ಕ್ಷತ್ರಿಯರನುಜಿರದ ಕಲಿ ಕೃಪನಾತಂ.........**

*(ಪಂಪ ಭಾರತ ೧೦-೫೫)*

ಅಭಿಜಾತನೆಂದರೆ ಉತ್ತಮ ಕುಲದವನು. ಪಂಪ ಭಾರತದಲ್ಲಿ ಕೃಪಾಚಾರ್ಯನ ಕುರಿತು ಹೇಳುವಾಗ ಈ ಮಾತು ಬಂದಿದೆ. ಪಂಪನ ಪ್ರಕಾರ ಒಳ್ಳೆಯ ಕುಲದಲ್ಲಿ (ಬ್ರಾಹ್ಮಣ) ಹುಟ್ಟಿದವನು ಕೃಪಾಚಾರ್ಯ.

ಇಂಗ್ಲಿಷಿನ ಕ್ಲಾಸಿಕಲ್ ಏಜಿನ ಪರಂಪರೆಯನ್ನು ಅಭಿಜಾತ ಪರಂಪರೆಯೆಂದು ಕರೆಯುತ್ತಾರೆ. ಅಭಿಜಾತವೆಂದರೆ ಅಲ್ಲಿಯೂ ಶ್ರೇಷ್ಠವೆಂಬ ಅರ್ಥವೇ ಇದೆ. 'ಕುಲಮಿರ್ದುದುಂಟೆ ಕೊಡದೊಳಂ ಶರಸ್ತಂಭದೊಳಂ' ಎಂದು ಕರ್ಣನು ದ್ರೋಣ ಕೃಪರಿಗೆ ಪ್ರತಿಯಾಗಿ ಹೇಳುವಾಗ ಈ ಮಾತನ್ನು ಬಳಸಿದ್ದು ಗಮನಾರ್ಹವಾಗಿದೆ. ಭೀಷ್ಮ ಪಟ್ಟಾಭಿಷೇಕದ ಸಂದರ್ಭದಲ್ಲಿ ಈ ವಿಷಯವು ಉಕ್ತವಾಗಿದೆ. ಅಭಿಜಾತವೆಂದರೆ ಚೆನ್ನಾಗಿ ತಿಳಿದಿರುವ, ಶ್ರೇಷ್ಠ ನೀತಿಯುಳ್ಳವನು; ವಿದ್ಯಾವಂತ ಎಂಬ ಅರ್ಥಗಳಿವೆ. ವರ್ಣಮಾರ್ಗವನ್ನು ಒಪ್ಪಿರುವವರು ಬ್ರಾಹ್ಮಣನನ್ನು ಶ್ರೇಷ್ಠನೆಂದು ಕರೆಯುತ್ತಾರೆ. ವಿರಾಟ ಪುರುಷನ ಮುಖದಿಂದ ಬ್ರಾಹ್ಮಣ ತೋಳುಗಳಿಂದ ಕ್ಷತ್ರಿಯ; ಊರುಗಳಿಂದ ವೈಶ್ಯ; ಕಾಲುಗಳಿಂದ ಶೂದ್ರರು ಹುಟ್ಟಿದರು ಎಂದು ವಿವರಿಸಲಾಗಿದೆ.

*ವಿವರಗಳಿಗೆ ನೋಡಿ: Martin Gray 1984 A Dictionary of literary terms.*

೬೯. ಅಭಿದಾನ ವಸ್ತು ಕೋಶ

ಬೆದಂಡೆಯಂಥ ಹಾಡುಗಬ್ಬ ಪ್ರಕಾರಕ್ಕೆ ಮುಂದೆ ಬಹಳ ದುಸ್ಥಿತಿ ಒದಗಿದೆ. ನಾಗವರ್ಮನೇ ತನ್ನ ಅಭಿದಾನ ವಸ್ತುಕೋಶದಲ್ಲಿ ಬೆದಂಡೆಯವರನ್ನು ಮದ್ಯದ ವ್ಯಾಪಾರಿ, ಹಾಸ್ಯಗಾರ, ಐಂದ್ರಜಾಲಿಕ ಇವರ ಪಟ್ಟಿಯಲ್ಲಿ ಸೇರಿದ್ದಾನೆ.

ಈ ನಾಗವರ್ಮನ ಕೃತಿಗಳೆಂದು ಪರಿಗಣಿತವಾಗಿರುವುವೆಂದರೆ ಛಂದೋವಿಚಿತಿ, ಅಭಿದಾನ ವಸ್ತುಕೋಶ. ಕರ್ಣಾಟಕ ಭಾಷಾ ಭೂಷಣ 'ಕಾವ್ಯಾಲೋಕನ' ಮತ್ತು 'ವರ್ಧಮಾನ ಪುರಾಣ'.

ನಾಗವರ್ಮ ತಾನು ಬರೆದಿರುವ ಕೃತಿಗಳನ್ನು ಹೆಸರಿಸುವ ಪದ್ಯವೊಂದರಲ್ಲಿ "ಛಂದೋವಿಚಿತಿಯಲಂಕೃತಿ ಸಂದಭಿದಾ ವಸ್ತುಕೋಶಮೆಂಬಿವು" ಎಂದು ಹೇಳಿರುವುದರಿಂದ ಛಂದೋವಿಚಿತಿಯನ್ನು ಅವನು ರಚಿಸಿರುವುದು ತಿಳಿದುಬರುತ್ತದೆ.

ಭಾಷಾಭೂಷಣ ಕನ್ನಡ ವ್ಯಾಕರಣವನ್ನು ಸಂಸ್ಕೃತದಲ್ಲಿ ಬರೆದದ್ದಾಗಿದ್ದರೆ, ಅಭಿದಾನವಸ್ತುಕೋಶ, ಸಂಸ್ಕೃತ ಶಬ್ದಗಳಿಗೆ ಕನ್ನಡದಲ್ಲಿ ಅರ್ಥವನ್ನು ವಿವರಿಸಲು ಕನ್ನಡ ಕಂದ ವೃತ್ತಗಳಲ್ಲಿ ಬರೆದ ಶಬ್ದಕೋಶವಾಗಿದೆ. ವಸ್ತುಕೋಶದ ಪರಿಕಲ್ಪನೆಯು ಕನ್ನಡದಲ್ಲಿ ವಿಶಿಷ್ಟವಾಗಿದೆ. ಅರ್ಥಕೋಶಕ್ಕಿಂತ ಇದು ಭಿನ್ನ. ಅರ್ಥಕೋಶವು ಶಬ್ದಾರ್ಥಗಳ ವಿಶೇಷವನ್ನು ತಿಳಿಸುತ್ತದೆ. ನಾಗವರ್ಮನು ವಸ್ತುಕೋಶವೆಂದು ಕರೆದಿರುವುದು ವಸ್ತುವಿನ

ವಿಶೇಷತೆಯನ್ನು ಸೂಚಿಸಲು ಎಂಬುದಿಲ್ಲಿ ಗಮನಾರ್ಹವಾಗಿದೆ.

*ವಿವರಗಳಿಗೆ ನೋಡಿ : ಸಿ.ವೀರಣ್ಣ ೧೯೮೬ ಪ್ರಾಚೀನ ಸಾಹಿತ್ಯ: ರಾಜಸತ್ತೆಯ ವೈಭವದ ಕಾಲ ಪುಟ. ೩೪೪-೩೪೬*

## ೭೦. ಅಭಿಮಾನ

**"ಅಭಿಮಾನಿಗಳತ್ಯುಗ್ರರು"** ಎಂಬ ಪ್ರಯೋಗವಿದೆ (ಕವಿರಾಜಮಾರ್ಗ). ಕನ್ನಡ ಸಾಹಸಭೀಮವಿಜಯದಲ್ಲಿ ಕೌರವನನ್ನು 'ಅಭಿಮಾನಧನ'ನೆಂದು ರನ್ನ ಕೊಂಡಾಡುತ್ತಾನೆ. ಅಭಿಮಾನವೆಂದರೆ ಬೇರೆ ರೀತಿಯಲ್ಲಿಯೂ ಇರುತ್ತದೆ. ನಾನು ಗಂಡು ಎಂಬುದು ಅಭಿಮಾನ. ಇದು ನನ್ನ ಅನುಭವ ಎಂದರೆ ಅಭಿಮಾನದ ರೂಪಕ.

ಮಾನವೆಂದರೆ ಗೌರವ, ಅಭಿಮಾನ ಎನ್ನುವ ಪದವು ಸಂಸ್ಕೃತದಿಂದ ಬಂದಿದೆ. ಮಾನ ಎಂದರೆ ಚಿಂತಿಸು ಎಂದು ಅರ್ಥ. ಯಾರು ತನ್ನ ಸ್ವಂತವನ್ನು ಅತಿಹೆಚ್ಚು ಯೋಚಿಸುತ್ತಾರೋ ಅವರು ಅಭಿಮಾನಿಗಳು. ಅವರಲ್ಲಿ 'ಅಹಂ' ಹೆಚ್ಚಿರುತ್ತದೆ. ನಾನು ಎಂಬ ಭಾವನೆಗಳು ಹೆಚ್ಚಿರುತ್ತದೆ.

ಸ್ವಂತಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳು ಅಭಿಮಾನವೆನಿಸಿಕೊಳ್ಳುತ್ತವೆ. ಸ್ವಂತಿಕೆಯ ಬಗ್ಗೆ ಹೆಮ್ಮೆ ಪಡುವುದು. ಪ್ರೇಮ; ಬಯಕೆ; ಶ್ರೇಷ್ಠ ಹಂಬಲ; ಸ್ವಂತ ಭಾವನೆಗಳ ಬಗ್ಗೆ ತಾವೇ ಗರ್ವಿಸಿಕೊಳ್ಳುವುದು. ನೋವಾಗುವುದು ಮುಂತಾದ ಅರ್ಥಗಳನ್ನು ಕಿಟ್ಟೆಲ್ ಕೊಟ್ಟಿದ್ದಾರೆ. ಅಭಿಮಾನಗೇಡಿಯನ್ನು 'ನಾಣಿಲಿ'ಯೆಂದು ಕರೆಯಲಾಗಿದೆ.

ಅಭಿಮಾನವು ಒಂದರ್ಥದಲ್ಲಿ ಅಹಂನಿಂದ ಜನ್ಯವಾಗಿರುತ್ತದೆ. ಇದನ್ನು ಫ್ರಾಯ್ಡ್ ಇಗೋ ಎಂದು ಕರೆದಿರುವುದು ಗಮನಾರ್ಹ.

*ವಿವರಗಳಿಗೆ ನೋಡಿ: M.H. Abrahams 1985 A Glossary of Literary terms.*

## ೭೧. ಅಭಿಷೇಕ

*"........ಸ್ತ್ರೀಪರ್ವಂ ಅರ್ಜುನಾಭಿಷೇಕಂ........." (ಪಂಪ ಭಾರತ ೧೪-೫೨ ವ)*

ಅನೇಕ ಜೈನ ಕಾವ್ಯಗಳಲ್ಲಿ ಅಭಿಷೇಕದ ವರ್ಣನೆಗಳು ಬರುತ್ತವೆ. ಅಭಿಷೇಕವು ಆಚರಣೆಗೆ ಸಂಬಂಧಿಸಿದ್ದು, ತೀರ್ಥಜಲದ ಸ್ನಾನ ಅಥವಾ ಸಿಂಪರಣೆಯು ಅಭಿಷೇಕ ವೆಂದೆನ್ನಿಸಿಕೊಳ್ಳುತ್ತದೆ. ಜನ್ಮಾಭಿಷೇಕ. ವ್ರತಾಭಿಷೇಕ: ಮೂರ್ತಿಗೆ ಅಭಿಷೇಕ: ತೀರ್ಥಂಕರರಿಗೆ ಅಭಿಷೇಕ ಹೀಗೆ ಬೇರೆ ಬೇರೆ ರೀತಿಯ ಅಭಿಷೇಕಗಳು ಇರುತ್ತವೆ. ಅಭಿಷೇಕವು ಶುದ್ಧ ನೀರಿನಿಂದ ನಡೆಯುತ್ತದೆ. ಮೂರ್ತಿಗಳಿಗೆ ಅಭಿಷೇಕ ಮಾಡುವಾಗ ಜೇನುತುಪ್ಪ, ತುಪ್ಪ, ಹಾಲು, ಮೊಸರು, ಮುಂತಾದವುಗಳನ್ನು ಬಳಸುತ್ತಾರೆ. ಅಭಿಷೇಕವು ಶುದ್ಧತೆಯ ಸಂಕೇತ. ಆದುದರಿಂದ ದೇವರ ಮೂರ್ತಿಗೆ ಮಾಡಿದ ಅಭಿಷೇಕವು ಪವಿತ್ರವೆಂದು ಜನರು ಅದನ್ನು ಭಕ್ತಿಪೂರ್ವಕ ಸ್ವೀಕರಿಸುತ್ತಾರೆ.

ಅರಸರಿಗೆ ಪಟ್ಟಾಭಿಷೇಕವಾಗುವಾಗ ಅವರ ತಲೆಯ ಮೇಲೆ ಪವಿತ್ರಜಲ

ಸಿಂಪಡಿಸುವುದು ಅಥವಾ ಬೇರೆ ರಸಗಳನ್ನು ಸಿಂಪಡಿಸುವುದನ್ನು ಅಭಿಷೇಕವೆಂದು ಕರೆಯಲಾಗುತ್ತದೆ. ಅಭಿಷೇಕವೆಂದರೆ ಸ್ನಾನ, ಪವಿತ್ರಗೊಳಿಸು ಎಂಬ ಅರ್ಥಗಳಿವೆ.

*ವಿವರಗಳಿಗೆ ನೋಡಿ: ಪಂಪಭಾರತ, ಆದಿಪುರಾಣ.*

*ಅಜಿತ ತೀರ್ಥಂಕರ ಪುರಾಣ ತಿಲಕಂ ೪-೫೨ ವ, ೩೩; ೩೬*

*Swami Shivananda 1999 All About Hinduism.*

**೭೨. ಅಭಿಸಾರಿಕೆ**

*ಸಾರಿಕೆಯೆಂಬರಲ್ಲದೆ* ***ಅಭಿಸಾರಿಕೆ****ಯೆಂಬರೆ ಬುದ್ಧಿಯುಳ್ಳವರ್.........*

*(ಪಂಪ ಭಾರತ ೪-೮೩)*

ಜಾರೆಯರ ಕುರಿತು ಹೇಳುವಾಗ ಪಂಪ ಬಳಸುವ ಮಾತಿದು. ಸಾರಿಕೆಯೆಂದರೆ ಗಿಳಿ. ಸಾರಿಕೆಯೆಂದು ಕರೆಯಬಲ್ಲರೆ ಹೊರತು ಅಭಿಸಾರಿಕೆಯೆಂಬರೆ ಬುದ್ಧಿಯುಳ್ಳವರು ಎಂದು ಪಂಪ ಹೇಳುತ್ತಾನೆ.

ಸಲೆ ಬರುತಿರ್ಪಳೆಂದು**ಮಭಿಸಾರಿಕೆ**ಯಂದದೆ ರಾಜ್ಯಲಕ್ಷ್ಮಿತ

ನ್ನೊಲವಿನೊಳೆಂದೊಡಾ ನೃಪನ ಪೌರುಷಮೇಂ ಪೊಗಟಲ್ಕೆವೇಟ್ಕುಮೇ.....

(ಕರ್ಣಾಟಕ ಕಾದಂಬರಿ, ೧-೧೩)

ಅಭಿಸಾರಿಕಾ ಎನ್ನುವುದು ಸಂಸ್ಕೃತ ಪದ. ಇದು ಕನ್ನಡದಲ್ಲಿ ಅಭಿಸಾರಿಕೆಯೆಂದಾಗಿ ಬಳಕೆಯಾಗುತ್ತದೆ. ನಾಯಕನ ಬಳಿಗೆ ಹೋಗುವ ಅಥವಾ ನಾಯಕನ ಬರವಿಗಾಗಿ ಕಾಯುವ ಹೆಣ್ಣನ್ನು ಅಭಿಸಾರಿಕೆ ಎಂದು ಕರೆಯುತ್ತಾರೆ.

ಯಾರಿಗಾದರೂ ಕಾಯುತ್ತಿರುವ ಹೆಣ್ಣು ಅಭಿಸಾರಿಕೆಯೆಂದು ಕಿಟ್ಟೆಲ್ ನಿಘಂಟುವಿನಲ್ಲಿ ಕೊಡಲಾಗಿದೆ. ಅಭಿಸಾರಿಕೆಯರ ಪರಿಕಲ್ಪನೆಯು ಸಂಸ್ಕೃತ ನಾಟಕಗಳಲ್ಲಿ ಹೆಚ್ಚು ಬಂದಿರುವುದು ಗಮನಾರ್ಹವಾಗಿದೆ. ಅಭಿಸಾರಿಕೆಯರ ಪರಿಕಲ್ಪನೆಗೂ ರಸಸಿದ್ಧಾಂತಕ್ಕೂ ಸಂಬಂಧವಿದೆ. ಶೃಂಗಾರ ರಸದ ಸಂದರ್ಭದಲ್ಲಿ ಈ ರೀತಿಯ ಪ್ರಯೋಗಗಳು ಬಂದಿವೆ. ಇದರಲ್ಲಿ ವಿರಹವು ಮತ್ತು ಕಾಯುವಿಕೆಯು ಪ್ರಧಾನವಾಗಿದೆ.

*ವಿವರಗಳಿಗೆ ನೋಡಿ: ಮರಿಯಪ್ಪ ಭಟ್ಟ ಎಂ. ೧೯೬೯*

*ಕಿಟ್ಟೆಲ್‌ರ ಕನ್ನಡ-ಇಂಗ್ಲಿಷ್ ನಿಘಂಟು ಪುಟ. ೮೪*

*ತೀ.ನಂ.ಶ್ರೀ ೨೦೦೬ ಭಾರತೀಯ ಕಾವ್ಯ ಮೀಮಾಂಸೆ.*

*Devi G.N. 2007 Indian Literary Criticism.*

**೭೩. ಅಭೇದ ಜ್ಞಾನ**

ಅಭೇದ ಜ್ಞಾನವೆಂದರೆ ನಾನು-ನೀನು ಬೇರೆಯೆಂಬ ಪರಿಕಲ್ಪನೆಗಿಂತ ಹೊರಗಿನದು. ಅಭೇದ ಜ್ಞಾನದಿಂದ ಉಂಟಾಗುವುದು ಸಮ್ಯಕ್ ಜ್ಞಾನ.

ಆ ಉಪಾಧಿಯ ನಿವೃತ್ತಿಯು ಸಮ್ಯಗ್ ಜ್ಞಾನದಿಂದ ಉಂಟಾಗಬೇಕೇ ಹೊರತು

ಬೇರೆ ರೀತಿಯಿಂದಲ್ಲ. ಜೀವಾತ್ಮ ಪರಮಾತ್ಮ-ಇವರ ಅಭೇದ ಜ್ಞಾನವೇ ಸಮ್ಯಗ್‌ಜ್ಞಾನವೆಂದು ಶ್ರುತಿಯು ಅಭಿಪ್ರಾಯವಾಗಿರುತ್ತದೆ

ಅಭೇದ ಜ್ಞಾನದ ಅಂತಿಮ ನಿಲುವೆಂದರೆ ದೇವರು ಮತ್ತು ಆತ್ಮದ ನಡುವೆ ಅಂತರ ಉಂಟಾಗದಿರುವುದು. ಇದನ್ನು ಅದ್ವೈತವೆಂದೂ ಕರೆಯುತ್ತಾರೆ. ಜೀವಾತ್ಮ-ಪರಮಾತ್ಮರ ಅಭೇದ ಜ್ಞಾನವು ಆತ್ಮ-ಅನಾತ್ಮ ವಸ್ತುಗಳ ವಿವೇಚನದಿಂದಲೇ ಸಿದ್ಧಿಸುತ್ತದೆ; ಆದುದರಿಂದ ಪ್ರತ್ಯಗಾತ್ಮ ಮತ್ತು ಅನಾತ್ಮ - ಇವೆರಡರ ವಿವೇಚನವನ್ನು ಮಾಡಬೇಕು (ವಿವೇಕ ಚೂಡಾಮಣಿ,ಶ್ಲೋಕ ೨೦).

ಅಭೇದ ಜ್ಞಾನವು ಉಂಟಾಗಬೇಕಾದರೆ ವಿವೇಚನೆಯೂ ಕೂಡಾ ಅಷ್ಟೇ ಅಗತ್ಯ. ಇಲ್ಲಿ ಪ್ರತ್ಯಗಾತ್ಮ ಮತ್ತು ಅನ್ಯಾತ್ಮದ ವಿಷಯ ಕೂಡಾ ಪ್ರಸ್ತಾವಿತವಾಗಿವೆ.

ಬಹಳ ಕೆಸರಾಗಿರುವ ನೀರು ಕೆಸರು ಹೋದ ಮೇಲೆ ಹೇಗೆ ಸ್ವಚ್ಛವಾಗಿ ತೋರುವುದೋ ಹಾಗೆಯೇ ಆತ್ಮನೂ ಕೂಡ ದೋಷವಿಲ್ಲದಿರುವಾಗ ಸ್ಫುಟವಾಗಿ ಪ್ರಕಾಶಿಸುತ್ತಾನೆ (ವಿವೇಕ ಚೂಡಾಮಣಿ, ಶ್ಲೋಕ ೨೦೪).

ಅದು ನೀನಾಗಿರುವೆ ತತ್ ತ್ವಮಸಿ (ಛಾಂದೋಗ್ಯ ಉ. ೬.೮.೭), ಈ ಆತ್ಮನು ಬ್ರಹ್ಮ ಅಯಮಾತ್ಮಾ ಬ್ರಹ್ಮ (ಮಾಂಡೂಕ್ಯ ಉ. ೧.೨), ಪ್ರಜ್ಞಾನವು ಬ್ರಹ್ಮ ಪ್ರಜ್ಞಾನಂ ಬ್ರಹ್ಮ (ಐತರೇಯ ಉ. ೩.೧.೩).

ಇಲ್ಲಿ ತತ್, ತ್ವಂ, ಅಸಿ (ಅದು-ಪರಮಾತ್ಮ) ನೀನೇ ಆಗಿರುವೆಯೆನ್ನುವ ನಿಲುವು ಗಮನಾರ್ಹ. ದ್ವೈತ ಅಖಂಡತೆಯನ್ನು ಹೇಳುವುದಿಲ್ಲ. ಹಾಗೆಯೇ ದ್ವೈತ ಸಿದ್ಧಾಂತದಲ್ಲಿ ನಾನು ಬೇರೆ ಪರಮಾತ್ಮ ಬೇರೆ ಎಂಬ ಪರಿಕಲ್ಪನೆಯು ಇರುತ್ತದೆ. ಇಲ್ಲಿ ಶಂಕರರು; ಉಪನಿಷತ್ಕಾರರು 'ತತ್ವಮಸಿ' ವಾದವನ್ನು ಎತ್ತಿಹಿಡಿದಿರುವುದರಿಂದ ಆತ್ಮ-ಪರಮಾತ್ಮ ರಸಂಬಂಧ ಅಖಂಡವಾಗುವುದು ಮಾತ್ರವೇ ಅಲ್ಲ. ಆ ಮೂಲಕ ಆತ್ಮಕ್ಕೆ ವಿಶಿಷ್ಟ ಅರ್ಥವನ್ನು ಕೂಡಾ ಕೊಟ್ಟಂತೆ ಆಗಿದೆ.

*ವಿವರಗಳಿಗೆ ನೋಡಿ: ಸುಕುಮಾರ ಅಟಿಕ್ಕೋಡ್ ೨೦೦೫ ತತ್ವಮಸಿ*

*ಸ್ವಾಮಿ ಚಿನ್ಮಯಾನಂದ ೯೮೧ ಶ್ರೀ ಶಂಕರಭಗವತ್ಪಾದ ಪ್ರಣೀತ ವಿವೇಕ ಚೂಡಾಮಣಿ*

**೭೪. ಅಭ್ಯಂತರ ತಪಸ್ಸು**

ಆಂತರಂಗಿಕವಸ್ತು, ನಾವೀಗ ಅಭ್ಯಂತರವೆಂದರೆ ಅಡ್ಡಿಯೆನ್ನುವ ಅರ್ಥದಲ್ಲಿ ಬಳಸುತ್ತೇವೆ. ಸೌತಾಂತ್ರಿಕರ ಪ್ರಕಾರ ಅಭ್ಯಂತರಕ್ಕೆ ಎರಡು ಉಪವಿಭಾಗಗಳಿವೆ; ಚಿತ್ತ (ಮನಸ್ಸು) ಚೈತ್ಯ - ಬುದ್ಧಿವಂತಿಕೆ. ಆದರೆ ಸೌತಾಂತ್ರಿಕರ ಬಗ್ಗೆ ಜೈನ ಕವಿಗಳಿಗೆ ವಿರೋಧವಿದೆ (ನೋಡಿ: ಆದಿಪುರಾಣ: ಅಜಿತ ತೀರ್ಥಂಕರ ಪುರಾಣ).

ಸೌತಾಂತ್ರಿಕರ ಕುರಿತು ಪಂಪನು ಆದಿಪುರಾಣದಲ್ಲಿ ಚರ್ಚಿಸಿದ್ದಾನೆ

(ದ್ವಿತೀಯಶ್ವಾಸ ೯.ವ.)

ಅಭ್ಯಂತರವೆಂದರೆ ಅಂತರಂಗ, ಒಳಗೆ, ಹೃದಯ ಎಂಬ ಅರ್ಥದಲ್ಲಿ ಬರುವ

ತಪಸ್ಸು ಎಂದರ್ಥ. ಇದರಲ್ಲಿ ಆರು ವಿಧಗಳಿವೆ. ಪ್ರಾಯಶ್ಚಿತ್ತ ವಿನಯ ವೈಯಾವೃತ್ಯ ಸ್ವಾಧ್ಯಾಯ

ಮೃತ್ಸರ್ಗಧ್ಯಾನಾನ್ಯುತ್ತರಮ್ । (ತ.ಸೂ ೯-೨೦)

೧) ಪ್ರಾಯಶ್ಚಿತ್ತ (ಮಾಡಿದ ತಪ್ಪನ್ನು ಒಪ್ಪಿಕೊಂಡು ಶಿಕ್ಷೆಯನ್ನು ಅನುಭವಿಸುವುದು. ೨)ವಿನಯ (ಜ್ಞಾನದರ್ಶನ ಚಾರಿತ್ರಗಳಲ್ಲಿ ಹಿರಿಯರಿಗೆ ವಿನೇಯವಾಗಿರುವುದು) ೩) ವೈಯಾವೃತ್ಯ – ವೃದ್ಧರೂ ಅಶಕ್ತರೂ ರೋಗಿಷ್ಠರೂ ಆದ ಯತಿಗಳ ಸೇವೆ ಮಾಡುವುದು. ೪) ಸ್ವಾಧ್ಯಾಯ (ಆಗಮ ಗ್ರಂಥಗಳು ಅಭ್ಯಾಸ ಮಾಡುವುದು) ೫) ವ್ಯುತ್ಸರ್ಗ (ಶರೀರದ ಮೇಲಣ ಆಸೆಯನ್ನು ಬಿಟ್ಟು ಸಮಚಿತ್ತದಿಂದ ಇರುವುದು. ೬) ಧ್ಯಾನ ಸ್ವಾಧ್ಯಾಯವೆಂದರೆ ಸ್ವಯಂ ಅಧ್ಯಯನ.

ಇದರಲ್ಲಿ ಧ್ಯಾನವೆಂದರೆ – ಮನಸ್ಸನ್ನು ಏಕಾಗ್ರಚಿತ್ತ ಸ್ಥಿತಿಗೆ ತಂದು ದೇವರನ್ನು ನೆನೆಯುವುದು, ಇದರಲ್ಲಿ ಯಾವುದೇ ಸಂಕೇತಗಳು ಇರುವುದಿಲ್ಲ. ಉದಾ: ದೇವರ ಪ್ರತಿಮೆ: ಶಿಲುಬೆ ಇತ್ಯಾದಿ.

ಅಭ್ಯಂತರ ಅಥವಾ ಆಂತರಿಕ ತಪಸ್ಸು ಆತ್ಮಶುದ್ಧಿಗೆ ಸಂಬಂಧಿಸಿದ್ದು. ಅದು ಜ್ಞಾನ–ಧ್ಯಾನಗಳಿಂದ ಕೂಡಿರುತ್ತದೆ. ಈ ರೀತಿ ತಪಸ್ಸು ಮಾಡುವವನು ಶುದ್ಧತಪಸ್ವಿ ಎಂದೆನಿಸಿಕೊಳ್ಳುತ್ತಾನೆ.

*ವಿವರಗಳಿಗೆ ನೋಡಿ: ಸ್ವಾಮಿ ಸಮಂತಭದ್ರಾಚಾರ್ಯದೇವ ೨೦೦೭ ರತ್ನಕರಂಡ ಶ್ರಾವಕಾಚಾರ.*

**೭೫. ಅಭ್ಯಾಗತ**

*............ಬಂದಯ್ ನೀನಭ್ಯಾಗತ ನಾಗಲ್ವೇಙ್ಕೆಂ............*

ಬ್ರಾಹ್ಮಣನು ಒಂದು ದಿನ ಹೆರವರ ಮನೆಯಲ್ಲಿದ್ದರೆ ಅತಿಥಿಯು. ಅತಿಥಿ ಪದವು ಅಂತಹ ಅರ್ಥವನ್ನು ಕೊಡುವುದು. ಅದೇ ಊರಿನವರು ಹೊಟ್ಟೆ ತುಂಬಲು ಏನಾದರೂ ನೆವದ ವೇಷದವನಾಗಿ ಮನೆಗೆ ಬಂದರೆ ಅವನು ಅತಿಥಿಯಾಗುವುದಿಲ್ಲ. ಅವನು ಪತ್ನೀ–ಅಗ್ನಿ ಸಂಯುಕ್ತನಾದರೂ ಬೆಲೆಯಿಲ್ಲ. ಅತಿಥಿಗೆ ಕೊಡದ ಆಹಾರ ಸಾಮಗ್ರಿಯನ್ನು ತಾನು ಸೇವಿಸಬಾರದು. ಧನ, ಯಶಸ್, ಆಯುಸ್, ಸುಖ ಎಲ್ಲವೂ ಅತಿಥಿ ಸತ್ಕಾರದಿಂದ ಲಭ್ಯಗಳು ಆದುದರಿಂದ ಕೊಡದೆ ತಿನ್ನುವುದು ಹೇಗೆ?

ಅತಿಥಿಯನ್ನು ದೇವರಿಗೆ ಸಮಾನವಾಗಿ ಕಾಣುತ್ತಾರೆ. ಅತಿಥಿಯ ಸತ್ಕಾರ ಮುಗಿದ ಮೇಲೆ ಮನೆಯವರು ಆಹಾರ ಸೇವಿಸಬೇಕು ಎಂಬ ನಂಬಿಕೆಯಿದೆ.

*ವಿವರಗಳಿಗೆ ನೋಡಿ: ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೩–೧೦೩, ೩–೧೦೬.*

**೭೬. ಅಭ್ಯುದಯ**

ಹಳೆಗನ್ನಡ ಕಾವ್ಯಗಳಲ್ಲಿ ಅಭ್ಯುದಯ ಎನ್ನುವುದನ್ನು ಅಭಿವೃದ್ಧಿ: ಉನ್ನತಿ: ಉನ್ನತೋನ್ನತಿ ಎಂಬ ಅರ್ಥದಲ್ಲಿ ಬಳಸಲಾಗಿದೆ (ಪಂಪಭಾರತ ೮–೪). ಅಭ್ಯುದಯ

ಎರಡು ರೀತಿಯದು. ಒಂದು ಸಾಮಾಜಿಕ ಅಭ್ಯುದಯ. ಇದರಲ್ಲಿ ಭೌತಿಕ ಅಭ್ಯುದಯ ಅಥವಾ ಅಭಿವೃದ್ಧಿಯೂ ಸೇರಿಕೊಂಡಿತು. ಎರಡನೆಯದು ವೈಯಕ್ತಿಕ ಅಭ್ಯುದಯ. ವ್ಯಕ್ತಿ ಗುಣನಡತೆಗಳಲ್ಲಿ ಉಂಟಾಗುವ ಅಭಿವೃದ್ಧಿ.

ಅಭ್ಯುದಯವೆಂದರೆ ಮೇಲೇಳು; ಉದಯಿಸು; ಹೆಚ್ಚುಗೊಳಿಸು; ಸಂಪತ್ತು ಎಂಬ ಅರ್ಥಗಳಿವೆ. ಆದರೆ ಈ ಎಲ್ಲಾ ಅರ್ಥಗಳು ಪರೋಕ್ಷವಾಗಿ ಆರ್ಥಿಕ ಮಾನದಂಡಗಳನ್ನು ಇಟ್ಟುಕೊಂಡಿವೆ. ಅಭ್ಯುದಯವೆಂದರೆ ವ್ರತವೆಂಬ ಅರ್ಥವೂ ಇದೆ. ಇದಕ್ಕೆ ಧಾರ್ಮಿಕ ಅರ್ಥವಂತಿಕೆಯಿದೆ.

ಯುರೋಪಿನಲ್ಲಿ ಪುನರುಜ್ಜೀವನ ಕಾಲಘಟ್ಟದ ಅನಂತರ ಅಭ್ಯುದಯ ಎಂಬುದಕ್ಕೆ ವಿಶೇಷ ಒತ್ತು ಬಿತ್ತು. ವ್ಯಕ್ತಿಯ ಸಂಪನ್ಮೂಲದ ಹೆಚ್ಚುವಿಕೆ: ಸಾಮಾಜಿಕ ಸಂಪನ್ಮೂಲದ ಹೆಚ್ಚುವಿಕೆಯನ್ನು ಅಭ್ಯುದಯವೆಂದು ಕರೆಯಲಾಯಿತು. ಸಾಮಾಜಿಕ

ಅಭ್ಯುದಯವನ್ನು ಅಭಿವೃದ್ಧಿ ಎಂದು ಕರೆಯಲಾಗಿರುವುದು ವಿಶೇಷ.

*ವಿವರಗಳಿಗೆ ನೋಡಿ: Fredric Jameson 1974 Marxism and Form*

*Terry eagleton 1989 Literary theory – An introduction.*

## ೭೭. ಅಮರಜನ

*ನಿನಗೊರ್ವಂಗಲ್ಲವಸ್ಥಾಂತರಮಮರಜನಕ್ಕೆಲ್ಲಮೀ ಪಾಂಗೆ ಕಾರುಣ್ಯನಿನಾದಂ ನಿನ್ನನಾದಂ....................... (ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೩-೬)*

ಅಮರಜನವೆಂದರೆ ಯಾವುದೇ ಕಾರಣದಿಂದ ಮರಣವಿಲ್ಲದವರು. ಎಂದರ್ಥ. ಅಮರರನ್ನು ಅಮೃತಸದೃಶರು ಎಂದು ಕರೆಯುತ್ತಾರೆ. ಜರಾಮರಣ ಇಲ್ಲದವರು – ಅಂದರೆ ದೇವತೆಗಳು ಎಂದರ್ಥ. ಮೃತ್ ಎಂದರೆ ಸಂಸ್ಕೃತದಲ್ಲಿ ಸಾವು ಎಂದರ್ಥ. ಅಮೃತವೆಂದರೆ ಸಾವಿಲ್ಲದವರು ಎಂದರ್ಥ. ಜೈನಧರ್ಮದ ಪರಿಕಲ್ಪನೆಯು ಅಮರಜನರ ಬಗ್ಗೆ ಬೇರೆಯಿದೆ ಎನ್ನುವುದಕ್ಕೆ ಪಂಪನ ಈ ಪದ್ಯವೇ ಸಾಕ್ಷಿಯಾಗಿದೆ. 'ನಿನಗೊರ್ವಂಗಲ್ಲವಸ್ಥಾಂತರಂ ಅಮರಜನಕ್ಕೆಲ್ಲ ಈ ಪಾಂಗೆ' ನಿನಗೊಬ್ಬನಿಗೆ ಮಾತ್ರವಲ್ಲ. ಅಮರಜನರಿಗೂ ಈ ಅವಸ್ಥೆಯಿದೆ. ಜನನ;,ಮೃತಿ;ಜರೆ(ವೃದ್ಧಾಪ್ಯ)ವೆನ್ನುವುದು ಅವರಿಗೂ ಇದೆ. ಸಂಸಾರದಲ್ಲಿ ಎಲ್ಲರೂ ಬೇಯುತ್ತಾರೆ. ಇಲ್ಲಿ 'ಸಂಸಾರ'ವೆಂಬುದು ದುಃಖಕ್ಕೆ ಕಾರಣವೆಂದು ಪ್ರತಿಪಾದಿತವಾಗಿದೆ ಎನ್ನುವುದು ಗಮನಾರ್ಹ.

## ೭೮. ಅಮಾನಿತ

ಈಗಾಗಲೇ "ಗೌರವವಿಲ್ಲದ, ಮರೆಯಾದ, ಹೊರಟುಹೋದ" ಎಂಬರ್ಥವಿತ್ತು ಅದಕ್ಕೆ ಪೊನ್ನನಿಂದಲೇ ಪ್ರಯೋಗವಿತ್ತು(೧-೯೩ ವ) ಅಮಾನಿತ ಎಂಬ ಶಬ್ದ ಕೊಟ್ಟಿದ್ದಾರೆ (ಪುಟ ೩೪೫). ಆದರೆ "ಅಳತೆಮೀರಿದ, ಅಸಾಧ್ಯವಾದ" ಎಂಬರ್ಥ ದಲ್ಲಿಯೂ ಅಮಾನಿತ ಪದವನ್ನು ಪೊನ್ನ ಬಳಸಿದ್ದಾನೆ:

*ಆ ದಿನದೊಳ್ ಹಸ್ತಿನಪುರ*
*ಕಾದುತ್ಸವಮೆಳೆಯೊಳನಿತೆನಲ್ಕೆಡೆಗಾಣ ।*
*ಲ್ಕೋದಿದಿದಗಾಳು**ಗಮಾನಿತ***
*ಮಾದುದಸಂಜಾತಪೂರ್ವ ವಿಸ್ಮಯದಿಂದಂ ॥ (ಶಾಂತಿಪುರಾಣ ೧೦-೭೪)*

ಅಮಾನಿತ ಎಂಬುದು ಸಂಸ್ಕೃತ ಶಬ್ದ.

ಮಾನಿತವೆಂದರೆ ಮಾನ್ಯವಾಗಿರುವಂಥದ್ದು.; 'ಮಾನ' ವಿಧಿ-ನಿಷೇಧವನ್ನು ಆಧರಿಸಿಕೊಂಡು ರೂಪುಗೊಳ್ಳುತ್ತದೆ. ಮಾನ-ಅವಮಾನ; ನ್ಯಾಯ-ಅನ್ಯಾಯ; ಅಸತ್ಯ-ಸತ್ಯಗಳ ನಡುವಣ ರೇಖೆ ಬಹಳ ತೆಳುವಾಗಿರುವಂಥದ್ದು. 'ಮಾನ' ಎನ್ನುವ ಪದಕ್ಕೆ ಪೂರ್ವ ಪ್ರತ್ಯಯವಾಗಿ 'ಅ' ಎಂದು ಬಂದಿದೆ. ಇದು ಸಂಸ್ಕೃತದ ವ್ಯಾಕರಣಕ್ಕೆ ಸಂಬಂಧಪಟ್ಟಿದ್ದು. ಅವಮಾನ ಎಂದರೆ ಅಗೌರವ; ತಿರಸ್ಕಾರವೆಂಬ ಅರ್ಥವೂ ಸಂಸ್ಕೃತದಲ್ಲಿದೆ.

### ೭೯. ಅಮೂರ್ತ

ಮೂರ್ತವಲ್ಲದ್ದು ಅಮೂರ್ತ. ಮೂರ್ತವು ಕಣ್ಣಿಗೆ ಕಾಣಿಸುತ್ತದೆ. ಅಮೂರ್ತವು ಕಣ್ಣಿಗೆ ಕಾಣಿಸದ್ದು. ಅಂದರೆ ಅದು ಇಂದ್ರಿಯ ಗೋಚರವಲ್ಲ. ಸಂಸ್ಕೃತಿಯಲ್ಲಿ ಅಮೂರ್ತದ ಅಂಶಗಳು ಬಹಳ ಇರುತ್ತವೆ. ಕೆಲವು ವಾಸ್ತವಕ್ಕೆ ಸಂಬಂಧಿಸಿರುವುದಿಲ್ಲ. ಉದಾಹರಣೆ-ನಾವು ಆಲೋಚಿಸುವ ಕ್ರಮ. ನಮ್ಮ ಅಂತರಂಗ ಇಂದ್ರಿಯ ಗೋಚರವಲ್ಲ. ಅಮೂರ್ತಕ್ಕೆ ಈ ದೃಷ್ಟಿಯಿಂದ ಅನೇಕ ಮಜಲುಗಳಿವೆ. ಅಮೂರ್ತಕ್ಕೆ ಭೌತಿಕ ಅಸ್ತಿತ್ವವಿಲ್ಲ. ರೇಮಂಡ್ ವಿಲಿಯಂಸ್ ಪ್ರಕಾರ ಸಂಸ್ಕೃತಿಯು ಕೂಡಾ ಅಮೂರ್ತ ಮತ್ತು ಅಂತಿಮ ಸ್ವರೂಪದ್ದು. ಭೌತಿಕ ಸಂಸ್ಕೃತಿಯು ನಮ್ಮ ಕಣ್ಣಿಗೆ ಗೋಚರವಾಗುತ್ತದೆ. ಅದು ನಮ್ಮ ನೈತಿಕ ನಡವಳಿಕೆ; ಬೌದ್ಧಿಕ ಚಟುವಟಿಕೆಗಳಿಂದ ಕೂಡಿರುತ್ತದೆ. ಕೆಲವು ನಮ್ಮ ಅನುಭವಕ್ಕೆ ಗೋಚರವಾಗುವುದರಿಂದ ಅದನ್ನು ಭೌತಿಕ ರೂಪ ಎಂದು ಕರೆಯುತ್ತೇವೆ. ಅಮೂರ್ತವು ಹಾಗಲ್ಲ. ಆದುದರಿಂದ ಅಮೂರ್ತವನ್ನು ಮೂರ್ತರೂಪಕ್ಕೆ ತರಲು ನಾವು ಬಿಂಬಗಳನ್ನು ಆಧರಿಸುತ್ತೇವೆ.

*ವಿವರಗಳಿಗೆ ನೋಡಿ: Raymond Williams 1963 Culture and society P. 17.*

### ೮೦. ಅಮೃತಾವಾಸ

*ತ್ರೈಲೋಕ್ಯನಾಥಂ ಕುಡುಗೆಮ **ಗಮೃತಾವಾಸ**ಮಂ ವೀರನಾಥಂ*
*(ಸುಕುಮಾರ ಚರಿತಂ ಪ.ಸಂ. ೧ ಪ್ರಥಮಾಶ್ವಾಸಂ)*

ಮೃತವಲ್ಲದಿರುವುದು ಅಮೃತ. ಅಮೃತಾವಾಸವೆಂದರೆ ಮೋಕ್ಷಪದವಿ. "ತ್ರೈಲೋಕ್ಯನಾಥಂ ಕೊಡುಗೆ ಮಗಮೃತಾವಾಸಂ" ಎಂದು ಶಾಂತಿನಾಥ ಕವಿಯು ಬಣ್ಣಿಸಿದ್ದಾನೆ. ಕವಿಯ ಪ್ರಾರ್ಥನೆಯು ಗಮನಾರ್ಹ. ಅಂದರೆ ತನಗೆ ಮೋಕ್ಷ ಪದವಿಯು ದೊರಕಲಿ

ಎಂದು ಅವನ ಆಶಯ. ಮೋಕ್ಷವು ತನಗೆ ದೊರೆಯಲಿ ಎಂಬ ಅವನ ಅಭಿಲಾಷೆಯು ಹಾಗೂ ಅವನ ಜೈನತತ್ವದ ನಿಲುವುಗಳು ಇದರಲ್ಲಿ ವ್ಯಕ್ತವಾಗಿದೆ.

ಅಮೃತವೆಂದರೆ ನಿತ್ಯ; ಶಾಶ್ವತ; ಮುಕ್ತಿ, ಮೋಕ್ಷವೆಂಬ ಅರ್ಥಗಳಿವೆ. ಯಾವುದು ಶಾಶ್ವತವೆಂದು ಅನಿಸುತ್ತದೆಯೋ ಅದರಲ್ಲಿ ವಾಸಿಸುವುದು ಅಮೃತಾವಾಸ ಎಂದನ್ನಿಸಿ ಕೊಳ್ಳುತ್ತದೆ.

*ವಿವರಗಳಿಗೆ ನೋಡಿ: ಅನಶನ; ಸಲ್ಲೇಖನ.*

**೮೧. ಅಮ್ಮ**

*................ಅಮ್ಮಾ ವ್ರತಂಗಳಂ ಕೊಟ್ಟರಿಸಿಯರ್ಗ್...........*

*(ವಡ್ಡಾರಾಧನೆ – ಸುಕುಮಾರ ಸ್ವಾಮಿಯ ಕತೆ)*

ಹಳೆಗನ್ನಡದಲ್ಲಿ 'ಅಮ್ಮ' ಎಂದರೆ ತಂದೆ ಎಂದರ್ಥ. 'ಅಮ್ಮನ್' ಎಂದು ಬಳಕೆಯಾಗುವುದೇ ಹೆಚ್ಚು. ಕೃಷ್ಣನು ಕರ್ಣನನ್ನು ಅಧೀರವನ್ನಾಗಿ ಮಾಡುವ ಸಂದರ್ಭದಲ್ಲಿ 'ನಿನಗಮ್ಮನಹರ್ಪತಿ' ಎಂದು ಹೇಳುತ್ತಾನೆ. 'ಅಮ್ಮನ ಗಂಧವಾರಣ' ಎಂಬಲ್ಲಿಯೂ ತಂದೆಯ ಪಾಲಿಗೆ ಮದಗಜದಂತೆ ಎಂಬರ್ಥವೇ ಬರುತ್ತದೆ. ಹೊಸಗನ್ನಡದಲ್ಲಿ ಅಮ್ಮ ಎಂದರೆ ತಾಯಿ. ತುಳುವಿನಲ್ಲಿಯೂ ತಂದೆಗೆ 'ಅಮ್ಮ' ಎಂದೇ ಕರೆಯುತ್ತಾರೆ. ತಾಯಿಗೆ "ಅಪ್ಪೆ" ಎನ್ನುತ್ತಾರೆ. ಮಾರಿದೇವತೆಯನ್ನು ಅಮ್ಮನೆಂದು ಕರೆಯುತ್ತಾರೆ. ಸಿಡುಬು; ಮುಂತಾದವು ಮಾರಿಯಮ್ಮನಿಂದ ಬರುತ್ತದೆ. ಪ್ಲೇಗಮ್ಮನ ದೇವಸ್ಥಾನವೆಂದು ಗುಡಿಯನ್ನು ಕಟ್ಟುತ್ತಾರೆ. ಧಾರವಾಡ ಕಡೆ ಅಮ್ಮನೆಂದರೆ ವಿಧವೆಯೆಂಬ ಅರ್ಥವೂ ಇದೆ. ಅಬ್ಬೆ, ಅಮ, ಅಪ, ಅವೆ; ಅವ್ವ ಎಂದರೆ ತಾಯಿ.

*ವಿವರಗಳಿಗೆ ನೋಡಿ: ಮಾತೃದೇವತೆ: ಬಾದುಬ್ಬೆ: ಕ್ರೂರದೇವತೆಗಳು.*

**೮೨. ಅರಗಿನ ಅರಮನೆ**

*ಅರಗು ಮೊದಲಾಗೆ ಘೃತ ಸ*
*ಜ್ಜರಸಂ ಬೆಲ್ಲಂ ಸಣಂಬಿವೆಂಬಿವಱಿಂ ವಿ ।*
*ಸ್ತರಿಸಿ ಸಮೆದಿಂದ್ರಭವನಮೆ*
*ಧರೆಗವತರಿಸಿರ್ದುದೆನಿಸು***ವರೆಗಿನ ಮನೆಯುಂ** *॥ (ಪಂಪ ಭಾರತ ೩–೩)*

ತುಪ್ಪ, ಸಜ್ಜರಸ, ಸಣಂಬಿನ ರಸ, ಬೆಲ್ಲ ಅರಗು ಇವುಗಳಿಂದ ನಿರ್ಮಿಸಿದ ದೇವೇಂದ್ರನರಮನೆ ಭೂಮಿಗಿಳಿದು ಬಂದಿದೆಯೋ ಎನಿಸಿದ್ದ ಅರಗಿನ ಮನೆಯನ್ನು ಕಟ್ಟಿದ ವಿವರವಿದೆ. ಅರಗು; ತುಪ್ಪ; ಬೆಲ್ಲ ಇವು ಬಿಸಿಗೆ ಕರಗುತ್ತವೆ. ಅರಗನ್ನು ಈಗಲೂ ಬಳಸುತ್ತಾರೆ. ಅದಕ್ಕೆ ಅಂಟುವ ಗುಣವಿದೆ. ಹಾಗೆಯೇ ಬೆಂಕಿಗೆ ಜ್ವಾಲೆಯೆಬ್ಬಿಸುವ ಗುಣವಿದೆ. ಬೆಲ್ಲ; ಸುಣ್ಣದ ಮಿಶ್ರಣವನ್ನು ಹಿಂದೆ ಗಾರೆಗೆ ಬಳಸುತ್ತಿದ್ದರು. ಪುರೋಚನನು ನಿರ್ಮಿಸಿದ ಈ ಅರಗಿನ ಅರಮನೆಗೆ ಜತುಗೃಹವೆಂದು ಕರೆಯುತ್ತಿದ್ದರು. ಗಮನಿಸಬೇಕಾದ

ಅಂಶವೆಂದರೆ ತಂತ್ರಜ್ಞಾನದ ಬಳಕೆ. ಪಂಪ ಭಾರತದಲ್ಲಿ ಅನಂತರದ ಪದ್ಯಭಾಗದಲ್ಲಿ ಇಡಿ ಅರಮನೆಗೆ ಇಟ್ಟಿಗೆ, ಮರ ಬಳಸಿಲ್ಲವೆಂಬ ಅನುಮಾನ ವ್ಯಕ್ತವಾಗಿದೆ. ಅಂದರೆ; ಹತ್ತನೆಯ ಶತಮಾನದಲ್ಲಿ ಇಟ್ಟಿಗೆ, ಮರಗಳು ಅರಮನೆಯ ಕಟ್ಟಡ ನಿರ್ಮಾಣಕ್ಕೆ ಸಹಾಯ ಮಾಡಿತ್ತು ಎಂಬುದು ಕೂಡಾ ಅಷ್ಟೇ ಗಮನಾರ್ಹ.

**೮೩. ಅರಣ್ಯಕ**

ಕಾಡಿನಲ್ಲಿ ಹುಟ್ಟಿದ್ದು; ಅರಣ್ಯಕ್ಕೆ ಸಂಬಂಧಿಸಿದ್ದು. ಅರಣ್ಯಕವೆಂದರೆ ಅದು ಉಪನಿಷತ್ತಿನ ಹೆಸರೂ ಹೌದು, ಪವಿತ್ರಕೃತಿ. "ಕ" ಅಂದರೆ ಚಲಿಸಿದ್ದು.

ಅರಣ್ಯಕವು ಬ್ರಾಹ್ಮಣದ ಒಂದು ಭಾಗ. ಇದು ತತ್ವಜ್ಞಾನಕ್ಕೆ ಸಂಬಂಧಿಸಿದೆ. ಇದರಲ್ಲಿ ಬರುವ ಅನೇಕ ಮಂತ್ರಗಳು ಧ್ಯಾನದ ಅನೇಕ ವಿಷಯಗಳನ್ನು ತಿಳಿಸುತ್ತವೆ. ಸಾಂಕೇತಿಕ ಆರಾಧನೆಯನ್ನು ಕೂಡಾ ಇದು ತಿಳಿಸುತ್ತದೆ. ಆದರೆ ಇಲ್ಲಿರುವ ಅನೇಕ ಸಂಗತಿಗಳು ಯಾರು ಅರಣ್ಯದಲ್ಲಿ ವಾಸಿಸಿದ್ದಾರೋ ಅವರಿಂದ ರಚಿತವಾಗಿದೆ. ಅರಣ್ಯಕಗಳು ಅರಣ್ಯದಲ್ಲಿ ಅಧ್ಯಯನ ಮಾಡಲು ಯೋಗ್ಯವಾದ ಗ್ರಂಥಗಳೆಂದು ತಿಳಿಯಲ್ಪಟ್ಟಿದ್ದವು. ಗೃಹಸ್ಥರು ವಾನಪ್ರಸ್ಥಾಶ್ರಮದಲ್ಲಿ ಅರಣ್ಯಗಳಲ್ಲಿ ಇದನ್ನು ಅಧ್ಯಯನ ಮಾಡುತ್ತಿದ್ದರು. ಅರಣ್ಯದಲ್ಲಿ ಅಧ್ಯಯನ ಮಾಡುವುದರಿಂದ ಇದಕ್ಕೆ ಅರಣ್ಯಕಗಳೆಂದು ಹೆಸರು ಬಂತು. ಅರಣ ಈ ಶಬ್ದವು 'ಯ' ಗತ್ಯರ್ಥಕ ಧಾತುವುನಿಂದ ಉಂಟಾಗಿದೆ. ಅರಣವೆಂದರೆ ಜ್ಞಾನವೆಂದೂ ಅರ್ಥವಿದೆ.

ಸಾಮಗಾನ ಶ್ರವಣ ಮಾಡಿದರೆ, ಅರಣ್ಯಕ ಓದಿದರೆ ಋಗ್ಯಜುರ್ವೇದಗಳನ್ನು ಓದಬಾರದು ಎಂದು ಮನು ಹೇಳುತ್ತಾನೆ. ಇದು ಗಮನಾರ್ಹ ಸಂಗತಿಯಾಗಿದೆ.

ಅರಣ್ಯಕಗಳು ಯಜ್ಞ ವಿಧಾನವನ್ನು ಪೂರ್ಣ ವಿರೋಧಿಸುವುದೂ ಇಲ್ಲ. ಅದಕ್ಕೆ ಸಂಪೂರ್ಣ ಬೆಂಬಲವನ್ನೂ ನೀಡುವುದಿಲ್ಲ. ಅವು ಮುಖ್ಯವಾಗಿ ಯಜ್ಞದ ಲಾಕ್ಷಣಿಕ ಹಾಗೂ ರಹಸ್ಯಮಯ ರೂಪವನ್ನು ವಿವೇಚಿಸುತ್ತವೆ. ಅವು ಯಜ್ಞವನ್ನು ಆಧ್ಯಾತ್ಮಿಕ ದೃಷ್ಟಿಕೋನದಿಂದ ನಿರೀಕ್ಷಿಸಿವೆ. ಅದರಿಂದ ಕ್ರಿಯಾ ಕಾಂಡಕ್ಕಿಂತ ಚಿಂತನ ಪರಿಸ್ಥಿತಿಗೆ ಹೆಚ್ಚು ಮಹತ್ವವು ಅರಣ್ಯಕಗಳಿಂದ ಪ್ರಾಪ್ತವಾಗಿದೆ. ಬ್ರಾಹ್ಮಣ ಗ್ರಂಥಗಳ ಅತ್ಯುಚ್ಚ ಗುರಿಯು ಸ್ವರ್ಗ ಪ್ರಾಪ್ತಿ. ಅದಕ್ಕೆ ಯಜ್ಞವೊಂದು ಸಾಧನವೆನಿಸಿತ್ತು. ಆದರೆ ಅರಣ್ಯಕಗಳಲ್ಲಿ ಬ್ರಹ್ಮವನ್ನು ಅರಿಯುವದಕ್ಕಾಗಿ ಆತ್ಮಸಂಯಮದ ಆಧಾರದ ಮೇಲೆ ಕೈಕೊಳ್ಳಬೇಕಾದ ಅನೇಕ ಉಪಾಸನೆಗಳನ್ನು ವಿವರಿಸಲಾಗಿದೆ. ತೈತ್ತಿರೀಯ ಅರಣ್ಯಕದಲ್ಲಿ (೨-೭-೧) 'ಶ್ರಮಣ' ಶಬ್ಧವು ಮೊತ್ತಮೊದಲ ಸಲ ಬರುತ್ತದೆ. ಈ ಶ್ರಮಣ ತಪಸ್ವೀ ಎಂಬ ಅರ್ಥದಲ್ಲಿ ಶ್ರಮಣ ಪದದ ಪ್ರಯೋಗವಿದೆ. ಈ ಅರಣ್ಯಕದಲ್ಲಿ ಕಾಶಿ, ಪಂಚಾಲ, ಮತ್ಸ್ಯ, ಕುರುಕ್ಷೇತ್ರ ಖಾಂಡವಗಳ ಉಲ್ಲೇಖವಿದೆ. ಈ ಭಾಗಗಳ ಶ್ರಮಣ ಧರ್ಮದ ಪ್ರಭಾವವು, ಬ್ರಾಹ್ಮಣ ಧರ್ಮದ ಮೇಲೆ ಅದು ಕಂಡುಬರುತ್ತದೆ. ಯಜ್ಞೋಪವೀತದ ಉಲ್ಲೇಖವು ಕೂಡ ಇದೆ. ಅರಣ್ಯಕದಲ್ಲಿ (೨-೧-೫) ಮೊತ್ತಮೊದಲ ಸಲ ಬಂದಿದೆ.

ಯಜ್ಞೋಪವೀತವನ್ನು ಧರಿಸಿದ ಬ್ರಾಹ್ಮಣನು ಮಾಡುವ ಅಧ್ಯಯನವು ಯಜ್ಞವೆನಿಸಿದೆ. ಅರಣ್ಯಕಗಳಲ್ಲಿ ವರ್ಣಾಶ್ರಮ ಧರ್ಮದ ಪೂರ್ಣ ವಿಕಾಸವು ಕಂಡು ಬರುತ್ತದೆ. ಯಜ್ಞ ಹಾಗೂ ಬ್ರಾಹ್ಮಣರ ವಿರುದ್ಧವಿದ್ದ ಸಿದ್ಧಾಂತಗಳನ್ನು ಅರಗಿಸಿಕೊಳ್ಳುವುದಕ್ಕಾಗಿ ಬ್ರಾಹ್ಮಣ ಧರ್ಮವು ವರ್ಣಾಶ್ರಮ ಧರ್ಮವನ್ನು ತನ್ನದನ್ನಾಗಿ ಮಾಡಿಕೊಂಡಿತು.

ಮಿರ್ಜಿ ಅಣ್ಣಾರಾಯರ ಅಭಿಪ್ರಾಯದಂತೆ ಅರಣ್ಯಕಗಳು ಯಜ್ಞವಿಧಾನವನ್ನು ಪೂರ್ಣ ವಿರೋಧಿಸುವುದೂ ಇಲ್ಲ. ಅದನ್ನೆ ಸಂಪೂರ್ಣ ಬೆಂಬಲವನ್ನು ಕೊಡುವುದಿಲ್ಲ. ಮೇಲೇರುವುದಕ್ಕೆ ಬೇಕಾದ ಆಧಾರಗಳನ್ನು ಅವರು ನೀಡಿದ್ದಾರೆ. ಹಾಗೂ ಅವರು ಹೇಳುವಂತೆ ಯಜ್ಞೋಪವೀತವನ್ನು ಧರಿಸಿದವನು ಯಜ್ಞಮಾಡಲು ಹಕ್ಕುದಾರನಾಗಿರುತ್ತಾನೆ. ಅರಣ್ಯಕಗಳಲ್ಲಿ ಚಿಂತನೆಯೇ ಪ್ರಧಾನವಾದ ಅಂಶವೆಂಬ ಅವರ ವಾದವು ಗಮನಾರ್ಹವಾಗಿದೆ.

*ವಿವರಗಳಿಗೆ ನೋಡಿ: ಚಿದಂಬರಾನಂದ ೧೯೭೭ ಋಗ್ವೇದ ರಹಸ್ಯ ಪುಟ. ೬*
*ಮಿರ್ಜಿ ಅಣ್ಣಾರಾಯ ೨೦೦೬ ಮಿರ್ಜಿ ಅಣ್ಣಾರಾಯರ ಆಯ್ದ ಲೇಖನಗಳು*
*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೪-೧೨೩*
*ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳವರು ೧೯೭೩ ಶ್ರೀ ಶಾಂಕರ ಭಾಷ್ಯಸಮೇತ*
*ಸ್ವಾಮಿ ಆದಿದೇವಾನಂದ ೧೯೪೬ ತೈತ್ತರೀಯಾ ಉಪನಿಷತ್ತು*

### ೮೪. ಅರಬೊಜಂಗ

*.............ಚೆಲ್ವನಾಯ್ತರ ಬೊಜಂಗರ ಲೀಲೆ ಸುರೇಂದ್ರ ಲೀಲೆಯಿಂ*
*(ಪಂಪ ಭಾರತ ४-೮೭)*

ಅರಬೊಜಂಗನೆಂದರೆ ರಾಜವಿಟನೆಂದು ಅರ್ಥ. ವಿಟನೆಂದರೆ ಕಾಮುಕ: ಜಾರ.

ಪಂಪಭಾರತದಲ್ಲಿ ರಾಜವಿಟ, ಸಾಮಾನ್ಯವಿಟ, ಕಸ್ತೂರಿಯನ್ನು ಲೇಪಿಸಿಕೊಂಡ ವಿಟನೆಂಬ ಪ್ರಭೇದವನ್ನು ಹೇಳಲಾಗಿದೆ. (ಪಂಪ ಭಾರತ ४-೮೭ ವ)

ರಾಜನೇ ವಿಟನಾಗುವುದು ರಾಜವಿಟ. ಇದರಲ್ಲಿ ರಾಜನು ವೇಶ್ಯಾಬೀದಿಯಲ್ಲಿ ಸಂಚರಿಸಿದರೂ ಅವಮರ್ಯಾದೆಯಲ್ಲ. ಅದು ರಸಿಕತೆಯ ಸಂಕೇತ. ಸಾಮಾನ್ಯ ವಿಟನು ಬರಿಯ ಜಾರನಾಗಿರುತ್ತಾನೆಂದು ಹಳೆಗನ್ನಡ ಕಾವ್ಯಗಳು ಹೇಳುತ್ತವೆ.

### ೮೫. ಅರಾಜಕತೆ

ಅತ್ತೆ – ಅಳಿಯರ ಸಂಬಂಧಕ್ಕೆ ಲಕ್ಷ್ಮೀಮತಿ ಮಹಾದೇವಿ ಮತ್ತು ವಜ್ರಜಂಘನ ಉದಾಹರಣೆಯನ್ನು ಕೊಡಬಹುದು. 'ಆದಿಪುರಾಣ' ಕೃತಿಯಲ್ಲಿ ಬರುವ ಈ ಸನ್ನಿವೇಶದಲ್ಲಿ ಅತ್ತೆಯು ತನ್ನ ರಾಜ್ಯದ ಅರಾಜಕ ಸ್ಥಿತಿಯ ಕುರಿತಾಗಿ ವಿವರವಾದ ಪತ್ರವನ್ನು ಅಳಿಯನಿಗೆ ಬರೆಸಿ, ಅವನ ಸಹಾಯವನ್ನು ಯಾಚಿಸುತ್ತಾಳೆ. (४-೮೨ವ ೮೩)

ಮಾನವಶಾಸ್ತ್ರಜ್ಞರ ಪ್ರಕಾರ, ಅತ್ತೆ–ಸೊಸೆಯರ ಸಂಬಂಧವು ವಿರೋಧ ಸಂಬಂಧ

ವಾಗಿದೆ. ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಅತ್ತೆ – ಸೊಸೆಯರ ಸಂಬಂಧವನ್ನು ಮರ್ಯಾದಿತ ಅಂತರವಿರುವಂತೆ ಚಿತ್ರಿಸಲಾಗಿದೆ. ಇಲ್ಲಿ ಕೆಲವು ಉದಾಹರಣೆಗಳನ್ನು ಮಾತ್ರ ಕೊಡಬಹುದಾಗಿದೆ. ಗಂಡಂದಿರು ರಾಜ್ಯ ಬಿಟ್ಟು ಹೋದ ಸನ್ನಿವೇಶದಲ್ಲಿ ಅತ್ತೆ – ಸೊಸೆಯರು (ಲಕ್ಷ್ಮೀಮತಿ, ಅನುಂದರಿ) ರಾಜ್ಯದಲ್ಲುಳಿದ ಸನ್ನಿವೇಶವು 'ಆದಿಪುರಾಣ' ದಲ್ಲಿ ಬಂದಿದೆ. (೪–೮೧ವ) ಸೊಸೆಯರು ಗರ್ಭಧರಿಸಿ ವಂಶೋದ್ಧಾರವನ್ನು ಮಾಡಬೇಕೆಂದು 'ಪಂಪಭಾರತ'ದಲ್ಲಿ ಬರುತ್ತದೆ. ಇದು ರಾಜಕೀಯ ಪರಿಭಾಷೆ. ಯಾವಾಗ ಒಂದು ದೇಶದಲ್ಲಿ ರಾಜಕೀಯ ವ್ಯವಸ್ಥೆಯು ಸರಿಯಿರುವುದಿಲ್ಲವೋ ಆಗ ಅರಾಜಕತೆಯು ಉಂಟಾಗುತ್ತದೆ. ಅರಾಜಕತೆಯೆಂಬುದೇ ರಾಜನಿಲ್ಲದ ಸ್ಥಿತಿಯೆಂಬುದನ್ನು ಹೇಳುತ್ತದೆ. ಅರಾಜಕತೆಯುಂಟಾದಾಗ ದೇಶದಲ್ಲಿ ದೊಂಬಿ; ಗಲಭೆಗಳು ನಡೆಯುತ್ತವೆ. ಅಲ್ಲಿ ನ್ಯಾಯ ಸಂಹಿತೆಗಳು ಇರುವುದಿಲ್ಲ. ಇನ್ನೊಂದು ದೃಷ್ಟಿಯಿಂದ ಅರಾಜಕತೆಯು ವ್ಯಕ್ತಿವಾದವನ್ನು ಹೆಚ್ಚು ಪುರಸ್ಕರಿಸುತ್ತದೆ.

*ವಿವರಗಳಿಗೆ ನೋಡಿ: Raymond Williams 1983 Keywords P. 38.*

**೮೬. ಅಱಿವು**

***ಅಱಿವು** ನೆಗಟ್ತೆಯೆಂಬುಭಯಕಾಂಡಮೆ ಮುಕ್ತಿಪಥಕ್ಕೆ ಹೇತುವೆಂದು..............*

*(ಅಜಿತ ತೀರ್ಥಂಕರ ಪುರಾಣ ತಿಲಕಂ ೧–೯)*

ಅಱಿವು ಮತ್ತು ನೆಗಟ್ತೆ (ಕೆಲಸ: ಕೀರ್ತಿ, ನಡತೆ: ಆಚಾರ:) ಇವು ಮುಕ್ತಿ ಪಥಕ್ಕೆ ಹೇತುವೆಂದು ರನ್ನನ ಅಭಿಪ್ರಾಯ. ಮುಕ್ತಿಯನ್ನು ಪಡೆಯುವುದನ್ನು ಮೊದಲು ಅರಿಯಬೇಕು. ಅಂದರೆ ಮುಕ್ತಿಪಥದ ಜ್ಞಾನ(ತಿಳುವಳಿಕೆ) ಬೇಕು. ಅನಂತರ ಅದಕ್ಕೆ ಬೇಕಾದ ಆಚಾರಗಳು ಬೇಕು. ಇದರಿಂದ ಮೋಕ್ಷವು ಸಾಧ್ಯ. ಮಿಕ್ಕ ರೀತಿಯ ನಂಬಿಕೆಯು ಅರ್ಥಹೀನ. ಮಿಕ್ಕ ಧಾರ್ಮಿಕ ಮಾರ್ಗಗಳು ಅಪಮಾರ್ಗವನ್ನು ಹೊಂದಿದೆ. ಇದು ರನ್ನ ಅನ್ಯಮತವನ್ನು ಖಂಡಿಸುವ ರೀತಿಯೂ ಹೌದು.

**೮೭. ಅರ್ಘ್ಯ**

*ಪರಶುರಾಮನ ಬರವಂ ಗಾಂಗೇಯಂ ಕೇಳ್ದಿದಿರ್ವಂದು ಕನಕ, ರಜತ, ಪಾತ್ರಂಗಳೊಳ**ರ್ಘ್ಯ**ಮಂಕೊಟ್ಟು........ (ಪಂಪ ಭಾರತ ೧–೭೭ ವ)*

ಕೈ ತೊಳೆದುಕೊಳ್ಳುವುದಕ್ಕಾಗಿ ಕೊಡುವ ನೀರು, ಪೂಜಾದ್ರವ್ಯವನ್ನು ಅರ್ಘ್ಯವೆಂದು ಕರೆಯುತ್ತಾರೆ. ಇದು ಪೂಜೆಯ ಕ್ರಿಯೆಯಲ್ಲಿಯೂ ಬರುತ್ತದೆ.

ಅರ್ಘ್ಯವೆಂದರೆ –ದೇವರಿಗೆ ಅರ್ಪಿಸುವ ಪವಿತ್ರ ಜಲ. ಇದು ಧಾರ್ಮಿಕ ಕ್ರಿಯೆಯನ್ನು ಸೂಚಿಸುತ್ತದೆ. ದೇವರಿಗೆ ಅರ್ಘ್ಯವನ್ನು ನೀಡುವುದು ಎಂದರೆ ಮಂತ್ರಪೂರ್ವಕವಾಗಿ ಜಲವನ್ನು ಅರ್ಪಿಸುವುದು. ಇದು ಪವಿತ್ರ ಆಚರಣೆಯ ಒಂದು ಭಾಗ. ಅರ್ಘ್ಯವು ವೈದಿಕ ಸಂಪ್ರದಾಯದಲ್ಲಿ ಇಂದಿಗೂ ಇದೆ. ಆದರೆ ಅವೈದಿಕ ಪರಂಪರೆಯಲ್ಲಿ ಇಲ್ಲ ಗಮನಾರ್ಹ.

೮೮. ಅರ್ಥಿ

*ವಿಸಸನದೊಳ್ ವಿರೋಧಿ ನೃಪರಂ ತಱಿದೊಟ್ಟಲುಮರ್ಥಿಗರ್ಥಮಂ*

*ಕಸವಿನ ಲೆಕ್ಕಮೆಂದು ಕುಡಲುಂ" (ಪಂಪ ಭಾರತ ೧-೧೧೭)*

ಅರ್ಥಿಯೆಂದರೆ ಯಾಚಕ, ಬಯಸಿದಾತ, 'ಅರ್ಥೀ ದೋಷಂ ನಪಶ್ಯತಿ' (ಕೀರ್ತಿ ಬಯಸಿದಾತನಿಗೆ ದೋಷವು ಕಾಣಿಸದು) ಇಲ್ಲಿ ಅರ್ಥಿಗೆ – ಅರ್ಥವನ್ನು ನೀಡುವುದು ಅಷ್ಟೇ. ಇದೇ ರೀತಿ ಕನ್ಯಾರ್ಥಿ, ದ್ರವ್ಯಾರ್ಥಿ, ವಿದ್ಯಾರ್ಥಿ, ದಾನಾರ್ಥಿ ಮುಂತಾದ ಪದಗಳಿವೆ.

ಯುದ್ಧದಲ್ಲಿ ಶತ್ರುರಾಜರನ್ನು ತರಿದೊಡ್ಡಿ ಯಾಚಕರಿಗೆ ದ್ರವ್ಯವನ್ನು ಕಸಕ್ಕೆ ಸಮಾನವಾಗಿ ಎಣಿಸಿ ದಾನ ಮಾಡುವವನು ಎಂದು ಪಂಪಭಾರತದಲ್ಲಿ ಬರುತ್ತದೆ. ಯಾಚಕನೆಂದರೆ ಅಪೇಕ್ಷಿಸುವವನು; ದಾನ ಬೇಡುವವನು ಎಂದರ್ಥ.

ಬೇಡುವವನ ಕೈಕೆಳಗೆ ಮತ್ತು ಕೊಡುವವನ ಕೈ ಮೇಲೆ ಇರುತ್ತದೆಯೆಂಬ ನಂಬಿಕೆಯು ಇದೆ. ಇದರ ಭಾವಾರ್ಥವಿಷ್ಟೇ: ದಾನ ಕೊಡುವವನು ಶ್ರೇಷ್ಠನೆಂದು ದಾನ ಬೇಡುವವನು ಕನಿಷ್ಠ ಆದುದರಿಂದಲೇ ಯಾಚಕ ಎಂಬ ಪದವು ಬಳಕೆಯಾಗುತ್ತದೆ.

೮೯. ಅರ್ಧ ಗಪ್ಪಡ ಸಂಘ

*ಮಹಾದೇವಿ ಈ ನಿನ್ನ**ರ್ಧಗಪ್ಪಡದ ಯತಿ**ಯರ ಧರ್ಮಮೊಳ್ಳಿತಲ್ತಿವರುಟ್ಟರುಮಲ್ಲರ್ ಬತ್ತಲೆಗರುಮಲ್ಲರೆಂದು ನುಡಿದು ಮತ್ತೊಂದು ದಿವಸಮರ್ಧ**ಗಪ್ಪಡದ ಸಂಘ**ಮನರಸಂ ಬಟೆಯಟ್ಟಿ ವರಿಸಿ ಇಂತೆಂದಂ ನೀಮರ್ಧಗಪ್ಪಡಮಂ ಬಿಸುಟ್ಟು ನಿರ್ಗ್ರಂಥಮಪ್ಪರಿಸಿ ರೂಪಂ ಕೈಕೊಂಡುಬಟೆಯೆ ತಪಂಗೆಯುದೆಂದೊಡವ ರೊಲ್ಲದಿರ್ದೊಡರಸಂ.........*

*(ಡಿ.ಎಲ್.ಎನ್.೨೦೦೯ ಪು. ೧೩೭)*

ಅರ್ಧಗಪ್ಪಡವೆಂದರೆ ಅರೆ ವಸ್ತ್ರಧಾರಣೆಯೆಂದು ಅರ್ಥ. ಅರ್ಧಗಪ್ಪಡ ಸಂಘವೆಂದರೆ ಅರ್ಧಗಪ್ಪಡ ಸಂಪ್ರದಾಯದ ಮುನಿಗಳ ಸಂಘವೆಂದು ಅರ್ಥ. ವಡ್ಡಾರಾಧನೆಯ ಕೃತಿಕಾರನು ಅವನ್ನು ಹೇಳುತ್ತಿದ್ದಾನೆ.

೯೦. ಅರ್ಧಚಕ್ರಿ

ಭರತಕ್ಷೇತ್ರದ ಆರು ಖಂಡಗಳಲ್ಲಿ ಮೂರು ಖಂಡಗಳ ಅಧಿಪತಿಯನ್ನು ಅರ್ಧಚಕ್ರಿಯೆಂದು ಕರೆಯುತ್ತಾರೆ. ಆರು ಖಂಡಗಳು ಸೇರಿದರೆ ಒಂದು ಚಕ್ರವಾಗುತ್ತದೆ. ಆರು ಖಂಡಗಳನ್ನು ಯಾರು ಆಳುತ್ತಾರೋ ಅವರಿಗೆ ಚಕ್ರಾಧಿಪತಿಗಳೆಂದು ಕರೆಯುತ್ತಾರೆ ಎಂಬುದು ಗಮನಾರ್ಹ.

೯೧. ಅರ್ಧರಥಿ

*ಇನನಂದನನುಂ ದುಶ್ಯಾ*

*ಸನನುಂ ವೃಷಸೇನನುಂ ಘಟೋತ್ಕಚನುಂ ಮ ।*

*ತ್ತಿನ ನಕುಳನುಮಾ ಸಹದೇ*
*ವನುಮರ್ಧರಥರ್ಕಳಿವರ್ಗಳಜಿವಾ ನೃಪತೀ ॥*

*(ಸಾಹಸಭೀಮ ವಿಜಯಂ ೩-೫೨)*

ಮಹಾಭಾರತದಲ್ಲಿನ ಕರ್ಣ, ದುಶ್ಯಾಸನ, ವೃಷಸೇನ, ಘಟೋತ್ಕಚ, ನಕುಲ ಮತ್ತು ಸಹದೇವ ಇವರು ಅರ್ಧರಥರು ಇವರು ಪರಿಣಿತರಲ್ಲದವರನ್ನು ತಮ್ಮ ಜೊತೆಗೆ ರಥದಲ್ಲಿರಿಸಿ ಯುದ್ಧ ಮಾಡುವಂಥವರು. ಅರ್ಧರಥನು ಐದು ಸಾವಿರ ಸೈನಿಕರನ್ನು ಪ್ರತಿಭಟಿಸಬಲ್ಲ ಸಾಮರ್ಥ್ಯವುಳ್ಳವನಾಗಿರುತ್ತಾನೆ.

*ವಿವರಗಳಿಗೆ ನೋಡಿ: ಅತಿರಥ.*

**೯೨. ಅರ್ಹತ್**

*"........ಪುದಿದಂತೊಪ್ಪಿರ್ಪರ್ಹ ತ್ವದಂಗಳೆಮಗೀಗೆ ತಡೆಯದರ್ಹತ್ವದಮಂ"...........*

*(ಆದಿಪುರಾಣ ೧೦-೫೩)*

ಪವಿತ್ರವಾದುದು ಮತ್ತು ಆರಾಧನೆಗೆ ಸಂಬಂಧಿಸಿದ್ದು. (ಅರ್ಹ ಎಂದರೆ ಪವಿತ್ರವಾಗುವುದು.) ಅರ್ಹತ್ ಎಂದರೆ ಜೈನಧರ್ಮದ ಪ್ರಕಾರ ಪಾವಿತ್ರ್ಯವನ್ನು ಗಳಿಸುವುದು.

ಹೀನಾಯಾನ ಬೌದ್ಧವಾದದ ಪ್ರಕಾರ ಅರ್ಹತ ಅಂದರೆ ಸಂತನಿಗೆ ಉಂಟಾಗುವ ಬೌದ್ಧಿಕವಿವೇಕ ಮತ್ತು ಅವನು ನೀಡುವ ಉಪದೇಶ.

ಅರ್ಹತ್ ಪದವೆಂದರೆ ಅರ್ಹಂತನ ಪದವಿಗೇರುವುದು ಎಂದರ್ಥ. ಜೈನಧರ್ಮದಲ್ಲಿ ಯೋಗಿಯ ಪರಮಗುರಿ ಅರ್ಹತ್ ಪದವಿಗೇರುವುದು. ಜೈನಧರ್ಮದ ಪ್ರಕಾರ ಇದು ಅತ್ಯಂತ ಪರಮೋಚ್ಚ ಸ್ಥಿತಿ. ಅರ್ಹತ್ ಪದವಿಗೆ ಏರಿದ ಮೇಲೆ ಮತ್ತೆ ಮರುಜನ್ಮವಿಲ್ಲ.

ಅರ್ಹಂತ ಪದವಿಗೇರುವುದೆಂದರೆ ಕೋಪ, ದುಃಖ, ಭಾವಾವೇಗ, ಅಜ್ಞಾನ, ದ್ವೇಷ, ಇವುಗಳನ್ನು ತೊರೆಯುವುದು. 'ಅಹಿಂಸೆ'ಯನ್ನು ಪರಮಧರ್ಮವನ್ನು ಪಡೆಯುವುದರ ಮೂಲಕ ಜೀವನ ಕ್ರಮವನ್ನು ಎತ್ತರಿಸಿಕೊಳ್ಳುವುದು. ಹಂತವೆಂದರೆ ಮೆಟ್ಟಿಲು. ಅರ್ಹಂತನೆಂದರೆ ಎಲ್ಲಾ ಮೆಟ್ಟಿಲು ಏರಿದವನು, ಜಿನ ಎಂದರ್ಥ.

ಅರ್ಹಂತರಿಗೆ ತೀರ್ಥಂಕರ, (ತೀರ್ಥವನ್ನು – ಸಂಸಾರ ನಿಸ್ತರಣೋಪಾಯವನ್ನು ಮಾಡುವವನು) ಜಿನ, (ರಾಗ ದ್ವೇಷಗಳನ್ನು ಇಲ್ಲವೆ ಕರ್ಮರೂಪ ಶತ್ರುಗಳನ್ನು ಜಯಿಸುವವ) ಪರಮೇಷ್ಠಿ, (ಪರಮಸ್ಥಾನದಲ್ಲಿರುವವ) ವೀತರಾಗ (ರಾಗವಿಲ್ಲದವ) ಎಂಬ ಬೇರೆ ಹೆಸರುಗಳೂ ಉಂಟು.

ಚತುರ್ವಿಧ ಘಾತಿಕರ್ಮಗಳನ್ನು ನಾಶಗೊಳಿಸಿದವನೂ, ಅನಂತಜ್ಞಾನ ದರ್ಶನ–ಸುಖ–ವೀರ್ಯಗಳುಳ್ಳವನೂ,

ಶುಭ್ರದೇಹವುಳ್ಳವನೂ, ಪರಿಶುದ್ಧನೂ ಆದವನು. ಅರ್ಹಂತರು ನಿಶ್ಚಯ ನಯಾನುಸಾರವಾಗಿ ಅಶರೀರರಾದರೂ ವ್ಯವಹಾರ ನಯಾನುಸಾರವಾಗಿ ಸಪ್ತಧಾತು

ರಹಿತ-ಅತ್ಯುಜ್ವಲ ಪವಿತ್ರ ದೇಹವುಳ್ಳವರು. ಇವರಲ್ಲಿ ಕ್ಷುಧೆ, ತೃಷೆ,ಭಯ, ದ್ವೇಷ, ರಾಗ, ಮೋಹ, ಚಿಂತೆ, ಜರೆ, ರೋಗ, ಮೃತ್ಯು, ಖೇದ, ಸ್ವೇದ, ಮದ, ಅರತಿ, ವಿಸ್ಮಯ, ಜನ್ಮ, ನಿದ್ರೆ, ವಿಷಾದ ಎಂಬ ೧೮ ತರದ ದೋಷಗಳಿರುವುದಿಲ್ಲ.

ಅರ್ಹಂತರು ವೀತರಾಗರು, ತೀರ್ಥಂಕರರೆನಿಸುವ ಇವರಿಗೆ ಅನಂತ ಜ್ಞಾನ ದರ್ಶನಗಳಿರುವುದರಿಂದ ಉಪದೇಶ ಮಾಡಲು ಯೋಗ್ಯರು. ಅಜ್ಞಾನಿಗಳು, ಅಲ್ಪಜೀವಿಗಳಿಗೆ ಮುಕ್ತಿಪಥವನ್ನು ತೋರಿಸಲು ಇವರು ಹೆಣಗುತ್ತಾರೆ.

*ವಿವರಗಳಿಗೆ ನೋಡಿ: ಮಿರ್ಜಿ ಅಣ್ಣಾರಾಯ ೨೦೦೬ ಮಿರ್ಜಿ ಅಣ್ಣಾರಾಯರ ಆಯ್ದ ಲೇಖನಗಳು ಪುಟ. ೪೭೭*

*ಗುರುಲಿಂಗಕಾಪಸೆ (ಸಂ ೧) ೨೦೦೬ ಮಧುರಚೆನ್ನರ ಲೇಖನಗಳು*

*ಮಹದೇವ ಪ್ರಭಾಕರ ಪೂಜಾರ ೧೯೭೬ ಜೈನಧರ್ಮ ಪರಿಭಾಷೆ ಪುಟ. ೧೦೭*

**೯೩. ಅಱಗುಲಿ**

*ಬಱೆಗೆಯ್ವುತಿರ್ದ ಮಾಯ್ದಱ*

***ಗುಲಿ*** *ಕರ್ವೇಡನಲ್ಲಿ ಮುದುಗಿಳಿಗಳುಮಂ (ಕರ್ಣಾಟಕ ಕಾದಂಬರಿ ೧-೧೪೯)*

ಇಲ್ಲಿ ಅಱ=ಧರ್ಮ ಎಂದರ್ಥ. ಕುಲಿ-ಕೊಲ್ಲುವವನು. ರನ್ನ - ಲಕ್ಷ್ಮೀ ವಿಡಂಬನೆಗೆ ಬಳಸಿದ ಪದ್ಯ (ಗದಾಯುದ್ಧ) 'ಅಱಗುಲಿ ನಿನ್ನಿಂ ನಿಕೃಷ್ಟರೆಂಬರುಮೊಳರೇ'

ಆದ್ದರಿಂದ ಅಱಗುಲಿ ಎಂದರೆ ಧರ್ಮವನ್ನು ನಾಶ ಮಾಡುವವನು. ಧರ್ಮಘಾತುಕ. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಇದನ್ನು ಬೈಗುಳ ವಾಚಕವಾಗಿಯೂ ಬಳಸಲಾಗಿದೆ. ಉದಾ-ಅಱಗುಲಿ ವೆಂಡಿರ್.

ನೈತಿಕತೆಯನ್ನು ಧ್ವಂಸ ಮಾಡುವವನು. ಪಾವಿತ್ರ್ಯವನ್ನು ನಾಶಮಾಡುವವನು ಎಂಬ ಅರ್ಥಗಳಿವೆ.

*ವಿವರಗಳಿಗೆ ನೋಡಿ: ಪಾಪ-ಪುಣ್ಯ: ಧರ್ಮ*

**೯೪. ಅಱೆಯಮಿಕೆ**

*'ಅಱೆಯದಿದಂ ಮಾಡಿದೆನೆ*

*ನ್ನಱೆಯಮಿಕೆ ಸೈರಿಸೆಂದು ನೀನ್ ಸಭೆಯೊಳ್‌ಕಾ*

*ಲ್ಗೆಱಗೆಱಗು ಕೊಲ್ಲೆನೆಂದೆರ್ದೆ*

*ತೆಱೆವಿನಗಂ ಹರಿಯನೆಱನನಸುರಂ ನುಡಿದಂ' (ಪಂಪ ಭಾರತ ೬-೫೮)*

ಅಱೆ ಎಂದರೆ ತಿಳಿ; ಜ್ಞಾನವೆಂಬ ಅರ್ಥಗಳಿವೆ. ಅಜ್ಞಾನದಿಂದ (ಅಱೆಯದಿದಂ) ಇದನ್ನು ಮಾಡಿದೆ ಎಂದು ಕಾಲಿಗೆ ಬೀಳು. ಕಾಲಿಗೆ ಬಿದ್ದರೆ ಕೊಲ್ಲುವುದಿಲ್ಲ ಎಂದು ಹೃದಯ ಭೇದಕವಾಗುವ ಹಾಗೆ ಶಿಶುಪಾಲನು ಕೃಷ್ಣನನ್ನು ನಿಂದಿಸಿದನು. ಕಾಲಿಗೆ ಬೀಳುವುದು ಎಂದರೆ ಶರಣಾಗುವುದು. ಶರಣಾದರೆ ಅವರನ್ನು ಕೊಲ್ಲಬಾರದು ಎನ್ನುವುದು

ರಾಜಧರ್ಮ.

ವೀರಯುಗದ ಮೌಲ್ಯಗಳಲ್ಲಿ ಶರಣಾಗತ ರಕ್ಷಣೆಯೂ ಒಂದು.

.............. ಬಂದು ತನ್ನ ಮೊರೆವೊಕ್ಕಡೆ ಕಾಯದೆ..........(ಪಂ.ಭಾ) ಸ್ಮರಿಸಿಕೊಳ್ಳಬಹುದು. ಶರಣಾಗತರಾದವರನ್ನು ರಕ್ಷಿಸಬೇಕು. ಎರಡನೆಯದಾಗಿ ಯುದ್ಧದಲ್ಲಿ ಶರಣಾಗುವುದೆಂದರೆ ತಮ್ಮ ಶಸ್ತ್ರಾಸ್ತ್ರಗಳನ್ನು ಕೆಳಗೆ ಬಿಸಾಡುವುದು. ಶರಣಾಗುವುದೆಂದರೆ ತನ್ನನ್ನು ಅರ್ಪಿಸಿಕೊಳ್ಳುವುದು.

*ವಿವರಗಳಿಗೆ ನೋಡಿ: ರಾಜರು.*

**೯೫. ಅಲಂಕಾರ**

*ನಿಜದಿಂದಂ ಚೆಲ್ವೆಗೆ ವಿಬು*
*ಧಜನಪ್ರಿಯೆಗಖಿಳಲೋಕವಿನುತ ಪ್ರಮದಾ*
*ಗ್ರಜೆಗೆ ಕೃತಿಸತಿಗೆ ಶಬ್ದಾ*
*ರ್ಥಜಾತಮಂತೆರಡು ತೆಱದ**ಲಂಕೃತಿಯ**ಕ್ಕುಂ* (ಕಾವ್ಯಾವಲೋಕನ ಸೂತ್ರಂ ೧೨೬)

ನಾಗವರ್ಮನು ಶಬ್ದಾಲಂಕಾರ: ಅರ್ಥಾಲಂಕಾರವೆರಡೂ ಕೃತಿಯ ಚೆಲ್ವಿಕೆಗೆ ಕಾರಣವಾಗುತ್ತದೆಯೆಂದು ತಿಳಿಸುತ್ತಾನೆ.

(ಶಬ್ದಾಲಂಕಾರ ನಿರ್ಣಯ ಪ್ರಕರಣ ಸೂತ್ರ. ೧೨೬)

ಅತಿಶಯಧವಳಧರಾಧಿಪ
ಮತದಿಂದಂ ಜಾತಿಯೆಂಬಳಂಕಾರಮನಿಂ
ತತಿನಿಪುಣರಱಿಯೆ ತೋರ್ಪೆಂ
ಶ್ರುತಿಸುಭಗಮೆನಿಪ್ಪ ರೂಪಕಾಲಂ ಕೃತಿಯಂ

ಜಾತಿಯೆಂಬ ಅಲಂಕಾರಂ ಎಂಬ ಪದಪ್ರಯೋಗ ಇಲ್ಲಿ ಗಮನಾರ್ಹವಾಗಿದೆ.

(ಕವಿರಾಜಮಾರ್ಗ ೧೧-೧೩೧)

ಮೊದಮೊದಲು ಕಾವ್ಯದ ಬಗೆಗಿನ ಚರ್ಚೆಯೆಂದರೆ ಅಲಂಕಾರಗಳ ಬಗೆಗಿನ ವಿವೇಚನೆ ಎಂದೇ ನಿರ್ಣಿತವಾಗಿದ್ದಿತು. ಆ ಕಾರಣದಿಂದ ಕಾವ್ಯಮೀಮಾಂಸಕಾರರನ್ನು 'ಆಲಂಕಾರಿಕರು' ಎನ್ನುತ್ತಿದ್ದರು ಹಾಗೂ ಕಾವ್ಯವನ್ನು ಕುರಿತಾಗಿ, ವಿವೇಚಿಸುವ ಶಾಸ್ತ್ರವನ್ನು 'ಅಲಂಕಾರ ಶಾಸ್ತ್ರ' ಎಂದೇ ಕರೆಯಲಾಗುತ್ತಿತ್ತು.

ಕಾವ್ಯವೆನ್ನುವುದು ಹೃದಯದಿಂದ ದೀಪ್ತವಾದ ಸೌಂದರ್ಯಾನುಭವದ ಸುಂದರ ಉಕ್ತಿ ಅದು ಜಗತ್ತಿನ ವಸ್ತು ಅಥವಾ ಘಟನೆಗಳ ನೇರವಾದ ಅಥವಾ ನಿರೂಪಣೆಯಲ್ಲ ಅದರಲ್ಲಿ ಭಾಷೆ ಸಾಮಾನ್ಯ ಆಡುಮಾತಿನಿಂದ ಭಿನ್ನವಾಗಿ ಒಂದು ವಿಶಿಷ್ಟವಾದ ಬಾಗು,-ಬಳುಕನ್ನು ಪಡೆಯುತ್ತದೆ. ಇದನ್ನು ಕಾವ್ಯಮೀಮಾಂಸೆಯಲ್ಲಿ 'ಲಕ್ಷಣ' ಅಥವಾ 'ಅಲಂಕಾರ'ಗಳು ಎಂದು ಕರೆಯುತ್ತಾರೆ. ಈ ಲಕ್ಷಣ ಹಾಗೂ ಅಲಂಕಾರಗಳು ಸಹಜವಾದಂತಹ ಆಡುಮಾತಿಗೆ ಕಾವ್ಯದ ಸ್ಪರ್ಶವನ್ನು ನೀಡುತ್ತವೆ.

ಶಬ್ದ ಕಾವ್ಯಮೀಮಾಂಸೆಯ ಇತಿಹಾಸವನ್ನು ಗಮನಿಸಿದರೆ ಭರತ ಮೊದಲು ಕಾವ್ಯಲಕ್ಷಣಗಳು ಹಾಗೂ ಕಾವ್ಯಾಲಂಕಾರಗಳ ಬಗ್ಗೆ ಪ್ರಸ್ತಾಪಿಸುತ್ತನೆ. ತನ್ನ ನಾಟ್ಯಶಾಸ್ತ್ರದಲ್ಲಿ ಕಾವ್ಯದ ಮೂವತ್ತಾರು ಲಕ್ಷಣಗಳನ್ನು ಹಾಗೂ ನಾಲ್ಕು ಅಲಂಕಾರಗಳನ್ನು ಕುರಿತು ವಿವೇಚಿಸುತ್ತಾನೆ. ಆದರೆ ಈತ ಕಾವ್ಯದ ಸಹಜ ಸೌಂದರ್ಯ 'ಲಕ್ಷಣ' ಮತ್ತು ಅದನ್ನು ಎದ್ದುಕಾಣುವಂತೆ ಅಲಂಕರಿಸುವುದು 'ಅಲಂಕಾರ' ಎಂದು ನಿರ್ದೇಶಿಸುವಂತೆ ಕಾಣುತ್ತದೆ.

ಅಲಂಕಾರಗಳು ಕಾವ್ಯಕ್ಕೆ ಅತ್ಯಂತ ಅನಿವಾರ್ಯ ಎಂಬ ಸಿದ್ಧಾಂತದ ಮೂಲಕ ಕಾವ್ಯದ ವಿವೇಚನೆಗೆ ಹೊರಟವನು ಭಾಮಹ. ಈತನ 'ಕಾವ್ಯಾಲಂಕಾರ' ಕೃತಿಯ ಹೆಸರೇ ಈತ ಕಾವ್ಯದಲ್ಲಿ ಅಲಂಕಾರಗಳಿಗೆ ಕೊಟ್ಟಿರುವ ಮಹತ್ವವನ್ನು ತೋರುತ್ತವೆ. ಕಾವ್ಯದ ಮಹತ್ವ ಅದರ ರಚನೆಗೆ ಅಗತ್ಯವಾದ ಪ್ರತಿಭಾಶಕ್ತಿ ಇವುಗಳನ್ನು ಹೇಳಿದ ನಂತರ ಅಲಂಕಾರಗಳ ಬಗೆಗೆ ತನ್ನ ನಿಲುವನ್ನು ಪ್ರಸ್ತಾಪಿಸುತ್ತನೆ.

'ನ ಕಾಂತಮಪಿ ನಿರ್ಭೂಷಂ ವಿಭಾತಿ ವನಿತಾ ಮುಖಂ'

ವನಿತೆಯ ಮುಖವು ವಿಭೂಷಣಗಳಿಲ್ಲದಿದ್ದರೆ ಹೇಗೆ ಶೋಭಿಸುವುದಿಲ್ಲವೋ ಹಾಗೆ ಕಾವ್ಯ ಅಲಂಕಾರಗಳಿಲ್ಲದಿದ್ದರೆ. ಶಬ್ದ ಮತ್ತು ವಾಚ್ಯಾರ್ಥಗಳ ವಿವಿಧ ಪ್ರಕಾರಗಳೇ ಅಲಂಕಾರಗಳೆಂಬುದನ್ನು ಸ್ಪಷ್ಟಪಡಿಸಿ, ಅವುಗಳಲ್ಲಿ 'ಶಬ್ದಾಲಂಕಾರ' ಮತ್ತು 'ಅರ್ಥಾಲಂಕಾರ' ಎಂಬ ವಿಭಾಗಗಳನ್ನು ಗುರುತಿಸುತ್ತಾನೆ. ಅಲಂಕಾರಗಳೆಲ್ಲವನ್ನೂ ಒಳಗೊಳ್ಳುವಂತೆ ಈತ 'ವಕ್ರೋಕ್ತಿ' ಅಂದರೆ ಬಾಗಿದೆ. ಕೊಂಕುವೆತ್ತ ಉಕ್ತಿ ಎಂಬ ಅರ್ಥದಲ್ಲಿ ಬಳಸುತ್ತಾನೆ. ವಾಕ್ಯದಲ್ಲಿ ವಕ್ರೋಕ್ತಿ ಅಥವಾ ಅತಿಶಯ ಚಮತ್ಕಾರವನ್ನು ತರುವ ಸಾಮರ್ಥ್ಯವಿಲ್ಲದಿದ್ದರೆ ಅದು ಕಾವ್ಯವೆನಿಸಿಕೊಳ್ಳುವುದಿಲ್ಲ ಅಂತಹ ಅಲಂಕಾರ ವಿಲ್ಲದಿದ್ದರೆ ಅದು ಕಾವ್ಯವೂ ಆಗುವುದಿಲ್ಲ.

*ವಿವರಗಳಿಗೆ ನೋಡಿ: ಮಲ್ಲೇಪುರಂ .ಜಿ. ವೆಂಕಟೇಶ ೨೦೦೦ ಭಾರತೀಯ ಕಾವ್ಯಶಾಸ್ತ್ರ ಪರಿಭಾಷೆ.*

*ತೀ.ನಂ. ಶ್ರೀ ೨೦೦೬ ಭಾರತೀಯ ಕಾವ್ಯಮೀಮಾಂಸೆ.*

**೯೬. ಅಲ್ಲದಲ್ಲಣಿಗೆ**

*'ಪುಡಿಯೊಳಡಸಿ***ದಲ್ಲವಲ್ಲಣೆಯ** *ಚಕ್ಕಣಂಗಳಂ ಸವಿ ಸವಿದು"* ಎಂದು ಪಂಪ ಭಾರತದಲ್ಲಿ ಬರುತ್ತದೆ. *(ಪಂಪ ಭಾರತ ೪-೮೭ ವ)*

ಕಾರದ ಕಡಲೆಯ ಪುಡಿಯಿಂದ ಕೂಡಿದ ಹಸಿಯ ಶುಂಠಿಯ ಮಿಶ್ರಣವನ್ನುಳ್ಳ (ಅಲ್ಲದಣಿಗೆ) ಚಕ್ಕಣಗಳೆಂಬ ನಂಬಿಕೊಳ್ಳುವ ಪದಾರ್ಥಗಳನ್ನು ಸವಿ ಸವಿದು ಕಳ್ಳು ಕುಡಿದರು. ಇದು ಮದ್ಯಪಾನದ ವಿವರವನ್ನು ನೀಡುತ್ತದೆ. ಅಲ್ಲವೆಂದರೆ ಹಸಿಶುಂಠಿ; ಕಾರದ ಗೆಣಸು.

**೯೭. ಅಲ್ಲಳಿಗಾಳೆಗ**

*"ಧರ್ಮಪುತ್ರಂಗೆ ತನ್ನ ನುಡಿದ ಮಡಿವಳಿಯಂ ನೆನೆ***ದಲ್ಲಳಿಗಾಳಗಂಗಾದೆ.**

*(ಪಂಪಭಾರತ. ೧೧-೪೩.ವ)*

ಭೀಷ್ಮ ಅರ್ಜುನನೊಂದಿಗೆ ಯುದ್ಧ ಮಾಡಿದ ರೀತಿಯನ್ನು ಪಂಪನು ಹೀಗೆ ವರ್ಣಿಸಿದ್ದಾನೆ. ಧರ್ಮರಾಜನಿಗೆ ತಾನು ಕೊಟ್ಟ ಮಾತನ್ನು (ಭೀಷ್ಮ) ನುಡಿವಳಿಯನ್ನು (ಭಾಷೆಯನ್ನು) ಜ್ಞಾಪಿಸಿಕೊಂಡು ಸಾಮಾನ್ಯ ಬಾಣದಿಂದ (ಅಲ್ಲಳಿ ಕಾಳಗ) ಮೇಳಗಾಳಗವನ್ನು ಮಾಡಿದನು. ವಿನೋದದ ಯುದ್ಧ ಅಥವಾ ಸುಲಭವಾದ ಯುದ್ಧ ಲಘುಪ್ರಹಾರವೆಂದು ಇಲ್ಲಿಯ ಭಾವಾರ್ಥವಾಗಿದೆ. ಇದು ನಿಜವಾದ ಯುದ್ಧವಲ್ಲ ಅದ್ದರಿಂದ ಶತ್ರು ಸಂಹಾರ ಮುಖ್ಯವಲ್ಲ. ವಾಸ್ತವವಾಗಿ ಕಾಳಗದಲ್ಲಿ ಶತ್ರು ಸಂಹಾರವೇ ಮುಖ್ಯ. ನಾಟಕೀಯ ಕಾಳಗವೆಂಬ ಅರ್ಥವು ಅಲ್ಲಳಿಕಾಳಗಕ್ಕೆ ಇದೆ.

### ೯೮. ಅವಧಿಜ್ಞಾನ

*ದೀಕ್ಷೆಯಂ ಪ್ರಸಾದಂಗೆಯ್ದೆನ್ನಂ ಸಂಸಾರಾರ್ಣವದತ್ತಣಿಂದೆತ್ತಿಮೆಂದೊಂಗೆ ಭಟಾರರ್ ಮೂಱುದಿವಸಂ ನಿನಗಾಯುಷ್ಯಮೆಂದೊಡೀಗಳೇ ನಿಸ್ಸಾರಮಪ್ಪ ದೇಹದಿಂದ ಸಾರಮಪ್ಪ.......... (ಡಿ.ಎಲ್.ಎನ್.೨೦೦೯ ಪು.೭೨).*

ಜೈನಕಾವ್ಯಗಳಲ್ಲಿ ಅವಧಿಜ್ಞಾನವೆಂದರೆ ಕಾಲದೇಶಗಳ ಭೇದವಿಲ್ಲದೆ ಭೂತ, ಭವಿಷ್ಯತ್ ವರ್ತಮಾನವನ್ನೂ, ಎಲ್ಲವನ್ನೂ ತಿಳಿಯುವಿಕೆ. ಅವಧಿ ಜ್ಞಾನದಿಂದಲೇ ಇಲ್ಲಿಯ ಭಟಾರರು ಆಯುಷ್ಯ ಪ್ರಮಾಣವನ್ನು(ಜೀವಿಯ) ನಿರ್ಧರಿಸುತ್ತಾರೆ.

ಭವಿಷ್ಯ ನುಡಿಯುವುದನ್ನು ಮೇಲಿನ ಗದ್ಯಭಾಗವು ತಿಳಿಸುತ್ತದೆ. ಭವಿಷ್ಯದ ನುಡಿಯುವುದೆಂದರೆ ಮುಂದೆ ನಡೆಯಬಹುದಾದನ್ನು ಹೇಳುವುದು. ಭೂತಕಾಲದ ಅನುಭವಕ್ಕೆ ಯಾವುದೇ ರೀತಿಯ ವಿವರಣೆಯು ಬೇಕಾಗುವುದಿಲ್ಲ. ವರ್ತಮಾನಕಾಲದ ಅನುಭವವು ನಮಗೆ ವೇದ್ಯವಾಗುತ್ತದೆ. ಆದರೆ ಭವಿಷ್ಯ ಏನು ಎಂಬುದು ತಿಳಿದಿರುವುದಿಲ್ಲ. ಭವಿಷ್ಯವನ್ನು ಶಾಸ್ತ್ರ ಬಲ್ಲವರು ಕಣಿ ಹೇಳುವವರು, ಜ್ಯೋತಿಷಿಗಳು ಹೇಳುತ್ತಾರೆಂಬ ನಂಬಿಕೆಯು ಭಾರತದಲ್ಲಿದೆ. ಭೂತ; ವರ್ತಮಾನ ಮತ್ತು ಭವಿಷ್ಯತ್ ಕಾಲಗಳ ಪರಿಕಲ್ಪನೆಗಳು ಎಲ್ಲಾ ಜನಾಂಗಗಳಲ್ಲಿಯೂ ಇದೆಯೆಂಬುದು ಗಮನಾರ್ಹ.

### ೯೯. ಅವಮೆ

*ವಸುಧಾಚಕ್ರಕ್ಕೆ ಕಾಲಾಯಸಗೃಹವರಣಂ ಚಂದ್ರಬಿಂಬಕ್ಕೆ ರಾಹುಗ್ರಸ್ತನಂ ಚಂದ್ರಾಂಶುಬಿಂಬ***ಕ್ಕವಮೆಯ*** ರಜನೀಪ್ರೋದ್ದಮಂ ವಜ್ರವಹ್ನಿಪ್ರಸರಕ್ಕುದ್ದಾಮ ಧೂಮೋದಯಮಖಿಲವಿಯೋಗಾತುರರ್ಗಂಧಕಾರೋಲ್ಲಸನಂ ತಾನೆಂಬಿನಂ ಬಂದುದು ಬಹುಳ ತಟಿಜ್ವಾಲಮಂಭೋದಕಾಲಂ............(ಕರ್ಣಾಟಕ ಕಾದಂಬರಿ, ೮-೧೩)*

ಭೂಮಂಡಲಕ್ಕೆ ಲೋಹಪಂಜರದ ಬಂಧನದಂತೆಯೂ ಚಂದ್ರಬಿಂಬಕ್ಕೆ ರಾಹು ಗ್ರಹಣದಂತೆಯೂ, ಸೂರ್ಯಮಂಡಲಕ್ಕೆ ಅಮಾವಾಸ್ಯೆಯ ರಾತ್ರಿಯ ಒದಗಿದಂತೆಯೂ. ಸಿಡಿಲೆಂಬ ಬೆಂಕಿಯು ಹರಡುವುದಕ್ಕೆ ಮೊದಲು ದೊಡ್ಡಹೊಗೆ ಎದ್ದಿರುವಂತೆಯೂ.

ವಿರಹಿಜನಕ್ಕೆಲ್ಲ ಕಗ್ಗತ್ತಲೆ ಕವಿದಂತೆಯೂ ಇರುವ ಅತ್ಯಧಿಕವಾದ ಮಿಂಚುಗಳ ಗುಂಪಿನಿಂದ ಕೂಡಿದ ಮಳೆಗಾಲವು ಬಂದಿತು. ಅವಮೆಯೆಂದರೆ ಅಮವಾಸ್ಯೆ. ಹುಣ್ಣಿಮೆ ಮತ್ತು ಅಮವಾಸ್ಯೆಗಳು ಕಾಲಸೂಚಕಗಳು.

ಅಮಾಂತದಮಾಂತಂ ಚಾಂದ್ರೋಹಿ ಮಾಸಃ

ಅಂದರೆ ಅಮವಾಸ್ಯೆಯಿಂದ ಅವಮಾಸ್ಯೆಗೆ ಲೆಕ್ಕವಿಡುವ ಪದ್ಧತಿಯನ್ನು ಚಾಂದ್ರಮಾನವೆಂದು ಕರೆಯುತ್ತಾರೆ. ಅವಮೆಗೆ ಕರ್ದಿಂಗಳು(ಕದ್ದಿಂಗಳು) ಎಂತಲೂ ಕರೆಯುತ್ತಾರೆ. ತಿಂಗಳು ಮತ್ತು ಕರ್ದಿಂಗಳು ಅರ್ಥ ಸ್ಪಷ್ಟವಾಗಿದೆ. ಚಂದ್ರನಿಗೆ ತಿಂಗಳು ಮಾವನೆಂದು ಕರೆಯುತ್ತಾರೆ. ಚಾಂದ್ರಯಾನ ಪಂಥದಲ್ಲಿ ಅವಮಾಸ್ಯೆಯಿಂದ ಅವಮಾಸ್ಯೆಯವರೆಗೆ ಒಂದು ತಿಂಗಳು ಎಂದು ಪರಿಗಣಿಸುವುದರಿಂದ ಚಂದ್ರನಿಗೆ ತಿಂಗಳು ಮಾವ ಎಂದು ಬಂದಿರಬಹುದು. ಯಾವಾಗ ತಿಂಗಳ ಬೆಳಕು ಇರುವುದಿಲ್ಲವೋ ಆಗ ಕತ್ತಲೆಯಿರುತ್ತದೆ. ಅದು ಅವಮಾಸ್ಯೆ. ಆದುದರಿಂದ ಅವಮೆ ಎಂದು ಕರೆದರು. ಅದು ಕರಿದಾದ ತಿಂಗಳು (ಕದ್ದಿಂಗಳು) ಎಂದಾಗಿದೆ.

**೧೦೦. ಅವಮೋದರ್ಯ**

*ಗೃಹೀತೋಪಾಸಕ ವ್ರತನನಶನಾವಮೋದರ್ಯಾದ್ಯಾಚರಣಪರಿಣತಂ................*

*(ಆದಿಪುರಾಣ. ೨-೧೯.ವ)*

ಅವಮೋದರ್ಯ ಎಂದರೆ ಅಲ್ಪ ಆಹಾರಗ್ರಹಣ; ಅರೆಹೊಟ್ಟೆ ಭೋಜನ. ಮೂವತ್ತೆರಡು ತುತ್ತುಗಳ ಆಹಾರದಲ್ಲಿ ದಿನದಿನಕ್ಕೆ ಕ್ರಮಕ್ರಮವಾಗಿ ತುತ್ತುಗಳನ್ನು ಕಡಿಮೆ ಮಾಡುತ್ತಾ ಒಂದೇ ತುತ್ತಿನವರೆಗೆ ಬರುವುದು.

ಅವಮೋದರ್ಯವೆಂದರೆ ಸಂಸ್ಕೃತದಲ್ಲಿ ಪೀಡೆ, ಬಾಧೆ, ಒತ್ತು, ಹಿಂಡುವುದು ನಾಶಪಡಿಸುವುದು ಎಂದರ್ಥ. ಅರೆಹೊಟ್ಟೆಯಿಂದ ಆಗುವುದು ಸ್ವಯಂ ಹಿಂಸೆಯ ಅನುಭವ. ಇದು ಜೈನ ಸಾಂಸ್ಕೃತಿಕ ನಂಬಿಕೆಯನ್ನು ಸೂಚಿಸುತ್ತದೆ.

*ವಿವರಗಳಿಗೆ ನೋಡಿ: ಸಲ್ಲೇಖನ.*

**೧೦೧. ಅವಷ್ಟಂಭ**

*ಆಗಳಾ ಕುಂಭಸಂಭವಂ ಪರಾಕ್ರಮಧವಳನ ಪರಾಕ್ರಮಕ್ಕೆ ಮೆಚ್ಚಿ ಕದಂಪಂ ಕರ್ಚಿ ದ್ರುಪದನಂ ತನ್ನ ಮಂಚದ ಕಾಲೊಳ್ ಕಟ್ಟವೇಟ್ಟು ತಲೆಯ ಮೇಲೆ ಕಾಲನ***ವಷ್ಟಂಭ***ದಿಂ ನೀಡಿ"* ಎಂದು ಪಂಪ ಭಾರತದಲ್ಲಿ ಬರುತ್ತದೆ.

*(ಪಂಪ ಭಾರತ ೨-೬೨ ವ)*

ದ್ರೋಣನು ಅರ್ಜುನನ ಶೌರ್ಯಕ್ಕೆ ಮೆಚ್ಚಿ ಗಲ್ಲವನ್ನು ಚುಂಬಿಸಿ ದ್ರುಪದನನ್ನು ತನ್ನ ಮಂಚದ ಕಾಲಿಗೆ ಕಟ್ಟಿ, ದ್ರುಪದನ ತಲೆಯ ಮೇಲೆ ಅಹಂಕಾರದಿಂದ (ಅವಷ್ಟಂಭ) ಕಾಲಿಟ್ಟನು. ಗಮನಿಸಬೇಕಾದ ಅಂಶವೆಂದರೆ ಶತ್ರುವಿನ ತಲೆಯ ಮೇಲೆ ಕಾಲಿಡುವುದು

ಅಹಂಕಾರದ ಅತಿರೇಕದಿಂದ ಮಾತ್ರ ಸಾಧ್ಯ.

ದ್ರುಪದನನ್ನು ಹೀಗಳೆಯುವಾಗ ದ್ರೋಣನು ಹೀಗೆ ಹೇಳುತ್ತಾನೆ:

ಆದಿ ಕ್ಷತ್ರಿಯರೇನೀ
ಮಾದಿತ್ಯನಳಿಪ ತೇಜರಿರ್ ಪಾರ್ವನಕಾಲ್ ।
ಮೋದೆ ನಡು ತಲೆಯಲಿರ್ಪುದು
ಮಾದುದು ನಿಮಗೆಂದು ನುಡಿದು ಕಾಯ್ಪಿನೊಳೊದೆದಂ (೨-೬೪)

ನೀವು ಆದಿಕ್ಷತ್ರಿಯರಾಗಿದ್ದೀರಿ ! ಸೂರ್ಯನನ್ನು ತೇಜ ಅಳಿಸುವಷ್ಟು ತೇಜೋವಂತರಾಗಿದ್ದೀರಿ. ಬ್ರಾಹ್ಮಣನು ಒದ್ದ ನಡುತಲೆಯು ನಿನ್ನದಾಯಿತಲ್ಲ.

ಇಲ್ಲಿ ಮತ್ತೊಂದು ಅಂಶವನ್ನು ಗಮನಿಸಬೇಕು. ಕ್ಷತ್ರಿಯರು ತಲೆಬಾಗದವರು. ಎರಡನೆಯದಾಗಿ ಅವರ ನಡುನೆತ್ತಿಯನ್ನು ತುಳಿಯುವುದು ಅವರಿಗೆ ಮಾಡುವ ದೊಡ್ಡ ಅವಮಾನ. ಕ್ಷಾತ್ರಗುಣವನ್ನೂ ಈ ಪದ್ಯಭಾಗವು ವಿವರಿಸುತ್ತದೆ. ಅವಷ್ಟಂಭ ಎಂದರೆ ವಿಶ್ರಾಂತಿ ತೆಗೆದುಕೊಳ್ಳು; ನಿಲ್ಲು; ಸ್ವಯಂ ಅಭಿಮಾನ. ಕಂಭ; ಸೌಷ್ಟವ, ಲೇಸು ಎಂಬ ಅರ್ಥಗಳಿವೆ.

*ವಿವರಗಳಿಗೆ ನೋಡಿ: ಕ್ಷಾತ್ರಗುಣ; ರಾಜರು; ರಾಜಧರ್ಮ.*

### ೧೦೨. ಅವಸರ್ಪಿಣಿ

*ಅಲ್ಲಿ ಮುನ್ನಮವಸರ್ಪಿಣಿಯೊಳುತ್ತಮಭೋಗಭೂಮಿಸ್ಥಿತಿಯೊಳ್ ನಾಲ್ಕು ಕೋಟಿಕೋಟಿಸಾಗರೋಪಮಪ್ರಮಾಣಂ*

*ಸುಷಮಸುಷಮಮೆಂಬ ಕಾಲಮುಂ ಮಧ್ಯಮಭೋಗಭೂಮಿಸ್ಥಿತಿಯೊಳ್ ಮೂರುಕೋಟಿಕೋಟಿಸಾಗರೋಪಮಪ್ರಮಾಣಂ ಸುಷಮಮೆಂಬ ಕಾಲಮುಂ ಜಘನ್ಯಭೋಗಭೂಮಿಸ್ಥಿತಿಯೊಳ್ ಎರಡುಕೋಟಿಕೋಟಿ ಸಾಗರೋಪಮಪ್ರಮಾಣಂ* **ಸುಷಮ ದುಷ್ಷಮಮೆಂಬ** *ಕಾಲಮುಂ ಕ್ರಮದೊಳ್ ಷಟ್ಚತುರ್ದ್ವಿಸಹಸ್ರಚಾಪೋತ್ಸೇಧಂಗಳುಂತ್ರಿದ್ವ್ಯೇಕಪಲ್ಯೋಪಮಾಯುಷ್ಯಂಗಳುಂ ತ್ರಿದ್ವ್ಯೇಕದಿನಾಂತರಿತ ಬದರಾಕ್ಷಧಾತ್ರೀಫಳ ಪ್ರಮಾಣಾಹಾರಂಗಳುಮಪ್ಪ ಮಿಥುನಂಗಳ್ಗೆ ಸಂಭೋಗ್ಯಮಾಗಿ ಸಲೆ ಜಘನ್ಯಭೋಗ ಭೂಮಿಯ ಕಡೆಯ ಪಳಿತೋಪಮದೆಂಟನೆಯ ಭಾಗಮುರಿದುದೆಂಬನ್ನೆಗಂ.* **ಉತ್ಸರ್ಪಿಣಿಯವಸರ್ಪಿಣಿ** *ನಾಮಮಂ ಪಡೆದುದದೊಂದು ಪತ್ತುಕೋಟಿಕೋಟಿ ಸಾಗರೋಪಮಸಂಖ್ಯೆಯಂ ತಾಳ್ದಿ................ (ಆದಿಪುರಾಣ. ೬-೪೮.ವ)*

ಧರ್ಮ, ಸತ್ಯ, ನ್ಯಾಯ, ಆಯುಸ್ಸು, ಸುಖ ಮುಂತಾದುವು ಕ್ರಮಕ್ರಮವಾಗಿ ಕಡಿಮೆಯಾಗುತ್ತ ಬಂದು ಕಡೆಗೆ ಅಧರ್ಮ ಅನ್ಯಾಯಾದಿಗಳು ತಾವೇ ತಾವಾಗುವ ಕಾಲ. ಅವಸರ್ಪಿಣಿ.

ಅವಸರ್ಪಿಣಿಯು ಪೂರ್ಣವಾಗಿ ಜೈನ ಧರ್ಮದ ಪರಿಭಾಷೆಯಾಗಿದೆ.

ಅವಸರ್ಪಿಣಿಯಲ್ಲಿ ಆರು ಭೇದಗಳಿವೆ.

೧. ಸುಷಮಾ –ಸುಷಮಾ – ೪ ಸಾಗರೋಪಮೆ ಕೋಟಿ ಕೋಟಿವರ್ಷ
೨. ಸುಷಮಾ – ೩ ........................................
೩. ಸುಷಮಾ – ದುಃಷಮಾ – ೨ ........................................
೪. ದುಷಮಾ –ಸುಷಮಾ – ೧ ಸಾಗರೋಪಮ ಕೋಟಿ ಕೋಟಿಗೆ ೪೨ ಸಾವಿರ ವರ್ಷ ಕಡಿಮೆ
೫. ದುಷಮಾ – ೨೧ ಸಾವಿರ ವರ್ಷ
೬. ಅತಿದುಃಷಮಾ – ೨೧ ಸಾವಿರ ವರ್ಷ

ಅವಸರ್ಪಿಣಿಯು ಒಟ್ಟು ೧೦ ಸಾಗರೋಪಮಕೋಟೀ ಕೋಟಿವರ್ಷ ಉತ್ಕ್ರಮದಿಂದ ಉತ್ಸರ್ಪಿಣಿ ಪ್ರಾರಂಭವಾಗಿ ಸುಷಮಾ – ಸುಷಮಾ ಪರ್ಯಂತ ಏರುತ್ತದೆ. ಇದು ಅವಸರ್ಪಿಣಿಯಷ್ಟೇ ಕಾಲ ಪ್ರಮಾಣವುಳ್ಳದ್ದು ಈ ಕಾಲ ಚಕ್ರವು ಭಾರತ – ಪರಾವತ ಕ್ಷೇತ್ರದಲ್ಲಿ ಸುತ್ತುತ್ತಾ ಇದೆ.

*ವಿವರಗಳಿಗೆ ನೋಡಿ: John Grimes 1996 A concise Dict. of Indian Philosophy*
*ಮಹದೇವ ಪ್ರಭಾಕರ ಪೂಜಾರ ೧೯೭೬ ಜೈನಧರ್ಮ ಪರಿಭಾಷೆ.*

## ೧೦೩. ಅವಿವೇಕಿಗಳು

*ಅನೇಕ ದೋಷದಿಂ ದುಷ್ಟಮಪ್ಪುದಾದೊಡಂ ಶರೀರವಾರ್ಗೆ ಪ್ರಿಯವಲ್ಲ? **ಅವಿವೇಕಿಗಳ್** ಶತ್ರುಕಪಟದಿಂ ಮಾಳ್ಪ ಹಿತಮಂ ಕಂಡು ಪ್ರಿಯಮೆಂದೇ ಬಗೆವರ್ (ಕರ್ಣಾಟಕ ಪಂಚತಂತ್ರ ಭೇದ ಪ್ರಕರಣ, ಶ್ಲೋಕ ೬೪)*

ಅನೇಕ ದೋಷಗಳಿಂದ ಕೂಡಿದರೂ ದೇಹವು ಯಾರಿಗೆ ಪ್ರಿಯವಾಗುವುದಿಲ್ಲ. ಅಂತೆಯೇ ಅವಿವೇಕಿಗಳು ಶತ್ರುಗಳ ಮಾಡುವ ಹಿತವನ್ನು ತಮಗೆ ಪ್ರಿಯವೆಂದೇ ಬಗೆಯುತ್ತಾರೆ. ಅದನ್ನು ಮರೆಯಬಾರದು ಎಂದು ಕರ್ಣಾಟಕ ಪಂಚತಂತ್ರವು ಹೇಳುತ್ತದೆ ಅವಿವೇಕಿಗಳು ಎಂದರೆ ವಿವೇಕವನ್ನು ಕಳೆದುಕೊಂಡವರು. ವಿವೇಕವು ಮನುಷ್ಯನಲ್ಲಿ ತಾರತಮ್ಯ ಜ್ಞಾನವನ್ನು ಕೊಡುತ್ತದೆ. ವಿವೇಕವು ಮನುಷ್ಯನಲ್ಲಿ ಒಳಿತು–ಕೆಡುಕುಗಳ ಅರಿವನ್ನು ಉಂಟುಮಾಡುತ್ತದೆ. ಆದರೆ ಅವಿವೇಕವು ಹಾಗಲ್ಲ. ಅದು ಶತ್ರುಗಳ ಹಿತವನ್ನು ತಮಗೆ ಪ್ರಿಯವೆಂದೇ ತಿಳಿದುಕೊಳ್ಳುತ್ತದೆ.

## ೧೦೪. ಅಶಾಸ್ತ್ರಜ್ಞರು

*ಗುಣಮಿದು ದೋಷವೆಂದು ಎಂಬುದು ತಿಳಿಯದ ಅಶಾಸ್ತ್ರಜ್ಞರು ಕಾವ್ಯ ರೂಪ ಭೇದಗಳನ್ನು ಹೇಗೆ ತಿಳಿಯುವರು? ಕುರುಡನಿಗೆ ರೂಪ ಭೇದಗಳ ಅರಿವು ಬರಲು ಹೇಗೆ ಸಾಧ್ಯ.? ಅದರಂತೆ **ಅಶಾಸ್ತ್ರಜ್ಞರು**. (ಕವಿರಾಜಮಾರ್ಗ ೧–೮)*

ಕವಿರಾಜಮಾರ್ಗಕಾರನು ಗಣಿದ ಅಂದರೆ ಗಣನೆಯೆಂತಲೂ ತೃಣವೆಂದರೆ ಹುಲ್ಲು ಎಂದೂ, ಘಾಸವೆಂದರೆ ಕಾಳು, ಕಡ್ಡಿ, ಹುಲ್ಲು ಎಂತಲೂ ಬಳಸಿದ್ದಾನೆ.

ಘಾಸವೆಂದರೆ ಗ್ರಾಸ(ಸಂಸ್ಕೃತ) ತೃಣ(ಹುಲ್ಲು) ಸಂಸ್ಕೃತ. ಕಾವ್ಯದ ಗುಣದೋಷಗಳನ್ನು ತಿಳಿಯದವರು ಅಶಾಸ್ತ್ರಜ್ಞರು. ಕಾವ್ಯದ ಗುಣದೋಷಗಳನ್ನು ಹೇಳುವವರು ಶಾಸ್ತ್ರಜ್ಞರು ಎಂಬುದಲ್ಲಿ ಗಮನಾರ್ಹ. ಶಾಸ್ತ್ರಕ್ಕಿರುವ ಮಹತ್ವವೂ ಇಲ್ಲಿ ವ್ಯಕ್ತವಾಗಿದೆ ಎಂಬುದು ಗಮನಾರ್ಹ. ಇದು ಶಾಸ್ತ್ರದ ಬಗೆಗಿನ ಸಾಮಾಜಿಕ ವ್ಯಾಖ್ಯೆಯೂ ಹೌದು.

## ೧೦೫. ಅಶುದ್ಧರು

ಬ್ರಾಹ್ಮಣರು ಭಗವದ್ಗೀತೆಯನ್ನು ಹಾಡಿದ್ದು ಮೇಲ್ವರ್ಗದವರಿಗಾಗಿ. ಮತ್ತು ಅವರ ಮೂಲಕವೇ ಇದು ಬೇರೆಯವರಿಗೆ ತಲುಪಬೇಕಿತ್ತು ಎಂಬುದು ತೀರಾ ಸ್ಪಷ್ಟ. ಸ್ವತಃ ಕೃಷ್ಣನೇ ಗೀತೆಯಲ್ಲಿ, "ಪಾಪಯೋನಿಜರಾದ ಮಹಿಳೆಯರು, ವೈಶ್ಯರು ಹಾಗೂ ಶೂದ್ರರು ಕೂಡ ನನ್ನನ್ನು ಆಶ್ರಯಿಸಿ ಮುಕ್ತಿಯನ್ನು ಪಡೆಯಬಹುದು" ಎನ್ನುತ್ತಾನೆ (ಗೀ.೯-೩೨). ಅದರ ಅರ್ಥ ಹೆಂಗಸರು ಮತ್ತು ದುಡಿಯುವ ಹಾಗೂ ಉತ್ಪಾದಕ ವರ್ಗದ ಎಲ್ಲಾ ಪುರುಷರೂ ಹುಟ್ಟಿನಿಂದಲೇ ಅಶುದ್ಧರು. ಆದರೆ ಸಾವಿನ ನಂತರ, ಅವರೇನಾದರೂ ಮುಕ್ತಿಯನ್ನು ಪಡೆಯಬೇಕಾದರೆ, ತಮ್ಮನ್ನು ಇಷ್ಟೊಂದು ಅಸಡ್ಡೆಯಿಂದ, ಕೀಳಾಗಿ ಕಾಣುವ ಆ ದೇವರನ್ನೇ, ಭಕ್ತಿಯಿಂದ ಹಾಗೂ ಶ್ರದ್ಧೆಯಿಂದ ಆಶ್ರಯಿಸಬೇಕು. ಜೊತೆಗೆ ಈ ಎಲ್ಲಾ ತಾರತಮ್ಯಗಳನ್ನು ಸೃಷ್ಟಿಸಿದವರು ಬೇರೆ ಯಾರೂ ಅಲ್ಲ. ಸ್ವತಃ ಆ ಭಗವಂತನೇ. "ನಾಲ್ಕು ವರ್ಣಗಳು ನನ್ನಿಂದ ಸೃಷ್ಟಿಸಲ್ಪಟ್ಟಿವೆ (ಗೀ.೪-೧೩) ಎಂದು ಅವನೇ ಹೇಳಿಕೊಳ್ಳುತ್ತಾನೆ. ಆತನ ಮಹತ್ತರವಾದ ಸಾಧನೆಗಳ ಪಟ್ಟಿಯಲ್ಲಿ ವರ್ಣಗಳ ಸೃಷ್ಟಿ ಕೂಡ ಒಂದು.

ಶುದ್ಧ-ಅಶುದ್ಧ; ಪವಿತ್ರ-ಅಪವಿತ್ರ; ನ್ಯಾಯ-ಅನ್ಯಾಯ; ಸತ್ಯ-ಅಸತ್ಯ-ಹೀಗೆ ಮೌಲ್ಯಗಳನ್ನು ಪ್ರತಿಪಾದಿಸುವ ಅನೇಕ ಜೋಡಿ ಪದಗಳು ನಮಗೆ ದೊರೆಯುತ್ತವೆ. ಮತ್ತು ಇವು ಸಮಾಜದಲ್ಲಿ ವರ್ಗೀಕರಣಗಳನ್ನು ಮಾಡುತ್ತವೆಯೆಂಬುದು ಗಮನಾರ್ಹ.

*ವಿವರಗಳಿಗೆ ನೋಡಿ: ಡಿ. ಡಿ. ಕೊಸಾಂಬಿ ೨೦೦೩ ಪುರಾಣ ಮತ್ತು ವಾಸ್ತವ ಪುಟ. ೨೨*

## ೧೦೬. ಅಶೋಕನ ಶಾಸನಸ್ಥ ವಿಷಯಗಳು

"ರಾಜ್ಯದಲ್ಲಿ ಪ್ರಾಣಿಗಳನ್ನು ಕೊಲ್ಲಬಾರದು. ಜೀವಹಿಂಸೆ ಮಾಡಕೂಡದು, ಯಜ್ಞಬಲಿಗಳೂ, ಇತರ (ಅರಣ್ಯಕ) ಬಲಿಗಳೂ ನಿಷಿದ್ಧ. ಯಜುರ್ವೇದ ಕಾಲದಿಂದಲೂ ಯಜ್ಞಬಲಿಗಳಿಗೂ, ಗೋಮಾಂಸ ಭಕ್ಷಣೆಗೂ ವಿರುದ್ಧವಾಗಿ ಸಾಗಿಬಂದ ಪ್ರತಿಭಟನೆ ಈಗ ಮೊಟ್ಟ ಮೊದಲ ಬಾರಿಗೆ ರಾಜಶಾಸನದಲ್ಲಿ ಪ್ರಾಮುಖ್ಯ ಪಡೆಯಿತು. ಅಂದರೆ ಪಶುಪೋಷಕ ಸಮಾಜದ ಮೇಲೆ ಕೃಷಿಸಮಾಜವು ತನ್ನ ಆಧಿಪತ್ಯವನ್ನು ನೆಲೆಗೊಳಿಸಿತು.

ಬಂಧುಗಳನ್ನೂ, ಬ್ರಾಹ್ಮಣರನ್ನೂ, (ಬೌದ್ಧ) ಶ್ರವಣರನ್ನೂ ಗೌರವಿಸಬೇಕು. ತಂದೆತಾಯಿಗಳನ್ನೂ ಹಿರಿಯರನ್ನೂ ಆದರಿಸಬೇಕು. ಸ್ನೇಹಿತರ ಬಗ್ಗೆ ಉದಾರವಾಗಿರಬೇಕು. ಸಂಪಾದನೆಯಲ್ಲೂ ಖರ್ಚು ಮಾಡುವುದರಲ್ಲೂ ಮಿತಿಯನ್ನು ಪಾಲಿಸಬೇಕು.

ಅಧಿಕಾರಿಗಳು ಮನುಷ್ಯರಿಗೂ ಪಶುಗಳಿಗೂ ವೈದ್ಯಕೀಯ ಸೌಲಭ್ಯಗಳನ್ನು ಕಲ್ಪಿಸಬೇಕು. ಬಾವಿಗಳನ್ನು ತೋಡಿಸಬೇಕು. ನೆರಳಿಗಾಗಿ ಮರಗಳನ್ನು ನೆಡಸಬೇಕು. ನೇರವಾದ ವಿಚಾರಣೆ ನ್ಯಾಯಯುತವಾಗಿದ್ದು ಶಿಕ್ಷೆ ನಿಷ್ಪಕ್ಷಪಾತವಾಗಿರಬೇಕು. ಮರಣ ಶಿಕ್ಷೆ ವಿಧಿಸಿದವರಿಗೆ ಮೂರು ದಿನಗಳ ಗಡುವನ್ನು ಕೊಡಬೇಕು. ಈ ಮೂರು ದಿನಗಳಲ್ಲಿ ಶಿಕ್ಷೆಗೊಳಗಾದವರ ಬಂಧುಮಿತ್ರರು ಸ್ಥಳೀಯ ಅಧಿಕಾರಿಗಳಿಂದ ಕ್ಷಮಾಭಿಕ್ಷೆಯನ್ನು ಕೋರಬಹುದು. ಅಂತಹ ಯಾವ ಬಂಧುಮಿತ್ರರೂ ಇಲ್ಲವಾದರೆ ಶಿಕ್ಷೆಗೊಳಗಾದವನೇ ಕನಿಷ್ಠ ತನ್ನ ಮರಣೋತ್ತರ ಆತ್ಮ ಶಾಂತಿಗಾಗಿ ಪ್ರಾರ್ಥನೆಗಳನ್ನು ಸಲ್ಲಿಸಬಹುದು. ಕಾರಾಗೃಹಗಳಲ್ಲಿರುವ ಖೈದಿಗಳಿಗೆ ಮಕ್ಕಳಿದ್ದರೆ ಅಧಿಕಾರಗಳು ಅವರಿಗೆ ಧನ ಸಹಾಯವನ್ನು ನೀಡಬೇಕು. ಖೈದಿಗಳು ಮಾನಸಿಕವಾಗಿ ಅಸ್ವಸ್ಥರಾದವರಾದರೆ ಸಂಕೋಲೆಗಳನ್ನು ಹಾಕಬಾರದು. ಮುದುಕರಾಗಿದ್ದರೆ ಬಿಡುಗಡೆ ಮಾಡಬೇಕು. ಯಾವುದೇ ವಿಷಯಗಳಿಗೂ ಆಡಳಿತಾಧಿಕಾರಿಗಳು ಕಾಲಕಾಲಕ್ಕೆ ಸರಿಯಾಗಿ ವರದಿಗಳನ್ನು ತಯಾರಿಸಿ ರಾಜನಿಗೆ – ಅದು ರಾತ್ರಿಯಿರಲಿ, ಹಗಲಿರಲಿ – ತಪ್ಪದೆ ಕಳುಹಿಸಿ ಕೊಡಬೇಕು.

ಈ ಧರ್ಮವನ್ನು ಸಕ್ರಮವಾಗಿ ನಿರ್ವಹಿಸುವ ಸಲುವಾಗಿ ಅಶೋಕನು ಧರ್ಮ ಮಹಾಮಾತ್ಯರನ್ನು ನೇಮಿಸಿದ್ದನು. ಬ್ರಾಹ್ಮಣರು, ಬೌದ್ಧರು, ಜೈನರು ಮೊದಲಾಗಿ ಎಲ್ಲ ಮತಗಳ ವ್ಯವಹಾರಗಳನ್ನು ಹಸನುಗೊಳಿಸಿ ನೋಡಿಕೊಳ್ಳಲು ಪ್ರತ್ಯೇಕವಾಗಿ ಒಬ್ಬೊಬ್ಬ ಮಹಾಮಾತ್ಯನನ್ನು ನೇಮಿಸಿದ್ದನು."

ಅಶೋಕನ ರಾಜಕೀಯ ನಿಲುವುಗಳನ್ನು ಇದು ಸ್ಪಷ್ಟಪಡಿಸುತ್ತವೆ. ಇದರ ಜೊತೆ ಅವನ ಆಡಳಿತ ಕ್ರಮವೂ ಇಲ್ಲಿ ವ್ಯಕ್ತವಾಗಿದೆ.

*ವಿವರಗಳಿಗೆ ನೋಡಿ: ಡಿ. ಡಿ. ಕೊಸಾಂಬಿ ೨೦೦೩ ಪುರಾಣ ಮತ್ತು ವಾಸ್ತವ ಪುಟ. ೨೨*

*ಡಿ. ಡಿ. ಕೊಸಾಂಬಿ ೧೯೮೮ ಪ್ರಾಚೀನ ಭಾರತದ ಚರಿತ್ರೆ ಪುಟ. ೧೯೪–೧೯೫*

## ೧೦೭. ಅಶ್ವಮೇಧ

"ಅಶ್ವ–ಮೇಧ, ಪ್ರತಿಮಾ: ಸಂಕೇತವು, ನಾಗ ಸಂಪ್ರದಾಯದ ಇನ್ನೂ ಒಂದು ವೈಶಿಷ್ಟ್ಯವನ್ನು ವಿಶದಪಡಿಸುತ್ತದೆ. 'ಯಾಯಾ' ಈ ಶಬ್ದ ಸಂಕೇತದಿಂದ ನಿಷ್ಪನ್ನವಾಗಿರುವ ಜಾ–ಜಾ (=ಝಾ–ಝಾ=ಕುದುರೆ), ಮತ್ತು ಜಾಯಿಲ ಇವು ಸಹ ತುಂಬ ವೈಶಿಷ್ಟ್ಯಪೂರ್ಣ ಸಂಕೇತಗಳಾಗಿವೆ. ಜಾಯಿಲ–ಗಮನಿಸುವ ಸ್ವಭಾವವುಳ್ಳುದು ನಾಯಿ, ಕುದುರೆ ಎರಡೂ ಸರಿ! ನಾಯಿಯೂ ಸರ್ಪಶಕ್ತಿಯ ಸಂಕೇತವೇ ಆಗಿದೆ. ಇಂಗ್ಲಿಷಿನಲ್ಲಂತೂ (Bitch ನೋಡಿ!) ಅಶ್ವ=ವಾಜಿ: 'ವಾಜೀ ರಣ': ನಾಗಶಕ್ತಿಯನ್ನು ಸ್ಥಿರಪಡಿಸಿಕೊಳ್ಳುವುದು. ಭೀಮನಿಗೆ ನಾಗಕನ್ನೆಯರಿಂದ ಸಹಸ್ರ ನಾಗಗಳ ಶಕ್ತಿ ದೊರೆತಿತಂತೆ! ಆ ನಾಗ, ಆನೆಯಲ್ಲ, ಎಂಬುದನ್ನು ಸಿದ್ಧಪಡಿಸುವ ಆವಶ್ಯಕತೆಯುಂಟೇ?"

"ಹೇ ಅಶ್ವವೇ ನಿನ್ನ ಶರೀರವು ಪತನಶೀಲವಾಗಿದೆ!" (: ಹೇ ಅಶ್ವನ್ ತವ ಶರೀರಂ ಪತಯಿಷ್ಣುಃ) 'ನಿನ್ನ ಶೃಂಗಸ್ಥಾನೀಯ ಕೇಶಗಳು ಮನೋಹರವಾಗಿ ಪುರದಲ್ಲಿ ಸುತ್ತಲೂ

ಅರಣ್ಯದಂತೆ ಸೌಮ್ಯವಾಗಿ ಹರಡಿಕೊಂಡಿವೆ. "ತವ ಶೃಂಗಾಣಿ: ಶೃಂಗಸ್ಥಾನೀಯಾಃ ಕೇಶಾಃ, ಪುರುತ್ರಾಃ ವಿಶಿಷ್ಠಿತಾ ಅರಣ್ಯೇಷು ಜಾರ್ಭುರಾಣಾ ಚರಂತಿ" ಈ ಬಗೆಯಲ್ಲಿ ಸ್ತೋತ್ರ ಮಾಡಿಸಿಕೊಂಡ ಈ ಅಶ್ವವು ಬಳಿಕ ಯಜ್ಞಪಶುವಾಗಿ ಕತ್ತರಿಸಲ್ಪಟ್ಟು ದೇವರ ಬಳಿಗೆ ಹೋಗುತ್ತದೆ! ದೇವಾನ್ ಗಮ್ಯಾಃ ಈ 'ಅಶ್ವ': ಯಜ್ಞಪಶು, ಎಂದರೆ ಅಪಾಂ ನಪ್ತೃವು; ಗೃತ್ಸಮದ ಕವಿಯ ಸ್ತೋತ್ರ ವಿಚಯವಾದ ಆ ಪದಲ್ಲಿ ಜನ್ಮತಾಳಿದ ಅಶ್ವವು ಮತ್ತು ದೀರ್ಘತಮ ಕವಿಯ ವರ್ಣನಾ ವಿಷಯವಾದ ಸಮುದ್ರಯೋನಿ ಅಶ್ವವು ಬೇರೆಯಲ್ಲ. ಓಲ್ಡೆನ್ ಬರ್ಗ್ ಊಹಿಸಿದಂತೆ ಅಪಾಂನಪ್ತೃವು ಇದು Water genie ಆಗಿದೆ. ನೀರೊಳಗಿನ ಬೆಂಕೆ=ವಡವಾನಲ=ಬಾಡಬ=ನೀರಕುದುರೆ! ವಿಶ್ವೋತ್ಪತ್ತಿಗೆ ಕಾರಣವಾದ ಶಕ್ತಿ: ಪುರುಷರೂಪ: ಅಶ್ವ: ನಾಗ: ಋಕ್ಷ (ಕರಡೆ): ಕೇಶಿನ್: ಕಪರ್ದಿ: ಪುರುಷ ಇತ್ಯಾದಿ ಎಂದು ಶಂಬಾ ಜೋಶಿಯವರು ಹೇಳುತ್ತಾರೆ.

ಅಶ್ವಮೇಧ ಹೆಸರು ಸೂಚಿಸುವಂತೆ ಅಶ್ವದ ಬಲಿ, ಯಜ್ಞಕ್ಕೆ ನೀಡುವ ಬಲಿಗಳಲ್ಲಿ ಕುದುರೆಯೂ ಒಂದು. ರಾಮಾಶ್ವಮೇಧ ಪಾಂಡವಾಶ್ವಮೇಧವೂ ಪ್ರಸಿದ್ಧ. ಅಶ್ವಮೇಧದಲ್ಲಿ ಕುದುರೆಯ ಹಣೆಪಟ್ಟಿಯಲ್ಲಿ ಸಂದೇಶ ಕಳಿಸಲಾಗುತ್ತದೆ. 'ಬಲುಹುಳ್ಳವರು ಕಟ್ಟಿ ಕಾದುವುದು. ಕಾದಲು ಅಸಾಧ್ಯವಾದವರು ಶರಣಾಗುವುದು' ಕುದುರೆಯ ಜೈತ್ರಯಾತ್ರೆಯಾದ ಮೇಲೆ ಅಶ್ವಮೇಧಯಾಗ ನಡೆಸಲಾಗುತ್ತದೆ. ಇದರಲ್ಲಿ ಅಶ್ವವನ್ನು ಯಜ್ಞಕ್ಕೆ ಬಲಿ ಕೊಡಲಾಗುತ್ತದೆ. ಅದರ ವಪೆಯನ್ನು ಕುದುರೆಯ ದೇಹದ ತಿರುಳನ್ನು ಯಾರು ತಿನ್ನಬೇಕು ಎಂಬ ಲೆಕ್ಕಾಚಾರವಿದೆ. ಕುದುರೆಯ ಮೆದುಳನ್ನು ರಾಣಿಯರಿಗೆ ನೀಡಲಾಗುತ್ತಿತ್ತು ಎಂದು ಪುರಾಣಗಳಲ್ಲಿ ಬರುತ್ತವೆ."

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೮ ಸಂಪುಟ. ೪ ಪುಟ. ೪೩೫-೪೩೭.*

**೧೦೭. ಅಶ್ವಿನಿ ದೇವತೆಗಳು**

"ಇಂದ್ರ, ಅಗ್ನಿ, ಸೋಮ-ಇವರನ್ನು ಬಿಟ್ಟರೆ ಅಶ್ವಿನಿಗಳಷ್ಟು ಪ್ರಾಮುಖ್ಯ ಪಡೆದ ಬೇರೆ ದೇವತೆಗಳಿಲ್ಲ. ಐವತ್ತು ಸೂಕ್ತಗಳು ಇವರನ್ನು ಕುರಿತು ಸ್ತೋತ್ರ ಮಾಡುತ್ತವೆ. ಇವರು ಯಮಳದೇವತೆಗಳು, ಚಿನ್ನದಂತೆ ಪ್ರಕಾಶಮಾನರು, ರೂಪವಂತರು, ಕಮಲಗಳ ಹಾರದಿಂದ ಅಲಂಕೃತರಾದವರು, ವಿವೇಕಶಾಲಿಗಳು, ಮಹಿಮಾನ್ವಿರು ಮತ್ತು ಸತ್ಯವಂತರು.

ಇವರಿಗೆ ಜೇನುತುಪ್ಪ ಕಂಡರೆ ತುಂಬ ಪ್ರೀತಿ. ಜೇನು ತುಂಬಿದ ನೂರು ಚರ್ಮದ ಚೀಲಗಳನ್ನು ಒಂದೇ ಸಲ ಕುಡಿದು ಬರಿದಾಗಿ ಮಾಡುವಷ್ಟು ಇಷ್ಟ ಅವರಿಗೆ ಜೇನುತುಪ್ಪ. ಅವರ ರಥ ಜೇನುತುಪ್ಪದ ಬಣ್ಣ. ಜೇನು ಹುಳುಗಳಿಗೆ ಜೇನನ್ನು ಕೊಡುವವರು ಇವರೇ. ಇವರಿಗೆ ಜೇನುತುಪ್ಪ ತುಂಬ ಇಷ್ಟವಾದರೂ ಇವರು ಸೋಮವನ್ನು ಉಪೇಕ್ಷೆ ಮಾಡುವುದಿಲ್ಲ. ಆಕಾಶದಲ್ಲಿ, ಭೂಮಿ ಸಮುದ್ರಗಳ ಮೇಲೆ ಅವರು ಸಂಚರಿಸುತ್ತಾರೆ. ಅವರು ಬೆಳಗ್ಗೆ ಸಂಚರಿಸುವ ಕಾಲ ಉಷಃಕಾಲದಿಂದು ಸೂರ್ಯೋದಯದವರೆಗೆ. ಅವರನ್ನು ಉಷೆಯರು ಎಚ್ಚಿಸಿದಾಗ ಅವರು ಉಷೆಯರೊಡನೆ ಭೂಮಿಗೆ ಇಳಿಯುತ್ತಾರೆ.

ಬೆಳಗ್ಗೆ ಅಲ್ಲದೆ ಅವರು ಮಧ್ಯಾಹ್ನದಲ್ಲೂ ಸಂಜೆಯ ಸಮಯದಲ್ಲೂ ಭೂಮಿಗೆ ಇಳಿದು ಬರುವುದುಂಟು.

ಅಶ್ವಿನಿಗಳು ಮಾನವರಿಗೆ ಬಹಳ ಉಪಕಾರಿಗಳು. ತಮ್ಮಲ್ಲಿರುವ ಔಷಧಗಳಿಂದ ಅವರು ಜನರ ರೋಗರುಜಿನಗಳನ್ನು ನಿವಾರಿಸುತ್ತಾರೆ. ದಾಂಪತ್ಯ ಸುಖಕ್ಕೂ ಅವರೇ ಕಾರಣರು. ಮದುವೆಯ ಕಾಲದಲ್ಲಿ ಅವರನ್ನು ತಪ್ಪದೆ ಸ್ತೋತ್ರ ಮಾಡುವ ಸಂಪ್ರದಾಯವಿದೆ.

ಅಶ್ವಿನಿ ದೇವತೆಗಳು ಆಯುಸ್ಸನ್ನು ವೃದ್ಧಿ ಮಾಡುತ್ತಾರೆ. ಅಷ್ಟೇ ಅಲ್ಲದೆ ಯೌವ್ವನವನ್ನು ನೀಡುತ್ತಾರೆ. ಅಶ್ವಿನಿ ಮತವೆಂಬುದು ಆಯುರ್ವೇದದಲ್ಲಿಯೂ ಬರುತ್ತದೆ. ಅಶ್ವಿನಿ ದೇವತೆಗಳು ಚ್ಯವನ ಮಹರ್ಷಿಗೆ ಯೌವನ ನೀಡಿರುವ ಕತೆಯು ಸುಪ್ರಸಿದ್ಧವಾಗಿದೆ."

*ವಿವರಗಳಿಗೆ ನೋಡಿ: ಜಿ. ಹನುಮಂತರಾವ್ ೨೦೦೪ ಋಗ್ವೇದ ಸೂಕ್ತಗಳು ಪುಟ. ೬೯-೭೦.*

**೧೦೯. ಅಷ್ಟವಿಧ ಅರ್ಚನೆ**

*ಜಲಗಂಧಾಕ್ಷತೆ ಕುಸುಮೋ*
*ದ್ವಿಲಸಿತ ಚರು ದೀಪ ಧೂಪ ಫಲನಿವಹಂಗಳ್ ।*
*ಪಲವೆಡೆಯೊಳಮತ್ಯುತ್ತಮ*
*ಫಲದಾಯಿಗಳೆಸೆದುವಷ್ಟವಿಧದರ್ಚನೆಗಳ್ ॥*

*(ಅಜಿತ ತೀರ್ಥಕರ ಪುರಾಣ ತಿಲಕಂ. ೪-೪೨)*

ಜಲ, ಗಂಧ, ಅಕ್ಷತೆ; ಹೂ: ಚರು, ದೀಪ; ಧೂಪ, ಫಲ – ಇವೆಂಟನ್ನು ಅರ್ಚನೆಗಾಗಿ ಬಳಸಿಕೊಳ್ಳುವುದನ್ನು ಅಷ್ಟವಿಧ ಅರ್ಚನೆಯೆಂದು ಕರೆಯುತ್ತಾರೆ. ಸಂಖ್ಯಾಶಾಸ್ತ್ರದಲ್ಲಿ ಒಂದು:, ಮೂರು:, ಐದು:, ಏಳು ಬೆಸಸಂಖ್ಯೆಗಳು; ಎರಡು:, ನಾಲ್ಕು:, ಆರು:, ಎಂಟು ಸರಿಸಂಖ್ಯೆಗಳು ಎಂಬುದಿಲ್ಲಿ ಗಮನಾರ್ಹ.

**೧೧೦. ಅಷ್ಟಸಿದ್ಧಿಗಳು**

*ಅಣಿಮಾದ್ಯಷ್ಟ ಗುಣಂಗಳಂ ಪಡೆವುದುಂ ಜೈನೋಕ್ತಿ ವಾರಾಶಿ ವಾಃ*
*ಕಣದಿಂದಂ ಪಡೆದಿರ್ದ ಸಿದ್ಧ ಪದಮಂ ಕೆಯ್ಕೊಳ್ವುದರ್ಕಡ್ಡಮೊ*
*ಡ್ಡಣಮೊಡ್ಡಿರ್ದಘಸೈನ್ಯಮಂ ತುಳಿಯಿಸಲ್ ಸರ್ವಾಹ್ಣ ಯಕ್ಷಂ ಸ್ವವಾ*
*ರಣಕಾಧೋರಣನಾದನುಂತಪರಣಂಗೇ ಕಾರಣಂ ವಾರಣಂ*

*(ಶಾಂತಿಪುರಾಣಂ ೧-೭)*

ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಕಾಮ್ಯ, ಈಶಿತ್ವ, ವಶಿತ್ವ ಎಂಬ ಎಂಟು ಸಿದ್ಧಿಗುಣಗಳನ್ನು ಹೊಂದುವುದೂ, ಜೈನರ ಮಾತೆಂಬ ಕಡಲಿನ ನೀರ ಹನಿಗಳಿಂದ ಹೊಂದಿದ್ದ ಸಿದ್ಧ ಪದವಿಯನ್ನು ಸ್ವೀಕರಿಸುವುದಕ್ಕೆ ಅಡ್ಡಿಯಾಗಿ ಸೈನ್ಯವನ್ನು ಒಡ್ಡಿದಂತೆ ಇರುವ ಪಾಪವೆಂಬ ಸೈನ್ಯವನ್ನು ಇಲ್ಲದಂತೆ ಮಾಡಲು ಸರ್ವಾಹ್ಣಯಕ್ಷನು ಸ್ವಾವಾರಣಕ್ಕೆ ಮಾವುತನಾದನು. ಹೀಗೆ ಯುದ್ಧವಿಲ್ಲದವನಿಗೆ ಯಾವ ಕಾರಣದಿಂದ

ಆನೆ ಅಡ್ಡಿಯಾಗಬಲ್ಲುದು?

ಸಪ್ತಸಿದ್ಧಿಯೆಂದು ಹೇಳುವ ಕ್ರಮವಿಲ್ಲ. ಅಷ್ಟಸಿದ್ಧಿ: ಅಷ್ಟಾಂಗ: ಮುಂತಾದ ಪದ ಪ್ರಯೋಗಗಳ ವಿಶಿಷ್ಟತೆಯನ್ನು ಇಲ್ಲಿ ಗಮನಿಸಬಹುದು.

**೧೧೧. ಅಷ್ಟಾಂಗಮಹಾನಿಮಿತ್ತ**

*"ಸಿಂಧುರಾಜ್ಯದಲ್ಲಿ ಪದ್ಮಿನಿಖೇಟವೆಂಬ ಊರುಂಟು. ಅಲ್ಲಿ* ***ಅಷ್ಟಾಂಗ ಮಹಾನಿಮಿತ್ತ*** *ಗಳಲ್ಲಿ ನಿಷ್ಣಾತನಾದ ವಿಶಾರದನೆಂಬ ಬ್ರಾಹ್ಮಣೋತ್ತಮನಿರುವನು. ಎಂದು ಶಾಂತಿಪುರಾಣದಲ್ಲಿ ಬರುತ್ತದೆ. (ಶಾಂತಿಪುರಾಣ ೬-೨೫ ವ)*

ಅಷ್ಟಾಂಗ ಮಹಾನಿಮಿತ್ತವೆಂದರೆ ಎಂಟು ಅಂಗಗಳಲ್ಲಿ ನಿಷ್ಣಾತನಾದವನು. (ಜ್ಯೋತಿಷಿ) ಭೂಮಿ, ಸ್ವಪ್ನ, ಶರೀರ, ಸ್ವರ, ಉತ್ಪಾತ, ಆಕಾಶ, ಲಕ್ಷಣ, ವ್ಯಂಜನ- ಇವುಗಳಿಗೆ ಸಂಬಂಧಿಸಿದ ಶಾಸ್ತ್ರಜ್ಞನೀತ.

ಒಂದು ರೀತಿಯ ಶಕುನಶಾಸ್ತ್ರ ಲಕ್ಷಣ, ಅಂಗ, ಸ್ವರ, ವ್ಯಂಜನ, ಭೌಮ, ಅಂತರಿಕ್ಷ, ಸ್ವಪ್ನ, ಚಿಹ್ನೆ ಎಂಟು ರೀತಿಯ ಶಕುನಶಾಸ್ತ್ರಗಳು.

*ವಿವರಗಳಿಗೆ ನೋಡಿ: ಟಿ. ಕೇಶವಭಟ್ಟ ೨೦೧೦ ವಡ್ಡಾರಾಧನೆ ಗದ್ಯಾನುವಾದ ಪುಟ. ೧೩೮.*

**೧೧೨. ಅಷ್ಟಾಂಗ ಸಮಾಧಿ**

ಇದರ ಅಂಗಗಳು ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ, ಸಮಾಧಿಗಳು.

"ಅಹಿಂಸಾಸತ್ಯಾಸ್ತೇಯಬ್ರಹ್ಮಚರ್ಯಾಪರಿಗ್ರಹಾಃ ಯಮಾ । ಅವುಗಳಲ್ಲಿ "ಅಹಿಂಸೆ, ಸತ್ಯ, ಕದಿಯದಿರುವುದು, ಬ್ರಹ್ಮಚರ್ಯ ಮತ್ತು ಅಪರಿಗ್ರಹ ಯಮಗಳು." (ವೇದಾಂತಸಾರ ೧೯೯೭ ಪುಟ. ೧೨೦)

ಅಹಿಂಸೆ ಎಂದರೆ ಮಾತು, ಮನಸ್ಸು, ಕಾಯ ಯಾವುದರಿಂದಲೂ ಇತರರಿಗೆ ತೊಂದರೆ ಮಾಡದಿರುವುದು. ಸತ್ಯವೆಂದರೆ ನಡೆ, ನುಡಿ, ಮನಸ್ಸು ಮೂರೂ ಒಂದೇ ಬಗೆಯಾಗಿರುವುದು. ಬ್ರಹ್ಮಚರ್ಯ ಎಂದರೆ ಸ್ತ್ರೀಯರ ವಿಷಯದಲ್ಲಿ ಸ್ಮರಣ, ಕೀರ್ತನ, ಕೇಲಿ, ಪ್ರೇಕ್ಷಣ, ಗುಹ್ಯ. ಭಾಷಣ, ಸಂಕಲ್ಪ, ಅಧ್ಯವಸಾಯ, ಕ್ರಿಯಾನಿರ್ವೃತಿ ಎಂಬ ಎಂಟು ಬಗೆಯ ಮೈಥುನಗಳ ವರ್ಜನೆ. ಅಪರಿಗ್ರಹವೆಂದರೆ ಸಮಾಧ್ಯನುಷ್ಠಾನಕ್ಕೆ ಬೇಕಾದ ವಸ್ತುಗಳನ್ನು ಸ್ವೀಕರಿಸದೆ ಇರುವುದು. ಯಮಗಳು ಎಂದರೆ ಯೋಗಸೂತ್ರ. ಜೈನ ಕಾವ್ಯಗಳಲ್ಲಿ ಬರುತ್ತದೆ.

**೧೧೩. ಅಷ್ಟಾದಶ ವರ್ಣನೆಗಳು**

ಮಹಾಕಾವ್ಯ ಶರೀರವನ್ನು ಕುರಿತು ಚರ್ಚೆಯಲ್ಲಿ ಭಾರತೀಯ ಆಲಂಕಾರಿಕರು ಮೇಲಿಂದ ಮೇಲೆ ಮಹಾಕಾವ್ಯದಲ್ಲಿ ಹದಿನೆಂಟು ವರ್ಣನೆಗಳಿರಬೇಕೆಂದು ಹೇಳಿದ್ದಾರೆ.

'ಮಹಾಕಾವ್ಯ ಲಕ್ಷಣವನ್ನು, ಮೊದಲು ಹೇಳಿದ ಭಾಮಹನಲ್ಲಾಗಲಿ, ವಿಷ್ಣುಧರ್ಮೋತ್ತರ ಪುರಾಣದಲ್ಲಿಯಾಗಲಿ, **ಅಷ್ಟಾದಶ ವರ್ಣನೆಗಳ** ಪ್ರಸ್ತಾಪವಿಲ್ಲ. ಆದರೆ ಭಾಮಹನ ನಂತರ ಅವನಿಗೆ ಸಮೀಪಕಾಲೀನನಾದ ದಂಡಿಯಲ್ಲಿ ಮೊಟ್ಟಮೊದಲಿಗೆ ಅಷ್ಟಾದಶ ವರ್ಣನೆಯ ಪ್ರಸ್ತಾಪವಿದೆ.'

ಈ ಹದಿನೆಂಟು ವರ್ಣನೆಗಳು ಹೀಗಿವೆ 'ನಗರ, ಅರ್ಣವ, ಶೈಲ, ಋತು, ಚಂದ್ರೋದಯ, ಸೂರ್ಯೋದಯ, ವನವಿಹಾರ, ಜಲಕ್ರೀಡೆ, ಮಧುಪಾನ ವಿನೋದ, ಸುರತೋತ್ಸವ, ವಿಯೋಗ, ವಿವಾಹ, ಕುಮಾರಜನನ, ಮಂತ್ರಾಲೋಚನೆ, ದೂತಕಾರ್ಯ ವಿಜಯಯಾತ್ರೆ, ಯುದ್ಧ ಮತ್ತು ನಾಯಕನ ವಿಜಯ'. ಇವುಗಳಲ್ಲಿ 'ಮಂತ್ರ ಪಂಚಕ'ಗಳೆನ್ನಬಹುದಾದ ಮಂತ್ರಾಲೋಚನೆ, ದೂತಕಾರ್ಯ, ಯುದ್ಧ ಪ್ರಯಾಣ ಮತ್ತು ನಾಯಕಾಭ್ಯುದಯ ಇವುಗಳು ಭಾಮಹನಲ್ಲಿ ಮತ್ತು ವಿಷ್ಣುಧರ್ಮೋತ್ತರ ಪುರಾಣಗಳಲ್ಲೂ ಉಲ್ಲೇಖಿತವಾಗಿವೆ. ವಿದ್ವಾಂಸರ ಪ್ರಕಾರ ಭಾಮಹನು ಹೇಳುವ 'ಮಂತ್ರಪಂಚಕ'ಗಳು ರಾಮಾಯಾಣ ಮಹಾಭಾರತಗಳನ್ನು ಗಮನಿಸುತ್ತವೆ. ಹಾಗು ದಂಡಿಯ ಹೇಳುವ ಅಷ್ಟಾದಶರ್ಣನೆಗಳು ಭಾರವಿ, ಮಾಘ ಇಂತಹ ಕವಿಗಳ ಕಾವ್ಯವನ್ನು ಗಮನಿಸುತ್ತವೆ. ದಂಡಿಯು ದಾಕ್ಷಿಣಾತ್ಯನಾದುದರಿಂದ 'ಅಷ್ಟಾದಶ ವರ್ಣನೆ' ಎನ್ನುವುದು ಭಾರತೀಯ ಮಹಾಕಾವ್ಯಲಕ್ಷಣಕ್ಕೆ ದಾಕ್ಷಿಣಾತ್ಯರ ಕೊಡುಗೆ ಎನ್ನಬಹುದು. ಕನ್ನಡದಲ್ಲೂ ಮೊದಲು ಉದಯಾದಿತ್ಯಾಲಂಕಾರದಲ್ಲಿ ದಂಡಿಯನ್ನು ಅನುಸರಿಸಿ ಅಷ್ಟಾದಶ ವರ್ಣನೆಗಳ ಉಲ್ಲೇಖವಾಗಿದೆ. ಒಂದು ವಿಶೇಷವೆಂದರೆ 'ಕೃತಿಗೆ ಪದಿನೆಂಟಂಗಂ' ಎಂದು ಹೇಳಿದ ಮಲ್ಲಿಕಾರ್ಜುನನು ತನ್ನ 'ಸೂಕ್ತಿ ಸುಧಾರ್ಣವ'ದಲ್ಲಿ ಈ ಹದಿನೆಂಟು' ವರ್ಣನೆಗಳಲ್ಲಿ ಮೊದಲನೆಯದು 'ನಗರ'ವಾಗಿರಬೇಕೆಂಬ ಸಾಂಪ್ರದಾಯಿಕ ನಿಲುವಿಗೆ ವಿರುದ್ಧವಾಗಿ 'ಸಮುದ್ರ' ವರ್ಣನೆಯನ್ನು ಮೊದಲು ಸೂಚಿಸಿದ್ದಾನೆ. ಇದು ಕನ್ನಡ ಕಾವ್ಯಗಳ ಅಭ್ಯಾಸದಿಂದ ಆದ ಬದಲಾವಣೆಯಿರಬಹುದು.

ಮಹಾಕಾವ್ಯದಲ್ಲಿ ಬರಬೇಕಾದ ವರ್ಣನೆಗಳು ಇಂತಿಂಥವೆಂದು ಪಟ್ಟಿಹಾಕಿದ್ದು; ಕಡ್ಡಾಯವೆಂಬ ರೂಪವನ್ನು ತಾಳಿ, ಇಂಥ ವರ್ಣನೆಗಳಿದ್ದರೇನೇ ಮಹಾಕಾವ್ಯ ಎಂಬ ತಪ್ಪು ತಿಳುವಳಿಕೆಗೆ ಅವಕಾಶವಾಗಿದೆ. ಈ ಅಷ್ಟಾದಶ ವರ್ಣನೆಗಳ ಪರಿಕಲ್ಪನೆಯನ್ನು ಸೂಚನೆಯೆಂದು ಸ್ವೀಕರಿಸದೆ ನಿಯಮವೆಂದು ಕಂಡದ್ದು ಅಪಾಯಕಾರಿಯಾಯಿತು. ರುದ್ರಟನು ಮಹಾಕಾವ್ಯದ ವಸ್ತು 'ಉತ್ಪಾದ್ಯ'ವೂ ಆಗಿರಬಹುದೆಂದು ಒಪ್ಪುತ್ತಾ ಈ ಉತ್ಪಾದ್ಯ ವಸ್ತು ಕೂಡ ಬೆಳವಣಿಗೆಯಾಗಬೇಕಾದ ವಿಧಾನ ಅಷ್ಟಾದಶ ವರ್ಣನೆಗಳ ಚೌಕಟ್ಟಿನಲ್ಲೇ ಇರಬೇಕೆನ್ನುತ್ತಾನೆ.

ಅಷ್ಟಾದಶ ವರ್ಣನೆಯ ಕಟ್ಟುಪಾಡಿಗೆ ಬಿದ್ದು ಅನೇಕ ಕವಿಗಳು ಅನೌಚಿತ್ಯಗಳಿಗೆ ಅವಕಾಶ ನೀಡಿದ್ದಾರೆ. ಹರಿಹರನ ಗಿರಿಜಾಕಲ್ಯಾಣದಲ್ಲಿ ಬರುವ ನಾರದರ 'ಸೂಳೆಗೇರಿಯ ಅಲೆದಾಟ' ಇದಕ್ಕೊಂದು ನಿದರ್ಶನ. ಹಾಗೆ ನೋಡಿದರೆ ಈ ಕಟ್ಟುಪಾಡಿಗೆ ಕೇವಲ ಆಲಂಕಾರಿಕರ ನಿರೂಪಣೆಯೇ ಕಾರಣವಲ್ಲ. ಏಕೆಂದರೆ ಅಷ್ಟಾದಶವರ್ಣನೆಯ

'ಅಂಗಗಳಲ್ಲಿ ಕೆಲವು ಕಡಿಮೆಯಾಗಿದ್ದರೂ ಕಾವ್ಯಕ್ಕೆ ದೋಷವಿಲ್ಲ' ಎಂದು ದಂಡಿಯೂ ಭೋಜನೂ ಹೇಳಿದ್ದಾರೆ.

ಲೋಕಾಖ್ಯಾನ, ದೇಶಾಖ್ಯಾನ, ನಗರಾಖ್ಯಾನ, ರಾಜಾಖ್ಯಾನ, ತೀರ್ಥಾಖ್ಯಾನ, ತಪೋಧನಾಖ್ಯಾನ, ಗತಾಖ್ಯಾನ, ಫಲಾಖ್ಯಾನಮೆಂದಷ್ಟವಿಧ ವರ್ಣನಮಕ್ಕುಂ ಎಂದು ಚಾವುಂಡರಾಯ ಪುರಾಣದಲ್ಲಿ ಬರುತ್ತದೆ. (ಚಾವುಂಡರಾಯ ಪುರಾಣ – ಆದಿಪುರಾಣ ೨೭ ವ). ಇದರಲ್ಲಿ ಲೋಕಾಖ್ಯಾನವು ಲೋಕಸಂಬಂಧಿತ, ದೇಶಾಖ್ಯಾನ ದೇಶ ಸಂಬಂಧಿತ. ನಗರಖ್ಯಾನ–ನಗರವರ್ಣನೆಯನ್ನು, ರಾಜಾಖ್ಯಾನ ಅರಸನ ಕುರಿತು, ತೀರ್ಥಾಖ್ಯಾನವು ದುರಿತ ವಿನಾಶಕಾಂಕ್ಷಿ; ತಪೋಧನಾಖ್ಯಾನ ಸದ್ಧರ್ಮ ಕಥನ, ಗತಾಖ್ಯಾನವು ತ್ರಿಷಷ್ಟಿ ಶಲಾಕಾ ಪುರುಷ ಗತಿಗಳನ್ನು, ಫಲಾಖ್ಯಾನವು ಪುಣ್ಯ ಕರ್ಮ ವಿವರವನ್ನು ಸೂಚಿಸುತ್ತದೆ.

*ವಿವರಗಳಿಗೆ ನೋಡಿ: ಡಾ. ಜಿ. ಎಸ್. ಶಿವರುದ್ರಪ್ಪ, ಕೆ.ವಿ. ನಾರಾಯಣ ೧೯೯೯*
*ಕಾವ್ಯಾರ್ಥ ಪದಕೋಶ ಪುಟ. ೩೬–೩೭.*

**೧೧೪. ಅಷ್ಟಾಹ್ನಿಕ ಮಹಾಪೂಜೆ**

'***ಅಷ್ಟಾಹ್ನಿಕ** ಜಿನ ಪೂಜಾ ಪುರಸ್ಸರಂ*' ಎಂದು ಚಾವುಂಡರಾಯ ಪುರಾಣದಲ್ಲಿ ಬರುತ್ತದೆ. *(ಚಾವುಂಡರಾಯ ಪುರಾಣ – ಆದಿಪುರಾಣ ೫೧ ವ)*

ನಂದೀಶ್ವರ ದ್ವೀಪದಲ್ಲಿರುವ ಅಕೃತಿಯ ಚೈತ್ಯಾಲಯಗಳಲ್ಲಿ ಜಿನಬಿಂಬಕ್ಕೆ ವರ್ಷಕ್ಕೆ ಮೂರು ಬಾರಿ ಎಂಟು ದಿನಗಳ ಪರ್ಯಂತ ಚತುರ್ನಿಕಾಯಾಮರರು ನಡೆಸುವ ಜಿನಪೂಜೆಯನ್ನು ಅಷ್ಟಾಹ್ನಿಕ ಮಹಾಪೂಜೆ ಎಂದು ಕರೆಯುತ್ತಾರೆ. ಈ ಎಂಟು ದಿನಗಳೆಂದರೆ ಆಷಾಢ, ಕಾರ್ತಿಕ ಮತ್ತು ಫಾಲ್ಗುಣ ಮಾಸಗಳ ಶುಕ್ಲ ಅಷ್ಟಮಿಯಿಂದ ಹುಣ್ಣಿಮೆಯವರೆಗಿನ ದಿನಗಳು. ಈ ಪರ್ವದಿನಗಳಲ್ಲಿ ಮಾಡುವ ಮಹಾಪೂಜೆಯೇ ಅಷ್ಟಾಹ್ನಿಕ ಮಹಾಪೂಜೆ.

**೧೧೫. ಅಸಿಖೇಟ**

*ಹಸ್ತೆ(ನಾ)* ***ಅಸಿಖೇಟ****ಹಸ್ತೆ ತೊಳ್ದಿವಳ್ (ಶಾಂತಿಪುರಾಣ ೯–೬)*

*ಆಕೆಯುಮ****ಸಿಖೇಟ****ಕಹಸ್ತೆಯಾಗಿ ವಿಭೀಷಣಮಪ್ಪ ಕತ್ತಿ, ಗುರಾಣಿ ರೂಪಮಂವಿಗುರ್ವಿಸಿ (ವಡ್ಡಾರಾಧನೆ ೬೦–೬೧)*

ವಡ್ಡಾರಾಧನೆಯಲ್ಲಿ ಈ ಪದವು ಬರುತ್ತದೆ. ಯುದ್ಧದ ಆಯುಧಗಳಲ್ಲಿ ಒಂದು. ಕತ್ತಿ, ಗುರಾಣಿಯನ್ನು ಅಸಿಖೇಟಕವೆಂದು ಕರೆಯುತ್ತಾರೆ.

**೧೧೬. ಅಸಿಧಾರಾ ವ್ರತ**

*ಪತಿವಿಗಮದೊಳ****ಸಿಧಾರಾ***
***ವ್ರತ****ಂಗಳಂ ತಾಳ್ದಿ ಧರ್ಮಮಂ ಮಾಡುವ ಸಂ*

ತತಿಯಂ ಕಾಯುತೆ ಕಾಯ

(ಅಜಿತತೀರ್ಥಂಕರ ಪುರಾಣ ತಿಲಕ ೧, ೫೦-೫೩)

ರನ್ನನ 'ಅಜಿತ ತೀರ್ಥಂಕರ ಪುರಾಣ ತಿಲಕಂ' ಕೃತಿಯಲ್ಲಿ ಅತ್ತಿಮಬ್ಬೆಯು ಅಸಿಧಾರಾವ್ರತಗಳನ್ನು ಆಚರಿಸಿ, ಉಪವಾಸದಿಂದ ಇದ್ದಳೆಂದೂ ಶ್ರಾವಕ ಧರ್ಮವನ್ನು ಅನುಸರಿಸುತ್ತಿದ್ದಳೆಂದೂ ಬರುತ್ತದೆ. (೧-೫೦, ೫೧)

ಅಸಿ=ಖಡ್ಗ(ಸಂ) ಇದಕ್ಕೆ ಖಡ್ಗಧಾರಾವ್ರತವೆಂದೂ ಕರೆಯುತ್ತಾರೆ. ಇದು ಬಹಳ ಕಠಿಣವಾದ ವ್ರತ. (ಹೇಗೆಂದರೆ ಕತ್ತಿಯ ಅಲಗಿನ ಮೇಲೆ ಹೆಜ್ಜೆಯಿಟ್ಟು ನಡೆಯುವಂತೆ).

ಆಚರಿಸಲು ಕಷ್ಟವಾದದ್ದು ಎಂಬ ಅರ್ಥದಲ್ಲಿ. ಆದರೆ ಜೈನ ಧರ್ಮದಲ್ಲಿ ಇದರರ್ಥ ಹೇಗೋ ತಿಳಿಯದು. ಜೈನಧರ್ಮದಲ್ಲಿ ಕಠೋರವಾದ ವ್ರತಗಳಿವೆ. ಈ ಅರ್ಥದಲ್ಲಿಯೇ ಬಳಕೆಗೆ ಬಂದಿರಬಹುದೋ! ಅಥವಾ ಅಂತಹ ವ್ರತವೊಂದಿದೆಯೇ?

ಗಂಡನೆ ಸತ್ತು, ತಂಗಿಗುಂಡಮಬ್ಬೆಯು ಸಹಗಮನ ಆಚರಿಸಿದ ಮೇಲೆ ಅತ್ತಿಮಬ್ಬೆಯ ಜೀವನ ಕ್ರಮವು ಹೇಗಿತ್ತು ಎಂದು ರನ್ನನು ವಿವರಿಸುತ್ತಾನೆ: ೧.ಅವಳು ಅಸಿಧಾರಾ ವ್ರತ ಕೈಗೊಂಡಳು, ೨.ಉಪವಾಸವ್ರತಕ್ಕೆ ಮಾಡಿದಳು, ೩.ಜಿನಧರ್ಮ ಪಾಲಿಸಿದಳು, ೪.ದಾನಗಳನ್ನು ನೀಡಿದಳು, ೫.ಜನಬಿಂಬಕ್ಕೆ ಪೂಜೆಮಾಡಿದಳು, ೬. ಶ್ರಾವಕಧರ್ಮ ವಾಚರಿಸಿದಳು.

## ೧೧೭. ಅಹಂ

ಅಹಂಪ್ರಜ್ಞೆಯ ಕುರಿತು ಕಾವ್ಯ ಮೀಮಾಂಸೆ ಮತ್ತು ವೇದಾಂತ ಎರಡರಲ್ಲೂ ಚರ್ಚೆ ಬರುತ್ತದೆ.

ಅಹಂಕಾರವು ಬುದ್ಧಿಯ ಪರಿಣಾಮ. ಅದು ಬುದ್ಧಿಯೊಡನೆ ಜೀವಾತ್ಮನ ತಾದಾತ್ಮ್ಯಕ್ಕೆ ಕಾರಣವಾಗಿದೆ. ಜೀವಾತ್ಮನಿಗೆ ಬುದ್ಧಿಯ ಕಾರ್ಯಗಳು ಆರೋಪಿತವಾಗುವುದು ಈ ತಾದಾತ್ಮ್ಯದ ದೆಸೆಯಿಂದಲೇ. ದೇಹದಲ್ಲಿ ಪಂಚಪ್ರಾಣಗಳನ್ನು ಮತ್ತು ಅದೇ ರೀತಿಯಲ್ಲಿ ಇಡೀ ಬದುಕನ್ನು ನಿಯಂತ್ರಿಸುವುದು ಅಹಂಕಾರದ ಮುಖ್ಯ ಕಾರ್ಯ. ಅಹಂಕಾರವು ಅಹಂಭಾವ (ಅಹಂಪ್ರಜ್ಞೆ) ಅಲ್ಲ. ಏಕೆಂದರೆ ಅಹಂಪ್ರಜ್ಞೆಯ ಕೇವಲ ಆತ್ಮ ಮಾತ್ರ ನಿಷ್ಠ(ಸ್ವಾತ ಮಾತ್ರ ವಿಶ್ರಾಂತಿಸತತ್ವಃ). ಆದ್ದರಿಂದ ಅದಕ್ಕೆ ಯಾವುದೇ ಬಾಹ್ಯ ಗ್ರಾಹ್ಯವಸ್ತು ವಿರುವುದಿಲ್ಲ. ಅಹಂಕಾರವು ಆತ್ಮದ ಮೇಲೆ ಬುದ್ಧಿಯ ಆರೋಪದ ಪರಿಣಾಮ(ಕೃತ್ರಿಮಃ ಅಹಂ ಅಹಂಕಾರಃ ತಂತ್ರಸಾರ)

ಅಹಂಕಾರತತ್ವದ ಕುರಿತಂತೆ ಅಭಿನವಗುಪ್ತನ ನಿಲುವು ಈ ಮೇಲಿನಂತಿದೆ.

"ಸಿದ್ಧ ಜೀವರಲ್ಲದವರ ಬದುಕು ನಿಂತಿರುವುದು ಅಹಂಕಾರದ ಮೇಲೆ. ಅಹಂಕಾರವೇ ಆ ಜೀವದ ಲಕ್ಷಣ. ಅಹಂಕಾರವೆಂಬುದೊಂದು ಪ್ರಕೃತಿ ತಂತ್ರ. ಈ ಸ್ಥಿತಿಯಲ್ಲಿ ಜೀವಕ್ಕೆ ಜಗತ್ತು ನೂರಾರು, ಅಹಂಕಾರಪೋಷಕವಾದ ಪ್ರಲೋಭನಗಳನ್ನು ಒದಗಿಸುತ್ತದೆ. ಕೀರ್ತಿ ಲೋಭ, ಧನಲೋಭ, ರಾಜ್ಯಲೋಭ ಮುಂತಾದ ನೂರಾರು

ಸೂತ್ರಗಳ ನೇಯ್ದ ಮೋಹದ ಬಲೆಯಲ್ಲಿ ಜೀವ ಬೀಳುತ್ತದೆ. ಆಗ ಜೀವ ತಾನು ಏನನ್ನಾದರೂ ಸಾಧಿಸಬಲ್ಲೆನೆಂದು, ತನ್ನತನವನ್ನು ಸ್ಥಾಪಿಸುವೆನೆಂದು ಹೊರಡುತ್ತದೆ; ಮಹತ್ವಾಕಾಂಕ್ಷಿಯಾಗುತ್ತದೆ. ಹೀಗೆ ಮಹಾತ್ವಾಕಾಂಕ್ಷಿಯಾಗಿ ಜಗತ್ತಿನ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸಲು ಹೊರಟ ಜೀವದ ಅಹಂಕಾರಕ್ಕೆ ಪ್ರಕೃತಿಯಿಂದ ಆಘಾತ ವಾಗುವುದೂ ಉಂಟು. ಪ್ರಕೃತಿ ಅಹಂಕಾರ ಪೋಷಕನೂ ಹೌದು. ಲೌಕಿಕ ಮಾರ್ಗಾನು ವರ್ತಿಯಾದ ಜೀವಕ್ಕೆ ಎಲ್ಲೆಲ್ಲಿಯೂ ಅತೃಪ್ತಿಯೇ, ಅಸುಖವೇ ತಲೆ ದೋರುತ್ತದೆ. ಪರಮ ತೃಪ್ತಿಯೊಂದರ ಅನ್ವೇಷಣೆಯೊಂದಿಗೆ ಈ ತೃಪ್ತಿಯೇ ಕಾರಣವಾಗುತ್ತದೆ. ಏಕೆಂದರೆ 'ಕೇವಲ ಸುಖ'ವೊಂದನ್ನುಳಿದು ಉಳಿದೆಲ್ಲ ಸುಖಗಳೂ ಅತೃಪ್ತಿಯ ನೆಲೆ. ಇದನ್ನು ಜೀವ ಬಾಳಿನಿಂದಲೇ ತಿಳಿಯಬೇಕು. ಈ ಲೌಕಿಕ ಪ್ರಯೋಜನಗಳು 'ಅಲ್ಪ'ವೆಂದು ನಿಸ್ಸಾರವೆಂದು ಮನಗಾಣುವವರೆಗೂ ಅದರ ಅಂಡಲೆತ ತಪ್ಪುವುದಿಲ್ಲ. ಹಾಗೆ ಮನಗಾಣಲು 'ಕಾಲ ಲಬ್ಧಿ' ದೊರೆಕೊಳ್ಳಬೇಕು."

ಅಹಂಕಾರ ಸಾಮಾನ್ಯ ಜನರದ್ದು. ಆದರೆ ಅಹಂಕಾರವು ಜೀವದ ಪ್ರಲೋಭನೆಯು ಹೌದು. ಅಹಂಕಾರವು ಲೌಕಿಕದ ತೃಪ್ತಿಗಾಗಿ ಮಾತ್ರ ಮೀಸಲಿಟ್ಟರೆ ಯಾವ ಉಪಯೋಗವೂ ಇಲ್ಲ. ಅದರಲ್ಲಿ ದೊರೆಯುವುದು ಕೇವಲ ಸುಖ ಮಾತ್ರ. ಲೌಕಿಕದ ಸುಖವನ್ನು ಕೊನೆಗಾಣಿಸಿದಾಗ ದೊರೆಯುವುದು ಕಾಲಲಬ್ಧಿ. ಅದನ್ನು ಪಡೆಯಬೇಕೆಂದು ಜೈನ ಮತಾವಲಂಬಿ ಕಾವ್ಯಗಳು ಶ್ರುತಪಡಿಸುತ್ತವೆ. ಎಲ್ಲಿ ಕಾಲಲಬ್ಧಿ ನಮಗೆ ದೊರೆಯುವು ದಿಲ್ಲವೋ ಅಹಂಕಾರವು ಅಲ್ಲಿ ವಿಜೃಂಭಿಸುತ್ತವೆ. ಅಹಂಕಾರವೇ ಪ್ರಕೃತಿ ತಂತ್ರವಾಗುತ್ತವೆ.

ವೇದಾಂತದಲ್ಲಿ ಬರುವ 'ಅಹಂ' ಈ ಕೆಳಗಿನಂತಿದೆ:

'ಅಹಂ ಎಂದರೆ ನಾನು ಎಂದರ್ಥ. 'ನಾನು' ಎನ್ನುವ ಭಾವನೆಯು ಯಾರಲ್ಲಿ ಹೆಚ್ಚು ಕಾಣಿಸಿಕೊಳ್ಳುತ್ತದೆಯೋ ಅವರನ್ನು ಅಹಂಕಾರಿಗಳೆಂದು ಕರೆಯುತ್ತೇವೆ.

ಯಾವ ಇವನು ಜಾಗ್ರತ್ ಸ್ವಪ್ನ ಸುಷುಪ್ತಿಗಳಲ್ಲಿ ಸ್ಫುಟವಾಗಿ ವ್ಯಕ್ತವಾಗುತ್ತಾನೆಯೋ, ಯಾವಾಗಲೂ ನಾನು, ನಾನು ಎಂದು ಒಂದೇ ವಿಧವಾಗಿ ಪ್ರತ್ಯಗಾತ್ಮ ಸ್ವರೂಪದಿಂದ ಒಳಗೆ ಪ್ರಕಾಶಿಸುತ್ತ, ನಾನಾ ವಿಧವಾದ ಆಕಾರಗಳನ್ನೂ ವಿಕಾರಗಳನ್ನೂ ಹೊಂದುತ್ತಿರುವ ಅಹಂಕಾರ ಬುದ್ಧಿ ಮೊದಲಾದವುಗಳನ್ನು ನೋಡುತ್ತ, ನಿತ್ಯಾನಂದ ಜ್ಞಾನರೂಪದಿಂದ ಪ್ರಕಾಶಿಸುತ್ತಿರುವನೊ ಅಂಥ ಇವನನ್ನೇ ಹೃದಯದಲ್ಲಿರುವ ನಿನ್ನ ಆತ್ಮನೆಂದು ತಿಳಿದುಕೋ (ವಿವೇಕ ಚೂಡಾಮಣಿ ಶ್ಲೋಕ ೨೧೭).

ಅಹಂಕಾರವು ಜ್ಞಾನವಾದಾಗ ಅದರ ಸ್ವರೂಪವೇ ಬೇರೆ. ಮೂಢನಿಗೆ ಆತ್ಮಜ್ಞಾನವು ದೊರೆಯುವುದಿಲ್ಲ. ಮೂಢನು ಗಡಿಗೆಯ ನೀರಿನಲ್ಲಿ ಪ್ರತಿಬಿಂಬಿಸಿರುವ ಸೂರ್ಯಬಿಂಬ ವನ್ನು ನೋಡಿ ಅದನ್ನು ಸೂರ್ಯನೆಂದೇ ಭಾವಿಸುತ್ತಾನೆ. ಹಾಗೆಯೇ ಅಜ್ಞಾನಿಯು (ಬುದ್ಧಿಯೇ ಮೊದಲಾದ) ಉಪಾಧಿಯಲ್ಲಿ ಪ್ರತಿಬಿಂಬಿಸಿರುವ ಚಿತ್-ಪ್ರತಿಬಿಂಬವನ್ನು ನಾನು ಎಂದೇ ತಿಳಿಯುತ್ತಾನೆ.

ಅಹಂಕಾರಿ ಚಿತ್ತ ಭ್ರಾಂತಿಯಿಂದ ನಾನು ಎಂಬುದನ್ನು ಪ್ರತ್ಯೇಕವೆಂದು ತಿಳಿಯುತ್ತಾನೆ.

ಅದು ಅವನ ದೋಷ. ಯಾರು ನಿಜವಾಗಿ ಆತ್ಮಜ್ಞಾನವನ್ನು ಸರಿಯಾಗಿ ಹೊಂದಿರುವರೊ ಅವರಿಗೆ ಅಹಂಭ್ರಾಂತಿ ಇರುವುದಿಲ್ಲ. 'ಅಹಂ' ಅನ್ನುವ್ಯದು ಸ್ವಂತವನ್ನು ಕುರಿತು ಹೇಳುತ್ತದೆ. ಅಹಂಕಾರಕ್ಕೆ ಸಾಮಾಜಿಕ ಮಾನ್ಯತೆಯಿಲ್ಲವೆಂಬುದು ಗಮನಾರ್ಹ.

*ವಿವರಗಳಿಗೆ ನೋಡಿ: ಜಿ.ಟಿ.ದೇಶಪಾಂಡೆ ೨೦೦೦ ಅಭಿನವಗುಪ್ತ ಪುಟ. ೬೧*

*ತೆಕ್ಕುಂಜ ಗೋಪಾಲಕೃಷ್ಣ ೧೯೫೬ ಶ್ರದ್ಧಾಂಜಲಿ ಪುಟ. ೧೦೫*

## ೧೧೮. ಅಹಿಂಸೆ

ವೈದಿಕಸಾಹಿತ್ಯ ಬೆಳೆದುಬಂದಿರುವ ಹಲವು ಹಂತಗಳನ್ನು ನಿಷ್ಪಕ್ಷಪಾತತೆಯಿಂದ ಅಭ್ಯಸಿಸಿದಾಗ ಸಮಾನಾಂತರದ ಎರಡು ಆಲೋಚನೆಗಳ ಬೆಳವಣಿಗೆಯಿದೆಯೆಂದು ವಿಷಾದವಾಗುತ್ತದೆ: ಅವುಗಳಲ್ಲಿ ಒಂದು ಇನ್ನೊಂದಕ್ಕೆ ವಿರುದ್ಧವಾಗಿದೆ. ಒಂದು ಆಲೋಚನಾ ಪಂಥ ಅಹಿಂಸೆಯ ತತ್ವಗಳನ್ನು ಒತ್ತಿ ಹೇಳುತ್ತದೆ: ಇನ್ನೊಂದು ಯಜ್ಞಯಾಗಾದಿ ಕರ್ಮಗಳನ್ನು ನಿಷ್ಠುರತೆಯಿಂದ ವಿಧಿಸುತ್ತದೆ. ಕ್ಷತ್ರಿಯ ರಾಜರು ಅಹಿಂಸಾತತ್ವಕ್ಕೆ ಬೆಂಬಲ ನೀಡುತ್ತಿದ್ದುದನ್ನೂ, ಪ್ರಾಣಿಬಲಿಯನ್ನು ಒಳಗೊಂಡ ವೈದಿಕ ಕರ್ಮಗಳನ್ನು ಬ್ರಾಹ್ಮಣ **ಪುರೋಹಿತರು** ಪ್ರೋತ್ಸಾಹಿಸುತ್ತಿದ್ದುದನ್ನೂ ನೋಡಿದರೆ ಆಶ್ಚರ್ಯವಾಗುತ್ತದೆ. ಕ್ಷತ್ರಿಯರ ಮತ್ತು ಪುರೋಹಿತರ ನಡುವೆ ಇದ್ದ ಈ ಹೋರಾಟದ ಸೂಚನೆ ಪುರಾಣಗಳಲ್ಲಿ, ವಶಿಷ್ಠ ವಿಶ್ವಾಮಿತ್ರ ಕಲಹ ಕಥೆಗಳಲ್ಲಿ ದೊರೆಯುತ್ತದೆ.

*ವಿವರಗಳಿಗೆ ನೋಡಿ: ದರ್ಶನ; ಹಿಂಸೆ*

*ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦ ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ*

## ೧೧೯. ಅಳತೆ ಮತ್ತು ಮಾನಗಳು

"ಹಿಂದೆ ಅಳತೆ ಮತ್ತು ಮಾನಗಳ ಕುರಿತಂತೆ ಬೇರೆ ಬೇರೆ ಹೆಸರುಗಳಿದ್ದವು. ಯಾವುದಾದರೂ ಒಂದು ನಿರ್ದಿಷ್ಟಮಾಪನವನ್ನು ನಿಗದಿಗೊಳಿಸಿ ಅದರ ಸಹಾಯದಿಂದ ಚದರವನ್ನು ಅಳೆದು ಇಷ್ಟು ಚದರಗಳಿಗೆ ಇಷ್ಟು ಮಾನ ಎಂಬ ತೀರ್ಮಾನಕ್ಕೆ ಬರುತ್ತಿದ್ದರು. ಈ 'ಮಾಪನ' ಎಲ್ಲಾ ಕಾಲದಲ್ಲಿಯೂ, ಎಲ್ಲಾ ಕಡೆಗಳಲ್ಲಿಯೂ ಒಂದೇ ಆಗಿರಲಿಲ್ಲ. ಮೂಲ ಮಾಪನದ ಅಳತೆಯನ್ನು ಆಯಾಭಾಗದವರು ಅಥವಾ ಆಡಳಿತ ವ್ಯವಸ್ಥೆಯವರು ನಿಗದಿ ಮಾಡುತ್ತಿದ್ದರು. ಈ ಮಾಪನವು ಒಂದು 'ಕೋಲು' ಆಗಿರುತ್ತಿತ್ತು. ಈ ಕೋಲುಗಳಿಗೆ ಅವರು ಹೆಸರನ್ನು ಕೊಡುತ್ತಿದ್ದ ನಿದರ್ಶನಗಳುಂಟು. ಅದು ಎಷ್ಟು ಉದ್ದವಿದೆ ಎಂಬುದರ ಆಧಾರದಮೇಲೆ 'ಹದಿನಾರು ಗೇಣುಗಳೆ', 'ಇಪ್ಪತ್ತೆಂಟು ಗೇಣುಗಳೆ', 'ಮುವತ್ತೆರಡು ಗೇಣುಗಳೆ' ಇತ್ಯಾದಿಯಾಗಿ ಅವುಗಳಿಗೆ ಹೆಸರನ್ನು ಕೊಡುತ್ತಿದ್ದರು. ಕೆಲವೊಮ್ಮೆ ಆಯಾ ಊರುಗಳ ಹೆಸರುಗಳನ್ನು ಇಡುತ್ತಿದ್ದದೂ ಉಂಟು. 'ಕೋಗಳಿಯ ಕೋಲು', 'ಮಾಣಿಕೇಶ್ವರನ ಕೋಲು' 'ವಿಷ್ಣುವರ್ಧನಗಳೆ' ಇತ್ಯಾದಿ. ಒಂದು ನಿರ್ದಿಷ್ಟವಾದ ಕೋಲು ಅಳತೆಯ ಚದರ ಭೂಮಿಯನ್ನು ಕಂಬ, ಕಮ್ಮ, ಎನ್ನುತ್ತಿದ್ದರು. ಇದಕ್ಕಿಂತಲೂ ಹಿರಿದಾದ

ಚದರವನ್ನು 'ಮತ್ತರು' 'ಮತ್ತಲ್' ಎಂಬುದಾಗಿ ಕರೆಯುತ್ತಿದ್ದರು. ಕನಿಷ್ಟಮಾಪನ ಒಂದು ಚದರಕೋಲು ಅಥವಾ ಗಣೆಯಾದರೆ, ಗರಿಷ್ಟಮಾಪನ 'ಮತ್ತರು' ಆಗಿತ್ತು. ಈ ಮತ್ತರಿಗೆ ಸಹ ಹೆಸರು ಇರುವುದುಂಟು. ಉದಾ: 'ಎರೆಗಂಗನ ಮತ್ತರು' 'ಗಂಗನ ಮತ್ತರ್' 'ಮಾಣಿಕೇಶ್ವರ ಮತ್ತರ್' ಮುಂತಾದವು. ಭೂಮಿಯನ್ನು ಅಳೆಯುತ್ತಿದ್ದ ಮತ್ತೊಂದು ವಿಧಾನವೆಂದರೆ, ನಿರ್ದಿಷ್ಟವಾದ ಧಾನ್ಯವನ್ನು, ಎಷ್ಟು ಪ್ರದೇಶದಲ್ಲಿ ಬಿತ್ತಬಹುದು ಎಂಬುದನ್ನು ಪರಿಗಣಿಸಿ ಅದನ್ನೇ ಮೂಲಮಾಪನವಾಗಿಟ್ಟುಕೊಂಡು, ಅದರ ಎರಡರಷ್ಟು ಮೂರರಷ್ಟು ಹೀಗೆ ಲೆಕ್ಕಾಚಾರ ಹಾಕುತ್ತಿದ್ದರು. ಧಾನ್ಯವನ್ನು ಅಳೆಯಲು ಅವರು ಬಳಸುತ್ತಿದ್ದ ಗರಿಷ್ಟ ಮಾಪನ 'ಖಂಡುಗ' ಒಂದು ಖಂಡುಗ ಭೂಮಿ ಎಂದರೆ ಒಂದು ಖಂಡುಗ ಧಾನ್ಯವನ್ನು ಬಿತ್ತಲು ಬೇಕಾಗುವಷ್ಟು ಭೂಮಿ ಎಂದು ಅರ್ಥ.

ಮನೆಯ ವಿಸ್ತೀರ್ಣವನ್ನು ಅಳೆಯುವಲ್ಲಿ 'ಅಂಕಣ'ಗಳೆಂದು ಪರಿಗಣಿಸಲಾಗುತ್ತಿತ್ತು. ಧಾನ್ಯ ಮತ್ತು ದ್ರವ ಪದಾರ್ಥಗಳನ್ನು ಅಳೆಯುವಾಗ 'ಸೊಲಿಗೆ' 'ಸೊಂಟಿಗೆ' ಕೊಳಗ' ಮುಂತಾದವುಗಳನ್ನು ಬಳಸುತ್ತಿದ್ದರು. 'ದೇವಕೊಳಗ' 'ಜಕ್ಕ ಕೊಳಗ' ಮುಂತಾದ ಬೇರೆ ಬೇರೆಯ ಹೆಸರುಗಳು ದೊರೆಯುತ್ತವೆ."

*ವಿವರಗಳಿಗೆ ನೋಡಿ: ಶ್ರೀ ಶೇಷಶಾಸ್ತ್ರಿ ೨೦೦೫ ಶಾಸನ ಪರಿಚಯ ಪುಟ. ೭೦-೭೨.*

### ೧೨೦. ಅಳೆ

*ಪಾಲ್ಲಳೆಯ ಪನಿಗಳಂ ಬೆರಸಿದವೊಲ್ (ಕವಿರಾ. ೧-೫೭)*

*ಪಾಲ್ ನಿರ್ಗ್ರಂಥಮಾದೊಡಳೆಯ ಸವಿ (ಧರ್ಮಾಮೃತ ೯-೭೪)*

ತುಳುವಿನಲ್ಲಿ ಅಳೆ ಎಂದರೆ ಮಜ್ಜಿಗೆ ಎಂಬ ಅರ್ಥ ಈಗಲೂ ಚಾಲ್ತಿಯಲ್ಲಿದೆ. ಮಜ್ಜಿಗೆಯೂಟ ಒಳ್ಳೆಯದು ಎಂಬ ಆರೋಗ್ಯದ ಕುರಿತಾದ ನಂಬಿಕೆಯು ಚಾಲ್ತಿಯಲ್ಲಿದೆ.

### ೧೨೧. ಅಟಿವೆಸನ

*ಪೆಸರೊಳ್ ಸೈರಂಧ್ರಿಯೆನಟಿ*

*ವೆಸನದ ದೆಸೆಯಜಿಯೆನೆನಗೆ"................................ (ಪಂಪ ಭಾರತ ೮-೫೭)*

ಎಂದು ದ್ರೌಪದಿಯು ಪಂಪ ಭಾರತದಲ್ಲಿ ವಿರಾಟನ ಮಹಾರಾಣಿಯಾದ ಸುದೇಷ್ಣೆಯಲ್ಲಿ ಹೇಳುತ್ತಾಳೆ.

ಸೇವಕಿಯಾದರೂ ಕೆಟ್ಟ ಅಥವಾ ನೀಚ ಕಾರ್ಯವನ್ನು ನಾನು ಮಾಡಲಾರೆನೆನ್ನುವುದು ಇಂಗಿತಾಭಿಪ್ರಾಯ. ಅಟಿವೆಸನವೆಂದರೆ ಕೆಟ್ಟ ವ್ಯಸನ. ಇದು ಊಳಿಗದವರ ಮನೋಸ್ಥಿತಿಯನ್ನು ಸೂಕ್ಷ್ಮವಾಗಿ ಅಭಿವ್ಯಕ್ತಿಸುತ್ತದೆ. ಮತ್ತು ಊಳಿಗಮಾನ್ಯ ವ್ಯವಸ್ಥೆಯನ್ನು ಸೂಚಿಸುತ್ತದೆ. ಅಳಿ ಎಂಬುದು ಇಲ್ಲಿ ಕೆಟ್ಟ ಎಂಬ ಅರ್ಥವನ್ನು ಸೂಚಿಸುತ್ತದೆ. ವ್ಯಸನವು ವೆಸನವೆಂದಾಗಿದೆ.

*ವಿವರಗಳಿಗೆ ನೋಡಿ: ಆರ್.ಎಸ್. ಶರ್ಮ ೨೦೦೪ ಪ್ರಾಚೀನ ಭಾರತದಲ್ಲಿ ಶೂದ್ರರು.*

# ಆ

### ೧೨೨. ಆಕಾಶ

*"ಆಕಾಶಕ್ಕೆ ನೆಗೆದು ಮತ್ತೆಂ......." (ವಡ್ಡಾರಾಧನೆ ಗುರುದತ್ತ ಭಟಾರರಕತೆ)*

ಜೀವವೇ ಮುಂತಾದ ಅಸ್ತಿಕಾಯ ದ್ರವ್ಯಗಳಿಗೆ ಅವಕಾಶವನ್ನೊದಗಿಸುವುದು ಆಕಾಶ. ಆಕಾಶವನ್ನು ಪ್ರತ್ಯಕ್ಷ ಪ್ರಮಾಣದಿಂದ ತಿಳಿಯಲಾಗುವುದಿಲ್ಲ. ಅನುಮಾನ ಪ್ರಮಾಣದಿಂದ ತಿಳಿಯಬೇಕು. ಆಕಾಶವು ಎರಡು ಪ್ರಕಾರವಾಗಿದೆ. ಲೋಕಾಕಾಶ ಮತ್ತು ಅಲೋಕಾಕಾಶ ಎಂದು. ಜೀವ, ಪುದ್ಗಲ, ಧರ್ಮ, ಅಧರ್ಮ ಮುಂತಾದವುಗಳಿರುವುದು ಲೋಕಾಕಾಶ. ಲೋಕಕ್ಕೆ ಮೇಲಿರುವ ಆಕಾಶಕ್ಕೆ ಅಲೋಕಾಕಾಶವೆಂದು ಹೆಸರು. ಜೈನಧರ್ಮವು ಆಕಾಶವನ್ನು ವಿಶೇಷ ರೀತಿಯಲ್ಲಿ ಗ್ರಹಿಸಿದೆ.

### ೧೨೩. ಆಗಮ

*ಪಂಪ ಆಗಮವನ್ನು ವಿಶಿಷ್ಟ ಅರ್ಥದಲ್ಲಿಯೂ ಬಳಸಿದ್ದಾನೆ. "ಚಾರಿಸಿ ಬಾಳಾಗಮಮವತಾರಂ"*

*(ಪಂಪ ಭಾರತ ೧೦-೮೩)*

ಆಗಮವೆಂದರೆ ಶಾಸ್ತ್ರ. ಶಸ್ತ್ರ ಶಾಸ್ತ್ರವೇ ಅವತಾರ ಮಾಡಿದ ಹಾಗೆ ಎನ್ನುವುದು ಇಲ್ಲಿಯ ಭಾವಾರ್ಥ. ಲೌಕಿಕ ಮತ್ತು ಆಗಮಿಕವೆಂದರೆ ಲೋಕಕ್ಕೆ ಸಂಬಂಧಿಸಿದ್ದು; ಆಧ್ಯಾತ್ಮಿಕಕ್ಕೆ ಸಂಬಂಧಿಸಿದ್ದು ಎನ್ನುವುದು ಸಾಮಾನ್ಯವಾದ ಅರ್ಥ. ಆದರೆ ಶಾಸ್ತ್ರವೆಂದರೆ ಅದು ನಿಯಮ. ಶಸ್ತ್ರ ಶಾಸ್ತ್ರವೆಂದರೆ ಶಸ್ತ್ರವನ್ನು ಬಳಸುವುದರ ಬಗೆಗೆ ಇರುವ ನಿಯಮ.

"ಚಾರಿಸಿ ಬಾಳಾಗಮಮವತಾರಂ" ಅದರ ಕುರಿತ ಶಾಸ್ತ್ರ ವಿಚಾರ. (ಬಾಳ್- ತೂಗುಕತ್ತಿ; ಖಡ್ಗ)

ಆಗಮದಲ್ಲಿ 'ಗಮ' ಎಂದರೆ ಚಲಿಸು. ಆಗಮ – ಆ ಕಡೆಗೆ ಚಲಿಸು ಎಂದು ಅರ್ಥ ಬರುತ್ತದೆ. 'ಗಮ' ಅನ್ನುವುದು ಚಲಿಸುವ ಕ್ರಿಯೆಯನ್ನು ಸೂಚಿಸುತ್ತದೆ. (ಗಮನ- ನಡೆ)

ಶಸ್ತ್ರವಿದ್ಯೆಯೂ ಒಂದು ರೀತಿಯಲ್ಲಿ ಶಾಸ್ತ್ರವಿದ್ಯೆಯೇ. ಅದಕ್ಕೆ ಅದರದೇ ಆದ ನಿಯಮಗಳಿವೆ. ಬಾಣವನ್ನು ಹೇಗೆ ಬಿಡಬೇಕು, ಖಡ್ಗವನ್ನು ಹೇಗೆ ಬಳಸಬೇಕು ಎನ್ನುವುದು ನಿಯಮಗಳು. ಇದರ ಚರ್ಚೆ ಕರ್ಣನು ಸರ್ಪಾಸ್ತ್ರವನ್ನು ಬಳಸುವಾಗಲೂ ಬರುತ್ತದೆ. ಶಲ್ಯನು ಕರ್ಣನಿಗೆ ಸರ್ಪಾಸ್ತ್ರದ ಗುರಿಯು ಸರಿಯಲ್ಲವೆಂದು ಹೇಳುತ್ತಾನೆ. ಕೊರಳಿಗೆ ಹಿಡಿದರೆ ಮಕುಟಕ್ಕೆ(ಕಿರೀಟಕ್ಕೆ) ತಾಗುವುದು ಉರಕ್ಕೆ ಹಿಡಿದರೆ ಕೊರಳಿಗೆ ತಾಗುವುದು. ಅಶ್ವಹೃದಯ ಕುದುರೆಯ ಮನೋಸ್ಥಿತಿ ತಿಳಿದವನು ಹೇಳುವ ಮಾತು.

ಪಂಪನ ಸುಪ್ರಸಿದ್ಧ ವಾಕ್ಯ: "ಬೆಳಗುವೆನಿಲ್ಲಿ ಲೌಕಿಕಮನ್ ಅಲ್ಲಿ ಜಿನಾಗಮಮಂ".

ಜಿನಾಗಮವೆನ್ನುವುದು ಇಲ್ಲಿ ಗಮನಾರ್ಹ. ಆಗಮವೆನ್ನುವುದು ಒಂದು ಹಂತದಲ್ಲಿ ಮೌಖಿಕ ಪರಂಪರೆಯನ್ನು ಅವಲಂಬಿಸಿತು. ಗುರು–ಶಿಷ್ಯರಿಗೆ ಆಗಮ ಸೂಕ್ತಗಳನ್ನು ಬಾಯಿಪಾಠ ಮಾಡಿಸುತ್ತಿದ್ದರು. ಎಷ್ಟೋ ಆಗಮಿಕ ಸೂಕ್ತಗಳು ಬಾಯಿಂದ ಬಾಯಿಗೆ ಬಂದವು. ಯೋಗ; ಧ್ಯಾನ; ಪಂಚೇಂದ್ರಿಯ ನಿಗ್ರಹ – ಇವುಗಳಿಗೆ ಸಂಬಂಧಿಸಿದಂತೆ ಮೌಖಿಕ ಪರಂಪರೆಯೇ ಹೆಚ್ಚು ಮುಖ್ಯವಾಯಿತು. ಉದಾ: ಸಮಾಧಿಯೋಗ; ಇದು ತುರೀಯಾವಸ್ಥೆಯಲ್ಲಿ ಸಾಧ್ಯವಾಗುವುದು. ನಮ್ಮ ನಿಗ್ರಹಗಳ ಮೂಲಕ ಧ್ಯಾನವನ್ನು ಗುರುವು ಹೇಳಿಕೊಡಬಹುದು. ಆದರೆ ಸಾಧಕನು ಅವನ್ನು ಸಾಧ್ಯಮಾಡಿಕೊಳ್ಳಬೇಕು. ವಾಸ್ತವವಾಗಿ ಆಗಮಗಳಲ್ಲಿ ಮೂರು ಬಗೆ: ಒಂದು ಶೈವ, ಎರಡು: ವೈಖಾನಸ ಆಗಮ, ಮೂರು: ಶಾಕ್ತ ಆಗಮ. ವೈಖಾನಸ ಆಗಮ ಅಥವಾ ಪಂಚರಾತ್ರಿ ಆಗಮ ವೈಷ್ಣವ ತಂತ್ರವನ್ನು ಅಳವಡಿಸಿಕೊಂಡಿದೆ. ಭೃಗು, ಮರೀಚಿ ಮೊದಲಾದವರು ಈ ಪಂಥಕ್ಕೆ ಸೇರಿಕೊಳ್ಳುತ್ತಾರೆ. ಶೈವ ಆಗಮಗಳಲ್ಲಿ ನಾಲ್ಕು ಬಗೆ: ಕಾಪಾಲಿಕರು: ಕಾಳಾಮುಖರು: ಪಾಶುಪತ ಮತ್ತು ಶೈವ: ಶೈವ ಆಗಮಗಳಲ್ಲಿ ಈ ಕೆಳಗಿನ ವಿಧಾನಗಳಿವೆ:

೧) ಕಾರ್ಮಿಕ ೨) ಯೋಗಜ ೩) ಚಿಂತ್ಯ ೪) ಕಾರಣ ೫) ಅಜಿತಃ ೬) ದೀಪ್ತ ೭) ಸೂಕ್ಷ್ಮ ೮) ಸಹಸ್ರಾರ ೯) ಅಂಶುಮದ್ ೧೦) ಸುಪ್ರಭೇದ ೧೧) ವಿಯ ೧೨) ವಿಶ್ವಾಸ ೧೩) ಸ್ವಯಂ ಭುವ ೧೪) ಅನಲ ೧೫) ವೀರಾ ೧೬) ಕೌರವ ೧೭) ಮಡಟ ೧೮) ವಿಮಲ ೧೯) ನಿಶ್ವಾಸ ೨೦) ಸ್ವಯಂಭಾವ ೨೧) ಅನಲ ೨೨) ವೀರ ೨೩) ಸಹಸ್ರಾರ ೨೪) ಅಂಶುಮದ್ ೨೫) ಸುಪ್ರಭೇದ ೨೬) ಮುಕಾಂಬಿಕಾ ೨೭) ಲಲಿತ ೨೮) ಸಿದ್ಧ ೨೯) ಸಂತಾನ ೩೦) ಪರಮೇಶ್ವರ ೩೧) ಕಾರಣ ೩೨) ವಾತುಲ.

ಆಗಮಗಳು ನಾಲ್ಕು ಮುಖ್ಯ ವಿಚಾರಗಳ ಬಗ್ಗೆ ಪ್ರಸ್ತಾವಿಸುತ್ತವೆ. ೧) ದೇವತಾ ಪ್ರತಿಮೆಯ ನಿರ್ಮಾಣ ೨) ದೇವಾಲಯಗಳ ನಿರ್ಮಾಣ ೩) ಧ್ಯಾನ ಕ್ರಮ, ೪) ಆರಾಧನೆಯ ಕ್ರಮ (ಕ್ರಿಯಾ, ಜ್ಞಾನ, ಯೋಗ ಮತ್ತು ಚಾರ್ಯ). ಇವು ಮತ್ತೆ – ತಂತ್ರ, ಮಂತ್ರ, ಯೋಗಗಳ ಮುಖೇನ ಜಾರಿಗೆ ಬಂದಿವೆ.

'ಆಜ' ಉಪಸರ್ಗಪೂರ್ವಕವಾದ ಗಮ್ಲೃ – ಗತೌ ಧಾತುವಿನಿಂದ ಆಗಮ ಪದ ಬಂದಿದೆ. "ಆಜ' ಉಪಸರ್ಗ ಪರಂಪರೆಯೆಂಬ ಅರ್ಥ ಕೊಡುತ್ತದೆ. 'ಯೇ ಗತ್ಯಾರ್ಥಾಃ ಧಾತವಃತೇ ಜ್ಞಾನಾರ್ಥಾ' ಎಂಬ ಸಂಸ್ಕೃತ ವ್ಯಾಕರಣ ನಿಯಮದಂತೆ ಎಲ್ಲಾ ಗತ್ಯರ್ಥಕ ಧಾತುಗಳು ಜ್ಞಾನದ ಅರ್ಥವನ್ನು ಸೂಚಿಸುತ್ತವೆ. ಆಗಮವೆಂದರೆ ಪರಂಪರೆಯಿಂದ ಪರಿಷ್ಕೃತವಾಗಿ ಬಂದ ಜ್ಞಾನ. ಆ ಜ್ಞಾನದ ಗ್ರಂಥರಾಶಿ ಕೂಡಾ ಆಗಮವಾಗುತ್ತದೆ. ಲೌಕಿಕಮನ್ ಅಂದರೆ ಪಂಪನಿಗೆ ಭಾರತ ಬರೆಯುವಾಗ ಅದು ಆಗಮಿಕವೆಂದು ಅನಿಸಿಲ್ಲ. ಅದು ಕ್ಷಾತ್ರತೇಜದ ಕಾವ್ಯವಾಗಿ ಕಾಣಿಸಿರಬೇಕು. ಶಾಸ್ತ್ರ ಸಮ್ಮತವಾದ ಆಗಮವು ಲೌಕಿಕವಲ್ಲ. ಆದರೆ ಬಾಳಾಗಮ ಎನ್ನುವುದು ಲೌಕಿಕ ವಿದ್ಯೆಗೆ ಸಂಬಂಧಿಸಿರುವುದು.

### ೧೨೪. ಆಗಮ ವಿರುದ್ಧ

"ರಾಗಾದಿ ದೋಷರಹಿತವಾಗಿರುವುದೂ, ಅಖಿಲ ವಸ್ತುಗಳ ಪರಿಜ್ಞಾನವೂ ಯೋಗಿ ಗುಣ: ಇದನ್ನು ಅನುಸರಿಸಿರತಕ್ಕದ್ದೇ ಆಗಮ. ಎಂದರೆ ಯೋಗಿಗಳಿಂದ ಪ್ರೋಕ್ತವಾಗಿ ಆಚರಿಸಲ್ಪಟ್ಟಿರುವುದೇ ಆಗಮ. ಇದಕ್ಕೆ ವಿರುದ್ಧವಾದುದು ವಚನವು ದೋಷ". ಭಾಮಹ, ದಂಡಿ – ಇವರ ಉಕ್ತಿಗಳನ್ನು ಇದರೊಂದಿಗೆ ಹೋಲಿಸಿದರೆ, ಮಾರ್ಗಕಾರನು ಆಗಮ ಎಂದರೆ ಜೈನಾಗಮ ಎಂದೇ ಕುರಿತಿರುವಂತೆ ಭಾಸವಾಗುತ್ತದೆ.

ಶ್ರುತಿಸ್ಮೃತಿರಾಗಮಃ –ದಂಡಿ

*"ಆಗಮೋ ಧರ್ಮಶಾಸ್ತ್ರಾಣಿ ಲೋಕಸೀಮಾ ಚ ತತ್ಕೃತಾ ।*

*ತದ್ವಿರೋಧಿ ತದಾಚಾರವ್ಯತಿಕ್ರಮಣತೋ ಯಥಾ"॥–ಕಾವ್ಯಾಲಂಕಾರ (೪–೪೭)*

ಲೋಕವ್ಯವಹಾರದ ಕಟ್ಟುಕಟ್ಟಳೆಗಳಿಗೆ ಮೂಲಭೂತವಾದ ಧರ್ಮಶಾಸ್ತ್ರಗಳೇ ಆಗಮ. ಅವುಗಳಲ್ಲಿ ಹೇಳಿರುವ ಆಚಾರವನ್ನು ಉಲ್ಲಂಘಿಸುವುದು ಆಗಮವಿರೋಧಿ ಚಟುವಟಿಕೆಯಾಗುತ್ತದೆ.

*ವಿವರಗಳಿಗೆ ನೋಡಿ: ಎಂ.ವಿ.ಸೀತಾರಾಮಯ್ಯ ೨೦೦೫*

*ಶ್ರೀ ವಿಜಯ ಕೃತ ಕವಿರಾಜಮಾರ್ಗಂ (೧–೧೦೪)*

### ೧೨೫. ಆಚಾರ

*...............ಶೀಲ **ವ್ರತಾಚಾರದಿಂ**............*

*(ಅಜಿತ ತೀರ್ಥಂಕರ ಪುರಾಣ ತಿಲಕಂ ೧೨–೧೦)*

ಶುದ್ಧಚಾರಿತ್ರ, ಗುಣನಡತೆ, ಸಂಪ್ರದಾಯ, ಜೀವನಕ್ರಮಗಳನ್ನು ಆಚಾರವೆಂದು ಕರೆಯುತ್ತಾರೆ. ಅಜಿತ ತೀರ್ಥಂಕರ ಪುರಾಣ ತಿಲಕದಲ್ಲಿ ಅತ್ತಿಮಬ್ಬೆಯನ್ನು ರನ್ನ ಹೊಗಳುವ ಕ್ರಮ ಈ ರೀತಿಯದು.

ಆಚಾರವೆಂದರೆ ಗುಣ ನಡತೆಯ ಶ್ರೇಷ್ಠತೆ. ಅನೈತಿಕರನ್ನು ಯಾರೂ ಆಚಾರವಂತರು ಎಂದು ಕರೆಯುವುದಿಲ್ಲ. ವಾಸ್ತವವಾಗಿ ಆಚಾರವೆನ್ನುವುದು ಸದ್ವಿಚಾರ. ಸನ್ನಡತೆಗೆ ಸಂಬಂಧಿಸಿದ್ದು, ಆಚಾರವೆಂಬುದಕ್ಕೆ ಸಂಸ್ಕೃತದಲ್ಲಿ ಸ್ವಾತಂತ್ರ್ಯವೆಂಬ ಅರ್ಥವೂ ಇದೆ.

ಆಚಾರದ ಇನ್ನೊಂದು ಮುಖವನ್ನು ಇಲ್ಲಿಯೇ ಪರಿಚಯಿಸಬೇಕು. ಆಚಾರದಲ್ಲಿ ವಾಮಾಚಾರ ಮತ್ತು ದಕ್ಷಿಣಾ ಚಾರಗಳಿವೆ. ವಾಮಾಚಾರವು ತಾಂತ್ರಿಕರಿಗೆ ಸಂಬಂಧಿಸಿದ್ದು. ವಾಮಾಚಾರವೆಂದರೆ ಅದು ಎಡಕ್ಕೆ ಸಂಬಂಧಿಸಿದ್ದಾದರೆ ದಕ್ಷಿಣಾಚಾರವೆಂದರೆ ಬಲಕ್ಕೆ ಸಂಬಂಧಿಸಿದ್ದು. ಆಚಾರವು ದೈನಂದಿನ ಬದುಕಿಗೆ ಸಂಬಂಧಿಸಿದರೆ ಅಲ್ಲಿ "ಸದಾಚಾರ" ಎಂದು ಕರೆಯುತ್ತೇವೆ. ಶೈವ ಪಂಥವು ವೇದಾಚಾರಕ್ಕಿಂತ ಭಿನ್ನವಾದುದನ್ನು ಹೇಳುತ್ತದೆ. ಚರ್ಯ–ಕ್ರಿಯಾ, ಯೋಗ, ಜ್ಞಾನ, ಇದು ಶೈವ ಧರ್ಮದ ಮುಖ್ಯತತ್ವಗಳು. ವೇದವು ಆಚಾರದ ಬಗ್ಗೆ ಹೇಳುತ್ತಾ ಯಾರು ವೇದವನ್ನು ಅನುಸರಿಸುತ್ತಾರೋ ಅವರು ಆಚಾರವಂತರು ಎಂದು ಹೇಳುತ್ತದೆ. ವೈಷ್ಣವ ಪಂಥವು ವೈಷ್ಣವ ಆಚಾರವನ್ನು

ಶ್ರೇಷ್ಠವೆಂದಿತು. ಅದು ಒಂದು ಹಂತದಲ್ಲಿ ಶೈವಾಚಾರವನ್ನು ವಾಮಾಚಾರವೆಂದು ಕರೆಯಿತು.

ಆಚಾರಗಳಲ್ಲಿ ಅನೇಕ ವಿಧಗಳಿವೆ. ಅ) ಶಿವಭಕ್ತ – ಶೈವಾಚಾರರು, ಆ) ಜೈನ ಭಕ್ತ – ಜೈನಾಚಾರರು, ಇ) ವೈಷ್ಣವ ಭಕ್ತ – ವೈಷ್ಣವಾಚಾರರು.

ಇವುಗಳು ಮತಕ್ಕೆ ಸಂಬಂಧಿಸಿದಂತೆ ಆಯಿತು. ಆದರೆ ಇನ್ನೊಂದು ರೀತಿಯೂ ಇದೆ. ಅ) ಕುಲಾಚಾರ, ಆ) ಮತಾಚಾರ, ಇ) ಜಾತಿಯ ಆಚಾರ, ಈ) ಸ್ತ್ರೀಯಾಚಾರ– ಇತ್ಯಾದಿ

ಇದರಲ್ಲಿ ಕೊನೆಯದನ್ನು ಪಂಪಭಾರತದ ಮಾದ್ರಿ–ಕುಂತಿಯರ ಸಂಭಾಷಣೆಯಲ್ಲಿ ಕಾಣಬಹುದು. ಮಾದ್ರಿಯು ತಾನು ಸಹಗಮನ ಯಾಕೆ ಮಾಡಬೇಕೆಂದು ಚರ್ಚಿಸುವಾಗ ಈ ವಿಷಯ ಬರುತ್ತದೆ (ನೋಡಿ: ಪಂಪಭಾರತ).

ಆಚಾರ–ಗುಣದ ಸಂಕೇತ. ಒಳ್ಳೆಯಗುಣ, ನಡತೆ, ಸಂಪ್ರದಾಯ, ಜೀವನಕ್ರಮವನ್ನು ಆಚಾರವೆಂದು ಕರೆಯುತ್ತಾರೆ. "ಆಚಾರವಿಲ್ಲದ ನಾಲಗೆ ನಿನ್ನ ನೀಚ ಬುದ್ಧಿಯ ಬಿಡೋ ನಾಲಗೆ" (ದಾಸರ ಕೀರ್ತನೆಗಳು).

ಆಚಾರವೆಂದರೆ ಸ್ವಾತಂತ್ರ್ಯವೆಂದು ಅರ್ಥ. ಶೈವ ಪಂಥದಲ್ಲಿ ಚರ್ಯ, ಕ್ರಿಯೆ, ಯೋಗ ಮತ್ತು ನಾಲ್ಕು ವಿಭಾಗಗಳಿವೆ. ಇವು ಆಚಾರಕ್ಕೆ ಸಂಬಂಧಿಸಿದವುಗಳು. ವೈಷ್ಣವಾಚಾರವೆಂದರೆ ವೈಷ್ಣವ ಪಂಥವನ್ನು ಅನುಸರಿಸುವುದು ಎಂದರ್ಥ. ಹಳೆಗನ್ನಡ ಕಾವ್ಯಗಳಲ್ಲಿ 'ಸತ್ಯ ಶೌಚಾಚಾರ' 'ಸದಾಚಾರ' ಎಂಬ ಉಲ್ಲೇಖಗಳು ಬರುತ್ತವೆ ಮತ್ತು ಅವು ನಾಯಕನನ್ನೋ, ನಾಯಕಿಯನ್ನೋ ವೈಭವೀಕರಿಸುತ್ತವೆ.

### ೧೨೬. ಆತಪತ್ರ

ಆತಪತ್ರವೆಂದರೆ ಕೊಡೆ, ಛತ್ರಿ ಎಂದು ಅರ್ಥ. ಈ ಕುರಿತ ವಿವರಣೆಯು ಕರ್ಣಾಟಕ ಕಾದಂಬರಿಯಲ್ಲಿ ಬರುತ್ತದೆ. (೩–೨೦) ಸಾಮಾನ್ಯವಾದ ಕೊಡೆಯನ್ನು ಹಿಂದೆ ಛತ್ರಿಯೆಂದು ಕರೆಯುತ್ತಿದ್ದರು. ಹಿಂದಿನ ಕಾಲದಲ್ಲಿ ರಾಜರಿಗೆ ಇರುವ ಛತ್ರಿಗಳನ್ನು ಶ್ವೇತಛತ್ರ ಅಥವಾ ಬೆಳ್ಗೊಡೆಯೆಂದು ಕರೆಯುತ್ತಿದ್ದರು. ಸಾಮಾನ್ಯರ ಛತ್ರಿಯು ಓಲೆಗರಿಯಿಂದ ರಚಿತವಾಗುತ್ತಿತ್ತು ಮತ್ತು ಛತ್ರಿಯು ಬಿಸಿಲು ಮತ್ತು ಮಳೆಯ ರಕ್ಷಣೆಗಾಗಿ ಬಳಕೆಯಾಗುತ್ತಿತ್ತು. ಪತ್ರವೆಂದರೆ ಎಲೆಯೆಂಬ ಅರ್ಥವಿದೆ. ಪತ್ರದಿಂದ ರಚಿತವಾದುದು ಆತಪತ್ರ.

### ೧೨೭.ಆತೋದ್ಯ

*"ನೃತ್ಯವಾದ್ಯ **ಗೀತಾತೋದ್ಯಂಗಳೊಳ್**" ಎಂದು ಪಂಪ ಭಾರತದಲ್ಲಿ ಬರುತ್ತದೆ.*

*(ಪಂಪ ಭಾರತ ೩–೮೧ ವ)*

ನೃತ್ಯ, ವಾದ್ಯ, ಗೀತ, ಮಂಗಳವಾದ್ಯಗಳಲ್ಲಿ ಎಂಬುದು ಭಾವಾರ್ಥ. ಶುಭ ಕಾರ್ಯಗಳಲ್ಲಿ; ರಾಜಸಭೆಯಲ್ಲಿ ಇವು ನಿರಂತರವೆಂಬುದು ಗಮನಾರ್ಹ. ಆತೋದ್ಯನಾದ

ವೆಂದರೆ ಮೃದಂಗಧ್ವನಿ, ಮೃದಂಗಾದಿ ವಾದ್ಯಗಳ ಧ್ವನಿ. ದೇವವಾದ್ಯ (ಮಂಗಳಾರತಿ ಯಾಗುವಾಗ ನುಡಿಸುವ ವಾದ್ಯ) ವೀರವಾದ್ಯ (ಯುದ್ಧದ ಸಂದರ್ಭದಲ್ಲಿ ಮೊಳಗಿಸುವ ವಾದ್ಯ) ಮಂಗಳ ಕಾರ್ಯದ ಸಂದರ್ಭದಲ್ಲಿ ಮಂಗಳವಾದ್ಯ ಬಾಜಿಸುತ್ತಾರೆ. ಮರಣವಾದ್ಯ; ಮರಣ ಮೃದಂಗ; ಮರಣಗಂಟೆ ಮೊದಲಾದ ಪದ ಪ್ರಯೋಗಗಳನ್ನು ಗಮನಿಸಬಹುದು.

**೧೨೮. ಆತ್ಮ ಬಲಿಯ ಸ್ಮಾರಕಗಳು**

ಸಾಮಾಜಿಕ ಮತ್ತು ಧಾರ್ಮಿಕ ಕಾರಣಗಳಿಗಾಗಿ ಆತ್ಮಹತ್ಯೆ ಮಾಡಿಕೊಂಡವರಿಗೆ ಸ್ಮಾರಕ ನಿರ್ಮಿಸುವುದು ಹಿಂದಿನಿಂದಲೂ ಕಂಡುಬರುತ್ತದೆ. ಈ ಕುರಿತು ಆರ್. ಶೇಷಶಾಸ್ತ್ರಿಯವರು ಹೀಗೆ ಹೇಳುತ್ತಾರೆ:

ವ್ಯಕ್ತಿಯೊಬ್ಬನು ತನ್ನ ಶ್ರೇಯಸ್ಸಿಗಾಗಿಯೋ, ಅಥವಾ ತನ್ನ ಸಮಾಜದ ಶ್ರೇಯಸ್ಸಿಗಾಗಿಯೋ ತಾನು ನಂಬಿದ ಧರ್ಮದ ಮಾರ್ಗವನ್ನು ಅನುಸರಿಸಿ ಆ ಮಾರ್ಗದಲ್ಲಿ ದೇಹತ್ಯಾಗ ಮಾಡುತ್ತಿದ್ದ ಒಂದು ಸಂಪ್ರದಾಯ ಕರ್ನಾಟಕದಲ್ಲಿ ಪ್ರಚಲಿತವಿತ್ತು. ಈ ರೀತಿ ಆತ್ಮಹತ್ಯೆಯನ್ನು ಮಾಡಿಕೊಂಡವರಿಗೆ ಸ್ಮಾರಕಗಳನ್ನು ನಿಲ್ಲಿಸಿ ಅವುಗಳ ಮೇಲೆ ಶಾಸನ ಹಾಕಿಸಿರುವುದುಂಟು. ಶಕ್ತಿಯ ಆರಾಧಕರು ನಮ್ಮ ದೇಹದ ಭಾಗಗಳನ್ನು ತಾವೇ ಸ್ವತಃ ಛೇದಿಸಿಕೊಂಡು ದೇವಿಗೆ ಅರ್ಪಿಸಿ ದೇವಿಯನ್ನು ತೃಪ್ತಿ ಪಡಿಸುತ್ತಿದ್ದರು. ಶಕ್ತಿಯ ಉಪಾಸಕರಲ್ಲದವರೂ ತಮ್ಮ ತಮ್ಮ ಮಾರ್ಗಗಳನ್ನು ಅನುಸರಿಸಿ ಬೆಂಕಿಯಲ್ಲಿ ಹಾಯ್ದೋ, ಇರಿದುಕೊಂಡೋ ಮಡಿದ ನಿದರ್ಶನಗಳು ಹಲವಾರು ಇವೆ. ತಾವಾಗಿಯೇ ಜೀವವನ್ನು ಕಳೆದುಕೊಳ್ಳುವುದು ಆತ್ಮಹತ್ಯೆ ಎನಿಸಿಕೊಳ್ಳುತ್ತದೆ.

ಕ್ರಿ.ಶ ೧೧೨೦ರ ಒಂದು ಶಾಸನದಿಂದ ದೇವರ ಬಂಟನಾದ ಬೀಚಿಗ ಎಂಬುವನು ಸೂರ್ಯಗ್ರಹಣದ ದಿನದಂದು ಬೆಂಕಿಯಲ್ಲಿ ಬಿದ್ದು ದೇಹತ್ಯಾಗ ಮಾಡಿದ ವಿಷಯ ತಿಳಿಯುತ್ತದೆ. ಆಗ ಅವನು ಗುರುಗಳಾದ ನಾಗರಾಜ ಪಂಡಿತರು ಅವನಿಗೆ ಒಂದು ಸ್ಮಾರಕ ಶಿಲೆಯನ್ನು ನಡೆಸುತ್ತಾರೆ. ಕ್ರಿ.ಶ ೯೧ರ ಒಂದು ಶಾಸನದಲ್ಲಿ ಒಬ್ಬ ವ್ಯಕ್ತಿ ತನ್ನ ಅರಸನಿಗೆ ಗಂಡು ಮಗು ಆದಾಗ ತನ್ನ ತಲೆಯನ್ನು ಅರ್ಪಿಸಿದ ವಿಷಯವನ್ನು ಹೇಳಲಾಗಿದೆ. ಈ ರೀತಿ ಹರಕೆಯನ್ನು ನಿರ್ದಿಷ್ಟ ಕಾರಣಗಳಿಗಾಗಿ ಹೊತ್ತು ಅದು ನೆರವೇರಿದಾಗ ತಮ್ಮನ್ನು ಬಲಿಕೊಟ್ಟುಕೊಂಡವರ ಐದಾರು ನಿದರ್ಶನಗಳೂ ದೊರೆಯುತ್ತವೆ.

ಜೀವನದಲ್ಲಿ ಜುಗುಪ್ಸೆ ಉಂಟಾದಾಗ, ಸಾಮಾನ್ಯವಾಗಿ ಸಂನ್ಯಾಸವನ್ನು ಸ್ವೀಕರಿಸುತ್ತಿದ್ದರು. ಜೈನರಲ್ಲಿಯಾದರೋ ನಶ್ವರವಾದ ಈ ದೇಹವನ್ನು ತ್ಯಜಿಸುವ ವ್ರತವನ್ನೇ ಕೈಗೊಳ್ಳುತ್ತಿದ್ದರು. ಈ ವಿಧಿಯನ್ನು 'ಸಮಾಧಿಮರಣ' ಎನ್ನುತ್ತಾರೆ. ಲೌಕಿಕವಾದ ಆಸಕ್ತಿಗಳನ್ನೆಲ್ಲಾ ತೊರೆದು, ಹಿಂದಿನ ಕರ್ಮಗಳಿಗೆ ಪಶ್ಚಾತ್ತಾಪಪಟ್ಟು ಪಂಚ ಪರಮೇಷ್ಠಿಗಳ ಧ್ಯಾನ ಮಾಡುತ್ತಾ ತನಗೆ ಶ್ರೇಯಸ್ಕರವಾದ ಗತಿ ದೊರೆಯಲೆಂದು ನಿದ್ರಾಹಾರಾದಿಗಳನ್ನು ಕ್ರಮೇಣ ಬಿಡುತ್ತಾ ದೇಹವನ್ನು ತ್ಯಜಿಸುತ್ತಿದ್ದರು. ಈ ರೀತಿಯಲ್ಲಿ ವ್ರತಸ್ವೀಕರಿಸಿ ಮಡಿದ

ಸಂನ್ಯಾಸಿಗಳ ಸ್ಮಾರಕವಾಗಿ ನೆಟ್ಟ ಶಿಲೆಗಳನ್ನು 'ನಿಷಿಧಿಗಲ್ಲುಗಳು' ಎಂಬುದಾಗಿ ಕರೆಯುತ್ತಾರೆ.

ಜೈನಧರ್ಮದಲ್ಲಿ ಆತ್ಮಹತ್ಯೆ ಸಲ್ಲೇಖನದ ಕಾರಣಕ್ಕಾಗಿ ನಡೆಯುತ್ತದೆ. ಮತ್ತು ಅದು ವ್ರತವೂ ಹೌದು. ದೇಹತ್ಯಾಗವೂ ಕೂಡಾ ಧಾರ್ಮಿಕ ಕ್ರಿಯೆ.

*ವಿವರಗಳಿಗೆ ನೋಡಿ: ಆರ್. ಶೇಷಶಾಸ್ತ್ರಿ ೨೦೦೫ ಶಾಸನ ಪರಿಚಯ ಪುಟ. ೨೭-೨೮.*

**೧೨೯. ಆತ್ಮಸುಖ**

*ಕೈಕೊಳ್ವೊಡೆ **ಆತ್ಮಸುಖ**ಮನೆ ಕೈಕೊಳ್ವುದು ದೇಹಿ.....*

*(ಶಾಂತಿಪುರಾಣ ೧೧-೮೭)*

ಕೈಕೊಳ್ಳುವುದಿದ್ದರೆ ಆತ್ಮ ಸುಖವನ್ನೇ ಕೈಗೊಳ್ಳಬೇಕು. ಆತ್ಮಸಾಕ್ಷಾತ್ಕಾರವನ್ನು ಕುರಿತು ಈ ರೀತಿ ಹೇಳಲಾಗಿದೆ.

ಅಜ್ಞಾನ : ಇಂದ್ರಿಯಾಸಕ್ತಿ, ಅಹಂಕಾರ, ಪ್ರಾಣದ ಬಗೆಗಿನ ವ್ಯಾಮೋಹ ಮನುಷ್ಯನಿಗೆ ಆತ್ಮ ಸಾಕ್ಷಾತ್ಕಾರ ದೊರೆಯದಂತೆ ಮಾಡುತ್ತವೆ.

ತನ್ನ ಅಜ್ಞಾನದಿಂದ ಕಲ್ಪಿತವಾದ ದೇಹ, ಇಂದ್ರಿಯ, ಪ್ರಾಣ, ಮನಸ್ಸು, ಅಹಂಕಾರ ಮೊದಲಾದ ಯಾವ ಉಪಾಧಿಗಳೂ ಇಲ್ಲದ, ಅಖಂಡ ರೂಪನೂ ಪೂರ್ಣನೂ ಆದ ಆತ್ಮನನ್ನು ಮಹಾಕಾಶದಂತೆ ಸಾಕ್ಷಾತ್ಕರಿಸಬೇಕು.

ಅಜ್ಞಾನ ಇತ್ಯಾದಿಗಳನ್ನು ತೊರೆದು, ಜ್ಞಾನ ಪಡೆದಾಗ ಮಾತ್ರ ಆತ್ಮಸಾಕ್ಷಾತ್ಕಾರ ಸಾಧ್ಯ. ಮಹಾತ್ಮನಾದವನು ಆತ್ಮ ಸಾಕ್ಷಾತ್ಕಾರಕ್ಕೆ ಪ್ರಯತ್ನಿಸಬೇಕು.

ಕೇವಲಜ್ಞಾನ ಸ್ವರೂಪನೂ ಸಾಕ್ಷಿಯೂ ಆದ ಆತ್ಮನಲ್ಲಿಯೇ ವಿಶುದ್ಧವಾದ ಅಂತಃಕರಣವನ್ನು ನಿಲ್ಲಿಸಿ, ಮೆಲ್ಲಮೆಲ್ಲಗೆ ಅದಕ್ಕೆ ನಿಶ್ಚಲತೆಯನ್ನು ಹೊಂದಿಸಿ, ಅನಂತರ ಪೂರ್ಣನಾದ ಆತ್ಮನನ್ನೇ ಸಾಕ್ಷಾತ್ಕರಿಸಬೇಕು.

ಭಾರತೀಯ ತತ್ವವಿಚಾರ ಮಾರ್ಗಗಳ ಒಂದು ಗಣನೀಯ ಭಾಗವು ತದ್ವಿರುದ್ಧ ವಾಗಿರುವ ಅಭಿಪ್ರಾಯಕ್ಕೆ ಬೆಂಬಲ ಕೊಟ್ಟಿದೆ. ಉಪನಿಷತ್ತುಗಳ ಆಧಾರವುಳ್ಳ ಒಂದೇ ಸಂಪ್ರದಾಯದ ಮೇಲೆ ಭಾರತೀಯ ದರ್ಶನ ಬೆಳೆದಿರುವುದೆಂಬ ಅರ್ಥವಿವರಣೆ ಅಲ್ಲಿಂದ ಬಂದಿದೆ. ಬೌದ್ಧ-ಜೈನಮತಗಳು ಉಪನಿಷತ್ತುಗಳಲ್ಲಿನ ಆತ್ಮವಾದದ ತಿರುವು ಗಳೆಂದು ಪರಿಗಣಿಸಲ್ಪಟ್ಟಿವೆಯೇ ಹೊರತು ಮೂಲವನ್ನೇ ಬಿಟ್ಟು ಹೊರಟ ಮಾರ್ಗ ಗಳೆಂದಲ್ಲ. ಹೇಗಾದರೂ, ಈ ಎರಡು ದಾರ್ಶನಿಕ ಪದ್ಧತಿಗಳಲ್ಲಿ ಅಂತರ್ಗತ ವಾಗಿರುವ ಪ್ರತ್ಯೇಕ ಪ್ರವೃತ್ತಿಗಳನ್ನೂ ಸ್ಪಷ್ಟ ಭೇದಗಳನ್ನೂ ಆ ಪಕ್ಷ ಗಮನಿಸದೆ ಹೋಗಿದೆ. ಹಾಗೆಯೇ ಬೌದ್ಧಮತದಲ್ಲೇ ಇರುವ ಒಳಭೇದಗಳನ್ನೂ ಮರೆತು, ಅದನ್ನು ಅನೇಕ ದಾರ್ಶನಿಕ ಪದ್ಧತಿಗಳ ಎರಕವೆನ್ನುವುದಕ್ಕೆ ಬದಲಾಗಿ ಒಂದು ಏಕೀಕೃತ ದಾರ್ಶನಿಕ ಪದ್ಧತಿಯೆಂದು ಅದು ಪರಿಗಣಿಸಿದೆ. ನೈರಾತ್ಮ್ಯವಾದವು ಸಾಮಾನ್ಯ; ವೈಭಾಷಿಕ, ಸೌತಾಂತ್ರಿಕ ಮಾಧ್ಯಮಿಕ, ಯೋಗಾಚಾರ-ಎಂಬ ವಿಭಿನ್ನ ಬೌದ್ಧ ದಾರ್ಶನಿಕ ಪದ್ಧತಿಗಳು ಅದರಲ್ಲಿ ವಿಶೇಷಗಳು; ಅವೆಲ್ಲವೂ ಆತ್ಮನಿರಾಕರಣೆಯನ್ನು ಅಭಿವ್ಯಕ್ತಿಗೊಳಿಸುವ ವಿವಿಧ ಪ್ರಯತ್ನಗಳು.

ಆತ್ಮ ಮತ್ತು ಅದರ ಎಲ್ಲ ಅಂತರಾರ್ಥದ ಬಗ್ಗೆ ಬೌದ್ಧರು ಮಾಡಿರುವ ನಿರಾಕರಣೆಯಿಂದ ಮತ್ತೊಂದು ಸಂಪ್ರದಾಯ ಗೋಚರವಾಗಿದೆ. ವಸ್ತುಗಳಲ್ಲಿ ಅಂತರ್ಗತವೂ ನಿತ್ಯವೂ ಆದ ಯಾವ ಸಾರವೂ ಇಲ್ಲ. ಎಲ್ಲವೂ ಪ್ರವಹಿಸುವ ಸ್ಥಿತಿಯಲ್ಲಿವೆ. ಅಸ್ತಿತ್ವವೆಂಬುದು ಬೌದ್ಧರಿಗೆ ಕ್ಷಣಿಕ, ಸ್ವಲಕ್ಷಣ ಮತ್ತು ಧರ್ಮಮಾತ್ರ ಅದು ವಿಚ್ಛಿನ್ನ, ವಿಭಿನ್ನ ಮತ್ತು ಅಸಂಕೀರ್ಣ. ದ್ರವ್ಯವು (ವಿಶ್ವವ್ಯಾಪ್ತಿಯೂ ಏಕತ್ವವುಳ್ಳದ್ದೂ) ತೋರಿಕೆಯದೆಂದು ನಿರಾಕೃತವಾಗಿದೆ; ಅದು ತಪ್ಪು ತಿಳಿವಳಿಕೆಯ (ಅವಿದ್ಯಾ) ಪ್ರಭಾವದಿಂದುಂಟಾದ ಒಂದು ಜ್ಞಾನರಚನೆ. ಇದನ್ನೇ ವಾಸ್ತವಿಕತೆಗನ್ವಯಿಸುವ ಪರ್ಯಾಯ ದೃಷ್ಟಿ ಎನ್ನಬಹುದು. ಬೌದ್ಧರು ಪ್ರಮಾಣ ವಿವೇಚನೆಯನ್ನೂ ಧಾರ್ಮಿಕವಿಜ್ಞಾನವನ್ನೂ ತಮ್ಮ ನೈರಾತ್ಮಬೋಧಕ ತತ್ತ್ವ ಮೀಮಾಂಸೆಗೆ ಹೊಂದಿಕೊಂಡಿದ್ದಾರೆ. ಪ್ರತ್ಯಕ್ಷ, ಅನುಮಾನವನ್ನು ಕುರಿತು ಅವರ ವಿಚಿತ್ರ ಅಭಿಪ್ರಾಯವೂ, ಅದಕ್ಕೆ ಪೂರಕವಾಗಿರುವ ಬುದ್ಧಿ-ರಚನೆಯ ವಾದವೂ (ವಿಕಲ್ಪ) ಆತ್ಮನಿರಾಕರಣೆಯ ಅವಶ್ಯ ಪರಿಣಾಮಗಳು. ಇಂತಹ ವಿಚಾರಸರಣಿಯನ್ನು ಕರ್ಮ ಹಾಗೂ ಪುನರ್ಜನ್ಮ ಸಿದ್ಧಾಂತಗಳೊಡನೆ ಒಂದುಗೂಡಿಸಲು ಸಾಹಸಯುತ ಪ್ರಯತ್ನಗಳು ನಡೆದಿವೆ. ಎಲ್ಲ ಕ್ಲೇಶಕ್ಕೂ ಕಾರಣವಾಗಿರುವ ಅವಿದ್ಯಾ ಎಂಬುದು ಆತ್ಮದಲ್ಲಿ ನಂಬಿಕೆ (ಸತ್ಕಾಯದೃಷ್ಟಿ ಪ್ರಭವಾಃ ಸರ್ವೇ ಕ್ಲೇಶಾಃ); ಇಂತಹ ನಂಬಿಕೆಯನ್ನೂ ಅದರಿಂದ ಉದ್ಭವಿಸುವ ಕ್ಲೇಶವನ್ನೂ ತೊಡೆದುಹಾಕುವುದೇ ಪ್ರಜ್ಞಾ. ಆತ್ಮಸುಖವನ್ನು ದೈಹಿಕ ಸುಖಕ್ಕಿಂತ ಭಿನ್ನವೆಂಬ ಅರ್ಥದಲ್ಲಿ ಬಳಸಿರುವುದು ಗಮನಾರ್ಹ. ಇದು ಜೈನ ಆಧ್ಯಾತ್ಮಿಕ ಪರಿಭಾಷೆ ಆಗಿರುವುದರ ಜೊತೆಗೆ ಸಾಂಸ್ಕೃತಿಕ ನಂಬಿಕೆಗಳ ಪರಿಭಾಷೆಯೂ ಆಗಿರುವುದು ಗಮನಾರ್ಹ.

*ವಿವರಗಳಿಗೆ : ಹರಿದಾಸ ಭಟ್ಟಾಚಾರ್ಯ ೧೯೭೩ ಯುಗಯಾತ್ರಿ ಭಾರತೀಯ ಸಂಸ್ಕೃತಿ ಪುಟ. ೧೬-೧೭.*

*ಸ್ವಾಮಿ ಆದಿದೇವಾನಂದ ೧೯೮೧ ವಿವೇಕ ಚೂಡಾಮಣಿ ಪುಟ. ೩೮೩.*

**೧೩೦. ಆದೇಶ**

*'ಹೋಮಾಗ್ನಿಯೊಳಪುಟ್ಟಿದ ದಿವ್ಯ ಚಾಪಮುಯ್ದು ದಿವ್ಯ ಶರಮೊಳವಾ ಬಿಲ್ಲನೇಜೆಸಿ ಆ ಸರಳ್ಗಂದಾತನ ಮನೆಯ ಮುಂದಿನ ನಭದೊಳ್ ನಲಿನಲಿದಾಡುವ ಜಂತ್ರದ ಮೀನೆನೆಚ್ಚದುವಾಕೆಗೆ ಗಂಡನಕ್ಕುಮೆಂ**ದಾದೇಶ**ಮಂತಪ್ಪ ಸಾಹಸಪುರುಷಂ ವಿಕ್ರಮಾರ್ಜುನಂಗಲ್ಲದೆ" (ಪಂಪಭಾರತ ૩-૩૭ ವ)*

ಸೂಚನೆ ನೀಡು, ನಿರ್ದೇಶಿಸು. ದ್ರೌಪದಿಯ ವಿವಾಹಕ್ಕೆ ಸಂಬಂಧಿಸಿದಂತೆ ದ್ರುಪದನು ಆದೇಶಿಸಿರುವುದನ್ನು ಪಂಪನು ವರ್ಣಿಸುತ್ತಾನೆ. ದ್ರುಪನು ಯಜ್ಞಮಾಡುತ್ತಾನೆ. ಆದೇಶವೆಂಬುದಕ್ಕೆ ವಿಧಿ; ನಿಯಮವೆಂಬ ಅರ್ಥಗಳಿವೆ. ಆದೇಶಕ್ಕೆ ವಿಶಿಷ್ಟ ಅರ್ಥಗಳೂ ಇವೆ. ರಾಜನು ಪ್ರಜೆಗಳಿಗೆ ಆದೇಶ ನೀಡುತ್ತಾನೆ. ಪ್ರಜೆಗಳು ರಾಜನಿಗೆ ಆದೇಶ ನೀಡುವಂತಿಲ್ಲ. ಇದೇ ಕುಟುಂಬಕ್ಕೂ ಅನ್ವಯವಾಗಿದೆ. ಆಧುನಿಕ ಅರ್ಥದಲ್ಲಿ ಇದನ್ನೇ Order ಎಂದು ಕರೆಯುತ್ತೇವೆ. ಇದರಲ್ಲಿರುವ ಭಾಷೆಯೇ ಭಿನ್ನ 'ಮಾಡತಕ್ಕದ್ದು' ಎಂದು ಬರುತ್ತದೆಯೇ ಹೊರತು ಬೇರೆ ರೀತಿಯ ಪರಿಭಾಷೆಗಳು ಆದೇಶಗಳಿಗೆ ಇಲ್ಲ.

*ವಿವರಗಳಿಗೆ ನೋಡಿ: Michel Foucault 1970 The order of Things.*

೧೩೧. ಆಪಣ

ತನ್ನ ಮೈದುನನಿರ್ದಾಪಣಕ್ಕೆ ಪೋಪನ್ನಗವೆಡೆಯೊಳ್ ಕಳ್ಳನೊರ್ವಂ ಕಂಡು ನಿನ್ನ ತೊಟ್ಟಾಭರಣಮೆಲ್ಲಮಂ ಕೊಟ್ಟು ಪೋಗಲ್ಲದಾಂ ಪೋಗಲೀಯೆನೆಂದೊಡೀಗಳೆ ಪೋಗಿ ಬಂದು ನಿನಗೆನ್ನ ತುಡುಗೆಯೆಲ್ಲಮಂ ಕುಡುವೆನನ್ನೆಗಮಿಲ್ಲಿ ಎನ್ನ ಬರ್ಪನ್ನೆಗಮೆತ್ತಂ ಪೋಗದಿರೆಂದು ನಂಬೆ ನುಡಿದು ಸಂತೈಸಿ ಕಿಱಿದಂತರಮಂ ಪೋದೊಡೆ...............

(ಡಿ.ಎಲ್.ಎನ್.೨೦೦೯ ಪು.೬೦).

ಆಪಣವೆಂದರೆ ಅಂಗಡಿ. ಅಂಗಡಿಯೆನ್ನುವುದು ವ್ಯಾಪಾರದ ಕೇಂದ್ರ ಮತ್ತು ಅದು ಉದ್ದಿಮೆಯನ್ನು ಸಂಕೇತಿಸುತ್ತದೆ. ಅಂಗಡಿಯೆನ್ನುವುದು ಬರೀ ವಿನಿಮಯದ ಕೇಂದ್ರವಲ್ಲ ಎಂಬುದನ್ನು ಪ್ರಧಾನವಾಗಿ ಪರಿಗಣಿಸಬೇಕು. ಅದು ವಿಕ್ರಯದ ಕೇಂದ್ರ. ಆದುದರಿಂದ ವ್ಯಾಪಾರದಲ್ಲಿ ಹಣವು ಪ್ರಧಾನವಾಗಿದೆ. ದವಸ ಧಾನ್ಯಗಳ ಅಳತೆ ಮತ್ತು ಅದಕ್ಕೆ ನೀಡುವ ಹಣವು ಮುಖ್ಯವಾಗುತ್ತದೆ. ಯಾವಾಗ ವ್ಯಾಪಾರವೆನ್ನುವುದು ಪ್ರಧಾನವಾಗುತ್ತದೆಯೋ ಆಗ ಅಳತೆಯ ಮಾನದಂಡಗಳೂ ಮುಖ್ಯವಾಗುತ್ತವೆ. ಅಂದರೆ ಜೈನಕಾವ್ಯಗಳಲ್ಲಿ ವ್ಯಾಪಾರಕ್ಕೆ ಕೊಟ್ಟ ಪ್ರಾಶಸ್ತ್ಯವನ್ನು ಈ ದೃಷ್ಟಿಯಿಂದ ವಿಶ್ಲೇಷಣಾರ್ಹ. ವಿನಿಮಯ ಪದ್ಧತಿಯ ಅನಂತರದ ರೂಪವೇ ವ್ಯಾಪಾರ. ವ್ಯಾಪಾರಗಳಿಗೆ ಜೈನರು ಕೊಟ್ಟ ಪ್ರಾಶಸ್ತ್ಯವನ್ನು ಹಳೆಗನ್ನಡ ಕಾವ್ಯಗಳಲ್ಲಿ ಹೇರಳವಾಗಿ ಕಾಣಬಹುದು.

೧೩೨. ಆಭಾಸ

ಆಭಾಸವೆಂದರೆ ತೋರುವಿಕೆ, ಹೊಳೆಯುವಿಕೆ, ಭಾಸವಾಗುವಿಕೆ ಉದಾಹರಣೆಗೆ: ವಿರೋಧಾಭಾಸವೆಂದರೆ ವಿರೋಧದಂತೆ ತೋರುವುದು.

ಪ್ರಣಾಳಿಕೆ: ಅಸ್ತಿತ್ವ: ಸ್ವಯಂ ಇಚ್ಛೆಯ ಸ್ವರೂಪ. ಕಣ್ಕಟ್ಟುವಿಕೆಗೆ ಒಳಗಾಗುವುದು ಎಂದು ಅರ್ಥ. ಜೈನಧರ್ಮದಲ್ಲಿ ಈ ಪರಿಕಲ್ಪನೆಯು ಹೆಚ್ಚು ಬಳಕೆಯಾಗಿದೆ. ಜೈನಧರ್ಮದಲ್ಲಿ ಆಭಾಸವೆಂದರೆ ಇಚ್ಛಾಶಕ್ತಿಯ ದ್ಯೋತಕ. ಆದರೆ ಅದ್ವೈತ ಸಿದ್ಧಾಂತವು ಅಭಾಸವಾದವನ್ನು ಮಾಯೆಯೆಂದು ಕರೆಯುತ್ತದೆ. [ಆದಿಪುರಾಣ: ಅಜಿತ ತೀರ್ಥಂಕರ ಪುರಾಣ ತಿಲಕಂ]

ಆಭಾಸವಾದ ಮತ್ತು ವಿಶ್ವಚೈತನ್ಯಕ್ಕಿರುವ ಸಂಬಂಧವನ್ನು ಅಭಿನವಗುಪ್ತನು ಹೀಗೆಂದು ವಿವರಿಸಿದ್ದಾನೆ. ಆಭಾಸ (ಅಭಿವ್ಯಕ್ತ ಜಗತ್ತು) ವಿಶ್ವಚೈತನ್ಯಕ್ಕೆ ಹೇಗೆ ಸಂಬಂಧಿಸಿದೆ? ಕಲ್ಪನೆಯನ್ನು ಕುರಿತ ನಮ್ಮ ಜ್ಞಾನವನ್ನು ನಾವು ವಿಶ್ಲೇಷಿಸಿದರೆ ಈ ಸಂಬಂಧವನ್ನು ಸರಿಯಾಗಿ ಗ್ರಹಿಸಬಹುದು. ಕಲ್ಪನೆಯಲ್ಲಿ ನಾವು ಎರಡು ಅಂಶಗಳನ್ನು (ಜ್ಞಾತಾ ಹಾಗೂ ಜ್ಞೇಯ) ಕಾಣುತ್ತೇವೆ. ಕಲ್ಪನೆ ಮಾಡುತ್ತಿರುವ ಚೈತನ್ಯವು(ಜ್ಞಾತೃ ರೂಪ ಅಂಶ) ವಿಕಲ್ಪಗಳ(ಜ್ಞೇಯ ರೂಪ ಅಂಶ) ಅಂಶದ ಉದಯಕ್ಕೆ ಕಾರಣವಾಗಿರುತ್ತದೆ. ಕಲ್ಪನೆ ಮಾಡುವ ಚೈತನ್ಯವು ತಾನೇ ಕಲ್ಪನೆಗಳ ಭಿತ್ತಿಯೂ ಗ್ರಾಹಕವೂ ಆಗಿರುತ್ತದೆ. ಕಲ್ಪನೆಗಳಿಗೂ ಚೈತನ್ಯವನ್ನು ಬಿಟ್ಟು ಬೇರೆ ಯಾವ ಆಶ್ರಯವೂ ಇಲ್ಲ. ವಿಕಲ್ಪಗಳಿಗೆ ಕಾರಣ ಆಂತರಿಕ ಅಂಶಗಳು. ಈ ಅಂಶಗಳು ಚೈತನ್ಯದ ಮೇಲೆ ಪರಿಣಾಮ ಬೀರುತ್ತವೆ.

ಈ ಪರಿಣಾಮಕಾರಿ ಅಂಶಗಳು ಒಂದು ನಿರ್ದಿಷ್ಟ ಕ್ರಮದಲ್ಲಿ ಬರುವುದು ಅವಶ್ಯಕ. ಅವು ಅನಿಯತವಾಗಿ ಅಥವಾ ಎಲ್ಲವೂ ಒಟ್ಟಿಗೆ ಬರಬಾರದು. ಆದ್ದರಿಂದ ಅವು ಒಂದು ಸ್ವತಂತ್ರವಾದ ಶಕ್ತಿಯ ನಿಯಂತ್ರಣದಲ್ಲಿರಬೇಕು. ಈ ನಿಯಾಮಕ ಶಕ್ತಿಯು ಚೈತನ್ಯಕ್ಕಿಂತ ಬೇರೆ ಯಾವುದೂ ಆಗಿಲ್ಲ ಎನ್ನುವುದು ಸುಲಭವಾಗಿ ಗೋಚರವಾಗುತ್ತದೆ. ಅದನ್ನು 'ಚಿತ್' ಎಂದು ಕರೆಯಬಹುದು. ಈ ಎಲ್ಲಾ ಅಂಶಗಳೂ ನಮ್ಮ ಚೈತನ್ಯದಿಂದ ನಾವು ಇಚ್ಛಿಸಿದಾಗ, ಯಾವುದೇ ಬಾಹ್ಯ ನೆರವಿನ ಅಪೇಕ್ಷೆಯಿಲ್ಲದೆ ಒದಗುತ್ತವೆ. ಅವು ನಮ್ಮ ಚೈತನ್ಯದ ಭಿತ್ತಿಯ ಮೇಲೆ ಮೂಡುತ್ತವೆ ಮತ್ತು ಅದರಲ್ಲಿಯೇ ಪುನಃ ಲೀನವಾಗುತ್ತವೆ. ಸಮುದ್ರದಲ್ಲಿ ಅಲೆಗಳು ಎದ್ದು ಲಯವಾಗುವ ರೀತಿಯಲ್ಲಿ ಇದು ಸಂಭವಿಸುತ್ತವೆ. ಏಳುವುದಕ್ಕಿಂತ ಮೊದಲು ಅಲೆಗಳು ಸಮುದ್ರದಲ್ಲಿ ಇರುವಂತೆಯೇ ವಿಕಲ್ಪಗಳು ಇರುತ್ತವೆ. ಕಲ್ಪನೆಯ ಸಮಯದಲ್ಲಿ ಚೈತನ್ಯದ ನೈರ್ಮಲ್ಯವನ್ನು ತಟ್ಟುವ ವಿಕಲ್ಪಗಳು ಆತ್ಮದ ಪ್ರಕಾಶಾಂತದ ಭಿತ್ತಿಯ ಮೇಲೆ ಕಾಣಿಸಿಕೊಳ್ಳುವುದಕ್ಕಿಂತ ಮುಂಚೆ ಆತ್ಮದಲ್ಲಿ ನೆಲಸಿರುತ್ತವೆ. ವಿಶ್ವಾತ್ಮದೊಡನೆ ಆಭಾಸದ ಸಂಬಂಧದ ವಿಷಯವಾಗಿ ಅಭಿನವ ಹೇಳುವುದು ಇದನ್ನೇ. ಅವನ ಮಾತುಗಳಲ್ಲಿ: "ತತ್ವಾಂತರಾಣೀ ಷಟ್ ತ್ರಿಂಶತ್ ಅನಾಶ್ರಿತಶಿವಪರ್ಯಂತಾನಿ ಪರಭೈರವಾನು ರೂಪಾವೇಶಸಾದಿತ ತಥಾ ಭಾವಸಿದ್ಧಾನಿ" (ಪ.ತ್ರಿಂ.ವಿ. ೧೯) ಹೀಗೆ ಶೈವಸಿದ್ಧಾಂತದ ಪ್ರಕಾರ ಶಿವನಿಂದ ಹಿಡಿದು ಪೃಥ್ವಿಯವರೆಗೆ ಇರುವುದೆಲ್ಲವೂ ಪರತತ್ವದಲ್ಲಿ ನಮ್ಮ ಆತ್ಮವು ನಿರ್ಮಲ ಸ್ಥಿತಿಯಲ್ಲಿರುವಾಗ ನಮ್ಮ ಭಾವನೆಗಳು ನಮ್ಮೊಳಗೆ ಇರುವ ರೀತಿಯಲ್ಲಿಯೇ, ನೆಲಸಿರುತ್ತದೆ. ಆದ್ದರಿಂದ ಬಾಹ್ಯ ಕಾರಣಗಳ ಅಪೇಕ್ಷೆಯಿಲ್ಲದೆ ಎಲ್ಲವೂ ಇಚ್ಛಾನುಸಾರ, ಬಾಹ್ಯವಾಗಿ ಅಭಿವ್ಯಕ್ತವಾಗುತ್ತದೆ. ಆದ್ದರಿಂದ ಅವನ್ನು ಆಭಾಸಗಳು ಎಂದು ಕರೆಯಲಾಗಿದೆ. ವಿಶ್ವಾತ್ಮದಿಂದ ಅಭಿವ್ಯಕ್ತ ವಾಗಿರುವುದರಿಂದ (ಆಭಾಸ್ಯತೇ) ಮತ್ತು ಗೋಚರವಾಗಿರುವುದರಿಂದ (ಆಭಾಸತೇ) ಕೂಡ ಅದು ಆಭಾಸ.

ಆಭಾಸವು ಬಾಹ್ಯ ಮತ್ತು ಆಂತರಿಕವೆಂದು ಎರಡು ರೀತಿಯವು ಈ ಕುರಿತು ಅಭಿನವಗುಪ್ತನು ಈ ಕೆಳಗಿನಂತೆ ವಿವರಿಸಿದ್ದಾನೆ:

ಆಭಾಸ ಎರಡು ಬಗೆಯಾಗಿದೆ, ಬಾಹ್ಯ ಮತ್ತು ಆಂತರಿಕ. ಈ ಎರಡರ ನಡುವಣ ವ್ಯತ್ಯಾಸವನ್ನು ಈ ಮುಂದಿನ ರೀತಿಯಲ್ಲಿ ಸ್ಪಷ್ಟಪಡಿಸಬಹುದು. ವಿಶ್ವಚೈತನ್ಯವು ಒಂದು ಸಾಗರದಂತಿದೆಯೆಂದೂ ವಿವಿಧ ಆಭಾಸಗಳನ್ನು ಅದರಲ್ಲಿರುವ ಪ್ರವಾಹಗಳೆಂದೂ ಭಾವಿಸೋಣ. ಪ್ರತಿ ಆಭಾಸವೂ ವಿಶ್ವಚೈತನ್ಯದ ಸಾಗರದಲ್ಲಿ ಹರಿಯುತ್ತಿರುವ ಪ್ರತ್ಯೇಕವಾದ ಪ್ರವಾಹ. ಸೃಷ್ಟಿಯ ಅವಧಿಯ ಉದ್ದಕ್ಕೂ ಈ ಪ್ರವಾಹಗಳು ಸಾಗರದ ತಳದಲ್ಲಿ ಹರಿಯುತ್ತಿರುತ್ತವೆ. ಆಭಾಸಗಳ ಪ್ರತ್ಯೇಕ ಆಂತರಿಕ ಅಭಿವ್ಯಕ್ತಿಗಳನ್ನು ಉಂಟುಮಾಡುವ ಮತ್ತು ಅವುಗಳ ಆಂತರಿಕ ಭೇದಗಳನ್ನು ಉಳಿಸಿಟ್ಟು ಮುಂದುವರೆಸುವ ವಿಶ್ವಚೈತನ್ಯದ ಸ್ವಾತಂತ್ರ್ಯ ಶಕ್ತಿಯ ಅಂಶವನ್ನು ಕರ್ತೃತ್ವಶಕ್ತಿ, ಎಂದರೆ ಸರ್ವಶಕ್ತಿತ್ವ ಎನ್ನಲಾಗಿದೆ. ಆದರೆ ಕೆಲವು ಸಲ ಈ ಪ್ರವಾಹಗಳನ್ನು ಸಾಗರದ ಮೇಲ್ಮೈ ಮೇಲೆ ಅಲೆಗಳಂತೆ ಎಬ್ಬಿಸಲಾಗುತ್ತದೆ

ಮತ್ತು ಪ್ರತಿಬಿಂಬವನ್ನು ಗ್ರಹಿಸಬಲ್ಲ ಅಲೆಯನ್ನು ಪ್ರತಿಬಿಂಬಗಳನ್ನು ಮೂಡಿಸುವ ವಸ್ತುಗಳ ಪ್ರಭಾವಕ್ಕೆ ಒಳಗಾಗುವ ಸ್ಥಿತಿಗೆ ತರಲಾಗುತ್ತದೆ. ಇದು ಸರ್ವಜ್ಞತ್ವದ ಅಥವಾ ಜ್ಞಾತೃತ್ವಶಕ್ತಿಯ ಕಾರ್ಯ. ಪ್ರತಿಬಿಂಬವನ್ನು ಗ್ರಹಿಸಬಲ್ಲ ಅಲೆಯ ಪರಿಣಾಮವೇ ಜ್ಞಾನ.

*ವಿವರಗಳಿಗೆ ನೋಡಿ: ಮಾಯೆ: ಆಭಾಸವಾದ*

*ಜಿ.ಟಿ. ದೇಶಪಾಂಡೆ ೨೦೦೦ ಅಭಿನವಗುಪ್ತ ಪುಟ. ೪೦-೪೬, ೩೪೪*

**೧೩೩. ಆರವೆ**

ಅರಮೆ, ಆರವೆ, ಆರಾಮೆ, ಆರುವೆ(ನಾ) ತೋಟ; ಉದ್ಯಾನವನ; ತೋಪು;

*ಪೊಱವೊೞಲೊ**ಳಾರವೆಯೊಳ್** ಕಾಷ್ಠಕೂಟಂ ಸೇದೆಗೆಟ್ಟು ಪುೞಿಯು ಪೊಱಿಯನಿೞಿಸಿ ಪಟ್ಟಿರ್ದೊಡೆ*

*(ವಡ್ಡಾರಾಧನೆ ೭೬-೨೪); ಕಲಾಂಘ್ರಿಪದಾರವೆ (ಪಂಪ ಭಾರತ ೧-೨೮)*

ವಡ್ಡಾರಾಧನೆಯಲ್ಲಿ ಆರವೆಯ ಕುರಿತು ಬರುತ್ತದೆ. ಆರವೆಯೆಂದರೆ ಉದ್ಯಾನವನ, ತೋಟ. ತೋಟ ಮತ್ತು ಉದ್ಯಾನವನ ಎರಡೂ ಮುಖ್ಯವಾಗಿ ಒಂದು ವಿಷಯವನ್ನು ಪ್ರಸ್ತಾವಿಸುತ್ತದೆ. ಉದ್ಯಾನವನವು ಇರುವುದು ಶ್ರೀಮಂತರಿಗೆ. ಅದು ಮನೋಹರವಾದ ಜಾಗ. ಉದ್ಯಾನವನವು ಕಾಲಹರಣ ಮತ್ತು ಮನೋರಂಜನೆಯ ಕಾರಣಕ್ಕೆ ಹುಟ್ಟಿಕೊಂಡಿರುತ್ತದೆ. ಮತ್ತು ಉದ್ಯಾನವನವು ನಮಗೆಲ್ಲರಿಗೂ ತಿಳಿದಿರುವಂತೆ ಹೂವಿನ ಗಿಡಗಳಿಂದ ತುಂಬಿರುತ್ತದೆ. ಇದರಲ್ಲಿ ಆರ್ಥಿಕತೆಯ ದೃಷ್ಟಿಯು ಇರುವುದಿಲ್ಲ. ಆದರೆ ತೋಟವು ಹಾಗಲ್ಲ-ತೋಟವು ಆರ್ಥಿಕ ದೃಷ್ಟಿಕೋನವನ್ನು ಹೊಂದಿರುತ್ತದೆ. ಇದರಲ್ಲಿ ಆರ್ಥಿಕ ಬೆಳೆಗಳಿಗೆ ಮಹತ್ವವಿರುತ್ತದೆ. ಇದನ್ನು ವ್ಯಾಪಾರದ ಉದ್ದಿಮೆಯ ಒಂದು ಭಾಗವೆಂದು ನಾವು ತಿಳಿಯಬಹುದು.

**೧೩೪. ಆರಾಧನಾ**

*ವಾಚನಾಗ್ರಹಣಸಮೇತ**ಮಾರಾಧನೆ**ಯಿನರ್ಚಿಸಿ ವೀರಸಂಸ್ಥಾನಾರೂಢನಾದಾಗಳ್......*

*(ಆದಿಪುರಾಣ. ೨-೫೦.ವ)*

ಆರಾಧನೆಯೆಂದರೆ ಪೂಜೆ, ಗೌರವ. ಇದರಲ್ಲಿ ನಾಲ್ಕು ವಿಧ; ಜ್ಞಾನಾರಾಧನೆ, ದರ್ಶನಾರಾಧನೆ, ಚಾರಿತ್ರಾರಾಧನೆ, ತಪಾರಾಧನೆ. ಎಲ್ಲಾ ಮತಧರ್ಮಗಳಲ್ಲಿಯೂ ಇರುವ ಪ್ರಮುಖ ಪರಿಕಲ್ಪನೆಯಾಗಿದೆ. ಪೂಜಿಸುವುದು, ಗೌರವಿಸುವುದು ಈ ಪದದ ಹಿಂದಿರುವ ಪ್ರಮುಖ ಆಶಯ.

ವಡ್ಡಾರಾಧನೆಯ ಕಥೆಗಳಲ್ಲಿ ಕಥೆಯ ಕೇಂದ್ರವನ್ನು ಹೇಳುವ ಗಾಹೆಗಳು ಮೂಲ ಆರಾಧನಾ ಗ್ರಂಥಕ್ಕೆ ಸೇರಿದೆ. ಆರಾಧನೆ ಮತ್ತು ಪೂಜೆಯ ನಡುವೆ ವ್ಯತ್ಯಾಸವಿದೆ. ಅದು ಬಿಂಬಗಳಿಗೆ ಸಂಬಂಧಿಸಿದಂತೆ ಭಿನ್ನವಾಗುತ್ತವೆ. ಪೂಜೆಯಲ್ಲಿ ಬಿಂಬವೂ ತುಂಬಾ

ಪ್ರಧಾನ. ಆರಾಧನೆಯು ವೈಯಕ್ತಿಕ ತಲ್ಲೀನ ಸ್ಥಿತಿಯನ್ನು ಬಯಸುತ್ತವೆ.

ಪೂಜೆಯು ಈ ಕೆಳಗಿನಂತೆ ನಿಷ್ಪತ್ತಿಗೊಂಡಿದೆ:

ಪೂಜಾ ಎಂಬ ಅರ್ಚನಾವಿಧಾನ ಹಾಗು ಈ ಶಬ್ದವೂ ಕೂಡ Non Aryan ಪರಂಪರೆಗೆ ಸೇರಿದ್ದು, ವೈದಿಕ ಬ್ರಾಹ್ಮಣ ಸಂಪ್ರದಾಯವು ತುಂಬ ದುರ್ಬಲವಾಗುತ್ತಿರುವ ಸಂದರ್ಭದಲ್ಲಿ ಈ ಪೂಜಾ ಎಂಬ ಶಬ್ದವನ್ನೂ, ಪೂಜಾ ವಿಧಾನವನ್ನೂ ತನ್ನ ಅಸ್ತಿತ್ವದ ರಕ್ಷಣೆಗಾಗಿ ವೈದಿಕ ಪರಂಪರೆಯು ತನ್ನ ಸಂಸ್ಕೃತಿಯಲ್ಲಿ ಸೇರಿಸಿಕೊಂಡಿತು. ವಿಗ್ರಹಾರಾಧನೆ ಹಾಗೂ ಪೂಜಾ (ಪೂಜೆ) ಎಂದರೆ ನಾಗಪೂಜೆ ಇತ್ಯಾದಿಗಳು ವೇದ ಸಂಸ್ಕೃತಿಯಲ್ಲಿ ನಂತರ ಬಂದು ಸೇರಿಕೊಂಡಿವೆ.

ಕವಿತೆಯೊಳಾಸೆಗೆಯ್ವ ಫಲಮಾವುದೊ **ಪೂಜೆ** ನೆಗಳ್ತೆ ಲಾಭಮೆಂ
ಬಿವೆ ವಲಮಿಂದ್ರಪೂಜೆ ಭುವನಸ್ತುತಮಪ್ಪ ನೆಗಳ್ತೆ ಮುಕ್ತಿ ಸಂ ।
ಭವಿಸುವ ಲಾಭಮೆಂಬಿವೆ ಜಿನೇಂದ್ರಗುಣಸ್ತುತಿಯಿಂದೆ ತಾಮೆ ಸಾ
ರವೆ ಪೆಱರೀವುದೇಂ ಪೆಱರ ಮಾಡುವುದೇಂ ಪೆಱರಿಂದಮಪ್ಪುದೇಂ ॥

(ಆದಿಪುರಾಣ ೧-೩೬)

ಜಿನೇಂದ್ರಗುಣ ಸ್ತುತಿಯಿಂದ ಮುಕ್ತಿಯು ದೊರೆಯುತ್ತದೆ. ಅದಕ್ಕಿಂತ ಮಿಗಿಲಾದುದು ಏನೂ ಇಲ್ಲ. ಜಿನೇಂದ್ರನ ಗುಣಸ್ತುತಿಯಿಂದ ಮುಕ್ತಿ ದೊರೆಯುವುದಾದರೂ ಬೇರೆಯ ವರು ಬೇರೆ ಏನೂ ಕೊಡಬೇಕಾಗಿಲ್ಲ. ಅವರು ಮಾಡುವುದಾದರೂ ಏನು? ಬೇರೆಯವ ರಿಂದ ಆಗಬಹುದಾದರೂ ಏನು ಎಂದು ಪಂಪ ಪ್ರಶ್ನಿಸುತ್ತಾನೆ. ಇವೆಲ್ಲದಕ್ಕೆ ಪೂರಕವಾಗಿ "ಕವಿತೆಯೊಳಾಸೆಗೆಯ್ವ ಫಲಮಾವುದೊ ಪೂಜೆ ನೆಗಳ್ತೆ ಲಾಭಂ ಎಂಬಿವೆ ವಲಂ". ಆದರೆ ಭುವನವೇ ಸ್ತುತಿಸುವಂತಹ ಜಿನೇಂದ್ರಗುಣ ಸ್ತುತಿಯಿಂದ ಮಾತ್ರ ಮುಕ್ತಿ ಸಾಧ್ಯವೆಂದು ಅವನ ನಂಬಿಕೆ. ಪೂಜಾ ಎಂದರೆ ಆರಾಧನೆ. ಆರಾಧನೆಗೆ ಮಾಧ್ಯಮಗಳು ಬೇಕು. ಮಂತ್ರ; ಕ್ರಿಯೆ; ಬಿಂಬಗಳು ಪೂಜೆಯಲ್ಲಿ ಮುಖ್ಯ. ಮಂತ್ರವಿಧಿ; ಕ್ರಿಯಾವಿಧಿಯೆಂದು ಇವುಗಳನ್ನು ಕರೆಯುತ್ತಾರೆ. ಪೂಜೆಯೆಂಬುದು ಆಚರಣೆಯ ವಿಧಿ. ಆದರೆ ಪೂಜೆಯ ವಿಧಾನಗಳಲ್ಲಿ ಅನೇಕ ರೀತಿಗಳಿವೆ. ಇವುಗಳನ್ನು ಸ್ಥೂಲವಾಗಿ ಹೀಗೆ ವಿವರಿಸಬಹುದು:

ಅ) ಕುಲದೇವತೆಯ ಪೂಜೆ ಆ) ಪ್ರತಿಮಾ ಪೂಜೆ. ಅಂದರೆ ಯಾವುದಾದರೂ ಪ್ರತಿಮೆಯನ್ನು ಮೂಲವೆಂದು ತಿಳಿದು ಆರಾಧಿಸುವ ವಿಧಾನ. ಇದನ್ನು ವಿಗ್ರಹಾರಾಧನೆ ಯೆಂದು ಕರೆಯುತ್ತೇವೆ. ಲಿಂಗಾರಾಧನೆ ಶಿವಲಿಂಗನನ್ನು ನೆನಪಿಸುತ್ತದೆ. ಸಾಲಿಗ್ರಾಮ ವೈಷ್ಣವ ಪಂಥದ ಸಂಕೇತ ಮನಸ್ಸಿನ ಏಕಾಗ್ರಸ್ಥಿತಿಗೆ ಇವು ಆವಶ್ಯಕ. ಮತ್ತು ಇವೆಲ್ಲಾ ಮಾಧ್ಯಮಗಳು.

'ಪೂಜ್' ಎಂಬ ಧಾತುವಿನಿಂದ ಪೂಜೆಯು ಹುಟ್ಟಿದೆ. ಗೌರವಿಸು. ಆಚರಣೆ; ಆರಾಧಿಸು ಎನ್ನುವುದು ಇದರ ಅರ್ಥ. ಪೂಜೆಯು ಪ್ರತಿಮೆಗೆ ಅನ್ವಯವಾಗುತ್ತದೆ. ದರ್ಶನ ಮತ್ತು ಪ್ರಸಾದ ಇದರಲ್ಲಿ ಮುಖ್ಯ. ಪೂಜೆಯಲ್ಲಿ ಮೂರು ಅಂಶಗಳು ಮುಖ್ಯ. ಯಂತ್ರ(ಚಕ್ರ) ಮಂತ್ರ ಮತ್ತು ಮೂರ್ತಿ.

ಅರಹಂತರ ಪ್ರತಿಬಿಂಬವಿರುವಲ್ಲಿ ನವರೂಪ ದೇವರು ಗರ್ಭಿತರಿದ್ದಾರೆಂದು ತಿಳಿದುಕೊಳ್ಳಬೇಕು. ಆಚಾರ್ಯ, ಉಪಾಧ್ಯಾಯ, ಸಾಧುಗಳಂತೂ ಅರಹಂತರ ಪೂರ್ವ ಅವಸ್ಥೆಯಾಗಿದೆ. ಸಿದ್ಧರಿದ್ದವರು ಮೊದಲು ಅರಹಂತರಾಗಿಯೇ ಸಿದ್ಧರಾಗಿದ್ದಾರೆ. ಅರಹಂತರ ವಾಣಿಯು ಜಿನವಚನವಾಗಿದೆ. ವಾಣಿಯ ಮೂಲಕ ಯಾವ ಅರ್ಥ ಪ್ರಕಟಪಡಿಸಿದೆ ಅದು ಜಿನಧರ್ಮವಿದೆ. ಅರಹಂತರ ಸ್ವರೂಪವು ಎಲ್ಲಿ ವಿರಾಜಮಾನ ವಿರುತ್ತದೆ ಅದು ಜಿನಾಲಯವೆನಿಸುತ್ತದೆ. ಈ ಪ್ರಕಾರ ನವದೇವತಾ ರೂಪವಿರುವ ಅರಹಂತ ಭಗವಂತರ ಪ್ರತಿಬಿಂಬದ ಪೂಜೆಯನ್ನು ನಿತ್ಯವೂ ಮಾಡುವುದು ಯೋಗ್ಯ.

ಯಜ್ಞಸಂಪ್ರದಾಯವು, ಲೋಕಪ್ರಿಯತೆಯನ್ನು ಕಳಕೊಂಡ ಬಳಿಕ, ಉಪನಿಷತ್ ಕಾಲದಲ್ಲಿ ಸಂಸ್ಕೃತ ಸಂಪ್ರದಾಯದವರಲ್ಲಿ ಕೂಡ ಧ್ಯಾನ-ಪೂಜಾ ಪದ್ಧತಿಯು ಪ್ರತಿಷ್ಠಿತವಾಗತೊಡಗಿದ್ದುದು ಕಾಣದೊರೆಯುತ್ತದೆ.

ಅತ್ತಿ, ಆಲ, ಅಶ್ವತ್ಥ, ಬೇವು, ಬನ್ನಿ, ಇಪ್ಪಿ, ಎಕ್ಕ ಮೊದಲಾದವು ಪೂಜೆಗೆ ಇಂದಿಗೂ ಬೇಕು. 'ಪ್ರತಿ' ಮತ್ತು ಗರಿಕೆ (ಹುಲ್ಲು) ಶಿವಾರಾಧನೆಗೂ ದೇವೀಪೂಜೆಗೂ ಬೇಕು; ವಿಷ್ಣುವಿಗೂ ಬೇಕು. ಬಿಲ್ವ-ತುಳಸೀ ಪತ್ರವಿಲ್ಲದೆ ಪೂಜೆ ಅಪೂರ್ಣ. ಶಕ್ತಿಗಾಗಿ, ಮಕ್ಕಳಿಗಾಗಿ, ಗಾಳಿ-ಧೂಳಿಯ ವ್ಯಾಧಿ ನಿವಾರಣೆಗಾಗಿ ಅತ್ತಿ, ಆಲ, ಅರಳೆ ಗಿಡಗಳ ಪೂಜೆ ಮಾಡುವ ವಾಡಿಕೆ ಇದೆ. ಸಿಂಧೂತೀರದ ಪುರಾತನ ಪಟ್ಟಣಗಳ ಅವಶೇಷಗಳಲ್ಲಿ ಅಶ್ವತ್ಥಪೂಜಾ ಸೂಚಕ ಚಿಹ್ನೆಗಳು ದೊರೆತಿವೆ. ವೇದಕಾಲದಲ್ಲಿ ವೃಕ್ಷಪೂಜೆಯು ಇದ್ದಿತಾಗಿ ಊಹಿಸಲು ಬರುವುದು. ಆದರೆ, ಅದಕ್ಕೆ ಪ್ರತಿಷ್ಠೆ ಇದ್ದುದನ್ನು ನಿದರ್ಶನಕ್ಕೆ ತರುವ ವರ್ಣನೆಗಳು ದೊರೆಯುವುದಿಲ್ಲ.

ಶಿನ್-ಶೆನ್-ಚೆನ್ ಶಬ್ದವು ಸಂಪೂರ್ಣವಾಗಿ 'ದ್ರಾವಿಡ' ಭಾಷೆಗೆ ಸಂಬಂಧಪಟ್ಟು ದೆಂದು ಸ್ಪಷ್ಟವಿರುವುದರಿಂದ ಶಿನ್-ಶಿನೀವಾಲೀ ದೇವತೆಯ ಆರಾಧನೆಯು ಹಿಂದೂ ದೇಶದಿಂದಲೇ ಅಸ್ಸೀರಿಯಾ ಬಾಬಿಲೋನಿಯಾಗಳ ಮುಖಾಂತರವಾಗಿ ಗ್ರೀಸದೇಶದ ಕಡೆಗೆ ಹೋಗಿರಬೇಕೆಂದು ಊಹಿಸವುದಕ್ಕೆ ಅವಕಾಶವಿದೆ. ಗ್ರೀಸದೇಶದ ಎಲ್ಲಮ್ಮನ (Mother of all gods-and all men) ಪೂಜೆಯು ಕ್ರೈಸ್ತಧರ್ಮಕ್ಕಿಂತ ಮುಂಚೆ ಬಹಳೇ ಲೋಕಪ್ರಿಯವಾಗಿತ್ತು. ಕೆಲವು ಸಂಶೋಧಕರ ಅಭಿಪ್ರಾಯದಂತೆ ಈ ದೇವಿಯ ಆರಾಧನೆಯು ಏಶಿಯಾ ಮೈನರಿನಲ್ಲಿಯೆ ಮೊದಲು ಹುಟ್ಟಿತು. ಇದು ನಿಜವೆಂದು ಒಪ್ಪಿಕೊಂಡರೂ ಕ್ರಿಸ್ತಪೂರ್ವ ೬ನೆಯ ಶತಮಾನದ ಸುಮಾರಿಗೆ ಗ್ರೀಸ್‌ನಲ್ಲಿ ನಡೆಯುತ್ತಿದ್ದ ಶಿವ-ಶಕ್ತಿ ಪೂಜೆಯ ರೀತಿಯನ್ನು ನೋಡಿದರೆ ಈ ಪೂಜಾ ಪದ್ಧತಿಯಾದರೂ ಹಿಂದೂ ದೇಶದಿಂದಲೇ ಅಲ್ಲಿಗೆ ಹೋಗಿರಬೇಕೆಂದು ಹೇಳಬೇಕಾಗುತ್ತದೆ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೧ ಪುಟ. ೩೦೨*

*ಸಂಪುಟ. ೩ ಹಾಲುಮತ ದರ್ಶನ ಪುಟ. ೩೧, ೧೧೭*

*ಸಿ.ವೀರಣ್ಣ ೧೯೮೬ ಪ್ರಾಚೀನ ಸಾಹಿತ್ಯ: ರಾಜಸತ್ತೆಯ ವೈಭವದ ಕಾಲ ಪುಟ. ೮೯*

*ಶೇಷನವರತ್ನ ೨೦೦೮ ನಾಲ್ಕು ವೇದಗಳು ಪುಟ. ೧೮೨*

*Sri Swami Sivananda 1997 All about Hinduism P. 68, 76.*

೧೩೫. ಆರ್ತಧ್ಯಾನ

*ಅಂತಾರ್ತಧ್ಯಾನದೊಳಜಗರನಾಗಿ ತನ್ನ ಮುನ್ನಿನ ಸಂಚಿತ ವಸ್ತುಗಳಂ.. (ಆದಿಪುರಾಣ ೨ ೧೪. ವ)*

ಆರ್ತಧ್ಯಾನವು ಧ್ಯಾನದ ನಾಲ್ಕು ಬಗೆಗಳಲ್ಲಿ ಒಂದು, ಅಶುಭಧ್ಯಾನ. ಇಷ್ಟವಿಲ್ಲದ ವಸ್ತುಗಳಿಂದ ಅಗಲಬೇಕೆಂಬ ಚಿಂತೆಯಿಂದಲೂ, ಇಷ್ಟವಾಗುವ ವಸ್ತುಗಳು ಬೇಕೆಂಬ ಆಕಾಂಕ್ಷೆಯಿಂದಲೂ ಮನಸ್ಸು ತುಂಬಿ ಅವುಗಳನ್ನೇ ಚಿಂತಿಸುತ್ತಿರುವುದು. ದಾಸರ ಕೀರ್ತನೆಗಳಲ್ಲಿ ಆರ್ತ ಎಂದರೆ ಮೊರೆಯಿಡು ಎಂಬರ್ಥದಲ್ಲಿ ಬಂದಿದೆ. ಉದಾಹರಣೆಗೆ: ಕನಕದಾಸರ ಕೂಗಿದರೂ ದನಿ ಕೇಳಲಿಲ್ಲವೆ? ಎಂಬ ಕೀರ್ತನೆಯ ಸೊಲ್ಲನ್ನು ಗಮನಿಸಬಹುದು.

ವಿಧಿಗಳು:

ರನ್ನನ ಅಜಿತತೀರ್ಥಂಕರ ಪುರಾಣತಿಲಕದಲ್ಲಿ ಕೆಲವು ಪರಿಕಲ್ಪನೆಗಳು ವಿಶಿಷ್ಟವಾಗಿವೆ.

೧. ವಿಹರಣವಿಧಿ – ಧರ್ಮೋಪದೇಶಕ್ಕಾಗಿ ವಿಹಾರ ಕೈಗೊಳ್ಳುವುದು.

೨. ಕರ್ಮ್ಮಗಳಂ ಕೆಡಿಸಿದ – ಕರ್ಮ್ಮಗಳನ್ನು ನಾಶಪಡಿಸಿದ.

೩. ಗುಪ್ತಿತ್ರಯ – ಮನೋಗುಪ್ತಿ, ವಾಗ್ಗುಪ್ತಿ, ಕಾಯಗುಪ್ತಿಗಳು.

೪. ಆರ್ತಧ್ಯಾನದಲ್ಲಿ ಎರಡು ಬಗೆ – ಬಾಹ್ಯ ಮತ್ತು ಆಧ್ಯಾತ್ಮಿಕ.

೫. ಸ್ವಸಂವೇದ್ಯ ಮಪ್ಪಾದ್ಯ – ಅಪಾಯವಿಚಯ ಉಪಾವಿಚಯ, ಜೀವವಿಚಯ, ಅಜೀವವಿಚಯ, ವಿಪಾಕವಿಚಯ, ಭವವಿಚಯ, ವಿರಾಗವಿಚಯ, ಸಂಸ್ಥಾನವಿಚಯ, ಆಜ್ಞಾವಿಚಯ, ಹೇತುವಿಚಯ ಒಟ್ಟು ಹತ್ತುರೀತಿ. (೮–೨೮ ವ)

ರನ್ನನು ಅಜಿತತೀರ್ಥಂಕರ ಪುರಾಣದಲ್ಲಿ ಆರ್ತಧ್ಯಾನದ ಬಗ್ಗೆ ಸವಿಸ್ತಾರವಾಗಿ ಹೇಳಿದ್ದಾನೆ. (ನೋಡಿ: ರನ್ನನ ವಿರಚಿತ ಅಜಿತ ತೀರ್ಥಂಕರ ಪುರಾಣಂ ೮–೨೮ವ) ಅರ್ತಧ್ಯಾನವು ನಾಲ್ಕು ತೆರನಾಗಿದೆ; ರೌದ್ರ ಧ್ಯಾನವೂ ಕೂಡ ನಾಲ್ಕು ತೆರನಾಗಿದೆ. ಹಾಸಿಗೆಯಲ್ಲಿ ಮಲಗಿದ ಮುನಿಯು ಮಾತ್ರ ಇವೆಲ್ಲವುಗಳನ್ನು ತಿಳಿದುಕೊಳ್ಳಬಲ್ಲನು.

ಅನಿಷ್ಟ ವಸ್ತುಗಳ ಸಂಯೋಗವನ್ನೂ, ಇಷ್ಟವಸ್ತುಗಳ ವಿಯೋಗವನ್ನೂ ಪರೀಷಹ ಮತ್ತು ನಿದಾನಗಳನ್ನೂ ಉಂಟುಮಾಡುವ ಆರ್ತಧ್ಯಾನವು ಒಟ್ಟಿನಲ್ಲಿ ಕಷಾಯಮಯ ವಾಗಿರುತ್ತದೆ.

ಕಳವು, ಮೋಸ, ಮೊದಲಾದ ಕಾಯಗಳಲ್ಲಿ ಮತ್ತು ಆರು ಬಗೆಯ ಹಿಂಸಾಕೃತ್ಯದಲ್ಲಿ ನಿರತವಾದ ಕಷಾಯಯುಕ್ತ ಧ್ಯಾನಕ್ಕೆ (ಚಿಂತನೆಗೆ) ಒಟ್ಟಿನಲ್ಲಿ ರೌದ್ರಧ್ಯಾನವೆನ್ನುತ್ತಾರೆ.

ಮಹಾಭಯಾನಕವಾದ ಮತ್ತು ಸನ್ಮಾರ್ಗದಲ್ಲಿ ಎಡರುತೊಡರುಗಳನ್ನು ತಂದೊಡ್ಡುವ ಆರ್ತ ಮತ್ತು ರೌದ್ರಧ್ಯಾನಗಳನ್ನು ಬಿಟ್ಟು, ಯಾವಾಗಲೂ ಧರ್ಮ ಮತ್ತು ಶುಕ್ಲಧ್ಯಾನಗಳಲ್ಲಿ ಮಗ್ನರಾಗಬೇಕು.

## ೧೩೬. ಆರ್ಯ

ತೆಲುಗಿಗಿಂತಲೂ ಮರಾಠಿಯ ಬೇರುಗಳು ಕನ್ನಡದಲ್ಲಿ ಬಹಳ ಆಳದವರೆಗೆ ಹೋಗಿವೆ. ಕನ್ನಡಿಗರು ಮರಾಠಿಗೆ 'ಆರಿಯ' ಮಾತು ಅಥವಾ 'ಆರೇ' ಮಾತು ಎಂದು ಕರೆಯುವುದು ವಾಡಿಕೆ. ತಮಿಳು ಪ್ರಾಚೀನ ಸಾಹಿತ್ಯದಲ್ಲಿಯೂ 'ಆರಿಯರ್' ಎಂದೇ ಉಲ್ಲೇಖಗಳು ದೊರೆಯುತ್ತವೆ. ಆರಿಯ (ಆರೆ) ಎಂಬುದು 'ಆರ್ಯ' ಶಬ್ದದ ತದ್ಭವವು. ಮರಾಠಿಯು ಆರ್ಯರ ಮಾತು, ಅರಿಯ (ಆರೇ) ಮಾತು, ಎಂದೆನ್ನುವುದರಿಂದಲೆ ಈ ಭಾಷೆಯ ವಿಷಯದಲ್ಲಿ ಕನ್ನಡಿಗರಿಗಿದ್ದ ಗೌರವವು ವ್ಯಕ್ತವಾಗುತ್ತಲಿದೆ; ಸಂಸ್ಕೃತ–ಪ್ರಾಕೃತಗಳ ಸಾಲಿನಲ್ಲಿಯೇ ಮರಾಠಿ (ಆರೆ) ಮಾತಿಗೂ ಸ್ಥಾನವು ದೊರೆತಿದ್ದಿತು. ಆದುದರಿಂದ ಆರಿಯ ಮಾತು ಬರುವುದು ಒಂದು ಭೂಷಣವೆಂಬ ಭಾವನೆಯೆ ನಮ್ಮ ಜನಗಳಲ್ಲಿ ಹಲವು ಕಾಲದಿಂದಲೂ ಮನೆಮಾಡಿ ಕೊಂಡಿದ್ದಿತೆಂದು ಹೇಳಬಹುದಾಗಿದೆ. ಆರಿಯ ಮಾತಾಡುವವನು ಆರಿಯ, ಎಂಬ ವಿಚಾರವು ದೃಢವಾಗಿದ್ದ ಆ ಕಾಲದಲ್ಲಿ ಆರಿಯ ಮಾತು ಬರುತ್ತಲಿದ್ದ ಅನೇಕಾನೇಕ ಕನ್ನಡಿಗರು ಆರಿಯರಾಗಿ ಎಣಿಸಲ್ಪಟ್ಟಿರುವುದು ಸಹಜ.

ಕುರುಬರು, ಗೌಳಿಗಳು, ಕಮ್ಮಾರರು, ವೈಶ್ಯರು, ಬಣಜಿಗರು, ಬ್ರಾಹ್ಮಣರು ಮೊದಲಾದವರು ಒಂದೇ ಕುಲದವರಾಗಿದ್ದರೂ 'ಆರೇ', 'ತೆಲಗು' ಮತ್ತು 'ಕನ್ನಡ' ಎಂಬ ಪಂಗಡಗಳಾಗಿದ್ದುದು ಕಂಡುಬರುವುದಕ್ಕೆ ಇದೇ ಕಾರಣ.

ಆರ್ಯವೆಂಬುದು ಶ್ರೇಷ್ಠ ದ್ರಾವಿಡವೆಂದರೆ ಕನಿಷ್ಠವೆಂಬ ನಂಬಿಕೆಯು ಪ್ರಚಲಿತವಿತ್ತು. ಅದೂ ಆರ್ಯರೆಂದರೆ ಬಿಳಿಯ ವರ್ಣದವರು ದ್ರಾವಿಡರು ಕರಿಯ ಬಣ್ಣದವರು ಎಂದು ಹೇಳಲಾಗುತ್ತಿತ್ತು. ಸಂಸ್ಕೃತ ನಾಟಕಗಳಲ್ಲಿ ನಾಯಕಿಯುರು ನಾಯಕರನ್ನು ಸಂಬೋಧಿಸುವುದು ಆರ್ಯಪುತ್ರನೆಂದು. ಇದು ಆರ್ಯರು ತಮ್ಮ ಶ್ರೇಷ್ಠತೆಯನ್ನು ಬಿಂಬಿಸಲು ಮಾಡಿದ ಪ್ರಯತ್ನವೂ ಹೌದು.

*ವಿವರಗಳಿಗೆ ನೋಡಿ: ದ್ರವಿಳ, ಶಂಬಾ ಜೋಶಿ ೧೯೯೯ ಸಂಪುಟ. ೨ ಪುಟ. ೧೮–೨೯.*

## ೧೩೭. ಆವಗೆ

*"ದಿವ್ಯಾಸ್ತ್ರಂಗಳಿಂ ನೂಱು ಯೋಜನದಳವಿಯಖಾಂಡವ ವನವೆಲ್ಲಮಂ ಕಟ್ಟಿಮೆಡಱುಮಶಕ ಮಾತ್ರಮಪ್ಪೊಡಂ ಮಿಸುಕಲ್ ಛಿದ್ರಮಿಲ್ಲದಂತಾಗೆ . . . ಅಗ್ನಿದೇವನ್* ***ಆವಗೆ****ಯ ಕಿರ್ಚಿನಂತೆ ಒಳಗೊಳಗಳುರ್ದು" (ಪಂಪಭಾರತ. ೫–೯೬)*

"ತೆರಳ್ದೋಡಿದೊಡಗ್ನಿದೇವನಾವಗೆಯ" ಎಂದು ಪಂಪ ಭಾರತದಲ್ಲಿ ಬರುತ್ತದೆ. ಆವಗೆಯೆಂದರೆ ಕುಂಬಾರನ ಒಲೆ. ಅಗ್ನಿದೇವನು ಕುಂಬಾರರ ಆವಗೆಯ ಬೆಂಕಿಯಂತೆ ಒಳಗೊಳಗೆ ವ್ಯಾಪಿಸಿ ಸುಟ್ಟನು ಎಂದು ಹೇಳುವಾಗ, ಪಂಪನು ಆವಗೆಯೆಂದು ಬಳಸುತ್ತಾನೆ. ಕುಂಬಾರನು ಹಸಿಮಣ್ಣಿನ ಮಡಿಕೆಯನ್ನು ಮಾಡಿ ಅದನ್ನು ಸುಡುವ ಒಲೆ.

ಆವಿಗೆಯೆಂಬ ಪ್ರಯೋಗವೂ ಇದೆ. ಆವಿ ಎಂದರೆ ಹಬೆ, ಬಿಸಿ, ಆವಕಲವೆಂದರೆ ಆವಗೆಯಲ್ಲಿ ಸುಟ್ಟ ಮಡಕೆ. ಮಾಮೂಲಿಯಾದ ಒಲೆಯು ಸಣ್ಣದಿರುತ್ತದೆ. ಅದು ಅಡುಗೆಗೆ ಸೀಮಿತ, ಆದರೆ ಆವಗೆಯು ಸಣ್ಣ ಒಲೆಯಲ್ಲ. ಅದುದರಿಂದ ಹಸಿಮಣ್ಣಿನ ಮಡಕೆಯನ್ನು ಜಾಗರೂಕತೆಯಿಂದ ಬಿಸಿಮಾಡಿ ಅದನ್ನು ಗಟ್ಟಿಗೊಳಿಸುವುದು ವಿಶೇಷ. ಸುಟ್ಟ ಮಡಕೆ, ಸುಟ್ಟಹೆಂಚು ನಮ್ಮ ಗ್ರಾಮೀಣ ಪ್ರದೇಶದ ಸಣ್ಣ ಉದ್ಯಮ ಮತ್ತು ಊರಿರುವಲ್ಲಿ ಕುಂಬಾರರು ಇರಬೇಕು.

**೧೩೮. ಆಸನ್ನ ಭವ್ಯ**

*ಎಂದು ಬೆಸಗೊಂಡೊಡೆ ಆತನಭವ್ಯನಲ್ಲಂ ಭವ್ಯನೇ. ಭವ್ಯನಾಗಿಯು**ಮಾಸನ್ನಭವ್ಯಂ;***

*(ಆದಿಪುರಾಣ ೨ – ೩೫ ವ)*

ಸಮ್ಯಕ್ತ ದೊರೆಯುವ ಸಂಭವ ಬೇಗ ಒದಗಿ ಬರುವ ಜೀವವನ್ನು ಆಸನ್ನಭವ್ಯ ನೆಂದು ಕರೆಯುತ್ತಾರೆ. ಅಂದರೆ ಬೇಗನೆ ಮೋಕ್ಷವನ್ನು ಪಡೆಯುವ ಜೀವನೆಂದು ಅರ್ಥ.

ಇದು ಜೈನ ಆಗಮಿಕ ವಿಶಿಷ್ಟ ಪರಿಕಲ್ಪನೆ. ಈ ಪರಿಕಲ್ಪನೆಯು ಬೇರೆ ಯಾವ ಮತದಲ್ಲಿ ಪ್ರಾಯಶಃ ಕಾಣ ಸಿಗುವುದು ಕಷ್ಟ ಯಾಕೆಂದರೆ ಉಳಿದ ಮತಗಳು "ಸಮ್ಯಕ್ತ" ಪರಿಭಾಷೆಯನ್ನೇ ಬಳಸಿಲ್ಲ. ಮತ್ತು ಈ ಪರಿಕಲ್ಪನೆಯು ವೈದಿಕ ಪರಿಕಲ್ಪನೆಗಿಂತ ಭಿನ್ನ ಎಂಬುದನ್ನು ಅರ್ಥವಿಸಿಕೊಳ್ಳಬೇಕು.

**೧೩೯. ಆಸವ**

*ವಾಸಿಸಿದ ನೀರು ಕದಡಿಂ*
***ದಾಸವದೊಳ್** ಸೊರ್ಕಿ ಬೆಂಡು ಮಗುಟ್ದಿವ್ ಮೀಂಗಳ್*

*(ಪಂಪ ಭಾರತ ೫–೬೫)*

ನೀರಿನ ಕದಡವೆಂಬ ಮದ್ಯವಾಸನೆಯಿಂದ (ಆಸವ) ಮೀನುಗಳು ಸೊಕ್ಕಿ ಬೆಂಡಿನಂತೆ ಅಸ್ತವ್ಯಸ್ತವಾದವು. ಆಸವವೆಂದರೆ ಮದ್ಯ. ಭಟ್ಟಿಯಿಳಿಸಿದ ಔಷಧಿಯೆಂಬ ಅರ್ಥವೂ ಇದಕ್ಕಿದೆ. ಆಯುರ್ವೇದ ವಿಜ್ಞಾನದಲ್ಲಿ ಬೇರೆ ಬೇರೆ ರೀತಿಯ ಗಿಡಮೂಲಿಕೆಗಳಿಂದ ಭಟ್ಟಿಯಿಳಿಸಿದ ಆಸವಗಳಿರುತ್ತವೆ. ಅರಿಷ್ಟಗಳಿರುತ್ತವೆ. ಉದಾ : ಕುಮಾರಿಯಾಸವ ಆಯುರ್ವೇದದಲ್ಲಿ ಅರಿಷ್ಟ ಮತ್ತು ಆಸವಗಳಿಗೆ ವ್ಯತ್ಯಾಸವಿದೆ. ಶಾರಂಗಧರ ಮಧ್ಯಕಾಂಡ ೧೦ – ೨ ಶ್ಲೋಕದಲ್ಲಿ ಆಸವದ ಕುರಿತು ಬರುತ್ತದೆ. ಅರಿಷ್ಟದ ಬಗ್ಗೆಯೂ ಅದು ಹೇಳುತ್ತದೆ.

ಅಪಕ್ವ ಔಷಧ ಆಸವ. ಇದನ್ನು ಪೂರ್ವಯೋಜನೆಯಂತೆ ಸಿದ್ಧಪಡಿಸಲಾಗುವುದಿಲ್ಲ. ಮತ್ತು ಆಸವವು ಬೇಯಿಸಿ ತೆಗೆದ ರಸ ವಿಶೇಷವೂ ಅಲ್ಲ. ಆದರೆ ಅರಿಷ್ಟವು ಬೇಯಿಸಿ ಭಟ್ಟಿಯಿಳಿಸಿದ ಔಷಧ ರೂಪ, ಆಸವದಲ್ಲಿ ಶೀತ, ವೀರ್ಯ, ದ್ರವ್ಯದ ಲಕ್ಷಣಗಳಿರುತ್ತವೆ.

ಅರಿಷ್ಟದಲ್ಲಿ ಉಷ್ಣ, ವೀರ್ಯ ದ್ರವ್ಯ ಅಂಶಗಳಿರುತ್ತವೆ. ಆಸವವು ಪೈತ್ಯಕ ವ್ಯಾಧಿಗೆ ಕೊಡಲಾಗುತ್ತದೆ. ದ್ರವಪ್ರಧನ ಅರಿಷ್ಟದಲ್ಲಿ ದ್ರವ್ಯ ಪ್ರಧಾನ ಅರಿಷ್ಟವು ಅಗ್ನಿ ಸಂಸ್ಕರಣಕ್ಕೆ ಗುರಿಯಾಗಿರುತ್ತದೆ. ಅರಿಷ್ಟವನ್ನು ಆಯುರ್ವೇದ ವಿಜ್ಞಾನದಲ್ಲಿ ವಯಸ್ಕರಿಗೆ ಮತ್ತು ಇಳಿವಯಸ್ಸಿನಲ್ಲಿರುವವರಿಗೆ ಹೆಚ್ಚು ಕೊಡಲಾಗುತ್ತದೆ. ಆಸವವು ಅಗ್ನಿ ಸಂಸ್ಕರಣ ಕ್ರಿಯೆಗೆ ಗುರಿಯಾಗಿರುವುದಿಲ್ಲ. ಶಾರಂಗನು ಕುಮಾರಿಯಾಸವದ ಕುರಿತು ಹೀಗೆ ಹೇಳುತ್ತಾನೆ. ಇದು ಅಗ್ನಿ ಸಂಸ್ಕರಣಕ್ಕೆ ಗುರಿಯಾದುದಲ್ಲ. ಭಟ್ಟಿಯಿಳಿಸಿದ ಔಷಧ, ಕುಮಾರಿಯಾಸವವು ಉದರ ರೋಗ, ಕ್ಷಯ, ಡಯಾಬಿಟೀಸ್, ಉದರಕ್ಕೆ ಸಂಬಂಧಿಸಿದ ಕಾಯಿಲೆ, ಅಪಸ್ಮಾರ, ಶುಕ್ರದೋಷ (ರಜೋದೋಷ) ಕ್ರಿಮಿರೋಗ, ರಕ್ತಪಿತ್ಥಕ್ಕೆ ನೀಡಲಾಗುತ್ತದೆ. ಯೋಗ ರತ್ನಾಕರದಲ್ಲಿ ಇದನ್ನು ಶ್ವಾಸರೋಗ, ಧಾರುಣ ಕ್ಷಯರೋಗ, ಉದರರೋಗ, ಮೂಲವ್ಯಾಧಿ, ವಾತವ್ಯಾಧಿ ಮತ್ತು ಅಪಸ್ಮಾರಕ್ಕೆ ನೀಡಲಾಗುತ್ತದೆ. ಶಾರಂಗ ಸೂತ್ರದ ಪ್ರಕಾರ ದ್ರಾಕ್ಷಾರಿಷ್ಟವು– ಎದೆಗೆ, ಶ್ವಾಸಕ್ಕೆ ಸಂಬಂಧಿಸಿದ ಕಾಯಿಲೆಗೆ, ಕ್ಷಯಕ್ಕೆ ಮಲಶೋಧಕ, ಬಲಶೋಧಕ, ಗಲರೋಗಕ್ಕೆ ನೀಡಲಾಗುತ್ತದೆ.

### ೧೪೦. ಆಸ್ಥಾನ ನರ್ತಕಿಯರು

ಆಸ್ಥಾನದಲ್ಲಿ ನರ್ತನ ಮಾಡುವ ನರ್ತಕಿಯರ ವಿವರಗಳು ಅನೇಕ ಕೃತಿಗಳಲ್ಲಿ ಬಂದಿವೆ, 'ಆದಿಪುರಾಣ' (೭–೧೭) ರನ್ನನ ಗದಾಯುದ್ಧ (೫–೪೩) ಅಜಿತ ತೀರ್ಥಂಕರ ಪುರಾಣತಿಲಕಂ' (೫–೧೭) ಮುಂತಾದವುಗಳನ್ನು ಹೆಸರಿಸಬಹುದು. ನಾಟ್ಯವಾಡುವ ಸಂದರ್ಭಗಳು ಕೃತಿಗಳಲ್ಲಿ ಈ ರೀತಿಯಲ್ಲಿ ಉಕ್ತವಾಗಿವೆ: ಜನ್ಮೋತ್ಸವ ಸಂದರ್ಭ (ಆದಿಪುರಾಣ ೭–೧೨೫) ವಿವಾಹ ಸಂದರ್ಭ (ಪಂಪಭಾರತ – ೯–೯) ಒಡ್ಡೋಲಗದ ಸಂದರ್ಭ(ಆದಿಪುರಾಣ ೯–೧೭) ಯುದ್ಧದಲ್ಲಿ ಗೆದ್ದಾಗ (ಪಂಪಭಾರತ ೧೪–೧೭ವ) ರಾಣಿಯು ಗರ್ಭಿಣಿಯಾಗಿದ್ದಾಗ (ಆದಿಪುರಾಣ ೭–೧೮, ೧೯) ಇತ್ಯಾದಿ.

ಪಂಪನ 'ಆದಿಪುರಾಣ' (೧೧–೧೯) ವಿಕ್ರಮಾರ್ಜುನ ವಿಜಯ (೧–೫೮, ೮–೭೩ವ) ಕೃತಿಯಲ್ಲಿ ನರ್ತನ ಶಾಲೆಯ ಉಲ್ಲೇಖವಿರುವುದನ್ನು ಕಾಣಬಹುದು.

ಆಸ್ಥಾನ ನರ್ತಕಿಯರಿಗೂ ದೇವಸ್ಥಾನದ ನರ್ತಕಿಯರಿಗೂ ಭಿನ್ನತೆಗಳಿವೆ.

*ವಿವರಗಳಿಗೆ ನೋಡಿ: ದೇವದಾಸಿ.*

### ೧೪೧. ಆಹಿರರು

'ಆಹಿರ ಜೈತುಗಂ ಹಿರಿಯ ಬಳ್ಳಿಗಾವೆಯ ನೆಲವೀಡಿನೊಳ್ ಇರ್ದು (ರಾಜ್ಯಮಂ) ಪಾಲಿಸುತಿರ್ದಂ' ಎಂದು (ಕ್ರಿ. ಶ. ೧೨೧೫) ಸೊರಬ ತಾಲೂಕಿನ ಒಂದು ಶಾಸನದಲ್ಲಿದೆ.

ಹಳೆಯ ಶಾಸನಗಳಲ್ಲಿ ಆಹಿರರ ಹೆಸರು ಕಂನಾಡಿನಲ್ಲೂ ಕೇಳಬರುತ್ತದೆ. ಚಾಲುಕ್ಯಾದಿ ರಾಜರು ಆಭೀರರ ಹಗೆಗಳಾಗಿದ್ದುದು ಅವರ ಬಿರುದಾವಳಿಗಳಿಂಧ ತಿಳಿಯುತ್ತದೆ. 'ಅಭೀರಕುಲ ದಹನದಾವಾನಲ' ಮೊದಲಾದ ಬಿರುದಾವಳಿಗಳನ್ನು ಹೆಮ್ಮೆಯಿಂದ

ಹೇಳಿಕೊಳ್ಳುತ್ತಿದ್ದರು. ಹೀಗಿದ್ದರೂ ಈ ನಾಡಿನಲ್ಲಿ ಸಣ್ಣಪುಟ್ಟ ಮಾಂಡಲಿಕರಾಗಿ, ಮನ್ನೆಯರಾಗಿ ಆಳಿದ ಆಭೀರರೂ ಇಲ್ಲದಿಲ್ಲ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೨ ಪುಟ. ೧೮೧.*

## ೧೪೨. ಆಳಂಬೆ

*ಮತ್ತಂ, ಮದ್ಯ ಮಧು ಮಾಂಸಂಗಳುಮಯ್ದು ಪಾಲ್ಮರದ ಪಣ್ಗಳುಮಾಳಂಬೆಯುಂ ಸಣಂಬಿನ ಪೂವುಮೆಂದಿವಂ ಸೇವಿಸುವಂ......... (ವಡ್ಡಾರಾಧನೆ ೧೨೬-೧೮)*

ಅಣಂಬಿ, ಅಣಂಬೆ, ಅಣಬೆ, ಅಳಂಬೆ, ಆಣಂಬೆ, ಆಳಂಬಿ, ಹಣಬೆ(ನಾ) ಗೊಬ್ಬರದ ಗುಂಡಿ ಅಥವಾ ತಿಪ್ಪೆಗಳಲ್ಲಿ ಮಳೆಗಾಲದಲ್ಲಿ ಇದ್ದಕ್ಕಿದ್ದಂತೆ ಬೆಳೆಯುವ ಕೊಡೆಯಾಕಾರದ ಸಸ್ಯಜಾತಿ; ಶಿಲೀಂಧ್ರ; ನಾಯಿಕೊಡೆ.

ಮೇಲುನೋಟಕ್ಕೆ ಆಳಂಬೆಯೆನ್ನುವುದು (ಅಣಬೆ) ತುಂಬಾ ಸರಳವಾದ ಪದದ ಹಾಗೆ ಕಾಣಿಸುತ್ತದೆ. ಅಣಬೆ(ಅಳಂಬೆ)ಯ ಕುರಿತು ವಡ್ಡಾರಾಧನೆಯಲ್ಲಿ ಬರುತ್ತದೆ. ಅಳಂಬೆ>ಅಣಬೆಯೆಂದಾಗಿದೆ. ಅಣಬೆಯನ್ನು ನಾಯಿಕೊಡೆಯೆಂದೂ ಕರೆಯುತ್ತಾರೆ. ಅಣಬೆಯಲ್ಲಿ ಎರಡು ರೀತಿಯಿರುತ್ತದೆ. ಒಂದು ಮನುಷ್ಯನ ಆಹಾರ ಪದಾರ್ಥವಾಗಿ. ಎರಡನೆ ರೀತಿಯ-ಅಣಬೆಯು ವಿಷಯುಕ್ತವಾದುದು. ಅಣಬೆಯು ಛತ್ರಿಯ ಆಕಾರದಲ್ಲಿರುವುದರಿಂದ ಅದಕ್ಕೆ 'ನಾಯಿಕೊಡೆ'ಯೆಂದು ಬಂದಿರಬಹುದು ಎಂಬುದು ಗಮನಾರ್ಹ.

## ೧೪೩. ಆಳ್ವಿಕೆ

*ಅಧಿಕಾರವೆಂದರೆ ಅರ್ಹತೆ, ಅಧ್ಯಾಯ ಎಂದರ್ಥಗಳಿವೆ. ಈ ಅರ್ಥದಲ್ಲಿ ರಾಜ್ಯವನ್ನು ಆಳುವುದು ಅಧಿಕಾರವೇ ಆಗಿದೆ. "…. ವತ್ಸಕಾವತೀ ವಿಷಯದ ಸುಸೀಮಾ ನಗರಮನಾಳ್ವಂ ಅಜಿತಂ ಜಿಯ ಮಹೀಪಾಳನ" (ಆದಿ ಪುರಾಣ 3-73)*

ರಾಜ್ಯವನ್ನು ಒಪ್ಪಿಸುವ ಸಂದರ್ಭದಲ್ಲಿ ಬಾಹುಬಲಿ 'ನೆಲಸುಗೆ ನಿನ್ನವಕ್ಷದೊಳೆ ನಿಶ್ಚಲಮೀ...............ಮನೋಹರೀ ರಾಜ್ಯಲಕ್ಷ್ಮಿ' ಎಂದು ಹೇಳುತ್ತಾನೆ. (ಆದಿ ಪುರಾಣ).

"ಧೃತರಾಷ್ಟ್ರನಂಗಹೀನನೆಂದು ವಿವಾಹದೊಸಗೆಯೊಡನೆ ಪಟ್ಟ ಬಂಧದೊಸಗೆಯಂ ಮಾಡಿ ನೆಲನಾಳಿಸೆ" (ಪಂಪಭಾರತ ೧-೧೦೮ ವ)

ಅಧಿಕಾರಕ್ಕೆ ಬೇರೆ ಬೇರೆ ರೂಪಗಳಿವೆ. ಅಂತಃಪುರದಲ್ಲಿ ಸೇವಕಿಯರನ್ನು ನೇಮಕ ಮಾಡಲು ರಾಜನ ಪತ್ನಿಗೆ ಅಧಿಕಾರವಿದೆ. (ಅಜಿತ ತೀರ್ಥಂಕರ ಪುರಾಣತಿಲಕ) ಪತಿಯ ಶವಸಂಸ್ಕಾರದ ಅಧಿಕಾರ ಪತ್ನಿಯರಿಗಿದೆ. (೧೪-೮ವ) ಗಂಡನಿಗೆ ಹೆಂಡತಿಯು ಸಲಹೆ ಕೊಡುತ್ತಾಳೆ.

ಅಧಿಕಾರ ವರ್ಗಗಳು ಈ ರೀತಿ ಇವೆ: ಮಹಾಸಾಮಂತ, ಮಹಾಪ್ರತೀಹಾರ, ಮಹಾದಂಡನಾಯಕ, ಮಹಾಕಾರ್ತಾಕೃತಿಕ, ಮಹಾರಾಜ. (ಅ)ಮಹಾಪ್ರತೀಹಾರಪೀಡಾ, ಮಹಾಸಂಧಿವಿಗ್ರಹ, ಮಹಾಶ್ವಾಸಾಲಾಪಿ, ಮಹಾಭಾಂಡಾಗಾರ, ಮಹಾಸಾಧನಭಾಗ

(ರಾಜತರಂಗಿಣಿ ೪-೧೪೦, ೧೪೩).

ರಾಜಕೀಯ ಪ್ರಭುತ್ವದ ವ್ಯಾಖ್ಯೆಯು ವ್ಯಕ್ತಿಯನ್ನು ಪ್ರಜೆಯಾಗಿ ನೋಡುತ್ತದೆ. ಅದರೊಂದಿಗೆ ಪ್ರಜೆಯಾಗಿ ವ್ಯಕ್ತಿಗೆ ಕೆಲವು ನಿಯಮಗಳು ಮತ್ತು ಸಂಹಿತೆಗಳು ಇವೆಯೆಂದು ಅದು ಪ್ರತಿಪಾದಿಸುತ್ತದೆ. ಆದರೆ ಪ್ರಭುತ್ವಕ್ಕೆ ವ್ಯಕ್ತಿ ಮತ್ತು ಅವನ ವಿಶಿಷ್ಟತೆಯು ನಾಗರಿಕ ಸಂಹಿತೆಯ ದೃಷ್ಟಿಯಿಂದ ಮುಖ್ಯ. ಬೇರೊಂದು ರೀತಿಯಿಂದ ರಾಜಕಾರಣವು ವ್ಯಕ್ತಿಯನ್ನು ಅದರ ಸಾಂವಿಧಾನಿಕ ಪರಿಭಾಷೆಯೊಳಗಿನಿಂದ ವ್ಯಾಖ್ಯಾನಿಸುತ್ತದೆ. ಈ ದೃಷ್ಟಿ ರಾಜಕಾರಣವು ಮೂಲಭೂತವಾಗಿ ಹಕ್ಕುಗಳು, ಕರ್ತವ್ಯಗಳು, ನಿಯಮಗಳು ಮುಂತಾದವುಗಳೊಂದಿಗೆ ಮಾತಾಡುವ ಹಾಗೆ ಅಂತರಾಳದಲ್ಲಿ ಎಲ್ಲರೂ ಸಮಾನರಲ್ಲ ಎಂಬುದನ್ನು ಪ್ರತಿಪಾದಿಸುತ್ತದೆ. ರಾಜಕೀಯ ಪ್ರಭುತ್ವದ ದೃಷ್ಟಿಯಿಂದ ಆಸ್ತಿಯ ಯಜಮಾನಿಕೆ; ಹಕ್ಕುಗಳು; ಹಣದ ಚಲಾವಣೆ ಇವೆಲ್ಲಾ ಬೇರೆ ಬೇರೆ ರೀತಿಯವು. ಧಾರ್ಮಿಕವಾಗಿ ವ್ಯಕ್ತಿಯ ವಿಶಿಷ್ಟತೆಯ ಪ್ರಶ್ನೆಯು ಬೇರೆ ಮಾದರಿಯದು. ಧರ್ಮದ ದೃಷ್ಟಿಯಿಂದ ವ್ಯಕ್ತಿಯೆಂದರೆ-ದೇವರೆದುರು ಮಕ್ಕಳು ಅಥವಾ ದೇವರೆದುರು ಸಮಾನರು. ಕ್ರಿಶ್ಚಿಯಾನಿಟಿಯು ಮನುಷ್ಯರನ್ನು ದೇವರ ಮಕ್ಕಳೆಂದೇ ನಂಬುತ್ತಾರೆ. ದೇವರೆದುರು ಮನುಷ್ಯರೆಲ್ಲರೂ ಸಮಾನರಾದರೂ ಆಯಾಯ ಕರ್ಮಕ್ಕಾಗಿ ಅನುಸಾರವಾಗಿ ಮನುಷ್ಯರು ಭಿನ್ನರಾಗುತ್ತಾರೆ. ಜಗತ್ತಿನಲ್ಲಿ ಬೇರೆ ಬೇರೆಯವರಾಗಿ ರೂಪುಗೊಳ್ಳುತ್ತಾರೆ.

ಧಾರ್ಮಿಕ ಅಧಿಕಾರ; ರಾಜಕೀಯ ಅಧಿಕಾರ; ಕೌಟುಂಬಿಕ ಅಧಿಕಾರ; ಯಜಮಾನನು ಆಳಿನ ಮೇಲೆ ಹೊಂದುವ ಅಧಿಕಾರ; ಗಂಡನ ಅಧಿಕಾರ; ತಂದೆಯ ಅಧಿಕಾರ-ಹೀಗೆ ಅಧಿಕಾರಗಳು ಬೇರೆ ಬೇರೆ ನಮೂನೆಯಲ್ಲಿವೆ. ಅಧಿಕಾರದ ಮುಖ್ಯ ಪರಿಭಾಷೆಯೆಂದರೆ ಒಬ್ಬನು ಇನ್ನೊಬ್ಬನ ಮೇಲೆ ನಿಯಂತ್ರಣ ಸಾಧಿಸುವುದು. ಇದರಲ್ಲಿ ಸಮಾನತೆಗೆ ಅವಕಾಶವಿಲ್ಲ. ಕೆಲವು ಅಧಿಕಾರರೂಪಗಳಿಗೆ ನಿಯಮಗಳಿವೆ ಕೆಲವು ಅಧಿಕಾರಗಳಿಗೆ ನಿಯಮ; ಸಂಹಿತೆಗಳಿಲ್ಲ. ಪ್ರಾಚೀನ ಆಡಳಿತ ಕ್ರಮವು ಈ ರೀತಿ ಇತ್ತು:

ಸೇನಾಶಾಖೆಗೆ ಸೇನಾಪತಿ ಮುಖ್ಯನು. ರಾಜನ ಗೃಹಕೃತ್ಯ, ಅಂತಃಪುರ ನಿವಾಸಿಗಳ ನಿತ್ಯಜೀವನದ ಮೇಲ್ವಿಚಾರಣೆಯನ್ನು ದೌವಾರಿಕ ಮತ್ತು ಅಂತರ್ವಂಶಿಕ ಎಂಬ ಅಧಿಕಾರಿಗಳೂ ನೋಡಿಕೊಳ್ಳುತ್ತಿದ್ದರು. ಕೋಶ, ಕುಪ್ಯ, ಕೋಷ್ಠ, ಆಯುಧ ಮತ್ತು ಬಂಧನ ಶಾಖೆಗಳಿಗಾಗಿ ಕಟ್ಟಡಗಳನ್ನು ಕಟ್ಟಿಸುವುದು, ನೌಕರರ ಮೇಲ್ವಿಚಾರಣೆ ಸನ್ನಿಧಾತನ ಕೆಲಸ ಭೂಮಿಯ ಅಳತೆ, ಕರವನ್ನು ವಸೂಲಿ ಮಾಡುವುದು ಸಮೂಹರ್ತನ ಕೆಲಸ. ಖನಿ, ಸೇತು, ವನಗಳಿಂದ ಸುಂಕವಸೂಲಿಯು ಶುಲ್ಕಾಧ್ಯಕ್ಷನಿಗೆ ಸೇರಿದ್ದು. ಲೋಹ, ನಾಣ್ಯ, ಆಭರಣ ಮತ್ತು ಹವಳಾದಿಗಳ ಮಾರಾಟದ ಮೇಲ್ವಿಚಾರಣೆಯು ಪಣ್ಯಾಧ್ಯಕ್ಷರಿಗೆ ಸೇರಿದ್ದು. ಒಕ್ಕಲುತನ ಪಶುಪಕ್ಷಿಗಳ ರಕ್ಷಣೆ, ಪುಂಡರನ್ನು ಹತೋಟಿಯಲ್ಲಿಡುವುದು. ಯಾತ್ರಿಕರಿಗೆ ಮತ್ತು ಅನ್ಯದೇಶೀಯರಿಗೆ ಪರವಾನಿಗೆ ನೀಡುವುದು ನೆಯ್ಗೆ ಶಾಖೆಗಳ ಮೇಲ್ವಿಚಾರಣೆ ಇವುಗಳಿಗೆ ಸಂಬಂಧಪಟ್ಟ ಅಧಿಕಾರವನ್ನು ಸಿತಾಧ್ಯಕ್ಷ, ಸೂನಾಧ್ಯಕ್ಷ, ಮುದ್ರಾಧ್ಯಕ್ಷ, ಸೂತ್ರಾಧ್ಯಕ್ಷರು ನಿರ್ವಹಿಸುತ್ತಿದ್ದರು. ಕಾಲುದಳ ಗೋವು, ಅಶ್ವ, ಹಸ್ತಿ

ರಥ ಮತ್ತು ನಾವೆ ಮುಂತಾದ ಶಾಖೆಗಳ ಅಧಿಕಾರವು ಪತ್ತ್ಯಧ್ಯಕ್ಷ, ವಿವೀತಾಧ್ಯಕ್ಷ, ಹಸ್ತ್ಯಧ್ಯಕ್ಷ, ನಾಗವನಾಧ್ಯಕ್ಷ, ರಥಾಧ್ಯಕ್ಷ, ಮತ್ತು ನಾವಾಧ್ಯಕ್ಷರ ಕೈಲಿದ್ದಿತು ಎಂದು ಕೌಟಿಲ್ಯನು ಹೇಳುತ್ತಾನೆ. ಕೌಟಿಲ್ಯನ ಅರ್ಥಶಾಸ್ತ್ರದ ಪ್ರಕಾರ ರಾಜ್ಯದ ಆದಾಯ ವೆಚ್ಚಗಳ ಮುಖ್ಯ ಅಧಿಕಾರಿ ಸಮೂಹರ್ತ. ದ್ರೋಣಾಮುಖಕ್ಕೆ ಪ್ರದೇಷ್ಟನೂ, ಖಾರ್ವಟಿಕಕ್ಕೆ ಸ್ಥಾನಿಕನೂ, ಸಂಗ್ರಹಣಕ್ಕೆ ಗೋಪನೂ, ಗ್ರಾಮಕ್ಕೆ ಗ್ರಾಮಣಿಯೂ ಅಧಿಕಾರಿಗಳಿದ್ದರು. ಮನೆ, ಚಾವಡಿ, ತರೀಕುಷ್ಕಿ ಭೂಮಿಗಳನ್ನು ಗೊತ್ತು ಪಡಿಸುವುದು ಅವುಗಳ ಲೆಕ್ಕಪತ್ರವಿಡುವುದು ಗ್ರಾಮಣಿಯ ಕೆಲಸ.

*ವಿವರಗಳಿಗೆ ನೋಡಿ: ಸಪ್ತಾಂಗ; ಗಾವುಂಡ; ಮಂಡಲೇಶ್ವರ*

*ಎಂ. ವಿ. ಕೃಷ್ಣರಾವ್ ೧೯೫೩ ಕೌಟಿಲ್ಯ ಪುಟ. ೩೧–೩೨.*

*ಎಚ್. ತಿಪ್ಪೇರುದ್ರಸ್ವಾಮಿ ೨೦೦೭ ಕರ್ನಾಟಕ ಸಂಸ್ಕೃತಿ ಸಮೀಕ್ಷೆ ಪುಟ. ೧೭೨–೧೭೫, ೧೮೧–೧೮೩.*

## ಇ

### ೧೪೪. ಇಂದೋಳಂ

*ತಳಿರ್ತೆಳಮಾವುಮಂ ಮನಂಗೊಳೆ ನೋಡಿಯುಂ ಕಿವಿಯನಿಂ**ದೋಳಂ**ದಿಂಚರ ಕಾಂತುಮಿಂತುಕೋಮೆಳೆಯಸು ಮತ್ತೆಮೀಯೊಡಲೊಳಿರ್ದುದಿಮ್ಮೆಯ ಸೈಪು. (ಪಂಪಭಾರತ ೫–೧೯)*

*ತೋಳ ನೀಳವ ಕೆಂದಳಿರಿಂದಂ ಸಂದಣಿಸಿರ್ದ ಮದಾಳಿಯಿಂ**ದೋಳದಿಂ** ಮಲಯಾನಿಲ ಲೀಲಾಂದೋಲದಿನೊಪ್ಪೆ ಮನೋಭವಂಗಾಳುಮಿರ್ಪವೊಲಿರ್ದ್ದತಿ ರಕ್ತಾಶೋಕದ.................. (ಆದಿಪುರಾಣ ೩–೩೦)*

ಹಿಂದೋಳರಾಗಕ್ಕೆ ಇಂದೋಳವೆಂದು ಕರೆಯಲಾಗಿದೆ. ಹಿ ಕಾರಕ್ಕೆ ಇ ಕಾರ ಬರುವುದು ಸಹಜ. ಇಂದೋಳರಾಗವು ಎರಡು ಮಾರ್ಗಗಳಲ್ಲಿಯೂ (ದಕ್ಷಿಣೋತ್ತರ ಮಾರ್ಗ) ಇದು 'ಜಾಡವ' ರಾಗ; ಎಂದರೆ ಐದು ಸ್ವರಗಳುಳ್ಳದ್ದು. 'ಸಗಮಧನಿ' ಸ್ವರಗಳಿಗೇ ಇದರಲ್ಲಿ ಪ್ರದೇಶ. 'ರಿಪ' ಸ್ವರಗಳು ತಲೆಯಿಡಲಾಗದು ಆದರೆ ದಕ್ಷಿಣದಲ್ಲಿ 'ಗಮಧನಿ' ಸ್ವರಗಳೆಲ್ಲಾ ಕೋಮಲವಾದವು. ಉತ್ತರದಲ್ಲಿ ತೀವ್ರವಾದವು, ಕೋಮಲ ಸ್ವರಗಳನ್ನೇ ಇಟ್ಟುಕೊಂಡು ಔತ್ತರಾಹರು 'ಮಾಲ್‌ಕೂಸ್' ಎಂಬ ಹೆಸರಿನಿಂದ ನಮ್ಮ ಹಿಂದೋಲವನ್ನೇ ಹಾಡುವರು ಎಂದು ರಾಳಪಳ್ಳಿ ಅನಂತ ಕೃಷ್ಣಶರ್ಮ ಹೇಳುತ್ತಾರೆ. ಇದನ್ನು ಈಗ ಮಾಲಕಂಸ ರಾಗವೆಂದೂ ಕರೆಯುತ್ತಾರೆ. ಕೋಮಲ ಭಾವನೆಗಳನ್ನು

ವ್ಯಕ್ತಪಡಿಸಲು ಹಿಂದೋಳ ರಾಗವು ಸಹಕಾರಿಯಾಗಿದೆ. ಹಾಗೆಯೇ ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಕೆಲವು ರಾಗಗಳು ಕೆಲವು ಭಾವನೆಗಳಿಗೆ ಪೂರಕವಾಗಿರುತ್ತವೆ. ಸಂಗೀತ ಶಾಸ್ತ್ರದ ಪ್ರಕಾರ ರಾಗ ಮತ್ತು ಕಾಲಗಳಿಗೆ ಸಂಬಂಧವಿದೆ. ಮುಂಜಾವದಲ್ಲಿ ಮೋಹನರಾಗ ಮಧ್ಯರಾತ್ರಿಯಲ್ಲಿ ರಂಜಿನಿ ಇತ್ಯಾದಿ.

ಭಾಷಾಜನಕ ರಾಗಗಳು– ೧೫ : ಸೌವೀರ, ಕಕುಭ, ಟಕ್ಕ, ಪಂಚಮ, ಭಿನ್ನಪಂಚಮ, ಟಕ್ಕಕೈಶಿಕ, ಹಿಂದೋಲ, ಬೋಟ್ಟ, ಮಾಲವಕೈಶಿಕ, ಗಾಂಧಾರ ಪಂಚಮ, ಭಿನ್ನಷಡ್ಜ, ವೇಸರಷಾಡವ, ಮಾಲವ ಪಂಚಮ, ತಾನ, ಪಂಚಷಾಡವ

(ಸಂಗೀರ. ೧೦–೧೯, ೨೦)

*ವಿವರಗಳಿಗೆ ನೋಡಿ: ರಾಳಪಳ್ಳಿ ಅನಂತಕೃಷ್ಣಶರ್ಮ ೨೦೦೬ ಗಾನಕಲೆ ಪುಟ. ೭೨*

*ಡಾ. ಟಿ.ವಿ.ವೆಂಕಟಾಚಲಶಾಸ್ತ್ರೀ ೧೯೯೯ ಶ್ರೀವತ್ಸ ನಿಘಂಟು ಪುಟ. ೨೬೬.*

**೧೪೫. ಇಂದ್ರ**

*..........ಪಡೆದಿಂದ್ರಲೋಕವಿಭವಂ...................... ಎಂದು ಪಂಪ ಬರೆಯುತ್ತಾನೆ.*

*(ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೨–೭೬)*

ಪಂಪನ ವ್ರತದಿಂದ ಇಂದ್ರಲೋಕ ಪದವಿ ಪಡೆಯಲು ಸಾಧ್ಯವೆಂದು ಹೇಳುತ್ತಾನೆ. ಇಂದ್ರನ ಪರಿಕಲ್ಪನೆ ಜೈನರಲ್ಲಿ ಒಂದು ರೀತಿಯಲ್ಲಿರುತ್ತದೆ. ವೈದಿಕ ಧರ್ಮದಲ್ಲಿ ಮತ್ತೊಂದು ರೀತಿಯಲ್ಲಿ ಬರುತ್ತದೆ. ಇಂದ್ರ ಆಳುವವನು, ಮುಖ್ಯಸ್ಥ. ಬಹಳ ಶಕ್ತಿಶಾಲಿ ಎಂಬ ಪರಿಕಲ್ಪನೆಯು ಋಗ್ವೇದದಲ್ಲಿ ಬರುತ್ತದೆ. ಋಗ್ವೇದದ ಪ್ರಕಾರ ಅವನು ಪಾಲಕ. ಅವನು ಸ್ವರ್ಗದಲ್ಲಿರುವವನು. ಚಳಿ–ಮಳೆ–ಬಿಸಿಲಿಗೆ ಅವನು ಅಧಿದೈವ. ಇತಿಹಾಸತಜ್ಞರ ಪ್ರಕಾರ, ಮಾತೃಮೂಲೀಯ ಕುಟುಂಬವು ಅಳಿಸಿ ಹೋಗುವುದಕ್ಕೆ ಇಂದ್ರನೇ ಕಾರಣ. ಅವನಿಗೂ ಸ್ತ್ರೀದೇವತೆಯಾದ ಉಷೆಗೂ ಬಹಳ ಬಾರಿ ಯುದ್ಧವಾಗುತ್ತದೆ. ಕೊನೆಗೆ ಉಷೆಯು ಸೋಲುತ್ತಾಳೆ.

*ವಿವರಗಳಿಗೆ ನೋಡಿ: ಡಿ.ಡಿ.ಕೊಸಾಂಬಿ ೨೦೦೩ ಪುರಾಣ ಮತ್ತು ವಾಸ್ತವ.*

**೧೪೬. ಇಂದ್ರಿಯ**

*............ಸಮಸಂದು ಸಿಂದೆ ತೀಂದ್ರಿಯಸುಖದ..........*

*(ಅಜಿತತೀರ್ಥಂಕರ ಪುರಾಣ ತಿಲಕಂ ೨–೮೨–೮೩)*

ಇಂದ್ರಿಯ ಸುಖ; ವಿಷಯ ಸುಖಕ್ಕೆ ಒಗ್ಗಿದವನು ಹೇಳಿದ ಕೆಲಸ ಮಾಡದ ಆಳಿನಂತೆ ಅನೇಕ ವಿಧದ ವ್ಯಾಧಿಗಳು ಬಾಧಿಸುತ್ತಿರುವಾಗ: ನರಜನ್ಮ ದುಃಖಗಳನ್ನು ಎದುರಿಸುವಾಗ ನಿಸ್ಸಾರನಾಗುತ್ತಾನೆ. ಇಂದ್ರಿಯ ಮತ್ತು ವಿಷಯ ಸುಖಗಳು ಸಂಸಾರ ಬಂಧನಕ್ಕೆ ಕಾರಣವಾಗುತ್ತವೆಯೆಂದು ಎಲ್ಲಾ ಮತಗಳು ನಂಬುತ್ತವೆ.

ಕರ್ಮೇಂದ್ರಿಯವು ಒಟ್ಟು ಐದು:

ಕರ್ಮೇಂದ್ರಿಯಾಣಿ ವಾಕ್ಪಾಣಿಪಾದಪಾಯೂಪಸ್ಥಾಖ್ಯಾನಿ ।

ವಾಕ್ಕು, ಕೈ, ಕಾಲು, ಪಾಯು ಮತ್ತು ಉಪಸ್ಥೆ ಎಂಬುವು ಕರ್ಮೇಂದ್ರಿಯಗಳು.

(ವೇದಾಂತಸಾರ ೧೯೭೩ ಪುಟ.೪೮)

ಕರ್ಮೇಂದ್ರಿಯವು ವಾಕ್; ಪ್ರಾಣಿ; ಪಾದ; ಪಾಯು, ಉಪಸ್ಥೆ ಎಂದು ಶ್ಲೋಕವೇ ವಿವರಿಸಿದೆ. ಇದರಲ್ಲಿ ತಿಳಿಯುವ ಮುಖ್ಯ ಅಂಶವೆಂದರೆ ಕರ್ಮೇಂದ್ರಿಯವೇ ಎಲ್ಲಾ ಕೆಲಸ–ಕಾರ್ಯಗಳಿಗೆ ಮೂಲಕಾರಣ. ಆದರೆ ಕರ್ಮೇಂದ್ರಿಯದಿಂದ ಜರುಗುವ ಕರ್ಮಗಳು ಬೇರೆ ಬೇರೆ. ಉದಾಃ ಕೈ; ಕಾಲುಗಳಿಂದ ನಡೆಯುವ ಕರ್ಮ. ಕರ್ಮೇಂದ್ರಿಯಗಳು ವಾಯು; ಅಗ್ನಿ; ಜಲ; ಭೂಮಿ ಮತ್ತೆ ಆಕಾಶ ಪ್ರತ್ಯೇಕವಾದ ರಜೋಗುಣದ ಅಂಶಗಳಿಂದ ಒಂದೊಂದು ಒಂದೊಂದರಿಂದ ಕ್ರಮವಾಗಿ ಹುಟ್ಟುತ್ತವೆ.

ಆಕಾಶದ ರಜೋಂಶದಿಂದ ವಾಕ್ಕು, ವಾಯುವಿನದರಿಂದ ಕೈಗಳು, ಬೆಂಕಿಯದರಿಂದ ಕಾಲುಗಳು, ನೀರಿನದರಿಂದ ಪಾಯು ಮತ್ತು ಪೃಥ್ವಿಯದರಿಂದ ಉಪಸ್ಥೆ.

ಕರ್ಮೇಂದ್ರಿಯ ಕುರಿತು ಜೈನ ಕಾವ್ಯಗಳೂ ಪ್ರಸ್ತಾವಿಸಿವೆ. ಮತ್ತು ಕರ್ಮಕ್ಕೆ ಕರ್ಮವೇ 'ಮರಿ'ಯೆಂದು ಪ್ರತಿಪಾದಿಸಿವೆ. ಉದಾ: ನಾಗಚಂದ್ರನ ರಾಮಚಂದ್ರ ಚರಿತ ಪುರಾಣ; ಯಶೋಧರ ಚರಿತೆಯ ಹಿಟ್ಟಿನ ಹುಂಜ ಪ್ರಕರಣ; ವಡ್ಡಾರಾಧನೆಯ ವಾಯುಭೂತಿ ಪ್ರಕರಣವು ಕೂಡಾ ಇದನ್ನೇ ಸೂಚಿಸುತ್ತದೆ.

### ೧೪೭. ಇಂದ್ರಿಯನಿಗ್ರಹ

*ಸುರಲೋಕಭ್ರಷ್ಟನೆಂ ಮರ್ತ್ಯರೊಳುದಯಿಪ ತಿರ್ಯಕ್ತ್ವದೊಳ್ ನಿಲ್ವ ಚಂಡಾ*
*ಲರ ಕೆಯ್ಯೊಳ್ ಬೀಳ್ವ ತೋಲ್ಪಂಜರದ ಪಡಿಕೆಯೊಳ್ ನಿಲ್ವ ದುರ್ವಾರದುಃಖೋ*
*ತ್ಕರಮೆಲ್ಲಂ ನೋಡಲೆನ್ನಿಂ**ದ್ರಿಯನಿವಹದ** ದೋಷಂ ದಲಿಂ ಮೀಱದಂತಾ*
*ಗಿರಿಸಲ್ವೇಟ್ಕೆಂದವಂ* ***ನಿಗ್ರಹಿಪ*** *ನಿಯಮದಿಂ ಮೌನದಿಂದಿರ್ದೆನಾಗಳ್............*

*(ಕರ್ಣಾಟಕ ಕಾದಂಬರಿ, ೧೦–೪೬)*

ನಾನು ದೇವಲೋಕದಿಂದ ಕೆಳಗಿಳಿದೆ. ಮನುಷ್ಯ ಜಾತಿಯಲ್ಲಿ ಹುಟ್ಟಿದೆ. ಹಕ್ಕಿಯಾಗಿ ಹುಟ್ಟಿದೆ. ಚಂಡಾಲರ ಕೈಗೆ ಸಿಕ್ಕಿಬಿದ್ದೆ. ಹಾಗೂ ಈಗ ಚರ್ಮಪಂಜರದ ಬಂಧನಕ್ಕೆ ಒಳಪಟ್ಟೆ. ಹೀಗೆ ಈ ಸಹಿಸಲಸಾಧ್ಯವಾದ ದುಃಖ ಸಮೂಹವೆಲ್ಲ ವಿಚಾರಮಾಡಿ ನೋಡಿದರೆ ನಿಜವಾಗಿಯೂ ನನ್ನ ಇಂದ್ರಿಯಗಳ ತಪ್ಪು. ಇನ್ನು ಮೇಲೆ ಅವು ಹತೋಟಿ ಮೀರದಂತೆ ಇಟ್ಟುಕೊಂಡೇ ತೀರಬೇಕು ಎಂದು ನಿಶ್ಚಯಿಸಿ, ಸುಮ್ಮನಿದ್ದೆನು. ಎಂದು ಕರ್ಣಾಟಕ ಕಾದಂಬರಿಯಲ್ಲಿ ಬರುತ್ತದೆ. ತತ್ವಜ್ಞಾನದಲ್ಲಿ ಇಂದ್ರಿಯ ನಿಗ್ರಹಕ್ಕೆ ವಿಶೇಷ ಮಹತ್ವವಿದೆ. ಇಂದ್ರಿಯಗಳು ಐದು. ಈ ಐದು ಇಂದ್ರಿಯಗಳನ್ನು ನಿಗ್ರಹಿಸುವುದರ ಮೂಲಕ ಆಧ್ಯಾತ್ಮಿಕ ಯಶಸ್ಸನ್ನು ಸಾಧಿಸಬಹುದು ಎಂದು ವೇದಾಂತವು ಹೇಳುತ್ತದೆ. ಇಂದ್ರಿಯ ನಿಗ್ರಹವು ವ್ಯಕ್ತಿಗೆ ಸಂಬಂಧಿಸಿರುವುದು.

*ವಿವರಗಳಿಗೆ ನೋಡಿ: ಸ್ವಾಮಿ ಹರ್ಷಾನಂದ ೨೦೦೨ ವೇದಾಂತಸಾರ*

ಸ್ವಾಮಿ ಚಿನ್ಮಯಾನಂದ ೧೯೮೮ ಆತ್ಮಬೋಧ
ಸ್ವಾಮಿ ಚಿನ್ಮಯಾನಂದ ೧೯೮೧ ವಿವೇಕ ಚೂಡಾಮಣಿ

**೧೪೮. ಇಕ್ಕುಂಗೂಳ್**

*"ಪೆಱನಿಕ್ಕುಂಗೂೞಕೊಳಂ"* ಎಂದು ಪಂಪ ಹೇಳುತ್ತಾನೆ.

(ಪಂಪ ಭಾರತ ೮-೭೧)

ಹೆರವರು ಇಕ್ಕುವ ಅನ್ನ ಎಂದು ಭಾವಾರ್ಥ. ಬೇರೆಯವರು ಇಡುವ ಅನ್ನ-ವೆಂದರೆ ಅನ್ಯಾಶ್ರಯ. ಅನ್ಯಾಶ್ರಯ ಘನತೆಯಿರುವವರು ಮಾಡುವ ಕೆಲಸವಲ್ಲ. ಪಂಪನು ಬಳಸಿದ ಇಕ್ಕುಂಗೂಳ್ ಎನ್ನುವುದರಲ್ಲಿ ಅರ್ಥವು ನಿಶ್ಚಿತವಾಗಿದೆ. 'ಅನ್ಯರ ಅನ್ನದ ಋಣ' ಎಂಬುದನ್ನು ಇದು ಸೂಚಿಸುತ್ತದೆ. ಇದು ಎರಡು ರೀತಿಯದು: ಒಂದು ಅತಿಥಿ ಸತ್ಕಾರ. ಹೆರವರಿಗೆ ಅನ್ನ ನೀಡುವುದು. ಇದರಲ್ಲಿ ಆದರೋಪಾಚಾರ ಇರುತ್ತದೆ. ಇನ್ನೊಂದು ಇಕ್ಕುವ ಅನ್ನ ಅಂದರೆ ಭಿಕ್ಷಾನ್ನ, ಇದರಲ್ಲಿ ಅತಿಥಿ ಸತ್ಕಾರ ಮುಂತಾದವು ಇರುವುದಿಲ್ಲ. ಯಾರು ಭಿಕ್ಷೆ ಬೇಡುತ್ತಾರೋ ಅವರನ್ನು ಇದು ಋಣಿಗಳನ್ನಾಗಿಸುತ್ತದೆ. ಆದುದರಿಂದ ಇಲ್ಲಿ ಯಾಚಿತ ಯಾಚಕರ ನಡುವಣ ಸಂಬಂಧವು ಬೇರೆಯಾಗುತ್ತದೆ ಎಂಬುದು ಗಮನಾರ್ಹ.

ವಿವರಗಳಿಗೆ ನೋಡಿ: ಋಣ: ಜೋಳದ ಪಾಳಿ.

**೧೪೯. ಇಕ್ಕೆದಾಣ**

*ಬಗ್ಗಿಸುವ ಕೋಗಿಲೆ ಕೋಗಿಲೆಯಿರ್ಕೆದಾಣದೊಳ್*
*ಜಿನುಗುವ ತುಂಬಿ (ಆದಿಪು ೧-೬೫)*
*ಭವನಿಕ್ಕೆದಾಣಮೆಂದೊಂ*
*ದು ವಿಶೇಷ ಪ್ರೀತಿಯಿಂದೆ.......ಎಂದು ಕರ್ಣಾಟಕ ಕಾದಂಬರಿಯಲ್ಲಿ ಬರುತ್ತದೆ.*

ಇಕ್ಕೆದಾಣವೆಂದರೆ ವಾಸಸ್ಥಳ, ಬಿಡದಿ, ಸಾಮಾನ್ಯರಲ್ಲಿ ವಾಸಸ್ಥಳದ ಬಗ್ಗೆ ಕೆಲವು ರೀತಿಯ ನಂಬಿಕೆಗಳಿರುತ್ತವೆ. ವಾಸಸ್ಥಳವು ಶುದ್ಧವಾಗಿರಬೇಕೆಂಬುದು ಒಂದು ವಿಶೇಷವಾಗಿದೆ. ಎರಡನೆಯದಾಗಿ ಗೃಹಾಂಗ ಶುದ್ಧಿಯೆಂಬುದು ಅತ್ಯಂತ ಪ್ರಾಚೀನವಾದ ಪರಿಕಲ್ಪನೆಯಾಗಿದೆ. ಮೂರನೆಯದಾಗಿ ವಾಸಸ್ಥಳವನ್ನು ಎತ್ತರದ ಜಾಗದಲ್ಲಿ ರಚಿಸುತ್ತಾರೆ. ನಾಲ್ಕನೆಯದಾಗಿ ಮನೆಯ ಸುತ್ತ ಅಥವಾ ಅರಮನೆಯ ಸುತ್ತ ಕೋಟೆಯನ್ನು ಕಟ್ಟುತ್ತಾರೆ. ವಾಸಸ್ಥಳ; ಬಿಡದಿಯ ಜಾಗ ಸುರಕ್ಷಿತವಾಗಿರಬೇಕೆಂಬುದು ಮುಖ್ಯ. ಗಮನಾರ್ಹ ಅಂಶವೆಂದರೆ ಬೀಡು ರಚಿಸುವ ಕಾರ್ಯ. ರಾಜರು ದೂರ ಪ್ರಯಾಣ ಕೈಗೊಂಡಾಗ ಸುರಕ್ಷಿತವಾದ ಸ್ಥಳದಲ್ಲಿ ಬಿಡದಿ ರಚಿಸುತ್ತಾರೆ. ಇದು ಶಾಶ್ವತವಲ್ಲ. ಶಾಶ್ವತವಾದ ಬಿಡದಿಯನ್ನು ರಚಿಸುವಾಗಲೂ ಅದರ ವಾಸ್ತುಶಿಲ್ಪವನ್ನು ನೋಡಲಾಗುತ್ತದೆ.

ವಿವರಗಳಿಗೆ ನೋಡಿ: ಗೃಹಾಂಗ.

೧೫೦. ಇಟ್ಟಳಂ

*ಬಟ್ಟಗೊಡೆ ಚಂದ್ರಕಾಂತಿಯನುಟ್ಟುಂಬರಿಗೊಳೆ ಪೊದಟ್ದು ಕೃಷ್ಣಾಜಿನ*
*ಮೊಂದಿಟ್ಟಳಮನೆಯೆ ಬೆಡಂಗಂ ಪುಟ್ಟಿಸೆ ಗಾಡಿಗಳೊಳೆಸವ ವೀಣಾಕ್ವಣಿತಂ*
*(ಪಂಪಭಾರತ ೬-೯)*

*ಮೆಟ್ಟುವಳ್ ನೋಡಿದರೆಲ್ಲರಂ ಪಿಡಿದು ಮೆಟ್ಟಿದಳಿಟ್ಟಳಮಾಯ್ತು ದೇಸಿಕೆಯ್ಯೊಡಿದು ದಿಲ್ಲ ಆರ್ಗಮೆನೆ ವಿಸ್ಮಯಮಾಗಿರೆ ತನ್ನಮುಂದೆ ಬಂದಾಡಿದಳಾ ತಿಲೋತ್ತಮೆ (ಪಂಪಭಾರತ. ೭-೯೧)*

ಅಧಿಕವಾಗಿ, ದಟ್ಟವಾಗಿ ಎಂದರ್ಥ. ಇಟ್ಟಳಂ ಆಯ್ತು ಎಂದರೆ ಅತಿಶಯವಾಯಿತು. ಕೃಷ್ಣಾಜಿನವೇ ಅತಿಶಯವಾಗಿ ಕಾಣಿಸಿತು. ಅವಳ ಇಟ್ಟ ಅಡಿ (ಮೆಟ್ಟು – ಕನ್ನಡಪದ) ಇಟ್ಟಳವಾಯಿತು ಎಂದರೆ ಅಧಿಕವೆಂಬಂತೆ ತೋರಿತು.

ನೃತ್ಯದಲ್ಲಿ ಇಡುವ ಹೆಜ್ಜೆಗಳೂ ಕೂಡಾ ತುಂಬಾ ಮುಖ್ಯವಾದುದು. ಪಾದವೂರುವ ರೀತಿಯಲ್ಲಿ ವ್ಯತ್ಯಾಸವಿದೆ. ಯಕ್ಷಗಾನದ ಅಬ್ಬರದ ಕುಣಿತಕ್ಕೆ ಹಿಮ್ಮಡಿಯೂರಬೇಕಾಗುತ್ತದೆ. ಹಿಮ್ಮಡಿಯನ್ನು ಊರಿದಾಗ ದೇಹವು ತುಂಬಾ ಧೀಮಂತಿಕೆಯನ್ನು ತೋರಿಸುತ್ತವೆ. ಮುಮ್ಮಡಿಯನ್ನು ಊರುವ ಸಂದರ್ಭದಲ್ಲಿ ಲಾಲಿತ್ಯವು ಮುಖ್ಯವಾಗುತ್ತದೆ. ದೇಹದ ಚಲನೆಯು ಕೂಡಾ ಸುರಳೀತವಾಗುತ್ತದೆ. ಸಾಮಾನ್ಯವಾಗಿ ಭರತನಾಟ್ಯದಲ್ಲಿ ಮುಮ್ಮಡಿ ಯನ್ನು ಹೆಚ್ಚು ಬಳಸಲಾಗುತ್ತದೆ. ಇದರಿಂದ ದೇಹದ ಚಲನೆಯು ಸಲೀಸಾಗುತ್ತದೆ ಯೆಂಬುದು ಗಮನಾರ್ಹ. ಎರಡನೆಯದಾಗಿ ನಾಟ್ಯದಲ್ಲಿ ದೇಹವನ್ನು ಮೂರು ಭಂಗಿಯಲ್ಲಿ ಗುರುತಿಸುತ್ತಾರೆ. ಸೊಂಟದಲ್ಲಿ ಕೆಳಗಿನ ಭಾಗದ ಚಲನೆ (ಕಾಲುಗಳು) ಸೊಂಟದಿಂದ ಮೇಲೆ ಕೊರಳಿನ ತನಕ ಮತ್ತೊಂದು ಭಾಗ. ಮುಖವು ಮೂರನೆಯಭಾಗ. ಆದುದರಿಂದಲೇ ಇದನ್ನು ತ್ರಿಭಂಗಿಯೆಂದು ಕರೆಯುತ್ತಾರೆ.

೧೫೧. ಇನ್ನುಣಿಸು

*ಮಣಿಕನಕಾದಿವಸ್ತುಗಳನೊಂದುಮನೊಲ್ಲೆನವೇವುವಾದವಿನ್ನುಣಿಸೆನಗಲ್ತಿ ಮೆಯ್‌ಸಸಿದುಜೊಮ್ಮನೆಪೋದಪುದೆನ್ನ*
*ವೇಟ್ಟುದಂತಣಿಯಣಲೀವೊಡೀವುದೆನೆ...................... (ಪಂಪಭಾರತ– ೫–೭೧)*

ರುಚಿಯಾದ ಅಂದರೆ ಊಟ. ಇನಿದಾದ ಉಣಿಸು–ಇನ್ನುಣಿಸು. ಊಟವು ರುಚಿಕರವಾಗಿರಬೇಕೆಂಬುದು ಇಲ್ಲಿಯ ಭಾವ.

ಮಣಿಕನಕಾದಿಗಳೆಂಬ ವಸ್ತುಗಳನ್ನು ನಾನು ಅಪೇಕ್ಷಿಸುವುದಿಲ್ಲ. ಅವು ನನ್ನ ಮಟ್ಟಿಗೆ ದೊಡ್ಡವು ಅಲ್ಲ. ಆದರೆ ಇನ್ನುಣಿಸು ಬೇಕು ಎಂದು ಅಗ್ನಿಯು ಅರ್ಜುನನಲ್ಲಿ ಕೇಳುತ್ತಾನೆ. ಇದು ಖಾಂಡವವನದಹನಕ್ಕೆ ಕಾರಣವಾಗಿದೆ. ಬೆಂಕಿಗೆ ರುಚಿಯಾದುದು ವನದಹನ. ಕತೆಯ ಪ್ರಕಾರ ಅಗ್ನಿಗೆ ಹಸಿವಾಗಿದೆ. ಹಸಿವನ್ನು ನೀಗಿಸಲು ಅವನು ಅರ್ಜುನನಲ್ಲಿ ಬಂದು ಇನ್ನುಣಿಸುಬೇಕು ಎಂದು ಹೇಳುತ್ತಾನೆ. ಅವನು ಮಣಿಕನಕಾದಿ ವಸ್ತುಗಳನ್ನು

ಬೇಡುವುದಿಲ್ಲ. ಖಾಂಡವ ವನದಹನದನ್ನು ಕೇಳುತ್ತಿದ್ದಾನೆ. ಅದು ಮುಖ್ಯ. ಮಹಾಭಾರತ ದಲ್ಲಿ ತಿರುವಿಗೆ ಕಾರಣವಾದ ಕ್ರಿಯೆಗಳಲ್ಲಿ ಇದೂ ಒಂದು.

**೧೫೨. ಇಪ್ಪತ್ತೆಂಟು ಮೂಲಗುಣಗಳು**

*ಮತ್ತಮಿವು ಮೊದಲಾಗಿರ್ಪತ್ತೆಂಟುಮೂಲಗುಣಂಗಳೊಳ ಮುತ್ತರಗುಣಂಗಳೊಳ* ***ಮುತ್ತರೋತ್ತರಂ ನೆಗಟ್ಟು,***................ *(ಆದಿಪುರಾಣ. ೬-೨೮.ವ)*

ಜೈನಧರ್ಮದ ಪ್ರಕಾರ ಇಪ್ಪತ್ತೆಂಟು ಮೂಲಗುಣಗಳು ಹೀಗಿವೆ: ೫ ಮಹಾವ್ರತಗಳು, ೫ ಸಮಿತಿಗಳು, ೫ ಇಂದ್ರಿಯಗಳ ನಿಗ್ರಹ, ೬ ಆವಶ್ಯಕ ಕ್ರಿಯೆಗಳು, ಸ್ನಾನಮಾಡದಿರುವುದು, ಸ್ವಚ್ಛವಾದ ನೆಲದ ಮೇಲೆ ಮಲಗುವುದು. ವಸ್ತ್ರತ್ಯಾಗ, ಒಪ್ಪತ್ತು ಸ್ವಲ್ಪ ಆಹಾರ ತೆಗೆದುಕೊಳ್ಳುವುದು. ನಿಂತು ಆಹಾರ ತೆಗೆದುಕೊಳ್ಳುವುದು, ಕೂದಲು ಕಿತ್ತುಕೊಳ್ಳುವುದು ಇವು ಮಹಾವ್ರತಧಾರಿಗಳಾದ ಮುನಿಗಳ ಮೂಲಗುಣಗಳು. ಗುಣಗಳನ್ನು ಜೈನರು ಸ್ವೀಕರಿಸುವ ಕ್ರಮ ಬೇರೆ. ವೈದಿಕ ಮತಾವಲಂಬಿಗಳು ಗುಣಗಳನ್ನು ಕೇವಲ ಮೂರೇ ಎಂದು ವರ್ಗೀಕರಿಸಿದ್ದಾರೆ. ಅದು ರಾಜಸ, ತಾಮಸ, ಸಾತ್ವಿಕ, ಮತ್ತು ಜೈನರು ಯಾವುದನ್ನು ಇಪ್ಪತ್ತೆಂಟು ಮೂಲ ಗುಣಗಳೆಂದು ಕರೆದಿದ್ದಾರೋ ಅದರ ಬಗ್ಗೆ ವೈದಿಕ ಮತಾವಲಂಬಿಗಳು ಟೀಕಿಸಿದ್ದಾರೆ.

*ವಿವರಗಳಿಗೆ : ಟಿ.ಕೇಶವಭಟ್ಟ ೨೦೧೦ ವಡ್ಡಾರಾಧನೆ ಗದ್ಯಾನುವಾದ (ಸುಕುಮಾರ ಸ್ವಾಮಿಯ ಕತೆ)*

**೧೫೩. ಇಷ್ಟಿ**

*ಸೆಣಸುಳ್ಳುದ್ವತ್ತರಂ ತಳ್ತಿಱಿಯದೆ ಚತುರಂಬೋಧೀ ಪರ್ಯಂತಮಂಧಾ*
*ರುಣಿಯಯಂ ತಾಂಪೋಗಿ ಬಾಯ್ಕೇಳಿಸದೆ ಮುಂಜನಕ್ಕಿಷ್ಟಿವಿಘ್ನಗಳಂ ದಾ।*
*ರುಣದೈತ್ಯರ್ ಮಾಡೆ ನೀಡಿಲ್ಲದೆ ಸಲೆ ಚಲದಾಟಂದು ಕೊಂದಿಕ್ಕದೊರ್ವಂ*
*ಗುಣಮುಂಟೆಂದುದು ಪಟ್ಟಿರ್ಪನನಣಮೆ ನಿರುದ್ಯೋಗಿಯಂ ಭೂಪನೆಂಬರ್*
*(೪-೧೧)*

ಅಸೂಯೆಯಿಂದ ಕೂಡಿ ದಾರಿತಪ್ಪಿ ನಡೆಯುವವರನ್ನು ಸಂಧಿಸಿ ಕತ್ತರಿಸದೆ, ನಾಲ್ಕು ಸಮುದ್ರದಿಂದ ಸುತ್ತುವರಿಯಲ್ಪಟ್ಟ ಭೂಮಂಡಲವನ್ನು ತನ್ನ ಆಜ್ಞಾಧೀನವನ್ನಾಗಿ ಮಾಡಿಕೊಳ್ಳದೆ ಋಷಿಗಳ ಯಜ್ಞಕ್ಕೆ ವಿಘ್ನಮಾಡುತ್ತಿರುವ ದುಷ್ಟರಾಕ್ಷಸರನ್ನು ಸ್ವಲ್ಪವೂ ಸಾವಕಾಶವಿಲ್ಲದೆ ಪ್ರತಿಭಟಿಸಿ ಕೊಂದಿಕ್ಕದೆ ತನ್ನಲ್ಲಿ ಗುಣವುಂಟೆಂದು ಹೇಳುತ್ತಾ ಒಬ್ಬ ನಿರುದ್ಯೋಗಿಯನ್ನು ರಾಜನೆನ್ನುತ್ತಾರೆಯೆ? ಎಂಬುದು ಭಾವಾರ್ಥ. ಇಷ್ಟಿಯೆಂದರೆ ಯಾಗ, ಯಾಗ ರಕ್ಷಣೆಯನ್ನು ಮಾಡಬೇಕಾದುದು ರಾಜನ ಕರ್ತವ್ಯವೆಂದು ಪಂಪನು ವಿವರಿಸುತ್ತಾನೆ. ಯಾಗದ ರಕ್ಷಣೆಯು ರಾಜನ ಕರ್ತವ್ಯ. ಇದು ಯಾಗದ ಪಾವಿತ್ರ್ಯವನ್ನು ಸೂಚಿಸುತ್ತದೆ. ಯಾಗಪ್ರಲೋಕ ಕಲ್ಯಾಣಕ್ಕೆ ಎಂಬ ಭಾವನೆಯು ಇಲ್ಲಿ ಮುಖ್ಯ.

೧೫೪. ಇಟ್ಕಿಟ್

*ಉನ್ನತ ಮಸ್ತಕಸ್ಥಳದೊಳ್ ಅಂಬುಗಪಾಡ್ವಿದಿರ್ದೊಡೆತ್ತಿಮಿತ್ತೆನ್ನೆಟಿಶೆಂದು ಬಲ್ದಡಿಗರಿಟ್ಕಿಟಿಕೆನೊಳ್ ಕೀಟಿಸೊಂದೆನೆನ್ನದ:............ (ಪಂಪಭಾರತ ೧೧-೧೩)*

ತಲೆಯ ಮೇಲೆ ಬಾಣಗಳು ನೆಟ್ಟಿರಲು ಕೆಲವರು ಇಕ್ಕುಳದಿಂದ (ಇಟ್ಕಟ್) ಅದನ್ನು ತೆಗೆಯುತ್ತಿದ್ದರು. ಇಟ್ಕಿಟ್ = ಎಂಬುದು ವಿಜಾತೀಯ ಸಂಯುಕ್ತಾಕ್ಷರದಿಂದ ಕೂಡಿದ ಪದ. ವಿಜಾತೀಯ ಸಂಯುಕ್ತಾಕ್ಷರವು ಹೊಸಗನ್ನಡದಲ್ಲಿ ಸಜಾತೀಯವಾಗಿ ಪ್ರಯೋಗವಾಗುತ್ತವೆ.

ಉದಾ:- ಅಟ್ಕಿರ್> ಅಕ್ಕರು

ಬಿಟ್ದೆ > ಬಿದ್ದೆ

ಇಲ್ಲಿ ಇಟ್ಕಿಟ್ > ಇಕ್ಕಳು ಎಂದಾಗಿದೆ. ಇಕ್ಕಳ (ಇಕ್ಕುಳ)ವು ಕಮ್ಮಾರರು ಹೆಚ್ಚಾಗಿ ಬಳಸುವ ಒಂದು ಸಾಧನ ವಸ್ತುಗಳನ್ನು ಹಿಡಿಯಲು ಇಕ್ಕುಳವನ್ನು ಬಳಸುತ್ತಾರೆ. ಇದರಲ್ಲಿ 'ಇರ್ = ಎಂದರೆ ಎರಡು ಅಂದರೆ ವಸ್ತುವಿನ ಎರಡು ತುದಿಗಳನ್ನು ಹಿಡಿದುಕೊಳ್ಳಲು ಅನುಕೂಲವಾಗುವ ಸಾಧನವಿದು. ಇದರ ಹಾಗೆ ಕೆಲಸ ಮಾಡುವ ಚಿಮ್ಮಟಿಗೆ ಎಂಬ ಸಾಧನವೂ ಇದೆ. ಸುತ್ತಿಗೆ, ಚಾಣ, ಇಕ್ಕುಳಗಳನ್ನೆಲ್ಲಾ ಅಲ್ಲಿಟ್ಟು ನಶ್ಯದ ಡಬ್ಬಿ ತೆಗೆದುಕೊಂಡರು. (ನನ್ನೂರು – ೧೭೮)

ಕಬ್ಬಿಣದ ಕೆಲಸವನ್ನು ಮಾಡುವ ಕಮ್ಮಾರರ ಉಲ್ಲೇಖ ಹಲವು ಶಾಸನಗಳಲ್ಲಿದೆ. ಕಾವ್ಯಗಳೂ ಅವರ ಕಾರ್ಯವೈಖರಿಯನ್ನು ಬಣ್ಣಿಸಿವೆ. ಕಮ್ಮಾರರು ಕೆಲಸ ಮಾಡುವ ಸ್ಥಳಕ್ಕೆ 'ಕಮ್ಮಾರ ಶಾಲೆ' ಎಂದು ಕರೆಯುತ್ತಾರೆ. ಈಗಲೂ ಹಳ್ಳಿಗಳಲ್ಲಿ ಈ ಪದವೇ ಬಳಕೆಯಲ್ಲಿರುವುದು ಗಮನಾರ್ಹ. ಅವರು ಈ ಸಾಲೆಯಲ್ಲಿ ಬಳಸುವ ಕೆಲವು ಸಾಧನಗಳು- ತಿದಿ, ಉಳಿ, ಸುತ್ತಿಗೆ, ಚಾಣ, ಬಾಚಿ ಇತ್ಯಾದಿ. "ಕಬ್ಬಿಣವು ಎಷ್ಟು ಕಾಯ್ದು ಮೃದುವಾದರೂ ಕಮ್ಮಾರರಿಲ್ಲದೆ ಖಡ್ಗಾದಿ ಶಸ್ತ್ರಗಳಾಗುವುದಿಲ್ಲ" ಎಂಬ ಮಾತು ನಯಸೇನನ ಧರ್ಮಾಮೃತದಲ್ಲಿದೆ. (೭-೪೭) ರಾಜ್ಯದ ಯುದ್ಧ ಸಂದರ್ಭದಲ್ಲಿ ಶಸ್ತ್ರಗಳನ್ನು ತಯಾರಿಸಲು ಕಮ್ಮಾರರು ನೆರವಾಗುತ್ತಿದ್ದರು. ಒಕ್ಕಲಿಗರಿಗೆ ಹಾಗೂ ಮನೆವಾಳ್ತೆಗೆ ಬೇಕಾದ ಸಾಧನಗಳನ್ನು ಕಮ್ಮಾರರು ತಯಾರಿಸಿಕೊಡುತ್ತಿದ್ದರು. ರಾಜರು ಇವರಿಗೆ ವೇತನವನ್ನು ಕೊಡುತ್ತಿದ್ದರು. ಒಕ್ಕಲಿಗರು ಆಯವನ್ನು ನಿಗದಿಪಡಿಸಿ ನೀಡುತ್ತಿದ್ದರೆಂದು ಇತಿಹಾಸವು ತಿಳಿಸುತ್ತದೆ.

## ಈ

### ೧೫೫. ಈಶಾನಕಲ್ಪ

*ಅಂತಾ ದೇವನನೀಶಾನಕಲ್ಪದಿಂದತಿಪ್ರೀತಿವರ್ಧನಕರಮೆಂಬ ಮದ್ವಿಮಾನಮಂ ಪ್ರೀತಿವರ್ಧನಕರಮಾಗೇಳಿಸಿಕೊಂಡುಯ್ದು ಮದೀಯಕಲ್ಪದೊಳಗಗ್ಗಳ............*

*(ಆದಿಪುರಾಣ ೩-೫೮ ವ)*

ಜೈನಧರ್ಮದಲ್ಲಿ ಕಲ್ಪವೆಂದರೆ ವಿಶೇಷ ಅರ್ಥವಿದೆ. ವಾಸ್ತವವಾಗಿ ಕಲ್ಪವೆಂದರೆ 'ಯುಗ' ಎನ್ನುವ ಅರ್ಥದಲ್ಲಿ ಬಳಕೆಯಾಗುತ್ತದೆ. ಆದರೆ ಜೈನ ಧರ್ಮದಲ್ಲಿ ಸೌಹಾರ್ದ, ಈಶಾನ; ಸನತ್ಕುಮಾರ, ಮಹೇಂದ್ರ, ಬ್ರಹ್ಮ, ಬ್ರಹ್ಮೋತ್ತರ, ಲಾಂತವ, ಕಾಪಿಷ್ಠ, ಶುಕ್ರ, ಮಹಾಶುಕ್ರ, ಶತಾರ, ಸಹಸ್ರಾರ; ಆನತ, ಪ್ರಾಣತ, ಅರುಣ, ಅಚ್ಯುತ ಎಂಬ ಹದಿನಾರು ಬಗೆಯ ಸ್ವರ್ಗ. ಪಂಪ ಇಲ್ಲಿ ಈಶಾನ ಕಲ್ಪದ ಬಗೆಗೆ ಹೇಳಿದ್ದಾನೆ.

ಈಶಾನಕಲ್ಪ (೩-೫೮ ವ): ಹದಿನಾರು ಸ್ವರ್ಗಗಳಲ್ಲಿ ಎರಡನೆಯದು.

ಲಲಿತಾಂಗನಿಗೆ ದೊರೆತ ಈಶಾನ್ಯ ಕಲ್ಪದ ಸುಖವನ್ನು ಪಂಪ "ಇದು ಸುಖದೊಂದು ತುತ್ತತುದಿ ರಾಗದ ಮೊತ್ತ ಮೊದಲ್ ನಿರಂತರಾಭ್ಯುದಯ ಸಾಗರಂ..." ಎಂದು ಸುಂದರವಾಗಿ ವರ್ಣಿಸುತ್ತಾನೆ.

ಜೈನ ಸಾಹಿತ್ಯದಲ್ಲಿ 'ಕಲ್ಪ'ಗಳ ಪರಿಕಲ್ಪನೆಗಳು ವಿಶಿಷ್ಟವಾಗಿವೆ. ಒಂದೊಂದು ಕಲ್ಪದಲ್ಲಿಯೂ ಒಂದೊಂದು ರೀತಿಯ ಸುಖಗಳಿರುತ್ತವೆ.

*ವಿವರಗಳಿಗೆ ನೋಡಿ: ಸಿ.ವೀರಣ್ಣ ೧೯೮೬ ಪ್ರಾಚೀನ ಸಾಹಿತ್ಯ: ರಾಜಸತ್ತೆಯ ವೈಭವದ ಕಾಲ ಪುಟ. ೧೧೮-೧೧೯*

*ಹಿಮ್ಮತಲಾಲ ಜೇಠಾಲಾಲ ಶಾಹ (ಮೂಲ) ಶ್ರೀ ಎಂ. ಬಿ. ಪಾಟೀಲ ೨೦೦೪ ಸಮಯಸಾರ*

*ಸ್ವಾಮಿ ಸಮಂತ ಭದ್ರಾಚಾರ್ಯದೇವ ೨೦೦೭ ರತ್ನಕರಂಡ ಶ್ರಾವಕಾಚಾರ*

### ೧೫೬. ಈಹಾಮೃಗ

*................ಈಹಾಮೃಗಮುಂ..............*

*(ಅಜಿತ ತೀರ್ಥಂಕರ ಪುರಾಣ ತಿಲಕಂ ೫ - ३೦. ವ)*

ದೇವತೆ ಮಾನವ ಪಾತ್ರಗಳ ಸಮ್ಮಿಶ್ರ ವಸ್ತು. ಮಾನವನು ನಾಯಕ ಶೃಂಗಾರ-ಹಾಸ್ಯಗಳ ಹೊರತು ಬೇರೆ ರಸ ನಾಲ್ಕು ಅಂಕಗಳು. ಉದ್ಧತವಾದ ಪುರುಷ ಪಾತ್ರಗಳು. ಸ್ತ್ರೀಯ ರೋಷದಿಂದ ಉದ್ಭವಿಸುವ ವಸ್ತು ಗಲಭೆ, ಹೊಡೆದಾಟ, ಸ್ತ್ರೀ-ಅಪಹರಣ ವನ್ನೊಳಗೊಂಡ ಶೃಂಗಾರ. ಸ್ತ್ರೀಯರು ಮಾತ್ರ ಸ್ವರ್ಗಲೋಕದ ಸ್ತ್ರೀಯರಾಗಿರಬೇಕು. ನಾಟ್ಯಶಾಸ್ತ್ರದಲ್ಲಿ ಇದು ಉಲ್ಲೇಖಿತವಾಗಿದೆ. 'ಅಜಿತ ತೀರ್ಥಕರ ಪುರಾಣ'ದಲ್ಲಿ ಬರುತ್ತದೆ. (೫-३೦ವ) ಇದು ರೂಪಕಗಳಲ್ಲಿ ಒಂದು: ಇದರ ವಸ್ತು ಮಿಶ್ರ. ದಿವ್ಯಸ್ತ್ರೀಯನ್ನು ಅವಳ ಇಷ್ಟಕ್ಕೆ ವಿರುದ್ಧವಾಗಿ ಹೊತ್ತುಕೊಂಡು ಹೋಗುವುದು ಕ್ರಿಯೆ. ನಾಯಕನಲ್ಲಿ

ಧೀರೋದ್ಧತ ಲಕ್ಷಣಗಳಿರುತ್ತವೆ. ಇವನಲ್ಲಿ ಶೃಂಗಾರಾಭಾವವಿರುತ್ತದೆ. ನಾಲ್ಕು ಅಂಕಗಳಿರುತ್ತವೆ. ಮೂರು ಸಂಧಿಗಳಿರಬೇಕು (ಮುಖ, ಪ್ರತಿಮುಖ, ನಿರ್ವಹಣ). ಧೀರೋದ್ಧತನೇ ಆದ ಪ್ರತಿನಾಯಕ ಅಯುಕ್ತವಾಗಿ ಆಚರಿಸುತ್ತಾನೆ. ಯುದ್ಧವನ್ನು ತೋರಿಸುವಂತಿಲ್ಲ. ಒಳ್ಳೆಯವನ ಸಾವು ಬರುವಂತೆ ಆಗಬಹುದು. ಆದರೆ ಅದನ್ನು ತೋರಿಸಬಾರದು.

*ವಿವರಗಳಿಗೆ ನೋಡಿ: ನಾಟಕ, ಪಗರಣ, ಅಂಕ.*

## ಉ

### ೧೫೭. ಉಂಗುರ

'ಅಂಗುಲೀಯಕಂ', ಮತ್ತು 'ಊರ್ಮಿಕಾ' ಎಂದು ಎರಡು ರೀತಿಯ ಉಂಗುರವಿದೆಯೆಂದು ನಾಗವರ್ಮನು 'ಅಭಿಧಾನ ರತ್ನಮಾಲಾ ಕರ್ಣಾಟಕ ಟೀಕೆ'ಯಲ್ಲಿ ಹೇಳುತ್ತಾನೆ (೪೦೫). ಈ ಕುರಿತಂತೆಯೂ ಅನೇಕ ಕಡೆ ಉಲ್ಲೇಖಗಳಿವೆ. ಉದಾ: 'ಧರ್ಮಾಮೃತ'ದಲ್ಲಿ (೪-೧೪೩), 'ರಾಮಚಂದ್ರ ಚರಿತ ಪುರಾಣ' (೫-೪೨ವ)

ಕಾಲುಂಗುರವು ಸೌಭಾಗ್ಯ ಸೂಚಕವೆಂದು ಪರಂಪರಾಗತವಾಗಿ ಅಂಗೀಕೃತವಾಗಿದೆ ಕಾಲ್ಬೆರಳಿನ ಉಂಗುರಕ್ಕೆ ಕಾಲುಂಗುರ, ಸುತ್ತುಂಗುರ, ಪಿಲ್ಲಿ, ಕಿವಿಪಿಲ್ಲಿ, ಹಿರಿಪಿಲ್ಲಿ, ಮಿಂಚು ಇತ್ಯಾದಿ ಹೆಸರುಗಳಿವೆ.

*ವಿವರಗಳಿಗೆ ನೋಡಿ: ಚಿದಾನಂದಮೂರ್ತಿ ಎಂ. ೧೯೭೭ ಗ್ರಾಮೀಣ ಪುಟ. ೧೫೪*

### ೧೫೮. ಉಂಡಿಗೆಸಾಧ್ಯಂ ಮಾಡು

*ಅರಿಕೇಸರಿ ತೆಂಕನಾಡಂ.... ಒಂದೆ ಬಿಲ್ಲೊಳು**ಂಡಿಗೆ ಸಾಧ್ಯಂ ಮಾಡಿ** ಪಶ್ಚಿಮ ದಿಗ್ವಿಭಾಗಾಭಿಮುಖನಾಗಿ ಬಂದು (ಪಂಪಭಾರತ ೪-೩೧ವ)*

ಉಂಡಿಗೆಯೆಂದರೆ ಉಂಡೆ; ಗಂಟಲು; ಅಧೀನ; ವಶಮಾಡು. ಅರ್ಜುನನು ತೆಂಕನಾಡನ್ನು ಒಂದೆ ಬಿಲ್ಲಿನ ಮೂಲಕ ವಶಪಡಿಸಿಕೊಂಡನು ಎಂದು ಭಾವಾರ್ಥ. ಉಂಡಿಗೆ ಎಂದರೆ ಮುದ್ರೆ ಎಂದರ್ಥ.

ರಾಜರು ತಾವು ಯುದ್ಧಗಳಲ್ಲಿ ಗೆದ್ದ ರಾಜ್ಯಗಳಿಗೆ ತಮ್ಮ ಮುದ್ರೆ ಒತ್ತಿ, ರಾಜ್ಯ ತಮ್ಮದೆಂದು ಘೋಷಿಸುವುದನ್ನು 'ಅಂತು ಪಟ್ಟಂಡ ಮಂಡಲಮನ್ ಉಂಡಿಗೆ ಸಾಧ್ಯಂ ಮಾಡಿ'ದನೆಂದು ಹೇಳಲಾಗುತ್ತಿತ್ತು.

ಪ್ರಾಚೀನ ಕರ್ನಾಟಕದಲ್ಲಿ ಈಗಿನ ರಹದಾರಿಗಳನ್ನು (Pass Ports) 'ಉಂಡಿಗೆ'ಗಳೆಂದು ಕರೆಯುತ್ತಿದ್ದರು. ಉಂಡಿಗೆಗಳ ಮೇಲೆ ರಾಜ್ಯದ ರಾಜನ ಲಾಂಛನವನ್ನು ಒತ್ತುತ್ತಿದ್ದರು. ಗಂಗವಂಶದ ಉಂಡಿಗೆಯ ಮೇಲೆ ಆನೆಯ ಚಿತ್ರದ ಮುದ್ರೆಯಿದೆ.

ಆದ್ದರಿಂದ ಒಂದು ಪರರಾಜ್ಯವನ್ನು ತನ್ನ ವಶಕ್ಕೆ ತೆಗೆದುಕೊಳ್ಳುವುದನ್ನು 'ಉಂಡಿಗೆಗೇಜೆಸು' ಎಂದೂ ಕರೆಯುತ್ತಿದ್ದರು. ಏಕೆಂದರೆ ಆ ವಶವಾದ ರಾಜ್ಯದಲ್ಲಿ ಗೆದ್ದ ರಾಜನ ಉಂಡಿಗೆಯ ಬೆಲೆಯು ಪ್ರಾಪ್ತವಾಗುತ್ತಿದ್ದಿತು. ಪಂಪನಲ್ಲಿ ಬರುವ 'ಉಂಡಿಗೆ ಸಾಧ್ಯಂ ಮಾಡು' ಎಂಬ ಉಕ್ತಿಗೂ ಇದೇ ಅರ್ಥವಿದೆ.

*ವಿವರಗಳಿಗೆ ನೋಡಿ: ಸಿ.ವೀರಣ್ಣ ೧೯೮೬ ಪ್ರಾಚೀನ ಸಾಹಿತ್ಯ: ರಾಜಸತ್ತೆಯ ವೈಭವದ ಕಾಲ ಪುಟ. ೧೩೨-೧೩೮*

*ಡಾ. ಎಂ. ಚಿದಾನಂದ ಮೂರ್ತಿ ೨೦೦೮*

*ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪುಟ. ೩೭೫, ೭೬*

**೧೫೯. ಉಕ್ತಿಭೇದ**

ನೃಪತುಂಗನು ದಂಡಿಯನ್ನನುಸರಿಸಿ ದಕ್ಷಿಣೋತ್ತರಗಳೆಂಬ ಎರಡೇ ಮಾರ್ಗಗಳನ್ನು ಸ್ವೀಕರಿಸಿದನು. ಅಷ್ಟೆ ಅಲ್ಲ; ಭೇದದ್ವಯದ ಲಕ್ಷಣವನ್ನು,

ಸತತಂ ದಕ್ಷಿಣಮಾರ್ಗೋ
ದಿತೋಕ್ತಿಭೇದಕಗುಣಂ ಸ್ವಭಾವಾಖ್ಯಾನಂ
ವಿದಿತೋತ್ತರಮಾರ್ಗಗತಂ
ಪ್ರತಿತವಕ್ರೋಕ್ತಿಕೃತಮನಲ್ಪ ವಿಕಲ್ಪಂ

ಎಂದು ವಿವರಿಸಿದ್ದಾನೆ. ಆ ಮೇಲೆ ಭೇದಕಗಳಾದ ಆ ಸ್ವಭಾವಾಖ್ಯಾನ ವಕ್ರೋಕ್ತಿಗಳೆಂಬ ಎರಡು ಗುಣಗಳಲ್ಲಿಯೂ ಬೇರೆ ಬೇರೆಯಾಗಿ ಹತ್ತು ಭೇದಗಳಿವೆಯೆಂದು ಹೇಳಿ ಲಕ್ಷಣಗಳನ್ನೂ ದೃಷ್ಟಾಂತಗಳನ್ನೂ ವಿಸ್ತರಿಸಿದ್ದಾನೆ.

ನೃಪತುಂಗನು ದಕ್ಷಿಣೋತ್ತರ ಮಾರ್ಗವನ್ನು ಹೇಳುವುದರ ಜೊತೆಗೆ ವಕ್ರೋಕ್ತಿ; ಶೈಲಿ, ಉಕ್ತಿ ಭೇದಗಳ ಕುರಿತು ಪ್ರಸ್ತಾವಿಸಿದ್ದಾನೆ. ಉಕ್ತಿ ಭೇದವೆಂದರೆ ಪ್ರಾಂತ್ಯಗಳಿಗೆ ಅನುಸಾರವಾಗಿ ಉಂಟಾಗುವ ಭಾಷಾ ಪ್ರಭೇದವಾಗಿದೆ.

*ವಿವರಗಳಿಗೆ ನೋಡಿ: ಪೆಲ್ಡನ್ ಪೊಲಾಕ್ ? ವಿಶ್ವಾತ್ಮಕ ದೇಶಭಾಷೆ*

*ಕೆ. ವಿ. ಸುಬ್ಬಣ್ಣ 2007 ಕವಿರಾಜಮಾರ್ಗ ಮತ್ತು ಕನ್ನಡ ಜಗತ್ತು.*

*ಮುಳಿಯ ತಿಮ್ಮಪ್ಪಯ್ಯ ೧೯೫೪ ಕನ್ನಡನಾಡೂ ದೇಸಿ ಸಾಹಿತ್ಯವೂ ಪುಟ.೨೦.*

*ಮುಳಿಯ ತಿಮ್ಮಪ್ಪಯ್ಯ ೧೯೮೮ ಶ್ರದ್ಧಾಂಜಲಿ ಸಂಪುಟ ೨ ಪುಟ. ೪೭೪*

*ಡಾ. ಕೆ. ಕೃಷ್ಣಮೂರ್ತಿ ೧೯೬೧ ಕನ್ನಡ ಕಾವ್ಯಾಲಂಕಾರ ಪೀಠಿಕೆ: ೪೧, ೪೨, ೪೩.*

**೧೬೦. ಉಗ್ರದೇವತೆ**

*............;ಪಗೆಗೆ ಸಂತ ಸಮಾಗಿರೆ ಮಾರಿ ಸುಯುಮೇ.............*

*(ಪಂಪಭಾರತ ೩ – ೪)*

ವಡ್ಡಾರಾಧನೆ ಕೃತಿಯಲ್ಲಿ ಪುರದ ಹೊರಬಾಗಿಲಲ್ಲಿ ವಾಸಿಸುವ 'ವರಾಂಗಾಯಿ'

ಎಂಬ ಉಗ್ರದೇವತೆಯ ಕುರಿತು ಉಲ್ಲೇಖ ಬರುತ್ತದೆ. ಈ ದೇವತೆಯ ಜಾತ್ರೆಯ ಕುರಿತು. ಪ್ರಸ್ತಾವವಿದೆ. (ವಡ್ಡಾರಾಧನೆ ೧೩–ಪು. ೨೬೫ ಪು. ೨೬೬) ಉಗ್ರದೇವತೆಯು ದುರ್ಗೆಯ ಸ್ವರೂಪಿಯೆನ್ನುವ ಕಲ್ಪನೆಯು ಇಲ್ಲಿದೆ. ಕೆಳವರ್ಗದ ಜನರು ಈ ದೇವತೆಯನ್ನು ಅರ್ಚಿಸುತ್ತಿದ್ದಿರಬೇಕು ಎಂದು ಊಹಿಸಬಹುದಾಗಿದೆ.

ಮಾರಿದೇವತೆಯ ಕುರಿತು ಪಂಪನ 'ವಿಕ್ರಮಾರ್ಜುನ ವಿಜಯ'ದಲ್ಲಿ ಉಲ್ಲೇಖವಿದೆ. (೩–೪) ಮಾರಿದೇವತೆಯು ಶಕ್ತಿದೇವತೆಯ ಮತ್ತೊಂದು ರೂಪ. ಇದು ನಿಕೃಷ್ಟವಾದ ಕೊಲ್ಲುವ ದೇವತೆಯಾಗಿಯೇ 'ವಿಕ್ರಮಾರ್ಜುನ ವಿಜಯ'ದಲ್ಲಿ ಸೂಚಿತವಾಗಿದೆ. ಮೃತ್ಯುದೇವತೆಯ ಕುರಿತ ಪ್ರಸ್ತಾವವು ಈ ಕಾವ್ಯದಲ್ಲಿ ಬಂದಿದ್ದು, ಇದು ಕೂಡಾ ನೀಚದೇವತೆಯ ಸ್ವರೂಪವನ್ನು ಪಡೆದುಕೊಂಡಿದೆ. (ಅದೇ ೩–೬)

ಈ ರೀತಿಯ ಗ್ರಾಮದೇವತೆಗಳು ಶತ್ರುವರ್ಗದವರ ದೃಷ್ಟಿಯಲ್ಲಿ ಕ್ಷುದ್ರದೇವತೆಗಳು ಅನ್ನಿಸಿಕೊಳ್ಳುತ್ತವೆ. ಈ ರೀತಿಯ ಗ್ರಾಮದೇವತೆಗಳು ಅದೂ ಜನಪದ ದೇವತೆಗಳು ತಮ್ಮ ಸೃಷ್ಟಿಗೆ ಸಂಬಂಧಿಸಿದಂತೆ 'ಬಹು ಉಗಮ ಸಿದ್ಧಾಂತ'ವನ್ನು ಸೂಚಿಸುತ್ತವೆ. ಯಾಕೆಂದರೆ, ಈ ದೇವತೆಗಳಿಗೆ ನಿರ್ದಿಷ್ಟತೆಯಿರುವುದಿಲ್ಲ. ಊರಿಗೊಂದು ರೋಗಕ್ಕೊಂದು, ಆಹಾರಕ್ಕೊಂದು, ಪರಿಸರಕ್ಕೊಂದು ದೇವತೆಗಳನ್ನು ಜನಪದರು ಸೃಷ್ಟಿಸಿಕೊಳ್ಳುತ್ತಾರೆ. ಇವನ್ನೇ ಶಿಷ್ಟಗೊಳಿಸುತ್ತಾ ಬಂದಂತೆ ಇವುಗಳು ವೈದಿಕ ಅಥವಾ ಶಿಷ್ಟ ದೇವತೆಗಳಾಗಿ ಕಾಣಿಸಿಕೊಂಡವು. ಭಾಷೆ ಮತ್ತು ಸಂಸ್ಕೃತಿಗೆ ಅನುಗುಣವಾಗಿ ಭಿನ್ನದೇವತೆಗಳು ಭಿನ್ನ ಹೆಸರುಗಳು ಜನಪದ ಪರಿಸರದಲ್ಲಿ ದೊರೆಯುತ್ತವೆ.

ಸಾಮಾನ್ಯವಾಗಿ ರೋಗ ನಿವಾರಣೆಗಾಗಿ, ಆಹಾರ ಸಂರಕ್ಷಣೆಗಾಗಿ ಈ ರೀತಿಯ ದೇವತೆಯರ ಸೃಷ್ಟಿಯಾಗುತ್ತದೆ. ಉದಾಹರಣೆಗೆ ಸಿಡುಬು ರೋಗ ನಿವಾರಣೆಗಾಗಿ ಮಾರಿದೇವತೆಗೆ ಹರಕೆಯನ್ನು ಕೊಡುವುದು. ಮಧುವಿಗೆ ಮಧುದೇವತೆಯಿರುವುದು. ಈ ದೇವತೆಯರಿಗೆ ನೈವೇದ್ಯವೂ ಅದೇ ರೀತಿಯಲ್ಲಿರುತ್ತದೆ. ಪ್ರಾಣಿಬಲಿ, ನರಬಲಿಯು ಈ ದೇವತೆಯರ ಆಹಾರವನ್ನು ಸಂಕೇತಿಸುತ್ತಿದ್ದರೆ, ಕಳ್ಳಿನ ಸಮರ್ಪಣೆಯು ಪಾನೀಯವನ್ನು ಸಂಕೇತಿಸುತ್ತದೆ.

ದೇವತೆಯರ ಹೆಸರುಗಳು ಈ ಅಂಶಗಳಿಗೆ ಅನುಗುಣವಾಗಿಯೇ ಇರುತ್ತದೆ. ರೋಗಗಳ ಹೆಸರನ್ನು ದೇವತೆಗೆ ಇಡುವ ಕ್ರಮವಿರುತ್ತದೆ. ಉದಾಹರಣೆಗೆ: ಮಾರಿಯಮ್ಮ ಮಾರಿರೋಗವನ್ನು ಹೋಗಲಾಡಿಸುವುದರಿಂದ ಈ ದೇವತೆಗೆ ಮಾರಿದೇವತೆ ಎಂದು ಹೆಸರಾಯಿತು. ಹಾಗೆಯೇ ಕಳ್ಳಿನ ದೇವತೆಗೆ ಮಧುದೇವತೆಯೆಂಬ ಹೆಸರು ಸಿಗುತ್ತದೆ.

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಈ ರೀತಿಯ ದೇವತೆಗಳ ಹೆಸರುಗಳು ಸಾಂಸ್ಕೃತಿಕ ದಾಖಲೆಯಾಗಿ ಬರುತ್ತವೆ. ಇವು ಇದೇ ಜನಪದಕ್ಕೆ ಸಂಬಂಧಿಸಿರುವುದರಿಂದ ಇವುಗಳಿಗೆ ಮತ ಪ್ರಭೇದ ಇರುವುದಿಲ್ಲ.

*ವಿವರಗಳಿಗೆ ನೋಡಿ: ಹೆಂಡದ ಪೂಜೆ.*

### ೧೬೧. ಉಡಲಿಕ್ಕು

*"ಕಳಶಂಗಳೊಳ್ ತೆಕ್ಕನೆ ತೀವಿ ತಂದ ವಾರ ವನಿತಾಜನಕ್ಕಂ ಸಾಮಂತ ಚಕ್ರಕ್ಕ**ಮುಡಲಿಕ್ಕಿ**"* ಎಂದು ಪಂಪ ಭಾರತದಲ್ಲಿ ಬರುತ್ತದೆ.

(ಪಂಪ ಭಾರತ ೧೪-೧೭ ವ)

ಉಡಲು+ಇಕ್ಕು-ಉಡಲಿಕ್ಕು. ಇಲ್ಲಿ ಉಡು ಅಂದರೆ ಉಟ್ಟುಕೊಳ್ಳು, ಧರಿಸು ಎಂದರ್ಥ. ಧರಿಸಲು ಯೋಗ್ಯವಾದುದನ್ನು ಕೊಡುವುದು, ವಸ್ತ್ರದಾನ ಮಾಡುವುದು.

ವಸ್ತ್ರದಾನವು ಚತುರ್ವಿಧ ದಾನಗಳಲ್ಲಿ ಒಂದಾಗಿದೆ. ವಸ್ತ್ರದಾನಕ್ಕೆ ಪ್ರಾಚೀನರಲ್ಲಿ ಬಹಳ ಮಹತ್ವವಿತ್ತು. ಈಗಲೂ ವಸ್ತ್ರದಾನ ಕೆಲವೆಡೆ ನಡೆಯುತ್ತಿರುವುದು ಕಂಡುಬರುತ್ತದೆ. ವಸ್ತ್ರವು ಮೈಮುಚ್ಚಿಕೊಳ್ಳುವ ಸಾಧನ. ಅನ್ನ: ವಸತಿ: ವಸ್ತ್ರವು ಭಾರತೀಯರಿಗೆ ಪ್ರಮುಖವಾಗಿದೆ.

*ವಿವರಗಳಿಗೆ ನೋಡಿ: ದಾನ.*

### ೧೬೨. ಉತ್ತರೀಯ

*ತಿರೆ ತೋಜಿತ್ತೆಸೆವ**ುತ್ತರೀಯ**ವಸನಂ ರಾಜೇಂದ್ರಚಂದ್ರಾಂಕನಾ..................*

(ಕರ್ಣಾಟಕ ಕಾದಂಬರಿ ೧-೨೫)

ಉತ್ತರೀಯವೆಂದರೆ ಹೆಗಲಿಗೆ ಹಾಕಿಕೊಳ್ಳುವ ಬಟ್ಟೆ, ದೇಹವನ್ನು ಸಾಮಾನ್ಯವಾಗಿ ಮೂರು ಭಾಗವಾಗಿ ಮಾಡುತ್ತಾರೆ. ಒಂದು ಶಿರೋಭಾಗ, ಇನ್ನೊಂದು ಉರ (ಎದೆ) ಭಾಗ, ಮತ್ತೊಂದು ಅಧೋಭಾಗ, ಅಂದರೆ ಸೊಂಟದಿಂದ ಕೆಳಗೆ. ಉರೋ ಭಾಗವನ್ನು ಮುಚ್ಚಿಕೊಳ್ಳಲು ಬಳಸುವ ಬಟ್ಟೆಯನ್ನು ಉತ್ತರೀಯವೆಂದು ಕರೆಯುತ್ತಾರೆ. ಇದಕ್ಕೆ ಶಲ್ಯ ಎಂಬ ಹೆಸರೂ ಇದೆ.

ಇದಕ್ಕೆ ಕನ್ನಡದಲ್ಲಿ ಹೆಗಲುವಸ್ತ್ರವೆಂದೂ, ಸೊಂಟಕ್ಕೆ ಉಡುವ ವಸ್ತ್ರಕ್ಕೆ ಸೊಂಟವಸ್ತ್ರ ವೆಂದೂ, ತಲೆಗೆ ಸುತ್ತುವ ವಸ್ತ್ರಕ್ಕೆ ಮುಂಡಾಸು ಎಂದೂ ಕರೆಯುತ್ತಾರೆ.

### ೧೬೩. ಉತ್ಪಾತ

*ಅಂತೊಗೆದನೇ**ಕೋತ್ಪಾತ**ಂಗಳಂ ಕಂಡು ಮುಂದಜೀವ ಚದುರ ವಿದುರನಿಂತೆಂದ........*

(ಪಂಪ ಭಾರತ ೧-೩೨ ವ)

ಉತ್ಪಾತವೆಂದರೆ ಅಪಶಕುನ. ಶುಭಶಕುನಗಳು ಮತ್ತು ಅಪಶಕುನಗಳಿಗೆ ಬೇರೆ ಬೇರೆ ಲಕ್ಷಣಗಳಿವೆ. ಶಕುನಗಳು ಮುಂದೆ ಸಂಭವಿಸಲಿರುವ ಸಂಗತಿಗಳ ಸೂಚನೆಗಳು. ಶಕುನಗಳು ಬೇರೆ ಬೇರೆ ಪ್ರದೇಶ ಮತ್ತು ಜನಾಂಗಗಳಲ್ಲಿ ಬೇರೆ ಬೇರೆಯಾಗುತ್ತವೆ.

ಉತ್+ಪಾತ ಅಂದರೆ ಮೇಲಕ್ಕೆ ಹಾರುವ ದುರ್ಘಟನೆ: ಶುಭಾಶುಭಚಿಹ್ನೆ. ಅಲ್ಲೋಲ ಕಲ್ಲೋಲ ಅಥವಾ ಕೆಳಗು ಮೇಲಾಗುವುದು. (ಬುಡ ಮೇಲಾಗುವುದು) ಎಂಬರ್ಥ ಸರಿಹೊಂದುತ್ತದೆ.

**೧೬೪. ಉತ್ಸರ್ಪಿಣಿ**

*ಅದು ಶರೀರಬಳಾಯುರ್ದೇಹಪ್ರಮಾಣೋಪಚಯಾಪಯಾಪಚಯ ಹೇತುತ್ವದಿಂದ* ***ಮುತ್ಸರ್ಪಿಣಿಯವಸರ್ಪಿಣಿ*** *ನಾಮಮಂ ಪಡೆದುದದೊಂದು ಪತ್ತುಕೋಟಿಕೋಟಿ ಸಾಗರೋಪಮಸಂಖ್ಯೆಯಂ ತಾಳ್ದಿ* ***ಸುಷಮಸುಷಮಂಸುಷಮಂ ಸುಷಮದುಷ್ಷಮಂ ದುಷ್ಷಮಸುಷಮಂ ದುಷ್ಷಮಂ ಅತಿದುಷ್ಷಮಂ*** *ಎಂದು ಒಂದೊಂದು ಷಡ್ಭೇದಭಿನ್ನ ಮಾದುವು. (ಆದಿಪುರಾಣ ೬-೪೮ ವ)*

ಧರ್ಮ, ಸತ್ಯ, ನ್ಯಾಯ, ಜನರ ಆಯುಸ್ಸು, ಸುಖ ಮುಂತಾದವು ಕ್ರಮಕ್ರಮವಾಗಿ ಹೆಚ್ಚುತ್ತಾ ಹೋಗುವ ಕಾಲ.

ಆದಿಪುರಾಣದಲ್ಲಿ ಬರುವ ಈ ಪರಿಕಲ್ಪನೆಯು ಸಾಮಾಜಿಕ ಔನ್ನತ್ಯವನ್ನು ಸೂಚಿಸುತ್ತದೆ. ಉತ್ಸರ್ಪಿಣಿಯು ಸಾಮಾಜಿಕ ಏಕಮುಖದ ಚಲನೆಯನ್ನು ಸೂಚಿಸುವುದು ಗಮನಾರ್ಹ. ಅವಸರ್ಪಿಣಿಯು ಇದಕ್ಕಿಂತ ತದ್ವಿರುದ್ಧ ಪರಿಕಲ್ಪನೆಯಾಗಿದೆ. ಈ ಎರಡೂ ಜೈನಧರ್ಮದ ವಿಶಿಷ್ಟ ಪರಿಭಾಷೆಗಳಾಗಿವೆ.

*ವಿವರಗಳಿಗೆ ನೋಡಿ: John Grimes 1996 A concise Dict. of Indian Philosophy.*

*ಮಿರ್ಜಿ ಅಣ್ಣಾರಾಯ – ಜೈನಧರ್ಮ*

**೧೬೫. ಉದಾತ್ತ ಅರ್ಥ**

*ಮೃದುಮಧುರವಚನರಚನೆಯೊ*
***ಳುದಾತ್ತಮರ್ಥ****ಪ್ರತೀತಿಯಂ ಕೇಳ್ವ ಜನ ।*
*ಕ್ಕಿದಿರೊಳ್ಕುಡದಂದದು ಕ*
*ಬ್ಬದೊಳಿರ್ದುಂ ಕವಿಯ ಮನದೊಳಿರ್ದಂತೆ ವಲಂ ॥*

*(ಆದಿಪುರಾಣ ೧-೧೯)*

ಕಾವ್ಯವು ಹೇಗಿರಬೇಕೆಂದು ಹೇಳುತ್ತಾ ಪಂಪ 'ಮೃದುಮಧುರ ವಚನರಚನೆ'ಯೆಂದು ಕರೆಯುತ್ತಾನೆ. ಇದರ ಜೊತೆಗೆ ಕಾವ್ಯದಲ್ಲಿ ಉತ್ತಮವಾದ ಅರ್ಥವೂ ಇರಬೇಕೆಂಬುದು ಅವನ ಭಾವನೆ. ಕೇಳುವ ಜನರಿಗೆ ಅದು ಹಿತವಾಗಿರಬೇಕು. ಅಂದವಾಗಿರಬೇಕು. ಇದು ಪಂಪನ ಕಾವ್ಯದ ಬಗೆಗಿನ ಸ್ಪಷ್ಟ ನಿಲುವು.

ಮೃದು ವಚನ ಅಂದರೆ ಮೆಲುಮಾತು. ಮಧುರವೆಂದರೆ ಇಂಪಾದ; ರಚನೆಯೆಂದರೆ –ಕಾವ್ಯರಚನೆ. ಉದಾತ್ತ ಅರ್ಥವೆಂದರೆ ಶ್ರೇಷ್ಠವಾದ ಅರ್ಥ. ಕೇಳುವ ಜನರಿಗೆ ಹಿತ. ಇವಿಷ್ಟು ಪಂಪನ ಆದಿಪುರಾಣದ ಕಾವ್ಯೋದ್ದೇಶವೂ ಹೌದು. ತನ್ನ ಕಾವ್ಯ ಸ್ವರೂಪದ ಬಗೆಗೆ ಈ ಮೂಲಕ ಹೇಳಿರುವ ಮಾತೂ ಹೌದು. ಪಂಪನ ಕಾವ್ಯಮಿಮಾಂಸೆಯ ಪರಿಕಲ್ಪನೆಯೂ ಹೌದು. ರಚನೆಯು ಕಾವ್ಯವಸ್ತುವಿಗೆ ಅನುಸಾರವಾಗಿ ನಿರ್ಧಾರವಾಗುತ್ತದೆ. ಆದಿಪುರಾಣದ ವಸ್ತುವಿಗೂ (ಅದರ ಭವಾವಳಿಯ ಪರಿಕಲ್ಪನೆಗೂ) ಕೃತಿಯ ರಚನೆಯ ವಿಧಾನಕ್ಕೂ ಸಂಬಂಧವಿದೆ.

ವಿವರಗಳಿಗೆ ನೋಡಿ: *Terry Eagleton 1989 Literary theory An introduction.*

*Fredric Jameson 1974 Marxism and Form*

**೧೬೬. ಉದ್ಯೋಗ**

**ಉದ್ಯೋಗವುಳ್ಳಾತಂಗರ್ಥಲಾಭವಹುದು** ; ಕೀರ್ತಿಯನಾಗಲಿ ಮೃತ್ಯುವನಾಗಲಿ ಐದುವನು, ನಿರುದ್ಯೋಗಿಗೆ ಕೀರ್ತಿಯಾಗದು. ಅರ್ಥಲಾಭವಾಗದು, ಮೃತ್ಯುವೇ ಅಹುದು....(ಪಂಚತಂತ್ರ)

ಉದ್ಯೋಗಿಗೆ ಅರ್ಥಲಾಭವಾಗುವುದು, ಅವನು ಕೀರ್ತಿಯನ್ನಾಗಲಿ ಮರಣವನ್ನಾಗಲಿ ಹೊಂದುವನು. ಆದರೆ ನಿರುದ್ಯೋಗಿಗೆ ಕೀರ್ತಿಲಾಭವಾಗಲೀ, ಅರ್ಥಲಾಭವಾಗಲೀ ಎರಡೂ ಇಲ್ಲ. ಮರಣವೇ ಆತನಿಗೆ ಮಹಾನವಮಿ. ಉದ್ಯೋಗದ ಮೂಲಕವೇ ಸಮಾಜದಲ್ಲಿ ವ್ಯಕ್ತಿಯ ಸ್ಥಾನಮಾನವನ್ನು ನಿರ್ದೇಶಿಸಲಾಗುತ್ತದೆ ಮತ್ತು ಅವನಿಗೂ ಊರಿಗೂ ಇರುವ ಸಂಬಂಧವು ಸೂಚಿತವಾಗುತ್ತದೆ. ಉದಾ: ಕ್ಷೌರಿಕ; ಬಡಗಿ; ಚರ್ಮಕಾರ; ಪುರೋಹಿತ, ಇತ್ಯಾದಿ ಉದ್ಯೋಗಗಳು ಊರಿನ ಅಗತ್ಯಕ್ಕೆ ಬೇಕಾದಂತೆ ರೂಪುಗೊಳ್ಳುತ್ತವೆ.

ವಿವರಗಳಿಗೆ ನೋಡಿ: *Sudipta Kaviraj 1995 The Unhappy Consiousness*

*Madan. T.N 2001 Non – Renumeialio*

*Ronald Inden 1990 Imagining India*

**೧೬೭. ಉಪಗೂಹನ**

**ಉಪಗೂಹನಮುಂ** ಸದ್ಧ

ರ್ಮಪಥಚ್ಯುತಭವ್ಯಸಂಹತಿಸ್ಥಾಪನಮುಂ । (ಆದಿಪುರಾಣ ೫–೫೮)

ಅಜ್ಞಾನಿಗಳೂ ಅಸಮರ್ಥರೂ ಆಗಿರುವವರಿಂದ ಸನ್ಮಾರ್ಗದ ನಿಂದೆಯು ನಡೆಯುತ್ತಿದ್ದರೆ ಅದನ್ನು ದೂರ ಮಾಡುವುದು ಉಪಗೂಹನವೆನಿಸುತ್ತದೆ. ಇದರಿಂದ ಲೋಕದಲ್ಲಿ ಸದ್ಧರ್ಮ ಹಾಗೂ ಸನ್ಮಾರ್ಗಕ್ಕೆ ಪ್ರೋತ್ಸಾಹ ದೊರೆಯುವಂತಾಗುತ್ತದೆ. ಇದು ಸಮ್ಯಕ್ ದರ್ಶನದ ಎಂಟು ಅಂಗಗಳಲ್ಲಿ ಒಂದು. ಸದ್ಧರ್ಮ ಚ್ಯುತರಾದವರನ್ನು ಧರ್ಮಮಾರ್ಗಕ್ಕೆ ತರುವ ಕೆಲಸವೂ ಇದರಿಂದ ಸಾಧ್ಯವಾಗುತ್ತದೆ. ಸಂಸ್ಕೃತದಲ್ಲಿ ಉಪಗೂಹನವೆಂದರೆ ಆಲಿಂಗನ, ಅಪ್ಪಿಕೊಳ್ಳುವಿಕೆ. ನಾಟಕದ ಒಂದು ಸಂಧ್ಯಂಗವೆಂಬ ಅರ್ಥವಿದೆ. ಪಂಪನ ಆದಿಪುರಾಣದಲ್ಲಿ ಇದರ ಉಲ್ಲೇಖವಿದೆ.

**೧೬೮. ಉಪಚಯ**

ಅದು ಸಮಯಾವಳಿಕೋಚ್ಛ್ವಾಸಸ್ತೋಕನಿಮೇಷನಾಳಿಕಾಮುಹೂರ್ತ ದಿವಸಪಕ್ಷಮಾಸರ್ತ್ವಯನ ಸಂವತ್ಸರಾದಿಗಣನಾನುಕ್ರಮದಿಂದಂಪೆರ್ಚಿದೆಣಿಕೆ

*ಯೊಳ್‌ಕೂಡಿದುದು.ಅದು ಶರೀರಬಳಾಯುರ್ದೇಹಪ್ರಮಾ**ಣೋಪಚಯಾ**ಪ*
*ಯಾ**ಪಚಯ** ಹೇತುತ್ವದಿಂದ (ಆದಿಪುರಾಣ ೬-೪೮ವ)*

ಉಪಚಯವೆಂದರೆ ವಾಸ್ತವವಾಗಿ ಶೇಖರಣೆ, ರಾಶಿ, ಅಭಿವೃದ್ಧಿ ಎಂದು ಅರ್ಥ. ಆದರೆ ಆದಿಪುರಾಣದಲ್ಲಿ ಈ ರೀತಿಯ ಅರ್ಥ ಬರುತ್ತದೆ. ಉಪಚಯ ಆಯುಷ್ಯ, ಬಲ, ಶರೀರ, ವೈಭವ ಮುಂತಾದವುಗಳ ಬೆಳವಣಿಗೆಯನ್ನು ಸೂಚಿಸುತ್ತದೆ.

*ವಿವರಗಳಿಗೆ ನೋಡಿ: John Grimes 1996 A concise Dict. of Indian Philosophy.*

**೧೬೯. ಉಪಮಾಲಂಕಾರ**

ಬೇರೆ ಬೇರೆ ವಸ್ತುಗಳನ್ನು ಹೋಲಿಕೆ ಮಾಡುವುದು ಉಪಮಾಲಂಕಾರವಾಗುತ್ತದೆ. ಇದರಲ್ಲಿ ವಸ್ತು, ಧರ್ಮ, ವಿಪರ್ಯಯ, ಅನನ್ಯ, ನಿಯಮ, ಅನಿಯಮ, ಅತಿಶಯ, ಉತ್ಪ್ರೇಕ್ಷೆ, ಅದ್ಭುತ, ಸಂಶಯ, ಊರ್ಜಿತ, ಶ್ಲೇಷ; ನಿಂದಾ, ಪ್ರಶಂಸೋ ವಿರೋಧ, ತತ್ವಜ್ಞಾನ, ಅಸಾಧಾರಣ, ಅಭೂತ, ಅಸಂಭವ, ಬಹು, ವಾಕ್ಯ, ಸಂಧಾನ, ಪ್ರತಿವಸ್ತು ಹೇತು, ಎಂಬ ವಿವಿಧ ರೀತಿಯ ಉಪಮೆಗಳಿವೆ.

ನಾನಾ ವಸ್ತುವಿಭೇದನು
ನೇನಾನುಂ ತೆಱದೆ ಪೋಲ್ಕೆ ಮಾಡುವುದು**ಪಮಾ**
ಮಾನಿತ ಸದಳಂಕಾರಮ
ನೂನ ವಿಕಲ್ಪ ಪ್ರಪಂಚಮೀ ತೆಱನದಱಿ (ಕವಿರಾಜಮಾರ್ಗ ೩-೪೯)

ನಾನಾವಸ್ತುಭೇದವನ್ನು ಬಿಟ್ಟು ಹೋಲಿಕೆ ಮಾಡುವುದು ಉಪಮಾಲಂಕಾರವೆಂದು ಕವಿರಾಜಮಾರ್ಗದಲ್ಲಿ ಬರುತ್ತದೆ. ವಸ್ತು ಉಪಮೆ, ಧರ್ಮೋಪಮೆ, ವಿಪರ್ಯಯೋಪಮ, ಅನೋನ್ಯೋಪಮೆ, ನಿಯಮೋಪಮೆ, ಅನಿಯಮೋಪಮೆ, ಅತಿಶಯೋಪಮೆ, ವಿಷಯೋತ್ಪ್ರೇಕ್ಷಂ, ಅದ್ಭುತೋಪಮೆ, ಮಹೋಪಮೆ, ಸಂಶಯೋಪಮೆ, ಊರ್ಜಿತೋಪಮೆ, ನಿಂದೋಪಮೆ, ಪ್ರಶಂಸೋಪಮೆ, ವಿರೋಧಪಮೆ, ತತ್ವಾಖ್ಯೋಪಮೆ, ಅಸಾಧಾರಣಉಪಮೆ, ಶ್ಲೇಷೋಪಮೆಗಳ ಹೆಸರುಗಳನ್ನು ಕವಿರಾಜ ಮಾರ್ಗಕಾರನು ವಿವರಿಸಿದ್ದಾನೆ.

*ವಿವರಗಳಿಗೆ ನೋಡಿ: ಜಿ.ಎಸ್. ಶಿವರುದ್ರಪ್ಪ (ಸಂ) ೧೯೯೯ ಕಾವ್ಯಾರ್ಥ ಪದಕೋಶ*

**೧೭೦. ಉಪಶಾಂತ ಗುಣಸ್ಥಾನ**

*ಸಮಾಹಿತನು**ಪಶಾಂತಗುಣಸ್ಥಾನದೊಳ್** ಪ್ರಾಣಪರಿತ್ಯಾಗಂಗೆಯ್ದು ಸರ್ವಾ*
*ರ್ಥಸಿದ್ಧಿಯೊಳಹಮಿಂದ್ರನಾದಂ... (ಆದಿಪುರಾಣ ೬ -೩೪ ವ)*

ಕರ್ಮಗಳ ಉದಯಾದಿ ಅವಸ್ಥೆಗಳಲ್ಲಿ ಉಂಟಾಗುವ ಆತ್ಮಪರಿಣಾಮವೇ ಗುಣಸ್ಥಾನ. ಇದರಲ್ಲಿ ಹದಿನಾಲ್ಕು ಮೆಟ್ಟಿಲುಗಳಿವೆ. ಅವುಗಳಲ್ಲಿ ಇದು ಹನ್ನೊಂದನೆಯದು.

ಉಪಶಾಂತವೆಂದರೆ ಅಡಗಿಹೋದ, ಸಹನೆಯೆಂಬ ಅರ್ಥಗಳಿವೆ. ಉಪಶಾಂತಿ

ಯೆಂದರೆ ಸಹನೆಯೆಂಬುದೇ ಇಲ್ಲಿ ಸಮರ್ಥನೀಯ.

ಜೀವನದಲ್ಲುಂಟಾಗುವ ಆಧ್ಯಾತ್ಮಿಕ ನಿಲುವಿಗನುಗುಣವಾಗಿ ಜೈನ ಆಚಾರ್ಯರು ಹದಿನಾಲ್ಕು ಮೆಟ್ಟಿಲುಗಳನ್ನು ಕಲ್ಪಿಸಿದ್ದಾರೆ. ಅವುಗಳನ್ನೇ ಜೈನ ಪರಿಭಾಷೆಯಲ್ಲಿ ಗುಣಸ್ಥಾನಗಳೆಂದು ಕರೆಯುತ್ತಾರೆ. ಈ ಗುಣಸ್ಥಾನಗಳಲ್ಲಿ ಏರುತ್ತಿರುವ ಜೀವಕ್ಕೆ ಕ್ರಮ ಕ್ರಮವಾಗಿ ಮೆಟ್ಟಿಲು ಮೆಟ್ಟಿಲಿಗೂ ಅಜೀವದ ಸಂಬಂಧ ಕಡಿಮೆಯಾಗುತ್ತಾ ಹೋಗುತ್ತದೆ. ಕಡೆಗೆ ಜೀವವು ಹದಿಮೂರನೆಯ ಗುಣಸ್ಥಾನದಲ್ಲಿ ಅರ್ಹತ್ ಪದವಿಯನ್ನು ಪಡೆದು ಹದಿನಾಲ್ಕನೆಯ ಗುಣಸ್ಥಾನದಲ್ಲಿ ಮುಕ್ತಿ ಹೊಂದಿ ಸಿದ್ಧಗತಿಯನ್ನು ಸೇರುತ್ತದೆ.

ಗುಣಸ್ಥಾನಗಳ ಹೆಸರುಗಳು ೧) ಮಿಥ್ಯಾತ್ವ, ೨) ಸಾಸಾದನ, ೩) ಮಿಶ್ರ (ಸಮ್ಯಕ್ ಮಿಥ್ಯಾತ್ವ) ೪) ಅವಿರತ ಸಮ್ಯಕ್ತ್ವ ೫) ದೇಶವಿರತ, ೬) ಪ್ರಮತ್ತವಿರತ ೭) ಅಪ್ರಮತ್ತವಿರತ, ೮) ಅಪೂರ್ವಕರಣ, ೯) ಅನಿವೃತ್ತಿಕರಣ, ೧೦) ಸೂಕ್ಷ್ಮಸಾಂಪರಾಯ, ೧೧) ಉಪಶಾಂತ ಮೋಹ, ೧೨) ಕ್ಷೀಣ ಮೋಹ, ೧೩) ಸಯೋಗ ಕೇವಲಿ, ೧೪) ಅಯೋಗ ಕೇವಲಿ.

ಮೋಹ ಹಾಗೂ ಯೋಗಗಳ ನಿಮಿತ್ತದಿಂದ ಆತ್ಮನ ದರ್ಶನ, ಜ್ಞಾನ ಮತ್ತು ಚಾರಿತ್ರ ರೂಪ ಗುಣಗಳ ಕ್ರಮವಿಕಾಸ ರೂಪ ಅವಸ್ಥೆಗಳು ಗುಣಸ್ಥಾನಗಳೆನಿಸುತ್ತವೆ. ಇವು ಆತ್ಮನ ಕೂಡ ಬರುವ ಕರ್ಮ ಪ್ರಕೃತಿಗಳ ಸಂಬಂಧಗಕ್ಕನುಗುಣವಾಗಿ ಉಂಟಾಗುತ್ತವೆ. ಈ ಕರ್ಮ ಪ್ರಕೃತಿಗಳ ಸಂಯೋಗ ವಿಯೋಗಗಳಿಂದಲೇ ಆತ್ಮನಲ್ಲಿ ಗುಣಸ್ಥಾನಗಳುಂಟಾಗುತ್ತವೆ. ಅದರಂತೆ ಗುಣಸ್ಥಾನಕ್ಕನುಸಾರವಾಗಿಯೇ ಕರ್ಮಗಳ ಸಂಯೋಗ ವಿಯೋಗಗಳುಂಟಾಗುತ್ತವೆ. ಅದರಿಂದ ಇವೆರಡೂ ಸಂಗತಿಗಳು ಒಂದಕ್ಕೊಂದು ಹೊಂದಿಕೊಂಡೇ ಆಗಿವೆ ಪರಸ್ಪರ ಅವಲಂಬಿಗಳೇ ಆಗಿವೆ.

*ವಿವರಗಳಿಗೆ ನೋಡಿ: ಮಹದೇವ ಪ್ರಭಾಕರ ಪೂಜಾರ ೧೯೭೬ ಜೈನಧರ್ಮದ ಪರಿಭಾಷೆ.*
*ಮಿರ್ಜಿ ಅಣ್ಣಾರಾಯ ೨೦೦೬ ಮಿರ್ಜಿ ಅಣ್ಣಾರಾಯರ ಆಯ್ದ ಲೇಖನಗಳು*
*ಗುರುಲಿಂಗಕಾಪಸೆ (ಸಂ ೧) ೨೦೦೬ ಮಧುರಚೆನ್ನರ ಲೇಖನಗಳು*
*ಬಿ. ವಿ. ಮಲ್ಲಾಪುರ ೧೯೭೮ ನಯಸೇನ ಮತ್ತು ಅವನ ಕೃತಿಗಳು*

### ೧೭೧. ಉಪಾಂಶುವಧೆ

*ಅಂತು ವಿಕ್ರಮಾರ್ಜುನಂ ಬಿಲ್ಗೊಳಲುಂ ಭೀಮಸೇನಂ ಗದೆಗೊಳಲುಮಾಂಪು ದರಿ**ದುಪಾಂಶುವಧೆ** ಕೆಯ್ಗೆ ಮಾಡುವುದುತ್ತಮಂ. (ಪಂಪ ಭಾರತ ೨-೯೦ವ)*

ವಿಕ್ರಮಾರ್ಜುನನು ಬಿಲ್ಲನ್ನು ಹಿಡಿದರೂ, ಭೀಮಸೇನನು ಗದೆಯನ್ನು ಧರಿಸಿದರೂ ಪ್ರತಿಭಟಿಸಿದವರನ್ನೆಲ್ಲ ಧ್ವಂಸಮಾಡಿ ಈ ನೆಲೆಯಿಂದ ಎಳೆದು ಬಿಸಾಡುತ್ತಾನೆ. ರಹಸ್ಯವಾದ ಮೋಸದ ಕೊಲೆಯಿಂದ ಅಧೀನಪಡಿಸಿಕೊಳ್ಳುವುದು ಉತ್ತಮವಾದ ಮಾರ್ಗ. ಅಲ್ಲದೆ ಭಾಗಕ್ಕೆ ಆಶೆ ಪಡುತ್ತಿರುವವನೂ, ಸ್ವಾಮ್ಯವನ್ನು ಪಡೆಯಲು ಶಕ್ತಿಯುಳ್ಳವನೂ, ರಹಸ್ಯವನ್ನೂ ತಿಳಿದವನೂ ಕಾರ್ಯಶೀಲನಾದನೂ ಅರ್ಧ ರಾಜ್ಯವನ್ನು ಅಪಹರಿಸುವವನೂ ಆದ

ಆಳನ್ನು ಯಾವನು ಕೊಲ್ಲುವುದಿಲ್ಲವೋ ಅವನು ತಾನೇ ಹತನಾಗುತ್ತಾನೆ ಎನ್ನುವುದು ಅರ್ಥಶಾಸ್ತ್ರದ ,ಂರವತ್ತಾದ ಭಾಗ ಎಂದು ಪಂಪ ಭಾರತದಲ್ಲಿ ಬರುತ್ತದೆ.

ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಶತ್ರು ವಿನಾಶಕ್ಕೆ ಔಷಧ ಪ್ರಯೋಗ. ಔಷಧ ಮಂತ್ರಗಳ ಪ್ರಯೋಗ. ಶತ್ರುವು ತನ್ನ ಸೈನ್ಯಾಘಾತಕ್ಕೆ ಮಾಡಿದ ಪ್ರಯೋಗಗಳ ನಿವಾರಣೆ ಕುರಿತು ಬರುತ್ತದೆ. 'ವ್ಯಾಪಾರಿಗಳ ವೇಷಧಾರಿಯು ಸೌಭಾಗ್ಯವತಿಯಾದವಳ ಅಥವಾ ರಾಜ ಮಹಿಷಿಯ ಹತ್ತಿರದ ದಾಸಿಯನ್ನು ಕಾಮನಿಮಿತ್ತವಾಗಿ ದುಡ್ಡು ಸುರಿದು ಕಳಿಸಿಕೊಡಬೇಕು. ಆ ವ್ಯಾಪಾರಿ ವೇಷದವನ ಪರಿಚಾರಕ ವೇಷದಲ್ಲಿರುವವನಿಂದ ಪ್ರೇರಿತನಾಗಿ ಸಿದ್ಧವೇಷಧಾರಿಯು ವಶೀಕರಣದ ಔಷಧಿಯನ್ನು "ವ್ಯಾಪಾರಿಯ ಶರೀರದಲ್ಲಿ ಇಡಬೇಕು ಎಂದು ಹೇಳಿಕೊಡಬೇಕು. ಅದು ಸಿದ್ಧವಾದ ಮೇಲೆ "ರಾಜಶರೀರದಲ್ಲಿ ಇಡಬೇಕು" ಎಂದು ಹೇಳಿ ಸೌಭಾಗ್ಯ ಶಾಲಿನಿಗೆ ಕೊಡಬೇಕು. ಅನಂತರ ವಿಷದಿಂದ ಮೋಸಗೊಳಿಸ ಬೇಕು.

ಇದು ಒಂದು ವಿಧಾನ. ಪಂಪ ಭಾರತದಲ್ಲಿ ಕೌರವನು ಪಾಂಡವರನ್ನು ಮೋಸದಿಂದ ಕೊಲ್ಲಬೇಕು ಎಂದು ಭಾವಿಸುತ್ತಾನೆ. ಪಂಪ ಉಪಾಂಶುವಧೆಯೆಂದು ಹೇಳಿರುವುದು ಗಮನಾರ್ಹ.

*ವಿವರಗಳಿಗೆ ನೋಡಿ: ಶ್ರೀ ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳು ೨೦೧೦*

*ಕೌಟಲೀಯ ಅರ್ಥಶಾಸ್ತ್ರ ಪುಟ. ೫೨೮.*

### ೧೭೨. ಉಪಾಧ್ಯಾಯ

*............ರತ್ನಪ್ರದೀಪಂಗಳಿರ್ಪೆವೊಲಿರ್ಪರ್ ನಿರುಪಾಯರೀಗೆ ಮಗು ಪಾಧ್ಯಾಯರ್ ಸುಖೋಪಾಯಂ*

(ಅಜಿತತೀರ್ಥಂಕರ ಪುರಾಣ ೧-೪)

ಜೈನ ಸಾಹಿತ್ಯದ ಪ್ರಕಾರ ದೀಕ್ಷಾಗುರು ಬೇರೆ. ಅವಧಿಜ್ಞಾನ ಶ್ರುತಬೋಧ ಆಗಮ ತತ್ವಗಳನ್ನು ದೀಕ್ಷಾಗುರು ಬೋಧಿಸಿ ಶಿಷ್ಯನಿಗೆ ದೀಕ್ಷೆಯನ್ನು ನೀಡುತ್ತಾನೆ ಎಂದು ರನ್ನನು 'ಅಜಿತತೀರ್ಥಂಕರ ಪುರಾಣ' ಕೃತಿಯಲ್ಲಿ ವಿವರಿಸುತ್ತಾನೆ.

ಯಾರು ಜೀವನೋಪಾಯಕ್ಕಾಗಿ ಧನಸ್ವೀಕಾರ ಮಾಡಿ ವೇದದ ಸ್ವಲ್ಪ ಭಾಗವನ್ನು ಅಥವಾ ವೇದಾಂಗವನ್ನು (ಶಾಸ್ತ್ರವನ್ನು) ಕಲಿಸುವರೋ ಅವರು ಉಪಾಧ್ಯಾಯರು.

ಜನಕ (ತಂದೆಯು) ಹೀಗೆ ಮಾಡಬಲ್ಲವನಾದರೆ ಅವನೂ ಗುರುವು. ಆತ ಗರ್ಭಾಧಾನಾದಿ ಸಂಸ್ಕಾರಗಳನ್ನು ಮಾಡಿ ಅನ್ನದಿಂದಲೂ ಪೋಷಿಸುವವನು. ಮೃತಪಿತೃಕನಿಗೆ ಬೇರೊಬ್ಬನು ಹೀಗೆ ಮಾಡಿದರೆ ಅವನೂ ಗುರುವಾಗಲು ವಿರೋಧವಿಲ್ಲ.

ಗುರು, ಆಧ್ಯಾತ್ಮಿಕ ಮಾರ್ಗದರ್ಶಿ, ಪಂಡಿತ, ಯಜಮಾನ, ಎಂಬಂಥ ಅರ್ಥಗಳು ಆಚಾರ್ಯವೆಂಬುದಕ್ಕೆ ಇವೆ. ಆ =Toward, ಚಾರ್=ಹೋಗು. ಆಚಾರ್ಯನಾದವನು ವ್ಯಕ್ತಿಗೆ ಆಧ್ಯಾತ್ಮಿಕತೆಯನ್ನು ಬೋಧಿಸುತ್ತಾನೆ. ಶಾಸ್ತ್ರ – ಆಗಮಗಳನ್ನು ಹೇಳಿಕೊಡುತ್ತಾನೆ.

ಸಕಲ ವೇದಾದಿಗಳನ್ನು ಕಲಿಸುತ್ತಾನೆ. ವಾಸ್ತವವಾಗಿ ಆಚಾರಾದಿಗಳನ್ನು ಬೋಧಿಸುವವನ್ನು ಆಚಾರ್ಯನೆಂದು ಕರೆಯುತ್ತಾರೆ. ಅವನು ಗುಣ-ನಡತೆಗಳನ್ನು ತಿದ್ದುತ್ತಾನೆ. ಉಪನಯನಾದಿ ಕರ್ಮಗಳು ಮುಗಿದ ಮೇಲೆ ಶಿಷ್ಯನಿಗೆ ತನ್ನ ವಿದ್ಯೆಯನ್ನು ಗುರುವು ಧಾರೆಯೆರೆಯುತ್ತಾನೆ. ಇಲ್ಲಿ ಧಾರೆಯೆರೆಯುವುದು ಅಂದರೆ ಎಲ್ಲವನ್ನು ವಿದ್ಯಾರ್ಥಿಗೆ ಬೋಧಿಸುವುದು ಎಂದರ್ಥ.

ಪಂಪ ಭಾರತದಲ್ಲಿ ಬರುವ ದ್ರೋಣ, ಕರ್ಣನಿಗೆ ಕಲಿಸಲು ಹೊರಟ ಪರಶುರಾಮ ರನ್ನಿಲ್ಲಿ ನೆನಪಿಸಿಕೊಳ್ಳಬಹುದು. ಎರಡನೆಯದಾಗಿ ಜೈನಧರ್ಮದಲ್ಲಿ ಆಚಾರ್ಯರು ಜನಸಾಮಾನ್ಯರನ್ನು ಕೂಡಾ ಆಧ್ಯಾತ್ಮಿಕ ದಾರಿಗೆ ಕರೆದೊಯ್ಯುವ ಕೆಲಸವನ್ನು ಮಾಡುತ್ತಿದ್ದರು. ಜಿನತತ್ವಗಳನ್ನು ಬೋಧಿಸಿಕೊಂಡು ಸಮಾಜಕ್ಕೆ ಸನ್ನಡತೆಯನ್ನು ಹೇಳಿಕೊಡುತ್ತಿದ್ದರು. ಉದಾಹರಣೆಗೆ : ಜಿನಸೇನಾಚಾರ್ಯರು. ವಡ್ಡಾರಾಧನೆಯಲ್ಲಿ ಬರುವ ಜೈನ ಯತಿಗಳು.

ರತ್ನತ್ರಯ ಧರ್ಮಯುಕ್ತರಾಗಿ ನಿಜಶುದ್ಧಾತ್ಮಾನುಭವಾನಂದದಲ್ಲಿರುವ ಕಾಲವನ್ನು ಬಿಟ್ಟು ಉಳಿದ ಕಾಲದಲ್ಲಿ ಭವ್ಯಪ್ರಾಣಿಗಳಿಗೆ ಧರ್ಮವನ್ನುಪದೇಶಿಸುತ್ತ ಮತಿ-ಶ್ರುತ-ಅವಧಿ- ಮನಃಪರ್ಯಯಗಳೆಂಬ ಜ್ಞಾನ ಚತುಷ್ಕಸಮನ್ವಿತರಾಗಿ ನಿರತೀಚಾರ ವ್ರತಶೀಲ ಸಂಪನ್ನರೂ, ಮೃದುಮಧುರ ವಚನವುಳ್ಳವರೂ, ಪರಾನುಗ್ರಹನಿರತರೂ, ಪ್ರಮಾದ ರಹಿತರೂ, ಏಕಾದಶಾಂಗ, ಚತುರ್ದಶಪೂರ್ವಗಳೆಂಬ (೨೫) ಶಾಸ್ತ್ರಗಳ ಜ್ಞಾನದಿಂದ ಸಂಪನ್ನರೂ ಆದ ಮುನಿಶ್ರೇಷ್ಠರು ಉಪಾಧ್ಯಾಯರೆನಿಸುವರು. ಆಚಾರ್ಯ; ಗುರು; ಓಜ; ಇವೆಲ್ಲವೂಗಳಿಗೆ ಸೂಕ್ಷ್ಮ ವ್ಯತ್ಯಾಸಗಳಿವೆ. ವಸಿಷ್ಠನು ರಾಜಗುರು. ವಿಶ್ವಾಮಿತ್ರಾ ರಾಜಗುರು ಆಗಿರಲಿಲ್ಲ. ಅನಂತರವಾದ ಯಾರು ಸತತ ಅಧ್ಯಯನ ಶೀಲರಾಗಿರುತ್ತಾರೋ ಅವರು ಉಪಾಧ್ಯಾಯರು. ಯಾರು ಚರಿಸುತ್ತಿರೋ ಅವರು ಆಚಾರ್ಯರು; ಯಾರು ಪಾಂಡಿತ್ಯವನ್ನು ಪಡೆದಿರುತ್ತಾರೋ ಅವರು ಗುರುಗಳು.

ವೇದ ವಿಹಿತ ಕರ್ಮಗಳನ್ನು ಮಾಡುವವನು ಗುರುವು. ವೇದವನ್ನು ಕಲಿಸುವವನು ಆಚಾರ್ಯನೆನಿಸಿಕೊಳ್ಳುವನು. ಎಂದು ಯಾಜ್ಞವಲ್ಕ್ಯಸ್ಮೃತಿಯಲ್ಲಿ ಬರುತ್ತದೆ. ಇಲ್ಲಿ ಗುರು ಆಚಾರ್ಯರಿಗೆ ಬೇಧವಿದೆ.

ಆಚಾರ್ಯರಿಗೆ ಧರ್ಮದಲ್ಲಿ ಶಾಸನಾಧಿಕಾರವಿರುವುದು. ಅವರು ಬೇರೆ ಮುನಿ ಗಳನ್ನು ತಮ್ಮ ಸಂಘಕ್ಕೆ ಸೇರಿಸಿಕೊಳ್ಳುವರು; ಅವರಿಗೆ ದೀಕ್ಷೆಯನ್ನು ಕೊಡುವರು. ಅಪರಾಧವು ಘಟಿಸಿದರೆ ದಂಡವನ್ನು ಕಟ್ಟುವರು; ಇಲ್ಲವೆ ಸಂಘದಿಂದ ಹೊರಪಡಿಸುವರು. ಆಚಾರ್ಯರಿಗೆ ೩೬ ಗುಣಗಳು ಹೇಳಲ್ಪಟ್ಟವೆ. ಅವು:- ದ್ವಾದಶವಿಧ ತಪಸ್ಸುಗಳು (೧೨) ಗುಪ್ತಿತ್ರಯ (೩) ದಶವಿಧ ಧರ್ಮಗಳು (೧೦) ಪಂಚಾಚಾರಗಳು (೫) ಷಡಾವಶ್ಯಕಗಳು (೬) ದ್ವಾದಶವಿಧ ತಪಸ್ಸುಗಳು:

೧) ಅನಶನ ಇಲ್ಲವೆ ಉಪವಾಸ. ೨ ಉನೋದರತೆ- ಹಸಿವೆಗಿಂತ ಕಡಿಮೆ ಊಟಮಾಡುವುದು. ೩. ವೃತ್ತಿ ಪರಿಸಂಖ್ಯಾನ ಊಟಕ್ಕೋಸ್ಕರ ಹೋಗುವ ಮನೆಗಳ ನಿಯಮ ಮೊದಲಾದುವನ್ನು ಮಾಡಿಕೊಳ್ಳುವುದು. ೪. ರಸ ಪರಿತ್ಯಾಗ-ಆರೂ ರಸಗಳನ್ನು

ಇಲ್ಲವೆ ಒಂದೆರಡನ್ನು ಬಿಡುವುದು. ೫. ವಿವಿಕ್ತ ಶಯ್ಯಾಸನ– ಏಕಾಂತಸ್ಥಾನದಲ್ಲಿ ಇರುವುದು, ಮತ್ತು ಮಲಗುವುದು. ೬. ಕಾಯಕ್ಲೇಶ– ಶರೀರಕ್ಕೆ ಕಷ್ಟಕೊಡುವುದು. ೭. ಪ್ರಾಯಶ್ಚಿತ್ತ–ದೋಷಕ್ಕಾಗಿ ದಂಡ ಕೊಡುವುದು. ೮. ವಿನಯ– ರತ್ನತ್ರಯಕ್ಕೂ, ಅದನ್ನು ಧರಿಸುವವರಿಗೂ ವಿನಯ ತೋರಿಸುವುದು. ೯.ವೈಯಾವೃತ್ಯ–ಪಾದಸಂವಾಹನ ಮೊದಲಾದುವುಗಳಿಂದ ಗುರುಗಳನ್ನೂ, ಮುನಿಗಳನ್ನೂ ಸೇವಿಸುವದು. ೧೦.ಸ್ವಾಧ್ಯಾಯ– ಶಾಸ್ತ್ರಗಳನ್ನು ಓದುವುದು. ೧೧. ವ್ಯುತ್ಸರ್ಗ–ಶರೀರದ ಮೇಲಿನ ಮಮತೆಯನ್ನು ಕಡಿಮೆ ಮಾಡಿಕೊಳ್ಳುವುದು. ೧೨. ಧ್ಯಾನ ಮಾಡುತ್ತಿರುವುದು.

ಷಡಾವಶ್ಯಕಗಳು:– ಪಂಚಾಚಾರಗಳು:

೧.ಸಮತ್ವ– ಎಲ್ಲ ಜೀವಗಳಲ್ಲಿ ಸಮತ್ವಭಾವನೆ; ೧.ವಂದನೆ– ಪೂಜ್ಯರನ್ನು ನಮಸ್ಕರಿಸುವುದು; ೨.ಸ್ತವ– ಪರಮೇಷ್ಠಿಗಳ ಸ್ತುತಿ ೩.ಪ್ರತಿಕ್ರಮಣ–ಹತ್ತಿದ ದೋಷಗಳಿಗಾಗಿ ಪಶ್ಚಾತ್ತಾಪ; ೪.ಪ್ರತ್ಯಾಖ್ಯಾನ – ಮುಂದೆ ಇಂಥ ಪಾಪ ಕರ್ಮಗಳನ್ನು ಮಾಡುವುದಿಲ್ಲೆಂದು ಪ್ರತಿಜ್ಞೆ ಮಾಡುವುದು. ೫.ಕಾಯೋತ್ಸರ್ಗ– ಶರೀರದ ಮೇಲಿನ ಮಮತ್ವವನ್ನು ಬಿಟ್ಟು ಧ್ಯಾನ ಮಾಡುವುದು.

ಪಂಚಾಚಾರಗಳು ಈ ಕೆಳಗಿನಂತಿವೆ : ೧. ದರ್ಶನಾಚಾರ, ೨. ಜ್ಞಾನಾಚಾರ, ೩. ಚಾರಿತ್ರಾಚಾರ, ೪. ತಪ ಆಚಾರ, ೫. ವೀರ್ಯಾಚಾರ ಇವುಗಳ ಪೈಕಿ,

೧. ಸರ್ವಜ್ಞರಾದ ತೀರ್ಥಂಕರರು ಹೇಳಿದ ಜೀವಾದಿ ತತ್ವಗಳಲ್ಲಿ ಶ್ರದ್ಧೆಯಿಡುವದು ದರ್ಶನಾಚಾರವು.
೨. ನಿರ್ಬಾಧವಾದ ಆಗಮವನ್ನೂ ಸ್ವಪರತತ್ವಗಳನ್ನೂ ಆತ್ಮಾನುಭವದಿಂದ ತಿಳಿಯುವುದು ಜ್ಞಾನಾಚಾರವು.
೩. ಸಾಮಯಿಕ, ಛೇದೋಪಸ್ಥಾನ, ಪರಿಹಾರವಿಶುದ್ಧಿ, ಸೂಕ್ಷ್ಮಸಾಂಪರಾಯ, ಯಥಾಖ್ಯಾತ ಚರಿತ್ರಗಳನ್ನು ಆಚರಿಸುವುದು ಚಾರಿತ್ರಾಚಾರವು.
೪. ದ್ವಾದಶತಪಗಳನ್ನು ಪಾಲಿಸುವುದು ತಪ ಆಚಾರವು.
೫. ಪರೀಷಹಾದಿಗಳು ಪ್ರಾಪ್ತವಾದಾಗ ತಮ್ಮ ಶಕ್ತಿಯನ್ನು ಕುಂದಿಸದೆ ಧೈರ್ಯದಿಂದ ಪ್ರವರ್ತಿಸುವುದು ವೀರ್ಯಾಚಾರವು.

*ವಿವರಗಳಿಗೆ ನೋಡಿ: ಮಹದೇವ ಪ್ರಭಾಕರ ಪೂಜಾರ ೧೯೭೬*
*ಜೈನಧರ್ಮದ ಪರಿಭಾಷೆ ಪುಟ. ೧೧೧–೧೧೧೨*
*ಡಿ. ನಾಗೇಶ ರಂಗೋ ಕುಲಕರ್ಣಿ ೨೦೦೭ ಯಾಜ್ಞವಲ್ಕ್ಯ ಸ್ಮೃತಿಃ ಬ್ರಹ್ಮಚಾರಿ ಪ್ರಕರಣ – ೩೪*
*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೨–೧೪೧; ೧೪೨.*

### ೧೭೩. ಉಪಾಸಕವ್ರತ

*ಗೃಹೀತೋಪಾಸಕ ವ್ರತನನಶನಾವಮೋದರ್ಯಾದ್ಯಾಚರಣ ಪರಿಣತಂ*
*ಯಥೋಚಿತವಿಧಿಯಿಂದಾಯುರವಸಾನದೊಳ್ ಸಂಸಾರಕ್ಷಪಕನಾಗಿ .....................*
*(ಆದಿ ಪುರಾಣ ೨–೧೯ ವ)*

ಜೈನ ಗೃಹಸ್ಥನ ಹನ್ನೆರಡು ವ್ರತಗಳು: ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಈ ಐದು ಅಣು ವ್ರತಗಳು: ದಿಗ್ವ್ರತ(ತಾನು ಇಂಥ ದಿಕ್ಕಿಗೆ ಮಾತ್ರ ಹೋಗುವುದೆಂದು ಗೊತ್ತುಪಡಿಸಿಕೊಳ್ಳುವುದು). ದೇಶವ್ರತ(ಇಂಥ ಸ್ಥಳಕ್ಕೆ ಮಾತ್ರ ಹೋಗುವುದೆಂದು ಮೇರೆ ಗೊತ್ತುಪಡಿಸಿಕೊಳ್ಳುವುದು), ದಂಡವಿರತಿ ವ್ರತ (ಕಠಿಣ ದಂಡನೆ ಮಾಡದಿರುವುದು)– ಈ ಮೂರು ಗುಣವ್ರತಗಳು; ಸಾಮಾಯಿಕ (ಪ್ರತಿದಿನ ಬೆಳಿಗ್ಗೆ, ಮಧ್ಯಾಹ್ನ, ಸಂಜೆ ಈ ಮೂರು ಹೊತ್ತು ಆತ್ಮಧ್ಯಾನ ಮಾಡುವುದು), ಪ್ರೋಷಧ ವ್ರತ (ಪಕ್ಷಕ್ಕೊಂದು ಸಲ ಉಪವಾಸ ಮಾಡುವುದು), ಅತಿಥಿ ಸಂಗ್ರಹ (ಅತಿಥಿಗಳಿಗೆ ಆಹಾರ ಕೊಡುವುದು), ಸಲ್ಲೇಖನಾ (ಮರಣಕಾಲದಲ್ಲಿ ಸಂನ್ಯಾಸ ಸ್ವೀಕರಿಸುವುದು; ಉಪವಾಸ ಮಾಡುವುದು–ಈ ನಾಲ್ಕು ಶಿಕ್ಷಾವ್ರತಗಳು.

ಉಪಾಸಕ ಎಂದರೆ ಆರಾಧಕ, ಭಕ್ತ, ಅನುಯಾಯಿ. ಇಲ್ಲಿ ವ್ರತವನ್ನು ಆರಾಧಿಸುವವನು, ಆಧರಿಸುವವನು, ಧ್ಯಾನಿಸುವವನು ಎಂದಿಟ್ಟುಕೊಳ್ಳಬೇಕಾಗುತ್ತದೆ.

ಉಪಾಸನೆ ಮತ್ತು ಭಕ್ತಿಯ ಬಗ್ಗೆ ರಣಜಿತ್ ಗುಹಾ ಅವರು ವಿಶೇಷ ಚರ್ಚೆಯನ್ನು ಮಾಡಿದ್ದಾರೆ. ಭಕ್ತ ಒಂದು ಅರ್ಥದಲ್ಲಿ ದಾಸ. ಅವನು ದೇವರನ್ನು ದಾಟುವುದಿಲ್ಲ ಯಜಮಾನನನ್ನು ದಾಸನು ಆರಾಧಿಸುತ್ತಾನೆ. ಅವರ ನಡುವೆ ಕೂಡು–ಕೊಳ್ಳುವಿಕೆಯ ಸಂಬಂಧವಿದೆ.

*ವಿವರಗಳಿಗೆ ನೋಡಿ: Ranajit Guha 1998 Dominance without hegemony.*

**೧೭೪. ಉಷ್ಣಪ**

*ದಿನಕರಕಿರಣಮನುಷ್ಣಪ*
*ರೆನಿಸಿದ ಮುನಿಜನದ ಹೋಮಧೂಮಂ ಪೀರ್ದ ।*
*ತ್ತೆನಲೊಯ್ಯನೊಯ್ಯನಾಗಳ್*
*ಇನನಪಗತತೇಜಮುಡುಗಲೊಡರಿಚಿತಾಗಳ್ ॥*

*(ಕರ್ಣಾಟಕ ಕಾದಂಬರಿ ೧–೨೨೬)*

ಹೋಮದ ಧೂಮವನ್ನು ಸದಾ ಹೀರಿರುವ ಮುನಿಜನರನ್ನು ಕವಿಯು ಉಷ್ಣಪ ರೆಂದು ಕರೆಯುತ್ತಾನೆ. ಅಂತಹ ಮುನಿಜನರ ಹೋಮದ ಧೂಮವು ಸೂರ್ಯಕಿರಣಗಳನ್ನು ಹೀರಿಬಿಟ್ಟಿತ್ತೋ ಎಂಬಂತೆ ಮೆಲ್ಲಮೆಲ್ಲನೆ ಸೂರ್ಯನ ಕಾಂತಿ ಮಸುಳಿಸಿತು ಎಂಬ ವರ್ಣನೆ ಇಲ್ಲಿದೆ. ಸದಾ ಅಗ್ನಿಯ ಎದುರು ಕುಳಿತುಕೊಳ್ಳುವುದರಿಂದ ಅವರನ್ನು ಉಷ್ಣಪ ರೆಂದು ಕರೆಯಲಾಗಿದೆಯಾದರೂ ಎಲ್ಲಾ ಜನರು ಉಷ್ಣಪರಲ್ಲವೆಂಬುದನ್ನು ನಾವಿಲ್ಲಿ ಮನಗಾಣಬೇಕು. ಅಗ್ನಿಯನ್ನು ಉಷ್ಣವೆಂದು ಕರೆದಿರುವುದು ಗಮನಾರ್ಹ. ಅಗ್ನಿಯು ಉಷ್ಣಕಾರಕ ಗುಣವನ್ನು ಹೊಂದಿದೆ. ದಹನದ ಗುಣವೂ ಅದಕ್ಕಿದೆ ದಹಿಸುವುದು ಉಷ್ಣದ ಕೆಲಸವಾದುದರಿಂದ ಅದು ಶುಭ್ರಗೊಳಿಸುತ್ತದೆ ಎಂದೂ ಅರ್ಥವಿಸಿಕೊಳ್ಳಲು ಸಾಧ್ಯ.

೧೭೫. ಉಳಿಸೆಂಡು

*......ನಂದನವನದೊಳಿರ್ವರು ಮುಳಿ ಸೆಂಡನಾಡುತ್ತಿರ ಲೋಕನ ವಿದ್ಯೆಯ ನೀತಂ*

*ಉಳಿಚೆಂಡಾಟವನ್ನು ಉಳಿಸೆಂಡು ಎಂದು ಕರೆಯುತ್ತಾರೆ. (ಚೆಂಡನ್ನು ಉಳಿಸಿಕೊಂಡು (ಬಚ್ಚಿಟ್ಟು) ಆಡುವ ಒಂದು ಬಗೆಯಿರಬಹುದು.) (ವಡ್ಡಾರಾಧನೆ. (ಅನು) ಟಿ. ಕೇಶವಭಟ್ಟ. ೨೦೧೦. ಪು.೨೨೦)*

ಉಳಿಸೆಂಡು ಮುಚ್ಚಿಟ್ಟು ಹಿಡಿಯಬಂದವರಿಗೆ ಹೊಡೆಯುವ ಫಣೆಯಾಟವೂ ಪೊಡೆಸೆಂಡು ಬಾರು ಚೆಂಡಿನ ಆಟವೂ ಆಗಿರಬೇಕು.

ಕಿಟ್ಟೆಲ್ ಕೂಡಾ ಒಂದು ಬಗೆಯ ಆಟವೆಂದು ಕರೆದಿದ್ದಾರೆ.

*ವಿವರಗಳಿಗೆ : ಸಿ.ವೀರಣ್ಣ ೧೯೮೬ ಪ್ರಾಚೀನ ಸಾಹಿತ್ಯ: ರಾಜಸತ್ತೆಯ ವೈಭವದ ಕಾಲ ಪುಟ. ೨೦೬.*

# ಊ

೧೭೬. ಊರಳಿವು

"ತುಳುಗೋಳೊಳ್ ಪೆಣ್ಬುಯ್ಯಲೊ

*ಜೀವೆಸದೊಳ ನಂಟ ನೆಡೆಜೂಳೂರಟಿವಿನೊಳಂ" (ಗದಾಯುದ್ಧ – ೨-೨೪)*

'ಊರಳಿವು' ಎಂಬುದನ್ನು ಡಾ. ಎಂ. ಚಿದಾನಂದಮೂರ್ತಿಗಳು ಯುದ್ಧ ಪ್ರಭೇದವೆಂದು ರನ್ನನ 'ಗದಾಯುದ್ಧ'ದ ಪದ್ಯವೊಂದರ ಆಧಾರದ ಮೇಲೆ ಭಾವಿಸುತ್ತಾರೆ. ಈ ಬಗ್ಗೆ ಅವರು ಮುಂದುವರಿದು ಬರೆಯುತ್ತಾ "ಯುದ್ಧ ಪ್ರಭೇದಗಳಲ್ಲಿ ಒಂದೊಂದು ಇನ್ನೊಂದರಿಂದ ಸಂಪೂರ್ಣ ಭಿನ್ನವೆಂದೂ ಎಲ್ಲವನ್ನೂ ಗೆರೆ ಎಳೆದು ಬೇರ್ಪಡಿಸಬಹುದೆಂದೂ ಭಾವಿಸಬಾರದು. ಒಂದರ ಜೊತೆಯಲ್ಲಿ ಇನ್ನೊಂದು ಬೆರೆತಿರಬಹುದು" ಈ ಊರಳಿವು ಎಂಬ ಪದವನ್ನು ರನ್ನನು ಪ್ರಯೋಗಿಸಿರುವ ಒಂದು ಧೋರಣೆಯನ್ನೂ ಸಂದರ್ಭವನ್ನೂ ಗಮನಿಸಿದಾಗ ಊರಳಿವು ಎಂಬುದು ಯುದ್ಧ ಪ್ರಭೇದವೆಂಬ ಅರ್ಥದಲ್ಲಿ ಪ್ರಯೋಗವಾಗಿದೆಯೆಂದು ತೋರುತ್ತದೆ.

ತಮಿಳುನಾಡು ಮತ್ತು ಮೈಸೂರು ಪ್ರಾಂತ್ಯದಲ್ಲಿ ಊರು ಮತ್ತು ಸಭಾ ಆಡಳಿತದ ವಿಕೇಂದ್ರಿಕರಣ ಮಾದರಿಗಳಾಗಿದ್ದವು. ಇವು ಹೆಚ್ಚಿನ ಅಧಿಕಾರವನ್ನು ಪಡೆದುಕೊಂಡಿರುವುದು ಚೋಳ ಮತ್ತು ವಿಜಯನಗರದ ಕಾಲಘಟ್ಟದಲ್ಲಿ ಅಗ್ರಹಾರಗಳು ಕೂಡಾ ಕ್ರಿಯಾಶೀಲವಾದವು. ಕೃಷಿ ಚಟುವಟಿಕೆಯು ಈ ಕಾಲದಲ್ಲಿ ಹೆಚ್ಚು ತೀವ್ರಗೊಂಡವು.

ದಕ್ಷಿಣ ಭಾರತದಲ್ಲಿ ನಾವು ಮೂರು ಬಗೆಯ ಹಳ್ಳಿಗಳನ್ನು ಗುರುತಿಸಬಹುದು; ಅವು ಊರ್ ಅಥವಾ ಊರು, ಸಭಾ ಮತ್ತು ನಗರಂ ಅಥವಾ ನಗರ. ಊರ್

ಎಂಬುದು ಕೃಷಿಕರ ಜಾತಿಗಳ ಜನ ವಾಸ ಮಾಡುತ್ತಿದ್ದ ಸಾಮಾನ್ಯ ಮಾದರಿಯ ಗ್ರಾಮ. ಇಲ್ಲಿ ಬಹುಶಃ ಗ್ರಾಮಸ್ಥರೆಲ್ಲಾ ಸಂಯುಕ್ತವಾಗಿ ಭೂಮಿ ಪಡೆದಿದ್ದು, ಅಲ್ಲಿಯ ಯಜಮಾನನು ಕಂದಾಯವನ್ನು ಸಂಗ್ರಹಿಸಿ, ಜನರ ಪರವಾಗಿ ಸಂದಾಯ ಮಾಡುತ್ತಿದ್ದಿರಬೇಕು. ಮುಖ್ಯವಾಗಿ ತಮಿಳುನಾಡಿನ ದಕ್ಷಿಣ ಭಾಗದಲ್ಲಿ ಈ ಬಗೆಯ ಹಳ್ಳಿಗಳಿದ್ದುವು. ಸಭಾ ಮಾದರಿಯ ಹಳ್ಳಿಗಳು ಬ್ರಾಹ್ಮಣರಿಗೆ ನೀಡಿದ್ದ ಹಳ್ಳಿಗಳು ಅಥವಾ ಬ್ರಹ್ಮದೇಯ ಮತ್ತು ಅಗ್ರಹಾರಗಳು. ಇಲ್ಲಿನ ಬ್ರಾಹ್ಮಣರು ವ್ಯಕ್ತಿಶಃ ಭೂಮಿಯಲ್ಲಿ ಹಕ್ಕು ಪಡೆದಿದ್ದರಾದರೂ ಕೃಷಿ ಕಾರ್ಯಗಳನ್ನು ಒಂದೊಟ್ಟಾಗಿ ನಿರ್ವಹಿಸುತ್ತಿದ್ದರು. ನಗರಂ ಬಗೆಯ ಗ್ರಾಮಗಳು ಉದ್ಯಮಿಗಳೂ ಹಾಗೂ ವರ್ತಕರ ಒಕ್ಕೂಟಗಳ ಪ್ರಾಬಲ್ಯವಿದ್ದಂತಹವು. ಬಹುಶಃ ವ್ಯಾಪಾರ ಉದ್ಯಮಗಳು ಇಳಿಮುಖವಾಗಿ ವರ್ತಕರು ಹಳ್ಳಿಗಳಿಗೆ ಹೋಗಿ ನೆಲೆಸಿದುದರಿಂದ ಹೀಗಾಗಿರಬಹುದು. ಚಾಲುಕ್ಯರ ರಾಜ್ಯದಲ್ಲಿ ಗ್ರಾಮದ ವ್ಯವಹಾರಗಳನ್ನು ಮಹಾಜನರು ಎಂದು ಕರೆಯಲ್ಪಡುತ್ತಿದ್ದ ಗ್ರಾಮದ ಹಿರಿಯರು ನಿರ್ವಹಿಸುತ್ತಿದ್ದರು. ಒಟ್ಟಿನಲ್ಲಿ ಕ್ರಿ.ಶ. ೩೦೦ ರಿಂದ ೭೫೦ರ ಅವಧಿಯು ಗ್ರಾಮಾಂತರದ ವಿಸ್ತರಣೆ, ಗ್ರಾಮಾಂತರ ಜೀವನದ ಸುವ್ಯವಸ್ಥೆ ಮತ್ತು ಕೃಷಿ ಭೂಮಿಯ ಸದುಪಯೋಗ ಮುಂತಾದುವುಗಳಿಗೆ ಉತ್ತಮ ನಿದರ್ಶನವಾಗಿದ್ದು, ಅದಕ್ಕೆ ಸಾಕಷ್ಟು ಸಾಕ್ಷ್ಯಾಧಾರಗಳು ಒದಗಿವೆ.

ಊರ್ ಎಂದರೆ ತೊಡೆ. ಯಾರು ಊರ್‌ನ ಮೂಲಕ ಕೆಲಸ ಮಾಡುತ್ತಾರೋ ಅವರು ಊರವರು ಅಂದರೆ ನೆಲೆ ನಿಂತವರು. ಶಂಬಾ ಜೋಶಿ ಹೀಗೆ ಊಹಿಸುತ್ತಾರೆ: ಗ್ರಾಮ, ಊರು, ಪುರ ಎಂಬಿವು ನನ್ನ ತಿಳುವಳಿಕೆಯಂತೆ ಅಷ್ಟು ಪುರಾತನವಲ್ಲ. ಗ್ರಾಮ ಮತ್ತು ಪುರ ಎಂಬವು ನಮ್ಮ ನಾಡಿನಲ್ಲಿ ಅಷ್ಟು ವಿಶೇಷವಾಗಿಲ್ಲ. ಅಲ್ಲದೆ ಹಳ್ಳಿಗರ ಬಾಯಿಗೆ ಸರಿಹೋಗುವ ಮಾತುಗಳೂ ಇವಲ್ಲ. ಆದುದರಿಂದ ಇವು ನಮ್ಮ ಮೂಲ ನಾಡವರೇ ಕಟ್ಟಿಕೊಂಡ ಊರುಗಳೆಂದು ಗ್ರಹಿಸಲಿಕ್ಕಾಗುವುದಿಲ್ಲ. 'ಊರು' ಎಂಬುದು ಈಗ ಜನಸಾಮಾನ್ಯರ ಬಾಯಲ್ಲಿರುವುದು ನಿಜ. ಆದರೆ 'ಊರು' ಎಂಬ ಮಾತು ಮಾನವನ ಪ್ರಾಥಮಿಕ ಬಿಡಾರದ ಸೂಚಕವಾಗಿಲ್ಲ. ಊರು, ನಾಡು, ನೆಲೆ ಇವೆಲ್ಲವೂ ಊರಿಕೊಂಡು, ನಟ್ಟುಕೊಂಡು ಸ್ಥಿರವಾಗಿ ನಿಂತಕಾಲದ ನೆಲೆವೀಡುಗಳಿಂದಲೆ ಹೊರಡುತ್ತದೆ.

ಬಾಡ ಮತ್ತು ಊರಿನ ಸಂಬಂಧಾಂತರಗಳು ಹೀಗಿವೆ:

ಇತ್ತೀಚೆಗೆ ಊರು ಎಂಬುದು ಹೆಚ್ಚು ಬಳಕೆಯಲ್ಲಿದ್ದರೂ ಹಿಂದಕ್ಕೆ ಅದು ಅಷ್ಟು ಪ್ರಚಾರದಲ್ಲಿ ಇದ್ದಿಲ್ಲ. ಪಾಂಡವರು ಅಜ್ಞಾತವಾಸದಿಂದ ಮರಳಿ ಬಂದ ಬಳಿಕ 'ಆಯ್ದು ಬಾಡಮಂ ಅವರ್ಗೀವುದು' ಎಂದು ಕೃಷ್ಣನು ಕೌರವನಿಗೆ ಹೇಳಿದ ಹಾಗೆ ಪಂಪನು ವರ್ಣಿಸಿದ್ದಾನೆ. ೧೦ನೆಯ ಶತಮಾನದಲ್ಲಿ ಊರು ಎಂಬರ್ಥದಲ್ಲಿ 'ಬಾಡ' ಶಬ್ದವು ಬಳಕೆಯಲ್ಲಿರಬೇಕು. 'ಬಾಡ'ವೆಂಬುದು ಪಟ್ಟಿಯ ಬಳಗಕ್ಕೆ ಸೇರಿದ ಪದವಾಗಿದೆ. ಪಟ್ಟಿಯು ಎಷ್ಟು ವಿವಿಧ ರೂಪತಾಳಿ ನಮ್ಮ ನಾಡಿನಲ್ಲಿ ನೆಲೆಸಿದೆಯೆಂಬುದನ್ನು ನಿರೀಕ್ಷಿಸಿದರೆ

'ಪಟ್ಟಿ'ಯ ವಿಸ್ತಾರದ ಬಗೆಗೆ ಸಂದೇಹವೆ ಉಳಿಯುವುದಿಲ್ಲ.

ಹಳ್ಳಿ ಮತ್ತು ಊರುಗಳಿಗೂ ಸಂಬಂಧವಿದೆ:

ಏಳನೆಯ ಶತಮಾನದ ಚಾಲುಕ್ಯರ ಒಂದು ಶಾಸನದಿಂದ ಲಾಟದೇಶದಲ್ಲಿ ಅಲ್ಲೂರಕ ಗ್ರಾಮವಿದ್ದುದು ತಿಳಿಯುತ್ತದೆ. 'ಊರು' ಉತ್ತರ ಪದದ ಸ್ಥಲನಾಮ! ಅಲ್ಲ ಹೆಸರಿನದು! ಬಳ್ಳಿಗಾಮೆಯ ಶಾಸನದಲ್ಲಿ ಅಲಂವಳ್ಳಿ, ಅಲವಳ್ಳಿ ಈ ಎರಡೂ ಹೆಸರಿನ ಊರುಗಳು ಬರುತ್ತವೆ. (ಶಂಬಾ ೧೯೯೯)

*ವಿವರಗಳಿಗೆ ನೋಡಿ: Romila Thapar 1975 The Past and Prejudice P. 61*

*ಆರ್.ಎಸ್. ಶರ್ಮ ೨೦೦೭ ಪ್ರಾಚೀನ ಭಾರತ ಪುಟ. ೨೪೫*

*ಶಂಬಾ ಜೋಶಿ ೧೯೯೯ ಸಂಪುಟ. ೨, ೩, ಸಂಪುಟ. ೨ ಪುಟ. ೧೪೧,*

*ಸಂಪುಟ. ೩ ಹಾಲುಮತ ದರ್ಶನ ಪುಟ. ೧೦೫, ಸಂಪುಟ. ೨ ಪುಟ. ೧೩೯*

*ಡಾ. ಆರ್. ಶೇಷಶಾಸ್ತ್ರಿ ೨೦೦೪ ಕರ್ನಾಟಕದ ವೀರಗಲ್ಲುಗಳು ಪುಟ. ೧೬೫*

## ಋ

### ೧೭೭. ಋಣ

ಸಂಸ್ಕೃತದಲ್ಲಿ 'ಋಣ' ಎಂಬ ಒಂದು ಶಬ್ದವಿದೆ. ಈ ಶಬ್ದದ ಅರ್ಥವನ್ನು ನಾವು ಕನ್ನಡದಲ್ಲಿ ಸಾಲ ಎಂದು ಮಾಡಬಹುದು. ಆದರೆ ರೂಢಿಯಲ್ಲಿ ಸಾಲ ಎಂಬ ಶಬ್ದಕ್ಕೆ ಇರುವ ಅರ್ಥದ ವ್ಯಾಪ್ತಿಗಿಂತ ಹೆಚ್ಚು ಋಣ ಎಂಬ ಶಬ್ದದಲ್ಲಿರುತ್ತದೆ. ಇಂಗ್ಲಿಷ್ ಭಾಷೆಯಲ್ಲಿ ಸಾಲಕ್ಕೆ 'ಡೆಟ್' ಎಂದು ಪದವನ್ನೂ ಬಳಸುತ್ತಾರೆ. ಇದರೊಂದಿಗೆ ಇನ್ನೊಂದು ಶಬ್ದ 'ಆಬ್ಲಿಗೇಶನ್' ಎಂಬ ಪದವನ್ನು ಬಳಸುತ್ತಾರೆ. ಇವೆರಡು ಶಬ್ದಗಳ ಅರ್ಥದ ವ್ಯಾಪ್ತಿಯಲ್ಲಿ ಅಂತರವಿದೆ. ಒಕ್ಕಲು ಧನಿಯ ಋಣದಲ್ಲಿದ್ದಾನೆ ಎಂದರೆ ಅದರಲ್ಲಿ ಭೂಮಿ ಮತ್ತು ಕೂಲಿ ಎರಡರ ಸಮಸ್ಯೆಯೂ ಬರುತ್ತದೆ.

ಗಂಡ ಬಿಟ್ಟರೂ ಕೂಡ ಹೆಂಡತಿಗೆ ಅವನ ಋಣ ಉಳಿಯುತ್ತದೆ.

ಪಂಚತಂತ್ರದಲ್ಲಿ ದೇವ, ಅಗ್ನಿ, ದ್ವಿಜ, ಗುರು, ಪಿತೃ ಋಣಗಳ ಪರಿಕಲ್ಪನೆಯಿದೆ. (ಭೇದ ಪ್ರಕರಣ ಪುಟ. ೫೭)

೧. "ಋತ" ಶಬ್ದವೂ 'ಋ' ಧಾತುವಿನಿಂದ ಬಂದದ್ದು. ಇಲ್ಲಿ "ಋ" ಎಂದರೆ ನಡೆಯುವುದು "ಪಡೆಯುವುದು" ಎಂದರ್ಥ. ಕಾಲ ಕಾಲಕ್ಕೆ ಸರಿಯಾಗಿ ನಡೆಯುವುದು ಋತು.

೨. ಋಜು "ಶಬ್ದ" "ಋಜ" ಧಾತುವಿನಿಂದ ಬಂದದ್ದು. "ಋಜು" ಎಂದರೆ ನಡೆಯುವುದು ಇರುವುದು, ಸಂಪಾದಿಸುವುದು.

೩. "ಋಣ" ಶಬ್ದವೂ 'ಋತ' ಶಬ್ದದಂತೆ 'ಋ' ಧಾತುವಿನಿಂದ ಬಂದದ್ದು. (ಋ–ಗತಿ ಪ್ರಾಪಣಯೋಃ)

ಹಾಗೆಂದರೆ ಸಾಲ ಕಡೆ ಇಬ್ಬರೂ ಮನುಷ್ಯರ ಪರಸ್ಪರ ವರ್ತನೆಯಿಂದ ಸಹಜವಾಗಿ ಆಗುವ ಫಲಾಫಲಾ ಸಂಬಂಧವೇ ಋಣ. ಜೀವಕ್ಕೂ ಲೋಕಕ್ಕೂ ಆಗುವ ಸಂಪರ್ಕದಲ್ಲಿ ಸ್ವಾಭಾವಿಕವಾಗಿ ವಿಧಿಸುವ ಅನ್ಯೋನ್ಯ ಪರಿಣಾಮ ಪರಂಪರೆಯೇ "ಋಣ".

ಪ್ರತಿಯೊಬ್ಬ ವ್ಯಕ್ತಿಯೂ ಮೋಕ್ಷವನ್ನು ಪಡೆಯುವ ಮುನ್ನ ತನ್ನ ಬಾಳಿನ ಮೂರು ಋಣಗಳಾದ ಗುರುಋಣ, ಪಿತೃಋಣ, ದೈವಋಣಗಳನ್ನು ಅಗತ್ಯವಾಗಿ ತೀರಿಸಲೇ ಬೇಕು. ಗುರುಋಣ ತೀರುವುದು ವಿದ್ಯಾ ಪರಿಪೂರ್ಣತೆಯಿಂದ. ಪಿತೃಋಣ ಉತ್ತಮ ಪೀಳಿಗೆಯ ಜನ್ಮದಾತೃವಾಗುವುದರಿಂದ ಮತ್ತು ದೈವಋಣ ಯಜ್ಞಯಾಗಾದಿಗಳಿಂದ. ಈ ಋಣಗಳಿಂದ ಮುಕ್ತನಾದಲ್ಲದೆ ಮೋಕ್ಷವಿಲ್ಲ. ಸಂನ್ಯಾಸಿಯಾಗುವ ಮೊದಲು ಪ್ರಪಂಚದ ಸಾರಾಸಾರಗಳನ್ನು ಅರಿತು ಸಾರಗ್ರಾಹಿಯಾಗಿ ವಿಹಿತವಾದ ಎಲ್ಲಾ ಪ್ರಾಪಂಚಿಕ ಸುಖಗಳನ್ನು ಅನುಭವಿಸಿರಬೇಕು. ಋಣವೆಂದರೆ ಸಾಲ ಎಂಬ ಅರ್ಥವೆಂಬ ಅರ್ಥವಿದೆ. ಅದೇ ರೀತಿಯಲ್ಲಿ ಹಂಗು ಎಂದು ಕೂಡಾ. ಇವುಗಳನ್ನು 'ಋಣತ್ರಯ'ವೆಂದು ಕರೆಯುತ್ತಾರೆ.

'ಋಣ' ಎಂದರೆ ಸಾಮಾನ್ಯವಾದ ಅರ್ಥದಲ್ಲಿ 'ಸಾಲ' ಎಂದು ಅರ್ಥ. ವೈದಿಕ ಪರಿಭಾಷೆಯಲ್ಲಿ 'ದೇವಋಣ', 'ಗುರುಋಣ', ಪಿತೃಋಣ' – ಮೂರನ್ನು ತೀರಿಸುವುದು ಕಷ್ಟ 'ದೇವಋಣ'ವನ್ನು ಪೂಜೆ, ಪುರಸ್ಕಾರಗಳಿಂದ; ಗುರು ಋಣವನ್ನು ವಿದ್ಯೆಯ ದಾನದ ಮೂಲಕ; ಪಿತೃಋಣವನ್ನು ಪಿಂಡ ಪ್ರಧಾನ ಮಾಡುವುದರ ಮೂಲಕ ತೀರಿಸಲು ಸಾಧ್ಯ. 'ಋಣ'ವನ್ನು ದಾಟಲಾಗುವುದಿಲ್ಲ. ಹಾಗೂ ಋಣ ನಮ್ಮನ್ನು ಆಳುತ್ತದೆಯೆನ್ನುವುದು ಮೇಲು ನೋಟಕ್ಕೆ ತುಂಬಾ ಸಾಮಾನ್ಯವಾದ ಪರಿಭಾಷೆಯ ಹಾಗೆ ಕಾಣಿಸುತ್ತದೆ. ಆದರೆ, ಆಂತರಿಕವಾಗಿ ಇದು ವಸಾಹತು ಪೂರ್ವದ ಒಂದು ಅಲಿಖಿತ ಹಾಗೂ ನಿರ್ದಿಷ್ಟ ನಂಬಿಕೆಗಳನ್ನು ಹುಟ್ಟು ಹಾಕಿದ ಪರಿಕಲ್ಪನೆಯೂ ಹೌದು. ಧನಿಗೆ ಒಕ್ಕಲಿನ ಋಣ. ಒಕ್ಕಲಿಗೆ ಧನಿಯ ಋಣವಿದೆ. ಒಕ್ಕಲು ಧನಿಯನ್ನು ದಾಟಬಾರದು ಎನ್ನುವುದು 'ಅಧಿಕಾರ'ವರ್ಗದ ಒಂದು ಹಿತಾಸಕ್ತಿ. ಹೇಗೆ 'ಋಣ'ವೆನ್ನುವುದು ಇರುತ್ತದೆಯೋ ಹಾಗೆಯೇ 'ಋಣ' ಪರಿಹಾರಕ್ಕೂ ಕೆಲವು ವಿಧಿ ವಿಧಾನಗಳನ್ನು ಪರಿಕಲ್ಪಿಸಲಾಗಿದೆ. ಇದಕ್ಕೆ ಲೌಕಿಕದ ಅರ್ಥವಿರುವ ಹಾಗೆಯೇ ಅಲೌಕಿಕವಾದ ಅರ್ಥವೂ ಇದೆ. ಮತ್ತು 'ಋಣ' ಎನ್ನುವುದು ಒಂದು ಜಾತಿಯಲ್ಲಿರುವ ನಂಬಿಕೆಯ ಪ್ರಶ್ನೆಯಲ್ಲ. ಇದು ಎಲ್ಲಾ ಜಾತಿಯಲ್ಲೂ ಹಾಗೂ ಎಲ್ಲಾ ಪ್ರದೇಶಗಳಲ್ಲಿಯೂ ಇರುವ ಪರಿಭಾಷೆ. ದ್ಯೋತಕವೂ ಹೌದು. ಮೊದಲು ಕೆಲವು ಮಾದರಿಗಳನ್ನು ಪರಿಶೀಲಿಸಬಹುದು:

| | | |
|---|---|---|
| ದೇವರ ಋಣ | > | ಮನುಷ್ಯ |
| ಭೂಮಿಯ ಋಣ | > | ಮನುಷ್ಯ |
| ಗಂಡ ಋಣಕ್ಕೆ | > | ಹೆಣ್ಣು |

ತಂದೆ-ತಾಯಿಯ ಋಣ > ಮಕ್ಕಳಿಗೆ
ನಿಸರ್ಗದ ಋಣ > ಮನುಷ್ಯನಿಗೆ
ಧನಿಯ ಋಣ > ಒಕ್ಕಲಿಗೆ
ಕೊಡುವವನ ಋಣ > ತೆಗೆದುಕೊಳ್ಳುವವನಿಗಿರುತ್ತದೆ

ಇದರ ಬಗ್ಗೆ ಹೇರಳ ಉದಾಹರಣೆಗಳು ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ದೊರೆಯುತ್ತವೆ.

*ವಿವರಗಳಿಗೆ ನೋಡಿ: Madan. T.N. 2001. Non – Renuciation*
*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೯-೪೬*
*ಡಿ.ವಿ.ಜಿ. ೧೯೭೫ ಋತ, ಸತ್ಯ, ಧರ್ಮ ಪುಟ. ೧೫-೧೬*

**೧೭೮. ಋತವಾಕ್ಯ**

"*ಅನುಪಮ ವಿಕ್ರಮ ಕ್ರಮಮುದಾರ ಗುಣಂ* **ಋತವಾಕ್ಯ***ಮೆಂಬ*" ಎಂದು ಪಂಪ ಭಾರತದಲ್ಲಿ ಬರುತ್ತದೆ.

*(ಪಂಪ ಭಾರತ ೧೦-೯೩)*

ಋತವಾಕ್ಯವೆಂದರೆ ಸತ್ಯ ವಾಕ್ಯ. ಋತಕ್ಕೆ ವಿರುದ್ಧವಾದ ಶಬ್ದ ಅನೃತ (ಸುಳ್ಳು) 'ಸತ್ಯಮೇವ ಜಯತೆ ನಾನೃತಂ' ಎಂಬ ಉಕ್ತಿಯನ್ನೂ, ಅಲ್ಲದೆ ಗೋವಿನ ಹಾಡಿನಲ್ಲಿ ಬರುವ ಪುಣ್ಯಕೋಟಿಯು ಹೇಳುವ 'ಸತ್ಯವಾಕ್ಯಕ್ಕೆ ತಪ್ಪಿ ನಡೆದರೆ ಮೆಚ್ಚನಾ ಪರಮಾತ್ಮನು' ಎಂಬ ನುಡಿಯನ್ನು ಸ್ಮರಿಸಿಕೊಳ್ಳಬಹುದು. ಪಂಪನು ಬದುಕಿದ ಕಾಲದ ಮಹತ್ವದ ಮೌಲ್ಯಗಳಲ್ಲಿ 'ಸತ್ಯ'ವೂ (ನನ್ನಿ) ಒಂದು. ಈ ಮೌಲ್ಯದ ಪ್ರತಿನಿಧಿಯಾಗಿ ಕರ್ಣ, 'ನನ್ನಿಯೊಳಿನ ತನಯಂ' ಎನಿಸಿಕೊಂಡಿದ್ದಾನೆ.

ಋತದ ಭಾವನೆಯಿಂದ ಹುಟ್ಟಿ ಬಂದಿರುವುದು ಸತ್ಯದ ಭಾವನೆ. ಯಾವುದು ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ ಏಕರೂಪವಾಗಿರುತ್ತದೆಯೋ ಅದು ಋತ, 'ಋ' ಎಂದರೆ ನಡೆಯುವುದು.

"ಋತ" ಶಬ್ದಕ್ಕೆ ಇನ್ನೂ ಕೆಲವು ಅರ್ಥಗಳಿವೆ. ೧. ಯಜ್ಞ, ೨. ಉಂಛಶೀಲ (ಕಾಡಿನಲ್ಲಿ ತಾನಾಗಿ ಎದುರಿಸ ಧಾನ್ಯವನ್ನಾಗಿರಿಸಿ ಆಹಾರ ಮಾಡಿಕೊಳ್ಳುವುದು. ೩. ನೀರು. ೪. ಸೂರ್ಯ. ೫. ವಿಷ್ಣು. ೬. ರುದ್ರ. ೭. ಋಷಿ ಪ್ರಭೇದ.

'ಋತ' ಸಂರಕ್ಷಕನೆಂಬ ವರುಣನು ಜಲಾಭಿಮಾನಿ ದೇವರು ಆಗುವಾಗ ಆತನು ರಸಾಧಿಪ : ಚಂದ್ರನೇ ಇರಲಿಕ್ಕೆ ಬೇಕು, ಎಂದು ಜಾಗತಿಕ ಸಂಕೇತದ ಬಲದಿಂದಲೇ ನಿಃಸಂದಿಗ್ಧವಾಗಿ ಸಿದ್ಧವಾಗುತ್ತದೆ. ಮಿತ್ರನ (ಸೂರ್ಯ) ಸಂಗಾತಿಯಾದ ವರುಣನು ಚಂದ್ರನಾಗುವ ಕಾರಣ ಈ ಸಾಂಕೇತಿಕತೆಯು ಅಮಾವಾಸ್ಯಾ ಆರಾಧಕರ ಸಂಪ್ರದಾಯದ್ದಾಗಲೇಬೇಕಾಗುತ್ತದೆ.

ಈ ಋಗ್ವೇದ ಸಂಹಿತೆಯಲ್ಲಿ ಅರ್ಥದ ನೆಲೆ ತಿಳಿಯದಿರುವ ಒಂದು ಮಹತ್ವದ

ಕಾರಣವು, ಅಲ್ಲಿಯ, ವರ್ಣನೆಗಳು ಒಳಗೊಂಡಿರುವ ಇಬ್ಬಗೆಯ 'ಸತ್ಯ'! ಋತ : ಸತ್ಯದ ತಳಹದಿಯ ಮೇಲೆ ನಿಂತ ವಿಶ್ವದ ಬಗೆಗಿನ ಶ್ರದ್ಧೆಯ ನಿರ್ದೇಶವಿರುವ ಈ ವೇದದಲ್ಲಿಯೆ, ವಿಶ್ವದ ಮೂಲತತ್ವ 'ಏಕಂ ಸತ್' ಇದೊಂದೇ! ಎಂಬ ಶ್ರದ್ಧೆಯ ಉಲ್ಲೇಖವೂ ಉಂಟು! 'ಏಕಂ' ಸ್ವರೂಪೀ ಸತ್ಯವು, ರೇತಸತ್ಯ ಎಂಬುದನ್ನು ವಿವರಿಸಿದ್ದುಂಟು. ಈ ಆಪ : ರಸ ರೇತ ಸತ್ಯವನ್ನು ಸೌರ ಋತ : ಸತ್ಯದ ಆಭಾಸವಾಗುವ ತೆರನಾಗಿ, ಸಂಭ್ರಾಮಕ ರೀತಿಯಲ್ಲಿ ಇಡೀ ಈ ಸಂಹಿತೆಯ ಕಟ್ಟಡವಿದೆ!

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೪ ಪುಟ. ೧೧೩, ೧೧೪*

*ಡಿ.ವಿ.ಜಿ. ೧೯೭೫ ಋತ, ಸತ್ಯ, ಧರ್ಮ ಪುಟ. ೯-೧೧.*

**೧೭೯. ಋತ್ವಿಜರು**

*ಅರಸಂ ದೀಕ್ಷಿತನಿಲ್ಲಿ* ***ಋತ್ವಿಜರು****ಮೆಮ್ಮೀ ನಾಲ್ವರುಂ ಸಂಗರಾ*
*ಧ್ವರದೊಳ್ ತಾನುಪದೇಶಕಂ ಮುರಹರಂ ನೀನುಂ ಗೃಹೀತವ್ರತಾ ।*
*ಚರಣವ್ಯಾಪಿಕೆಯುಂ ಭವತ್ಪರಿಭವಂ ಸಂಚಾರಕಂ ಕೌರವೇ*
*ಶ್ವರನೀತಂ ಪಶುವಾಗೆ ಬೇಳ್ವೆನಿವನಂ ಕೋಪಾಗ್ನಿಯಿಂದಗ್ನಿಜೇ ॥*

(ಸಾಹಸ ಭೀಮ ವಿಜಯ ೮-೪೬)

ಎಲೌ ಅಗ್ನಿಪುತ್ರಿಯೆ, ಧರ್ಮರಾಜನೇ ಯಜಮಾನನಾಗಿ, (ತಮ್ಮಂದಿರಾ) ನಾವು ನಾಲ್ವರೂ ಋತ್ವಿಜರಾಗಿ, ಶ್ರೀಕೃಷ್ಣನು ಉಪದೇಶಕನಾಗಿ ನೀನು ವ್ರತಧಾರಿಣಿಯಾಗಿ, ನಿನಗಾಗಿದ್ದ ಅವಮಾನವೇ ಪ್ರೇರಕವಾಗಿ, ನನ್ನ ಕೋಪಾಗ್ನಿಯೆ ಬೆಂಕಿಯಾಗಿ, ಯುದ್ಧವೆಂಬ ಯಜ್ಞದಲ್ಲಿ ಕುರುರಾಜನೆಂಬ ಈ ಯಜ್ಞಪಶುವನ್ನು ಬಲಿಕೊಟ್ಟೆನು.

ಋತ್ವಿಜರೆಂದರೆ ಯಾಗ ಮಾಡುವವನಿಗೆ ಸಹಾಯ ಮಾಡುವವರು ಅಥವಾ ಯಜ್ಞ ಪುರೋಹಿತರು. ದೀಕ್ಷಿತರು ಎಂದರೆ ದೀಕ್ಷೆ ತೊಟ್ಟವರು. ಇಲ್ಲಿ ಯುದ್ಧ ಯಜ್ಞದ ಪರಿಕಲ್ಪನೆಯಿದೆ.

ಯತ್ವಿಜರು ಹದಿನಾರು ಹೋತೃಗಣಗಳಲ್ಲಿ ಹೋತೃ, ಮೈತ್ರಾವರುಣ, ಅಚ್ಚಾವಾಕ ಗ್ರಾವಸ್ತುತ, ಅಧ್ವರ್ಯುಗಣ, ಅಧ್ವರ್ಯು, ಪ್ರಸ್ಥಾತಾ, ನೇಷ್ಟಾ, ಉನ್ನೇತಾ, ಉದ್ಗಾತೃಗಣ, ಉದ್ಗಾತೃ, ಪ್ರಸ್ತೋತೃ, ಪ್ರತಿಹರ್ತೃ, ಸುಬ್ರಹ್ಮಣ್ಯ, ಬ್ರಹ್ಮಗಣ, ಬ್ರಹ್ಮ ಬ್ರಾಹ್ಮಣಾಚ್ಛಂಸಿ, ಆಗ್ನೀಧ್ರ, ಸೋತೃ.

ಆಹವನೀಯಾದಿ ಅಗ್ನಿ ಸ್ವೀಕಾರ, ಅಷ್ಟಕಾ, ಯಜ್ಞಗಳನ್ನು ಯಾವನನ್ನು ವರಿಸಿ ಗೃಹಪತಿಯು ಮಾಡುವನೋ, ಅವನು, ಅವನಿಗೆ 'ಋತ್ವಿಕ್' ಎಂದು ಕರೆಯುವನು.

ಹದಿನಾರು ಮಂದಿ ಋತ್ವಿಜರು. ಅದರಲ್ಲಿ ಹೋತೃ, ಅಧ್ವರ್ಯು, ಬ್ರಹ್ಮ ಉದ್ಗಾತೃಗಳು, ಸಂಪೂರ್ಣ ದಕ್ಷಿಣೆಯ ಅರ್ಧಕ್ಕೆ ಹಕ್ಕುದಾರರು. ೪೮ ಗೋವುಗಳು ಆ ಅರ್ಧವು. ಮೈತ್ರಾವರುಣಿ ಪ್ರತಿಪ್ರಸ್ಥಾತೃ, ಬ್ರಾಹ್ಮಣಾಚ್ಛಂಸಿ, ಪ್ರಸ್ತೋತೃಗಳು ಅರ್ಧದ ಅರ್ಧ ೨೪ ಗೋವುಗಳು ದಕ್ಷಿಣೆ ಉಳ್ಳವರು. ಅಚ್ಛಾವಾಚುನೇಷ್ಟೃ, ಅಗ್ನೀಧ್ರ, ಪ್ರತಿಹರ್ತೃ

ಎಂಬುವರು ಮೂರನೆಯ ಒಂದು ಭಾಗದ ದಕ್ಷಿಣೆ ಉಳ್ಳವರು. ೧೨ ಗೋವುಗಳು ಗ್ರಾವಸ್ತುತ್ ನೇತೃ, ಹೋತೃ, ಸುಬ್ರಹ್ಮಣ್ಯ ಈ ಋತ್ವಿಜರು ಮುಖ್ಯ ಋತ್ವಿಜರ ದಕ್ಷಿಣೆಯ ನಾಲ್ಕನೆಯ ಒಂದಂಶದ ದಕ್ಷಿಣೆ ಉಳ್ಳವರು ಎಂದು ಮನು ಹೇಳುತ್ತಾನೆ.

*ವಿವರಗಳಿಗೆ ನೋಡಿ: ಟಿ. ವಿ. ವೆಂಕಟಾಚಲಶಾಸ್ತ್ರೀ ೧೯೯೯ ಶ್ರೀವತ್ಸ ನಿಘಂಟು ಪುಟ. ೬೬*
*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೨-೧೪೩*

### ೧೮೦. ಋಷಿ

*ಋಷಿಯರಲ್ಲದೆ ಬೇರೆಯವರಿಗೆ ಜ್ಯೋತಿಷ್ಯ ಕಲಿಸಬಾರದು.*

*(ಸುಕುಮಾರಸ್ವಾಮಿಯ ಕಥೆ (ಅನು) ಟಿ.ಕೇಶವಭಟ್ಟ ೨೦೧೦ ಪುಟ. ೧೪)*

ಋಷಿ ಎಂದರೆ ಜ್ಞಾನಹೊಂದಿ ಸಂಸಾರದ ಕೊನೆ ಮುಟ್ಟಿದವನು, ತತ್ವಜ್ಞಾನಿ. ಏಳು ವಿಧದ ಋಷಿಗಳು ೧. ಬ್ರಹ್ಮರ್ಷಿ (ವಿಶ್ವಾಮಿತ್ರ) ೨. ದೇವಋಷಿ. (ಬ್ರಹ್ಮಸ್ಮೃತಿ) ೩. ಮಹರ್ಷಿ (ವಾಲ್ಮೀಕಿ) ೪. ಪರಮಋಷಿ. ೫. ರಾಜರ್ಷಿ, ೬. ಕಾಂಡಋಷಿ ೭. ಶ್ರುತ ಋಷಿ, ಯಾರು ವೇದವನ್ನು ತಿಳಿದಿರುತ್ತಾರೋ ಅವರನ್ನು ಋಷಿಗಳೆಂದೇ ಕರೆಯುತ್ತೇವೆ. ಕ್ಷತ್ರಿಯ ವಂಶಜ ವಿಶ್ವಾಮಿತ್ರನಿಗೆ ತಾನು ಬ್ರಹ್ಮಋಷಿಯಾಗಿರಬೇಕೆಂಬ ಹಂಬಲವಿತ್ತು. ವೇದಜ್ಞಾನ ಪಡೆದವರನ್ನು ಋಷಿಗಳೆಂದು ಕರೆಯುತ್ತಾರೆ. ಋಷಿಗಳು ಈ ವೇದಗಳನ್ನು ಮೊದಲು ಶಬ್ದ ರೂಪದಲ್ಲಿ ಹೇಳಿದರು. ವೇದಗಳು ಮೊದಲು ಋಷಿಗಳಿಂದ ಕೇಳಲ್ಪಟ್ಟಿರುವುದರಿಂದ ಇವುಗಳನ್ನು 'ಶ್ರುತಿ'ಯೆಂದೂ ಕರೆಯುತ್ತಾರೆ. ಋಷಿಗಳು ವೇದಗಳನ್ನು ಕೇಳಿದರೇ ಹೊರತು ಬರೆಯಲಿಲ್ಲ. ಆದುದರಿಂದ ವೇದಗಳನ್ನು ಅಪೌರುಷೇಯವೆಂದೂ ಕರೆಯುತ್ತಾರೆ. ವೇದಕಾಲದಲ್ಲಿ ಋಷಿಯನ್ನು (ಅಥರ್ವವೇದದ ಎರಡು ಋಕ್ಕುಗಳಲ್ಲಿ) ರಾಜ ನಿರ್ಮಾತೃ ಎಂದು ಕರೆಯಲಾಗಿದೆ.

*ವಿವರಗಳಿಗೆ ನೋಡಿ: ಸ್ವಾಮಿ ಚಿದಂಬರಾನಂದ ೧೯೭೭ ಋಗ್ವೇದ ರಹಸ್ಯ ಪುಟ. ೨*
*ವೇದವ್ರತ ವೈಶಂಪಾಯನ ೧೯೮೪ ಋಗ್ವೇದ*
*ಶೇಷ ನವರತ್ನ ೧೯೮೯ ನಾಲ್ಕು ವೇದಗಳು*

## ಎ

### ೧೮೧. ಎಕ್ಕ ಮದ್ದಳೆ

*ಸೀಗುರಿಗಳುಮಂ ಕೊಡೆಗಳುಮಂ ಪಿಡಿಯಿಸಿ* ***ಎಕ್ಕಮದ್ದಳೆ****ಯ ಕೊಟಿಲ ಝುಂಕಾರದ ಪಜೆಗಳ್ ಮುಂದೆ....... (ಡಿ.ಎಲ್.ಎನ್. ೨೦೦೯ ಪುಟ. ೧೨೪).*

ಎಕ್ಕಮದ್ದಳೆಯೆಂದರೆ ಒಂದು ಬಗೆಯ ವಾದ್ಯ. ಇದನ್ನು ಬರಿಯ ಮದ್ದಳೆಯೆಂದೂ

ಕರೆಯುತ್ತಾರೆ. ಎಕ್ಕ ವೆಂದರೆ ಏಕಮದ್ದಲೆಯೆಂದೂ ಆಗುತ್ತದೆ. ಚರ್ಮವಾದ್ಯಗಳಲ್ಲಿ ಇದೂ ಒಂದು. ಮದ್ದಳೆಯು ಈಗಲೂ ಯಕ್ಷಗಾನ: ಕರ್ನಾಟಕ ಸಂಗೀತದಲ್ಲಿ ಬಳಕೆಯಾಗುತ್ತದೆ. ಬರಿಯ ಮದ್ದಳೆಯ ವಾದನವು ಮುಖ್ಯವಲ್ಲ. ಆದುದರಿಂದ ಮದ್ದಳೆಯನ್ನು ಪಕ್ಕವಾದ್ಯವೆಂದು ಕರೆಯುತ್ತಾರೆ. ಹಾರ್ಮೋನಿಯಂ; ಪಿಟೀಲುಗಳು ಸ್ವರಜನ್ಯಗಳು. ಮದ್ದಳೆಯ ವಾದನವು ತಾಳಜನ್ಯ. ತಾಳಕ್ಕನುಸಾರವಾಗಿ ಮದ್ದಳೆಯನ್ನು ಬಾರಿಸಲಾಗುತ್ತದೆ. ಮದ್ದಲೆಗೆ ಚರ್ಮವನ್ನು ಬಳಸುವುದರಿಂದ ಚರ್ಮವಾದ್ಯವೆಂದು ಕರೆಯಲಾಗಿದೆ.

**೧೮೨. ಎಕ್ಕಲದೇವಿ**

*ಎಕ್ಕಲದೇವಿಗಮಾಮಾ:*
*ಲಕ್ಕನಿಗಂ ಬನದ ಬಳರಿಗಂ ಮೈಲಾರಂ*
*ಗಳ್ಳವೆ ಜಾತ್ರೆಯ ಮಾಟ್ಟಿಂ*
*ಮೊಕ್ಕಳಿಗಂ ಜೈನನಲ್ಲನಾತಂ ಕೌಳಂ (ಸಮಯ ಪರೀಕ್ಷೆ ೪-೧೨೩)*

*ಮಾರಬ್ಬೆಯು 'ಮಸಣವಾಸಿಣಿ'ಯೆಂದು ಹೇಳುತ್ತಾನೆ ಬ್ರಹ್ಮಶಿವ ಕವಿ (ಅದೇ ೬-೮೫, ೯೫, ೧೦೪, ೧೦೫, ೧೦೮, ೧೧೦, ೧೧೩, ೧೧೮, ೧೨೭).*

ಇವೆಲ್ಲವೂ ದುರ್ಗೆಯ ಉಪರೂಪಗಳು. ದೇವಿಯ ಅಷ್ಟ ಶಕ್ತಿಯರು-ಉಗ್ರಚಂಡಾ, ಪ್ರಚಂಡಾ, ಚಂಡೋಗ್ರಾ, ಚಂಡನಾಯಿಕಾ, ಚಂಡಾ: ಚಂಡವತೀ, ಚಂಡರೂಪಾ, ಅತಿಚಂಡಾ (ರಾಮಚಂದ್ರ ರಾವ್ ಎಸ್.ಕೆ. ೧೯೭೫. ಪು. ೩೪೨) ವನದುರ್ಗೆ ಮತ್ತು ಜಯದುರ್ಗೆಯರು ಭಯಂಕರಾಕಾರದ ದೇವತೆಗಳು (ಅದೇ. ಪುಟ. ೩೪೨). ಕಾಳಿಯ ಭೇದಗಳಲ್ಲಿ 'ಶ್ಮಶಾನಕಾಳಿ'ಯೂ ಒಂದು (ಅದೇ. ಪು. ೩೪೩). ಕಾಳಿಯ ಕಲ್ಪನೆಯಲ್ಲಿ ತಾಂತ್ರಿಕರ ಕೊಡುಗೆಯಿದೆ ಮತ್ತು ಜೈನರ ಶಾಸನ ದೇವತೆಗಳಲ್ಲಿಯೂ ಕಾಳಿಕಾ, ಮಹಾಕಾಳಿ, ಶ್ಯಾಮ, ಚಂಡಾ, ಬಲಾ, ಅಂಬಿಕಾ (ದುರ್ಗಾ) ಮೊದಲಾದ ಕಾಳೀ ಭೇದಗಳು ಕಾಣಿಸಿಕೊಳ್ಳುತ್ತವೆ (ಅದೇ. ಪುಟ. ೩೪೫).

**೧೮೩. ಎಕ್ಕವಡ**

*"ತೊಟ್ಟೆಕ್ಕವಡಂ ಮರವಿಲ್*
*ಕಟ್ಟಿದ ಪಣೆಕಟ್ಟು...... (ಪಂಪ ಭಾರತ ೫-೩೬)*

ಎಕ್ಕೆವಡ ಮತ್ತು ಕಟ್ಟಿದ ಮರದ ಬಿಲ್ಲು ಎಂದು ಇದರರ್ಥ. ಇಲ್ಲಿ ಎಕ್ಕವಡವೆಂದರೆ ಪಾದರಕ್ಷೆ.

ಕಿಟ್ಟೆಲ್ ಅವರು ಬೇಂಟೆಯ ಕೆರ; ಕೆರ್ಪು ಎಂಬ ಅರ್ಥವನ್ನು ನೀಡಿದ್ದಾರೆ. ಎಕ್ಕವಡದಲ್ಲಿ 'ವ' ಲೋಪವಾಗಿ ಎಕ್ಕಡ ಎಂದಾಗಿದೆ. ಎಕ್ಕಡದಲ್ಲಿ ಹೊಡೆ = ಅವಮಾನ ಮಾಡು. 'ಶಾಲು ಸುತ್ತಿ ಎಕ್ಕಡದಲ್ಲಿ ಹೊಡೆದ ಹಾಗೆ' – ಗಾದೆ ಮಾತು.

ಎಕ್ಕಡ (ನಾ) ಕಾಲಿಗೆ ಹಾಕಿಕೊಳ್ಳುವ ಚರ್ಮದ ಜೋಡು; ಪಾದರಕ್ಷೆ; ಮೆಟ್ಟು

ಕೆರ; ಚಪ್ಪಲಿ; "ಎಕ್ಕವಡಂ ಬೇಂಟೆಯಕೆಜಿ" (ಚತು (೧) ೩೬) "ಎಕ್ಕವಡ ಕೆರ್ಪಕ್ಕು" (ಶಬ್ದಮಂ.೩೩)

ಬೇಂಟೆಯ ಕೆರ್ಪು ಬೇರೆ. ಎಕ್ಕವಡವೆಂದರೆ ಚಪ್ಪಲಿ. ಆದರೆ ಬೇಟೆಗಾಗಿ ಧರಿಸುವ ಎಕ್ಕವಡ ಬೇರೆ ಎಂಬುದು ಗಮನಾರ್ಹ.

**೧೮೪. ಎಣ್ಬೆರಲಪಟ್ಟ**

*"ವೀರ ಪಟ್ಟಮೆಂಬುದು* ***ಎಂಟು ಬೆರಳದಗ****ಲವಿರುವ ನನ್ನ ಹಣೆಗೆ ಕಟ್ಟುವ ಪಟ್ಟ"ವೆಂದು ಪಂಪ ಭಾರತದಲ್ಲಿ ಬರುತ್ತದೆ. ಎಣ್ಬೆರಲಪಟ್ಟವೆಂದರೆ – ಎಂಟು ಬೆರಳಿನಷ್ಟು ಅಗಲವಿರುವ ಹಣೆಗೆ ಕಟ್ಟುವ ಪಟ್ಟ.*

*(ಪಂಪ ಭಾರತ ೧೦–೫೧ವ)*

ಹಣೆಗೆ ಬಾಸಿಂಗದ ಸ್ವರೂಪದಲ್ಲಿ ಕಿರೀಟವನ್ನು ಕಟ್ಟುತ್ತಿದ್ದರು.

ಕರ್ಣ–ಭೀಷ್ಮನನ್ನು ಖಂಡಿಸುವಾಗ ಹೇಳುವ ಪದ್ಯ

"ಕಟ್ಟಿದ ಪಟ್ಟಮೆ ಸರವಿಗೆ
ನೆಟ್ಟನೆ ದೊರೆ..............."

ಹಣೆಯಲ್ಲಿ ಕಟ್ಟಿದ ಪಟ್ಟವನ್ನು ಸರವಿ(ಹುಲ್ಲ ಹಗ್ಗಕ್ಕೆ) ಹೋಲಿಸಿದ್ದಾನೆ.

ಪಟ್ಟವೆಂದರೆ ಸಿಂಹಾಸನ. ಒಬ್ಬ ವ್ಯಕ್ತಿ ಪಟ್ಟವೇರಬೇಕಾದರೆ ಅವನಿಗೆ ಮೂರ್ಧಾಭಿಷೇಕ ಕ್ರಿಯೆ ನಡೆಯುತ್ತದೆ. ಸಿಂಹಾಸನವೇರುವುದು ಒಂದು ರೀತಿಯಿಂದ ಆಚರಣೆ. ಪಟ್ಟ ಕಟ್ಟುವುದು ಎಂದರೆ ಸಮಸ್ತರು ಒಬ್ಬನನ್ನು ಒಪ್ಪಿಕೊಳ್ಳುವುದು. ಸಿಂಹಾಸನ ವೇರುವುದಕ್ಕೆ ಅರ್ಹತೆ ಬೇಕು. ಅದರಂತೆ ಪಟ್ಟಕಟ್ಟಲಾಗುತ್ತದೆ. ಹಿಂದೆ ರಾಜರನ್ನು ಆಯ್ಕೆ ಮಾಡುವಾಗ ಅವನ ಅರ್ಹತೆಯು ಪ್ರಧಾನವಾಗಿತ್ತು. ಅವನು ಪ್ರಜಾಪತಿಯಾಗುವ; ನಿಷ್ಪಕ್ಷ ಧೋರಣೆಯ ವ್ಯಕ್ತಿಯಾಗಿರಬೇಕಾಗಿತ್ತು. ಪಟ್ಟಗಳಲ್ಲಿ ವಿಧಗಳಿವೆ; ಅಗ್ರಮಹಿಷಿ ಪಟ್ಟ; ಮಂತ್ರಿ ಪದವಿಯ ಪಟ್ಟ; ಸೇನಾಧಿಕಾರಿಯ ಪಟ್ಟ ಇತ್ಯಾದಿ.

**೧೮೫. ಎಸರು**

***ಎಸರ*** *ನಿಡುವಕ್ಕಿಗರ್ಚುವ*
*ಬೆಸನಂ..............(ಸಾಹಸ ಭೀಮ ವಿಜಯ ೮–೩೮)*

ಅಡಿಗೆಗಾಗಿ ಕುದಿಯಲ್ಪಟ್ಟ ನೀರು; ಕುದಿನೀರು. ಭೀಮನನ್ನು ಹಳಿಯುವಾಗ ಸುಯೋಧನ ಬಳಸುವ ಮಾತುಗಳಿವು. ಎಸರು ಎಂದರೆ ಅನ್ನ ಮಾಡುವ ಮೊದಲು ಕಾಯಿಸುವ ನೀರು. ಅಕ್ಕಿಗರ್ಚುವ ಎಂದರೆ ಅಕ್ಕಿತೊಳೆಯುವ ಕ್ರಿಯೆ. ಅಕ್ಕಿತೊಳೆದ ನೀರಿಗೆ ಅಕ್ಕಚ್ಚು ಎಂದು ಹೆಸರು.

### ೧೮೬. ಎಳೆಗೋಣ

"ಅಂತು ದ್ರೋಣನೆಳೆಗೋಣ ಸಾವಂ ಸಾವುದುಂ" ಎಂದು ಪಂಪ ಭಾರತದಲ್ಲಿ ಬರುತ್ತದೆ. ಬಲಿಗಾಗಿ ಎಳೆದುಕೊಂಡು ಬರುವ ಕೋಣದ ಹಾಗೆ ತನ್ನ ಸಾವನ್ನು ತಂದುಕೊಂಡನೆಂದು ಅರ್ಥ. (ಪಂಪ ಭಾರತ ೧೨-೩೦)

ಪ್ರಾಣಿ ಬಲಿಯು ಆಚರಣೆಗಳಲ್ಲಿ ಒಂದು. ಮಾರಿದೇವತೆಯ ಆಚರಣೆಯಲ್ಲಿ ಕೋಣನ ತಲೆ ಕಡಿಯುವುದು ಈಗಲೂ ರೂಢಿಯಲ್ಲಿದೆ. ಯಜ್ಞದಲ್ಲಿಯೂ ಪ್ರಾಣಿ ಬಲಿಯ ವಿಷಯ ಬರುತ್ತದೆ. ಅಶ್ವಮೇಧಯಾಗದಲ್ಲಿ ಕುದುರೆಯ ಬಲಿಯು ಮುಖ್ಯ. ಯಜ್ಞದಲ್ಲಿ ಎಳೆಗರುವನ್ನು ಬಲಿಗಾಗಿ ಬಳಸುತ್ತಿದ್ದರು. ಬಲಿಯು ಪ್ರಾಚೀನ ಭಾರತದಲ್ಲಿ ಒಂದು ಸಾಮಾನ್ಯ ಆಚರಣೆಯಾಗಿತ್ತು. 'ಕೆರೆಗೆ ಹಾರ' 'ನರಬಲಿ' ಯು ಇದಕ್ಕೆ ಉದಾಹರಣೆಗಳಾಗಿವೆ.

*ವಿವರಗಳಿಗೆ ನೋಡಿ: ಡಿ. ಡಿ. ಕೊಸಾಂಬಿ ೨೦೦೩ ಪುರಾಣ ಮತ್ತು ವಾಸ್ತವ*
*ಕೂಡುದಾರಿಯಲ್ಲಿ ಮಾತೃದೇವತೆಯರು (ಲೇಖನ)*
*ಎಂ.ಎಂ. ಕಲಬುರ್ಗಿ ೧೯೮೦ ಸಮಾಧಿ ಬಲಿದಾನ ವೀರಮರಣ ಸ್ಮಾರಕಗಳು*

## ಏ

### ೧೮೭. ಏಕದೇವತ್ವ

"ದೇವತೆಗಳ ಪ್ರಬಲದೇವತ್ವವೆಲ್ಲ ಒಂದೇ" ಎಂಬ ಋ.ವೇ ೩.೫೫ರ ಪಲ್ಲವಿಯು ಪರಸ್ಪರ ಜನಕತ್ವ ಮತ್ತು ಪರ್ಯಾಯತಃ ದೇವತೆಗಳ ಒಡೆತನದ ಒಳಗೆ ಅಡಗಿರುವ ಏಕತೆಯನ್ನು ವಿಶದಗೊಳಿಸುತ್ತದೆ. ಅಲ್ಲದೆ ಋ.ವೇ ೧.೧೬೪.೪೬ರಲ್ಲಿ ಋಷಿಗಳು ಒಂದಾಗಿರುವುದನ್ನು ಬಹು ತೆರನಾಗಿರುವಂತೆ ವರ್ಣಿಸುತ್ತಾರೆ ಎಂದೂ, ಒಂದೇ ಆಗಿರುವ ಸುಪರ್ಣ(ಗರುಡ)ನನ್ನು ಜ್ಞಾನಿಗಳಾದ ಋಷಿಗಳು ತಮ್ಮ ಮಾತುಗಳಿಂದ ಬಹುರೂಪಗಳುಳ್ಳದ್ದಾಗಿ ಮಾಡುತ್ತಾರೆ ಎಂದೂ ಸ್ಪಷ್ಟಪಡಿಸಲಾಗಿದೆ. ಈ ಪರಮೋಚ್ಚವಾದ ಸತ್ ಎಂಬುದನ್ನು ಗರುಡ (ಸುಪರ್ಣ)ನೆಂದು ಭಾವಿಸಿದುದು ವೇದಗಳಲ್ಲಿ. ಹಾಗೆಂದು ಭಾವಿತನಾಗಿರುವ, ಸೃಷ್ಟಿ ನಿಯಮನ ಮತ್ತು ಚೇತನತೆಯ ಮಹಾಶಕ್ತಿಯಾದ ಸೂರ್ಯ ನಿಂದಾಗಿರಬೇಕು. ಈತನೇ ಹಿರಣ್ಯಗರ್ಭ ಎಂಬುದರ ಭಾವನೆಯನ್ನೂ ಉಂಟು ಮಾಡಿದ್ದೀತು. ಈ ಒಂದು ಸತ್ ಋಗ್ವೇದದಲ್ಲಿ ಅನೇಕ ವಿಶೇಷಣರಹಿತವಾದ ಹೆಸರುಗಳಿಂದ ವ್ಯವಹೃತವಾಗಿದೆ. ಉದಾ – ಅಜ (೧.೬೭.೩, ೧.೧೬೪.೬, ೮.೪೧.೧೦ ಇತ್ಯಾದಿ) ಅಸುರ (೫.೬೩.೩,೭; ೧೦.೧೭೭.೧), ಪಿತೃ (೧.೧೬೪.೪೬, ೮.೫೬.೨, ೧೦.೧೨೯.೨) ಆದರೆ ವಿಶ್ವಕರ್ಮನ ಬಗೆಗೆ ಇರುವ ಎರಡು ಸೂಕ್ತಗಳು (೧೦.೮೧–

೨) ಮತ್ತು ಹಿರಣ್ಯಗರ್ಭನನ್ನು ಕುರಿತ ಒಂದು ಸೂಕ್ತ (೧೦.೧೨೧) ಎಲ್ಲವನ್ನೂ ವ್ಯಾಪಿಸಿರುವ ವಿಶ್ವದ ಸೃಷ್ಟಿನಿಯಮನ ಧಾರಣರೂಪವಾದ ಈ ಸತ್ (ವಸ್ತುವಿನ) ಸ್ವಭಾವವನ್ನು ಸ್ಪಷ್ಟವಾಗಿ ನಿರ್ದೇಶಿಸುತ್ತದೆ. ಋ.ವೇ ೧.೧೬೪.೩೧ರಲ್ಲಿ ಈತನು ಅವಿಶ್ರಾಂತವಾಗಿ ಇತ್ತ ಮತ್ತು ಆಚೆ ಚಲಿಸುತ್ತ ತನ್ನೊಳಗೆ ಎಲ್ಲವನ್ನೂ ಸೆಳೆದುಕೊಳ್ಳುವ ಮತ್ತು ತನ್ನಿಂದಾಚೆಗೆ ಎಲ್ಲವನ್ನೂ ಹೊರದೂಡುವ ಶಕ್ತಿಗಳನ್ನು ಧರಿಸಿ ಇರುವ ಎಲ್ಲ ವಸ್ತುಗಳ ನಡುವೆ ಸಂತತವಾಗಿ ಉರುಳುತ್ತಿರುವ ರಕ್ಷಕ (ಗೋಪಾ)ನ ಪಾತ್ರದಲ್ಲಿ ಕಂಡುಬರುತ್ತಾನೆ. ಅ.ವೇ. ಈತನನ್ನು "ದಿವ್ಯ ಗಂಧರ್ವ" (೨.೧.೨:೨-೧), "ಧಾರಕ" (ಸ್ಕಂಭ. ೧೦.೭-೮), "ಕೆಂಪಾದವನು" (ರೋಹಿತ, ೧೩.೧.೪) "ಜೀವಶಕ್ತಿ" (ಪ್ರಾಣ ೧೧-೪) ಮತ್ತು "ಕಾಲ" (೧೯.೫೩-೪) ಎಂದು ಮುಂತಾಗಿ ಹೇಳುತ್ತದೆ. ಈ ಏಕದೇವತ್ವಕ್ಕೆ ವಿಶ್ವದೇವತ್ವಭಾವದ ಸೋಂಕು ಬಹುಮಟ್ಟಿಗೆ ಇದೆ. ಹೇಗೆಂದರೆ ಋ.ವೇ. ೫.೩.೧ಸಿ, ಅಗ್ನಿಯಲ್ಲಿ ಎಲ್ಲ ದೇವತೆಗಳೂ ಇರುವರೆಂದೂ, ಋ.ವೇ ೩.೫೪.೧.೭ಬಿ, ಇಂದ್ರನಲ್ಲೆಂದೂ, ೧.೩೫.೬ಸಿ ಅಚ್ಚಿನ ಸುತ್ತಲಿರುವಂತೆ ಸವಿತೃವಿನ ಸುತ್ತಲಿರುವರೆಂದೂ ಹೇಳುವುದು ವಿಶ್ವೇದೇವತೆಗಳನ್ನು ಕುರಿತು ೧೦.೧೦೦ರ ಅರ್ಥವೂ ಅದಿತಿಯನ್ನೇ "ಎಲ್ಲವೂ" (ಸರ್ವತಾತಿ) ಎನ್ನುತ್ತದೆ. ೧೦.೮೨.೬ ಮತ್ತು ೧೦.೧೨೧.೭ ಇವುಗಳ ಭಾವವಾದರೂ ಹೀಗೆಯೇ ಇದೆ. ಋ.ವೇ ೧.೮೯.೧೦ರಲ್ಲಿ "ಇದ್ದ, ಇರುವ, ಹುಟ್ಟುವ" ಎಲ್ಲವನ್ನೂ ಒಳಗೊಂಡ ಯಾವುಯಾವುದು ಭಾವಿಸಲು ಸಾಧ್ಯವೋ ಎಲ್ಲವೂ ಅದಿತಿಯೇ ಎಂದಾಗ ವಿಶ್ವದೇವತಾಭಾವ ಏಕತ್ವಕ್ಕೆ ಎಡೆಕೊಟ್ಟಿತು.

"ಒಂದು ಬಹುತೆರನಾಗಿ ಇದೆಲ್ಲ ಆಯಿತು" ಎಂಬುದಾಗಿ ಒಬ್ಬ ಅಗ್ನಿ, ಒಬ್ಬ ಸೂರ್ಯ, ಒಂದು ಉಷಸ್ ಎಲ್ಲೆಡೆ ಇದ್ದು ಕ್ರಿಯಾತತ್ಪರವಾದ ಸಾದೃಶ್ಯವನ್ನು ಅವಲಂಬಿಸಿ ಋ.ವೇ ೮.೫೮.೨ ಏಕತೆಯನ್ನೇ ಸೂಚಿಸುತ್ತದೆ. ಏಕಂ ಸತ ವಿಪ್ರಾಬಹುಧಾವದಂತಿ ಅಂದರೆ ಒಂದನ್ನೇ ಬೇರೆ ಬೇರೆಯವರು ಬೇರೆ ಬೇರೆ ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ. ಎಲ್ಲಾ ದೇವರನ್ನು ಒಂದೇ ದೇವರಲ್ಲಿ ಕಾಣುವುದು ಏಕದೇವತ್ವದ ಲಕ್ಷಣವಾಗಿದೆ.

ಏಕದೇವತೋಪಾಸನೆಯ ಭಗವದ್ಗೀತೆಯಲ್ಲಿಯೂ ಬರುತ್ತದೆ. 'ಸರ್ವದೇವ ನಮಸ್ಕಾರ: ಕೇಶವಂಪ್ರತಿಗಚ್ಛತಿ' ಅಂದರೆ ಯಾವ ದೇವರಿಗೆ ಪೂಜೆ ಸಲ್ಲಿಸಿದರೂ ಕೊನೆಗೆ ತಲುಪುವುದು ಕೃಷ್ಣನಿಗೆ. ಆದರೂ ಬಹುದೇವತಾ ಉಪಾಸನೆಯೇ ಚಾಲ್ತಿಯಲ್ಲಿದೆ.

*ವಿವರಗಳಿಗೆ ನೋಡಿ: ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦*

*ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ ಪುಟ. ೩೩-೩೪.*

**೧೮೮. ಏಕಪಾಠಿ**

*ಒಂದು ಸಲ ಓದಿದರೆ ಮನನ ಮಾಡಿ ಮತ್ತೆ ಅದನ್ನು ಸಂಪೂರ್ಣವಾಗಿ ಒಪ್ಪಿಸುವವನು* ***ಏಕಪಾಠಿ****ಯಾಗಿರುತ್ತಾನೆ. ಈ ಕುರಿತು ಶಾಂತಿಪುರಾಣದಲ್ಲಿ ಬರುತ್ತದೆ. (ಶಾಂತಿಪುರಾಣ ೬-೬೨ ವ)*

ಮತ್ತೊಂದು ಘನಪಾಠದ ಕ್ರಮ. ವೇದಪಠಣದ ವಿಶೇಷ ರೀತಿಯೇ ಘನಪಾಠ. ವೇದ ಮಂತ್ರಗಳ ಮೂಲಸ್ವರೂಪವು ಬದಲಾಗಬಾರದೆಂದು ಅವುಗಳನ್ನು ಸಂಹಿತಪಾಠ. ಪದಪಾಠ, ಕ್ರಮಪಾಠ, ಜಟಾಪಾಠ, ಎಂದು ಹಲವು ಪಾಠಕ್ರಮಗಳಲ್ಲಿ ಕಂಠಪಾಠ ಮಾಡುತ್ತಿದ್ದರು. ಎರಡು ವೇದಗಳನ್ನು ಕಂಠಪಾಠ ಮಾಡಿದವರು ದ್ವಿವೇದಿಗಳು. ಮೂರುವೇದ ಕಂಠ ಮಾಡಿದವರು ತ್ರಿವೇದಿ. ನಾಲ್ಕುವೇದ ಕಂಠಪಾಠ ಮಾಡಿದವರನ್ನು ಚತುರ್ವೇದಿಗಳೆಂದು ಕರೆಯುತ್ತಿದ್ದರು.

**೧೮೯. ಏಕವ್ಯಕ್ತಿ-ನಾಟ್ಯ**

*ಪಂಪನ 'ಆದಿಪುರಾಣ'ದಲ್ಲಿ ಬರುವ ನೀಲಾಂಜನೆಯ ನೃತ್ಯದ ವಿವರಗಳ ಮುಖ್ಯಾಂಶಗಳು ಇಂತಿವೆ. (೯-೧೭, -೩೯):*

ಜವನಿಕೆಯು ಓಸರಿಸಿದಾಗ ನೀಲಾಂಜನೆಯು ರಂಗವನ್ನು ಪ್ರವೇಶಿಸಿದಳು. ಪುಷ್ಪಾಂಜಲಿಯನ್ನು ಸೂಸಿದಳು. ಭಾರತಿ, ಸಾತ್ವಕಿ, ಕೈಶಿಕಿ, ಆರಭಟಿ ಎನ್ನುವ ವೃತ್ತಿಯಲ್ಲಿ ಭಾವವನ್ನು ವಿಸ್ತರಿಸಿದಳು. ಅಂಗೋಪಾಂಗದಲ್ಲಿ ಎಸೆವ ಅಂಗಿಕ, ಗಾನಪಠ್ಯದಲ್ಲಿ ವಾಚಕ, ಆಹಾರ್ಯ, ಸಾತ್ವಿಕವನ್ನು ಮೆರೆದಳು. ಮೂವತ್ತೆರಡು ಅಂಗಹಾರ, ನೂರೆಂಟು ಕರಣವನ್ನು ಅಭಿನಯಿಸಿದಳು. ಎನ್ನುವ ವಿವರವು ಭರತನ ನಾಟ್ಯ ಶಾಸ್ತ್ರದಲ್ಲಿ ಉಕ್ತವಾದ ವಿವರಗಳನ್ನು ಒಳಗೊಂಡಿದೆ. ಪಂಪನು ಇಲ್ಲಿ ನಾಟ್ಯದ ಪರಿಭಾಷೆಯನ್ನು ಬಳಸುತ್ತಾನೆ. ಇವುಗಳ ವಿವರ ಇಂತಿವೆ: ಭಾರತಿ-ಶಾಬ್ದಿಕ, ಸಾತ್ವಕಿ-ಸತ್ವಯುಕ್ತ, ಗಂಭೀರ, ಭರ್ಜರಿ, ಆರಭಟೀ-ಬಲವಾದ್ದು, ಆರ್ಭಟವುಳ್ಳದ್ದು ಎನ್ನುವ ಅರ್ಥಗಳಿವೆ. (ಮರುಳ ಸಿದ್ದಯ್ಯ. ೧೯೭೩.ಪು.೯) ಹಾಗೆಯೇ 'ಅಂಗವಿಕ್ಷೇಪ'ವೇ ಆಂಗಿಕ. ಕಾವ್ಯನಾಟಕ ಇವುಗಳ ಅರ್ಥವನ್ನು ಕೂಡಿಸಿ ಹೇಳುವುದೇ ವಾಚಿಕಾಭಿನಯ. ಆಭರಣ, ವಸ್ತ್ರ ಮೊದಲಾದವುಗಳಿಂದ ಅಲಂಕರಿಸಿಕೊಂಡು ಪ್ರಕಾಶಿಸುವುದೇ ಆಹಾರ್ಯಾಭಿನಯ, ಸಾತ್ವಿಕ ಭಾವವನ್ನು ತೋರಿಸುವುದೇ ಸಾತ್ವಿಕಾಭಿನಯ' ಎಂದು ಸಿಂಹಭೂಪಾಲನು 'ಲಾಸ್ಯರಂಜಸ'ದಲ್ಲಿ ಹೇಳುತ್ತಾನೆ (೧-೪೯, ೫೩). ಅಂಗಹಾರ, ಕರಣ ಇವುಗಳ ಅಭಿನಯಕ್ಕೆ ನೃತ್ಯವೆಂದು ಹೆಸರು ಎಂದು ಸಿಂಹಭೂಪಾಲ ಹೇಳುತ್ತಾನೆ. (೧-೬೯, ೭೩)

**೧೯೦. ಏರಣಿಗ**

*ಗಜವರ್ಮನರನಾಕೆಗಾಟಿಸಿ ತನ್ನ ಮನೆಯೊಳಿಟ್ಟಾಕೆಗಾಸಕ್ತನಾಗಿ ಬಾಱುತ್ತಿ*
*ರ್ಪುಮಾ ಏರಣಿಗನುಂ ಪೆಂಡತಿಯ ವಿಯೋಗದೊಳ್ ಸಂತಾಪದಿಂದಮಿರುಳುಂ*
*ಪಗಲುಮನವರತಂ........... (ಡಿ.ಎಲ್.ಎನ್.೨೦೦೯ ಪು.೯೫).*

ಚಿನ್ನದ ಕೆಲಸ ಮಾಡುವವರನ್ನು ಏರಣಿಗನೆಂದು ಕರೆಯುತ್ತಿದ್ದರು. ಸುವರ್ಣಕಾರನೆಂದರೂ ಚಿನ್ನದ ಕೆಲಸ ಮಾಡುವವನೆಂದೇ ಅರ್ಥ. ಚಿನ್ನ, ಬೆಳ್ಳಿಯ ಕೆಲಸ ಮಾಡುವವರನ್ನು ಕುಶಲ ಕರ್ಮಿಗಳು ಎಂದು ಕರೆಯುತ್ತಾರೆ. ಮರದ ಕೆಲಸ; ಚಿನ್ನದ

ಕೆಲಸ; ಕಬ್ಬಿಣದ ಕೆಲಸ ಮಾಡುವವರನ್ನು ಆಚಾರಿಗಳೆಂದು ಕರೆಯುತ್ತಾರೆ. ಮರದ ಕೆಲಸ: ಚಿನ್ನದ ಕೆಲಸ: ಕಬ್ಬಿಣದ ಕೆಲಸಗಳು ಸೂಕ್ಷ್ಮವಾದವುಗಳು. ಅವುಗಳು ಇತರೆ ಕೆಲಸಗಳಂತಲ್ಲ. ಅದರಲ್ಲಿಯೂ ಚಿನ್ನದ ಕೆಲಸವು ಅತ್ಯಂತ ಸೂಕ್ಷ್ಮ ಕುಶಲತೆಯನ್ನು ಬಯಸುತ್ತದೆ.

*ವಿವರಗಳಿಗೆ ನೋಡಿ: ಡಾ. ಎಂ. ಚಿದಾನಂದಮೂರ್ತಿ ೨೦೦೮ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ*

**೧೯೧. ಏಳು ಅಜೀವರತ್ನಗಳು**

"ಚಕ್ರವರ್ತಿಗೆ ತಾವಾಗಿ ಬಂದು ಸೇರಬೇಕಾದ ರತ್ನಗಳು ಎರಡು ಬಗೆಯವು; ೧. ಚಕ್ರ, ಖಡ್ಗ, ಛತ್ರಿ ಮೊದಲಾದ ಏಳು ಅಜೀವರತ್ನಗಳು. ೨. (ಗೃಹಪತಿ, ಸೇನಾಪತಿ, ಶಿಲ್ಪಿ, ಪುರೋಹಿತ, ಸ್ತ್ರೀ; ಮೊದಲಾದ ಏಳು ಜೀವರತ್ನಗಳು.) ಹೀಗಿರುವ ಎರಡು ಬಗೆಯ ರತ್ನಗಳಲ್ಲಿ ಈ ಸ್ತ್ರೀರತ್ನವು ನನಗೆ ಬರುವುದೆಂದು ನಾನು ನಿರೀಕ್ಷಿಸಿದ್ದೆನು. ನನ್ನ ಚಕ್ರೇಶ್ವರ ಪದವಿಯನ್ನು ಕಡೆಗಣಿಸಿ, ಯಾವನೊ ಒಬ್ಬ ನಿರ್ಗತಿಕನಿಗೆ ಹೆಣ್ಣು ಕೊಟ್ಟರಲ್ಲವೆ ಇವರು? ತೊಂದರೆಯನ್ನು ತಂದುಕೊಳ್ಳುವುದಕ್ಕೇ ಹೊರಟಿದ್ದಾರೆ ಎಂದು ಶಾಂತಿಪುರಾಣದಲ್ಲಿ ಬರುತ್ತದೆ. (ಶಾಂತಿಪುರಾಣ ೫-೪೩)

ಇದು ಜೈನ ಧರ್ಮದ ವಿಶಿಷ್ಟ ಪರಿಭಾಷೆಯಾಗಿದೆ. ಏಳು ಅಜೀವರತ್ನಗಳ ಕುರಿತು ಬೇರೆ ಧರ್ಮಗಳಲ್ಲಿ ಉಲ್ಲೇಖಗೊಂಡಿಲ್ಲ.

**೧೯೨. ಏಟ್ಗೆವಾಡಿವ**

'**ಕೂಸುಗಳುಮೇಟ್ಗೆವಾಡಿವ**'*ದ ಚಂದ್ರನಂತುತ್ತರಾಭಿವೃದ್ಧಿಯೊಳ್ ಸೊಗಯಿಸಿ..........* *ಎಂದು ಪಂಪ ಭಾರತದಲ್ಲಿ ಬರುತ್ತದೆ. (ಪಂಪ ಭಾರತ ೨-೩ ವ)*

ಶುದ್ಧಪಾಡ್ಯ, ಶುಕ್ಲ ಪ್ರಥಮೆಯೆನ್ನುವುದಕ್ಕೆ ಪಂಪನು ಏಟ್ಗೆವಾಡಿವ ಎಂದು ಬಳಸಿದ್ದಾನೆ. ಶುಕ್ಲಪಕ್ಷದಲ್ಲಿ ಚಂದ್ರನು ವೃದ್ಧಿಸುತ್ತಾನೆ. ಅದರಂತೆ ಮಕ್ಕಳು ದಿನೇ ದಿನೇ ಬೆಳೆದರು ಎಂದು ಹೇಳುವುದು ಮುಖ್ಯ ಗುರಿ. ಆದರೆ ಭಾರತೀಯ ಕಾಲಮಾನದ ಪದ್ಧತಿಯನ್ನು ಇದು ವಿವರಿಸುತ್ತದೆ. ಅದು ಸೌರಮಾನ ಮತ್ತು ಚಂದ್ರಮಾನ ಪದ್ಧತಿಗಳು. ಭಾರತೀಯ ಕಾಲಮಾನ ಪದ್ಧತಿಗಳು. ಇದನ್ನು ಆಚರಿಸುವವರಲ್ಲಿಯೂ ಭಿನ್ನತೆಗಳಿವೆ.

ಏಟ್ಗೆ+ಪಾಡಿವ ಎಂಬುದು ಏಟ್ಗೆವಾಡಿವ ಎಂದಾಗಿದೆ. ಪಾಡಿವ ಅಂದರೆ ಪಾಡ್ಯ. ಇಲ್ಲಿ ಪ>ವ ಕಾರವಾಗಿ ಬಳಕೆಯಾಗಿದೆ.

*ವಿವರಗಳಿಗೆ ನೋಡಿ: ಸೌರಮತ.*

## ಐ

**೧೯೩. ಐವರು ತಂದೆಗಳ್**

*ಪುಟ್ಟಿಸಿದವನುಂ, ಉಪನಯನವ ಮಾಡಿದವನುಂ, ವಿದ್ಯೆಯನಜೆಪಿದವನುಂ, ಅನ್ನವ ನಿಕ್ಕಿದವನುಂ, ಭಯದಲ್ಲಿ ರಕ್ಷಿಸಿದವನುಂ* ***ಇಂತೈವರುಂ ತಂದೆಗಳೆಂ****ದಜೆವ್ಯದು*

*(ಕರ್ಣಾಟಕ ಪಂಚತಂತ್ರ, ಮಿತ್ರಕಾರ್ಯ ಪ್ರಕರಣ, ಪುಟ. ೨೪೭)*

ಹುಟ್ಟಿಸಿದವನು. ಉಪನಯನ ಮಾಡಿದವನು, ವಿದ್ಯೆ ಕಲಿಸಿದವನು, ಭಯದ ಸಂದರ್ಭದಲ್ಲಿ ರಕ್ಷಿಸಿದವನು, ಅನ್ನಕೊಟ್ಟವನು ಹೀಗೆ ಐವರು ತಂದೆಗಳೆಂದು ತಿಳಿಯಬೇಕು. ಈ ಐವರ ಋಣ ನಮ್ಮ ಮೇಲೆ ಇರುತ್ತದೆ ಎಂದು ದುರ್ಗಸಿಂಹನು ಹೇಳಿದ್ದಾನೆ.

## ಒ

**೧೯೪. ಒಕ್ಕಲ್**

*ಕಲ್ಮಷಿಕವಾಗಿ* ***ತನ್ನೊ***
***ಕ್ಕಲ್ಮಕ್ಕಳಿನೆಕ್ಕಸಿರ್ಕ****ಮಾದೊಡೆ ಪಾರ್ವಂ*
*ಮಲ್ಮಲನೆ* ***ಮಱುಗಿ ಕೂ****ಡೆಯೊ*
*ಡಲ್ಮ ಸಿಯಪ್ಪಿನೆಗಮೆಯ್ದೆ ಬೆದವೆದ ಬೆಂದಂ.. (ಸುಕುಮಾರ ಚರಿತಂ ೨-೧೦)*

ಒಕ್ಕಲ್ ಅಂದರೆ ಸಂಸಾರವೆಂದರ್ಥ. ಒಕ್ಕಲು ಹೂಡುವುದು ಎಂದರೆ ಹೊಸದಾಗಿ ಸಂಸಾರ ಮಾಡುವುದು ಎಂದು ಅರ್ಥವಿಸಿಕೊಳ್ಳಬೇಕು. ಈಗಲೂ "ಒಕ್ಕಲು ಹೂಡುವುದು" ಹೊಸದಾಗಿ ಮನೆ ಮಾಡುವುದು ಎಂದರ್ಥ. ಕಲ್ಮಷಿಕನಾಗಿ ತನ್ನ ಒಕ್ಕಲ್ಮಕ್ಕಳಿನೆಕ್ಕಸಿರ್ಕಮಾದೊಡೆ" ಇಲ್ಲಿ ಒಕ್ಕಲು ಮಕ್ಕಳಿಗೆ ಅಂದರೆ (ಕೆಲಸದವರಿಗೆ) ಆಗುವ ತೊಂದರೆಯ ವಿವರಣೆ. ಕುತೂಹಲದಾಯಕ ಮತ್ತೊಂದು ಅಂಶವೆಂದರೆ ಬ್ರಾಹ್ಮಣನು "ಒಕ್ಕಲು ಮಕ್ಕಳಿಗೆ" ಮಮ್ಮಲ ಮರುಗುವುದು. ಯಜಮಾನನು ತನ್ನ ಒಕ್ಕಲುಗಳನ್ನು "ಒಕ್ಕಲ್ ಮಕ್ಕಳು" ಎಂದು ಕರೆಯುವುದು ಭಾವನಾತ್ಮಕ ಸಂಬಂಧವನ್ನು ಸೂಚಿಸುತ್ತದೆ.

ಪಗಡೆಯಾಟದಲ್ಲಿ ಧರ್ಮರಾಜನು ಸೋತು ಯಾರಿಗೂ ತಲೆ ತಗ್ಗಿಸದವನು. ತಲೆತಗ್ಗಿಸಿ ನಾಚಿಕೆಯಿಂದ ಪಗಡೆಯಾಟವನ್ನು ಮುಂದುವರಿಸುತ್ತಾನೆ.

ವ್ಯಾಳಗಜಂಗಳನಗ್ಗದ
ಸೂಳೆಯ**ರೊಕ್ಕಲ**ನರ್ಘ್ಯವಸ್ತುಗಳನಿಳಾ
ಪಾಳಂ ಸೋಲ್ತೊಡೆ..........................(ಪಂಪ ಭಾರತಂ ೭-೩)

ಒಕ್ಕಲು ಎಂದರೆ ಇಲ್ಲಿ ಕುಟುಂಬ ಎಂಬ ಅರ್ಥ ಧರ್ಮರಾಯನು ಒಕ್ಕಲುಗಳನ್ನು ಕೂಡಾ ಒತ್ತೆಯಿಡುತ್ತಾನೆ. ಒಕ್ಕಲುತನವೆಂದರೆ ಕೃಷಿಕ ಮಾಡುವುದು ಎಂಬ ಅರ್ಥವೂ ಇದೆ. ಒಕ್ಕಲು ಮಕ್ಕಳು ಎಂದರೆ ಕೂಲಿಯವರ ಮಕ್ಕಳು ಎಂಬ ಪದವೂ ಬಳಕೆಯಲ್ಲಿದೆ ಯೆಂಬುದು ಗಮನಾರ್ಹ.

ಒಕ್ಕಲಿಗರ ಕುರಿತು ವಡ್ಡಾರಾಧನೆಯಲ್ಲಿ ಈ ರೀತಿಯಾಗಿ ಬರುತ್ತದೆ:

.............ಗಜಕುಮಾರನುಂ ತನ್ನಬೇಡಿದ ವರಮಂ ಪೆತ್ತು ಪರದರ ಪಾರ್ವ**ರೊಕ್ಕಲಿಗರ** ಸಾಮಂತರ ಪೊಟಿಲೊಳಗುಳ್ಳ ಒಳ್ಪೆಂಡಿರೆಲ್ಲರಂ ಕಣ್ಗಂ ಮನಕ್ಕಂ ಮೆಚ್ಚಿದವರೊಳ್ ತನ್ನಿಚ್ಚೆಯಿಂದಂ ಮೊಜೆದು ಮೊಟ್ಟಯಿಸಿಯುಯ್ದು ಬಾಱುತ್ತಿರೆ.... (ಡಿ.ಎಲ್.ಎನ್ ೨೦೦೯ ಪುಟ. ೯೫).

| | | |
|---|---|---|
| ಪರದರು | – | ವ್ಯಾಪಾರಿಗಳು |
| ಪಾರ್ವರು | – | ಬ್ರಾಹ್ಮಣರು |
| ಒಕ್ಕಲಿಗರು | – | ಒಕ್ಕಲು ಮಾಡುವವರು |
| ಸಾಮಂತರು | – | ಅಧೀನ ರಾಜರುಗಳು |
| ಪೊಟಿಲು | – | ಪಟ್ಟಣ |

ಇವುಗಳು ಸಮಾಜದ ಬೇರೆ ವರ್ಗಗಳನ್ನು ಸೂಚಿಸುತ್ತದೆ. ಒಕ್ಕಲು ಮಾಡುವುದೆಂದರೆ ಧಾನ್ಯಗಳನ್ನು ಬೇರೆ ಮಾಡುವುದು ಎಂಬ ಅರ್ಥವೂ ಇದೆಯೆಂಬುದು ಗಮನಾರ್ಹ. ವೃತ್ತಿ ಸೂಚಕವಾಗಿದ್ದ ಇದು ಜಾತಿ ಸೂಚಕವಾಗಿ ಪರಿವರ್ತನೆ ಹೊಂದಿರುವುದು ಅನಂತರದ ಕಾಲಘಟ್ಟದಲ್ಲಿ.

ಸೇಲಂ ಜಿಲ್ಲೆಯ ಕನ್ನಡ ಒಕ್ಕಲಿಗರಿಗೆ ನಾಟ್ಟರೆಂಬ ವಾಡಿಕೆಯಿದೆ. ಆದುದರಿಂದ, ನಾಟರೆಂಬವರು ತಮಿಳುರಿರುವಂತೆ ಕನ್ನಡರೂ ಉಂಟೆಂಬಲ್ಲಿ ಸಂದೇಹವಿಲ್ಲ. ಕನ್ನಡ ನಾಟರೇ ನಾಡವರು. ನಾಡವರು ಎಂದರೂ ಈ ನಾಡಿನ ಮೂಲನಿವಾಸಿ; ಒಕ್ಕಲು ಮಕ್ಕಳೆಂಬ ಅರ್ಥ. ರಾಷ್ಟ್ರಕೂಟರು ಎಂದರೆ ಒಕ್ಕಲತನದವರೆಂಬ ಅರ್ಥ್ವೇ ಉಂಟೆಂದು ಶಾಸನ ಇಲಾಖೆಯ ಮುಖ್ಯಾಧಿಕಾರಿಗಳಾಗಿದ್ದ ಶ್ರೀಮಾನ್ ಹೊಸಕೊಪ್ಪ ಕೃಷ್ಣರಾಯರು ನಿರ್ಧರಿಸಿದ್ದಾರೆ ಎಂದು ಶಂಬಾ ಜೋಶಿಯವರು ಹೇಳುತ್ತಾರೆ.

ಒಕ್ಕಲುತನಕ್ಕಿಂತ ಮುಂಚಿನ ಸ್ಥಿತಿಯಲ್ಲಿ ಮಾನವನಿಗೆ ಒಂದೆಡೆಯಲ್ಲಿ ಊರಿಸಿ ಕೊಂಡು ನಿಲ್ಲುವುದೇ ಸಾಧ್ಯವಿದ್ದಿಲ್ಲ. ಒಕ್ಕಲು ಶಬ್ದದಲ್ಲಿ ಈ ಅರ್ಥವೆಲ್ಲ ಅಡಕವಾಗಿದೆ. ಆದುದರಿಂದಲೆ, ಒಕ್ಕಲುನತಕ್ಕೂ ಒಕ್ಕಲಾಗಿರುವುದಕ್ಕೂ ಇಷ್ಟೊಂದು ಅನ್ಯೋನ್ಯ ಸಂಬಂಧ. 'ಕುಡವ'ರೆ ಕುಳರಾದರು; ಕುಡುವಿ (ಕೂರ್ಮಿ=ರೆಡ್ಡಿ)–ಕುಟುಂಬಿಗಳಾದರು; ಕುಡ–ಒಕ್ಕಲರಾದರು/ಊರೂರಿಗೆ ಕುಳಕುಲಗಳು ತಲೆಯೆತ್ತಿದುವು. ಜನಾಂಗವು ಊರು (ಪೂರ–ಪುರ)ಗಳನ್ನು ಕಟ್ಟಿಕೊಂಡು ಬಾಳಲಾರಂಭಿಸಿತು. ಮಾವವನು ಒಂದಡಿ ಮುಂದೆ ಇಟ್ಟನು. ಈ ಮುಂದಿನ ತರಗತಿಯಲ್ಲಿಯೇ ನಾಡು–ರಾಷ್ಟ್ರಗಳು ಉದಯವಾದುವು. ನಾಡವರೂ (ರಾಷ್ಟ್ರಿಕರೂ), ಒಂದೊಂದು ಜನಾಂಗದ ಹೆಸರಿನ ದೇಶಗಳೂ ಕಾಣಿಸಿಕೊಳ್ಳ

ಲಾರಂಭಿಸಿದುವು.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೧ ಪುಟ. ೨೬೭*
*ಸಂಪುಟ. ೨ ಪುಟ. ೬೦-೬೧.*

**೧೯೫. ಒಟ್ಟಜೆ**

*'ಬರ್ಪುದಿಲ್ಲ ಬರ್ಬರೆಯ ಕಿರಾತ್ ಯೊಟ್ಟಜೆಗೆ ಕಿನ್ನರ**ರೊಟ್ಟಜೆಯುಂ** ತೆರಳ್ಕೆಯುಂ (೨-೨೨).*

ಇದಕ್ಕೆ ಅತಿಶಯತೆ ಎಂಬುದು ಅರ್ಥ. ಒಟ್ಟಜೆ ಶಬ್ದಕ್ಕೆ ಸಮೂಹ, ಪರಾಕ್ರಮ, ಆವೇಶ ಎಂಬರ್ಥಗಳೂ ಸಂದರ್ಭವಶದಿಂದ ಹೊರಡುತ್ತವೆ.

ಒಟ್ಟಜೆ ಎಂದರೆ ಒಟ್ಟಜ, ಒಗ್ಗು, ಹೊರಳಿ, ಓಡು; ಕಿಚ್ಚು ಎಂಬಂಥ ಅರ್ಥಗಳಿವೆ. "ಒಟ್ಟಜೆ"ಯೆಂದರೆ ಪರಾಕ್ರಮವೆಂಬ ಅರ್ಥವಿದೆಯೆಂದು ಕೊಳಂಬೆ ಪುಟ್ಟಣ್ಣಗೌಡರು ಹೇಳುತ್ತಾರೆ.

"**ಒಟ್ಟಜೆಯಿಂ** ಭಾರತದೊಳ್ ಕಟ್ಟಾಳ್ಗಳನಿಱಿದು ತವಿಸಲ್ ಆ ಜಟ್ಟಿಗಂ ಪುಟ್ಟಿದನೆಂಬವೊಲದಟಂ ಪುಟ್ಟಿದನಭಿಮನ್ಯು......." (ಪಂ.ಭಾ. ೫-೨೯)

*ವಿವರಗಳಿಗೆ ನೋಡಿ: ಕೊಳಂಬೆ ಪುಟ್ಟಣ್ಣಗೌಡ ೨೦೦೨ ಅಚ್ಚಗನ್ನಡ ನುಡಿಕೋಶ ಪುಟ. ೧೨೪.*

**೧೯೬. ಒಡ್ಡೋಲಗ**

*"............. ವಿಕ್ರಾಂತ ತುಂಗ**ನೊಡ್ಡೋಲಗಂ** ಗೊಟ್ಟಿರೆ"* ಎಂದು *ಪಂಪ ಭಾರತದಲ್ಲಿ ಬರುತ್ತದೆ. (೧೪-೨೧ವ)*

ಅರ್ಜುನನು ಒಡ್ಡೋಲಗವನ್ನು ಕೊಟ್ಟನು ಎಂಬುದು ಇದರ ಭಾವಾರ್ಥ. ಒಡ್ಡೋಲಗ ಕೊಡು(ಕ್ರಿಯೆ) ದರ್ಬಾರು ನಡೆಸು. ಸಭೆ ಸೇರಿಸು (ಕೂಡಿಸು) ಒಡ್ಡುವೆಂದರೆ ಗುಂಪು: ರಾಶಿ: ಎಂಬರ್ಥವೂ ಇದೆ. ಮಹಾಸಭೆಗೆ ಒಡ್ಡೋಲಗವೆಂದು ಸಾಮಾನ್ಯ ರಾಜರು ನೀಡುವ ಸಭೆಗೆ ಓಲಗವೆಂದೂ; ತೀರ್ಮಾನದ ಸಂದರ್ಭದಲ್ಲಿ ರಾಜನು ಓಲಗ ಚಾವಡಿಯಲ್ಲಿರುತ್ತಾನೆಂದು ನಂಬಿಕೆಯಿದೆ.

ಒಡ್ಡೋಲಗವು ರಾಜ ಸಭೆ. ಇದರಲ್ಲಿ ರಾಜನು ಮುಖ್ಯ ಸಿಂಹಾಸನದಲ್ಲಿ ಮಂಡಿತನಾಗುತ್ತಾನೆ. ಅವನು ಕುಳಿತುಕೊಳ್ಳುವ ಜಾಗವು ಎತ್ತರದಲ್ಲಿರುತ್ತದೆ. ಒಡ್ಡೋಲಗದಲ್ಲಿ ಮಂತ್ರಿಗಳು; ರಾಜ ಪುರೋಹಿತರು; ಸೇನಾನಾಯಕರು; ಮಾಂಡಲಿಕರು ಕುಳಿತಿರುತ್ತಾರೆ. ಸಾಮಾನ್ಯ ಸಮಸ್ಯೆಗಳು ಒಡ್ಡೋಲಗದಲ್ಲಿ ಚರ್ಚೆಗೆ ಬರುತ್ತದೆ. ಒಡ್ಡೋಲಗಕ್ಕೆ ಸ್ತ್ರೀಯರ ಪ್ರವೇಶವಿಲ್ಲ. ಉದಾಃ ಕೌರವನ ಒಡ್ಡೋಲಗ-ದ್ರೌಪದಿಯ ವಸ್ತ್ರಾಪಹರಣ ಸನ್ನಿವೇಶ.

೧೯೭. ಒತ್ತುಂಗರಡೆ

'ಬೆರಸಿರೆ ಕನ್ನಡದೊಳ್ ಬಂಧುರಮಾಗದು"

(ಕವಿರಾಜಮಾರ್ಗ ಪದ್ಯ ೫೩–೫೫:)

'ಬೆರಸಿರೆ ಕನ್ನಡದೊಳ್ ಬಂಧುರಮಾಗದು ಕಾವ್ಯರಚನೆ'– ಇಲ್ಲಿ 'ಬೆರಸಿರೆ' ಎಂಬ ಮಾತು ಗಮನಾರ್ಹ. ಎಂದರೆ, ಮೇಲ್ಕಂಡ ಸಂಸ್ಕೃತಾವ್ಯಯಗಳನ್ನು ಇದ್ದುವಿದ್ದಂತೆ ಹಾಗೆ ಹಾಗೆಯೆ ಎಂದರೆ 'ವ್ಯಸ್ತ'ವಾಗಿ ಕನ್ನಡ ಪದಗಳೊಂದಿಗೆ ಬೆರಸಿದರೆ ಕಾವ್ಯರಚನೆ ಚೆಲುವಾಗದು. ಆದರೆ, ಈ ಅವ್ಯಯಗಳನ್ನು 'ಸಮಸ್ತ'ವಾಗಿ ಮಾಡಿ ಪ್ರಯೋಗಿಸಬಹುದು. ಈ ಅಭಿಪ್ರಾಯವನ್ನು (ಪದ್ಯ ೫೫ ರಲ್ಲಿ) "ವಿದಿತ ಸಮಸಂಸ್ಕೃತೋದಿತ ಪದಂಗಳೊಳ್ ಪುದಿದು ಬೆರಸಿ ಬರೆ ಕನ್ನಡದೊಳ್ ಮುದಮನವು ತರ್ಕುಂ" ಎಂದು ವಿಸ್ತರಿಸಿ ವಿವರಿಸಿ ಹೇಳಿದ್ದಾನೆ. ಲಕ್ಷ್ಯ ಪದಗಳನ್ನು ಪರಿಶೀಲಿಸಿದಲ್ಲಿ ಈ ಅಭಿಪ್ರಾಯವು ಮನದಟ್ಟಾಗುವುದು. ಬೆರಸಬಾರದುದಕ್ಕೆ ಲಕ್ಷ್ಯವಾದ ೫೪ನೆಯ ಪದ್ಯದಲ್ಲಿ –ಬಹಿರ್ ಅಂತರ್ ಉಪವನಂಗಳೊಳ್ ಅಹರಹಂ ಆ ಪರಭೃತಂಗಳುಲಿವ ರವಂಗಳ್ ಸಹಸಾ ತಳಮಳಗೊಳಿಸಿದವು ಅಹೋ ಮನಗಳಂ ಇತಸ್ತತಂ ವಿರಹಿಗಳಾ'– ಅವ್ಯಯಗಳೆಲ್ಲವೂ ತನಿಯಾಗಿ ಪ್ರಯೋಗವಾಗಿವೆ, ಇಲ್ಲವೆ ಕನ್ನಡ ಪ್ರತ್ಯಯದೊಂದಿಗೆ (ಮ್) ಪ್ರಯೋಗವಾಗಿದೆ. ಇದು 'ಅಮಾರ್ಗ'ಕ್ಕೆ ಲಕ್ಷ್ಯ. 'ಮಾರ್ಗ'ಕ್ಕೆ –ಸರಿಯಾದ ಕ್ರಮಕ್ಕೆ – ಕೊಟ್ಟಿರುವ ತಿದ್ದುಪಾಟಾದ ಲಕ್ಷ್ಯದಲ್ಲಿ –'ಬಹಿರುದ್ಯಾನಾಂತರ', 'ಸಹಸೋದಿತಮತ್ತ ಕೋಕಿಲೋಚ್ಚೈರ್ಧ್ವಾನಂ', 'ಮುಹುರಾಕರ್ಣಿಸು', 'ಅಹರ್ನಿಶಂ' ಮುಂತಾದ ಪದಗಳೆಲ್ಲವೂ ಸಂಸ್ಕೃತ ವ್ಯಾಕರಣದ ಪ್ರಕಾರ(೫೭ನೆಯ ಪದ್ಯದಲ್ಲಿ 'ವಿದಿತ ಸಂಸ್ಕೃತೋಕ್ತಕ್ರಮಮಂ ಬಗೆದೊಂದುಮಾಡಿ ಪೇಳ್ದ ರೀತಿಯಲ್ಲಿ) 'ಸಮಸಂಸ್ಕೃತೋದಿತ ಪದಂಗಳೊಳ್ ಪುದಿದು ಬೆರಸಿ' ಬಂದಿವೆ, ಎಂದರೆ ಸಮಸ್ತಪದಗಳಾಗಿ ರೂಪ ಪಡೆದಿವೆ. ಈ ಸಮಸ್ತ ಪದಗಳಲ್ಲಿ ಅಂತರ್ಗತಗಳಾದ ಅವ್ಯಯಗಳು ಈಗ 'ಅಸಹಾಯಂಗಳ್' ಅಲ್ಲ. ಸಮಸಂಸ್ಕೃತಗಳ ಸಹಾಯವನ್ನು ಪಡೆದಿವೆ; ಅವುಗಳ ಬೆಂಬಳಿಯಲ್ಲಿ ಪ್ರಯೋಗಾರ್ಹತೆಯನ್ನು ಪಡೆದಿವೆ. ಈ ಸಮಸ್ತ ಪದಗಳಲ್ಲಿ ಅವ್ಯಯಗಳು ಪೂರ್ವ ಪದಗಳಾಗಿರುವುದನ್ನು ಗಮನಿಸಬೇಕು.

ಒತ್ತುಂಗರಡೆ=ಒತ್ತಿ ಬಾಜಿಸುವ ಕರಡೆ(ಕರಡಿ) ವಾದ್ಯ. (ಎರಡೂ ಕಡೆಯ ಬಾಯಿಗಳ ಚರ್ಮದ ಮುಚ್ಚಿಗೆಗಳನ್ನು ಬಿಗಿದು ಕಟ್ಟಿರುವ ಉದ್ದವಾದ ಬಾರುಪಟ್ಟಿಗಳನ್ನು ವಾದ್ಯದ ನಡುಭಾಗದಲ್ಲಿ ಎಡಗೈಯಿಂದ ಒತ್ತುತ್ತ ಬಲಗೈಯಲ್ಲಿ ಕಡ್ಡಿಯಿಂದ ಬಾಜಿಸುವ ವಾದ್ಯ ವಿಶೇಷ) ('ಮೋದುಂಗರಡೆ' ಎಂಬ ಪಾಠವೂ ಇದೆ: 'ಪರುಷತರಮಕ್ಕು ಮೋದುಂಗರಡೆಯ –'ಇದಕ್ಕೆ 'ಹೊಡೆದು ಬಾಜಿಸುವ ಕರಡೆ' ಎಂದು ಅರ್ಥ ಮಾಡಬಹುದು. ಈ ಪಾಠವನ್ನು ಸ್ವೀಕರಿಸಿದರೆ 'ಅಕ್ಕುಂ' ಎನ್ನುವೆಡೆ 'ಅಕ್ಕು' ಎಂಬ ಅಸಾಧುವಾದ ಹಳಗನ್ನಡ ಕ್ರಿಯಾಪದ ರೂಪವನ್ನು ಇಟ್ಟುಕೊಳ್ಳಬೇಕಾಗುತ್ತದೆ. 'ಅಕ್ಕುಮ್ಮೋದುಂ' ಎಂದರೆ ಛಂದಸ್ಸು ಕೆಡುತ್ತದೆ).

*ವಿವರಗಳಿಗೆ ನೋಡಿ: ಹಂ.ಪ.ನಾ ಶಾಂತಿಪುರಾಣದ ಮುನ್ನುಡಿ*

೧೯೮. ಒತ್ತೆ

*ತಾನೊತ್ತೆಯಿಡಲ್ವೋದಡೆ*

*ನೀನೆನ್ನಮಗಮ್ಮೆಗೆ ತಂದೆಯ್ಯೆಯೊತ್ತೆಗೆ....*

*(ಅಜಿತತೀರ್ಥಂಕರ ಪುರಾಣ ತಿಲಕಂ ೨-೬೬)*

ಒತ್ತೆಯಿಡುವುದೆಂದರೆ ಆಧಾರವಾಗಿಡುವ ವಸ್ತು. ಒತ್ತೆಯಾಳು ಆಧಾರವಾಗಿರಿಸಿಕೊಟ್ಟ ಆಳು ಎಂದರ್ಥ. ಎಲ್ಲವನ್ನೂ ಕಳೆದುಕೊಂಡಾಗ ಸೂಳೆಯಲ್ಲಿ ಸುಣ್ಣಬೆಲೆಯನ್ನು ಒತ್ತೆಯಿಟ್ಟು, ಮದ್ದಾನೆಯನ್ನೂ, ಮಾಣಿಕ್ಯವನ್ನು ಒತ್ತೆಯಾಗಿಡಲು ಹೇಳಿಕಳುಹಿಸುವ ಚಿತ್ರಣವಿದೆ. (೪-೮೭ವ)

ಉಪಭೋಗ ರಹಿತವಾದ ಅಡವು ನಾಶಗೊಳ್ಳಯವುದು ಮತ್ತು ಅದರ ಮೂಲ ಧನವು ಬೆಳೆಯುವುದು. ಸ್ಥಿರಾಸ್ಥಿಯು ಪ್ರಯಾಸಭೋಗ್ಯ ಫಲಯೋಗ್ಯ ಎಂದು ಎರಡು ವಿಧ. ಭೂಮಿ, ಮರ, ಗಿಡಗಳು, ಮುಂತಾದವನ್ನು ಒತ್ತೆ ಹಾಕಿಕೊಂಡು ತನ್ನ ಶಾರೀರಕ ಪರಿಶ್ರಮದಿಂದಲೇ ಅನುಭವಿಸತಕ್ಕುದು ಪ್ರಯಾಸಭೋಗ್ಯ. ಒತ್ತೆಯಿಟ್ಟವನ ಪರಿಶ್ರಮದ ಪರಿಣಾಮವಾಗಿ ಕೈಸೇರಿದ ಫಲವನ್ನು ಅನುಭವಿಸತಕ್ಕುದು ಫಲಭೋಗ್ಯ. ವ್ಯಾಪಾರದಲ್ಲಿ ಇಷ್ಟು ಲಾಭ ಬಂದರೆ ಇಷ್ಟನ್ನು ಕೊಡುವೆನೆಂದು ಮಾಡಿಕೊಂಡ ನಿರ್ಣಯದ ಫಲವಾಗಿ ಬಂದ ಬಡ್ಡಿಯು ಪ್ರಕ್ಷೇಪವೃದ್ಧಿ. ಅದರಿಂದ ಮೂಲಧನವನ್ನು ತೀರಿಸಿಕೊಂಡು ಅನುಭವದಲ್ಲಿರುವ ಒತ್ತೆಮಾಲನ್ನು ಬಿಟ್ಟುಕೊಡಬೇಕೆಂದು ಕೌಟಲೀಯ ಅರ್ಥಶಾಸ್ತ್ರದಲ್ಲಿ ಬರುತ್ತದೆ.

*ವಿವರಗಳಿಗೆ ನೋಡಿ: ಶ್ರೀ ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳು ೨೦೧೦*
*ಕೌಟಲೀಯ ಅರ್ಥಶಾಸ್ತ್ರ ಪುಟ. ೨೭೦*

## ಓ

೧೯೯. ಓದುಗಳುಮಂ

*ಮಂತ್ರಿಯೆಮ್ಮಣ್ಣಂ ಸೂರ್ಯಮಿತ್ರನೆಂಬೊಂ ಎಲ್ಲಾ* **ಓದುಗಳುಮಂ** *ಬಲ್ಲೊನಾತಂ ನಿಮ್ಮನೋದಿಸಿ ಯೋಗ್ಯರಂ ಮಾಡುವಂತಿರೆ ನಿರೂಪಿಸಿ....*

*(ಡಿ.ಎಲ್. ಎನ್. ೨೦೦೯. ಪು. ೪೭)*

ಓದುವುದು ಎಂದರೆ ವಡ್ಡಾರಾಧನೆಯಲ್ಲಿ ವಿದ್ಯೆಎಂಬ ಅರ್ಥದಲ್ಲಿ ಬಂದಿದೆ. "ಓದುಗಳು" ಎಂಬ ಬಹುವಚನ ಪ್ರಯೋಗವಾಗಿರುವುದು ಗಮನಾರ್ಹ. ಹತ್ತು-ಹಲವುಬಗೆಯ ವಿದ್ಯಾಭ್ಯಾಸವೆಂಬರ್ಥದಲ್ಲಿ ಈ ಪದ ಪ್ರಯೋಗವಾಗಿದೆ. ಓದು ಕನ್ನಡದ ಪದವೆಂಬುದು ಅಷ್ಟೇ ಗಮನಾರ್ಹ. ಶುದ್ಧಕನ್ನಡದ ಅನೇಕ ಪ್ರಯೋಗಗಳು

ವಡ್ಡಾರಾಧನೆಯಲ್ಲಿ ದೊರೆಯುತ್ತವೆ. ವಿದ್ಯಾಭ್ಯಾಸದಲ್ಲಿ ನಾಲ್ಕು ವೇದಗಳು: ಷಡಂಗಗಳು: ನ್ಯಾಯ, ತರ್ಕಶಾಸ್ತ್ರ, ಹದಿನೆಂಟು ಧರ್ಮಶಾಸ್ತ್ರಗಳು, ಮೀಮಾಂಸೆ: ವ್ಯಾಕರಣ, ಛಂದಸ್ಸು, ಅಲಂಕಾರಗಳು ಸೇರಿದ್ದವು ಎಂದು ಕೃತಿಕಾರ ಬಣ್ಣಿಸುತ್ತಾನೆ.

ಪೇಟೆ-ಪಟ್ಟಣಗಳಲ್ಲಿರುವ ಶಿಕ್ಷಣಕೇಂದ್ರಗಳನ್ನು ಬ್ರಹ್ಮಪುರಿಗಳೆಂದು ಹೆಸರಿಸಲಾಗಿದೆ. ಬ್ರಾಹ್ಮಣರು ಇವುಗಳಲ್ಲಿ ವಾಸವಾಗಿರುತ್ತಿದ್ದರು. ಪೇಟೆ-ಪಟ್ಟಣಗಳು ಹೆಚ್ಚಿನ ಸಂಖ್ಯೆಯಲ್ಲಿ ಇದ್ದಿಲ್ಲವಾದ್ದರಿಂದಾಗಿ ಅಗ್ರಹಾರಗಳ ಸಂಖ್ಯೆಯೇ ಹೆಚ್ಚು ಇತ್ತು. ಕೆಲವು ಶಾಸನಗಳಲ್ಲಿ ಅಗ್ರಹಾರಗಳನ್ನು ಬ್ರಹ್ಮಪುರಿಗಳೆಂದೇ ಹೆಸರಿಸಲಾಗಿದೆ. ಕ್ರಿ.ಶ.೧೦೨೮ರ ಮುಳುಗುಂದ ಶಾಸನವು ಮುಳಗುಂದವನ್ನು ಬ್ರಹ್ಮಪುರಿ ಎಂಬುವುದಾಗಿ ಹೆಸರಿಸಿದೆ. ನಾಗಸ್ವಾಮಿ ಎನ್ನುವವನು ಈ ಬ್ರಹ್ಮಪುರಿಯ ಮುಖ್ಯಸ್ಥನಾಗಿದ್ದು ಭೂಮಿ ಹಾಗೂ ಇತರ ವಸ್ತುಗಳನ್ನು ದಾನ ನೀಡಿದ ವಿವರ ಶಾಸನದಲ್ಲಿದೆ. ಆದರೆ ಮುಳುಗುಂದವು ಅಗ್ರಹಾರವಾಗಿತ್ತು ಎಂಬುದಾಗಿ ತಿಳಿದುಬರುತ್ತದೆ. ಕೇಶಿರಾಜ ದಂಡಾಧಿಪ ಎನ್ನುವವನು ಕೇಶವ ದೇವಸ್ಥಾನವನ್ನು ನಿರ್ಮಿಸಿ ಅದರ ಎದುರುಗಡೆ ವೀರಕೇಶವಪುರ ಎಂಬ ಪಟ್ಟಣವನ್ನು ನಿರ್ಮಿಸಿದ. ಆ ಪಟ್ಟಣವನ್ನು ಶಾಸನದಲ್ಲಿ ಬ್ರಹ್ಮಪುರಿ ಎಂದು ಕರೆಯಲಾಗಿದೆ. ಕ್ರಿ.ಶ.೧೧೬೫ರ ಸೊರಬ ಶಾಸನವು ಮೂರು ಬ್ರಹ್ಮಪುರಿಗಳನ್ನು ಉಲ್ಲೇಖಿಸಿದರೆ, ಕ್ರಿ.ಶ. ೧೧೯೨ರ ಕಡ್ಲೆವೇಡು ಶಾಸನವು ಎಂಟು ಬ್ರಹ್ಮಪುರಿಗಳ ಕುರಿತು ಮಾಹಿತಿ ನೀಡುತ್ತದೆ. ಬ್ರಹ್ಮಪುರಿಗಳ ಅಧ್ಯಯನ ನಡೆಸುವಾಗ ಅವು ಅಗ್ರಹಾರಗಳಿಂದ ಭಿನ್ನವಾಗಿ ಗೋಚರಿಸುವುದಿಲ್ಲ. ಅವುಗಳ ಕೆಲಸ ಕಾರ್ಯಗಳಲ್ಲೂ ಭಿನ್ನತೆಗಳು ಕಂಡುಬರುವುದಿಲ್ಲ. ಇರುವ ಒಂದು ಭಿನ್ನತೆಯೆಂದರೆ ಅಗ್ರಹಾರಗಳು ಹಳ್ಳಿಗಳಲ್ಲಿದ್ದು, ಬ್ರಹ್ಮಪುರಿಗಳು ಪೇಟೆ-ಪಟ್ಟಣಗಳಲ್ಲಿ ಇರುವುದು. ಎರಡೂ ಕೇಂದ್ರಗಳು ಅರಸ ಮತ್ತು ಖಾಸಗಿ ವ್ಯಕ್ತಿಗಳಿಂದ ದಾನದತ್ತಿಗಳನ್ನು ಪಡೆಯುತ್ತಿದ್ದವು. ಕಲಿಸುವ ವಿಷಯಗಳು ಒಂದೇ ರೀತಿ ಇರುತ್ತಿದ್ದವು.

ಓದುಗನ ಮನಸ್ಸನ್ನು ತನ್ನ ಕೃತಿಯಲ್ಲಿ ವ್ಯಾಪಿಸಿರುವ ಭಾವದಿಂದ ಹೊರತಾಗಿ ಸಲರಿಯದವನ ರಚನೆಯನ್ನು ಓದುವ ವ್ಯಸನ ಮತ್ತು ಓದುವ ಕಷ್ಟವಾದರೂ ಯಾಕೆ ಬೇಕು? ಕವಿಯಲ್ಲದವರನ್ನು ಪುರಸ್ಕರಿಸಬೇಕಾದ ಅಗತ್ಯವಿದೆಯೆ? (ಕವಿರಾಜಮಾರ್ಗಂ ೧-೧೨) ಇದು ಕವಿರಾಜಮಾರ್ಗಕಾರನ ನಿಲುವು. ಓದುವುದು ಒಂದು ರೀತಿಯ ಪ್ರತಿಕ್ರಿಯೆ. ಓದುವ ಪ್ರಕ್ರಿಯೆಯು ಜಡವಲ್ಲ. ಅದು ಓದುಗನ ಮನೋಸ್ಥಿತಿಯನ್ನು ಅವಲಂಬಿಸಿಕೊಂಡಿರುತ್ತದೆ. Reader Response theory/ Reception theoryಗಳು ಇದರ ಬಗೆಗೆ ವಿಶೇಷ ಚರ್ಚೆಯನ್ನು ನಡೆಸಿವೆ.

ಓದುಗ ಕೇಂದ್ರಿತ ವಿಮರ್ಶೆಯ ಪ್ರಕಾರ ಓದುಗನ ಮನಸ್ಸು ಒಂದು ಕೇಂದ್ರ. ಒಂದು ಕೃತಿಯನ್ನು ಓದುವುದೆಂದರೆ ಅದರ ಜೊತೆಗೆ ಅನುಸಂಧಾನ ನಡೆಸುವುದು. ಭಾರತೀಯ ಕಾವ್ಯಮೀಮಾಂಸೆಯಲ್ಲಿ ಬರುವ ಸಹೃದಯ ಪರಿಕಲ್ಪನೆಯನ್ನು ನೆನಪಿಸಿಕೊಳ್ಳಬೇಕು. ಓದುಗ ಕೇಂದ್ರಿತ ವಿಮರ್ಶೆಯ ಪ್ರಕಾರ-ಓದುಗನು ಕೃತಿಯನ್ನು

ಸ್ವೀಕರಿಸುವವನು. ಆದುದರಿಂದ ಕೃತಿಯು ಸಾಫಲ್ಯವನ್ನು ಪಡೆಯುವುದು ಓದುಗನಲ್ಲಿ ಮತ್ತು ಓದು ಅನ್ನುವುದು ಒಂದು ರೀತಿಯಲ್ಲಿರುವುದಿಲ್ಲ. ಕೃತಿಗೆ ಬೇರೆ ಬೇರೆ ರೀತಿಯ ಓದುಗಳಿರುತ್ತವೆ. ಅದಕ್ಕೆ ತಕ್ಕಂತೆ ಭಿನ್ನ ಭಿನ್ನ ಮಾದರಿಯ ಓದುಗರಿರುತ್ತಾರೆ. ಸಾಧಾರಣ ಓದುಗರು: ಆದರ್ಶ ಓದುಗರು: ಅನುಕರಣೆಯ ಓದುಗರು ಇತ್ಯಾದಿ.

ಓದು ಕೇಂದ್ರಿತ ವಿಮರ್ಶೆಯ ಪ್ರಕಾರ ಓದುಗನ ಮನಸ್ಸು ಒಂದು ಕೇಂದ್ರ. ಒಂದು ಕೃತಿಯನ್ನು ಓದುವುದೆಂದರೆ ಅದರ ಜೊತೆಗೆ ಅನುಸಂಧಾನ ನಡೆಸುವುದು ಭಾರತೀಯ ಕಾವ್ಯಮೀಮಾಂಸೆಯಲ್ಲಿ ಬರುವ ಸಹೃದಯ ಪರಿಕಲ್ಪನೆಯನ್ನು ನೆನಪಿಸಿ ಕೊಳ್ಳಬೇಕು. ಓದುಗ ಕೇಂದ್ರಿತ ವಿಮರ್ಶೆಯ ಪ್ರಕಾರ ಓದುಗನು ಕೃತಿಯನ್ನು ಸ್ವೀಕರಿಸು ವವನು. ಓದು ಅನ್ನುವುದು ಒಂದು ರೀತಿಯಲ್ಲಿರುವುದಿಲ್ಲ. ಕೃತಿಗೆ ಬೇರೆ ಬೇರೆ ರೀತಿಯ ಓದುಗಳಿರುತ್ತವೆ. ಅದಕ್ಕೆ ತಕ್ಕಂತೆ–ಭಿನ್ನ ಭಿನ್ನ ಮಾದರಿಯ ಓದುಗರಿರುತ್ತಾರೆ. ಸಾಧಾರಣ ಓದುಗರು; ಆದರ್ಶ ಓದುಗರು; ಅನುಕರಣೆಯ ಓದುಗರು ಇತ್ಯಾದಿ.

*ವಿವರಗಳಿಗೆ ನೋಡಿ: Michel Payne 1996 Dictionary of cultural and literary theory*

**೨೦೦. ಓಲೆ**

*ಕಲ್ಪಿಸಿ**ಯೋಲೆ**ಯಂ ಬರೆಯಿಸಿ ನಿಮ್ಮ ಕಯ್ಯೊಳಟ್ಟಿದಪೆಂ ನೀಮುಂ ಪೋಗಿ ನಿಮ್ಮ ಮಾವನ ಪಕ್ಕದೊಳೋದಿಮೆಂ**ದೋಲೆ**ಯಂ ಬರೆಯಿಸಿ ಕೊಟ್ಟೊಡವರ್ಗ್ಗಳುಂ ತಾಯಂ ಬೀಳ್ಕೊಂಡು ಕತಿಪಯ ದಿವಸಂಗಳಂ ರಾಜಗೃಹಮನೆಯ್ದಿ ಸೂರ್ಯಮಿತ್ರನ ಮನೆಯಂ ಬೆಸಗೊಂಡು ಪೋಗಿ ಕಂ**ಡೋಲೆ**ಯನಿಕ್ಕಿದೊಡೆ ಸೂರ್ಯಮಿತ್ರನೆಲ್ಲಿಂ ಬಂದಿ**ರಾರೋಲೆ**ಯೆಂದು ಬೆಸಗೊಂಡೊಡೆ – ಕೌಸಂಬಿಯಿಂ ಬಂದೆವು ನಿಮ್ಮ ತಂಗೆಯಪ್ಪ ಕಾಶ್ಯಪಿಯಟ್ಟಿ ದೋಲೆಯೆಂದೊ**ಡೋಲೆ**ಯಂ ಬಾಜಿಸಿ ನೋಡಿ...............*

*(ಡಿ.ಎಲ್.ಎನ್. ೨೦೦೯ ಪುಟ. ೪೭)*

ಇದರಲ್ಲಿ ತಂಗಿಯು ಅಣ್ಣನಿಗೆ ಓಲೆಯನ್ನು ಕಳಿಸುವ ವಿಚಾರ ಬಂದಿದೆ. ಅನಕ್ಷರಸ್ಥ ಹೆಣ್ಣು ಓಲೆ ಬರೆಯುವ ಸಾಧ್ಯತೆಯಿಲ್ಲ. ಓಲೆಯನ್ನು ತಾಳೆಗರಿ; ವಸ್ತ್ರ; ಪತ್ರ(ಎಲೆ)ಯಲ್ಲಿ ಬರೆದು ಕಳಿಸುತ್ತಿದ್ದರು. ಸಂದೇಶವನ್ನು ಕಳಿಸುವ ವಿಧಾನಗಳಲ್ಲಿ ತಾಡೋಲೆಯೂ ಒಂದು ಎಂಬುದು ಗಮನಾರ್ಹ.

**೨೦೧. ಓಲೆವಾಗ್ಯ**

*ದೇವಲೋಕದ ಕನ್ಯಕೆಯರೋಲಗದೊಳಿರ್ಪೆನೆಂದು ನುಡಿಯೆ*
*ನೀನದೆಂತು ಪೋಗಲ್ ತೀರದು..........................*
*ನಾಳೆ ಮಗುಟ್ದು ಬಂದೆನ್ನೊಳ್ ನೆರೆವೆಯೆಂದು ಪೇೞು ನಿನಗಜೀವುಂಟೆ*
*ಎಂದು ಕೇಳೆಯೆ**ನ್ನೋಲೆವಾಗ್ಯ**ಮುಂಟೆಂದಳ್.............*

*(ಪಂಪ ಭಾರತ ೧೦–೪೪ವ ೪೫)*

ನಾಳೆ ದೇವಲೋಕದ ಸ್ತ್ರೀಯರಲ್ಲಿ ಸಂತೋಷದಿಂದಿರುತ್ತೇನೆ ಎಂದು ಹೇಳಿದನು. ಅವಳು 'ನೀನು ಹೇಳಿದ ಹಾಗೆ ಹೋಗುವುದು ಸಾಧ್ಯವಿಲ್ಲ. ನಾಳೆ ಪುನಃ ನೀನು ಬಂದು ನನ್ನಲ್ಲಿ ಸೇರುತ್ತೀಯೆ' ಎಂದಳು. 'ಅದು ನಿನಗೆ ಹೇಗೆ ಗೊತ್ತು' ಎಂದು ಪ್ರಶ್ನಿಸಿದನು. ಅವಳು 'ನನ್ನ ಓಲೆ ಭಾಗ್ಯವುಂಟು' ಎಂದಳು. ಓಲೆಭಾಗ್ಯವೆಂದರೆ ಪತಿವ್ರತೆಯಾಗಿ ಉಳಿಯುವುದು.

ಗಂಡ ಸತ್ತರೆ ಒಲೆ; ಕರಿಮಣಿ; ಮೂಗುತಿ; ಕಾಲುಂಗುರ; ಹಣೆಬೊಟ್ಟು ತೆಗೆಯುತ್ತಾರೆ. ಓಲೆಭಾಗ್ಯ ಈ ದೃಷ್ಟಿಯಿಂದ ಮುತ್ತೈದೆತನದ ಸಂಕೇತ. ಯುದ್ಧದ ಹಿಂದಿನ ದಿನ – ಸೈನ್ಯದ ಶಿಬಿರದಲ್ಲಿ ಪತಿ ಹೇಳಿದ ಮಾತಿಗೆ ಸತಿಯ ಉತ್ತರವಿದು. ಇದು ಮುತ್ತೈದೆತನದ ಭಾಗ್ಯಕ್ಕೆ ಒತ್ತು ನೀಡುತ್ತದೆ.

ಮುತ್ತೈದೆಯರು ಓಲೆ ಭಾಗ್ಯವನ್ನು ಹಂಬಲಿಸುತ್ತಿದ್ದರು. ಅದು ಪತಿವ್ರತಾ ಧರ್ಮದ ಸೂಚನೆ. ಒಂದು ಸಂಗತಿಯನ್ನು ನಾವಿಲ್ಲಿ ನೆನಪಿಟ್ಟುಕೊಳ್ಳಬೇಕು–ಗಂಡನ ಸಾವಿನ ಅನಂತರ ಹೆಂಡತಿಯು ವಿಧವೆಯಾಗುತ್ತಾಳೆ. ಮುತ್ತೈದೆಯಾಗಿ ಸಾಯುವುದರಿಂದ ಸ್ವರ್ಗ ಪ್ರಾಪ್ತಿಯಾಗುತ್ತದೆಯೆಂಬ ನಂಬಿಕೆಯ ಹಿನ್ನೆಲೆಯಲ್ಲಿ ಈ ವಾಕ್ಯವು ಬಂದಿದೆ.

ರಾಜಕೀಯ ವ್ಯವಸ್ಥೆಗೆ ಹಿಡಿದ ಕೈಗನ್ನಡಿಯಿದು. ರಾಜರು ಯುದ್ಧಕ್ಕೆ ಪ್ರೋತ್ಸಾಹ ಕೊಡುವಾಗ ಈ ರೀತಿಯ ಮೌಲ್ಯಗಳನ್ನು ಹೇರುತ್ತಿದ್ದರು. ಸೈನಿಕರಿಗೆ ಉತ್ಸಾಹ ತುಂಬಿಸಲು ಈ ರೀತಿಯ ಮಾತುಗಳು ಬೇಕಾಗಿರುತ್ತಿದ್ದವು.

ವಿವರಗಳಿಗೆ ನೋಡಿ : ಐದೆಮಿನುಗು; ಪತಿವ್ರತೆ.

## ಔ

### ೨೦೨. ಔದುಂಬರ ಕುಷ್ಠ

*ವಾಯುಭೂತಿ ತನ್ನೊಂದು ಮಾನಗರ್ವದಿಂದೆಮ್ಮಂ ಪಟೆದು ಬಯ್ದು ನುಡಿದ ಪಾಪದ ಫಲದಿಂದೇೞು ದಿವಸದಿದೊಳಗೌ***ದುಂಬರ ಕುಷ್ಠಮಾಗಿ** *ಪುಟೆತು............*

*(ಡಿ.ಎಲ್.ಎನ್. ೨೦೦೯ ಪುಟ. ೫೪).*

ಪಾಪದ ಫಲಗಳನ್ನು ವಡ್ಡಾರಾಧನೆಯಲ್ಲಿ ವಿವರಿಸಲಾಗಿದೆ. ಪಾಪದ ಫಲದಿಂದ ಔದುಂಬರ ಕುಷ್ಠ ಬರುತ್ತದೆ. ಔದುಂಬರವೆಂದರೆ ಅತ್ತಿಯ ಮರ. ಔದುಂಬರ ಕುಷ್ಠವೆಂದರೆ ಅತ್ತಿಯ ಹಣ್ಣಿನಲ್ಲಿ ಹುಳಬೀಳುವಂತೆ ಕುಷ್ಠ ರೋಗದ ಒಂದು ಲಕ್ಷಣವಾದ ಮೈಮೇಲೆ ಹುಳವಾಗುವುದು, ಔದುಂಬರ ಕುಷ್ಠವಾಗುವುದು ಮಾತ್ರವಲ್ಲ. ದೊಂಬರ ಮನೆಯಲ್ಲಿ ಹೆಣ್ಣುಕತ್ತೆಯಾಗಿ ಜನಿಸುವುದು, ಪೇಪಂದಿಯಾಗುವುದು ಇತ್ಯಾದಿ.

ಕುಷ್ಠರೋಗ; ಕ್ಷಯ; ಪ್ಲೇಗು; ಕ್ಯಾನ್ಸರ್(ಏಡಿಹುಣ್ಣು) ಮಹಾನ್ ರೋಗಗಳೆಂದು

ಪರಿಗಣಿತವಾಗಿದೆ. ಇವುಗಳಿಗೆ ಸರಿಯಾದ ಔಷಧಿಗಳಿಲ್ಲವೆಂದೂ; ಈ ರೋಗಗಳು ಪಾಪದ ಫಲಗಳ ಪರಿಣಾಮವೆಂದೂ ತಿಳಿಯುತ್ತಿದ್ದರು.

**೨೦೩. ಔಷಧಿಗಳು**

......................***ತಪದ ಮಹಾತ್ಮ್ಯದಿಂದಂ ಆಮೋಷಧಿ, ಖೇಳೋಷಧಿ, ಜಪ್ಲೋಷಧಿ ವಿಪ್ಲೋಷಧಿ, ಸರ್ವೌಷಧಿ ಯೆಂಬಿವು*** *ಆಮೋಷಧಿ, ಖೇಳೋಷಧಿ, ಇಷ್ಪೋಷಧಿ, ಸರ್ವೌಷಧಿ – ಇವು ನಾಲ್ಕು ಔಷಧಿಗಳು*

*(ವಡ್ಡಾರಾಧನೆ – ಟಿ. ಕೇಶವಭಟ್ಟ ೨೦೧೦ ಪುಟ. ೧೨೪)*

ಚರಕಸಂಹಿತೆಯಲ್ಲಿ ಮೂರು ವಿಧದ ಔಷಧಿಗಳನ್ನು ಹೇಳಲಾಗಿದೆ. ದೈವವ್ಯಪಾಶ್ರಯ, ಯುಕ್ತಿವ್ಯಪಾಶ್ರಯ, ಸತ್ವಾವಜ. (ಚರಕ ಸಂಹಿತೆ ೫೬–೧೧–೬೨) 'ಖಗೇಂದ್ರ ಮಣಿದರ್ಪಣ'ದಲ್ಲಿ ನಾಲ್ಕು ವಿಧದ ಔಷಧಿಯನ್ನು ಹೇಳಲಾಗಿದೆ. ಅಂಜನ, ನಸ್ಯ, ಪಾನ, ಲೇಪನ. ಈ ರೀತಿಯ ಔಷಧಿಯನ್ನು ನೀಡಲು ಸಿದ್ಧಿಯಿರಬೇಕು. ರೋಗವನ್ನು ಪತ್ತೆ ಮಾಡುವುದು ಮತ್ತು ಅದಕ್ಕೆ ಔಷಧಿ ಕೊಡುವುದು ಎರಡು ಸಿದ್ದಿಯಿಂದ ಸಾಧ್ಯವೆಂದು ವಡ್ಡಾರಾಧನೆಯ ಅಭಿಪ್ರಾಯವಾಗಿದೆ. ಅದುನ್ನು ಪಡೆಯುವುದು ತಪಸ್ಸಿನಿಂದ ಸಾಧ್ಯ.

## ಕ

**೨೦೪. ಕಂಕಣ**

*ಸ್ವಪ್ನದೊಳಾದದೊ ನಿರುತಮೊ ಎಂದು ಸಂದೇಹಚಿತ್ತನಾಗಿ ತನ್ನ ಕೈಯೊಳ್ ಕಟ್ಟಿದ* ***ಕಂಕಣ****ಮಂ ನೋಡಿ ಕಂಡು ಕುಮಾರನಿಂತೆಂದು ಬಗೆದಂ*

*(ಡಿ.ಎಲ್.ಎನ್. ೨೦೦೯ ಪುಟ. ೧೦೨).*

ಕಂಕಣ ಕಟ್ಟುವುದನ್ನು ವಡ್ಡಾರಾಧನೆಯಲ್ಲಿ ಹೇಳಲಾಗಿದೆ. ಮದುವೆ ಮುನ್ನ ಕಂಕಣ ಕಟ್ಟುವುದು ವ್ರತನಿಷ್ಠತೆಯ ಸೂಚಕ. ಕಂಕಣ ಕಟ್ಟಿದ ಮೇಲೆ ಯಾವುದೇ ರೀತಿಯ ಸೂತಕದ ಬಾಧೆಯಿಲ್ಲ. ಮಂಗಳ ಪ್ರಸಂಗಗಳಲ್ಲಿ ಮುಂಗೈಗೆ ಕಂಕಣವನ್ನು ಕಟ್ಟುತ್ತಾರೆ. ಇದು ಸಂಕಲ್ಪವನ್ನು ಸೂಚಿಸುತ್ತದೆ.

ಕಡಗ, ಬಳೆ, ಸಂಕಲ್ಪ ಮಾಡು; ಮಂಗಳ ಕಾರ್ಯಗಳಲ್ಲಿ ಮುಂಗೈಗೆ ಕಟ್ಟುವ ರಕ್ಷಾಸೂತ್ರಗಳಿಗೆ ಕಂಕಣವೆಂದು ಹೆಸರು.

ಆ ಕಂಕಣವು ದೊರತ ಬಳಿಕ ದೇವಿಯ ಅಪ್ಪಣೆಯಂತೆ ನೇಗಿಯನ್ನು ಕೆಯ್ಕೊಂಡ ವರ್ಣನೆಯಿದೆ. ಆದರೆ, ಜೀವಿಯು ಕೊಟ್ಟ ಕಂಕಣವು ಎಂತಹದು? ....... ಎಂಬುದರ ಬಗ್ಗೆ ಮಾತ್ರ ಪುರಾಣವು ಮೌನವನ್ನು ತಾಳುತ್ತದೆ! ಅದು ಉಣ್ಣೆಯದೆ? ಹತ್ತಿಯದೆ?

ಸ್ವಲ್ಪ ವಿಚಾರಿಸಿ ನೋಡಿದರೆ ಹತ್ತಿಗಿಂತ ಮೊದಲು ಉಣ್ಣೆಯೆಂಬುದು ಗೊತ್ತಾಗುವಂತಿದೆ. ಒಕ್ಕಲುತನವು ಗೊತ್ತಾದ ಬಳಿಕ ಹತ್ತಿ; ಕಾಡುಹತ್ತಿಯ ಗಿಡಗಳು ದೊರೆತ ಬಳಿಕ ಅದು ಮನುಷ್ಯನಿಗೆ ಗೊತ್ತು ಎಂದು ಶಂಬಾ ಜೋಶಿ ಹೇಳುತ್ತಾರೆ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೧ ಪುಟ. ೨೭೫*
*ಕೆ. ಕೃಷ್ಣ ಜೋಯಿಸ್ ೧೯೮೮ ಧರ್ಮಶಾಸ್ತ್ರಕರದೀಪಿಕಾ*

**೨೦೫. ಕಂಚುಕಿ**

*"..............ಕಂಚುಕಿ ಬಂದು ಕಂಡನನು ರಾಗದಿನಾ ಮನುಜೇಂದ್ರ ಚಂದ್ರನಂ"*
*(೧-೭೧)*

ಮುದಿತನದಿಂದ ಕೂಡಿರುವ, ಬಾಗಿದ ಸೊಂಟದ ಮೇಲು ಭಾಗವುಳ್ಳ ಮುಪ್ಪಿನಿಂದ ಬೆಳ್ಳಗಾಗಿರುವ ತಲೆಗೂದಲುಳ್ಳ ನಿಲುವಂಗಿಯನ್ನು ತೊಟ್ಟುಕೊಂಡಿರುವ ಗರುಡ ಧ್ವನಿಯಿರುವ **ಕಂಚುಕಿ**ಯ ಚಿತ್ರಣವು 'ಕರ್ಣಾಟಕ ಕಾದಂಬರಿ'ಯಲ್ಲಿ ಬರುತ್ತದೆ.

ಕಂಚುಕಿಯು ರಾಣಿವಾಸದ ಅಧಿಕಾರಿ. ರಾಣಿವಾಸದ ಅಧಿಕಾರಿಗಳೆಂದರೆ – ಅಂತಃಪುರದ ಮೇಲ್ವಿಚಾರಕರೂ ಹೌದು. ರಾಣಿವಾಸದ ಕಂಚುಕಿಯರು ಹೇಗಿರಬೇಕೆಂದು ವಿವರಿಸುವಾಗ ಅವರು ವೃದ್ಧರಾಗಿರಬಹುದು; ನಪುಂಸಕರಾಗಿರಬಹುದು; ಎಂದು ಅವರು ನಂಬಿಕೆಗೆ ಅರ್ಹರಾಗಿರಬೇಕೆಂದೂ ಕೌಟಿಲ್ಯನು ವಿವರಿಸುತ್ತಾನೆ. ಕಂಚುಕವನ್ನು ತೊಟ್ಟುಕೊಂಡ (ನಾ) ಅಂತಃಪುರದ ಅಧಿಕಾರಿ; ರಾಣಿವಾಸದ ಪಾರುಪತ್ಯಗಾರ:

*ವಿವರಗಳಿಗೆ ನೋಡಿ: ಕೃಷ್ಣಭಟ್ಟ .ಕೆ ೧೯೭೨ ಕೌಟಿಲ್ಯನ ಅರ್ಥಶಾಸ್ತ್ರ*

**೨೦೬. ಕಂತಿಯರು**

*ಜೈನ ಕಂತಿಯರನ್ನು ಆರ್ಯಿಕೆಯರೆಂದು ಕರೆಯುತ್ತಾರೆ. ಕಂತಿಯರೆಂದರೆ ತಪಸ್ವಿನಿಯರು ಎಂದರ್ಥ.*

*(ಚಾವುಂಡರಾಯ ಪುರಾಣ –ಸುಮತಿ ಪುರಾಣಂ ಪುಟ. ೩)*

ಅಜ್ಜಿಕೆಯರು ಕೂಡಾ ಕಂತಿಯರು. (ಅದೇ).

ಜೈನಮತದಲ್ಲಿ ಮೂರು ಲಿಂಗಗಳನ್ನು ಎಂದರೆ ವೇಷಗಳನ್ನು ಹೇಳುತ್ತಾರೆ. ಒಂದಂತೂ ಜಿನದೇವರು ಧಾರಣ ಮಾಡಿರುವ ಯಥಾ ಜಾತರೂಪವಿದೆ. ಇನ್ನು ಎರಡನೆಯದು ಹನ್ನೊಂದನೆಯ ಪ್ರತಿಮಾಧಾರಿಯಾದ ಉತ್ಕೃಷ್ಟ ಶ್ರಾವಕವಿದೆ. ಮತ್ತು ಮೂರನೆಯದು ಸ್ತ್ರೀ ಆರ್ಯಿಕೆಯರದಿದೆ. ಇವನ್ನು ಹೊರತುಪಡಿಸಿ ನಾಲ್ಕನೆಯ ಅನ್ಯ ಪ್ರಕಾರದ ವೇಷವು ಜಿನಮತದಲ್ಲಿ ಇಲ್ಲ. ಯಾರು ಮನ್ನಿಸುತ್ತಾರೋ ಅವರು ಮೂಲ ಸಂಘದಿಂದ ಬಾಹಿರರಾಗಿದ್ದಾರೆ.

ವಿವರಗಳಿಗೆ ನೋಡಿ: ಜಯಚಂದ ಛಾಬಡಾ ೨೦೧೦ ಅಷ್ಟಪಾಹುಡ ಪುಟ. ೨೪.

**೨೦೭. ಕಚ್ಚುಟ**

*ಒರ್ವಂ ಕರಿಯ **ಕಚ್ಚುಟ**ಮನುಟ್ಟು ಮೈಯ್ಯೆಲ್ಲಂ ಮಸಿಯಂ ಪೂಸಿ......................*

*(ಡಿ. ಎಲ್. ಎನ್. ೧೧೮-೧೬)*

ಎಂದು ವಡ್ಡಾರಾಧನೆಯಲ್ಲಿ ಬರುತ್ತದೆ. ಕಚ್ಚುಟವೆಂದರೆ ಕೌಪೀನ. ಸನ್ಯಾಸಿಗಳು ಬರಿಯ ಕೌಪೀನ ಮಾತ್ರ ಧರಿಸುತ್ತಾರೆ. ಕೌಪೀನ ಮರ್ಮಾಂಗವನ್ನು ಮಾತ್ರ ಮುಚ್ಚುತ್ತದೆ. ಉಳಿದ ವಸನಗಳನ್ನು ಸನ್ಯಾಸಿಗಳು ತ್ಯಜಿಸುತ್ತಾರೆ. ಅದು ತ್ಯಾಗದ ಸಂಕೇತವೂ ಹೌದು. ಕೌಪೀನ ಮಾತ್ರ ಧರಿಸುವುದು ತ್ಯಾಗದ ಸಂಕೇತ ಮಾತ್ರವಲ್ಲ. ಅದು ಇಂದ್ರಿಯ ನಿಗ್ರಹದ ಸಂಕೇತ ಕೂಡಾ ಆಗಿದೆ. ಕೌಪೀನ ಧರಿಸುವುದು ಭಾರತೀಯರಲ್ಲಿ ಅಸಭ್ಯ ವರ್ತನೆಯಲ್ಲ.

**೨೦೮. ಕಣ್ಮಲೆ**

*'ಮುನ್ನಮೆ ಸೋಂಕಿ ಕಣ್ಮಲೆವ ಮಾತುಗಳೆಲ್ಲರ ಪೋಲ್ವಿ'*

*(ಆದಿಪುರಾಣ ೭-೫೫).*

ಇದನ್ನು ಕನ್ನಡದಲ್ಲಿ ಬೇರೆ ಬೇರೆ ರೀತಿಯಲ್ಲಿ ಹೇಳಲಾಗಿದೆ. "ಅಂತದೃಷ್ಟಿ", 'ಅಂತಃಚಕ್ಷು', 'ದರ್ಶನ', 'ಇಂದ್ರಿಯ ಗೋಚರ', 'ಉನ್ಮೀಲನ ದೃಷ್ಟಿ', ಪಂಪ 'ಕಣ್ಮಲೆ' ಎಂದು ಬಳಸಿದ್ದಾನೆ. ಕಣ್ಣಿಗೆ ಗೋಚರವಾಗದ ಆದರೆ ಮನಸ್ಸಿಗೆ ಗೋಚರವಾಗುವುದನ್ನು 'ಅಕ್ಷುದರ್ಶನ' ವೆಂದು ಕರೆಯುತ್ತಾರೆ. ಅಕ್ಷು ಎಂದರೆ ಕಣ್ಣು. ದರ್ಶನವೆಂದರೆ ಹೊಳಹು.

ಅಚಕ್ಷುರ್ದರ್ಶನ – ಅಚಕ್ಷುರ್ದರ್ಶನಾವರಣೀಯ ಕರ್ಮದ ಕ್ಷಯೋಪಶಮವಾಗಲು ಚಕ್ಷುರ್ಭಿನ್ನವಾದ ಇಂದ್ರಿಯಗಳೂ, ಇವುಗಳ ಸಹಾಯದಿಂದ ಆತ್ಮನಿಗೆ ಮೂರ್ತ, ಅಮೂರ್ತ ದ್ರವ್ಯಗಳ ವಿಕಲಜ್ಞಾನವುಂಟಾಗುವುದು; ಇದು ಅಚಕ್ಷುರ್ದರ್ಶನವು. ಪಂಪನು ಅಂತರ್‌ದೃಷ್ಟಿ ಎಂಬರ್ಥದಲ್ಲಿ ಬಳಸಿದ್ದಾನೆ.

ಕಣ್ಮಲೆಯೆನ್ನುವ ಪ್ರಯೋಗ ವಿಶಿಷ್ಟವಾಗಿದೆ.

*ವಿವರಗಳಿಗೆ ನೋಡಿ: ಮಹದೇವ ಪ್ರಭಾಕರ ಪೂಜಾರ ೧೯೭೬ ಜೈನಧರ್ಮದ ಪರಿಭಾಷೆ ಪುಟ. ೪೧.*

**೨೦೯. ಕಥಾಗೋಷ್ಠಿ**

*ಕಥೆಗಳಂ ಪೇಟುತ್ತಿರಾ **ಕಥಾಗೋಷ್ಠಿ**ಯೊಳು.......... ಎಂದು ಪಂಚತಂತ್ರದಲ್ಲಿ ಬರುತ್ತದೆ.*

*(ಪಂಚತಂತ್ರ ೫೭ ವ)*

ಕಥಾಗೋಷ್ಠಿಯೆಂದರೆ ಒಬ್ಬನು ಕತೆಯನ್ನು ಹೇಳುವುದು. ಇನ್ನೊಬ್ಬರು ಕತೆಯನ್ನು ಕೇಳುವುದು, ಕಥಾಗೋಷ್ಠಿಯಲ್ಲಿ ಕತೆ ಹೇಳುವವರ ಮತ್ತು ಕತೆ ಕೇಳುವವರ ನಡುವೆ ಒಂದು ಸಂಬಂಧ ಇರುತ್ತದೆ. ಈ ಅರ್ಥದಲ್ಲಿ ಕತೆ ಹೇಳುವುದು ಮತ್ತು ಕತೆ ಕೇಳುವುದು ಪ್ರದರ್ಶನದ ಒಂದು ಭಾಗವಾಗಿರುತ್ತದೆ.

(ಸಂ) ಗೋಷ್ಠಿ>ಗೊಟ್ಟಿ=ಗುಂಪು, ಸಮೂಹ

ಇಲ್ಲಿ ಕಥಾಗೋಷ್ಠಿ ಎಂದರೆ ಒಡನಾಟ; ಕೂಡುವಿಕೆ.

ಕತೆಯನ್ನು ಕೇಳಲು ಸೇರಿದವರ ಸಮೂಹವೇ ಕಥಾಗೋಷ್ಠಿ.

**೨೧೦. ಕಥಾ ಶ್ರವಣ**

*ಅದೊರ್ಮೆ ನವಕಾವ್ಯಬಂಧರಚನಾ ವಿಶೇಷಂಗಳಿಂ*
*ದದೊರ್ಮೆ ವರವೀರ ವಿಶ್ರುತ ಕಥಾಪುರಾಣಂಗಳಿಂ*
*ದದೊರ್ಮೆ ಮುನಿಮಂಡಳೀಪದಪಯೋಜ ಶುಶ್ರೂಷೆಯಿಂ* ***ಕಥಾಶ್ರವಣ*.........**

*(ಕರ್ಣಾಟಕ ಕಾದಂಬರಿ ೧-೨೦)*

ಪುರಾಣ ಕಥಾಶ್ರವಣವೆಂದರೆ ಪುರಾಣ ಕತೆಗಳನ್ನು ಹೇಳುವುದು. ಇದನ್ನು ಪುರಾಣ ವಾಚನವೆಂದೂ ಕರೆಯುತ್ತಾರೆ. ಸಾಮಾನ್ಯವಾಗಿ ಶ್ರಾವಣಮಾಸದಲ್ಲಿ ಪುರಾಣ ವಾಚನ ಕಾರ್ಯಕ್ರಮಗಳು ಜರುಗುತ್ತವೆ. ಇದಕ್ಕೆ ಸಾಮಾನ್ಯವಾಗಿ ರಾಮಾಯಣ, ಮಹಾಭಾರತ, ಮತ್ತು ಪುರಾಣದ ಕತೆಗಳನ್ನು ಆಯ್ದುಕೊಳ್ಳುತ್ತಾರೆ. ಒಬ್ಬರು ಈ ರೀತಿಯ ಪಠ್ಯಗಳನ್ನು ಓದುತ್ತಾರೆ. ಮತ್ತೊಬ್ಬರು ಅದನ್ನು ವಿವರಿಸುತ್ತಾರೆ. ಪುರಾಣವಾಚನವು ಜನರಲ್ಲಿ ನೈತಿಕತೆ, ಆದರ್ಶಗಳನ್ನು ತುಂಬುತ್ತವೆ. ಪುರಾಣದ ಪ್ರಮುಖ ಆಶಯಗಳನ್ನು ಬಿತ್ತರಿಸುವುದೇ ಈ ರೀತಿಯ ಪುರಾಣ ವಾಚನದ ಪ್ರಮುಖ ಉದ್ದೇಶ. ಇದರಿಂದ ಮನಶ್ಶಾಂತಿ ದೊರೆಯುತ್ತದೆ ಎಂದು ಹೇಳುತ್ತಾರೆ. ಪುರಾಣ ಓದುವವರನ್ನು ಪುರಾಣಿಕರು ಎಂದು ಕರೆಯುತ್ತಾರೆ.

**೨೧೧. ಕದಂಬದಂಬುಲ**

*.................ನಲ್ಲಳ ಮುಖಾಂಬುಜ ಸೌರಭದೊಳ್ ಪೊದಳ್ದದೇಂ*
*ಮಗಮಗಿಸಿತ್ತೊ "ಕತ್ತುರಿಯ ಕಪ್ಪುರದೊಂದು* ***ಕದಂಬದಂಬುಲಂ****"*

*(ಪಂಪ ಭಾರತ ೪-೧೦೭)*

ಇಲ್ಲಿ ತಂಬುಲವೆಂದರೆ ತಾಂಬೂಲ(ವೀಳ್ಯ)ವೆಂದರ್ಥ. ತಾಂಬೂಲವೆಂದರೆ ಶಿಷ್ಟಚಾರದ ಪ್ರಶ್ನೆ. ವೀಳ್ಯೆದೆಲೆ, ಅಡಕೆ, ಬಾಳೆಹಣ್ಣು ಮತ್ತು ತೆಂಗಿನಕಾಯಿಯು ಎಲ್ಲಾ ಮಂಗಲಕಾರ್ಯಗಳಲ್ಲಿಯೂ ಬಳಕೆಯಾಗುತ್ತಿತ್ತು. ಪೂಜೆಯಲ್ಲಿ, ವಿವಾಹ ಸಂದರ್ಭಗಳಲ್ಲಿ ತಾಂಬೂಲವು ಪ್ರಧಾನ ಪಾತ್ರವಹಿಸುತ್ತದೆ. ವಧೂವರರ ತಂದೆ-ತಾಯಂದಿರು ತಾಂಬೂಲ ಹಂಚಿಕೊಂಡರೆ ನಿಶ್ಚಿತಾರ್ಥವಾಯಿತು ಎಂದರ್ಥ. ವೀಳ್ಯೆದೆಲೆ, ಅಡಕೆ; ಬಾಳೇಹಣ್ಣು; ತೆಂಗಿನಕಾಯಿ, ಹಣ ಇವುಗಳನ್ನು ಪೂರ್ಣವಾಗಿ ಪುರೋಹಿತರಿಗೆ ನೀಡಿದರೆ ಅವರು ಸಂತೃಪ್ತರಾದರೆಂದು ಸಕಲ ಪುಣ್ಯಪ್ರಾಪ್ತಿಯು ಗೃಹಸ್ಥನಿಗೆ ದೊರಕಿತೆಂದೂ ಅರ್ಥ.

ಆ ಮುದ್ದು ಮಾತಿಗೂ ನಾನು ಮೈಮರೆತವನಂತಿರಲು ಪ್ರೇಮದಿಂದ ಕೂಡಿ ನನ್ನ ಮುಖದೊಡನೆ ತನ್ನ ಮುಖವನ್ನು ಸೇರಿಸಿ ಬಿಸಿಯಾಗಿ ನಿಟ್ಟುಸಿರು ಬಿಟ್ಟ

ಪ್ರಿಯಳ ಮುಖ ಕಮಲದ ಸುಗಂಧದಲ್ಲಿ ಸೇರಿಕೊಂಡ ಪಚ್ಚಕರ್ಪೂರ ಮಿಶ್ರಿತವಾದ ತಾಂಬೂಲದ ಉಂಡೆಯೂ ಎಷ್ಟು ಗಮಗಮಿಸಿತ್ತೊ? ಎನ್ನುವುದು ಪಂಪಭಾರತದ ಭಾವಾರ್ಥ.

ಇಲ್ಲಿ ಕದಂಬದಂಬುಲವೆಂದರೆ ಮುದ್ದೆಯಾಗಿ ಅಗಿದ ತಾಂಬೂಲವೆಂದರ್ಥ.

ಒಪ್ಪಂದವನ್ನು ಮಾಡಿಕೊಳ್ಳಲು ವೀಳ್ಯದೆಲೆಯನ್ನು ಉಪಯೋಗಿಸುವ ಕ್ರಮ ಜನಪದರಲ್ಲಿಯೂ ಇದೆ. ಮದುವೆಯ ಸಂದರ್ಭದಲ್ಲಿಯೂ 'ವೀಳ್ಯ'ವನ್ನು ವಿನಿಮಯ ಮಾಡುವುದರ ಮೂಲಕ ಒಪ್ಪಿಗೆಯನ್ನು ಸೂಚಿಸುತ್ತಾರೆ.

*ವಿವರಗಳಿಗೆ ನೋಡಿ: ಚಲುವೇಗೌಡ. ತ.ಜಿ. ೧೯೪೬ ಕೆಲವು ಜನಪದ ಸಂಪ್ರದಾಯಗಳು ಪುಟ. ೩೬.*

**೨೧೨. ಕನ್ನಡಂಗಳೊಳ್**

ಹಲವು ಬಗೆಯ ಕನ್ನಡದ ಬಗ್ಗೆ ಕವಿರಾಜಮಾರ್ಗಕಾರನು ವಿವೇಚಿಸುತ್ತಾನೆ.

*"ದೋಸಮಿನಿತೆಂದು ಬಗೆದು*
*ದ್ಭಾವಿಸಿ ತಱಿಸಂದು **ಕನ್ನಡಂಗಳೊಳೆಂದುಂ***
*ವಾಸುಗಿಯುಮಱಿಯಲಾಱದೆ*
*ಬೇಸರುಗುಂ ದೇಶಿ ಬೇರೆವೇರಪ್ಪುದರಿಂ"* (ಕವಿರಾಜಮಾರ್ಗ ೧-೪೬)

ಉದ್ಭಾಸಿಸಿ=ಉತ್ +ಭಾಷಿಸಿ (ಸ್ಪಷ್ಟವಾಗಿ ಹೇಳಿ) ಅಥವಾ ಉತ್+ಭಾವಿಸಿ (ವಿಶೇಷವಾಗಿ ಬೆಳಗಿ, ಪ್ರಕಾಶಗೊಳಿಸಿ ಎಂದರೆ ಮೇಲೆ ಕಾಣುವಂತೆ ಹೊರಪಡಿಸಿ) (?); ತಱಿಸಂದು=(ಧಾ,.ತಱಿಸಲ್) ನಿಶ್ಚಯಿಸಿ, ಗೊತ್ತುಮಾಡಿ. 'ಕನ್ನಡಂಗಳೊಳ್', 'ದೇಶಿಬೇರೆವೇರಪ್ಪುದರಿಂ'; ಪ್ರಪಂಚದ ಎಲ್ಲ ಭಾಷೆಗಳಲ್ಲಿಯೂ ಪ್ರಾದೇಶಿಕ ವ್ಯತ್ಯಾಸಗಳು ಇದ್ದುವು, ಈಗಲೂ ಇವೆ. ಅಂತೆಯೆ ಕನ್ನಡದಲ್ಲಿ ಈಗ ಮೈಸೂರು ಕನ್ನಡ, ಮಂಗಳೂರು ಕನ್ನಡ, ಧಾರವಾಡ ಕನ್ನಡ ಎಂದು ಸ್ಥೂಲವಾಗಿ, (ವಿಶೇಷವಾಗಿ ಆಡುಮಾತಿನಲ್ಲಿ) ಮೂರು ಬಗೆಯ 'ಕನ್ನಡಂಗಳು' ಇರುವಂತೆ ಆಗಲೂ ಕೆಲಕೆಲವು ಪ್ರಾದೇಶಿಕ ಲಕ್ಷಣಗಳುಳ್ಳ 'ಕನ್ನಡಂಗಳು' ಇದ್ದಿರಬೇಕು; ಅವುಗಳ 'ದೇಶಿ' ಎಂದರೆ ಪ್ರಾದೇಶಿಕ ವೈಲಕ್ಷಣ್ಯ ಬೇರೆ ಬೇರೆಯಾಗಿದ್ದಿರಬೇಕು. ಒಂದು ಪ್ರಾಂತದಲ್ಲಿ ನಿರ್ದಿಷ್ಟವೆನಿಸಿದ ಭಾಷಾಪ್ರಯೋಗ ಇನ್ನೊಂದರಲ್ಲಿ ದೋಷವಾಗಿ ಕಾಣುತ್ತಿದ್ದಿರಬೇಕು. ಹೀಗೆ, ಸರ್ವಸಾಮಾನ್ಯವಾದ ದೋಷಗಳು ಹಾಗೂ ಪ್ರಾಂತ ಭೇದಗಳಿಂದ ಸಂಜನಿಸುತ್ತಿದ್ದ ದೋಷಗಳು – ಇವು ಕೂಡಿ, ದೋಷ ಪ್ರಮಾಣ ಅಪರಿಮಿತವಾಗಿದ್ದಿರಬೇಕು. ಸಾವಿರ ನಾಲಗೆಯುಳ್ಳ ಆದಿಶೇಷನೂ ಅವನ್ನು ತಿಳಿಯಹೇಳಲಾರದಷ್ಟು ಅಗಣಿತವಾಗಿದ್ದುವು ಎಂದು 'ಮಾರ್ಗಕಾರ' ಉತ್ಪ್ರೇಕ್ಷಿಸಿ ಹೇಳುವ ಮಟ್ಟಿಗೆ ಕನ್ನಡದ ಪರಿಸ್ಥಿತಿ ಶೋಚನೀಯವಾಗಿತ್ತು.

ಪೂರ್ವದ ಹಳೆಗನ್ನಡದ ಕುರಿತು ಮುಳಿಯ ತಿಮ್ಮಪ್ಪಯ್ಯನವರು ಹೀಗೆ ವಿವರಿಸಿದ್ದಾರೆ;

"ಆ ಪೂರ್ವದ ಹಳೆಗನ್ನಡವು ಕದಂಬರ ರಾಜಧಾನಿಯಾದ ಬನವಸೆಯಲ್ಲಿ

ಮಾತ್ರವೆ ವ್ಯವಹಾರದಲ್ಲಿದ್ದುದೆಂದೂ, ೮ನೆಯ ಶತಮಾನದವರೆಗೆ ಬಳಕೆಯಲ್ಲಿದ್ದುದೆಂದೂ ಆಚಾರ್ಯರಿಗೆ ಹೇಳಿದ ಆ ಕೆಲವರ ಅಭಿಪ್ರಾಯವು ತೀರ ಸರಿಯಲ್ಲ. ನಮ್ಮಲ್ಲಿ ಕೆಲವರಿಗೆ ತಮ್ಮೊಳಗಿನ ವ್ಯಾವಹಾರಿಕಭಾಷೆ ಈಗಲೂ ಅದೇ. ಆ ಪಂಗಡದವರೆಲ್ಲ ಕದಂಬರ ಆಳಿಕೆಯ ಸಮಯದಲ್ಲಿ, ಈ ಬನವಸೆಯ ಪ್ರಾಂತದಿಂದಲೆ ಆ ಕಡೆಗೆ ಹೋಗಿ ನೆಲೆಗೊಂಡವರೆಂಬುದರಲ್ಲಿ ಸಂದೇಹವಿಲ್ಲ. ಆ ಹಳೆಗನ್ನಡದ ಬಳಕೆ ಬನವಸೆಯ ಪ್ರಾಂತದಲ್ಲಿ ಈಗ ಹೇಗಿದೆಯೆಂಬುದರ ತಿಳಿವು ನನಗಿಲ್ಲ; ನಮ್ಮಲ್ಲಿ ಆ ಹಳೆಗನ್ನಡದ ವೈಶಿಷ್ಟ್ಯವೀಗಲೂ ಉಳಿದುಕೊಂಡಿದೆ.

**೨೧೩. ಕನ್ನಡ ಜೈನ ಸಾಹಿತ್ಯದ ಸ್ವರೂಪ**

ಬಹುತೇಕ ಜೈನಕಾವ್ಯದಲ್ಲಿ ಹಿಂಸೆ ಮತ್ತು ಶಾಂತಿಯ ನಡುವಣ ಸಂಘರ್ಷದಲ್ಲಿ ಸಾಮಾಜಿಕ ನೆಲೆಯನ್ನು ಹೇಳಲಾಗಿದೆ. ಸಾಮಾಜಿಕ ಗ್ರಹಿಕೆಯನ್ನು ಜೈನ ಕವಿಗಳು ಈ ರೀತಿ ಸೂಚಿಸುತ್ತಾರೆ. ಇದು ಮುಖ್ಯ ಪ್ರಸಕ್ತಿಯೂ ಹೌದು. ಒಂದು ರೀತಿಯಿಂದ ಜೈನಕವಿಗಳು ಸೂಚಿಸಿದ ಸರಳ ದ್ವಂದ್ವ ಕೂಡ ಹೌದು.

ಹಿಂಸೆ X ಶಾಂತಿ
ಕೇಡು X ಒಳ್ಳೆಯತನ
ಭೋಗ X ಯೋಗ
ಲೌಕಿಕ X ಆಗಮಿಕ ಇತ್ಯಾದಿ

ಜೈನ ಕವಿಗಳು ಸಮಾಜವನ್ನು ಈ ರೀತಿಯ ಪರಿಭಾಷೆಯ ಮೂಲಕ ಗುರುತಿಸುತ್ತಾರೆ. ಹಿಂಸೆಯ ಬದಲಿಗೆ ಬರುವ ಶಾಂತಿಯನ್ನು ಜೈನ ಕವಿಗಳು ಎತ್ತಿ ಹಿಡಿಯುತ್ತಾರೆ. ಯೋಗದ ಎದುರು ಹಾದು ಹೋಗುವ ಭೋಗದ ಬಗೆಗೆ ಜೈನ ಕವಿಗಳು ಹೇಳುವ ಅಭಿಪ್ರಾಯಗಳು ಸಮಚಿತ್ತದ ಬಲವನ್ನು ತೋರಿವೆ. ಬಹುತೇಕ ಜೈನ ಕಾವ್ಯಗಳು ಆ ರೀತಿಯಲ್ಲಿ ವ್ಯಕ್ತಪಡಿಸುವ ಅಭಿಪ್ರಾಯಗಳು ಜೈನ ಕವಿಗಳ ತಾತ್ವಿಕ ಒಲವನ್ನು ಎತ್ತಿಹಿಡಿದಿವೆ.

ಕನ್ನಡ ಸಾಹಿತ್ಯ ಚರಿತ್ರೆಗೆ ಒಂದು ಪುರಾಣ ರೂಢಿಯೆನ್ನಬಹುದಾದ ಕಲ್ಪಿತ ಕಟ್ಟಡವಿದೆ. ಆ ಕಟ್ಟಡದಲ್ಲಿ ಮೊದಲ ಅಡಿಗಲ್ಲು ಇರುವುದು ಜೈನ ಸಾಹಿತ್ಯದ್ದು. ಈ ಸಾಹಿತ್ಯದ ಯುಗವು ಪ್ರಾರಂಭವಾಗಿದ್ದು ಮಹಾಕಾವ್ಯಗಳ ಚೌಕಟ್ಟಿನಲ್ಲಿ. ಈ ಅರ್ಥದಲ್ಲಿ ಕನ್ನಡ ಸಾಹಿತ್ಯ ಸಂಸ್ಕೃತಿ ಎನ್ನುವುದನ್ನು ಪ್ರಾರಂಭಿಸಿರುವುದು ಜೈನ ಸಾಹಿತ್ಯ, ವಾಸ್ತವವಾಗಿ ಸಾಹಿತ್ಯ ಸಂಸ್ಕೃತಿಯು ಚರಿತ್ರೆ, ರಾಜಕಾರಣ ಇತ್ಯಾದಿ ಅಂಶಗಳಿಗಿಂತ 'ಮಹಾಕಾವ್ಯದಲ್ಲಿ' ಕಾವ್ಯವೊಂದನ್ನು ಹೆಣೆಯುವಾಗ ಕವಿಯ ಮನಸ್ಸು ಕೇವಲ ಲೌಕಿಕದಲ್ಲಿ ಮುಳುಗಿರುವುದಿಲ್ಲವೆಂಬುದಕ್ಕೆ ಪಂಪನ 'ವಿಕ್ರಮಾರ್ಜುನವಿಜಯ'ದಂಥ ಕೃತಿಯ ಉದ್ದಗಲಕ್ಕೂ ಹರಡಿಕೊಂಡಿರುವ ಈ ಎಲ್ಲಾ ಯುದ್ಧದ, ರಾಜ್ಯದ ಆಚೆಗೆ ಏನು? ಎಂಬ ಪ್ರಶ್ನೆ. ಎಲ್ಲಾ ತಲ್ಲಣಗಳನ್ನು ದಾಖಲಿಸಿಕೊಂಡು ಪಂಪ ಈ ಪ್ರಶ್ನೆಯನ್ನು

ಕೇಳುತ್ತಿದ್ದಾನೆ ಎಂದು ಮೊದಲ ಓದಿಗೆ ಭಾಸವಾಗುತ್ತದೆ.

ಜಮೀನುದಾರಿ ಪ್ರಭುತ್ವದ ಜೊತೆಗಿನ ಸಂಕಟಗಳನ್ನು ಬೇರೆ ರೀತಿಯಲ್ಲಿ ಪ್ರತಿಪಾದಿಸುವ ಜೈನ ಸಾಹಿತ್ಯವು ಸಮಾಜವನ್ನು ಹಾಜರುಪಡಿಸುವ ರೀತಿಗಳು ಈ ಕಾರಣದಿಂದ ಭಿನ್ನವಾಗಿವೆ.

ಆದರೆ ಪಂಪ ಮತ್ತು ನಯಸೇನ ಇಬ್ಬರನ್ನು ಒಂದೇ ರೀತಿಯಲ್ಲಿ ಹೇಳಲು ಸಾಧ್ಯವಾಗಬಹುದೆ? ಪಂಪನ ಜೊತೆಗಿನ ಸಾಮಾಜಿಕ ಸನ್ನಿವೇಶವು ಅವನನ್ನು ನಿಯಂತ್ರಿಸಿದ ಬಗೆ ಬೇರೆ – ಈ ಕಾರಣದಿಂದ ಪಂಪನ ಕಾವ್ಯದಲ್ಲಿ ಆದರ್ಶ – ವಾಸ್ತವ ಎರಡೂ ಪರಸ್ಪರ ಸಂಧಿಸುತ್ತಾ ಹೋಗುತ್ತವೆ. ಪ್ರಭುತ್ವದ ಒತ್ತಾಯದ ಹಿನ್ನೆಲೆಯಲ್ಲಿ ದೇಸೀ ಜನಗಳ ಸಂಕಟವನ್ನು (ಸೂಳೆಗೇರಿ ವರ್ಣನೆ) ಪಂಪನು ನಿರೂಪಿಸುವಾಗ, ಕುಲಾಚಾರದ ಬಗೆಗೆ ನಿರೂಪಿಸುವಾಗ (ಕರ್ಣನ ಮಾತು) ಪಂಪನ ಕಾವ್ಯದ ಗ್ರಹಿಕೆಯ ನೆಲೆಗಳು ಭಿನ್ನವಾಗಿದೆಯೆಂದು ಅನ್ನಿಸುತ್ತದೆ. ಸಾಹಿತ್ಯ ಕೃತಿಯನ್ನು ನಿರ್ಮಿಸುವ ಸಂದರ್ಭದಲ್ಲಿ ಪಂಪ ಅರಿಕೇಸರಿಯ ಅರಸೊತ್ತಿಗೆಯಲ್ಲಿ ಬೆಳೆದವನು. ನಯಸೇನನ ಎದುರು ವಚನ ಚಳುವಳಿಯ ಬೆಳವಣಿಗೆಯಿದೆ. ಈ ಕಾರಣದಿಂದ ನಯಸೇನ ಕತೆಗಳನ್ನು ಹೆಣೆಯುವ ಕ್ರಮ 'ಜಾನಪದ' ವಿಧಾನದಿಂದ ಕೂಡಿದೆ. ಇದನ್ನು ಚಿದಾನಂದಮೂರ್ತಿಯವರು ಗುರುತಿಸಿದ್ದಾರೆ.

ಜೈನ ಸಾಹಿತ್ಯದಲ್ಲಿ ಬಂದಿರುವ ಭಕ್ತಿ, ದಯೆ, ಹಿಂಸೆ ಮೊದಲಾದವು ಒಂದು ಸಾಮಾಜಿಕ ಪ್ರಾತಿನಿಧಿಕ ಪ್ರತಿಕ್ರಿಯೆಯೆಂದು ಮಾತ್ರ ಕರೆಯಬಹುದು. ಪ್ರಭುತ್ವವು ತನ್ನ ಆಳ್ವಿಕೆಯನ್ನು ಉಳಿಸಿಕೊಳ್ಳಲು ನಿರಂತರವಾದ ಹೋರಾಟವನ್ನು ನಡೆಸುವುದನ್ನು ಜೈನ ಕಾವ್ಯಗಳು ನಿರೂಪಿಸುತ್ತವೆ. ಅದರಲ್ಲಿಯೂ ಮೊದಲನೆಯ ಅಂಕದಲ್ಲಿ ಈ ವಿಷಯವು ಸ್ಪಷ್ಟವಾಗಿ ಗೋಚರವಾಗುತ್ತದೆ. ಜೈನ ಕಾವ್ಯಗಳೇ ತಿಳಿಸುವಂತೆ ಇದು ಭ್ರಮಾತ್ಮಕವಾದುದು. ವ್ಯಾಮೋಹ ಅನ್ನುವುದು ಒಂದು ರೀತಿಯ ಸ್ವಾರ್ಥಜನ್ಯವಾದ ಮಾನವೀಯ ಪ್ರಕ್ರಿಯೆ. ಈ ವ್ಯಾಮೋಹದ ವಿರುದ್ಧ ನಿಲ್ಲುವ ಜೈನ ಸಾಹಿತ್ಯವು ಇದರ ಬಗೆಗೆ ಕೆಲವು ರೀತಿಯ ಪ್ರಶ್ನೆಗಳನ್ನು ವಿಭಿನ್ನ ರೀತಿಯಲ್ಲಿ ಎತ್ತುತ್ತದೆ.

*ವಿವರಗಳಿಗೆ ನೋಡಿ: Michel foucault 1970 The order of things*
*Antonio gramshi? The prison note book*
*M. M. Bakthin? The dialogic lmagination*

**೨೧೪. ಕನ್ನೆಮಾಡ**

*ಒಂದು ದಿವಸಮಾ ಕನ್ನೆ ತನ್ನ ಚೆಂಬೊನ್ನ* **ಕನ್ನೆಮಾಡ***ದೋವರಿಯೊಳಗೆ ಗಂಗಾತರಙ್ಗ ಧವಳದುಕೂಲಪ್ರಪಚ್ಛದಾಚ್ಛಾದಿತಮೃದುತಳ್ಪತಳದೊಳ್ ಪವಡಿಸಿರೆ ನಿಶಾವಸಾನ ಸಮಯದೊಳ್ ತತ್ಪುರ*

*ಬಹಿರ್ಭಾಗಸ್ಥಿತ ಮನೋಹರೋದ್ಯಾನಾಸೀನ ಯಶೋಧರಗುರುಗಳ*

*ಕೇವಳಜ್ಞಾನೋತ್ಪತ್ತಿಯೊಸಗೆಗೆ.......................*

*(ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೩-೨೧ವ)*

ಕನ್ನೆಮಾಡವೆಂದರೆ ಕನ್ಯಾಂತಃಪುರವೆಂದರ್ಥ. ಒಂದು ದಿವಸ ಕನ್ನೆ (ಹುಡುಗಿ)ಯು ಅಂತಃಪುರದಲ್ಲಿ ಮಲಗಿರುವಾಗ ಹೊರಗಣ ತತ್ಪುರಬಹಿರ್ಭಾಗಸ್ಥಿತ ಮನೋಹರೋದ್ಯಾನಾಸೀನ ಯಶೋಧರ ಗುರುಗಳಿಗೆ ಕೇವಲಜ್ಞಾನ ಉತ್ಪತ್ತಿಯಾಯಿತು. ಕೇವಲ ಜ್ಞಾನವೆಂದರೆ - ಕೈವಲ್ಯಪದವಿಯ ಬಗೆಗಿನ ಜ್ಞಾನವೆಂದರ್ಥ. ಕೈವಲ್ಯ ಜ್ಞಾನವು ಮೋಕ್ಷಪದವಿಯ ಬಗೆಗಿನ ಜ್ಞಾನ.

ಓವರಿಯೆಂದರೆ ಕೋಣೆ; ಒಳಮನೆ. ಕನ್ನೆಮಾಡವೆಂಬ ಹೆಸರೂ ಇದೆ.

ಮಾಡ ಎಂದರೆ ಎತ್ತರ, ಉಪ್ಪರಿಗೆ; ಚಾರಮಾಡಿ ಎಂದು ಮುಂತಾದ ಎಡೆಗಳಲ್ಲಿ ಮಾಡವು ಕಾಣಿಸಿಕೊಳ್ಳುವುದು ಮಾಳಗುಡ್ಡ, ಮಾಳಮರಡಿ ಎಂಬ ದ್ವಿರುಕ್ತಿಗಳು ಬಳಕೆಯಲ್ಲಿ ಬಂದುದು, ಅಲ್ಲಿ 'ಮಾಳ' ಶಬ್ದದ ಮೂಲಾರ್ಥದ ಅರಿವು ಕಡಿಮೆಯಾದುದರ ಕುರುಹು. ಮಾಳದ ಮೂಲಾರ್ಥವು ತಿಳಿದಿದ್ದರೆ ಮತ್ತೆ ಅದರ ಮುಂದೆ ಅದೇ ಅರ್ಥದ ಗುಡ್ಡ ಅಥವಾ ಮರಡಿ ಎಂಬುದನ್ನಿಡುವ ಸಂಭವವಿಲ್ಲ ಎಂದು ಶಂಬಾ ಜೋಶಿ ಹೇಳುತ್ತಾರೆ.

*ವಿವರಗಳಿಗೆ ನೋಡಿ: ಕೈವಲ್ಯ; ಕೇವಲಿ ಶಂಬಾ ಜೋಶಿ ೧೯೯೯ ಸಂಪುಟ. ೨ ಪುಟ. ೧೮೯*

**೨೧೫. ಕನ್ಯಾ**

*..........ಕುಡುವುದೆ ಕೆನ್ನೆಯಂದ್ವಿಜ ಕುಲಂಗಿದು..........    (ಪಂಪಭಾರತ ೩-೬೬)*

ಮಹಾಭಾರತದಲ್ಲಿ ಎಲ್ಲರನ್ನೂ ಕಾಮಿಸುತ್ತಾಳೆಂಬುದಕ್ಕೆ ಹೆಣ್ಣಿಗೆ ಈ ಹೆಸರು ಬಂದಿದೆ. ಕನ್ಯಾ ಶಬ್ದವು ಇದು 'ಕವಲು' ಧಾತುವಿನಿಂದಲೇ ಹುಟ್ಟಿರುವುದು. ಈ ಕಾರಣದಿಂದಾಗಿ ಕನ್ಯೆಯು ಯಾವಾಗಲೂ ಸ್ವತಂತ್ರಳು. ಅವಳು ಪರತಂತ್ರಳಲ್ಲ. ಆತ್ಮ ಪ್ರಧಾನ ಮಾಡಲು ಅವಳಿಗೆ ಸ್ವಾತಂತ್ರ್ಯವಿದೆ ಎಂದು ಬರುತ್ತದೆ.

ಐದು ಜನ ಕನ್ಯೆಯರನ್ನು ದಿನನಿತ್ಯ ವಂದಿಸಬೇಕು ಎಂದು ಸಂಸ್ಕೃತದ ಶ್ಲೋಕದಲ್ಲಿ ಬರುತ್ತದೆ. ಅಹಲ್ಯೆ, ದ್ರೌಪದಿ, ಸೀತಾ, ತಾರಾ, ಮಂಡೋದರಿ ಈ ಐವರನ್ನು ಪ್ರಾತಃ ಸ್ಮರಣೀಯ ಕನ್ಯೆಯರೆಂದು ಹೇಳಲಾಗಿದೆ. ಇವರನ್ನು ಮಹಾಪತಿವ್ರತೆಯರೆಂದೂ ಕರೆಯುತ್ತಾರೆ. ಸಂಸ್ಕೃತದಲ್ಲಿ ಇವರನ್ನು ಪಂಚಕನ್ಯೆಯರು ಎಂದು ಹೇಳುತ್ತಾರೆ. ಇವರನ್ನು ಸ್ಮರಿಸಿದ ಗೃಹಿಣಿಯರು ತಮ್ಮ ಪಾತಿವ್ರತ್ಯ ಉಳಿಸಿಕೊಳ್ಳುತ್ತಾರೆ. ಮತ್ತು ಓಲೆಭಾಗ್ಯ ಉಳಿಸಿಕೊಳ್ಳುತ್ತಾರೆಂದು ನಂಬಿಕೆಯಿದೆ. ಇಲ್ಲಿ ಕನ್ಯಾಶುಲ್ಕದ ಕುರಿತು ವಿವೇಚಿಸಬಹುದು.

ಸರಿಸುಮಾರು ಹದಿನಾಲ್ಕನೆಯ ಶತಮಾನದ ಅನಂತರ ಕನ್ಯಾಶುಲ್ಕ ಬಂದು ಅದೊಂದು ವ್ಯಾಪಾರದ ಮಾದರಿಯಾಯಿತು ಎಂದು ಇತಿಹಾಸಕಾರರು ಹೇಳುತ್ತಾರೆ.

ಕನ್ಯತ್ವದ ಶಂಕೆಯ ಬಗ್ಗೆ ಮನು ಈ ರೀತಿಯಾಗಿ ಹೇಳಿದ್ದಾನೆ.

ಒಬ್ಬ ಗಂಡಸು ಒಬ್ಬಳ ಕನ್ಯತ್ವವನ್ನು ಶಂಕಿಸಿ ಆರೋಪಿಸಿದರೆ ಅವನು ಅದನ್ನು ಪುರಾವೆ ಸಹಿತ ಸಾಬೀತು ಮಾಡಬೇಕು. ಇಲ್ಲದಿದ್ದರೆ ಸುಳ್ಳು ಆರೋಪ ಮಾಡಿದವನಿಗೆ

ದಂಡ ವಿಧಿಸಬೇಕು.

ಕನ್ಯಾದಾನವೂ ಭಾರತೀಯ ಪರಂಪರೆಯಲ್ಲಿ ವಿಶಿಷ್ಟವಾಗಿದೆ.

ಕನ್ಯಾದಾನವನ್ನು ಲಜ್ಜೆಯಾಗದ ರೀತಿಯಲ್ಲಿ ಮಾಡಬೇಕು ಎಂದು ಪಂಪ ಭಾರತದಲ್ಲಿ ಬರುತ್ತದೆ.

(ಪಂಪ ಭಾರತ ೩-೬೬) ಕನ್ಯೆಯನ್ನು ದಾನ ಮಾಡುತ್ತಾರೆ. ಗಂಡು ಮಗುವನ್ನು ದಾನ ಮಾಡುವ ಕ್ರಮವಿಲ್ಲ. ಸಗೋತ್ರ ಮತ್ತು ಕನ್ಯಾದಾನಕ್ಕೆ ಸಂಬಂಧವಿದೆ.

ಬ್ರಾಹ್ಮಣರಲ್ಲಿ 'ಸಗೋತ್ರ' ವಿವಾಹಪದ್ಧತಿಯಿಲ್ಲ. ಗೋತ್ರಗಳನ್ನು 'ಋಷಿ ಪರಂಪರೆಗೆ' ಅನುಸಾರವಾಗಿ ಗುರುತಿಸಲಾಗುತ್ತದೆ. ಉದಾ : ವಸಿಷ್ಠಗೋತ್ರ; ವಿಶ್ವಾಮಿತ್ರ; ಗೌತಮ; ಇತ್ಯಾದಿ. ಮದುವೆಯ ಸಂದರ್ಭದಲ್ಲಿ ಅಳಿಯನ ಪಾದಪೂಜೆಯನ್ನು ಮಾವ (ಹೆಣ್ಣಿನ ತಂದೆ) ಮಾಡುತ್ತಾನೆ. ಮದುವೆಯನ್ನು 'ಕನ್ಯಾದಾನ' ವೆಂದು ಕರೆಯಲಾಗುತ್ತದೆ. ಆದರೆ ಈ 'ಕನ್ಯಾದಾನ' ಎಂಬುದು ಶಾಸ್ತ್ರಕ್ಕೆ ಸಂಬಂಧಿಸಿದ ಹಾಗೆಯೇ (Hypergamy) ಸಂಬಂಧಿಸಿದ್ದು ಎಂದು ಟ್ರಾಟ್‌ಮನ್ ಹೇಳುತ್ತಾರೆ. ಪ್ರಾಚೀನ ಕನ್ನಡ ಕಾವ್ಯಗಳಲ್ಲಿಯೂ ಈ ರೀತಿಯ ಚಿತ್ರಣಗಳಿವೆ.

*ವಿವರಗಳಿಗೆ : Patricia ubroi (ED) 1993 Family, kinship and marriage in india P. 888*

*ರಾಮೇಶ್ವರಾವಧಾನಿ (ಸಂ) ೧೯೭೨-೭೬ ಮಹಾಭಾರತ (ಸಂಪುಟ-೧-೧೧) ಪುಟ. ೩೯೫.*

*ಡಾ. ಶ್ರೀಕಂಠಯ್ಯ.ಕೆ. ೧೯೮೩ ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರಣ ಪು. ೨೯೦.*

*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೮ - ೨೨೫.*

*Mahalingam .T.V. 1967 South Indian Polity P. 32.*

**೨೧೬. ಕನ್ಯಾಪಹರಣ**

*ಅಯೋಧ್ಯಾಪುರಮನಾಳ್ವೊಂ ಸುರಥನೆಂಬೊನರಸನಾತನ ಮಹಾದೇವಿ ಚಂದ್ರಯಶಿಯೆಂಬೊಳಾಯಿರ್ವರ್ಗ್ಗಂ ಪುಟ್ಟಿದೆಂ ಸುನಂದಯೆಂಬೆಂ ಸನತ್ಕುಮಾರಂಗೆ ಗರ್ಭದೊಳಿರ್ದ್ದಂತೆ ನಿವೇದಿಸೆಪಟ್ಟೆನನ್ನಂ ಮದನೋದ್ಯಾನದೊಳುಯ್ಯಲಾಡುತ್ತಿರ್ದೊಳಂ ಭೌಮವಿಹಾರಾರ್ಥಂ ಬಂದು ವಜ್ರವೇಗನೆಂಬವಿಧ್ಯಾಧರಂ ಕಂಡೆನ್ನನೈತ್ತಿ***ಕೊಂಡು ಪುಯ್ಯಲಿಡೆಯಿಡೆ*** *ಬಂದನಿಂದಿಂಗೇೞು ದಿವಸಮುಂಟು ಮತ್ತಾ ಸನತ್ಕುಮಾರನೆಂಬೊಂ ಹಸ್ತಿನಾಪುರಮನಾಳ್ವೊಂ ವಿಶ್ವಸೇನನ ಮಹಾರಾಜನೆಂಬೊನರಸನಾತನ ಮಹಾದೇವಿ ಸಹದೇವಿಯೆಂಬೊಳಾಯಿರ್ವ್ವರ್ಗ್ಗಂ ಪುಟ್ಟಿದಂ ಸನತ್ಕುಮಾರನೆಂಬೊನೆಂದು ಪೇೞ್ದೊಡೆ ಕುಮಾರನೆಂದಾತನಂ ಕಂಡೊಡೇನಜೀವೋ ಎಂದು ಬೆಸಗೊಂಡೊಡೆ ಸುನಂದೆಯಿಂತೆದಳ್ ಎನ್ನ ತಂದೆ ವಿಶ್ವಸೇನ ಮಹಾರಾಜನೊಳಪ್ಪ ಮಿತ್ರಸಂಬಂಧದಿನೊಂದು ದಿವಸಂ ಹಸ್ತಿನಾಪುರಕ್ಕೆ ವೋಗಿ ಕುಮಾರನಂ ಕಂಡಾತನ ರೂಪಂ ಪಟದೊಳ್ ಬರೆದು ತಂದಾ ರೂಪನೆಲ್ಲಾ ಪೊೞ್ತುಂ ನೋೞ್ಪೆನುಂ (ಡಿ.ಎಲ್.ಎನ್.೨೦೦೯ ಪುಟ. ೧೦೩)*

ಕನ್ಯಾಪಹರಣವನ್ನು ಮೇಲಿನ ಗದ್ಯ ಭಾಗವು ತಿಳಿಸುತ್ತದೆ. ಇದು ಪೆಣ್ಬುಯ್ಯಲ್

ಕೂಡಾ ಹೌದು.

ಸ್ವಯಂವರ ಮಂಟಪದಲ್ಲಿ ಉಳಿದ ರಾಜರನ್ನು ಪರಾಜಿತಗೊಳಿಸಿ ಪಡೆಯುವ ಭಾರ್ಯೆಯು ಅತಿಪ್ರಿಯಳಾಗುತ್ತಾಳೆಂದು ವ್ಯಾಸಭಾರತದಲ್ಲಿ ಬರುತ್ತದೆ.

ಸ್ತ್ರೀ ಅಪಹರಣ ವೀರ ಹೋರಾಟದ ಮೂಲಕವೂ ನಡೆಯುತ್ತಿತ್ತು ಎನ್ನುವುದಕ್ಕೆ ಅಂಬೆ, ಅಂಬಿಕೆ, ಅಂಬಾಲಿಕೆಯರನ್ನು ಭೀಷ್ಮ ಕರೆದೊಯ್ಯುವುದು ಉದಾಹರಣೆಯಾಗಿದೆ. ವ್ಯಾಸ ಭಾರತದಲ್ಲಿಯೂ ಈ ರೀತಿಯದೇ ಉಲ್ಲೇಖವಿದೆ. (ಪಂಪ ಭಾರತ ಅನಂತರಂಗಾಚಾರ್ (ಅನು) ೧೯೭೭ ಪುಟ. ೯೪)

ಹೆಣ್ಣನ್ನು ಒಲಿಸಿ ಅಪಹರಿಸುವುದು ಒಂದು ವಿಧ. (ಶಾಂತಿಪುರಾಣ ೩–೭೬ವ)

ಹೆಣ್ಣನ್ನು ಬಲಾತ್ಕರಿಸಿ ಅಪಹರಿಸುವುದು ಮತ್ತೊಂದು ವಿಧ. (ಚಾವುಂಡರಾಯ ಪುರಾಣ ೧೯೮೩ ಪುಟ. ೮೫)

'ಸ್ತ್ರೀಯರನ್ನು ಅಪಹರಿಸಿಕೊಂಡು ಹೋಗಿ ವಿವಾಹವಾಗುವ ಪದ್ಧತಿ'ಯು ಇಲ್ಲಾಗಲೇ 'ವೈಯಕ್ತಿಕ ವಿವಾಹ ಪದ್ಧತಿ'ಗೆ ಪರಿವರ್ತನೆಯಾದ ಲಕ್ಷಣವನ್ನು ಹೊರಗೆಡಹುತ್ತದೆ. ಈ ವೈಯಕ್ತಿಕ ವಿವಾಹ ಪದ್ಧತಿಯು ಕೊನೆಯ ಪಕ್ಷ ಯುಗ್ಮ ವಿವಾಹ ರೂಪದಲ್ಲಿ ಅಸ್ತಿತ್ವಕ್ಕೆ ಬಂದಿತೆನ್ನಬಹುದು. ಯುವಕನೊಬ್ಬ ತನ್ನ ಮಿತ್ರರ ಸಹಾಯದಿಂದ ಯುವತಿಯನ್ನು ಅಪಹರಿಸಿಕೊಂಡು ಹೋಗುತ್ತಾನೆ. ಅಥವಾ ಆಕೆಯೊಂದಿಗೆ ಪಲಾಯನ ಮಾಡುತ್ತಾನೆ. ಅನಂತರ ಅವರೆಲ್ಲರೂ ಆಕೆಯೊಂದಿಗೆ ಒಬ್ಬರ ನಂತರ ಒಬ್ಬರು ಸಂಭೋಗಿಸುತ್ತಾರೆ. ಆದರೆ ಆಕೆಯು ಈ ಅಪಹರಣಕ್ಕೆ ಕಾರಣವಾದ ಯುವಕನ ಪತ್ನಿಯೆಂದು ಭಾವಿಸಲ್ಪಡುತ್ತಾಳೆ.

*ವಿವರಗಳಿಗೆ ನೋಡಿ: ಪೆಣ್ಬುಯ್ಯಲ್ ಏಂಗೆಲ್ಸ್ ಮೂಲ: ೧೯೮೦ ಪುಟ. ೬೬*

*ರಾಮೇಶ್ವರಾವಧಾನಿ (ಸಂ) ೧೯೭೨–೭೬ ಮಹಾಭಾರತ (ಸಂಪುಟ–೧–೧೧) ಪುಟ. ೬೯೮*

**೨೧೭. ಕಪ್ಪಡ**

***ಕಪ್ಪಡಮುಟ್ಟು*** *ಬೈಕಂದಿರಿದಿನ್ನಪ್ಪೊಡಮೋದುವಮೆಂದು ತಾಯ್ಗೆ ನುಡಿದೊಡಂ...........*

*(ಡಿ.ಎಲ್.ಎನ್. ೨೦೦೯ ವಡ್ಡಾರಾಧನೆ ಪುಟ. ೪೭)*

ಕಪ್ಪಡವೆಂದರೆ ಹರಿದ ಬಟ್ಟೆ. ಇದು ಬಟ್ಟೆಯ ಮೇಲಿನ ವ್ಯಾಮೋಹವನ್ನು ಕಳಚುವ ದಾರಿಯೂ ಹೌದು. ಕಪ್ಪಡ ಧರಿಸುವುದೆಂದರೆ ಬಟ್ಟೆಯ ಬಗೆಗಿನ ಹಂಗು ತೊರೆಯುವುದು. ಕಪ್ಪಡ ಮತ್ತು ಅರ್ಧ ಕಪ್ಪಡವೆಂದು ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಉಕ್ತವಾಗಿದೆ. ಕರ್ಪಟವೆನ್ನುವುದು ಕನ್ನಡದಲ್ಲಿ ಕಪ್ಪಡವೆಂದಾಗಿದೆ. "ನೀಮುಮೆಡದ ಕೈಯನೆಟಲಿಕ್ಕಿಯೆರ್ದ **ಗಪ್ಪಡ**ಮನೆಡದ ಮುಯ್ವಿನಮೇಗಿಕ್ಕಿ" ಎಂದು ಕಿಟ್ಟಲ್ ಇದಕ್ಕೆ ಉದಾಹರಣೆ ನೀಡಿದ್ದಾರೆ. 'ಕುಂಡೆ ಸುಟ್ಟರೂ ಕಪ್ಪಡ ಸುಡಬಾರದು' – ಗಾದೆ.

*ವಿವರಗಳಿಗೆ ನೋಡಿ: ಅರ್ಧಗಪ್ಪಡ ಸಂಘ*

*ಮರಿಯಪ್ಪ ಭಟ್ಟ ಎಂ. ರೆಟ್ಟೆಲರ ಕನ್ನಡ – ಇಂಗ್ಲೀಷ್ ನಿಘಂಟು (೪ ಸಂಪುಟಗಳು) (ಕಿಟ್ಟಲ್ ಕೋಶ)*

೨೧೮. ಕಬರಿಭರಂ

*ಗಳಿಯಿಸುತಿರೆ* **ಕಬರಿಭರಂ**
*ಗಳಿಯಿಸುತಿರೆ ನಯನವಾರಿ ನಿನ್ನಾನನದಿಂ ॥*
*ನಳಿನಾನನೆ ನೀನಿರೆ ಕುರು*
*ಕುಳಾಂತಕಂ ಗಳಿಕೋಪನೇ (ಕಲಿ) ಭೀಮಂ ॥*

(ಸಾಹಸಭೀಮ ವಿಜಯಂ ೧–೬೩)

ದ್ರೌಪದಿಯ ಕುರಿತು ಭೀಮನು ಹೇಳುವಾಗ ಈ ಕೆಳಗಿನಂತೆ ಹೇಳಿಕೊಂಡಿದ್ದಾನೆ. ಗಳಿಯಿಸುತಿರೆ ಕಬರಿಭರಂ ಎಂದರೆ ಬಿಚ್ಚಿದ ಮುಡಿ ಜಾರುತ್ತಿರಲು.... ತಲೆಗೂದಲನ್ನು ಬಿಚ್ಚಿರುವುದು ಸ್ತ್ರೀಯರ ದೃಷ್ಟಿಯಲ್ಲಿ ಅವಲಕ್ಷಣ. ಸ್ತ್ರೀಯರು ಅಂದರೆ ಗರತಿಯರು ಮುಡಿಯನ್ನು ಕಟ್ಟಿ ಕೊಳ್ಳಬೇಕೆಂಬುದು ಆ ಕಾಲದ ನಂಬಿಕೆಯಾಗಿತ್ತು ಎಂಬುದನ್ನು ಮೇಲಿನ "ಗಳಿಯಿಸುತಿರೆ ಕಬರಿ ಭರಂ" ಎನ್ನುವ ಮಾತು ಸೂಚಿಸುತ್ತದೆ.

ಬಿಚ್ಚಿದ ನಿನ್ನ ಮುಡಿ ಹೀಗೆ ಇಳಿಬಿದ್ದೇ ಇರಲಾಗಿ, ನಿನ್ನ ಕಣ್ಣಿಂದ ನೀರು ಸುರಿಯುತ್ತಲೇ ಇರಲಾಗಿ, ಕಮಲಮುಖಿಯೆ, ವೀರಭೀಮನು ಕೋಪಹೀನನೆ ? ಕೋಪಜಾರಿದವನೇ ? ಎನ್ನುತ್ತಾನೆ ಗದಾಯುದ್ಧದ ಭೀಮ.

*ವಿವರಗಳಿಗೆ ನೋಡಿ: ಕುವೆಂಪುರವರ ದ್ರೌಪದಿಯ ಶ್ರೀಮುಡಿ.*

೨೧೯. ಕರಂಕವಾಹಿನಿ

*'**ಕರಂಕ ವಾಹಿನಿಯ** ಮೇಲೆ ನೆಜಿಲ್ದಿರೆ ಬಾಲೆ ಲೀಲೆಯಿಂ'*

(ಪಂಪ ಭಾರತ ೪–೪೩)

ಪ್ರೇಮದಿಂದ ಚೆನ್ನಾಗಿ ಹೀರುವ ರೀತಿಯಲ್ಲಿ ರೆಪ್ಪೆ ಹೊಡೆಯದೆ ನೋಡುವ ಕಣ್ಣಿಗೆ ಬೇರೊಂದು ಕಣ್ಣು (ಅಂದರೆ ಅವನ ಕಣ್ಣು) ನವಿಲುಗರಿಯ ಕಣ್ಣಿನ ಹಾಗಾಗಿ ಮನಸ್ಸನ್ನು ಪ್ರವೇಶಿಸಲು, ಕಾಮಬಾಣವು ಮನಸ್ಸಿನಲ್ಲಿ ನಾಟಿರಲು, ಆ ಬಾಣಗಳ ಭಾರದಿಂದ ಮೆಲ್ಲಗೆ ಜೋತು ಬಿದ್ದ ಹಾಗೆ ಸುಭದ್ರೆಯು ವಿಲಾಸದಿಂದ ತನ್ನ ತಾಂಬೂಲ ಕರಂಕವಾಹಿನಿಯು ಮೇಲೆ ಒರಗಿಕೊಂಡು ನಿಂತಳು.

ಕರಂಕವೆಂದರೆ ಭರಣಿ, ಪೆಟ್ಟಿಗೆಯೆಂದು ಅರ್ಥ ಹಿಡಿಯುವವಳು.

ಕರಂಕವಾಹಿನಿ–ಭರಣಿ (ಪೀಕದಾನಿ)

ಕರಂಕವಾಹಿನಿಯರ ಚಿತ್ರಣ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಬಹಳ ಸಲ ಬರುತ್ತದೆ. ಕರಂಕವಾಹಿನಿಯರು ಎಂಬುದು ಉದ್ಯೋಗ ಸೂಚಕ ಪದ. ಅರಸೊತ್ತಿಗೆಯಲ್ಲಿ ಕರಂಕವಾಹಿನಿಯರು ಪೀಕದಾನಿಯನ್ನು ಹಿಡಿದುಕೊಂಡು ಸೇವೆಯಲ್ಲಿ ಇರುತ್ತಿದ್ದರು.

೨೨೦. ಕರಗ

*ಶ್ವೇತವಸ್ತ್ರಮನುಟ್ಟು ಸುವರ್ಣಮಯಮಪ್ಪ ಪಿರಿದು* **ಕರಗಮಂ** *ತೆಕ್ಕನೆ ತೀವಿ*

ತಣ್ಣಿದವುಂ

ಸುಗಂಧಮಪ್ಪ ನೀರ್ಗಳಂ ತಂದು...........

(ಡಿ.ಎಲ್.ಎನ್. ೨೦೦೯ ಪುಟ. ೧೪೭)

"ದೇವಾಸುರ ಯುದ್ಧಕ್ಕೆ ಕರಗಂಬೊತ್ತಳೆಂಬಂತೆ" ಬಂದ ಅವಳನ್ನು ಬಾಷ್ಪವಾರಿ ಧಾರಾಪೂರ ಪರಿವಾರಿತ ಪಲ್ಲವನೇತ್ರೆ ಎಂದೂ, ಅಸಹ್ಯ ಪರಿಭಾನಲ ದಹ್ಯಮಾನಗಾತ್ರೆ ಎಂದೂ ಗದಾಯುದ್ಧದಲ್ಲಿ ರನ್ನ ದ್ರೌಪದಿಯನ್ನು ಪರಿಚಯಿಸುತ್ತಾನೆ. ಕರಗವೆಂದರೆ ಗಡಿಗೆಯೆಂದರ್ಥ.

ಕರಗವೆಂದರೆ ನೀರು ತುಂಬುವ ಕಲಶ ಕರಗವನ್ನು ತಲೆಯ ಮೇಲಿಟ್ಟುಕೊಂಡು ಉತ್ಸವ ಮಾಡುವ ಆಚರಣೆಯು ಈಗಲೂ ಚಾಲ್ತಿಯಲ್ಲಿದೆ. ಕರಗಕ್ಕೆ ದೀಕ್ಷೆಯೆಂಬ ಅರ್ಥವೂ ಇದೆಯೆಂದು ಗಮನಾರ್ಹ. ಹಸಿಮಣ್ಣಿನ ಕಳಸಕ್ಕೆ ಶಕ್ತಿಯನ್ನು ಆವಾಹಿಸಿ ಅಲಂಕರಿಸಿ ತಲೆ ಮೇಲೆ ಹೊತ್ತು ಮೆರೆಸುವ ಉತ್ಸವ. ಇದು ದ್ರೌಪದಿಯ ಆರಾಧನೆಯ ಸಂಕೇತವಾಗಿದೆ.

ವಿವರಗಳಿಗೆ ನೋಡಿ: ಎಚ್. ಎಲ್. ನಾಗೇಗೌಡ ೧೯೯೮ ಕನ್ನಡ ಜಾನಪದ ಕೋಶ.

೨೨೧. ಕರಣ

ರಸಭಾವಾಭಿನಯಂಗಳ್
ಪೊಸವೆ ಪುಗಿಲ್ ಪೊಸವೆ ಚಲ್ಲಿಗಳ್ ಪೊಸವೆ ನಯಂ ।
ಪೊಸವೆ ಕರಣಂಗಳುಂ ನಿ
ಪ್ಪೊಸವೆನೆ ಪೊಸಯಿಸಿದಳಾಕೆ ನಾಟ್ಯಾಗಮಮಂ ॥

(ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೯-೨೫)

ನೂರೆಂಟು ರೀತಿಯ ಕರಣಗಳಿವೆ. ಕರಣವೆನ್ನುವುದಕ್ಕೆ ಬೇರೆ ಬೇರೆ ಅರ್ಥಗಳಿವೆ. ಚರ/ಸ್ಥಿರ (ಅಂತಃಕರಣ, ಬಹಿಃಕರಣ): ಕರಣವೆಂದರೆ ವಾಕ್ಕು, ಮನಸ್ಸು, ಕಾಯ, ಕರ್ಮೇಂದ್ರಿಯ, ಜ್ಞಾನೇಂದ್ರಿಯ: ದಶೇಂದ್ರಿಯಗಳು.

ರಸಭಾವಾಭಿನಯಗಳಿಂದ ಹೊಸ ರೀತಿಯ ನಾಟ್ಯವನ್ನು ಆಡಿದಳು ಎಂದು ಆದಿಪುರಾಣದಲ್ಲಿ ಬರುತ್ತದೆ. ಇಲ್ಲಿ ನಾಟ್ಯವನ್ನು ಆಗಮವೆಂದು ಕರೆದಿರುವುದು ಗಮನಾರ್ಹ. ರಸ ಪ್ರಸ್ಥಾನದಲ್ಲಿಯೂ ರಸಾನುಭವವು ತಲ್ಲೀನ ಸ್ಥಿತಿಗೇರಿದ ಮೇಲೆ – ಅದು ಅದ್ವೈತದ ಅನುಭವ ಕೊಡುತ್ತದೆ. ಹಾಗೂ ಅದು ಬ್ರಹ್ಮಾನಂದವಾಗಿರುವುದರಿಂದ ಲೌಕಿಕವನ್ನು ಬಿಡುತ್ತದೆ. ವಾಸ್ತವವಾಗಿ ಹೀಗಿರುವುದರಿಂದಲೆ 'ನಾಟ್ಯ' ಆಗಮ(ಪಾರಲೌಕಿಕ ಅನುಭವ)ವಾಗಿದೆ.

"ಮೇಲೆ ಭಾವಗಳ ಸಂದರ್ಭದಲ್ಲಿ ಅಭಿನಯದ ಉಲ್ಲೇಖ ಬಂದುದರಿಂದ ಋಷಿಗಳು ಅಭಿನಯದ ಬಗ್ಗೆ ಕೇಳುವರು. ಭರತನು ಮುಂಚೆ 'ಅಭಿನಯ' ಎಂಬ ಶಬ್ದದ ನಿರುಕ್ತಿಯನ್ನು ಕೊಡುವನು. 'ನೀ' (ಒಯ್ಯು) ಎಂಬ ಧಾತುವಿಗೆ 'ಅಭಿ' ಎಂಬ

ಉಪಸರ್ಗವಿದ್ದು 'ಪ್ರಯೋಗಂ ಪ್ರೇಕ್ಷಕಾನ್ ಅಭಿ ನಯತಿ ಇತಿ ಅಭಿನಯಃ, ಪ್ರಯೋಗವನ್ನು ಪ್ರೇಕ್ಷಕರಿಗೆ ಒಯ್ಯು(ಮುಟ್ಟಿಸುವುದು) ಎಂಬುದರಿಂದ 'ಅಭಿನಯ' ಎನ್ನಲಾಗಿದೆ ಎಂದು ಹೇಳುತ್ತಾನೆ. ಈ ಅಭಿನಯ ನಾಲ್ಕು ವಿಧದ್ದಾಗಿದೆ:-ಆಂಗಿಕ(ಶರೀರದ್ದು). ವಾಚಿಕ (ಶಬ್ದಗಳದ್ದು). ಆಹಾರ್ಯ (ವೇಷಭೂಷಣಗಳದ್ದು) ಮತ್ತು ಸಾತ್ವಿಕ (ಭಾವನಾತಿರೇಕದ್ದು), ಮೊದಲು ಆಂಗಿಕ ಅಭಿನಯವನ್ನು ವರ್ಣಿಸುತ್ತಾನೆ.

ಆಂಗಿಕ ಅಭಿನಯ ಮೂರು ವಿಧದ್ದಾಗಿದೆ, ಒಂದು ಶರೀರ(ಅವಯವಗಳ)ದ್ದು, ಇನ್ನೊಂದು ಮುಖದ್ದು, ಮೂರನೆಯದು 'ಚೇಷ್ಟಾಕೃತ'-ಎಂದರೆ ಚಲನ-ವಲನಗಳದು.

*ವಿವರಗಳಿಗೆ ನೋಡಿ: ಅಮೂರ ಜಿ.ಎಸ್. ೨೦೦೬ ಶ್ರೀರಂಗ ಸಾರಸ್ವತ (ಸಂಪುಟ. ೮)*

## ೨೨೨. ಕರಣ ಲಬ್ಧಿ

ಈ **ಕರಣಲಬ್ಧಿ**ಯು ಭವ್ಯರಿಗೆ ಮಾತ್ರ ಆಗುತ್ತದೆ ಅಭವ್ಯರಿಗೆ ಆಗುವುದಿಲ್ಲ. ಅಧಃಕರಣ, ಅಪೂರ್ವಕರಣ, ಅನಿವೃತ್ತಿಕರಣವೆಂದು ಮೂರು ಕರಣಗಳಿವೆ. ಕಷಾಯಗಳ ಮಂದತೆಯಿಂದ ಆಗುವಂಥ ಆತ್ಮನ ವಿಶುದ್ಧಿರೂಪದ ಪರಿಣಾಮಗಳಿಗೆ ಕರಣವೆಂದು ಹೇಳುತ್ತಾರೆ. ಅವುಗಳಲ್ಲಿ ಲಘು ಅಂತರ್ಮುಹೂರ್ತ ಪ್ರಮಾಣಕಾಲವಂತೂ ಅನಿವೃತ್ತಿಕರಣದ್ದಿದೆ. ಅದರಿಂದ ಸಂಖ್ಯಾಗುಣಿತ ಕಾಲವು ಅಪೂರ್ವಕರಣದ್ದಿದೆ, ಮತ್ತು ಅದರಿಂದ ಸಂಖ್ಯಾಗುಣಿತ ಕಾಲವು ಅಧಃಕರಣದ್ದಿದೆ. ಈ ಎಲ್ಲ ಕಾಲವು ಅಂತರ್ಮುಹೂರ್ತ ಪ್ರಮಾಣವೇ ಇದೆ, ಏಕೆಂದರೆ ಅಂತರ್ಮುಹೂರ್ತದಲ್ಲೂ ಅಸಂಖ್ಯಾತ ಭೇದಗಳಿವೆ.

*ವಿವರಗಳಿಗೆ ನೋಡಿ: ಅಂತರ್ಮುಹೂರ್ತ.*

## ೨೨೩. ಕರಣಾಂಗ ಹಾರ

*ಕರಣಾಂಗಹಾರಮೃದುಪದ*
*ಪರಿಕ್ರಮಂಗಳ ಬೆಡಂಗುಗಳ ಜತಿಯೊಳಂ*

*(ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೭-೧೮)*

ಕರಣಾಂಗಹಾರವೆಂದರೆ ಅಭಿನಯ ಮುದ್ರೆಯೆಂದರ್ಥ. ಭರತನಾಟ್ಯಶಾಸ್ತ್ರದಲ್ಲಿ ಅಭಿನಯ ಎನ್ನುವುದನ್ನು 'ಆಂಗಿಕ'ವೆಂದು ಕರೆಯಲಾಗಿದೆ. ಭರತನಾಟ್ಯದಲ್ಲಿ 'ಆಂಗಿಕ' 'ವಾಚಿಕ' 'ಆಹಾರ್ಯ' ಮೂರು ಪ್ರಭೇದ. ಆಂಗಿಕದ ಕುರಿತು ಪಂಪ ಇಲ್ಲಿ ಪ್ರಸ್ತಾವಿಸಿದ್ದಾನೆ.

"ತಂಡುವು ಮೊದಲು ಅಂಗಹಾರಗಳನ್ನು, ವಿಧವಿಧದ ಕರಣಗಳೊಡನೆ, ಹೇಳಿ ಕೊಡುತ್ತಾನೆ. ಅಂಗಹಾರಗಳು ೩೨. ಸ್ಥಿರಹಸ್ತ, ಪರ್ಯಸ್ತಕ, ಸೂಚೀವಿದ್ಧ, ಅಪವಿದ್ಧ, ಅಕ್ಷಿಪ್ತಕ, ಉದ್ಘಟ್ಟಿತ, ವಿಷ್ಕಂಭ, ಅಪರಾಜಿತ, ವಿಷ್ಕಂಭಾಪಸೃತ, ಮತ್ತಾಕ್ರೀಡ, ಸ್ವಸ್ತಿಕ, ವೃಶ್ಚಿಕ, ಭ್ರಮರ, ಮತ್ತಸ್ಖಲಿತ, ವಿಲಸಿತ, ಗತಿಮಂಡಲ, ಪರಿಚ್ಛಿನ್ನ, ಪರಿವೃತ್ತರೇಚಿತ, ವೈಶಾಖರೇಚಿತ, ಪರಾವೃತ್ತ, ಆಲಾತಕ, ಪಾರ್ಶ್ವಚ್ಛೇದ, ವಿದ್ಯುದ್‌ಭ್ರಾಂತ, ಊರೂದ್ವೃತ್ತ, ಆಲೀಢ, ಉಚ್ಚುರಿತ, ಆಕ್ಷಿಪರೇಚಿತ, ಸಂಭ್ರಾಂತ, ಅಪಸರ್ಪ, ಮತ್ತು ಅರ್ಧನಿಕುಟ್ಟಕ.

ಈ ಅಂಗಹಾರಗಳಿಗೆ ಕರಣಗಳು ಮೂಲ ಎಂದರೆ ಹಸ್ತ ಮತ್ತು ಪಾದ ಇವುಗಳ ಸಮಾಯೋಗ. ಎರಡು ಕರಣಗಳಿಂದ ನೃತ್ತಮಾತೃಕ, ಎರಡು ಇಲ್ಲವೆ ಮೂರು ಇಲ್ಲವೆ ನಾಲ್ಕು ಮಾತೃಕಗಳಿಂದ ಅಂಗಹಾರ, ಅಯ್ದು ಕರಣಗಳಿಂದ ಸಂಘಾತಕ, ೬ ರಿಂದ ೯ ಕರಣಗಳಿಂದಲೂ ಅಂಗಹಾರ. (ಎಂದರೆ ಕರಣಗಳ ಸಮಾಯೋಗದಿಂದ ಅಂಗಹಾರ). ಇವನ್ನು ಮೊದಲು ಶಿವನು ಯೋಜಿಸಿ ಆಮೇಲೆ ತಂಡುವುಗೆ ಹೇಳಿ ಕೊಟ್ಟನು ಎನ್ನುತ್ತ ಇವನ್ನೆಲ್ಲ ಒಂದೊಂದಾಗಿ ವಿವರಿಸಲಾಗಿದೆ. (೨೪೬ ಶ್ಲೋಕಗಳಲ್ಲಿ).

ಈ ದೀರ್ಘ ವಿವರಣೆಯನ್ನು ಕೇಳಿ ಆತ್ರೇಯ ಮೊದಲಾದ ಋಷಿಗಳಿಗೆ ಒಂದು ಸಂಶಯ ಬರುವುದು. 'ಅಭಿನಯದ ಉದ್ದೇಶ ಅರ್ಥವನ್ನು ತಿಳಿಸುವುದಕ್ಕಾಗಿ. ಹೀಗಿರುವಾಗ ಈ ನೃತ್ತ ಯಾಕೆ, ಇದರ ಉದ್ದೇಶವೇನು, ವಾಚ್ಯಾರ್ಥದ ಭಾಗವನ್ನು ತಿಳುಹಿಸಲಾರದ ಈ ನೃತ್ತದ ಸುಸಂಬದ್ಧತೆ ಹೇಗೆ?' ಎಂದು ಕೇಳುವರು.

ಭರತನ ಉತ್ತರ ಹೀಗಿದೆ. 'ಈ ನೃತ್ತಕ್ಕೆ ಯಾವ ಉದ್ದೇಶವೂ ಇಲ್ಲ, ಆದರೆ ಇದರಿಂದ ಪ್ರಯೋಗ ಕಳೆಕಟ್ಟುವುದು. ಜನರಿಗೆ ಸಾಮಾನ್ಯವಾಗಿ ನೃತ್ತ ಇಷ್ಟ. ಮಂಗಲ ಕಾರ್ಯಗಳಲ್ಲೂ ಅದನ್ನು ಬಳಸುತ್ತಾರೆ. ಆದರೆ(ಪೂರ್ವರಂಗದಲ್ಲಿ) ಇದನ್ನು ಅತಿಯಾಗಿ ಮಾಡಬಾರದು. ಹಾಗೆ ಮಾಡಿದರೆ ನಟರಿಗೆ ಆಯಾಸ, ಪ್ರೇಕ್ಷಕರಿಗೆ ಬೇಸರ.

'ಈಗ ಇದರ ಪ್ರಯೋಗದ ಬಗ್ಗೆ ಹೇಳುವೆ. ಮೊದಲು ವಾದ್ಯಮೇಳವನ್ನು ಸಜ್ಜುಗೊಳಿಸಬೇಕು. ಆಮೇಲೆ ವಾದ್ಯದ ಹಿನ್ನೆಲೆಯಲ್ಲಿ ನರ್ತಕಿಯ ಪ್ರವೇಶ. ವಿಶಿಷ್ಟ ಚಾರಿ(ಇದು ಮುಂದೆ ಒಂದು ಅಧ್ಯಾಯದಲ್ಲಿ ವಿವರಿಸಲ್ಪಟ್ಟಿದೆ) ಬೊಗಸೆಯಲ್ಲಿಯ ಹೂಗಳನ್ನು ಚೆಲ್ಲಿ ರಂಗಪೀಠವನ್ನು ಪ್ರದಕ್ಷಿಣೆಯಿಂದ ಸುತ್ತಿ, ದೇವತೆಗಳನ್ನು ವಂದಿಸಿ ಅಭಿನಯಕ್ಕೆ ತೊಡಗಬೇಕು. ಗೀತ-ನೃತ್ತಗಳ ನಂತರ ಆಕೆಯ ನಿಷ್ಕ್ರಮಣ, ತರುವಾಯ ಮಿಕ್ಕ ಪಾತ್ರಗಳೂ ಹೀಗೆಯೆ ಪ್ರವೇಶಿಸಿ ಬೇರೆ ಬೇರೆ ಆಕೃತಿಗಳನ್ನು ರಚಿಸುತ್ತ, ಕುಣಿಯಬೇಕು. ಮೊದಲು ಹಾಡು, ಆಮೇಲೆ ಅದರ ಅರ್ಥಕ್ಕೆ ಅನುಗುಣವಾಗಿ ನೃತ್ತ.'

ಅನೇಕ ತರದ ಭಂಗಿಗಳನ್ನು, ರಸಗಳನ್ನು ಸ್ತ್ರೀ-ಪುರುಷ ಪಾತ್ರಗಳು ಹೇಗೆ ನೃತ್ತ ಗೀತದಲ್ಲಿ ಅಭಿನಯಿಸಬೇಕೆಂಬುದನ್ನು ಹೇಳಿ ಭರತನು ತಾಂಡವದ ವಿಷಯವನ್ನು ಮುಗಿಸುತ್ತಾನೆ." ನೃತ್ಯಹಸ್ತವೂ ಒಂದು ಚಲನೆಯೂ ಕೂಡಿದರೆ ಕರಣವಾಗುತ್ತದೆ. ಎರಡು ಕರಣಗಳು ಕೂಡಿಕೊಂಡಿದ್ದರೆ ಒಂದು ಮಾಂತ್ರಿಕವಾಗುವುದು. ೨, ೩, ೪ ಮಾಂತ್ರಿಕಗಳು ಕೂಡಿದ್ದರೆ ಒಂದು 'ಅಂಗಾಹಾರ'ವಾಗುವುದು. ಕರಣಗಳು ಕಾಲಿನ ಚಲನೆ, ಹಸ್ತದ ಚಲನೆಗೆ ತಳಹದಿಯಾಗಿವೆ.

*ಅಂಗಹಾರ; ಕರಣ*

*ವಿವರಗಳಿಗೆ ನೋಡಿ: ಯು.ಎಸ್.ಕೃಷ್ಣರಾವ್ ೧೯೭೧ ಆಧುನಿಕ ಭಾರತದಲ್ಲಿ ನೃತ್ಯಕಲೆ ಪುಟ. ೩೫*
*ಅಮೂರ ಜಿ. ಎಸ್. ೨೦೦೬ ಶ್ರೀರಂಗ ಸಾರಸ್ವತ (ಸಂಪುಟ. ೮) ಪುಟ. ೬೦೧.*

೨೨೪. ಕರ್ಣಧಾರ

*"ಅತಿರಥ ಮಥನಂ ಕರ್ಣಧಾರನಲ್ಲನೆ ಕರ್ಣಂ" (ಪಂಪ ಭಾರತ ೧೨-೫೦)*

ಕರ್ಣಧಾರನೆಂದರೆ ಹಡಗಿನ ಚುಕ್ಕಾಣಿ ಹಿಡಿದಿರುವವನು. ಹಡಗಿನ ನಾವಿಕ. ಕರ್ಣ ಎಂದರೆ ಚುಕ್ಕಾಣಿ. ಚುಕ್ಕಾಣಿಯನ್ನು ಹಿಡಿದವನು ಕರ್ಣಧಾರ. ಇಲ್ಲಿ ಕೌರವ ಸೈನ್ಯವೆಂಬ ಹಡಗಿನ ಚುಕ್ಕಾಣಿಯನ್ನು ಹಿಡಿದವನು ಕರ್ಣ ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. ಏಕೆಂದರೆ ಅವನು ಅತಿರಥ ಮಥನನೆಂಬುದನ್ನು ಈ ಮೊದಲು ಹೇಳಲಾಗಿದೆ.

*ವಿವರಗಳಿಗೆ ನೋಡಿ: ಅತಿರಥ; ಮಹಾರಥ, ಅರ್ಧರಥ; ಸಮರಥ.*

೨೨೫. ಕರ್ಣಾಟ ಎಂಬ ಶಬ್ದ ವ್ಯುತ್ಪತ್ತಿ

ಕರ್ಣಾಟ ಎಂಬ ಶಬ್ದದ ವ್ಯುತ್ಪತ್ತಿಯ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ಕೇಶವವರ್ಣಿ (೧೩೫೯)ಎಂಬ ಜೈನಪಂಡಿತನು ಭೇದನಾರ್ಥಕವಾದ 'ಕರ್ಣ' ಧಾತುವಿನಿಂದ ಹುಟ್ಟಿತೆಂದು ಭಾವಿಸಿ ದಿವ್ಯಭಾಷೆಯಿಂದ ಬೇರೆಯಾಗಿ ವ್ಯವಹಾರದಲ್ಲಿರುವ ಭಾಷೆಯಾದ ಕಾರಣ ಇದಕ್ಕೆ ಕರ್ಣಾಟ ಎಂಬ ಹೆಸರು ಬಂದಿದೆ ಎಂದು ಹೇಳುತ್ತಾನೆ. ವಿಶ್ವಗುಣಾದರ್ಶ ಎಂಬ ಸಂಸ್ಕೃತ ಗ್ರಂಥವನ್ನು ಬರೆದ ವೆಂಕಟಾಧ್ವರಿ (ಸು. ೧೭೦೦) ಕರ್ಣಗಳಲ್ಲಿ ಅಟನ ಮಾಡುವುದರಿಂದ (ಎಂದರೆ ಎಲ್ಲರ ಕಿವಿಗಳಲ್ಲಿಯೂ ಬಿದ್ದು ಪ್ರಸಿದ್ಧವಾದುದರಿಂದ) ಇದಕ್ಕೆ ಕರ್ಣಾಟವೆಂಬ ಹೆಸರುಂಟಾಯಿತೆಂದು ಹೇಳುತ್ತಾನೆ. ಈ ಎರಡು ವ್ಯುತ್ಪತ್ತಿಗಳೂ ಕವಿಕಲ್ಪನೆಯೆಂದು ಹೇಳಬಹುದು. ಡಾಕ್ಟರ್ ಗುಂಡರ್ಟ್ ಎಂಬವನು ಈ ಶಬ್ದವು ಕರ್+ನಾಡು (ಕರಿಯ-ಮಣ್ಣುಳ್ಳ ದೇಶ) ಎಂಬ ಪದಗಳಿಂದ ಬಂದಿರಬೇಕೆಂದು ಅಭಿಪ್ರಾಯಪಡುತ್ತಾನೆ. ಇನ್ನು ಕೆಲವರು ಕರು+ನಾಡು (ಎತ್ತರವಾದ ಪ್ರದೇಶ) ಎಂಬ ಪದಗಳಿಂದ ಬಂದಿದೆ ಎನ್ನುತ್ತಾರೆ. ಕೇಶಿರಾಜನೂ ಭಟ್ಟಾಕಳಂಕನೂ ಕನ್ನಡ ಎಂಬುದು ಕರ್ಣಾಟ ಎಂಬುದರ ಅಪಭ್ರಂಶವೆಂದು ಹೇಳಿದ್ದಾರೆ. ಆದರೆ ಕರ್ಣಾಟ ಎಂಬುದು ಕನ್ನಡ ಎಂಬ ಮೂಲಪದದ ಸಂಸ್ಕೃತ ರೂಪವೆಂದು ಹೇಳಲಿಕ್ಕೂ ಅವಕಾಶವುಂಟು.

*ವಿವರಗಳಿಗೆ ನೋಡಿ: ಆರ್. ನರಸಿಂಹಾಚಾರ್ ೧೯೬೧*

*ಕರ್ಣಾಟಕ ಕವಿಚರಿತೆ ಸಂಪುಟ. ೧ (ಕರ್ಣಾಟಕ. ಪ್ರಾಚೀನತೆ, ಮಹಿಮೆ ವ್ಯುತ್ಪತ್ತಿ, ಲಿಪಿ)*

೨೨೬. ಕರ್ಬೊನ್ನು

*ಪಗೆವನನಿಜೆಯಲ್ವೆತ್ತೆನೆಂದು ರಾಗಿಸಿ ಪಲವು ನಿಡಿಯವುಂ ತೋರಮುಮಪ್ಪ* ***ಕರ್ಬೊನ್ನ*** *ಕೀಲ್ಗಳಂ ಕೊಂಡು ಬಂದು...........*

*(ಡಿ.ಎಲ್.ಎನ್. ೨೦೦೯ ಪುಟ. ೯೫).*

ಕರ್ಪೊನ್ ಎಂದರೆ ಕಬ್ಬಿಣ ಎಂದರ್ಥ. ಕರಿದಾದಪೊನ್(ಲೋಹ) ಕರ್ಬೊನ್ ಎಂದಾಗುತ್ತದೆ.

ಕರ್+ಪೊನ್–ಕರ್ಬೊನ್. ಪೊನ್ ಮಂತ್ರಲೋಹ. ಕರ್ಬೊನ್ ಅನಂತರ ಇದು ಕರ್ಬುನ. ಅನಂತರವೇ ಕಬ್ಬಿಣವೆಂಬ ಪದವು ರೂಢಿಗೆ ಬಂದಿರಬೇಕು. ಅನ್ನಂ ಭಟ್ಟನ ತರ್ಕ ಸಂಗ್ರಹದಲ್ಲಿ 'ಕಾಲಾಯಸ' 'ಸೀಸ' ಎಂಬ ಎರಡು ಹೆಸರುಗಳನ್ನು ಕಬ್ಬಿಣಕ್ಕೆ ಕೊಡಲಾಗಿದೆ. ತಾರ್ಕಿಕರು ಲೋಹಗಳನ್ನು ತೇಜಸ್ಸಿನ ವಿಷಯವೆಂದು ಅಂಗೀಕರಿಸಿದ್ದಾರೆ. ಇದಕ್ಕೆ ಅವರು ಕೊಡುವ ಕಾರಣ ಲೋಹಗಳಿಗೆ ರೂಪವಿದೆ. ದ್ರವತ್ವವಿದೆ. ಅವುಗಳು ಪಾರ್ಥಿವವಲ್ಲ.

*ವಿವರಗಳಿಗೆ ನೋಡಿ: ಮಹೇಶ್ ಅಡಕೋಳಿ (ಸಂ) ೧೯೯೨ ಅನ್ನಂಭಟ್ಟನ ತರ್ಕಸಂಗ್ರಹ ಪುಟ. ೬೪.*

**೨೨೭. ಕರ್ಮ**

*ಆ **ಕರ್ಮಗಳುಂ** ಜ್ಞಾನಾವರಣೀಯಂ ದರ್ಶನಾವರಣೀಯಂ ವೇದನೀಯಂ ಮೋಹನೀಯಮಾಯುಷ್ಯಂ ನಾಮಗೋತ್ರಮಂತರಾಯಮೆಂಬಷ್ಟವಿಧಂಗಳಕ್ಕುಂ ಅವಱೊಳ್ ಅಭಿನಿಬೋಧಿತಮತಿಶ್ರುತಾವಧಿಮನಃಪರ್ಯಯಕೇವಲಾವರಣೀಯ ಭೇದದಿಂ ಜ್ಞಾನಾವರಣೀಯಂ ಪಂಚವಿಧಮಕ್ಕುಂ. ನಿದ್ರಾನಿದ್ರಾಪ್ರಚಳಾಪ್ರಚಳಸ್ತ್ಯಾನಗೃದ್ಧಿ ನಿದ್ರಾಪ್ರಚಳಾಚಕ್ಷುರಚಕ್ಷುರವಧಿ*

*(ಅಜಿತತೀರ್ಥಂಕರ ಪುರಾಣ ತಿಲಕಂ ೧೧ – ೨.ವ)*

ಭಿನ್ನಕರ್ಮ

ಈ ಭಾಗದಲ್ಲಿ ರನ್ನನು ಕರ್ಮದ ಬಗ್ಗೆ ಬಳಸಿರುವ ಪ್ರಮುಖ ಪರಿಕಲ್ಪನೆಗಳು ಹೀಗಿವೆ:

೧. ಕರ್ಮ – ಜೈನಧರ್ಮವು ಕರ್ಮಸಿದ್ಧಾಂತವನ್ನು ಒಪ್ಪುತ್ತದೆ.
೨. ನಾಮ ಮತ್ತು ಗೋತ್ರ – ಗೋತ್ರಪದ್ಧತಿಯ ಬಗ್ಗೆ ಜೈನರಿಗೆ ಇರುವ ನಂಬಿಕೆಯನ್ನು ಇದು ಸೂಚಿಸುತ್ತದೆ.
೩. ಕೇವಲಾವರಣೀಯ ಭೇದ–ಮತ್ತು ದರ್ಶನಾವರಣೀಯ ಭೇದ–ಕೇವಲದರ್ಶನಕ್ಕೆ ಆವರಣವನ್ನುಂಟು ಮಾಡುವ ಕರ್ಮ.
೪. ಸಾತಾಸಾತಭೇದ – ಎರಡು ವಿಧ ಇಂದ್ರಿಯ ಜನ್ಯನಾದ ಸುಖವನ್ನು ಉಂಟು ಮಾಡುವ ಕರ್ಮ.
೫. ಮೋಹನೀಯ ಬಂಧ – ಮೋಹದ ಬಗೆಗಿರುವ ಬಂಧನ.
೬. ಕಷಾಯ – ಸುಖದುಃಖಗಳನ್ನುಂಟು ಮಾಡುವ ನಾಲ್ಕು ಬಗೆಯ ದೋಷ, ಕ್ರೋಧ, ಮಾನ, ಮಾಯಾ, ಲೋಭಗಳು.
೭ ಹಾಸ್ಯ, ರತಿ, ಶೋಕ, ಭಯ, ಜುಗುಪ್ಸೆ, ಸ್ತ್ರೀ, ಪುಂ ನಪುಂಸಕ, ಭೇದ.
೮. ಚಾರಿತ್ರ್ಯದ ವ್ಯಾಮೋಹ.
೯. ಸುಗಂಧ – ದುರ್ಗಂಧ – ದ್ವಿವಿಧ.
೧೦. ಸಮ್ಯಕ್ತ್ವ, ಮಿಥ್ಯತ್ವ, ಸಮ್ಯಕ್ ಮಿಥ್ಯತ್ವ – ಮೂರುವಿಧ.

ಜೈನರ ಕರ್ಮಸಿದ್ಧಾಂತದ ಪ್ರಕಾರ ಲೋಕದಲ್ಲಿ ಜೀವಗಳು ಜನ್ಮತಾಳುವುದಕ್ಕೂ, ಅವರು ಪಡುವ ಕಷ್ಟ–ಸುಖಗಳಿಗೂ, ಅವರ ಸಾಂಸಾರಿಕ ಪರಿಭ್ರಮಣೆಗೂ ಕಾರಣವಾದ ಕರ್ಮದ ವಿಷಯದಲ್ಲಿ ಜೈನ ದಾರ್ಶನಿಕರು ಅತಿ ವಿಸ್ತಾರವಾಗಿ ನಿರೂಪಿಸಿರುವ ಕರ್ಮಸಿದ್ಧಾಂತವಿದೆ. ಜೈನ ತತ್ವದ ಪ್ರಕಾರ ಎಂಟು ಬಗೆಯಾದ ಪ್ರಧಾನ ಕರ್ಮಗಳಿವೆ: – ಜ್ಞಾನಾವರಣೀಯ (ಜ್ಞಾನವನ್ನು ಮುಚ್ಚುವ ಕರ್ಮ); ದರ್ಶನಾವರಣೀಯ (ದರ್ಶನವನ್ನು ಎಂದರೆ ದೃಷ್ಟಿಯನ್ನು ಮುಚ್ಚುವ ಕರ್ಮ); ವೇದನೀಯ (ಸುಖ–ದುಃಖಾದಿ ಭಾವಗಳನ್ನುಂಟುಮಾಡುವ ಕರ್ಮ); ಅಂತರಾಯ ಕರ್ಮ (ಅಡ್ಡಿ ತಡೆಗಳನ್ನುಂಟುಮಾಡುವ ಕರ್ಮ); ಗೋತ್ರಕರ್ಮ (ಜೀವ ಹುಟ್ಟುವ ಕುಲಾಧಿಗಳನ್ನು ನಿರ್ಣಯಿಸುವ ಕರ್ಮ); ಕೊನೆಯದಾಗಿ ಆಯುಷ್ಯಕರ್ಮ (ವ್ಯಕ್ತಿಯ ಜೀವಾವಧಿಯನ್ನು ನಿರ್ಣಯಿಸುವ ಕರ್ಮ). ಮಾನವ ಜೀವಿಯಾಗಲಿ, ಅಧೋಮಾನವ ಜೀವಿಯಾಗಲಿ ಈ ಎಂಟು ಕರ್ಮಗಳ ಪ್ರಭಾವಕ್ಕೆ ಅಧೀನನಾಗಿರುವನು. ಸಂಸಾರದಲ್ಲಿ ಜೀವನ ಪರಿಭ್ರಮಣೆ ಈ ಕರ್ಮಗಳ ಸಾಹಚರ್ಯಕ್ಕೆ ಅನುಗುಣವಾಗಿರುತ್ತದೆ.

*ವಿವರಗಳಿಗೆ ನೋಡಿ: ಎಸ್. ನಟರಾಜ ಬೂದಾಳು ೨೦೦೬*
*ನಾಗಾರ್ಜುನನ ಮೂಲಮಾಧ್ಯಮಿಕಕಾರಿಕಾ*
*ಪುಟ. ೪೯, ೫೧ (ಬ್ರಹ್ಮಶಿವ ಸಮಯ ಪರೀಕ್ಷೆ ಅಷ್ಟಕರ್ಮಗಳು)*
*ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦ ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ ಪುಟ. ೨೯೮*
*ಡಿ.ಡಿ. ಕೊಸಾಂಬಿ ೧೯೯೮ ಪ್ರಾಚೀನ ಭಾರತದಲ್ಲಿ ಚರಿತ್ರೆ ಪುಟ. ೧೩೪*
*ಮಹದೇವ ಪ್ರಭಾಕರ ಪೂಜಾರ ೧೯೭೬ ಜೈನಧರ್ಮ ಪರಿಭಾಷೆ*

### ೨೨೮. ಕರ್ಮನಿರ್ಜರೆ

*ಪೆಸರ್ಗೊಂಡಿಂದ್ರನರೇಂದ್ರವಂದ್ಯನನೊಱಲ್ದೆತ್ತಾನುಮೋರೊರ್ಮೆ ಚಿಂ*
*ತಿಸಿದೊಂಗಂ ಪವಣಿಲ್ಲ ಪುಣ್ಯಮೆನೆ ಪೂಣ್ದೊಳ್ಪಿಂದಮೋರಂತೆ ಭಾ ।*
*ವಿಸಿ ತಾಂ ತನ್ಮಯನಾಗಿ ತಚ್ಚರಿತಮಂ ಕಾವ್ಯಂಗಳೊಳ್ ಕೂಡೆ*
*ಬಣ್ಣಿಸಿ ಪೇೞ್ವಾತನ* ***ಕರ್ಮನಿರ್ಜರೆ****ಯನಂತಿಂತುಂತೆನಲ್ ಬರ್ಕುಮೇ ॥*
*(ಆದಿಪುರಾಣ ೧–೩೭)*

ಜಿನೇಂದ್ರನ ಸ್ತುತಿಯಿಂದ ಕರ್ಮವು ನಶಿಸಿಹೋಗುವುದು ಪುಣ್ಯ ದೊರೆಯುವುದು. ತನ್ಮಯನಾಗಿ ಜಿನೇಂದ್ರನ ಚರಿತೆ ಕಾವ್ಯದೊಳಗೂಡಿಸಿದರೆ ಅದಕ್ಕಿಂತ ಮಿಗಿಲಾವುದು ಎಂಬುದು ಪಂಪನ ಭಾವ.

ಕರ್ಮವು 'ಕೃ' ಎಂಬ ಧಾತುವಿನಿಂದ ಹುಟ್ಟಿದೆ. 'ಕೃ' ಎಂದರೆ ಮಾಡು ಎಂದರ್ಥ. ಕ್ರಿಯೆ, ಆಚರಿಸು, ಕಾರ್ಯ–ಕಾರಣ ಕಳೆದು ಹೋದ ಕ್ರಿಯೆಗಳು, ದೈಹಿಕ ಮಾನಸಿಕ ಕರ್ಮಗಳು ಎಂದು ಕರ್ಮಗಳಿಗೆ ಅರ್ಥವಿದೆ. ಚಾರ್ವಾಕಮತದಲ್ಲಿ ಕರ್ಮವು ಒಂದೇ. ಅದರ ಪ್ರಕಾರ ಕರ್ಮದಿಂದ ಸುಖ ದುಃಖ ಎರಡೂ ದೊರೆಯಬಹುದು. ಜೈನಧರ್ಮದಲ್ಲಿ ಕರ್ಮ

ಎಂಟು ಮಾದರಿಯದು: ಜ್ಞಾನಾವರಣ, ದರ್ಶನಾವರಣ, ವೇದನೀಯ, ಮೋಹನೀಯ ಆಯುಷ್, ಗೋತ್ರ, ನಾಮ, ಅಂತರಾಯ. ಮೊದಲನೆಯ ನಾಲ್ಕು ಗತಿಗಳು. ಉಳಿದವುಗಳು ಅಘಾತಿಕರ್ಮಗಳು.

ಬೌದ್ಧ ಮತ ದೃಷ್ಟಿಯಿಂದ ಕಾರಣ ಮತ್ತು ಸನ್ನಿವೇಶಗಳು ಕರ್ಮಕ್ಕೆ ಕಾರಣವಾಗುತ್ತದೆ. ಬಾಹ್ಯ ಸಂಗತಿಗಳು, ಪ್ರಜ್ಞೆ ಮತ್ತು ಸುಪ್ತ ಪ್ರಜ್ಞೆಗಳು ಕರ್ಮಕ್ಕೆ ಕಾರಣವಾಗುತ್ತವೆ. "ಪ್ರತೀಯ ಸಮುತ್ಪಾದ" ಎಂದು ಬೌದ್ಧ ಮತವು ಪ್ರತಿಪಾದಿಸುತ್ತದೆ. ಯೋಗಾಚಾರದ ಪ್ರಕಾರ ಕರ್ಮವು ನಾಲ್ಕು ಬಗೆಯದು. ಶುಕ್ಲ(ಬಿಳಿ) ಸಂತೋಷ. ಕೃಷ್ಣ(ಕಪ್ಪು)–ದುಃಖ. ಶುಕ್ಲ–ಕೃಷ್ಣ ದುಃಖ, ಸಂತೋಷ ಎರಡನ್ನೂ ನೀಡುತ್ತದೆ. ಅಶುಕ್ಲ–ಕೃಷ್ಣವು ಸಂತೋಷ ಮತ್ತು ದುಃಖವನ್ನು ಬೇರೆ ಮಾಡುತ್ತದೆ. ವೇದಗಳು ನಿತ್ಯಕರ್ಮ (ನಿತ್ಯದ ಕೆಲಸ) ನೈಮಿತ್ತಿಕ ಕರ್ಮ. (ಸಾಂದರ್ಭಿಕ ಕರ್ಮ) ಕಾಮ್ಯಕರ್ಮ (ಉದ್ದೇಶಿತ ಕರ್ಮ) ಹಾಗೆಯೇ ನಿಷಿದ್ಧ ಕರ್ಮ. ಅದ್ವೈತ ಸಿದ್ಧಾಂತದ ಪ್ರಕಾರ ಕರ್ಮ ಮಾನಸಿಕ ಹಾಗೂ ಶುದ್ಧಾತ್ಮ ಕರ್ಮವು ಬಿಡುಗಡೆಯ ದಾರಿಯನ್ನು ಸೂಚಿಸುತ್ತದೆ. ವೇದದಿಂದ ಹೇಳಲ್ಪಟ್ಟಿರುವ ಕರ್ಮಗಳು ವಿಹಿತ ಕರ್ಮಗಳಾಗಿವೆ. ಪ್ರಾಯಶ್ಚಿತ್ತ ಕರ್ಮವು ಮಾಡಿದ ಪಾಪ ನಿವಾರಣೆಗೆ ಇರುವಂಥದ್ದು. ಸಂಚಿತ ಕರ್ಮವೆಂದರೆ ಹಿಂದಿನಿಂದಲೂ ಬಂದಿರುವಂಥದ್ದು. ವೈಶೇಷಿಕದಲ್ಲಿ ಉತ್ಕ್ಷೇಪಣ (ಊರ್ಧ್ವಮುಖಿ) ಅವಕ್ಷೇಪಣ (ಅಧೋಮುಖಿ) ವೈರುಧ್ಯದಿಂದ ಕೂಡಿರುವುದು (ಆಕುಂಚನ) ವಿಸ್ತರಣೆಯ ರೂಪದ್ದು ಪ್ರಸಾರಣ.

ನಿಸ್ತ್ರಿಂಶ ಕರ್ಮದ ಕುರಿತು ಆದಿಪುರಾಣದಲ್ಲಿ ಬರುತ್ತದೆ:

................ಲ್ಲದೆ ಮಾಡೆಂದು ಪೇಳ್ದೊಡವನಾ **ನಿಸ್ತ್ರಿಂಶಕರ್ಮ**ಕ್ಕೆ ಕೊಕ್ಕರಿಸಿ
ಪಾಪಭೀರುವಪ್ಪುದರಿಂ............

(ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೨–೧೪ ವ)

ನಿಸ್ತ್ರಿಂಶ ಕರ್ಮವೆಂದರೆ ಕ್ರೂರ ಕರ್ಮ ಅದಕ್ಕೆ ಅಂಟಿಕೊಂಡರೆ ಪಾಪವುಂಟಾಗುವುದು ಎಂದು ಭಾವಾರ್ಥ.

ನಿಸ್ತ್ರಿಂಶವೆಂದರೆ ಕತ್ತಿ, ದಯೆಯಿಲ್ಲದ, ಕನಿಕರವಿಲ್ಲದ; ದೂರವೆಂಬ ಅರ್ಥವಿದೆ. ಕನಿಕರವಿಲ್ಲದ ಕರ್ಮವೇ "ನಿಸ್ತ್ರಿಂಶ ಕರ್ಮ".

*ವಿವರಗಳಿಗೆ ನೋಡಿ: John Grimes 1996*

*A concise Dict. Of Indian Philosophy P. 160-16.*

*ಪ್ರಭಾಕರ ಜೋಶಿ ಎಂ. ೨೦೦೮ ಭಾರತೀಯ ತತ್ವಶಾಸ್ತ್ರದ ರೂಪುರೇಷೆಗಳು*

**೨೨೯. ಕರ್ಮೇಂದ್ರಿಯ**

*ಮನಮಂ ನುಡಿಯಂ ಮೆಯ್ಯಂ*
*ತನಗೆ ವಶಂಮಾಡಿ ಗುಪ್ತಿಗುಪ್ತಂ ಮುನಿಯೆಂ ।*
*ಬಿನೆಗಂ ನೆಗಟ್ದಿಂ ಗುಪ್ತಿಯೆ*

*ತನಗಿಲ್ಲದೆ **ಕರ್ಮರಿಪುಗೆ** ಮುನಿವುದು ಮೊಗ್ಗೇ ॥*

*(ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೬-೨೯)*

ಗುಪ್ತಿಯೆಂದರೆ ಮನೋ, ವಾಕ್; ಕಾಯಗಳ ನಿಗ್ರಹ. ಇಂದ್ರಿಯ ನಿಗ್ರಹವೆಂಬ ಭಾವಾರ್ಥ.

ಕರ್ಮರಿಪು: ಕರ್ಮಕ್ಕೆ ಶತ್ರು ಅಂದರೆ ದುಷ್ಕರ್ಮದ ವಿರೋಧಿ.

ಕರ್ಮವಿರೋಧ ಅಥವಾ ಸಂವಹರ ಸಾಧನಕ್ಕೆ ಅಗತ್ಯವಾದ ಚಟುವಟಿಕೆ. (ಆಚರಣೆ) ಮನಸ್ಸು, ವಚನ, ಕಾಯ ವ್ಯಾಪಾರಗಳನ್ನು ನಿಯಂತ್ರಣ ಮಾಡುವುದು ಗುಪ್ತಿಯೆಂದೆನ್ನಿಸಿ ಕೊಳ್ಳುತ್ತದೆ.

ಕರ್ಮ ಪ್ರಕಾರಗಳು– ಕರ್ಮಗಳು ಘಾತಿ, ಅಘಾತಿ, ಎಂದು ಎರಡು ಬಗೆಯಾಗಿವೆ. ಜೀವನ ಅನಂತ ಜ್ಞಾನಾದಿ ಸ್ವಾಭಾವಿಕ ಗುಣಗಳನ್ನು ನಾಶಗೊಳಿಸುವ ಕರ್ಮಗಳು ಘಾತಿ ಕರ್ಮಗಳು; ಇವು ಜ್ಞಾನಾವರಣೀಯ, ದರ್ಶನಾವರಣೀಯ, ಮೋಹನೀಯ, ಅಂತರಾಯ ಎಂದು ನಾಲ್ಕು ಬಗೆಯಾಗಿವೆ; ವೇದನೀಯ, ಆಯು, ನಾಮ, ಗೋತ್ರ ಎಂದು ಅಘಾತಿ ಕರ್ಮಗಳು ನಾಲ್ಕು ಬಗೆಯಾಗಿವೆ. ಈ ಎರಡು ತರದ ಕರ್ಮಗಳಲ್ಲಿ ಒಟ್ಟಿಗೆ ೧೪೮ ಒಳಭೇದಗಳಾಗುವುದು ಇಲ್ಲಿ ಬಂಧಹೇತುಗಳಾದ ಕರ್ಮಗಳ ವಿಷಯ ವಾಗಿ ವೈದಿಕ ಬೌದ್ಧ ಜೈನ ಧರ್ಮಗಳ ತುಲಾನಾತ್ಮಕ ವಿಚಾರವನ್ನು ಸಂಕ್ಷೇಪವಾಗಿ ಹೇಳುವೆವು.

ಕರ್ಮವು ನಿಯತವಾಗಿ ಒಂದೊಂದು ಫಲವನ್ನು ಕೊಡುವುದೆಂಬುದನ್ನು ಇತರ ಮತಗಳಂತೆ ಜೈನಮತವೂ ಒಪ್ಪುವುದು. ಭಾರತೀಯದರ್ಶನಗಳು ಹಲವು ವಿಷಯಗಳಲ್ಲಿ ಪರಸ್ಪರ ಭಿನ್ನವಾಗಿದ್ದರೂ ಕರ್ಮವು ಅಮೋಘವೆಂಬುದರಲ್ಲಿ ಐಕಮತ್ಯವುಳ್ಳವಾಗಿವೆ. ಪೂರ್ವಮೀಮಾಂಸೆಯು ಪರಬ್ರಹ್ಮ ವಿಚಾರವನ್ನು ಮಾಡದಿರುವುದರಿಂದ ಉತ್ತರ ಮೀಮಾಂಸೆಯಿಂದ ಭಿನ್ನವಾಗಿದೆ. ಸಾಂಖ್ಯ, ಯೋಗ ದರ್ಶನಗಳು ಆತ್ಮನಾನಾತ್ವವನ್ನು ಹೇಳುವುದರಿಂದ ಉತ್ತರಮೀಮಾಂಸೆಯಿಂದ (ವೇದಾಂತದಿಂದ) ಭಿನ್ನವಾಗಿವೆ. ಆತ್ಮನಲ್ಲಿ ಗುಣಾದಿಗಳನ್ನು ಆರೋಪಿಸಿ ನ್ಯಾಯ ವೈಶೇಷಿಕ ದರ್ಶನಗಳು ಸಾಂಖ್ಯಯೋಗ ದರ್ಶನಗಳಿಂದ ಭಿನ್ನವಾಗಿವೆ. ಆತ್ಮನೇ ಪ್ರಕಟನಾಗುವನು ಎಂದು ಹೇಳಿ ಜೈನದರ್ಶನವು ನ್ಯಾಯ ವೈಶೇಷಿಕ ದರ್ಶನಗಳಿಂದ ಭಿನ್ನವಾಗಿರುವುದು; ಬೌದ್ಧ ದರ್ಶನವು ನಿತ್ಯ-ಸತ್ಯ ಪದಾರ್ಥ ರೂಪವಾದ ಆತ್ಮನ ಅಸ್ತಿತ್ವನ್ನೇ ಒಪ್ಪುವುದಿಲ್ಲ. ಆದರೆ ಈ ಎಲ್ಲ ದರ್ಶನಗಳು ಕರ್ಮಕ್ಕೆ ಅನುರೂಪವಾದ ಫಲವು ತಪ್ಪದು; "ಬಿತ್ತಿದುದನ್ನು ಬೆಳೆದುಕೊಳ್ಳು" ಎಂದು ಏಕಕಂಠವಾಗಿ ಹೇಳುವುವು. ಕರ್ಮಕ್ಕೂ ಅದರ ಫಲಕ್ಕೂ ಅಚ್ಛೇದ್ಯವಾದ ಸಂಬಂಧ ವುಂಟೆಂದೂ, ಪ್ರಾಚೀನಕರ್ಮವೇ ಈ ಜನ್ಮದ ಅವಸ್ಥೆಗೆ ಕಾರಣವೆಂದೂ ಎಲ್ಲ ದರ್ಶನಗಳು ಹೇಳುವುವು ಎನ್ನುವುದು ಜೈನಧರ್ಮದ ಅಭಿಪ್ರಾಯ.

ಕರ್ಮೇಂದ್ರಿಯಗಳು ಕಾರ್ಯಮಾಡುವ ಶಕ್ತಿಗಳು. ಅವು ಐದು: ನಿಶ್ಚೇಷ್ಟವಾಗಿ ವಿಶ್ರಮಿಸುವ ಮತ್ತು ಭೋಗಿಸುವ ಶಕ್ತಿ(ಉಪಸ್ಥ), ತ್ಯಜಿಸುವ ಶಕ್ತಿ(ವಿಸರ್ಗ), ಚಲನಶಕ್ತಿ

(ವಿಹರಣ), ಹಿಡಿದುಕೊಳ್ಳುವ ಶಕ್ತಿ(ಅದಾನ) ಮತ್ತು ಮಾತಾಡುವ ಶಕ್ತಿ (ವಚನ). ಅವು ಐದು ದೈಹಿಕ ಕ್ರಿಯೆಗಳ ಶಕ್ತಿಗಳು ಮತ್ತು ಜೀವಾತ್ಮನಲ್ಲಿರುವ ಸೀಮಿತ ಕ್ರಿಯಾಶಕ್ತಿಯಾದ ಕಲಾತತ್ವದ ವಿಭಿನ್ನ ರೂಪಗಳು ಎನ್ನುವುದು ಅಭಿನವಗುಪ್ತನ ನಿಲುವು.

ಕರ್ಮೇಂದ್ರಿಯ ಚರ್ಚೆಯು ಭಾರತೀಯ ಎಲ್ಲಾ ತತ್ವಜ್ಞಾನಿಗಳು ಬೇರೆ ಬೇರೆ ರೀತಿಯಲ್ಲಿ ವಿವರಿಸಿದ್ದಾರೆ.

ಕರ್ಮೇಂದ್ರಿಯವೆಂದರೆ ಕೆಲಸ ಮಾಡುವ ಅಥವಾ ಕೆಲಸಕ್ಕೆ ಕಾರಣವಾಗುವ ಇಂದ್ರಿಯ. ಅಭಿನವಗುಪ್ತನ ಮಾತನ್ನು ಮುಂದುವರಿಸುವುದಿದ್ದರೆ ಕೈ, ಕಾಲು, ನಾಲಗೆ, ಜನನೇಂದ್ರಿಯ ಹಾಗೂ ಆಸನದ್ವಾರಗಳು ಕರ್ಮೇಂದ್ರಿಯಗಳು.

*ವಿವರಗಳಿಗೆ : ಜಿ.ಟಿ.ದೇಶಪಾಂಡೆ(ಮೂ) ಎನ್.ಬಾಲಸುಬ್ರಹ್ಮಣ್ಯ(ಅನು) ೨೦೦೦ ಅಭಿನವಗುಪ್ತ ಪುಟ. ೬೨.*

*ಮಹದೇವ ಪ್ರಭಾಕರ ಪೂಜಾರ ೧೯೭೬ ಜೈನಧರ್ಮದ ಪರಿಭಾಷೆ ಪುಟ. ೮೫, ೮೬.*

### ೨೩೦. ಕಲಿ

*ಕಲಿಗಂ ಶಂಕೆಯೆ ಚಾಗಿಗಂ ಬೆರಗೆ ಮೇಣ್ ಕಟ್ಟಾಳ್ ನೆರಂಬಾರ್ವನೇ*
*ಕುಲಜಂಗಂ ಮಜಿವಾಟಿ ಸಜ್ಜನಿಕೆಗಂ ಕಲ್ವೊ [ಳ್ವೊ] ಜೆಯೇ ಧರ್ಮಿಗಂ ।*
*ಕೊಲೆಯೇ ಮಂತ್ರಿಗಮಿಚ್ಚೆಕಾಜಿತನವೇ ತಕ್ಕಂ ಪಿಸುಣ್ಬೇಟ್ವನೇ*
*ಚಲಮಂ ಗಂಡುಮನಪ್ಪುಕೆಯ್ವೆನಗಮಾ ಕೌಂತೇಯರೊಳ್ ಸಂಧಿಯೇ ॥*

(ಸಾಹಸ ಭೀಮವಿಜಯ ೫-೪೬)

ವೀರನಿಗೆ ಶಂಕೆಯಿರಬಾರದು. ತ್ಯಾಗಿಗೆ ಬೆರಗು ಇರಬಾರದು. ಕಡುಗಲಿಗೆ ಯುದ್ಧದಲ್ಲಿ ಇನ್ನೊಬ್ಬರ ಸಹಾಯ ಬೇಕಿಲ್ಲ. ಸಜ್ಜನನು ಕಳವು ಮಾಡಬಾರದು. ಧರ್ಮಶೀಲನು ಕೊಲೆ ಮಾಡಬಾರದು. ಮಂತ್ರಿಗೆ ದಾಕ್ಷಿಣ್ಯದ ಮಾತು ಇರಬಾರದು. ಯೋಗ್ಯನು ಚಾಡಿ ಹೇಳಬಾರದು. ಎನ್ನುವುದು ಮೇಲಿನ ಪದ್ಯದ ಭಾವಾರ್ಥವಾಗಿದೆ.

ಕಲಿ(ನಾ) ಕಲಹ; ಜಗಳ; ಕಾಳಗ; ಬಂಟ, ಶೂರ, ವೀರ. 'ಕಲಿಯನೆ ಪಂದೆಮಾಳ್ಪ ಕಡುವಂದೆಯನೊಳ್ಗಲಿಮಾಟ್ಪ (ಪಂಪ ಭಾರತ ೧೨-೯೨) ಕಲಿತನ (ಶೌರ್ಯ) ರಾಜಪ್ರಭುತ್ವದ ಸಂಘರ್ಷಗಳಲ್ಲಿ ಮುಖ್ಯ ಮೌಲ್ಯವಾದುದರಿಂದ ಇದಕ್ಕೆ ಸಂಬಂಧಿಸಿದಂತೆ ಮಹಾಕಾವ್ಯಗಳಲ್ಲಿ ಅನೇಕ ಮಾತುಗಳು ಬಂದಿವೆಯೆಂಬುದು ಗಮನಾರ್ಹ. ಕಲಿತನ, ಸಜ್ಜನಿಕೆ, ಧರ್ಮಪ್ರವೃತ್ತಿ, ದಾಕ್ಷಿಣ್ಯದ ಮಾತು ಚಾಡಿ ಹೇಳದಿರುವಿಕೆಗಳು ಸಾಂಸ್ಕೃತಿಕ ಮೌಲ್ಯಗಳಾಗಿವೆಯೆಂಬುದು ಇಲ್ಲಿ ಮನನೀಯ.

### ೨೩೧. ಕಲಿಗಂಟು

ಗಂಡುಡೆಯೆಂದರೆ ವೀರಗಚ್ಚೆ. ಕಲಿಗಂಟು+ಇಕ್ಕು-ಕಲಿಗಂಟಿಕ್ಕು, ವೀರರು ವೀರಕಚ್ಚೆ ಗಂಟಿಕ್ಕುವ ಒಂದು ಕ್ರಮ.

ಯುದ್ಧ ಸನ್ನದ್ಧನಾಗಿ **ಕಲಿಗಂಟಿಕ್ಕಿ** ಗಂಡುಡೆಯುಮನುಟ್ಟು

(ಪಂಪ ಭಾರತ ೮-೭೩ ವ)

ಭೀಮಸೇನನು ಮಲ್ಲಯುದ್ಧ ಮಾಡುವುದಕ್ಕೆ ಸಿದ್ಧನಾಗಿ ವೀರಗಚ್ಚೆಯನ್ನು ಹಾಕಿ ಗಂಡಸಿನ ಉಡುಪನ್ನು ಧರಿಸಿ ಮೇಲು ಹೊದಿಕೆ(ಉತ್ತರೀಯ)ಯನ್ನು ಕೆಳಗಿನವರೆಗೆ ಮುಸುಕು ಹಾಕಿಕೊಂಡು ಹೋಗಿ ದ್ರೌಪದಿಯನ್ನು ನಾಟ್ಯಶಾಲೆಯ ಬಾಗಿಲಿನಲ್ಲಿರಿಸಿ ವೀರ ಲಕ್ಷ್ಮಿಯ ವಿವಾಹಮಂಟಪವನ್ನು ಪ್ರವೇಶ ಮಾಡುವ ಹಾಗೆ ಒಳಹೊಕ್ಕನು. ಪಂಪ ಇಲ್ಲಿ ಕಲಿಗಂಟು ಎಂದು ಬಳಸಿದ್ದಾನೆ. ಕಲಿಗಂಟು ಎಂದರೆ ವೀರಗಚ್ಚೆ. ಗಂಡುಡೆಯೆನ್ನುವುದು ಇಲ್ಲಿ ಗಮನಾರ್ಹ. ವೀರಗಚ್ಚೆಯಲ್ಲಿ ಕಚ್ಚೆಯನ್ನು ಬಿಗಿದು ಗಂಟು ಹಾಕಿಕೊಳ್ಳುತ್ತಾರೆ. ಮಲ್ಲಯುದ್ಧದಲ್ಲಿ ವೀರಗಚ್ಚೆಯು ಮುಖ್ಯವಾಗಿದೆ.

## ೨೩೨. ಕವರು

*ಕವರ್ದಪಂ ತನುವಂ ಬಡಮಾಡಿ ಕಾಡಿ ದಂ*
*ಟಿಸಿದಪನಂಗಜನ್ಮನ **ಕವರ್ತೆ**ಯ ದಂಡದ ಪಾಂಗಿದೆಂತುಟೊ*

*(ಪಂಪ ಭಾರತ ೫-೧೩)*

ಕೃಶಾಂಗಿಯಾದ ಸುಭದ್ರೆಯನ್ನು ಇವನು ಪ್ರೀತಿಸುತ್ತಾನೆಯೇ ಇಲ್ಲವೇ ಎಂಬುದೇನನ್ನೂ ಸ್ವಲ್ಪವೂ ಯೋಚಿಸದೇ ರೂಪವನ್ನೇ ನೋಡಿ ಸೇರಿಸಲು ಆಶೆಪಟ್ಟು ಓಡಿಬಂದು ಅಂಟಿಕೊಂಡಿರುವ ಕಣ್ಣುಗಳನ್ನೂ ಏನೂ ಹೇಳದೆ ಉಪೇಕ್ಷಿಸಿ ಮನ್ಮಥನು ಮನಸ್ಸೆಲ್ಲವನ್ನೂ ಸೂರೆ ಮಾಡುತ್ತಾನೆ. ಶರೀರವನ್ನು ಕೃಶವನ್ನಾಗಿ ಮಾಡಿ ಕಾಡಿ ಶಿಕ್ಷಿಸುತ್ತಾನೆ. ಮನ್ಮಥನ ಈ ಸೂರೆಯ ಈ ಶಿಕ್ಷೆಯ ರೀತಿ ಅದೆಂತುಹುದೊ?

ಕವರ್ ಎಂದರೆ ಅಪಹರಿಸು; ಸೂರೆಗೊಳ್ಳು. 'ಕವರ್ದ' ವೆನ್ನುವುದು ಶುದ್ಧ ಕನ್ನಡ ಪದ ಕರ್ವುವಿಲ್ ಎಂದರೆ ಕಬ್ಬಿನ ಬಿಲ್ಲು ಮನ್ಮಥನ ಬಿಲ್ಲು. ಕರ್ವು ಎಂದರೆ ಕಬ್ಬು ಮನ್ಮಥನ ಶರಹತಿಯಿಂದ (ಮನ್ಮಥನ ಪಂಚಬಾಣಗಳಿಂದ) ಮನಸ್ಸು ಅಪಹೃತವಾಯಿತು.

## ೨೩೩. ಕವಿ

*ಲೋಕದೊಳದಜೆಂಕಾವ್ಯ*
*ಶ್ರೀಕರಣ ದೋದ್ದುಕ್ಷನಕ್ಕ ಕವಿ*
*ತನ್ನರಿವಂತಾಕಲ್ಪಂಕ ಸ್ಥಾಯಿಂ*
*'ಶ್ರೀ' ಕೀರ್ತಿ ವಧೂ "ಪ್ರಧಾನವಲ್ಲಭನಕ್ಕುಂ" (ಕವಿರಾಜ ಮಾರ್ಗ ೧-೨೧)*

ನಾಗವರ್ಮನು 'ಕಾವ್ಯಾವಲೋಕನದಲ್ಲಿ' ಕವಿಗಳ್ಗಿದು ಕಯ್ಗನ್ನಡಿ, ಕವಿತೆಗೆ ಬಾಳ್ಮೊದಲು, ವಾಗ್ದೇವತೆಗೆ ಉದ್ಭವ ಹೇತು ಎಂದು ಹೇಳಿಕೊಂಡಿದ್ದಾನೆ (೧-೪)

ಕಾವ್ಯದ ಅನುಭವವೆಂದು ಯಾವುದನ್ನು ನಾವು ಕರೆಯುತ್ತೇವೆ. ಆ ತರಹದ

ಅನುಭವಕ್ಕೆ ಕಾರಣವಾಗುವುದು ಕವಿಯ ಬರವಣಿಗೆಯಿಂದ. ಆದುದರಿಂದ ಕಾವ್ಯದ ಉಗಮಕ್ಕೆ ಜಗತ್ತು ಮೊದಲನೆಯ ಕಾರಣವಾದರೆ ಅದನ್ನು ಕಾವ್ಯದ ಜಗತ್ತಾಗಿ ಪರಿವರ್ತಿಸುವುದು ಕವಿಯ ಕೆಲಸ. ಜಗತ್ತನ್ನು ಕವಿಯು ಹೇಗೆ ನೋಡುತ್ತಾನೋ ಅದರಿಂದಾಗಿ ಕಾವ್ಯವು ರೂಪುಗೊಳ್ಳುತ್ತದೆ. ಜಗತ್ತಿನ ಜೊತೆಗೆ ಕವಿಯು ಇಟ್ಟುಕೊಳ್ಳುವ ಸಂಬಂಧದ ಒಟ್ಟು ರೂಪವೇ ಕಾವ್ಯದ ಅನುಭವವಾಗಿ ಪರಿವರ್ತಿತವಾಗುತ್ತದೆ. ಜಗತ್ತು ಕಾವ್ಯವಸ್ತುವಾಗಿ ಪರಿವರ್ತನೆಗೊಳ್ಳುತ್ತದೆ. ಈ ಪರಿವರ್ತನೆಗೆ ಮೂಲ ಕವಿಯ ಮನಸ್ಸು ಕವಿಯು ಸಮಾಜದೊಂದಿಗೆ ಇರಿಸಿಕೊಳ್ಳುವ ಸಂಬಂಧವು ಮೊದಲ ಹಂತವಾದರೆ; ಅದರಿಂದ ಕಾವ್ಯರಚಿಸುವುದು ಎರಡನೆಯ ಹಂತ. ಈ ಎರಡನೆಯ ಹಂತದಲ್ಲಿ ಕವಿಯ ಮನೋಸ್ಥಿತಿಯು ಮುಖ್ಯವಾದುದು ಇದರಿಂದ ರೂಪುಗೊಳ್ಳುವ ಅನುಭವವನ್ನು ಸಹೃದಯರು ಸ್ವೀಕರಿಸುವುದು ಮೂರನೆಯ ಹಂತ. ಮೂರನೆಯ ಹಂತವು ಕಾವ್ಯ ಪ್ರಕ್ರಿಯೆಯಲ್ಲಿ ಕೊನೆಯ ಹಂತವೂ ಆಗಿರುತ್ತದೆ. ಕಾವ್ಯವೆನ್ನುವುದು ಕವಿಯ ಆಂತರಿಕ ಮನೋಸ್ಥಿತಿಯ ಸೃಷ್ಟಿಯಾದರೂ ಈ ಸೃಷ್ಟಿಯು ಅನಂತರದಲ್ಲಿ ಸಹೃದಯನಿಗೆ ಅರ್ಥಪೂರ್ಣವಾದ ಪ್ರತಿಕ್ರಿಯೆಯನ್ನು ಕೊಡುವುದಕ್ಕೆ ಸಹಕಾರಿಯಾಗುತ್ತದೆ. ಕವಿತಾ ನೀತಿಯುತರ ಕೆಲೆ ಪರಮ ಕವಿ ವೃಷಭರ್ಕ್ಕಳ್" ಎಂದು ಕವಿರಾಜಮಾರ್ಗದಲ್ಲಿ ಬರುತ್ತದೆ. "ಕವಿಗಳು ಅನೇಕ ರೀತಿಯ ಪ್ರಯೋಗ ಪದ ಪದ್ಧತಿಯಲ್ಲಿ ಪರಿಣತರು" ಎಂದು ಅವನು ಕೊಂಡಾಡುತ್ತಾನೆ. (೧-೧೭; ೧-೧೯).

ಭಾರತೀಯ ಕಾವ್ಯ ಮೀಮಾಂಸಕಾರರು ಹೇಳಿರುವ ಪ್ರಮುಖ ಅಂಶಗಳೆಂದರೆ- ಕವಿಗಿರುವ ಪ್ರತಿಭೆಯ ಶಕ್ತಿ. ಇದು ಕಾವ್ಯದ ಮೂಲ, ಎರಡನೆಯದಾಗಿ ಕವಿಗಿರುವ ಸತತ ಅಭ್ಯಾಸದ ಶಕ್ತಿ. ಮೂರನೆಯದಾಗಿ, ಹಿರಿಯರ ಒಡನಾಟ ಇದನ್ನು ನಾಗವರ್ಮನು ವೃದ್ಧಸೇವಾನುರಾಗಂ ಎಂದು ಕರೆದಿದ್ದಾನೆ. ಈ ಅಂಶಗಳು ಕವಿಗಿರಬೇಕಾದ ಅಂಶಗಳು ಎಂಬುದರಲ್ಲಿ ಭಾರತೀಯ ಕಾವ್ಯಮೀಮಾಂಸಕಾರರಲ್ಲಿ ಭಿನ್ನಾಭಿಪ್ರಾಯವಿಲ್ಲ.

ಕವಿತೆಯಲ್ಲದ ವಿದಗ್ಧತೆಯ ಗುಣ ಮನವನ್ನು ತೃಪ್ತಿಪಡಿಸಲಾರರು ಎಂದು ನಾಗವರ್ಮನು ಹೇಳುತ್ತಾನೆ. (ದ್ವಿತೀಯಾಧಿಕರಣಂ ೪೨೬ ಕಾವ್ಯಾವಲೋಕನ)

**೨೩೪. ಕಷಾಯ**

*ಕುಳ ಕಳರವದೊಳಂ ಕಮಳ ಕುವಳಯ ರಜಃ* ***ಕಷಾಯ*** *ಪರಿಮಳದಳಿಪಟಳ.*

*(ಪಂಪ ಭಾರತ ೮-೩೭ ವ)*

ಅಯ್ದು ಜನವೂ ಆಶ್ಚರ್ಯಪಟ್ಟು ಸೂರ್ಯನ ಬಿಸಿಲಿನ ಬೇಗೆಯಿಂದ ಸುಡಲ್ಪಟ್ಟ ಶರೀರವುಳ್ಳವರಾಗಿ ಒಂದು ಆಲದಮರದ ಕೆಳಗೆ ವಿಶ್ರಮಿಸಿಕೊಂಡರು. ಧರ್ಮರಾಜನು ಬಾಯಾರಿ ಸಹದೇವನನ್ನು ಎಲ್ಲಿಂದಲಾದರೂ ಬೇಗ ನೀರನ್ನು ತೆಗೆದುಕೊಂಡು ಬಾ ಎಂದು ಹೇಳಿದನು. ಹಾಗೆಯೇ ಮಾಡುತ್ತೇನೆ ಎಂದು ಶಬ್ದ ಮಾಡುತ್ತಿರುವ ಜಲಚರ ಪ್ರಾಣಿಗಳ ಕಲಕಲ ಶಬ್ದದಿಂದಲೂ ಕಮಲ ಕನ್ನೈದಿಲೆಗಳ ಧೂಳಿನ ಒಗರಿನಿಂದ

ಕೂಡಿದ ದುಂಬಿಗಳ ಸಮೂಹದಿಂದ ವ್ಯಾಪ್ತವಾಗಿ ಬಂದು ಬೀಸುವ ಮಂದ ಮಾರುತದಿಂದಲೂ ನೀರಿರುವ ಸ್ಥಳವನ್ನು ತಿಳಿದು ಆ ಕಡೆ ಹೋದನು.

ಕಷಾಯವೆಂದರೆ ಮಾಲಿನ್ಯ; ಕದಡುವಿಕೆಯೆಂದು ಅರ್ಥ. ಮನಃಕಷಾಯವೆಂದರೆ ಮನೋಕ್ಲೇಶ. ದೇಹ ಕಷಾಯವೆಂದರೆ ದೈಹಿಕ ಅನಾರೋಗ್ಯ. ಕಷಾಯವೆಂಬುದಕ್ಕೆ ಸಂಸ್ಕೃತದಲ್ಲಿ ಅನೇಕ ಅರ್ಥಗಳಿವೆ. ೧) ಕಷಾಯರಸ – ಆರುಭೋಜ್ಯರಸಗಳಲ್ಲಿ ಒಂದು. ಪೃಥ್ವಿ, ವಾಯು ಗುಣದಿಂದ ಇದರ ಉತ್ಪತ್ತಿ ೨) ಲೇಪನಕ್ಕೆ ಸಂಬಂಧಿಸಿದ್ದು. ೩) ವಿಲೇಪನ. ೪) ಮೈಗೆ ಸುವಾಸನೆಯ ಪುಡಿಯನ್ನು ಹಾಕುವಿಕೆ ೫) ಸುವಾಸನೆ. ೬) ಕೆಂಪು. ೭) ಪ್ರೇಮ. ೮) ಔಷಧಿ ವಸ್ತುವಿನೊಡನೆ ಕುದಿಯಿಸಿ ಇಂಗಿಸಿದ ರಸ.

*ವಿವರಗಳಿಗೆ ನೋಡಿ: ಡಾ. ಟಿ.ವಿ.ವೆಂಕಟಾಚಲಶಾಸ್ತ್ರೀ ೧೯೯೯ ಶ್ರೀವತ್ಸ ನಿಘಂಟು ಪುಟ. ೯೬*
*ಜಿ.ಎನ್. ಚಕ್ರವರ್ತಿ ೨೦೦೯ ಸಂಸ್ಕೃತ-ಕನ್ನಡ ನಿಘಂಟು.*

**೨೩೫. ಕಷಾಯ ಚತುಷ್ಟಯ**

*ಕಷ್ಟತರಮಂ* ***ಕಷಾಯಚ***
***ತುಷ್ಟಯ****ದೆಡೆಗಿಡಿಸಿ ದೇವ ಕಿಡಿಸಿಯೆ ಭವಚಾ*
*ತುಷ್ಟಯಮನಿನ್ನ ನಂತಚ*
*ತುಷ್ಟಯಮಂ ಪೊರ್ದು ಪೊರ್ದದಿರು ಸಂಸೃತಿಯಂ*

*(ಅಜಿತತೀರ್ಥಂಕರ ಪುರಾಣ ತಿಲಕಂ ೬. ೭೩)*

ಕ್ರೋಧ, ಮಾನ, ಮಾಯಾ, ಲೋಭಗಳು ನಾಲ್ಕು ರೀತಿಯ ಕಷಾಯಗಳು. ಇವು ಮನುಷ್ಯರಿಗೆ ಸುಖ ದುಃಖಗಳನ್ನು ಉಂಟು ಮಾಡುತ್ತವೆಯೆಂದು ಜೈನಧರ್ಮವು ನಂಬುತ್ತದೆ. ದೇವ, ಮನುಷ್ಯ, ತಿರ್ಯಕ್(ಪ್ರಾಣಿ ಜನ್ಮ) ನರಕ ಎಂಬ ನಾಲ್ಕು ಬಗೆ ಭವಗಳನ್ನು ಭವಚತುಷ್ಟಯವೆಂದು ಕರೆಯುತ್ತಾರೆ.

**೨೩೬. ಕಳ್ಳರು**

*ವಡ್ಡಾರಾಧನೆಯ ವಿದ್ಯುಚ್ಚೋರರಿಸಿಯ ಕತೆಯಲ್ಲಿ ವಿದ್ಯುಚ್ಚೋರನೆಂಬ ಕಳ್ಳನು ಜೃಂಭಿನಿ, ಸ್ತಂಭಿನಿ, ಮೋಹಿನಿ, ಸರ್ಷಪಿ, ತಾಳೋದ್ಘಾಟಿಸಿ, ವಿದ್ಯಾಮಂತ್ರ, ಚೂರ್ಣ ಯೋಗ; ಘಟಿಕಾಂಜನ ಬಳಸಿದ ವಿಚಾರ ಬರುತ್ತದೆ.*

*(ಡಿ.ಎಲ್. ನರಸಿಂಹಾಚಾರ್ ೨೦೦೯ ಪುಟ. ೧೬೬)*

ಶ್ರೀಮಂತಿಕೆ ಮತ್ತು ಬಡತನದ ನಡುವೆ ತಾರತಮ್ಯ ಏರ್ಪಟ್ಟಾಗ ಕಳ್ಳರ ವರ್ಗ ಸೃಷ್ಟಿಯಾಗುತ್ತದೆ. ಕಳ್ಳತನವು ಎರಡು ರೀತಿಯಲ್ಲಿರುತ್ತವೆ: ಒಂದು ತಿಳಿಯದಂತೆ ಅಪಹರಿಸುವುದು ಮತ್ತು ಬಲಾತ್ಕಾರದ ಮೂಲಕ ಅಪಹರಿಸುವುದು. ತುರುಗೋಳು ಬಲಾತ್ಕಾರದ ಅಪಹರಣ. ಆದರೆ ಕಳ್ಳತನವು ಸಾಮಾಜಿಕ ಅಪರಾಧವೆಂದು ಪರಿಗಣಿಸಲ್ಪಟ್ಟಿದೆ. ಕಳ್ಳತನ ಮಾಡಿ ಬದುಕುವ ಜನಾಂಗಗಳು ಭಾರತದಲ್ಲಿವೆ. ಅಂಥ

ಜನಾಂಗಗಳನ್ನು ಅಪರಾಧಿ ಜನಾಂಗಗಳೆಂದು ಕರೆಯುತ್ತಾರೆ. (ನೋಡಿ : ಅಂಜನ)

**೨೩೭. ಕಾನೀನ**

"**ಕಾನೀನಂ** *ಬಂದೆತ್ತಿ ಬಿಲ್ಲನೇಱಿಸಿ ತೆಗೆಯಲ್" (ಪಂಪ ಭಾರತ ೩-೬೦)*

ಕಾನೀನನೆಂದರೆ ಕನ್ಯೆಯಲ್ಲಿ ಹುಟ್ಟಿದವನು. ಕರ್ಣನನ್ನು 'ಕಾನೀನ'ನೆಂದು ಕರೆಯುತ್ತಾರೆ.

ಮಹಾಭಾರತದಲ್ಲಿ 'ಕಾನೀನ' ಎಂದು ಕರ್ಣನನ್ನು ಗುರುತಿಸಲಾಗಿದೆ. ಕುಂತಿಯು ಕನ್ಯೆಯಾಗಿದ್ದಾಗ

ಹುಟ್ಟಿದವನು ಕರ್ಣ. ಆದುದರಿಂದ ಅವನಿಗೆ ಆ ಹೆಸರು ಬಂತು.

**ಕಾನೀನಂ** ದ್ರೋಣ ನದೀ
ಸೂನುಗಳಱಿದಿಂಬ‌ಟಿಕ್ಕೆ ಪೆಱರೆನಗಿಲ್ಲೆಂ ॥
ದಾನೆ ಗಳಿತಾಶ್ರುಜಲದಿಂ
ಸೇನಾಪತ್ಯಾಭೀಷೇಕಮಂ ಮಾಡಿದಪೆಂ ॥ (ಸಾಹಸ ಭೀಮ ವಿಜಯ ೩-೬೬)

ಇಲ್ಲಿಯೂ ಕಾನೀನ ಎಂದರೆ ಕರ್ಣನೆಂದೇ ಅರ್ಥ.

ಕನ್ನೆತನದಲ್ಲಿ ಮಗುವನ್ನು ಹೆರುವುದು ನೈತಿಕವಾಗಿ ಸರಿಯಲ್ಲ. ಕನ್ಯತ್ವವು ಪವಿತ್ರವೆಂದು ನಂಬಿಕೆಯಿರುವುದು ಇದಕ್ಕೆ ಪೂರಕವಾಗಿದೆ. ಎರಡನೆಯದಾಗಿ ಕನ್ಯತ್ವದಲ್ಲಿ ಹೆತ್ತ ಮಗನಿಗೂ ಸಮಾಜದಲ್ಲಿ ಹೆಚ್ಚಿನ ಸ್ಥಾನಮಾನಗಳು ಕಲ್ಪಿತವಾಗಿರಲಿಲ್ಲ. ಕಾನೀನದ ಪರಿಕಲ್ಪನೆಯು ಋಗ್ವೇದಲ್ಲಿಯೂ ಬರುತ್ತದೆ. ಕನ್ಯೆಯೆಂದರೆ ಯೋನಿಚ್ಛದವಾಗದವಳು. ಅಂದರೆ ಯೋನಿಪೊರೆ ಕಳಚುವುದು ಸಂಭೋಗದಿಂದ. ಆದುದರಿಂದ ಕನ್ಯೆಗೆ ಅಕ್ಷತಕನ್ಯೆ (ತುಂಡಾಗದ=ಅಕ್ಷತ) ಎಂದೂ ಹೇಳುತ್ತಾರೆ.

ಪಾರಂಪರಿಕವಾಗಿ ಮಕ್ಕಳನ್ನು ಈ ರೀತಿ ಪಡೆಯ ಬಹುದೆಂದು ಸೂಚಿಸಲಾಗಿದೆ.

೧. ಧರ್ಮಜ ಮಗ – ಸಫಲ ದಾಂಪತ್ಯದಲ್ಲಿ ಹುಟ್ಟಿದವನು.
೨. ಕ್ಷೇತ್ರಜ – ಗಂಡನ ಸಮ್ಮತಿಯಿಂದ ತನ್ನ ಪತ್ನಿಯಲ್ಲಿ ಇನ್ನೊಬ್ಬ ಮಗನಿಂದ ಹುಟ್ಟಿದವನು.
೩. ಗಂಧಜ – ಗೋಪ್ಯವಾಗಿ ಹೆಂಡತಿಯು ಸಾಕಿದ ಮಗ.
೪. ಕಾನೀನ – ಅವಿವಾಹಿತ ಹುಡುಗಿಗೆ ಗೋಪ್ಯವಾಗಿ ಹುಟ್ಟಿದ ಮಗ.
೫. ಪುರಿಕಾ – ದತ್ತಕ್ಕೆ ಪಡೆಯಲ್ಪಟ್ಟ ಮಗಳ.
೬. ಸಹೋಧಜ–ವಿವಾಹಕಾಲದಲ್ಲಿ ಗರ್ಭಿಣಿಯಾಗಿರುವ ಹೆಂಗಸಿಗೆ ಹುಟ್ಟಿದ ಮಗ.
೭. ದತ್ತಕ – ದತ್ತಕ್ಕೆ ಪಡೆಯಲ್ಪಟ್ಟ ಮಗ.
೮. ಕರತ – ಖರೀದಿ ಮಾಡಲ್ಪಟ್ಟ ಮಗ.
೯. ಅನಾಥ ಮಗ.
೧೦. ಸ್ವಯಂದತ್ತ ಪರಿತ್ಯಜಿತನಾದ ಮಗನು ತನ್ನನ್ನು ತಾನು ಇನ್ನೊಬ್ಬನಿಗೆ ಅರ್ಪಿಸಿ ಮಗನಾದುದು.

೧೧. ಪುನರ್ಭವ – ಪುನರ್ವಿವಾಹಿತಳಾದ ಹೆಂಗಸಿನ ಮಗ.
೧೨. ಅಪವಿಧ – ಒಬ್ಬ ವ್ಯಕ್ತಿಯ ಮುಂದೆ ಬಂದು ಪರಿತ್ಯಕ್ತ ಮಗನನ್ನು ಸ್ವೀಕರಿಸುವುದು.
೧೩. ಬ್ರಾಹ್ಮಣ ಗಂಡನಿಂದ ಶೂದ್ರ ಹೆಂಡತಿಯಲ್ಲಿ ಹುಟ್ಟಿರುವ ಮಗ – ನಿಷಾದ.

*ವಿವರಗಳಿಗೆ ನೋಡಿ: ಶೇಷ ನವರತ್ನ ೨೦೦೮ ಋಗ್ವೇದ ಒಂದು ಅಧ್ಯಯನ.*

**೨೩೮. ಕಾಯಪ್ರವೀಚಾರ**

*ಮಾಸನಿರ್ಯತ್ಸುರಭಿನಿಶ್ವಾಸನುಂ* ***ಕಾಯಪ್ರವೀಚಾರನುಂ*** *ಅಪರಿಮ್ಲಾನಸುರತರುಪ್ರಸ್ವಯಂ ಕಾಯಪ್ರವೀಚಾರ (ಆದಿಪುರಾಣ ೨-೬೯ ವ)*

ಈಶಾನಕಲ್ಪದವರೆಗಿನ ಅಮರರು ಶಾರೀರಿಕವಾಗಿ ಮೈಥುನದ ಸುಖಾನುಭವ ಮಾಡುವರು; ಮೇಲಣ ಕಲ್ಪಗಳ ಅಮರರು ಮನಃಪ್ರವೀಚಾರ (ಮನಸ್ಸಿನಿಂದ ಮೈಥುನಸುಖಾನುಭವ) ಉಳ್ಳವರು.

ಕಾಯ ಪ್ರವೀಚಾರ ಪರಿಕಲ್ಪನೆಯ ಬಗ್ಗೆ ಜೈನಾಗಮಗಳಿಗೆ ಅಷ್ಟೊಂದು ಆಸಕ್ತಿಯಿಲ್ಲ, ಯಾಕೆಂದರೆ ಕಾಯ(ದೇಹ)ಪ್ರವೀಚಾರ (ಚಿಂತನೆ) ಅನ್ನುವುದು ಸುಖಾನುಭವದ ಕುರಿತು ಹೇಳುತ್ತದೆ. ಮೂಲತಃ ಜೈನಧರ್ಮ ದೇಹವಾದಿ ಚಿಂತನೆಯನ್ನು ಮಂಡಿಸುವುದಿಲ್ಲ. ಅದರ ದೃಷ್ಟಿಯು ಸಂಪೂರ್ಣ ಆಧ್ಯಾತ್ಮದ ತಳಹದಿಯಿಂದ ರೂಪುಗೊಂಡಿರುವಂಥದ್ದು.

ದೇಹದ ಕುರಿತಂತೆ ಎರಡು ವಾದಗಳಿವೆ: ಒಂದು ದೇಹದ ಮೂಲಕ ಆಧ್ಯಾತ್ಮಕ್ಕೇರುವುದು. ಇದರಲ್ಲಿ ದೇಹವು ಒಂದು ಮಾಧ್ಯಮ. ಬಸವಣ್ಣನವರ ದೇಹವೇ ದೇಗುಲ....... ವಚನವನ್ನು ನೆನಪಿಸಿಕೊಳ್ಳಬಹುದು. ಇನ್ನೊಂದು ದೇಹದ ಚಿಂತನೆಯನ್ನು ಬಿಟ್ಟು ಆಧ್ಯಾತ್ಮವನ್ನು ಯೋಚಿಸುವುದು. ಜೈನಧರ್ಮದ ಪ್ರಧಾನ ನೆಲೆಯಿರುವುದು ಇಲ್ಲಿ.

**೨೩೯. ಕಾರ್ಮುಕ**

*ಕಾಳವಟ್ಟ* ***ಕಾರ್ಮುಕನುಂ*** *ಕಾರ್ಮುಕಗುರುಶಿಷ್ಯನುಂ*
*ಜಾಮದಗ್ನ ಶಿಷ್ಯನುಂ ಸಹಜಕವಚಾಲಂಕೃತಶರೀರನುಂ ಮದಗಜಲಕ್ಷಣ ಧ್ವಜನುಂ*
*(ಸಾಹಸ ಭೀಮ ವಿಜಯ ೨-೧೦ವ)*

ಕಾರ್ಮುಕ ಎಂದರೆ ಬಿಲ್ಲು. ಕರ್ಣನ ಬಿಲ್ಲಿನ ಹೆಸರು ಕಾಳವಟ್ಟ. ಕಾರ್ಮುಕ ಗುರುವೆಂದರೆ ಧನುರ್ವಿದ್ಯಾ ಗುರು ಮರುಣಪ್ರಸಂಗದಿಂದಲೂ; ಸೂರ್ಯಪುತ್ರನೂ, ರಾಧೆಯ ಆರೈಕೆಯಲ್ಲಿ ಬೆಳೆದವನೂ, ಅಂಗದೇಶದ ಅರಸನೂ ಜನ್ಮತಃ ಶೂರನೂ, ಕಾಳವಟ್ಟವೆಂಬ ಬಿಲ್ಲನ್ನು ಉಳ್ಳವನೂ, ಧನುರ್ವಿದ್ಯಾ ಗುರುವಿನ ಪರಮ ಶಿಷ್ಯನೂ, ಪರಶುರಾಮನ ಶಿಷ್ಯನೂ, ಜನ್ಮಜಾತವಾಗಿಯೆ ಕವಚ ಧರಿಸಿದವನು ಮದಗಜದ ಲಕ್ಷಣ ಹೊಂದಿದ ಧ್ವಜ ಇರುವವನೂ ಆದ ಕರ್ಣನ ಕುರಿತಾದ ವರ್ಣನೆ ಇದು. ಜಾಮದಗ್ನ್ಯ=ಜಮದಗ್ನಿಯ ಮಗ ಪರಶುರಾಮ.

೨೪೦. ಕಾರ್ಯ

ಬುದ್ಧಿವಂತನಪ್ಪುದಜೆಂ ತನ್ನ **ಕಾರ್ಯ**ವನೆ ಮಾಡಿಕೊಳ್ವುದು ; ತನ್ನ ಕಾರ್ಯವಂ ಕೆಡಿಸುವುದೆ ಮೂರ್ಖತೆ

ತನ್ನ ಕಾರ್ಯವನ್ನು ಕೆಡಿಸಿಕೊಳ್ಳುವುದು ಮೂರ್ಖತನ. ಬುದ್ಧಿವಂತನಾದವನು ತನ್ನ ಕಾರ್ಯವನ್ನು ತಾನೇ ನಡೆಯಿಸಿಕೊಳ್ಳುತ್ತಾನೆ.

(ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ, ಶ್ಲೋಕ ೭೧)

ಬುದ್ಧಿವಂತರ ಕಾರ್ಯವು ಅವರ ವಿವೇಚನೆಯ ಶಕ್ತಿಯಿಂದ ಹುಟ್ಟಿಕೊಳ್ಳುತ್ತದೆ. ಕಾರ್ಯವೆಂದರೆ ವೃತ್ತಿ. ಪರಿಣಾಮ, ಆರಂಭ, ವಿವರ್ತ. ಇನ್ನೊಂದು ಕಾರ್ಯಗಳು ಒಟ್ಟು ಹದಿನಾರು ರೀತಿಯವು. ಅಂತಃಕರಣ, ದಶೇಂದ್ರಿಯಗಳು. ಪಂಚವಿಷಯಗಳು.

*ವಿವರಗಳಿಗೆ ನೋಡಿ: ಡಾ. ಟಿ.ವಿ.ವೆಂಕಟಾಚಲಶಾಸ್ತ್ರೀ ೧೯೯೯ ಶ್ರೀವತ್ಸ ನಿಘಂಟು ಪುಟ. ೧೦೦*

೨೪೧. ಕಾರ್ಯ-ಕಾರಣ

ಅದಲ್ಲದೆಯುಂ **ಕಾರ್ಯಂಗಳ್ ಕಾರಣ**ಗುಣಯೋಗಂಗಳದುವಲಮಾಯುರ್ವೇದ ದೊಳಮಲ್ಪಸಾರಸ್ತ್ರೀವೀರ್ಯದೊಳಲ್ಪಾಯುವಪ್ಪನೆಂಬುದಜೆನೀತಂಗಿಂತಪ್ಪ ಕಾಮಪರವಶತೆಯುಂ ಮದನಜ್ವರಸಂತಾಪ ಮರಣಮುಮಾದುದು

(ಕರ್ಣಾಟಕ ಕಾದಂಬರಿ, ೧೦-೯ ವ.)

ಅದಲ್ಲದೆ ಕಾರಣಗುಣಗಳು ಕಾರ್ಯದಲ್ಲಿ ಸೇರಿಕೊಂಡೇ ಇರುತ್ತವೆ (ಕಾರಣಗುಣಾಃ ಕಾರ್ಯೇ ಸಂಕ್ರಾಮತಿ) ಆಯುರ್ವೇದದಲ್ಲಿಯೂ ಅಲ್ಪಸಾರವುಳ್ಳ ಸ್ತ್ರೀವೀರ್ಯದಿಂದ ಹುಟ್ಟಿದವನು ಅಲ್ಪಾಯುವಾಗಿರುತ್ತಾನೆಂದು ಹೇಳಿದೆ. ಅದರಿಂದ ಇವನಿಗೆ ಇಂತಹ ಕಾಮಪರವಶತೆಯೂ ಕಾಮಜ್ವರ ಸಂತಾಪದಿಂದ ಮರಣವೂ ಉಂಟಾಯಿತು. ಕಾರ್ಯ-ಕಾರಣ ವಿವೇಚನೆ ಇಲ್ಲಿ ಮುಖ್ಯ.

ಘಟನೆಯೊಂದಕ್ಕೆ ಬದಲಾವಣೆಯಾಗಲಾರದ ಕಾರಣವಾಗಲಿ ಫಲವಾಗಲಿ ಇದೆಯೆಂದು ಚಾರ್ವಾಕರು ನಂಬುವುದಿಲ್ಲ. ಎರಡು ವಿಷಯಗಳು ಇಂದ್ರಿಯಾನುಭವಕ್ಕೆ ಬಂದ ಮಾತ್ರವೇ ಅವೆರಡೂ ಕಾರ್ಯಕಾರಣ ಸಂಬಂಧ ಹೊಂದಿವೆಯೆಂದು ನಿರ್ಣಯಿಸಲು ಅವಕಾಶವಿಲ್ಲ. ಧೂಮಾಗ್ನಿಗಳೆರಡನ್ನೂ ನಾವು ಕಾಣುತ್ತೇವೆ: ಅಗ್ನಿಯೇ ಧೂಮಕ್ಕೆ ಕಾರಣವೆಂದು ಹೇಳುವುದು ಹೇಗೆ? ಅಥವಾ ಬೇರೆ ರೀತಿಯಲ್ಲಿ ಹೇಳಬಹು ದಾದರೆ, "ಹೊಗೆ ಇದ್ದಲ್ಲಿ ಬೆಂಕಿಯೂ ಇರುವುದು ಅನಿವಾರ್ಯ: ಹಾಗೆನ್ನುವುದಕ್ಕೆ ಯಾವ ಷರತ್ತುಗಳನ್ನೂ ಹಾಕಬೇಕಾಗಿಲ್ಲ: ನಾವು ಹುಟ್ಟುವುದಕ್ಕಿಂತ ಮುಂಚೆಯೂ ಅದು ಹಾಗೇ ಇತ್ತು. ನಾವು ಸತ್ತಮೇಲೂ ಹಾಗೇ ಇರುತ್ತದೆ," ಎನ್ನುವುದು ಹೇಗೆ? ಇಂಥ ಅಭಿಪ್ರಾಯಕ್ಕೆ ಅನುಮಾನವೇ ಆಧಾರ: ಆದ್ದರಿಂದ ಅದು ಅನಿಶ್ಚಿತವಾದದ್ದು, ತ್ಯಾಜ್ಯ, ಯಾವ ಘಟನೆಯ ವಿಷಯದಲ್ಲಾಗಲಿ 'ಇದು ಏತಕ್ಕಾಯಿತು' ಎಂಬ ಪ್ರಶ್ನೆ ಬಂದರೆ ಚಾರ್ವಾಕರು "ಪ್ರತಿಯೊಂದು ಘಟನೆಯೂ ತಾನಾಗಿಯೇ ಘಟಿಸುತ್ತದೆ.

ಅಥವಾ ಆಕಸ್ಮಿಕವಾಗಿ ಘಟಿಸುತ್ತದೆ" ಎಂದು ಉತ್ತರಕೊಡುತ್ತಾರೆ. ಮುಳ್ಳುಗಳ ಮೊನಚು, ಮೃಗಪಕ್ಷಿಗಳ ವಿಧವಿಧವಾದ ಹುಟ್ಟುಗುಣಗಳು, ಕಬ್ಬಿನ ಸಿಹಿ, ಬೇವಿನ ಕಹಿ – ಇವೆಲ್ಲಾ ಆಕಸ್ಮಿಕ ಫಲ ಅಥವಾ ತಾವಾಗಿಯೇ ಉದ್ಭವಿಸಿದ್ದು. ಅವು ಅತೀಂದ್ರಿಯನಾದ 'ದೇವರು' ಎಂಬ ಹೆಸರಿನ ವ್ಯಕ್ತಿಯಿಂದಾದ ಸೃಷ್ಟಿಯಲ್ಲ. ಈ ವಿಶಾಲ ವಿಶ್ವ ಹುಟ್ಟಿದ್ದೂ ಆಕಸ್ಮಿಕ ಘಟನೆ. ಭೌತವಸ್ತುವಿನ ಮೂಲಕಣಗಳು ಆಕಸ್ಮಾತ್ ಸೇರಿದ್ದರಿಂದ ಅದು ಉದಿಸಿಬಂತು. ಈ ಸಿದ್ಧಾಂತವನ್ನು 'ಯದೃಚ್ಛಾವಾದ' (ಆಕಸ್ಮಿಕ ಕಾರಣವಾದ) ಎಂದು ಕರೆಯಲಾಗಿದೆ. ಚಾರ್ವಾಕರಲ್ಲಿ ಮಿತವಾದಿಗಳಾದವರು ಇಂದ್ರಿಯಾನುಭವದ ಪ್ರಪಂಚವೆಲ್ಲದರ ಹಿಂದಿದ್ದು ಅದನ್ನು ನಡೆಸುವ ತತ್ವವು 'ಸ್ವಭಾವ' ಎನ್ನುತ್ತಾರೆ. ಆದ್ದರಿಂದ 'ಪ್ರಕೃತ್ಯತೀತವಾದ, ಬುದ್ಧಿಶಕ್ತಿಯುಳ್ಳ ವ್ಯಕ್ತಿಯೇ ಎಲ್ಲಕ್ಕೂ ಪರಮಕಾರಣ ಎಂಬ ಭಾವನೆ ಅನಾವಶ್ಯಕ. ಈ ಸಿದ್ಧಾಂತಕ್ಕೆ 'ಸ್ವಭಾವವಾದ' ಎಂಬ ಹೆಸರು ಬಂದಿದೆ. ಚಾರ್ವಾಕರ ನಿಲುವು ಇದು. ಅವರ ವಾದವು ಈ ಕೆಳಗಿನಂತಿದೆ.

ಕಾರ್ಯ ಮತ್ತು ಕಾರಣದ ನಡುವೆ ದ್ವಂದ್ವಾತ್ಮಕ ಸಂಬಂಧವಿದೆ. ಇದನ್ನು ಚಾರ್ವಾಕ ಮತವು ಎತ್ತಿಹಿಡಿಯುತ್ತದೆ. ಕಾರಣವಿಲ್ಲದೆ ಯಾವುದೇ ಕಾರ್ಯವು ಜರುಗುವುದಿಲ್ಲ. ಅದಕ್ಕೆ ಆಂತರಿಕ ಸಂಬಂಧಗಳಿವೆ. ಆದುದರಿಂದ ಚಾರ್ವಾಕ ಮತವು ಆಧ್ಯಾತ್ಮಿಕವಾದಿಗಳು ಹೇಳುವ ಮೂರ್ತ–ಅಮೂರ್ತವನ್ನು ನಿರಾಕರಿಸುತ್ತದೆ. ಪರಮಾತ್ಮ ಅಮೂರ್ತ ಎಂಬುದನ್ನು ಚಾರ್ವಾಕ ಮತ ನಂಬುವುದಿಲ್ಲ. ಇದಕ್ಕೆ ಪೂರಕವಾಗಿ ಚಾರ್ವಾಕ ಮತವು ಕಾರ್ಯ ಕಾರಣ ಸಂಬಂಧವನ್ನು ಕುರಿತು ಹೇಳುತ್ತದೆ. ಗಂಡು–ಹೆಣ್ಣಿನ ಸಂಯೋಗ ದಿಂದ ಮಗು ಹುಟ್ಟುತ್ತದೆ. ಇಲ್ಲಿ 'ಸಂಯೋಗ' ಕಾರ್ಯ ಸಂತಾನ; ಲೈಂಗಿಕಾಸಕ್ತಿಗಳು ಕಾರಣಗಳು. ಇವನ್ನು ಅಮೂರ್ತವೆಂದು ಕರೆಯುವಂತಿಲ್ಲ.

"ಚಾರ್ವಾಕ ಮತವು ಭೂಮಿ, ಜಲ, ತೇಜಸ್ಸು ಮತ್ತು ವಾಯುಗಳನ್ನು ಮಾತ್ರ ಮೂಲ ತತ್ವಗಳೆನ್ನುತ್ತದೆ. ಇತರರು ಅಂಗೀಕರಿಸುವ ಪಂಚಭೂತಗಳ ತತ್ವ ಅವರಿಗೆ ಮಾನ್ಯವಿಲ್ಲ. ಆವರಣದ ಅಭಾವವಾಗಿರುವ ಆಕಾಶವು ಶುದ್ಧ ಸೊನ್ನೆ. ಅದನ್ನು ಇರುವ ಪದಾರ್ಥವೆಂದು ಅಂಗೀಕರಿಸಲು ಅವರು ಒಪ್ಪುವುದಿಲ್ಲ. ನಾಲ್ಕು ತತ್ವಗಳೇ ಜಗತ್ತಿನ ಮೂಲ ಕಾರಣಗಳು. ಹೊರಗೆ ಕಾಣುವ ಜಗತ್ತು, ಇಂದ್ರಿಯಗಳು, ಶರೀರ ಮುಂತಾದವುಗಳೆಲ್ಲ ಈ ನಾಲ್ಕು ಭೂತಗಳ ವಿಭಿನ್ನ ಮಿಶ್ರಣಗಳೇ ಆಗಿವೆ.

ಅಗ್ನಿಯು ಉಷ್ಣ, ಜಲವು ಶೀತ; ಸಮಶೀತೋಷ್ಣವುಳ್ಳದ್ದು ಗಾಳಿ. ಇದೆಲ್ಲ ಯಾರಿಂದಾಯಿತು?

ಆದ್ದರಿಂದ ಸ್ವಭಾವದಿಂದಲೇ ಇರುವಿಕೆಯೆಲ್ಲವೂ ಆಗಿದೆ." ಇದು ಚಾರ್ವಾಕರ ವಾದ.

ಬೌದ್ಧಮತ ಸೃಷ್ಟಿ ನಿಯಮದ ವಿಶ್ವವ್ಯಾಪಕತೆಯನ್ನೂ ಕಠೋರತೆಯನ್ನೂ ಒತ್ತಿ ಹೇಳಿದೆ. ಪ್ರತಿಪಕ್ಷಗಳ ನಿತ್ಯತಾವಾದವನ್ನೂ ನಾಸ್ತಿಕವಾದವನ್ನೂ ಬುದ್ಧನು ತಿರಸ್ಕರಿಸಿದನು. ಆದರೆ ಆ ಸೂತ್ರವನ್ನು ನೈತಿಕ ಹೊಣೆಗಾರಿಕೆಯ ಸಂದರ್ಭಕ್ಕೆ ವಿಶೇಷವಾಗಿ

ಅನ್ವಯಿಸಿದನು. ಪದಾರ್ಥಗಳು ಆಕಸ್ಮಿಕವಾಗಿಯಾಗಲೀ ಅದೃಷ್ಟದ ಕಾರಣದಿಂದಾಗಲೀ ಅಥವಾ ಈಶ್ವರನಿಂದಾಗಲೀ ಆಗುವುದಿಲ್ಲ. ಹಾಗೆಯೇ ಅವು ಬದಲಾಗದೆ ಇರುವುವೂ ಅಲ್ಲ. ನಾವು ಮಾಡಿದ ಮತ್ತು ಮಾಡುವ ಕರ್ಮ ಪ್ರಪಂಚವನ್ನು ರೂಪಿಸುತ್ತದೆ ಮತ್ತು ಲೋಕದ ವೈಚಿತ್ರ್ಯಕ್ಕೆ ಕಾರಣವಾಗಿದೆ. ಬೌದ್ಧಧರ್ಮದಲ್ಲಿ ಕಾರ್ಯಕಾರಣ ನಿಯಮ ನಾವು ಕಂಡಂತೆ ಕ್ಷಣಿಕತ್ವ ನಿದ್ರವ್ಯತ್ವ ಮತ್ತು ಸ್ವಲಕ್ಷಣತ್ವವನ್ನು ಸೂಚಿಸುತ್ತದೆ. ಅದು ಅಸ್ತಿತ್ವದ ಮೂರು ಹಂತಗಳಲ್ಲಿಯೂ ಸತತವಾಗಿಯೂ ನಿರ್ದಾಕ್ಷಿಣ್ಯವಾಗಿಯೂ ಪ್ರವರ್ತಿಸುತ್ತದೆ. ಇವುಗಳ ವ್ಯಾಪ್ತಿಯಿಂದ ಅಸಂಸ್ಕೃತಗಳು ಮಾತ್ರ ಹೊರಗಿವೆ. ಸಂಸ್ಕೃತ ವಾದುದೂ ಸಹ ಒಂದೇ ಒಂದು ಕಾರಣದಿಂದ ಹುಟ್ಟಲಾರದೆಂದೂ ಅದಕ್ಕೆ ಪ್ರತಿಯಾಗಿ ಅನೇಕ ಕಾರಣಗಳ ಸಮೂಹದಿಂದಾಗುವುದೆಂದೂ ಕಾರ್ಯವು ಕಾರಣದಿಂದ ಭಿನ್ನವಾಗಿರುವುದೆಂಬುದೂ ಕಡ್ಡಾಯವಾದ ವಿಷಯ.

ಮಾಂಡೂಕ್ಯ ಉಪನಿಷತ್ತಿನಲ್ಲಿ 'ಕಾರಣವು ಅಸತ್ತು, ಕಾರ್ಯವು ಅಸತ್ತು: ಕಾರಣವು ಅಸತ್ತು; ಕಾರ್ಯವೂ ಸತ್ತು, ಕಾರಣವೂ ಸತ್ತು, ಕಾರ್ಯವೂ ಅಸತ್ತು ಎಂದು ಬರುತ್ತದೆ.

*ವಿವರಗಳಿಗೆ ನೋಡಿ: ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦*

*ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ ಪುಟ. ೧೩೪, ೨೦೩*

*ಸ್ವಾಮಿ ಆದಿದೇವಾನಂದ ೨೦೦೭ ಮಾಂಡೂಕ್ಯ ಉಪನಿಷತ್ತು*

*ಪ್ರಭಾಕರ ಜೋಶಿ ಎಂ. ೨೦೦೮ ಭಾರತೀಯ ತತ್ವಶಾಸ್ತ್ರದ ರೂಪುರೇಷೆಗಳು ಪುಟ. ೨೧-೨೨.*

### ೨೪೨. ಕಾಲ

ಕಾಲ- ಪದಾರ್ಥಗಳ ಪರಿವರ್ತನಕ್ಕೆ ಸಹಾಯವಾದ ಅಜೀವತತ್ವವು ಕಾಲವೆನಿಸುವುದು. ಕಾಲವು ನಿತ್ಯವೂ ಅಮೂರ್ತವೂ, ಲೋಕಾಕಾಶ ಪರಿಪೂರ್ಣವೂ, ಅಸಂಖ್ಯವೂ ಆದುದು. ಜೀವನು ಕರ್ಮಲೇಪದಿಂದ ಪುದ್ಗಲವೆಂಬ ಅಜೀವ ಪದಾರ್ಥದೊಡನೆ ಕೂಡಿಕೊಂಡು ಬದ್ಧಾವಸ್ಥೆಯಲ್ಲಿರುವನು. ಎಂದು ಪ್ರಭಾಕರ ಪೂಜಾರ್ ವಿವರಿಸುತ್ತಾರೆ.

ಇದು ಕಾಲವು ಎಂಬ ವ್ಯವಹಾರಕ್ಕೆ ಕಾರಣ ಭೂತವಾದುದು ಕಾಲವು. ವ್ಯವಹಾರಕಾಲ, ನಿಶ್ಚಯಕಾಲ ಎಂದು ಕಾಲವು ದ್ವಿವಿಧವಾಗಿದೆ. ಸಮಯ, ಆವಲಿ, ಲವ, ಘಟಕೆ ಮೊದಲಾದವು ವ್ಯವಹಾರ ಕಾಲಭೇದಗಳು. ಲೋಕಾಕಾಶದಲ್ಲಿ ಒಂದೊಂದು ಪ್ರದೇಶದಲ್ಲಿ ಕಾಲಾಣುಗಳು ರತ್ನ-ರಾಶಿಯಂತೆ ಇರುವುದು. ಕಾಲದ್ರವ್ಯವು ಲೋಕಾಕಾಶಪ್ರದೇಶದಷ್ಟೇ ಪ್ರದೇಶವುಳ್ಳುದು. ಒಂದು ಪರಮಾಣುವು ಲೋಕಾಕಾಶದಲ್ಲಿ ಅರ್ಧ ಕಾಲಾಣುವನ್ನು ಮಂದಗತಿಯಿಂದ ದಾಟುವ ಹೊತ್ತಿಗೆ ಒಂದು 'ಸಮಯ'ವೆಂದು ಹೆಸರು. ಕ್ರಮದಿಂದ ಪ್ರಾಪ್ತವಾಗುವ ಈ ಸಮಯರೂಪ ಕಾಲವು ವ್ಯವಹಾರಕಾಲವು, ಈ ಸಮಯಗಳಿಗೆ ಆಧಾರಭೂತವಾದ ದ್ರವ್ಯವು ನಿಶ್ಚಯಕಾಲವು. ವ್ಯವಹಾರ ಕಾಲವು ನಿಶ್ಚಯಕಾಲದ ಪರ್ಯಾಯವಾಗಿದ್ದರೂ ಅದು ಜೀವ, ಪುದ್ಗಲಗಳ ಪರಿಣಾಮದಿಂದ

ತಿಳಿಯಲ್ಪಡುವುದರಿಂದ ವ್ಯವಹಾರಕಾಲವು ಜೀವಪುದ್ಗಲಗಳ ಪರಿಣಾಮದಿಂದ ಉಂಟಾದುದೆಂದು ಹೇಳುವರು; ವ್ಯವಹಾರಕಾಲವು ಕ್ಷಣಭಂಗುರವಾಗಿದೆ. ಏಕೆಂದರೆ, ಅದು ಕಾಲದ ಸೂಕ್ಷ್ಮ ಪರ್ಯಾಯವಾದುದರಿಂದ ಅದರ ಸ್ಥಿತಿಯು ಸೂಕ್ಷ್ಮವಾಗಿಯೇ ಇರುವುದು. ನಿಶ್ಚಯಕಾಲವು ತನ್ನ ಗುಣಪರ್ಯಾಯಗಳಿಗೆ

ಆಧಾರಭೂತ ದ್ರವ್ಯವಾದುದರಿಂದ ಅದು ಎಂದೂ ನಾಶಹೊಂದದೆ ನಿತ್ಯವಾಗಿದೆ. ಸಮಯವೆಂಬ ವ್ಯವಹಾರಕಾಲವು ಉತ್ಪನ್ನ ವಾದೊಡನೆ ನಾಶಹೊಂದಿದರೂ ತನ್ನ ಅವಿಚ್ಛಿನ್ನ ಪರಂಪರೆಗಳಿಗೆ ಬಹುದೀರ್ಘವಾಗಿದೆ. ಈ ಸಮಯರೂಪ ಕಾಲದ ಬೇರೆ ಬೇರೆ ಪರಂಪರೆಗಳಿಗೆ ವ್ಯವಹಾರದಲ್ಲಿ ಆವಲಿ, ಸ್ತೋಕ, ಘಟಕೆ ಮೊದಲಾದ ಹೆಸರುಗಳು ಬಂದಿವೆ.

ಕಾಲದ ಬಗ್ಗೆ ಜೈನಧರ್ಮದ್ದು ಈ ನಂಬಿಕೆ. ಆದರೆ ಕಾಲವನ್ನು ನಾವು ಭೂತ; ವರ್ತಮಾನ; ಭವಿಷ್ಯತ್ತು ಎಂದು ವರ್ಗೀಕರಿಸುತ್ತೇವೆ. ಎರಡನೆಯದಾಗಿ ಕಾಲವನ್ನು ಋತುಗಳ ಮೂಲಕ ಅರ್ಥವಿಸಿಕೊಳ್ಳುತ್ತೇವೆ. ಶಿಶಿರ ಋತು ಮೊದಲು ಆರು ತಿಂಗಳು; ಇದು ಆ ದಾನ ಕಾಲ. ವರ್ಷ ಋತು ಮೊದಲು ಆರು ತಿಂಗಳು ವಿಸರ್ಗ ಕಾಲ, ಜಾಗ್ರತ ಕಾಲ, ಸ್ವಪ್ನ ಕಾಲ; ಸುಷುಪ್ತಿಕಾಲವೆಂದಿದೆ. ಹಾಗೆಯೇ ಕಾಲವನ್ನು ಬೆಳಗು, ಮಧ್ಯಾಹ್ನ, ಅಪರಾಹ್ನವೆಂದೂ ತಿಳಿಸುತ್ತೇವೆ. ಸಂಗೀತದಲ್ಲಿ ಕಾಲವು ವಿಲಂಬಿತ, ಮಧ್ಯ, ದ್ರುತವೆಂದು ವರ್ಗೀಕರಿಸುತ್ತಾರೆ.

'ಕಾಲ=ಭೌತಕಾಲ, ಇದುವೆ ಕಾಲ-ಸರ್ಪ ಎಂಬ ಸಾಂಕೇತಿಕ ಪ್ರತಿಮೆ. ಏಕಂ ಸತ್ ಆಗುವಾಗ ಇದು ರೇತಸತ್ಯದ ಜೀವನ ಪಾತಳಿ ಎನಿಸುತ್ತದೆ. 'ಸಮಯ'ವು ಮಾನವರ ಸಾಮಾಜಿಕ 'ಸಮಷ್ಟಿ ಸ್ವರೂಪದ ಜೀವನ ಸಂದರ್ಭದಲ್ಲಿ ಪ್ರತೀತಿಗೆ ಬರುವ ತಾತ್ವಿಕ ಪಾತಳಿಯ ಕಾಲ. ನಿಸರ್ಗದ : ಪ್ರಕೃತಿಯ (ವಿಶ್ಲೇಷಣದ) ಅರ್ಥಗ್ರಹಣಕ್ಕೆ ಆಧಾರಭೂತವಾಗಿ ಇರಬಲ್ಲ ಸ್ಥಳ (Space) ಮತ್ತು ಕಾಲ (Time) ಭೌತಸ್ವರೂಪದ್ದು. ಆದರೆ ಮಾನವ ಜೀವಿಯ ಜೀವಿತಸ್ಥ ಜೀವನದ=ಸಂಸ್ಕೃತಿಯ ಅರ್ಥಗ್ರಹಣಕ್ಕೆ ಆಧಾರಭೂತವಾಗಿ ಇರುವ ಪರಿಸರ ಮತ್ತು ಸಮಯ ಇವೆರಡೂ ಅ-ಭೌತ : ತಾತ್ವಿಕ ಸ್ವರೂಪದವು ಇರುತ್ತವೆ. ಈ 'ಸಮಯ'-ಪರಿಸರ, ಇಂದ್ರಿಯಜನ್ಯ ಜ್ಞಾನದ ಪಾತಳಿಯ ಹೊರಗೆ ಭೂಮಿಗೆ ಲಂಬ ಸಮಾಂತರವಿರುವುದಾಗಿ ಅರಿಕೆಗೆ ಬರುತ್ತದೆ. ಭೌತದ ಸಾಹಚರ್ಯ (ಸಂದರ್ಭದ) ಮೂಲಕ, ಇಂದ್ರಿಯಾತೀತ ಅಭೌತ ಅಥ್ ತತ್ವವು ಮಾನವರ ಅರಿಕೆಯ ತಳವಿನಲ್ಲಿ ಬಂದುದು ಉಂಟು. ಪುರಾತನರಿಗೆ, 'ಭೂಃ' ಈ ಐಹಿಕ ಭೌತಜೀವನದ ಸಾಹಸರ್ಯದಿಂದ 'ಭುವಃ'ಲೋಕದ ಅಸ್ತಿತ್ವವು ಅರಿಕೆಗೆ ಬಂದಿತು. ಆದಕಾರಣ, ಭೌತಕಾಲ-ಪರಿಸರವೇ ಕಾಲ್ಪನಿಕವಿದ್ದರೆ, ಇದರ ಹಿನ್ನೆಲೆಯಲ್ಲಿ ಅರಿಕೆಗೆ ಬಂದ ಆಧಾರಭೂತ ಸಮಯ ಪರಿಸರವೂ ಕಾಲ್ಪನಿಕ; ಆ-ಭಾಸವೇ ಸರಿ.' ಎಂದು ಶಂಬಾ ಜೋಶಿ ಹೇಳುತ್ತಾರೆ.

*ವಿವರಗಳಿಗೆ ನೋಡಿ: ಮಹಾದೇವ ಪ್ರಭಾಕರ ಪೂಜಾರ್ ೧೯೭೬ ಜೈನಧರ್ಮ ಪರಿಭಾಷೆ ಪುಟ. ೨*

*ಶಂಬಾ ಜೋಶಿ ೧೯೯೯ ಸಂಪುಟ. ೪ ಪುಟ. ೧೯*

*Arjun Appadori? Time & Narration*

**೨೪೩. ಕಾಲಲಬ್ಧಿ**

*ಅನುಭೂತಶ್ರುತದೃಷ್ಟಖೇಚರಕಥಾನೀಕಂಗಳಿಂ ಯುಕ್ತಿಯಿಂ*
*ದಿನಿತಂ ಸಾಧಿಸಿ ಜೀವಸಿದ್ಧಿಯನಿದಂ ನಿಶ್ಚೈಸಿ ವಿದ್ವತ್ಸಭಾ ।*
*ಜನಮೆಲ್ಲಂ ತಿಳಿದತ್ತು ನಿಮ್ಮ ಮನದಿಂ ಮಿಥ್ಯಾಕಳಂಕಂ ತೆರ*
*ಳ್ದಿನಿತುಂ ಪೋಗದು* **ಕಾಲಲಬ್ಧಿ** *ದೊರೆಕೊಂಡಂದಲ್ಲದೇಂ ಪೋಕುಮೇ ॥*
*(ಆದಿಪುರಾಣ ೨-೨೨)*

'ಕಾಲಲಬ್ಧಿ' ಎಂದರೆ ಸಮ್ಯಗ್ದೃಷ್ಟಿ; ದೊರೆಯುವ ಕಾಲ; ಕೂಡಿಬರುವುದು; ಊರ್ಧ್ವಗತಿಯನ್ನು ಪಡೆಯಲು ಸನ್ನಿಹಿತವಾಗುವ ಕಾಲ. ಬರಿಯ ಕಾಲವೆಂದರೆ ಎರಡು ಅರ್ಥವಿದೆ. ಒಂದು ಸಮಯ ಮತ್ತೊಂದು ಸಾಂಖ್ಯಮತದಲ್ಲಿ ಬರುವ ಒಂಭತ್ತು ತುಷ್ಟಿಗಳಲ್ಲಿ ಒಂದು. ಕಾಲಲಬ್ಧಿಯೆಂದರೆ ಜೈನ ಆಗಮಿಕಗಳಲ್ಲಿ ಸಮ್ಯಕ್‌ದೃಷ್ಟಿಗೆ ಕಾಲಕೂಡಿಬರುವುದು.

ಅಂತು ತನಗೆ **ಕಾಲಲಬ್ಧಿಯುಂ** ಕರಣಲಬ್ಧಿಯುಮುಪಶಮಲಬ್ಧಿಯುಮೆಂಬ ಲಬ್ಧಿತ್ರಯಂ ದೊರಕೊಳೆ ಸಾಮ್ರಾಜ್ಯದೀಕ್ಷಿತಂ ದೀಕ್ಷಾಭಿಮುಖನುಂ ಸಂಸಾರ.... (ಅಜಿತತೀರ್ಥಂಕರ ಪುರಾಣತಿಲಕಂ ೨ – ೧೪)

ಕಾಲಲಬ್ಧಿ, ಕರಣಲಬ್ಧಿ, ಉಪಶಮಲಬ್ಧಿ ಎಂಬುದು ಲಬ್ಧಿತ್ರಯಗಳಾಗಿವೆ. ಲಬ್ಧಿ– ಯಾವುದೊಂದು ವಸ್ತುವನ್ನು ಅದರೊಡನೆ ಸಂಬಂಧವಿರುವ ಯಾವುದೊಂದು ವಿಷಯದ ಸಹಾಯದಿಂದ ನಿರ್ದೇಶಿಸುವುದು ಲಬ್ಧಿಯೆನಿಸುವುದು.

*ವಿವರಗಳಿಗೆ ನೋಡಿ: ಮಹಾದೇವ ಪ್ರಭಾಕರ ಪೂಜಾರ್ ೧೯೭೬ ಜೈನಧರ್ಮ ಪರಿಭಾಷೆ ಪುಟ. ೬.*

**೨೪೪. ಕಾವ್ಯದಲ್ಲಿ ಪಾಪ –ಪುಣ್ಯ**

"**ಪಾಪಮಿದು ಪುಣ್ಯಮಿದು** *ಹಿತ*
*ರೂಪಮಿದಹಿತ ಪ್ರಕಾರಮಿದು ಸುಖಮಿದು ದು*
*ಖೋಪಾತ್ರಮಿದೆಂದಜೆಪುಗು*
*ಮಾ ಪರಮ ಕವಿಪ್ರಧಾನರಾ ಕಾವ್ಯಂಗಳ್ (ಕವಿರಾಜಮಾರ್ಗ ೧–೧೮)*

ಈ ಹೇಳಿಕೆಯೂ ಅದೇ ಭಾವನೆಯನ್ನು ಬಲಗೊಳಿಸುತ್ತಿದೆ. ಇರಲಿ ಈ ಚತುರ್ವರ್ಗದೊಳಗೆ 'ಆತ್ಮವತ್ಸರ್ವಭೂತಾನಿ' ಎಂಬೆಣಿಕೆಯನ್ನೂ ಅದಕ್ಕನುವಾದ ನುಡಿನಡೆಗಳ ಕೂಟವನ್ನೂ ಧರ್ಮವೆನ್ನುವುದಷ್ಟೆ. ಹಾಗೆ ಪ್ರಪಂಚಧಾರಕತ್ವದಿಂದಲೇ ಧರ್ಮವನ್ನಾದಿಯಲ್ಲಿಯೂ, ಪರಿವಿಡಿಯಾಗಿ ಅಣಿಗೊಳಿಸಿದುದು. ಹಾಗೆ, ಧರ್ಮಸಂಬದ್ಧ ಗಳಾಗಿದ್ದರೆ ಮಾತ್ರವೇ ಅರ್ಥಕಾಮಗಳೂ ಪುರುಷಾರ್ಥಗಳು, ಬದಲಾಗಿದ್ದರೆ ಅವುಗಳು ಪುರುಷಾರ್ಥಗಳೆನ್ನಿಸುತ್ತಿವೆ ಎಂಬುದನ್ನು ಲೋಕಾನುಭವವೇ ಬೋಧಿಸುತ್ತಿದೆ. ಪಾರದ (ಪಾದರಸ)ವನ್ನೂ ಶುದ್ಧೀಕರಿಸಿ ಅಮೃತವನ್ನಾಗಿ ಮಾಡಬಲ್ಲ ಸಿದ್ಧಪುರುಷರಾದ ಆ ಪೂರ್ವಾಚಾರ್ಯರು, ಅರ್ಥಕಾಮಗಳ ನಂಜನ್ನೆತ್ತಿ ಕಳೆದು ಪ್ರಪಂಚಧಾರಣೆಗಾಗಿ

ಅವುಗಳಿಗೂ ಧರ್ಮದೊಡನೆ ಸಾರೂಪ್ಯ ತಾದಾತ್ಮ್ಯಗಳನ್ನೊದಗಿಸಿ ದ್ದಾರೆ. ಅಖಂಡ ಚೈತನ್ಯ ಪ್ರವಾಹವು ಕಾಲುವೆಗೊಂಡು ಪ್ರಕೃತಿಯೊಳಗಲ್ಲಲ್ಲಿ ಹರಿದು ನಾನಾರೂಪಪಡೆದ ಸಂಸಾರದ ಬೆಳೆಯನ್ನು ಬೆಳೆಯಿಸುವಂತೆ, ಈ ಧರ್ಮವು ಅರ್ಥಕಾಮಗಳನ್ನೂ ಪುರುಷಾರ್ಥಗಳನ್ನಾಗಿ ಮಾಡಿಬಿಡುತ್ತಿದೆ. ಅಂಥ ತ್ರಿವರ್ಗವೇ ಪ್ರಪಂಚಧಾರಕವೆನ್ನಿಸುವುದು. ಆದರೆ, ಧರ್ಮದಲ್ಲುಕ್ಕುಡಿಸಿ ಕಾಮದಲ್ಲಿ ಅಣೆಗಟ್ಟುವಡೆದ ಆ ತ್ರಿವರ್ಗದ ಹೊನಲು ಮತ್ತೇನಾಗಬೇಕು? ಮುಂಬರಿಯದೆ ಉಕ್ಕಿ ಹಿಂಬರಿಯುತ್ತಾ ಹೋಗಬೇಕು. ಹೋದರೆ, ಕಡೆಗೆ ಸಂಸಾರದ ಫಲವತ್ತಾದ ಹೊಲಗಳೆಲ್ಲವೂ ಮುಳುಗಿ ತೇಲಿಹೋಗಬೇಕು. ಅಂಥ ಅಪಾಯನಿವಾರಣೆಗಾಗಿಯೇ ಅಣೆಕಟ್ಟಿನಲ್ಲಿ ಹೊನಲಿಗೊಂದು ಕಂಡಿಯನ್ನಿಡುವು ದೆಂಬ ಪ್ರಾಪಂಚಿಕ ದೃಷ್ಟಾಂತವನ್ನು ಲಕ್ಷಿಸಬೇಕು. ಸಮಾಜದ ಹಿತಶಾಂತತೆಗಳಿಗಾಗಿಯೇ ಮೋಕ್ಷವೆಂಬ ಪಾರತ್ರಿಕ ಪುರುಷಾರ್ಥವನ್ನು ಆ ತ್ರಿವರ್ಗದ ಕೊನೆಯಲ್ಲಿರಿಸಿದುದು. ಅಣೆಗಟ್ಟಿನಲ್ಲಿ ತುಂಬಿತುಳುಕುವ ಜೀವನಪ್ರವಾಹವು ಕಂಡಿಯಲ್ಲಿ ಬಿಡು (ಮೋಕ್ಷ)ವಡೆದು, ಹರಿದು, ಸಾಗರದಲ್ಲಿ ಸಂಗಮವಡೆದು ಶಾಂತವಾಗುತ್ತಿವೆ. ಮನುಷ್ಯಜೀವನವು ಸಾಂಸಾರಿಕ ತ್ರಿವರ್ಗದ ಅಣೆಗಟ್ಟಿನಲ್ಲಿ ತುಂಬಿ, ತಾತ್ವಿಕವಿಚಾರದ ಕಂಡಿಯಲ್ಲಿ ಹರಿದು, ಪ್ರಪಂಚದ ಚೈತನ್ಯಸಾಗರದೊಳಗೊಂದಾಗುತ್ತಿದೆ. ಹೀಗೆ, ಸಾಂಸಾರಿಕ ಪಾರತ್ರಿಕಗಳೆಂಬ ಇತ್ತೆರದ ಪುರುಷಾರ್ಥಗಳೂ, ನಿಕಟಸಂಬಂದದಿಂದ ಒಡಗೂಡಿ ಚತುರ್ವರ್ಗವೆನ್ನಿಸುವುದು ಅದರೊಳಗೆಲ್ಲ ಸಾಂಸಾರಿಕದೃಷ್ಟಿಯಲ್ಲಿ ಪ್ರಮುಖವೂ ಮೊತ್ತಮೊದಲಿನದೂ ಧರ್ಮ ವಾದುದರಿಂದ ಮುಂದಿನ ಪುರುಷಾರ್ಥಗಳೆಲ್ಲ ಧಾರ್ಮಿಕಗಳೆನ್ನಿಸುವಂತಿವೆ. ಅದಕ್ಕೆ ವಿರುದ್ಧವಾದ ಮನೋವಾಕ್ಕಾಯ ವಿಲಸನಗಳೆಲ್ಲವೂ ಅಧಾರ್ಮಿಕಗಳೆಂಬುದನ್ನು ಹೇಳಬೇಕಾಗಿಲ್ಲ. ಅಂಥ ಧರ್ಮದ ಅಂಗಗಳೆಂದರೆ ದಯೆ–ದಮ–ದಾನ–ತಪಸ್–ಶೀಲಗಳು, ಎಂಬುದನ್ನು ನಮ್ಮ ಪಂಪನು ಅಂದವಾಗಿ ನಿರೂಪಿಸಿದ್ದಾನಷ್ಟೆ. ಅವುಗಳನ್ನು ಕಾವ್ಯಧರ್ಮದ ಸಾಹಿತ್ಯದಿಂದ ರಸಾಯನಗಳನ್ನಾಗಿ ಮಾಡಿ ಮಾತೃಭೂಮಿಗೆ ನೈವೇದ್ಯವೆಸಗುವವನೇ ಉತ್ತಮ ಕವಿ. ಆ ರಸಾಯನಕ್ಕೆ ಉತ್ತಮ ಕಾವ್ಯವೆಂಬ ಹೆಸರು"

ಪಾಪ ಪುಣ್ಯಗಳನ್ನು ಕವಿರಾಜಮಾರ್ಗಕಾರನು ಕಾವ್ಯಗಳಿಗೆ ಅನ್ವಯಿಸಿದ್ದಾನೆ. ಕಾವ್ಯ ನಾಟಕಾದಿಗಳಲ್ಲಿ ಪಾಪ – ಪುಣ್ಯ ಸಂಸ್ಕಾರ ಸತ್ ಸಂಪ್ರದಾಯದ ಪ್ರಶ್ನೆಯು ಜಗತ್ತಿನಾದ್ಯಂತ ಬೇರೆ ಬೇರೆ ರೀತಿಯಲ್ಲಿ ವ್ಯಕ್ತವಾಗಿರುವುದು ಗಮನಾರ್ಹ. ಪ್ಲೇಟೋ : ಅರಿಸ್ಟಾಟಲರು ಕೂಡಾ ಈ ಪ್ರಶ್ನೆಗಳನ್ನು ಎತ್ತಿಕೊಂಡಿದ್ದರು. ಕನ್ನಡ ಕಾವ್ಯ ಪರಂಪರೆಯಲ್ಲಿ ಪಾಪ – ಪುಣ್ಯದ ಪ್ರಶ್ನೆಯು ಬಾಂದಿರುವುದು ಗಮನಾರ್ಹ.

*ವಿವರಗಳಿಗೆ ನೋಡಿ: ಎನ್. ಬಾಲಸುಬ್ರಹ್ಮಣ್ಯ ೧೯೭೭ ಅರಿಸ್ಟಾಟಲನ ಕಾವ್ಯಮೀಮಾಂಸೆ.*
*ಮುಳಿಯ ತಿಮ್ಮಪ್ಪಯ್ಯ ೨೦೦೬ ನಾಡೋಜಪಂಪ ಪುಟ. ೨೯೮–೨೯೯*

೨೪೫. **ಕಾವ್ಯಪ್ರಯೋಗ**

*ಪದನಱಿದು ನುಡಿಯಲುಂ ನುಡಿ*
*ದುದುನಱಿದಾರಯಲುಮಾರ್ಪರಾ ನಾಡವರ್ಗಳ್*
*ಚದುರರ್ ನಿಜದಂ ಕುಱಿತೋ*
*ದದೆಯುಂ* ***ಕಾವ್ಯಪ್ರಯೋಗ*** *ಪರಿಣತಮತಿಗಳ್ (ಕವಿರಾಜಮಾರ್ಗ ೧-೩೮)*

ಕಾವ್ಯದ ಕುರಿತು ಕವಿರಾಜಮಾರ್ಗದಲ್ಲಿ ಮೇಲಿನ ವಿವರಣೆಗಳು ಬರುತ್ತದೆ. ಕಾವ್ಯದ ಹೆಚ್ಚುಗಾರಿಕೆ ಮತ್ತು ಕನ್ನಡ ಕವಿಗಳ ಕಾವ್ಯ ಪ್ರಯೋಗದ ಕುರಿತು ಮೇಲಿನ ವಿವರಣೆಯು ಇದೆಯೆಂಬುದುದೊಂದು ಗಮನಾರ್ಹ, ಮತ್ತೊಂದು ಕಡೆ 'ಪದ್ಯಂ ಸಮಸ್ತ ಜನತಾ ಹೃದ್ಯಂ' ಎಂದೂ ಹೇಳಲಾಗಿದೆ.

ಕಾವ್ಯವೆಂದರೇನು ಎಂಬ ಪ್ರಶ್ನೆಯು ಕಾವ್ಯಮೀಮಾಂಸಕಾರರಲ್ಲಿ ಬೇರೆ ಬೇರೆ ಮಾಧ್ಯರಿಯ ವಾಗ್ವಾದಗಳಿಗೆ ಅವಕಾಶವನ್ನು ಕಲ್ಪಿಸಿದೆ. ಮೇಲು ನೋಟಕ್ಕೆ ಕವಿತೆಯೆಂದರೆ ಅದೊಂದು ಭಾಷಿಕವಾದ ವ್ಯಾಪಾರ. ಆದರೆ ಅದಷ್ಟು ಮಾತ್ರವೇ ಅಲ್ಲ ಹಾಗೆಯೇ ಕವಿಯು ಯಾವುದನ್ನು ಬರೆದಿದ್ದಾನೋ ಅದನ್ನು ಕಾವ್ಯವೆಂದು ಸುಲಭವಾಗಿ ಕರೆಯುವಂತಿಲ್ಲ. ಕಾವ್ಯವೆಂದರೆ ಕಾವ್ಯವೇ – ಅದು ಬೇರೆ ಏನೂ ಅಲ್ಲವೆಂದು ಚರ್ಚೆಯಿಂದ ಪ್ರಾರಂಭವಾಗಿ ಕಾವ್ಯಕ್ಕೆ – ಸಮಾಜಕ್ಕೂ ನಿರ್ಣಾಯಕವಾದ ನಂಟಿದೆ ಎಂಬಲ್ಲಿಯವರೆಗೆ ಚರ್ಚೆಗಳು ಸಾಗಿ ಬಂದಿವೆ. ಭಾರತೀಯ ಕಾವ್ಯಮೀಮಾಂಸೆಯಲ್ಲಿಯೂ ಕಾವ್ಯವೆಂದರೇನು ಎಂಬುದಕ್ಕೆ ಬೇರೆ ಬೇರೆ ಅಲಂಕಾರಿಕರು ಬೇರೆ ಬೇರೆ ರೀತಿಯ ವ್ಯಾಖ್ಯಾನವನ್ನು ಕೊಟ್ಟಿದ್ದಾರೆ. ಪ್ರತಿಯೊಬ್ಬ ಕಾವ್ಯಮೀಮಾಂಸಕಾರರು ತಮ್ಮ ಮೀಮಾಂಸೆಯಲ್ಲಿನ ನಿಲುವುಗಳಿಗೆ ಅನುಸಾರವಾಗಿ ತಮ್ಮ ವ್ಯಾಖ್ಯೆಯನ್ನು ಮುಂದಕ್ಕಿಟ್ಟುಕೊಂಡಿದ್ದಾರೆ. ಭರತನು ಈ ಮೊದಲೇ ತಿಳಿಸಿರುವಂತೆ ನಾಟ್ಯಶಾಸ್ತ್ರದ ಬಗೆಗಿನ ನಿಲುವು. ನಾಟ್ಯಶಾಸ್ತ್ರದ ಅಗತ್ಯಕ್ಕೆ ಅನುಸಾರವಾಗಿ ಭರತನು ರಸವಿವೇಚನೆಯನ್ನು ಮಾಡಿದ್ದಾನೆ. ಇದಕ್ಕೆ ಪೂರಕವಾಗಿ ಅವನು ಇತರೆ ಚರ್ಚೆಗಳನ್ನು ಮಾಡಿದ್ದಾನೆ. ನಾಟ್ಯವೆಂಬುದು ಒಂದು ರೀತಿಯ 'ಭಾವಾನುಕೀರ್ತನಂ' ಎಂದು ಭರತನು ಹೇಳುತ್ತಾನೆ. ಇದನ್ನೇ ಅಭಿನವ ಗುಪ್ತನು 'ಅನುವ್ಯವಸಾಯ' ಎಂದು ಕರೆಯುತ್ತಾನೆ. ಕಾವ್ಯವೂ ಪ್ರಯೋಗವೇ ಆಗಿದೆ.

'ವಾಕ್ಯಂ ರಸಾತ್ಮಕಂ ಕಾವ್ಯಂ' ಎಂದು ವಿಶ್ವನಾಥನು ಸಾಹಿತ್ಯದರ್ಪಣದಲ್ಲಿ ಹೇಳುತ್ತಾನೆ. ಜಗನ್ನಾಥ ಪಂಡಿತನು, ರಮಣೀಯವಾದ ಅರ್ಥವನ್ನು ಪ್ರತಿಪಾದಿಸುವ ಶಬ್ದವು ಕಾವ್ಯವಾಗುತ್ತದೆ' ಎಂದು ಹೇಳುತ್ತಾನೆ.

ಕಾವ್ಯವು ದೋಷರಹಿತವಾಗಿರಬೇಕು ಎಂದು ನಾಗವರ್ಮನು ಹೇಳಿರುವುದು ಇಲ್ಲಿ ಗಮನಾರ್ಹ (ಕಾವ್ಯಾವಲೋಕನ ದ್ವಿತೀಯಾಧಿಕರಣ – ೪೨೯).

*ವಿವರಗಳಿಗೆ ನೋಡಿ: Terry eagleton 1989 liteary theory an introduction*

*ಜಿ.ಎಸ್. ಶಿವರುದ್ರಪ್ಪ ೧೯೭೦ ಸೌಂದರ್ಯಸಮೀಕ್ಷೆ.*

## ೨೪೬. ಕಾವ್ಯವಿಷಯ

ಇಡುಕುಂಗಬ್ಬಂ ಮುಕ್ತಕ
ಮೊಡಂಬಡಲ್ ನೆಗಱು ಪಲವುಮೇಕಕ್ರಿಯೆಯೊಳ್
ಪಡೆಗುಂ ಕುಳಕಾಖ್ಯೆಯನೆಡೆ
ಮಡಗದನೇಕಾರ್ಥವಸ್ತುಕಥನ ಕೋಶಂ

*(ಕಾವ್ಯಾವಲೋಕನ ಸೂತ್ರ ಸಂಖ್ಯೆ ೨೪೦)*

ನಾಗವರ್ಮನ ಕಾವ್ಯಲೋಕನ ಬಂದಿರುವಂತೆ 'ವಸ್ತುಕಥನಕೋಶ'ವೆಂಬುದು ಗಮನಾರ್ಹವಾಗಿದೆ. 'ವಸ್ತು ಕಥನಕೋಶ'ವೆಂಬುದು ಗಮನಾರ್ಹವಾಗಿದೆ. ಕಾವ್ಯಕ್ಕೆ ಆಯ್ಕೆ ಮಾಡಿಕೊಳ್ಳುವ ವಿಷಯವನ್ನು ಆಧರಿಸಿಕೊಂಡ ಕಥಾಕಥನ, ವಿವರಣ, ವರ್ಣನೆ, ಬೋಧನೆಯೆಂದು ವರ್ಗೀಕರಿಸಲಾಗುತ್ತದೆ.

ಕಾವ್ಯವಿಷಯವನ್ನು ಸಾಮಾನ್ಯವಾಗಿ ನಾಲ್ಕು ರೀತಿಯಲ್ಲಿ ವಿಭಾಗಿಸಬಹುದು–

೧. ಕಥಾಕಥನ:– ತಾನು ಎತ್ತಿಕೊಂಡ ನಾಯಕ ಪ್ರತಿನಾಯಕಾದಿಗಳ ಕಥೆಗಳನ್ನು ಸೂಚಿಸುವುದು.
೨. ವಿವರಣ:– ಸಂದೇಹವೊದಗಿದಲ್ಲಿ ಮನದಟ್ಟಾಗುವಂತೆ ವಿವರಿಸುವುದು.
೩. ವರ್ಣನೆ:– ನಾಯಕಾದಿಗಳ ಕಥಾಸಂದರ್ಭಾನುಸಾರವಾಗಿ ದೇಶಕಾಲಾದಿಗಳನ್ನು ರಂಜಕವಾಗುವಂತೆ ವಿಸ್ತರಿಸುವುದು.
೪. ಬೋಧನೆ:– ಈ ರಚನಾಕ್ರಮದಿಂದ ಸಂಸಾರವು ತಿಳಿಯತಕ್ಕುದೆಂದು ತೋರಿದ ಸಾರವನ್ನು ನಿರೂಪಿಸುವುದು.

*ವಿವರಗಳಿಗೆ ನೋಡಿ: ಮುಳಿಯ ತಿಮ್ಮಪ್ಪಯ್ಯ ೧೯೮೮ ಶ್ರದ್ಧಾಂಜಲಿ ಪುಟ. ೫೯೮.*

## ೨೪೭. ಕಾಷ್ಠಕರ್ಮ

*..........ಕಂಡಲ್ಲಿಯ ಚಿತ್ರದ ಲೆಪ್ಪದೆ ಕಾಷ್ಠ ಕರ್ಮದ ರೂಪುಗಳೊಳೆಲ್ಲಮೀ.......*

*(ವಡ್ಡಾರಾಧನೆ. – ಸುಕಾಶಲಸ್ವಾಮಿಯ ಕಥೆ. ಪು. ೬೦)*

ಮರಗೆಲಸವನ್ನು ವಡ್ಡಾರಾಧನೆಯ ಕೃತಿಕಾರನು ಕಾಷ್ಠಕರ್ಮವೆಂದು ಕರೆದಿದ್ದಾನೆ ಮರಗೆಲಸ ಮಾಡುವವರನ್ನು ಬಡಿಗರು ಎಂದು ಕರೆಯುತ್ತಾರೆ. ಬಡಗಿಗಳ ಕರ್ಮ– ಮರದ ಕೆಲಸ ಮಾಡುವುದು. ಮರದ ಕೆಲಸ ಮಾಡುವವರಿಗೆ ವಿಶಿಷ್ಟವಾದ ಕೌಶಲ್ಯವು ಬೇಕಾಗುತ್ತದೆ. ಮರದ ಸೂಕ್ಷ್ಮ ಕೆಲಸದ ಕುಶಲ ಕರ್ಮಿಗಳಿಗೆ ವಿಶೇಷ ಪ್ರಾಶಸ್ತ್ಯವಿತ್ತು ಎಂಬುದು ವಡ್ಡಾರಾಧನೆಯಿಂದಲೂ ತಿಳಿಯುತ್ತದೆ. ಚಿನ್ನದ ಕೆಲಸ ಮಾಡುವವರು; ಕಬ್ಬಿಣದ ಕೆಲಸ ಮಾಡುವವರು; ಮರದ ಕೆಲಸ ಮಾಡುವವರು, ಶಿಲ್ಪದ ಕೆಲಸ ಮಾಡುವವರು ಒಂದು ವರ್ಗಕ್ಕೆ ಸೇರುತ್ತಾರೆ. ಇವರನ್ನು "ಕುಶಲ ಕರ್ಮಿಗಳು" ಅಥವಾ "ಶಿಲ್ಪಾಚಾರ್ಯರು" ಎಂದು ಕರೆಯುತ್ತಾರೆ.

## ೨೪೮. ಕಾಳಾಮುಖ

ಹನ್ನೆರಡನೆಯ ಶತಮಾನದಲ್ಲಿ ವೀರಶೈವ ಧರ್ಮವು ಪ್ರಬಲಿಸುವ ಮುನ್ನ ಕರ್ನಾಟಕದಲ್ಲಿ 'ಕಾಳಮುಖ'ರೆಂಬ ಶೈವರು ಬಹು ಪ್ರಬಲರಾಗಿದ್ದರೆಂದು ಚಿದಾನಂದ ಮೂರ್ತಿಯವರು ಅಭಿಪ್ರಾಯ ಪಡುತ್ತಾರೆ.

ಶೈವರಲ್ಲಿ ನಾಲ್ಕಾರು ಗುಂಪುಗಳಾಗಿ ಹೆಸರಿಸಲ್ಪಟ್ಟಿರುವ ಗೊರವರು, ಕಾಪಾಲಿಕರು, ಕಾಳಾಮುಖರು ಮೊದಲಾದವರು. ಕಾಳಾಮುಖರ ಬೇರೆ ಬೇರೆ ಸಂಪ್ರದಾಯಗಳನ್ನು ಇವು ಸೂಚಿಸುತ್ತದೆ.

ಕರ್ನಾಟಕದಲ್ಲಿ ಪ್ರಖ್ಯಾತರಾದ ಕಾಳಾಮುಖ ಗುರುಗಳ ಗುಂಪಿನಲ್ಲಿ ಸಾಮಾನ್ಯವಾಗಿದೆ. ಈ ಕಾಳಾಮುಖರು ಮತ್ತು ಅವರ ಅನುಯಾಯಿಗಳು, ಚಾಲುಕ್ಯರು ಮತ್ತು ಅವರ ಸಾಮಂತರ ಆದರಕ್ಕೊಳಗಾಗಿ ಜೈನಮತದಿಂದ ತಮ್ಮ ಮತಕ್ಕೆ ಜನರನ್ನು ಮತಾಂತರಗೊಳಿಸಿಕೊಳ್ಳುತ್ತಿದ್ದರೆಂದು ತಿಳಿಯಬಹುದು.

ಕ್ರಿಸ್ತಶಕ ೧೦೮೪ರ ಶಾಸನ ನ್ಯಾಯ ಶಕ್ತಿ ಪಂಡಿತದೇವ ವಿದ್ಯೆ, ಆಹಾರ ದಾನಗಳಿಂದ ಪ್ರಸಿದ್ಧನಾಗಿ ಶಿವನೇ ಕಾಳಾಮುಖನಾಗಿ ಅವತರಿಸಿದನೆಂದು ಹೇಳಿದೆ. ಕಾಳಾಮುಖಕ್ಕೂ ಕಾಳಿಗೂ ಸಂಬಂಧವಿದೆ.

ಕಾಳಾಮುಖರ ಪ್ರಭಾವ ಬೆಳೆಯುತ್ತಿರುವಾಗಲೇ ವೈದಿಕ ಮತಾನುಯಾಯಿಗಳಾದ ಬ್ರಾಹ್ಮಣರು ಅವರೊಂದಿಗೆ ಹೊಂದಾಣಿಕೆಯಿಂದ ತಾವು ಅವರಂತೆಯೇ ಅಗ್ರಹಾರ, ಘಟಿಕಾಸ್ಥಾನಗಳಲ್ಲಿ ಸಾಂಪ್ರದಾಯಕ ವಿದ್ಯಾಭ್ಯಾಸವನ್ನು ಹೇಳಿಕೊಡುತ್ತ ರಾಜ ಮರ್ಯಾದೆಯನ್ನು ಸಂಪಾದಿಸುವುದರಲ್ಲಿ ಮಗ್ನರಾಗಿದ್ದರು. ಇದು ಕಾಳಾಮುಖರ ಪ್ರಭಾವವನ್ನು ಸೂಚಿಸುತ್ತದೆ.

ಕಾಳಾಮುಖರು ಪ್ರಬಲರಾಗಿ ರಾಜರ ಕೃಪೆಗೆ ಪಾತ್ರರಾದ ಮೇಲೆ ಅವರ ಮಠಗಳು ಅದರಲ್ಲೂ ಕ್ರಿಸ್ತ ಶಕ ೧೦೬೦ರಲ್ಲಿ ಬಳ್ಳಿಗಾವಿಯಲ್ಲಿ ಸ್ಥಾಪಿತವಾದ ಕೇದಾರೇಶ್ವರ ಮಠ ಬಹಳ ಪ್ರಭಾವಶಾಲಿಯಾಗಿ ಬೆಳೆಯತೊಡಗಿತು.

ಕರ್ನಾಟಕದಲ್ಲಿ ಕಾಳಾಮುಖ ಶೈವರು ಮಠಗಳನ್ನು ಕಟ್ಟಿ ಹನ್ನೆರಡನೇ ಶತಮಾನದ ಮಧ್ಯಭಾಗದ ಹೊತ್ತಿಗೆ ರಾಜಮಾನ್ಯರಾದುದ್ದನ್ನು ಗಮನಿಸಿದರೆ, ಆ ಪರಂಪರೆಯ ಆರಂಭದ ಕರುಹಾಗಿ ನಾಗವರ್ಮಾಚಾರ್ಯ ಕಾಣಿಸುತ್ತಾರೆ. ಕಾಳಿಗೂ ಶಿವನಿಗೂ ಇರುವ ಸಂಬಂಧ ಗಮನಾರ್ಹ.

ಬ್ರಾಹ್ಮಣೇತರ ವರ್ಗಗಳು ಶಿವನನ್ನು ತಮ್ಮ ದೈವವೆಂದು ತಿಳಿದಿದ್ದವು. ಆದರೆ ಶಿವ ಶಿಷ್ಟದೇವತೆಯಾಗಿ ಪರಿವರ್ತನೆಗೊಂಡಿರುವುದು ಜನಪದರ ನಂಬಿಕೆ, ಆಚರಣೆಗಳಲ್ಲಿ ಮಹತ್ತರ ಬದಲಾವಣೆಗಳಾಗುವಂತೆ ಮಾಡಿತು. ಅವೈದಿಕ ದೇವತೆಗಳು ವೈದಿಕ ದೇವತೆಗಳಾಗಿ ಪರಿವರ್ತನೆಗೊಂಡಿರುವುದಕ್ಕೆ ರುದ್ರ ಶಿವನಾಗಿ ಪರಿವರ್ತನೆಗೊಂಡಿರುವುದೇ ಉತ್ತಮ ಉದಾಹರಣೆ. ಶೈವ ಮೂರ್ತಿಶಾಸ್ತ್ರವು ಶೈವ ಸಂಪ್ರದಾಯದಲ್ಲಿ ಅವೈದಿಕ ಆಚರಣೆಯೇ ಪ್ರಧಾನವಾಗಿರುವುದನ್ನು ಸೂಚಿಸುತ್ತದೆ. ಇದರಲ್ಲಿ ಪ್ರಮುಖ

ವಾದದ್ದು ಕಾಳಾಮುಖ ಶೈವ ಪಂಥ. ಈ ಪಂಥವು ಕ್ರಿ.ಶ.೧೨ನೆಯ ಶತಮಾನದಲ್ಲಿ ಹೆಚ್ಚು ಪ್ರಚಾರದಲ್ಲಿತ್ತೆಂದು ತಿಳಿದುಬರುತ್ತದೆ. ಶಿಲ್ಪಿಗಳು ಈ ಪಂಥಕ್ಕೆ ಸೇರಿದವರಾಗಿದ್ದರು ಎನ್ನುವ ಮಾಹಿತಿಯು ಸಿಗುತ್ತದೆ. ಹತ್ತನೆಯ ಶತಮಾನದ ನಂತರ ಭೈರವ, ವೀರಭದ್ರ ಮುಂತಾದ ದೇವತೆಗಳು ಹೆಚ್ಚು ಪ್ರಚಾರವನ್ನು ಪಡೆದುಕೊಂಡವು. ಇವು ವೈದಿಕ ದೇವತೆಗಳ ವಿರೋಧಿ ಪ್ರತೀಕಗಳಾಗಿದ್ದವು. ವೀರಭದ್ರ ಹನ್ನೆರಡನೆಯ ಶತಮಾನದಲ್ಲಿ ಹೆಚ್ಚು ಪ್ರಚಾರವನ್ನು ಪಡೆದುಕೊಂಡ ದೇವತೆ. ಭೈರವ ಉಗ್ರರೂಪದಲ್ಲಿರುವ ದೇವತೆ. ಈ ದೇವತೆಯು ಅವೈದಿಕ ದೇವತೆ ಎನ್ನುವುದರಲ್ಲಿ ಯಾವುದೇ ಅನುಮಾನವಿಲ್ಲ. ಭೈರವನನ್ನು ಶಿವನಲ್ಲಿ ಗುರುತಿಸಿಕೊಳ್ಳಲಾಯಿತು. ಶಿವನ ರೂಪಕ್ಕೆ ಕಾಪಾಲಿಕ, ಕಾಳಾಮುಖ ಮುಂತಾದ ತಾಂತ್ರಿಕ ಪಂಥಗಳ ಹಿನ್ನೆಲೆಯೂ ಇದೆ. ಶಿವ ವೈದಿಕ ದೇವತೆಯಾಗಿ ಪರಿವರ್ತನೆಗೊಂಡರೂ ಅವೈದಿಕ ದೇವತೆಯನ್ನು ಹೋಲುವ ರೀತಿಯಲ್ಲಿಯೇ ಶಿವನ ಮೂರ್ತಿಗಳು ಕೆತ್ತಲ್ಪಟ್ಟಿವೆ ಎನ್ನುವುದು ಆರ್.ಎನ್.ನಂದಿ ಅವರ ಅಭಿಪ್ರಾಯ. ಲಕುಲೀಶ, ಕಾಪಾಲಿಕ, ಕಾಳಾಮುಖ ಮುಂತಾದ ಶೈವ ಸಂಪ್ರದಾಯದ ಉಪವಿಭಾಗಗಳು ಅವೈದಿಕ ಸಂಪ್ರದಾಯಗಳೇ ಆಗಿವೆ. ದೇವತೆಗಳು ಸ್ಥಾನಪಲ್ಲಟವನ್ನು ಮಾಡುವ, ಇನ್ನೊಂದು ದೇವತೆಯೊಂದಿಗೆ ಗುರುತಿಸಿಕೊಳ್ಳುವ ಅಥವಾ ಅವತಾರವೆಂದು ತಿಳಿಯುವ ಪ್ರಕ್ರಿಯೆಗಳು ನಿರಂತರವಾಗಿ ನಡೆಯುತ್ತಿದ್ದವು. ರುದ್ರ; ಭೈರವ; ಶಿವ; ಕಾಳಿ; ಇವರ ಅರ್ಚನೆಗೆ ದೊಡ್ಡ ಇತಿಹಾಸವಿದೆ.

ಕಾಳಾಮುಖರ– (ಲಕುಲೀಶ) ಸಂಪ್ರದಾಯ ಗುರ್ಜರ ದೇಶದಲ್ಲಿತ್ತು. ವೀರಶೈವ ಮತವು ಪ್ರಭಾವಶಾಲಿಯಾಗುವ ಮೊದಲು ಕಂನಾಡಿನ ಪ್ರಮುಖ ಗುರುವರ್ಗ, ಲಕುಲೀಶ ಕಾಳಾಮುಖ ಮತದವರದೇ ಆಗಿತ್ತು. ಕಂನಾಡಿನೊಡನೆ ಜೈನಸಂಪ್ರದಾಯದ ಪ್ರಾಚೀನ ಬಾಂಧವ್ಯವು ಸುಪ್ರಸಿದ್ಧವಿದೆ ಎಂದು ಶಂಬಾ ಅಭಿಪ್ರಾಯ.

ಗುಪ್ತಕಾಲದಲ್ಲಿ ಸಪ್ತಮಾತೃಕೆಗಳ ಪೂಜೆ ರೂಢವಿತ್ತು. ಅದರ ಸಾಂಕೇತಿಕ–ಶಾಸ್ತ್ರ ಇಂದಿಗೂ ನಡೆಯುತ್ತದೆ. ದೇವಿಯ ಸಂಚಾರವಾದ ಸ್ತ್ರೀಯರ ಪೂಜೆ ಆಗುತ್ತದೆ. ಅವರಿಂದ ಪ್ರಸಾದ ಪಡೆವ ವಾಡಿಕೆಯಿದೆ. ಶಾಕ್ತ ಸಂಪ್ರದಾಯದ ಆಚಾರ ಪದ್ಧತಿಯು ವಾಮ–ಮಾರ್ಗವೆಂದು ಬಗೆಯ ತೊಡಗಿದಂದಿನಿಂದ ಗುರುದೇವಿಯನ್ನು ಬಹಿರಂಗದಲ್ಲಿ ಪೂಜಿಸುವುದು ನಿಂತುಹೋಯಿತು.

'ಶಾಕ್ತ' ಎಂದರೆ ಶಕ್ತಿಯ ಉಪಾಸಕ. ಶಿವಶಕ್ತಿ, ಶಿವಾ (ಭವಾನಿ) ಇರುವಂತೆ ವಿಷ್ಣು–ಶಕ್ತಿ, ದೇವಿ ವೈಷ್ಣವಿಯೂ ಇದ್ದಾಳೆ.

*ವಿವರಗಳಿಗೆ ನೋಡಿ: ಸಿ. ವೀರಣ್ಣ ೧೯೮೬ ಪ್ರಾಚೀನ ಸಾಹಿತ್ಯ: ರಾಜಸತ್ತೆಯ ವೈಭವದ ಕಾಲ ಪುಟ. ೪೨, ೭೧, ೭೨, ೭೩, ೭೯, ೩೭೯*

*ಶಂಬಾ ಜೋಶಿ ೧೯೯೯ ಹಾಲುಮತ ದರ್ಶನ ಸಂಪುಟ. ೩ ಪುಟ. ೯೫, ೧೧೨–೧೧೩*

*ಮೋಹನಕೃಷ್ಣ ರೈ ೨೦೦೪ ಪ್ರಭುತ್ವ ಮತ್ತು ಜನತೆ ಪುಟ. ೧೪೪*

*ಡಾ. ಎಂ. ಚಿದಾನಂದ ಮೂರ್ತಿ ೧೯೬೬ ಸಂಶೋಧನಾ ತರಂಗ ಸಂಪುಟ. ೧ ಪುಟ. ४೦*

೨೪೯. ಕಿತ್ತಡ

*ತಡದಿಂ **ಕಿತ್ತಡಿಯೆಂ** [ತ್ತಡಮೆಂ] ಬುದ ।*
*ದಡಿಗಿಡೆ ಪೊಕ್ಕೊಳಗು ಪೊಱಗು ಬಲನೆಡನೆಂಬೀ ॥*
*ಯೆಡೆಯಱಿದು ಮೆಯ್ಗಳಂ ಸೂೞ್ ।*
*ತಡಮಾಡದೆ ಕಾಯ್ದು ಪೊಯ್ದರೊರ್ವರ್ನೊರ್ವರ್*

*(ಸಾಹಸ ಭೀಮ ವಿಜಯ ೮-೧೬)*

ಕಿತ್ತಡಿಯೆಂದರೆ ಋಷಿಯೆಂಬ ಅರ್ಥವಿದೆ. ಕಿತ್ತಡವೆಂದರೆ ಅಸಹ್ಯಕರವೆಂದು ಅರ್ಥ. ತಡವೆಂಬ ವಿಧಿಯಿಂದ ಭೀಮ ಕೌರವರು ಅಸಹ್ಯಕರವೆಂಬ ಗತಿಯನ್ನು ಭೇದಿಸಿ ಹೊಕ್ಕು ಒಳಗೂ ಹೊರಗು ಬಲ ಮತ್ತು ಎಡವೆಂಬ ಎಡೆಯನ್ನು ಅರಿತು ಒಬ್ಬರಿಗೊಬ್ಬರು ಹೊಡೆದಾಡಿದರು. ಕಿತ್ತಾಡು ಪದವು ಇಂದಿಗೂ ಚಾಲ್ತಿಯಲ್ಲಿದೆ. ಪ್ರೊ. ಪಿ. ಸುಬ್ರಾಯಭಟ್ಟರು 'ಗದಾಯುದ್ಧ ದರ್ಪಣ'ದಲ್ಲಿ ಹೀಗೆಂದಿದ್ದಾರೆ; "ಪ್ರಸ್ತುತ ಪದ್ಯದಲ್ಲಿ 'ಕಿತ್ತಡಿ' ಎಂಬುದನ್ನು ನೆಲದಿಂದ ಕಿತ್ತ ಅಡಿ ಎಂಬರ್ಥದಲ್ಲಿ ಬಳಸಲಾಗಿದೆ. ಆದರೆ ಹಳಗನ್ನಡದಲ್ಲಿ 'ಕಿಟ್ಟಿ' ಎಂದಿರಬೇಕು. ಬಹುಶ: ರನ್ನನ ಕಾಲದಿಂದಾಗಲೇ 'ಕಿತ್ತಡಿ' ಎಂಬ ರೂಪವೂ ರೂಢಿಯಲ್ಲಿದ್ದಿರಬೇಕು. (ಧಾತು – ಕೀೞ್)

ಕಿತ್ತಡವೆನ್ನುವುದಕ್ಕೆ ಮೋಸ, ವಂಚನೆಯೆಂಬ ಅರ್ಥವೂ ಇದೆ.

*ವಿವರಗಳಿಗೆ ನೋಡಿ: ಪಿ. ಸುಬ್ರಾಯ ಭಟ್ ೧೯೭೫ ರನ್ನನ ಗದಾಯುದ್ಧ ದರ್ಪಣ.*

೨೫೦. ಕಿರೀಟ

*ಪಾಂಗಾದುದು ಸುರಗಿರಿ ಕೂಟಂಗಳುಮಂ ಪ್ರಣತಸುರ **ಕಿರೀಟಂ**ಗಳುಮಂ*
*(ಅಜಿತತೀರ್ಥಂಕರ ಪುರಾಣ ತಿಲಕ ೫-೫೭)*

ಕಿರೀಟವೆಂದರೆ ತಲೆಗೆ ಧರಿಸುವ ಆಭರಣ. ಇದನ್ನು ಮೌಳಿ ಎಂದೂ ಕರೆಯುತ್ತಾರೆ. ನಾಟ್ಯಶಾಸ್ತ್ರದ ಒಂದು ವಿವರಣೆಯನ್ನು ಇಲ್ಲಿ ಬಳಸಿಕೊಳ್ಳಬಹುದು: ನಾಟ್ಯಶಾಸ್ತ್ರದಲ್ಲಿ ಮೂರು ಮುಖ್ಯ ಅಂಶಗಳಿವೆ–೧ ಆಂಗಿಕ. ಅಭಿನಯಕ್ಕೆ ಸಂಬಂಧಿಸಿದ್ದು ೨ ವಾಚಿಕ–ಮಾತಿಗೆ ಸಂಬಂಧಿಸಿದ್ದು ೩ ಆಹಾರ್ಯ– ವೇಷ ಭೂಷಣ. ರನ್ನನ ಮೇಲಿನ ಹಾಡಿನಲ್ಲಿ ಕಿರೀಟವು ವೇಷ ಭೂಷಣಕ್ಕೆ ಸಂಬಂಧಿಸಿದಂತೆ ಬಂದಿದೆ. ಕಿರೀಟದಲ್ಲಿ ಬೇರೆ ಬೇರೆ ಭೇದಗಳಿವೆ. ಜಟಾ, ಮೌಳಿ, ಕಿರೀಟ, ಕರಂಡ, ಶಿರಸ್ತ್ರಕ, ಕುಂತಲ, ಕೇಶಬದ್ಧ, ದಮ್ಮಿಲ್ಲ, ಅಲಕ, ಚೂಡಾ, ಮುಕುಟ, ಪತ್ರಪಟ್ಟ, ಪುಷ್ಪಪಟ್ಟ, ರತ್ನಪಟ್ಟ.

*ವಿವರಗಳಿಗೆ ನೋಡಿ: ಟಿ.ವಿ.ವೆಂಕಟಾಚಲಶಾಸ್ತ್ರೀ ೧೯೯೯ ಶ್ರೀವತ್ಸ ನಿಘಂಟು ಪುಟ. ೧೦೪*
*ಅಮೂರ ಜಿ. ಎಸ್. ೨೦೦೬ ಶ್ರೀರಂಗ ಸಾರಸ್ವತ (ಸಂಪುಟ. ೮)*

೨೫೧. ಕಿಱುಗೂಸು

*ತಾವೋರ್ವರೆಯೊಂದು ಮನೆಯಂ ಪೊಕ್ಕಾಗಳಾ ಮನೆಯೊಳಾರುಮಿಲ್ಲೊ*

*ಸರಿಗೆಯೊಳ್ ತೊಟ್ಟಿಲೊಳಿರ್ದವ್ಯಕ್ತ **ಕಿಱುಗೂಸು** ಬೋಳಹ ಬೋಳಹ ಭಟ್ಟಾರಾ ಎಂದತ್ತಾಗಳಾ ವಚನಮಂ ಭಟ್ಟಾರರ್ ಕೇಳ್ದು ದಿವ್ಯ ವಾಕ್ಯಮೆಂದಱಿದು ಕಾಲ ಪ್ರಮಾಣಂ ಬೆಸಗೊಂಡೊಡೆ ದ್ವಾದಶ ವರ್ಷಮೆಂದು ಪೇೞ್ದಿತ್ತು ಭಟ್ಟಾರರ್..........*

*(ಡಿ.ಎಲ್.ಎನ್. ೨೦೦೯ ಪುಟ. ೧೨೯).*

'ಕಿರುಗೂಸು' ಎಂದರೆ ಸಣ್ಣವಳು ಎಂದರ್ಥ. ಕಿರಿದು+ಕೂಸು ಇಲ್ಲಿ ತೊಟ್ಟಿಲಲ್ಲಿ ಮಲಗಿರುವ ಕೂಸು (ಮಗುವನ್ನು) ಕಿರುಗೂಸು ಎಂದೂ ಕರೆಯಲಾಗಿದೆ. ಕಿರುಗೂಸು ಎನ್ನುವುದಕ್ಕೆ ಗಂಡು-ಹೆಣ್ಣು ಎಂಬ ಭೇದವಿಲ್ಲ.

*ವಿವರಗಳಿಗೆ ನೋಡಿ: ನಗ್ನಿಕಾ/ಗೌರಿ*

**೨೫೨. ಕಿಱುವೇಂಟೆ**

*"ಕಿಱುವೇಂಟೆ'ಯ ನಾಯ(ಂ) ಕೊಂಡು ಬಾರಿಯುಂ ನೆಲನಂ ಪೋಟ್ತಿಂ ಪೊಲನುಮನಱಿದು, ಬಱಿಯೊಳ್ ಪೊಸತಂ ಪಱಿದುಮನಱಿದು ಪರಿಯಿಸಲ್ ನೀನೆ ಬಲ್ಲೆಯದನಾನೆ ಬಲ್ಲೆಂ" (ಪಂಪಭಾರತ. ೫-೪೬ ವ)*

ಕಿರುಬೇಟೆಯು ಪ್ರಾಯಶಃ ವಿನೋದದ ಬೇಟೆಯಾಗಿರಬೇಕು. ಕಿರುಬೇಟೆಯಲ್ಲಿ ನಾಯಿಯ ಬಳಕೆಯೂ ಗಮನಾರ್ಹವಾಗಿದೆ. ಬೇಟೆಯ ಹವ್ಯಾಸವು ಬಹಳ ಪ್ರಾಚೀನವಾದುದು. ಮೂಲತಃ ಕಿರುಬೇಟೆಗೂ ಕೃಷಿಯ ಚಟುವಟಿಕೆಗೂ ಸಂಬಂಧವಿದೆ. ಕೃಷಿಗೆ ಹಾವಳಿಯನ್ನು ಕೊಡುವ ಪ್ರಾಣಿಗಳನ್ನು ಮನುಷ್ಯರು ಬೇಟೆಯಾಡುವುದು ಅನಿವಾರ್ಯ.

*ವಿವರಗಳಿಗೆ ನೋಡಿ: ಮುಳಿಯ ತಿಮ್ಮಪ್ಪಯ್ಯ ೨೦೦೬ ನಾಡೋಜಪಂಪ ಪುಟ. ೨೬೦-೬೫.*

**೨೫೩. ಕಿಳ್ಳೀಕಾತರು**

ಕೇತರು ಅಥವಾ ಕಿಳ್ಳೀಕೇತರೆಂಬ ಒಂದು ಜನವಿದೆ. ಇವರು ಸೋಗು ಹಾಕುವುದರಲ್ಲಿ, ಬಹಳ ಪ್ರಸಿದ್ಧ. ಸೂತ್ರದ ಬೊಂಬೆಗಳನ್ನು ಕುಣಿಸುವ ಹಾಗೂ ಇರುಳಿನಲ್ಲಿ ತೆರೆಯ ಮೇಲೆ ಛಾಯಾಚಿತ್ರಗಳನ್ನು ಮೂಡಿಸಿ ಜನರಂಜನ ಮಾಡುವ ಕಲೆಯು ಇವರಿಗೆ ಸೇರಿದ್ದೆಂದು ತೋರುತ್ತದೆ. ಸೋಗುಹಾಕಿ ರೂಪ ಬದಲಾವಣೆಗಳನ್ನು ಮಾಡುವ ಇವರ ವಿದ್ಯೆಯಿಂದ ಬಹುರೂಪಿಗಳೆಂದು ಇವರಿಗೆ ಪರ್ಯಾಯ ನಾಮವಿದೆ. ಇವರ ಛಾಯಾಚಿತ್ರ, ಸೂತ್ರದ ಬೊಂಬೆಯಾಟಗಳ ವೈಶಿಷ್ಟದ ಮೂಲಕ ಈ ಜನ ಜಾವಾ-ಸಮಾತ್ರಾಗಳತ್ತಣಿಂದ ಬಂದವರಾಗಿಬೇಕೆಂದು ತೋರುತ್ತದೆ.

ದಾಸರೆಂಬ ಒಂದು ಪಂಗಡವು ಇವರಿಗೆ ಹತ್ತಿರದ್ದಿರಬಹುದು. ವೇಷಕಟ್ಟಿ ಆಡುವಲ್ಲಿ ಇವರೂ ಹೆಸರಾದವರು. ಇವರೊಡನೆಯ ಡೊಂಬರ ನೆನಪೂ ಆಗದೆ ಇರದು. ಪಂಪನು ಬಹುರೂಪಿಗಳೆಂದು ಡೊಂಬರಿಗೆ ಹೇಳಿದ್ದಾನೆ. ಕೃಷ್ಣನಿಂದೆಯ ಕಾಲದಲ್ಲಿ ಶಿಶುಪಾಲನ ಬಾಯಲ್ಲಿ ಈ ಮಾತು ಬಂದಿದೆ. 'ಮೀನಾವೆ, ಪಂದೆ...... ಮೊದಲಾದ

ವೇಷಗಳನ್ನು ಧರಿಸುವ ಡೊಂಬ ವಿದ್ಯೆಯಲ್ಲಿ ನೀನು ನಿಪುಣನು' ಎಂದು ಕೃಷ್ಣನಿಗೆ ಶಿಶುಪಾಲನು ಆಡಿದ್ದುಂಟು. ಡೊಂಬ ವಿದ್ಯೆಗೆ ಡಾಂಭಿಕ ಅಥವಾ ಡಾಂಭಿಕತನವೆಂಬ ಹೆಸರು. ಡೊಂಬರ ಬಗ್ಗೆ ವಡ್ಡಾರಾಧನೆಯಲ್ಲಿಯೂ ವಿವರಗಳು ದೊರೆಯುತ್ತವೆ. ಅವರ ಚಿತ್ರಪಟ ಪ್ರದರ್ಶನ; ಇಂದ್ರಜಾಲಕ ವಿದ್ಯೆಯ ಕುರಿತೂ ವಡ್ಡಾರಾಧನೆಯಲ್ಲಿ ಬರುತ್ತದೆ. ಡೊಂಬರು ಅಲೆಮಾರಿಗಳು.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೨ ಪುಟ. ೧೭೩-೧೭೪.*

## ೨೫೪. ಕೀಳ್ಗುಂಟೆ

ಕೀಳ್ಗುಂಟೆ ಎಂಬ ಪದವು ಹಲವಾರು ಶಾಸನಗಳಲ್ಲಿ ದೊರೆಯುತ್ತದೆ. ಇದು ವೇಳೆವಾಳಿಗಳು, ಲೆಂಕರು ಮಡಿದ ವಿಧಾನವನ್ನು ಸೂಚಿಸುವಂತೆ ತೋರುತ್ತದೆ. ಅಂದರೆ, ಒಡೆಯನಾದವನನ್ನು ಹೂಳುವ ಮುನ್ನ ವೇಳೆವಾಳಿ ಅಥವಾ ಲೆಂಕನನ್ನು ಮಲಗಿಸಿ ಅವನ ಮೇಲೆ ಒಡೆಯನ ಹೆಣವನ್ನು ಇಟ್ಟು ಮಣ್ಣು ಮಾಡುತ್ತಿದ್ದರು. ಲೆಂಕ ಅಥವಾ ವೇಳೆವಾಳಿ ಈ ರೀತಿ ಸಮಾಧಿಯಲ್ಲಿ ಹೋಗುವ ಮುನ್ನ ತನ್ನ ಪ್ರಾಣವನ್ನು ತಾನೇ ತೆಗೆದುಕೊಂಡಿರಬಹುದು ಅಥವಾ ತಾನೇ ಜೀವಂತ ಮಲಗಿ ಮಣ್ಣು ಮುಚ್ಚಿದ ನಂತರ ಸಾಯಬಹುದಿತ್ತು. ಈ ಪದ್ಧತಿಯ ಹಿನ್ನೆಲೆಯಲ್ಲಿ ಜಮೀನುದಾರಿ ಮೌಲ್ಯಗಳು ಕೆಲಸ ಮಾಡಿರುವುದು ಸ್ಪಷ್ಟ. ಈ ಮಾದರಿಯ ಸಾಮಾಜಿಕ ವ್ಯವಸ್ಥೆಯು ವೇಳೆವಾಳಿಯನ್ನು ಹೇಗೆ ನಡೆಸಿಕೊಂಡಿತು ಎಂಬುದಕ್ಕೆ ಈ ಪದ್ಧತಿಯು ಸಾಕ್ಷಿಯಾಗಿದೆ.

*ವಿವರಗಳಿಗೆ ನೋಡಿ: ಶ್ರೀ ಶೇಷಶಾಸ್ತ್ರಿ ೨೦೦೫ ಶಾಸನ ಪರಿಚಯ ಪುಟ. ೩೭*

## ೨೫೫. ಕುಂಟಣಿ

*'ಸನ್ನಿಯನ್ನಳೆ **ಕುಂಟಣಿ**' ಎಂದು ಪಂಪ ಭಾರತದಲ್ಲಿ ಬರುತ್ತದೆ.*

*(ಪಂಪ ಭಾರತ ೪-೯೮)*

ಕುಂಟಣಿಯೆಂದರೆ ವೇಶ್ಯಾವಾಟಿಕೆಯು ಇರುವ ಸಂದರ್ಭದಲ್ಲಿ ಮಾತ್ರ ಕುಂಟಣಿಯು (ಮಧ್ಯವರ್ತಿ) ವಿಷಯ ಬರಲು ಸಾಧ್ಯ. ಎರಡನೆಯದಾಗಿ, ಕುಂಟಣಿಯ ಉದ್ಯೋಗವು ಸಾಮಾಜಿಕವಾಗಿ ಗೌರವಯುತವಾಗಿರಲಿಲ್ಲ, ಈಗಿನ ಅರ್ಥದಲ್ಲಿ ತಲೆಹಿಡುಕ ಎಂದೂ ಕರೆಯುತ್ತೇವೆ. ಇಲ್ಲಿ ಹೆಣ್ಣಿನ ದೇಹದಲ್ಲಿ 'ತಲೆ'ಗೆ ಇರುವ ಒತ್ತು ಗಮನಾರ್ಹ. ವ್ಯಭಿಚಾರಕ್ಕಾಗಿ ಗಂಡು ಹೆಣ್ಣುಗಳನ್ನು ಹೊಂದಿಸುವ ದಾಸಿ; ತಲೆಹಿಡುಕಿ.

## ೨೫೬. ಕುಂಡ

ವ್ಯಭಿಚಾರಕ್ಕೆ ಹುಟ್ಟಿದವನನ್ನು ವಡ್ಡಾರಾಧನೆಯ ಕೃತಿಕಾರನು **'ಕುಂಡ'**ನೆಂದು ಕರೆದಿದ್ದಾನೆ. 'ಕುಂಡ' ಎನ್ನುವುದು ಪ್ರತ್ಯೇಕವಾದ ಜಾತಿಯೆಂಬುದು ವಡ್ಡಾರಾಧನೆ ಕೃತಿಕಾರನು ಹೇಳಿರುವುದು ಗಮನಾರ್ಹ. ವಾಸ್ತವವಾಗಿ ಕುಂಡ ಎನ್ನುವುದಕ್ಕೆ ಹೊಟ್ಟೆ,

ಉದರವೆಂಬ ಅರ್ಥವೂ ಇದೆ. ಕೆಟ್ಟ ಉದರದಲ್ಲಿ ಹುಟ್ಟಿದವನು ಕುಂಡ. ಕುಂಡೋದರವೆಂದು ಮಹಾಭಾರತದಲ್ಲಿ ಬರುತ್ತದೆ. ಧೃತರಾಷ್ಟ್ರನ ಮಗನ ಹೆಸರು. ಸರ್ಪದ ಹೆಸರೂ ಕೂಡಾ ಹೌದು.

**೨೫೭. ಕುಕವಿನಿಂದೆ**

ಪ್ರಾಚೀನ ಕನ್ನಡ ಕಾವ್ಯ ಪರಂಪರೆಗಳಲ್ಲಿ **ಕುಕವಿನಿಂದೆ** ಅನೂಚಾನವಾಗಿ ಬೆಳೆದು ಬಂದಿದೆ. ಇಲ್ಲಿ ರನ್ನನು ಯಾರು ಸತ್ಕವಿಯಾರು ಕುಕವಿ ಎಂದು ವಿವರಿಸಿದ್ದಾನೆ. ಕವಿಮಾರ್ಗದಲ್ಲಿ ಪ್ರವೇಶಿಸಿ, ನವರಸವನ್ನು ತೆರೆದು ನುಡಿಸುವ ಕವಿಯು ಸತ್ಕವಿಯೆನಿಸುತ್ತಾನೆ. ಗೂಡಾರದಂತಿರೆ ಕವಿಯು ಮುಚ್ಚಿ ಪೋದ ಕವಿಯುಂ ಕವಿಯೇ? ಇದು ರನ್ನನ ಪ್ರಶ್ನೆ. ನಿಸ್ಸಾರವಾದ ಕವಿತೆಯು ಕವಿತೆಯೆ? ಬರಿಯ ವಿಚಾರವಷ್ಟೇ ಕೃತಿಯಾಗಬಲ್ಲುದೆ? ರಂಜಿಸದ ಕಾವ್ಯ ಕಾವ್ಯವೆ? ಸರಸ್ವತಿಯೆಂಬ ಅಬಲೆಯ ಕೊರಳನ್ನು ಮುರಿದು, ಕುದಿದು ನೋಯಿಸುವವನು ಅಕ್ಷರಸ್ಥನೆ? ಅಂತಹ ಪಾತಕರನ್ನು ಯಾರು ಮುಟ್ಟುವರೊ? ರನ್ನನ ಕುಕವಿನಿಂದೆಯ ಕ್ರಮವಿದು.

*ವಿವರಗಳಿಗೆ ನೋಡಿ: ಅಜಿತತೀರ್ಥಂಕರ ಪುರಾಣ ತಿಲಕಂ ೧–೮೬–೮೯.*

**೨೫೮. ಕುಡಿಯರು**

*ಆ ಪೊಳಲೊಳ್ ಕಾಷ್ಠಭಾರಂಗಳಂ ತಂದು ಮಾರಿ ಬಾಳ್ವ ಧನ್ಯನುಂ ಭದ್ರನುಮೆಂಬೊರ್ರ್ವರ್ **ಕುಡಿಯರ**ರೊರ್ಮೆನಡೆವಭಂಡಿಗಳ್ ಶ್ರೀನದೀತೀರದಿಟ್ಟೆಡೆಯೊಳೊಂದೊಂದಂ*

*ಸೋಂಕಿಮರಿಯೆಮುನಿದಿರ್ವರುಮೊಂದೋರೊರ್ವರನಿರಿದು ಸತ್ತು ವಿಂಧ್ಯಾಟವೀನಿಕಟದ ಜಂಬೂನದಮೆಂಬ ನದಿಯ ತಡಿಯೊಳ್ ಮದಾಂಧಗಂಧಸಿಂಧುರಂಗಳಾಗಿ–*

*(ಶಾಂತಿಪುರಾಣ ೯–೪೬ವ)*

ನಗರಗಳಲ್ಲಿ ಕಟ್ಟಿಗೆ ಹೊರೆಗಳನ್ನು ಹೊತ್ತು ತಂದು ಮಾರುತ್ತಿದ್ದ ಕುಡಿಯರ ಪ್ರಸ್ತಾಪವೂ ಈ ಕಾವ್ಯದಲ್ಲಿದೆ. ಆದಿವಾಸಿ ಜನಾಂಗವಾದ ಇವರ ಅಸ್ತಿತ್ವ ಕಾಡಿನೊಂದಿಗೇ ಇತ್ತೆಂಬುದನ್ನು ಇದು ತಿಳಿಸುತ್ತದೆ. ಕುಡಿಯರಿಗೂ ಕಾಡಿಗೂ ಸಂಬಂಧವಿದೆ.

ಕುಠಿ ಎಂದರೆ ಸಂಸ್ಕೃತದಲ್ಲಿ 'ಬೆಟ್ಟ' ಎಂದರ್ಥ. ಯಾರು ಬೆಟ್ಟ ಭಾಗಗಳಲ್ಲಿ ವಾಸಮಾಡುತ್ತಾರೋ ಅವರನ್ನು ಕುಡಿಯರು ಎಂದು ಕರೆಯಲಾಯಿತು ಎಂದು ಅನಿಸುತ್ತದೆ. ಕುಠಿ>ಕುಡಿ ಸಹಜ. ಕುಡಿಯೆಂದರೆ ಒಕ್ಕಲಿಗವೆಂಬ ಅರ್ಥವೂ ಇದೆ. ಕುಡಿಯೊಕ್ಕಲಿಗವೆಂದರೆ ಮಹಾಶೂದ್ರನೆಂಬ ಅರ್ಥವೂ ಬರುತ್ತದೆ. ಬೆಟ್ಟವನ್ನು ಆಶ್ರಯಿಸುವವರು ಕುಡಿಯರು. ರಾಮಾಯಣದಲ್ಲಿ ರಾಮನು ಪಂಚವಟಿಯಲ್ಲಿ 'ಪರ್ಣಕುಟಿ' ನಿರ್ಮಾಣ ಮಾಡಿರುವುದು ಗಮನಾರ್ಹ.

ಗುಡಿಯ ಮೂಲ ಪ್ರತಿಮೆ, ಕುಡಿ>ಕುಟಿ. ಗೂಡಿನಂತಹ ಕುಟೀರದಲ್ಲಿರುವವನು

'ಕುಡಿ', ಕುರುಬ, ದನಗಾರ, ರೈತ, ಆಳು, ಬಡವ, ಯತಿ, ಮುನಿ ಎಂಬ ಅರ್ಥದ ವಲಯಗಳು ಕುಡಿ–ಕುಟಿಯ ಸುತ್ತಲು ಕಣ್ಣಿಗೆ ಬೀಳುತ್ತವೆ. 'ಕುಟಿ' ಸಂಸ್ಕೃತ ಸಾಹಿತ್ಯದಲ್ಲಿಯೂ ಸ್ಥಾನ ಪಡೆದಿದೆ. ಕುಡಿಯು ಋಗ್ವೇದಕ್ಕೂ ಪ್ರಾಚೀನನಾಗಿದ್ದಾನೆ. ಕುಟಿಯಲ್ಲಿರುವವನು ಯತಿ, ಮುನಿ; ಆದರೆ ಇದು ಮೂಲಾರ್ಥವಲ್ಲ. ನಿಸರ್ಗದಿಂದ ಸ್ವತಂತ್ರನಾಗಿ ಕುರುಬ, ದನಗಾರ, ರೈತ, ನಿರ್ಗತಿಕ, ದರಿದ್ರ ಕಾಲಗತಿಯಲ್ಲಿ ತನ್ನ ಸಂಸ್ಕೃತಿಯ ಆವರಣದಲ್ಲಿ ಪ್ರಕೃತಿಯಿಂದ ದೂರ ಹೊರಟವನು. ಐಹಿಕ ಜೀವನದಿಂದ ಮುಕ್ತವಾಗುವ ಹಂಬಲದ ವ್ಯಕ್ತಿ ಮಾತ್ರ ಹಿಂದುಳಿದಿತು. ಕುಡಿ–ಕುಟಿ; ಗೂಡು–ಗುಡಿ ಇದರ ಸ್ವಾಮಿತ್ವವು ಆತನ ಪಾಲಿಗೆ ಬಂತು. ಆ ಸ್ವಾಮಿಯೇ ಯತಿ; ಮುನಿ. ಇಂದಿನವರೆಗೂ ಆ ಪೀಳಿಗೆ ಆಖಂಡಿತವಾಗಿ ಉಳಿದು ಬಂದಿದೆ. 'ಕುಟಿ' ಎಂಬಲ್ಲಿ ಕುಟಿಯು ಮೊದಲು ಕುಡಿಯಾಗಿದ್ದುದು ಬಯಲಿಗೆ ಬರುತ್ತಿದೆ. ಗಿಡಗಳ ಆಶ್ರಯದಲ್ಲಿ, ಎಲೆ ಬಳ್ಳಿಗಳ ಪೊದೆಗಳಲ್ಲಿ ಇದ್ದ ಗೂಡಿನಂತಹ ಎಡೆಗಳು ಮೊದಲ 'ಕೂಡು'ಗಳು; ಗೂಡುಗಳು. ಕುಡಿ>ಕುಟಿಯೂ ಅದೇ ಬಳಗದ್ದು; ಮಾನವನೊಳಗಿನ ಸೌಂದರ್ಯಪ್ರೀತಿಯ ಸುಪ್ತ–ಪ್ರೇರಣೆಯಿಂದ ಕುಡಿ–ಕುಟಿಯ(ಗುಡಿಸಲು) ಅಂದ–ಚೆಂದವು ಕ್ರಮವಾಗಿ ಅರಳುತ್ತ ಬಂದಿತು ಎಂದು ಶಂಬಾ ಹೇಳುತ್ತಾರೆ.

ಕುಡಿ>ಗುಡಿ, ಗುಂಡಿ ಈ ಬಳಗದ ನಿವಾಸಗಳು ಎಂತಹ ಪ್ರದೇಶದಲ್ಲಿ ಇರಬಹುದು? ಇದರ ಸ್ಪಷ್ಟೀಕರಣದ ಅವಶ್ಯಕತೆ ತೋರುವುದಿಲ್ಲ. ಮೊತ್ತ ಮೊದಲಲ್ಲಿ ಇವು ಗುಡ್ಡದ ಅಂಕುಡೊಂಕಾದ (ಡೋಂಗರದ) ಅಕ್ಕ ಪಕ್ಕದ ಬೀಡಾರಗಳು; ಇವು ಅಂದಿನ ನೆಲೆಗಾರರ ಬಾಳಿನ ಬಗೆಯ ಪ್ರತೀಕಗಳಾಗಿವೆ. ಕಾಡು–ಮೇಡುಗಳಲ್ಲಿ ಪ್ರಕೃತಿಮಾತೆಯ ಒಡಲಲ್ಲಿ ಬೆಳೆದ ಜನ. ಅವರು ಬೆಟ್ಟದ ಜೀವಿಗಳಾಗಿರಬೇಕು. ಈ ಜನದ ಕುಡಿ ಬೆಳೆದ ಹಾಗೆ, ಬಳಿಕ ಈ ಸ್ಥಳನಾಮಗಳು ಬೆಟ್ಟದಿಂದ ಸ್ವಲ್ಪ ದೂರದೂರ ತಲೆದೋರತೊಡಗಿರಬೇಕು. ಕುಡಿ' ಕೋಡಿ, ಕೋಡು, ಕೋಟೆ, ಗೋಡು, ಕೋಣೆ, ಗುಂಡಿ ಎಂಬೀ ಉತ್ತರಪದವಾಗಿರುವ ಅನೇಕ ಗ್ರಾಮಗಳು ಗುಡ್ಡದ ಸೆರಗಿನಲ್ಲಿ ಇರುವುದನ್ನು ಕಾಣಬಹುದು. ಕಂನಾಡಿನಲ್ಲಿ ಮಾತ್ರವಲ್ಲ, ಮಹಾರಾಷ್ಟ್ರದಲ್ಲಿಯೂ ಈ ಊರುಗಳಿವೆ; ಗುಡ್ಡದ ಗುಂಟ ಇವೆ. ಅದೇಕೆ, ಉತ್ತರಕ್ಕೆ ಕಾಶ್ಮೀರದಲ್ಲಿಯೂ ಕೂಡ 'ಕುಡ' ಉಂಟು! ಕಾಶ್ಮೀರದ ಒಬ್ಬ ರಾಜಕೀಯ ಮುಖಂಡನನ್ನು ಒಂದು ಗಿರಿನಿವಾಸದಲ್ಲಿ ಬಂಧಿಸಿಟ್ಟ ಗ್ರಾಮದ ಹೆಸರು ಕುಡ. ಪರ್ವತದ ಕೋಡಿಗೆ 'ಕೂಟ' (ಶಿಖರ) ಎಂದು ಸಂಸ್ಕೃತದಲ್ಲಿ ಹೆಸರು! ಹೇಮಕೂಟ, ತ್ರಿಕೂಟ, ಚಿತ್ರಕೂಟಗಳು ಉತ್ತರ ದೇಶದಲ್ಲಿವೆ. ಮೇಡು ಮತ್ತು (ಸಂಸ್ಕೃತ) ಮೇರು ಇವುಗಳಿಲ್ಲಿರುವ ಹೋಲಿಕೆ ವಿಚಾರಾರ್ಹವಾಗಿದೆ. ಪರ್ವತ–ವಾಚಕ 'ಕುಟ' ಈ ಶಬ್ದವು ಸಂಸ್ಕೃತದಲ್ಲಿದೆ. ಆದರೆ, ಅದು ಸಾಹಿತ್ಯದಲ್ಲಿ ದೊರೆಯುವುದಿಲ್ಲವೆಂದು ಮೋನಿಯರ್ ವಿಲಿಯಂಸ್‌ರು ನಮೂದಿಸಿರುತ್ತಾರೆ! ಕುಟಿ–ಕುಡ–ಕುಂಡ ಇವು ಆರ್ಯಾಭಾಷಾವರ್ಗದ ಪದಗಳಲ್ಲ ಎಂದ ತಜ್ಞರ ಮತವಿದೆ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಹಾಲುಮತ ದರ್ಶನ ಸಂಪುಟ. ೩ ಪುಟ. ೨೬–೨೭*

*ಸಿ. ವೀರಣ್ಣ ೧೯೮೬ ಪ್ರಾಚೀನ ಸಾಹಿತ್ಯ: ರಾಜಸತ್ತೆಯ ವೈಭವದ ಕಾಲ ಪುಟ. ೨೩೮*

೨೫೯. ಕುಮ್ಮರಿ ಬೇಸಾಯ

*ಪೋಡುಮಗಾಜಿನಯ್ ನೀಂಕುಮ್ಮರಿಯಂಸುಟ್ಟುಪೋಗಿ ಪೊಟ್ಟಿಡೆ ಬಂದು ನೋಡುವನ್ನೆಗಮಾ ಕಿರ್ಚಿನೊಳ್ ಸತ್ತ ಋಷಿರೂಪಂ ಕಂಡು ಕರುಣಿಸಿ..........................*

*(ಡಿ.ಎಲ್.ಎನ್ ೨೦೦೯ ಪುಟ. ೨೦೪)*

ಕುಮ್ಮರಿ ಬೇಸಾಯವೆಂಬುದು ಹಳೆಯ ಬೇಸಾಯ ಪದ್ಧತಿ. ಕುಮ್ಮರಿ ಬೇಸಾಯದಲ್ಲಿ ಕಾಡನ್ನು ಸುಟ್ಟು ಅಲ್ಲಿ ಬೆಳೆ ಬೆಳೆಯುತ್ತಾರೆ. ಅದು ನೀರಾವರಿ ಬೆಳೆಯ ಪದ್ಧತಿಯಲ್ಲ. ಮಳೆಯಾಶ್ರಿತ ಬೇಸಾಯ ಪದ್ಧತಿ. ಕಾಡನ್ನು ಕತ್ತರಿಸು (ತಾತ್ಕಾಲದ ಬೇಸಾಯಕ್ಕಾಗಿ) ಎನ್ನುವುದನ್ನು ಪಂಪನು ಕುಮ್ಮರಿಗಡಿಯೆಂದು ಕರೆದಿದ್ದಾನೆ.

(ಪಂಪ ಭಾರತ ೧೦-೮೮)

ಈ ಹಂತದಲ್ಲಿ ಆರ್ಯರು ತಾವು ಹೊಸದಾಗಿ ವಿಸ್ತರಿಸಿದ ಪ್ರಾಂತದಲ್ಲಿ ಕಾಡುಗಳನ್ನು ಹೇಗೆ ಸವರಿ ಕೃಷಿ ಯೋಗ್ಯವಾಗಿಸಿದರು ಎಂಬುದನ್ನು ಕುರಿತು ಕೂಡ ಯಜುರ್ವೇದ ಸಂಬಂಧೀ ಸಾಹಿತ್ಯವನ್ನು ಆಧರಿಸಿ ಅರ್ಥ ಮಾಡಿಕೊಳ್ಳಬಹುದು. ಮುಖ್ಯವಾಗಿ ಕಾಡುಗಳನ್ನು ಸುಡುತ್ತಿದ್ದರು. (ಇಂದಿಗೂ ಸಹಜ ಬೇಸಾಯವನ್ನು ಮಾಡುವ ಗಿರಿಜನರು ಇದೇ ಪದ್ಧತಿಯನ್ನೇ ಅನುಕರಿಸುವುದು) ಮಂತ್ರ ಸಾಹಿತ್ಯದಲ್ಲಿ ಇದು ಕಾಡುಗಳನ್ನು ಅಗ್ನಿಗೆ ಅರ್ಪಿಸುವುದು ಎಂದೋ. ಅಗ್ನಿಯು ಕಾಡನ್ನು ಭುಂಜಿಸಿದನು ಎಂದೋ ವರ್ಣಿತವಾಗಿರುತ್ತದೆ.

ಕೃಷಿಯೇತರ ಭೂಮಿಯನ್ನು ಕೃಷಿ ಭೂಮಿಯನ್ನಾಗಿ ಪರಿವರ್ತಿಸುವ ಪ್ರಕ್ರಿಯೆ ಕ್ರಿ.ಶ.೮ರಿಂದ ೧೪ನೆಯ ಶತಮಾನಗಳ ನಡುವಣ ಅವಧಿಯಲ್ಲಿ ಇತ್ತು ಎನ್ನುವುದಕ್ಕೆ ಸಾಕಷ್ಟು ಆಧಾರಗಳಿವೆ. ಈ ಪರಿವರ್ತನಾ ಪ್ರಕ್ರಿಯೆಯ ಮೂಲ ಉದ್ದೇಶ ಕೃಷಿ ಉತ್ಪಾದನೆಯನ್ನು ಹೆಚ್ಚಿಸುವುದು. ಕೃಷಿ ಭೂಮಿಯ ವಿಸ್ತರಣೆ ಮುಖ್ಯವಾಗಿ ಎರಡು ಉದ್ದೇಶಗಳನ್ನು ಈಡೇರಿಸುತ್ತಿತ್ತು.

ಅವುಗಳೆಂದರೆ,

೧. ರಾಜ್ಯದ ಆದಾಯವನ್ನು ಹೆಚ್ಚಿಸುವುದು ಈ ವಿಸ್ತರಣೆಯ ಮೊದಲನೆಯ ಉದ್ದೇಶ. ಕೃಷಿಯೋಗ್ಯವಲ್ಲದ ಪ್ರದೇಶಗಳನ್ನು ಕೃಷಿ ಭೂಮಿಯನ್ನಾಗಿ ಪರಿವರ್ತಿಸಿ ಅದರಿಂದ ರಾಜ್ಯದ ಬೊಕ್ಕಸಕ್ಕೆ ಹೆಚ್ಚಿನ ಆದಾಯ ಬರುವಂತೆ ಮಾಡಲಾಯಿತು.

೨. ಜನಸಂಖ್ಯೆಯ ಒತ್ತಡವನ್ನು ಕಡಿಮೆಗೊಳಿಸುವುದು ಇನ್ನೊಂದು ಉದ್ದೇಶ. ಹೊಸದಾಗಿ ನಿರ್ಮಾಣಗೊಳ್ಳುವ ಕೃಷಿಯೋಗ್ಯ ಭೂಮಿಯಲ್ಲಿ ಜನರು ವಾಸಮಾಡ ತೊಡಗುವುದು ಸಹಜ. ಇದು ಹೊಸ ಜನವಸತಿ ನಿರ್ಮಾಣಗೊಳ್ಳುವುದಕ್ಕೆ ಕಾರಣವಾಯಿತು. ಅದೇ ರೀತಿ ಇದರಿಂದ ಜನಸಂಖ್ಯೆಯ ಒತ್ತಡ ಕಡಿಮೆಯಾಗ ತೊಡಗಿತು. ಈಗ ಇದನ್ನು ಒತ್ತುವರಿ ಎಂದು ಕರೆಯುತ್ತೇವೆ.

ಬೈಲು ಎಂದರೆ ಸಂಪೂರ್ಣವಾಗಿ ನೀರಾವರಿ ವ್ಯವಸ್ಥೆ ಇರುವ, ಮೂರು ಬೆಳೆ ತೆಗೆಯಬಹುದಾದ ಪ್ರದೇಶ. ಮಜಲುಗದ್ದೆ ಬೈಲುಗಿಂತ ಸ್ವಲ್ಪ ಎತ್ತರದಲ್ಲಿ ಇದ್ದು ಒಂದು

ಬೆಳೆಯಷ್ಟೇ ತೆಗೆಯಬಹುದಾಗಿತ್ತು. ನೀರಿನ ಸರಿಯಾದ ವ್ಯವಸ್ಥೆ ಇದ್ದರೆ ಮಾತ್ರ ಎರಡು ಬೆಳೆ ತೆಗೆಯಬಹುದಿತ್ತು. ಬೆಟ್ಟವು ಎತ್ತರ ಪ್ರದೇಶದಲ್ಲಿರುವ ಕೃಷಿ ಭೂಮಿ. ಆದರೆ ಅಲ್ಲಿ ಬೆಳೆಗಳನ್ನು ಬೆಳೆಯುವುದು ಮಳೆಯನ್ನು ಅವಲಂಬಿಸಿರುತ್ತಿತ್ತು. ಬೆಟ್ಟಗುಡ್ಡಗಳಲ್ಲಿ ಕುಮೇರ್ (ಕುಮೇರಿ) ಎನ್ನುವ ಇನ್ನೊಂದು ರೀತಿಯ ಕೃಷಿ ಪ್ರದೇಶಗಳಿರುತ್ತಿದ್ದವು. ಇದನ್ನು 'ಕುಮೇರ್ ಕೃಷಿ' ಎಂದೇ ಕರೆಯಲಾಗಿದೆ. ಈ ಕೃಷಿಯನ್ನು ವರ್ಷಕ್ಕೊಂದು ಸಲ ಅಥವಾ ಎರಡು ವರ್ಷಕ್ಕೊಮ್ಮೆ ಮಾಡಲಾಗುತ್ತಿತ್ತು. ಕುಮರಿ ಬೇಸಾಯ ಕ್ರಮ ನೀರಾವರಿ ಬೇಸಾಯದಂತೆ ಅಲ್ಲ.

ಗುಡ್ಡಗಾಡು ಪ್ರದೇಶಗಳಲ್ಲಿ ವಾಸಿಸುತ್ತಿದ್ದ ಬುಡಕಟ್ಟು, ಜನರು ಈ ಕೃಷಿ ಪದ್ಧತಿಯನ್ನು ಅನುಸರಿಸುತ್ತಿದ್ದರು. ಕಾಡನ್ನು ಕಡಿದು ಭೂಮಿಯನ್ನು ಕೃಷಿಯೋಗ್ಯವನ್ನಾಗಿ ಮಾಡಿ ಬಿತ್ತನೆ ಕೆಲಸವನ್ನು ಮಾಡಲಾಗುತ್ತಿತ್ತು.

ಕೃಷಿಯನ್ನು ಇಂಗ್ಲಿಷಿನಲ್ಲಿ "Agriculture" ಎಂದು ಕರೆಯುತ್ತಾರೆ. Culture ಎಂದರೆ ಕಟ್ಟುವಿಕೆ. ಅದು ಕೃತಕವಾದುದು ಉಳುಮೆಯು ಕೃಷಿಯಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತದೆ. ಕೃಷಿ ಸಂಸ್ಕೃತಿಯು ಬೆಳೆಯದು ಪ್ರಮುಖ ಪರಿಕರವಾಗಿದೆ. ಆದರೆ ಹಿಂದಿನಿಂದಲೂ ಕೃಷಿ ಪದ್ಧತಿಯಿತ್ತು. ಕೃಷಿಯಲ್ಲಿ ಎರಡು ವಿಧಾನ ಒಂದು ಆಹಾರೋತ್ಪಾನೆಗೆ ಬೇಕಾದ ಕೃಷಿಯನ್ನು ಮಾಡುವುದು ಎರಡನೆಯದು ವಾಣಿಜ್ಯೋದ್ದೇಶ ಕ್ಕಾಗಿ ವಿಶೇಷವೆಂದರೆ ಪ್ರಾಚೀನ ಕನ್ನಡ ಸಂದರ್ಭದಲ್ಲಿ ಕೃಷಿಗೂ – ಸುಂಕಕ್ಕೂ ರಾಜ್ಯ ಬೊಕ್ಕಸಕ್ಕೂ ಸಂಬಂಧ ಕಲ್ಪಿತವಾಗಿರುವುದು. ಕುಮೆರ್ ಬೇಸಾಯ ಪ್ರಾಚೀನದಿಂದಲೂ ನಡೆದುಬಂದಿದೆ. ತುಳುವಿನಲ್ಲಿ ಕುಮೇರಿಯೆಂದರೆ ಬೆಟ್ಟಗಾಡು ಎಂಬರ್ಥವಿದೆ ಕುಮೇರಿ (ಕುಮ್ಮು) ಬೇಸಾಯದ ವಿಶಿಷ್ಟ ಕ್ರಮವೆಂದರೆ ಬೆಟ್ಟಗಾಡುಗಳಲ್ಲಿ ಮೊದಲು ಗಿಡಗಂಟೆಗಳನ್ನು ಸವರಿ ಅನಂತರ ಭೂಮಿಯನ್ನು ಸುಡಲಾಗುತ್ತದೆ. ಇದರಲ್ಲಿ ಉಳುಮೆಯ ಪದ್ಧತಿಯಲ್ಲ. ಅದರ ಬದಲಿಗೆ ಮಳೆಗಾಲದಲ್ಲಿ ಅಲ್ಲಲ್ಲಿ ಕಡ್ಡಿಯಿಂದಲೋ ಬೇರೆ ಯಾವುದಾದರೂ ಸಲಕರಣೆಯಿಂದಲೋ ಭೂಮಿಯನ್ನು ಚುಚ್ಚಿ ಬೀಜ ಹಾಕಲಾಗುತ್ತದೆ. ಒಂದು ವರ್ಷ ಮಾಡಿದ ಜಾಗದಲ್ಲಿ ಮತ್ತೊಂದು ವರ್ಷ ಅದೇ ರೀತಿಯ ಬೇಸಾಯ ಮಾಡುವುದಿಲ್ಲ. ಬೇರೊಂದು ಪ್ರದೇಶದಲ್ಲಿ ಬೇಸಾಯ ಮಾಡಲಾಗುತ್ತದೆ. ಇದು ಕುಮೇರಿ ಬೇಸಾಯದ ವಿಶಿಷ್ಟತೆ. ಈಗಲೂ ಈ ಕೃಷಿ ಪದ್ಧತಿಯು ಚಾಲ್ತಿಯಲ್ಲಿದೆ.

*ವಿವರಗಳಿಗೆ ನೋಡಿ: ಪಂಪಭಾರತದ ಖಾಂಡವ ವನದಹನ ಪ್ರಸಂಗ*

*ಡಿ.ಡಿ. ಕೊಸಾಂಬಿ ೧೯೯೮ ಪ್ರಾಚೀನ ಭಾರತದಲ್ಲಿ ಚರಿತ್ರೆ ಪುಟ. ೯೪–೯೫*

*ಡಿ. ಆರ್. ಗೋವಿಂದರಾಜು ಎಚ್. ಕೆ. ನರಸಿಂಹಗೌಡ ೧೯೭೭೮ ಪ್ರಾಚೀನಕೃಷಿ ತಂತ್ರಗಳು*

*ಮೋಹನಕೃಷ್ಣ ರೈ ೨೦೦೪ ಪ್ರಭುತ್ವ ಮತ್ತು ಜನತೆ ಪುಟ. ೧೮–೧೯*

**೨೬೦. ಕುರುಕ್ಷೇತ್ರ**

ಕುರುಕ್ಷೇತ್ರ–ಮತ್ಸ್ಯ–ಪಂಚಾಲ–ಶೂರಸೇನ ದೇಶಗಳು ಬ್ರಹ್ಮಾವರ್ತಕ್ಕೆ ಸಮಾನವಾಗಿದ್ದಂತೆ ಇದ್ದ ಪುಣ್ಯಭೂಮಿಗಳು. ಅಲ್ಲಿ ಬ್ರಹ್ಮರ್ಷಿಗಳು ಜನಿಸುವರು.

ಕುರುಕ್ಷೇತ್ರದಲ್ಲಿ ಮಹಾಭಾರತ ಯುದ್ಧ ನಡೆಯಿತು. ಜಗಳ; ರಣರಂಗಗಳಿಗೂ ಕುರುಕ್ಷೇತ್ರವೆಂದು ಕರೆಯುತ್ತಾರೆ.

*ವಿವರಗಳಿಗೆ ನೋಡಿ: ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೨–೧೯*

*ಯಜ್ಞನಾರಾಯಣ ಉಡುಪ ೧೯೭೪ ಪುರಾಣ ಭಾರತಕೋಶ.*

**೨೬೧. ಕುರುಹು**

*ಕೆಲಸವಂ ತೊಡಗದಿಹುದೆ ಮನುಷ್ಯರ ಬುದ್ಧಿಗೆ ಮೊದಲ* ***ಕುಱುಹು*** *; ಕೆಲಸವಂ ತೊಡಗಿದ ಬೞಿಕ ಅದಂ ಕೊನೆಮುಟ್ಟಿಸುವುದೆ ಎರಡನೆಯ* ***ಕುಱುಹು*** *(ಕರ್ಣಾಟಕ ಪಂಚತಂತ್ರ, ವಿಶ್ವಾಸ ಪ್ರಕರಣ, ೧೬೪ ವಚನ)*

ಕೆಲಸವನ್ನು ತೊಡಗದಿರುವುದೇ ಮನುಷ್ಯರ ಬುದ್ಧಿಗೆ ಮೊದಲು ಕುರುಹು, ಕೆಲಸವನ್ನು ತೊಡಗಿದ ಬಳಿಕ ಅದನ್ನು ಕೊನೆ ಮುಟ್ಟಿಸುವುದೇ ಎರಡನೆಯ ಕುರುಹು (ಗದ್ಯಾನುವಾದ: ಗುಂಡ್ಮಿ ಚಂದ್ರಶೇಖರ ಐತಾಳ) ಕುರುಹು ಎಂದರೆ ಚಿಹ್ನೆ; ಗುರುತು, ಕುರುವು ಮುಂತಾದ ಪದಗಳು ಇದಕ್ಕೆ ಪರ್ಯಾಯವಾಗಿ ಬಳಕೆಯಾಗುತ್ತದೆ.

**೨೬೨. ಕುಱುವಡಿ**

*ಸಣ್ಣಮಡಿ; ಬಗೆದ ಚಿಕ್ಕ ವಸ್ತ್ರ: ಎಸೆಯ ಜಲದೇವತೆಗಳ್ ನಿಱಿವಿಡಿದುಡಲ್ ನಿಮಿರ್ಚಿದ* ***ಕುಱುವಡಿಯ*** *ತರಂಗದಂತೆ ಬಂಬಲ್ದೆಗಳ್ (ಪಂಪಭಾರತ ೫–೫೭); ಕುಱುವಡಿಯಂ ಪಡೆದೆನೆಂದಿರ್ಪ ಕಳ್ಳನಂ............*

*(ಸುಕುಮಾ ೭–೨೭ವ)*

ಚಿಕ್ಕಮಡಿ ಬಟ್ಟೆಯನ್ನು ವಡ್ಡಾರಾಧನೆಯ ಕೃತಿಕಾರನು ಕುಱುವಡಿಯೆಂದು ಕರೆದಿದ್ದಾನೆ. ಮಡಿಯೆನ್ನುವ ಪರಿಕಲ್ಪನೆಯನ್ನು ಪವಿತ್ರ ಎಂದು ಪರಿಭಾವಿಸಿಕೊಳ್ಳಲಾಗುತ್ತದೆ. "ಮಡಿ"ಯೆಂದರೆ ಶುದ್ಧವಾಗಿರುವುದು ಎಂದರ್ಥ. ಇದಕ್ಕೆ ಸಂಸ್ಕೃತಿಯಲ್ಲಿ ಸರಳ ದ್ವಂದ್ವಗಳಿವೆ. ಇದನ್ನು ಈ ಕೆಳಗಿನಂತೆ ಪರಿಭಾವಿಸಬಹುದು.

| ಮಡಿ | ಮೈಲಿಗೆ |
|---|---|
| ೧. ಸ್ನಾನ ಮಾಡುವುದು | ೧. ಸ್ನಾನ ಮಾಡದಿರುವುದು |
| ೨. ಶುದ್ಧ ತೀರ್ಥೋದಕ | ೨. ಸಾಮಾನ್ಯ ನೀರಿನ ಸೇವನೆ |
| ೩. ಶುಭ್ರವಾದ ಮಡಿ ಬಟ್ಟೆ | ೩. ಮೇಲಿಂದ ಮೇಲೆ ಧರಿಸಿದ ಬಟ್ಟೆ |
| ೪. ಅಸ್ಪೃಶ್ಯರನ್ನು ಮುಟ್ಟದಿರುವುದು | ೪. ಅಸ್ಪೃಶ್ಯರನ್ನು ಮುಟ್ಟುವುದು |

(ಇದನ್ನು ಯಾಜ್ಞವಲ್ಕ್ಯ; ಮನು ಮೊದಲಾದವರು ವಿವರಿಸಿದ್ದಾರೆ.)

೫. ದೇವಸ್ಥಾನಕ್ಕೆ ಹೋಗುವಾಗ ಮಡಿಯಲ್ಲಿ ಹೋಗಬೇಕು

೫. ಸಂತೆಯಲ್ಲಿ ಮೈಲಿಗೆಯಾದರೆ ಅಡ್ಡಿಯಿಲ್ಲ.

ಇದು ಮಡಿ ಮೈಲಿಗೆ ಸ್ಥೂಲಚಿತ್ರಣ, 'ಮಡಿ' ಬಟ್ಟೆ ಶುಭ್ರವಾದ, ಒಗೆದಿರಿಸಿದ ಬಟ್ಟೆ, ಸಾಮಾನ್ಯವಾಗಿ ರೇಶ್ಮೆಯ ವಸನಗಳು.

*ವಿವರಗಳಿಗೆ ನೋಡಿ: ಪವಿತ್ರ; ಪಾತಿವ್ರತ್ಯ*

**೨೬೩. ಕುಲಜ**

**ಕುಲಜ**ನಪ್ಪನಂ ಕುಲಹೀನನೆಂದಪರ್ ಕುಲಹೀನನಂ **ಕುಲಜಾತ**ನೆಂಬರ್ ಕಲಿಯಂ ಕಡುಪಂದೆಯೆಂದು ಮಾತಾಡುವರ್ ಕಡುಪಂದೆಯಂ ಕಲಿಯೆಂದು ನುಡಿವರ್ ಪಲಬರ್ ಜೀಯೆನೆ ನನ್ನಿಯಂ ನುಡಿವನಂ ಪುಸಿಗನೆಂಬರ್ ಪುಸಿವಾತುಗನಂ ನೆಲದೊಳೀತನೆ ಪುಸಿಯಿಲ್ಲದವನೆಂಬರರಸುಗಳ್ಗಿದು ನೈಜ ಗುಣಮಾಗಿರ್ಕುಂ.....

(*ಕರ್ನಾಟಕ ಪಂಚತಂತ್ರಂ, ಭೇದಪ್ರಕರಣಂ-೧೦೭*)

ಕರ್ಣ ಕುಲಹೀನನಲ್ಲ ಎಂದು ದುರ್ಯೋಧನ ಶಲ್ಯನನ್ನು ಒಪ್ಪಿಸಲು ಪ್ರಯತ್ನಿಸುತ್ತಾನೆ.

ಕುಲವನ್ನು ಎರಡು ರೀತಿಯಲ್ಲಿಯೂ ವ್ಯಾಖ್ಯಾನಿಸುತ್ತಾರೆ. ಒಂದು-ಕುಲವೆಂದರೆ ಜಾತಿ. ಮತ್ತೊಂದು ಕುಲವೆಂದರೆ ವಂಶ ಅಥವಾ ಮನೆತನ. ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ ಎಂಬ ಗಾದೆಯ ಮಾತಿದೆ. ಇಲ್ಲಿ ಕುಲವೆಂದರೆ ಮನೆತನವೆಂಬ ಅರ್ಥ ಬರುತ್ತದೆ. ಪಂಪ ಭಾರತದಲ್ಲಿ ಕುಲವೆನ್ನುವುದನ್ನು ಜಾತಿಯೆಂಬ ಅರ್ಥದಲ್ಲಿ ಬಳಸಲಾಗಿದೆ. ಕುಲಕ್ಕೂ ಬಂಧುತ್ವಕ್ಕೂ ಸಂಬಂಧವಿದೆ. ಆದರೆ ಭಾರತಕ್ಕೆ ಬಂದ ಇಂಗ್ಲಿಷರು ಕುಲಕ್ಕೆ Community ಎಂದೂ, Caste ಎನ್ನುವುದಕ್ಕೆ ಜಾತಿಯೆಂದೂ ಬಳಸಿದ್ದಾರೆ. ಕಮುನಿಟಿಯೆನ್ನುವುದು ಕಮ್ಯನೆಡೆ(ಫ್ರೆಂಚ್) ಕಮ್ಯುನಿಟೇಟಂ(ಲ್ಯಾಟಿನ್) ಪದದಿಂದ ಬಂದಿದೆ. ಆದರೆ ಭಾರತದಲ್ಲಿ ಜಾತಿಯೆಂಬುದು 'ಜತ್'ವಿನಿಂದಲೂ ಕುಲವೆಂಬುದು ಗುಂಪು/ಸಮೂಹವೆಂಬ ಅರ್ಥದಲ್ಲಿ ಬಳಕೆಯಾಗಿದೆ. ಶಿಶುಪಾಲ, ಕೃಷ್ಣನನ್ನು ತೆಗಳುವುದು ಮಹಾಭಾರತದಲ್ಲಿ ಆ ಕಾಲದ ಕ್ಷತ್ರಿಯರಲ್ಲಿ ಕಾಣಿಸಿಕೊಂಡಿರುವ ಕುಲ ಸಂಘರ್ಷವಿರುವಂತಿದೆ. ಅಜ್ಞಾತಕುಲಶೀಲನಪ್ಪಾತನಂ ತನ್ನಾವಾಸಮಂ ಪುಗಿಸಲಾಗದು (ಕರ್ನಾಟಕ ಪಂಚತಂತ್ರ, ಭೇದ ಪ್ರಕರಣ, ಶ್ಲೋಕ ೮೦)

ಅಜ್ಞಾತಕುಲಶೀಲದವನನ್ನು ಮನೆಯೊಳಗೆ ಕರೆಯಬಾರದು.

**ಕುಲ**ಮನೆ ಮುನ್ನಮುಗ್ಗಡಿಪಿರೇಂಗಳ ನಿಮ್ಮ **ಕುಲಂ**ಗಳಾಂತು ಮಾರ್ದುಲೆವನನಟ್ಟಿ ತಿಂಬುವೆ ಕುಲಂ ಕುಲಮಲ್ತು ..................

(ಪಂ. ಭಾ. ೧೦-೨೧)

ಕುಲವೆನ್ನುವುದು ಕುಲ್, ಎಂಬ ಧಾತುವಿನಿಂದ ಬಂದಿದೆ. ಕುಲ್ ಎಂದರೆ ಗುಂಪು. ಜೊತೆಸೇರು ಎಂಬರ್ಥವಿದೆ. ಕುಲವು ಆಲೋಚನಾ ಪಂಥ, ಏಕತೆ, ಬಂಧನ, ಸಹಯೋಗ, ಕುಟುಂಬ, ವಂಶಪರಂಪರೆ. ಜಗತ್ತು ಸೃಜನಾತ್ಮಕ ಶಕ್ತಿಯೆಂಬ ಅರ್ಥಗಳಲ್ಲಿ ಬಳಕೆ

ಯಾಗುತ್ತದೆ. ಶೈವ ಪರಂಪರೆಯಲ್ಲಿ ಕುಲಕ್ಕೆ ವಿಶೇಷ ಲಕ್ಷಣಗಳನ್ನು ಹೇಳಲಾಗಿದೆ. ಕುಲ ಎಂದರೆ ತಂತ್ರಶಾಸ್ತ್ರ ಪರಿಣಿತನಾದವನು ಶಕ್ತಿಯ ಉಪಾಸಕೆ. ಕುಲಾಚಾರದಲ್ಲಿ ನಿರತನಾದವನು ಕುಲಕ್ಕೆ ಸಂಬಂಧಿಸಿದವನು ಎಂಬ ಅರ್ಥಗಳಿವೆ.

ಕುಲ ನ್ಯಾಯಾಲಯಗಳಲ್ಲಿ 'ಕುಲಕರು' ಅಥವಾ 'ಶ್ರೀಮಂತರು' 'ಕುಲ' ನ್ಯಾಯಾಲಯದ ಅಧ್ಯಕ್ಷರಾಗಿರುತ್ತಿದ್ದರು. 'ಕುಲ' ನ್ಯಾಯಾಲಯದಿಂದ ಹಿಡಿದು 'ಗಣ' ನ್ಯಾಯಾಲಯದವರೆಗೆ ಅಪೀಲು ಮಾಡುವ ಅವಕಾಶಗಳನ್ನು ನ್ಯಾಯಶಾಸ್ತ್ರ ನಿಯಮಗಳು ಕಲ್ಪಿಸಿಕೊಟ್ಟಿವೆ.

ಜಾತಿ ಮತ್ತು ಕುಟುಂಬಗಳ ನಡುವೆ ರಕ್ತಸಂಬಂಧವನ್ನು ಇನ್ನೊಂದು ಸಾಮಾಜಿಕ ಸಮೂಹವಿದೆ. ಅದು ಕುಲ. ಕುಲ ಎನ್ನುವುದು ಕುಟುಂಬಗಳ ಸಮೂಹ. ಈ ಕುಟುಂಬಗಳು ಗಂಡಾಗಲಿ, ಹೆಣ್ಣಾಗಲಿ ಬಹು ಹಿಂದಿನ ಒಂದೇ ಮೂಲಕ್ಕೆ ತಮ್ಮನ್ನು ತೆಗೆದುಕೊಂಡು ಹೋಗುತ್ತವೆ. ಇಂಥ ಕುಲ ಹೊರ ಬಾಂಧವ್ಯದ್ದು. ಅದಕ್ಕೆ ಒಂದು ಹೆಸರಿರುತ್ತದೆ. ಈ ಹೆಸರು ಕೆಲವು ಸಲ ಆ ಕುಲಕ್ಕೆ ಸೇರಿದ ಉಪನಾಮವಾಗಿರುವುದೂ ಉಂಟು.

ಋಗ್ವೇದದಲ್ಲಿ **'ಕುಲ'** ಶಬ್ದವು ಒಂದು ಬಾರಿ ಬರುತ್ತದೆ, ಮನೆತನ ಎಂಬರ್ಥದಲ್ಲಿ. **'ಕುಲ'** ಇದಕ್ಕೆ ಅಲ್ಲಿ ಮನೆ (ತನ) ಎಂಬ ಅರ್ಥವುಂಟು.

*ವಿವರಗಳಿಗೆ ನೋಡಿ: ಸಿ.ವೀರಣ್ಣ ೧೯೮೬*

*ಪ್ರಾಚೀನ ಸಾಹಿತ್ಯ: ರಾಜಸತ್ತೆಯ ವೈಭವದ ಕಾಲ ಪುಟ. ೧೯೦– ೧೬೪*

*ಶಂಬಾ ಜೋಶಿ ೧೯೯೯ ಸಂಪುಟ. ೨ ಪುಟ. ೪೧೫. ಸಂಪುಟ. ३*

*ಹಾಲುಮತ ದರ್ಶನ ಪುಟ. ३೨, ೧೯೭*

*Raymond Williams 1983 Keywords*

### ೨೬೪. ಕುಲದೈವ

*ಅದು ಸುಖದೊಂದು ಪಿಂಡಮದು ಪುಣ್ಯದ ಪುಂಜಮದಂಗಜಂಗೆ ಬಾ*
*ಚಿಸ್ಮೊದಲದು ಚಿತ್ತಜಂಗೆ* ***ಕುಲದೈವ****ಮದಂಗಜಚಕ್ರವರ್ತಿಗೆ.......*

*(ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೨–೭೪)*

ಕುಲದೈವದ ಪರಿಕಲ್ಪನೆಯು ವಿಶಿಷ್ಟವಾದುದು. ಕುಟುಂಬ ದೈವ; ಜಾತಿ ದೈವ; ಜನಾಂಗ ದೈವ; ಊರಿನ ದೈವ; (ಗ್ರಾಮದೇವತೆ) ಹೀಗೆ ಬೇರೆ ಬೇರೆ ದೈವ ಪರಿಕಲ್ಪನೆಗಳಿವೆ. ಕುಟುಂಬ ಅಥವಾ ಕುಲದೈವವೆಂದರೆ ಆಯಾ ಕುಟುಂಬ ಮತ್ತು ಕುಲಕ್ಕೆ ಸಂಬಂಧಿಸಿದ ದೈವಗಳು. ಆಯಾ ಊರುಗಳ ದೇವತೆಗಳು ಬೇರೆ ಬೇರೆಯಿರುತ್ತವೆ. ಅವುಗಳ ಸ್ವರೂಪ ಬೇರೆಯಿರುತ್ತವೆ. ಆದರೆ ಆಯಾ ಊರಿನ ಎಲ್ಲರೂ ಊರಿನ ದೇವತೆಗೆ ನಡೆದುಕೊಳ್ಳುತ್ತಾರೆ. ಆಯಾ ಜಾತಿಗಳಿಗೂ ಬೇರೆ ಬೇರೆ ದೈವಗಳಿರುತ್ತವೆ. ಆದರೆ, ಇಲ್ಲಿ ಪಂಪ ಚಿತ್ತಜನ (ಮನಸಿನ)ಕುಲದೈವ ಮನ್ಮಥನ ಕುರಿತು ಹೇಳುತ್ತಿದ್ದಾನೆ.

ರೇಣುಕಾ, ಜಗದಂಬಾ, ಚಂದಲಾ ಪರಮೇಶ್ವರಿ ಇತ್ಯಾದಿ ದೇವಿಯರೇ ಮುಖ್ಯ ಕುಲದೇವತೆಯಾಗಿರುವ ಮನೆತನಗಳು ಇಲ್ಲದಿಲ್ಲ. ಈ ಕುಲಾಚಾರಾದಲ್ಲಿ ಮಾತಾ – ದೇವಿ ಪ್ರಸಾದಕ್ಕೆ ಮಹತ್ವವಿರುತ್ತದೆ. ಆ ಪೂಜೆಗಳಲ್ಲಿ ದೇವಿಯರು ಗಂಡಂದಿರ ಹೆಸರು ಬಾರದಿರುವುದು ಕಂಡುಬರುತ್ತದೆ. ಕೊಲ್ಲಾಪುರದ ದೇವಿಯನ್ನು ಕೆಲವರು ಲಕ್ಷ್ಮೀರೂಪದಲ್ಲಿ ಕಾಣುತ್ತಾರೆ. ಕೆಲವರು ಅಂಬಾಭವಾನಿ (ಪಾರ್ವತಿ) ರೂಪದಲ್ಲಿ ಆರಾಧಿಸುತ್ತಾರೆ. ಇಲ್ಲಿ ವಿಷ್ಣು ಅಥವಾ ರುದ್ರ ದೂರ ಉಳಿಯುವುದು ಕಂಡುಬರುತ್ತದೆ. ಜಗಜ್ಜನನಿ ಅಂಬಾಭವಾನಿ. ಅವಳಿಂದ ವಿಶ್ವ ನಿರ್ಮಾಣವಾಗಿದೆ. ಇವಳೇ ಆದಿ–ಶಕ್ತಿ ಎಂಬ ನಿಷ್ಠೆಯಲ್ಲಿ ಗಂಡುದೇವರು ಗೌಣ ಎಂಬುದು ಸ್ಪಷ್ಟವಿದೆ.

*ವಿವರಗಳಿಗೆ ನೋಡಿ: ಕೆ. ಚಿನ್ನಪ್ಪಗೌಡ ೧೯೯೦ ಪುಟ. ೪೪–೪೫; ೧೦೬*
*ಶಂಬಾ ಜೋಶಿ ೧೯೯೯ ಹಾಲುಮತ ದರ್ಶನ ಸಂಪುಟ. ೩ ಪುಟ. ೧೧೩*

**೨೬೫. ಕುಲಧನ**

ಪಿತ್ರಾರ್ಜಿತವನ್ನು **ಕುಲಧನ**ವೆಂದು ಕರೆಯುತ್ತಾರೆ. (ಪಂಪ ಭಾರತ ೬–೭೨)

ಹಲಗೆಗೆ (ಒಂದು ಆಟಕ್ಕೆ) ಹತ್ತು ಸಾವಿರ ಗದ್ಯಾಣವಿರಲಿ ಎಂದು ತಕ್ಷಣ ಒಡ್ಡಿ ಆ ಹಲಗೆಗಳನ್ನು ಸೋತನು. ಅಸಮಾಧಾನದಿಂದ ಧರ್ಮರಾಯನು ದುರ್ಯೋಧನನು ಕಲಕಿದ ಮನಸ್ಸುಳ್ಳವರಾಗಿ ಸಕಲ ಕುಲಧನಗಳನ್ನು ಒಡ್ಡಿದರು. ಮುಂದೆ ನಡೆಯಲಿರುವ ತನ್ನ ವಂಶವನ್ನು ಬಲಿಯಾಗಿ ಒಡ್ಡುವುದನ್ನು ನಿಜವನ್ನಾಗಿಸುವಂತೆ ಧರ್ಮರಾಜನು ಕುಲಧನ ಸಮೂಹಗಳನ್ನು ತಂದು ಒತ್ತೆಗಿಟ್ಟು ಆಡಿಸೋತನು. ಕುಲಧನವು ಪರಂಪರಾನುಗತವಾಗಿ ಬಂದಿರುತ್ತದೆ.

ಮಿತಾಕ್ಷರ ಕಾನೂನಿನ ಪ್ರಕಾರ ಅವಿಭಕ್ತ ಕುಟುಂಬದ ಪ್ರಬಂಧಕನು ತನ್ನ ಕುಟುಂಬದ ಎಲ್ಲಾ ಗಂಡು ಸದಸ್ಯರನ್ನು ಅವರ ಹೆಂಡತಿಯರನ್ನು ಪೋಷಿಸಲು ಬಾಧ್ಯನು. ಯಾವನಾದರೊಬ್ಬ ಗಂಡು ಸದಸ್ಯನು ಮೃತನಾದರೆ ಅವನ ವಿಧವೆ ಮತ್ತು ಮಕ್ಕಳನ್ನು ಪೋಷಿಸಲು ಬಾಧ್ಯನು. ದಾಯಾಭಾಗದ ಕಾನೂನಿನಂತೆ ಒಬ್ಬ ತಂದೆಯು ತನ್ನ ಅಪ್ರಾಯಸ್ಥ ಮಗಂದಿರನ್ನು ಪೋಷಿಸಲು ಎರಡು ರೀತಿಯ ಕಾನೂನುಗಳಿಗೆ ಬಾಧ್ಯನು. ಆದರೆ ತಂದೆಯು ಒಂದೊಮ್ಮೆ ಪ್ರಬಂಧಕರಾಗಿದ್ದ ಪೂರ್ವಜರ ಸೊತ್ತು ಅವನ ಕೈಯಲ್ಲಿದ್ದರೆ ಮಿತಾಕ್ಷರ ಕಾನೂನಿನ ಮೇರೆಗೆ ಅವನ ಪ್ರಾಯಸ್ಥ ಮಗಂದಿರೂ ಸಹ ಪೂರ್ವಜರ ಸ್ವತ್ತಿನಿಂದ ಪಾಲಿಸಲ್ಪಡಲು ಬಾಧ್ಯರು. ಆದರೆ ದಾಯ ಭಾಗ ಕಾನೂನಿನ ಪ್ರಕಾರ ಮಗಂದಿರು ಪೂರ್ವಜರ ಸ್ವತ್ತಿನಲ್ಲಿ ಜನ್ಮತಃ ಅಧಿಕಾರ ಪಡೆಯುವುದಿಲ್ಲ.

ಮಿತಾಕ್ಷರದಲ್ಲಿ ಉತ್ತರಜೀವಿತಾಧಿಕಾರ ಮತ್ತು ಉತ್ತರಾಧಿಕಾರದ ಮೇಲೆ ಸ್ವತ್ತು ಪ್ರಾಪ್ತವಾಗುತ್ತದೆಯೆಂದು ಹೇಳಲಾಗಿದೆ. ಉತ್ತರ ಜೀವಿತಾಧಿಕಾರ ಉತ್ತರಾಧಿಕಾರದ ನಿಯಮದ ಮೇರೆಗೆ ಸ್ವತ್ತಿನ ಸ್ವಾಮಿಯ ಮರಣದ ಬಳಿಕ ಇನ್ನೊಬ್ಬನಿಗೆ ಆ ಸ್ವತ್ತಿನಲ್ಲಿ ಹಕ್ಕು ಬರುತ್ತದೆ. ಮಿತಾಕ್ಷರದ ಪ್ರಕಾರ –

೧. ವಾರಸಿಗೆ ತಡೆಯಿಲ್ಲ.
೨. ಒಪ್ಪಂದದಿಂದ ವಾರಸು ಅಧ್ಯಾರೋಹಗೊಳಿಸುವಂತಿಲ್ಲ.
೩. ಅನಿರೀಕ್ಷಿತ ಉತ್ತರಾಧಿಕಾರವು ಮನ್ನಿಸಲ್ಪಡುವುದಿಲ್ಲ.
೪. ಗಂಡಸರು ಪರಮವಾಗಿ ಮತ್ತು ಹೆಂಗಸರು ನಿಯಮಿತವಾಗಿ ಸ್ವತ್ತನ್ನು ಪಡೆಯುವರು
೫. ಹೊಸ ವಂಶಪರಂಪರೆ.
೬. ಪ್ರಾತಿನಿಧ್ಯದ ಸಿದ್ಧಾಂತ.
೭. ಕೂಡು ಗೇಣಿದಾರರು ಮತ್ತು ತಲಾವಾರು ವಿಭಜನೆ.
೮. ಶಾಖಾವಾರು ಮತ್ತು ತಲಾವಾರು ವಿಭಜನೆ.
೯. ಪೂರ್ಣ ರಕ್ತಕ್ಕೆ ಅರ್ಧರಕ್ತದ ಮೇಲೆ ಆದ್ಯತೆ ಕೊಡಲಾಗುತ್ತದೆ.
೧೦. ಸಮೀಪದ ರಕ್ತ ಸಂಬಂಧ ಮತ್ತು ಧಾರ್ಮಿಕ ಪ್ರಭಾವ.

*ವಿವರಗಳಿಗೆ ನೋಡಿ: ಪಿ. ವಿ. ಕಾಣೆ ೨೦೦೩ ಧರ್ಮಶಾಸ್ತ್ರದ ಇತಿಹಾಸ*
*ಕೆ.ಎಚ್. ಪ್ರಭು? ಹಿಂದೂಕಾನೂನು*

**೨೬೬. ಕುಲವಧು**

*ಚರಣಂ ಮೇಣ್ ಶುಭಚರಿತದೆ*
*ಮರಣಂ ಮೇಣಳಿಪಿನಿಂದೆ ಬಾಱ್ವುದು ದೊರೆಯೇ*
*ಎರಡೆ ವಲಂ* **ಕುಲವಧುಗಾ**
*ಚರಿಸಲ್ ಪತಿಯಿಂ ಪರೋಕ್ಷದೊಳ್ ಜಿನದೀಕ್ಷಾ*

*(ಅಜಿತ ತೀರ್ಥಂಕರ ಪುರಾಣ ೧-೪೬)*

ಗಂಡ ಸತ್ತಾಗ ಕುಲವಧುಗೆ ಇರುವ ಆಚರಣೆಗಳು ಎರಡು. ಒಂದು ಜಿನದೀಕ್ಷೆಯನ್ನು ಪಡೆದು ಸದಾಚಾರದಲ್ಲಿ ಇರುವುದು. ಇನ್ನೊಂದು ಸಹಗಮನ ಆಚರಿಸುವುದು. ಇಲ್ಲಿ ರನ್ನನು ಕುಲವಧು ಎಂದು ಕರೆದಿರುವುದು ಗಮನಾರ್ಹವಾಗಿದೆ. ಕುಲವಧುವಿಗೆ (ಶ್ರೇಷ್ಠಳಾದವಳು: ಕುಲಕ್ಕೆ ಮಂಗಳ ಪ್ರಾಯಗಳಾದವಳು) ನಾಗದೇವನು ದೇವಲೋಕಕ್ಕೆ ಹೋದಾಗ (ಮರಣವಪ್ಪಿದ ಮೇಲೆ) ಈ ಪ್ರಶ್ನೆಯು ಅತ್ತಿಮಬ್ಬೆ ಗುಂಡಬ್ಬೆಯರಿಗೆ ಬರುತ್ತದೆ.

ಕುಲವೆಂದರೆ ಗುಂಪು; ಸಮೂಹ. ಕುಲವಧು ಎಂದರೆ ಪತಿವ್ರತೆ, ಹೆಂಡತಿ.

*ವಿವರಗಳಿಗೆ ನೋಡಿ: ಕುಲ.*

**೨೬೭. ಕುಲವಿದ್ಯೆ**

ಚಾವುಂಡರಾಯನು **ಕುಲವಿದ್ಯೆ,** ಜಾತಿವಿದ್ಯೆ ಮತ್ತು ಸಾಧಿತ ವಿದ್ಯೆಯ ಬಗ್ಗೆ ಹೇಳುತ್ತಾನೆ. (ಚಾವುಂಡರಾಯ ಪುರಾಣ-ಶಾಂತಿ ಪುರಾಣಂ ಪುಟ. ೧೮೦). ಇವು ಮೂರು ಬೇರೆಯೆಂಬುದು ಗಮನಾರ್ಹ. ಕುಲವಿದ್ಯೆಯು ಕುಲಕ್ಕೆ ಸಂಬಂಧಿಸಿದೆ.

ಆಯಾಯ ಕುಲಗಳು ತಮಗೆ ಬೇಕಾದ ವಿದ್ಯೆಗಳನ್ನು ರೂಢಿಸಿಕೊಂಡಿರುತ್ತವೆ. ಅದು ಕುಲದ ಅನಿವಾರ್ಯತೆಗೆ ಸಂಬಂಧಿಸಿದ್ದು. ಇನ್ನೊಂದು ಜಾತಿವಿದ್ಯೆ, ಆಯಾ ಜಾತಿಗೆ ಸಂಬಂಧಿಸಿದ್ದು. ಮೂರನೆಯದು ವ್ಯಕ್ತಿಯು ಸಾಧಿಸಿಕೊಳ್ಳುವುದು. ಇದನ್ನು ಸಾಧಿತವಿದ್ಯೆ ಯೆಂದು ಕರೆಯುತ್ತಾರೆ.

### ೨೬೮. ಕುಲಾಲ

ಕುಂಬಾರರ ಉಲ್ಲೇಖ ಕವಿರಾಜಮಾರ್ಗದಲ್ಲಿದೆ (೩-೧೧) ಗದಾಯುದ್ಧದಲ್ಲಿಯೂ ಬರುತ್ತದೆ. ಜೇಡಿಮಣ್ಣನ್ನು ತಂದು ಚೆನ್ನಾಗಿ ಮಿದಿಯುತ್ತಿದ್ದುದನ್ನು ನಯಸೇನ ಹೇಳಿದ್ದಾನೆ. (೩-೭೭) ಕುಂಬಾರರು ಜಿನಾಲಯದ ದಾನಶಾಲೆಯೊಂದಕ್ಕೆ ದಾನ ಮಾಡಿದ, ದೇವಸ್ಥಾನವನ್ನು ಕಟ್ಟಿದ ವಿಷಯಗಳನ್ನು ಶಾಸನಗಳು ವರ್ಣಿಸಿವೆ.

"**ಕುಲಾಲ**ಕರ ನಿರ್ಭರ ಭ್ರಮಿತ ಚಕ್ರಲೀಲಾಯಿತಂ" ಎಂದು ಪಂಪನು ಹೇಳುತ್ತಾನೆ.

(ಪಂಪ ಭಾರತ ೪-೨೭)

ಕುಂಬಾರನ ಕೈಯ ಚಕ್ರದಂತೆ ಎಂಬುದು ಇಲ್ಲಿಯ ಭಾವಾರ್ಥ. ಕುಲಾಲರು ಎಂಬುದು ಜಾತಿಸೂಚಕವೂ ಹೌದು. ಕುಂಬಾರರನ್ನು ಕುಲಾಲರು ಎಂದು ಕರೆಯುತ್ತಾರೆ. ಈ ಜಾತಿಯನ್ನು ವರ್ಣದ ಚೌಕಟ್ಟಿನಲ್ಲಿ ವ್ಯಾಖ್ಯಾನಿಸುವಂತಿಲ್ಲ. ಜಾತಿ ಶ್ರೇಣೀಕರಣದ ದೃಷ್ಟಿಯಿಂದ ಕುಂಬಾರರಿಗೆ ಉನ್ನತದರ್ಜೆ ಇಲ್ಲವೆಂಬುದು ಗಮನಾರ್ಹ.

*ವಿವರಗಳಿಗೆ ನೋಡಿ: ಡಾ. ಚಿದಾನಂದಮೂರ್ತಿ ಎಂ. ೨೦೦೮*

*ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪುಟ. ೪೪೨.*

### ೨೬೯. ಕುಲಿಂಗಿ

*ಕೆಟ್ಟ ಚಿಹ್ನೆಗಳುಳ್ಳವನು; ಜೈನಾಗಮವಿದರಂ ಸಾರದೆವೋಗಿ* ***ಕುಲಿಂಗಿ****ಗಳನೀ ಜನಂ ಸೇವಿಸುಗುಂ*

*(ಆದಿಪುರಾಣ ೧೫-೩೫)*

೧೦ನೆಯ ಶತಮಾನದ ಹೊತ್ತಿಗಾಗಲೇ ಜೈನ ಧರ್ಮದಲ್ಲಿ ಭಿನ್ನ ಭಿನ್ನ ಅಭಿಪ್ರಾಯಗಳು ರೂಪುಗೊಂಡಿದ್ದನ್ನು ಈ ಮಾತು ತಿಳಿಸುತ್ತದೆ. ಮುಖ್ಯವಾಗಿ ಜೈನಧರ್ಮ ದಲ್ಲಿದ್ದುಕೊಂಡೇ ಆಚಾರ ವಿಚಾರಗಳನ್ನು ಅನುಸರಿಸದೆ ಇರುವವರನ್ನು ಪಂಡ ಕುಲಿಂಗಿಗಳು ಎಂದು ಕರೆಯುತ್ತಾನೆ. 'ಕುಲಿಂಗಿ' ಎನ್ನುವ ಪದವು ಮೂಲತಃ ಲಿಂಗವನ್ನು ಸೂಚಿಸುತ್ತದೆ. ದುರ್ಭಗ, ಕುಯೋನಿ, ಕುಲಿಂಗಿ-ಇವೆಲ್ಲವೂ ಹೀನ ವಾಚಕಗಳಾಗಿವೆ. ಬೈಗುಳ ಪದವಾಗಿ ಇಲ್ಲಿ ಬಳಸಲಾಗಿದೆ. ಇದರ ಇನ್ನೊಂದು ರೂಪ ಈಗಲೂ ಚಾಲ್ತಿಯಲ್ಲಿದೆ. ಸೂಳೇಮಗ, ಮುಂಡೇಮಗ ಎನ್ನುವುದು ಈಗ ಬೈಗುಳ ಪದವಾಗಿದೆ.

ಧಾರ್ಮಿಕವಾಗಿ ದುರಾಚಾರಕ್ಕೆ ತೊಡಗಿದವರನ್ನು; ಅನ್ಯಮತೀಯರನ್ನು ಈ

ರೀತಿಯ ಬೈಗುಳ ಪದವನ್ನು ಬಳಸುವ ಮೂಲಕ ಖಂಡಿಸಿರುವುದು ಗಮನಾರ್ಹವಾಗಿದೆ.

ಇನ್ನೊಂದು ನೆಲೆಯಲ್ಲಿ ಕುಲಿಂಗಿ ಶಬ್ದವನ್ನು ಹೀಗೂ ಅರ್ಥೈಸಬಹುದಾಗಿದೆ. ಕುಲಿಂಗಿಗಳು ಅಂದರೆ ದುರಾಚಾರದಿಂದ ವರ್ತಿಸುವ ವೀರಶೈವ ಧರ್ಮಿಗಳಿರಬಹುದು. ಜೈನ ಧರ್ಮಕ್ಕೆ ೧೧ನೆಯ ಶತಮಾನದ ಕೊನೆಗಾಗಲೇ ಅನ್ಯಧರ್ಮಗಳಿಂದ ಆಘಾತಗಳು ಪ್ರಾರಂಭವಾದುವು. ಪ್ರಮುಖವಾಗಿ ಶೈವ ಮತ್ತು ವೈಷ್ಣವ ಧರ್ಮಗಳು ಈ ಆಘಾತವನ್ನೊಡ್ಡುವುದರಲ್ಲಿ ಮುಂಚೂಣಿಯಲ್ಲಿದ್ದವು. ಹೀಗಿರುವಾಗ ಅನ್ಯಧರ್ಮೀಯರನ್ನು ನಿಂದನೆ ಮಾಡುವಲ್ಲಿ ಕುಲಿಂಗಿಗಳು ಎಂದು ಕರೆದಿರಬಹುದು.

**೨೭೦. ಕೂಡು**

*'ಅಂತು ಕೈಯಂ ಪಿಡಿದ ಕ್ಷಣದೊಳೆ ನವಯೌವನ ಪ್ರಾಪ್ತಿಯಾಗಿರೆ ಎಲೆ ಮಗಳೆ ಎನ್ನೊಳೊಲವಿಂ ಕೂಡೆನೆ ನೀಂ ಪಿತಂ ನಿನ್ನೊಳೆಂತು ಕೂಡಲಕ್ಕುಮೆನೆ ಪುತ್ರಾರ್ಥದಿಂ ತಾಯಿಯುನಾದೊಡಂ ತಂಗಿಯುನಾದೊಡಂ ಸೊಸೆಯುನಾದೊಡಂ ಮಗಳನಾದೊಡಂಮಾರನಾದೊಡಂ ಸಂತಾನಾಭಿವೃದ್ಧಿ ನಿಮಿತ್ತಂ.* ***ಕೂಡಿದೊಡೆ*** *ದೋಷಮಿಲ್ಲೆಂದು ಪೇಳ್ದವಾಕ್ಯ ಕ್ರಮಮುಂ ಕೇಳ್ದದುದಿಲ್ಲಕ್ಕುಮೆನೆ ನಾಂ ಕೇಳ್ದದುದಿಲ್ಲಾ ವೇದೋಕ್ತ ಕ್ರಮಮೆಂತು ಪೇಳಿಮೆಂದಾ ಕಾಂತೆ ಬೆಸಗೊಳ...*

ಇಲ್ಲಿ ಲಕ್ಷಿಸಬೇಕಾದ ಅಂಶಗಳು ಹೀಗಿವೆ: (ವಡ್ಡಾರಾಧನೆ) ಈ ಸಂದರ್ಭದಲ್ಲಿ ಉಕ್ತವಾಗಿರುವ 'ವೇದಕ್ರಮ'ವು ಪ್ರಾಚೀನ ಭಾರತದ ವಿವಾಹ ಪದ್ಧತಿಯನ್ನು ಸೂಚಿಸುತ್ತದೆ.

ಪ್ರಾಚೀನ ಭಾರತದಲ್ಲಿ 'ಸಂತಾನ' ಕ್ಕೆ ಕೊಟ್ಟ ಪ್ರಾಶಸ್ತ್ಯವನ್ನು ಲಕ್ಷಿಸಬಹುದು ಸಂತಾನಾಭಿವೃದ್ಧಿಗಾಗಿ ಮಗಳನ್ನು; ತಾಯಿಯನ್ನು; ತಂಗಿಯನ್ನು; ಸೊಸೆಯನ್ನು ಕೂಡಬಹುದು ಎಂದು ಮೇಲಿನ ಭಾವಾರ್ಥ. ಆದರೆ ಇದು ನಿಷೇಧಿತ ಸಂಬಂಧ. ಈ ನಿಷೇಧಿತ ಸಂಬಂಧವನ್ನು ತಂದೆಯು ಮಗಳಿಗೆ ಹೇಳುತ್ತಿದ್ದಾನೆ. ಇಲ್ಲಿ ಕೃತಿಕಾರನು ಕೂಡಿದೊಡೆ ಎನ್ನುವ ಪ್ರಯೋಗ ಮಾಡಿದ್ದು ಕೂಡುವಿಕೆಯು ಅಕ್ರಮ ಸಂಯೋಗವನ್ನು ಸೂಚಿಸುತ್ತದೆ. ಕೂಡು ಎಂದರೆ ಸೇರು ಎಂಬರ್ಥವಿದೆ. ಇದು ದೈಹಿಕ ಕೂಡುವಿಕೆಗೆ ಸಂಬಂಧಿಸಿದೆ.

**೨೭೧. ಕೆಯ್ಯೆಡೆ**

"*ಮತ್ತನಯನಕೆಯ್ಯೆಡೆ ಪಲುಂಬದಿರ್ ಪೆಜಿ ಪೆಜಿವಂ*" ಎಂದು ಮಾದ್ರಿಯು *ಹೇಳುತ್ತಾಳೆ.*

ನ್ಯಾಸವೆಂದು ಒಪ್ಪಿಸಿದ ವಸ್ತುವಿಗೆ ***ಕೆಯ್ಯೆಡೆ***ಯೆಂದು ಕರೆಯುತ್ತಾರೆ.

*(ಪಂಪ ಭಾರತ ೨-೨೬)*

ಮಾದ್ರಿಯು ತನ್ನ ಮಕ್ಕಳನ್ನು ಕುಂತಿಗೆ ಒಪ್ಪಿಸುವಾಗ ಈ ಮಾತು ಬರುತ್ತದೆ. ಮಕ್ಕಳನ್ನು ಕುಂತಿಯ ಅಧೀನಕ್ಕೆ ಒಪ್ಪಿಸಿದಳು ಎಂಬುದು ತಾತ್ಪರ್ಯ. ನ್ಯಾಸವೆಂದರೆ

ತೆಗೆದಿರಿಸಿದ ವಸ್ತು ಎಂದು ಭಾವಾರ್ಥ.

ಎಡೆ ನೀಡುವುದು ಎಂಬ ಪ್ರಯೋಗ ದಿನನಿತ್ಯ ಮಾತುಕತೆಯಲ್ಲಿದೆ. ಎಡೆನೀಡುವುದೆಂದರೆ ಅರ್ಪಿಸುವುದು. ಕೆಯ್ಯೆಡೆಯೆಂದರೆ ಕೈಯಿಂದ ನೀಡುವ ಎಡೆ (ನ್ಯಾಸ) ಕೆಯ್ಯೆಡೆ – ಒತ್ತೆಯಿಡು; ಕೈಗೆ ಕೊಟ್ಟದ್ದು ಎಂಬ ಅರ್ಥಗಳಿವೆ.

### ೨೭೨. ಕೆರೆಗಳು

ಕೃಷಿ ವ್ಯವಸ್ಥೆ ಜೀವಂತವಾಗಿರಬೇಕಾದರೆ ಅದರ ಜೊತೆಗೆ ನೀರಾವರಿ ವ್ಯವಸ್ಥೆಯೂ ಇರಬೇಕು. ಕೃಷಿ ಸಂಪೂರ್ಣವಾಗಿ ಮಳೆಯನ್ನೇ ಅವಲಂಬಿಸಿರಲು ಸಾಧ್ಯವಿಲ್ಲ. ಆದ್ದರಿಂದ ಕೃಷಿಗೆ ಕೃತಕ ನೀರಿನ ವ್ಯವಸ್ಥೆ ಅನಿವಾರ್ಯ. ರಾಜ್ಯದ ಆರ್ಥಿಕತೆಯಲ್ಲಿ ಕೃಷಿ ಪ್ರಧಾನವಾಗಿದ್ದರಿಂದಾಗಿ ಎಲ್ಲಾ ಅರಸುಮನೆತನಗಳು ನೀರಾವರಿಗೆ ಹೆಚ್ಚಿನ ಗಮನವನ್ನು ಕೊಡುವುದು ಅವಶ್ಯಕವಾಗಿತ್ತು. ಈ ಕಾರಣದಿಂದಾಗಿಯೇ ಕೃಷಿಯೋಗ್ಯ ಭೂಮಿಯನ್ನು ಎರಡು ರೀತಿಯಾಗಿ ವಿಂಗಡಿಸಲಾಗಿತ್ತು. ಅವುಗಳೆಂದರೆ,

೧. ಸಂಪೂರ್ಣವಾದ ಮಳೆಯನ್ನೇ ಅವಲಂಬಿಸಿರುವ ಕೃಷಿ ಭೂಮಿ

೨. ನದಿ, ಕೆರೆ, ಬಾವಿಗಳನ್ನು ಅವಲಂಬಿಸಿರುವ ಕೃಷಿಭೂಮಿ

ಪ್ರಾಚೀನ ಕೃಷಿ ವ್ಯವಸ್ಥೆಯಲ್ಲಿ ಕೆರೆಗಳ ಪಾತ್ರ ಮಹತ್ವದ್ದು. ನೀರಾವರಿ ಬೇಸಾಯಕ್ಕೆ ಕೆರೆ, ಬಾವಿಗಳು ಬೇಕು. ಕೆರೆಗಳು ನೀರನ್ನು ಸಂಗ್ರಹಿಸುವ ಜಾಗಗಳು ಹೌದು. ಕೆರೆಯಲ್ಲಿ ನೀರು ತುಂಬಲು ಎರಡು ರೀತಿಯ ಮೂಲಗಳಿವೆ: ಒಂದು ಒರತೆಯ ಮೂಲ ಮತ್ತು ಮಳೆಯ ಆಶ್ರಯ. ಕೆರೆಯನ್ನು ಹೆಚ್ಚಿನ ರಾಜರು ಕಟ್ಟಿಸುತ್ತಿದ್ದರು ಮತ್ತು ಜನರು ಕೂಡಾ ಕೆರೆಯನ್ನು ಆಶ್ರಯಿಸುತ್ತಿದ್ದರು. ಊರಿಗೆ ಒಂದು ಕೆರೆಯೆಂಬುದು ಪ್ರಾಚೀನ ಪದ್ಧತಿಗಳಲ್ಲಿ ಒಂದು. ಕೆಲವು ಊರುಗಳಿಗೆ ಕೆರೆಗಳ ಹೆಸರುಗಳೂ ಅಂಟಿಕೊಂಡು ಬಂದಿವೆ. ಉದಾ: ತರೀಕೆರೆ; ಅರಸೀಕೆರೆ.

*ವಿವರಗಳಿಗೆ ನೋಡಿ: ಮೋಹನಕೃಷ್ಣ ರೈ ೨೦೦೪ ಪ್ರಭುತ್ವ ಮತ್ತು ಜನತೆ ಪುಟ. ೨೧.*

### ೨೭೩. ಕೇವಲಜ್ಞಾನ

*ಘಾತಿಕರ್ಮಂಗಳಂ ಕಿಡಿಸಿಯಂತರ್ಗತ* ***ಕೇವಲಿ****ಯಾಗಿಯೆಂಟು ಕರ್ಮಂಗಳಂ ಕಿಡಿಸಿ ತಪೋಗ್ನಿಯಿಂ ಸುಟ್ಟು ಮೋಕ್ಷಕ್ಕೆ ಪೋದರ್.............*

*(ಡಿ.ಎಲ್.ಎನ್. ೨೦೦೯ ಪುಟ. ೨೧೮).*

ಕೇವಲಿ = ಕೇವಲ ಜ್ಞಾನಿ. ಕೇವಲವೆಂದರೆ ಸಮಗ್ರ. ಕೇವಲಜ್ಞಾನವೆಂದರೆ ಸರ್ವಜ್ಞತ್ವ.

ಕೇವಲಜ್ಞಾನ– ಜೀವರಿಗೆ ಉಂಟಾಗುವ ಜ್ಞಾನಗಳಲ್ಲಿ ಇದು ಎಲ್ಲಕ್ಕೂ ಹೆಚ್ಚಿನದು. ವಿಶ್ವದೊಳಗಿನ ಸಮಸ್ತ ವಿಷಯಗಳು ಈ ಜ್ಞಾನಕ್ಕೆ ಗೋಚರವಾಗುವುವು. ಇದನ್ನೇ ಸರ್ವಜ್ಞತೆ ಎಂದು ಹೇಳುವರು. ಪಾಶ್ಚಾತ್ಯ ಥಿಯೋಸೋಪಿಸ್ಟರು ಹೇಳುವ Omniscience ಎಂಬುದೂ ಕೇವಲಜ್ಞಾನವೂ ಒಂದೇ. ಕೇವಲ ಜ್ಞಾನವು ಆತ್ಮನಿಂದಲೇ

ಉಂಟಾಗುವುದು; ಇದಕ್ಕೆ ಇಂದ್ರಿಯಾದಿಗಳು ಬೇಡ. ಕೇವಲಜ್ಞಾನಿಯು ಮುಕ್ತಪುರುಷನು. ಜ್ಞಾನ ದರ್ಶನದಲ್ಲಿ ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರೆ, ಮೋಕ್ಷ ಎಂಬಿವು ಏಳು ತತ್ತ್ವಗಳು. ಕೇವಲಜ್ಞಾನ– ಸಂಪೂರ್ಣ ಜ್ಞಾನಾವರಣೀಯ ಕರ್ಮದ ಅತ್ಯಂತ ಕ್ಷಯವಾಗಲು ಆತ್ಮನಿಗೆ ಉಂಟಾಗುವ ಮೂರ್ತಾಮೂರ್ತ ಪದಾರ್ಥಗಳ ವಿಶೇಷ ರೂಪವಾದ ಸಕಲಜ್ಞಾನವು ಕೇವಲಜ್ಞಾನವು. ಈ ಜ್ಞಾನವು ಆತ್ಮನ ಶುದ್ಧ ಸ್ವಭಾವವು. ಕಾಯಯೋಗದಿಂದ ಮುಕ್ತನಾಗಿ ಹದಿನಾಲ್ಕನೆಯ ಗುಣ ಸ್ಥಾನವನ್ನು ಜೀವಿಯನ್ನು ಅಯೋಗ ಕೇವಲಿ ಎಂದು ಕರೆಯುತ್ತಾರೆ. (ಆದಿಪುರಾಣ ೧೬–೪೯)

*ವಿವರಗಳಿಗೆ ನೋಡಿ: ಮಹಾದೇವ ಪ್ರಭಾಕರ ಪೂಜಾರ್ ೧೯೭೬*

*ಜೈನಧರ್ಮದ ಪರಿಭಾಷೆ ಪುಟ. ೧೭, ೧೮, ೪೩.*

**೨೭೪. ಕೇಶಕಳಾಪ**

*ಕಳಾಳಾಪದಿನಾ ಜಗತ್ಪತಿ ನಮಸ್ಸಿದ್ಧೇಭ್ಯ ಎಂದಾತ್ಮ* ***ಕೇ***
***ಶಕಳಾಪಂ*** *ಬರೆ ಪಂಚಮುಷ್ಟಿಗೆ ಜಿನಶ್ರೀದೀಕ್ಷೆಯಂ ತಾಳ್ದಿದಂ ॥ ೧೨೩ ॥*

ಸಮಸ್ತ ಭೂಪಾಲಕರಿಗೂ ಸ್ವರ್ಗಾಧಿಪತಿಗಳಿಗೂ ಪೂಜ್ಯನಾದ ಆ ಪ್ರಭುವು (ಆತ್ಮ, ಇಂದ್ರ ಮತ್ತು ಸಿದ್ಧ) ಎಂಬ ಮೂರು ಸಾಕ್ಷಿಗಳುಳ್ಳವನಾಗಿ ಬಲಗೈಯನ್ನು ಹಣೆಯ ಮೇಲೂ ಎಡಗೈಯನ್ನು ಹಿಡಿಕೆಯ ಬಳಿಯಾಗುವಂತೆಯೂ ಚಾಚಿ ಮಧುರ ಧ್ವನಿಯಿಂದ "ನಮಸ್ಸಿದ್ಧೇಭ್ಯಃ" ಎಂದುಚ್ಚರಿಸಿ ತನ್ನ ಕೂದಲನ್ನು ಐದು ಮುಷ್ಟಿಯಿಂದ ಕಿತ್ತು ತೆಗೆದು ಶ್ರೇಷ್ಠವಾದ ಜಿನದೀಕ್ಷೆಯನ್ನು ತಾಳಿದನು. ಎಂದು ಪೊನ್ನನು ಹೇಳುತ್ತಾನೆ. (ಶಾಂತಿಪುರಾಣ ೮–೧೨೩) ಕೂದಲನ್ನು ಐದು ಮುಷ್ಟಿಯಿಂದ ಕಿತ್ತುಕೊಳ್ಳುವುದನ್ನು ಕೇಶಕಳಾಪವೆಂದು ಕರೆಯುತ್ತಾರೆ.

**೨೭೫. ಕೇಶ ಸಂಸ್ಕಾರ**

ಸಜ್ಜೆಮನೆಯಲ್ಲಿ ಮುಚ್ಚಿದ ಗವಾಕ್ಷ ತೆಗೆಯಲು ಮರೆತು **ಕೇಶಸಂಸ್ಕಾರ**ದ ಧೂಪದ ಹೊಗೆಯಲ್ಲಿ ಸಿಕ್ಕಿ ಹಾಕಿಕೊಂಡು ಸತ್ತ ದಂಪತಿಗಳ ವಿವರ ಬರುತ್ತದೆ.

(ಚಾವುಂಡರಾಯ ಪುರಾಣ – ಆದಿಪುರಾಣ ೨೯ ವ)

ಧೂಪದ ಹೊಗೆಯನ್ನು ಕೇಶಸಂಸ್ಕಾರಕ್ಕೆ ಬಳಸಿಕೊಳ್ಳುತ್ತಿದ್ದರು ಎಂದು ಇದರಿಂದ ತಿಳಿಯುತ್ತದೆ.

ವಧುವು ಕುರುಳಿನಲ್ಲಿ ಚಿನ್ನದ ಹೂಗಳನ್ನು ಇಟ್ಟುಕೊಂಡಳು. ಆದರೆ ಹಿಂದಕ್ಕೆ ಹೊನ್ನಿನ ತಲೆಯುಡುಗೆ ತೊಟ್ಟುಕೊಂಡಳು. ಪರಿಮಳದ ದ್ರವ್ಯವನ್ನು ತಲೆಗೆ ತಳೆದು ಕೊಂಡಳು. 'ಮುಡಿಗೆ ತೋರಮಲ್ಲಿಗೆ ಮುಡಿದುಕೊಂಡಳು' ಎಂದು ಪಂಪನು 'ಆದಿಪುರಾಣ'ದಲ್ಲಿ ವರ್ಣಿಸುತ್ತಾನೆ (೪–೪೧ವ) ಸಿರಿಸದ ಬಾಸಿಂಗವನ್ನು ತೊಡಿಸಿ ವಧುವನ್ನು ಶೃಂಗರಿಸಿ, ಸೋರ್ಮುಡಿಗೆ ಹೂಮುಡಿಸಿದ ವಿಷಯವು ನಾಗಚಂದ್ರನ

‘ರಾಮಚಂದ್ರ ಚರಿತ ಪುರಾಣ’ದಲ್ಲಿ ಬರುತ್ತದೆ. (೫-೪೨ವ)

ಕೇಶಸಂಸ್ಕಾರವು ವಿಶಿಷ್ಟ ಬಗೆಯದು. ಇಲ್ಲಿ ಸಂಸ್ಕಾರವೆಂದು ಬಳಸಿರುವುದು ಗಮನಾರ್ಹವಾಗಿದೆ.

*ವಿವರಗಳಿಗೆ ನೋಡಿ: ಸಂಸ್ಕಾರ.*

**೨೭೬. ಕೈಕಟ್ಟಳೆ**

*ಒಟ್ಟಿದ ಪೊನ್ನ ಬೆಟ್ಟುಗಳನೀವೆಡೆಗೇವುದೊ ತೂಕಮೆನ್ನ ಕೈ*
*ಯ್ಗಟ್ಟಳೆ ಕೊಳ್ಳಿಮೆಂದು ಕುಡೆ ಷೋಡಶ ಋತ್ವಿಜರ್ಗಿತ್ತುದರ್ಕೆ ಬಾ ।*
*ಯ್ವಿಟ್ಟಿರೆ ವಿಪ್ರಕೋಟಿ ಮಡಗಲ್ಯೆಡೆಯಿಲ್ಲದೆ ಪೊನ್ನ ರಾಶಿಯಂ*
*ಬಟ್ಟನೆ ಬಂದು ಕಾಯೆ ಯಮನಂದನನೇನ್ ತೊದಳಿಲ್ಲದಿತ್ತನೋ ॥*

*(ಪಂಪ ಭಾರತ ೮-೩೯)*

ಈ ಪದ್ಯಭಾಗದಲ್ಲಿ ಬಂದಿರುವ ಮೂರು ಅಂಶಗಳು ಪ್ರಧಾನವಾಗಿವೆ. ಕಟ್ಟಳೆಯೆಂದರೆ ತೂಕದ ಬೊಟ್ಟು. ಧರ್ಮರಾಯನು ನನ್ನ ‘ಕೈಕಟ್ಟಳೆ’ (ಕೈಯಳತೆ ಬೊಗಸೆ)ಯ ತೂಕದಿಂದ ದಾನ ತೆಗೆದುಕೊಳ್ಳಿ ಎಂದು ಹೇಳುತ್ತಾನೆ. ಎರಡನೆಯದಾಗಿ ಧರ್ಮರಾಯನು ಋತ್ವಿಕ್ಕುಗಳಿಗೆ ದಾನ ನೀಡಿದ್ದನ್ನು ನೋಡಿ ವಿಪ್ರ ಸಮೂಹ ಧರ್ಮರಾಯನು ದಾನ ನೀಡುವ (ಮೇರೆ ಮೀರಿ ಅಳೆಯುವುದಕ್ಕೆ) ಗುಣವನ್ನು ಆಶ್ಚರ್ಯಪಡುತ್ತದೆ. ಕಟ್ಟಳೆಯೆನ್ನುವುದು ಕಡಿದು+ಅಳೆ ಎಂಬುದರಿಂದ ಬಂದಿದೆ. ಕಟ್ಟಳೆಗೆ ನಾನಾ ಅರ್ಥಗಳಿವೆ. ಕೋಟಲೆ (ಗ್ರಾಮ್ಯದಲ್ಲಿ ಕೋಟ್ಲೆ-ಅವಧಿಜ್ವರ (ನೀರು ಕೋಟಲೆ) ವಿಧಿ: ನಿಯಮ; ಕಟ್ಟುಪಾಡು: ಎಲ್ಲೆ ಎಂಬ ಅರ್ಥಗಳಿವೆ. ಮೂರನೆಯದಾಗಿ ಧರ್ಮರಾಯನು ಹದಿನಾರು ಜನ ಋತ್ವಿಜರಿಗೆ ಸುವರ್ಣದಾನ ಮಾಡುತ್ತಾನೆ. ಕಾಣಿಕೆ; ನಿಯಮ; ಸರದಿ; ಅಪ್ಪಣೆಯೆಂಬ ಅರ್ಥಗಳಿವೆ.

*ವಿವರಗಳಿಗೆ ನೋಡಿ: ಯಜ್ಞ; ಹೋತೃ; ಅಧ್ವರ್ಯು.*

**೨೭೭. ಕೈಕಸುಬುಗಾರರ ಸ್ಥಾನ**

ಈ ಕಾಲದಲ್ಲಿ ಶೂದ್ರ ಕೈಕಸುಬಿಗಳು ತಮ್ಮ ಪ್ರಾಮುಖ್ಯತೆಯನ್ನು ಉಳಿಸಿಕೊಂಡರು. ಮೂರು ಉಚ್ಚ ವರ್ಣಗಳ ಸೇವೆ ಮಾಡುವುದರ ಮೂಲಕ ಹೊಟ್ಟೆಪಾಡು ಕಳೆಯದಿದ್ದಾಗ ಮಾತ್ರ ಶೂದ್ರರು ಕೈಕಸುಬು ಹಾಗೂ ಕಲೆಗಳಲ್ಲಿ ತೊಡುಗುವುದಕ್ಕೆ ಹಿಂದಿನ ಕಾಲದ ಧರ್ಮಶಾಸ್ತ್ರಕಾರರು ಅನುಮತಿ ಕೊಟ್ಟಿದ್ದರು. ಆದರೆ ಈಗ ಈ ಷರತ್ತನ್ನು ತೆಗೆದು ಹಾಕಲಾಯಿತು. ಶೂದ್ರರು ಸಾಮಾನ್ಯವಾಗಿ ಮಾಡಬಹುದಾದ ಕಸುಬುಗಳಲ್ಲಿ ಕೈಕಸುಬು ಗಳನ್ನೂ ಸೇರಿಸಲಾಯಿತು (ಕಾಮಂದಕ ನೀತಿಸಾರ, II. ೨೧; ಮಾರ್ಕಾಂಡೇಯ ಪುರಾಣ ೨೮.೩-೮; ವಿಷ್ಣುಸ್ಮೃತಿ III.೫; ಶೂದ್ರಸ್ಯ.....ಸರ್ವಶಿಲ್ಪಾನಿ, ಬೃಹಸ್ಪತಿ ಸ್ಮೃತಿ ೫೩೦ ಇತ್ಯಾದಿ). ಬೃಹಸ್ಪತಿ ಪ್ರಕಾರ (XIII. ೩೩) ಈ ಕೈಕಸುಬುಗಳು ಹೀಗಿವೆ : ಚಿನ್ನ ಹಾಗೂ ಕ್ಷುದ್ರ ಲೋಹಗಳ ಕೆಲಸ, ಮರ, ನೂಲು, ಕಲ್ಲು, ಮತ್ತು ಚರ್ಮದ

ಕೆಲಸಗಳು. ಅಮರಕೋಶದ ಶೂದ್ರ ವರ್ಗದಲ್ಲಿ ಕಂಡುಬರುವ ಕೈಕಸುಬುಗಳ ಪಟ್ಟಿಯಲ್ಲಿ ಸಾಮಾನ್ಯ ಕೈಕಸುಬಿಗಳು, ವೃತ್ತಿಸಂಘಗಳ ಮುಂದಾಳುಗಳು, ಮಾಲೆ ಕಟ್ಟುವವರು, ಅಗಸರು, ಕುಂಬಾರರು, ಇಟ್ಟಿಗೆ ಗೋಡೆ ಕಟ್ಟುವವರು, ನೇಯ್ಗಾರರು, ದರ್ಜಿಗಳು, ಚಿತ್ರಕಾರರು, ಚರ್ಮಕಾರರು, ಕಮ್ಮಾರರು, ಕಪ್ಪೆ ಚಿಪ್ಪು ಕೊರೆಯುವವರು ಹಾಗೂ ತಾಮ್ರದ ಕೆಲಸಗಾರರು ಇರುವರು; ಈ ಪ್ರತಿಯೊಂದು ಬಗೆಯ ಕೈಕಸುಬಿಯನ್ನೂ ಎರಡು ಹೆಸರುಗಳಿಂದ ಅಲ್ಲಿ ಕರೆಯಲಾಗಿದೆ. (II. ೧೦.೫–೧೦). ಇದೇ ಪಟ್ಟಿಯು ಸೊನಗಾರರಿಗೆ ನಾಲ್ಕು ಹೆಸರುಗಳನ್ನೂ ಬಡಗಿಗಳಿಗೆ ಐದು ಹೆಸರುಗಳನ್ನೂ ಕೊಡುತ್ತದೆ (II. ೧೦.೮ ಮತ್ತು ೯). ತಮಟೆ, ಜಲತರಂಗ, ಕೊಳಲು ಹಾಗೂ ವೀಣೆ ನುಡಿಸುವವರು (II. ೧೦.೧೩), ನಟರು, ನಾಟ್ಯಗಾರರು ಮತ್ತು ಲಾಗ ಹಾಕುವವರು (II. ೧೦.೧೨), ಇವರನ್ನು ಸಹ ಅಮರನು ಶೂದ್ರವರ್ಗದಲ್ಲಿಯೇ ಸೇರಿಸುತ್ತಾನೆ. ಆದ್ದರಿಂದ ಶೂದ್ರರು ಎಲ್ಲ ಬಗೆಯ ಕಲೆ ಹಾಗೂ ಕೈಕಸುಬುಗಳಲ್ಲಿ ಭಾಗವಹಿಸುತ್ತಿದ್ದರೆಂದು ಹೇಳಬಹುದು.

ಗೃಹ ರಚನೆಗೆ ಸಂಬಂಧಿಸಿದಂತೆ ವರಾಹಮಿಹಿರನ ನಿಯಮಗಳನ್ನು ನಾವಿಲ್ಲಿ ಗಮನಿಸಬಹುದು: ಬ್ರಾಹ್ಮಣನ ಮನೆಯು ಐದು ಕೋಣೆಗಳನ್ನೂ, ಕ್ಷತ್ರಿಯನದ್ದು ನಾಲ್ಕು, ನಾಲ್ಕು, ವೈಶ್ಯನದ್ದು ಮೂರು ಮತ್ತು ಶೂದ್ರನದ್ದು ಎರಡು ಕೊಠಡಿಗಳನ್ನೂ ಹೊಂದಿರಬೇಕು. ಇದಲ್ಲದೆ ಮುಖ್ಯ ಕೊಠಡಿಯ ಉದ್ದಗಲಗಳು ನಾಲ್ಕೂ ವರ್ಣಗಳಲ್ಲಿ ಪ್ರತಿಯೊಂದರ ಅಂತಸ್ತಿಗೆ ತಕ್ಕಂತೆ ಇರಬೇಕೆಂದು ಅವನು ನಿಯಮಿಸುತ್ತಾನೆ (ಬೃಹತ್‌ಸಂಹಿತಾ, ೫೨. ೧೨–೧೩).

*ವಿವರಗಳಿಗೆ ನೋಡಿ: ಬಡಿಗರು, ಜಾತಿ ಆರ್.ಎಸ್. ಶರ್ಮ ೨೦೦೭ ಪ್ರಾಚೀನ ಭಾರತದಲ್ಲಿ ಶೂದ್ರರು.*

**೨೭೮. ಕೈದೀವಿಗೆ**

*ಕೆಯ್ದೀವಿಗೆ ಬೆಳಗುವನಿತಲ್ಲದೆ ದಿಗ್ ಅವನಿ*
*ಗಗನಾಂತರಾಳಮಂ ಬೆಳಗುಗುಮೆ.......... (ಶಾಂತಿಪುರಾಣ ೧೦–೧೯)*

ಕೈದೀವಿಗೆಯ ಬೆಳಕು ಸೀಮಿತ. ಅದು ಜಗತ್ತಿಗೆ ಬೆಳಕು ಕೊಡಲಾರದು. ಕೈದೀವಿಗೆಯೆಂದರೆ ಕೈಯಲ್ಲಿ ಹಿಡಿದುಕೊಂಡು ಹೋಗುವ ಬೆಳಕಿನ ವ್ಯವಸ್ಥೆ, ದೀವಟಿಗೆ, ಪಂಜು. ಇದಕ್ಕೆ ಕಿರುದೀಪವೆಂದೂ ಕರೆಯುತ್ತಾರೆ.

ಕೈದೀವಟಿಗೆ ಕೈದೀವಿಗೆಯಾಗಿದೆ.

**೨೭೯. ಕೈಯ ಆಭರಣಗಳು**

ಕೈಯ ಆಭರಣಗಳಲ್ಲಿ ಮುಖ್ಯವಾದವುಗಳನ್ನು ಸುಧಾಕರ ಅವರು ಹೀಗೆ ಗುರುತಿಸುತ್ತಾರೆ. ಬಂದಳಿ, ಬಳೆ, ಕಡಗ, ಮುರಿ, ದುಂಡುಮುರಿ, ಪಟ್ಟಮುರಿ, ಜೊಳ್ಳುಮುರಿ, ಗಟ್ಟಿಮುರಿ ಇತ್ಯಾದಿ (ಸುಧಾಕರ ಪುಟ. ೮೫).

ಕಡಗವು ಹೆಚ್ಚಿನ ಸಂದರ್ಭಗಳಲ್ಲಿ ಉಕ್ತಗೊಂಡಿದೆ. 'ಪಂಪಭಾರತ' (೧೧–

೧೨೩, ೨೬) ನಯಸೇನನ 'ಧರ್ಮಾಮೃತ'ದಲ್ಲಿ 'ಮಣಿಕಂಕಣ'ದ ಕುರಿತು ಪ್ರಸ್ತಾಪವಿದೆ (೪-೧೪೩). ಬಳೆ ತೊಡುವುದು ಹೆಂಗಸರಿಗೆ ಸಂತಸವನ್ನು ಕೊಡುವ ವಿಷಯವಾಗಿತ್ತು (೯-೧೬೨).

ಇದರಲ್ಲಿ ವಿಧವೆಯರ ಕೆಳವರ್ಗವನ್ನು ಪ್ರತಿನಿಧಿಸುವ ಪಾತ್ರಗಳ ಹೊರತು, ಉಳಿದವರ ಭುಜದ ಆಭರಣದಲ್ಲಿ ವ್ಯತ್ಯಾಸ ಅಷ್ಟಾಗಿ ಕಾಣಿಸುವುದಿಲ್ಲ. ಕೆಲವು ಕೃತಿಗಳನ್ನು ಮಾತ್ರ ಇಲ್ಲಿ ಉಲ್ಲೇಖಿಸಬಹುದು. ನಾಗವರ್ಮನು 'ಅಭಿಧಾನ ರತ್ನಮಾಲಾ ಕರ್ಣಾಟಕ ಟೀಕೆ' ಕೃತಿಯಲ್ಲಿ 'ಕೇಯೂರ, ಅಂಗದಂ – ಈ ಎರಡು ತೋಳ್ಕಟ್ಟುಗಳು' ಎಂದು ಹೇಳುತ್ತಾನೆ. (೪೦೩) 'ಆದಿಪುರಾಣ' (೪-೪೧ವ) ರಾಮಚಂದ್ರ ಚರಿತ ಪುರಾಣ (೫-೪೨) ದಶಕುಮಾರ ಚರಿತೆ (೬-೮೦) ಬಸವೇಶ್ವರ ಕಾವ್ಯ (೩-೩೭, ೩೮, ೩೯) ಮೋಹನ ತರಂಗಿಣಿ (೨೩-೨೧, ೦೯) ಇತ್ಯಾದಿ.

ಸಾಮಾನ್ಯವಾಗಿ ಈ ಆಭರಣಗಳು ರಾಣಿಯರ, ಮದುಮಗಳು, ನೃತ್ಯಗಾತಿಯರ, ನರ್ತನದ ಶೃಂಗಾರದ ಸಂದರ್ಭಗಳಲ್ಲಿ ಬಳಕೆಯಾಗುತ್ತದೆ.

**೨೮೦. ಕೊಂಕು ನುಡಿ**

ಪಂಪನು ಆದಿಪುರಾಣದಲ್ಲಿ ಇದರ ಬಗ್ಗೆ ಹೇಳಿದ್ದಾನೆ. ಕೊಂಕುನುಡಿಗೆ ವ್ಯಂಗ್ಯವೆಂಬ ಅರ್ಥ ಈಗ ಪ್ರಚಲಿತದಲ್ಲಿದೆ. ಆದರೆ ಕೊಂಕುನುಡಿಯೆಂದರೆ ವಕ್ರೋಕ್ತಿಯೆಂದೂ ಆಗಬಹುದು.

*ಕಿವಿಯಿಂ ಬಗೆವುಗುವೊಡೆ ಕೊಂ*
*ಕುವೆತ್ತ ಪೊಸನುಡಿಯೆ ಪುಗುಗುಮುಳಿದುದು ಸರುಸ್ಯೆ*
*ತವಚರಿನೆ ಮಾಡಿ ಸರಿಸ್ಯೆ*
*ತುವೋಕುಮೇಂ ಬಗೆಯ ಬಟ್ಟೆಯಂ ಮುಟ್ಟುಗುಮೇ*

(ಪಂಪ ಭಾರತ ೧-೧೮)

ಕಿವಿಯ ಮೂಲಕವಾಗಿ ಹೋಗಿ ಅಂತರಂಗವನ್ನೊಂದಬೇಕಾದರೆ ಕೊಂಕು (ವಕ್ರತೆ) ಗೊಂಡ ಹೊಸನುಡಿಯೇ ಆಗತಕ್ಕುದು. ಅದಲ್ಲದ "ಸಜಿಸ್ಯೆತು", ಎಂದರೆ ಸರಳವಾದ ನುಡಿ "ಬಗೆಯ ಬಟ್ಟೆಯ"ನ್ನೆಂತು ಮುಟ್ಟುವುದು? ಇದರಿಂದ ಅವನ ಒಲವು ವಕ್ರೋಕ್ತಿ ಪದ್ಧತಿಯ ಕಡೆಗೇ ಬಾಗಿದೆ ಎಂಬುದೇನೋ ವ್ಯಕ್ತವಾಗುತ್ತಿದೆ. ಆದರೆ ಕಡೆಯ ವಾಗ್ಭಾಗದಲ್ಲಿ ತೋರುವಂತೆ "ಸರಳವಾದ ನುಡಿ ಮನಸ್ಸಿನ ದಾರಿಯನ್ನು ಮುಟ್ಟದು" ಎಂಬ ಮಾತಿನ ಹೊಲಬೇನು? ಎಂಬ ಒಂದು ಪ್ರಶ್ನೆ ಬರಬಹುದು. ಅದೀಗ ಪಂಪನ ವಕ್ರೋಕ್ತಿ ಕ್ರಮವೆಂದರೆ. ಕಿವಿಯಿಂದ ಕೇಳುವ ಪದಗಳು ಹೋಗಿ ಅಂತರಂಗವನ್ನು ಮುಟ್ಟಲಿರುವ ಕರ್ಣಕೋಟರಮಾರ್ಗವು ನೆಟ್ಟಗಾಗಿಲ್ಲ; ಒಂದಿಷ್ಟು ಕೊಂಕಾಗಿರುವುದರಿಂದಲೇ ಅದನ್ನು "ಕರ್ಣಶಷ್ಕುಲಿ" ಎನ್ನುತ್ತಾರೆ. ಆ "ಕರ್ಣಶಷ್ಕುಲಿ"ಯ ಒಳಗೆ ಸುತ್ತಿ ಹರಿಯಬೇಕಾದ ನುಡಿಯೂ ಅದರಂತೆ ಕೊಂಕಾಗಲೇಬೇಕು ಎಂಬುದು,

ಆ ಮಾತಿನ ತಾತ್ಪರ್ಯ. ಕಾಕುವಕ್ರೋಕ್ತಿ ಎಂದೂ ಕಾವ್ಯಾವಲೋಕನದಲ್ಲಿ ಕರೆಯಲಾಗಿದೆ.
(ಕಾವ್ಯಾವಲೋಕನ. ಪದ್ಯ:೧೨೯. ೧೪೪)

ಕೊಂಕುವೆತ್ತ ಪೊಸನುಡಿಯೆಂದರೆ ವಕ್ರೋಕ್ತಿಯೆಂದರ್ಥ. ಪೊಸ ನುಡಿಯೆಂದರೆ ಹೊಸ ರೀತಿಯ ಮಾತು ಎಂದೂ; ಪಂಪನು ಹೇಳುತ್ತಾನೆ. ನವ್ಯ ವಿಮರ್ಶೆಯಲ್ಲಿ ಭಾಷೆಯ ಬಗ್ಗೆ ಎತ್ತಿರುವ ದಿಕ್ಪಲ್ಲಟದ ಪ್ರಶ್ನೆಯನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

*ವಿವರಗಳಿಗೆ ನೋಡಿ: ವಕ್ರೋಕ್ತಿ; ಸ್ವಭಾವೋಕ್ತಿ*

*ಮುಳಿಯ ತಿಮ್ಮಪ್ಪಯ್ಯ ೧೯೮೮ ಶ್ರದ್ಧಾಂಜಲಿ ಸಂಪುಟ. ೨ ಪುಟ. ೪೭೪.*

### ೨೮೧. ಕೊಡಗೂಸು

*ಪಂಡಿತ ವಿರೋಧೀ ಕುಳನೇ*
*ಗೊಂಡೇಂಗಳ ಗೆಯ್ವುದರಿದು* ***ಕುಡೆ ಕುಡುಗೂಸು*** *।*
*ಕೊಂಡೊಯ್ವುದುಚಿತಮೀಯದೆ*
*ಕೊಂಡೊಯ್ವದನುಚಿತಮೆಂಬ ನುಡಿಯಂ ನುಡಿದಂ ॥*

*(ಪೊನ್ನ ಶಾಂತಿಪುರಾಣ ೩–೮೧)*

ಪಾಣಿಗ್ರಹಣಪುರಸ್ಸರವಾಗಿ ಧಾರೆಯೆರೆದು ಕನ್ಯೆ ಅಣಿಯಾಗಿದ್ದಾಗ ಅವಳು ಕುಡುಗೂಸು. ಪೊನ್ನನು ೪–೪೬ ರಲ್ಲೂ ಈ ರೂಪವನ್ನು ಬಳಸಿದ್ದಾನೆ. ಕೊಡು ಎಂಬುದಕ್ಕಿಂತ 'ಕುಡು' ಎಂಬ ಆಕೃತಿ ಪೊನ್ನನಲ್ಲಿ ವಿಶಿಷ್ಟವಾಗಿದೆ. ಆತ 'ಕುಡು' ರೂಪ ಬಳಸುತ್ತಾನೆಂಬುದಕ್ಕೆ ೫–೬೩ರಲ್ಲೂ ಆಧಾರ ಸಿಗುತ್ತದೆ. ಕೇವಲ ಮಗು (ಲಿಂಗಭೇದ ವಿಲ್ಲದೆ) ಎಂಬರ್ಥದಲ್ಲಿಯೂ ಈ ಶಬ್ದ ಚಾಲ್ತಿಯಲ್ಲಿರುವಂತೆ ತೋರುತ್ತದೆ.

ಇ–ಎ ಕುಡು–ಕೊಡು

ಉ–ಒ ಪರಿವರ್ತನೆ ಕುಂತಿ–ಕೊಂತಿ ಕುಡಾರ–ಕೊಡಲಿ

ಹೆಣ್ಣಿನ ಬಾಲ್ಯಜೀವನದ ಕುರಿತಂತೆ ಪಂಪನ 'ವಿಕ್ರಮಾರ್ಜುನ ವಿಜಯ'ದಲ್ಲಿಯೂ ಕೆಲವು ಸೂಚನೆಗಳು ಸಿಗುತ್ತವೆ: ದೂರ್ವಾಸನು ಕೊಟ್ಟ ಮಂತ್ರಾಕ್ಷರವನ್ನು ಪರೀಕ್ಷಿಸಲು ಕುಂತಿಯು ಗಂಗಾತೀರಕ್ಕೆ ಬಂದು ಸೂರ್ಯನನ್ನು ಧ್ಯಾನಿಸಿದಾಗ ಸೂರ್ಯನು ಬರುತ್ತಾನೆ. ಸೂರ್ಯನ ಬಂದಾಗ 'ಕೊಡಗೂಸುತನದ ಭಯದಿಂದ ಕನ್ನಿಕೆಯು' ಬೆವರುತ್ತಾಳೆ (ಅನಂತರಂಗಾಚಾರ ಎನ್. (ಅನು) ೧೯೭೭. ೧–೯೨). ಪಂಪನು ಕುಂತಿಯ ಕುರಿತು ಹೇಳುವಾಗ 'ಕೊಡಗೂಸು' 'ಕನ್ನಿಕೆ' ಎನ್ನುವ ಪದವನ್ನು ಬಳಸುತ್ತಾನೆ. ಕನ್ನಿಕಾ; ಕನ್ನಿಕೆ; ಕನ್ನೆ; ಕೂಸು–ಇವುಗಳು ಹೆಣ್ಣುಮಗುವಿಗೆ ಬಳಸಲಾಗುವ ಪದಗಳು (ಕಿಟ್ಟೆಲ್ ಎಫ್. ೧೮೯೪. ಪು. ೩೬೨). ಕೂಸುತನವೆಂದರೆ ಬಾಲ್ಯತನ ಎಂಬರ್ಥವೂ ಬರುತ್ತದೆ (ಅದೇ. ಪು. ೪೬೦). 'ಕೊಡಗೂಸು' ತನದಲ್ಲಿ ಲೈಂಗಿಕ ಸಂಬಂಧವು ನಿಷಿದ್ಧ ಎನ್ನುವ ಧ್ವನಿಯು ಪಂಪನ ಕಾವ್ಯದಲ್ಲಿ ಉಕ್ತವಾಗಿದೆ. ಕುಂತಿಯು ಬಾಲಕಿಯಾಗಿದ್ದಳು ಎನ್ನುವುದನ್ನು 'ಕನ್ನಿಕೆ' ಎನ್ನುವ ಪದವನ್ನು ಬಳಸುವುದರ ಮೂಲಕ ಪಂಪನು ಹೇಳುತ್ತಾನೆ.

"'ಕೂಸು' ಎಂಬ ಶಬ್ದಕ್ಕೆ ಮೊದಲು 'ಹೆಣ್ಣು' ಎಂಬ ಅರ್ಥವಿತ್ತು. ಈಗ ಅದಕ್ಕೆ ಮಗು ಎಂಬ ಅರ್ಥ ಕನ್ನಡದಲ್ಲಿ ಬಂದಿದೆ" ಎಂದು ಪಾಣಿನಿಯವರು ಅಭಿಪ್ರಾಯ ಪಡುತ್ತಾರೆ ಮತ್ತು ಪಂಪನ ಆದಿಪುರಾಣದಲ್ಲಿ 'ಕೂಳದ ದೂರ್ವಾಂಕುರಂ' ಎಂಬ ಪ್ರಯೋಗವೊಂದು ದೊರೆಯುತ್ತದೆ. ಇಲ್ಲಿ 'ಕೂಳದ' ಎಂಬುದಕ್ಕೆ ಎಳೆಯ, ಹೊಸ, ಮೃದು ಎಂಬ ಅರ್ಥವೆಂದು ಡಿ.ಎಲ್. ನರಸಿಂಹಾಚಾರ್ಯರು ಹೇಳಿದ್ದಾರೆ. ಇದೂ ಸರಿ. 'ಎಳೆಯ ಗರಿಕೆ' ಎಂದು ಅದಕ್ಕೆ ಅರ್ಥ. ಈ ಎಂಬ ಮಾತೇ ಮುಂದೆ 'ಕೊಡ' ಎಂದಾಯಿತು. ಅದಕ್ಕೆ ಎಳೆಯ, ಯಂಗ್ [Young] 'ಟೆಂಡರ್' ಎಂಬ ಅರ್ಥ. ಕೊಡಗೂಸು ಎಂದರೆ ಎಳೆಯ ಹೆಣ್ಣು ಕನ್ಯೆ ಎಂಬ ಅರ್ಥ (ಅದೇ).

ಭಾರತೀಯ ಪರಂಪರೆಯಲ್ಲಿ ಮದುವೆಯ ಪೂರ್ವದ ಹೆಣ್ಣಿನ ಅವಸ್ಥೆಗಳನ್ನು ಈ ಕೆಳಗಿನಂತೆ ವಿಭಾಗ ಮಾಡಲಾಗಿದೆ:

೧. ಗೌರಿ – ಏಳು ವರ್ಷ'.
೨. ನಗ್ನಿಕಾ – ಹತ್ತು ವರ್ಷ.
೩. ಕನ್ನಿಕಾ – ಹನ್ನೆರಡು ವರ್ಷ.

ಇನ್ನೂ ಮದುವೆಯಾಗದ, ಆದರೆ ಮದುವೆಗೆ ಒದಗಿಬಂದಿರುವ ಎಳೆಯಳನ್ನು ಕನ್ನಡ ಕಾವ್ಯಗಳು ಕೊಡಗೂಸು, ಕೊಡಗೂಸು ಎಂದು ಕರೆದಿವೆ.

*ವಿವರಗಳಿಗೆ ನೋಡಿ: ಸಂತೋಷ (ಮಾಸಪತ್ರಿಕೆ) ಸಂಪುಟ–೧ ಸಂಚಿಕೆ–೫, ಮೇ. ೧೯೮೧ ಪುಟ.೩೫*

*Arora; Rajkumar 1972 Historical & Cultural Data From Bhavisya Purana. P. 121.*

## ೨೮೨. ಕೋಲರು

ದುರ್ಗಾಸಪ್ತಶತಿಯಲ್ಲಿ **ಕೋಲರ** ಉಲ್ಲೇಖವೂ ಬರುವುದು. ಕೋಲರು, ಮುಂಡರು, ಚಂಡರು ಕಂನಾಡಿನ ಆದಿವಾಸಿಗಳು. ಅವರ ಹೆಸರಿನ ಕುರುಹುಗಳು ಸಾವಿರಾರು ವರುಷಗಳಿಂದ ಉಳಿದು ಬಂದಿರುವುದು ಕೌತುಕ ಮತ್ತು ಆಶ್ಚರ್ಯವನ್ನುಂಟುಮಾಡುವುದು. ಕರ್ನಾಟಕದ ಮೂಲ ಜನಾಂಗಗಳಲ್ಲಿ ಕೋಲರದೂ ಒಂದು. ಹೀಗಾಗಿ ಕೋಲರ ಕೊಡುಗೆಯು ಸಾಂಸ್ಕೃತಿಕವಾಗಿ ಮಹತ್ವದ್ದು.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೨ ಪುಟ. ೧೭೨.*

## ೨೮೩. ಕೋಷ್ಠಾಗಾರ

*ಅರಸನ* ***ಕೋಷ್ಠಾಗಾರದ***
*ಕರಣಂಗಳ ಕಾಪನೆಯ್ದೆ ಬಂಚಿಸಿ ಕಳ್ದಂ ।*
*ಕರೆದುಮೊಳಗೊಳಗೆ ಸುಜಿಯು*
*ತ್ತಿರೆ ನೃಪನದನರಿದು ಪಿಡಿದು ತರವೇಟಿಸ್ದಿಗಳ್ ॥*

*(ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೫–೧೫)*

ಕೋಷ್ಠಾಗಾರದ ಕರಣಗಳೆಂದರೆ ಕೋಷ್ಠಾಗಾರದ ಕೆಲಸವೆಂದು ಅರ್ಥ. ಅರಸನ ಕೋಷ್ಠಾಗಾರ (ಕಣಜಗಳ ಕೊಠಡಿ) ಕಾಪಿನವನನ್ನು(ಕಾವಲುಗಾರನನ್ನು) ವಂಚಿಸಿ ಕಳ್ಳನೊಬ್ಬ ಕದ್ದು ತೆಗೆದುಕೊಡುವ ಚಿತ್ರಣವು ಸಿಗುತ್ತವೆ. ಇದು "ಕೋಷ್ಠಾಗಾರದ ಕಾವಲುಗಾರ" ಮತ್ತು "ಕಣಜದಲ್ಲಿರುವುದನ್ನು" ಕದಿಯುವುದನ್ನು ಚಿತ್ರಿಸುತ್ತದೆ.

ಕೋಷ್ಠವೆಂದರೆ ಒಳಹೊಟ್ಟೆ; ಒಳಕೊಠಡಿ; ಕಣಜ, ಸುತ್ತುಗೋಡೆ, ಪೀಠವೆಂಬ ಅರ್ಥಗಳಿವೆ. ಕಣಜಗಳನ್ನು ತುಂಬಿಟ್ಟುಕೊಂಡು ಅಗತ್ಯಬಿದ್ದ ಸಂದರ್ಭದಲ್ಲಿ (ಬರಗಾಲ ಇತ್ಯಾದಿ) ಅದರಿಂದ ಧಾನ್ಯವನ್ನು ತೆಗೆಯುತ್ತಿದ್ದರು.

ಉಗ್ರಾಣದ ಅಧ್ಯಕ್ಷನು ೧) ಸೀತಾ, ೨) ರಾಷ್ಟ್ರ, ೩) ಕ್ರಯಿಮ, ೪) ಪರಿವರ್ತಕ ೫) ಪ್ರಾಮಿತ್ಯಕ, ೬) ಆಪಮಿತ್ಯಕ, ೭) ಸಿಂಹನಿಕಾ, ೮) ಅನ್ಯಜಾತ, ೯) ವ್ಯಯಪ್ರತ್ಯಾಯ ಮತ್ತು ೧೦) ಉಪಸ್ಥಾನಗಳೆಂಬ ಹತ್ತು ಭಾಗಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳಬೇಕು.

ವ್ಯವಸಾಯದ ಮುಖ್ಯಾಧಿಕಾರಿಯು ತಂದೊಪ್ಪಿಸಿದ ಧಾನ್ಯಜಾತಿಯು ೧) ಸೀತಾ, ಹುಳುಕೂ, ಜಳ್ಳೂ ಇರದ ಧಾನ್ಯಗಳನ್ನು ಅಳತೆ ಕಡಿಮೆಯಿಲ್ಲದಂತೆ ಅವನು ಸ್ವೀಕರಿಸಬೇಕು. ೨) ರಾಷ್ಟ್ರವು ಹತ್ತು ವಿಧ. ಕ್ಲಪ್ತವಾಗಿ ಗ್ರಾಮಗಳು ಸಲ್ಲಿಸುವ ಸುಂಕವು ೧) ಪಿಂಡಕರ. ಆರನೆಯ ಒಂದು ಭಾಗ ಇಲ್ಲವೇ ನಾಲ್ಕನೆಯ ಒಂದುಭಾಗದ ರೂಪದಲ್ಲಿ ಬಂದ ರಾಜಭಾಗವು ೨) ಷಡ್ಭಾಗ, ಸೇನೆಯು ಬೀಡುಬಿಟ್ಟಿರುವಾಗ ಈ ಪ್ರದೇಶದ ಜನರು ಅವುಗಳಿಗಾಗಿ ಸಲ್ಲಿಸುವ ಅಕ್ಕಿ, ಉಪ್ಪು ಮುಂತಾದ ರಾಜಭಾಗವು ೩) ಸೇನಾ ಭಕ್ತ. ಷಡ್ಭಾಗಾತಿರಿಕ್ತವಾದ, ದೇಶಾನುಗುಣವಾಗಿ ಪ್ರತ್ಯರ್ಪಿಸುವ ಹತ್ತನೆಯ ಒಂದು ಭಾಗ ಇಲ್ಲವೇ ಇಪ್ಪತ್ತನೆಯ ಒಂದು ಭಾಗವು. ೪) ಬಲಿ, ಫಲವೃಕ್ಷಗಳಿಗಾಗಿ ಕೊಡುವ ರಾಜಭಾಗವು ೫) ಕರ. ರಾಜನಿಗೆ ಪುತ್ರಜನ್ಮವೇ ಮುಂತಾದ ಸಂತೋಷ ಕಾಲಗಳಲ್ಲಿ ಪೌರ ಜಾನಪದರಿತ್ತ ಹಣವು ೬) ಉತ್ಸಂಗ. ನ್ಯಾಯವಾದ ಸುಂಕಕ್ಕಿಂತ ಹೆಚ್ಚು ಸುಂಕವನ್ನು ಎತ್ತುವುದು ೬) ಪಾರ್ಶ್ವ, ನಾಲ್ಕು ಕಾಲಿನ ಪ್ರಾಣಿಗಳು ನಾಶಗೊಳಿಸಿದ ಸಸ್ಯಗಳಿಗಾಗಿ ಕೊಟ್ಟ ಹಣವು ೮) ಪಾರಿಹೀಣಕ. ಕಾಣಿಕೆಯು ೯) ಔಪಾಯನಿಕ. ರಾಜನು ಕಟ್ಟಿದ ಕೆರೆ, ಅಣೆಕಟ್ಟು ಮುಂತಾದವುಗಳಿಂದ ಬಂದ ಸುಂಕವು ೧೦. ಕೌಷ್ಠೇಯಕ–ಈ ಹತ್ತನ್ನು ರಾಷ್ಟ್ರವೆನ್ನುವರು.

ಧಾನ್ಯ ವಿಕ್ರಯದಿಂದ ಬಂದ ಹಣವೂ, ಕೊಂಡ ಮಾಲೂ, ವೃದ್ಧಿ ಪ್ರಯುಕ್ತವಾಗಿ ಕೈಸೇರಿದ ಧಾನ್ಯವೂ ೩) ಕ್ರಯಿಮ.

ಧಾನ್ಯಗಳನ್ನು ಭಿನ್ನ ಬೆಲೆಯಿಂದ ವಿನಿಮಯ ಮಾಡಿಕೊಳ್ಳುವುದು ೪) ಪರಿವರ್ತಕ. ಪುನಃ ಹಿಂತಿರುಗಿಸಲು ಸಾಧ್ಯವಿಲ್ಲವೆಂದು ನುಡಿದು ಮಿತ್ರರಲ್ಲಿ ಧಾನ್ಯಗಳನ್ನು ಬೇಡುವುದು ೫) ಪಾಮಿತ್ಯಕ.

ಸಮೃದ್ಧಿಕವಾಗಿ ಕೊಡುವೆನೆಂದು ಧಾನ್ಯಗಳನ್ನು ಪಡೆಯುವುದು ೬) ಆಪಮಿತ್ಯಕ.

ಕುಟ್ಟುವುದು, ಬೇಳೆಗಳನ್ನೊಡೆಯುವುದು, ಹಿಟ್ಟು ಮಾಡುವುದು, ಕಬ್ಬನ್ನು ಗಾಣ

ಆಡುವುದು, ಅರೆಯುವುದು ಮುಂತಾದ ಕಾರ್ಯಗಳಲ್ಲಿ ತೊಡಗಿರುವ ಜನರಿಂದ ಎತ್ತಲ್ಪಡುವ ಸುಂಕವೂ, ಎಣ್ಣೆ ತೆಗೆಯುವುದು, ಆಡು, ಕುರಿಗಳ ಪ್ರಾಣಿಗಳನ್ನು ಯಜ್ಞದಲ್ಲಿ ತೆಗೆಯುವುದೂ ಮುಂತಾದ ಕಸುಬುಗಳಲ್ಲಿ ನಿರತರಾದವರಿಂದ ತೆಗೆದುಕೊಳ್ಳಲ್ಪಡುವ ಸುಂಕವೂ

೭) ಸಿಂಹನಿಕಾ. ಮತ್ತೊಬ್ಬರಿಂದ ಕಳೆದುಕೊಳ್ಳಲ್ಪಟ್ಟು ಇಲ್ಲವೇ ಮರೆಯಲ್ಪಟ್ಟು ರಾಜನ ಕೈಸೇರಿದ ಹಣವು ೮) ಅನ್ಯಜಾತ.

ಕಾರ್ಯವೊಂದನ್ನು ಸಾಧಿಸಲು ಕಳುಹಿಸಲಾದ ಸೈನ್ಯದ ಖರ್ಚಿಗಾಗಿ ಉಳಿದ ಹಣವೂ, ಔಷಧಶಾಲೆಗಳಿಗೋಸ್ಕರ ಖರ್ಚುಗುಳಿದ ಹಣವೂ, ದುರ್ಗಪ್ರಾಸಾದಿಗಳ ವೆಚ್ಚಕ್ಕಾಗುಳಿದ ಹಣವೂ ೯) ವ್ಯಯಪ್ರತ್ಯಾಯ. ಹೆಚ್ಚಿನ ತೂಕ ಅಳತೆಗಳಿಂದ ಸರಕುಗಳನ್ನು ಪಡೆದು ಕಡಿಮೆ ಅಳತೆ ತೂಕಗಳಿಂದ ಮಾಲುಗಳನ್ನು ಮಾರುವುದು, ಅಳತೆಯ ಪಾತ್ರೆಗಳಲ್ಲಿ ಧಾನ್ಯಾದಿಗಳನ್ನು ಅದುಮಿ ತುಂಬುವುದು. ಅಳತೆಯ ಪಾತ್ರೆಯ ಮೇಲಿರುವ ಧಾನ್ಯಗಳನ್ನು ಕೈಗಳಿಂದ ಹಿಡಿದುಕೊಳ್ಳುವುದು, ಧಾನ್ಯರಾಶಿ, ಎಣಿಕೆಗೂ, ಅಳತೆಗೂ ಅರ್ಹವೆನಿಸಿದ ಮಾಲುಗಳನ್ನಿಟ್ಟಿರುವುದು, ಪುನಃ ಅಳತೆ ಮಾಡಿದರೆ ಕಡಿಮೆ ಬೀಳದಿರುವುದಕ್ಕಾಗಿ ಪಡೆದ ಹದಿನಾರನೆ ಒಂದು ಭಾಗ ಧಾನ್ಯ, ಕಳೆದವರ್ಷದ ಶಿಲ್ಕು ಮತ್ತು ತನ್ನ ನೈಪುಣ್ಯದಿಂದ ಗಳಿಸಿದ ಪುಷ್ಪ ತಾಂಬೂಲಾದಿಗಳು ೧೦) ಉಪಸ್ಥಾನ. ಕಸ ಗುಡಿಸುವವನು(ಮಾರ್ಜಕ), ಉಗ್ರಾಣವನ್ನು ನೋಡಿಕೊಳ್ಳುವವನು(ಆರಕ್ಷಕ), ತೂಕಮಾಡುವವನು(ಧಾರಕ), ಅಳತೆ ಮಾಡುವವನು(ಮಾಯಕ), ಅಳೆಯುವವರ ಮೇಲಿನ ಅಧಿಕಾರಿ (ಮಾಪಕ), ಕೊಡುವವನು (ದಾಯಕ), ಕೊಡಿಸುವವನು(ದಾಪಕ) ಭಾರವಾದ ದೊಣ್ಣೆಗಳನ್ನು ಹೊರುವವನು ದಾಸ, ಸೇವಕ–ಇವರು ವಿಷ್ಟಿ ಎನ್ನಲ್ಪಡುವರು.

*ವಿವರಗಳಿಗೆ ನೋಡಿ: ಶ್ರೀ ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳು ೨೦೧೦*
**ಕೌಟಿಲೀಯ ಅರ್ಥಶಾಸ್ತ್ರ**

**೨೮೪. ಕೋಳಿಕಾಳಿಕಾಜಿ**

***ಕೋಳಿಕಾಳಿಕಾಜಿ****ವೆಂದರೆ ಶಾಕ್ತಮತದ ವಂಚಕ. (ಪಂಪ ಭಾರತ ೫–೪೬ ವ)*

ಪಂಪನು ಶಾಕ್ತೇಯ ಮತವನ್ನು ಕಟುವಾಗಿ ಇಲ್ಲಿ ಟೀಕಿಸಿದ್ದಾನೆ. ಶಕ್ತಿ (ದೇವತೆಯ) ಉಪಾಸಕರನ್ನು ಶಾಕ್ತರು ಎಂದು ಕರೆಯುತ್ತಾರೆ. ಶಕವೆಂದರೆ ಸಾಧ್ಯವೆಂದರ್ಥ. ಶಕ್ತಿ ದೇವತೆಯ ಉಪಾಸನೆಯಿಂದ ಅನೇಕವು ಸಾಧ್ಯವೆಂದು ಶಾಕ್ತಮತವು ನಂಬುತ್ತದೆ. ಇದು ಶೈವ ಪಂಥದ ಹತ್ತಿರದಲ್ಲಿದೆ. ಶಕ್ತಿಯೆಂದರೆ ಸಾಮರ್ಥ್ಯ. ಶಿವನ ಅರ್ಧಭಾಗವಾದ ಪಾರ್ವತಿಯನ್ನು ಅತ್ಯಂತ ಶ್ರೇಷ್ಠವಾದ ಶಕ್ತಿಯೆಂದು ನಂಬುತ್ತಾರೆ. ಇದಕ್ಕೆ ಅನುಗುಣವಾಗಿ ಶಾಕ್ತ ಆಗಮನಗಳನ್ನು ರಚಿಸಲಾಯಿತು. ಇವುಗಳನ್ನು ತಂತ್ರವೆಂದೂ ಕರೆಯುತ್ತಾರೆ. 'ಶಾಕ್ತತಂತ್ರ'ಗಳೆಂದು ಗುರುತಿಸುತ್ತಾರೆ. ಕಾಶ್ಮೀರಿ ಶಾಕ್ತ ಉಪಾಯಗಳಲ್ಲಿ ಶಕ್ತಿದೇವತೆಯ ಉಪಾಸನೆಯ ವಿಧಗಳನ್ನು ಹೇಳಲಾಗಿದೆ. ಸ್ವಂತದ ಅರಿವು ಉಂಟಾಗುವುದು ಮನಸ್ಸಿನಿಂದ

ಮಾನಸಿಕ ಶಕ್ತಿಯೇ ಎಲ್ಲದಕ್ಕೂ ಮೂಲ ಇದಕ್ಕೆ ಶಾಕ್ತಪಂಥವು ಜ್ಞಾನಉಪಾಯವೆಂದು ಜ್ಞಾನಮಾರ್ಗವೆಂದು ಕರೆಯುತ್ತದೆ. ಇದನ್ನೇ ಭೇದಾಭೇದ ತತ್ವವೆಂದು (ಬಹುತ್ವದಲ್ಲಿ ಏಕತೆ) ಉಪಾಯವೆಂದು ಕರೆಯಲಾಗಿದೆ. ಪಂಪನು ಜೈನ ಕವಿಯಾದುದರಿಂದ ಶಾಕ್ತಮತದ ವಂಚಕನೆಂದು ಬರೆದಿದ್ದಾನೆ. ಇಲ್ಲಿ ಕಾಳಿಕಾ ಎಂಬುದು ಕಾಳಿಯನ್ನು(ಶಕ್ತಿ ದೇವತೆಯನ್ನು) ಸೂಚಿಸುತ್ತದೆ.

ವಿವರಗಳಿಗೆ ನೋಡಿ: ಕಾಳಾಮುಖ.

**೨೮೫. ಕ್ಷಾತ್ರಗುಣ**

ರಾಜನಲ್ಲಿ ಮುಖ್ಯವಾಗಿ ಇರಬೇಕಾದ್ದು ಕ್ಷಾತ್ರಗುಣ ಸಂಪನ್ನನಾದ ಆಕರ್ಷಕ ಮೈಕಟ್ಟು:

*ಕ್ಷಿತಿಪ ಶ್ರೀ ವಿಭವ ವಿಲಾ*
*ಸತೆಯು ಪೇರುರಮೆ ಪೇಳ್ಗುಮಭ್ಯಸ್ತ ಮಹಾ ।*
*ಸ್ತ್ರತೆಯಂ ಶ್ರಮವಶ ತನುಮ*
*ಧೃತೆ ಪೇೞ್ಗುಂ ಬೇರೆ ವೇೞ್ವುದದು ಪುನರುಕ್ತಂ ॥*

ರಾಜನ ಸಂಪದ ವೈಭವವನ್ನು ಆತನ ಎದೆಯೇ ಹೇಳುತ್ತದೆ. ಆತನ ಸೊಂಟವು ಆತ ಅಭ್ಯಾಸ ಮಾಡಿರುವ ಅಸ್ತ್ರಗಳ ವಿಷಯವನ್ನು ಸೂಚಿಸುತ್ತದೆ. ದೇಹದಾರ್ಢ್ಯತೆ ದೊರೆಗೆ ಗೌರವ ಗಾಂಭೀರ್ಯಗಳನ್ನು ಹೊರನೋಟಕ್ಕೆ ತಂದುಕೊಡುತ್ತದೆಂಬುದು ಸ್ವಲ್ಪಮಟ್ಟಿಗೆ ನಿಜ. ಆದರೆ ಚಕ್ರವರ್ತಿಗೆ ದೈಹಿಕವಾಗಿ ಕೆಲವು ಶುಭಲಕ್ಷಣಗಳು ಸಂಕೇತಿಸುತ್ತವೆಂಬ ಸಾಮುದ್ರಿಕಾ ಇದೆ :

ಮೀನಾಬ್ಜ ಶಂಖ ಚಕ್ರ ವಿ
ತಾನಾಂಕಿತ ದಕ್ಷಿಣಾಂಘ್ರಿ ತಲ ಪಲ್ಲವಮು ।
ತ್ತಾನಂ ರತ್ನಾಕರದ ವೊ
ಲೇನಮದುರ್ಬದೊ ಸಾರ್ವಭೌಮ ಗಗನೇಚರನಾ ॥

ಮೀನು, ಕಮಲ, ಶಂಖ, ಚಕ್ರ ಇವುಗಳಂತೆ ಗುರುತಾಗಿರುವ ಬಲದ ಅಂಗಾಲು– ಇವು ಚಕ್ರವರ್ತಿಯಾಗುವವನ ಚಿಹ್ನೆಗಳಂತೆ. (ಪೊನ್ನನ ಶಾಂತಿಪುರಾಣ ಮುನ್ನುಡಿ ಹಂ.ಪ.ನಾ ೧೨೫)

*ವಿವರಗಳಿಗೆ ನೋಡಿ: ರಾಜರು; ರಾಜಧರ್ಮ.*

**೨೮೬. ಕ್ಷೇತ್ರ**

*"ವಿಚಿತ್ರವೀರ್ಯನ ಕ್ಷೇತ್ರದೊಳಂಬಿಕೆಗಮಂಬಾಲೆಗಂ"* ಎಂದು ಪಂಪ ಭಾರತದಲ್ಲಿ ಬರುತ್ತದೆ.

*(ಪಂಪ ಭಾರತ ೧–೮೪ ವ)*

ವಿಚಿತ್ರವೀರ್ಯನ ಕ್ಷೇತ್ರದೊಳು ಎಂದರೆ ವಿಚಿತ್ರವೀರ್ಯನ ಹೆಂಡತಿ. ಹೆಂಡತಿಯನ್ನು ಕ್ಷೇತ್ರವೆಂದೂ, ಗಂಡಸನ್ನು ಬೀಜವೆಂದು ಕರೆಯುವುದು ರೂಢಿಯಲ್ಲಿ ಬಂದಿದೆ. ಕ್ಷೇತ್ರವೆಂದರೆ ಭೂಮಿಯೂ ಹೌದು. ಉಳುಮೆ ಮತ್ತು ಕ್ಷೇತ್ರ, ಕ್ಷೇತ್ರ ಮತ್ತು ಬೀಜ ಬಿತ್ತನೆ ಇವುಗಳಿರುವ ಸಾಂಕೇತಿಕ ಅರ್ಥಗಳು ಮುಖ್ಯವಾದವು. ವೈಶೇಷಿಕ ಪ್ರಕಾರ ಕ್ಷೇತ್ರವೆಂದರೆ ಆತ್ಮನ ಏಳುಗುಣಗಳು ಇಚ್ಛೆ, ದ್ವೇಷ, ಸುಖ, ದುಃಖ, ಸಂಘಾತ, ಚೇತನ, ಧೃತಿ, ಇಲ್ಲಿ ಕ್ಷೇತ್ರವನ್ನು ಸ್ತ್ರೀಗೆ ಹೋಲಿಸಿರುವುದು ಮುಖ್ಯವಾಗಿದೆ.

## ಖ

### ೨೮೭. ಖಂಡುಗ

*ಮೂಸಾಸಿರ**ಖಂಡುಗ** ಬತ್ತಮುಮಂ ಪ್ರಮಾಣಂ ಮಾಡಿ*
*ಕೊಟ್ಟೊಡಾ ಪಸರದೊಳರಸಂ ದಾಯಂಗೊಟ್ಟನೆಂದು ಪಸುಗಳುಮನಾಯ್ದು.....*
*(ಡಿ.ಎಲ್.ಎನ್. ೨೦೦೯ ಪುಟ. ೬೬)*

ಖಂಡುಗ – ಅಳತೆಯ ಮಾಪನಗಳಲ್ಲಿ ಒಂದು. ಈಚಿನವರೆಗೂ 'ಖಂಡುಗ' ಎಂಬ ಅಳತೆಯ ಮಾಪನದ ಸಂದರ್ಭದಲ್ಲಿ 'ಖಂಡ' ಎಂದು ಪರಿವರ್ತನೆಯಾಗಿದೆ. 'ಹತ್ತು ಖಂಡಿ ಅಡಿಕೆ', 'ಇಪ್ಪತ್ತು ಖಂಡಿ' ಎಂದು ತೂಗುವ ಕ್ರಮವಿದೆ. ಮೂಸಾಸಿರ ಖಂಡುಗವೆಂಬುವುದು ಸಮಾಸವಾಗಿದೆ.

ಬಕಾಸುರನು ಹನ್ನೆರಡು ಖಂಡುಗದ ಅನ್ನ ತಿನ್ನುತ್ತಿದ್ದ ಎಂಬ ವಿವರವು ಪಂಪಭಾರತದಲ್ಲಿ ಬರುತ್ತದೆ. (೩–೨೫ವ) ಪಾವು; ಸೇರು; ಕುಡ್ತೆ; ಖಂಡುಗಗಳು ಅಳತೆಯ ಮಾಪನಗಳು.

ಧಾನ್ಯಗಳ ಅಳತೆಯ ಕೋಷ್ಟಕವು ಈ ರೀತಿಯಲ್ಲಿದೆ. ೧ ಖಂಡುಗ – ೪ ಪಂಚಕ, ೧ ಪಂಚಕ – ೫ ಕೊಳಗ, ೧ ಕೊಳಗ – ೪ ಬಳ್ಳ, ೧ ಬಳ್ಳ – ೪ ಮಾನ, ೧ ಮಾನ – ೪ ಸೊಲ್ಲಿಗೆ, ೧ ಸೊಲ್ಲಿಗೆ – ೪ ಗಿದ್ದಿಗೆ

*ವಿವರಗಳಿಗೆ ನೋಡಿ: ಹಾ. ಮಾ. ನಾಯಕ್ ೧೯೭೨ ಕನ್ನಡ ವಿಶ್ವಕೋಶ ಸಂಪುಟ. ೭ ಪುಟ. ೬೭೦*

### ೨೮೮. ಖಾಂಡವ ವನದಹನ

"ಮಣಿ ಕನ್ ಕಾದಿ ವಸ್ತುಗಳನ್ನು ಒಂದನ್ನು ನಾನು ಬೇಡೆನು ಇನ್ನುಣಿಸು ನನಗೆ ಪ್ರೀತಿ ಮೆಯ್ ಪಸಿದು" ಬಳಲುತ್ತಿದ್ದೇನೆ. ನನ್ನ ಬೇಡಿಕೆಯನ್ನು ಈಡೇರಿಸುವುದು ಎಂದು ಪಂಪಭಾರತದಲ್ಲಿ ಬರುತ್ತದೆ. (೫–೭೧)

ಯಜುರ್ವೇದ ಕಾಲಕ್ಕೆ ಬಂದರೆ, ಕಾಡುಗಳನ್ನು ಸುಟ್ಟು ಕೃಷಿಯೋಗ್ಯವಾಗಿಸಿಕೊಂಡ ವಿಧಾನವನ್ನು ಕುರಿತು ಶತಪಥ ಬ್ರಾಹ್ಮಣದಲ್ಲಿ ಹಲವು ವಿವರಗಳು ದೊರಕುತ್ತವೆ.

ಮಾಧವನೆಂಬ ವಿದೇಹದ ರಾಜನೂ, ರಘು ಸಮುದಾಯದ ಗೌತಮ ಗೋತ್ರಕನಾದ ಬ್ರಾಹ್ಮಣನೂ ತನ್ನ ಹಿಂದೆ ಹಿಂದೆಯೇ ಬರಲಾಗಿ ಅಗ್ನಿದೇವನು ಸರಸ್ವತೀ ನದಿಗೆ ಪೂರ್ವದಿಕ್ಕಿಗೆ ಇದ್ದ ಕಾಡನ್ನು ಸುಡುತ್ತಾ ಹೋದನೆಂದು ವರ್ಣಿತವಾಗಿದೆ. ಸದಾನೀರು ಎಂಬ ನದಿಯ ಪೂರ್ವ ದಿಕ್ಕಿನ ಭೂಭಾಗ ಹಿಂದಕ್ಕೆ ಬಹಳ ತೇವದಿಂದ ಕೂಡಿದ ಅಡವಿಗಳಿಂದ ತುಂಬಿತ್ತಂತೆ. ಏಕೆಂದರೆ ಅಗ್ನಿ ಆಗಿನ್ನೂ ಅವುಗಳ ರುಚಿ ನೋಡಿರಲಿಲ್ಲ ವಂತೆ. ಆದರೆ ಈಗ ಬ್ರಾಹ್ಮಣರು ಕ್ರತುಗಳ ಮೂಲಕ ಆ ಕಾಡಿನ ರುಚಿಯನ್ನು ಅಗ್ನಿಗೆ ತೋರಿಸಿದರು. ಹಾಗಾಗಿ ಅದು ಕೃಷಿಯೋಗ್ಯವೆನಿಸಿತಂತೆ. ಇದಕ್ಕಿಂತಲೂ ಸ್ಪಷ್ಟ ವಿವರಣೆಗಳ ಅಗತ್ಯವಿಲ್ಲ. ಮಹಾಭಾರತದಲ್ಲಿ ಪಾಂಡವರು ಕೃಷ್ಣನ ನೆರವಿಂದ ಯಮುನಾ ನದೀ ತೀರದ ಖಾಂಡವ ವನವನ್ನು ಅಗ್ನಿಗೆ ಅರ್ಪಿಸಿ ತಮ್ಮ ರಾಜಧಾನಿಯಾದ ಇಂದ್ರಪ್ರಸ್ಥವನ್ನು ನಿರ್ಮಿಸಿಕೊಂಡ ಕಥೆ ಕೂಡ ಮೇಲಿನ ಚಾರಿತ್ರಿಕ ಪರಿಣಾಮವನ್ನು ಸೂಚಿಸುವಂತಹುದೇ ಆಗಿದೆ ಎನ್ನುತ್ತಾರೆ ಕೊಸಾಂಬಿ. ಋಗ್ವೇದದಲ್ಲಿ ಅಗ್ನಿಯನ್ನು ಕಾಡುಗಳನ್ನು ನುಂಗುವವನು, ಕೊಡಲಿ ಎಂಬ ನಾಮಾಂತರಗಳಿಂದ ಕರೆಯಲಾಗಿದೆ.

*ವಿವರಗಳಿಗೆ ನೋಡಿ: ಡಿ. ಡಿ. ಕೊಸಾಂಬಿ ೧೯೯೮ ಪ್ರಾಚೀನ ಭಾರತದ ಚರಿತ್ರೆ ಪುಟ. ೯೫.*

## ಗ

### ೨೮೯. ಗಂಗಾನದಿ

*"ಶಂತನುಗಮಳ ಗಂಗಾ*
*ಕಾಂತೆಗ ಮಂಟನೆಯ ವಸು ವಸಿಷ್ಠನ ಶಾಪ*
*ಭ್ರಾಂತಿಯೊಳೆ ಬಂದು ನಿರ್ಜಿತ*
*ಕಂತುವೆನೆಲ್ಕಂತು ಪುಟ್ಟಿದೆಂ ಗಾಂಗೇಯಂ" (ಪಪಭಾರತ. ೧-೬೭)*

ಪಂಪ ಗಂಗೆಯನ್ನು ಗಂಗಾಶಾಂತೆ ಎಂದು ಕರೆದುರುವುದು ಗಮನಾರ್ಹ.

'ಗಂಗಾ' ಅತ್ಯಂತ ಪವಿತ್ರ ಪ್ರಮುಖ ನದಿ ಎಂದು ಭಾರತೀಯರೆಲ್ಲರ ನೆರೆ ನಂಬುಗೆಯಾಗಿದೆ. 'ಗಂಗಾ' ಇದರ ಅರ್ಥವನ್ನು ಅರಿಯಲು ಮಾಡಿದ ಪ್ರಯತ್ನಗಳಿಗೆ ಸಮಾಧಾನಕರವಾದ ಉತ್ತರವು ಮಾತ್ರ ದೊರೆತ ಹಾಗಿಲ್ಲ. ಗಂ-ಗಾ ಹೀಗೆ ಇದರಲ್ಲಿ ಎರಡು ಪದಗಳಿರುವಂತೆ ತೋರುತ್ತದೆ. ಗಾ ಎಂದರೆ ಗಾಮಿನಿ (ನದಿ), ನದಿಗೆ ಆಪ-ಗಾ ಎಂದು ಹೇಳುವುದುಂಟು. ಗಮನಾರ್ಥಕ 'ಗಾ' ವನ್ನುಳಿದರೆ 'ಗಂ'(ಗಾ) ಇದು ಆಪ ಎಂಬರ್ಥದಲ್ಲಿ ಬಳಸಿರುವ ಪದವೆಂದು ಅನುಮಾನ ಹೊರಡುತ್ತದೆ. ಕಂ=ಆಪ ಈ ಸಮೀಕರಣದಂತೆ ಗಂ<ಕಂ ಇದು ಜಲಾರ್ಥಕ ಸಂಕೇತವಾಗುತ್ತದೆ.

ಗಂಗಾನದಿಗೆ ಭಾರತೀಯ ಸಂಸ್ಕೃತಿಯಲ್ಲಿ ವಿಶೇಷ ಮಹತ್ವವಿದೆ. ಗಂಗೆಯ ಸ್ನಾನವು ಪವಿತ್ರವೆಂದು ಹೇಳುತ್ತಾರೆ. ನದಿಯಸ್ನಾನ ಮತ್ತು ಪುಣ್ಯ ಸಂಪಾದನೆಗೆ

ಇರುವ ಸಂಬಂಧವು ಅರ್ಥ ಪೂರ್ಣವಾಗಿದೆ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಹಾಲುಮತ ದರ್ಶನ ಸಂಪುಟ. ೩ ಪುಟ. ೧೬೩*

### ೨೯೦. ಗಗನಗಾಮಿನೀ ವಿದ್ಯೆ

***ಗಗನಗಾಮಿನೀವಿದ್ಯೆಯಿನುತ್ತರಕುರುವನೆಯ್ದಿ***ಸು; ಅಲ್ಲಿಯ ಸುರತರುಗಳ ತಣ್ಣೆಳಲ್ಗಳೊಳಂ ಕಲ್ಪಲತೆಯ ಜೊಂಪಂಗಳೊಳಂಸೀತಾನದೀತರಙ್ಗಾಲಿಂಗಿತ ಸಂತಾನಲತಾಲತಾಂತಸುರಭಿತರಮಂದಾರವನವೀಧೀವಿಹಾರಪರಿಶ್ರಾಂತಪವಮಾನ ಸ್ಪರ್ಶನದಿಂ ಮದೀಯಾಂಗಸಂಗತಪರಿತಾಪವನಾರಿಸುವೆನೆಂದು ನಿಜನಂದನಂಗೆ ಪೇಟಿಶ್ಚೊಡಾತನುಂ ತನ್ನ ಪಯೋಧರ ಪಥಗಾಮಿನೀ ವಿದ್ಯೆಯಂ ಬೆಸಸಿದೊಡೆ ನರಕಗಮನಾಭಿಮುಖನಾಗಿರ್ದವನರಿದು ವಿಷಣ್ಣಮನನುದಾಸೀನನಾಗಿರ್ದಂ.....

(ಡಿ.ಎಲ್. ಎನ್. ೨-೧೪ ವ)

ಗಗನಗಾಮಿನೀ ವಿದ್ಯೆಯೆಂದರೆ ಆಕಾಶ ಪಥದಲ್ಲಿ ಹಾರಿಹೋಗುವ ಅಥವಾ ಲಂಘಿಸುವ ವಿದ್ಯೆ. ಇದು ಸಾಮಾನ್ಯವಾಗಿ ಎಲ್ಲಾ ಆಗಮಿಕ ಕಾವ್ಯಗಳಲ್ಲಿ ಕಾಣಿಸಿಕೊಳ್ಳುತ್ತದೆ. ಇದರಂತೆಯೇ ಪಯೋಧರ ವಿದ್ಯೆಯ ಪರಿಕಲ್ಪನೆ. ಆಕಾಶಗಾಮಿ ವಿದ್ಯೆಗಿಂತ ಇದು ಬೇರೆಯಾಗಿದೆ. ಅದು ಆಕಾಶಗಾಮಿನಿ. ಇದು ನೀರಿನ ಮೂಲಕ ಇಳಿಯುವ (ಗಮಿಸುವ) ವಿದ್ಯೆ. ಈ ಪರಿಕಲ್ಪನೆಯು ಜೈನ ಆಗಮಿಕ ಕಾವ್ಯಗಳಲ್ಲಿ ಕಾಣಿಸಿಕೊಳ್ಳುತ್ತವೆ. ಇವುಗಳು ಕಲ್ಪನೆಗಳು ಮಾತ್ರ.

### ೨೯೧. ಗಡಿಕಲ್ಲು

ಹೆಸರೇ ಸೂಚಿಸುವಂತೆ ಊರಿನ ಸೀಮಾರೇಖೆಯನ್ನು ಗುರುತಿಸಲು ಹಾಕುವ ಕಲ್ಲುಗಳು ಗಡಿಕಲ್ಲುಗಳು. ಕೆಲವು ಗ್ರಾಮಗಳಲ್ಲಿ, ಮತ್ತು ಹೊಲಗದ್ದೆಗಳಲ್ಲಿ ನಾವು ಶಿವಲಿಂಗ, ಸೂರ್ಯ, ಮತ್ತು ಚಂದ್ರ, ಮತ್ತೆ ಕೆಲವೊಮ್ಮೆ ಬಸವನ ಶಿಲ್ಪ ಹೊಂದಿರುವ ಕಲ್ಲನ್ನೋ ಅಥವಾ ಕುಳ್ಳ ವ್ಯಕ್ತಿಯೊಬ್ಬ ಒಂದು ಕೈಯಲ್ಲಿ ಕಮಂಡಲವನ್ನೂ ಮತ್ತೊಂದು ಕೈಯಲ್ಲಿ ಛತ್ರಿಯನ್ನು ಹಿಡಿದು ನಿಂತಿರುವ, ಅವನ ಎರಡೂ ಕಡೆ ಸೂರ್ಯ ಮತ್ತು ಮೂರು ನಾಮಗಳನ್ನು ಸೂರ್ಯ, ಚಂದ್ರರೊಂದಿಗೆ ಬಿಡಿಸಿರುವ ಕಲ್ಲುಗಳನ್ನೋ ಗಮನಿಸಿರುತ್ತೇವಲ್ಲವೆ? ಈ ಬಗೆಯ ಕಲ್ಲುಗಳ ಮೇಲೆ ಕೆಲವೊಮ್ಮೆ ಬರಹ ಇರುವುದು ಉಂಟು, ಇಲ್ಲದಿರುವ ನಿದರ್ಶನಗಳೂ ಉಂಟು ಇವೇ ಗಡಿಕಲ್ಲುಗಳು. ೧. ಅಷಾಟ ಶುದ್ಧಿ

*ವಿವರಗಳಿಗೆ ನೋಡಿ: ಶ್ರೀ ಶೇಷಶಾಸ್ತ್ರಿ ೨೦೦೫ ಶಾಸನ ಪರಿಚಯ ಪುಟ. ೪೨.*

### ೨೯೨. ಗದ್ಯ ಪದ್ಯ

ಅವಜೊಳ್ ಶರೀರಮೆಂಬುದು

*ಕವಿಪ್ರಧಾನ ಪ್ರಯೋಗ ಪದಪದ್ಧತಿಯೊಳ್*
*ದ್ವಿವಿಧಮೆನಿಕ್ಕುಮದತಿಶಯ*
*ಧವಳೋಕ್ತಕ್ರಮದೆ ಗದ್ಯಪದ್ಯಾಖ್ಯಾತಂ* *(ಕವಿರಾಜ ಮಾರ್ಗಂ ೧-೨೪)*
*ಗದ್ಯಮಯಂ ಪದ್ಯಮಯಂ*
*ತದ್ಯಮಳವಿ ಮಿಶ್ರಮೆಂದು ಕೃತಿಮೂಱುತೆಱಂ।*
*ಗದ್ಯದೊಳೆ ಸಮೆದುಮಂತವು*
*ಹೃದ್ಯವಚಃಪ್ರೌಢಿಗಳ್ ಕಥಾಖ್ಯಾಯಿಕೆಯೊಳ್॥*
*(ಕಾವ್ಯಾವಲೋಕನ. ಐಕ್ಯಪ್ರಕರಣ ಸೂತ್ರ ಸಂಖ್ಯೆ ೯೪೯)*
*ಪದಪಾದವಿಯುತ ನಿಯಮಾ*
*ಸ್ವರಮಲದಳಲಂಕೃತಂ ಕ್ರಿಯಾ ಕಾರಕದೊಳ್।*
*ಪುದಿದರ್ಥ ವ್ಯಕ್ತಿಯನೀ*
*ವುದು ಗದ್ಯಮನೇಕ ರೂಪ ಭೇದ ವಿವಿಕ್ತಂ॥ (ಕವಿರಾಜಮಾರ್ಗ ೧-೨೫)*

ಇದರ ಕುರಿತ ವಿವರಣೆಯು ಈ ಕೆಳಗಿನಂತಿದೆ:

ಕಾವ್ಯಪುರುಷನ ಶರೀರವು ಗದ್ಯಪದ್ಯ ಎಂದು ಎರಡು ವಿಧ.(ಪ.೨೪) ಪದಪಾದ ನಿಯಮವಿಲ್ಲದಿದ್ದರೂ ಅದು 'ಅಲಂಕೃತಂ'. (ಪದ್ಯಕಾವ್ಯದಂತೆಯೆ ಗದ್ಯಕಾವ್ಯವೂ ಅಲಂಕಾರಗಳಿಂದ ಕೂಡಿದ್ದು). 'ಕ್ರಿಯಾಕಾರಕದೊಳ್' ಪುದಿದು ಅರ್ಥವ್ಯಕ್ತಿಯನೀವುದು ಗದ್ಯಂ' ಎಂಬ ಈ ಹೆಚ್ಚಿನ ವಿವರಣೆ ವಿಚಾರಕ್ಕೆ ಎಡೆಗೊಡುವಂಥದು. ಮುಂದೆ ಕಾರಕ ದೋಷಗಳನ್ನು ವಿವರಿಸುವಾಗ 'ಮಾರ್ಗಕಾರನು' ಪದ್ಯಗಳಲ್ಲಿಯೇ ಲಕ್ಷ್ಯಲಕ್ಷಣ ಸಮನ್ವಯ ಮಾಡಿರುವುದರಿಂದ, ಪದ್ಯಕ್ಕೆ ಈ ನಿಯಮವಿಲ್ಲ ಎಂಬುದು ಅವನ ಆಶಯವಲ್ಲ. 'ಪುದಿದು' (ಸರಿಯಾಗಿ ಸೇರ್ಪಡೆಯಾಗಿ) ಎಂಬ ಮಾತಿನಿಂದ, ಗದ್ಯದಲ್ಲಿ ಕ್ರಿಯಾಕಾರಕ ಸಂಬಂಧವು ನೇರವಾಗಿ ಅನ್ವಯವಾಗಿ ಅರ್ಥವ್ಯಕ್ತಿಯಾಗುವಂತೆ ಇರಬೇಕೆಂಬುದೇ ಆತನ ಆಶಯ. (ಎಂ.ವಿ.ಸೀತಾರಾಮಯ್ಯ)

ಕವಿರಾಜಮಾರ್ಗಕಾರ ವಿವರಿಸುವಂತೆ ಇದರಲ್ಲಿ ಗದ್ಯ ಪದ್ಯ ಮಿಶ್ರಿತವಾದ ಗದ್ಯಕಥೆಯನ್ನು 'ಕನ್ನಡಗಬ್ಬ'ವೆಂದು ಹೇಳಬಹುದು. ಪ್ರಾಯಶಃ ಅವನು ಚಂಪೂಕಾವ್ಯಕ್ಕೆ ಗದ್ಯಕಥೆಯೆಂದು ಕರೆಯುತ್ತಿರಬಹುದು. ಯಾಕೆಂದರೆ ಚಂಪೂಕಾವ್ಯ ಪದ್ಧತಿಯು ಕನ್ನಡ ವಿಶಿಷ್ಟವಾದುದು. ದಂಡಿಯ ಗದ್ಯ; ಪದ್ಯ ಮತ್ತು ಗದ್ಯ ಪದ್ಯ ಮಿಶ್ರವಾದ ರೂಪವೆಂದು ಮೂರು ರೀತಿಯಲ್ಲಿ ವರ್ಗೀಕರಿಸಿದ್ದಾನೆ.

ಕವಿಗಳ ಪ್ರಯೋಗ ಪದ್ಧತಿಯಿಂದ ಗದ್ಯವು ರೂಪುಗೊಂಡಿದೆಯೆಂದು ಕವಿರಾಜ ಮಾರ್ಗಕಾರನು ಹೇಳಿಕೊಂಡಿದ್ದಾನೆ. ಪದ, ಪದ ನಿಯಮಕ್ಕೆ ಗದ್ಯದಲ್ಲಿ ಆಸ್ಪದವಿಲ್ಲ. ಗದ್ಯಕ್ಕೆ ಅನೇಕ ರೂಪವಿದೆ. ಕಾವ್ಯಾವಲೋಕನದಲ್ಲಿ ವಚನ ಪ್ರೌಢಿಮೆ ಮತ್ತು ಕಥಾಖ್ಯಾಯಿಕೆಯಲ್ಲಿ ಗದ್ಯದ ಪ್ರೌಢಿಮೆಯನ್ನು ಕಾಣಬಹುದು ಎಂದು ವಿವರಿಸಲಾಗಿದೆ.

*ವಿವರಗಳಿಗೆ ನೋಡಿ: ಷೆಲ್ಡನ್ ಪೋಲಾಕ್? ಪಿಶ್ವಾತ್ಮಕ ದೇಶಭಾಷೆ*
*ಕೆ.ವಿ. ಸುಬ್ಬಣ್ಣ, ೨೦೦೭ ಕವಿರಾಜಮಾರ್ಗ ಮತ್ತು ಕನ್ನಡ ಜಗತ್ತು*

೨೯೩. ಗಮಕ ಪ್ರಯೋಗ

*ಗಮಕಂ ಪ್ರಯೋಗಮಾಭೋ*

*ಗಮಳಂಕಾರಂ ಪೊಗರ್ ನಯಂ ಮಿಱುಗು ಪೊದ.....*

*(ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೭-೧೬)*

ಗಮಕವೆಂದರೆ ಪದ್ಯವನ್ನು ರಾಗಬದ್ಧವಾಗಿ ಹಾಡುವುದು. ಹಾಡುವಾಗ ಎಲ್ಲಿ ಪದಗಳನ್ನು ಬಿಡಿಸಬೇಕೋ ಅಲ್ಲಿ ಪದ ಬಿಡಿಸಿ ಹಾಡಬೇಕು. ಗಮಕವು ಕರ್ನಾಟಕದ ವಿಶಿಷ್ಟ ಪದ್ಧತಿಗಳಲ್ಲಿ ಒಂದು. ಗಮಕದಿಂದಾಗಿ ಲಕ್ಷ್ಮೀಶ ಕುಮಾರವ್ಯಾಸಾದಿಗಳು ಜನಸಾಮಾನ್ಯರಿಗೆ ಪರಿಚಯವಾಗಿರುವುದು ಗಮನಾರ್ಹ. ಕಾವ್ಯಗಳ ವಿವಿಧ ಛಂದೋ ಶೈಲಿಯ ಜಾಡನ್ನು ಹಿಡಿದು ಕಥಾನಕ ರೀತಿಗನುಗುಣವಾಗಿ ರಮ್ಯವಾಗಿ ರಸವತ್ತಾಗಿ ವಾಚಿಸಿ ಅರ್ಥಭಾವ ರಸಗಳನ್ನು ಶ್ರೋತೃಗಳಿಗೆ ಮನದಟ್ಟು ಮಾಡುವ ಕಲೆಯೇ ಗಮಕ ಕಲೆ.

ರಾಜರ ಆಸ್ಥಾನದಲ್ಲಿ ವಾದಿ, ವಾಗ್ಮಿ, ಕವಿಗಳಿಗೆ ಸ್ಥಾನವಿದ್ದಂತೆಯೇ ಗಮಕಿಗಳಿಗೂ ಸ್ಥಾನವಿತ್ತು.

'ವಿಕ್ರಮಾರ್ಜುನ ವಿಜಯ'ದಲ್ಲಿ ಪಂಪನು

ಕವಿ ಗಮಕಿ ವಾದಿ ವಾಗ್ಮಿ
ಪ್ರವರರ ಪಂಡಿತರ ನೆಗಟ್ದಿಮಾತಱಿವರಸ ।
ಬ್ಬರವದರೊಡನಂತೊಸೆದ
ನ್ನವಾಸದೋಲಗದೊಳಿರ್ಪನಾಗಳ್ ಹರಿಗಂ ॥ ಎಂದು ಹೇಳಿದ್ದಾನೆ.

ಕೆಲವೊಮ್ಮೆ ಕವಿಗಳಾದವರೂ ಗಮಕಿಗಳಾಗಿದ್ದುದು ಕಂಡು ಬರುತ್ತದೆ. ಒಲಗದಲ್ಲಿ ಕವಿ; ಗಮಕ, ವಾದಿ; ವಾದಿ; ವಾಗ್ಮಿ; ಪಂಡಿತರಿದ್ದರೆಂಬುದು ಗಮನಾರ್ಹ

ಆದಿಪುರಾಣ, ಪಂಚತಂತ್ರ, ನಂಬಿಯಣ್ಣನ ರಗಳೆ, ಮೋಹನ ತರಂಗಿಣಿ, ಕುಮಾರವ್ಯಾಸಭಾರತ, ಭರತೇಶ ವೈಭವ ಮೊದಲಾದ ಗ್ರಂಥಗಳಲ್ಲಿ ಗಮಕಕಲೆಯ ಪ್ರಸ್ತಾಪವಿದೆ.

ಕವಿ ಮತ್ತು ಕೇಳುಗನ ನಡುವೆ ಇದ್ದ ಜನರ ಪರಂಪರೆಯೇ ನಮ್ಮಲ್ಲಿದೆ. ಹೀಗೆ ಇಬ್ಬರ ನಡುವೆ ಸಂಬಂಧ ಸ್ಥಾಪಿಸುತ್ತಿದ್ದವರನ್ನು ಗಮಕಿಗಳೆಂದು ಕನ್ನಡದ ಅನೇಕ ಶಾಸನಗಳು ಕರೆದಿವೆ.

ಅರಸನ ಆಸ್ಥಾನದ ಗಾಯಕ, ಗಮಕಿಗಳಿಗಿಂತ ಬೇರೆಯಾಗಿದ್ದ. ಇವರು ಯುದ್ಧರಂಗದಲ್ಲಿ ಮಾತ್ರವಲ್ಲದೆ ಆಸ್ಥಾನದಲ್ಲಿಯೂ ವೀರಗಾಥೆಗಳನ್ನು ಹಾಡುತ್ತಿದ್ದಿರಬೇಕು.

*ವಿವರಗಳಿಗೆ : ಸಿ.ವೀರಣ್ಣ ೧೯೮೬ ಪ್ರಾಚೀನ ಸಾಹಿತ್ಯ: ರಾಜಸತ್ತೆಯ ವೈಭವದ ಕಾಲ ಪುಟ. ೮೩.*

೨೯೪. ಗರುಡ

ಹೊಯ್ಸಳರ ಕಾಲದಿಂದೀಚೆಗೆ ಇವರನ್ನು 'ಗರುಡರು' ಎಂಬುದಾಗಿ ಕರೆಯುವುದಕ್ಕೆ

ಆರಂಭಿಸಿದರು. ಹಳೆಯ ಬೀಡಿನ ಕುವರಲಕ್ಷ್ಮನ ಶಾಸನವು ಈ ಗರುಡ ಸಂಪ್ರದಾಯದ ಬಗ್ಗೆ ವಿವರವಾಗಿ ಮಾಹಿತಿಯನ್ನು ನೀಡುತ್ತದೆ. ಹೊಯ್ಸಳರ ವೀರಬಲ್ಲಾಳನು ಮಡಿದಾಗ ಅವನ ಗರುಡನಾದ ಕುವರಲಕ್ಷ್ಮ ಮತ್ತು "ಲೆಂಕ ಸಾಸಿರ್ವರು" ಮಡಿದ ಪ್ರಸ್ತಾಪ ಬರುತ್ತದೆ. ಈ ಶಾಸನ ಕುವರಲಕ್ಷ್ಮನ ಮತ್ತು ಬಲ್ಲಾಳನ ಸಂಬಂಧವನ್ನು ಮುಕ್ತಕಂಠದಿಂದ ಹೊಗಳುತ್ತದೆ. ಅವರಲ್ಲಿ ಯಾರಿಗೂ ತಾನು 'ಆಳು' ತಾನು ಇದ್ದ ಆತ್ಮಿಯತೆಯ ಬಗ್ಗೆ ಶಾಸನ ಈ ರೀತಿ ಹೇಳುತ್ತದೆ.

ಅರಮನೆ ತೊಟ್ಟಿಲೆನೆ ನೆಗಳ್ವಾ
ದರಮದು ಬಾಯೆಣ್ಣೆ ದಾದಿಯರ್ತ್ತಂನಂತಃ
ಪುರಮೆನೆ ಬಲ್ಲಾಳ ನೃಪಂ
ಪೊರೆದಮಗಂ ಕುವರಲಕ್ಷ್ಮ ದಂಡಾಧೀಶಂ.

ತನ್ನ ಅರಸನು ನೀಡುವ ಎರಡು ಹೊತ್ತಿನ ಊಟಕ್ಕೆ ಇದ್ದವನಲ್ಲ ಕುವರಲಕ್ಷ್ಮ ಬಲ್ಲಾಳನ ಅಂತಃಕರಣದ ಶಿಶು ಎಂಬುದಾಗಿ ಅವರ ಮಧುರ ಬಾಂಧವ್ಯವನ್ನು ಆ ಶಾಸನ ತಿಳಿಸುತ್ತದೆ. ಮುಂದುವರಿದು ಆ ಶಾಸನ ಆ ಕಾಲದಲ್ಲಿ ಗರುಡರು ಸಾಂಕೇತಿಕವಾಗಿ ತಮ್ಮ ಕಾಲಿಗೆ ಕಟ್ಟಿಕೊಳ್ಳುತ್ತಿದ್ದ ಗಂಡಪೆಂಡೇರದ ವಿವರಣೆಯನ್ನು ನೀಡುತ್ತದೆ. ಮುತ್ತುಗಳಿಂದ ಪೋಣಿಸಿದ ಸರಗಳ ನಡುವೆ ಸಣ್ಣ ಗೊಂಬೆಯನ್ನೂ ಮತ್ತು ಗೆಜ್ಜೆಗಳನ್ನು ಕಟ್ಟುತ್ತಿದ್ದರಂತೆ. ಗರುಡನಾದವನು ಓಡಾಡುತ್ತಿದ್ದರೆ. ಆದರಿಂದ ಉಂಟಾದ ಶಬ್ದ ಶತ್ರುಗಳಿಗೆ, ಮಾತಿಗೆ ತಪ್ಪುವ ಭಂಟರಿಗೆ ಎಚ್ಚರಿಕೆಯನ್ನೀಯುತ್ತಿತ್ತಂತೆ. ಈ ರೀತಿಯ ಪೆಂಡೇರವನ್ನು ಗರುಡನಾದವನ ಹೆಂಡತಿಯರೂ ಸಹ ಕಟ್ಟಿಕೊಳ್ಳುತ್ತಿದ್ದರೆಂದು ತಿಳಿಯುತ್ತದೆ. 'ಗರುಡ' ಪದದ ಬಳಕೆಯ ಹಿಂದೆ ಇರುವ ವಿಶಾಲ ಅರ್ಥವೆಂದರೆ ವಿಷ್ಣುವಿಗೆ ಹೇಗೆ ಗರುಡನು ನಿಷ್ಠೆಯಿಂದ ನಡೆದುಕೊಳ್ಳುತ್ತಾನೆ ಅಥವಾ ನಡೆದುಕೊಳ್ಳಬೇಕು ಎಂಬುದೇ ಆಗಿರಬೇಕು.

### ೨೯೫. ಗರ್ಭ

ಗರ್ಭಿಣಿಯಾದ ಕುಂತಿಗೂ ಕನಸು ಕಟ್ಟಿ, ಅದನ್ನು ಮರುದಿನ ಪಾಂಡುರಾಜನಿಗೂ, ಋಷಿ ಸಮೂಹಕ್ಕೂ ತಿಳಿಸುತ್ತಾಳೆಂದು 'ಪಂಪಭಾರತ'ದಲ್ಲಿ ವರ್ಣಿತವಾಗಿದೆ (೧-೧೪೦ವ). ತಾನು ಸಪ್ತ ಸಮುದ್ರಗಳನ್ನು ಕುಡಿಯುವುದನ್ನು, ಸಪ್ತಕುಲಾದ್ರಿಗಳನ್ನು ಹತ್ತುವುದನ್ನು ಬಾಲಸೂರ್ಯನು ತನ್ನ ಮಡಿಲಲ್ಲಿ ಸಂತೋಷವಾಗಿ ಹೊರಳಾಡುವುದನ್ನು, ದಿಗ್ಗಜಗಳನ್ನು, ಕಮಲದ ಪತ್ರದ ಮೇಲಿರುವ ನೀರಿನಿಂದ ಸುಂದರವಾಗಿ ಕಾಣುತ್ತಿರುವ ಸರೋವರದಲ್ಲಿ ಸ್ನಾನ ಮಾಡಿಸುತ್ತಿರುವುದನ್ನು ಸ್ವಪ್ನದಲ್ಲಿ ಕಂಡು ಆಕೆಯು ಸಂತೋಷ ಪಟ್ಟಳು (೧-೧೪೦). ಇದಕ್ಕೆ ಕಾವ್ಯದಲ್ಲಿ ಈ ಕೆಳಗಿನ ಅರ್ಥಗಳನ್ನು ಕೊಡಲಾಗಿದೆ: ಸಪ್ತ ಸಮುದ್ರಗಳನ್ನು ಕುಡಿಯುವುದರಿಂದ ಸಮುದ್ರವು ಬಳಸಿದ ಭೂಮಿಗೆ ಒಡೆಯನನ್ನು, ಕುಲಪರ್ವತಗಳಿಂದ ಸುತ್ತುವರಿಯಲ್ಪಟ್ಟ ರಾಜ್ಯವುಳ್ಳವನನ್ನು, ಬಾಲಸೂರ್ಯನು ಅಭಿವೃದ್ಧಿಯನ್ನು, ಸುಂದರನಾದ ಮಗನನ್ನು ಪಡೆಯುವಳೆಂದು ಸೂಚಿಸಲಾಗಿದೆ

(೧೪೧-೧೨೩). ಕನಸು ವಾಸ್ತವದ ಗೊಂದಲದಿಂದಲೇ ಜನಿಸುತ್ತದೆ. ಕೆಲವು ಸಂದರ್ಭಗಳಲ್ಲಿ ಕನಸು ಹೊಸದಾದ ಅರ್ಥವನ್ನು ಕಟ್ಟಲು ಯತ್ನಿಸುತ್ತದೆ. ಪ್ರತಿಮೆಗಳ ಮೂಲಕ ಧ್ವನಿಪೂರ್ಣವಾಗಿ ಕನಸು ಭವಿಷ್ಯದ ಆಕಾರವನ್ನು ಎಷ್ಟೋ ಸಾರಿ ಪ್ರತಿಪಾದಿಸುತ್ತದೆ. ಪ್ರಾಯ್ಡನು ಹೇಳುವ ಈ ಸಿದ್ಧಾಂತವನ್ನು ಇಲ್ಲಿ ಅನ್ವಯಿಸಬಹುದು. ಮೇಲೆ ಹೇಳಲಾಗಿರುವ ಕನಸಿಗೊಂದು ಅರ್ಥವಿದೆ ಎನ್ನುವುದು ಭವಿಷ್ಯದ ಸೂಚನೆಯಾಗಿದೆ. ಸ್ತ್ರೀಯು ಗರ್ಭವತಿಯಾದಾಗ ಅವಳಿಗೆ ಬೀಳುವ ಕನಸು ಇಲ್ಲಿ ಪುತ್ರಪ್ರಾಪ್ತಿಯ ಅರ್ಥವನ್ನು ಕೊಡುತ್ತದೆ. ಜೈನ ಕಾವ್ಯಗಳಲ್ಲಿ ಈ ರೀತಿ ಕಲ್ಪನೆಗಳು ಬಹಳಷ್ಟು ಚಿತ್ರಿತವಾಗಿದೆ. ಜೈನ ಕಾವ್ಯಗಳಲ್ಲಿ ಈ ಚಿತ್ರಣಗಳು ವಿಶಿಷ್ಟವಾಗಿ ಒಡಮೂಡಿದ್ದರೂ, ಅವುಗಳು ಸಾಮಾಜಿಕವಾಗಿಯೂ ಇರುವ ನಂಬಿಕೆಗಳೇ ಆಗಿವೆ.

ಸಂಸ್ಕಾರಗಳಲ್ಲಿ ಮೊಟ್ಟಮೊದಲನೆಯದು ಗರ್ಭಾದಾನ. ಯಕ್ತಕಾಲದಲ್ಲಿ ದಂಪತಿಗಳು ಒಟ್ಟುಗೂಡಿ ಪಿತೃಋಣವನ್ನು ತೀರಿಸಲು ಕೈಗೊಳ್ಳುವ ಕ್ರಮವು ಗರ್ಭಾದಾನವೆಂದೆನ್ನಿಸುತ್ತದೆ. ಶ್ರುತಿಗಳ ಪ್ರಕಾರ ಪಿತೃ ಋಣ ತೀರಿಸದಿದ್ದರೆ ನರಕ ಪ್ರಾಪ್ತಿಯಾಗುತ್ತದೆ.

*ವಿವರಗಳಿಗೆ ನೋಡಿ: Freud Sigmund 1961 The intrepreation of dreams*

*ಯುಗಯಾತ್ರೀ ಭಾರತೀಯ ಸಂಸ್ಕೃತಿ ೧೯೭೧ ಸಂಪುಟ. ೨ ಪುಟ. ೨೯೪*

## ೨೯೬. ಗಾಂಧರ್ವ ವಿವಾಹ

'ವಡ್ಡಾರಾಧನೆ'ಯಲ್ಲಿ ಸಂಧ್ಯಾವಳಿಯೆಂಬವಳು ತನ್ನ ಪ್ರೇಮವನ್ನು ಗಂಡಿಗೆ ತಿಳಿಸುವ ವಿಚಾರವು ಬರುತ್ತದೆ. 'ನೀಮೇ ಶರಣೆಂದಿರ್ದ' ಆಕೆಯನ್ನು ಗಾಂಧರ್ವ ವಿವಾಹ ಪದ್ಧತಿಯ ಮೂಲಕ ಗಂಡು ಮದುವೆಯಾಗುವ ವಿಷಯವು ಈ ಕತೆಯಲ್ಲಿ ಬರುತ್ತದೆ. ಇಲ್ಲಿ ಹೆಣ್ಣೇ ಮುಂದುವರಿಯುವ ಕ್ರಮವನ್ನು ಕಾಣಬಹುದಾಗಿದೆ. ಗಾಂಧರ್ವ ವಿವಾಹ ಪದ್ಧತಿಯ ಉಲ್ಲೇಖವನ್ನು ಕನ್ನಡ ಕಾವ್ಯಗಳಲ್ಲಿ ಅನೇಕ ಕಡೆ ಕಾಣಬಹುದಾಗಿದೆ.

ಗಾಂಧರ್ವ ವಿವಾಹ ಪದ್ಧತಿಯಲ್ಲಿ ಗಂಡು ಮತ್ತು ಹೆಣ್ಣು ಪರಸ್ಪರ ಒಪ್ಪಿಕೊಂಡರೆ ಮುಗಿಯಿತು. ಇದಕ್ಕೆ ಹಿರಿಯರ ಒಪ್ಪಿಗೆ ಬೇಕೆಂದೇನೂ ಇಲ್ಲ. ಈ ವಿವಾಹ ಪದ್ಧತಿಯಲ್ಲಿ ಹೆಣ್ಣಿನ ಇಚ್ಛೆಯೂ ಕೂಡಾ ಬಹು ಮುಖ್ಯವಾದ ಪಾತ್ರ ವಹಿಸುತ್ತದೆ. ಆದರೆ ಚಾರಿತ್ರಿಕವಾಗಿ ಗಮನಿಸಿಲ್ಲ. ಹತ್ತನೇ ಶತಮಾನದ ಹೊತ್ತಿಗೆ ಗಾಂಧರ್ವ ವಿವಾಹ ಪದ್ಧತಿಯಿತ್ತು ಎನ್ನುವುದಕ್ಕೆ ಯಾವ ಆಧಾರಗಳೂ ಇಲ್ಲ. ಕನ್ನಡ ಸಾಹಿತ್ಯದಲ್ಲಿ 'ಗಾಂಧರ್ವ ವಿವಾಹ' ಪದ್ಧತಿಯ ಉಲ್ಲೇಖಗಳಿದ್ದು ಇದಕ್ಕೆ ಎರಡು ಕಾರಣಗಳನ್ನು ಕೊಡಬಹುದು.

೧. ಕಾವ್ಯಗಳ ರೂಪದ ದೃಷ್ಟಿಯಿಂದ: ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಬಹುತೇಕ ಕಾವ್ಯಗಳು ಸಂಸ್ಕೃತ ಕಾವ್ಯಗಳ ರೂಪದ ಹಿನ್ನೆಲೆಯಲ್ಲಿ ಬಂದಿವೆ. ಕ್ರಿ.ಶ. ಮೂರನೇ ಶತಮಾನದಿಂದ ಕ್ರಿ.ಶ ಆರನೇ ಶತಮಾನದವರೆಗೆ ಬೆಳೆದು ಬಂದ ಸಂಸ್ಕೃತ ಕಾವ್ಯಗಳ ಅನುಕರಣೆಯನ್ನು ಪ್ರಾಚೀನ ಕನ್ನಡ ಕಾವ್ಯಗಳು ಮಾಡಿದ್ದರಿಂದ, ಬಹುತೇಕ ಅಂಶಗಳು ಕನ್ನಡ ಕಾವ್ಯಗಳಲ್ಲಿ ಅದೇ ರೀತಿಯಲ್ಲಿ ಬಂದಿವೆ. ಇದು ಮುಖ್ಯವಾಗಿ, ಕನ್ನಡ ಕಾವ್ಯಗಳ

ಆಶಯಕ್ಕೆ ಸಂಬಂಧಿಸಿದ ಪ್ರಶ್ನೆಯಾದರೂ ಇದಕ್ಕೆ ಪೂರಕವಾಗುವ ಇತರ ಅಂಶಗಳು ಕೂಡಾ ಮೂಲ ಕಾವ್ಯಗಳನ್ನು ಯಥಾಸ್ಥಿತಿಯಲ್ಲಿ ಅನುಸರಿಸಿವೆ.

೨. ಹೀಗಿದ್ದರೂ, ಹತ್ತನೇ ಶತಮಾನದ ಕವಿಗಳು ಗಾಂಧರ್ವ ವಿವಾಹ ಪದ್ಧತಿಯ ರೂಪದಲ್ಲಿ ಬದಲಾವಣೆ ಮಾಡಿಕೊಂಡರು. ಉದಾಹರಣೆಗೆ:

೧. ಹಿಡಿಂಬೆ + ಭೀಮರ ವಿವಾಹ (ಪಂಪ ಭಾರತ)

೨. ರೂಪಕಂದರ್ಪ + ಲೀಲಾವತಿಯರ ವಿವಾಹ (ಲೀಲಾವತಿ ಪ್ರಬಂಧ)

೩. ಕಂದರ್ಪದೇವ + ಕುಸುಮಾವಳಿಯರ ವಿವಾಹ (ಕುಸುಮಾವಳಿ)

ಇತ್ಯಾದಿಗಳಲ್ಲಿ ಅವರಿಗೆ ಪುನರ್ ಮದುವೆಯಾಗುವ ಯಾ ಹಿರಿಯರ ಒಪ್ಪಿಗೆಯಿಂದ ಮದುವೆಯಾಗುವ ವಿವರಗಳು ಕನ್ನಡ ಕಾವ್ಯಗಳಲ್ಲಿ ಸಿಗುತ್ತವೆ.

ಗಾಂಧರ್ವ ವಿವಾಹವು ಕುಟುಂಬದೊಳಗಣ ವಿವಾಹ ಪದ್ಧತಿಯಲ್ಲ. ಕನ್ನಡ ಸಾಹಿತ್ಯದಲ್ಲಿ ಬಂದ ಗಾಂಧರ್ವ ವಿವಾಹ ಪದ್ಧತಿಯನ್ನು ಲಕ್ಷಿಸಿಕೊಂಡು ಕೆಲವು ವಿಚಾರಗಳನ್ನು ಪ್ರಸ್ತಾಪಿಸಬಹುದಾಗಿದೆ. ಸಾಮಾನ್ಯವಾಗಿ ಬೇರೆ ಬೇರೆ ಗುಂಪಿಗೆ ಸೇರಿದ ಸ್ತ್ರೀ ಪುರುಷರಿಗೆ ಗಾಂಧರ್ವ ವಿವಾಹ ನಡೆಯುವುದು. ಇಲ್ಲಿ ಹೆಣ್ಣಿನ ಜಾತಿ ಯಾ ವರ್ಗವಾಗಲೀ ಅಷ್ಟೊಂದು ಪ್ರಧಾನವಲ್ಲ. ಅದರ ಬದಲು ಹೆಣ್ಣಿನ ಒಪ್ಪಿಗೆಯಷ್ಟೇ ಪ್ರಧಾನವಾಗಿರುತ್ತದೆ. ಈ ಅರ್ಥದಲ್ಲಿ ರಕ್ತ ಸಂಬಂಧದ ಕಠಿಣತೆಯನ್ನು ಗಾಂಧರ್ವ ವಿವಾಹ ಪದ್ಧತಿಯು ನಿರಾಕರಿಸುತ್ತದೆ. ಬೇರೆ ಗುಂಪಿಗೆ ಜಾತಿಗೆ ಸೇರಿದ ಗಂಡು ಮತ್ತು ಹೆಣ್ಣು ಮದುವೆಯಾಗುವುದಿದ್ದರೆ ಗಾಂಧರ್ವ ವಿವಾಹ ಪದ್ಧತಿಯೇ ಸೂಕ್ತವೆನ್ನುವ ನಂಬಿಕೆಯು ಈ ರೀತಿಯ ಸಂಬಂಧಗಳಲ್ಲಿ ವ್ಯಕ್ತವಾಗಿದೆ. ಉದಾಹರಣೆಗೆ:

ಭೀಮ (ಕ್ಷತ್ರಿಯ) – ಹಿಡಿಂಬೆ (ರಾಕ್ಷಸಿ)

ದುಷ್ಯಂತ (ಕ್ಷತ್ರಿಯ) – ಶಕುಂತಲೆ (ಬ್ರಾಹ್ಮಣಸ್ತ್ರೀ)

೩. 'ರಾಮಚಂದ್ರ ಚರಿತ ಪುರಾಣ'ದಲ್ಲಿ ಕುಶನಿಗೆ ಕನಕಮಾಲೆಯನ್ನು ಕೇಳುವ ಸನ್ನಿವೇಶ

೧. ಪಂಪನ 'ಆದಿ ಪುರಾಣ'ದಲ್ಲಿ ಶ್ರೀಮತಿಯು ತನ್ನ ಚಿತ್ರಪಟವನ್ನು ಬರೆದು ಪಂಡಿತೆಗೆ ಕೊಡುತ್ತಾಳೆ. ತನ್ನ ಹಿಂದಿನ ಭವದ ಗಂಡನನ್ನು ಮರಳಿ ಪಡೆಯಬೇಕೆಂಬ ಬಯಕೆಯನ್ನು ವ್ಯಕ್ತಪಡಿಸುವಲ್ಲಿಯೂ ಇದೇ ರೀತಿಯ ಮನೋಭಾವವು ವ್ಯಕ್ತವಾಗುತ್ತದೆ.

೨. ಪಂಪನ 'ವಿಕ್ರಮಾರ್ಜುನ ವಿಜಯ'ದಲ್ಲಿ ಹಿಡಿಂಬೆ ಮತ್ತು ಭೀಮರ ವಿವಾಹವನ್ನು 'ಗಾಂಧರ್ವ ವಿವಾಹ' ಎಂದು ಕರೆಯಲಾಗಿದೆ. (ವಿವರಗಳಿಗೆ ನೋಡಿ: ಅನಂತ ರಂಗಾಚಾರ್. ಎನ್ (ಅನು) ೧೯೭೭. ಪು.೧೮೬) ವ್ಯಾಸ ಮಹಾಭಾರತದಲ್ಲಿ ಮಾತ್ರ ಈ ಸನ್ನಿವೇಶವು ಹೀಗಿದೆ. ಮಗುವಾಗುವವರೆಗೂ ಹಿಡಿಂಬೆ ಮತ್ತು ಭೀಮರು ಜೊತೆಯಲ್ಲಿರುತ್ತಾರೆ.

• ಹತ್ತನೇ ಶತಮಾನದ ಹೊತ್ತಿಗೆ 'ಗಾಂಧರ್ವ ವಿವಾಹ' ಪದ್ಧತಿಯು ಹೊರಟು ಹೋಗಿರಬೇಕು. ಯಾಕೆಂದರೆ, 'ಗಾಂಧರ್ವ' ವಿವಾಹ ಪದ್ದತಿಯ ಕುರಿತಂತೆ ಐತಿಹಾಸಿಕ

ದಾಖಲೆಗಳು ಲಭ್ಯವಾಗುವುದಿಲ್ಲ.

೩. ನೇಮೀಚಂದ್ರನ 'ಲೀಲಾವತಿ ಪ್ರಬಂಧ'ದಲ್ಲಿ ಕಂದರ್ಪ ದೇವನಿಗೂ ಲೀಲಾವತಿಗೂ ಗಾಂಧರ್ವ ವಿವಾಹವಾಗುತ್ತದೆ.

*ವಿವರಗಳಿಗೆ ನೋಡಿ: ರಾಮೇಶ್ವರಾವಧಾನಿ (ಸಂ) ೧೯೭೨-೭೬ ಮಹಾಭಾರತ ಪುಟ. ೧೦೨೨*

*ಬಸವರಾಜು ಎಲ್ (ಸಂ) ೧೯೭೬ ಆದಿಪುರಾಣ ಪುಟ. ೭೪*

*ದೇ. ಜವರೇಗೌಡ (ಸಂ) ೧೯೬೬ ಲೀಲಾಪ್ರಬಂಧ ಪುಟ. ೨೭೩*

*ಹಿರೇಮಠ ಆರ್.ಸಿ. (ಸಂ) ೧೯೭೫ ರಾಮಚಂದ್ರ ಚರಿತಪುರಾಣ ಪುಟ. ೫೧೯.*

**೨೯೭. ಗಾಣರು**

*"ಬೀಣೆಯ ಕೊಳಲ ಬೆದಂಡೆಯ* ***ಗಾಣರ*** *ಬಿಳಿಬಿಡಿದು ಸುಳಿದು ಕುಂದಿ ಕಥನ ಶ್ರೇಣಿಯೊಡನೆಳಸಿ ಬಳಸುವ ನಾಣಿಲಿಗಳನೀ ಬುಧಾಳಿಯೊಳ್ ಪುಗಿಸುವುದೇ" (ಸುಕುಮಾರ ಚರಿತ ೨-೨೪)*

ಸುಕುಮಾರ ಚರಿತದಲ್ಲಿ ಬರುವ ಮೇಲಿನ ಪದ್ಯ ಬೆದಂಡೆಯ ಗಾಣರನ್ನು ಬುಧರೊಂದಿಗೆ ಸೇರಿಸಕೊಡದೆಂದು ಹೇಳುತ್ತದೆ.

"ರಸಮೊಸರ್ವನ್ನೆಗಂ ತಗುಳೆ ಪಾಡುವ **ಗಾಣರ** ಗೇಯಮಳ್ಕರಂ ಪೊಸಯಿಸೆ" ಎನ್ನುವಲ್ಲಿನ ಗಾಣರೂ ಸೈನ್ಯದ ಜೊತೆ ಇರುತ್ತಿದ್ದರು. ಈ ಗಾಣರು ಬಹುಶಃ, ಶೌರ್ಯ ಪರಾಕ್ರಮದ ಮತ್ತು ರಮ್ಯಾದ್ಭುತದ ಕತೆಗಳನ್ನು ಹಾಡಿ ಸೈನಿಕರನ್ನು ರಂಜಿಸುತ್ತಿದ್ದ ಗಾಯಕ ಪರಂಪರೆಯವರೆಂದು ಕಾಣುತ್ತದೆ.

ಈ ಗಾಣರೇ ಎಕ್ಕಲಗಾಣರೆಂದು ಕರೆಸಿಕೊಳ್ಳುತ್ತಿದ್ದರೆಂದು ಊಹಿಸಬಹುದು. ಇವರದು ಒಂದು ಜನಪದ ಗಾಯಕ ಪರಂಪರೆಯಾಗಿದ್ದಿರಲೂಬಹುದು.

ಗಾಣವೆಂದರೆ ಗಾನ: ಗಾಯನ. ಗಾಣಗಾರ್ತಿಯೆಂದರೆ ಹಾಡುವವಳು: ಗಾಯಿಕೆ: ಗಾಣಕಾರನೆಂದರೆ ಗಾಯಕ: ಸಂಗೀತಕಾರ.

*ವಿವರಗಳಿಗೆ ನೋಡಿ: ಸಿ.ವೀರಣ್ಣ ೧೯೮೬ ಪ್ರಾಚೀನ ಸಾಹಿತ್ಯ:*

*ರಾಜಸತ್ತೆಯ ವೈಭವದ ಕಾಲ ಪುಟ. ೨೨, ೨೩, ೧೭೩, ೨೦೪, ೩೬೧.*

**೨೯೮. ಗಾಣಿಗರು**

ಕುಸಿಬಿ, ಸೇಂಗಾ, ಎಳ್ಳು ಮುಂತಾದ ಎಣ್ಣೆ ಕಾಳುಗಳನ್ನು ಗಾಣಕ್ಕೆ ಹಾಕಿ ಎಣ್ಣೆ ತೆಗೆಯುವ ಕಸಬುದಾರರನ್ನು ಗಾಣಿಗರು ಎಂದು ಕರೆಯಲಾಗುತ್ತದೆ. ಊರಿನಲ್ಲಿ ಇವರ ಓಣಿ ಪ್ರತ್ಯೇಕವಾಗಿರುತ್ತಿತ್ತು. ವಡ್ಡಾರಾಧನೆಯ ಮಹೇಂದ್ರದತ್ತಾ ಚಾರ್ಯರು ಮೊದಲಾದ ಐನೂರು ರಿಸಿಯರ್ಕಳ ಕಥೆಯಲ್ಲಿ ಎಣ್ಣೆಯ ಗಾಣಗಳ ಉಲ್ಲೇಖ ಬರುತ್ತದೆ. ವ್ಯಾಳನೆಂಬ ಮಂತ್ರಿ ಐನೂರು ಜನ ರಿಸಿಯರನ್ನು ಆ ಗಾಣದಲ್ಲಿ ಹಾಕಿ ಹಿಂಡಿಸಿದ ಕ್ರೂರ ರೀತಿಯಿಂದ ಕೊಂದ ಘಟನೆ ಅಲ್ಲಿ ಬರುತ್ತದೆ. ಎಣ್ಣೆ ಕಾಳುಗಳಿಂದ

ಎಣ್ಣೆಯನ್ನು ತೆಗೆಯಲು ಗಾಣಿಗರು ಗಾಣಗಳನ್ನು ಉಪಯೋಗಿಸುತ್ತಿದ್ದರು. ಗಾಣಿಗವೃತ್ತಿ ಸಾಮಾಜಿಕವಾಗಿ ಮಹತ್ವದ್ದು.

ಗಾಣಗಳಲ್ಲಿ ಎತ್ತಿನ ಗಾಣ ಮತ್ತು ಕೈಗಾಣಗಳೆಂದು ಎರಡು ವಿಧ. ಕ್ರಿ.ಶ. ೧೧೪೫ ರಲ್ಲಿ ಆಸಕ್ಕ ಗಾವುಂಡ ಎಂಬುವನು ಮಾಡಿಸಿದ ಒಂದು ಕಲ್ಲಿನ ಗಾಣ ಈಗಲೂ ಇದೆ. ("ಗಣಿಗನೂರ ತನ್ನ ಪಕ್ಷರ ಚೆಂಡ ಗಾವುಂಡನ ಮಗಂ ಆಸಕ್ಕ ಗಾವುಂಡಂ ಮಾಡಿಸಿದ ಕಲ್ಲ ಗಾಣಂ ಇಂತಪ್ಪುದಕ್ಕೆ ಮಂಗಳ ಮಹಾಶ್ರೀ" EC III NJ 150, 1145 AD) ಇವರು ರೈತರ ಎಣ್ಣೆ ಬೀಜಗಳನ್ನು ಗಾಣಕ್ಕೆ ಹಾಕಿ ಎಣ್ಣೆ ಮಾಡಿಕೊಟ್ಟು ಜೀವನ ನಡೆಸುತ್ತಿದ್ದರು. ಅಲ್ಲದೆ ಎಣ್ಣೆಯ ಮಾರಾಟದಿಂದಲೂ ಜೀವನ ಸಾಗಿಸುತ್ತಿದ್ದರು. ಗಾಣಿಗರನ್ನು ತೆಲ್ಲಿಗ; ತೈಲಿಕ ಎಂದೂ ಕರೆಯಲಾಗುತ್ತದೆ.

ಗಾದೆಯ ಮಾತಿದೆ: ಬ್ರಾಹ್ಮಣರ ಎದುರು ನಿಲ್ಲಬಾರದು. ಕುದುರೆಯ ಹಿಂದೆ ನಿಲ್ಲಬಾರದು. ಗಾಣಿಗನಿಗೆ ಎತ್ತಾಗಬಾರದು. ಬ್ರಾಹ್ಮಣನ ಎದುರು ನಿಂತರೆ ಕೆಲಸ ಹೇಳುತ್ತಾನೆ. ಕುದುರೆಯ ಹಿಂದೆ ನಿಂತರೆ ಒದೆಯುತ್ತದೆ. ಗಾಣಿಗನಿಗೆ ಎತ್ತಾದರೆ, ಗಾಣದ ಸುತ್ತ ಸುತ್ತಿಸುತ್ತಾನೆ.

*ವಿವರಗಳಿಗೆ ನೋಡಿ: ಡಾ. ವಿ. ಎಲ್. ಪಾಟೀಲ್ ೨೦೦೯*
*ವಡ್ಡಾರಾಧನೆ ಸಾಂಸ್ಕೃತಿಕ ಅಧ್ಯಯನ ಪುಟ. ೧೭೬-೧೭೭*
*ಚಿದಾನಂದಮೂರ್ತಿ ೨೦೦೮ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪುಟ. ೪೯೧-೪೯೪*

**೨೯೯. ಗಾಮುಂಡ**

*ಮತ್ತೊಂದು ದಿವಸಂ ಕೌಶಳಮೆಂಬೂರ **ಗಾಮುಂಡಂ** ಜಗದ್ಗೃಹನೆಂಬೊಂ*
*(ಡಿ.ಎಲ್.ಎನ್. ೨೦೦೯ ಪುಟ. ೬೪)*

ಗೌಡ ಎನ್ನುವುದಕ್ಕೆ ಗಾಮುಂಡ ಎಂದು ಕರೆಯಲಾಗಿದೆ. ಇದು ಅಧಿಕಾರ ಸೂಚಕ ಪದವೂ ಹೌದು. 'ಊರಗೌಡ'ನೆಂದರೆ ಊರಿನ ಸಮಸ್ತ ಸುಖ-ದುಃಖಗಳನ್ನು ನೋಡುವವನು.

ರಾಜ್ಯಾಡಳಿತದ ಬಹು ಚಿಕ್ಕ ಘಟಕವಾದ ಹಳ್ಳಿಯ ಆಡಳಿತ ಗಾವುಂಡರಿಗೆ ಸೇರಿದ್ದು. ಹಳ್ಳಿಗರು ರಾಜನಿಗೆ ತೆರಬೇಕಾದ ತೆರಿಗೆಯನ್ನು ಅವನಿಗೆ ಮುಟ್ಟಿಸುವುದು ಗಾವುಂಡರ ಮುಖ್ಯ ಕೆಲಸ. "ಅವರನ್ನು ರಾಜ್ಯದ ಅಧಿಕಾರಿಗಳೆನ್ನುವುದಕ್ಕಿಂತ ಹಳ್ಳಿಗಳ ಪ್ರತಿನಿಧಿಗಳೆನ್ನುವುದು ಸಮಂಜಸ"ವೆಂದು ಕೆಲವರ ಮತ. ಅದೇನೇ ಇದ್ದರೂ ಊರಿನ ಸಂರಕ್ಷಣೆ ಅದರ ಆಡಳಿತ ಮತ್ತು ಹಿತಾಸಕ್ತಿಗಳನ್ನು ಕಾಯ್ದುಕೊಳ್ಳುವ ಸಂಪೂರ್ಣ ಹೊಣೆ ಗಾವುಂಡರದು. ಒಂದೊಂದು ಊರಿಗೆ ಅಥವಾ ಪಟ್ಟಣಕ್ಕೆ ಒಬ್ಬನಿಗಿಂತ ಹೆಚ್ಚು ಗಾವುಂಡರಿದ್ದ ಬಗ್ಗೆ ಶಾಸನಗಳಿಂದ ತಿಳಿದು ಬರುತ್ತದೆ. ವಡ್ಡಾರಾಧನೆಯಲ್ಲಿ ಇವೆಲ್ಲ ವಿವರಗಳು ದೊರೆಯುವುದಿಲ್ಲ. ಹಳ್ಳಿಯಲ್ಲಿ ಗೌಡನಾಗಿದ್ದ ಆತ ಅರಸರನ್ನು ಕಂಡರೆ ಅತ್ಯಂತ ಭಯಭಕ್ತಿ ಗೌರವಗಳಿಂದ ನಡೆದುಕೊಳ್ಳುತ್ತಿದ್ದ ಎಂಬ ಉಲ್ಲೇಖ ಮಾತ್ರ

ಬರುತ್ತದೆ.

ಚಕ್ರವರ್ತಿಯ ಮುಂದೆ ಮಣಿದ ಕೋಟಿಕೋಟಿ ಗ್ರಾಮಾಧಿಪರು ಮಕುಟಬದ್ಧ ಮಹಾಮಂಡಲಾಧಿಪತಿಗಳನ್ನು ಪೊನ್ನ ವರ್ಣಿಸುವುದು ಮೂರನೇ ಕೃಷ್ಣನ ಆಸ್ಥಾನದಲ್ಲಿ ಕಂಡ ದೃಶ್ಯವೇ ಆಗಿರಬಹುದು. ಇದು ಪ್ರಾಚೀನ ಕಾಲದ ರಾಜಕೀಯ ವ್ಯವಸ್ಥೆಯನ್ನು ಸೂಚಿಸುತ್ತದೆ. ರಾಜ, ಮಂತ್ರಿ, ಸೇನಾಧಿಪತಿ, ಪುರೋಹಿತ, ಸಾಮಂತರು, ಅವರ ಅನಂತರ ಗಾವುಂಡರ ಪಾತ್ರ ಮಹತ್ವದ್ದು, ಈ ರೀತಿಯ ರಾಜಕೀಯ ವ್ಯವಸ್ಥೆಯನ್ನು ಬ್ರಿಟಿಷ್ ಕಾಲಘಟ್ಟದ ಆಧಿಪತ್ಯ ಮುರಿಯಿತು. ನಾಗರಿಕ ಕಾನೂನುಗಳು ಬದಲಾದವು. ಮಧ್ಯಕಾಲೀನ ಚರಿತ್ರೆಯಲ್ಲಿ ಗ್ರಾಮ ಸಮಾಜದ ಮುಖಂಡರನ್ನು ಮಹತ್ತರ; ಪಟ್ಟಕಿಲ; ಮತ್ತು ಗಾವುಂಡನೆಂದು ಕರೆಯತೊಡಗಿದರು. ಒಂದು, ಹತ್ತು, ಇಪ್ಪತ್ತು, ನೂರು, ಸಾವಿರ ಎಂದು ಬೇರೆ ಬೇರೆಯಾಗಿ ಗ್ರಾಮಗಳಿಗೆ ಅಧಿಪತಿಯನ್ನು ನಿಯಮಿಸಬೇಕು. ಎಂದು ಮನುವಿನ ಅಭಿಪ್ರಾಯ.

ದಶಗ್ರಾಮಪತಿಯು ಹನ್ನೆರಡು ಜೋಡೆತ್ತುಗಳಿಂದ ಉತ್ತು ಸಾಗುವಳಿ ಮಾಡಬಹುದಾದ ಹೊಲವನ್ನು ತನ್ನ ಜೀವನಕ್ಕೆ ವೃತ್ತಿವೇತನವಾಗಿ ಪಡೆಯುವನು. ಅದರಿಂದ ಅವನು ಜೀವಿಸುತ್ತ ಕರ್ತವ್ಯ ನಿರ್ವಹಿಸಬೇಕು. ಇಪ್ಪತ್ತು ಗ್ರಾಮಪತಿಯು ಅದರ ಐದರಷ್ಟು ವೇತನವಾದ ಭೂಮಿಯನ್ನು, ನೂರು ಗ್ರಾಮಪತಿಯು ಒಂದು ಗ್ರಾಮವನ್ನು ವೇತನವಾಗಿ, ಸಾವಿರ ಗ್ರಾಮಪತಿಯು ಒಂದು ಪುರವನ್ನು ಉಂಬಳಿಯಾಗಿ ಹೊಂದಿ, ಕಾರ್ಯ ವ್ಯಾಪೃತನಾಗಬೇಕು. ಎಂದು ಮನು ಹೇಳುತ್ತಾನೆ.

ಯದುಗಳು ಗೋವಳರು; ಗೌಳರು–ಗೌಡರು. ರಾಷ್ಟ್ರಕೂಟರು ಗೌಡರು, ನಾಡಗೌಡರು. ಇದು ಮಹತ್ವದಲ್ಲಿ ಮಹತ್ವದ ಸಂಗತಿ ಇನ್ನೊಂದು ಬೇರೆ ಇದೆ. ಗಂಗವಂಶಕ್ಕೂ ರಾಷ್ಟ್ರಕೂಟರಾಜರಿಗೂ ಬೀಗತನದ ಸಂಬಂಧವಿದ್ದುದು ಸುಪ್ರಸಿದ್ಧವಿದೆ. ರಾಷ್ಟ್ರಕೂಟರು ತಾವು ಸಾಮ್ರಾಟರಾಗಿದ್ದರೂ ತಮಗಿಂತಲೂ ಕಿರಿಯ ಅರಸರಾದ ಗಂಗರ ಮನೆತನಕ್ಕೆ ತಮ್ಮ ಹೆಣ್ಣುಮಕ್ಕಳನ್ನು ಮದುವೆ ಮಾಡಿಕೊಟ್ಟಿದ್ದಾರೆ. ಆದುದರಿಂದ, ಗಂಗರಾಜರು ಕುಲವು ರಾಷ್ಟ್ರಕೂಟರ ಕುಲಕ್ಕಿಂತಲೂ ಕಡಿಮೆ ಎಂದೂ ಇರಲಾರದು. ರಾಷ್ಟ್ರಕೂಟರು ತಮಗೆ ಯದುವಂಶಿಗಳೆಂದುಕೊಳ್ಳುತ್ತಿದ್ದರೆ ಗಂಗರು ತಾವು ತುರ್ವಸುವಿನ ಸಂತತಿಯವರೆಂದು ಹೇಳುತ್ತಿದ್ದುದು ಶಾಸನಗಳಿಂದಲೆ ಗೊತ್ತಾಗಿದೆ.

ಶಂಬಾ ಅವರ ಪ್ರಕಾರ ಗೌಡಶಬ್ದದ ವಿಚಾರದಲ್ಲೂ ಹೀಗೆಯೆ ದಿಗ್ಭ್ರಾಂತಿ ಯುಂಟಾಗಿದೆ. ನಮ್ಮ ಶಾಸನಗಳಲ್ಲಿ ಇದು ಕಾಣಿಸಿಕೊಂಡ ರೀತಿಯೇ ಬೇರೆ. ಗಾಮುಂಡ, ಗಾವುಂಡ ಎಂಬ ತೆರನಾದ ರೂಪಗಳು ಪ್ರಾಚೀನ ಶಾಸನಗಳಲ್ಲಿ; ಗಾಮುಂಡ–ಗಾವುಂಡ–ಗವುಡ ಬಳಿಕ ಗೌಡ ಎಂದು ಈಗಿನ ರೂಪವೆಂಬುದಾಗಿ ಹಲವರ ಗ್ರಹಿಕೆಯಿದೆ. ಆದರೆ, ಇದೆಲ್ಲವೂ ಸರಿಯಾಗಿ ತಿರುವು ಮುರುವಾಗಿದೆಯೆಂದು ನನ್ನ ತಿಳುವಳಿಕೆ. ಮೂಲ ಉಚ್ಚಾರವೆ ಗೌಡವೆಂದಿದ್ದು ಶಾಸನಗಳನ್ನು ಬರೆದ ಕಾಲದ ಸುಮಾರಿಗೆ ಗೌಡ(ಳ)ರ ಆ ಪುರಾತನ ಪರಂಪರೆಯ ಅರ್ಥವು ಜನಗಳಲ್ಲಿ ಮರೆತು ಹೋಗಿದ್ದಿತು.

ಗೌಡರು ಗ್ರಾಮಾಧಿಕಾರಿಗಳಾಗಿಯೂ ಇರುತ್ತಿದ್ದುದರಿಂದ ಗೌಡ ಶಬ್ದಕ್ಕೂ ಗ್ರಾಮಾಧಿಕಾರಕ್ಕೂ ತಳಕುಹಾಕಿದರು. ಗ್ರಾಮಾಧಿಕಾರಿಯೆಂಬ ಅರ್ಥವನ್ನೆ ಮುಖ್ಯವಾಗಿ ಕಣ್ಣೆದುರಿಗೆ ಇಟ್ಟುಕೊಂಡು 'ಗೌಡ' ಎಂಬ ರೂಢ ಶಬ್ದಕ್ಕೆ ನಿರುಕ್ತವನ್ನು ಹೇಳಹೋಗಿ, ಅದು ಗ್ರಾಮ ಶಬ್ದಕ್ಕೆ ಸಂಬಂದ ಪಟ್ಟಿರಲಿಕ್ಕೆಬೇಕೆಂಬ ತರ್ಕಸರಣಿಯ ಸುಳಿತಲ್ಲಿ ಸಿಕ್ಕುಬಿದ್ದಿರಲಿಕ್ಕೇ ಬೇಕು. ಈ ದೃಷ್ಟಿಯಿಂದ 'ಗೌಡ' ಶಬ್ದವನ್ನು ಗ್ರಾಮಪದಕ್ಕೆ ಹತ್ತಿರ ಬರುವಂತೆ ತಿದ್ದಿಕೊಂಡರೆಂದು ಊಹಿಸಬೇಕಾಗುತ್ತದೆ. ಹೀಗಾಗಿ, ಮೂಲ ಗೌಡ ಶಬ್ದವು ಪ್ರೌಢರ ಶಾಸನಾದಿ ಲೇಖನಗಳಲ್ಲಿ ಕೆಲಕಾಲ ಗಾಮುಂಡ, ಗಾವುಂಡ, ಗವುಡ ಎಂಬ ರೂಪತಾಳಿದರೂ ಮತ್ತೆ ಜನರು ಬಳಕೆಯಲ್ಲಿ 'ಗೌಡ' ಎಂಬ ತನ್ನ ಮೊದಲಿನ ರೂಪದಲ್ಲಿಯೆ ಈಗಲೂ ಉಳಿದುಕೊಂಡಿದ್ದುದು ಕಂಡುಬರುತ್ತದೆ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ.೨ ಪುಟ. ೧೪೫*

*ಸಿ. ವೀರಣ್ಣ ೧೯೮೬ ಪ್ರಾಚೀನ ಸಾಹಿತ್ಯ: ರಾಜಸತ್ತೆಯ ವೈಭವದ ಕಾಲ ಪುಟ. ೨೩೭*

*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೭-೧೧೯*

*Romila Thapar 1975 The Past and Prejudice P. 37*

*A. S. Altekar 1967 Rastrakutas and their times- P. 189.*

*The code of civil procedure – 1908 Mysore law journal 1970*

*ಡಾ. ಚಿದಾನಂದಮೂರ್ತಿ ೨೦೦೮ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪುಟ. ೩೯೧-೪೦೦.*

## ೩೦೦. ಗಾವಿಲ

"ಏಂ**ಗಾವಿಲನ**ಯೊ" *(ಪಂಪ ಭಾರತ ೩-೧೭ ೪-೭)*

ಗ್ರಾಮೀಣ ಎಂಬುದರಿಂದ ಗಾವಿಳ, ಗಾವಿಲ ಎಂಬುದು ಬಂತೆನ್ನುವುದು ಗಮನಾರ್ಹ.

ಗಾವಿಲನೆಂದರೆ ಹಳ್ಳಿಯವನು. ಗ್ರಾಮ ಪ್ರದೇಶದವನು. ಹಳ್ಳಿಯ ಅಧಿಕಾರಿ. ಹೆಡ್ಡ, ದಡ್ಡ, ಅನಾಗರಿಕ ಎಂಬ ಅರ್ಥಗಳಿವೆ. ತಲೆಸೂಡಿ ಮುನ್ನ ಕಜ್ಜದ ಫಲಮಂ ಬೆಸಗೊಂಡುಮೇವನಲ್ಲಿಂ ಕಿರಿಯಿಸಿ ದಿವಸಮಸಲದೆ ಬೆಸಗೊಳ್ವನಂತು **ಗಾವಿಲ**ನಕ್ಕುಂ (ಕವಿರಾಜ ಮಾರ್ಗ ೩-೧೪೪)

ಗಾವಿಲ ಎಂದರೆ ಅನಾಗರಿಕವೆಂದು: ಗಾವಿಲರು ಹೆಡ್ಡರೆಂದು ಕರೆದಿರುವುದು ವರ್ಗ ತಾರತಮ್ಯದ ಧೋರಣೆಯನ್ನು ಸೂಚಿಸುತ್ತದೆ. ಗಾವಿಲರು ಹೆಡ್ಡರೆಂದರೆ ನಾಗರಿಕರು ಹೆಡ್ಡರಲ್ಲವೆಂದು ಅರ್ಥವಾಗುತ್ತದೆ. ನಾಗರಿಕರ ಬೌದ್ಧಿಕ ರೂಪಕ್ಕೂ; ಗ್ರಾಮೀಣರ ಬುದ್ಧಿವಂತಿಕೆಯ ರೂಪಕ್ಕೂ ವ್ಯತ್ಯಾಸವಿದೆ.

ಗಾವ (ಗ್ರಾಮ)ದಲ್ಲಿ ಇರುವವನು ಎಂಬರ್ಥದಲ್ಲಿ 'ಗಾವಿಲ' ಹೇಗೆ ಆಗುವುದೊ ಹಾಗೆಯೆ ಪಟ್ಟಿಯಲ್ಲಿ ಇರುವವನು ಎಂಬರ್ಥದಲ್ಲಿ 'ಪಟ್ಟಿಲ (ಪಾಟಿಲ)' ಎಂದಾಗುವುದು

*ವಿವರಗಳಿಗೆ ನೋಡಿ: Antonio Gramshi ? The Prison Note book*

*ಶಂಬಾ ಜೋಶಿ ೧೯೯೯ ಸಂಪುಟ. ೨ ಪುಟ. ೧೪೩*

ಕುಲಕ್ಕೆ ಸಂಬಂಧಿಸಿದ ನಿಯಾಮಾವಳಿಗಳಿವೆ. ಕೂಡುಕಟ್ಟು (ಹಿರಿಯರ ಸಭೆ), ಆಧುನಿಕ ಅರ್ಥದಲ್ಲಿ ಪರಿಷತ್ತು ಗುರಿಕಾರ ಆಯಾ ಜನಜಾತಿ ಪರಿಷತ್ತಿನ ಪ್ರಧಾನಿ ಇಲ್ಲಿ ಗುರಿಕಾರನ ಕೆಲಸ ಕಾರ್ಯಗಳನ್ನು ಗಮನಿಸಬೇಕು. ಅವನು ಕುಲದ ವಿಚಾರ: ಸರಿತಪ್ಪುಗಳು ನಿರ್ಣಯ : ದೈವಗಳನ್ನು ಮಾತಾಡಿಸುವುದು ಇತ್ಯಾದಿಗಳನ್ನು ಹೊರಬೇಕು. ಅಂದರೆ ಆಯಾ ಕುಲದ ಮೇಲ್ವಿಚಾರಕನಾಗಿ ಕೆಲವು ಜವಾಬ್ದಾರಿಗಳನ್ನು ಹೊರಬೇಕು. ಗುರಿಕಾರ ನ್ಯಾಯತೀರ್ಮಾನ ಮಾಡಬೇಕು ದೈವ ಸರ್ವೋಚ್ಚ ಅಧಿಕಾರ ಪಡೆದರೆ ಅದರ ಅನಂತರದ ಅಧಿಕಾರವನ್ನು ಗುರಿಕಾರ ಅನುಭವಿಸುತ್ತಾನೆ. ಅನೇಕ ಕುಟುಂಬದವರು ಸೇರಿ (ಕೂಡುಕಟ್ಟು) ಒಬ್ಬ ಗುರಿಕಾರನನ್ನು ಆಯ್ಕೆ ಮಾಡುತ್ತಾರೆ. ಇದು ಅವರ ಜನಜಾತಿ ಪರಿಷತ್ತಿನ ನಿಯಮ. ಗುರಿಕಾರನಿಗೆ ಪ್ರಾದೇಶಿಕ ಯಜಮಾನಿಕೆ ಇಲ್ಲ. ಆದರೆ ಅವರ ಜಾತಿಯ ಜನರ ಯಜಮಾನಿಕೆಯಿದೆ. ಈ ಅರ್ಥದಲ್ಲಿಯೂ ಅದು ಒಂದು ಪ್ರತ್ಯೇಕ ಸರಕಾರವನ್ನು ನಿರ್ಮಿಸಿಕೊಳ್ಳುತ್ತದೆ. ಧಾರ್ಮಿಕವಾಗಿಯೂ ಇದಕ್ಕೆ ಇದರದೇ ಆದ ಅನನ್ಯ ಸಂಹಿತೆಗಳಿರುತ್ತವೆ. ತನ್ನ ಸ್ಥಾನಮಾನಗಳನ್ನು ಹಿಂದೂ ಧರ್ಮದ ವ್ಯಾಖ್ಯೆಗೆ ಅನುಸಾರವಾಗಿ ರೂಪಿಸಿಕೊಂಡಿಲ್ಲ. ಮರುಮದುವೆ; ಬಹುಪತ್ನಿತ್ವ; ಲೈಂಗಿಕ ಸಂಬಂಧ; ದೈವಾರಾಧನೆ ಇವು ಬೇರೆ ಮಾದರಿಯದು, ಈ ಅರ್ಥದಲ್ಲಿ ಅದು ಪ್ರತ್ಯೇಕ ರಾಜಕೀಯ; ಧಾರ್ಮಿಕ ವ್ಯವಸ್ಥೆಯನ್ನು ಹೊಂದಿದೆ. ಕುಲದ ಆಚಾರ ವಿಚಾರಗಳಲ್ಲಿ ತಮ್ಮನ್ನು ತಾವೇ ರೂಪಿಸಿಕೊಂಡಿವೆ. ಹೀಗಾಗಿ ಮಲೆಕುಡಿಯರು ನಂಬುವ ರಾಜಕೀಯ ನಿಲುವುಗಳು ಪ್ರತ್ಯೇಕ ಹಾಗೂ ಅನನ್ಯ. ಇದಕ್ಕೂ ಭೂ ಯಜಮಾನಿಕೆಗೂ ಯಾವುದೇ ಸಂಬಂಧವಿಲ್ಲ. ಮಲೆ ಕುಡಿಯರು ದೈವವನ್ನು ನಂಬುತ್ತಾರೆ. ಗುರಿಕಾರನ ಮೂಲಕ ದೈವವನ್ನು ಮಾತಾಡಿಸುತ್ತಾರೆ. ಇದರಿಂದಾಗಿ ಅಲೌಕಿಕ ಮತ್ತು ಲೌಕಿಕದ ನಡುವೆ ಒಂದು ಸಂಬಂಧ ಏರ್ಪಡುತ್ತದೆ ಮತ್ತು ಅವರ ನಂಬಿಕೆಗಳು ವೈಯಕ್ತಿಕವಲ್ಲ. ಯಾವುದನ್ನು ನಾವು ಸಾಮಾಜಿಕ ಪರಿಷತ್ತನ್ನು ಗುರುತಿಸಲು ಬರುವುದಿಲ್ಲ ಎಂದು ತಿಳಿಯಬೇಕು. ಪ್ರಭುತ್ವ; ಜಾತಿ; ನಾಗರಿಕತೆ ಮುಂತಾದುವುಗಳನ್ನು ಪಶ್ಚಿಮದ ನಾಗರಿಕ ಸಮಾಜದ ವ್ಯಾಖ್ಯೆಗೆ ಅನುಸಾರವಾಗಿ ಬಿಡಿಸಲು ಭಾರತೀಯರು ಹೊರಟರೆ ಬರಿಯ ಅನಾಗರಿಕರಾಗಿ ಕಾಣಿಸಬಹುದು.

ಹಿಂದಿನ ಕಾವ್ಯಗಳಲ್ಲಿ ಗುರಿಕಾರರನ್ನು ಊರಿನ ಒಡೆಯ ಗಾವುಂಡ ಎಂದೂ ಕರೆದಿದ್ದಾರೆ. (ನೋಡಿ: ವಡ್ಡಾರಾಧನೆ)

*ವಿವರಗಳಿಗೆ ನೋಡಿ: Sudipta kaviraj (ED) ೧೯೭೭ politics in india.*

*Madan T.N. 2001 Non-Renuciahin*

*M.N. Srinivas 1987 The dominant caste and othwr oup Essays.*

**೩೦೨. ಗಾಳದೊಟ್ಟಿ**

*ಡಾವರಡಾಕಿನಿಯೆನಿಸಿದ ಪಾಂಚಾಲಿಯುಂ ಬುದ್ಧಿಮತಿಯೆಂಬ ಮೇಳದ* ***ಗಾಳುದೊಟ್ಟಿ*** *ಮಿಂತೀ ಮೂವರುಂ ಬಂದ ವಂಶಾವಳಿಯುಮಂ ನಿಜಾವಳಿಯುಮನೊಳ್ಳಿತ್ತಾಗಿ ಪೇೞ್ದೆ ನಿನ್ನ ಚೆನ್ನಭಾಷಿತಮದೊಳ್ಳಿತ್ತಾದುದಿದೇನಿನ್ನೆಲ್ಲಿಯ ಧೃತರಾಷ್ಟ್ರನೆತ್ತಣ ಗಾಂಗೇಯನೆಲ್ಲಿಯ ಸಂಧಿ (ಸಾಹಸಭೀಮವಿಜಯಂ ೨-೮೪)*

ಗಾಳುದೊಟ್ಟು ಎಂದರೆ ನಾಡಾಡಿ ದಾಸಿಯೆಂದು ಅರ್ಥ. ಸೇವಕಿಯೆನ್ನುವುದು ಇಲ್ಲಿ ಸಾಮಾನ್ಯ ಹೆಂಗಸು ರಾಣಿಯರಿಗೆ ಆಪ್ತದಾಸಿಯರು ಇರುತ್ತಿದ್ದರು ಎಂಬುದನ್ನು ಮೇಲಿನ ಮಾತು ಸ್ಪಷ್ಟಪಡಿಸುತ್ತದೆ. ಎರಡನೆಯದಾಗಿ ದ್ರೌಪದಿಯ ಕುರಿತು ಹೇಳುವಾಗ 'ಡಾವರ ಡಾಕಿನಿ' ಎಂದು ರನ್ನನು ಹೇಳುತ್ತಾನೆ. ಕಾವ್ಯದಲ್ಲಿ ಮುಂದೆ ಇದು ಸ್ಪಷ್ಟವಾಗುತ್ತದೆ. ಡಾವರ ಡಾಕಿನಿಯರ ರಕ್ತಪಿಪಾಸೆ. ದ್ರೌಪದಿ ಕುರುಕ್ಷೇತ್ರ ಯುದ್ಧ ಸಂದರ್ಭದಲ್ಲಿ ಡಾಕಿನಿಯಂತೆ ವರ್ತಿಸುತ್ತಾಳೆ.

ಯುದ್ಧಕ್ಕೆ ಕರಗ ಡಾಕಿನಿಯರನಿಸಿದ ದ್ರೌಪದಿಯೂ, ಬುದ್ಧಿಮತಿಯೆಂಬ ಈ ನಾಡಾಡಿ ದಾಸಿಯೂ ಕೂಡಿಬಂದು ನೀನು ವಂಶಾವಳಿಯನ್ನು ಚೆನ್ನಾಗಿ ಹೇಳಿದೆ. ನಿನ್ನ ಭಾಷೆಯೂ (ಭಾಷಣವೂ) ಚೆನ್ನಾಗಿದೆ ವ್ಯಂಗ್ಯೋಕ್ತಿಯಾಗಿದೆ ಎಂದಿರುವುದು.

**೩೦೩. ಗಾಳುಗೊರವ**

*"**ಗೊರವರ** ಬೂದಿಯಂ ಜಡೆಯುಮಕ್ಕೆ ತಪಕ್ಕೆ"* ಎಂದು ಪಂಪ ಭಾರತದಲ್ಲಿ *ಬರುತ್ತದೆ. (ಪಂಪ ಭಾರತ ೬-೧೭)*

ಗೊರವರು ಎಂದರೆ ಸನ್ಯಾಸಿಗಳು. ಗಾಳು ಗೊರವರು ಎಂದರೆ ಕಪಟ ಸನ್ಯಾಸಿಗಳು. ಸನ್ಯಾಸಿಗಳಿಗೆ ತಪವಾಚರಿಸಲು ಬೂದಿ, ಜಡೆಯಿದ್ದರೆ ಸಾಕು ಎಂಬುದು ಇಲ್ಲಿಯ ಭಾವಾರ್ಥ.

'ಧರ್ಮನಾಥ ಪುರಾಣ'ದ ಕರ್ತ ಮಧುರ ಕವಿಯು

"ಪಂಡಿತರುಂ ವಿವಿಧಕಳಾ
ಮಂಡಿತರುಂ ಕೇಳತಕ್ಕ ಕೃತಿಯಂ ಕ್ಷಿತಿಯೊಳ್ ।
ಕಂಡರ್ ಕೇಳ್ವೊಡೆ **ಗೊರವರ**
ಡುಂಡುಚಿಯೆ ಬೀದಿವರೆಯೆ ಬೀರನ ಕತೆಯೇ" (೧-೫೭) ಎಂದಿರುವುದನ್ನು ಸ್ಮರಿಸಿಕೊಳ್ಳಬಹುದು. ಗೊರವರ ಕೈಯಲ್ಲಿ ಡುಂಡುಚಿ. (ಒಂದು ಬಗೆಯ ಚರ್ಮವಾದ್ಯ) ಇರುತ್ತದೆಂಬುದನ್ನು ಈ ಪದ್ಯದ ಮೂಲಕ ತಿಳಿದುಕೊಳ್ಳಬಹುದು.

ಹಾಳು ಗೊರವ > ಗಾಳು ಗೊರವ ಎಂದು ಪರಿವರ್ತನೆಯಾಗಿದೆ. ಗೊರವನೆಂದರೆ ಶೈವ ಸನ್ಯಾಸಿ, ಜಂಗಮ, ತಿರುಕ, ಭಿಕ್ಷುಕ, ಮೈಲಾರ ದೇವರಭಕ್ತ.

*ವಿವರಗಳಿಗೆ ನೋಡಿ: ಡಾ. ಎಂ. ಚಿದಾನಂದ ಮೂರ್ತಿ ೧೯೭೬*
*ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ*
*ಡಾ. ಎಂ.ಎಂ. ಕಲ್ಬುರ್ಗಿ ೧೯೮೮ ಮಾರ್ಗ ೧ ಮತ್ತು ೨*

**೩೦೪. ಗುಂಪು ನೃತ್ಯ**

ಪಂಪನ 'ಆದಿಪುರಾಣ'ದಲ್ಲಿ ಜಿನಜನನಿಯಾಗಲಿರುವ ಮರುದೇವಿಯ ಸೇವೆಯನ್ನು ಮಾಡಲು ಬಂದವರಲ್ಲಿ ಒಬ್ಬಳು ಕುಣಿಯುವ ವಿಷಯವು ಬರುತ್ತದೆ. 'ಕರಣಾಂಗಹಾರ ಮೃದುಪದ: ಪರಿಕ್ರಮಂಗಳ ಬೆಡಂಗುಗಳ ಜತಿಯೊಳಳಂ ಕರಿಸಿದು ವಂಚನೆ ಮಾಡುವ' ಎಂದು ಪಂಪನು ಹೇಳುತ್ತಾನೆ. –

(೭, ೧೮, ೧೯) ಈ ಸಂದರ್ಭದಲ್ಲಿ ಒಬ್ಬಳು ಹಾಡಿದ ಮತ್ತೊಬ್ಬಳು ವೀಣೆ ನುಡಿಸಿದ ವಿಷಯವು ಉಕ್ತವಾಗಿದೆ – (೭, ೧೭, ೨೦, ೨೧) ಇದು ಶಾಸ್ತ್ರೀಯ ನಾಟ್ಯದ ಕ್ರಮವನ್ನು ಹೊಂದಿದೆ.

ಇದೇ ಕೃತಿಯಲ್ಲಿ 'ಪುತ್ರೋತ್ಸವ ಸಂದರ್ಭ'ದಲ್ಲಿ ಇಂದ್ರರ ಆನಂದ ನೃತ್ಯದ ಉಲ್ಲೇಖವಿದೆ.

(೭–೧೧೬ ವ, ೧೩೦) ಈ ಸಂದರ್ಭದಲ್ಲಿ ಸೂಚಿತವಾದ ಅಂಶಗಳು ಹೀಗಿವೆ:

೧. ಇಂದ್ರರು ಇತರ ದೇವತೆಗಳಿಗೆ ಇಲ್ಲದ ಐಶ್ವರ್ಯವುಳ್ಳವರು. ಅವರು ದೇವತೆಗಳ ರಾಜರು ಮತ್ತು ಬನವಾಸಿ, ವ್ಯಂತರವಾಸಿ ದೇವತೆಗಳಲ್ಲಿ ಇಂದ್ರರು ಇಬ್ಬಿಬ್ಬರು ಎಂದರೆ ಹತ್ತು ತರದ ಭವನರಾದ ದೇವರಲ್ಲಿ ನಿರಂಜನ ಇಂದ್ರರು, ಎಂಟುತರದ ವ್ಯಂತರರಲ್ಲಿ ೧೬ ಜನ ಇಂದ್ರರು ಇರುವರು. ಜೈನ ಕಾವ್ಯಗಳಲ್ಲಿ ಇಂದ್ರನ ಆನಂದ ನೃತ್ಯವು ಸಾಮಾನ್ಯವಾಗಿದ್ದು, ಜಿನನಾಥ ಹುಟ್ಟುವ ಸಂದರ್ಭದಲ್ಲಿ ಚಿತ್ರಿತವಾಗಿರುತ್ತವೆ. ಇದು ಕೃತಿಗಳಲ್ಲಿ 'ಜಿನನಾಥ'ನ ಮಹತ್ವವನ್ನು ಸೂಚಿಸುವುದಕ್ಕೆ ಬರುವವುಗಳು.

೨. ಕೂಡಿಕುಣಿಯುವಲ್ಲಿ ಬೇರೆ ಬೇರೆ ನರ್ತಕಿಯರು ಬೇರೆ ಬೇರೆ ಅಭಿನಯವನ್ನು ವ್ಯಕ್ತಪಡಿಸಿದ ವಿಚಾರವನ್ನು ಈ ಸಂದರ್ಭದಲ್ಲಿ ಪಂಪನು ವ್ಯಕ್ತಪಡಿಸುತ್ತಾನೆ.

೩. ಸೂಚೀನಾಟ್ಯದ ವಿವರ ಹೀಗಿದೆ: ಮಿಂಚಿನಂತೆ ಪ್ರಕಾಶಮಾನವಾದ ಹಾರಾಟ. ೬೪ ಬಗೆಯ ಕರ್ಮ ಅಥವಾ ನೃತ್ಯದ ಕೆಲಸಗಳಿಗೆ ಆಶ್ಚರ್ಯವಾದ ಹಸ್ತದ ಪ್ರದರ್ಶನಗಳು. ಭಾವರಸ ಕೃಷಿಗಳಾದ ದೃಷ್ಟಿಗಳು ಸರಸ್ವತಿಯ ಕಾರ್ಯವೆನಿಸಿದ ಕರಣಗಳು ನರ್ತನಕ್ಕೆ ಚಾರುತ್ವ ಅಥವಾ ಸೌಂದರ್ಯವನ್ನು ವರ್ಧಿಸುವ ಚಾರಿಗಳು. ನೃತ್ಯ ವಿದ್ಯಾಧಿದೇವತೆಗೆ ಮಂಡನ ಅಥವಾ ಅಲಂಕಾರ ಪ್ರಾಯವಾದ ಮಂಡಳಿಗಳು, ಸುಲೇಖೆಗೆ ನೆಲೆಯಾದ ನಿಲುವುಗಳು ಹೊಸಹೊಸದಾದ ರೀತಿಯಲ್ಲಿ ಎಡಬಲ ವಿನ್ಯಾಸದಲ್ಲಿ ಶೋಭಿಸಿ, ತಾಳಕ್ಕೆ ಉಚಿತವಾಗಿ ತೂಗುತ್ತಾ, ಮಧ್ಯದಲ್ಲಿ ನಿಖರವಾಗಿ ಅಳೆದಂತಿದ್ದು, ನೃತ್ಯಶಾಸ್ತ್ರವನ್ನೇ ಕಣ್ಣಮುಂದೆ ತಂದಿಟ್ಟಂತಹ, ಕನಕಸೂಚಿ ಸಂಚಯ ಸ್ಥಾಪನೆ ಕೌತುಕ ಕ್ರಿಯಾ ಕೌಶಲ್ಯದಿಂದ ಕೂಡಿದ ಈ ನೃತ್ಯ (ಸುಧಾ ವಾರಪತ್ರಿಕೆ – ಯುಗಾದಿ ವಿಶೇಷಾಂಕ (೧೯೮೩)ರ ಮಗಧಸುಂದರಿಯರ ಸೂಚಿನೃತ್ಯ – ಬಿ.ವಿ.ಕೆ. ಶಾಸ್ತ್ರಿಯವರ ಲೇಖನದ ಆಧಾರದಿಂದ ಪು.೭)

*ವಿವರಗಳಿಗೆ ನೋಡಿ: ಮಹದೇವ ಪ್ರಭಾಕರ ಪೂಜಾರ ೧೯೭೬ ಜೈನಧರ್ಮದ ಪರಿಭಾಷೆ ಪುಟ. ೫೮*

೩೦೫. ಗುಣ

*ಗುಣಮಿಲ್ಲದವನಾದೊಡೆಯುಂ ಒಡೆಯನಂ ಆಪತ್ತಿನಲ್ಲಿ ಬಿಡಲಾಗದು ಎಂಬ ನೀತಿವಾಕ್ಯಮುಂಟು*

*(ಕರ್ಣಾಟಕ ಪಂಚತಂತ್ರ, ಭೇದಪ್ರಕರಣ, ೮ ವಚನ)*

ಗುಣವಿಲ್ಲದ ಒಡೆಯನನ್ನಾದರೂ ಆಪತ್ತಿನಲ್ಲಿ ಬಿಡಲಾಗದು ಎಂಬ ನೀತಿ ವಾಕ್ಯವಿದೆಯೆಂದು ದುರ್ಗಸಿಂಹ ಹೇಳಿದ್ದಾನೆ.

ಗುಣಂಗಳ್ ಗುಣಂಗಳನಱಿವವರಲ್ಲಿ ಗುಣಂಗಳೆ ಅಹುವು; ದುರ್ಜನನನೆಯ್ದಿದೊಡೆ ದೋಷಂಗಳೆ ಅಹುವು; ಅದು ಹೇಗೆಂದರೆ – ಸ್ವಾದೂದಕವಪ್ಪ ನದಿಗಳ್ ಸಮುದ್ರವಂ ಕೂಡಿದ ಹಾಗೆ. (ಕರ್ಣಾಟಕ ಪಂಚತಂತ್ರ, ಭೇದಪ್ರಕರಣ ಶ್ಲೋಕ ೯೦)

ಗುಣಂಗಳನ್ನು ತಿಳಿದುಕೊಳ್ಳುವವರಲ್ಲಿ ಗುಣಗಳು ಗುಣಗಳೇ ಎನಿಸುವವು. ದುರ್ಜನನನ್ನು ಸೇರಿದರೆ ಸಿಹಿನೀರಿನ ನದಿಗಳು ಅಪೇಯವಾದ ಸಮುದ್ರವನ್ನು ಸೇರಿದ ಹಾಗೆ ದೋಷಗಳೇ ಆಗುವುವು.

ಗುಣಂ ಒಪ್ಪುವುವೊಲ್ ಒಪ್ಪವು ಆಭರಣಂಗಳ್ (೮–೧೫೫) ಗುಣವು ಒಪ್ಪುವ ಹಾಗೆ ಆಭರಣಗಳು ಒಪ್ಪಲಾರವು.

(ಅ) ಓಂಕಾರದ: ರಸತಮತ್ವ, ಆಪ್ತಿ, ಸಮೃದ್ಧಿ (ಛಾಂದೋಗ್ಯ.೭) (ಆ) ಕಾವ್ಯದ: ಮಾಧುರ್ಯ (ಶೃಂಗಾರ ಕರುಣ, ಸಮಾಸ+ಅಲ್ಪಸಮಾಸ), ಓಜಸ್ಸು (ರೌದ್ರ ವೀರಾದಿ, ದೀರ್ಘಸಮಾಸ), ಪ್ರಸಾದ (ನವರಸಸಾಧಾರಣ, ಅಸಮಾಸ) (ಕಾವ್ಯಪ್ರ. ೧೧೫) (ಇ) ಧನುರ್ವಿದ್ಯೆಯ: ಲಘುಸಂಧಾನ(ಲಕ್ಷ್ಮಣ), ದೂರಸಂಧಾನ(ರಾಮ), ದೃಢ ಪ್ರಹಾರ (ಕರ್ಣ) (ಸುಭಾ–ಸಂ ೨೧) (ಈ) ಪ್ರಕೃತಿಜನ್ಯ: ಸತ್ವಗುಣ, ರಜೋಗುಣ, ತಮೋಗುಣ (ಗೀತಾ ೧೪–೫: ಅಮರ ೧–೪–೧೫೩) (ಉ) ಶಾಸ್ತ್ರಜ್ಞಾನದ: ಗ್ರಂಥಾರ್ಥಪರಿಜ್ಞಾನ, ತಾತ್ಪರ್ಯಾರ್ಥ ನಿರೂಪಣ, ಆದ್ಯಂತಮಧ್ಯ ವ್ಯಾಖ್ಯಾನಶಕ್ತಿ (ಸಂ. ಸಮಯಸಾರ. ೮–೨೭–ಸಂ. ೧೩) (ಊ) ಸುಖ, ದುಃಖ, ಮೋಹ(ಗೀತಾಭಾ. ೩೬೭) (ಋ) ಮಂತ್ರ, ದ್ರವ್ಯ, ದೇವತೆ (ಬ್ರಹ್ಮಭಾ. II -೭೦೪)

ಗುಣ–೨೮: ಪಂಚಾಣು ವ್ರತಗಳು, ಪಂಚಸಮಿತಿ, ಪಂಚೇಂದ್ರಿಯ ಸಂಯಮ, ಷಡಾವಶ್ಯಕಗಳು, ಸ್ನಾನಾಭಾವ, ಭೂಮಿಶಯನ, ನಗ್ನತ್ವ, ಕೇಶೋತ್ಪಾಟನ, ಏಕಾಶನ, ದಂತಧಾವನಾಭಾವ, ಸ್ಥಿತಾಶನ.

ಗುಣವು ಬೇರೆ ಬೇರೆ ರೀತಿಯ ವ್ಯಾಖ್ಯಾನಗಳಿಗೆ ಒಳಪಟ್ಟಿದೆ. ಆದರೆ ಗುಣದ ಬಗ್ಗೆ ಇರುವ ಲೋಕ ವ್ಯಾಖ್ಯೆಯೆಂದರೆ ಸದ್ಗುಣ ಮತ್ತು ದುಷ್ಟಗುಣ. ಇದು ಆಯಾ ಜನಾಂಗ ಮತ್ತು ಧಾರ್ಮಿಕ ವ್ಯಾಖ್ಯಾನಗಳಿಗೆ ಅನುಸಾರವಾಗಿ ಭಿನ್ನವಾಗುತ್ತವೆ. ಒಳ್ಳೆಯ ಮತ್ತು ಕೆಟ್ಟಗುಣವೆಂದು ಕರೆಯುವುದು ನೈತಿಕ ವ್ಯಾಖ್ಯಾನಕ್ಕೆ ಸರಿಯಾಗಿ.

*ವಿವರಗಳಿಗೆ ನೋಡಿ: ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ ೧೯೯೯ ಶ್ರೀವತ್ಸ ನಿಘಂಟು*

*ಗುಂಡ್ಮಿ ಚಂದ್ರಶೇಖರ ಐತಾಳ ಗದ್ಯಾನುವಾದ – ದುರ್ಗಸಿಂಹನ ಪಂಚತಂತ್ರ*

೩೦೬. ಗುಣ–ವಿವೇಚನೆ

*ಇದು ಸೌಂದರ್ಯ**ಗುಣಪ್ರಕಾಶ**ಮಿದು ತಾನಗ್ರಾಮ್ಯತಾಧಾನಮಿಂ*
*ತಿದು ಭಾಸ್ವತ್ತರಭಾಗರಮ್ಯಮಿದು ಬಂಧಾಕ್ಲೇಷವಿಚ್ಛಿತ್ತಿಗಾ*
*ಸ್ಪದಮೆಂದಿಂತುಚಿತಪ್ರಯೋಗವಿಧಿಯಿಂ ಸಯ್ತುಪ್ಪಿನಂ ತಿರ್ದಿ ಪೇ*
*ಳ್ವುದು ಪೂಮಾಲೆಯನಿಂಬಿನಿಂ ಸಮೆವವೊಲ್ **ಸತ್ಕಾವ್ಯಮಂ** ಕಬ್ಬಿಗಂ*

ಕವಿರಾಜಮಾರ್ಗಕಾರನು ಗುಣ ಮತ್ತು ರೀತಿಯ ಕುರಿತು ಹೇಳುವಾಗ ದೇಶ, ವಿಧ ಮಾರ್ಗಗಳು ಎಂದು ಹೇಳುತ್ತಾನೆ: ಸಮ, ಮಧುರ, ನಿಬಿಡ, ಸುಕುಮಾರ, ಗ್ರಾಮ್ಯ, ಓಜಸ್ಸು, ಸುಸಮಾಹಿತ, ಪ್ರಸನ್ನ, ಉದಾರ, ಕಾಂತ (ಶಾಂತಿಯುಕ್ತ) ಮಾರ್ಗಗಳಿಗೂ ವಿಶೇಷಗುಣಗಳಿಗೂ ಸಂಬಂಧವಿದೆಯೆಂದು ಪ್ರತಿಪಾದಿಸುತ್ತಾನೆ.

ಭರತನು ಕೂಡಾ ಗುಣಗಳ ವಿವೇಚನೆಯನ್ನು ಮಾಡುತ್ತಾನೆ. ಈ ಗುಣಗಳ ವಿವೇಚನೆಯೇ ಮುಂದೆ ರೀತಿ ಸಿದ್ಧಾಂತಕ್ಕೆ ತಳಹದಿಯಾಯಿತು. ಭರತನು ಕಾವ್ಯದೋಷಗಳ ಬಗ್ಗೆ ಹೆಸರಿಸಿ. ಅನಂತರ ಹತ್ತು ಗುಣಗಳನ್ನು ಉಲ್ಲೇಖಿಸುತ್ತಾನೆ. ಮುಂದೆ ಅದು ರೀತಿ ಸಿದ್ಧಾಂತವಾಗಿ ರೂಪುಗೊಂಡಿತು. ದಂಡಿಯು ಗುಣಗಳನ್ನು ಅಲಂಕಾರಗಳೆಂದೇ ಕರೆಯುತ್ತಾನೆ. ದಂಡಿಯ ಪ್ರಕಾರ ಅಲಂಕಾರಗಳಲ್ಲಿ ಬರುವ ರೂಪಕ ಮುಂತಾದವು ಸಾಧಾರಣ ಅಲಂಕಾರಗಳು ಗುಣಗಳೂ ವಿಶಿಷ್ಟ ಅಲಂಕಾರಗಳು. ಆತನ ಪ್ರಕಾರ ಗುಣಗಳೆಲ್ಲಾ ಅಲಂಕಾರಗಳು ಅಲಂಕಾರಗಳೆಲ್ಲಾ ಗುಣಗಳಲ್ಲ. ದಂಡಿಯು ಕಾವ್ಯದಲ್ಲಿ ಮಾರ್ಗಗಳೂ ಎರಡು ಎಂದು ಹೇಳುತ್ತಾನೆ. ಒಂದು ವೈದರ್ಭೀ, ಎರಡು ಗೌಡೀಯ, ವಿದರ್ಭ ದೇಶದ ಕವಿಗಳಿಗೆ ವಿಶಿಷ್ಟವಾದುದು ವೈದರ್ಭೀ, ಗೌಡ ದೇಶದ ವಿದ್ವಾಂಸರ ಮಾರ್ಗ ಗೌಡೀ. ಭರತ ಮತ್ತು ದಂಡಿ ಇಬ್ಬರೂ ಹತ್ತು ಗುಣಗಳನ್ನು ಪ್ರಸ್ತಾಪಿಸುತ್ತಾರೆ.

೧. ಶ್ಲೇಷ : ಇದನ್ನು ಎರಡು ರೀತಿಯಲ್ಲಿ ವಿಭಾಗೀಕರಿಸಲಾಗಿದೆ.

೧. ಪದಗಳು ಒಂದರೊಡನೊಂದು ಕೂಡಿಕೊಂಡಿದ್ದು ಹೊಂದಿಕೆಯ ಪರಂಪರೆಯಿಂದ ಕವಿಯ ಉದ್ದೇಶಿತ ಅರ್ಥವನ್ನು ವ್ಯಕ್ತಪಡಿಸುವಿಕೆ.

೧. ಇನ್ನೊಂದು ಅರ್ಥದೊಡನೆ ಪದಗಳು ಸಹಜವಾಗಿ ಹೆಣೆದುಕೊಂಡಿರುವುದು ಇದರ ಅರ್ಥಗಳೂ ಗಹನವಾಗಿರುತ್ತವೆ. ಬಹುವಾಗಿ ಅಲ್ಪಪ್ರಾಣಗಳೇ ಬಂದು ಶಿಥಿಲವಾಗದಂತೆ ನೋಡಿಕೊಳ್ಳುವುದು ಇದರ ಲಕ್ಷಣ.

೨. ಪ್ರಸಾದ : ಪ್ರಸಿದ್ಧವಾದ ಅರ್ಥ ಮತ್ತು ಎಲ್ಲರಿಗೂ ತಿಳಿಯುವಂತಿರುವುದು ಇದರ ಲಕ್ಷಣ.

೩. ಸಮತಾ : ಬಂಧದಲ್ಲಿ ಅಸಮತ್ವವಿಲ್ಲದಿರುವುದು, ಸಮತ್ವಯುಕ್ತವಾದುದು ; ಮೃದುಬಂಧ, ಸ್ಫುಟಬಂಧ ಮತ್ತು ಮಿಶ್ರಬಂಧಗಳನ್ನು ಸಮತ್ವದಿಂದ ಬಳಸುವುದು.

೪. ಮಾಧುರ್ಯ : ಇದು ರಸವತ್ತಾದ ಮಾತುಗಳಿಂದ ಕೂಡಿದ್ದು, ಶಬ್ದ ಅರ್ಥಗಳಲ್ಲಿ 'ರಸ' ಇರುವುದು.

೫. ಸಕುಮಾರತಾ : ನಿಷ್ಠುರವಾದ ಅಥವಾ ಪರುಷವಲ್ಲದ ವರ್ಣಗಳು ಹೆಚ್ಚಾಗಿರುವಿಕೆ.

ಆದರೆ ಎಲ್ಲವೂ ಕೋಮಲ ವರ್ಣಗಳೇ ಆದರೆ ಶೈಥಿಲ ದೋಷ ಬರುತ್ತದೆ. ಅದು ಬರದಂತೆ ನಿರ್ವಹಿಸಬೇಕು.

೬. ಅರ್ಥವ್ಯಕ್ತಿ : ಸಂದಿಗ್ಧತೆ ಇಲ್ಲದಿರುವಿಕೆ. ಅರ್ಥ ಸ್ಪಷ್ಟತೆ ಇದರ ಲಕ್ಷಣ.

೭. ಉದಾರತ್ವ : ಗುಣದ ಉತ್ಕರ್ಷವನ್ನು ಸ್ಫುರಿಸುವಂತೆ ಮಾಡುವುದು. ಇದರ ಇನ್ನೊಂದು ಲಕ್ಷಣವೆಂದರೆ ಶ್ಲಾಘ್ಯವಾದ ವಿಶೇಷಣಗಳಿಂದ ಕೂಡಿದುದು.

೮. ಓಜಸ್ : ಸಮಾಸ ಭೂಯಿಷ್ಠವಾದುದು. ಗೌಡಿಯಲ್ಲಿ ಇದೇ ಪ್ರಧಾನವಾದ ಗುಣವೆಂದೂ ಹೇಳುತ್ತಾನೆ.

೯. ಕಾಂತಿ : ಸರ್ವ ಜನರಿಗೂ ಮೆಚ್ಚುಗೆಯಾಗುವಂತೆ ಹೇಳುವುದು. ಲೋಕ ಪ್ರಸಿದ್ಧವಾದ ಅರ್ಥವನ್ನು ಅತಿಕ್ರಮಿಸದೆ ವಸ್ತು ಮತ್ತು ವರ್ಣನೆಯಲ್ಲಿ ಬರುವ ಗುಣವಿದು.

೧೦. ಸಮಾಧಿ : ಲೋಕನ್ಯಾಯವನ್ನು ಮೀರದೆ ಒಂದರ ಧರ್ಮವನ್ನು ಮತ್ತೊಂದಕ್ಕೆ ಆರೋಪಿಸುವುದು.

ನಾಗವರ್ಮ ಹೀಗೆ ಹೇಳಿದ್ದಾನೆ.

ನಿರತಿಶಯಕಾವ್ಯಶೋಭಾ
ಕರಂಗಳಾಗಿರ್ಪ ಧರ್ಮಮವು **ಗುಣಮ**ಕ್ಕುಂ
ಪರಮ ಪುರಾಣಕವೀಶ್ವರ
ನಿರೂಪಿತಂಗಳ್ ವಿಚಿತ್ರಮಾರ್ಗಯುತಂಗಳ್

(ಕಾವ್ಯಾವಲೋಕನಂ ತೃತೀಯಾಧಿಕರಣಂ ಸೂತ್ರ ಸಂಖ್ಯೆ ೪೯೮,೪೯೯)

ಕವಿರಾಜಮಾರ್ಗದಲ್ಲಿ ಸಮ: ವಿಷಮ: ಮಧುರ: ನಿಬಿಡ: ಕಾಂತಗುಣ: ಇವುಗಳು ದಕ್ಷಿಣಮಾರ್ಗವೆಂತಲೂ ಉತ್ತರಮಾರ್ಗದಲ್ಲಿ ಸುಕುಮಾರ: ಸಮಾಹಿತ, ಪ್ರಸನ್ನ: ಉಲ್ಲೇಖಿಸಲಾಗಿದೆ. ಓಜೋಗುಣವು ಸೇರುತ್ತದೆ. ದಕ್ಷಿಣ ಮಾರ್ಗದಲ್ಲಿ ಬರಿಸುವೆನ್; ಇರಿಸುವೆನ್; ತರಿಸುವೆನ್ ಎಂಬ ಪ್ರಯೋಗಗಳಿವೆ.

*ವಿವರಗಳಿಗೆ ನೋಡಿ: ಜಿ.ಎಸ್. ಶಿವರುದ್ರಪ್ಪ ೧೯೯೯ ಕಾವ್ಯಾರ್ಥ ಪದಕೋಶ*
*ಮಲ್ಲೇಪುರಂ .ಜಿ. ವೆಂಕಟೇಶ್ ೨೦೦೦ ಭಾರತೀಯ ಕಾವ್ಯಶಾಸ್ತ್ರ ಪರಿಭಾಷೆ*
*ಎಚ್. ತಿಪ್ಪೇರುದ್ರಸ್ವಾಮಿ ೨೦೦೭ ತೌಲನಿಕ ಕಾವ್ಯಮೀಮಾಂಸೆ*

**೩೦೭. ಗುಣವ್ರತಗಳು**

*ಕೊಲೆಯೊಳ್ ಪೊರೆಯಿಲ್ಲದ ಪರ*
*ಲಲನೆಗೆ ಬಗೆಗುಡದ ಕಳ್ಳದುಜಿ ಪುಸಿಯದ ಕಾ ।*
*ದಲಿಸಿ ವಿಷಯಂಗಳೊಳ್ ಪಂ*
*ಬಲಿಸದ* ***ಗುಣಮ್ಮೈ****ದಣುವ್ರತಂ ಜಿನಮತದೊಳ್ ॥*

*ದೆಸೆಗಳನೆ ಮೇರೆಯಂ ನಿಯ*
*ಮಿಸಿದಲ್ಲದೆ ನಡೆಯದಮಿತ ಭೋಗಮನುಪಭೋ ।*
*ಗಿಸದಸ್ತ್ರ ಪಾಶ ದಂಡಮ*
*ನೊಸೆದೀಯದುದಿದು **ಗುಣವ್ರತತ್ರಯಮಕ್ಕುಂ** ॥*

*(ಶಾಂತಿಪುರಾಣ ೧-೮೮, ೮೯)*

ಹಿಂಸೆಯಲ್ಲಿ ಆಸಕ್ತಿಯಿಲ್ಲದ, ಪರಸ್ತ್ರೀಗೆ ಎಳಸದ, ಕಳ್ಳತನವಿಲ್ಲದ, ಸುಳ್ಳಾಡದ, ಕಾತುರತೆಯಿಂದ ಪಂಚೇಂದ್ರಿಯಗಳ ವಿಷಯಾಭಿಲಾಷೆಯಲ್ಲಿ ಹಂಬಲಿಸದ ಐದು ಗುಣಗಳೇ ಜಿನಮತದಲ್ಲಿ ಅಣುವ್ರತಗಳೆನಿಸುತ್ತವೆ.

ದಿಕ್ಕುಗಳನ್ನೇ ಮೇರೆಯಾಗಿ ನಿಯಮದಿಂದ ನಡೆಯುವುದೂ, ಹೆಚ್ಚು ಭೋಗೋಪಭೋಗಗಳಲ್ಲಿ ಮಿತಿಯಿರುವುದೂ, ಹಿಂಸೆಗೆ ಕಾರಣವಾದ ಅಸ್ತ್ರ, ಶಸ್ತ್ರ, ನೇಣು ಮತ್ತು ಆಯುಧಗಳನ್ನು ಕೊಡದಿರುವುದೂ ಎಂಬ ಮೂರು ಗುಣವ್ರತ.

ಕವಿಯು ಮೇಲೆ ವಿವರಿಸಿರುವಂತೆ ಕೊಲೆ; ಪರಲಲನೆಯ ಬಗೆಗೆ ಆಸಕ್ತಿಯಿಲ್ಲದಿರುವುದು; ಕಳ್ಳತನವಿಲ್ಲದಿರುವುದು; ಪಂಚೇಂದ್ರಿಯಗಳ ಬಗೆಗೆ ಹಂಬಲಿಸದಿರುವುದು ಅಣುವ್ರತಗಳಾಗುತ್ತವೆ.

"ಆಗಳಾ ಪರಮೇಶ್ವರಿಗೆ ಜಿನಸ್ಥಾನ ಪವಿತ್ರೀ ಕೃತೋತ್ತಮಾಂಗಿಗೆ ಜಿನೋತ್ತಮ ಸ್ತವನದೊಳಮಾ ಗುಣದಂಕ ಕಾರ್ತಿಗೆ ಗುಣ ಶಿಕ್ಷಾವ್ರತಂಗಳೊಳುಮಾ........."

(ಅಜಿತತೀರ್ಥಂಕರ ಪುರಾಣ ೩-೨೧ವ)

ಸ್ತವರವೆಂದರೆ ಶ್ಲಾಘನೀಯ ವ್ಯಕ್ತಿತ್ವವುಳ್ಳವಳು. ಗುಣದಂಕಕಾರ್ತಿಗೆ ಸದ್ಗುಣಶೀಲೆಯೆಂದರ್ಥ ಗುಣಶಿಕ್ಷಾವ್ರತವೆಂದರೆ ಜೈನರಲ್ಲಿ ಸದ್ಗುಣಗಳೇ ವ್ರತವಾಗಿರುವವರು ಎಂದರ್ಥ. ಶ್ರಾವಕರು ಹೊಂದಿರುವ ದಿಗ್ವಿರತಿ, ದೇಶವಿರತಿ, ಅನರ್ಥದಂಡವಿರತಿ ಎಂಬ ಮೂರುವ್ರತಗಳನ್ನು ಹೊಂದಿರುವವರು ಎಂದರ್ಥ.

**೩೦೮. ಗುಪ್ತಚರ**

ಕಾಪಟಿಕ, ಉದಾಸೀನ, ಗೃಹಪತಿ, ವೈದೇಹಿಕ, ತಾಪಸ ವ್ಯಂಜನ ಎಂದು ಐದು ವರ್ಗದ ಗೂಢಾಚಾರರನ್ನು ಪಂಚವರ್ಗ ಎನ್ನಲ್ಪಡುತ್ತಾರೆ. ಇನ್ನೊಬ್ಬರ ಗುಟ್ಟು ತಿಳಿಯುವುದರಲ್ಲಿ ಚತುರನಾದ ಸಮರ್ಥನು ತನಗೆ ಹಿತಕರನಾದರೂ ಕಪಟವಾಗಿ ಕೆಲಸ ಮಾಡುವುದರಿಂದ ಕಾಪಟಿಕನು. ಯಾರು ಕೆಟ್ಟ ಕೆಲಸ ಮಾಡುವರೋ ಅದನ್ನು ಆ ಕೂಡಲೆ ನನಗೆ ತಿಳಿಸಬೇಕು, ಎಂದು ನೇಮಿಸಿ ಕೆಲಸದಲ್ಲಿರುವ ಚಾರವರ್ಗ ಒಂದನೆಯದು. ಇಲ್ಲದ ಅಪರಾಧವನ್ನು ಪ್ರಚಾರ ಮಾಡಿ ಒಳ್ಳೆಯ ಜನರಿಗೆ ಜೀವನಕ್ಕೆ ಕೊಟ್ಟು ಅಪರಾಧಿಗಳನ್ನು ತಿಳಿಸು ಎಂದು, ಗುಟ್ಟಾಗಿ ಹೇಳಬೇಕು. ಅಂತಹವನು ಉದಾಸ್ಥಿತನು. ಒಳ್ಳೇ ಮನೆ, ಹೊಲ-ಗದ್ದೆ, ಕಾಳು-ಕಡಿ, ಅವನಿಗೆ ಕೊಡಬೇಕು. ತನ್ನ ಅನುಯಾಯಿಗಳನ್ನು ಸಾಕಬೇಕು. ಗೃಹಪತಿಯೆಂದರೆ ಸದ್ಗೃಹಸ್ಥ. ಅಂತಹ ಗುಣವಂತನನ್ನು

ಕರೆದು ಗುಟ್ಟಾಗಿ ಮೊದಲಿನಂತೆ ಹೇಳಬೇಕು. ಅವನು ತೋರಿಕೆಗೆ ಎಲ್ಲರಂತೆ ಸ್ವಕಾರ್ಯ ನಿರತನಾಗಿದ್ದು ರಾಜನಿಗೆ ಚಾರನಾಗಿರುವನು. ವ್ಯಾಪಾರಿಯು ರಾಜಧನವನ್ನು ಹೊಂದಿ ವಾಣಿಜ್ಯ ವೃತ್ತಿಯವನಾದರೂ ಅಪರಾಧಿಗಳ ಸುದ್ದಿಯನ್ನು ತಿಳಿಸಬೇಕು. ಅವನು ವಾಣಿಕ್ಯಕವ್ಯಂಜನ ಚಾರನು. ಜಡೆ ಬೆಳೆಸಿಕೊಂಡು ಇಲ್ಲವೆ ಬೋಳಿಸಿಕೊಂಡು ಬೈರಾಗಿ ಯಂತೆ ಆಶ್ರಮದಲ್ಲಿದ್ದುಕೊಂಡು ಅಂತಹ ಶಿಷ್ಯಮಂಡಲವುಳ್ಳವನಾಗಿ ರಾಜಧನದಿಂದ ಬದುಕುತ್ತ ತಪಸ್ಸನ್ನು ನಟಿಸಬೇಕು. ಒಂದು ತಿಂಗಳು, ಎರಡು ತಿಂಗಳಿಗೊಮ್ಮೆ ಫಲಾಹಾರ ಮಾಡಬೇಕು. ಶಿಷ್ಯರು ಅವನು ಸರ್ವಜ್ಞನೆಂದು ಪ್ರಕಟಿಸಬೇಕು. ವಿಶ್ವಾಸ್ಯರಾದುದರಿಂದ ಕುಕರ್ಮ ತಿಳಿಯಲು ಒಳ್ಳೆಯ ಉಪಾಯ. ನೆರೆ ರಾಜ್ಯದ ರಾಜನು ಒಗ್ಗಟ್ಟಿನಿಂದ ಒಳಿತು ಮಾಡುವವನೂ ತನ್ನ ಮಿತ್ರತ್ವ ಬಿಟ್ಟರೆ ತನ್ನನ್ನು ಸಂಹರಿಸಬಲ್ಲವನೂ ಆದರೆ ಅವನು ಮಧ್ಯಮ ಶತ್ರುವು. ಪ್ರಜ್ಞಾ ಉತ್ಸಾಹ ಗುಣಪ್ರಕೃತ ಸಮರ್ಥನಾದವನು ವಿಜಿಗೀಷು ಮಧ್ಯಮ ಎಂಬ ಇಬ್ಬರು ಒಟ್ಟಾದರೆ ಅವರನ್ನು ಮಿತ್ರರಾಗ ಬಯಸುವ, ಬೇರೆ ಬೇರೆಯಾದರೆ ದಮನಿಸುವ, ಸಾಮರ್ಥ್ಯವುಳ್ಳವನು ಉದಾಸೀನನು, ಅಂತಹವನ ವಿಚಾರವನ್ನೂ ತಿಳಿಯಬೇಕು. ಇಂತಹವರು ರಾಜ್ಯದ ಒಳಗಿನವರೂ, ಹೊರಗಿನವರೂ ಆಗಿರಬಹುದು. ಇವರ ಬಲಸಂಚಯ, ಪ್ರಯತ್ನಗಳ ಪರಿಜ್ಞಾನವು ಸದಾ ಇರಬೇಕು.

*ವಿವರಗಳಿಗೆ ನೋಡಿ: ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೭–೧೫೫.*

**೩೦೯. ಗುಪ್ತಿ**

*ಮತ್ತೊಂದು ದಿವಸಮಾತ್ಮೀಯವಿಹಾರಭೂಮಿಸಮೀಪಸ್ಥಿತ **ತ್ರಿಗುಪ್ತಿಗುಪ್ತ***
*ಸಮಾಧಿಗುಪ್ತರೆಂಬ................(ಆದಿಪುರಾಣ. ೩–೩೮ವ)*

ಸಮ್ಯಗ್ಯೋಗನಿಗ್ರಹೋ ಗುಪ್ತಿ: ಸಮ್ಯಕ್ ಪ್ರಕಾತದಿಂದ ಯೋಗಗಳ ನಿಗ್ರಹ ಮಾಡುವುದು ಗುಪ್ತಿಯೆನಿಸುತ್ತದೆ. (ತತ್ವಾರ್ಥ ಸೂತ್ರ ೯–೪)

ಗುಪ್ತಿಯೆಂದರೆ ಕರ್ಮನಿರೋಧಕ್ಕೆ ಅಥವಾ ಸಂವರಸಾಧನಕ್ಕೆ ಅಗತ್ಯವಾದ ಆಚರಣೆ: ಮನ ವಚನ ಕಾಯಗಳ ವ್ಯಾಪಾರವನ್ನು ಬಾಹ್ಯ ಪ್ರವರ್ತನಕ್ಕೆ ಬಿಡದೆ ತಡೆಯುವುದು. ಇದೇ ಕ್ರಮವಾಗಿ ಮನೋಗುಪ್ತಿ. ವಚನಗುಪ್ತಿ, ಕಾಯಗುಪ್ತಿ. – ಇವು ಗುಪ್ತಿತ್ರಯಗಳು.

**೩೧೦. ಗುರು ವಚನ**

*ಗುರುಗಳ್ ಬಂದುಪರೋಧಿಸೆ*
***ಗುರುವಚನ**ಮಲಂಘನೀಯಮೆಂದೆಡೆಗೊಂಡಂ ।*
*ಪರಿಣಯನಮನಂತೆ ವಧೂ*
*ಪರಿಗ್ರಹಾಗ್ರಹಮದುಂಟೆ ಪರಮನ ಮನದೊಳ್ ॥*

*(ಅಜಿತತೀರ್ಥಂಕರ ಪುರಾಣ ೬–೩೫)*

ಬ್ರಾಹ್ಮಣಂಗೆ ಅಗ್ನಿಯೇ ಗುರು. ಕ್ಷತ್ರಿಯವೈಶ್ಯಶೂದ್ರರ್ಗೆ ಬ್ರಾಹ್ಮಣನೇ ಗುರು.

ಸತಿಗೆ ಪತಿಯೇ ಗುರು. ಎಲ್ಲರ್ಗಮಭ್ಯಾಗತನೇ ಗುರು. (ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ ಶ್ಲೋಕ ೮೭)

ಬ್ರಾಹ್ಮಣರಿಗೆ ಅಗ್ನಿಯೇ ಗುರು. ಕ್ಷತ್ರಿಯ, ವೈಶ್ಯ, ಶೂದ್ರರಿಗೆ ಬ್ರಾಹ್ಮಣನೇ ಗುರು. ಸತಿಗೆ ಪತಿಯೇ ಗುರು. ಎಲ್ಲರಿಗೆ ಅಭ್ಯಾಗತನೇ ಗುರುವೆಂದು ಕರ್ಣಾಟಕ ಪಂಚತಂತ್ರ ಹೇಳುತ್ತದೆ.

ಗುರುವಚನವನ್ನು ಮೀರಬಾರದು ಯಾಕೆಂದರೆ ಗುರುವು ಶಿಷ್ಯನನ್ನು ಉದ್ಧಾರದ ದಾರಿಯ ಕಡೆಗೆ ಕರೆದೊಯ್ಯುತ್ತಾನೆ. ಆದುದರಿಂದಲೇ ರನ್ನ 'ಗುರುವಚನಂ ಅಲಂಘನೀಯಂ' ಎಂದು ಹೇಳಿದ್ದಾನೆ.

ಗುರು–೩: (ಅ) ತಾಯಿ, ತಂದೆ, ಆಚಾರ್ಯ (ವಾರಾಮಾ. ಅಯೋಧ್ಯಾ ೧೧೧–೨) (ಆ) ದೀಕ್ಷಾಗುರು, ಶಿಕಾ–, ಜ್ಞಾನ–(ಶಿಶಬ್ದ.೭೨) (ಇ) ಚೋದಕ, ಬೋಧಕ, ಮೋಕ್ಷದ (ಬ್ರಹ್ಮವಿದ್ಯೋಪನಿಷತ್ತು–ದಿ ಉಪನಿಷದ್ಸ್, ೩೧೯).

ಗುರು–೫: (ಅ) ನೋ. ಪಿತೃ–೫. (ಆ) ನೋ. ಪರಮೇಷ್ಠಿ–೫ (ಇ) ಪಿತಾ, ಮಾತಾ, ಅಗ್ನಿ, ಆತ್ಮಾ, ಗುರು, (ಮಹಾಭಾ. ವನ. ೨೧೪–೨೭) (ಈ) ಗುರು, ಪರಮ–, ಪರಮೇಷ್ಠಿ–, ಪರಾಪರ–, ಇನ್ನಿತರ ಬ್ರಹ್ಮವಿದ್ಯಾಚಾರ್ಯವರ್ಯರು (ಸಾಂಖ್ಯ.೩೮).

ಗುರು–೬: ಪ್ರೇರಕ ಗುರು, ಸೂಚಕ–, ವಾಚಕ–, ದರ್ಶಕ–, ಶಿಕ್ಷಕ–, ಬೋಧಕ– (ಕುಲಾಗಮ–ಸಂ.೧೧೧)

ಗುರು–೭: ಗುರು, ಮಾತಾ, ಪಿತಾ, ಸೂರ್ಯ, ಚಂದ್ರ, ಅಗ್ನಿ, ಮಂತ್ರದಾತಾ (ಸಂ.೧೨೮).

ಗುರು–೮: (ಅ) ಬೋಧಕಗುರು, ವೇದಕ–, ನಿಷಿದ್ಧ–, ಕಾಮ್ಯ–, ಸೂಚಕ–, ವಾಚಕ–, ಕಾರಣ–, ವಿಹಿತ (ವಿಚಿಂ. ೧–೨೭). (ಆ) ಅಕ್ಷರಾಭ್ಯಾಸದ ಗುರು, ಗಾಯತ್ರೀ ಉಪದೇಶದ–, ವೇದಾಧ್ಯಯನದ–, ಶಾಸ್ತ್ರಾಭ್ಯಾಸದ–, ಪುರಾಣೇತಿಹಾಸದ, ಮತಸಂಪ್ರದಾಯ ಬೋಧನೆಯ–, ಇಂದ್ರಜಾಲಾದಿ ವಿದ್ಯೆಯ–, ಬ್ರಹ್ಮೋಪದೇಶಕ– (ವಿದ್ಯಾಕ. ೪).

ಸ್ವಲ್ಪವಾದ ಶಾಸ್ತ್ರಾಧ್ಯಯನಕ್ಕೆ ಉಪಕಾರ ಮಾಡುವವನನ್ನು ಕೂಡ ಈ ಶಾಸ್ತ್ರದಲ್ಲಿ ಗುರುವೆಂದು ಸಮ್ಮತಿಸುತ್ತೇವೆ. ಶಾಸ್ತ್ರಜ್ಞಾನ ಉಪಕಾರವು ಆಗಲೂ ಉಂಟಾಯಿತು. ಹಿಂದೆ ಹೇಳಿದಂತೆ ಕೇವಲ ಸಂಸ್ಕಾರ ಕರ್ತೃವು ಗುರುಸಂಜ್ಞಾ ಯೋಗ್ಯನಾದರೂ ಇವನು ಅರ್ಥದಲ್ಲಿ ಗುರುವು, ಮಹತ್ವ ಉಳ್ಳವನು.

*ವಿವರಗಳಿಗೆ ನೋಡಿ: ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೨–೧೪೯*

*ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ ೧೯೯೯ ಶ್ರೀವತ್ಸ ನಿಘಂಟು*

## ೩೧೧. ಗೋತ್ರಸ್ಖಲನೆ

..........................

*............ಇದಜೊಳ್ ಪಕ್ಕಾಗಿ* ***ಗೋತ್ರಸ್ಖಲನೆ*** *ನೆಗೆಱೆ ಪೂಮಾಲೆಯಿಂ ಮೋದುವೆತ್ತಂ*

*(ಕೆ.ಎಲ್. ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೪-೯)*

ಹೆಸರನ್ನು ತಪ್ಪಾಗಿ ಕರೆಯುವುದನ್ನು ಗೋತ್ರಸ್ಖಲನೆಯೆಂದು ಕರೆಯುತ್ತಾರೆ. ಹೆಸರುಗಳನ್ನು ಸರಿಯಾಗಿ ಹೇಳಬೇಕು ಎಂಬುದು ಭಾವಾರ್ಥ. ಸಂಸ್ಕೃತದಲ್ಲಿ ಪರಿಚಯವನ್ನು ಹೇಳುವಾಗ ಮತ್ತು ಹಿರಿಯರಿಗೆ ಪಾದ ನಮಸ್ಕಾರ ಮಾಡುವಾಗ ಹೆಸರು; ತಂದೆ-ತಾಯಿಯರ ಹೆಸರು; ಗೋತ್ರಗಳ ಹೆಸರು ಹೇಳುವುದು ಪದ್ಧತಿಯಾಗಿದೆ. "ವಸಿಷ್ಠ ಗೋತ್ರೋತ್ಪನ್ನ:.... ಶರ್ಮಣ ಪುತ್ರಾಯ........ ಭೋ ಅಭಿವಾದಯೇ" ಇಲ್ಲಿ ಗೋತ್ರದ ಹೆಸರು. ತಂದೆಯ ಹೆಸರು, ತನ್ನ ಹೆಸರು ಹೇಳಿ ಅನಂತರ 'ನಮಸ್ಕರಿಸುತ್ತಿದ್ದೇನೆ ಎಂದು ಹೇಳಲಾಗಿದೆ. ಆದುದರಿಂದ ಗೋತ್ರವನ್ನು ಸರಿಯಾಗಿ ಉಚ್ಚರಿಸಬೇಕು. ಅಲ್ಲಿ ಸ್ಖಾಲಿತ್ಯವುಂಟಾಗಬಾರದು. ಉಂಟಾದರೆ ಅದು ತಪ್ಪು ಎನ್ನುವುದು ಆದಿಪುರಾಣದ ನಿಲುವು. ವೈದಿಕ ಧರ್ಮದ ಪ್ರಕಾರ ಗೋತ್ರ ಪದ್ಧತಿಯು ಮೇಲುವರ್ಗದವರಿಗೆ ಮೀಸಲು. ಕೆಳಜಾತಿಯ ಜನರಲ್ಲಿ ಕುಲಪದ್ಧತಿಯಿದೆ. ವೈದಿಕ ಧರ್ಮದಲ್ಲಿ ಗೋತ್ರ ಪದ್ಧತಿಯು ಸಪ್ತ ಋಷಿಗಳ ಹೆಸರಿನಿಂದ ಕೂಡಿದೆ. ಸಗೋತ್ರದಲ್ಲಿ ವಿವಾಹ ನಿಷಿದ್ಧವೆಂದು ಗೋತ್ರ ಪದ್ಧತಿಯು ತಿಳಿಸುತ್ತದೆ. ಕೊಸಾಂಬಿಯವರು ಈ ರೀತಿ ಹೇಳುತ್ತಾರೆ.

ಇವರ ಸಾಮಾಜಿಕ ವ್ಯವಸ್ಥೆ ಮುಖ್ಯವಾಗಿ ಸಮುದಾಯ ವ್ಯವಸ್ಥೆಯೇ. ಆದರೆ ಆಹಾರ ಸಂಗ್ರಹಣ ಜೀವನ ನಡೆಸುತ್ತಿದ್ದ ಅರಣ್ಯವಾಸಿಗಳಂತೆ ಮಾತೃ ಪ್ರಧಾನ ವ್ಯವಸ್ಥೆಯಲ್ಲ. ಪಿತೃ ಸ್ವಾಮ್ಯವಾದದ್ದು. ಇದರ ಪ್ರತಿಫಲನವು ಅವರ ಬಹುತೇಕ ದೇವರುಗಳೆಲ್ಲರೂ ಪುರುಷರೇ ಎಂಬುದರಲ್ಲಿ ಕಾಣುತ್ತದೆ. ಪಶುಗಳೇ ಅವರ ಪ್ರಧಾನ ಸಂಪತ್ತಾದ ಕಾರಣ ಆರ್ಯರು ತಮ್ಮ ಸಮುದಾಯಗಳನ್ನು ಗೋತ್ರಗಳು ಎನ್ನುತ್ತಿದ್ದರು. ಒಂದು ಗೋತ್ರಕ್ಕೆ ಸೇರಿದವರ ಪಶುಸಂಪತ್ತು ಒಟ್ಟು ಆ ಗೋತ್ರದ ಸಾಮೂಹಿಕ ಸಂಪತ್ತು.

ಗೋತ್ರಗಳು ಸಮುದಾಯ ವ್ಯವಸ್ಥೆಯನ್ನು ಮಾರ್ಪಡಿಸಿಕೊಂಡು ವರ್ಣ ವ್ಯವಸ್ಥೆಗೆ ರೂಪಾಂತರವಾದ ಹಂತ, ನಮ್ಮ ದೇಶಕ್ಕೆ ಆರ್ಯರು ಬಂದ ನಂತರದಲ್ಲಿ ಸಾಧಿಸಿದ ಮೊತ್ತಮೊದಲ ಪ್ರಮುಖ ಬದಲಾವಣೆ. ಆದಿಮ ಪಶುಪಾಲಕ ಸಮಾಜವನ್ನು ಬಿಟ್ಟು ಕಬ್ಬಿಣದ ಬಳಕೆಯನ್ನರಿತ ಕೃಷಿಕ ವರ್ಗ ಸಮಾಜ ರೂಪುಗೊಂಡ ಬದಲಾವಣೆ. ಅಲ್ಲಿಗೆ ಗೋತ್ರಗಳು-ಸಮುದಾಯಗಳು ಸಾಮಾಜಿಕವಾಗಿ ಅರ್ಥರಹಿತವಾಗಿ ಹೋದವು. ಆದರೆ ಎಲ್ಲ ವಿಷಯಗಳಲ್ಲಿಯೂ ನಮ್ಮ ದೇಶ ಹಳೆಯ ಕಸವನ್ನು ಬಿಸಾಡದೆ ಉಳಿಸಿಕೊಂಡೇ ಬಂದಿದೆ. ಇಂದಿಗೂ ಗೋತ್ರಗಳು ಬ್ರಾಹ್ಮಣರಲ್ಲಿ ಉಳಿದುಕೊಂಡು ಬಂದಿವೆ. ವಿವಾಹ ವಿಷಯದಲ್ಲಿ ಸಗೋತ್ರ ವಿವಾಹ ನಿಷಿದ್ಧವೆಂಬುದೂ ಉಳಿದು ಬಂದಿದೆ. ಸಾಮಾಜಿಕ ವ್ಯವಸ್ಥೆಯಲ್ಲಿ ಗೋತ್ರಗಳು ಹೊರಟು ಹೋಗಿ ಕುಲಗಳು ಬಂದವಾದರೂ, ಆಚಾರಗಳಲ್ಲಿ ಇಂದಿಗೂ 'ಕುಲಗೋತ್ರ'ಗಳೆರಡೂ ಮುಖ್ಯವೇ.

ಗೋತ್ರ ಎಂಬ ಪದ್ಧತಿ ಉತ್ತರ ವೇದ ಕಾಲದಲ್ಲಿ ಆರಂಭವಾಯಿತು. ಆ ಶಬ್ದದ ಅರ್ಥ ದನದ ದೊಡ್ಡಿ ಎಂದು; ಆದರೂ ಒಬ್ಬ ಸಮಾನ ಮೂಲ ಪುರುಷನ ಸಂತತಿ ಎಂಬ ಅರ್ಥವನ್ನು ಅದು ಪಡೆದುಕೊಂಡಿತು. ಜನರು ಗೋತ್ರಗಳ ಹೊರಗಿನಿಂದ ಮದುವೆಯಾಗುವ ರೂಢಿಯನ್ನು ಆರಂಭಿಸಿದರು. ಒಂದೇ ಗೋತ್ರಕ್ಕೆ ಸೇರಿದವರೆಲ್ಲರೂ ಒಂದೇ ಸಂತತಿಗೆ ಸೇರಿದವರಾದ್ದರಿಂದ ಅವರವರಲ್ಲಿ ಮದುವೆ ನಿಷಿದ್ಧವಾಯಿತು.

ವೇದ ಕಾಲದಲ್ಲಿ ನಾಲ್ಕು ಆಶ್ರಮಗಳು ಅಥವಾ ಚತುರಾಶ್ರಮಗಳು ಸ್ಫುಟರೂಪ ತಳೆದಿರಲಿಲ್ಲ. ವೇದೋತ್ತರ ಗ್ರಂಥಗಳಲ್ಲಿ ಬ್ರಹ್ಮಚರ್ಯ ಅಥವಾ ಶಿಷ್ಯ ಹಂತ, ಗೃಹಸ್ಥ ಅಥವಾ ಸಂಸಾರಿ ಹಂತ, ವಾನಪ್ರಸ್ಥ ಅಥವಾ ವಿರಕ್ತ ಹಂತ ಮತ್ತು ಸನ್ಯಾಸ ಅಥವಾ ಸರ್ವಸಂಗ ಪರಿತ್ಯಾಗ ಹೀಗೆ ಜೀವನದ ನಾಲ್ಕು ಹಂತಗಳನ್ನು ನಿರೂಪಿಸಲಾಗಿದೆ. ಉತ್ತರ ವೈದಿಕ ಗ್ರಂಥಗಳಲ್ಲಿ ಮೊದಲ ಮೂರು ಮಾತ್ರ ಪ್ರಸ್ತಾಪವಾಗಿವೆ. ಸನ್ಯಾಸ ಜೀವನದ ಪರಿಚಯವಿದ್ದಿತಾದರೂ ಅದು ಸ್ಫುಟರೂಪ ತಳೆದಿರಲಿಲ್ಲವೆಂದು ಆರ್. ಎಸ್. ಶರ್ಮರ ಅಭಿಪ್ರಾಯ.

ಪ್ರತಿಯೊಂದು ಗೋತ್ರಕ್ಕೂ ಪ್ರವರಕ್ಕೂ- ಅವರ ಪೂರ್ವಜರೆಂದು ಹೇಳಲಾದ ಋಷಿಗಳ ಹೆಸರುಗಳು ಎಂಬುದು ಬಂದಿದೆ. ಯಾಗದಲ್ಲಿ ಗೋತ್ರ ಮತ್ತು ಪ್ರವರದ ಉಪಯೋಗ ಎರಡು ತರಹದ್ದು. ಅದು ಆಫ್ರೀ ಸೂಕ್ತವನ್ನು ನಿರ್ಧರಿಸುತ್ತದೆ. ಇನ್ನೊಂದು ಉಪಯೋಗ ದೇವತೆಗಳ ಆಹ್ವಾನದಲ್ಲಿ.

ಮೂಲ ಋಷಿಗಳು ಏಳು ಜನ. ಅವರಲ್ಲಿ ನಾಲ್ವರು ಮಾನವರ ಮೂಲ ಪುರುಷರು. ಆದರೆ ಈ ನಾಲ್ವರಿಂದ ಹದಿನೆಂಟು ಪ್ರತ್ಯೇಕ ಪಂಗಡಗಳು ಹುಟ್ಟಿಕೊಂಡವು.

ಸಗೋತ್ರ ವಿವಾಹವನ್ನು ಮನು ತಿರಸ್ಕರಿಸಿದ್ದಾನೆ.

ಸವರ್ಣೀಯ ಸ್ತ್ರೀಯನ್ನು ಮದುವೆಯಾಗಬೇಕು. ಆದರೆ ಆಕೆ ವಿಭಿನ್ನ ಗೋತ್ರದವಳಾಗಿರಬೇಕು ಎಂದು ಮನುವು ಹೇಳುತ್ತಾನೆ.

ಗೋತ್ರಗಳಲ್ಲಿಯೂ ತಾರತಮ್ಯವಿದೆ.

ಮುಖ್ಯ ಋಷಿಗಳ ಸಂಖ್ಯೆಯು ಏಳೇ ಇದ್ದರೂ ಕೂಡ ಬ್ರಾಹ್ಮಣರಲ್ಲಿ ೧೮ ಮುಖ್ಯ ಗೋತ್ರಗಳಿವೆ.

(J. Brough the early brahmainical system of gotra and pravara (ಕೆಂಬ್ರಿಡ್ಜ್, ೧೯೫೩) ಪುಟ. ೨೭ರಲ್ಲಿ 'ಕೇವಲ ಅಂಗೀರಸ'ನನ್ನು 'ಹಿರಣ್ಯಕೇಶಿ ಸತ್ಯಸಾಧ' ಕೈ ಬಿಟ್ಟಿದೆ ಎಂದು ತಿಳಿಸುತ್ತಾರೆ. ಆದರೆ ಅದನ್ನು ಒಂದು ಆಕಸ್ಮಿಕ ಎಂದು ಪರಿಗಣಿಸುತ್ತಾರೆ. ಆದರೆ ಈ ಪ್ರಮಾಣದ ಲೋಪ ಅಸಂಭವ. Journal of the American oriental society ೭೩.೨೦೨-೨೦೮ನಲ್ಲಿ ಪ್ರಕಟವಾದ ನನ್ನ ವಿಮರ್ಶೆಯನ್ನು ಪ್ರತಿವಾದ ಎಂದು ತಪ್ಪಾಗಿ ಅರ್ಥ ಮಾಡಿಕೊಂಡರು. ಆದರೆ ನಾನು ಹೇಳಿದ್ದು ಗೋತ್ರದ ಬಗೆಗಿರುವ ತಾತ್ವಿಕ ಕೃತಿಗಳನ್ನು ಸ್ವತಂತ್ರವಾಗಿ ಅವಲೋಕಿಸಬೇಕು ಎಂದಷ್ಟೇ. ಉದಾ: ಮಥುರಾದಲ್ಲಿನ ಬ್ರಾಹ್ಮೀ ಶಾಸನಗಳಲ್ಲಿ ಉಲ್ಲೇಖಿಸಿರುವ ಸೈಗ್ರವ

ಗೋತ್ರದ ಉಲ್ಲೇಖ ಗ್ರಂಥಗಳಲ್ಲೆಲ್ಲೂ ಇಲ್ಲ. ಮತ್ತೂ ವಿಚಿತ್ರವೆಂದರೆ ಅಸಂಖ್ಯಾತ ಬ್ರಾಹ್ಮಣ ಗುಂಪುಗಳು ಒಪ್ಪಿಕೊಂಡಿರುವ ಈ ತತ್ವದ ಸತ್ಯಾಸತ್ಯತೆಯನ್ನು ಇಲ್ಲಿಯವರೆಗೆ ಪರೀಕ್ಷಿಸುವ ಗೋಜಿಗೆ ಹೋಗದಿರುವದು. ಮಹಾರಾಷ್ಟ್ರದ ನಗರವಾಸಿಗಳು ಬ್ರಾಹ್ಮಣರನ್ನು ಮೂಲಭೂತವಾಗಿ ಸಾರಸ್ವತ, ಚಿತ್ಪಾವನ, ದೇಶಸ್ತ ಮತ್ತು ಕರ್ಹಾಡ ಎಂಬ ನಾಲುಕ ಗುಂಪುಗಳಾಗಿ ವಿಂಗಡಿಸುತ್ತಾರೆ. ೧೯೪೧ರ ಬಾಂಬೆ ಪ್ರಾಂತ್ಯದ ಜಾತಿ ಗಣತಿಯ ಕೋಷ್ಟಕಗಳು ತೋರಿಸುವಂತೆ ಮೇಲೆ ಹೇಳಿದ ನಾಲ್ಕು ಗುಂಪಿಗಿಂತಲೂ ಉಳಿದ ಬ್ರಾಹ್ಮಣಗುಂಪುಗಳು ಅತಿ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಗ್ರಂಥಗಳು ಮುಂತಾದವು ಮೇಲೆ ಹೇಳಿದ ನಾಲ್ಕು ಗುಂಪಿನವರ ಹಿಡಿತದಲ್ಲಿತ್ತು. ಆದರೆ ಉಳಿದ ಬ್ರಾಹ್ಮಣರ ಸಂಖ್ಯೆ ಅವರಿಗಿಂತ ಹೆಚ್ಚಿಗೆ ಇತ್ತು. ವಿಎಸ್. ಸುಕ್ತಂಕರ್ ಅವರು ತಮ್ಮ ಉತ್ಕೃಷ್ಟ ಕೃತಿಯಲ್ಲಿ – Epic studies vi (ABORI 18 1-76 Mem Ed I. 278-೩೩೭) ಸ್ಪಷ್ಟಪಡಿಸುವಂತೆ ಭೃಗುಗಳಿಗೂ ಮಹಾಭಾರತದ ಹಿಗ್ಗಿಸುವಿಕೆಗೂ ಸಂಬಂಧವಿತ್ತು. ಇಲ್ಲಿ ಗಮನಾರ್ಹ ವಿಚಾರವೆಂದರೆ ಭಾರ್ಗವರು ಮಹಾಭಾರತವನ್ನು ಹಿಗ್ಗಿಸುವ ಕ್ರಿಯೆಯು, ನಾರಾಯಣೀಯವನ್ನು ಹಿಗ್ಗಿಸುವ ಕ್ರಿಯೆಯನ್ನು ಅವಲಂಬಿಸಿರಲಿಲ್ಲ. ಆದರೆ ಆ ಪ್ರಯತ್ನಕ್ಕೆ ವಿರೋಧವೂ ಇರಲಿಲ್ಲ. ಏಕೆಂದರೆ, ಮಹಾಭಾರತವನ್ನು ಹಿಗ್ಗಿಸುವ ಪ್ರಕ್ರಿಯೆ ಹೆಚ್ಚು ಕಡಿಮೆ ನಿಂತು ಹೋಗುವ ಹಂತಕ್ಕೆ ಬಂದಾಗಲೂ ನಾರಾಯಣೀಯವನ್ನು ಹಿಗ್ಗಿಸುವ ಕ್ರಿಯೆ ಮುಂದುವರೆದೇ ಇತ್ತು. ಜನಪ್ರಿಯ ಮಹಾಭಾರತ ಆವೃತ್ತಿಗಳಲ್ಲಿ ಕಂಡುಬರುವ ಪ್ರಸಿದ್ಧ ಅಶೀರ್ವಚನದ ಶ್ಲೋಕ ನಾರಾಯಣಂ ನಮಸ್ಕೃತ್ಯವನ್ನು ವಿಮರ್ಶಾತ್ಮಕವಾಗಿ ಸಂಪಾದಿಸಿರುವ ಆವೃತ್ತಿಯಲ್ಲಿ ಕೈಬಿಡಲಾಗಿದೆ. ಆದರೆ ಭಾರ್ಗವ ಪ್ರಕ್ಷೇಪದ ಬಹಳಷ್ಟು ಅಂಶಗಳು ಹಾಗೇ (ಉದಾ: ಪರಶುರಾಮನಿಗೆ ನೀಡಿರುವ ಪ್ರಾಮುಖ್ಯ) ಉಳಿದುಕೊಂಡಿವೆ. ಗೀತೆ ೧೦.೨೫ರಲ್ಲಿ ಕೃಷ್ಣ ತನ್ನನ್ನು ಮಹಾನ್ ಋಷಿಗಳಲ್ಲಿ ಭೃಗು ಎಂದು ಹೇಳಿಕೊಳ್ಳುತ್ತಾನೆ. (ಮಹರ್ಷೀಣಾಂ ಭೃಗುರಹಂ), ಆದರೆ ಈ ಋಷಿಗೆ ವೈದಿಕ ಪರಂಪರೆಯಲ್ಲಿ ಯಾವ ಸ್ಥಾನವೂ ಇಲ್ಲ ಮತ್ತು ಇದ್ದರೂ ಅದೂ ಕೂಡಾ ಅದು ತೀರಾ ಗೌಣವಾದ ಸ್ಥಾನ.

ಗೋತ್ರವೆಂದರೆ ಒಂದು ಗೋಷ್ಠಿಯವರು ಒಂದು ಮತಕ್ಕೆ ಹೊಂದಿದವರು ಎಂದು ಕೆಲವರ ಅಭಿಪ್ರಾಯವಿದೆ. ವಸಿಷ್ಠ ಗೋತ್ರದವರೆಂದರೆ ವಸಿಷ್ಠನ ಮತವನ್ನು ಅನುಸರಿಸುವವರು ಎಂದು ಅರ್ಥ. ಆದರೆ, ಇನ್ನು ಕೆಲವರು, ಆ ಮನೆತನದ ಮೂಲ ಪುರುಷನ ಹೆಸರೆ ಗೋತ್ರವೆಂಬ ಅಭಿಪ್ರಾಯದವರಾಗಿದ್ದಾರೆ. ಇದರಲ್ಲಿ ಮೊದಲನೆಯ ಮತವೆ ಹೆಚ್ಚು ಸಮಂಜಸವೆಂದು ತೋರುತ್ತದೆ. ಏಕೆಂದರೆ ಗೋತ್ರ ಶಬ್ದದಲ್ಲಿ ವಂಶವೆಂಬುದಕ್ಕಿಂತಲೂ ಗೋಷ್ಠ, ಗೋಷ್ಠಿ ಎಂಬ ಧ್ವನಿಯೆ ನಿಶ್ಚಿತವಾಗಿದೆ.

ಬ್ರಾಹ್ಮಣರ ಪುತ್ರರು ಮಾತ್ರ ಬ್ರಾಹ್ಮಣರೆಂದಾದರೆ ಬ್ರಾಹ್ಮಣರ ಅಭಾವವುಂಟಾಗುತ್ತದೆ. ಏಕೆಂದರೆ ವರ್ತಮಾನ ಕಾಲದ ಬ್ರಾಹ್ಮಣರೆಲ್ಲ ಬ್ರಾಹ್ಮಣ ತಂದೆಯರಿಂದ ಜನಿಸಿದವರು ಎಂಬ ಬಗ್ಗೆ ಯಾವಾಗಲೂ ಸಂಶಯವಿದ್ದೇ ಇರುತ್ತದೆ. ಗೋತ್ರ ಬ್ರಾಹ್ಮಣ ಸಂತತಿಯಿಂದ

ಆರಂಭಿಸಿ ಇಂದಿನವರೆಗೂ ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದ ಬ್ರಾಹ್ಮಣಿಯರು ಶೂದ್ರರೊಡನೆಯೂ ಸಂಬಂಧವುಳ್ಳರಾಗಿರುತ್ತಾರೆ. ಆದ್ದರಿಂದ ಜಾತಿಯಿಂದ ಯಾರೂ ಬ್ರಾಹ್ಮಣರಿರಲು ಸಾಧ್ಯವಿಲ್ಲ ಎಂದು ಅಶ್ವಘೋಷನ ಅಭಿಪ್ರಾಯ.

*ವಿವರಗಳಿಗೆ : ಡಿ. ಡಿ. ಕೊಸಾಂಬಿ ೨೦೦೩ ಪುರಾಣ ಮತ್ತು ವಾಸ್ತವ ಪುಟ. ೭೫–೭೬, ೨೫*
*ಡಿ. ಡಿ. ಕೊಸಾಂಬಿ ೧೯೯೮ ಪ್ರಾಚೀನ ಭಾರತದಲ್ಲಿ ಚರಿತ್ರೆ*
*ಆರ್.ಎಸ್. ಶರ್ಮ ೨೦೦೭ ಪ್ರಾಚೀನ ಭಾರತ ಪುಟ. ೮೬*
*ಡಾ. ಟಿ.ವಿ.ವೆಂಕಟಾಚಲಶಾಸ್ತ್ರೀ ೧೯೯೯ ಶ್ರೀವತ್ಸ ನಿಘಂಟು*
*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೩ – ೫*
*Romila Thapar 1975 The Past and Prejudice P. ೩೧*
*ಶಂಬಾ ಜೋಶಿ ೧೯೯೯ ಸಂಪುಟ. ೨ ಪುಟ. ೧೮೩*
*ಬಿ. ವಿ. ವೀರಭದ್ರಪ್ಪ ೨೦೦೭ ಅಶ್ವಘೋಷನ ವಜ್ರಸೂಚಿ ಪುಟ. ೧೪*
*ಯುಗಯಾತ್ರೀ ಭಾರತೀಯ ಸಂಸ್ಕೃತಿ ೧೯೭೧ ಸಂಪುಟ. ೨ ಪುಟ. ೨೪೦–೨೫೪.*

**೩೧೨. ಗೋಸಾಸ**

*ಯುಕ್ತರಿಲ್ಲ, ಪರಲೋಕ ಭಯಮಲ್ಲಗದಗಪರಲೋಕಭಯಮಿಲ್ಲ, ಪರಾರ್ಥವೇಷಿಗಳಲ್ಲದೆ ಪರಾರ್ಥವೇಷಿಗಳಿಲ್ಲ, ಪಾಪಭೀರುಗಳಲ್ಲದಪಾಪಭೀರುಗಳಿಲ್ಲ, ಪರಹಿತವ್ಯಸನಿಗಳಲ್ಲದೆ ದುರ್ವ್ಯಸನಿಗಳಿಲ್ಲ, **ಗೋಸಾಸ**ಮಲ್ಲದೆ ಕನ್ನೆ**ಗೋಸಾಸ**ಮಿಲ್ಲ.*
*(ಅಜಿತತೀರ್ಥಂಕರ ಪುರಾಣ ತಿಲಕಂ ೧–೨೧ ವ)*

ವೆಂಗಿ ಮಂಡಲದ ವಿಶೇಷತೆಯನ್ನು ಕೊಂಡಾಡುವಾಗ ಈ ರೀತಿಯ ಮಾತುಗಳನ್ನು ರನ್ನನು ಹೇಳುತ್ತಾನೆ. ಇಲ್ಲಿ ಅವನು ಬಳಸಿರುವ ಎರಡು ಮಾತುಗಳು ಗಮನಾರ್ಹ. "ಪರಾರ್ಥ ವೇಷಿಗಳಲ್ಲದೆ ಪರಾರ್ಥವೇಷಿಗಳಿಲ್ಲ. ಪರಹಿತ ವ್ಯಸನಿಗಳಲ್ಲದೆ ದುರ್ವ್ಯಸನಿಗಳಿಲ್ಲ. ಗೋಸಾಸಮಲ್ಲದೆ ಕನ್ನೆಗೋಸಾಸಮಿಲ್ಲ." ಪರಾರ್ಥವೇಷಿಗಳು ಎಂದರೆ ಪರಲೋಕದ ಕೈವಲ್ಯ ಪದವಿಯನ್ನು ಈಕ್ಷಿಸುವವರು. ಎರಡುಪರಹಿತ ವ್ಯಸನಿಗಳಿದ್ದಾರೆ. ಆದರೆ ದುರ್ವ್ಯಸನಿಗಳಿಲ್ಲ. ಗೋಸಾಸವಿದೆ ಆದರೆ ಕನ್ನೆಯರಗೋಸಾಸ (ಸ್ತ್ರೀ ಅಪಹರಣವು) ಇಲ್ಲಿಲ್ಲ.

ಗೋಸಾಸವೆಂದರೆ ತುರುಕಾಳಗದಲ್ಲಿ ಗೋವುಗಳನ್ನು ಬಿಡಿಸಿಕೊಳ್ಳುವುದಕ್ಕಾಗಿ ತೋರಿಸುವ ಸಾಹಸ. ಗೋವುಗಳನ್ನು ಹಿಡಿಯುವಲ್ಲಿ ತೋರಿಸುವ ಸಾಹಸವೂ ಹೌದು.

**೩೧೩. ಗ್ರಹಣ**

ಗ್ರಹಣವೆಂದರೆ ಹಿಡಿಯುವುದು. ಸೂರ್ಯ–ಚಂದ್ರರನ್ನು ರಾಹು ಬಂದು ಹಿಡಿಯುತ್ತದೆ. ಅದನ್ನು ಗ್ರಹಣವೆಂದು ಕರೆಯುತ್ತಾರೆ. ಚಾವುಂಡರಾಯ ಪುರಾಣದಲ್ಲಿ ಚೈತ್ರ

ಹುಣ್ಣಿಮೆಯೆಂದು ಗ್ರಹಣವನ್ನು ಕಂಡು ನಿರ್ವೇಗಪರನಾದ ವಿಷಯವು ಬರುತ್ತದೆ. ವಿರಕ್ತಿ ಹುಟ್ಟಲು ಸಣ್ಣ ಕಾರಣವೂ ಸಾಕು. (ಚಾವುಂಡರಾಯ ಪುರಾಣ–ಧರ್ಮನಾಥ ಪುರಾಣಂ ಪುಟ.೧೫೬)

ಗ್ರಹಣವೆಂದರೆ ಹಿಡಿಯುವುದು, ವಿಷಯವನ್ನು ತಿಳಿಯುವುದು ಸೂರ್ಯ–ಚಂದ್ರರನ್ನು ರಾಹು ನುಂಗುವುದು.

### ೩೧೪. ಗ್ರಾಮ ದೇವತೆ

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಉಲ್ಲೇಖಗೊಂಡ ಗ್ರಾಮದೇವತೆಗಳ ಬಗೆಗೆ ಕೆಲವು ವಿವರಗಳನ್ನು ಚರ್ಚಿಸಬಹುದು.

ಗ್ರಾಮದೇವತೆಗಳು ಆಯಾ ಗ್ರಾಮದ ಮತ್ತು ಪರಿಸರದ ಜನರ ಆರಾಧನೆಯನ್ನು ಒಳಗೊಳ್ಳುವ ದೇವತೆಗಳು. ಇವುಗಳಲ್ಲಿ ಸ್ತ್ರೀ ದೇವತೆಗಳನ್ನು 'ತಾಯಿ' ಅನ್ನುವ ಅರ್ಥದಲ್ಲಿ ಜನಪದರು ಗ್ರಹಿಸುತ್ತಾರೆ. ತಾಯಿಯ ಪಾಲನೆಯನ್ನು ಸಂಕೇತಿಸುವುದರಿಂದ ಇಂತಹ ಸ್ತ್ರೀ ಗ್ರಾಮದೇವತೆಗಳ ಆರಾಧನೆಗೆ ವಿಶಿಷ್ಟವಾದ ಅರ್ಥವಂತಿಕೆ ಇದೆ. ಲೌಕಿಕವಾಗಿ ತಾಯಿಯು ಮಗುವಿಗೆ ಆಹಾರವನ್ನು ಕೊಡುತ್ತಾಳೆ. ಮಗು ಕಾಯಿಲೆ ಬಿದ್ದಾಗ ಮಗುವಿಗೆ ರಕ್ಷಣೆಯನ್ನು ಮಾಡುತ್ತಾಳೆ. ಗ್ರಾಮದೇವತೆಗಳನ್ನು ತಾಯಿಯೆಂದಾಗಲೂ ಇದೇ ರೀತಿಯ ಪರಿಕಲ್ಪನೆಯಿರುತ್ತದೆ. ಈ ತಾಯಿಯು ಬೆಳೆಯನ್ನು ರಕ್ಷಣೆ ಮಾಡುತ್ತಾಳೆ. ಇದು ಆಹಾರದ ಉತ್ಪನ್ನಕ್ಕೆ ಸಂಬಂಧಪಟ್ಟದ್ದು. ಹಾಗೆಯೇ ಕಾಯಿಲೆಯನ್ನು ದೂರಮಾಡುವ ಶಕ್ತಿಯು ಸ್ತ್ರೀ ದೇವತೆಗಳಿಗೆ ಇದೆ ಎಂಬ ನಂಬಿಕೆ ಇದೆ. ಗ್ರಾಮದೇವತೆಯರನ್ನು ಎರಡು ಪ್ರಧಾನ ಕಾರ್ಯಗಳ ನಿರ್ವಾಹಕರಾಗಿ ಕಾಣಲಾಗಿದೆ. ಆಹಾರ ಮತ್ತು ಸಂರಕ್ಷಣೆ ಈ ಎರಡೂ ಅಂಶಗಳು ಮನುಷ್ಯನ ಅಸ್ತಿತ್ವಕ್ಕೆ ನೇರವಾಗಿ ಕಾರಣವಾದವುಗಳು.

*ವಿವರಗಳಿಗೆ ನೋಡಿ:* ಬಾದುಬ್ಬೆ.

### ೩೧೫. ಗ್ರಾಮ್ಯ

ಋಗ್ವೇದದ ಋಷಿಗಳು ನಗರಗಳಲ್ಲಿ ಮತ್ತು ಗ್ರಾಮಗಳಲ್ಲಿ ವಾಸಿಸುತ್ತಿದ್ದ ಪೌರರಾಗಿದ್ದರು: ಅವರು ತಪೋಧ್ಯಾನಾದಿಗಳಿಗಾಗಿ ಅರಣ್ಯವನ್ನಾಶ್ರಯಿಸಿದ ಜನರಲ್ಲ. ಹಾಗೂ ಬ್ರಾಹ್ಮಣಗಳ ವ್ಯವಹಾರನೀತಿಯಲ್ಲೂ ಅರಣ್ಯಗಳ ಪಾತ್ರವೇನೂ ಇಲ್ಲ. ಮನೆ ಮತ್ತು ಗ್ರಾಮಗಳಿಂದ ದೂರವಾದ ಸ್ಥಳದಲ್ಲೇ ಮಾಡಬೇಕಾದ ಒಂದು ಕಡ್ಡಾಯ ಅಧ್ಯಯನಕ್ರಮದ ಪ್ರಸ್ತಾಪವೇನೋ ತೈತ್ತಿರೀಯ ಅರಣ್ಯಕದಲ್ಲಿ ಒಮ್ಮೆ ಸೂಚಿತವಾಗಿದೆ. ಆ ಸ್ಥಳವು "ಅ–ಚ್ಛದಿ–ದರ್ಶ" ಎಂದರೆ, ಎಲ್ಲಿಂದ ಮನೆಗಳ ಛಾವಣಿ (=ಛದಿ)ಗಳು ಕಾಣಿಸುವುದಿಲ್ಲವೋ ಅಂತಹ ಪ್ರದೇಶವಾಗಿರಬೇಕೆಂದು ವರ್ಣಿತವಾಗಿದೆ. 'ಗ್ರಾಮ್ಯ' ಅಥವಾ ಗ್ರಾಮದಲ್ಲಿಯೇ ಇದ್ದು ಮಾಡಬಹುದಾದ ಮತ್ತು 'ಅರಣ್ಯ', ಅಥವಾ ಕಾಡಿನಲ್ಲಿಯೇ ಮಾಡಬೇಕಾದ ಎರಡು ಬಗೆಯ ಕಡ್ಡಾಯ ಅಧ್ಯಯನದ ಕ್ರಮಗಳು ಭಾರತೀಯ

ಜನಜೀವನಕ್ಕೆ ಸಂಬಂಧಿಸಿದ ವೇದಗಳ ಅರ್ವಾಚೀನ ಗ್ರಂಥಗಳಲ್ಲಿ ಸ್ಪಷ್ಟವಾಗಿ ನಿರೂಪಿತವಾಗಿವೆ. ಗ್ರಾಮಗಳಿಂದ ಗ್ರಾಮ್ಯವೆಂಬುದು ಹುಟ್ಟಿದೆ. ನಾವೀಗ ಗ್ರಾಮ್ಯವೆಂದರೆ ಅನಾಗರಿಕ ಎಂಬ ಅರ್ಥದಲ್ಲಿ ಬಳಸುತ್ತಿದ್ದೇವೆ. ವಾಸ್ತವವಾಗಿ ನಮ್ಮ ಗ್ರಹಿಕೆಯ ಮಿತಿಯಿದು. "ಗ್ರಾಮ್ಯ" ಎಂದರೆ ದೇಸಿ ಎಂದೂ ನಾವು ಕರೆದಿದ್ದೇವೆ.

ಗ್ರಾಮ್ಯ ಮತ್ತು ಅರಣ್ಯದ ನಡುವಣ ಸಂಬಂಧವು ಇಲ್ಲಿ ಗಮನಾರ್ಹ. ಗ್ರಾಮ್ಯವಚನ ವೆಂದರೆ ಗ್ರಾಮದಲ್ಲಿ ವಾಸಿಸುವವರು ಆಡುವ ಭಾಷೆ. ಅಗ್ರಾಮ್ಯವೆಂದರೆ ಪುರಜನರ ಮಾತು. ಇನ್ನೊಂದು ಅರಣ್ಯವೆಂದರೆ ಅರಣ್ಯದಲ್ಲಿದ್ದು ನಡೆಸುವ ಅಧ್ಯಯನ ಕ್ರಮಗಳು. ಹಳೆಗನ್ನಡದಲ್ಲಿ "ಗ್ರಾಮ್ಯ ಜನರು" 'ದೇಸಿಗರು' ಎಂದು ಬಳಕೆಯಾಗಿದೆ.

*ವಿವರಗಳಿಗೆ ನೋಡಿ: ದೇಸಿ; ಮಾರ್ಗ–ದೇಸಿ*

*ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦ ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ*

**೩೧೬. ಗ್ರೈವೇಯಕ**

ಚಾವುಂಡರಾಯ ಪುರಾಣದಲ್ಲಿ ಬರುತ್ತದೆ. ಸುದರ್ಶನ, ಅಮೋಘ, ಸುಪ್ರಬುದ್ಧ, ಯಶೋಧರ, ಸುಭದ್ರ, ಸುವಿಶಾಳ, ಸುಮನಸ, ಸೌಮನಸ, ಪ್ರೀತಿಂಕರ ಎಂಬ ಒಂಬತ್ತು ಗ್ರೈವೇಯಕಗಳು.

(ಚಾವುಂಡರಾಯ ಪುರಾಣ – ಮಘವನೆಂಬ ಮೂರನೆಯ ಚಕ್ರವರ್ತಿಯ ಚರಿತಂ ಪುಟ. ೧೬೦)

೩೧೭. ಚಂಡಿಕಾದೇವಿ

*"..............ಮಾತೃಮಂಡಳಮಮಂ ಪೂಜಿಸುವಳ್"*

*"ಚಂಡಿಕಾಭವನ............(ಕಾದಂಬರಿ ೨-೬೫; ೬೬)*

ನಾಗವವರ್ಮನ 'ಕಾದಂಬರಿ'ಯಲ್ಲಿ ಚಂಡಿಕಾದೇವಿಯ ವಿಚಾರವು ಬರುತ್ತದೆ. (೨-೬೫) ಮತ್ತು ಸಪ್ತಮಾತೃಕೆಯರ (ಬ್ರಾಹ್ಮೀ, ಮಾಹೇಶ್ವರಿ ಮೊದಲಾದವರು) ವಿಚಾರವೂ ಬರುತ್ತದೆ. (ಅದೇ ೨-೫೭) ಇವೆಲ್ಲವೂ ದುರ್ಗೆಯ ಬೇರೆ ಬೇರೆ ನಾಮರೂಪಗಳಾಗಿ: ಫಲವತ್ತತೆಯನ್ನು ಕರುಣಿಸುವ ಮಾತೃ ದೇವತೆಗಳಾಗಿವೆ.

ಚಟ್ಟೋಪಾಧ್ಯಾಯರು ಹೇಳುವಂತೆ, ಮೊದಲಿಗೆ ಈ ದೇವತೆಗಳ ಅರ್ಚನೆಯು ಆದಿವಾಸಿಗಳಲ್ಲಿ ಹೆಚ್ಚಿದ್ದು, ನಂತರ ಆಚರಣೆಯ ಸ್ವರೂಪವನ್ನು ಬದಲಾವಣೆಯಾಗಿರ ಬೇಕು. ಮಾತೃತ್ವದ ಬಗೆಗಿನ ಗೌರವವೇ ಈ ಆರಾಧನೆಯ ಮೂಲಗುಣವಾಗಿದೆ. ಸಮೂಹವೊಂದರ ನಂಬಿಕೆಯು ಈ ರೀತಿಯಲ್ಲಿ ಮೂರ್ತರೂಪವನ್ನು ತಳೆದಿರಬೇಕು. (ಅದೇ. ಪುಟ. ೨೬೬)

ಈ ಕೃತಿಯಲ್ಲಿ ಚಂಡಿಕಾ ದೇವಾಲಯದ ವರ್ಣನೆಯು ಬಂದಿದ್ದು ಅದರ ದ್ರಾವಿಡ ಉಪಾಸಕರ ವರ್ಣನೆಯೂ ಬರುತ್ತದೆ. ಅವರು ಮುದುಕರ ಹೆಂಡತಿಯರಾದ ತರುಣಿಯರನ್ನು ಕಾಮಿಸುವ ಚಟವನ್ನು ಇಟ್ಟುಕೊಂಡಿದ್ದಳು. ಇಲ್ಲಿ 'ಇದದ್ರಮಿಳ ಧಾರ್ಮಿಕ ಜನಂಗಳಿಂ' ಎಂದಿದೆ. ನಿಡುಧೂಪ ಧೂಮ, ಮಂಡಲಗಳು, ರಕ್ತೋತ್ಪಲ ಪ್ರತಿಮ ನೇತ್ರ, ಕರಾಳವಾದ ತ್ರಿಭಂಗಿ, ಮಾಕಾಳದೇವನ ಅಭಿಸಾರಿಕೆ ಮುಂತಾದ ಪದಗಳನ್ನು ನಾಗವರ್ಮನು ಬಳಸುತ್ತಾನೆ. (ಅದೇ ೮-೩, ೫)

ಈ ಎಲ್ಲಾ ವರ್ಣನೆಗಳು ವಿಚಿತ್ರ ಗ್ರಾಮದೇವತೆಯೊಂದರ ಸೂಚನೆಯನ್ನು ಕೊಡುತ್ತವೆ. ಇದು ಕಾಪಾಲಿಕ ಅಥವಾ ಭೈರವ ಆರಾಧನೆಯ ಸಂಸ್ಕೃತಿಯನ್ನು ಸಂಕೇತಿಸುತ್ತದೆ.

'ಪ್ರಕೃತಿ ತತ್ವವನ್ನು ಕೆಂಪು ಬಣ್ಣದಿಂದ ನಿರ್ದೇಶಿಸುವುದು ಹಳೆಯ ಪದ್ಧತಿ ದೇವಿಯ ಮೈ ಬಣ್ಣ, ಉಡುಗೆ, ಅಲಂಕರಣ, ಪ್ರಿಯವಾದ ಹೂಗಳು ಎಲ್ಲವೂ ಕೆಂಪು ಬಣ್ಣವೇ. ಮೊಹೆಂಜೋದಾರೋವಿನಲ್ಲಿ ದೊರೆತಿರುವ ದೇವಿಯ ಮೃಣ್ಮಯ ಪುತ್ಥಳಿಗಳಿಗೆ ಕೆಂಪು ಬಣ್ಣ ಬಳಿದಿರುವುದನ್ನು ಕಾಣಬಹುದು. ಈಗಲೂ ಕುಂಕುಮ ಕೆಂಪು ದಾಸವಾಳ, ರಕ್ತವಸ್ತ್ರ, ರಕ್ತಫಲ ಮೊದಲಾದವು ದೇವಿಗೆ ಪ್ರಿಯವಾದುದೆಂದೇ ಕಲ್ಪನೆಯಿದೆ' (ರಾಮಚಂದ್ರರಾವ್ ಎಸ್.ಕೆ. ೧೯೮೧, ಪು.೭೯) ಕೃತಿಯಲ್ಲಿ ಚಂಡಿಕಾದೇವಿಯನ್ನು ದ್ರಮಿಳ ಜನರು ಅರ್ಚಿಸುತ್ತಿದ್ದರೆಂದು ತಿಳಿದುಬರುತ್ತದೆ. ತಾಂತ್ರಿಕ ಆರಾಧನೆಯ ಸ್ವರೂಪವೇ ಇಲ್ಲಿ ಮುಖ್ಯವಾಗಿದ್ದು, ಇದನ್ನು ನಿರಾಕರಣೆಯ ಧ್ವನಿಯಲ್ಲಿ ಹೇಳಲಾಗಿದೆ. ನಾಗವರ್ಮನು ನಿರಾಕರಿಸಿ ಬರೆದಿರುವುದು ಅವನ ಧಾರ್ಮಿಕ ನಿಲುವನ್ನು ಸೂಚಿಸುತ್ತದೆ.

೩೧೮. ಚಂದ್ರ

*ಕೇಳಿಸುಷಮ್ನೆಯೆಂಬ ಕರದಿಂಗಡ ಚಂದ್ರಕಲಾ ಕಲಾಪಮಂ*
*ಕಾಳದೊಳಂಶುಮಾಲಿ ತೆಗೆದೀಂಟುವನೆಂಬುದ ಸತ್ಯಮಾ ಪ್ರಭಾ*
*ಜಾಲಕಮೆಲ್ಲಮೀತನುವಿನಲ್ ಪುಗುತಿರ್ಪುದು ತಪ್ಪುದಲ್ಲದಿಂ*
*ತೀ ಲಲಿತಾಂಗಮೀ ತಪದೊಳಿಂತಿರೆ ಕಾಂತಿಯನಪ್ಪು ಕೆಯ್ಗುಮೇ*
*(ಕರ್ಣಾಟಕ ಕಾದಂಬರಿ ೫-೩೨)*

ಸೂರ್ಯನ ಕೃಷ್ಣಪಕ್ಷದಲ್ಲಿ ಸುಷಮ್ನೆಯೆಂಬ ಹೆಸರುಳ್ಳ ತನ್ನ ಕಿರಣದಿಂದ ಚಂದ್ರನ ಕಲೆಗಳನ್ನು ಕುಡಿಯುತ್ತಾನೆ ಎಂದು ಪುರಾಣಗಳಲ್ಲಿ ಹೇಳಿದೆಯಲ್ಲವೆ? ಅದು ಸುಳ್ಳು. ನಾನು ಹೇಳುವುದನ್ನು ಕೇಳಿ. ಆ ಚಂದ್ರನ ಕಾಂತಿಗಳೆಲ್ಲವೂ ಈ ಮುನಿಕುಮಾರನ ಶರೀರದಲ್ಲಿ ಇದು ಖಂಡಿತ. ಹಾಗಿಲ್ಲದಿದ್ದರೆ "ಈ ಸುಂದರವಾದ ಶರೀರವು ತಪಸ್ಸು ಮಾಡುವ ಈ ಸಮಯದಲ್ಲಿಯೂ ಇಷ್ಟು ಕಾಂತಿಯನ್ನು ಹೊಂದುತ್ತದೆಯೆ?" ಎಂದು ಕರ್ಣಾಟ ಕಾದಂಬರಿಯಲ್ಲಿ ಬರುತ್ತದೆ. ಚಂದ್ರನ ಕುರಿತಾಗಿ ಎರಡು ಅಂಶಗಳು ಪ್ರಸ್ತಾವಿತಗೊಂಡಿವೆ. ಅವು ಗಮನಾರ್ಹ. ಒಂದು ಸೂರ್ಯನು ಕೃಷ್ಣಪಕ್ಷದಲ್ಲಿ ಚಂದ್ರನ ಕಲೆಗಳನ್ನು ಕುಡಿಯುತ್ತಾನೆ. ಎರಡನೆಯದು ಚಂದ್ರನ ಕಾಂತಿಯು ಮುನಿಕುಮಾರ ಮುಖದಲ್ಲಿದೆ ಎಂದು ವರ್ಣಿಸಿರುವುದು ಪುರುಷರನ್ನು ವರ್ಣಿಸುವಾಗ ಸೂರ್ಯತೇಜ; ಬ್ರಹ್ಮತೇಜವೆಂದು ಬಳಕೆಯಾಗುವುದು ಸಾಮಾನ್ಯ. ಆದರೆ ಚಂದ್ರನ ಕಾಂತಿಯೆಂದು ಹೇಳಲಾಗಿದೆ. ಎರಡನೆಯದಾಗಿ ಸೂರ್ಯನು ಚಂದ್ರನನ್ನು ಹಿಡಿಯುತ್ತಾನೆ. ಇದು ಗತಾನುಗತಿಕವಾಗಿ ಬಂದಿರುವ ನಂಬಿಕೆ. ಸೂರ್ಯ ಮತ್ತು ಚಂದ್ರರ ಸಂಬಂಧವು ವಿಶೇಷವಾದುದು. ಚಂದ್ರನನ್ನು ಉಷೆಗೂ ಹೋಲಿಸಲಾಗಿದೆ. ಹಾಗೆಯೇ ಚಂದ್ರನು ಸೂರ್ಯನ ಹೆಂಡತಿಯೆಂದೂ ಋಗ್ವೇದದಲ್ಲಿ ವರ್ಣಿಸಲಾಗಿದೆ.

*ವಿವರಗಳಿಗೆ ನೋಡಿ: ಎಚ್.ಪಿ. ವೆಂಕಟರಾವ್ ೧೯೫೨*
*ಋಗ್ವೇದ ಸಂಹಿತಾ ಸಂಪುಟ. ೧*

೩೧೯. ಚಂದ್ರವಂಶ

*ಅತ್ರಿಯ ಪಿರಿಯ ಮಗಂಭುವ*
*ನತ್ರಯ ಸಂಗೀತ ಕೀರ್ತಿ ಸೋಮಂ*
*ಸಕಲ ಕ್ಷತ್ರ ಕುಲ ಪೂಜನಮಳಚ*
*ರಿತ್ರಂ ಪ್ರೋದ್ದಾಮ ಸೋಮವಂಶ ಲಲಾಮ (ಪಂಪ ಭಾರತ ೧-೬೧)*

ಪಂಪನು ಚಂದ್ರವಂಶದ ಹಿರಿಮೆಯನ್ನು ಕೊಂಡಾಡಿದ್ದಾನೆ.

ಹಾವಿನ ವಿಚಾರವಾಗಿ – ನಾಗಪ್ರತಿಮೆಯನ್ನು ಕುರಿತು – ಪಡೆದ ವಿವರಣೆಯಲ್ಲಿ ಚಂದ್ರವಂಶ, ಚಂದ್ರಾದೇವಿಯರು – ಹಾಲಮ್ಮ ಮಾಳಮ್ಮ ಇವರೆಲ್ಲ ಮೂಲತಃ ಸರ್ಪರೂಪ ದೇವಿಯರೇ. ಈ ದೇವಿಯರ ದೇಗುಲಗಳು ದೇವಸ್ಥಾನ : ಕ್ಷೇತ್ರದ

ಸಂದರ್ಭದಿಂದ 'ನಾಗ' ದರ್ಶನವು ತಪ್ಪದೆ ಆಗುತ್ತದೆ. ಈ ಕಾರಣದಿಂದಲೇ ಹುಣ್ಣಿಮೆಗಳೊಡನೆ ಸಂಬದ್ಧ ಚಂದ್ರಾದೇವಿಯರನ್ನು ಇನ್ನೂ ಸ್ಮರಿಸಿಕೊಳ್ಳುವುದು ಅವಶ್ಯವೆನಿಸಿದೆ. ನಾಗನಾಮಕ್ಕೆ ಸಾಕ್ಷಾತ್ತಾಗಿ ಸಂಬಂಧಿಸಿದ ಸ್ಥಳನಾಮಗಳ ಸಂಖ್ಯೆ ವಿಶೇಷವಿರಲಿಕ್ಕಿಲ್ಲ. ಆದರೆ, ದೇವರ ಹಾವು ಇಲ್ಲದೆ ಇರುವ ಪ್ರಾಚೀನ ದೇವತಾಮಂದಿರ, ಕ್ಷೇತ್ರ-ತೀರ್ಥ ಒಂದೂ ಇಲ್ಲ. ಪುರಾತನ ದೇಗುಲದ ಲಕ್ಷಣವೆಂದರೆ ಗುಹೆಯಂತಿರುವ ಗರ್ಭಗುಡಿ: ಆ ಕತ್ತಲ ಗವಿಯಲ್ಲಿ ಒಂದು 'ಸ್ವಯಂಭೂ' ಗುಂಡೋ - ಕಲ್ಲೋ ಆ ದೇವತಾ ಪ್ರತಿಮೆಯಾಗಿ ಕಲ್ಪಿಸಲಾದುದನ್ನು ಕಾಣಲು ದೊರೆಯುತ್ತದೆ. ಆದರೆ ಈ ಸ್ಥಾವರ ಭೌತ ಪ್ರತಿಮಾ ಪೂಜೆ ಒಂದು ಬಗೆಯಲ್ಲಿ ಅರ್ವಾಚೀನವೇ ಸರಿ ಎಂದು ಶಂಬಾಜೋಶಿ ಹೇಳುತ್ತಾರೆ.

ಪಾಂಡವರು ಚಂದ್ರವಂಶದವರು ಎಂಬುದು ಗಮನೀಯ ಅಂಶವಾಗಿದೆ. ಚಂದ್ರವಂಶ; ಸೂರ್ಯವಂಶ; ಯದುವಂಶಗಳು ಪುರಾಣ ಪ್ರಸಿದ್ಧ ವಂಶಗಳು.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೪ ಪುಟ. ೧೬೧.*

**೩.೨೦. ಚತುರೋಪಾಯಗಳು**

ಸಾಮ, ದಾನ, ಭೇದ, ದಂಡಗಳು **ಚತುರೋಪಾಯ**ಗಳಾಗಿವೆ.

(ಶಾಂತಿಪುರಾಣಂ ೩-೯೧)

ಸಾಮಪ್ರಿಯ ಜನರಿಗೆ ಹೇಳಿಮಾಡಿಸಿದ ರೀತಿ. ಅಂದರೆ ಪ್ರಿಯ ಜನರನ್ನು ಸಾವಧಾನದಿಂದ ಸರಿದಾರಿಗೆ ತರಬೇಕು. ದುರ್ಬಲನಿಗೆ ದಾನವೇ ಸೂಕ್ತ. ಮಂತ್ರಿಯೋ, ಪುರೋಹಿತನೋ ರಾಜನಲ್ಲಿ ಅತೃಪ್ತಿ ಹೊಂದಿದರೆ ಅಲ್ಲಿ ಭೇದೋಪಾಯವು ಸರಿ. ಪೌರುಷ ಹೀನನಿಗೆ ದಂಡ ಉಪಾಯವು ಉಪಯುಕ್ತ. ಇವು ನಾಲ್ಕು ಚತುರೋಪಾಯದ ಸ್ವರೂಪಗಳು ಎಂದು ಶಾಂತಿಪುರಾಣದಲ್ಲಿ ಬರುತ್ತದೆ.

(ಶಾಂತಿಪುರಾಣ ೩-೯೩ ವ)

ಕೌಟಿಲ್ಯನ ಅರ್ಥಶಾಸ್ತ್ರ, ಮನುಧರ್ಮಶಾಸ್ತ್ರ ಯಾಜ್ಞವಲ್ಕ್ಯಸ್ಮೃತಿ, ಕಾಮುಂಡಕೀಯ ನೀತಿಸಾರ ಮುಂತಾದ ಶಾಸ್ತ್ರ ಗ್ರಂಥಗಳಲ್ಲಿ ಮಾತ್ರವಲ್ಲ, ಮಹಾಭಾರತ, ಅಗ್ನಿಪುರಾಣದಂತಹ ಪುರಾಣಗಳಲ್ಲೂ ಇದರ ಪ್ರಸ್ತಾಪವಿದೆ.

ಮಿಕ್ಕ ರಾಜರನ್ನು ತನ್ನ ಹಿತಾನುಸಾರ ಇಟ್ಟುಕೊಳ್ಳಲು ಭೂಪತಿಯಾದವನು ಮೊದಲು ಸಾಮವನ್ನು ಬಳಸಿ ನೋಡಬೇಕು. ಸಾಮವೆಂದರೆ ಒಳ್ಳೆಯ ಮಾತಿನ ಸಂಧಾನ. ಉಪಕಾರ ಸ್ಮರಣೆ, ಮೃದುವಚನ, ಸತ್ಕಾರ, ನಾನು ನಿನ್ನವನೆಂದು ಹಿತೈಷಿಯಂತೆ ಹೇಳುವಿಕೆ - ಇತ್ಯಾದಿ.

ಸಾಮಕ್ಕೆ ಬಗ್ಗದಿರುವಾಗ ಎರಡನೆಯ ಉಪಾಯ ಪ್ರಯೋಗಿಸಬೇಕು. ಸಾಧುಗಳಾಗಲಿ ಅಸಾಧುಗಳಾಗಲಿ ದಾನಕ್ಕೆ ಬಲಿಯುವುದು ಸಹಜ. ಹಿಂದೆ ವಶಪಡಿಸಿಕೊಂಡ ಧನದ ದಾನ ಅಥವಾ ಹೊಸದಾಗಿ ಧನ ಕನಕಗಳ ದಾನ, ಸವಲತ್ತು ದಾನಗಳಿರಬಹುದು.

ಇವೆರಡರಿಂದಲೂ ಸಾಧ್ಯವಾಗದಿದ್ದರೆ ಒಡಕನ್ನುಂಟುಮಾಡುವ ಭೇದೋಪಾಯವನ್ನು ತರಬೇಕು. ಇಬ್ಬರಲ್ಲಿ ಸ್ನೇಹ ತಪ್ಪಿಸಿ, ಕಲಹವುಂಟುಮಾಡುವುದು. ವೈಮನಸ್ಯ ತಿಳಿಸುವುದರಲ್ಲಿ ಕೆಲವೊಮ್ಮೆ ಕಾರ್ಯ ಸಾಧನೆಯಾಗುವುದಿದೆ.

ಈ ಮೂರಕ್ಕೂ ಬಗ್ಗದ ಸಂದರ್ಭದಲ್ಲಿ ವೈರಿಯನ್ನು ದಾರಿಗೆ ತರಲು ದಂಡೋಪಾಯವೇ ಗತಿ.

ದಂಡ=ದಂಡನೆ, ಶಿಕ್ಷೆ, ಕೊಲೆ, ಯುದ್ಧ, ಹಿಂಸೆಗಳನ್ನು ತಂದೊಡ್ಡುವುದು ಇತ್ಯಾದಿ. ದಂಡಿಸಲು ಯೋಗ್ಯನಾದವನಿಗೆ ಮೊದಲಿನ ಮೂರು ಉಪಾಯಗಳೂ ಪ್ರಯೋಜನಕ್ಕೆ ಬಾರವು.

### ೩.೨೧. ಚತುರ್ಗತಿ

*ಆ ಪುರಾಣಕ್ಕಂ ಲೋಕಾಕಾರಕಥನಮುಂ ದೇಶನಿವೇಶೋಪದೇಶಮುಂ ನಗರಸಂಪತ್ಪರಿವರ್ಣನಮುಂ ರಾಜ್ಯರಮಣೀಯತಾಖ್ಯಾನಮುಂ ತೀರ್ಥಮಹಿಮ ಸಮರ್ಥನಮುಂ* ***ಚತುರ್ಗತಿ****ಸ್ವರೂಪನಿರೂಪಣಮುಂ ತಪೋದಾನವಿಧಾನವರ್ಣನ ಮುಂ.....................(ಆದಿಪುರಾಣ ೧-೧೪ ವ)*

ದೇವಗತಿ, ನಾರಕಗತಿ, ಮನುಷ್ಯಗತಿ ಮತ್ತು ತಿರ್ಯಗ್ಗತಿ. ಎನ್ನುವುದು **ಚತುರ್ಗತಿ**ಗಳು.

ಪಂಪ ಚತುರ್ಗತಿ ನಿರೂಪಣೆಯೇ ಆದಿಪುರಾಣದಲ್ಲಿದೆ ಎಂದು ಹೇಳಿಕೊಂಡಿದ್ದಾನೆ. ಭಕ್ತಿಯಲ್ಲಿ ನಾಲ್ಕು ವಿಧ; ಪ್ರವಾಹ ಪುಷ್ಟಿ ಭಕ್ತಿ, ಮರ್ಯಾದ ಪುಷ್ಟಿ ಭಕ್ತಿ, ಪುಷ್ಟಿ ಪುಷ್ಟಿ ಭಕ್ತಿ, ಶುದ್ಧ ಪುಷ್ಟಿ ಭಕ್ತಿ.

ಚತುರ್ಗತಿ ಸ್ವರೂಪ ನಿರೂಪಣಮಂ ಎಂದರೆ ದೇವ, ಮಾನವ, ತಿರ್ಯಕ, ನಾರಕ ಎಂಬ ನಾಲ್ಕು ವಿಧವಾದ ಜನ್ಮಗಳ ಸ್ವರೂಪದ ನಿರೂಪಣೆ.

ಚತುರ್ಗತಿಯ ಪರಿಕಲ್ಪನೆಯು ಜೈನಧರ್ಮದ ವಿಶಿಷ್ಟ ಪರಿಕಲ್ಪನೆ. ದೇವಮಾನವ, ನಾರಕತಿರ್ಯಕ(ಜಂತು, ನಾರಕಗಳಲ್ಲಿ ಹುಟ್ಟುವುದು ಎಂದರೆ ನಮ್ಮ ನಮ್ಮ ಕರ್ಮಗಳ ಫಲವಾಗಿ. ಈ ದೃಷ್ಟಿಯಿಂದ ಹುಟ್ಟಿಗೂ ನಮ್ಮ ಜನ್ಮಕ್ಕೂ ಸಂಬಂಧವಿದೆ.

"ಏಕೇಂದ್ರಿಯ, ದ್ವೀಂದ್ರಿಯ, ತ್ರೀಂದಿಯ, ಚತುರಿಂದ್ರಿಯ, ಅಸಂಜ್ಞೆ ಪಂಚೇಂದ್ರಿಯ ಹಾಗೂ ಸಂಜ್ಞೇತಿರ್ಯಂಚ ಪಂಚೇಂದ್ರಿಯ. ಈ ಎಲ್ಲವುಗಳ ಗತಿಗೆ ತಿರ್ಯಂಚಗತಿ ಎನ್ನುತ್ತಾರೆ. ವಡ್ಡಾರಾಧನೆಯ ಸುಕುಮಾರಸ್ವಾಮಿ ಕಥೆಯಲ್ಲಿ ಬರುವ ವಾಯುಭೂತಿಯು "ಜಿನಧರ್ಮಮಂ ಪಟಿದ ಪಾಪದ ಫಲದಿಂದಂ ಏಳುಂ ದಿವಸದಿಂದೊಳಗೆ ಔದುಂಬರ ಕುಷ್ಠಮಾಗಿ ಪುಟಿತು ನಮೆದು ಸತ್ತು ಕೌಸಂಬಿಯೆಂಬ ಪೊಟಿಲೊಳ್ ಮಿಳಿಯ ಬಿದರ ಮೇಗೆಜಿ ಯಾಕಾಶದೊಳಾಡುವ ವಿದ್ಯಾಧರ ಲಂಗಿಗರ ಮನೆಯೊಳ್ ಪೆಣ್ಣತ್ತೆಯಾಗಿ ಪುಟ್ಟೆ ಪಿರಿಯವಪ್ಪ ಪೊಜೆಗಳಂ ಪೊತ್ತು ಪೋಗಿ ಬೆನ್ನೊಳ್ ನಾಳಿ ಬಿರ್ದ್ದು ಕೆಱಿಮೆಯಾಗಿ ಪುಟಿತು ನಮೆದು ಸತ್ತು ಮತ್ತು ಪೊಟಿಲೊಳ್ ಪೇಪಂದಿಯಾಗಿ ಪುಟ್ಟಿ ಸತ್ತು ಮತ್ತಾ ಮಗಧೆ... ಪೊಟಿಲಲ್ಲಿ ಪೆಣ್ಣಾಯಾಗಿ ಮಾದೆಗರ ಮನೆಯೊಳ್ ಪುಟ್ಟಿ ಸತ್ತು ಮತ್ತಮಾ

ಪೊಟಲೊಳ್ ಮಾದೆಗರ್ಗ್ಗೆ ಪ್ರಧಾನನಪ್ಪ ನೀಳನೆಂಬ ಮಾದೆಗಂಗಂ ಕೇಶಿಯೆಂಬ ಮಾದೆಗಿಗಂ ಮಗಳ್ ದುರೂಪೆ ದುರ್ವ್ವರ್ಣೆ ದುರ್ಗಂಧೆ ದುಸ್ವರೆ ಪುಟ್ಟುಂಗುರುಡಿ ಪೋಲತಿಯಾಗಿ ಹುಟ್ಟುತ್ತಾನೆ. ಗತಿಯೆಂದರೆ ಚಲನೆ ತಿರ್ಯಕ್ ಎಂದರೆ ಪಶುಪಕ್ಷಿ ಮುಂತಾದ ಪ್ರಾಣಿವರ್ಗ ಚಲಿಸುವ ಚಂತು ತಿರ್ಯಕ್ ಜಂತು, ತಿರುತಿರುಗಿ ಬೇರೆ ಬೇರೆ ಪ್ರಾಣಿಗಳಾಗಿ ಹುಟ್ಟುವುದು ತಿರ್ಯಕ್ ಗತಿಯಾಗುತ್ತದೆ." ಈ ವಿಷಯಗಳು ಆದಿಪುರಾಣಕ್ಕೆ ಹೊಸ ಪ್ರವೇಶಿಕೆಯಾಗಬಲ್ಲುದು.

*ವಿವರಗಳಿಗೆ ನೋಡಿ: ಮಿರ್ಜಿ ಅಣ್ಣಾರಾಯ ೨೦೦೬ ಮಿರ್ಜಿ ಅಣ್ಣಾರಾಯರ ಆಯ್ದ ಲೇಖನಗಳು ಮಹದೇವ ಪ್ರಭಾಕರ ಪೂಜಾರ ೧೯೭೬ ಜೈನಧರ್ಮದ ಪರಿಭಾಷೆ.*

**೩.೨೨. ಚತುರ್ಜ್ಞಾನ**

*'ಮಕ್ಕಳ್ವೆರಸು **ಚತುರ್ಜ್ಞಾನಧರಂ**............'ಎಂದು ಚಾವುಂಡರಾಯ ಪುರಾಣದಲ್ಲಿ ಬರುತ್ತದೆ.*

*(ಚಾವುಂಡರಾಯ ಪುರಾಣ ಸುಮತಿ ಪುರಾಣಂ ಪುಟ. ೧೧೧)*

ಚತುರ್ವಿಧಜ್ಞಾನವೆಂದರೆ ಮತಿ, ಶ್ರುತಿ, ಅವಧಿ, ಮನಃಪರ್ಯಗಳೆಂಬ ನಾಲ್ಕು ವಿಧದ ಜ್ಞಾನ. ಚತುರ್ಜ್ಞಾನಧರಂ ಎಂದರೆ ನಾಲ್ಕು ವಿಧದ ಜ್ಞಾನವನ್ನು ಪಡೆದವನು ಎಂದರ್ಥ.

ಜ್ಞಾನ, ದರ್ಶನ, ತಪ ಮತ್ತು ಚಾರಿತ್ರದಿಂದ ಈ ನಾಲ್ಕರ ಸಂಯೋಗವಾದ ಬಳಿಕ ಸಂಯಮ ಗುಣವು ಪ್ರಾಪ್ತಿಯಾಗುತ್ತದೆ. ಅದರಿಂದ ಮೋಕ್ಷವಾಗುತ್ತದೆಯೆಂದು ಜಿನಶಾಸನದಲ್ಲಿ ಹೇಳಿದೆ.

ಚಾರಿತ್ರದಿಂದ ನಿರ್ವಾಣವಾಗುತ್ತದೆ. ಚಾರಿತ್ರವು ಜ್ಞಾನ ಪೂರ್ವಕವಾಗಿ ಸತ್ಯಾರ್ಥವಾಗುತ್ತದೆ. ಅದರಂತೆ ಜ್ಞಾನವು ಸಮಕ್ಷಪೂರ್ವಕವಾಗಿ ಸಾರವಿದೆ. ಅನಂತರ ಜ್ಞಾನ–ಚಾರಿತ್ರಗಳು ಸಾರವಿವೆ. ಮೊದಲು ಜ್ಞಾನದಿಂದ ಪದಾರ್ಥಗಳನ್ನು ತಿಳಿಯುತ್ತಾರೆ. ಅದರಿಂದ ಸಮ್ಯಕ್ಷವು ಸಾರವಿದೆ. ಜ್ಞಾನ ಚಾರಿತ್ರಗಳ ಸಾರವಿದೆ. ಆದುದರಿಂದ ಜೈನಧರ್ಮವು ಸಮ್ಯಕ್ಷವನ್ನು ಬೋಧಿಸುತ್ತದೆ.

*ವಿವರಗಳಿಗೆ ನೋಡಿ: ಜಯಚಂದಭಾಬಡಾ ೨೦೧೦ ಅಷ್ಟಪಾಹುಡ ಪುಟ. ೩೨*

**೩.೨೩. ಚತುರ್ವಿಧ ಅಭಿನಯ**

*ಪ್ರಕಟಾಂಗಿಕವಾಚಿಕಸಾ*
*ತ್ತ್ವಿಕಮಾಹಾರ್ಯಂಗಳೆಂಬ **ನಾಲ್ಕಭಿನಯಮುಂ** ।*
*ಸಕಲಪರೀಷಹಮೆನೆ ರಂ*
*ಜಕಮಾದುವು ರಂಗಮಧ್ಯದೊಳ್ ಕೌಶಿಕನಾ ॥*

*(ಅಜಿತತೀರ್ಥಂಕರ ಪುರಾಣ ತಿಲಕ ೫–೯)*

ಆಂಗಿಕ, ವಾಚಿಕ, ಸಾತ್ವಿಕ, ಆಹಾರ್ಯಗಳೆಂಬ ನಾಲ್ಕು ರೀತಿ ಅಭಿನಯಗಳನ್ನು ರಂಜಿತವಾಗುವಂತೆಯೇ ರಂಗದ ಮಧ್ಯದಲ್ಲಿ ಅವಳು ಅಭಿನಯಿಸಿದಳು. ಆಂಗಿಕವನ್ನು ಅಂಗಾಭಿನಯವನ್ನು ಸೂಚಿಸುತ್ತದೆ. ವಾಚಿಕ ಅಭಿನಯವೆಂದರೆ ಅಭಿನಯಕ್ಕೆ ಅನುಸಾರವಾಗಿ ಮಾತುಗಳನ್ನಾಡುವುದು. ಆಹಾರ್ಯವೆನ್ನುವುದು ವಸ್ತ್ರವಿನ್ಯಾಸಗಳು.

**೩.೨೪. ಚರಕ-ಅಶ್ವಿನೀಮತ-ಸುಶ್ರುತ-ವಾಗ್ಭಟ ಸಂಹಿತೆಗಳು**

*ಶಾಲಿಹೋತ್ರಂ ಪಾಳಕಾಪ್ಯಂ ಹಾನಿತಂ* ***ಚರಕಮಶ್ವಿನೀಮತಂ ಬಾಲಹಂ ಸುಸ್ರುತಂಕ್ಷಾ****ರಪಾನೀಯಂ ಮೊದಲಾಗೊಡೆಯ ನರವೈದ್ಯಂಗಳುಂ ಜ್ಯೋತಿಷಂ ಮಂತ್ರವಾದಂ ಮೊದಲಾಗೊಡೆಯ ಶಾಸ್ತ್ರಂಗಳೆಲ್ಲಮಂ ನೆಱೆಯೆ ಕಲ್ಪಿಸಿ ಯೋಗ್ಯರ್ ಮಾಡಿದೊಡವರ್-ನಿಮ್ಮ ಪ್ರಸಾದದಿಂದೆಲ್ಲಾ ಶಾಸ್ತ್ರಮಂ ಕಲ್ತು ಪಂಡಿತರೆಮಾದೆ ಮೆಂದಾದಮಾನುಮೊಸೆದುಮಿನ್ನೆಮ್ಮ ನಾಡ್ಗೆ ಪೋದಪೆಮೆಂದೋಜರ್ಗ್ಗೆಱಗಿ.....*

*(ಡಿ.ಎಲ್.ಎನ್ ೨೦೦೯ ಪುಟ. ೪೮)*

ಆಯುರ್ವೇದ ವಿಜ್ಞಾನಕ್ಕೆ ಸಂಬಂಧಿಸಿದಂತೆ ಬಹುಮುಖ್ಯ ಗ್ರಂಥಗಳು ಸುಶ್ರುತ ಮತ್ತು ಚರಕ ಸಂಹಿತೆಗಳು. ದೇಹದ ಆರೋಗ್ಯಕ್ಕೆ ಸಂಬಂಧಿಸಿದಂತೆ ಈ ಎರಡೂ ಗ್ರಂಥಗಳು ವಿವರಿಸುತ್ತವೆ. ದೇಹದ ಆರೋಗ್ಯ ಕಾಪಾಡಲು, ರೋಗ ಬಂದರೆ ಅವುಗಳನ್ನು ಬಗೆಹರಿಸಲು ಅನುಸರಿಸಬೇಕಾದ ನಿಯಮಗಳನ್ನು ಈ ಗ್ರಂಥಗಳು ಹೇಳುತ್ತವೆ. ಚರಕ, ಸುಶ್ರುತ ಮತ್ತು ವಾಗ್ಭಟ ಸಂಹಿತೆಗಳು ಆಯುರ್ವೇದದ ಮೂರು ಮುಖ್ಯ ಗ್ರಂಥಗಳು. ಈ ಗ್ರಂಥಗಳನ್ನು 'ಬೃಹತ್ತ್ರಯೀ' ಎಂದು ಕರೆಯುತ್ತಾರೆ. ಸುಶ್ರುತ ಸಂಹಿತೆಯನ್ನು ವಿಶ್ವಾಮಿತ್ರ ಋಷಿಗಳ ಮಗನಾದ ಸುಶ್ರುತ ಬರೆದರು. ಸುಶ್ರುತ ಆಯುರ್ವೇದ ವಿದ್ಯೆಯನ್ನು ಶ್ರೀ ಧನ್ವಂತರಿಯಿಂದ ಕಲಿತನು. ಚರಕ; ಸುಶ್ರುತ, ನರವೈದ್ಯ, ಮಂತ್ರ – ಮೊದಲಾದವುಗಳು ಶಾಸ್ತ್ರಭಾಗಗಳಾಗಿದ್ದವು ಎಂಬುದು ಗಮನಾರ್ಹ. ಈ ಸಂಹಿತೆಗಳು ಕೂಡ ವಿದ್ಯೆಯ ಒಂದು ಭಾಗವಾಗಿತ್ತು

ಅಶ್ವಿನೀಮತವೆಂದರೆ ಅಶ್ವಿನಿದೇವತೆಗಳ ಮತವೆಂದು ಸೂಚಿತವಾಗುತ್ತದೆ. ಅಶ್ವಿನಿದೇವತೆಗಳು ಚ್ಯವನನಿಗೆ ಆಯ-ಆರೋಗ್ಯವನ್ನು ಕೊಟ್ಟರು. ಯೌವನವನ್ನು ಅವನು ಮರಳಿ ಪಡೆಯುವಂತಾಯಿತು. ಅಂದಿನಿಂದ 'ಅಶ್ವಿನೀ ಮಂತ್ರ'ವೆಂಬುದು ಚಾಲ್ತಿಗೆ ಬಂತೆಂದು ಕತೆಯಿದೆ.

ಆದರೆ ಭಾರತೀಯರು ವೈದ್ಯ, ಸಸ್ಯಶಾಸ್ತ್ರ ಮತ್ತು ರಸಾಯನ ಶಾಸ್ತ್ರಗಳಲ್ಲಿ ಗ್ರೀಕರಿಂದ ಮುಖ್ಯವಾದುದೇನನ್ನೂ ಕಲಿಯಲಿಲ್ಲ. ಈ ಮೂರು ಶಾಸ್ತ್ರಗಳನ್ನೂ ಕುರಿತು ಚರಕ ಮತ್ತು ಸುಶ್ರುತರು ಗ್ರಂಥ ರಚನೆ ಮಾಡಿದ್ದಾರೆ. ಚರಕ ಸಂಹಿತೆಯು ನೂರಾರು ಗಿಡಮೂಲಿಕೆಗಳ ಹೆಸರುಗಳನ್ನೂ, ಅವುಗಳಿಂದ ರೋಗಿಗಳಿಗೆ ಚಿಕಿತ್ಸೆ ಮಾಡಲು ತಯಾರಿಸಬಹುದಾದ ಮದ್ದುಗಳನ್ನೂ ವಿವರಿಸಿದೆ. ವಿವಿಧ ಗಿಡಮೂಲಿಕೆಗಳ ಚೂರ್ಣಗಳು ಮತ್ತು ಮಿಶ್ರಣಗಳನ್ನು ತಯಾರಿಸಲು ನಮೂದಿಸಿರುವ ಪ್ರಕ್ರಿಯೆಗಳು ಪ್ರಾಚೀನ

ಭಾರತೀಯರಿಗೆ ರಸಾಯನ ಶಾಸ್ತ್ರದಲ್ಲಿದ್ದ ಗಹನವಾದ ತಿಳಿವಳಿಕೆಯ ಪರಿಚಯ ನೀಡುತ್ತವೆ. ಪ್ರಾಚೀನ ಭಾರತೀಯ ವೈದ್ಯರು ರೋಗ ನಿವಾರಣೆಗೆ ಮುಖ್ಯವಾಗಿ ಸಸ್ಯಗಳನ್ನೇ ನಂಬಿದ್ದರು. ಸಂಸ್ಕೃತದಲ್ಲಿ ಸಸ್ಯಗಳನ್ನು 'ಓಷಧಿ' ಎಂದು ಕರೆಯುತ್ತಾರೆ. ಅದರಿಂದ 'ರೋಗ ನಿವಾರಕ ಮದ್ದು ಔಷಧ' ಎಂಬ ಹೆಸರನ್ನು ಪಡೆದಿದೆ.

*ವಿವರಗಳಿಗೆ ನೋಡಿ: ಎನ್.ಎಲ್. ಭಟ್ಟಾಚಾರ್ಯ(ಮೂಲ) ೧೯೭೩ ಸುಶ್ರುತ ಸಂಹಿತಾ*
*ಆರ್.ಎಸ್. ಶರ್ಮ ೨೦೦೭ ಪ್ರಾಚೀನ ಭಾರತ ಪುಟ. ೧೬೪–೧೬೫.*
*ವೆಂಕಟರಾವ್ ಎಚ್.ಪಿ. (ಅನು) ೧೯೪೯ ಋಗ್ವೇದ ಸಂಹಿತಾ (ಭಾಗ–೧೮)*

### ೩.೨೫. ಚರಿತ

*ಬಗೆಯೊಳ್ಪೊಣ್ಮೆ ದಯಾರಸಂ **ಚರಿತ**ದೊಳ್ಪೆಗಣ್ಮೆ ಚಾರಿತ್ರಮಾ*
*ವಗಮಾವಶ್ಯಕದೊಳ್ತಗುಳ್ದು ಪಲವುಂ ಶೀಲಂಗಳಂ ತಾಳ್ದಿ ದಂ ।*
*ದುಗವೆಂದುಂ ತಮಗಾಗದಂತೆಸಗುವರ್ಸರ್ವೋತ್ತಮರ್ಸರ್ವಸಾ*
*ಧುಗಳೋರಂತೆ ಕಳಲ್ಚುಗೆಮ್ಮ ಮನದಿಂ ದುರ್ಮೋಹಸಂದೋಹಮಂ ॥*
*(ಆದಿಪುರಾಣ ೧–೫)*

ಚರಿತ ಎಂದರೆ ಆಚರಣೆ ಎಂದು ಅರ್ಥ. ತನ್ನ ಕಾವ್ಯದ ಕುರಿತು ಹೇಳುವಾಗ ಪಂಪ ಪ್ರಥಮ ಆಶ್ವಾಸದಲ್ಲಿ ದಯಾ ರಸ ಚರಿತಂ ಎಂದು ಹೇಳುತ್ತಾನೆ. ದಯಾರಸದ ಚರಿತೆ ಎನ್ನುವುದು ಇಲ್ಲಿ ಮುಖ್ಯ. ಜೈನರಲ್ಲಿ ದಯೆ ಎನ್ನುವುದು ಮುಖ್ಯ ಗುಣವಾಗಿದೆ. ಚರಿತೆಯೆಂದರೆ ನಾವು ಇತಿಹಾಸ ಕಥನವೆಂದೂ ಅರ್ಥವಿಸಿಕೊಳ್ಳಬಹುದು. ಸಂಸ್ಕೃತದಲ್ಲಿ ಚರಿತ್ರೆಯೆಂದರೆ ವೃತ್ತಾಂತ, ಚಾರಿತ್ರ್ಯವೆಂದರೆ ಒಳ್ಳೆಯ ನಡತೆ, ಪ್ರಾಚೀನ ಘಟನೆಗಳನ್ನು ಹೇಳುವ ಮಹಾಭಾರತ ಮೊದಲಾದ ಗ್ರಂಥಗಳು ಚರಿತ್ರೆಯೇ. ಇತಿಹಾಸವಾದವೆಂದರೆ ಪೂರ್ವದಲ್ಲಿ ನಡೆದ ಕಥೆ, ಆಖ್ಯಾಯಿಕ. ಚಾರಿತ್ರವೆಂದರೆ ಗುಣ–ನಡತೆ. ಇಲ್ಲಿಯೇ ಪಂಪ ಹಲವು ಶೀಲದ ಬಗ್ಗೆ ಹೇಳುತ್ತಾನೆ. ಶೀಲವೆನ್ನುವುದು ನೈತಿಕವ್ಯಾಖ್ಯೆಗೆ ಸಂಬಂಧಿಸಿದುದು. ಪಂಪನ ಪ್ರಕಾರ ಶೀಲವೆಂಬುದು ಒಂದೇ ಅಲ್ಲ. ಅದು ಲೌಕಿಕ ಆಗಮಿಕ ಎರಡಕ್ಕೂ ಸಂಬಂಧಪಟ್ಟಿದೆ. ಮೂರನೆಯದಾಗಿ ಪಂಪನು ಹೇಳುವುದು ದುರ್ಮೋಹದ ಬಗ್ಗೆ. ಮೋಹವು ವಾಸ್ತವವಾಗಿ ಜೈನಧರ್ಮದಲ್ಲಿ ದುರ್ಮೋಹ ವಾಗಿರುವುದು. ಮೋಹ–ಅವಿದ್ಯೆ, ಅಜ್ಞಾನ, ಭ್ರಾಂತಿ. ಇಲ್ಲಿ ಕೆಟ್ಟ ಭ್ರಾಂತಿ, ಚಂಚಲತೆ ಎಂಬರ್ಥದಲ್ಲಿ ಪ್ರಯೋಗವಾಗಿದೆ.

ಚರಿತಕ್ಕೂ ಚರಿತ್ರೆಗೂ ಇರುವ ಸಂಬಂಧಾಂತರಗಳು ಹೀಗಿವೆ:

"ಈ ರಾಜನು ಮೊದಲೋ ಆ ರಾಜನು ಮೊದಲೋ ಎಂಬುದು ಅನಗತ್ಯದ ಜಿಜ್ಞಾಸೆ. ಆದರೆ ಕಬ್ಬಿಣದ ಬಳಕೆ ಈ ರಾಜನ ಕಾಲದಲ್ಲಿ ಮೊದಲಾಯಿತೋ ಅಥವಾ ಇನ್ನೊಬ್ಬ ರಾಜನ ಕಾಲದಲ್ಲಿ ಮೊದಲಾಯಿತೋ ಎಂಬಂತಹ ಪ್ರಶ್ನೆ ವಿಶಿಷ್ಟವಾಗಿ ಪ್ರಮುಖವಾದ ಪ್ರಶ್ನೆ. ಅಂತಹ ಸಂದರ್ಭಗಳಲ್ಲಿ ಮಾತ್ರ ಅವರಿಬ್ಬರಲ್ಲಿ ಯಾರು

ಮೊದಲಿನವರು ಎಂಬುದರ ನಿರ್ಣಯ ಮುಖ್ಯವಾಗುತ್ತದೆ" ಎಂದೆನ್ನುತ್ತಾರೆ. ಹಾಗಾದರೆ ಚರಿತ್ರೆ ಎಂಬುದನ್ನು ಹೇಗೆ ನಿರ್ವಚಿಸಿಕೊಳ್ಳಬೇಕು ಎಂಬ ಪ್ರಶ್ನೆಗೆ 'ಉತ್ಪಾದನಾ ಶಕ್ತಿಗಳು ಹಾಗೂ ಉತ್ಪಾದನಾ ಸಂಬಂಧಗಳಲ್ಲಿ ಕ್ರಮಾಗತವಾಗಿ ಆಗುವ ಪರಿವರ್ತನೆಗಳನ್ನು ಕಾಲಾನುಕ್ರಮದಲ್ಲಿ ವಿವರಿಸುವುದೇ ಚರಿತ್ರೆ' ಎಂದು ಕೊಸಾಂಬಿಯವರು ಖಚಿತವಾಗಿ ಉತ್ತರ ಹೇಳುತ್ತಾರೆ. ಸಾಮಾಯಿಕ, ಛೇದೋಪಸ್ಥಾಪನೆ, ಪರಿಹಾರ ಶುದ್ಧಿ, ಸೂಕ್ಷ್ಮ ಸಂಪ್ರದಾಯ ಯಥಾಖ್ಯಾತ ಚಾರಿತ್ರ ಎನಿಸಿಕೊಳ್ಳುತ್ತದೆ. (ಆದಿಪುರಾಣ ೧೦-೬೩ವ)

*ವಿವರಗಳಿಗೆ ನೋಡಿ: ಡಿ. ಡಿ. ಕೊಸಾಂಬಿ ೧೯೮೮ ಪ್ರಾಚೀನ ಭಾರತದಲ್ಲಿ ಚರಿತ್ರೆ ಪುಟ. ೧೫.*

**೩೨೬. ಚಳಮತಿ**

*ಚಳಮತಿಯಾದೆ ನೀಂ ಜಡಧಿಸಂಭವೆಯಪ್ಪುದಜೆಂ ಸರೋಜಸಂ ।*
*ಕುಳರಜದಿಂದೆ ನೀಂ ಪೊರೆದು ರಾಜಸದೊಳ್ ನೆಲಸಿರ್ಪೆ ಗೋವುಗಾ ॥*
*ದಳವಟಿದಿರ್ದ ಕೃಷ್ಣನೊಡನಿರ್ದುಜೆಂದಮೆ ಗೋವಿಯಾದೆಯ ।*
*ಗ್ಗಳದ ವಿವೇಕಮಿಲ್ಲ ನಿನಗೆತ್ತಜಿವಾ ಪುರುಷಾಂತರಂಗಳಾ ॥*

*(ಸಾಹಸ ಭೀಮ ವಿಜಯ ೯-೫)*

ಲಕ್ಷ್ಮಿಯ ಚಂಚಲತೆಯನ್ನು ಇಲ್ಲಿ ಹೇಳಲಾಗಿದೆ. ವಿಷ್ಣು ಆಜ್ಞೆ ಮಾಡಿರುವುದರಿಂದ ಹೋಗುವೆನೆಂಬ ಲಕ್ಷ್ಮಿಯ ಮಾತನ್ನು ಕೇಳಿ ಅಶ್ವತ್ಥಾಮನು ಮುಗುಳ್ನಕ್ಕು ಹೀಗೆ ನುಡಿದನು. "ಸಮುದ್ರದಲ್ಲಿ ಹುಟ್ಟಿದ್ದರಿಂದ ನೀನು ಚಂಚಲಬುದ್ಧಿಯವಳಾದೆ; ಕಮಲವನದ 'ರಜ' (ಧೂಳು) ಲೇಪದಿಂದ ನಿನಗೆ ರಾಜಸಗುಣವುಂಟಾಯಿತು; ದನಗಳನ್ನು ಕಾದು ಯೋಗ್ಯತೆಯನ್ನು ಕಳೆದುಕೊಂಡ ಕೃಷ್ಣನ ಸಹವಾಸದಿಂದ ನೀನು ಗೊಲ್ಲತಿಯಾದೆ. ಹೆಚ್ಚಿನ ವಿವೇಕವಿಲ್ಲ ನಿನಗೆ. ಪುರುಷರ ತಾರತಮ್ಯವನ್ನು ನೀನೇನು ಬಲ್ಲೆ ? ಎಂದು ಸಾಹಸಭೀಮ ವಿಜಯದಲ್ಲಿ ಬರುತ್ತದೆ. ಲಕ್ಷ್ಮಿಯನ್ನು ಈಗಲೂ ಚಂಚಲೆಯೆಂದು ಕರೆಯುತ್ತಾರೆ. ಚಂಚಲೆಯಾಗಿರುವ ಲಕ್ಷ್ಮಿಯು ಒಬ್ಬರ ಕೈಯಲ್ಲಿ ಉಳಿಯುವುದಿಲ್ಲ ಎಂಬ ನಂಬಿಕೆಯಿದೆ. ಆದುದರಿಂದ ಅವಳು ಚರಸ್ವರೂಪಿಣಿ. ಧನಲಕ್ಷ್ಮಿಪೂಜೆಯನ್ನು ಮಾಡುವುದು ಹಣ ನಮಗೆ ಬರಲಿ ಎಂದು. ಹಣ ಕೈಯಲ್ಲಿ ಉಳಿಯುವುದಿಲ್ಲ. ಆದುದರಿಂದ ಅವಳು ಸ್ಥಿರವಲ್ಲ. ಈ ನಂಬಿಕೆಯಿಂದ ಅನೇಕರು "ಸ್ಥಿರಸಂಪತ್ತು" (ಭೂಮಿ=ಭೂ ದೇವತೆ)ಯನ್ನು ನಂಬುತ್ತಾರೆ.

*ವಿವರಗಳಿಗೆ ನೋಡಿ: ಲಕ್ಷ್ಮಿ.*

**೩೨೭. ಚಾಂಡಾಲ ಕನ್ಯೆ**

*ಎಂದು ಪಡಿಯರಿತಿ ಬಿನ್ನವಿಸೆ ರಾಜಾಧಿರಾಜಂ ರಾಜಲೋಕದ ಮೊಗಮಂ ನೋಡಿ ದೋಷಮೇಂ ಬರ್ಕೆಂಬುದುಂ* ***ಚಂಡಾಲಕನ್ನೆ****ಯಂ ಪುಗವೇಟಿಲ್ದಾಗಳ್*

*(ಕರ್ಣಾಟಕ ಕಾದಂಬರಿ, ೧-೨೨)*

ಜಾತಿಯಲ್ಲಿ ಶ್ರೇಣೀಕರಣದ ದೃಷ್ಟಿಯಲ್ಲಿ ಕೆಳಜಾತಿಗೆ ಸೇರಿದ ಕನ್ಯೆಯು ಚಾಂಡಾಲ ಕನ್ಯೆಯಾಗಿರುತ್ತಾಳೆ. ಕಾದಂಬರಿ ಕಾವ್ಯದ ಪ್ರಕಾರ, ಕಾಡು ಮೃಗಗಳನ್ನು ಹಿಡಿಯುವುದು ಮತ್ತು ತಿನ್ನುವುದು ಇವರ ಉದ್ಯೋಗವಾಗಿದೆ. ಕಾದಂಬರಿ ಕಾವ್ಯದಲ್ಲಿ ಪುಳಿಂದಿಯೆಂದೂ ಪ್ರಯೋಗವಾಗಿದೆ. ಚಾಂಡಾಲ ಕನ್ಯೆಯು ಸ್ಪರ್ಶವರ್ಜಿತೆ ಎಂದು ಕವಿ ಹೇಳುತ್ತಾನೆ (೧-೪೫ ವ).

ಕಾದಂಬರಿಯಲ್ಲಿ ಬರುವ ಚಾಂಡಾಲ ಕನ್ಯೆಯ ಕುರಿತು ವರ್ಣಿಸುವಾಗ ಕೆಲವು ಮಾತುಗಳು ಬರುತ್ತವೆ: ಮಾತಂಗ ಕುಲದೂಷಿತೆ, ಸ್ಪರ್ಶವರ್ಜಿತೆ, ದರ್ಶನಮಾತ್ರ ಫಲೆಯುಂ, ಈ ಮಾತುಗಳು ಅವಳು ಅಸ್ಪೃಶ್ಯಳು, ಅವಳನ್ನು ಮುಟ್ಟಲಾಗದು. ಮುಟ್ಟಬಾರದು ಎಂಬುದನ್ನು ಹೇಳುತ್ತವೆ. ಮಡಿ ಮತ್ತು ಮೈಲಿಗೆಯ ಪರಿಕಲ್ಪನೆಯನ್ನು ಇದು ಒಳಗೊಂಡಿದೆ. ಆದುದರಿಂದ ಕವಿಯು ಸ್ಪರ್ಶವರ್ಜಿತೆಯೆಂದು ಹೇಳುತ್ತಾನೆ.

ಶೂದ್ರರಲ್ಲಿನ ಕೆಲವರ ಕೆಲಸಗಳನ್ನು ಹೀಯಾಳಿಸಿ ಕೊನೆಗೆ ಶೂದ್ರರನ್ನೆಲ್ಲ ಕ್ಷುದ್ರಾಚಾರಿಗಳೆಂದರು (ದೀಘನಿಕಾಯ III. ೯೫). ಜೈನರ ಆಯಾರಂಗ (ಆಚಾರಾಂಗ) ಸೂತ್ರದಲ್ಲೂ (II. 4.1.8) ವೃಷಲ, ಗೃಹದಾಸ, ಕೆಳಜಾತಿಯವನು ಎನ್ನುವುದನ್ನು ಕಳ್ಳ, ನಾಯಿ ಎಂದಂತೆ ಬೈಗುಳಗಳಾಗಿ ಬಳಸಿದೆ. ಚಂಡಾಲ, ನಿಷಾದ, ವೇಣ, ರಥಕಾರ, ಪುಕ್ಕುಸರನ್ನು ನೀಚಕುಲ, ಹೀನಾಜಾತಿಯವರೆಂದು ಭಾವಿಸಲಾಗಿತ್ತು (ಮ.ನಿ. III. ೧೬೯-೭೮; ವಿ.ಪಿ. II. ೬). ಮೌರ್ಯಪೂರ್ವಯುಗದಲ್ಲಿ ಇದು ವ್ಯಾಪಕವಾಗಿತ್ತು. ಆದ್ದರಿಂದ ಬುದ್ಧನು ಭಿಕ್ಷುಗಳ ಪೂರ್ವಾಶ್ರಮದ ಜಾತಿ, ಕರ್ಮಗಳನ್ನು ಎತ್ತಾಡಬಾರದೆಂದು ದೀರ್ಘವಾಗಿ ಬೋಧಿಸಿದ (ವಿ. ಪಿ. IV. ೪-೧೧).

ಚಂಡಾಲರ ಜೀವನವು ದುರ್ಭರವಾಗಿತ್ತು. ಅಂಗುತ್ತರ ನಿಕಾಯದಲ್ಲಿ ಹೇಳಿರುವಂತೆ (IV. ೩೭೬) ಒಬ್ಬ ಚಂಡಾಲ ಹುಡುಗ ಅಥವಾ ಹುಡುಗಿ ಚಿಂದಿಬಟ್ಟೆ ತೊಟ್ಟು, ಭಿಕ್ಷೆಗೆ ಬೋಕಿಯೊಂದನ್ನು ಹಿಡಿದು, ಗ್ರಾಮವೊಂದಕ್ಕೆ ಹೋಗಬೇಕಾದರೆ ತಗ್ಗಿ ಬಗ್ಗಿ ನಡೆಯಬೇಕಿತ್ತು. ಬೇರೆಯವರಿಂದ ಬೇರ್ಪಡಿಸಿ ಗುರುತಿಸಲು ಸಾಧ್ಯವಾಗುವಂತೆ ಅವರು ಬಣ್ಣದ ಬಟ್ಟೆ ತೊಟ್ಟು, ಸೊಂಟಕ್ಕೆ ಒಂದು ಹಗ್ಗ ಸುತ್ತಿಕೊಂಡು ಓಡಾಡಬೇಕಿತ್ತು (ಜಾತಕ VI. ೩೭೯). ಚಂಡಾಲನೆಂದರೆ ಯಾವ ಸದ್ಗುಣವೂ ಇಲ್ಲದವನು, ನಂಬಿಕೆ ಮತ್ತು ಮೌಲ್ಯಗಳನ್ನು ತಿಳಿಯದವನು ಎಂಬ ಭಾವನೆ ಸಾಮಾನ್ಯವಾಗಿತ್ತು. ಜಾತಕಗಳ ಚಿತ್ರಣಕ್ಕೂ ಧರ್ಮಶಾಸ್ತ್ರಗಳ ನಿಯಮಗಳಿಗೂ ಈ ವಿಷಯದಲ್ಲಿ ಅಷ್ಟೇನೂ ಅಂತರವಿಲ್ಲ. ಆದರೆ ಈ ಜಾತಕಗಳು ಮೌರ್ಯಪೂರ್ವಕಾಲದ ಅಂತಿಮ ಘಟ್ಟಕ್ಕೆ ಸೇರುವಂಥವು.

ಪಾಲಿ ಗ್ರಂಥಗಳಲ್ಲಿ ಹಲವು ಹೀನ ಕುಲದವರನ್ನು, ಅದರಲ್ಲೂ ನಿಷಾದ, ಚಂಡಾಲರನ್ನು, ಅಸ್ಪೃಶ್ಯರೆಂದು ಗುರುತಿಸಿದೆ. ಇವರನ್ನು ಅಂತ್ಯ ಮತ್ತು ಬಾಹ್ಯ (ಊರಾಚೆ ಇರುವವನು) ಎಂದು ಕರೆದಿದೆ. ಗೌತಮನ ಪ್ರಕಾರ (IV. 28) ಅಂತ್ಯನು ಪಾಪಿಷ್ಠ. ವಸಿಷ್ಠನ ಪ್ರಕಾರ ( XVI. 30) ಒಳ್ಳೆಯ ಶೂದ್ರ ಮತ್ತು ಅಂತ್ಯಯೋನಿಜರನ್ನು ಅವರವರ ವಿಷಯದಲ್ಲಿ ಮಾತ್ರ ಸಾಕ್ಷಿಯಾಗಿ ಒಪ್ಪಬಹುದುತ್ತು. ಇವನೇ (XVIII.3) ಶೂದ್ರನಿಗೆ

ವೈಶ್ಯ ಹೆಣ್ಣಿನಲ್ಲಿ ಹುಟ್ಟಿದವರು 'ಅಂತವಸಾಯಿ' ಎಂದಿದ್ದಾನೆ.

ಪ್ರಾಚೀನ ಜೈನಮತ ಕೂಡ ವರ್ಣಭೇದವಿಲ್ಲದೆ ಎಲ್ಲರನೂ ತನ್ನ ಪಂಥದೊಳಕ್ಕೆ ಸೇರಿಸಿಕೊಳ್ಳುತ್ತಾ ಚಂಡಾಲರ ಸ್ಥಿತಿಯನ್ನು ಉತ್ತಮಗೊಳಿಸಲು ಯತ್ನಿಸಿತು. ಮಾತಂಗನೊಬ್ಬನಿಂದ ಉಪದೇಶ ಪಡೆಯಲು ಹೋದ ರಾಜನು ಕೆಳಗಿನ ಸ್ಥಾನದಲ್ಲಿ ಕುಳಿತನೆಂದು ಒಂದು ಜೈನಮೂಲ ತಿಳಿಸುತ್ತದೆ.

ಧಾರ್ಮಿಕ ಕ್ರಿಯೆಗಳ ಸಂದರ್ಭದಲ್ಲಿ ಪಾವಿತ್ರ್ಯ ಮತ್ತು ಶುಚಿತ್ವಗಳ ಕಾರಣದಿಂದಾಗಿಯೇ ಶೂದ್ರರನ್ನು ಅವುಗಳಿಂದ ದೂರವಿರಿಸಲಾಯಿತೆಂಬ ಮಾತು ಅಸಂಗತ. ಅಂತೆಯೇ ಉಚ್ಚವರ್ಣದವರ ಜೊತೆ ಸಹಪಂಕ್ತಿ ಭೋಜನ ಕೂಡ. ಇಂತಹ ಭಾವನೆಗಳು ಹುಟ್ಟಿಕೊಳ್ಳುವುದು ಸಮಾಜದ ಒಂದು ವಿಭಾಗದವರನ್ನು ಹೀನರೆಂದು ತುಚ್ಛೀಕರಿಸಿದ ನಂತರವೇ ಎಂಬುದನ್ನು ಮನಗಾಣಬೇಕು. ಅವರನ್ನು ವಂಶಪಾರಂಪರ್ಯವಾಗಿ ದುಡಿಯುವ ವರ್ಗವೆಂದು ಪರಿಗಣಿಸಬೇಕು., ಅವರ ದೈಹಿಕ ದುಡಿಮೆಯಿಂದಾಗಿ ಅವರು ಅಶುದ್ಧರೆಂಬ ಭಾವನೆಯನ್ನು ಬೆಳಸಬೇಕು; ಹೀಗೆ ಮಾಡಿದ ನಂತರ ಮಾತ್ರವೇ ಅಸ್ಪೃಶ್ಯತೆಯು ಆಚರಣೆಗೆ ಬರಲು ಸಾಧ್ಯ.

ಉತ್ತರಾಧ್ಯಯನ ಸೂತ್ರ (ಟೀಕೆ ೧೩)ದಲ್ಲಿ ಉಲ್ಲೇಖವಾಗಿರುವಂತೆ ಕಾಮನ ಹಬ್ಬದಲ್ಲಿ ಕುಣಿಯುತ್ತಾ ಬಂದ ಮಾತಂಗರನ್ನು ಮೇಲುಜಾತಿಯವರು ಒದ್ದು ಊರಾಚೆ ಅಟ್ಟಿದ ಕಥೆ ಇದೆ. ಬೌದ್ಧ, ಜೈನ ಮೂಲಗಳಿಂದ ತಿಳಿದು ಬರುವಂತೆ ಚಂಡಾಲರನ್ನು ಅಸ್ಪೃಶ್ಯರೆಂದು ಮೇಲಿನ ವರ್ಣದವರು ಹೀಯಾಳಿಸುತ್ತಿದ್ದರು; ಆದರೆ ಬ್ರಾಹ್ಮಣರಿಗೆ ಅವರ ಮೇಲೆ ವಿಶೇಷ ದ್ವೇಷವಿತ್ತು. ಬ್ರಾಹ್ಮಣಾಧಿಕಾರದ ಸಮಾಜದಲ್ಲಿ ಚಂಡಾಲರು ಸೇರಿಕೊಂಡಾಗ ಅವರ ಬದುಕಿನ ಶೈಲಿಯಲ್ಲಿ ಸಂಪೂರ್ಣವಾದ ಬದಲಾವಣೆಗಳೇನೂ ಉಂಟಾಗಲಿಲ್ಲ. ಪ್ರಾಯಶಃ ಪಶು, ಪಕ್ಷಿಗಳ ಬೇಟೆಯಾಡುತ್ತಿದ್ದ ಚಂಡಾಲರನ್ನು ಪಶುಗಳ, ಮನುಷ್ಯರ, ಹೆಣ ಒಪ್ಪ ಮಾಡಲು ಕರೆಯುತ್ತಿದ್ದರು. ಈ ಕೆಲಸ ಮಾಡುವ 'ಪಣ'ರನ್ನೂ ಚಂಡಾಲರೆಂದು ಕರೆಯುತ್ತಿದ್ದರು.

ಕೆಲವರನ್ನು ವೈದಿಕಧರ್ಮವು ಚಾತುರ್ವರ್ಣ್ಯದಲ್ಲೂ ಸೇರಿಸದೆ ಚಂಡಾಲರೆಂದು ಊರಿನ ಹೊರಗಿಡುತ್ತಿತ್ತು.

ಅಪರಾಧಗಳನ್ನು ಮಾಡದವರನ್ನು ಹಿಂದೂ ಧರ್ಮ ಚಂಡಾಲರೆಂದು ದೂರವಿಡುತ್ತಿತ್ತು.

ಜೈನಧರ್ಮವು ವೈದಿಕ ಧರ್ಮದ ವಿರುದ್ಧವಾಗಿ ಹುಟ್ಟಿ ಉತ್ತಮರೆಂದು ಕರೆದುಕೊಂಡ ವೈದಿಕರು ಯಾರನ್ನು ಪಾಪಿಗಳು ನೀಚರು, ಚಂಡಾಲರೆಂದು ಸಮಾಜದಿಂದ ಬಹಿಷ್ಕರಿಸಿದರೋ ಅವರನ್ನು ಧಾರ್ಮಿಕ ಜೀವಿಗಳನ್ನಾಗಿ ಮಾಡಿತು.

ಬ್ರಾಹ್ಮಣನಿಗೆ ವೈಶ್ಯಕನ್ಯೆಯಲ್ಲಿ ಜನಿಸಿದವನು ಅಂಬಷ್ಠನು ಎಂದು ಕರೆಯಲ್ಪಡುತ್ತಾನೆ. ಬ್ರಾಹ್ಮಣನಿಗೆ ಶೂದ್ರಳಲ್ಲಿ ಹುಟ್ಟಿದವನನ್ನು ಪಾರಶವ ಎಂದು ಹೇಳುತ್ತಾರೆ. ನಿಷಾದ ಎಂದರೂ ಅವನೇ ಎಂದು ಮನು ಹೇಳುತ್ತಾನೆ.

ಶೂದ್ರನಿಗೆ ವೈಶ್ಯಳಲ್ಲಿ ಆಯೋಗವ, ಕ್ಷತ್ರಿಯಳಲ್ಲಿ ಕ್ಷತ್ತೃ. ಬ್ರಾಹ್ಮಣಳಲ್ಲಿ ಚಂಡಾಲನು ಜನಿಸುವರು ಎಂದು ಮನುವಿನ ಅಭಿಪ್ರಾಯ.

ಮುಂಡರೆಂಬ ಹೆಸರಿನ ಜನಗಳು ನಮ್ಮ ಭಾಗದಲ್ಲಿ ಈಗ ಇಲ್ಲವಾದರೂ ಬಂಗಾಳದ ಕಡೆಗೆ ಉಂಟು. ಚಂಡರು, ಈಗ ಚಾಂಡಾಲರೆಂಬ ಹೆಸರಿನ ಜನಗಳಾಗಿರಬೇಕು. ಕಂನಾಡಿನಲ್ಲಿ ವಿಶೇಷವಿಲ್ಲ. ಮಹಾರಾಷ್ಟ್ರದಲ್ಲೂ ವಿಶೇಷವಾಗಿ ಬಂಗಾಳದಲ್ಲೂ ಇದ್ದಾರೆ. ಚಾಮುಂಡಿ ಬೆಟ್ಟ, ಚಂಡಿಮುಂಡಿ ತೀರ್ಥ, ಚಂಡಿವಾಡಿ ವಿಷಯ, ಎಂಬ ಎಡೆಯ ಹೆಸರುಗಳು ಈ ಪುರಾತನ ಜನಗಳ ನೆನಹನ್ನು ಕೊಡುವುವು.

'ಕೋಲ'ವೆಂಬುದಕ್ಕೆ ಕಂನುಡಿಯಿಂದ ಅರ್ಥ ಮಾಡಿದರೆ ಬಿಲ್ಲವರೂ, ಅಂಬಿಗರೂ, ಕೋಲರೂ, ಹತ್ತುಗೆಯವರೆಂದು ಕಂಡುಬರುತ್ತದೆ. ಅಂಬು ಎಂದರೆ ಬಾಣ. ಬೇಟೆಯಿಂದ ಜೀವನವನ್ನು ಸಾಗಿಸುತ್ತಿದ್ದ ಕಾಲದ ಹೆಸರುಗಳಿವು. ಬೇಡರೂ ಬಿಲ್ಲವರೂ ಅಂಬಿಗರೂ ಕೋಲರೂ ಧನುರ್ವಿದ್ಯೆಯ ಬಲದಿಂದ ಬದುಕು ನಡೆಸುತ್ತಿದ್ದರೆಂದು ಅವರ ಹೆಸರುಗಳು ಸಾರ್ಥವಾಗಿವೆ. ಇವರು ತುಂಬ ಕಟ್ಟಾಳುಗಳು. ಕಂನಾಡು ಪಡೆಯಲ್ಲಿ ಇವರಿಗೊಂದು ಮಹತ್ವದ ಸ್ಥಾನವಿದ್ದಿತು. ಕಂನಾಡ ರಾಜರಿಗೆ ಹಲವು ದಿಗ್ವಿಜಯಗಳಲ್ಲಿ ಗೆಲುವನ್ನು ತಂದುಕೊಟ್ಟ ಶ್ರೇಯಸ್ಸು ಇವರಿಗಿದೆ. ಬೇಡರು, ಬಿಲ್ಲರು, ಅಂಬಿಗರ ಹೆಸರುಗಳು ಶಾಸನಗಳಲ್ಲಿ ಬರುತ್ತವೆ ಎನ್ನುವುದು ಶಂಬಾ ನಿಲುವು.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೨ ಪುಟ.೧೭೨*

*ಸಿ.ವೀರಣ್ಣ ೧೯೮೬ ಪ್ರಾಚೀನ ಸಾಹಿತ್ಯ: ರಾಜಸತ್ತೆಯ ವೈಭವದ ಕಾಲ ಪುಟ. ೨೩೦, ೨೯೪*

*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೧೦-೮-೧೨*

*ಪಿ. ವಿ. ಕಾಣೆ ೨೦೦೩ ಧರ್ಮಶಾಸ್ತ್ರದ ಇತಿಹಾಸ.*

**೩೨೮. ಚಾಂದ್ರಮಾನ**

ನಿಯಮನಿರ್ಬಂಧಕ್ಕೆ ಒಗ್ಗದ ನಾಗ: ಚಾಂದ್ರ ಸಂಪ್ರದಾಯದ ಜೀವನ ರೀತಿಗೆ, ಸವಿತೃವಿನ ಪ್ರಕಾಶ – ಎಂದರೆ ಕಾರ್ಯ-ಕಾರಣ ಸಂಬಂಧದ ಮೀಮಾಂಸೆಯಿಂದ ದೊರೆವ, ಜೀವನದ ಅರ್ಥದ ಮೂಲಕ ಲಭಿಸುವ ಬೆಳಕು ಹಿಡಿಸದು, ಮಾತ್ರವಲ್ಲ ಈ ಪ್ರಕಾಶವು ಅಸಹ್ಯವಾಗುತ್ತದೆ ಎಂದು ಶಂಬಾ ಹೇಳುತ್ತಾರೆ.

ಚಾಂದ್ರಮಾನ ಮತ್ತು ಸೌರಮಾನ ಭಾರತೀಯ ಸಂಸ್ಕೃತಿಯಲ್ಲಿ ಕಾಲಸೂಚಕ ಗಳಾಗಿವೆ. ಸೂರ್ಯನ ಚಲನೆಗೆ ಅನುಸಾರವಾಗಿ ಕಾಲ ನಿರ್ಧಾರ ಮಾಡುವುದು ಸೌರಮಾನ. ಚಂದ್ರನ ಚಲನೆಗೆ ಅನುಸಾರ ನಿರ್ಧಾರಮಾಡುವ ಕಾಲಮಾಪನ ಚಾಂದ್ರಮಾನ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೪ ಪುಟ.೨೪೯.*

**೩೨೯. ಚಾತುರ್ದಂತ**

'ಅಂತು ಚಾತುರ್ದಂತ ಮೊಂದೊಂದ ಜಿಶೋಳೋರಂತೆ.........'

ಚತುರಂಗ ಸೈನ್ಯಕ್ಕೆ ಪಂಪ **ಚಾತುರ್ದಂತ**ವೆಂದು ಬಳಸಿದ್ದಾನೆ.

(ಪಂಪ ಭಾರತ ೧೧-೩೬; ೫೭ ವ)

ಚತುರಂಗವೆಂದರೆ ಕಾಲಾಳು, ಅಶ್ವಾರೋಹಿಗಳು, ರಥಾರೋಹಿಗಳು, ಗಜಾರೋಹಿಗಳು-ಇವು ಚತುರಂಗ ಸೇನೆಯ ನಾಲ್ಕು ಘಟಕಗಳು.

ಕಾಲ್ದಳದ ಕೆಲಸ - ಶಸ್ತ್ರಗಳನ್ನು ಹೊತ್ತಿರುವುದು. ಯುದ್ಧ ಮಾಡುವುದು. ಕೋಟೆ ಬಾಗಿಲುಗಳನ್ನು ಒಡೆಯುವುದು. ತನ್ನ ಸೈನಿಕರನ್ನು ಬಿಡಿಸುವುದು. ಖಜಾನೆ ವಾಹನಾದಿಗಳನ್ನು ಶತ್ರುಗಳ ಕೈಗೆ ಸಿಗದಂತೆ ಸಾಗಿಸುವುದು ಆನೆಯ ಕೆಲಸ. ತನ್ನ ಸೇನೆಯ ರಕ್ಷಣೆ. ಶತ್ರುವಿನ ಚತುರಂಗ ಸೇನೆಯನ್ನು ಒಡೆಯುವುದು. ಶತ್ರುವಿಗೆ ತ್ರಾಸವುಂಟು ಮಾಡುವುದು ರಥಿಕನ ಕೆಲಸ. ಕುದುರೆಯ ಕೆಲಸವೆಂದರೆ ಚದುರಿದ ಸೈನಿಕರನ್ನು ಒಂದುಗೂಡಿಸುವುದು. ಶತ್ರುಗಳಿಗೆ ಹಿಂದು ಮುಂದಿನಿಂದ ಆಘಾತ ಕೊಡುವುದು ಅಶ್ವದ ಕೆಲಸ.

*ವಿವರಗಳಿಗೆ ನೋಡಿ: ಶ್ರೀ ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳು ೨೦೧೦*
*ಕೌಟಲೀಯ ಅರ್ಥಶಾಸ್ತ್ರ ಪುಟ. ೫೧೧.*

**೩೩೦. ಚಾತುರ್ವರ್ಣ**

*ದೇವರ್ಕಳುಂ ದೇವಿಯರ್ಕಳುಂ **ಚಾತುರ್ವರ್ಣ್ಯ** ಸಂಘಮುಂ..........*

*(ಡಿ.ಎಲ್.ಎನ್.೨೦೦೯ ಪುಟ. ೧೯೯)*

ಚಾತುರ್ವರ್ಣವೆಂದರೆ ಬ್ರಾಹ್ಮಣ; ಕ್ಷತ್ರಿಯ; ವೈಶ್ಯ; ಶೂದ್ರ ವರ್ಣಗಳು.

ವೈದಿಕಧರ್ಮ ಚಾತುರ್ವರ್ಣ್ಯದಲ್ಲೂ ಸೇರಿಸದೆ ಚಂಡಾಲರೆಂದು ಊರ ಹೊರಗಿಡುತ್ತಿತ್ತು. ಅಂಥ ಪಾಪಿಗಳಿಗೂ ಕೂಡ ಜೈನಧಮದಲ್ಲಿ ಪ್ರವೇಶವಿದ್ದು, ಅವರ ಮೋಕ್ಷಕ್ಕೆ ಅವಕಾಶವಿತ್ತು.

"ಸಮಯಿಗಳು ಚಾತುರ್ವರ್ಣ ಉಚಿತ ಚರಿತ್ರವನ್ನು ಬಿಸುಟು ಪೊಲ್ಲಮೆಯೊಳ್ ನಡೆಯುತ್ತಾರೆಂದು"

ಬ್ರಾಹ್ಮಣರು ದರ್ಭಾಧಿಕಾರಕ್ಕೆ ಮಾತ್ರ ಅರ್ಹರೆಂದೂ ನಮ್ಮನ್ನು ಕಾಪಾಡಿ ಎಂದು ಕೂಗಿಕೊಳ್ಳಲು ಮಾತ್ರ ಯೋಗ್ಯರೆಂದೂ ಕ್ಷತ್ರಿಯರು ಕೊಡಲು ಕೊಲ್ಲಲು ಮಾತ್ರ ಯೋಗ್ಯರೆಂದೂ ಸಮರ್ಥರೆಂದೂ ಹೇಳುವುದಲ್ಲದೆ, ಶಸ್ತ್ರಾಸ್ತ್ರ ವಿದ್ಯೆ ನೃಪರ ವಿದ್ಯೆ ಮಾತ್ರ ಎಂದು ಚಾತುರ್ವರ್ಣದ ಸಮರ್ಥನೆಯನ್ನು ಜೈನಕವಿಯಾದ ರನ್ನ ಮಾಡುವುದು ಗಮನಾರ್ಹ.

"ಉರ್ವರರೆಯಂ ಧರಾಧಿಪರ್ ಮುದದೆ ಸಧರ್ಮದಿಂದ ಪರಿಪಾಲಿಸುತಿರ್ಕೆ ಸಮಸ್ತ ವೇದಶಾಸ್ತ್ರದ ವಿಧಿಯಿಂದಿಳಾಮರಜನಂ ಸುರವೋಜೆಯನೊಲ್ದು ಮಾಳ್ಕೆ ಸಂಪದದೊಳನೂನರಕ್ಕೆ ಪೆರೆದರ್ ಸಲೆಧಾರ್ಮಿಕರಕ್ಕೆ ಪಾದಜರ್" ಎನ್ನುವ ಚಾತುರ್ವರ್ಣಗಳಲ್ಲಿ ಸಂಕರವಾಗಲು ಅವಕಾಶಕೊಡದೆ ಅದನ್ನು ಕಾಪಾಡಲಿ ಎನ್ನುವುದೇ

ದುರ್ಗಸಿಂಹನ ಆಶಯವಾಗಿದೆ.

ಜೈನಧರ್ಮದಲ್ಲಿ ಚಾತುರ್ವರ್ಣ ಸಂಘಗಳು ಅಸ್ತಿತ್ವಕ್ಕೆ ಬಂದಿದ್ದವೆಂಬ ಅಂಶವೂ ಈ ಪಂಚತಂತ್ರ ಕೃತಿಯಲ್ಲಿ ದೊರಕುತ್ತದೆ ಆದರೆ ಮೊದಲು ಮೂರು ವರ್ಣಗಳಿದ್ದವು. ಅನಂತರ ನಾಲ್ಕು ಆಯಿತು.

ಚತುರ್ವರ್ಣ ಸಂಘದ ಅಸ್ತಿತ್ವವನ್ನು ವಡ್ಡಾರಾಧನೆಯು ಸ್ಪಷ್ಟವಾಗಿ ದೃಢಪಡಿಸುತ್ತದೆ. ವರ್ಣ ಪದ್ಧತಿಯಲ್ಲಿ ಕೇವಲ ನಾಲ್ಕು ವರ್ಣಗಳನ್ನು ಮಾತ್ರ ಹೇಳಲಾಗಿದೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಆದರೆ ಈ ಚೌಕಟ್ಟಿನಲ್ಲಿ ಭಾರತೀಯ ಸಮಾಜವನ್ನು ವ್ಯಾಖ್ಯಾನಿಸಲು ಸಾಧ್ಯವಿಲ್ಲ. ಚಾತುರ್ವರ್ಣಸಂಘದ ಪರಿಕಲ್ಪನೆಯು ಜೈನ ಧರ್ಮದಲ್ಲಿ ಭಿನ್ನ.
ಚತುರ್ವಿಧ ವಿಭಾಗವು ಪಾರಸಿಗಳಲ್ಲಿ ಕಂಡುಬರುತ್ತದೆ. ಈ ವರ್ಗಗಳಿಗೆ ಪಾರಸಿಗಳಲ್ಲಿ ಇವುಗಳಿಗೆ ಬೇರೆ ಬೇರೆ ಹೆಸರುಗಳಿವೆ. ಅಥರ್ವರು, ರಥೇಸ್ಥರು, ವಸ್ತ್ರಘುಷುಯನರು ಮತ್ತು ಹೊಯ್ತಿ

ಯಾವಾಗ ವರ್ಣದ ಪರಿಕಲ್ಪನೆಯು ಪ್ರಾರಂಭವಾಯಿತೋ ಆಗ ಜಾತಿಯಲ್ಲಿಯೂ ಶ್ರೇಣೀಕೃತ ವ್ಯವಸ್ಥೆಯು ಪ್ರಾರಂಭವಾಯಿತು. ಮಧ್ಯಕಾಲೀನ ಭಾರತೀಯ ಚರಿತ್ರೆಯಲ್ಲಿ ಈ ಪರಿಕಲ್ಪನೆಯು ಕಾಣಿಸಿಕೊಂಡಿತು. ಅನಂತರ ಕಾನೂನುಗಳು ಮದುವೆಯ ಪರಿಕಲ್ಪನೆಗಳು: ಕೌಟುಂಬಿಕ ಪದ್ಧತಿಗಳು ಕೂಡಾ ಪರಿವರ್ತನೆಗಳಿಗೆ ಗುರಿಯಾದವು. ಮೇಲಿನ ಜಾತಿಯವರು ಧರ್ಮಶಾಸ್ತ್ರಕ್ಕೆ ಅನುಸಾರವಾಗಿ ಬದುಕಲು ಪ್ರಾರಂಭಿಸಿದರು. ಧರ್ಮಶಾಸ್ತ್ರಗಳು ಕಾನೂನುಗಳಲ್ಲಿ ಒಂದು ರೀತಿಯಲ್ಲಿ ಏಕರೂಪತೆಯನ್ನು ತರಲು ಪ್ರಯತ್ನಿಸಿತು.

ಮಧ್ಯಕಾಲೀನ ಭಾರತೀಯ ಚರಿತ್ರೆಯಲ್ಲಿ ಕ್ಷತ್ರಿಯರು ಮತ್ತು ಖಾತ್ರಿ ಜನಾಂಗದವರು ಪ್ರಧಾನ ಪಾತ್ರವನ್ನು ಉತ್ತರ ಭಾರತದಲ್ಲಿ ಹೊಂದಿದ್ದರು ಎಂದು ಎಲ್ಲರಿಗೂ ಮದುವೆ ಆಗುವಾಗ ಮೊದಲಿನ ಮದುವೆಗೆ ತನ್ನ ಜಾತಿಯ ಹುಡುಗಿ ಆಗಬೇಕು. ಕಾಮಕ್ಕಾಗಿ ಮಾತ್ರ ಆಗುವ ಮದುವೆಗೆ ಜಾತಿನಿಯಮವಿಲ್ಲ ಎಂದು ಮನುವು ಹೇಳುತ್ತಾನೆ.

ವಜ್ರ ಸೂಚಿಯಲ್ಲಿ ಇದಕ್ಕಿಂತ ಭಿನ್ನ ಅಭಿಪ್ರಾಯವಿದೆ: ಚತುರ್ವರ್ಣಗಳ ಪಟ್ಟಿಯಲ್ಲಿ ಶೂದ್ರರ ಹೆಸರು ಕೊನೆಯಲ್ಲಿರುವುದರಿಂದ ಅವರು ಅತ್ಯಂತ ಕೆಳಗಿನವರು. ಆದ್ದರಿಂದ ಅವರು ಬ್ರಾಹ್ಮಣರ ಸೇವೆಯನ್ನು ಮಾಡಬೇಕು ಎಂಬ ಮನು ವಾದಕ್ಕೆ ಇದರಲ್ಲಿ ಉತ್ತರವಿದೆ. ಭಾಷೆಯಲ್ಲಿ ಪ್ರಯೋಗಿಸಲಾದ ಪದಗಳಲ್ಲಿ ವಾಕ್ಯದ ಕೊನೆಯಲ್ಲಿ ಬಂದ ಕಾರಣಕ್ಕಾಗಿಯೇ ಅವು ಕನಿಷ್ಠವಾಗುವುದಿಲ್ಲ ಸದ್ಗುಣಗಳ ಪಾಲನೆಯಿಂದ ಶೂದ್ರರು ಬ್ರಾಹ್ಮಣರಾಗುತ್ತಾರೆ. ಆದ್ದರಿಂದ ಹುಟ್ಟಿನಿಂದ ಬ್ರಾಹ್ಮಣತ್ವ ನಿರ್ಣಯವಾಗುವುದಿಲ್ಲ. ಒಳ್ಳೆಯ ನಡತೆ ಮತ್ತು ಪರಿಶುದ್ಧತೆಯನ್ನು ಯಾರು ಹೊಂದಿರುತ್ತಾರೊ ಅವನು ಬ್ರಾಹ್ಮಣ.

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರು ಕ್ರಮವಾಗಿ ಪುರುಷನ (ಬಹ್ಮನ) ಬಾಯಿ, ತೋಳು, ತೊಡೆಗಳು ಮತ್ತು ಪಾದಗಳಿಂದ ಹುಟ್ಟಿದವರು ಎಂಬ ಋಗ್

ವೇದದ ಪುರುಷಸೂಕ್ತದ ಮಂತ್ರ ಒಂದು ಪ್ರಕ್ಷಿಪ್ತ ಭಾಗ ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಪ್ರಚಲಿತವಿರುವ ಈ ಹೇಳಿಕೆಯನ್ನು ಚರ್ಚಿಸುವಲ್ಲಿ ಅಶ್ವಘೋಷನು ಅತ್ಯಂತ ತರ್ಕಬದ್ಧವಾಗಿ ತನ್ನ ವಾದವನ್ನು ಮಂಡಿಸುತ್ತಾನೆ. ಅವನು ಇರುವುದು ಒಂದೇ ವರ್ಣ, ಮಾನವನನ್ನು ನಾಲ್ಕು ವರ್ಣಗಳಲ್ಲಿ ವಿಭಾಗಿಸುವುದು ಸರಿಯಲ್ಲ (ತಸ್ಮಾದನೀಯತಮ್ ಬ್ರಾಹ್ಮಣ್ಯಂ) ಎಂದು ಮುಂದಿನಂತೆ ತನ್ನ ವಾದವನ್ನು ಮಂಡಿಸುತ್ತಾನೆ: ೧.ಮೀನುಗಾರರ, ಮಡಿವಾಳರ ಹಾಗೂ ಚಾಂಡಾಲರ ಕುಟುಂಬ ಗಳಲ್ಲೂ ಬ್ರಾಹ್ಮಣ ಮತ್ತು ಇತರ ವರ್ಣಗಳವರು ಇರುತ್ತಾರೆ. ೨.ಒಬ್ಬನೇ ತಂದೆಯಿಂದ ಹುಟ್ಟಿದ ಮಕ್ಕಳು ಹೇಗೆ ಭಿನ್ನವರ್ಣಗಳಿಗೆ ಸೇರಿದವರಾಗುವುದಿಲ್ಲವೋ ಹಾಗೆ ಒಬ್ಬನೇ ತಂದೆಯಾದ ಪುರುಷನಿಂದ ಉಗಮವಾದುದರಿಂದ ಬ್ರಾಹ್ಮಣರು ಮತ್ತು ಇತರ ವರ್ಣಗಳು ಭಿನ್ನವರ್ಣದವರಾಗುವುದಿಲ್ಲ. ೩.ಬ್ರಾಹ್ಮಣರ ಮತ್ತು ಇತರ ವರ್ಣಗಳವರ ಪಾದ, ಭಗ, ಲಿಂಗ, ಬಣ್ಣ, ಆಕಾರ, ಮಲ, ಮೂತ್ರ, ಗಂಧ ಮತ್ತು ಧ್ವನಿಗಳಲ್ಲಿ ಭಿನ್ನ ಜಾತಿಯ ಪ್ರಾಣಿಗಳಲ್ಲಿ (ಉದಾ: ಹಸು ಮತ್ತು ಕುದುರೆ.) ತೋರುವಂತಹ ಯಾವ ವ್ಯತ್ಯಾಸಗಳೂ ಕಂಡುಬರುವುದಿಲ್ಲ. ೪.ಅವರಲ್ಲಿ ಭಿನ್ನ ಜಾತಿಯ ವೃಕ್ಷಗಳ – ಉದಾ : ಮಾವಿನ ಮರ ಮತ್ತು ಬೇವಿನ ಮರ– ಅಂಗ ಪ್ರತ್ಯಂಗಗಳಾದ ಎಲೆ, ಹೂವು, ಹಣ್ಣು ಬೀಜ, ರಸ ಮತ್ತು ಗಂಧಗಳಲ್ಲಿ ಕಂಡು ಬರುವಂತಹ ಯಾವ ವ್ಯತ್ಯಾಸಗಳೂ ಇಲ್ಲ. ೫.ಮಾನವರೆಲ್ಲರ ಸುಖ, ದುಃಖ, ಜೀವನಾವಧಿ, ಬುದ್ಧಿಮತ್ತೆ, ರೀತಿ, ನೀತಿ, ಹುಟ್ಟು, ಸಾವು, ಭಯ, ಮೈಥುನ ಹಾಗೂ ಔಷಧೋಪಚಾರಗಳಲ್ಲಿ ಯಾವ ವ್ಯತ್ಯಾಸವೂ ಇಲ್ಲ.

ವರ್ಣ ವ್ಯವಸ್ಥೆಯ ವಿರುದ್ದ ಗಮನಾರ್ಹವಾದ ಒಂದು ಆಕ್ರೋಶ ಮೊಟ್ಟಮೊದಲಿಗೆ ವ್ಯಕ್ತವಾಗುವುದು 'ಕಾಠಕ ಸಂಹಿತೆ'ಯಲ್ಲಿ ಹುಟ್ಟಿನಿಂದ ಬ್ರಾಹ್ಮಣ ಶ್ರೇಷ್ಠ ಎಂದೇಕೆ ಪರಿಗಣಿಸಬೇಕು ಮತ್ತು ಬ್ರಾಹ್ಮಣನನ್ನು ಅವನ ತಂದೆಯ ಹಾಗೂ ತಂದೆಯ ತಂದೆಯ ಹೆಸರನ್ನು ಹೇಳಲು ಏಕೆ ಕೇಳಬೇಕು ಎಂದು ಅದರಲ್ಲಿ ಪ್ರಶ್ನಿಸಲಾಗಿದೆ.

ಪ್ರಾರಂಭದ ಬೌದ್ಧ ಸಾಹಿತ್ಯದಲ್ಲೂ ಈ ವ್ಯವಸ್ಥೆಯು ಬೇರು ಬಿಟ್ಟಿರುವುದನ್ನು ನಾವು ಕಾಣುತ್ತೇವೆ. ಬೌದ್ಧರಾಮಗಳಲ್ಲಿ ವರ್ಣವ್ಯವಸ್ಥೆಯು ಇರಲಿಲ್ಲವಾದರೂ ಜನಸಾಮಾನ್ಯರಲ್ಲಿ ಆ ವಿಭಜನೆ ಇತ್ತು. ಬುದ್ಧನು ಆ ವ್ಯವಸ್ಥೆಯನ್ನು ಸಮಗ್ರವಾಗಿ ಪ್ರತಿಭಟಿಸಲಿಲ್ಲ. ಕೆಲವು ಸಾರಿ ಆ ವ್ಯವಸ್ಥೆಯ ಒಳಗೇ ತಾನು ಕಾರ್ಯನಿಷ್ಠನಾದ. ಅವನು ಕೆಲವು ಸಾರಿ ಆ ವ್ಯವಸ್ಥೆಯ ಒಳಗೇ ತಾನು ಕಾರ್ಯನಿಷ್ಠನಾದ. ಅವನು ಕೆಲವು ಸಾರಿ ಕ್ಷತ್ರಿಯರು ಬ್ರಾಹ್ಮಣರಿಗಿಂತ ಶ್ರೇಷ್ಠರು ಎಂದು ಸಾರಿದ (ಮಧ್ಯಮ ನಿಕಾಯ ೧೧.೧೨೮). ಅವನು ಬ್ರಾಹ್ಮಣರಿಗಿಂತ ಕ್ಷತ್ರಿಯರು ಶ್ರೇಷ್ಠರೆಂದು ವಾದಿಸಿದ (ದೀಘ ನಿಕಾಯ I ೯೭–೯೯).

"ಯುಧಿಷ್ಠಿರನೆ ಆಲಿಸು, ಪ್ರಾಚೀನ ಕಾಲದಲ್ಲಿ ಜಗತ್ತಿನಲ್ಲೆಲ್ಲಾ ಒಂದೇ ವರ್ಣವಿತ್ತು. ಚಾತುರ್ವರ್ಣ್ಯ ವ್ಯವಸ್ಥೆಯು ವ್ಯಕ್ತಿಯ ಕರ್ಮ ಎಂದರೆ ವೃತ್ತಿಯ ಆಧಾರದ ಮೇಲೆ ನಿಶ್ಚಿತವಾಯಿತು.(೪೧)

ಎಲ್ಲ ಮಾನವರು ಸಮಾನ. ಅವರು ಮಾತೃಗರ್ಭದಿಂದ ಉಗಮವಾದವರು. ಎಲ್ಲ ವರ್ಣೀಯರು ಮಲ ಮೂತ್ರಗಳನ್ನು ಒಂದೇ ರೀತಿಯಲ್ಲಿ ವಿಸರ್ಜಿಸುತ್ತಾರೆ. ಅವರಿಗೆ ಒಂದೇ ರೀತಿಯ ಇಂದ್ರಿಯಗಳಿದ್ದು ಅವು ಒಂದೇ ರೀತಿಯ ವಸ್ತುಗಳಿಗಾಗಿ ಹಂಬಲಿಸುತ್ತವೆ. ಆದ್ದರಿಂದ "ಸದಾಚಾರ ಹಾಗೂ ಸದ್ಗುಣಗಳಿಂದ ಮಾನವನು ದ್ವಿಜನಾಗುತ್ತಾನೆ".(೪೨)

ಯಾವನೇ ಒಬ್ಬ ಆರಂಭದಲ್ಲಿ ಶೂದ್ರನಾಗಿದ್ದರೂ ಶೀಲ ಸಂಪನ್ನನಾಗಿ ಸದಾಚಾರಶೀಲನಾಗಿ ಮುನ್ನಡೆದರೆ ಅವನಿಗೆ ಬ್ರಾಹ್ಮಣತ್ವ ಪ್ರಾಪ್ತವಾಗುತ್ತದೆ. ಮತ್ತು ಯಾವನೇ ಒಬ್ಬ ಆರಂಭದಲ್ಲಿ ಬ್ರಾಹ್ಮಣನಾಗಿದ್ದರೂ ಸದಾಚಾರ ಮತ್ತು ಸದ್ಗುಣ ವಿಹೀನನಾದರೆ ಅವನು ಶೂದ್ರನಿಗಿಂತಲೂ ಕೆಳಗಿನವನಾಗಿ ನಿಕೃಷ್ಟನಾಗುತ್ತಾನೆ. (೪೩)

*ವಿವರಗಳಿಗೆ ನೋಡಿ: ಬಿ. ವಿ. ವೀರಭದ್ರಪ್ಪ ೨೦೦೭*

*ಅಶ್ವಘೋಷನ ವಜ್ರಸೂಚಿ ಪುಟ. ೬, ೧೭, ೧೯, ೨೦, ೮, ೨೨*

*ಸಿ.ವೀರಣ್ಣ ೧೯೮೬ ಪ್ರಾಚೀನ ಸಾಹಿತ್ಯ: ರಾಜಸತ್ತೆಯ ವೈಭವದ ಕಾಲ ಪುಟ.೯೩, ೧೩೦, ೨೯೫, ೩೪೦, ೩೮೪*

*Romila Thapar 1975 The Past and Prejudice P. 37-39*

*ಚಕ್ರಕೋಡಿ ಈಶ್ವರ ಶಾಸ್ತ್ರಿ ೧೯೬೭ ಮನುಸ್ಮೃತಿ ೩-೧೨*

*ಯುಗಯಾತ್ರೀ ಭಾರತೀಯ ಸಂಸ್ಕೃತಿ ೧೯೭೧ ಸಂಪುಟ. ೨ ಪುಟ. ೨೩೮*

**೩೩೧. ಚಾಪ**

ಭರತ – ಬಾಹುಬಲಿಯ ಯುದ್ಧದ ಸಂದರ್ಭದಲ್ಲಿ ಭರತೇಶ್ವರನು ಪಂಚಶತಶರಾಸನೋತ್ಸೇಧನಪ್ಪುದಱಿಂ ಪಂಚವಿಂಶತ್ಯುತ್ತರ ಪಂಚಶತ ಶರಾಸನೋತ್ಸೇಧನಪ್ಪ ಬಾಹುಬಲಿಕುಮಾರನಮೇಗೆ (ಆದಿಪುರಾಣ ೧೪-೧೦೭ವ) ಎಂದು ಬರುತ್ತದೆ. ಭರತನು ಐದುನೂರ ಇಪ್ಪತ್ತೈದು ಬಿಲ್ಲುಗಳಷ್ಟು ಎತ್ತರವಿರುವ ಬಾಹುಬಲಿಯ ಮೇಲೆ ಎಂದು ಪಂಪ ವಿವರಿಸುತ್ತಾನೆ. ಅಳತೆಯ ಒಂದು ಪ್ರಮಾಣ, ಸಾಮಾನ್ಯವಾಗಿ ನಾಲ್ಕು ಮೊಳಕ್ಕೆ ಚಾಪವೆಂದೂ ಕರೆಯುತ್ತಾರೆ.

ಬಿಲ್ಲು ಎಂದರೆ ಮೇಲೆ ನಾಲ್ಕು ಮೊಳ ಭೂಮಿಯ ಪರಿಕಲ್ಪನೆಯಾಗಿದೆ. ಇದು ಪಂಪನ ಕಾಲದಲ್ಲಿ ಜಾರಿಯಲ್ಲಿ ಇದ್ದಿರಬೇಕು. ಬ್ರಿಟೀಶರು ಬಂದ ಮೇಲೆ ಭೂಮಿಯನ್ನು ಅಳೆಯುವ ಕ್ರಮವು ಬೇರೆಯಾದವು.

*ವಿವರಗಳಿಗೆ ನೋಡಿ: John Grimes 1996 A concise Dict. of Indian Philosophy*

**೩೩೨. ಚಾರ್ವಾಕ ಮತ**

ವಸ್ತುವಿಚಾರಂ ಪುಟ್ಟ ಜೀವತತ್ವವಿಷಯದೊಳ್ ಕೃತಕದ್ವಿಜಂ ಚಾರ್ವಾಕ ಮತಾವಲಂಬಿಯಾಗಿ ಸೌಜನ್ಯಕಂದಾಂಕುರನಪ್ಪ ವಜ್ರಾಯುಧ ಮಹೀಪಾಲನೊಳ್

ಸಹಸ್ರಜಿಹ್ವನಪ್ಪ ನಾಗರಾಜನನೆ ಪೋಲ್ತು ನುಡಿಯೆ

(ಶಾಂತಿಪುರಾಣ ೮-೧೨೬ವ)

ಸ್ವಾಗತವಚನ ಪೂರ್ವಕವಾಗಿ ಸಂಭಾಷಣೆ ನಡೆದು ವಸ್ತು ವಿಚಾರವಾಗಿ ಮಾತು ಬರಲಾಗಿ ಬ್ರಾಹ್ಮಣ ವೇಷಧಾರಿಯಾದ ಈತನು ಜೀವತ್ವದ ವಿಷಯದಲ್ಲಿ ಚಾರ್ವಾಕ ಮತವನ್ನು ಅವಲಂಬಿಸಿ ಸಾವಿರ ನಾಲಗೆಗಳುಳ್ಳ ನಾಗರಾಜನಂತೆ ನುಡಿಯಲು.... (ಶಾಂತಿಪುರಾಣ ೮-೧೨೬ವ)

ಇಲ್ಲಿ ಪೊನ್ನನು ಚಾರ್ವಾಕಮತ ವಿಚಾರವನ್ನು ಪ್ರಸ್ತಾವಿಸುತ್ತಾನೆ.

ಪೂರ್ವಪಕ್ಷವನ್ನು ಹೀಗೆ ಮಂಡಿಸಿದನು: "ಈ ಲೋಕದ ಪ್ರಾಣಿಗಳು ಆತ್ಮವೆಂದೂ ಪರಲೋಕವೆಂದೂ ಹಂಬಲಿಸಿ ದಾನ, ಶೀಲ, ವ್ರತ, ಉಪವಾಸವಾದಿಗಳಿಂದ ಸೊರಗಿ ಎಲವು ತೊಗಲು ಮಾತ್ರ ಉಳಿಯುವಂತಾಗುತ್ತಾರೆ ಇದು ಮೂರ್ಖತನ. ಹೇಗೆಂದರೆ: ಪರಲೋಕದವನು (ತಾನೆಂದು ಹೇಳುವವನೆ) ಇಲ್ಲವೆಂದ ಮೇಲೆ ಪರಲೋಕವೆಲ್ಲಿಂದ ಬಂತು? ಈ ನಿಮ್ಮ ಜಿನಮತದವರು ಹೇಳುವ 'ಜೀವತತ್ತ್ವ'ದಲ್ಲಿ ಪೃಥ್ವಿ, ಜಲ, ಅಗ್ನಿ, ವಾಯು ಎಂಬ ನಾಲ್ಕು ಭೂತಗಳಿಂದ ಪ್ರತ್ಯೇಕವಾದ ಜೀವತ್ವವನ್ನು ಸ್ಥಾಪಿಸುವ ಪ್ರಮಾಣವಿಲ್ಲ. ಹಿಟ್ಟು, ನೀರು, ಬೆಲ್ಲ ಮತ್ತು ಆರೆ ಹೂವು ಮೊದಲಾದವುಗಳ ಸಂಯೋಗ ದಿಂದ ಮಾದಕ ಶಕ್ತಿ ಹುಟ್ಟುವಂತೆ ಈ ನಾಲ್ಕು ಭೂತಗಳ ಸಂಯೋಗದಿಂದ ಜೀವವೆಂಬುದು ಹುಟ್ಟುವುದು. ಆ ಭೂತಗಳೂ ದೇಹಾಕಾರ ಪರಿಣತಗಳು. ಇದು ಪ್ರತ್ಯಕ್ಷ ಪ್ರಮಾಣದಿಂದ ಸಿದ್ಧ. ಇನ್ನು ಅನುಮಾನ ಪ್ರಮಾಣದ ಮೇರೆಗೆ ದೇಶ, ಕಾಲ, ಅವಸ್ಥೆ ಮೊದಲಾದುವು ಬೇರೆ ಬೇರೆ ಆಗಿರುವುದರಿಂದ ದ್ರವ್ಯಶಕ್ತಿಯೂ ಭಿನ್ನವಾಗುವುದು. ಹೇಗೆಂದರೆ: "ಮೂಲಕ"ವೆಂಬ ಸಸ್ಯ ಎಳೆಯದಾದರೆ ದೋಷಹರ, ಬಲಿತಿದ್ದರೆ ದೋಷಕರ. ಆದುದರಿಂದ ಪ್ರತ್ಯಕ್ಷ ಪ್ರಮಾಣದಿಂದ ನಿರ್ಣಯಿಸಬೇಕಾದ ವಸ್ತುತತ್ವವು ಅನುಮಾನದಿಂದ ವ್ಯತ್ಯಸ್ತವಾಗುವುದು." ಹೀಗೆಂದು ನುಡಿದು ತನ್ನ ಪಕ್ಷನಿರ್ಣಯಕ್ಕಾಗಿ ಹೀಗೆಂದನು:

(೮-೧೨೮ವ)

ಆ ನೆವದಿಂದ ಶ್ರಾವಕಾಭಿಮಾನಿಗಳನ್ನು ಅನೇಕ ವಿಧವಾಗಿ ಆಶ್ರಯಿಸುವವರು ಅಜ್ಞಾನಿಗಳು ಬೃಹಸ್ಪತಿ ಮತದಂತೆ ಇದು ಬುದ್ಧಿಹೀನರೂ ಪೌರುಷಹೀನರೂ ಒಪ್ಪುವ ಆಚರಣೆ.

(ಶಾಂತಿಪುರಾಣ ೮-೧೩೧)

ಚಾರ್ವಾಕರ ತತ್ವಸಮುದಾಯ ನಿಂತಿರುವುದು ಅವರ ಜ್ಞಾನಮೀಮಾಂಸೆಯ ಮೇಲೆ. ಸತ್ಯವನ್ನು ತಿಳಿಯಬೇಕಾದರೆ ಇಂದ್ರಿಯಾನುಭವವೊಂದೇ ಸಾಧನ ಎಂದು ಅವರ ವಾದ. ಯಾವುದು ಇಂದ್ರಿಯಾನುಭವಕ್ಕೆ ವಿಷಯವಾಗುತ್ತದೆಯೋ ಅದು ಸತ್ಯ: ಇಂದ್ರಿಯಾನುಭವಕ್ಕೆ ಮೀರಿದ್ದೆಲ್ಲಾ ಸಂದೇಹಾಸ್ಪದವಾದದ್ದು. ನಿಜವಾದ ಜ್ಞಾನಕ್ಕೆ – ಅವರ ಪ್ರಕಾರ – ಅನುಮಾನವೂ ಸಾಧನವೆಂದು ಗಣಿಸಲಾಗುವುದಿಲ್ಲ: ಏಕೆಂದರೆ

ಅನುಮಾನದಲ್ಲಿ ವಿಶ್ವಸಂಬಂಧ ಅಂತರ್ಗತವಾಗಿದೆ. ಆ ವ್ಯಾಪ್ತಿಯನ್ನು ಇಂದ್ರಿಯಗಳ ಮೂಲಕ ಕಾಣಲಾಗುವುದಿಲ್ಲ. ಇಂಥ ಜ್ಞಾನ ಸಾಕ್ಷ್ಯರಹಿತವಾದದ್ದು. ಶಬ್ದಪ್ರಮಾಣವನ್ನೂ ನಾವು ನಂಬುವಂತಿಲ್ಲ: ಏಕೆಂದರೆ ಶಬ್ದ ಪ್ರಮಾಣದ ಸತ್ಯತೆಯನ್ನು ನಿಶ್ಚಯಿಸಬೇಕಾದ್ದು ಅನುಮಾನದಿಂದ. ಅಲ್ಲದೆ ಇಂಥ ಪ್ರಮಾಣ ಅನೇಕವೇಳೆ ಯುಕ್ತಿವಿರುದ್ಧವಾದದ್ದು. ವೇದದ ಪ್ರಮಾಣವನ್ನೂ ನಾವು ನೆಚ್ಚುವಂತಿಲ್ಲ: ವೇದಗಳಲ್ಲಿ ಸಂದೇಹಾಸ್ಪದವಾದ ವಿಷಯಗಳೂ ವಿರೋಧಾಭಾಸಗಳೂ ತುಂಬಿವೆ. ಒಂದು ಋಕ್ಕಿನಲ್ಲಿ ವಿಧಿಸಿರುವ ಕ್ರಿಯಾಮಾರ್ಗವನ್ನು ಮತ್ತೊಂದು ಋಕ್ಕು ಖಂಡಿಸುತ್ತದೆ. ಅಲ್ಲಿ ಹೇಳಿರುವಂಥ ಫಲಗಳು ಎಂದಿಗೂ ಲಭಿಸುವುದಿಲ್ಲ. ಚಾರ್ವಾಕ ಮೀಮಾಂಸೆಯನ್ನು ಕೆಲವರು ಭೌತವಾದಿ ಮೀಮಾಂಸೆಯೆಂದೂ ಕರೆಯುತ್ತಾರೆ. ಕಾರಣವಿಷ್ಟೇ ಚಾರ್ವಾಕ ಮತದಲ್ಲಿ ಇಂದ್ರಿಯದ ಅನುಭವ ಪ್ರಮಾಣ ಮಾತ್ರವನ್ನು ಒಪ್ಪಿಕೊಳ್ಳುತ್ತದೆ. ಸಾಕ್ಷ್ಯರಹಿತವಾದುದನ್ನು ಚಾರ್ವಾಕ ಪಂಥವು ಒಪ್ಪುವುದಿಲ್ಲ. ಹಾಗಿದ್ದರೆ ಅಮೂರ್ತವಾದುದನ್ನು ಒಪ್ಪಿಕೊಳ್ಳುವುದು ಹೇಗೆ? ಇದು ಚಾರ್ವಾಕ ಮತದ ಪ್ರಮುಖ ಪ್ರಶ್ನೆ. ಒಂದು ಹಂತದಲ್ಲಿ ಚಾರ್ವಾಕ ಮತವು ಆತ್ಮವಾದಿ ಪರಂಪರೆಯನ್ನು ಅನುಮಾನದಿಂದ ನೋಡುತ್ತದೆ. ಚಾರ್ವಾಕ ಮತವನ್ನು ತುಂಬಾ ಸರಳವಾಗಿ ವಿವರಿಸಬೇಕೆಂದರೆ –ಅದು ಸಂದೇಹವಾದಿ(ಆತ್ಮ–ಪರಮಾತ್ಮ ಸಂಬಂಧಕ್ಕೆ ಮಾತ್ರ) ಎರಡನೆಯದಾಗಿ ಚಾರ್ವಾಕ ಮತವು ದೇಹವನ್ನು ನಂಬುತ್ತದೆ. ಅಮೂರ್ತವಾದ, ಕಪೋಲ ಕಲ್ಪಿತ ಸಂಗತಿಗಳನ್ನು ನಿರಾಕರಿಸುತ್ತದೆ. ವಾಸ್ತವವಾಗಿ ಚಾರು+ವಾಕ್ ಅಂದರೆ ಸುಂದರವಾದ ಮಾತು ಎಂದರ್ಥ. ಈ ಕುರಿತಂತೆ 'ಭಾರತೀಯ ತತ್ವಶಾಸ್ತ್ರ ಪ್ರವೇಶ'ದಲ್ಲಿ ಈ ರೀತಿಯಾಗಿ ಬಂದಿದೆ: (ಪ್ರಭಾಕರ ಜೋಶಿ; ಎಂ.ಎ.ಹೆಗಡೆ ೨೦೦೮ ಪುಟ. ೨೦–೨೧)

"ಚಾರ್ವಾಕ ಅಥವಾ ಲೋಕಾಯತ ಎಂದು ಪ್ರಸಿದ್ಧವಾಗಿರುವ ಈ ತತ್ತ್ವ ಮಾರ್ಗವು ಬಹು ಪ್ರಾಚೀನವಾದುದು. ಸಮರ್ಥದಲ್ಲಿಯೂ ನಾಸ್ತಿಕ ನಿರೀಶ್ವರ ದೃಷ್ಟಿಯ ಈ ದರ್ಶನವು ಪ್ರಾಚೀನ ಭಾರತೀಯ ಚಿಂತನೆಯ ಧೀಮಂತ ವೈಚಾರಿಕತೆಯ ಜಾಜ್ವಲ್ಯಮಾನ ದೃಷ್ಟಾಂತವಾಗಿದೆ. ವೇದಶ್ರದ್ಧೆ, ದೈವಶ್ರದ್ಧೆ, ಮತಾಚಾರ, ಕರ್ಮಕಾಂಡಗಳು ಪ್ರಶ್ನಾತೀತ ವೆನಿಸಿದ್ದ ಕಾಲದಲ್ಲಿಯೇ ಈ ದರ್ಶನವು ರೂಪುಗೊಂಡು ಬೆಳೆದುದು ಆಶ್ಚರ್ಯಕರವೂ ಅಭಿಮಾನಾಸ್ಪದವೂ ಆದ ಸಾಧನೆಯಾಗಿದೆ.

'ಚಾರ್ವಾಕ'ವೆಂಬ ಹೆಸರು ಈ ದರ್ಶನಕ್ಕೆ ಬಂದುದನ್ನು ಹಲವು ರೀತಿಯಲ್ಲಿ ವಿವರಿಸಲಾಗಿದೆ. ಬೃಹಸ್ಪತಿಯ ಶಿಷ್ಯನಾದ ಚಾರ್ವಾಕನಿಂದ ಈ ಮತವು ಪ್ರಚಾರ ಪ್ರಸಿದ್ಧಿಗಳನ್ನು ಪಡೆದುರಿಂದ ಚಾರ್ವಾಕ ಮತವೆಂಬ ಹೆಸರು ಬಂತೆಂದು ಕೆಲವರು ಹೇಳಿದರೆ, ಚಾರುವಾಕ್ – ಸುಂದರವಾದ ಮಾತೆಂದು ಕೆಲವರ ವಿವರಣೆ. ಮತ್ತೆ ಕೆಲವರ ಪ್ರಕಾರ 'ಚರ್ವ್' (ಭೋಜನಮಾಡುವುದು), ಚರ್ವಣ ಎಂಬ ಪದದಿಂದ ಬಂದಿತೆಂದು ಹೇಳುತ್ತಾರೆ. ತಿನ್ನು, ಕುಡಿ, ಸಂತೋಷಪಡು ಎಂಬ ತತ್ತ್ವಗಳ ಪ್ರಸಾರದ ಕಾರಣದಿಂದ ಚರ್ವಣವೆಂದು ಕೆಲವರು ವಿವರಿಸಿದರೆ, ಪುಣ್ಯಾಪಾಪಗಳೆಂಬ ಪರೋಕ್ಷ

ವಸ್ತುಗಳನ್ನು ಚರ್ವಣಮಾಡಿದವರಾದ್ದರಿಂದ, ಅಂದರೆ ಅಗಿದು ಹುಡಿಮಾಡಿದ್ದರಿಂದ, ಚಾರ್ವಾಕರೆಂದು ಕೆಲವರ ಅಭಿಪ್ರಾಯ. ಕಾರಣಗಳೇನೆ ಇದ್ದರೂ ಈ ಹೆಸರು ಸರ್ವತ್ರ ಪ್ರಸಾರವಾದುದು ನಿಜ. ಲೋಕಾಯತ ಅಥವಾ ಲೋಕಾಯತಿಕವೆಂದೂ ಅವನ್ನು ಕರೆಯುವುದುಂಟು. ವಿಚಾರ ರಹಿತರಾದ ಸಾಮಾನ್ಯ ಜನರ ಆಚರಣೆಯ ರೂಪ ದಲ್ಲಿರುವುದರಿಂದ ಈ ಹೆಸರೆಂದು ಕೆಲವರು ಹೇಳಿದರೆ, ಲೋಕದಲ್ಲಿ ಕಾಣುವ ದೃಶ್ಯ ಪ್ರಪಂಚದ ಸತ್ಯಗಳನ್ನು ಆಧರಿಸಿರುವ ಕಾರಣ ಈ ಹೆಸರೆಂದು ಕೆಲವರ ವಿವರಣೆ.

ಚಾರ್ವಾಕ ದರ್ಶನಕ್ಕೆ ಬೃಹಸ್ಪತಿ ಎಂಬ ಆಚಾರ್ಯರೇ ಮೂಲಪುರುಷರೆಂದು ಹೇಳಲಾಗಿದೆ. ಈ ಬೃಹಸ್ಪತಿಗಳು ಕಾಲ್ಪನಿಕ ವ್ಯಕ್ತಿಗಳಲ್ಲ. ಐತಿಹಾಸಿಕ ವ್ಯಕ್ತಿಗಳೆಂಬುದಕ್ಕೆ ಪ್ರಮಾಣಗಳಿವೆ. ಇವರಿಂದ ರಚಿತವಾದ ಕೆಲವು ಸೂತ್ರಗಳು ಉಪಲಬ್ಧವಿವೆಯಷ್ಟೇ ಅಲ್ಲ ಅವರು ಅರ್ಥಶಾಸ್ತ್ರದ ಕರ್ತೃಗಳು ಎಂಬುದಾಗಿಯೂ ತಿಳಿದಿದೆ. ಹಾಗಾಗಿ ಈ ದರ್ಶನವನ್ನು 'ಬಾರ್ಹಸ್ಪತ್ಯ ದರ್ಶನ' ಎಂದು ಕರೆಯುವುದುಂಟು.

ಚಾರ್ವಾಕದರ್ಶನವು ಎಲ್ಲ ದರ್ಶನಗಳಿಗೆ ಪ್ರತಿಕಕ್ಷಿಯಾಗಿದೆ. ಅದನ್ನು ಖಂಡಿಸುವಲ್ಲಿ ವೈದಿಕ-ಅವೈದಿಕ ದರ್ಶನಗಳೆಲ್ಲವೂ ಸಾಕಷ್ಟು ಶ್ರಮಿಸಿವೆ. ಇತರ ದರ್ಶನಗಳಲ್ಲಿರುವ ಲೋಕಾತೀತ ಆಧ್ಯಾತ್ಮಿಕ ಮತ್ತು ಕಾಲ್ಪನಿಕ ಅಂಶಗಳೆಲ್ಲವನ್ನೂ ಸಂಪೂರ್ಣವಾಗಿ ನಿರಾಕರಿಸುವ ಚಾರ್ವಾಕರು ಈ ಲೋಕದ ಬದುಕಿಗೆ ನಿಷ್ಠರಾದವರು; ಬದುಕಿನ ಅನುಭವಕ್ಕೆ ಬದ್ಧರಾದವರು. ತೀಕ್ಷ್ಣವಾದ ತರ್ಕದ ಬುನಾದಿಯ ಮೇಲೆ ನಿಲ್ಲಿಸಿದ ಅವರ ಸಿದ್ಧಾಂತಗಳ ಕಾರಣದಿಂದ ಜನಪ್ರಿಯತೆ ಪ್ರಾಪ್ತವಾದುದರ ಜೊತೆಗೆ ದರ್ಶನವೆಂಬ ಗೌರವವೂ ದೊರಕಿತು. ಚಾರ್ವಾಕರನ್ನು ಕಟುವಾಗಿ ನಿಂದಿಸಿದರೂ ಅದನ್ನೊಂದು ದರ್ಶನವೆಂದು ಗೌರವಿಸಿರುವುದು ಭಾರತೀಯರ ಹೃದಯ ವೈಶಾಲ್ಯಕ್ಕೆ ದ್ಯೋತಕ.

ಚಾರ್ವಾಕ ಮತದ ಕುರಿತು ಅದ್ವೈತ ಸಿದ್ಧಾಂತವು ವ್ಯಕ್ತಪಡಿಸುವ ಅಭಿಪ್ರಾಯಗಳು ಹೀಗಿವೆ:

ಚಾರ್ವಾಕನಾದರೋ "ಆ (ಆತ್ಮ) ಈ ಪುರುಷ(ದೇಹ) ಆಹಾರದ ರಸದಿಂದ ಆದವನು ನಿರ್ಮಿತನಾದವನು ಮುಂತಾದ ಶ್ರುತಿಯಿಂದ ಬೆಂಕಿ ಹತ್ತಿದ ಮನೆಯಿಂದ ತನ್ನ ಮಗನನ್ನು(ಅಲ್ಲಿಯೇ) ಬಿಟ್ಟು ತಾನು ಮಾತ್ರ ಹೊರಕ್ಕೆ ಪಾರಾಗಿ ಬರುವುದರಿಂದ ಮತ್ತು "ನಾನು ದಪ್ಪನಾಗಿದ್ದೇನೆ, ನಾನು ಒಣಗಿಕೊಂಡಿದ್ದೇನೆ" ಮುಂತಾದ (ಸ್ವಂತ) ಅನುಭವದಿಂದಲೂ, ಸ್ಥೂಲದೇಹವೇ ಆತ್ಮಾ ಎನ್ನುತ್ತಾನೆ.

ಚಾರ್ವಾಕರು ವೇದವನ್ನು ಪ್ರಮಾಣವೆಂದು ಒಪ್ಪುವುದಿಲ್ಲ. ಶ್ರುತಿವಾಕ್ಯವನ್ನು ಅವರು ಇಲ್ಲಿ ಚಾರ್ವಾಕಮತಕ್ಕೆ ಪೋಷಕವಾಗಿ ಉದ್ಧರಿಸಿರುವುದು ಶ್ರುತಿಯನ್ನು ಪ್ರಮಾಣವೆಂದು ನಂಬಿರುವ ವೇದಾಂತಿಯನ್ನು ತೃಪ್ತಿಪಡಿಸಲು ಮಾತ್ರ.

ಬೌದ್ಧಾದಿಗಳು ಸ್ವಮತಸ್ಥಾಪನೆಗಾಗಿ ವೇದವಾಕ್ಯಗಳನ್ನು ಉದ್ಧರಿಸಿದಾಗ ಅವರ ದೃಷ್ಟಿಯೂ ಇದೇ ಆಗಿರುತ್ತದೆ.

"ಮಗನೇ ಆತ್ಮನಾಗಿದ್ದರೆ ಮಗನನ್ನು ಮೊದಲು ರಕ್ಷಿಸುತ್ತಿದ್ದ, ತನ್ನನ್ನಾದರೂ

ಬಲಿಗೊಟ್ಟು ಮಗನನ್ನು ಕಾಪಾಡುತ್ತಿದ್ದ. ಏಕೆಂದರೆ, ಆತ್ಮನೇ ಎಲ್ಲಕ್ಕಿಂತ ಪ್ರಿಯತಮವಾದ ವಸ್ತು. ಲೋಕದಲ್ಲಿ ಎಲ್ಲರೂ ತಮ್ಮ ತಮ್ಮ ಶರೀರಗಳನ್ನು ಅಪಾಯಗಳಿಂದ ಕಾಪಾಡುವುದರಲ್ಲಿ ನಿರತರಾಗಿರುವುದು ಕಂಡುಬರುತ್ತದೆಯೇ ವಿನಾ, ಇತರರ ಶರೀರಗಳನ್ನಲ್ಲ. ಆದ್ದರಿಂದ ತನ್ನ ಶರೀರದಿಂದ ಭಿನ್ನನಾದ ಮಗ ತನಗೆ ಆತ್ಮನಲ್ಲ.

ದಪ್ಪ, ಸಣ್ಣ ಮುಂತಾದವು ದೇಹದ ಧರ್ಮಗಳು. ಆದರೆ ಅನುಭವದಲ್ಲಿ ಅವು ಆತ್ಮನ ಧರ್ಮಗಳಂತೆ ತೋರುತ್ತವೆ. ಆದ್ದರಿಂದ ದೇಹವೇ ಆತ್ಮಾ."

"ರಕ್ತಮಾಂಸಾದಿ ರೂಪವಾದ, ಅನ್ನ ಕಾರ್ಯವಾದ, ದೃಶ್ಯ ಶರೀರ."

ಚಾರ್ವಾಕರು ಹೇಳುವುದೇನೆಂದರೆ:– ಜೀವ (ಆತ್ಮ) ಎಂಬುದು ಇಲ್ಲ. ಪೃಥ್ವಿ, ಜಲ, ತೇಜ, ವಾಯು ಎಂಬೀ ನಾಲ್ಕು ಭೂತಗಳ ಹೊರತು ಬೇರೆ ಪದಾರ್ಥವೇ ಇಲ್ಲ. ಜಗತ್ತಿನೊಳಗಿನ ಎಲ್ಲ ಪದಾರ್ಥಗಳು ಈ ನಾಲ್ಕು ಭೂತಗಳ ಸಂಮಿಶ್ರಣದಿಂದ ಉಂಟಾಗಿರುವುವು. ಮನುಷ್ಯಾದಿ ಪ್ರಾಣಿಗಳಲ್ಲಿ ಚೈತನ್ಯವು ಕಂಡುಬಂದರೂ ಆತ್ಮವೆಂಬ ಬೇರೆ ಪದಾರ್ಥವುಂಟೆಂದು ಹೇಳುವ ಅವಶ್ಯವಿಲ್ಲ. ಪಿಷ್ಟೋದಕಗುಡಧಾತಕೀ ಸಂಯೋಗದಿಂದ ಮದವಿಕಾರವು ಹೇಗೆ ಉತ್ಪನ್ನವಾಗುವುದೋ ಹಾಗೆ ದೇಹಾಕಾರವಾಗಿ ಪರಿಮಿಸಿದ ಪೃಥಿವ್ಯಪ್ತೇಜೋವಾಯುಗಳಿಂದ ಗರ್ಭಾದಿಮರಣ ಪರ್ಯಂತವಾಗಿ ದೇಹದಲ್ಲಿ ಚೈತನ್ಯವು ಪರಿಣಮಿಸುವುದು. ಈಗಿನ ಜಡವಾದಿ ದಾರ್ಶನಿಕರೂ ಯಕೃತ್ತಿನಿಂದ ಒಂದು ತರದ ರಸವು ಹೊರಡುವಂತೆ ಮಸ್ತಿಷ್ಕದಿಂದ ಚೈತನ್ಯವು ಉತ್ಪನ್ನವಾಗುವುದೆಂದೂ ಆತ್ಮನೆಂಬ ಜಡ ಭಿನ್ನ ಪದಾರ್ಥವನ್ನು ಒಪ್ಪುವ ಅವಶ್ಯವಿಲ್ಲವೆಂದೂ ಹೇಳುವರು.

*ವಿವರಗಳಿಗೆ ನೋಡಿ: ಬೃಹಸ್ಪತಿ ಮತ*
*ಡಾ.ಎಂ. ಪ್ರಭಾಕರ ಜೋಶಿ ೨೦೦೮ ಭಾರತೀಯ ತತ್ವಶಾಸ್ತ್ರ ಪ್ರವೇಶ ಪುಟ. ೨೧–೨೨*
*ಎನ್. ಬಾಲಸುಬ್ರಹ್ಮಣ್ಯ ೧೯೭೩ ವೇದಾಂತಸಾರ ಪುಟ. ೬೫, ೬೬*
*ಮಹದೇವ ಪ್ರಭಾಕರ ಪೂಜಾರ ೧೯೭೬ ಜೈನಧರ್ಮದ ಪರಿಭಾಷೆ ಪುಟ. ೨೪*

**೩೩೩. ಚಿತ್ರಪಟ**

*ವೈನಯಿಕನೆಂಬೊನೋರ್ವಪುರುಷಂ ಕನ್ನೆಯ ಬಂಟನ ವೃದ್ಧಸ್ತ್ರೀಯ ಮೂವರ* ***ಚಿತ್ರಕಥೆಗಳಂ ಪಟದೊಳ್*** *ತೋಜೆ ಪೇೞ್ದುಲೋಗರಂ ಡಂಬಿಸಿ ಮಾಱುಗೊಳ್ವ ಬತ್ತಮಂ ಕಳ್ವೊನ್..........................(ಡಿ.ಎಲ್.ಎನ್. ೨೦೦೯ ಪುಟ. ೫೮)*

ಚಿತ್ರಕಥೆ ಪಟವೆಂಬುದು ಒಂದು ಮನೋರಂಜನೆಯ ಕಲೆ. ಚಿತ್ರಕಥೆಗಳ ಪಟದ ಕಥನವನ್ನು ನಿರೂಪಿಸುವುದು ಇದರಲ್ಲಿ ಒಂದು ಕ್ರಮವಾಗಿದೆ. ಒಂದು ಚಿತ್ರವನ್ನು ತೋರಿಸಿ ಅದರ ಮೂಲಕ ಕಥೆ ವಿವರಿಸಿ. ಅನಂತರ ಅದರ ಮುಂದುವರಿದ ಭಾಗವನ್ನು ವಿವರಿಸಲಾಗುತ್ತದೆ. ಕಥಾ ನಿರೂಪಣೆಯ ವಿಶಿಷ್ಟ ಶೈಲಿಗಳಲ್ಲಿ ಇದೂ ಒಂದು. ಇದರಲ್ಲಿ ಚಿತ್ರವೂ ಇರುತ್ತದೆ. ಕಥೆಯೂ ಇರುತ್ತದೆ. ಡಿ.ಎಲ್. ನರಸಿಂಹಾಚಾರ್ಯರು ಚಿತ್ರಕತೆಯನ್ನು ವಿವರಿಸುವಾಗ ಚಿತ್ರಪಟವಿರಬಹುದೆಂದು ಊಹಿಸಿದ್ದಾರೆ.

**೩೩೪. ಚೈತನ್ಯ**

ಚೈತನ್ಯವು ದೇಹದ ಒಂದು ಗುಣ. ಭೌತವಸ್ತುವಿನ ಕಣಗಳು ಯಾವುದೋ ರಹಸ್ಯ ರೀತಿಯಲ್ಲಿ ಒಂದುಗೂಡಿ ಮಾನವದೇಹವಾಗಿ ಮಾರ್ಪಟ್ಟಾಗ ಚೈತನ್ಯ ಹುಟ್ಟುತ್ತದೆ. ಚಾರ್ವಾಕರು ಈ ಮನೋವ್ಯಾಪಾರವನ್ನು ವಿವರಿಸುವಾಗ ಅದನ್ನು ಮದ್ಯದ ಅಮಲಿಗೆ ಹೋಲಿಸುತ್ತಾರೆ. ಸ್ವತಃ ಮಾದಕವಲ್ಲದ ಕೆಲವು ಪದಾರ್ಥಗಳನ್ನು ಬೆರಸಿದಾಗ ಮಿಶ್ರಿತ ವಸ್ತುವಿನಲ್ಲಿ ಮಾದಕಗುಣ ಉತ್ಪತ್ತಿಯಾಗುತ್ತದೆಯಷ್ಟೆ. ಚೈತನ್ಯದ ಅನುಭವಕ್ಕೆಲ್ಲಾ ಚಾಲಕ ಶಕ್ತಿಯಾಗಿದ್ದು 'ಆತ್ಮ' ಎನಿಸಿಕೊಳ್ಳುವ ಆಧ್ಯಾತ್ಮಿಕ ವಸ್ತುವೇನೂ ಇಲ್ಲ. ದೇಹವೇ ಆತ್ಮ. 'ನಾನು ಕೃಶವಾಗಿದ್ದೇನೆ', ನಾನು ಸ್ಥೂಲವಾಗಿದ್ದೇನೆ. ಇತ್ಯಾದಿ ವಾಕ್ಯಗಳಲ್ಲಿ 'ನಾನು' ಎಂಬ ಪದಕ್ಕೆ ದೇಹವೆಂದೇ ಅರ್ಥ, ಖಂಡಿತ ಬೇರೆ ಯಾವ ಅರ್ಥವೂ ಇಲ್ಲ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಉಳಿದ ಮತಗಳು ಚೈತನ್ಯವನ್ನು ವಿವರಿಸಿರುವ ರೀತಿ. ಚಿತ್ ಎಂದರೆ ಮನಸ್ಸು–ಚೈತ್ಯ ಅಂದರೆ ಮನೋಸ್ಥಿತಿ. ಆದರೆ ವೇದಾಂತದಲ್ಲಿ ಚೈತನ್ಯಕ್ಕೆ ವಿಶೇಷ ಅರ್ಥವನ್ನು ಕಲ್ಪಿಸಲಾಗಿದೆ. ಚಿತ್–ತಪಸ್ಸು ಇತ್ಯಾದಿಗಳಿಗೆ ವೇದಾಂತವು ಕಲ್ಪಿಸುವ ಅರ್ಥವೇ ಬೇರೆ.

*ವಿವರಗಳಿಗೆ ನೋಡಿ: ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦*

*ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ ಪುಟ. ೧೩೫.*

**೩೩೫. ಚೌಡೇಶ್ವರಿ**

ಮೈಸೂರು ಸಾಲೆಂಗಳ ಕಡೆಗೆ ಅಲ್ಲಿಯ ದೇವಾಂಗರು ಚೌಡೇಶ್ವರಿ (ಚಾಮುಂಡಿ?) ಎಂಬ ಹೆಸರಿನಿಂದ ಭಜಿಸುವ ದೇವಿಯ ಮಹಾಪೂಜೆಯ ಕಾಲಕ್ಕೆ ಒಂದು ಬನವನ್ನು (Grove) ರಚಿಸಿ ಅದರಲ್ಲಿ ದೇವಿಯನ್ನು ಸ್ಥಾಪಿಸುವರು! ಬನಶಂಕರಿಯೆಂಬುದು ಮೊದಲಿನ ಅವತಾರ, ಚೌಡೇಶ್ವರಿಯು ಅದರ ಮುಂದಿನದಾಗಿರಬೇಕು. ಚಾಮುಂಡಿ ಯೆಂಬುದು ಚೌಡೇಶ್ವರಿಯ ಸಂಸ್ಕೃತರೂಪ. 'ಚಾಮುಂಡಿ' ಎಂಬುದಕ್ಕೆ ಹೇಳುವ ಅರ್ಥಕ್ಕಿಂತಲೂ ಚೌಡೇಶ್ವರಿ ಎಂಬ ಶಬ್ದಕ್ಕೆ ಆಗುವ ಅರ್ಥವು ಬಹಳ ಮಹತ್ವದ ಐತಿಹ್ಯವನ್ನು ಬೆಳಕಿಗೆ ತರುತ್ತದೆ. ಚೂಡಾ=ಕೂದಲು; (ಇದರೊಡನೆ ಕನ್ನಡದ ಸೂಡು, ತಮಿಳಿನ ಚೂಟ್ಟು, ಮತ್ತು ಕನ್ನಡದ ಜುಟ್ಟುಗಳನ್ನು ತೂಗಿ ನೋಡಿ). ಬನದ ಶಂಕರಿ ಅವಳು; ಚೂಡದ ಈಶ್ವರಿ ಇವಳು. ಇಬ್ಬರೂ ನೇಯ್ಕಾರರಿಗೆ ಜೀವನಾಧಾರವನ್ನೀವ ಮಹಾದೇವಿಯರೇ. ಚೂಡಾ ಎಂದರೆ ಕಂಕಣ (ಬಳಿ); ಕಾಜಿನ ಕಂಕಣಗಳು ಗೊತ್ತಾಗುವ ಮೊದಲು ಕೂದಲಿನ (ಚೂಡಾ). ಕಂಕಣವಿರಬೇಕೆಂದು ಊಹಿಸಬಹುದಾಗಿದೆ. ಮೊಟ್ಟಮೊದಲಿಗೆ ಉಣ್ಣಿಕಂಕಣವೇ ಎಲ್ಲರಲ್ಲಿ ಇದ್ದಿತೆಂದು ವ್ಯಕ್ತವಾಗಿದೆ. ಚೌಡೇಶ್ವರಿಯು ಕೂದಲು, ಕಂಕಣಗಳ ಅಧಿದೇವತೆ; ಆದುದರಿಂದಲೇ, ಭಾಗ್ಯದೇವತೆ; ಸೌಭಾಗ್ಯದಾಯಕ ಪರಮೇಶ್ವರಿ ಎಂದು ಶಂಬಾರವರ ಅಭಿಪ್ರಾಯ. ಚೌಡೇಶ್ವರಿ; ಚೌಡಮ್ಮ; ಮುಂತಾದ

ಹೆಸರುಗಳಿಗೂ – ಮಾತೃದೇವತೆಯರಿಗೆ ಇರುವ ಹೆಸರುಗಳಿಗೂ ಸಂಬಂಧವಿರುವುದು ಗಮನಾರ್ಹ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೧ ಪುಟ. ೨೭೭.*

**೩೩೬. ಚೌಪಳಿಗೆ**

*"ಚೆಂಬೊನ್ನನೆಲೆಯ **ಚೌಪಳಿಗೆಗಳೊಳ್"** ಎಂದು ಪಂಪನಲ್ಲಿ ಬರುತ್ತದೆ.*

*(ಪಂಪ ಭಾರತ ೨–೬೬)*

ನೆಲವನ್ನು ಚಂದ್ರಕಾವಿಯಿಂದ ಧಮ್ಮಸ್ಸು ಮಾಡಿ(ಗಟ್ಟಿಸಿ) ಅಪರಂಜಿಯಿಂದ ಮಾಡಿದ ಮನೆಗಳ ತೊಟ್ಟಿಗಳಲ್ಲಿ ಬಾವುಟ ಕಟ್ಟಿಸಿ ಎಂದು ಪಂಪ ಭಾರತದಲ್ಲಿ ಬರುತ್ತದೆ. ಚಂದ್ರಕಾವಿ; ಧಮ್ಮಸ್ಸು ಮತ್ತು ಅಪರಂಜಿಯಿಂದ ಮಾಡಿದ ಮನೆಗಳ ತೊಟ್ಟಿಗಳು ಇಲ್ಲಿ ಗಮನಾರ್ಹವಾಗಿದೆ. ಇದು ಆ ಕಾಲದ ಮನೆಗಳ ಚಿತ್ರಣವನ್ನು ನೀಡುತ್ತವೆ. ಚಂದ್ರಕಾವಿ (ಬಣ್ಣ) ಧಮ್ಮಸ್ಸು ಸಲಕರಣೆ. ಅಪರಂಜಿಯಿಂದ ಮಾಡಿದ ಮನೆಯ ತೊಟ್ಟಿಗಳು ಈ ದೃಷ್ಟಿಯಿಂದ ಸಾಮಾಜಿಕ ಮಹತ್ವವನ್ನು ಪಡೆದಿದೆ.

ಚೌಪಳಿಗೆ ಹಜಾರ, ಮಂಟಪವೆಂಬ ಅರ್ಥವಿದೆ. ಕಟ್ಟಡ ನಿರ್ಮಾಣದ ಒಂದು ಮಾದರಿಯು ಈ ಮೂಲಕ ವ್ಯಕ್ತವಾಗಿದೆ.

## ಛ

**೩೩೭. ಛಾಯಾಲಕ್ಷ್ಯ**

*'ಛಾಯಾಲಕ್ಷ್ಯಮನೊಡ್ಡಿಯಂ*
*ಮಾಯದ ನೀರೊಳಗೆ ತನ್ನನಡಸಿದ ನೆಗಬಿಂ"*
*ಪ್ರತಿಬಿಂಬದ ಗುರಿಗೆ ಛಾಯಾ ಲಕ್ಷ್ಯವೆಂದು ಕರೆಯುತ್ತಾರೆ.*

*(ಪಂಪ ಭಾರತ ೨–೬೦)*

ಅರ್ಜುನನ ಗುರಿಸಾಧನೆಯನ್ನು ಪರೀಕ್ಷಿಸಲು ಪ್ರತಿಬಿಂಬ ಗುರಿಯನ್ನು ದ್ರೋಣಾಚಾರ್ಯರು ಒಡ್ಡುತ್ತಾರೆ. ಅಂದರೆ ಪ್ರತಿಬಿಂಬವನ್ನು ನೋಡಿಕೊಂಡು ಬಾಣ ಪ್ರಯೋಗ ಮಾಡಬೇಕು. ಇದು ಬಿಲ್ವಿದ್ಯೆಯ ಸಾಧನೆಯಲ್ಲಿ ಒಂದು ಕ್ರಮ. ಮತ್ಸ್ಯಭೇದನೆಯಲ್ಲಿಯೂ ಅರ್ಜುನನ ಗುರಿ ಸಾಫಲ್ಯ ಪಡೆದುದನ್ನು ಇಲ್ಲಿ ನೆನಪಿಸಿಕೊಳ್ಳಬೇಕು.

ಛಾಯಾ ಎಂದರೆ ನೆರಳು, ಪ್ರತಿಬಿಂಬ ಅದಕ್ಕೆ ಗುರಿಯಿಡುವುದು ಛಾಯಾಲಕ್ಷ್ಯವೆಂದೆನಿಸಿಕೊಂಡಿದೆ.

# ಜ

**೩೩೮. ಜಡವಾದ**

*ಏಂ **ಜಡತೆ** ತಿರಿಕರೊಡ ಪುಟ್ಟದುದೋ*

*ಕಂಡಲ್ಲದಜೆಯೆಂ.......... (ಅಪ್ರತ್ಯಕ್ಷವೆಂಬ ಜಡವಾದವು)*

*(ಶಾಂತಿಪುರಾಣ ೮-೧೪೧ ವ)*

'ಕಂಡಲ್ಲದೆ ಅರಿಯಲಾರೆ'ನೆಂಬ ನಾಣ್ಣುಡಿಯನ್ನು ಹೋಲುವುದು. ಪೊನ್ನನು ಜಡವಾದವನ್ನು ಇಲ್ಲಿ ಟೀಕಿಸಿದ್ದಾನೆ. ಜಡವಾದಿಯೆಂದರೆ ಅಚೇತನವಾದಿಯೆಂದು ಅರ್ಥ.

ಇವರಾರಾನಾರ್ಗೆನಗೀ
ಭವಮಲ್ಲದೆ ಕಟೆದ ಭವದ ತಾಯ್ ತಂದೆ ತನೂ ।
ಭವರೆಲ್ಲರುಮೆಲ್ಲಿದರೆಂ
ದವಧರಿಸದಿದೇಂ **ಜಡಸ್ವಭಾವನೊ** ಜೀವಂ ॥

(ಅಜಿತತೀರ್ಥಂಕರ ಪುರಾಣ ತಿಲಕಂ ೬. ೫೩)

ಜಡಸ್ವಭಾವವೆಂದರೆ ಆಲಸ್ಯದ ಸ್ವಭಾವ ಹೊಂದಿರುವುದು. ಈ ಭವವಲ್ಲದೆ ಕಳೆದ ಜನ್ಮದಲ್ಲಿ ಯಾರು ತಂದೆ-ತಾಯಿಯಾಗಿದ್ದರು. ತಾನು ಯಾರು; ತನ್ನ ಹುಟ್ಟೇನು ಎಂದು ಯೋಚಿಸದೆ ಇರುವವನು ಜಡಸ್ವಭಾವದವನು. ಅಂಥ ಜಡಸ್ವಭಾವದ ಜೀವ ಪೂರ್ವಾಪರವನ್ನು ವಿಚಾರಿಸುವುದಿಲ್ಲ.

*ವಿವರಗಳಿಗೆ ನೋಡಿ: ಚಾರ್ವಾಕ.*

**೩೩೯. ಜನಪದ**

*"ಜಂಬೂದ್ವೀಪದ ಭಾರತ ವರ್ಷದ ಸಕಲ ಜಗತೀ ಜನಸ್ತುತ್ಯ*

*ದಕ್ಷಿಣಾತ್ಯವೆಂಬ **ಜನಪದ** ಮುಂಟು"*

*(ಪಂಚತಂತ್ರ ಪೀಠಿಕಾ ಪ್ರಕರಣ ಪುಟ. ೧೧)*

ದಾಕ್ಷಿಣಾತ್ಯ ಜನಪದವೆನ್ನುವುದು ಇಲ್ಲಿ ಗಮನಾರ್ಹ ಸಂಗತಿಯಾಗಿದೆ. ವಾಸ್ತವವಾಗಿ ಜಂಬೂ ದ್ವೀಪದ ಭರತ ವರ್ಷದ ಜಗತೀ ಸ್ತುತ್ಯವಾಗಿರುವ ದಾಕ್ಷಿಣಾತ್ಯ ಜನಪದ(ಜಾನಪದ ಪರಂಪರೆಯ ಕಥನ ವಿಧಾನ)ವನ್ನು ಬಳಸಿಕೊಂಡಿದ್ದೇನೆ ಎಂದು ದುರ್ಗಸಿಂಹನು ಹೇಳಿಕೊಂಡಿದ್ದಾನೆ. ದಾಕ್ಷಿಣಾತ್ಯವೆನ್ನುವುದು ಪ್ರದೇಶಕ್ಕೆ ಸಂಬಂಧಿಸಿರುವುದು. ಜಂಬೂ ದ್ವೀಪ; ಭರತ ವರ್ಷ; ಗೋಕರ್ಣ ಮಂಡಲ ಇತ್ಯಾದಿ ಮಂತ್ರಗಳಲ್ಲಿ ಹೇಳಿಕೊಳ್ಳುವುದಿದೆ. 'ಜಂಬೂದ್ವೀಪ' 'ಭರತಖಂಡ' 'ಗೋಕರ್ಣಮಂಡಲ' ಇವುಗಳು ಪ್ರದೇಶವಾಚಿಯಾಗಿದೆ. ಪ್ರಾಯಶಃ ದಾಕ್ಷಿಣಾತ್ಯ ಜನಪದ ಪರಂಪರೆಯೂ ಒಂದು ಇದ್ದಿರಬೇಕು. 'ಜನ' ಎಂದರೆ Race; ಈ ಅರ್ಥದಿಂದ ಮಾನವ ಕುಟುಂಬದಲ್ಲಿಯ ಒಂದು 'ಜನ' (ಕುಲ)

ಎಂಬುದು ಉಳಿದಿಲ್ಲ. ತಂಡು-ದಂಡುಗಳ ಬಾಳುವೆಯ ಘಟ್ಟದಲ್ಲಿಯೆ ವಂಶಮಿಶ್ರಣಕ್ಕೆ ಪ್ರಾರಂಭವಾಗಿದೆ. ಒಂದು ತಂಡದವರು ಇನ್ನೊಂದು ತಂಡದವರ ಹೆಣ್ಣು ಎತ್ತಿಕೊಂಡೊಯ್ಯುವುದು ಆ ಕಾಲದ ವಾಡಿಕೆಯೆ ಆಗಿತ್ತು. ದಂಡಿನ ಜನದಲ್ಲಿ, ತಂಡಗಳ ಮನೋವೃತ್ತಿಯ ಬಾಳವೆಯಲ್ಲಿ ಕನ್ಯಾಪಹರಣವು ಒಂದು ಬಗೆಯ ಪೌರುಷ ಎಂದು ಬಗೆಯಲಾಗುತ್ತದೆ, ಇಂದಿಗೂ! ಎಂದು ಶಂಬಾರವರ ಅಭಿಪ್ರಾಯ.

ಬುದ್ಧನ ಕಾಲದಲ್ಲಿ ಮಹಾಜನಪದಗಳು ಎಂದು ಕರೆಯಲಾಗುತ್ತಿದ್ದ ವಿಶಾಲ ರಾಜ್ಯಗಳನ್ನು ನಾವು ಕಾಣುತ್ತೇವೆ. ಅವು ವಿಂಧ್ಯದಿಂದ ಉತ್ತರದಲ್ಲಿ ವಾಯವ್ಯದ ಗಡಿಯಿಂದ ಬಿಹಾರದವರೆಗೆ ಹರಡಿದ್ದುವು. ಅವುಗಳಲ್ಲಿ ಮಗಧ, ಕೋಸಲ, ವತ್ಸ ಮತ್ತು ಅವಂತಿ ಈ ನಾಲ್ಕು ಸಾಕಷ್ಟು ಬಲಿಷ್ಠವಾಗಿದ್ದುವು. ಈಗಿನ ಮಾಂಘಿರ್ ಹಾಗೂ ಭಾಗಲಪುರ ಜಿಲ್ಲೆಗಳಲ್ಲಿ ವ್ಯಾಪಿಸಿದ್ದ ಅಂಗ ರಾಜ್ಯಕ್ಕೆ ಚಂಜಪ ರಾಜಧಾನಿಯಾಗಿತ್ತು. ಅಲ್ಲಿ ಕಿ.ಪೂ. ಆರನೆಯ ಶತಮಾನದಿಂದ ಜನ ನೆಲೆಗೊಂಡಿದ್ದ ಸೂಚನೆಗಳಿವೆ. ಕೊನೆಗೆ ನೆರೆಯ ಬಲಿಷ್ಠವಾದ ಮಗಧವು ಅಂಗ ರಾಜ್ಯವನ್ನು ನುಂಗಿತು. ಎಂದು ಆರ್. ಎಸ್. ಶರ್ಮ ಹೇಳುತ್ತಾರೆ.

ಜನಪದವೆಂದರೆ ಜನರ ಗುಂಪು. ಬುದ್ಧನ ಕಾಲದಲ್ಲಿ ಮಹಾಜನಪದಗಳು ರಾಜಕೀಯ ವ್ಯವಸ್ಥೆಯ ಒಂದು ಭಾಗವಾಗಿತ್ತು. ಮಹಾಜನಪದ ಮಹಾನ್ ರಾಜ್ಯಕ್ಕೆ ಪರ್ಯಾಯಗಳಾಗಿವೆ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೩ ಪುಟ. ೭೯*

*ಆರ್.ಎಸ್. ಶರ್ಮ ೨೦೦೭ ಪ್ರಾಚೀನ ಭಾರತ ಪುಟ. ೧೦೫*

**೩೪೦. ಜನಿವಾರ**

*ತಪಸ್ವಿಯ ಕೊರಲೊಳ್*
*ಕರಮೆಸೆದು ತೋಜೆದುದು ತಾ*
*ವರೆದಂಟಿನ ಮಿಸುಪ ನೂಲ ಪೊಸ* ***ಜನಿವಾರಂ***

*(ಕರ್ಣಾಟಕ ಕಾದಂಬರಿ, ೧-೧೭೪)*

ತಾವರೆ ದಂಟಿನಮಿಸುಪ ನೂಲ ಪೊಸ ಜನಿವಾರದ ಕುರಿತು ಕವಿಯು ಹೇಳಿದ್ದಾನೆ. ಸ್ತ್ರೀಯು ಜನಿವಾರ ಧರಿಸಿದ ವಿವರ ಬರುತ್ತದೆ. ಜನಿವಾರಕ್ಕೆ ಬ್ರಹ್ಮಸೂತ್ರವೆಂದೂ ಕರೆಯುತ್ತಾರೆ.

ಲಲಿತಾಂಗಿಯನೆಂಬಿನೆಗಂ
ಪೊಳೆಯುತ್ತಂ **ಬ್ರಹ್ಮಸೂತ್ರ**ಮೇನೊಪ್ಪಿದುದೋ

(ಕರ್ಣಾಟಕ ಕಾದಂಬರಿ, ೪-೫೩)

ಬ್ರಹ್ಮಸೂತ್ರ; ಯಜ್ಞೋಪವೀತ; ಜನಿವಾರ ಮೂರೂ ಪದಗಳು ಪರ್ಯಾಯ ಪದಗಳು. ಜನಿವಾರಕ್ಕೆ ಹಾಕುವ ಗಂಟಿನ ಹೆಸರು ಬ್ರಹ್ಮಗಂಟು, ಪಠಿಸುವ ಮಂತ್ರ

ಬ್ರಹ್ಮ ಮಂತ್ರ; ಯಜ್ಞದ ಎದುರಿನಲ್ಲಿ ಧರಿಸುವ ದಾರಕ್ಕೆ ಯಜ್ಞೋಪವೀತ ಎಂದು ಕರೆಯುತ್ತಾರೆ.

ಅವಳ ಕೊರಳಿನಲ್ಲಿ ಯಜ್ಞೋಪವೀತವು ಪ್ರಕಾಶಮಾನವಾಗಿ ಶೋಭಿಸುತ್ತಿತ್ತು. ಅದು ಬಾಲಚಂದ್ರನ ಒಳ್ಳೆಯ ಕಿರಣಗಳು ಬಂದು ಪರಮೇಶ್ವರನ ಸನ್ನಿಧಾನದಲ್ಲಿ ಶೋಭಿಸುವ ಈ ಕೋಮಲಾಂಗಿಯನ್ನು ಆಶ್ರಯಿಸಿಕೊಂಡಿವೆ ಎಂಬಂತೆ ಕಾಣುತ್ತಿತ್ತು. (ಕಾದಂಬರಿ, ೪-೫೩) ಇಲ್ಲಿ ಬ್ರಾಹ್ಮಣ ತರುಣಿಯು ಬ್ರಹ್ಮಸೂತ್ರವನ್ನು ಧರಿಸಿದ್ದು ವಿಶೇಷ ಅನಂತರ ಬ್ರಹ್ಮಸೂತ್ರ ಧಾರಣೆಯನ್ನು ನಿಷೇಧಿಸಿರಬೇಕು.

ವಿಧೌತಧವಳಾಂಬರ ಪರಿಧಾನನುಂ, ಪೂತ**ಯಜ್ಞೋಪವೀತ** ಪವಿತ್ರನುಂಹಿ. ಎಂದು ಅಜಿತತೀರ್ಥಂಕರ ಪುರಾಣ ತಿಲಕದಲ್ಲಿ ಬರುತ್ತದೆ. (೪-೫೦ವ) ವಾಸ್ತವವಾಗಿ ಯಜ್ಞೋಪವೀತವೆಂದರೆ ಉಪನಯನಕರ್ಮದ ಮೂಲಕ ಹೆಗಲಿನಲ್ಲಿ ದಾರವನ್ನು ಧರಿಸುವುದು: ಅನಂತರ ಸಂಧ್ಯಾವಂದನೆಯ ಸಂದರ್ಭದಲ್ಲಿ ಗಾಯತ್ರಿ ಮಂತ್ರೋಚ್ಚಾರಣೆಯ ಸಂದರ್ಭದಲ್ಲಿ ಅದರ ಗಂಟು (ಗಂಟಿಗೆ ಬ್ರಹ್ಮಗಂಟು ಎಂದು ಹೆಸರು) ಹಿಡಿದುಕೊಳ್ಳಬೇಕು. ಯಜ್ಞೋಪವೀತ ಧರಿಸುವ ಹಕ್ಕು ಎಲ್ಲರಿಗೂ ಇಲ್ಲವೆಂಬುದು ಗಮನಾರ್ಹ.

ದ್ವಿಜನಾದವನ ಜೀವನ ಸದಾಕಾಲವೂ ಸಾಮಾಜಿಕ ಮತ್ತು ಧಾರ್ಮಿಕ ಹೊಣೆಗಾರಿಕೆಯನ್ನು ನಿರ್ವಹಿಸಲು ಮುಡಿಪಿಟ್ಟದೆಂದು ಅವನು ಧರಿಸುವ ಯಜ್ಞೋಪವೀತವು ಸೂಚಿಸುತ್ತದೆ. ಅವನಿಗೆ ನಿಯಮಬದ್ಧ ಜೀವನ ನಡೆಸಲು ಅನುವಾಗುವಂತೆ ಜಿಂಕೆಯ ಚರ್ಮ (ಅಜಿನ ಮತ್ತು ಯೋಗ ದಂಡವನ್ನು ಕೊಡಲಾಗುತ್ತದೆ.)

ವೈಶ್ವದೇವ ಹೋಮ-ಬಲಿಕರ್ಮ-ನಿತ್ಯಶ್ರಾದ್ಧ-ಅತಿಥಿಭೋಜನ ರೂಪವಾದ ನಾಲ್ಕು ಪಾಕಯಜ್ಞಗಳು, ದಶಪೂರ್ಣ ಮಾಸಾದಿಗಳು ಇವೆಲ್ಲ ಜಪಯಜ್ಞವಾದ ಬ್ರಹ್ಮಯಜ್ಞದ ಹದಿನಾರನೇ ಒಂದು ಭಾಗದ ಮೂಲ್ಯ ಉಳ್ಳವುಗಳೂ ಅಲ್ಲ. ವೇದಶಾಸ್ತ್ರಾಧ್ಯಯನ ತದರ್ಥ ವಿಚಾರಗಳು ಬಹು ಫಲಗಳು ಎಂದು ಮನು ಹಾಳುತ್ತಾನೆ.

*ವಿವರಗಳಿಗೆ ನೋಡಿ: ಯುಗಯಾತ್ರೀ ಭಾರತೀಯ ಸಂಸ್ಕೃತಿ ೧೯೭೧ ಸಂಪುಟ. ೨ ಪುಟ. ೨೯*
*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೨-೮೬.*

### ೩೪೧. ಜನ್ಮ ನಿವೃತ್ತಿ ಮತ್ತು ನಿವರ್ತಕ ಧರ್ಮ

ಜನ್ಮದ ನಿವೃತ್ತಿಯೆಂದರೆ ಮೋಕ್ಷ. ಭಾರತದ ಬಹುತೇಕ ಮತಗಳು ಈ ಅಭಿಪ್ರಾಯವನ್ನೇ ಎತ್ತಿ ಹಿಡಿದಿವೆ. ಈ ಕುರಿತಂತೆ ಚರ್ಚಿಸುತ್ತ ಮಿರ್ಜಿ ಅಣ್ಣರಾಯರು "ಮುಕ್ತಪದಕ್ಕೇರಿದ ಆತ್ಮಕ್ಕೆ ಪುನರ್ ಜನ್ಮದ ಬಾಧೆಯಿಲ್ಲ. ಈ ಸ್ಥಿತಿಗೆ ಜನ್ಮನಿವೃತ್ತಿ ಎಂದು ಇವರು ಕರೆಯುವರು. ಪ್ರವರ್ತಕ ಧರ್ಮಾನುಯಾಯಿಗಳು ಯಾವ ಉಚ್ಚ ಮತ್ತು ಉಚ್ಚತರ ಧರ್ಮಾನುಷ್ಠಾನಗಳಿಂದ ಇಹಲೋಕ ಮತ್ತು ಪರಲೋಕಗಳಲ್ಲಿ ಶ್ರೇಷ್ಠ ಸುಖವನ್ನು ಸಂಪಾದಿಸಲು ಹೆಣಗುತ್ತಿದ್ದರೋ, ಆ ಧಾರ್ಮಿಕ ಅನುಷ್ಠಾನಗಳೆಲ್ಲಾ

ಹೇಯವೆಂದು ನಿವರ್ತಕ ಧರ್ಮಾನುಯಾಯಿಗಳು ತಿಳಿಯತೊಡಗಿದರು. ಮೋಕ್ಷದ ಸಂಪಾದನೆಗೆ ವೈದಿಕರ ಕರ್ಮಕಾಂಡವು ಅನವಶ್ಯಕವೆಂದು ಸಾರಿದರು. ಆಗ ಮೋಕ್ಷವಾದಿಗಳಿಗೆ ತಮ್ಮ ಪುರುಷಾರ್ಥಾ ಮೋಕ್ಷವನ್ನು ಸಾಧಿಸಲಿಕ್ಕೆ ಉಪಾಯವೆಂದು ಒಂದು ನಿಶ್ಚಿತ ಮಾರ್ಗವನ್ನು ಶೋಧಿಸುವ ಅವಶ್ಯಕತೆಯುಂಟಾಯಿತು. ಹೀಗೆ ಹೊಸ ಹಾದಿಯನ್ನು ಹುಡುಕುತ್ತಿರುವಾಗ, ನಿವರ್ತಕ ಧರ್ಮಾನುಯಾಯಿಗಳು ಹೊರಗಿನ ಯಾವ ಸಾಧನೆಗಳನ್ನವಲಂಬಿಸದಂಥ ಒಂದು ನವೀನ ಮಾರ್ಗವನ್ನು ಕಂಡುಹಿಡಿದರು. ಅದು ಸಾಧಕನ ವಿಚಾರಶುದ್ಧಿ ಮತ್ತು ವರ್ತನಶುದ್ಧಿಗಳನ್ನು ಅವಲಂಬಿಸಿತ್ತು. ಈ ಮಾರ್ಗಕ್ಕೇನೇ ಮುಂದೆ ನಿವರ್ತಕ ಧರ್ಮವೆಂದೂ ಮೋಕ್ಷಮಾರ್ಗವೆಂದೂ ಹೆಸರಾಯಿತು".

ಈ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಅವರು ಹೇಳುವ ಸಾಧಕನ ವಿಚಾರಶುದ್ಧಿ ಮತ್ತು ವರ್ತನೆ ಶುದ್ಧಿಗಳು ಮೋಕ್ಷಮಾರ್ಗಕ್ಕೆ ಹಾದಿಯಾಯಿತು. ಈ ಮಾರ್ಗವನ್ನು ನಿವರ್ತಕ ಧರ್ಮವೆಂದು ಕರೆಯಲಾಯಿತು. ಈ ಅಭಿಪ್ರಾಯವು ಗಮನಾರ್ಹವಾಗಿದೆ.

*ವಿವರಗಳಿಗೆ ನೋಡಿ: ಮಿರ್ಜಿ ಅಣ್ಣಾರಾಯ ೨೦೦೬ ಮಿರ್ಜಿ ಅಣ್ಣಾರಾಯರ ಆಯ್ದ ಲೇಖನಗಳು*

### ೩೪೨. ಜನ್ಮಭೂಮಿ

*ಜನನಿಯುಮಂ* ***ಜನ್ಮಭೂಮಿ****ಯುಮಂ ಕಂಡಾಗಿ*
*ನಿವಿರಿದು ರಾಗೋದಯಮದೇವಿರಿದು*.............. *(ಶಾಂತಿಪುರಾಣ ೩-೧೧ವ)*

'ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ' ಎಂಬ ಸಂಸ್ಕೃತ ಉಕ್ತಿಯಿದೆ. ಇದರ ಪ್ರಕಾರ ಜನನಿಗೂ, ಜನ್ಮಭೂಮಿಗೂ ಸಂಬಂಧ ಕಲ್ಪಿಸಲಾಗಿದೆ. ಜನನಿ ಮತ್ತು ಜನ್ಮಭೂಮಿಯ ಋಣವನ್ನು ತೀರಿಸಲಾಗುವುದಿಲ್ಲ. ಇದರ ಅರ್ಥ ಈ ಎರಡು ಅಂಶಗಳಿಗೆ ಗೌರವವನ್ನು ಸೂಚಿಸಬೇಕು. ಎರಡನೆಯದಾಗಿ ಜನ್ಮಭೂಮಿಯೇ ಸ್ವರ್ಗಕ್ಕೆ ಸಮಾನವಾದುದು. ಜನ್ಮಭೂಮಿಯ ಶ್ರೇಷ್ಠತೆಯನ್ನು ಇದು ಕೊಂಡಾಡುತ್ತದೆ.

### ೩೪೩. ಜನ್ಮಾಭಿಷೇಕ

*ಪಾಂಡುಕಮಪ್ಪ ಪಾಂಡುಕಶಿಲಾತಲದೊಳ್ ಕನಕಾಭಭಾಸಿಗಳ್*
*ದಂಡಿಗೆಗಳ್ ಮನಂಗೊಳಿಸೆ ಮುತ್ತಿನ ಲಂಬಣಮೊಪ್ಪೆ ಚೆಲ್ವನೀ ।*
*ಟಿಕ್ಕೊಂಡು ಮಣಿಪ್ರತಾನದ ವಿತಾನಮೊಡಂಬಡೆ ತೀರ್ಥಕರ್ತುಗಾ*
*ಖಂಡಲನಿಂ ಜಗತ್ತ್ರಿತಯಮಂಡನಮಾಯ್ತು***ಭಿಷೇಕಮಂಡಪಂ** *॥*

*(ಅಜಿತತೀರ್ಥಂಕರ ಪುರಾಣ ತಿಲಕಂ ೪-೨೬)*

ಅಂತು ಬರೆ ಪಾಂಡುಕವನದ ಪೂರ್ವದಕ್ಷಿಣದಿಗ್ಭಾಗದ ರಜತವರ್ಣದ ಪಾಂಡುಕಮುಂ ಪಶ್ಚಿಮೋತ್ತರದಿಗ್ಭಾಗದ ವಿದ್ರುಮವರ್ಣದ ಪಾಂಡುಕಮಂ (ಪಶ್ಚಿಮ ದಕ್ಷಿಣದಿಗ್ಭಾಗದ) ರತ್ನ ಕಂಬಳವರ್ಣದ ಪಾಂಡುಕಮುಂ ಪೂರ್ವೋತ್ತರದಿಗ್ಭಾಗದ ಜಾಂಬೂನದವರ್ಣದತಿರಕ್ತ ಕಂಬಳಮುಮೆಂಬ ನಾಲ್ಕುಂ ಶಿಲಾ ತಲಂಗಳೊಳರ್ಧ

ಚಂದ್ರಾಕಾರಂಗಳಾಗಿ ಭರತದ ಪರವಿದೇಹದ್ಯೈರಾವತದ ಪೂರ್ವ ವಿದೇಹದ ತೀರ್ಥಕರ **ಜನ್ಮಾಭಿಷೇಕಕ್ಕೆ** ಯೋಗ್ಯಂಗಳಾಗಿರ್ದುವು. (ಅಜಿತತೀರ್ಥಂಕರ ಪುರಾಣ ತಿಲಕಂ ೪–೩೩ವ)

ಮೇಲಿನ ವಿವರಣೆಯು ಜನ್ಮಾಭಿಷೇಕದ ವಿವರವನ್ನು ನೀಡುತ್ತದೆಯಾದರೂ ಜನಶಿಶುವಿನ ಜನ್ಮಾಭಿಷೇಕವಾದುದರಿಂದ ವಿವರಣೆಯಲ್ಲಿ ವಿಶಿಷ್ಟತೆಯಿದೆ. ಪಾಂಡು ಎಂದರೆ ಬಿಳಿಯ ಬಣ್ಣ. ಪಾಂಡುಕವೆಂದರೆ ಸುಮೇರು ಪರ್ವತದ ಮೇಲಿನ ನಾಲ್ಕು ವನಗಳಲ್ಲಿ ಒಂದು. ಉಳಿದವು ಭದ್ರಪಾಲಿ, ನಂದನ, ತಾಮನಸ ಇದರಲ್ಲಿ ತೀರ್ಥಂಕರನ ಜನ್ಮಾಭಿಷೇಕಕ್ಕಾಗಿ ಮೀಸಲಾದ ನಾಲ್ಕು ಪೀಠಗಳಿವೆ. ಅದರ ಮೊದಲನೆಯ ಪೀಠ ಪಾಂಡುಕ.

**೩೪೪. ಜರೆ**

*'ಅಂಗನೆಯರ್ಕಳ ಸವತಿ **ಜರಾಂಗನೆ**'*ಯೆಂದು ರನ್ನ ಹೇಳುತ್ತಾನೆ.

*(ಅಜಿತತೀರ್ಥಂಕರ ಪುರಾಣ ೨–೭೫)*

ಜರೆ ಅಂದರೆ ಮುಪ್ಪು. ಜರೆಯು ಕೂಡಾ ಜೈನ ಧರ್ಮದಲ್ಲಿ ತಪಸ್ಸಿಗೆ ತೆರಳಲು ಸಂಸಾರ ಬಂಧ ಮುಕ್ತಿ ಪಡೆಯಲು ಕಾರಣವಾಗುತ್ತದೆ. ಹುಟ್ಟು ನಂತರ, ಜರೆ–ಮರಣ ಮೊದಲು ಎಂದಾದರೆ ಜರೆ–ಮರಣ ಕಾರಣರಹಿತವಾಗುತ್ತದೆ.

ರೇಖಾತ್ಮಕ ಗ್ರಹಿಕೆಯಲ್ಲಿ ಹುಟ್ಟನ್ನು ಜರಾ–ಮರಣದ ನಂತರ ಇಟ್ಟರೆ, ತಾರ್ಕಿಕವಾಗಿ ಅದರ (ಹುಟ್ಟಿನ) ಪೂರ್ವವೆಂಬುದರ ಸಂಬಂಧ ಸಾಧ್ಯವಾಗದೆ ಅದು ಅಸಂಭವವಾಗುತ್ತದೆ. ಜರಾ–ಮರಣದ ವಿವರಣೆಯೂ ಅಸಾಧ್ಯವಾಗುತ್ತದೆ. ಏಕೆಂದರೆ ಹುಟ್ಟೇ ಇಲ್ಲದುದರ ಜರಾಮರಣ ಎಂತು ಎನ್ನುವುದು ನಾಗಾರ್ಜುನನ ತರ್ಕ.

*ವಿವರಗಳಿಗೆ ನೋಡಿ: ಎಸ್. ನಟರಾಜ ಬೂದಾಳು ೨೦೦೬*

*ನಾಗಾರ್ಜುನನ ಮೂಲಮಾಧ್ಯಮಿಕಕಾರಿಕಾ ಪುಟ. ೬೩*

**೩೪೫. ಜಲಕೇಳಿ**

ಅಂತಃಪುರಾಂಗನೆಯರೊಡನೆ ವಿಕ್ರಮಾರ್ಜುನನಾಡುವ ಜಲಕೇಳೀ ವರ್ಣನೆ ಇದು. ಮೊದಲಿನ ಸಂದರ್ಭದೊಳಗೆ, ಮಾರ್ಗವನ್ನೊಂದದ ನರ್ತನದ ದೇಸಿಯಲ್ಲಿ, ತನ್ನ ಉದಾತ್ತನಾಯಕನ ಬಗೆ ಹೊಗಲೊಲ್ಲದು ಎಂದು ಬಣ್ಣಿಸಿದನಷ್ಟೆ ಇಲ್ಲಿ 'ದೇಸಿಯೊಳ್ ಪುಗುವುದು' ಎಂಬ ಸಮಾರ್ಗ ಕಾವ್ಯಕ್ರಮವನ್ನೇ ರೂಪಾಂತರದಿಂದ ನಿರೂಪಿಸು ವುದನ್ನೀಕ್ಷಿಸಿರಿ. ಗುಣಾರ್ಣವನು ತ್ನನ 'ಕೆಂದಳದೊಳೊತ್ತುವ ನೀರು' ಅಸಿಯ (ಕೃಶಾಂಗಿ)ಳಾದ ಪ್ರಿಯೆಯ 'ಮೊಗಮಂ ಪಳಂಚಿ'ತು. ಪ್ರಿಯನ ಆ ಪ್ರೇಮದ ಪ್ರೇಮದ ಕಾಟವನ್ನು ಸೈರಿಸಲಾರದೆ ಮೊಗವನ್ನು ಒಂದಿಷ್ಟು ವಂಚಿಸಲೆಂದು, ಅಥವಾ ಮರೆಮಾಡಲೆಂದು, ಆಕೆ ಮುಳುಗಿದಳಂತೆ. ಹಾಗೆ, ಪ್ರಿಯನನ್ನು ಒಂದಿಷ್ಟು 'ಬಂಚಿಸ'ಲೆಂದು

ಹವಣಿಸಿದೊಡನೆ, 'ಭೂಂಕನೆ ಬಂದು ಬಾಳೆ' ಮೀನುಗಳು 'ಮುಸುಜೆ' ಆಕೆಯ ಅಂಗಾಂಗಗಳನ್ನೆಲ್ಲ ನಿರಂತರವೂ ಕಚ್ಚಿ (ಕರ್ದುಕಿ) ಕಾಡಿದುವಂತೆ, ಇಲ್ಲಿ ಒಂದಿಷ್ಟಾದರೂ, ಪ್ರಿಯನನ್ನು ವಂಚಿಸುವಾಕೆಯ 'ಬಾಳೆ' (ಜೀವನವೇ) 'ಮೀನಾ' (ಮಿನುಗುವುದಾಗಿ)ಗಿ ಕದುಕುತ್ತಿದೆ, ಎಂಬ ಅತ್ಯುತ್ತಮ ಶ್ಲೇಷಾಲಂಕಾರ ಸಂಬದ್ಧವಾದ ಜಲಕೇಳಿಯ ದೇಸಿ ಮಾರ್ಗವಾಗಿ ಪರಿಣಮಿಸಿದುದನ್ನು ನೋಡಿರಿ. ಅದರಿಂದಲೇ ಆಕೆ 'ಸತ್ಯವಿಯೊಳ್ ಸಮ' ನದಳು, ಬರಿಯ ಆ 'ದೇಸಿ' ಪೂರ್ವರೂಪದಲ್ಲೇ ಇದ್ದರೆ 'ಪೂಸಯಿಸಿ'ಯೇ 'ದೇಸಿಯಂ ಪೊಸತು ಮಾಡಿದ'ಳು. ಒತ್ತುವ ನೀರಿನ ಕಾಟವನ್ನು ಸೈಸಲಾರದಾಕೆ ಮುಳುಗಿ, ಮುಸುರುವ ಜಲಾಂತರ್ದೇಶಿಯಗಳಾದ ಬಾಳೆಮೀನುಗಳನ್ನೆಲ್ಲ ಕಲಕಿದಳು. ಅದರಿಂದ ಮೀನುಗಳು ಅತ್ತಿತ್ತ ಹರಿದು ಮಿನುಗುವಲ್ಲಿ ಆಕೆಯ 'ಮಾರ್ಗ' ವೆಂದರೆ, 'ದೇಶಿಯಂ ಪೊಸತು ಮಾಡಿ'ದ ಸತ್ಯವಿಯ ಮಾರ್ಗವೇ ಆಯಿತೆನ್ನಬೇಕು. ಹೌದು. ಆಕೆ 'ಸತ್ಕವಿಯೋಳ್ ಸಮನಾಗಿ' ಹರಿದು ದಡವನ್ನೇರಿದಳು, ಎಂಬುದು ಈ ಪದ್ಯ ತಾತ್ಪರ್ಯ ಆ 'ಒರ್ವಳು' ಎಂಬ ಸಾಮಾನ್ಯ ವಾಚಕ ಪದದಿಂದ ಆಕೆ ವಿಕ್ರಮಾರ್ಜುನನ ವಲ್ಲಭೆಯಾದ ಸುಭದ್ರೆ (ಲೋಕಾಂಬಿಕೆ)ಯಲ್ಲವೆಂಬುದು ಸೂಚಿತವಾಗುತ್ತಿದೆ. ದ್ರೌಪದಿಯೊಡನೆ ಸಮನಾ ಅವಳ 'ವಿಜಯಶ್ರೀ'ಯನ್ನೇ ಇಲ್ಲಿ 'ಸತ್ಯವಿಯಾ'ದ ತನ್ನೊಡನೆ ಕವಿ ಹೋಲಿಸಿಕೊಂಡಿದ್ದಾನೆ ಎಂದು ತೋರುತ್ತಿದೆ. ಇರಲಿ ಕಾವ್ಯ ಮಾರ್ಗದ ಮೃದುಬಂಧವು ಹೇಗೆ 'ದೇಸಿಯೊಳ್ ಪುಗುವುದು?' ಎಂಬುದನ್ನು ಕವಿ ಅನ್ಯಾದೃಶವಾಗಿ ಬಣ್ಣಿಸಿದ ಕಾಂತಿಗುಣವನ್ನು ಕಾವ್ಯಲಕ್ಷಣದೊಡನೆ ಇಲ್ಲಿ ಕಾಣಬಹುದು. ಹೀಗೆ ಬಣ್ಣಿಸಿದವನನ್ನಲ್ಲವೆ ಸಾಮಾನ್ಯ ಕವಿಗಳೊಳಗೆ ಬೆರಸದೆ 'ಸತ್ಕವಿ' ಎನ್ನಬೇಕಾದುದು? ಈವರೆಗೆ ದೇಸಿಯ ಸ್ವರೂಪದ ದಿಗ್ದರ್ಶನವನ್ನಷ್ಟೆ ಒದಗಿಸಿರುತ್ತೇವೆ." ಪಂಪನಲ್ಲಿ ತೋರುವ ಬಹುಮುಖವಾದ ದೇಸಿಗಳನ್ನು ಶಕ್ತ್ಯನುಸಾರವಾಗಿ ಮುಂದಿನ ವಿಶಿಷ್ಟ ವಾದೊಂದು ಅಧಿಕರಣದಲ್ಲಿ ವಿವರಿಸಲಿರುವೆವೆಂದು ಇಲ್ಲಿ ಭಿನ್ನಯಿಸಬೇಕಾಗಿದೆ. ದೇಸಿ-ಮಾರ್ಗದ ನಡುವಣ ಅಂತರ್ಗತ ಸಂಬಂಧದ ವಿವೇಚನೆಯನ್ನು ಮುಳಿಯ ತಿಮ್ಮಪ್ಪಯ್ಯನವರು ವಿಶಿಷ್ಟವಾಗಿ ಮಂಡಿಸಿದ್ದಾರೆ. 'ದೇಸಿ' ಸಾಂಸ್ಕೃತಿಕವಾಗಿ ಮಹತ್ವದ್ದು. ತಿಮ್ಮಪ್ಪಯ್ಯನವರು ಹೇಳುವಂತೆ ದೇಸಿಯು ದೇಶಕ್ಕೆ ಸಂಬಂಧಿಸಿದ್ದು ಕೂಡಾ ಹೌದು ಎಂಬುದು ಗಮನಾರ್ಹ.

*ವಿವರಗಳಿಗೆ ನೋಡಿ: ಮುಳಿಯ ತಿಮ್ಮಪ್ಪಯ್ಯ ೨೦೦೬ ನಾಡೋಜ ಪಂಪ ಪುಟ. ೧೯೫-೨೦೦*

**೩೪೬. ಜಲದಾನ ಕ್ರಿಯೆ**

*ಜಲದಾನಕ್ರಿಯೆಯಂ ದೃ*
*ಗ್ಜಲದಿಂ ಕೋಪಾಗ್ನಿಯಿಂದೆ ದಹನಕ್ರಿಯೆಯಂ ।*
*ಕೆಳೆಯಂಗೆ ಮಾಡಿದಯ್ ಕುರು*
*ಕುಲದರ್ಪಣ ಮಱೆವುದಿನ್ನಹರ್ಪತಿಸುತನಂ ॥*

*(ಸಾಹಸಭೀಮ ವಿಜಯಂ ೫-೩೨)*

ಅನ್ನ, ಎಳ್ಳು, ಭತ್ತ, ಯವ, ನೀರುಗಳಿಂದ ಪಿತೃ ಪ್ರೀತಿಗಾಗಿ ಪ್ರತಿ ದಿನ ಶ್ರಾದ್ಧ ಮಾಡಬೇಕು ಎಂದು ಮನು ಹೇಳುತ್ತಾನೆ.

ಜಲದಾನ ಕ್ರಿಯೆಯೆಂದರೆ ಸತ್ತವರಿಗೆ ಬಿಡುವ ತರ್ಪಣ. ಅದು ಸದ್ಗತಿಗಾಗಿ ಅವಶ್ಯವಾಗಿದೆ. ಹೆಣವನ್ನು ಸುಡುವುದು ದಹನ ಕ್ರಿಯೆಯಾಗಿದೆ. ತರ್ಪಣ ೧. ತೃಪ್ತಿ ೨. ಸಂತೋಷಪಡಿಸುವುದು ೩, ಪಿತೃಯಜ್ಞ ೪, ದೇವಯಜ್ಞ ೫, ಋಷಿಯಜ್ಞ (ದೇವರಿಗೆ ಋಷಿಗಳಿಗೆ ತರ್ಪಣ ನೀಡುವುದು ಪ್ರತಿದಿನದ ಕರ್ತವ್ಯ ೬, ಪರ್ವಕಾಲದಲ್ಲಿ ಪಿತೃಗಳ ಪ್ರೀತ್ಯರ್ಥ ಮಾಡುವ ಜಲತರ್ಪಣ. ಇಲ್ಲಿಯ ಜಲದಾನ ಕ್ರಿಯೆಯು ಜಲತರ್ಪಣವನ್ನು ಸೂಚಿಸುತ್ತದೆ.

ಯಜುರ್ವೇದದಲ್ಲಿ ಈ ಕುರಿತ ವಿವರ ದೊರೆಯುತ್ತದೆ. ವೈದಿಕ ಜನಾಂಗವು ಸ್ಥೂಲದೇಹದ ವ್ಯಾಪಾರಗಳಿಗೆ ಆಶ್ರಯ ಸ್ಥಾನವಾದ ಅಧಿಷ್ಠಾನವೊಂದಿದೆ ಎಂದು ನಂಬುತ್ತದೆ. ಅದೇ ಪಿತೃಲೋಕ ಶತಪಥ ಬ್ರಾಹ್ಮಣದಲ್ಲಿಯೆ 'ದೇವಲೋಕ' 'ಪಿತೃಲೋಕ' ಬ್ರಹ್ಮಲೋಕಗಳ, ಮನುಷ್ಯಲೋಕಗಳ ಕುರಿತು ಬರುತ್ತದೆ. 'ದೈವೀ ಸೃಷ್ಟಿಯ ಈ ಪಂಚದಿಶೆಗಳು ಪಂಚಲೋಕಗಳು ಬ್ರಹ್ಮ ದೇವ, ಗಂಧರ್ವ, ಪಿತೃ ಹಾಗೂ ಮಾನವ ಲೋಕಗಳು (ಯಜ್ಞವತ ಆವೆಂತು) ಯಜ್ಞೋಕ್ತ ತೇಜಸ್ಸಿನಿಂದ ಆವರಿಸಲ್ಪಡಲಿ' ಎಂದು ಯಜುರ್ವೇದಲ್ಲಿ ಬರುತ್ತದೆ.

*ವಿವರಗಳಿಗೆ ನೋಡಿ: ೧. ಶವ ಸಂಸ್ಕಾರ ೨. ದಾಹೋತ್ತರ ವೇದವ್ರತ ವೈಶಂಪಾಯನ ೧೯೮೪*
*ಯಜುರ್ವೇದ ಒಂದು ಅಧ್ಯಯನ ಪುಟ. ೯೧*
*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೩-೮೨*

**೩೪೭. ಜವನಿಕೆ**

*ಓಸರಿಸಿದ* **ಜವನಿಕೆಯೊಡ**
*ನೋಸರಿಸಿದನಿಸಲೆ............*

*(ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೯-೨೧)*

ಜವನಿಕೆಯೆಂದರೆ ಪರದೆಯೆಂದರ್ಥ. ಜವನಿಕೆಯು ಸರಿದೊಡನೆಯೇ ರಂಗವನ್ನು ಪ್ರವೇಶಿಸಿ ಪುಷ್ಪಾಂಜಲಿಯನ್ನು ಹಾಕಲಾಯಿತು. ಜವನಿಕೆಗೆ ತೆರೆ ಎಂಬ ಅರ್ಥವೂ ಇದೆ.

ನಾಟ್ಯಶಾಸ್ತ್ರದಲ್ಲಿ ಈ ಶಬ್ದಗಳಲ್ಲಿ ಹೇಳಲಾಗಿದೆ. ಅಂತರ್ಯವನಿಕಾಗತ್ಯೈಃ । ಪ್ರಯೋಕ್ತೃಭಿಃ ಪ್ರಯೋಜ್ಯಾನಿ....॥

ಇಲ್ಲಿ 'ತೆರೆ ಇಲ್ಲವೆ ಪರದೆ' ಎಂಬುದಕ್ಕೆ 'ಯ(ಜ)ವನಿಕಾ' ಎಂಬ ಶಬ್ದವನ್ನು ಬಳಸಲಾಗಿದೆ 'ಯವನಿಕಾ' ಎಂಬ ಶಬ್ದದ ಮೂಲ ಗ್ರೀಕ್ 'Lonian' (ಒಂದು ಪ್ರದೇಶದ ನಿವಾಸಿಗಳಾದ ಗ್ರೀಕ್ ಜನತೆ) ಎಂಬ ಶಬ್ದ. ಗ್ರೀಕ್‌ರಿಂದ ನಮ್ಮವರು ಈ ಶಬ್ದವನ್ನು ಯಾವ ಕಾಲದಲ್ಲಿ ತೆಗೆದುಕೊಂಡರೆಂಬುದರ ದೃಷ್ಟಿಯಿಂದ ನೋಡಿದರೆ

ಮೂಲ ಭರತನ ನಾಟ್ಯಶಾಸ್ತ್ರದಲ್ಲಿ 'ಜವನಿಕಾ' ಶಬ್ದ ಇರುವುದು ಅಸಂಭವನೀಯ. ಕಾಳಿದಾಸನ ನಾಟಕಗಳಲ್ಲಿ ಕೂಡ 'ತೆರೆ' ಎಂಬುದಕ್ಕೆ 'ತಿರಸ್ಕರಣೀ' (ಮರೆ ಮಾಡುವಂತಹದು) ಎಂಬ ಶಬ್ದವನ್ನು ಕಾಣುತ್ತೇವೆ.

*ವಿವರಗಳಿಗೆ ನೋಡಿ: ಆಮೂರ ಜಿ. ಎಸ್. ೨೦೦೬*

*ಶ್ರೀರಂಗ ಸಾರಸ್ವತ (ಸಂಪುಟ. ೮) ಪುಟ. ೫೬೨-೬೩*

**೩೪೮. ಜಾತಕರ್ಮ**

ಮಗು ಹುಟ್ಟಿದ ಸಂದರ್ಭದಲ್ಲಿ ಕೆಲವು ಆಚರಣೆಗಳು ನಡೆಯುತ್ತವೆ. ಜಾತಕರ್ಮೋತ್ಸವವನ್ನು ಹತ್ತು ದಿನಗಳಲ್ಲಿ ಮಾಡುತ್ತಾರೆ ಎಂದು ನಾಗಚಂದ್ರನು 'ರಾಮಚಂದ್ರ ಚರಿತ ಪುರಾಣ'ದಲ್ಲಿ ಬಣ್ಣಿಸುತ್ತಾನೆ (ಹಿರೇಮಠ ಆರ್.ಸಿ. (ಸಂ) ೧೯೭೫. ೪-೨೯ವ). ಹತ್ತನೆಯ ದಿನವೇ ಮಗುವಿಗೆ ಹೆಸರಿಡುವ ಆಚರಣೆಯು ಜರುಗುತ್ತದೆ (ಅದೇ). ಗೃಹ್ಯಸೂತ್ರಗಳ ಪ್ರಕಾರ, ತಾಯಿ-ಮಗುವಿನ ಹೊಕ್ಕುಳ ಬಳ್ಳಿಯನ್ನು ಕಡಿದ ಗಳಿಗೆಯಿಂದ ಹತ್ತು ದಿನಗಳಲ್ಲಿ ಮಗುವಿಗೆ ಹೆಸರಿಡಬೇಕು.

ನೇಮಿಚಂದ್ರನ 'ಲೀಲಾವತಿ ಪ್ರಬಂಧ'ದಲ್ಲಿ ವಿದ್ರುಮಲೇಖೆಯೆಂಬ ರಾಣಿಗೆ ಹೆಣ್ಣು ಮಗು ಹುಟ್ಟಿದ ವಿಚಾರವು ಬರುತ್ತದೆ (ವೆಂಕಟರಾಮಪ್ಪ ಕೆ. (ಸಂ) ೧೯೬೬. ೭-೬೩, ೬೪, ೬೫). "ಹೆಣ್ಣು ಮಗು ಹುಟ್ಟಿದಾಗ ರಂಗವಲ್ಲಿಯನ್ನು ಇಟ್ಟರು. ತೋರಣವನ್ನು ಕಟ್ಟಿದರು. ದಾನವನ್ನು ಕೊಟ್ಟರು. ಪದ್ಮಾವತಿದೇವಿಗೆ ಹೊಸ ಬಾಯಿನವನ್ನು ಕೊಟ್ಟರು. ನೇಗಿಲುಗಳಿಗೆ ನೂಲನ್ನು ಉಡಿಸಿದರು. ಹೋಮಮಾಡಿದರು. ಕುಡುಗೋಲುಗಳಿಗೆ ನೂಲನ್ನು ಸುತ್ತಿದರು. ಕಳಸದಿಂದ ಹಾಲನ್ನು ಹೊಯ್ದರು. ಅಷ್ಟೇ ಅಲ್ಲದೆ, ಹತ್ತನೇ ದಿನದಲ್ಲಿ ಮಗಳಿಗೆ ತಂದೆಯು ಹೆಸರನ್ನು ಇಟ್ಟನು". ಎಂಬ ಉಲ್ಲೇಖ ಬರುತ್ತದೆ.

ನಾಭಿನಾಳವನ್ನು ತೆಗೆಯುವ ಮುನ್ನ ಜಾತಕರ್ಮ ನಡೆಸಲಾಗುತ್ತದೆ. ಇದು ಮೊದಲನೆಯ ವಿಧಿ. ಎರಡನೆಯ ವಿಧಿ ಆಯುಷ್ಯ, ದೀರ್ಘಾಯುಗಳಾದ ಋಷಿಗಳು, ಪಿತೃಗಳು, ಅಗ್ನಿ, ಸೋಮ ಮುಂತಾದವರ ನಿದರ್ಶನ ಮಂತ್ರ ಹೇಳಲಾಗುತ್ತದೆ. ಬಲವರ್ಧನ ಮೂರನೆಯ ವಿಧಿ. ಇದನ್ನು ಆಚರಿಸುವಾಗ, ನೀನು ಕಲ್ಲಿನಂತೆ, ಕಬ್ಬಿಣದಂತೆ ಗಡುಸಾಗು, ದೇವತೆಗಳಂತೆ ಅಮರನಾಗು, ಮಗುವಿನ ರೂಪದಲ್ಲಿ ಜನಿಸಿರುವ ಆತ್ಮನು ಶತಾಯುವಾಗು ಎಂದು ಹಾರೈಸುತ್ತಾರೆ. ಅನಂತರ ನಾಭಿಯ ನಾಳವನ್ನು ಕತ್ತರಿಸಿ, ಮಗುವಿನ ಮೈತೊಳೆದು, ತಾಯಿಯಿಂದ ಸ್ತನ್ಯಪಾನ ಮಾಡಿಸುತ್ತಾರೆ.

*ವಿವರಗಳಿಗೆ ನೋಡಿ: ಯುಗಯಾತ್ರೀ ಭಾರತೀಯ ಸಂಸ್ಕೃತಿ ೧೯೭೧*

*ಸಂಪುಟ. ೨ ಪುಟ. ೨೯೫*

*Apte V.M. 1954 Religious life in the Griha Sutras P. 68 Social and religious life in the grihya sutras*

೩೪೯. ಜಾತಿ

ಮಧ್ಯಕಾಲೀನ ಭಾರತದಲ್ಲಿ ಅಯಸ್ಕಾರ (ಕಬ್ಬಿಣ ಕೆಲಸಗಾರ) ಕುಂಬಾರ(ಮಡಕೆ ಮಾಡುವವನು) ತಂತುವಾಯ(ನೇಯ್ಗೆ ಕೆಲಸದವನು) ತೈಲಿಕ(ಎಣ್ಣೆ ತೆಗೆಯುವವನು) ಎಂಬ ಜಾತಿಗಳ ಉದಯವಾಯಿತು.

ಏಳನೆಯ ಶತಮಾನದ ನಂತರ ಹಲವಾರು ಜಾತಿಗಳು ಹುಟ್ಟಿಕೊಳ್ಳತೊಡಗಿದುವು. ಎಂಟನೆಯ ಶತಮಾನದ ಒಂದು ಪುರಾಣವು ವೈಶ್ಯ ಸ್ತ್ರೀಯರು ಮತ್ತು ಕೆಳಜಾತಿಗಳ ಗಂಡಸರ ಸಂಬಂಧಗಳಿಂದಾಗಿ ಸಾವಿರಾರು ಮಿಶ್ರಜಾತಿಗಳು ಹುಟ್ಟಿದವು ಎಂದು ತಿಳಿಸಿದೆ. ಶೂದ್ರರು ಮತ್ತು ಅಸ್ಪೃಶ್ಯರು ಅಸಂಖ್ಯಾತ ಜಾತಿ, ಉಪಜಾತಿಗಳಾಗಿ ವಿಂಗಡ ಗೊಂಡಿದ್ದರು ಎಂಬುದು ಇದರ ಇಂಗಿತ. ಬ್ರಾಹ್ಮಣರೂ ಹೀಗೆಯೇ ವಿಂಗಡಗೊಂಡಿದ್ದರು. ಏಳನೆಯ ಶತಮಾನದ ನಂತರ ಭಾರತದ ರಾಜ್ಯವ್ಯವಸ್ಥೆ ಹಾಗೂ ಸಮಾಜಗಳಲ್ಲಿ ಮಹತ್ವದ ಸ್ಥಾನವೊಂದನ್ನು ಪಡೆದ ರಜಪೂತರೂ ಇದೇ ರೀತಿ ವಿಂಗಡಗೊಂಡರು. ಆಗಿನ ಅರ್ಥ ವ್ಯವಸ್ಥೆಯಿಂದಾಗಿ ಜನರು ಸ್ಥಳದಿಂದ ಸ್ಥಳಕ್ಕೆ ಚಲಿಸುವುದು ಅಸಾಧ್ಯವಾಗಿದ್ದುದರಿಂದಲೂ ಜಾತಿಗಳ ಸಂಖ್ಯೆ ಹೆಚ್ಚಿತು. ಬೇರೆ ಬೇರೆ ಪ್ರದೇಶಗಳಲ್ಲಿ ಒಂದೇ ವೃತ್ತಿಯನ್ನು ಅನುಸರಿಸಿ ಜೀವಿಸುತ್ತಿದ್ದ ಜನರು ಸಹ ಪ್ರಾದೇಶಿಕವಾದ ಉಪಜಾತಿಗಳಾಗಿ ರೂಪುಗೊಂಡರು. ಇವುಗಳ ಜೊತೆಗೆ ಆದಿವಾಸಿ ಪ್ರದೇಶಗಳಲ್ಲಿ ಬ್ರಾಹ್ಮಣರಿಗೆ ಭೂಮಾನ್ಯಗಳು ದೊರೆದುದರಿಂದಾಗಿ ಆ ಆದಿವಾಸಿ ಜನಗಳೂ ಹಿಂದೂ ಸಮಾಜದೊಳಕ್ಕೆ ಬಂದರು. ಅವರಲ್ಲಿ ಬಹಳಷ್ಟು ಪಾಲು ಶೂದ್ರ ಮತ್ತು ಮಿಶ್ರ ಜಾತಿಗಳಾಗಿ ಒಳ ಸೇರಿದರು. ಪ್ರತಿಯೊಂದು ಆದಿವಾಸಿ ಬಣವೂ ಹಿಂದು ಸಮಾಜದ ಒಂದು ಪ್ರತ್ಯೇಕ ಜಾತಿಯಾಯಿತು.

ಜಾತಿಯನ್ನು ಆಧುನಿಕ ಯುಗದ ಚಿಂತಕರು ಒಂದು ದೊಡ್ಡ ಸಮಸ್ಯೆಯೆಂಬಂತೆ ಪರಿಗಣಿಸಿದ್ದಾರೆ. ಭಾರತದಲ್ಲಿ ಮನುಷ್ಯ ಜಾತಿಯನ್ನು ಮೀರಿದಾಗ ಮಾತ್ರ ಪ್ರಗತಿಪರನಾಗಲು ಸಾಧ್ಯವೆಂದು ಪದೇ ಪದೇ ಹೇಳಲಾಗುತ್ತಿದೆ. ಜಾತ್ಯತೀತರಾಗುವುದು ರಾಜ್ಯಾಂಗ ವ್ಯವಸ್ಥೆಯಲ್ಲಿ ಅನಿವಾರ್ಯವೆಂದು ಪ್ರತಿಪಾದಿಸಲಾಗುತ್ತದೆ. ಜಾತ್ಯತೀತರಾಗುವುದೆಂದರೆ ಅದು ಸಾಂವಿಧಾನಿಕ ಅಗತ್ಯವೆಂದು ಪ್ರತಿಪಾದಿಸಿರುವ ಹಾಗೆಯೇ ಆಧುನಿಕ ಯುಗದ ಚಿಂತನೆಯು 'ಜಾತಿವಾದ' ಮತ್ತು 'ಜಾತ್ಯತೀತವಾದ'ವನ್ನು ಎರಡು ಸರಳದ್ವಂದ್ವವೆಂಬತೆ ನಿರೂಪಿಸಿದೆ. ವಸಾಹತ್ತೋತ್ತರ ಸಂದರ್ಭದಲ್ಲಿ 'ಜಾತಿ'ಯೆನ್ನುವುದು 'ಅಧಿಕಾರ' ಕೇಂದ್ರದ ಜೊತೆಗೆ ಸಮೀಕರಣಗೊಂಡಿರುವುದು ಕೂಡಾ ಅಷ್ಟೇ ಸತ್ಯ. ಅದೇ ಮಾದರಿಯಲ್ಲಿ 'ಜಾತಿ'ಯೆನ್ನುವುದು ಭಾರತದ ಅಭಿವೃದ್ಧಿಗೆ ಮಾರಕವೆಂಬಂತೆ ವಾದವನ್ನು ಹೂಡಿದ್ದಾರೆ. ಯಾಕೆ ಈ ಮಾತನ್ನು ಹೇಳಬೇಕಾಯಿತೆಂದರೆ ಜಾತಿಗೆ ಮತ್ತು ಅಭಿವೃದ್ಧಿಗೆ ನಿಜವಾದ ಸಂಬಂಧವಿದೆಯೇ ಎಂಬುದನ್ನು ತುಂಬಾ ಗಂಭೀರವಾಗಿ ಯೋಚಿಸಬೇಕಾಗಿದೆ. ಎರಡನೆಯದಾಗಿ 'ಜಾತಿ'ಯನ್ನು ನಾವು ಹೇಗೆ ನೋಡುತ್ತೇವೆ ಎಂಬುದು ಕೂಡಾ ಅಷ್ಟೇ ಮುಖ್ಯ. ಅಂದರೆ; ಜಾತಿಗೆ ಮತ್ತು ಹಿಡುವಳಿಗೆ; ಜಾತಿಗೆ ಮತ್ತು ಬ್ರಿಟೀಷ್

ಮಾದರಿಯ ಉತ್ಪಾದನೆಯ ಕ್ರಮಕ್ಕೆ; ಜಾತಿಗೆ ಮತ್ತು 'ವರ್ಣ'ದ ಕಲ್ಪನೆಗೆ ಇರುವ ಸಂಬಂಧ; ಹಾಗೂ ಜಾತಿಗೆ ಮತ್ತು ಅಸ್ಪೃಶ್ಯತೆಗೆ ಇರುವ ಸಂಬಂಧಗಳ ಕುರಿತು ಚಿಂತಿಸಬೇಕಾದ ಅಗತ್ಯವಿದೆ. 'ಜಾತಿ'ಯ ಬಗೆಗಿನ ನಮ್ಮ ಅನೇಕ ತಿಳುವಳಿಕೆಗಳು ಮುಗ್ಧವಾದ, ಯುರೋಪುಕೇಂದ್ರಿತ ಚಿಂತನೆಯ ಕ್ರಮದಿಂದ ರೂಪುಗೊಂಡಿರುವುದರಿಂದ ತುಂಬಾ ಬೀಸುನೋಟದ ಹೇಳಿಕೆಗಳು ಲಭ್ಯವಾಗಿವೆ. 'ಜಾತಿ'ಯೆನ್ನುವುದು 'ಜನ್ಯ'ವೆಂಬುದನ್ನು ಸೂಚಿಸುತ್ತದೆ. ಇಂಗ್ಲಿಷಿನಲ್ಲಿ 'ಜಾತಿ' ಎನ್ನುವುದಕ್ಕೆ "Caste" ಎಂದು ಗುರುತಿಸುವುದು ಸರಿಯಷ್ಟೇ?. ಭಾರತದಲ್ಲಿರುವ 'ಜಾತಿ' ಪದ್ಧತಿಯನ್ನು "Caste" ಎಂದು ಗುರುತಿಸುವ ಮೂಲಕ ಅದಕ್ಕೆ ಬೇರೊಂದು ವ್ಯಾಖ್ಯೆಯನ್ನು ಮಂಡಿಸಿರುವವರು ಪೋರ್ಚುಗೀಸರು. ಮೂಲತಃ ಇದು ಸ್ಪಾನಿಷ್ ಪದ. ಸ್ಪಾನಿಷ್‌ಗೆ ಬಂದಿರುವುದು ಲ್ಯಾಟಿನ್‌ನಿಂದ. ಲ್ಯಾಟಿನಿನಲ್ಲಿ 'Castus' "Chaste' ಎನ್ನುವುದನ್ನು ಸೂಚಿಸುತ್ತದೆ. ಹದಿನೈದನೆಯ ಶತಮಾನದಲ್ಲಿ ಪೋರ್ಚುಗೀಸರು ಇದನ್ನು ಭಾರತಕ್ಕೆ ಅನ್ವಯಿಸಿದರು. ಫ್ರೆಂಚ್‌ನಿಂದ ಬಂದ "Caste" ಎಂಬುದು ಇಂಗ್ಲಿಷಿನಲ್ಲಿಯೂ ಅದೇ ರೀತಿಯಲ್ಲಿ ಚಾಲ್ತಿಗೆ ಬಂತು. ಇದನ್ನು ವ್ಯಾಖ್ಯಾನಿಸುವಾಗ ಮೂರು ಪ್ರಮುಖ ಗುಣಲಕ್ಷಣಗಳನ್ನು ಹೇಳಲಾಯಿತು:

೧. ಪ್ರತ್ಯೇಕತೆ : ಮದುವೆ ಸಂಬಂಧಗಳಲ್ಲಿ ಹಾಗೂ ಊಟೋಪಚಾರಗಳಲ್ಲಿ ನೇರವಾಗಿಯೋ; ಅಪ್ರತ್ಯಕ್ಷವಾಗಿಯೋ ಪ್ರತ್ಯೇಕತೆಯನ್ನು ಕಾಪಾಡುವುದು.

೨. ಕೆಲಸದ ವರ್ಗೀಕರಣ (Division of Labour): ಉದ್ಯೋಗದ ದೃಷ್ಟಿಯಿಂದ ಪ್ರತಿಯೊಂದು ಗುಂಪಿನ ಜನರೂ ಬೇರೆ ಬೇರೆ ಕೆಲಸಗಳನ್ನು ಮಾಡುವುದು ಮತ್ತು ಕೆಲಸ ಕಾರ್ಯಗಳಿಗೆ ಮಿತಿಯಿರುವುದು.

೩. ಶ್ರೇಣೀಕರಣ (Hierarchy): ಜನರಲ್ಲಿ ಕೆಲವರನ್ನು ಶ್ರೇಷ್ಠವೆಂದೂ ಮತ್ತೆ ಕೆಲವರನ್ನು ಕನಿಷ್ಠರೆಂದು ತಿಳಿಯುವ ಕ್ರಮಗಳು.

ಜಾತಿಯ ಕುರಿತು ಚರ್ಚಿಸಲು ಹೊರಡುವ ಬಹುತೇಕ ವಿದ್ವಾಂಸರು ಈ ದಾರಿಯಲ್ಲಿಯೇ ಸಾಗಿದ್ದಾರೆ. ಇದೇ ಮಾದರಿಯಿಂದ ಹೊರಟರೆ ನಮಗೆ ಜಾತಿಯ ಕುರಿತು ಚರ್ಚಿಸಲು ಸಿಗುವ ಮೂಲ ವೈಚಾರಿಕ ಆಕೃತಿಗಳು ಇವು ಮಾತ್ರ. ಮಾಕ್ಸ್‌ವೆಬರ್ ಜಾತಿಯನ್ನು ಒಂದು ನಿರ್ದಿಷ್ಟವಾದ : ಸ್ಥಾನಮಾನವನ್ನು ಸೂಚಿಸುವ ಗುಂಪು ಎಂದು ಕರೆಯುತ್ತಾನೆ. ಜಾತಿಯನ್ನು ಈ ತರಹ ಒಂದೇ ವೈಚಾರಿಕ ನೆಲೆಯಿಂದ ಚರ್ಚಿಸಿದಾಗ 'ಜಾತಿ' ಯು ಇಡಿಯ ಭಾರತದ ಮಟ್ಟಕ್ಕೆ ಒಂದು ತಿಳುವಳಿಕೆಯನ್ನು ಮಾತ್ರ ಹೇಳುತ್ತದೆ. ಆದರೆ ಇಡಿಯ ಭಾರತಕ್ಕೆ ಒಂದೇ ರೀತಿಯಲ್ಲಿ ಜಾತಿಯ ಶ್ರೇಣೀಕರಣವನ್ನು ಅನ್ವಯಿಸುವುದು ಕಷ್ಟ.

ಜಾತಿಗೆ ಮತ್ತು ಕುಟುಂಬದ ಸ್ವರೂಪಕ್ಕೆ ಹಾಗೂ ಜಾತಿಗೆ ಮತ್ತು ಉದ್ಯೋಗಕ್ಕೆ ಚಾರಿತ್ರಿಕವಾಗಿ ಸಂಬಂಧವನ್ನು ಕಲ್ಪಿಸಲಾಗಿದೆ. ಆದರೆ ಭಾರತದ ಗ್ರಾಮಸಮಾಜದಲ್ಲಿರುವ ಜಾತಿಗಳು: ಅವರ ಕಸುಬು ಮತ್ತು ಗ್ರಾಮೀಣ ಉತ್ಪಾದನೆಯ ಕ್ರಮಗಳಿಗೆ ಒಂದು

ನಿಕಟ ಸಂಬಂಧವಿರುತ್ತದೆ. ಅಂದರೆ ಪ್ರತಿಯೊಂದು ಜಾತಿಯು ಕೂಡಾ ತನ್ನ ಅಗತ್ಯಕ್ಕೆ ತಕ್ಕಂತೆ; ಜೀವನೋಪಾಯಕ್ಕಾಗಿ ಉದ್ಯೋಗ ಮಾಡುತ್ತದೆ. ಜಾತಿ ಮತ್ತು ಕಸುಬಿನ ನಡುವಣ ಸಂಬಂಧ – ನಾವೀಗ ಹೇಳುವ ರೀತಿಯಲ್ಲಿ ಒಂದೇ ಅಲ್ಲ. ಅದು ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆಯಾಗುತ್ತದೆ. ಇದರ ಪರಿಣಾಮವಾಗಿ ಆಳುವ ಮತ್ತು ಆಳಿಸಿಕೊಳ್ಳುವ ವರ್ಗಗಳೂ ಬೇರೆ ಬೇರೆ ರೀತಿಯ ಸಂವಾದವನ್ನು ಹೊಂದಿರುತ್ತವೆ. ಹಾಗೂ ಜಾತಿಗೆ ಒಂದು ಗುಣವೆನ್ನುವುದು ಇಲ್ಲ. ಪ್ರತಿಯೊಂದು ಜಾತಿಗೂ ಒಂದು ಗುಣವಿದೆಯೆಂದು ಕರೆಯುವುದು – ಆಧುನಿಕ ರಾಜಕಾರಣ ಪ್ರೇರಿತ ಪ್ರಯತ್ನ ಮಾತ್ರ.

ಪ್ರತಿಯೊಂದು ಗ್ರಾಮಸಮಾಜವೂ ಈ ಕಾರಣಗಳಿಂದ ಸ್ವಯಂತಂತ್ರ ಗಣರಾಜ್ಯದಂತೆ ಕೆಲಸ ಮಾಡುತ್ತಿತ್ತು. ಇದಕ್ಕೆ ತಕ್ಕಂತೆ ನಿಯಾಮಾವಳಿಗಳು ರೂಪುಗೊಂಡಿದ್ದವು. ಹಾಗೂ ನಿಯಾಮಾವಳಿಗಳೆಂದು ಯಾವುದನ್ನು ಗುರುತಿಸುತ್ತೇವೋ ಅವು ಅನೇಕ ಸಂದರ್ಭಗಳಲ್ಲಿ 'ಸಂವಾದಿ'ಯಾಗಿದ್ದವೇ ಹೊರತು ಅವಕ್ಕೆ ನಿರ್ದಿಷ್ಟ ಚಹರೆಯೆನ್ನುವುದು ಇರಲಿಲ್ಲ. ಗ್ರಾಮೀಣ ಜ್ಞಾನಪರಂಪರೆಯಾಗಲೀ ಅದಕ್ಕೆ ಸಂಬಂಧಿಸಿದಂತೆ ರೂಪುಗೊಂಡ ನಿಯಾಮಾವಳಿಗಳಾಗಲೀ ಒಂದು ಗ್ರಾಮಕ್ಕೆ; ಅದರ ಕೃಷಿ ಮೂಲವಾದ ಚಟುವಟಿಕೆಯಲ್ಲಿ ಅಗತ್ಯವಿಲ್ಲದ ಉದ್ಯೋಗಗಳು ಸೃಷ್ಟಿಯಾಗುವುದು ಸಾಧ್ಯವಿಲ್ಲ. ಪ್ರಾದೇಶಿಕವಾಗಿಯೂ ಒಂದೊಂದು ಜಾತಿಯ ಯಜಮಾನಿಕೆ; ಆಯಾ ಜಾತಿಗಳ ಸ್ಥಾನ–ಮಾನ; ಜಾತಿಗಳ ಮನೋಸ್ಥೈರ್ಯ ಇತ್ಯಾದಿಗಳು ಪ್ರಾದೇಶಿಕವಾಗಿ ಭಿನ್ನವಾಗುತ್ತಾ ಹೋಗುತ್ತವೆ. (ಈ ಹಿನ್ನೆಲೆಯಲ್ಲಿ ವಡ್ಡಾರಾಧನೆಯ ಕತೆಗಳನ್ನು ಓದಬಹುದು.)

'ಜಾತಿ'ಯೆನ್ನುವುದಕ್ಕೆ ಕಿಟ್ಟೆಲ್ ನಿಘಂಟುವಿನಲ್ಲಿ ಹೀಗೆ ಹೇಳಲಾಗಿದೆ: ಜಾತ=ಹುಟ್ಟು ಜಾತಿ=ಹುಟ್ಟು; ಕುಟುಂಬ; ಜನಾಂಗ; ಸ್ಥಾನ–ಮಾನ; ಬುಡಕಟ್ಟು; ಕುಲ ಮುಂತಾದ ಅರ್ಥಗಳಿವೆ. ಆ=ಹುಟ್ಟು. ಸಂಸ್ಕೃತದ ಪ್ರಕಾರ – 'ಜಾತಿ'ಯು 'ಜನ್'/ಜ ಧಾತುವಿನಿಂದ ಹುಟ್ಟಿದೆ. ಹುಟ್ಟು ಎನ್ನುವುದು ಇದರ ತಾತ್ಪರ್ಯ. (ನೋಡಿ : ಕಿಟ್ಟೆಲ್ ನಿಘಂಟು)

ಜಾತಿಗಳಲ್ಲೆಲ್ಲ ಬ್ರಾಹಣ ಶ್ರೇಷ್ಠ ಎಂಬುದು ಸಾರ್ವತ್ರಿಕವಾಗಿ ಒಪ್ಪಿತವಾಗಿದ್ದಿತು. ಅಂದಿನ ಸಾಹಿತ್ಯ ಕೃತಿಗಳು ಮತ್ತು ಶಾಸನಗಳು ಈ ಕುರಿತು ಹೇರಳವಾದ ಮಾಹಿತಿಗಳನ್ನು ನೀಡುತ್ತವೆ. ಅವುಗಳಲ್ಲಿ ಹದಿನೆಂಟು ಜಾತಿಗಳ ಉಲ್ಲೇಖಗಳಿದ್ದು, ಮೊದಲನೆಯದು ಬ್ರಾಹ್ಮಣ, ಕೊನೆಯದು ಅಂತ್ಯಜ ಅಥವಾ ಹೊಲೆಯ ಎನ್ನುವ ವಿವರಗಳಿವೆ. ಇದು ಅಂದಿನ ಶ್ರೇಣೀಕೃತ ಸಮಾಜ ವ್ಯವಸ್ಥೆಯ ಯಥಾವತ್ತಾದ ಚಿತ್ರಣವಾಗಿ ಕಂಡುಬರುತ್ತದೆ. ಜಾತಿಗಳೂ ಹದಿನೆಂಟು ಎಂಬುದು ಒಂದು ಅಂಗೀಕೃತವಾದ ಮಾತಾಗಿದ್ದಿರಬಹುದೆಂದು ತೋರುತ್ತದೆ. ಏಕೆಂದರೆ ಜಾತಿಗಳು ಹದಿನೆಂಟಕ್ಕಿಂತ ಎಷ್ಟೋ ಹೆಚ್ಚಾಗಿದ್ದವು ಎಂಬುದು ಶಾಸನಗಳಿಂದ ಮತ್ತು ಸಾಹಿತ್ಯ ಕೃತಿಗಳಿಂದ ಗೊತ್ತಾಗುತ್ತದೆ. ವಚನಕಾರರು ಹದಿನೆಂಟು ಜಾತಿಗಳ ಪಟ್ಟಿಯನ್ನು ಕೊಟ್ಟಿದ್ದಾರೆ. ಸೊಡ್ಡಳ ಬಾಚರಸ ಎನ್ನುವವನು ಮನುಷ್ಯನ ದೇಹದ ಪ್ರತಿಯೊಂದು ಅಂಗಕ್ಕೂ ಒಂದೊಂದು ಜಾತಿಯನ್ನು ಸಮೀಕರಿಸಿ, ಹದಿನೆಂಟು

ಜಾತಿಗಳ ಪಟ್ಟಿಯನ್ನು ಕೊಟ್ಟಿದ್ದಾನೆ. ಅವುಗಳೆಂದರೆ; ಬ್ರಾಹ್ಮಣ (ಶಿಖಿ), ಕ್ಷತ್ರಿಯ (ನಯನ), ಬಣಜಿಗ (ನಾಸಿಕ), ಒಕ್ಕಲಿಗ (ತುಟಿ), ಗೊಲ್ಲ (ಕರ್ಣ), ಕುಂಬಾರ (ಕೊರಳು), ಪಂಚಾಳ (ಬಾಹು), ಉಪ್ಪಾರ (ಅಂಗೈ), ನಾಯಿಂದ (ಉಗುರು), ಡೊಂಬ (ಒಡಲು), ಅಗಸ (ಬೆನ್ನು), ಜೇಡ (ಚರ್ಮ), ಕಬ್ಬಿಲ (ಪೃಷ್ಠ), ಹೊಲೆಯ (ಒಳದೊಡೆ), ಈಳಿಗ (ಮಣಿಕಾಲು), ಸಮಗಾರ (ಕಣಗಾಲು), ಮಚ್ಚಿಗ (ಮೇಗಾಲು), ಮತ್ತು ಶುದ್ಧ ಮಾದಿಗ (ಅಂಗಾಲು). ಅಂಬಿಗರ ಚೌಡಯ್ಯನು ಇದೇ ರೀತಿ ಮನುಷ್ಯನ ದೇಹದ ಪ್ರತಿಯೊಂದು ಅಂಗಕ್ಕೂ ಒಂದೊಂದು ಜಾತಿಯನ್ನು ಸಮೀಕರಿಸಿ ಹದಿನೆಂಟು ಜಾತಿಗಳ ಉಲ್ಲೇಖ ಮಾಡಿದ್ದಾನೆ. ಮೇಲಿನ ಉಲ್ಲೇಖಗಳು ಮನುಷ್ಯನ ದೇಹವನ್ನು ಆಧಾರವನ್ನಾಗಿಟ್ಟುಕೊಂಡು ಸಮಾಜದ ವಿಭಿನ್ನ ಸ್ತರಗಳನ್ನು ವಿವರಿಸುವ ಪ್ರಯತ್ನವಾಗಿ ಕಂಡುಬರುತ್ತವೆ. ಮನುಷ್ಯನ ದೇಹದ ಅಂಗಗಳು ಇಲ್ಲಿ ಸಾಂಕೇತಿಕವಾಗಿ ಕಂಡುಬರುತ್ತವಷ್ಟೆ ಸಮಾಜವನ್ನು ಒಬ್ಬ ವ್ಯಕ್ತಿಯಲ್ಲಿ ಕಾಣುವ ವಚನಕಾರರ ದೃಷ್ಟಿ ಮತ್ತು ಆಶಯಗಳು ಏನೇ ಇದ್ದರೂ, ಅದು ಅಂದಿನ ಜಾತಿ ವ್ಯವಸ್ಥೆಯ ಹಾಗೂ ಸಮಾಜದ ರಚನೆಯ ಸ್ವರೂಪವನ್ನು ತಿಳಿಯಲು ಸಹಾಕಾರಿಯಾಗುತ್ತದೆ ಎಂದು ಮೋಹನಕೃಷ್ಣ ರೈ ಹೇಳುತ್ತಾರೆ.

ಜಾತಿ ಮತ್ತು ಬುಡಕಟ್ಟುಗಳ ಬಗ್ಗೆ ಹೇರಳ ಅಪಕಲ್ಪನೆಗಳಿವೆ. ಜಾತಿ ಮತ್ತು ಬುಡಕಟ್ಟುಗಳನ್ನು ನೋಡುವ ವಿಧಾನಗಳಲ್ಲಿ ತಪ್ಪಿರುವಂತೆಯೇ, ಆ ಕಲ್ಪನೆಗಳನ್ನು ಮಂಡಿಸುವ ವಿಧಾನಗಳಲ್ಲಿ ಕೂಡಾ ಕೆಲವು ಅಪಕಲ್ಪನೆಗಳು ಸೃಷ್ಟಿಯಾಗಿವೆ. ಜಾತಿ ಮತ್ತು ಬುಡಕಟ್ಟು ಜನಾಂಗಗಳನ್ನು ನೋಡುವಾಗಲೇ ಯೋರೋಪಿಯನ್ ಮೂಲದ ವಿದ್ವಾಂಸರಿಗೆ ಅದೊಂದು ಶಾಪವೆಂದು ಅನಿಸಿದ್ದರಿಂದ ಈ ಮಾದರಿಯ ವ್ಯಾಖ್ಯೆಗಳು ಉಂಟಾಗಿವೆ. ಹಿಂದೂ ಸಮಾಜದ ವಿವರಣಾತ್ಮಕ ವ್ಯಾಖ್ಯಾನಗಳನ್ನು ಮಾಡುವಾಗ ಯೂರೋಪಿಯನ್ನರು ತಮ್ಮ ಅನುಭವ ಮತ್ತು ಜ್ಞಾನದ ಮಾದರಿಗಳಿಂದ ಅದನ್ನು ರೂಪಿಸಿದರು. ನಮ್ಮಲ್ಲಿ ಅನೇಕರು ಇದೇ ಹಿನ್ನೆಲೆಯಿಂದ ಜಾತಿ ಮತ್ತು ಬುಡಕಟ್ಟುಗಳನ್ನು ವ್ಯಾಖ್ಯಾನಿಸುತ್ತಾರೆ. ಇನ್ನೊಂದು ಸ್ವರೂಪ ದೇಶೀಯ ವಿದ್ವಾಂಸರದ್ದು. ಅವರು ಜಾತಿ ಮತ್ತು ಬುಡಕಟ್ಟುಗಳನ್ನು ರಾಷ್ಟ್ರೀಯ ಮಾದರಿಯೊಳಗೆ ನಿರ್ವಚಿಸುವ ಪ್ರಯತ್ನವನ್ನು ಮಾಡಿದರು. ಹೀಗಾಗಿ ಜಾತಿ ಮತ್ತು ಬುಡಕಟ್ಟುಗಳನ್ನು ಕುರಿತು ಚರ್ಚಿಸುವ ವಿಧಾನವು ತುಂಬಾ ತೊಡಕಿನದಾಯಿತು. ವಾಸ್ತವವಾಗಿ ಜಾತಿಯ ಪರಿಕಲ್ಪನೆ ಮತ್ತು ಬುಡಕಟ್ಟಿನ ಪರಿಕಲ್ಪನೆಗಳು ಬೇರೆ. ಯುರೋಪಿಯನ್ನರಿಗೆ ಭಾರತದಲ್ಲಿರುವ ಜಾತಿ ಪದ್ಧತಿಯು ವಿಚಿತ್ರವಾಗಿ ಕಾಣಿಸಿತ್ತು. ಜಾತಿಯನ್ನು ಅವರು ವಿವರಿಸುವಾಗ ಅವರ ಮನಸ್ಸಿನಲ್ಲಿ ಒಂದೆರಡು ಅಂಶಗಳು ಮುಖ್ಯವಾಗಿದ್ದವು. ಯುರೋಪಿಯನ್ನರು ಅವರೆದುರುಗಡೆಗೆ ಒಂದು 'ನಾಗರಿಕ' ಸಮಾಜದ ಕಲ್ಪನೆಯನ್ನು ಇಟ್ಟುಕೊಂಡಿದ್ದರು. ಹದಿನೇಳನೆಯ ಶತಮಾನದ ಕೊನೆಯಲ್ಲಿ ಅವರ ಚಿಂತನೆಯ ಕ್ರಮವು 'ವ್ಯಕ್ತಿಯ ಅನನ್ಯತೆ' (Individualism) 'ಜ್ಞಾನ' (Knowledge) 'ವಸ್ತುನಿಷ್ಠತೆ' 'ನಿರ್ದಿಷ್ಟ ಮಾದರಿಯ ಕಾನೂನು' 'ಭಾರತೀಯ ಸಮಾಜದ ಪರಿವರ್ತನೆ' 'ಸಮಾನ ಕಾನೂನು' ಸಾಮಾಜಿಕ

ರಚನೆಯಲ್ಲಿ ಬದಲಾವಣೆ' (Structural Change) 'ಸ್ಥಳೀಯ ಮೌಲ್ಯನಾಶ' 'ಯುರೋಪಿಯನ್ ಮಾದರಿಯ ಚಿಂತನೆಯ ಕ್ರಮದ ಸ್ಥಾಪನೆ ಹಾಗೂ ಸ್ಥಳೀಯ ನಂಬಿಕೆಗಳ ನಾಶ' ಇತ್ಯಾದಿಗಳನ್ನು ಒಳಗೊಂಡಿದ್ದವು. ಜಾತಿ ಮತ್ತು ಅಭಿವೃದ್ಧಿಗೆ ಸಂಬಂಧವನ್ನು ಕಲ್ಪಿಸಿದರು. ಇದರಿಂದ ಯುರೋಪಿಯನ್ನರಿಗೆ ಅನುಕೂಲವಿತ್ತು ಜಾತಿ; ಬುಡಕಟ್ಟು; ಜನಾಂಗವಾದ; ಧರ್ಮ – ಇತ್ಯಾದಿಗಳಿಗೆ ಯುರೋಪ್‌ನ ಆ ಕಾಲದ ಚಿಂತನೆಯ ಕ್ರಮ ಬೇರೊಂದು ವಾದವನ್ನು ಮಂಡಿಸಿತ್ತು. ಇಡಿಯ ಭಾರತ ದಲ್ಲಿಯೇ ಅನೇಕ ಬುಡಕಟ್ಟುಗಳನ್ನು ಜಾತಿ ಚೌಕಟ್ಟಿನಿಂದ ಹೊರಗೆ ಇರಿಸಲಾಗಿದೆ ಹಾಗೂ ಸ್ವಾತಂತ್ರ್ಯೋತ್ತರ ಕಾಲದಲ್ಲಿಯೂ ಅನೇಕ ಬುಡಕಟ್ಟುಗಳಿಗೆ ರಾಜಕೀಯ ಪ್ರಾಮುಖ್ಯತೆಯನ್ನು ಕೊಟ್ಟಿಲ್ಲ.

ಅನೇಕ ಸಂದರ್ಭಗಳಲ್ಲಿ ಆರ್ಯ ಫ ದ್ರಾವಿಡ; ಬ್ರಾಹ್ಮಣ ಫ ಶೂದ್ರವೆಂಬ ಧ್ರುವೀಕರಣದ ಪರಿಭಾಷೆಯಲ್ಲಿಯೇ ನಮ್ಮ ಚರ್ಚೆಗಳು ನಿಂತು ಬಿಡುತ್ತವೆ. ಮತ್ತು ಬ್ರಾಹ್ಮಣರು ಕೆಲವು ಸಂದರ್ಭಗಳಲ್ಲಿ ಹೇಳುವ ಮಂತ್ರಗಳು ಕೂಡ ಜಾತಿ ತಾರತಮ್ಯಗಳನ್ನು ಒಂದು ಪುರಾಣ ರೂಪಕವಾಗಿ ಮಾತ್ರ ಕಾಣುತ್ತದೆ. ಬುಡಕಟ್ಟು ಈ ಕಥನದ ಚೌಕಟ್ಟಿನೊಳಗೆ ಬರುವುದಿಲ್ಲ. ಆದುದರಿಂದ ಅದರ ವಾಸ್ತವದ ಸ್ಥಿತಿಯು ಬೇರೆಯಿದೆ.

ಜಾತಿಯನ್ನಾಗಲೀ ಬುಡಕಟ್ಟಿನ ಸಂಸ್ಕೃತಿಯನ್ನಾಗಲೀ – ಒಂದು ಚಿರವಾದ ಸಂಸ್ಥೆಯೆಂದಾಗಲಿ: ಅದನ್ನು ಕೆಲಸದ ವರ್ಗೀಕರಣದ ಹಿನ್ನೆಲೆಯಲ್ಲಿ ಚರ್ಚಿಸುವುದಾಗಲೀ ಕಷ್ಟ ಹಾಗೆಯೇ ಜಾತಿಯೆಂಬುದನ್ನು ಇಡಿಯ ಭಾರತೀಯ ಸಮಾಜಕ್ಕೆ ಒಂದು ನಿರ್ದಿಷ್ಟ ಮಾದರಿಯೆಂದು ಕರೆಯಲಾಗುವುದಿಲ್ಲ ಹಾಗೂ ಭಾರತದಲ್ಲಿ ಅಸಂಖ್ಯ ಜಾತಿಗಳಿವೆ. ಅವುಗಳಿಗೆ ಒಂದೇ ಧಾರ್ಮಿಕ ಸಂಪ್ರದಾಯ ಎನ್ನುವುದು ಇಲ್ಲ. ಪ್ರಾದೇಶಿಕತೆಗೆ ಅನುಸಾರವಾಗಿ ಜಾತಿಗಳ ನಡುವಣ ಸಂವಾದವು ಬೇರೆ ಬೇರೆ ರೀತಿಯಲ್ಲಿರುತ್ತವೆ. ಭೂ ಹಿಡುವಳಿ ಆಯಾ ಗುಂಪುಗಳ ಮಾನಸಿಕ ಸ್ಥಿರತೆ ಮುಂತಾದುವುಗಳನ್ನು ನಾವು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ.

ಜಾತಿಗಳು ಬುಡಕಟ್ಟುಗಳು ಅವರ ನಡಾವಳಿಕೆಗಳು ಜೈನರು ಅವರ ನಡಾವಳಿಗಳ ಕುರಿತು ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಹೇರಳವಾಗಿ ಬರುತ್ತದೆ. ಕುಲದ ಚರ್ಚೆಯೂ ಇದಕ್ಕೆ ಸಂಬಂಧಿತವಾಗಿದೆ. (ವಡ್ಡಾರಾಧನೆ, ಆದಿಪುರಾಣ, ವಿಕ್ರಮಾರ್ಜುನವಿಜಯ)

ಮನು ಧರ್ಮದಲ್ಲಿಯೂ ಇದು ಉಕ್ತವಾಗಿದೆ. ನಾಲ್ಕು ವೇದಗಳನ್ನು ಸಾಂಗೋಂಪಾಂಗವಾಗಿ ಅಧ್ಯಯನ ಮಾಡಿ ಅವುಗಳಿಗೆ ತತ್ವಾರ್ಥಗಳನ್ನು ತಿಳಿದುಕೊಂಡು ಬ್ರಾಹ್ಮಣನಾದವನೂ ಸಹ ಶೂದ್ರನಿಂದ ದಾನ ಪಡೆದದ್ದೇ ಆದರೆ ಅವನು ಕತ್ತೆಯಾಗಿ ಜನಿಸುತ್ತಾನೆ.

ಅವನು ಸತತವಾಗಿ ಹನ್ನೆರಡು ಜನ್ಮಗಳ ಪರ್ಯಂತ ಕತ್ತೆಯ ಯೋನಿಯಿಂದ ಜನಿಸುತ್ತಾನೆ. ಅನಂತರ ೬೦ನೇ ಮತ್ತು ಜನ್ಮದಲ್ಲಿ ಕ್ರಮವಾಗಿ ಹಂದಿ ಮತ್ತು ನಾಯಿಗಳ ಯೋನಿಯಲ್ಲಿ ಜನಿಸುತ್ತಾನೆ ಎಂದು ಮನು ಹೇಳಿದ್ದಾನೆ.

*ವಿವರಗಳಿಗೆ : P. V. Kane History of Dharma sastra Vol II – P.43; 44, 53, 69, 83, 88*
*Romila Thapar 1975 The Past and Prejudice P. 30*
*ಡಿ.ಡಿ. ಕೊಸಾಂಬಿ ೧೯೯೮ ಪ್ರಾಚೀನ ಭಾರತದಲ್ಲಿ ಚರಿತ್ರೆ ಪುಟ. ೨೨೬*
*ಆರ್.ಎಸ್. ಶರ್ಮ ೨೦೦೭ ಪ್ರಾಚೀನ ಭಾರತ ಪುಟ. ೨೫೧–೨೬೨*
*Louis Dumont 1999 Homohireehicus*
*ಮೋಹನಕೃಷ್ಣರೈ ೨೦೦೪ ಪ್ರಭುತ್ವ ಮತ್ತು ಜನತೆ ಪುಟ. ೬೧*
*Sudipta kaviraj 1997 Poeihics in india Ronald Inden 1990 Imagining India P657*
*ಬಿ. ವಿ. ವೀರಭದ್ರಪ್ಪ ೨೦೦೭ ಅಶ್ವಘೋಷನ ವಜ್ರಸೂಚಿ ೨೦೦೭ ಪುಟ. ೧೩, ೧೪*

**೩೫೦. ಜಾಲಗಾರ**

*..................ಮೀನನೊರ್ವ ಜಾಲಗಾಱಂ ಜಾಲದೊಳ್..............*

*(ಪಂಪ ಭಾರತ ೧–೬೮ ವ)*

*ದೋಣಿಯನ್ನು ನಡೆಸುವವನು ಬೆಸ್ತ ಎಂದು ಪಂಪ ಭಾರತದಲ್ಲಿ ಬರುತ್ತದೆ.*

*(ಪಂಪ ಭಾರತ ೧೨–೯೪)*

**ಅಂಬಿಗ**ರಿಗೆ ಉಚ್ಚಸ್ಥಾನವಿಲ್ಲ. ಅವರು ಕೆಳಜಾತಿಯವರು. ಅವರಿಗೆ ಸಾಮಾಜಿಕ ಮನ್ನಣೆಯೂ ಇಲ್ಲ. ಪಂಪ ಭಾರತದ ಇತರೆಡೆಗಳಲ್ಲಿಯೂ ಅಂಬಿಗರ ವಿಷಯ ಬರುತ್ತದೆ. (ನೋಡಿ: ಪಂಪ ಭಾರತ ಪ್ರಥಮ ಆಶ್ವಾಸ) (೯–೬೭, ೧೨–೪೧)

ಕರ್ಣನನ್ನು ಪಂಪಭಾರತದಲ್ಲಿ ಮೀಂಗುಲಿಗನೆಂದು ಕರೆಯಲಾಗಿದೆ. ಮಿಂಗುಲಿಗ ಪದಕ್ಕೆ ಬೆಸ್ತ; ಬಕಪಕ್ಷಿಯೆಂಬ ಎರಡೂ ಅರ್ಥಗಳಿವೆಯೆಂಬುದು ಗಮನಾರ್ಹ. ಪಂಪಭಾರತದಲ್ಲಿ ಮತ್ತೊಂದು ಕಡೆ ಜಾಲಗಾರ ಎಂದೂ ಬಳಸಲಾಗಿದೆ. ಜಾಲಗಾರನೆಂದರೂ ಬೆಸ್ತನೇ. ಜಾಲವೆಂದರೆ ಬಲೆ. ಬಲೆ ಬೀಸುವವನು ಜಾಲಗಾರ.

ಮೀನುಗಾರಿಕೆ ವೃತ್ತಿಯನ್ನೇ ಪ್ರಧಾನವಾಗಿ ಉಳ್ಳ ಜನಾಂಗಗಳು ಕರ್ನಾಟಕದ ಕರಾವಳಿ ತನಕ ಇಂದೂ ಇವೆ. ಇನ್ನು ಕೆರೆ, ಹಳ್ಳ, ಹೊಳೆಗಳಲ್ಲಿ ಮೀನು ಹಿಡಿಯುವಿಕೆ ಇದ್ದರೂ ಕೂಡ ಅದೊಂದು ಉಪಕಸುಬಾಗಿ ಇರುತ್ತದೆ. ಬೆಸ್ತರು ಎನ್ನುವ ಜನಾಂಗ ಮೂಲತಃ ಮೀನುಗಾರಿಕೆ ವೃತ್ತಿಯವರಾಗಿದ್ದರೂ, ಕಾಲಕ್ರಮೇಣ ಇತರ ವೃತ್ತಿಗಳ ಜೊತೆಗೆ ಮೀನುಗಾರಿಕೆಯನ್ನು ಉಪವೃತ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ವಡ್ಡಾರಾಧನೆಯ 'ಅಭಯಘೋಷರೆಂಬ ಮುನಿಯ ಕಥೆ'ಯಲ್ಲಿ ಬೆಸ್ತಜನಾಂಗದ ಉಲ್ಲೇಖ ಬರುತ್ತದೆ. "ಬೆಸ್ತರು ಒಂದು ಆಮೆಯನ್ನು ಜೀವವಿದ್ದಂತೆಯೇ ನಾಲ್ಕು ಕಾಲು ಕಟ್ಟಿ ನೇತಾಡುವಂತೆ ಕೊರಳಲ್ಲಿ ಕಟ್ಟಿಕೊಂಡು ಬರುತ್ತಿದ್ದಾಗ ಅರಸ ತನ್ನ ಕುಶಲತೆಯಿಂದ ದೂರದಲ್ಲಿದ್ದುಕೊಂಡೆ ಚಕ್ರದಿಂದ ಅದರ ನಾಲ್ಕು ಕಾಲುಗಳನ್ನು ಕತ್ತರಿಸುತ್ತಾನೆ. ಆಮೆಯ ಪ್ರಾಣ ಇನ್ನೂ ಇರುವಾಗಲೇ ಬೆಸ್ತನು ಅದನ್ನು ಮನೆಗೆ ತೆಗೆದುಕೊಂಡು ಹೋದ ಚಿತ್ರಣವಿದೆ. (ಡಾ. ವಿ.ಎಲ್. ಪಾಟೀಲ್ ೨೦೦೯ ಪು.೧೭೮)

ಮೀನು ಎಂಬುದು ಮೀಂ ಎಂದಾಗಿದೆ. ಕೊಲೆ ಮಾಡುವವನು ಕುಲಿಗ ಎಂದಾಗಿದೆ. ಆದ್ದರಿಂದ ಮೀನ್ + ಕುಲಿಗ – ಮಿಂಗುಲಿಗ = ಬೆಸ್ತ (ಅಂಬಿಗ) ಎಂಬ ಅರ್ಥ ಇಲ್ಲಿದೆ.

ಘಾ–ಝ್ವಿಯೆಸ್ ತಿಳಿಸುವಂತೆ ಚಾಂಡಾಲರು ಮೀನುಗಾರರು ಮತ್ತು ಬೇಟೆಗಾರರು ಮಿಶ್ರ ಜಾತಿಗೆ ಸೇರಿದವರು. ಕಾಲಿದಾಸನು ಭಿನ್ನವಾಗಿ ನೋಡುತ್ತಾನೆ. ಚಂಡಾಲರ ಗುಂಪಿಗೆ ಮೀನುಗಾರರನ್ನು ಸೇರಿಸಿದ್ದಾನೆ. ಮತ್ತು ಜಾತಿ ಶ್ರೇಣೀಕರಣದ ದೃಷ್ಟಿಯಿಂದ ಮೀನುಗಾರರಿಗೆ ಉನ್ನತ ಸ್ಥಾನವಿಲ್ಲ. ಪಂಪ ಭಾರತದಲ್ಲಿ ಮತ್ಸ್ಯಗಂಧಿಯನ್ನು ಆಕೆಯ ಶರೀರದ ಕೆಟ್ಟವಾಸನೆಯನ್ನು ಹೋಗಲಾಡಿಸಿ ಪರಾಶರನು ಅವಳನ್ನು ಸೇರಿದ್ದನ್ನು ನೆನಪಿಸಿಕೊಳ್ಳಬಹುದು.

*ವಿವರಗಳಿಗೆ ನೋಡಿ: ಆರ್.ಎಸ್.ಶರ್ಮ ೨೦೦೪ ಪ್ರಾಚೀನ ಭಾರತದಲ್ಲಿ ಶೂದ್ರರು ಪುಟ. ೧೫೮*
*ಡಾ. ವಿ.ಎಲ್. ಪಾಟೀಲ ೨೦೦೯ ವಡ್ಡಾರಾಧನೆ ಜಾನಪದೀಯ ಅಧ್ಯಯನ ಪುಟ. ೧೭೮.*

**೩೫೧. ಜಾಳರಿಗೆ**

***ಜಾಳರಿಗೆ****ಯೆಂದರೆ ಜಾಲರಿಯಿಂದ ಕೂಡಿದ ಕಿಟಕಿ. ಈ ರೀತಿಯ ಕಿಟಕಿಯ ವರ್ಣನೆಯು ಪಂಪ ಭಾರತದಲ್ಲಿ ಬರುತ್ತದೆ. (ಪಂಪ ಭಾರತ ೩–೭೪ ವ)*

ಜಾಲರಿಯಿಂದ ಕೂಡಿದ ಕಿಟಕಿಗಳಿಂದ ಕೆಲವು ಅನುಕೂಲಗಳಿವೆ. ಮೊದಲನೆಯದಾಗಿ ಅದರ ಮೂಲಕ ಗಾಳಿಯು ಓಡಾಡುತ್ತದೆ. ಇದರಿಂದ ಸೆಕೆಯ ಅನುಭವವಾಗುವುದಿಲ್ಲ. ಎರಡನೆಯದಾಗಿ ಜಾಲರಿಯಿಂದ ಹೊರಗೆ ನೋಡಬಹುದು. ಆದರೆ, ಹೊರಗೆ ಇರುವವರು ಒಳಗೆ ನೋಡಲಾಗುವುದಿಲ್ಲ. ಜಾಲವೆಂದರೆ ಹೆಣಿಗೆ. 'ಝುಲ್ಲರಿಕಾ' ಇದರ ಸಂಸ್ಕೃತ ರೂಪ. ಝುಲ್ಲರಿ ಎಂದರೆ ಕುಚ್ಚು.

**೩೫೨. ಜಿನತತ್ವ–ಸ್ಮರತತ್ವ**

***ಜಿನ ತತ್ವಂ ಮದನತತ್ವ*** *ಮೆಂಬಿವೆರಡುಂ ದೂರಸ್ಥಮೆಂತೆನ್ನಲಾ*
*ಜಿನ ತತ್ವಂ ಗತರಾಗಮಾ ಮದನ ತತ್ವಂ ರಾಗ ಸಂಪೂರ್ಣ...*
*(ಶಾಂತಿ ಪುರಾಣ ೧–೧೬)*

ಜಿನತತ್ವ–ಸ್ಮರತತ್ವ ಎಂಬವು ಎರಡು ದೂರ ದೂರ.

ಜಿನತತ್ವ ಹಾಗೂ ಸ್ಮರತತ್ವಗಳೆಂಬ ಎರಡು ತತ್ವಗಳು ಒಂದಕ್ಕೊಂದು ದೂರವಾಗಿವೆ. ಹೇಗೆಂದರೆ ಜಿನ ತತ್ವವೆಂಬುದು ಕಾಮಭಾವನೆಗಳಿಂದ ಪೂರ್ಣ ಬಿಡುಗಡೆ ಪಡೆದಿದೆ. ಆ ಮದನ ತತ್ವವಾದರೊ ಇದಕ್ಕೆ ತದ್ವಿರುದ್ಧ, ಅದು ಸಂಪೂರ್ಣವಾಗಿ ರಾಗದಿಂದ ತುಂಬಿದೆ. ಐದನೆಯ ಚಕ್ರವರ್ತಿಯಾದ ಶಾಂತಿನಾಥನು ತೀರ್ಥಂಕರರಲ್ಲಿ ಹದಿನಾರನೆಯವನು. ಆತನಲ್ಲಿ ಚಕ್ರವಿದ್ದರೂ ಅದು ಧರ್ಮಚಕ್ರ. ಭರತ(ಚಕ್ರವರ್ತಿಯ) ಭೂಮಿಗೆ ಶಾಂತಿ ತೀರ್ಥಂಕರರ ಹಾಗೆ ಚೆನ್ನಾಗಿ ವ್ರತಮಾಡಿದವರಿಲ್ಲ (ಶಾಂತಿಪುರಾಣಂ ೧–೧೬).

ಜೈನತತ್ವದ ಒಳಗೆ ಇರುವ ಎರಡು ಭಿನ್ನತೆಗಳನ್ನು ಪೊನ್ನ ಹೇಳಿರುವುದು ಇಲ್ಲಿ ಗಮನಾರ್ಹವಾಗಿದೆ. ಒಂದು ಜಿನತತ್ವ. ಜಿನತತ್ವವು ಸಂಪೂರ್ಣವಾಗಿ ಇಂದ್ರಿಯ ನಿಗ್ರಹಕ್ಕೆ ಸಂಬಂಧಿಸಿದ್ದು. ಇದರಲ್ಲಿ ಲೈಂಗಿಕಾಸಕ್ತಿಗಳಿರುವುದಿಲ್ಲ. ಇನ್ನೊಂದು ಸ್ಮರತತ್ವ ಅಂದರೆ ರಾಗ ಭಾವಾದಿಗಳಿಂದ ಕೂಡಿರುವ ತತ್ವ. ಸ್ಮರನೆಂದರೆ ಮನ್ಮಥ. ಮನ್ಮಥ ಕಾಮದೇವತೆ. ಜಿನನೆಂದರೆ ಇಂದ್ರಿಯ ನಿಗ್ರಹ ಮಾಡಿದವನು. ಆದುದರಿಂದಲೇ ದಿಗಂಬರತತ್ವ ಹೆಚ್ಚು ಸುಪ್ರಸಿದ್ಧವಾಯಿತು. ಇದು ಶಾಂತಿ ತೀರ್ಥಂಕರನ ಹಾದಿ. ಇನ್ನೊಂದು ಭರತಚಕ್ರವರ್ತಿಯ ದಾರಿ. ಭರತ ಚಕ್ರವರ್ತಿ ಭೋಗದ ಮೂಲಕ ವೈರಾಗ್ಯ ಪಡೆದಿರುವುದು ಗಮನಾರ್ಹ. ಆದರೆ ಪೊನ್ನನು ಶಾಂತಿನಾಥನಲ್ಲಿ ಚಕ್ರವಿದ್ದರೂ ಅದು ಧರ್ಮಚಕ್ರವೆಂದು ಕರೆಯುತ್ತಾನೆ.

ಜೈನಾಗಮದ ಕುರಿತಂತೆ ಮಿರ್ಜಿ ಅಣ್ಣಾರಾಯರು ಈ ಕೆಳಗಿನಂತೆ ವಿವರಿಸಿದ್ದಾರೆ. ಶೈವಧರ್ಮಕ್ಕೆ ಶಿವಾಗಮಗಳು ಮೂಲವಾಗಿದ್ದಂತೆ ಜೈನಧರ್ಮಕ್ಕೆ ಜಿನಾಗಮಗಳು ಮೂಲವಾಗಿವೆ. ಅವುಗಳಿಗೆ ೧) ಪ್ರಥಮಾನುಯೋಗ, ೨) ಕರಣಾನುಯೋಗ, ೩) ದ್ರವ್ಯಾನುಯೋಗ, ೪) ಚರಣಾನುಯೋಗ ಎಂದು ಹೆಸರುಗಳಿವೆ. ಈ ಆಗಮ ಗ್ರಂಥಗಳಲ್ಲಿ ಕ್ರಮವಾಗಿ ಜೈನ ಮಹಾಪುರುಷರ ಚರಿತ್ರೆಗಳು ಲೋಕದ ರಚನೆ ಮತ್ತು ಜಗತ್ತಿನ ಭೂಗೋಲ ವಿಷಯ: ಜೀವ, ಆತ್ಮ, ಕರ್ಮ, ಕಾಲ, ಪ್ರಾಣಗಳ ಸ್ವರೂಪ ಕಥನ, ಜೈನ ಗೃಹಸ್ಥ ಹಾಗೂ ಮುನಿಗಳ ಆಚಾರಗಳ ವಿವರಗಳನ್ನೆಲ್ಲ ವಿಸ್ತಾರವಾಗಿ ವರ್ಣಿಸಿದೆ. ಜೈನಾಗಮಗಳ ಗ್ರಂಥ ಸಂಖ್ಯೆಯೂ ಶಿವಾಗಮಗಳಂತೆಯೇ ವಿಪುಲವಾಗಿವೆ. ಜೈನಾಗಮಗಳ ಮೊದಲನೆಯ ಅಂಗವಾದ ಆಚಾರಂಗದಲ್ಲಿ ಹದಿನೆಂಟು ಸಾವಿರ ಪದಗಳಿದ್ದರೆ ವಿಪಾಕ ಸೂತ್ರಾಂಗದಲ್ಲಿ ಒಂದು ಕೋಟಿ, ಎಂಭತ್ತುನಾಲ್ಕು ಲಕ್ಷ ಪದ ಸಂಖ್ಯೆಯಲ್ಲಿ ಪಾಪಪುಣ್ಯಗಳ ವಿವರಣೆಯಿದೆ. ಜೈನ ಧರ್ಮಕ್ಕೆ ಜನಾಗಮಗಳು ಮೂಲವಾಗಿವೆ. ಅವುಗಳಿಗೆ ಪ್ರಥಮಾನುಯೋಗ, ಕರಣಾನುಯೋಗ, ದ್ರವ್ಯಾನುಯೋಗ, ಚರಣಾನುಯೋಗವೆಂದು ನಾಲ್ಕು ಬಗೆಗಳು ಎಂದು ಅವರ ಅಭಿಪ್ರಾಯವಾಗಿದೆ.

**೩೫೩. ಜಿನಧರ್ಮ ವಿಡಂಬನೆ**

*........ಅಶುಚಿಗಳ್‌ಮಲಗ್ರಸ್ತರೆಂದೊಡಂ ಮಿಂದಱಿಯದವರಿವರ.......*

*(ವಡ್ಡಾರಾಧನೆ–ಸುಕುಮಾರ ಸ್ವಾಮಿಯ ಕತೆ)*

ಜೈನರು ಅಶುಚಿಯಾಗಿರುವವರು. ಮಲಗ್ರಸ್ತರು, ಹೊಲಸು ಹಿಡಿದವರು, ಎಂದೂ ಸ್ನಾನಮಾಡಿ ಅರಿಯದವರು ಎಂದು ವಡ್ಡಾರಾಧನೆಯ ಸುಕುಮಾರಸ್ವಾಮಿಯ ಕತೆಯಲ್ಲಿ ವಾಯುಭೂತಿಯು ಹೇಳುತ್ತಾನೆ. (ಅನು. ಟಿ.ಕೇಶವಭಟ್ಟ ೨೦೧೦ ಪುಟ. ೮)

ಆವನೊರ್ವ ಸಾಕ್ಷಿ ಅನೃತವಂ ನುಡಿವನು ಅವನು ದಿಗಂಬರನು, ಬೋಳನು, ಕಾಪಾಲಿಕನು, ಭಿಕ್ಷುಕನು, ಹಸಿವು ತೃಷೆಯುಳ್ಳಾತನು, ಕುರುಡನು ಆಗಿ ಹಗೆಯ ಮನೆಗೆ ತಿರಿದುಂಬುದಕ್ಕೆ ಹೋಹನು.

(ಕರ್ಣಾಟಕ ಪಂಚತಂತ್ರ ಭೇದ ಪ್ರಕರಣ ೧೨೫ ವಚನ)

ಯಾವ ಸಾಕ್ಷಿ ಸುಳ್ಳು ಹೇಳುವನೋ ಅವನು ದಿಗಂಬರನಾಗಿ, ಬೋಳನೂ, ಕಾಪಾಲಿಕನೂ, ಭಿಕ್ಷುಕನೂ, ಹಸಿವೆ, ಬಾಯಾರಿಕೆಯುಳ್ಳಾತನೂ, ಕುರುಡನೂ ಆಗಿ ಹಗೆಯ ಮನೆಗೆ ತಿರಿದುಂಬುದಕ್ಕೆ ಹೋಹನು. ಜೈನಮತಕ್ಕೆ ಇಲ್ಲಿ ಕಟು ಟೀಕೆಯಿದೆ. ಜೊತೆಗೆ ಶೈವ ಪಂಥವಾದ ಕಾಪಾಲಿಕರ ಟೀಕೆಯೂ ಇದೆ.

**೩೫೪. ಜೀವ**

*ಪುಸಿಯ ಪರಾಂಗನಾರತದ ಮದ್ಯದ ಮಾಂಸದ ಮೆಯ್ಗೊಟಿಲ್ದದು*
*ರ್ವ್ಯಸನಿಯ ಮಾಡಿದೋದೆ ನಿಮಗಾಗಮಮಾಗಿರಸತ್ಯವಾದಮಂ ।*
*ಪೊಸಯಿಸಿ ಜೀವನಿಲ್ಲ ಮೊರೆಯಿಲ್ಲಜೆವಿಲ್ಲ ಪರತ್ರೆಯಿಲ್ಲೆನ*
*ಲ್ಕಸಕಳಿಯಂತು ನಾಲಗೆ ಪೊರಳ್ವುದು ರಾಜಸಭಾಂತರಾಳದೊಳ್ ॥*

*(ಆದಿಪುರಾಣ ೨-೧೧)*

ಸುಳ್ಳು, ಪರಾಂಗನೆಯ ರತಿ; ಮದ್ಯ; ಮಾಂಸದ ಆಸೆ; ದುರ್ವ್ಯಸನ ಇರುವುದು ಮತ್ತು ಆಗಮಿಕದ ಬಗ್ಗೆ ನಂಬಿಕೆಯಿಲ್ಲದಿರುವುದು; ಜೀವನಿಲ್ಲ ಎಂದು ಹೇಳುವುದು – ಇಂಥ ಕಾರಣಕ್ಕೆ ನಿಮ್ಮ ನಾಲಗೆಯು ಬೇಕಾದಂತೆ ಹೊರಳುತ್ತದೆ. ಇದು ಭೌತಿಕವಾದಿಗಳ ಕುರಿತ ಟೀಕೆ. ಆದಿಪುರಾಣದ ಎರಡನೆಯ ಆಶ್ವಾಸದಲ್ಲಿ ಮಾಧ್ಯಮಿಕರು; ಲೋಕಾಯತ ವಾದಿಗಳು ಮತ್ತು ಜೈನವಾದಿಗಳು ಮುಖಾಮುಖಿಯಾಗಿ ವಾದ ಮಂಡಿಸಿರುವುದು ಕುತೂಹಲಕಾರಿಯಾಗಿದೆ.

ಇಲ್ಲಿ ಪಂಪ ಸಹಜವಾಗಿಯೇ ಜೈನಧರ್ಮವನ್ನು ಹಿಡಿದಿದ್ದಾನೆ. ಮಾಧ್ಯಮಿಕರು; ಲೋಕಾಯತವಾದಿ; ಚಾರ್ವಾಕ ಮತಸ್ಥರು ಜೀವ-ದೇವ ಸಂಬಂಧವನ್ನು ನಿರಾಕರಿಸುತ್ತಾರೆ.

*ವಿವರಗಳಿಗೆ ನೋಡಿ: Debi Prasad chattopadhyaya 1981 Lokayata*
*ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦ ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ*

**೩೫೫. ಜೈನ ಕ್ರೂರ ದೇವತೆಗಳು**

'ಧರ್ಮಾಮೃತ'ದಲ್ಲಿ ಪೂತಿನಿ, ಕೌಸಂಬಿ, ಕೇಸರಿ, ತಾಳಜಂಘಿನಿ ಎನ್ನುವ ಸ್ತ್ರೀ ದೇವತೆಗಳ ಹೆಸರುಗಳು ಬಂದಿದ್ದು ಇದನ್ನು ಕ್ರೂರದೇವತೆಗಳ ಸಾಲಿಗೆ ಸೇರಿಸಲಾಗಿದೆ. (೬-೮೯) ಭಾಗವತ ಪುರಾಣಗಳಲ್ಲಿ ಈ ಹೆಸರುಗಳು ರಕ್ಕಸಿಯರನ್ನು ಸಂಕೇತಿಸುತ್ತವೆ. ಜೈನರು ಈ ಪರಿಕಲ್ಪನೆಯಲ್ಲಿ ಬದಲಾವಣೆ ಮಾಡಿಕೊಂಡಿದ್ದಾರೆ. ಕಾಳಿಯ ಪರಿಕಲ್ಪನೆಯು ಪ್ರಾಚೀನಸ್ತರದ್ದು ಮತ್ತು ತಾಂತ್ರಿಕ ನೆಲೆಯಲ್ಲಿ ಆರಂಭವಾದ ಮಾತೃಪೂಜೆಯ ಪ್ರಾಚೀನ ವಿಧಿಗಳು ಇತಿಹಾಸದ ಒತ್ತಡದಿಂದ ಖಂಡ ತುಂಡಾಗಿ ಜಾನಪದ ಚೌಕಟ್ಟಿನಲ್ಲಿ ಉಳಿದಿವೆ. ಈ ನೆಲೆಯಲ್ಲಿ ಉಂಡೆಯಾಗಿಯೇ ಉಳಿದು ಬಂದಿರುವ ವಿವರವೆಂದರೆ ಕಾಳೀಪೂಜೆ, ಆದರೆ ವೈದಿಕ ಸಂಪ್ರದಾಯವು ಹೆಚ್ಚು ಪ್ರಚಲಿತವಾದಂತೆ ಕಾಳಿದೇವತೆಯು ವಿಷ್ಣುವಿನ

ಅನುಯಾಯಿಯಾಗಿ ರೂಪುಗೊಂಡಿರುವುದಕ್ಕೆ ಸಾಕ್ಷಿಗಳಿವೆ.

*ವಿವರಗಳಿಗೆ : ರಾಮಚಂದ್ರರಾವ್ ಎಸ್.ಕೆ. ೧೯೭೫ ಮೂರ್ತಿಶಿಲ್ಪದ ನೆಲೆ-ಹಿನ್ನೆಲೆ ಪುಟ. ೩೪೧-೩೪೨.*

**೩೫೬. ಜೈನಧರ್ಮದ ನಿಲುವು**

"ದೋಷರಹಿತನಾದವನೇ ಆಪ್ತ. ಹಿಂಸಾರಹಿತವಾದ ಆತನ ನುಡಿಯೆ ಆಗಮ. ಜೀವಾದಿ ಪದಾರ್ಥ ಸ್ವರೂಪ ಆರು ಬಗೆಯಾಗಿದೆ. ಪಾಪವೆಂಬ ಕಫವನ್ನು ಕಳೆಯುವುದಕ್ಕೆ ಇದೇ (ಈ ಜ್ಞಾನವೇ) ನಿನಗೆ ಔಷಧಿಯಾಗಲಿ.

ಕೊಲೆ, ಹುಸಿ, ಪರಿದ್ರವ್ಯ, ಪರಸ್ತ್ರೀ ಮತ್ತು ಪರಗ್ರಹ ಎಂಬ ಈ ಐದನ್ನೂ ತೊರೆದವನಿಗೆ ದುಃಖವಿಲ್ಲ, ಪಾಪವಿಲ್ಲ, ಮಲವಿಲ್ಲ, ಚಿಂತೆಯಿಲ್ಲ, ಮರಣಭಯವಿಲ್ಲ, ಸಂತಾಪ ಸಂಕಟಗಳೂ ಇಲ್ಲ.

ಮಿತಪ್ರಮಾಣದಲ್ಲಿ ಇವು ಅಣುವ್ರತಗಳೆನಿಸಿ ಶ್ರಾವಕನಿಗೆ ವಿಹಿತವಾಗಿವೆ. ಪೂರ್ಣ ಪ್ರಮಾಣದಲ್ಲಿ ಕಟ್ಟುನಿಟ್ಟಾಗಿ ಆಚರಿಸಿದರೆ ಇವೇ ಮಹಾವ್ರತಗಳೆನಿಸಿ ಸಂನ್ಯಾಸಿಗಳಿಗೆ ವಿಧಿಸಲ್ಪಟ್ಟಿವೆ.

ಸಂಸಾರವೆಂಬ ಬಳ್ಳಿದೊಡಕನ್ನು ತುಂಡರಿಸುವುದಕ್ಕೆ ಈ ವ್ರತಗಳೇ ಹರಿತವಾದ ಖಡ್ಗ. ಸಂಸಾರವೆಂಬುದು ಜೀವನಿಗೆ ನಾಡಿಹುಣ್ಣಿನಂತೆ ಘೋರವಾದ ದುಃಖವನ್ನುಂಟು ಮಾಡುತ್ತದೆ. ಆದುದರಿಂದ ಅದನ್ನು ನಾಶಪಡಿಸುವಂತೆ (ಸಂಸಾರದಿಂದ ಬಿಡುಗಡೆ ಹೊಂದುವಂತೆ) ನಡೆದುಕೊಳ್ಳಿ.

(ಶಾಂತಿಪುರಾಣ ೭-೪, ೫, ೬, ೭)

ಮೇಲೆ ಹೇಳಿರುವ ಎಲ್ಲಾ ಮಾತುಗಳು ಜೈನಧರ್ಮಕ್ಕೆ ಅನ್ವಯವಾಗುತ್ತವೆ. ಶ್ರಾವಕರು ಹೇಗಿರಬೇಕು ಎಂಬುದನ್ನು ಮೇಲಿನ ಮಾತುಗಳು ತಿಳಿಸುತ್ತವೆ.

ಜೈನ ದರ್ಶನಕ್ಕೆ ಇತರ ಭಾರತೀಯ ದರ್ಶನಗಳಿಗಿರುವಂತೆ ಮತೀಯವೂ ತಾತ್ವಿಕವೂ ಆಗಿರುವ ಎರಡು ಮುಖಗಳುಂಟು. ಅಹಿಂಸೆಯೆಂಬುದು ಪ್ರಮುಖ ಮತೀಯಭಾವ: ಅನೇಕಾಂತವಾದವು ಎಂದರೆ ಸತ್ಯವನ್ನು ಹಲವು ದೃಷ್ಟಿಗಳಿಂದ ನೋಡುವುದು ಅದರ ತಾತ್ವಿಕ ಆದರ್ಶ. ಅಹಿಂಸೆ ಎನ್ನುವುದು ಹಿಂಸೆಯಿಲ್ಲದಿರುವುದು ಎಂಬ ಅಭಾವಗುಣಮಾತ್ರವಾಗಿಲ್ಲ. ಜೀವಂತವಾಗಿರುವ ಎಲ್ಲ ವಸ್ತುಗಳಲ್ಲಿಯೂ ನಂಟುತನವನ್ನು ಕಂಡುಕೊಳ್ಳುವುದರ ಪರಿಣಾಮವಾಗಿ ಬರುವ ವಿಶ್ವಪ್ರೇಮದ ಆಧಾರ ಅಹಿಂಸೆಗುಂಟು. ಈ ಆದರ್ಶದ ಪ್ರೇರಣೆಯಂತೆ ನಡೆಯುವವನು ಇತರರ ಕಷ್ಟಗಳನ್ನು ನೋಡುತ್ತ ಸುಮ್ಮನೆ ಇರಲಾರನು.

ಸ್ವಹಿಂಸೆಯ ಮೂಲಕ ಸಮ್ಯಕ್‌ದರ್ಶನ ಪಡೆಯುವುದು ಜೈನ ತಾತ್ವಿಕ ನಿಲುವು. ಇದರ ಬಗ್ಗೆ ಜೈನರಲ್ಲಿ ಪರಹಿಂಸೆಯ ಬಗ್ಗೆ ತೀವ್ರ ವಿರೋಧವಿದೆ. ಸಂಕಲ್ಪ ಹಿಂಸೆಯನ್ನು ಸಮೇತವಾಗಿ ಯಾವುದೇ ರೀತಿಯ ಹಿಂಸೆಯನ್ನು ಅದು ಒಪ್ಪುವುದಿಲ್ಲ. ಜೈನಧರ್ಮದ ಅಹಿಂಸೆಯು ಪರಮಧರ್ಮವಾಗಿದೆ. ಜೈನ ಕಾವ್ಯಗಳಲ್ಲಿ ಬರುವ ಪ್ರಮುಖ ತಾತ್ವಿಕತೆಗಳಲ್ಲಿ

ಇದೂ ಒಂದು. 'ಅಹಿಂಸೆ'ಯೆನ್ನುವುದು ಕೂಡಾ ಒಂದು ವ್ರತವಾಗಿದೆ. 'ಸಂಕಲ್ಪ ಹಿಂಸೆ'ಯನ್ನು ಕೂಡಾ ಜೈನಧರ್ಮವು ಒಪ್ಪುವುದಿಲ್ಲವೆನ್ನುವುದಕ್ಕೆ 'ಯಶೋಧರಚರಿತೆ'ಯೇ ಪ್ರಮುಖ ನಿದರ್ಶನವಾಗಿದೆ. ಅಹಿಂಸೆಯನ್ನು ಜೈನ ಕಾವ್ಯಗಳು ಜೈನ ಶ್ರೋತೃವಿನಲ್ಲಿರ ಬೇಕಾದ ಎಂಟು ಗುಣಗಳಲ್ಲಿ ಒಂದು ಎಂದು ಪರಿಗಣಿಸುತ್ತದೆ. ಇದರ ಕುರಿತಂತೆ ಅನೇಕ ವಿವರಣೆಗಳು ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ದೊರಕುತ್ತದೆ. ಎರಡನೆಯದಾಗಿ ಅನೇಕಾಂತವಾದ. ಒಂದು ವಸ್ತುವಿನ ಬಗ್ಗೆ ಏಕಕೇಂದ್ರಿತ ದೃಷ್ಟಿಯಿಂದ ಅದರ ಗುಣಸ್ವರೂಪಗಳು ಅರ್ಥವಾಗಲಾರದು. ವಸ್ತುವಿನ ಅನೇಕ ಧರ್ಮಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಪ್ರತಿಪಾದಿಸುವ ತರ್ಕವೇ ಅನೇಕಾಂತವಾದ. ಹಲವು ದೃಷ್ಟಿಗಳಿಂದ ನೋಡುವುದು ಅನೇಕಾಂತವಾದ ಮತ್ತು ಏಕದೃಷ್ಟಿಯಿಂದ ನೋಡುವುದು ಏಕಾಂತವಾದಿ ದೃಷ್ಟಿಕೋನ. ಅನೇಕ ಜೈನಕಾವ್ಯಗಳು ಇದರ ಕುರಿತು ಚರ್ಚಿಸಿವೆ.

ರಾಷ್ಟ್ರಕೂಟರಿಂದ ಹೊಯ್ಸಳರ ಅವನತಿಯವರೆಗಿನ ಅವಧಿಯಲ್ಲಿ ಪ್ರಚಾರದಲ್ಲಿದ್ದ ಧರ್ಮಗಳಲ್ಲಿ ಜೈನ ಧರ್ಮವೂ ಒಂದು. ಕ್ರಿ.ಶ.೮ರಿಂದ ೧೪ನೆಯ ಶತಮಾನಗಳ ನಡುವಣ ಅವಧಿಯಲ್ಲಿ ಜೈನ ಸಿದ್ಧಾಂತವು ರೂಪುಗೊಂಡ ಬಗೆ, ಅದು ಬೀರಿದ ಪ್ರಭಾವ ಪರಿಣಾಮ, ಸಿಕ್ಕಿರುವ ರಾಜಾಶ್ರಯ ಹಾಗೂ ಅಂದು ಪ್ರಚಾರದಲ್ಲಿದ್ದ ಇತರ ಧಾರ್ಮಿಕ ಸಿದ್ಧಾಂತಗಳೊಂದಿಗೆ ಹೊಂದಿದ್ದ ಸಂಬಂಧ ಮುಂತಾದ ವಿಚಾರಗಳ ಕುರಿತು ಇಲ್ಲಿ ಚರ್ಚೆ ನಡೆಸಲಾಗಿದೆ. ಕರ್ನಾಟಕದಲ್ಲಿ ಜೈನ ಧರ್ಮವು ವಿಕಾಸ ಹೊಂದುವುದಕ್ಕೆ ಭದ್ರ ತಳಹದಿ ಹಾಕಿಕೊಟ್ಟವರು ಗಂಗರು. ಗಂಗ ಅರಸರಾದ ಮಾರಸಿಂಹ ಮತ್ತು ಅವನ ಮಗ ರಾಚಮಲ್ಲರಿಗೆ ಮಂತ್ರಿ, ಸೇನಾಧಿಪತಿಯಾಗಿದ್ದ ಚಾಮುಂಡರಾಯನು ಶ್ರವಣಬೆಳಗೊಳದ ವಿಂಧ್ಯಗಿರಿಯ ಮೇಲೆ ಬಾಹುಬಲಿ ಮೂರ್ತಿಯನ್ನು ಸ್ಥಾಪಿಸಿದನು. ಚಾಮುಂಡರಾಯನು 'ಚಾಮುಂಡರಾಯಪುರಾಣ' ಎನ್ನುವ ಕೃತಿಯನ್ನು ರಚಿಸಿ ಜೈನ ಸಾಹಿತ್ಯ ಮತ್ತು ಸಂಸ್ಕೃತಿಗಳೆರಡೂ ಹೆಚ್ಚಿನ ಪ್ರೋತ್ಸಾಹ ಮತ್ತು ಪ್ರಚಾರವನ್ನು ಪಡೆಯುವಂತೆ ಮಾಡಿದನು. ರಾಷ್ಟ್ರಕೂಟರ ಆಳ್ವಿಕೆಯೂ ಕರ್ನಾಟಕದಲ್ಲಿ ಜೈನಧರ್ಮವು ಏಳಿಗೆ ಹೊಂದುವುದಕ್ಕೆ ಸಹಕಾರಿಯಾಯಿತು. ಆದಿಪುರಾಣ, ಪ್ರಶ್ನೋತ್ತರ ರತ್ನಮಾಲಿಕಾ, ಅಮೋಘವೃತ್ತಿ, ಉತ್ತರಪುರಾಣ ಮುಂತಾದ ಜೈನ ಧರ್ಮವನ್ನು ಕುರಿತ ಗ್ರಂಥಗಳು ಈ ಅವಧಿಯಲ್ಲಿ ರಚನೆಗೊಂಡವು. ಜಿನಸೇನಾಚಾರ್ಯ, ಗುಣಭದ್ರಾಚಾರ್ಯ ಮುಂತಾದ ಜೈನ ಆಚಾರ್ಯರು ರಾಷ್ಟ್ರಕೂಟರ ಆಳ್ವಿಕೆಯಲ್ಲಿ ಆಶ್ರಯವನ್ನು ಪಡೆದುಕೊಂಡರು.

ಜೈನಧರ್ಮದಲ್ಲಿ ದಿಗಂಬರ, ಶ್ವೇತಾಂಬರ ಹಾಗೂ ಯಾಪನೀಯ ಎಂಬ ಮೂರು ಸಂಪ್ರದಾಯಗಳು ಇದ್ದವು. ಜೈನ ಸಾಧುಗಳ ವಸ್ತ್ರಪರಿಧಾನವೇ ಈ ಸಂಪ್ರದಾಯಗಳ ಹುಟ್ಟಿಗೆ ಹಾಗೂ ಜೈನ ಸಂಘಗಳು ವಿಭಾಗಗೊಳ್ಳುವುದಕ್ಕೆ ಮೂಲಕಾರಣವಾಯಿತು. ಜೈನ ಧರ್ಮದ ವಿಭಿನ್ನ ಸಂಪ್ರದಾಯಗಳಲ್ಲಿ ತಾತ್ವಿಕ ದೃಷ್ಟಿಯಿಂದ ಭೇದಗಳಿರಲಿಲ್ಲ. ಎಲ್ಲ ಪಂಥಗಳೂ ಕರ್ಮಸಿದ್ಧಾಂತ ಅಹಿಂಸೆ, ಅನೇಕಾಂತವಾದ, ಆತ್ಮ, ಪರಮಾತ್ಮ

ಮೊದಲಾದ ತತ್ವಗಳ ಅನುಯಾಯಿಗಳೇ ಆಗಿದ್ದವು. ಆದರೆ ವ್ಯಾವಹಾರಿಕ ದೃಷ್ಟಿಯಿಂದ ಅನೇಕ ಭೇದಗಳು ಇರುತ್ತಿದ್ದವು. ಜೈನಧರ್ಮದ ಈ ಎಲ್ಲ ಸಂಪ್ರದಾಯಗಳು ಕರ್ನಾಟಕದಲ್ಲಿ ಇದ್ದವು ಎನ್ನುವುದಕ್ಕೆ ಅಪಾರ ಸಂಖ್ಯೆಯ ಬಸದಿಗಳು, ಜೈನ ಗುಹೆಗಳು, ವಿಶ್ರಾಮಧಾಮಗಳು, ನಿಷಿಧಿ ಕಲ್ಲುಗಳೂ, ದಾನ ಶಾಸನಗಳು ಉದಾಹರಣೆಗಳಾಗಿವೆ.

ಪುದ್ಗಲ, ಆಕಾಶ, ಧರ್ಮ, ಅಧರ್ಮ ಎಂಬ ಈ ನಾಲ್ಕು ದ್ರವ್ಯಗಳ ಜೊತೆಗೆ ಜೈನ ಸಿದ್ಧಾಂತವು ಕಾಲವೆಂಬ ಐದನೆಯ ದ್ರವ್ಯವನ್ನು ಹೇಳುತ್ತದೆ. ಜೈನ ತತ್ವದ ಪ್ರಕಾರ ಪರ್ಯಾಯ ಚಲನೆಗಳೂ ಭೌತಪ್ರಪಂಚದಲ್ಲಿ ಒಂದು ಸತ್ತೆಯಾಗಿರುವುದರಿಂದಲೂ, ಕಾಲವೂ ಕೂಡ ಒಂದು ಸತ್ತೆಯೆಂದು ಸ್ಥಾಪಿತವಾಗಿದೆ. ಕಾಲವನ್ನು ಮಿಥ್ಯೆಯೆಂದು ತಳ್ಳಿಹಾಕುವುದಾದರೆ ಚಲನೆ, ಬೆಳವಣಿಗೆಗಳನ್ನೊಳಗೊಂಡ ಪ್ರತಿಯೊಂದು ಪರ್ಯಾಯವನ್ನೂ ತರ್ಕವಶದಿಂದ ಅಷ್ಟೇ ಮಿಥ್ಯೆಯೆಂದು ಹೇಳಬೇಕಾಗುತ್ತದೆ. ಜೈನ ತತ್ವ ಈ ಪರಿಸ್ಥಿತಿಯನ್ನು ನಿವಾರಣೆ ಮಾಡಿಕೊಂಡಿದೆ. ಆದ್ದರಿಂದ ಕಾಲವು ಸತ್ ವಸ್ತುವೆಂದು ಅಂಗೀಕೃತವಾಗಿದೆ. ಈ ಕಾಲದ್ರವ್ಯವು ಕಾಲದ ಪರಮಾಣು ನಿಮಿಷಗಳಿಂದ ನಿರ್ಮಿತವಾದುದಾಗಿದೆ. ಈ ಐದು ಅಜೀವ ದ್ರವ್ಯಗಳೂ, ಜೀವದ್ರವ್ಯವೂ ಸೇರಿ ಸತ್ತೆಯ ಪ್ರಪಂಚವನ್ನು ರೂಪಿಸಿವೆ ಎಂದು ಜೈನಧರ್ಮ ಹೇಳುತ್ತದೆ.

*ವಿವರಗಳಿಗೆ ನೋಡಿ: ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦*
*ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ ಪುಟ. ೧೪೩*
*ಮೋಹನಕೃಷ್ಣ ರೈ ೨೦೦೪ ಪ್ರಭುತ್ವ ಮತ್ತು ಜನತೆ ಪುಟ. ೧೭.*

**೩೫೭. ಜೋಳದ ಪಾಟಿ**

*"**ಜೋಳಕ್ಕೆ** ತಪ್ಪಿಯುಮಿಂ ಬಾಳ್ವುದೆ" ಎಂದು ಪಂಪ ಹೇಳುತ್ತಾನೆ.*

*(ಪಂಪ ಭಾರತ ೯–೮೪)*

ಜೋಳಕ್ಕೆ ತಪ್ಪಿಯುಮಿಂ **ಬಾಳ್ವುದೆ** ಎಂದರೆ ಜೋಳದ ಋಣಕ್ಕೆ ತಪ್ಪಿಯೂ ಇನ್ನು ಬಾಳುವುದೆ? ಎಂದರ್ಥ. ಇದರಲ್ಲಿ ಋಣದ ಪ್ರಶ್ನೆಯು ಮುಖ್ಯವಾಗಿದೆ. ಗುರುಋಣ, ಪಿತೃಋಣ; ಯಜಮಾನನ ಋಣವನ್ನು ದಾಟುವುದು ಕಷ್ಟ.

ಉಪ್ಪಿನ ಋಣ ಅಥವಾ ಅನ್ನದ ಋಣ.

(ಪಂಪ ಭಾರತ ೧೦–೪೩, ೧೪–೫೦)

ಅಂಬಂ ತಿರುವಾಯ್ಗೆ **ತಂದಱಿವರೇ** ತಾಮಿರ್ವರುಮಂ... ಕಯ್ದುವಂ।
ಬಿಸುಟರ್ ಜೋಳದ ಪಾಟಿಯಂ ಬಗೆದರಿಲ್ಲಾ ದ್ರೌಣಿಯುಂ ದ್ರೋಣನುಂ ॥

(ಸಾಹಸ ಭೀಮ ವಿಜಯ (೨–೧೧)

ಜೋಳದ ಪಾಳಿಯೆಂದರೆ ಉಂಡ ಅನ್ನದ ಋಣವನ್ನು ತೀರಿಸುವುದು ಎಂದರ್ಥ. ಒಡೆಯರ, ಸ್ವಾಮಿಯ ಮನೆಯ ಅನ್ನವನ್ನು ಅದರ ಋಣವನ್ನು ತೀರಿಸಬೇಕು ಎನ್ನುವುದು ಇಲ್ಲಿಯ ಭಾವಾರ್ಥವಾಗಿದೆ. ಯುದ್ಧದ ಸಂದರ್ಭದಲ್ಲಿ "ಅಶ್ವತ್ಥಾಮೋ ಹತಃಕುಂಜರ"

ಎನ್ನುವ ವಾಕ್ಯವನ್ನು ಕೇಳಿ ದ್ರೋಣಾಚಾರ್ಯರು ಬಿಲ್ಲನ್ನು ಕೆಳಗಿಳಿಸಿದರು. ಅವರಿಗೆ ಅನ್ವಯವಾಗುವಂತೆ ಜೋಳದ ಪಾಳಿ ಎಂದು ಬಳಸಲಾಗಿದೆ.

ಇವನನ್ನು ನೆಚ್ಚಿ ನಾನು ಪೋಷಿಸಿದೆನು. ಆದರೆ ಇವನಾಗಲಿ, ಇವನ ತಂದೆಯಾಗಲಿ ಹೊಡೆಯಲೆಂದು ಹೆದೆಗೆ ಕೈಚಾಚಲಿಲ್ಲ. ಉಂಡ ಅನ್ನದ ಋಣವನ್ನು ತೀರಿಸಬೇಕೆಂಬ ಯೋಚನೆ ಕೂಡ ಬರಲಿಲ್ಲ – ಈ ದ್ರೋಣಗೆ ಹಾಗೂ ಇವನ ಮಗನಿಗೆ. ದ್ರೋಣನ ಮಗ ದ್ರೌಣಿ (ಅಶ್ವತ್ಥಾಮ) ಪಂಪನ ಕಾಲಕ್ಕೆ ಜೋಟಿವು ಪ್ರಮುಖ ಆಹಾರವಾಗಿರಬೇಕು. ಜೋಳದ ಪಾಟಿ – ಜೋಳದ ಕರ್ತವ್ಯ ಅಥವಾ ಕ್ರಮ. ಸ್ವಾಮಿಕಾರ್ಯದಲ್ಲಿ ನಿರತ ರಾಗಿದ್ದವರು ಅನ್ನದ (ಜೋಳದ) ಋಣವನ್ನು ಆ ಮೂಲಕ ತೀರಿಸಬೇಕು ಎಂಬ ನಂಬಿಕೆ ದೃಢವಾಗಿ ಬೇರೂರಿದ್ದ ಕಾಲದಲ್ಲಿ ಮೂಡಿದ ಮಾತಿದು. ತಂದೆ–ಮಗ, ಇಬ್ಬರೂ ಈ ಋಣದ ಕರ್ತವ್ಯವನ್ನು ಮಾಡಲಿಲ್ಲವೆಂಬುದು ಗರ್ಭಿತಾರ್ಥ.

*ವಿವರಗಳಿಗೆ ನೋಡಿ: Ranajith Guha 1998 Dominance without hegemony*

*ಎನ್. ಅನಂತರಂಗಾಚಾರ್ ೨೦೧೦ ಪಂಪಭಾರತ*

**೩೫೮. ಜ್ಞಾನ**

*ಭೋಜನಂ, ನಿದ್ರೆ, ಭೀತಿ, ಸ್ತ್ರೀಸಂಗಮೆಂಬೀ ನಾಲ್ಕುಂ ಪಶುಗಳ್ಗಂ ಮನುಜರ್ಗಂ ಸರಿ.*

*ಜ್ಞಾನಮೇ ಮನುಷ್ಯರೊಳಧಿಕಂ ಜ್ಞಾನಮಿಲ್ಲದವಂ ಪಶುವಿನ ಸಮಾನಂ*

*(ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ, ೧೭ ವಚನ)*

ಭೋಜನ, ನಿದ್ರೆ, ಭಯ, ಸ್ತ್ರೀಸಂಗ ಇವಿಷ್ಟು ಪಶುವರ್ಗದಲ್ಲಿಯೂ, ಮನುಷ್ಯ ವರ್ಗದಲ್ಲಿಯೂ ಇರುತ್ತದೆ. ಆದರೆ ಜ್ಞಾನವೇ ಮನುಷ್ಯರೊಳಧಿಕವು, ಜ್ಞಾನವಿಲ್ಲದವನು ಪಶುವಿಗೆ ಸಮಾನವೆಂದು ಪಂಚತಂತ್ರದಲ್ಲಿ ಬರುತ್ತದೆ. 'ನಹಿ ಜ್ಞಾನೇನ ಸದೃಶಂ' ಎಂಬ ಮಾತು ಇಲ್ಲಿಗೆ ಅನ್ವಯಿಸುತ್ತದೆ.

ಜ್ಞಾನ – ದರ್ಶನದ ತರುವಾಯ ಉಂಟಾಗುವ ಜ್ಞಾನವು ಉಪಯೋಗದ ಎರಡನೆಯ ಭೇದವು. ಜ್ಞಾನವು ಪ್ರತ್ಯಕ್ಷ ಮತ್ತು ಪರೋಕ್ಷ ಎಂದು ಎರಡು ಬಗೆಯಾಗಿದೆ. ಮತಿ, ಶ್ರುತ ಮುಂತಾದ ಎಂಟು ತರಹದ ಜ್ಞಾನಗಳೂ ಈ ಎರಡು ಜ್ಞಾನಗಳಲ್ಲಿಯೇ ಅಂತರ್ಗತವಾಗುವುವು. ಅವುಗಳಲ್ಲಿ ಕುಮತಿ ಎಂಬುದು ಅವಧಿಜ್ಞಾನದ ಆಭಾಸಗಳು: ಎಂದರೆ, Fallacious forms ಎಂದು ಹೇಳಬಹುದು. ಉಳಿದ ಐದು ತರದ ಜ್ಞಾನಗಳನ್ನು ಕೆಳಗೆ ಹೇಳುವೆವು.

ಮತಿಜ್ಞಾನ–ದರ್ಶನದ ತರುವಾಯವೇ ಉಂಟಾಗುವ, ಇಂದ್ರಿಯ ಜ್ಞಾನಾಪೇಕ್ಷವಾದ ಜ್ಞಾನವು ಮತಿಜ್ಞಾನವೆನಿಸುವುದು. ಇದು ಉಪಲಬ್ಧ, ಭಾವನೆ, ಉಪಯೋಗ ಎಂದು ಮೂರು ಬಗೆಯಾಗಿರುವುದು. ಈ ತ್ರಿವಿಧ ಮತಿ

ಜ್ಞಾನವನ್ನೇ ಕೆಲವರು ಮತಿ, ಸ್ಮೃತಿ, ಸಂಜ್ಞೆ, ಚಿಂತೆ, ಅಭಿನಿಬೋಧ ಎಂಬೀ ಐದು

ಬಗೆಯೆಂದು ಹೇಳುವರು. ಶುದ್ಧ ಮತಿ-ದರ್ಶನದ ಅವ್ಯವಹಿತೋತ್ತರದಲ್ಲಿ ಉಂಟಾಗುವ ವೃತ್ತಿಗೆ ಉಪಲಬ್ಧ ಇಲ್ಲವೆ ಶುದ್ಧಮತಿಜ್ಞಾನವೆಂಬ ಹೆಸರು. ಪಾಶ್ಚಾತ್ಯ ಮನಃಶಾಸ್ತ್ರದಲ್ಲಿ ಇದಕ್ಕೆ Sense Intuition ಇಲ್ಲವೆ Perception ಎಂದು ಹೆಸರು.

ಜೈನದಾರ್ಶನಿಕರು ಮತಿಜ್ಞಾನದಲ್ಲಿ ಇಂದ್ರಿಯನಿಮಿತ್ತಕವೆಂದೂ, ಅನಿಂದ್ರಿಯ ನಿಮಿತ್ತಕವೆಂದೂ ಎರಡು ಭೇದಗಳನ್ನು ಹೇಳುವರು. ಬಾಹ್ಯೇಂದ್ರಿಯಗಳ ಅಪೇಕ್ಷೆಯುಳ್ಳುದು ಇಂದ್ರಿಯನಿಮತ್ತಕವು; ಅನಿಂದ್ರಿಯವಾದುದು ಇಲ್ಲವೆ ಮನಸ್ಸಿನ ಅಪೇಕ್ಷೆಯುಳ್ಳುದು ಅನಿಂದ್ರಿಯನಿಮಿತ್ತಕವು. ದಾರ್ಶನಿಕನಾದ Locke ಎಂಬಾತನು ಹೇಳಿರುವ Idia of Sensation ಮತ್ತು Idia of Reflection ಎಂಬ ಎರಡು ಚಿತ್ತವೃತ್ತಿಗಳು, ಮತ್ತು ಆಧುನಿಕ ದಾರ್ಶನಿಕರು ಹೇಳುವ Extraspection (ಬಹಿರನುಶೀಲನ) Intorspection (ಅಂತರನುಶೀಲನ) ಇವುಗಳಿಂದ ಸಂಪಾದಿತವಾಗುವ ಜ್ಞಾನಗಳೆಂದು ಹೇಳಿದ ಜ್ಞಾನ ಇವುಗಳನ್ನೇ ಜೈನದಾರ್ಶನಿಕರು ಕ್ರಮದಿಂದ ಇಂದ್ರಿಯನಿಮಿತ್ತಕ, ಅನಿಂದ್ರಿಯನಿಮಿತ್ತಕ, ಮತಿಜ್ಞಾನಗಳೆಂದು ಹೇಳಿರಬಹುದು.

ಕುಲಕಸುಬಿಗೂ ಜ್ಞಾನಕ್ಕೂ ಸಂಬಂಧವಿದೆ. ಇದು ತಲತಲಾಂತರದಿಂದ ಬಂದಿರುತ್ತದೆ. ಎರಡನೆಯದಾಗಿ ಜ್ಞಾನಕ್ಕೂ ವಿದ್ಯೆಗೂ ಸಂಬಂಧವಿದೆ. ಇದನ್ನು ಭಾರತದಲ್ಲಿ ಸಾಧಿತವಿದ್ಯೆ(ಜ್ಞಾನ) ಎಂದು ಕರೆಯುತ್ತಾರೆ. ಮೂರನೆಯದಾಗಿ ಜ್ಞಾನವು ನಗರಕೇಂದ್ರಿತ ಮತ್ತು ಗ್ರಾಮಕೇಂದ್ರಿತವೆಂದು ಎರಡು ಬಗೆಯಲ್ಲಿರುತ್ತವೆ. ನಾಲ್ಕನೆಯದಾಗಿ ವ್ಯಾವಹಾರಿಕ ಜ್ಞಾನ ಮತ್ತು ಆಧ್ಯಾತ್ಮಿಕ ಜ್ಞಾನವೆಂಬುದು ಬೇರೆ. ಹಾಗೆಯೇ ಅಧಿಕಾರಕ್ಕೂ ಜ್ಞಾನಕ್ಕೂ ಸಂಬಂಧವಿದೆ. ಕಲಿಯುವುದು-ಕಲಿಸುವುದು, ಯಾಗ ಮಾಡುವುದು-ಮಾಡಿಸುವುದು, ದಾನ ಕೊಡುವುದು-ತಕ್ಕೊಳ್ಳುವುದು – ಇವು ಆರು ಜ್ಞಾನೋಪಾಸಕನ ದಿನಚರಿಗಳು.

*ವಿವರಗಳಿಗೆ ನೋಡಿ: Antonio Gramshi ? The Prison Note book*
*Michel Foucault 1970 The Order of things*
*ಡಿ.ವಿ.ಜಿ. ೧೯೬೬ ಶ್ರೀ ಮದ್ಭಗವದ್ಗೀತಾ ತಾತ್ಪರ್ಯ ಪುಟ. ೧೭೩*
*ಮಹದೇವ ಪ್ರಭಾಕರ ಪೂಜಾರ ೧೯೭೬ ಜೈನಧರ್ಮದ ಪರಿಭಾಷೆ ಪುಟ.೪-೫*
*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೧-೮೮*

**೩೫೯. ಜ್ಯೋತಿಷ್ಯ**

*ಶುಭತಿಥಿ ಶುಭನಕ್ಷತ್ರಂ*
*ಶುಭವಾರಂ ಶುಭ ಮುಹೂರ್ತಮನೆಗಣಕ ನಿಳಾ*
*ಪ್ರಭು ವೊಗೆದನು............ (ಪಂಪ ಭಾರತ ೧-೧೨೭)*

ಜೋಯಿಸನೆಂಬುದನ್ನು ಪಂಪನು ಗಣಕ ಎಂದು ಕರೆಯುತ್ತಾನೆ. ಶುಭತಿಥಿ, ಶುಭನಕ್ಷತ್ರ, ಶುಭವಾರ, ಶುಭ ಮುಹೂರ್ತವನ್ನು ಜೋಯಿಸನು ಹೇಳಿದನು ಎಂಬುದು ಇಲ್ಲಿಯ ಭಾವಾರ್ಥ. ಗಣಿತಕ್ಕೆ ಸಂಬಂಧಿಸಿದಂತೆ ಗಣಕವು ಹುಟ್ಟಿಕೊಂಡಿದೆ. ಗಣಕನೆಂದರೆ

ಲೆಕ್ಕ ಮಾಡುವವನು ಎಂಬರ್ಥವಿದೆ.

ಜೋಯಿಸ ಎನ್ನುವುದು ಒಂದು ವೃತ್ತಿ. ಜ್ಯೋತಿಷ್ಯದ ತದ್ಭವ ರೂಪ. ಶಕುನ ನೋಡುವುದು. ಜಾತಕವನ್ನು ನೋಡಿ ಶುಭಾಶುಭ ಫಲ ಹೇಳುವುದು. ಹುಟ್ಟಿದ ವೇಳೆಯನ್ನು ನೋಡಿ ಭವಿಷ್ಯ ಹೇಳುವುದು. ಪಂಚಾಂಗದ ಮುಖಾಂತರ ಶುಭಯೋಗ, ಶುಭಕರಣಗಳನ್ನು ಹೇಳುವುದು ಜೋಯಿಸನ ಕೆಲಸ. 'ಶಕುನಂ, ಜೋಯಿಸಂ ಆದಿಯಾಗಿ'" ಎಂದು ಶಾಂತಿನಾಥ ಕವಿಯು 'ಸುಕುಮಾರ ಚರಿತಂ' ಕೃತಿಯಲ್ಲಿ ಹೇಳುತ್ತಾನೆ. (೩–೨೧)

'ಪಿಡಿಯಚ್ಚುವಿಡಿದು ನುಡಿಯೆ ಕೆಲರನಾಗತಮನಜೆವ ಬುದ್ಧಿಯೊಡೆಯರು'............ (ಪಂಪ ಭಾರತ ೨–೮೬ ವ)

ಗುರುತಿಸಿ ಮಾತಾಡುತ್ತಿರಲು ಅವರಲ್ಲಿ ಭವಿಷ್ಯಜ್ಞಾನವುಳ್ಳ ಕೆಲವರು ಹೀಗೆಂದರು. 'ಅನಾಗತ' ಎಂದರೆ ಈ ಮೊದಲು ಬಂದಿಲ್ಲದ, ಮುಂದಾಗುವ (ಭವಿಷ್ಯಜ್ಞಾನ) ಎಂದರ್ಥ. ಜ್ಯೋತಿಶ್ಯಾಸ್ತ್ರದಲ್ಲಿ ಭವಿಷ್ಯವನ್ನು ತಿಳಿಯಲು ಹುಟ್ಟಿದ ವೇಳೆ, ತಿಥಿ, ನಕ್ಷತ್ರಗಳನ್ನು ಗಣಿಸುತ್ತಾರೆ. ಮತ್ತು ಇದು ಸಂಖ್ಯಾಶಾಸ್ತ್ರಕ್ಕೂ ಸಂಬಂಧಿಸಿದೆ.

ಅನಾಗತಮತಿಗಳನ್ನು ವಿಶೇಷ ಜ್ಞಾನ ಸಂಪಾದಿಸಿದವರು ಎಂಬರ್ಥದಲ್ಲಿ 'ಬುದ್ಧಿಯೊಡೆಯರು' ಎಂದು ಕರೆಯಲಾಗಿದೆ.

## ಡ

### ೩೬೦. ಡುಂಡುಚಿ

ಕರ್ನಾಟ–ಮಹಾರಾಷ್ಟ್ರದ ಮೈಲಾರ (ಮಲ್ಲಾರಿ) ಮಾರ್ತಾಂಡ ಭಕ್ತರ ವೇಷ, ಭಾಷೆ, ಕೈಯೊಳಗಿನ ಆಯುಧ, ಡಮರು, ವಾದ್ಯ (ಬೀರನ ಭಕ್ತರ ಈ ವಾದ್ಯವನ್ನು **'ಡುಂಡುಚಿ'** ಎಂದು ಪ್ರಾಚೀನ ಕವಿಗಳು ಹೆಸರಿಸಿದ್ದಾರೆ). ಡೊಳ್ಳು ಇವರ ವಾದ್ಯ. ಈ ವಾದ್ಯಗಳಲ್ಲಿ 'ಕರಡೆ'ಯ ವಾದ್ಯ ಮುಖ್ಯ ಎಂದು ಶಂಬಾ ಹೇಳುತ್ತಾರೆ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಹಾಲುಮತ ದರ್ಶನ ಸಂಪುಟ. ೩ ಪುಟ. ೬೧*

### ೩೬೧. ಡೊಂಬರು

*ಮೀನಾವೆ ಪಂದಿಯೆಂದೆನಿ*

*ತಾನುಂ ತೆಜಿನಾಗಿ **ಡೊಂಬವಿದ್ದೆಯನಾಡಲ್**..... (ಪಂಪ ಭಾರತ ೬–೫೭)*

ಡೊಂಬ ಎಂದರೆ ಡೊಂಬರವನು. ಡೊಂಬ ವಿದ್ಯೆ ಎಂದರೆ–ಯಕ್ಷಿಣಿವಿದ್ಯೆ, ಮಂತ್ರವಿದ್ಯೆ, ಮೋಡಿ, ಮಾಟ, ಗಾರುಡಿವಿದ್ಯೆ, ಕಣ್ಕಟ್ಟು ವಿದ್ಯೆ, ಮ್ಯಾಜಿಕ್ ಇದರ ಸಂವಾದಿ–ಪದಗಳು.

ಅಲೆಮಾರಿ ಜನಾಂಗಕ್ಕೆ ಸೇರಿದ ಡೊಂಬರ ಉಲ್ಲೇಖ ಸುಮಾರು ಎಂಟನೆಯ ಶತಮಾನದ ಶಾಸನವೊಂದರಲ್ಲಿ ಬರುತ್ತದೆ. ಪಂಪ ಭಾರತದಲ್ಲಿ ಶಿಶುಪಾಲ ಕೃಷ್ಣನನ್ನು "ಮೀನಾವೆಪಂದಿಯೆಂದೆನಿತಾನುಂತೆರನಾಗಿ **ಡೊಂಬ** ವಿದ್ಯೆಯ ನಾಡಲ್ ಅರಿವೆಯ್" ಎಂದು ವಿಡಂಬಿಸುತ್ತಾನೆ. ಹೀಗೆ ಪ್ರಾಚೀನ ಶಾಸನ ಮತ್ತು ಗ್ರಂಥಗಳಲ್ಲಿ ಡೊಂಬ ಜನಾಂಗದ ಉಲ್ಲೇಖವಿರುವುದು ಕಂಡು ಬರುತ್ತದೆ. ಅದಕ್ಕೋಸ್ಕರ ಅವರು ಕತ್ತೆಗಳನ್ನು ಸಾಕಿದ್ದರು. ಡೊಂಬರದು ಗಾರುಡಿ ವಿದ್ಯೆ. ಗಾರುಡಿ ವಿದ್ಯೆಯು ಮಾಮೂಲಿ ವಿದ್ಯಾಪ್ರದರ್ಶನವಲ್ಲ. ಅದು ಕಣ್ಕಟ್ಟು ವಿದ್ಯೆ.

*ವಿವರಗಳಿಗೆ ನೋಡಿ: ಡಾ. ವಿ.ಎಲ್. ಪಾಟೀಲ್ ೨೦೦೯ ವಡ್ಡಾರಾಧನೆ ಜಾನಪದೀಯ ಅಧ್ಯಯನ ಪುಟ. ೧೭೯–೧೮೦.*

## ತ

### ೩೬೨. ತಪಸ್ಸು

*ಅಂತುಗ್ರೋಗ್ರತಪದೊಳ್ ನೆಗಟ್ದ ಬುದ್ಧಿಕ್ರಿಯಾತಪೋಬಲರಸೌಷಧಿ ಕ್ರಿಯಾಕ್ಷೀಣ ವಿಕಲ್ಪಮಪ್ಪ ಸಪ್ತ ಸಿದ್ಧಿಯೊಳಂ ನಾಮಸತ್ಯಂ ರೂಪಸತ್ಯಂ ಪ್ರತೀತಿ ಸತ್ಯಂ ಸಂಯೋಜನ ಸತ್ಯಂ ಜನಪದಸತ್ಯಂ ದೇವಸತ್ಯಂ ಭಾವಸತ್ಯಂ ಸಮಯಸತ್ಯಮುಮೆಂಬೊಂಬತ್ತಂ ಸತ್ಯದೊಳಂ ಭಾವಶುದ್ಧಿಯುಂ ಕಾಯಶುದ್ಧಿಯುಂ ವಿನಯ ಶುದ್ಧಿಯುಂ ಈರ್ಯಾಪಥ ಶುದ್ಧಿಯುಂ ಭಿಕ್ಷಾಶುದ್ಧಿಯುಂ ಪ್ರತಿಷ್ಠಾಪನಶುದ್ಧಿಯುಂ ಶಯನಾಶನಶುದ್ಧಿಯುಂ ವಾಕ್ಯಶುದ್ಧಿಯುಮೆಂಬ* **ಶುದ್ಧ್ಯಷ್ಟಕದೊಳಂ** *ಮನೋಗುಪ್ತಿಯುಂ ವಾಗ್ಗುಪ್ತಿಯುಂ ಕಾಯಗುಪ್ತಿಯುಮೆಂಬ* **ಗುಪ್ತಿತ್ರಯದೊಳಂ** *ಉತ್ತಮ ಕ್ಷಮಾಮಾರ್ದವಾರ್ಜವಸತ್ಯ ಶೌಚಸಂಯಮತಪಸ್ತ್ಯಾಗಾಕಿಂಚನ್ಯಬ್ರಹ್ಮಚರ್ಯಮೆಂಬೀದಶಕುಶಲಧರ್ಮದೊಳಮನಶನಾವ*

*ಮೌದಾರ್ಯವೃತ್ತಿಪರಿಸಂಖ್ಯಾನರಸಪರಿತ್ಯಾಗವಿವಿಕ್ತಶಯ್ಯಾಸನಕಾಯಕ್ಲೇಶಂಗಳೆಂಬ ಬಾಹ್ಯತಪದೊಳಂಪ್ರಾಯಶ್ಚಿತ್ತವಿನಯವೈಯಪೃತ್ಯಸ್ವಾಧ್ಯಾಯವ್ಯುತ್ಸರ್ಗಗಳೆಂಬ* **ಷಡ್ವಿಧಾಭ್ಯಂತರ** *ತಪದೊಳಂ ನೆಜೆದು, ಮನೋದಂಡ ವಾಗ್ದಂಡ ಕಾಯದಂಡಮೆಂಬ ದಂಡತ್ರಯಮಂ ಪರಿಹರಿಸುತ್ತುಂ, ಕ್ಷುತ್ಪಿಪಾಸಾಶೀತೋಷ್ಣದಂಶಮಶಕನಾಗ್ನ್ಯರತಿಸ್ತ್ರೀಚರ್ಯಾನಿಷದ್ಯಾಶಯ್ಯಾ ಕ್ರೋಶವಧಯಾ*

*ಚನಾಲಾಭರೋಗತೃಣಸ್ಪರ್ಶಮಲಸತ್ಕಾರಪುರಸ್ಕಾರಪ್ರಜ್ಞಾಜ್ಞಾನದರ್ಶನಂಗಳೆಂಬ* ***ಇರ್ಪತ್ತೆರಡುಂಪರೀಷಹಂಗಳಂ****ಪರಿಹರಿಸುತ್ತಂ,*

*ಪೃಥ್ವೀಕಾಯಕಮಪ್ಪುಕಾಯಕ ತೇಜಸ್ಕಾಯಕ ವಾಯುಕಾಯಕ ವನಸ್ಪತಿಕಾಯಕ ತ್ರಸಕಾಯಕಮೆಂಬ* **ಷಡ್ವಿಧ ಜೀವನಿಕಾಯ** *ಮನೋವೃತ್ತಂ, ಜೀವಾಜೀವಾಸ್ರವಬಂಧ ಸಂವರನಿರ್ಜರಾಮೋಕ್ಷಂಗಳೆಂಬ* **ಸಪ್ತತತ್ವಮಂ***ನೈಗಮಸಂಗ್ರಹವ್ಯವಹಾರಋಜುಸೂತ್ರ*

*ಶಬ್ದಸಮಭಿರೂಢೈವಂಭೂತಮೆಂಬ* ***ಸಪ್ತನಯಮುಮಂ*** *ಭಾವಿಸುತ್ತಂ................*

*(ಅಜಿತತೀರ್ಥಂಕರ ಪುರಾಣ ತಿಲಕಂ ೭-೮೪)*

ಅತ್ಯುಗ್ರತಪಸ್ಸಿನ ರೀತಿಯನ್ನು ರನ್ನನು ಇಲ್ಲಿ ವಿವರಿಸಿದ್ದಾನೆ. ಅದು ಬುದ್ಧಿ, ಕ್ರಿಯಾ, ತಪೋಬಲದಿಂದ ಕೂಡಿತ್ತು. ಬುದ್ಧಿ, ಕ್ರಿಯಾ, ತಪೋಬಲ, ರಸಧಿ, ಕ್ರಿಯೆ, ಕ್ಷೀಣ, ವಿಕಲ್ಪಗಳೆಂಬ **ಸಪ್ತಸಿದ್ಧಿಗಳು** ತಪಸ್ಸಿನಲ್ಲಿ ಕೂಡಿತ್ತು. ನಾಮಸತ್ಯ, ರೂಪಸತ್ಯ, ಪ್ರತೀತಿಸತ್ಯ, ಸಂಯೋಜನಸತ್ಯ, ಜನಪದಸತ್ಯ, ದೇವಸತ್ಯ, ಭಾವಸತ್ಯ, ಸಮಯಸತ್ಯಗಳೆಂಬ **ಸತ್ಯಗಳು;** ಭಾವಶುದ್ಧಿ, ಕಾಯಶುದ್ಧಿ, ವಿನಯಶುದ್ಧಿ, ಈರ್ಯಾ ಪಥಶುದ್ಧಿ, ಭಿಕ್ಷಾಶುದ್ಧಿ, ಶಯನಶುದ್ಧಿ, ಅಶುದ್ಧಿಯೆಂಬ **ಎಂಟು** ಶುದ್ಧಿಗಳು. ಮನೋಗುಪ್ತಿ, ವಾಗ್ಗುಪ್ತಿ, ಕಾಯಗುಪ್ತಿ ಎಂಬ **ಗುಪ್ತಿತ್ರಯಗಳು** ಕ್ಷಮೆ, ಮಾರ್ದವ, ಆರ್ಜವ, ಸತ್ಯ, ಶೌಚ, ಸಂಯಮ, ತಪಸ್ಸು, ತ್ಯಾಗ, ಅಕಿಂಚನ್ಯ, ಬ್ರಹ್ಮಚರ್ಯ ಎಂಬ **ಹತ್ತುಧರ್ಮಗಳು**. ಶಯ್ಯಾಶಸ, ಕಾಯ, ಕ್ಲೇಶಗಳೆಂಬ **ಬಾಹ್ಯತಪಗಳು**. ವಿನಯ, ವೈಯಾಪತ್ಯ, ಸ್ವಾಧ್ಯಾಯ, ವ್ಯುತ್ಸರ್ಗ, ಧ್ಯಾನವೆಂಬ ಆರುಬಗೆಯ ತಪಸ್ಸು, ಇದನ್ನು ಷಡ್ವಿಧಭ್ಯಂತರತಪವೆಂದು ಕರೆಯುತ್ತಾರೆ. ಮನೋದಂಡ, ವಾಗ್ದಂಡ, ಕಾಯದಂಡ ಎಂಬ ದಂಡತ್ರಯ. ಹಸಿವು, ಬಾಯಾರಿಕೆ, ಚಳಿ, ಉಷ್ಣ, ಸೊಳ್ಳೆಕಡಿತ, ಮುಂತಾದವುಗಳು ಅರತಿ, ಸ್ತ್ರೀವಿರಹ, ಸಂಚಾರಬಾಧೆ, ಶಯ್ಯಾಬಾಧೆ, ಆಸನಬಾಧೆ, ಬೈಗುಳ, ಯಾಚನೆಯ ತೊಂದರೆಗಳು, ಹೊಡೆತ, ಭಿಕ್ಷೆ ದೊರೆಯದ ಭೇದ, ತಪಸ್ಸಿನಿಂದ ಯಾವುದೇ ಪ್ರಯೋಜನವಾಗದಿರುವುದು ಮುಳ್ಳುಕಲ್ಲುಗಳಿಂದ ತೊಂದರೆ, ಜನರಿಂದ ಪುರಸ್ಕಾರ ದೊರೆಯದಿರುವುದು ಎಂಬ ಇಪ್ಪತ್ತೆರಡು **ಪರೀಷಹಗಳು**. ಪೃಥ್ವಿಕಾಯಕ, ಅಪ್ಪುಕಾಯಕ, ತೇಜತ್ಕಾಯಕ, ವಾಯುಕಾಯಕ, ವನಸ್ಪತಿಕಾಯಕ, ತ್ರಸಕಾಯಕ, ಷಡ್ವಿಧಜೀವಕಾಯಕ, ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರ, ಮೋಕ್ಷಗಳೆಂಬ **ಸಪ್ತತತ್ವಗಳು**. ನೈಗಮ, ಸಂಗ್ರಹ, ವ್ಯವಹಾರ, ರುಜು, ಸೂತ, ಶಬ್ದ, ಸಮಭಿರೂಢ ಎಂಬ **ಸಪ್ತನಯನಗಳು**. ಕಷಾಯಗಳ ವಿರೋಧ ಮತ್ತು ಪಂಚೇಂದ್ರಿಯ ನಿಗ್ರಹ ಜೀವ, ಪುದ್ಗಲ, ಧರ್ಮ, ಅಧರ್ಮ, ಕಾಲ-ಆಕಾಶ ಎಂಬ ಐದನ್ನು ಭಾವಿಸುತ್ತಾ ಅವನು ಉಗ್ರೋಗ್ರ ತಪಸ್ಸು ಮಾಡಿದನೆಂದು ರನ್ನ ವಿವರಿಸುತ್ತಾನೆ.

ಇದರಲ್ಲಿ ಕೆಲವು ಅಂಶಗಳು ಜೈನಧರ್ಮ ಆ ಕಾಲಕ್ಕೆ ಎದುರಿಸಿದ ಸಮಸ್ಯೆಗಳೂ ಹೌದು. ಜೈನಯತಿಗಳೂ ಬೈಗುಳ ಕೇಳಬೇಕಿತ್ತು. ಹೊಡೆತ ತಿನ್ನಬೇಕಾಗಿತ್ತು. ಸಾಮಾಜಿಕ ತೊಂದರೆ ಅನುಭವಿಸಬೇಕಿತ್ತು. ವಿರೋಧ ಎದುರಿಸಬೇಕಿತ್ತು. ಇವೆಲ್ಲವನ್ನು ಎದುರಿಸಿಯೇ ಜೈನಯತಿಗಳು ತಪಸ್ಸನ್ನು ಕೈಗೊಂಡರು. ಎರಡನೆಯದು – ಈ ಪ್ರತಿಕ್ರಿಯೆಗಳನ್ನು ಅವರು ಜನರ ನಡುವಿನಲ್ಲಿದ್ದೇ ಎದುರಿಸಿದರು. ವನಕ್ಕೆ ತೆರಳಿ ಅಲ್ಲ ಎಂಬುದನ್ನು ಗಮನಿಸಬೇಕು. ವೈದಿಕಧರ್ಮದಲ್ಲಿ ನಾಲ್ಕು ವಿಧದ ಪುರುಷಾರ್ಥಗಳಿವೆ.-ಧರ್ಮ ಅರ್ಥ ಕಾಮ, ಮೋಕ್ಷ, ಅದೇ ರೀತಿಯಲ್ಲಿ ನಾಲ್ಕು ವಿಧದ ಆಶ್ರಮಗಳಿವೆ. ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸ, ಇದು ನಾಲ್ಕು ರೀತಿಯ ಅವಸ್ಥೆಗಳೂ ಹೌದು. ಬ್ರಹ್ಮಚರ್ಯ ಒಂದು ವ್ರತ. ಇದರಲ್ಲಿ ವ್ರತ ಗಮನಿಸಬೇಕಾದ ವಿಷಯ. ಎರಡನೆಯದು ಗೃಹಸ್ಥ,

ಧರ್ಮ, ಅರ್ಥ ಕಾಮಗಳಲ್ಲಿ ಗಂಡು-ಹೆಣ್ಣು ಮಿಲನ ಹೊಂದಿರುವುದು ಇಲ್ಲಿಯೂ ಧರ್ಮವೆನ್ನುವುದು ಪ್ರಧಾನ ವಾನಪ್ರಸ್ಥವೆಂದರೆ ಸರಿಯಾದ ವಾರಸುದಾರರಿಗೆ ತಮ್ಮ ಸಂಪತ್ತನ್ನು ನೀಡಿ ವನಕ್ಕೆ ತೆರಳುವುದು ಕೊನೆಯದು ಸನ್ಯಾಸ ಅಂದರೆ ಎಲ್ಲವನ್ನೂ ತ್ಯಜಿಸುವುದು ಈ ದೃಷ್ಟಿಯಿಂದ ಜೈನ-ವೈದಿಕ ತತ್ವಕ್ಕಿರುವ ಭಿನ್ನತೆಯು ಗಮನಾರ್ಹವಾಗಿದೆ.

ಜೈನಧಾರ್ಮಿಕ ಕಾವ್ಯಗಳಲ್ಲಿ ಸಲ್ಲೇಖನ ತಪಸ್ಸು ಮಾಡಿದ ಅನೇಕ ವಿವರಗಳು ದೊರೆಯುತ್ತವೆ.

*ವಿವರಗಳಿಗೆ ನೋಡಿ: ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦*
*ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ ಪುಟ. ೩೮.*

**೩೬೩. ತಾಂಡವ ವಿಧಿ**

*ಸಮನಿಸೆ ಮಾಡಿದುದಾಖಂಡಲಶಿಖಂಡಿ* ***ತಾಂಡವವಿಧಿಯಂ***
*(ಅಜಿತತೀರ್ಥಂಕರ ಪುರಾಣ ೫-೭)*

ರನ್ನ ಇಲ್ಲಿ ವಿವರಿಸುತ್ತಿರುವ ತಾಂಡವ ವಿಧಿ ಅಂದರೆ 'ತಾಂಡವನೃತ್ಯ'. ಭರತನಾಟ್ಯದಲ್ಲಿ ಒಂದು ಪ್ರಕಾರ ವಾಸ್ತವವಾಗಿ ತಾಂಡವ ನೃತ್ಯಕ್ಕೆ ಒಂದು ಪೌರಾಣಿಕ ಹಿನ್ನೆಲೆಯಿದೆ. ದಾಕ್ಷಾಯಿಣಿಯು ದಕ್ಷನ ಯಜ್ಞದಲ್ಲಿ ಬಿದ್ದು ಸತ್ತು ಹೋದುದನ್ನು ಕೇಳಿದ ಶಿವ ಸಿಟ್ಟಿಗೇರುತ್ತಾನೆ.. ಸಿಟ್ಟಿನಲ್ಲಿಯೇ ಡಮರುಗವನ್ನು ಬಾರಿಸಿಕೊಂಡು ಭಯಂಕರ ನೃತ್ಯವನ್ನು ಮಾಡುತ್ತಾನೆ. ಈ ರೀತಿಯ ನೃತ್ಯ ಪ್ರಕಾರವನ್ನು ತಾಂಡವನೃತ್ಯವೆಂದು ಕರೆಯುತ್ತಾರೆ. ಈ ನೃತ್ಯ ಪದ್ಧತಿಯಲ್ಲಿ ರೌದ್ರವೇ ಸ್ಥಾಯಿ. ಹಾಗಾಗಿ ಆಂಗಿಕ ಅಭಿನಯಗಳು ಕೂಡಾ ರೂಕ್ಷರೀತಿಯಲ್ಲಿಯೇ. ಮತ್ತು ಏರು ಸ್ಥಾಯಿಯಲ್ಲಿಯೇ ಇರುತ್ತದೆ. ಆಂಗಿಕ ಅಭಿನಯಗಳು ಕೂಡಾ ಸೂಕ್ಷ್ಮವಾಗಿರುವುದಿಲ್ಲ ಎಂಬುದನ್ನು ಗಮನಿಸಬೇಕು.

ತಂಡುವಿನಿಂದ ಹುಟ್ಟಿದುದು ತಾಂಡವ ಎಂದು ಸಿಂಹಭೂಪಾಲನು ಹೇಳುತ್ತಾನೆ. (೧, ೫೬, ೫೮) ರನ್ನನು ಮಾರ್ಗ, ದೇಸಿ, ಎರಡು ತಾಂಡವ, ಲಾಸ್ಯ ಎರಡು ವಿಕಲ್ಪವೆಂದೂ ಹೇಳುತ್ತಾನೆ. (೫-೪೪ವ) (ಅಜಿತ ತೀರ್ಥಕರ ಪುರಾಣ ೫-೩೦ ವ)

**೩೬೪. ತಾಂತ್ರಿಕ ದರ್ಶನ**

ತಾಂತ್ರಿಕ ದರ್ಶನ (ವಜ್ರಯಾನ, ಮಂತ್ರಯಾನ ಮೊದಲಾದವು) ವಿಜ್ಞಾನವಾದವನ್ನು ಹಿಂದಕ್ಕೆ ತಳ್ಳಿತು. ಶೂನ್ಯತೆಯ ಆಧಾರವನ್ನು ಹೊಂದಿದ ಮಂತ್ರ, ತಂತ್ರ ಮತ್ತು ಅರ್ಜನೆಗಳ ವಿಶಿಷ್ಟ ಸಮುಚ್ಚಯವೇ ತಾಂತ್ರಿಕ ದರ್ಶನ. ಅದು ಮತವೂ ಹೌದು ದರ್ಶನವೂ ಹೌದು. ಇಂಡಿಯಾದೇಶದಿಂದ ಅದು ಮರೆಯಾದಾಗ (ಹನ್ನೊಂದರಿಂದ ಹನ್ನೆರಡನೆಯ ಶತಮಾನ) ಟಿಬೆಟ್ಟಿನಲ್ಲಿ ವಿಶೇಷವಾಗಿ ಪ್ರಚಾರಮಾಡಲ್ಪಟ್ಟದ್ದು ಬೌದ್ಧ ಧರ್ಮದ ಈ ರೂಪವೇ. ಬೌದ್ಧ ಧರ್ಮದ ಹಲ-ಕೆಲವು ಪ್ರಾಚೀನ ಶಾಖೆಗಳು ಇಂದಿಗೂ ಚೀನಾ ಮತ್ತು ಜಪಾನ್ ದೇಶಗಳಲ್ಲಿ ಮುನ್ನಡೆಯುತ್ತಿದೆ.

ತಾಂತ್ರಿಕ ದರ್ಶನ ಬೌದ್ಧರಲ್ಲಿ ವಜ್ರಯಾನ ಮತ್ತು ಮಂತ್ರಯಾನದ ಮೂಲಕ ಮುಂದುವರಿಯಿತು. ರಾಧಾಕೃಷ್ಣನ್ ಹೇಳುವಂತೆ ಅದು ಅನಂತರ ತಾಂತ್ರಿಕ ದರ್ಶನವಾಯಿತು. ತಾಂತ್ರಿಕ ದರ್ಶನವು ಹೆಸರೇ ಸೂಚಿಸುವಂತೆ ತಾಂತ್ರಿಕತೆಯೇ ಇದರಲ್ಲಿ ಮುಖ್ಯವಾಯಿತು. ನಮ್ಮಲ್ಲಿ ತಂತ್ರ ಮತ್ತು ಮಂತ್ರ ಈ ಎರಡರ ವರ್ಗೀಕರಣವು ಬಹಳಮಟ್ಟಿಗೆ ಅವಶ್ಯವಾಯಿತು. ತಂತ್ರದಲ್ಲಿ – ತಂತ್ರವೇ ಮುಖ್ಯ. ತಂತ್ರ ಆಚರಣೆಗೆ ಸಂಬಂಧಿಸಿರುವುದು ಮಂತ್ರವು ತಂತ್ರದ ಪರಿಕಲ್ಪನೆಗಿಂತ ಭಿನ್ನ.

*ವಿವರಗಳಿಗೆ ನೋಡಿ: ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦*
*ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ ಪುಟ. ೧೯೫.*

**೩.೬.೫. ತಾಂತ್ರಿಕ ಸಂಪ್ರದಾಯಗಳು**

ತಾಂತ್ರಿಕ ಸಮಪ್ರದಾಯಗಳ ಸಾಮಾನ್ಯ ಪ್ರವೃತ್ತಿಗಳನ್ನು ಧರ್ಮವೀರ ಭಾರತಿ ಅವರು ಈ ರೀತಿ ಗುರುತಿಸಿದ್ದಾರೆ. ಪ್ರತಿಯೊಂದು ಸಂಪ್ರದಾಯದ ದೇವತೆಗಳು, ಮಂತ್ರ ಹಾಗೂ ತತ್ವದರ್ಶನದ ಶಬ್ದಾವಳಿ ಬೇರೆಯಿದ್ದರೂ ಸಾಧನಾಪದ್ಧತಿ ಸಮಾನವಾಗಿತ್ತು. ಹೊಸ ಸಾಧನಾಪದ್ಧತಿಗಳನ್ನು ಒಂದು ಮತ್ತೊಂದರಿಂದ ಮುಕ್ತ ಹೃದಯದಿಂದ ಸ್ವೀಕರಿಸುತ್ತಿತ್ತು. ತತ್ವದರ್ಶನ ಗೌಣವಾಗಿತ್ತು. ಸಾಧನೆ, ಕ್ರಿಯೆ ಮತ್ತು ಚರ್ಯೆಗಳು ಪ್ರಮುಖವಾಗಿದ್ದವು. ಸಾಧನೆಯಲ್ಲಿ ಗುರುವಿಗೆ ಅತ್ಯಂತ ಮಹತ್ವವಿತ್ತು ಮತ್ತು ಈ ಸಾಧನೆ ಶಿವಶಕ್ತಿ, ಅಂಗ–ಲಿಂಗ, ರಸ–ಅಭ್ರಕ, ಪ್ರಜ್ಞೆ ಮತ್ತು ಉಪಾಯ ಮೊದಲಾದ ಯಾವುದೇ ಎರಡು ಪುರುಷ ಹಾಗೂ ಸ್ತ್ರೀ ಪ್ರತೀಕಗಳ ಅದ್ವಯ ಸಾಧನೆಯಾಗಿತ್ತು. ಇಲ್ಲಿ ದ್ವೈತದ ಭಾವವಿಲ್ಲ. ಸಾಧಾರಣವಾಗಿ ಎಲ್ಲ ಸಂಪ್ರದಾಯಗಳಲ್ಲೂ ಈ ಸಾಧನೆಯ ಮಿಥುನ ಪರವಾದ ವ್ಯಾಖ್ಯಾನ ದೊರೆಯುತ್ತದೆ. ಅದರ ಜೊತೆಗೆ ಗುಹ್ಯಾಚಾರಗಳ ವಿಧಾನವೂ ಕಂಡು ಬರುತ್ತದೆ. ಮೈಥುನವು ಸಾಧನೆಯ ಫಲವಾಗಿದೆ. ಈ ಸಾಧನೆಯಲ್ಲಿ ಜಾತಿ–ಪಂಥ, ವರ್ಣಭೇದಗಳಿರಲಿಲ್ಲ. ಸಾಧನೆಗೂ ಜಾತಿಗೂ ಸಂಬಂಧವಿಲ್ಲದಿರುವುದು ಗಮನಾರ್ಹ. ಈ ಸಾಧನೆಯಲ್ಲಿ ಶಕ್ತಿ ಪ್ರಧಾನವಾದುದರಿಂದ ಸ್ತ್ರೀಗೆ ವಿಶೇಷ ಮಹತ್ವವಿತ್ತುವೆಂಬುದು ಗಮನಾರ್ಹ. ಬ್ರಹ್ಮಾಂಡದಲ್ಲಿರುವ ಶಿವ ಶಕ್ತಿಗಳು ಕುಂಡಲಿನೀ ಮತ್ತು ಸಹಸ್ರಾರ ಅಥವಾ ಕಮಲ ಕುಲಿಶದ ರೂಪದಲ್ಲಿದ್ದವು. ಆದ್ದರಿಂದ ಯೋಗ ಸಾಧನೆಯ ವಿಧಾನವೂ ಇತ್ತು. ದೇಹ ಅತ್ಯಂತ ಮಹತ್ವಪೂರ್ಣವೆಂದು ಭಾವಿಸಲಾಗಿತ್ತು. ಮಿಥುನ ಸಾದನೆ ಹಾಗೂ ಯೋಗದಿಂದಾಗಿ ನಿರೂಪಣ ಶೈಲಿ ಪ್ರತೀಕಾತ್ಮಕವಾಗಿದೆ. ಪ್ರತೀಕಾದ ಸಾಧನೆಯು ಮುಖ್ಯ. ಜಾನಪದ ದೇವತೆಗಳ ಮತ್ತು ಅವರ ಪೂಜೆಯ ಅಸಂಸ್ಕೃತ ವಿಧಾನಗಳ ಬಗೆಗೆ ಗೌರವ ಮತ್ತು ಅವರು ವೈದಿಕ ದೇವತೆಗಳಿಗಿಂತಲೂ ಹಿರಿಯರೆಂದು ಸಿದ್ಧಪಡಿಸಲು ಪ್ರಯತ್ನ ನಡೆಯುತ್ತಿತ್ತು. ಮರಣಾನಂತರ ದೊರೆಯುವ ಮುಕ್ತಿ ಅಥವಾ ನಿರ್ವಾಣಕ್ಕಿಂತ ಸಾಧನೆಯಿಂದ ಬದುಕಿರುವಾಗಲೇ ವಿವಿಧ ರೀತಿಯ ಸಿದ್ಧಿಗಳನ್ನು ಪಡೆದು ಸಿದ್ಧನಾಗುವುದು ಇವರ ಕಾಮ್ಯ, ರಸೇಶ್ವರ, ಕಾಪಾಲಿಕ, ಶಾಕ್ತ ಮತ್ತು ವಜ್ರಯಾನವೇ ಮೊದಲಾದವುಗಳಲ್ಲಿ ಸಿದ್ಧರಿಗೆ ಮನ್ನಣೆಯಿದೆ.

*ವಿವರಗಳಿಗೆ ನೋಡಿ: ಮೋಹನಕೃಷ್ಣ ರೈ ೨೦೦೪ ಪ್ರಭುತ್ವ ಮತ್ತು ಜನತೆ ಪುಟ. ೧೮೩.*

### ೩.೬.೬. ತಾರಾಭಗವತಿ

ಸೋಮೇಶ್ವರನ ಮಹಾಮಂತ್ರಿ ಸುಂಕಾಧಿಕಾರಿಯಾದ ದಂಡನಾಯಕ ರೂಪಭಟ್ಟಯ್ಯನು ಬಳ್ಳಿಗಾತಿಯ ಜಯಂತಿ ಬೌದ್ಧವಿಹಾರವನ್ನು ಕಟ್ಟಿಸಿ, ಅದಕ್ಕಾಗಿ ಮತ್ತು ತಾರಾಭಗವತಿ, ಕೇಶವ, ಲೋಕೇಶ್ವರ ಮತ್ತು ಬುದ್ಧದೇವ ಇನ್ನಿತರ ಆವರಣ ದೇವತೆಗಳ ಪೂಜೆಗಾಗಿ ಮತ್ತು ಯೋಗಿಣಿ, ಕುಸಲೀ (ಇವರು ಹೆಂಗಸರು) ಸನ್ಯಾಸಿಗಳ ಆಹಾರಕ್ಕಾಗಿ ದತ್ತಿಯನ್ನು ಬಿಟ್ಟಿರುವನು (ಕಾಲ ೧೦೬೫) (ಕೃಷ್ಣರಾವ್ ಕಪಟರಾಳ ೧೯೭೦ ಪುಟ. ೨೭) ಈ ತಾರಾಭಗವತಿಯ ಪ್ರತಿಮೆಯನ್ನು ನಾಡಪೆರ್ಗಡೆಯಾದ ಹಂಪಸೆಟ್ಟಿಯ ಹೆಂಡತಿಯಾದ ನಾಗಿಯಕ್ಕ ಎಂಬವಳು ಕ್ರಿ.ಶ. ೧೦೬೭ನೆಯ ವರ್ಷದಲ್ಲಿ ಮಾಡಿಸಿದಳೆಂದು ಶಿಕಾರಿಪುರದ ೧೭೭ನೆಯ ಶಾಸನದಿಂದ ತಿಳಿದು ಬರುವುದು (ಅದೇ ಪುಟ. ೨೭).

### ೩.೬.೭. ತಿಲಕಗಳು

ನಾಗವರ್ಮನು 'ಅಭಿಧಾನರತ್ನಮಾಲಾ ಕರ್ಣಾಟಕ ಟೀಕೆ'ಯಲ್ಲಿ ತಿಲಕದ ಕುರಿತಂತೆ ಹೀಗೆ ಹೇಳುತ್ತಾನೆ. "ತಿಳಕಂ, ತಮಾಳಪತ್ರಂ, ಚಿತ್ರಕಂ, ವಿಶೇಷಕಂ, ಪುಂಡ್ರಂ, ಲಲಾಟಿಕಾ – ಈ ಆರು ಬೊಟ್ಟು (೩೭೮), ಕುಂಕುಮಂ, ಘುಸೃಣಂ, ವರ್ಣಂ, ಲೋಹಿತ ಚಂದನಂ, ಕಾಶ್ಮೀರಜಂ, ಕಾಲೇಯಂ, ಜಾಪಕಂ – ಈ ಏಳು ಕುಂಕುಮಂ (೩೭೯), ಮೃಗನಾಭಿ: ಮೃಗಮದ: ಕಸ್ತೂರಿಕಾ – ಈ ಮೂರು ಕಸ್ತೂರಿ (೩೯೦), ರಾಜಶೇಖರನು ತಿಲಕದಲ್ಲಿ ಪುಂಡ್ರ, ತನುಲ ಪತ್ರ, ಚಿತ್ರಕ, ವಿಶೇಷಕ ಎನ್ನುವ ನಾಲ್ಕು ವಿಭಾಗಗಳನ್ನು ಸೂಚಿಸುತ್ತಾನೆ.

ರಾಣಿಯರು ಕಸ್ತೂರಿಯ 'ತಿಲಕ'ವಿಡುವ ಕ್ರಮದ ಕುರಿತು ಪಂಪನ 'ಆದಿಪುರಾಣ'ದಲ್ಲಿ ಉಲ್ಲೇಖವಿದೆ. (೪–೪೧ವ). ಹೆಂಗಸರ ನಾಸಾಭರಣದ ಕುರಿತು ಹೇರಳ ಉಲ್ಲೇಖಗಳು ಸಿಗುತ್ತವೆ. ಆದರೆ 'ವಿಧವೆಯರಿಗೆ ಮಾತ್ರ ನಾಸಾಭರಣ ಧರಿಸುವ ಹಕ್ಕು ಇಲ್ಲ. ಯಾಕೆಂದರೆ, ನಾಸಾಭರಣವು ಸೌಭಾಗ್ಯದ ಲಕ್ಷಣ.

ಮೂಗುತಿಯನ್ನು ಸೌಭಾಗ್ಯದ ಲಕ್ಷಣವೆಂದು ನಾಟ್ಯಶಾಸ್ತ್ರದಲ್ಲಿ ಹೇಳಲಾಗಿದೆ. ಕೃಷ್ಣಮೂರ್ತಿ ಕೆ. ಅವರ ಪ್ರಕಾರ, ಕ್ರಿ.ಶ. ಏಳನೇ ಶತಮಾನದ ತರುವಾಯ ಮಲಬಾರಿನಲ್ಲಿ ನಾಸಾಭರಣವು ಪ್ರಚಲಿತವಾಯಿತು (ಅದೇ. ಪು. ೬೯). ಆದರೆ ನಾಸಾಭರಣವು ಕ್ರಿ.ಶ. ಒಂದನೆಯ ಶತಮಾನದ ಕಾಲಕ್ಕೆ ಪ್ರಾರಂಭವಾಯಿತೆಂದೂ, ಇದರ ಮೇಲೆ ಮೊಗಲರ ಪ್ರಭಾವ ಇದೆಯೆಂದೂ ಅಲ್ತೇಕರರು ಅಭಿಪ್ರಾಯ ಪಡುತ್ತಾರೆ.

*ವಿವರಗಳಿಗೆ ನೋಡಿ: ಚಿದಾನಂದ ಮೂರ್ತಿ .ಎಂ. ೧೯೭೭ ಗ್ರಾಮೀಣ ಪುಟ. ೧೫೪*

*Krishna Murthy .K. 1977*

*Nagarjunakonda – A cultural study Concept P. 69*

*Yagendra Bahadur Singh 1981 Social Life Ancient India P. 183*

*Altekar A.S. 1962 The Position of Women in Hindu Civilisation P. 302*

೩೬೮. ತುರುಗೋಳ್

*ತುರು(ಗೋಳೊಳ್) ಪೆಣ್ಣುಯ್ಯಲೋ*
*ಳೆಜೆವೆಸದೊಳ್ ನೆಂಟನೆಡಜೊಳೂರಜೆವಿನೊಳಂ*
*ತೆಜೆ ಸಂದು ಗಂಡುತನೆಮನೆ*
*ನೆಜೆ ಪದವ ಗಂಡನಲ್ಲನೆಂತು ಷಂಡಂ"* (ಗದಾಯುದ್ಧ೨-೨೪)

ದನಗಳನ್ನು ಅಪಹರಿಸುವುದನ್ನು ಗೋಗ್ರಹಣ, **ತುರುಗೋಳು**, ತುರುಗಾಳಗವೆಂದು ಕರೆಯುತ್ತಾರೆ. ಇದರಲ್ಲಿ ಗೋವಿಗಾಗಿ ಹೋರಾಟಗಳು ನಡೆಯುತ್ತವೆ.

ದನಗಳು ಪ್ರಾಚೀನ ಭಾರತದ ಆರ್ಥಿಕ ಸಂಪತ್ತೇ ಆಗಿದ್ದವು. ಒಬ್ಬ ವ್ಯಕ್ತಿಯ ಸಾಹುಕಾರತನವು ಅವನು ಹೊಂದಿರುವ ದನಗಳ ಸಂಖ್ಯೆಯನ್ನು ಅವಲಂಬಿಸಿತ್ತು ಎಂದರೆ ಅತಿಶಯೋಕ್ತಿಯಲ್ಲ. ಪೌಷ್ಠಿಕ ಆಹಾರವಾದ ಹಾಲು, ತುಪ್ಪ, ಮೊಸರು ಮುಂತಾದವುಗಳನ್ನೂ, ವ್ಯವಸಾಯಕ್ಕೆ ಅಗತ್ಯವಾದ ಗೊಬ್ಬರವನ್ನೂ ನೀಡುವ, ಇವು ವ್ಯವಸಾಯ ಮಾಡಲು ಒಂದು ಶಕ್ತಿಯಾಗಿ ಮಾನವನ ನೆರವಿಗೆ ನಿಂತವು. ಆದ್ದರಿಂದ ದನಗಳನ್ನು ಹಣದ ಆಸೆಯಿಂದ ಕದಿಯಲು ಆರಂಭ ಮಾಡಿದರು. ಈ ರೀತಿ ದನಗಳನ್ನು ಅಪಹರಿಸಿದವರನ್ನು ಹಾಗೆಯೇ ಬಿಡುವುದು ಹೇಡಿತನದ ಪರಮಾವಧಿ ಎಂಬ ಒಂದು ಭಾವನೆ ಮೂಡಿತು. ಯಾವಾಗ ಇದು ಒಂದು ಮೌಲ್ಯವಾಗಿ ಪರಿಣಮಿಸಿತೋ ಆಗ ಶತ್ರುಗಳನ್ನು ಕೆಣಕಿ ಅವಮಾನ ಮಾಡುವುದಕ್ಕೆ ಅಥವಾ ಅವನ ಮೇಲೆ ಬೀಳುವುದಕ್ಕೋ ಆ ಅರಸನ ಪ್ರದೇಶದ ದನಗಳನ್ನು ಅಪಹರಿಸುವ ಯತ್ನಗಳು ನಡೆದುವು. ಪಾಂಡವರನ್ನು ಹೊರಗೆ ಹಾಕಲು ಕೌರವರು ಈ ಮೌಲ್ಯವನ್ನೇ ನಡೆದಾಗ ಎಂಥ ವೀರನು ತಾನೇ ಸುಮ್ಮನಿದ್ದಾನು, ಪಾಂಡವರು ಖಂಡಿತವಾಗಿ ಈ ಹೋರಾಟಕ್ಕೆ ಇಳಿಯುತ್ತಾರೆ. ಆಗ ಅವರನ್ನು ಗುರುತಿಸಬಹುದು. ಇದು ಅವರ ಲೆಕ್ಕಾಚಾರವಾಗಿತ್ತು. ಆ ನಂತರ ಆಗಿದ್ದೇ ಬೇರೆ. ಅದು ನಮಗೆ ಇಲ್ಲಿ ಮುಖ್ಯವಲ್ಲ.

ಪಂಪನ ವಿಕ್ರಮಾರ್ಜುನವಿಜಯ ಮತ್ತು ರನ್ನನ ಗದಾಯುದ್ಧ ಈ ಎರಡೂ ಕಾವ್ಯಗಳಲ್ಲಿ ತುರುಗಾಳಗದ ಬಗ್ಗೆ ಕನ್ನಡನಾಡಿನ ವೀರರ ನಿಲುವು ಯಾವ ರೀತಿಯದಾಗಿತ್ತು ಎಂಬುದು ಸುವ್ಯಕ್ತವಾಗಿದೆ. ಪಂಪಭಾರತದಲ್ಲಿ ವಿರಾಟನ ಕಡೆಯವರು ಹೇಳುವ "ನಾವು ಬದುಕಿರುವವರೆಗೆ ದನಗಳನ್ನು ಅಪಹರಿಸಲು ಬಿಡುವುದಿಲ್ಲ. ನಾವು ಸತ್ತಮೇಲೆ ಅವು ನಮ್ಮ ಹೆಣಗಳನ್ನು ತುಳಿದು ಹೋಗಬೇಕು ತುರುಗಾಳಗದಲ್ಲಿಯೇ ನಮ್ಮ ಉಳಿವುಅಳಿವುಗಳು ಇರುವುದು" ಎಂಬ ಮಾತುಗಳು ಪಂಪನ ಕಾಲದ ವೀರರ ಉದ್ಘೋಷವಾಗಿತ್ತು ಎಂದರೆ ಅತಿಶಯೋಕ್ತಿಯಲ್ಲ. ತುರುಗಾಳಗದಲ್ಲಿ ಭಾಗವಹಿಸಿ ಮಡಿದವರ ಬಗ್ಗೆ ಸಮಾಜದಲ್ಲಿ ಒಂದು ರೀತಿಯ ಗೌರವ ಭಾವನೆಯಿತ್ತು. ತುರುಗಾಳದಲ್ಲಿ ಮಡಿದ ವೀರರ ರಕ್ತದಿಂದ ತಿಲಕವನ್ನು ಇಟ್ಟುಕೊಂಡು ಅವರಿಗೆ ಕೈಮುಗಿಯುತ್ತಿದ್ದರು ಎಂಬ ವಿಷಯವು ಬ್ರಹ್ಮಶಿವನ ಸಮಯಪರೀಕ್ಷೆ ಎಂಬ ಕೃತಿಯಿಂದ ತಿಳಿದು ಬರುತ್ತದೆ.

ಗೋಗ್ರಹಣಕಾಲದಲ್ಲಿ, ಸ್ತ್ರೀಯರ ಮಾನರಕ್ಷಣೆಯಲ್ಲಿ ಸ್ವಾಮಿ ಕಾರ್ಯದಲ್ಲಿ, ನೆಂಟರ

ಆಪತ್ತಿನಲ್ಲಿ, ಗ್ರಾಮದ ದಾಳಿಯಲ್ಲಿ ದೃಢ ನಿರ್ಧಾರದಿಂದ ಮುನ್ನುಗ್ಗಿ ತನ್ನ ಪೌರುಷವನ್ನು ಒರೆಗೆ ಹಚ್ಚಿ ಹೋರಾಡಿದವನು ಗಂಡಲ್ಲ: ಅವನು ಷಂಡನೇ ಸರಿಯೆನ್ನುವುದು ಇಲ್ಲಿಯ ಭಾವಾರ್ಥವಾಗಿದೆ. ಇಲ್ಲಿ ತುರುಗೋಳ್ ಮತ್ತು ಪೆಣ್ಬುಯ್ಯಲ್ ವಿಷಯ ಪ್ರಸ್ತಾಪಗೊಂಡಿರುವುದು ಗಮನಾರ್ಹ.

'ಕಾನಡ' ಗೋವಳರ ಬೀಡಾದ ಕನ್ನ (ಖಾನ) ದೇಶವು ಪ್ರಾಚೀನ 'ಕನ್ನ' ಜನರ ಎಂದರೆ ಕಂನಾಡಿನ ಮೊದಲಿಗರ ನೆಲೆವೀಡು ಆಗಿರಬೇಕೆಂದು ಅಲ್ಲಿಯ ಬೇರೆ ಅನೇಕ ಸ್ಥಾನಿಕ ಸಮಗತಿಗಳಿಂದಲೂ ಅನುಮಾನವಾಗುತ್ತದೆ.. ಆದುದರಿಂದ, ಈ ಗೋವಳರು ಕಂನಾಡ ತುರಕಾರ-ದನಗಾರರೆಂದು ಹೇಳಬೇಕಾಗುತ್ತದೆ.

*ವಿವರಗಳಿಗೆ : ಡಾ. ಆರ್. ಶೇಷಶಾಸ್ತ್ರಿ ೨೦೦೪ ಕರ್ನಾಟಕದ ವೀರಗಲ್ಲುಗಳು ಪುಟ. ೨೨-೨೩*
*ಶಂಬಾ ಜೋಶಿ ೧೯೯೯ ಹಾಲುಮತ ದರ್ಶನ ಸಂಪುಟ. ೩ ಪುಟ. ೨೦*

### ೩.೬೯. ತುರುಪಟ್ಟಿ

*ಅನ್ನೆಗಮಾ ತುಱುಪಟ್ಟಿಯುಮಲ್ಲಿಂದರ್ದು ನಾಡೆಗಂಟು ಪೋದತ್ತು ಪೋದಡೆ ಧರ್ಮಕೀರ್ತಿಭಟಾರರ ಪೆಱತೊಂದು ತುಱುಪಟ್ಟಿಗೆ ಪೋದರ್..........*

*(ಡಿ.ಎಲ್. ನರಸಿಂಹಾಚಾರ್ ೨೦೦೯ ಪುಟ. ೧೪೭)*

ತುಱುಪಟ್ಟಿಯೆಂದರೆ ತುರುಸಮೂಹ. ತುರುಗಳನ್ನು ಕಾಯುವವರು ಗೊಲ್ಲರು. ಗೊಲ್ಲರು ಒಂದೆಡೆ ನಿಲ್ಲುವವರಲ್ಲ ವಲಸೆಗಾರರು. ಅದನ್ನು ವಡ್ಡಾರಾಧನೆಯಲ್ಲಿ ಹೇಳಲಾಗಿದೆ. ಗೊಲ್ಲರದು ಗುಂಪುಜೀವನ ಪದ್ಧತಿ. ಮತ್ತು ಹಸುಕರುಗಳ ಮೇವಿಗಾಗಿ ಊರಿಂದ ಊರಿಗೆ ಹೋಗುತ್ತಿರುತ್ತಾರೆ.

### ೩.೭೦. ತುಳಾಭಾರ

ತನ್ನ ತೂಕಕ್ಕೆ ಸಮಾನವಾದ ತೂಕವನ್ನು ದಾನ ಮಾಡುವುದು ಎಂಬುದನ್ನು ಪಂಪ ತುಳಾಭಾರ ಎಂದು ಕರೆದಿದ್ದಾನೆ. (ಪಂಪ ಭಾರತ ೧೨-೪೦ವ)

ತಕ್ಕಡಿಯಲ್ಲಿ ಒಂದು ಕಡೆ ಮನುಷ್ಯನಿದ್ದು ಮತ್ತೊಂದು ಕಡೆ ಅದಕ್ಕೆ ಸಮವಾದ ಸಂಪತ್ತನ್ನು ಹೇರಿದರೆ ಅದು ತುಲಾಭಾರವೆನಿಸುತ್ತದೆ. ತುಲಾಭಾರವನ್ನು ಸಾಮಾನ್ಯವಾಗಿ ಹರಕೆಯ ಸಂದರ್ಭದಲ್ಲಿ ಆಚರಿಸುತ್ತಾರೆ. ಸಾಮಾನ್ಯವಾಗಿ ಅಕ್ಕಿ, ಬೆಲ್ಲ, ತೆಂಗಿನಕಾಯಿ ಮುಂತಾದ ವಸ್ತುಗಳನ್ನು ತುಲಾಭಾರಕ್ಕೆ ಬಳಸುತ್ತಾರೆ. ಉಪ್ಪಿನ ತುಲಾಭಾರದ ಹರಕೆಯೂ ರೂಢಿಯಲ್ಲಿದೆ ಎಂಬುದು ವಿಶೇಷ. ಅವರವರ ಶಕ್ತ್ಯನುಸಾರ ಈ ಹರಕೆಯನ್ನು ಆಚರಿಸುತ್ತಾರೆ.

೩೭೧. ತುಬಿಲ್

'.........ತುಬಿಲ್ ಪರಕೆಯ ಸಮಾನ ಪ್ರತಿ ಪತ್ತಿಯಂ.........'

ಪಂಪ "ತುಬಿಲ ಪರಕೆಯ" ಸಮಾನವೆಂದು ಬಳಸಿದ್ದಾನೆ.

(ಪಂಪ ಭಾರತ ೬-೩೩೮)

ಪರಕೆಯೆಂದರೆ ಹರಕೆ. ತುಬಿಲವೆಂದರೆ ಪೂಜೆ, ಸೇವೆ; ನಮಸ್ಕಾರ ದೇವರಿಗೆ ಹರಕೆ(ಪರಕೆ)ಯೊಪ್ಪಿಸುವ ಪದ್ಧತಿಯು ಹಿಂದಿನಿಂದಲೂ ಚಾಲ್ತಿಯಲ್ಲಿತ್ತು.

ಹರಕೆಯು ಪೂಜೆ, ಹಣ, ಉರುಳು ಸೇವೆ ಮುಂತಾದ ರೀತಿಯಲ್ಲಿರುತ್ತವೆ. ಶಿಷ್ಟದೇವರಿಗೆ ಒದಗಿಸುವ ಹರಕೆಯು ಸಾತ್ವಿಕ ರೂಪದಲ್ಲಿರುತ್ತದೆ. ಉಗ್ರದೇವತೆಯರಿಗೆ ಪ್ರಾಣಿ ಬಲಿಯೇ ಹರಕೆ, ಮುಡಿಪು ಇಡುವುದು ಎಂದರೂ ಹರಕೆ. ಭಯ ನಿವಾರಣೆ, ರೋಗನಿವಾರಣೆ ಮುಂತಾದ ಕಾರಣಕ್ಕೆ ಹರಕೆಯನ್ನು ಹೇಳುತ್ತಾರೆ. ಹರಕೆಯು ಮನುಷ್ಯನಿಗೆ ಧೈರ್ಯ ತುಂಬುತ್ತದೆ ಮತ್ತು ಹರಕೆ ಹೇಳುವುದರ ಮೂಲಕ ಮನುಷ್ಯ ತನ್ನ ಅಭೀಷ್ಟವನ್ನು ನೆರವೇರಿಸಿಕೊಳ್ಳಲು ದೇವರ ಮೇಲೆ ಭಾರ ಹಾಕುತ್ತಾನೆ.

೩೭೨. ತೆರಿಗೆ

ಸಾಧುಗಳು, ಬ್ರಾಹ್ಮಣರು, ಮಠಗಳು ಮತ್ತು ವಿದ್ಯಾಪೀಠಗಳು ಕರವನ್ನು ಕೊಡುತ್ತಿರಲಿಲ್ಲ. ಕ್ಷಾಮ ಇತ್ಯಾದಿಗಳು ಬಂದರೆ ಕಂದಾಯ ತೆಗೆದುಕೊಳ್ಳುತ್ತಿರಲಿಲ್ಲ. ಭೂಕಂದಾಯವಲ್ಲದೆ ಖನಿ, ಉಪ್ಪು, ಅರಣ್ಯ ಮದಿರಾ, ಸೂನಾಗೃಹಗಳು. ಆಮದು ರಫ್ತಗಳಿಂದ ರಾಜ್ಯಾದಾಯ ಹೆಚ್ಚಿಸಬಹುದೆಂದು ಕೌಟಿಲ್ಯನು ಹೇಳುತ್ತಾನೆ.

ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ನವರತ್ನ, ಹೂವು ಹಣ್ಣು, ತರಕಾರಿ, ಕಬ್ಬು, ವನಸ್ಪತಿಗಳು, ಮೃಗ ಪಕ್ಷಿಗಳ ಮಾರಾಟ, ಕುದುರೆ, ಒಂಟೆ, ಕುರಿ, ಆಡು, ಸುರಾ, ಸೂನಾ, ಸೂತ್ರ, ತೈಲಗಳಿಗೆ ಸುಂಕವಿತ್ತು ಎಂದು ಬರುತ್ತದೆ.

ರಾಜ್ಯದ ಆದಾಯವು ವಿವಿಧ ವಸ್ತುಗಳು, ವೃತ್ತಿಗಳು, ಆಸ್ತಿಗಳು, ಸಾಮಾಜಿಕ ಕಾರ್ಯಗಳು, ಮುಂತಾದವುಗಳ ಮೇಲೆ ವಿಧಿಸಲಾಗುತ್ತಿದ್ದ ಸುಂಕವನ್ನು 'ತಳಭಂಡದ ಸುಂಕ' ಎಂಬುದಾಗಿ ಕರೆಯುತ್ತಿದ್ದರು. ಅನಂತರ ಯಾವ ಯಾವ ಸಾಮಗ್ರಿಗೆ ಎಷ್ಟು ಸುಂಕ, ಈ ಸುಂಕವು ಹಣದ ರೂಪದಲ್ಲಿ ಬರಬೇಕೆ ಅಥವಾ ವಸ್ತುಗಳ ರೂಪದಲ್ಲಿ ಬರಬೇಕೆ ಎಂಬುದನ್ನು ನಮೂದಿಸುತ್ತಿದ್ದರು. ಈ ಕುರಿತು ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ವಿವರವಿದೆ.

ವಿವಿಧ ವೃತ್ತಿಗಳ ಮೇಲೆ ಸುಂಕವನ್ನು ವಿಧಿಸುತ್ತಿದ್ದರು. 'ಕುಱುಂಬ ದೆಱೆ' ಕುರುಬರು ಕೊಡಬೇಕಾದ ತೆರಿಗೆ, 'ಮಾದಾಱೆಕೆ' ಬಿದಿರಿನ ಕೆಲಸದವರು ನೀಡಬೇಕಾದ ತೆರಿಗೆ, 'ಕೂಡತಿವಣ' 'ಅಕ್ಕಸಾಲಿಯಾಯ' ಬಡಗಿಗಳ ಮತ್ತು ಕಮ್ಮಾರ ಮೇಲೆ ವಿಧಿಸಿದ ತೆರಿಗೆ. 'ಒಕ್ಕಲುದೆಱೆ' ಹಾಗೆಯೇ ಎಣ್ಣೆ ಮತ್ತು ಕಬ್ಬಿನ ರಸವನ್ನು ತೆಗೆಯುತ್ತಿದ್ದ ಗಾಣಗಳ ಮೇಲೆ ವಿಧಿಸುತ್ತಿದ್ದ ತೆರಿಗೆ 'ಗಾಣದ ಸುಂಕ' 'ಆಲೆಯ ಸುಂಕ'.

ಸಾಮಾಜಿಕ ಕಾರ್ಯಗಳಾದ – ಮದುವೆ, ಮುಂಜಿ ಮುಂತಾದ ಆಚರಣೆಗಳ ಮೇಲೂ ಸುಂಕವನ್ನು ವಿಧಿಸುತ್ತಿದ್ದರು. ಇವುಗಳಲ್ಲದೆ ಇತರೇ ಸಣ್ಣ ಸಣ್ಣ ವಸ್ತುಗಳ ಮೇಲೆ ವಿಧಿಸುತ್ತಿದ್ದ ಸುಂಕಗಳನ್ನು ಒಟ್ಟಾಗಿ ಸೇರಿಸಿ 'ಕಿಱುಕುಳ' ಎಂಬುದಾಗಿ ಕರೆಯಲಾಗಿದೆ.

ಅರಸನಾದವನು ಸೈನ್ಯ ಸಮೇತ ಪ್ರಯಾಣ ಹೊರಟಾಗ ಆಯಾ ಗ್ರಾಮದ ಜನರು. ಅರಸರ ನಿರೂಪದಿಂದ ಬಂದ ಕೆಲಸವನ್ನು ಯಾವ ಪ್ರತಿಫಲವೂ ಇಲ್ಲದೆ ಮಾಡಿಕೊಡಲೇಬೇಕಿತ್ತು. ಹಾಗೆ ಮಾಡದಿದ್ದರೆ ಬಲವಂತವಾಗಿಯಾದರೂ ಮಾಡಿಸುತ್ತಿದ್ದರು. ಇಂಥ ಕೆಲಸವನ್ನು 'ಬಿಟ್ಟಿ' ಎಂಬುದಾಗಿ ಕರೆಯಲಾಗಿದೆ. ಈ 'ಮೂವಿಟ್ಟಿ' ಎಂಬ ಪದ ಮೂರು ರೀತಿಯ ಬಿಟ್ಟಿ ಕೆಲಸಗಳನ್ನು ಸೂಚಿಸುವ ಪ್ರಯೋಗವಾಗಿದೆ ಎಂದು ಶೇಷಶಾಸ್ತ್ರಿಯವರು ಹೇಳುತ್ತಾರೆ.

ಕೆಲವೊಂದು ತೆರಿಗೆಗಳು ಈ ಕೆಳಗಿನಂತಿವೆ.

| | |
|---|---|
| ಫಲವತ್ತಾದ ಭೂಮಿಯ ಮೇಲೆ ಹಾಕುತ್ತಿದ್ದ ತೆರಿಗೆ | ಸಿದ್ಧಾಯ |
| ಮನೆಯ ಮೇಲೆ ಹಾಕುತ್ತಿದ್ದ ತೆರಿಗೆ | ಮನೆದೆರೆ |
| ವ್ಯಾಪಾರ ಸಾಮಾಗ್ರಿಗಳ ಮೇಲಿನ ತೆರಿಗೆ | ವಡ್ಡರಾವುಳ |
| ಅಮದು ವಸ್ತುಗಳ ಮೇಲಿನ ತೆರಿಗೆ | ಒಳಸುಂಕ |
| ರಫ್ತು ಮೇಲಿನ ಸುಂಕ | ಹೊರಸುಂಕ |
| ವ್ಯಾಪಾರಿಗಳು ತಳವಾರನಿಗೆ ಕೊಡಬೇಕಾದ ಸುಂಕ | ತಳರಸುಂಕ |
| ಎತ್ತಿನ ಬಂಡಿ, ಕುದುರೆ ಬಂಡಿ ಮುಂತಾದ ಬಂಡಿಗಳ ಮೇಲಿನ ತೆರಿಗೆ | ಬಂಡಿದೆರೆ |
| ಕುಶಲಕರ್ಮಿಗಳ ಮೇಲಿನ ವೃತ್ತಿತೆರಿಗೆ | ಪಂಚಾಳ ತೆರಿಗೆ, ಪಂಚಕಾರುಕದೆರೆ |
| ಬಡಗಿಗಳ ಮೇಲೆ ವಿಧಿಸುತ್ತಿದ್ದ ತೆರಿಗೆ | ಬಡಗಿದೆರೆ |
| ಕಮ್ಮಾರರ ಮೇಲೆ ವಿಧಿಸುತ್ತಿದ್ದ ತೆರಿಗೆ | ಕಮ್ಮಾರ ಸುಂಕ, ಕುಲುಮೆದೆರೆ, ಕಬ್ಬುಣದೆರೆ |
| ಅಕ್ಕಸಾಲಿಗರ ಮೇಲೆ ವಿಧಿಸುತ್ತಿದ್ದ ತೆರಿಗೆ | ಅಕ್ಕಸಾಲಿಯಾಯ, ಸುವರ್ಣಾಯ |
| ಅಕ್ಕಸಾಲಿಗರು ಮತ್ತು ಕಮ್ಮಾರರು ವಸ್ತುಗಳ ಉತ್ಪಾದನೆಗೆ ಬಳಸುತ್ತಿದ್ದ ಉಪಕರಣಗಳ ಮೇಲಿನ ತೆರಿಗೆ | ಅಡೆಕಲುವಣ, ಅಚ್ಚಿನಕಮ್ಮಟದೆರೆ |
| ಗಾಣದ ಮೇಲಿನ ತೆರಿಗೆ | ಗಾಣದ ತೆರೆ |
| ನೇಕಾರರ ಮೇಲಿನ ತೆರಿಗೆ | ಮಗ್ಗದೆರೆ |

| | |
|---|---|
| ಬೆಲ್ಲದ ಮೇಲಿನ ತೆರಿಗೆ | ಆಲೆದೆರೆ |
| ಉಪ್ಪು ತಯಾರಿಕೆಯ ಮೇಲಿನ ತೆರಿಗೆ | ಲವಣಾಯ |
| ಕಬ್ಬಿಣದ ಮೇಲಿನ ತೆರಿಗೆ | ಕರ್ಬುಣ ಸುಂಕ |
| ಕಳ್ಳರ ಮೇಲೆ ಹಾಕುತ್ತಿದ್ದ ದಂಡ | ಕಳ್ಳವಳಿಗೆ |
| ವೇಶ್ಯೆಯರ ಮೇಲಿನ ತೆರಿಗೆ | ಸೂಳೆದೆರೆ |
| ಕುರುಬರ ಮೇಲೆ ಹಾಕುತ್ತಿದ್ದ ತೆರಿಗೆ | ಕುರುಂಬದೆರೆ |
| ಚಿಪ್ಪಿಗರ ಮೇಲೆ ಹಾಕುತ್ತಿದ್ದ ತೆರಿಗೆ | ಕತ್ತರಿವಣ |
| ಸೈನಿಕರ ವಸತಿಗಳ ಮೇಲಿನ ತೆರಿಗೆ | ಆಳಿವಸತಾಯ |
| ಸಾರ್ವಜನಿಕ ಕೆಲಸಗಳ ತೆರಿಗೆ | ಊರುಟ್ಟಿಗೆ |
| ಹಬ್ಬಕ್ಕೆಂದು ವಿಧಿಸುತ್ತಿದ್ದ ತೆರಿಗೆ | ಒಸಗೆ |
| ಅಟ್ಟ (ಮಹಡಿ)ವನ್ನು ಹೊಂದಿದ್ದಕ್ಕೆ ತೆರಿಗೆ | ಅಟ್ಟದೆರೆ |
| ಮಾನ್ಯ ಮಾಡಿದ ಭೂಮಿಗಳ ಮೇಲಿನ | ಅರುವಣ |
| ತುಪ್ಪದ ಮೇಲಿನ ತೆರಿಗೆ | ತುಪ್ಪದೆರೆ |
| ತಿಪ್ಪೆಗಳ ಮೇಲಿನ ಸುಂಕ | ತಿಪ್ಪೆಸುಂಕ |
| ಬಣವೆಗಳ ಮೇಲಿನ ತೆರಿಗೆ | ಬಳಂಬೆಯತೆರೆ |
| ದೈಹಿಕ ಶ್ರಮಕ್ಕೆ ವಿಧಿಸುತ್ತಿದ್ದ ತೆರಿಗೆ | ಬಿಟ್ಟಿಬೆಸ |
| ಪ್ರಾಣಿಗಳ ಮೇಲೆ ಸಾಮಾನು ಸಾಗಿಸುವುದರ ಮೇಲಿನ ತೆರಿಗೆ | ಬಿಲ್ಕೊಡೆ |
| ಮದುವೆಗಳ ಮೇಲಿನ ತೆರಿಗೆ | ಮದುವೆದೆರೆ |
| ಹಾಲು ಕೊಡುತ್ತಿದ್ದ ಹಸುವಿನ ಮೇಲಿನ ತೆರಿಗೆ | ಹಾಲಾವು |
| ಹೊಲೆಯರ ಮೇಲೆ ವಿಧಿಸುತ್ತಿದ್ದ ತೆರಿಗೆ | ಹೊಲೆದೆರೆ |
| ರಾಣಿ ಹಳ್ಳಿಗೆ ಬಂದಾಗ ಕೊಡಬೇಕಾದ ಕಾಣಿಕೆ | ದೇವಿದೆರೆ |
| ಯುವರಾಜನು ಊರಿಗೆ ಬಂದಾಗ ಕೊಡುವ ತೆರಿಗೆ | ಕುಮಾರಗದ್ಯಾಣ |
| ಹಿರಿಯ ಅಧಿಕಾರಿಗಳು ಊರಿಗೆ ಬಂದಾಗ ಕೊಡುವ ತೆರಿಗೆ | ಕಾಣಿಕೆ |
| ಭತ್ತದ ಮೇಲಿನ ತೆರಿಗೆ | ಭತ್ತಾಯ |
| ವೀಳ್ಯದೆಲೆ ಬಳ್ಳಿಗಳ ಮೇಲಿನ ತೆರಿಗೆ | ಪನ್ನೆಯ |
| ರಾಜರ ಆನೆಗಳ ಮೇಲಿನ ತೆರಿಗೆ | ಆನೆಸೇಸೆ |
| ಆಡುಗಳ ಮೇಲಿನ ತೆರಿಗೆ | ಆಡುದೆರೆ |
| ಕುರಿಗಳ ಮೇಲಿನ ತೆರಿಗೆ | ಕುರಿದೆರೆ |
| ಹೇರುಗಳ ಮೇಲೆ ಹಾಕುತ್ತಿದ್ದ ಸುಂಕ | ಪೆರ್ಜುಂಕ |
| ಅಧೀನರಾಜನಿಗೆ ಪೋಷಕನಾದ ತೆರಿಗೆ | ಮನ್ನೆಯ |
| ನೀರಾವರಿ ಕೆರೆಯ ಮೇಲಿನ ತೆರಿಗೆ | ಕೆರೆ |

| | |
|---|---|
| ಖಾಯಂ ಅಂಗಡಿಯ ಮೇಲಿನ ತೆರಿಗೆ | ಅಂಗಡಿ ಆಯ ಅಥವಾ ಅಂಗಡಿದೆರೆ |
| ಸಂತೆಗೆ ಬರುವ ವಸ್ತುಗಳ ಮೇಲಿನ ಸುಂಕ | ಸಂತೆಯ ಸುಂಕ ಅಥವಾ ಸಂತೆಯ ಆಯ |
| ಸಾರಿಗೆ ತೆರಿಗೆ | ಕೀಳ್ವಟ್ಟೆಸುಂಕ, ಮೇಲ್ವಟ್ಟೆ ಸುಂಕ |
| ವರ್ತಕರ ಮೇಲಿನ ತೆರಿಗೆ | ವರ್ತಕರ ಸುಂಕ, ಸೆಟ್ಟಿದೆರೆ, ಸೆಟ್ಟಿವಣ |
| ಕುದುರೆ ಅಥವಾ ಬೇರೆ ಪ್ರಾಣಿ ಕಟ್ಟುಸ್ಥಳದ ಮೇಲಿನ ತೆರಿಗೆ | ನೆಲಮೆಟ್ಟು |

ಅರಸನಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಭೂಸರ್ವೇಕ್ಷಣೆ ಮಾಡಿದ ನಂತರ ತೆರಿಗೆಯನ್ನು ನಿಗದಿಪಡಿಸುತ್ತಿದ್ದರು. ಈ ಅಧಿಕಾರಿಗಳನ್ನು ರಾಜನ ಜನರು ಎಂಬುದಾಗಿ ಉಲ್ಲೇಖಿಸಲಾಗಿದೆ. ರಾಷ್ಟ್ರಕೂಟ ಅರಸರು ಭೂಮಾಲೀಕರಾಗಿದ್ದ ಕೆಲವು ಗಣ್ಯರನ್ನು ಸರಕಾರದ ನಿಯೋಗಿಗಳಾಗಿ ತೆರಿಗೆ ವಸೂಲಿ ಮುಂತಾದ ಸರಕಾರಿ ಕೆಲಸಗಳಿಗೆ ನಿಯೋಜಿಸುತ್ತಿದ್ದರು. ಶ್ರೀಕರಣರು ಕಂದಾಯಾಧಿಕಾರಿಗಳಾಗಿದ್ದು, ಕೆಲವೊಮ್ಮೆ ನಾಡಗಂವುಡರಾಗಿಯೂ ಕೆಲಸ ನಿರ್ವಹಿಸುತ್ತಿದ್ದರು. ಇವರು ಭೂ ಸಂಬಂಧವಾದ ಅನೇಕ ಅಧಿಕಾರಿಗಳನ್ನು ಹೊಂದಿದ್ದರು. ರಾಷ್ಟ್ರಕೂಟ ಅರಸರು ಸ್ಥಳೀಯ ಹಂತಗಳಲ್ಲಿ ನಾಡಗವುಂಡರು, ಪೆರ್ಗಡೆಗಳು ಹಾಗೂ ಅವರಿಗಿಂತ ಸ್ವಲ್ಪ ಕೆಳಗಿನ ಗಣ್ಯರಿಗೆ ತೆರಿಗೆ ವಸೂಲಿ ಮಾಡುವ ಅಧಿಕಾರವನ್ನು ನೀಡಿದ್ದರು. ಇವರೆಲ್ಲರೂ ಜಮೀನುದಾರ ಕುಟುಂಬಕ್ಕೆ ಸೇರಿದವರಾಗಿದ್ದರು. ಹೊಯ್ಸಳರ ಆಳ್ವಿಕೆಯಲ್ಲೂ ಇದೇ ರೀತಿಯ ಆಡಳಿತ ಕ್ರಮ ಅಸ್ತಿತ್ವದಲ್ಲಿತ್ತು ಎಂದು ಮೋಹನ ಕೃಷ್ಣ ರೈ ಹೇಳುತ್ತಾರೆ.

ಯಾವುದೇ ರಾಜಕೀಯ ವ್ಯವಸ್ಥೆಯು ತನ್ನ ಬೊಕ್ಕಸವನ್ನು ತುಂಬಿಸಿಕೊಳ್ಳಲು ತೆರಿಗೆ ಪದ್ಧತಿಯನ್ನು ಜಾತಿಗೆ ತರುತ್ತದೆ. ಮೇಲೆ ಉಲ್ಲೇಖಿಸಿದಂತೆ ತೆರಿಗೆ ಬೇರೆ ಬೇರೆ ರೀತಿಯಲ್ಲಿರುತ್ತವೆ. ತೆರಿಗೆಯನ್ನು ಕಂದಾಯವೆಂದೂ ಇಂಗ್ಲಿಷಿನಲ್ಲಿ Revenue ಅಥವಾ Tax ಎಂದೂ ಕರೆಯುತ್ತಾರೆ. ರಾಜ ಪ್ರಭುತ್ವದಲ್ಲಿ ತೆರಿಗೆಯು ಆಯಾ ರಾಜನ ಮರ್ಜಿಗೆ ಅನುಸಾರವಾಗಿ ರೂಪುಗೊಳ್ಳುತ್ತಿತ್ತು. ಬ್ರಿಟೀಶರು ಬಂದ ಮೇಲೆ ತೆರಿಗೆಗೆ ಕಾನೂನುಬದ್ಧ ರೂಪವು ದೊರೆಯಿತು. ಕಂದಾಯವು ಮಾತ್ರ ಯಾವುದೇ ರಾಜಕೀಯ ಸಂದರ್ಭದಲ್ಲಿ ಆರ್ಥಿಕ ಮತ್ತು ಸಂಪನ್ಮೂಲ ಕ್ರೋಢೀಕರಣದಲ್ಲಿಯೇ ಇರುತ್ತದೆ. ರಾಜಕೀಯ ಅಧಿಕಾರದ ಎರಡು ಮುಖ್ಯ ಶಕ್ತಿಯೆಂದರೆ ಅಧಿಕಾರ ಮತ್ತು ಆರ್ಥಿಕತೆ. ಅಧಿಕಾರಕ್ಕೆ ಒಂದು ರೂಪವಿದ್ದರೆ ಆರ್ಥಿಕತೆಯು ರಾಜಕೀಯದ ಒತ್ತಾಸೆಪಡು (Maintance) ಎಂಬುದನ್ನು ಸೂಚಿಸುತ್ತದೆ. ಈ ದೃಷ್ಟಿಯಿಂದ ರಾಜ್ಯವು ಆರ್ಥಿಕ ಮೂಲ ಕಂದಾಯವೇ ಆಗಿದೆ.

ಜಾನಪದರಿಂದ, ಸೀತಾ ಭೂಮಿಗಳಿಂದ ಆದಾಯವನ್ನು ಸಂಗ್ರಹಿಸಬೇಕು. ಈ ಆದಾಯವನ್ನು ಅಧಿಕಾರ ವರ್ಗದ ಅಗತ್ಯಗಳಾದ ವಿಲಾಸ ವಸ್ತುಗಳನ್ನಾಗಿ ಪರಿವರ್ತಿಸ ಬೇಕು. ಆದಾಯವನ್ನು ವಸೂಲು ಮಾಡುವ ಉದ್ಯೋಗಿಗಳಿಗೆ ಕೆಲವು ಗ್ರಾಮಗಳನ್ನು ಮಾನ್ಯವಾಗಿಯೋ, ಜಾಗೀರಾಗಿಯೋ ಕೊಟ್ಟ. ಆ ಗ್ರಾಮದ ಆದಾಯವನ್ನು ಅವರು ವಸೂಲು ಮಾಡಿಕೊಳ್ಳಬೇಕಾದ ಏರ್ಪಾಡು (ನಮ್ಮ ದೇಶದಲ್ಲಿ ಭೂಮಾಲೀಕ ವ್ಯವಸ್ಥೆಗೆ ಕೀಲಿಗೈಯಾದ ಏರ್ಪಾಡು) ಆಗಿನ್ನೂ ಸಾಧ್ಯಗೊಂಡಿರಲಿಲ್ಲ. ಉತ್ಪಾದಕತೆ ಇನ್ನೂ ಗಮನ ಸೆಳೆಯುವಷ್ಟೇನೂ ಬೆಳೆದಿರಲಿಲ್ಲ. ಅಲ್ಲದೆ, ಜಾನಪದರನ್ನೂ, ಸೀತಾ ಭೂಮಿಯನ್ನೂ ಎದುರು ಹಾಕಿಕೊಂಡರೆ, ಕೃಷಿಯೋಗ್ಯವಾಗಿ ಮಾಡಬೇಕಾಗಿದ್ದ ಎಷ್ಟೋ ಅರಣ್ಯಭಾಗಗಳು ಹಾಗೆಯೇ ಉಳಿದು ಬಿಡುತ್ತದೆ. ಅಂದರೆ ಹೆಚ್ಚುವರಿ ಉತ್ಪನ್ನವು ಸಾಕಷ್ಟು ಏರುವವರೆಗೂ, ಹೀಗೆ ಆ ಉದ್ಯೋಗಿಗಳನ್ನು ಸಾಕುವುದು ಸಾಧ್ಯವಾಗು ವಂತಿರಲಿಲ್ಲ. ಇಂತಹ ಸ್ಥಿತಿಯಲ್ಲಿ ಶಿಸ್ತಿನ ಹತೋಟಿಯೆಲ್ಲವೂ ಸಂಪೂರ್ಣವಾಗಿ ಪ್ರಭುತ್ವದ ಹಿಡಿತದಲ್ಲಿ ಕೇಂದ್ರಿಕೃತವಾಗಿರಬೇಕು. ವಸೂಲಿ ಮಾಡುವ ಉದ್ಯೋಗಿಗಳಿಗೆ ನೌಕರಿ ಮಾತ್ರವೇ ಸಿಗುವುದು ಸಾಧ್ಯ ಎಂಬುದು ಡಿ. ಡಿ. ಕೊಸಾಂಬಿಯವರ ಅಭಿಪ್ರಾಯ.

*ವಿವರಗಳಿಗೆ ನೋಡಿ: ಶ್ರೀ ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳು ೨೧೧೦*
*ಕೌಟಲೀಯ ಅರ್ಥಶಾಸ್ತ್ರ ಪುಟ. ೨೮*
*ಮೋಹನಕೃಷ್ಣ ರೈ ೨೦೦೪ ಪ್ರಭುತ್ವ ಮತ್ತು ಜನತೆ ಪುಟ. ೨೫–೨೭*
*ಡಿ.ಡಿ. ಕೊಸಾಂಬಿ ೧೯೬೮ ಪ್ರಾಚೀನ ಭಾರತದಲ್ಲಿ ಚರಿತ್ರೆ ಪುಟ. ೧೮೮*
*ಶ್ರೀ ಶೇಷಶಾಸ್ತ್ರಿ ೨೦೦೫ ಶಾಸನ ಪರಿಚಯ ಪುಟ. ೭೨*

**೩.೭೩. ತೇದಿ**

ಕ್ರಿ.ಶ. ೯ನೆಯ ಶತಕದಿಂದ, ಅಥವಾ ಅದಕ್ಕೂ ಹಿಂದಿನಿಂದೇನೋ, ಜಿನದತ್ತರಾಯನ ಕುಲದವರೆಂಬ ಶಾಂತರ ವಂಶದ ಅರಸರು ಮೈಸೂರು ಸೀಮೆಯಲ್ಲಿಯ ಶಿವಮೊಗ್ಗೆ ಜಿಲ್ಲೆಯ ನಗರ ತಾಲೂಕಿನ ಹುಂಬಚ್ಚದ ರಾಜಧಾನಿಯಿಂದ ಸಾಂತಳಿಗೆ ನಾಡನ್ನು ಆಳುತ್ತಿದ್ದರು. ಕಳಸ–ಕಾರ್ಕಳದ ಭೈರರಸರು, ಅಥವಾ ಭೈರಸ ಒಡೆಯರು ಕೂಡ ಅವರ ವಂಶಜರು, ಹಾಗೂ ಅವರಂತೆಯೇ ಚಂದ್ರವಂಶೀಯರು. ಈ ಭೈರರಸರು ಕ್ರಿ.ಶ. ೧೩ನೆಯ ಶತಕದಿಂದ ಮೈಸೂರು ಸೀಮೆಯಲ್ಲಿಯ ಕಡೂರು ಜಿಲ್ಲೆಯ ಮೂಡಗೆರೆ ತಾಲೂಕಿನ ಕಳಸದ ರಾಜ್ಯವನ್ನೂ, ಆಬಳಿಕ ಕ್ರಿ.ಶ. ೧೫೧೬ರಿಂದೇನೋ 'ಘಟ್ಟದ ಮೇಲೆ ಘಟ್ಟದ ಕೆಳಗೆ' ಕಳಸ–ಕಾರ್ಕಳದ ರಾಜ್ಯವನ್ನೂ, ಅಂದರೆ ತುಳುವ ದೇಶದ ಕಾರ್ಕಳದ ಸೀಮೆಯನ್ನೂ ಆಳುತ್ತಿದ್ದರು. ಆಗ್ಗೆ ಘಟ್ಟದ ಮೇಲೆ ಅವರ ರಾಜಧಾನಿ ಕಳಸ, ಘಟ್ಟದ ಕೆಳಗೆ ಕಾರ್ಕಳ. ಅವರಲ್ಲಿ ಎಲ್ಲವರಿಗೆಂಬಂತೆ 'ಅರಿರಾಯ(ರ) ಗಂಡರ ದಾವಣಿ (ಧಾವಣಿ–ಡಾವಣಿ)' ಎಂಬ ಬಿರುದೂ ಇದ್ದಿತು, ಹಲವರಿಗೆ ಹೆಚ್ಚು ಕಡಿಮೆ ವರಿಸೆಯಾಗಿ ಎಂಬಂತೆ (ವೀರ) ಪಾಂಡ್ಯ ಹಾಗೂ (ವೀರ) ಭೈರರಸ ಎಂಬ

ಪಟ್ಟನಾಮಗಳೂ ಇದ್ದುವು.

ತುಳುನಾಡಿನ ಕಾರ್ಕಳ (ಕಾರ್ಕಳ)ದಲ್ಲಿರುವ ಕೆರೆಬಸದಿಯ ಪ್ರಾಕಾರದಲ್ಲಿಯ ಶಾಸನದ ಪ್ರಸ್ತಾವದ ಅವೆರಡು ಶಾರ್ದೂಲ ವಿಕ್ರೀಡಿತ ವೃತ್ತಗಳು ಮತ್ತು ಆಮೇಲಣ ಕನ್ನಡ ವಚನದಿಂದ–

ಶ್ರೀಮತ್ಸೋಮ ಕುಲಾಂಬರಸ್ಯ ತರಣಿಃ ಶ್ರೀ ಜೈನದತ್ತಾನ್ವಯಃ
ಶ್ರೀಮದ್ಭೈರವರಾಜ ಷಟ್ಟಭಗಿನೀ ಶ್ರೀ ಚಂದಲಾಂಬಾಸುತಃ ।
ಶ್ರೀ ಮದ್ಭೋಜ ನರೇಂದ್ರ ಸುನ್ನಿಭಯಶಾಃ ಶ್ರೀ ಪಾಂಡ್ಯ ಪ್ರಥ್ವೀಪತಿಃ
ಶ್ರೀ ಮಜ್ಜೈನ ನಿಕೇತನಂ ರಚಿತವಾನಾಮ್ನಾ ಚತುರ್ಬ್ಬದ್ರಕಂ ॥೩॥
ಸ್ವಸ್ತಿ ಶ್ರೀ ಶಕರಾಜಕಾಲವಿಗತೇ ಶೈಲರ್ತು ವೇದೇಂದುಭಿಃ
ಕ್ರೋಧ್ಯಬ್ದೇ ಶುಭಲಗ್ನ ಯೋಹಕರಣೇ ಮಾಘೇ ಸಿತೇ ತುರ್ಯ್ಯಕೇ ।
ವಾರೇ ಭಾನು ಸಮಾಭಿಧಾನ ಕರಭೇ ಶ್ರೀ ಪಾಂಡ್ಯ ಭೂಸ್ವಾಮಿನಾ
ಶ್ರೀಮದ್ಭದ್ರನಿವಾಸ ಮಧ್ಯ ಜಿನ ಸೌಖ್ಯಾಯ ಪ್ರತಿಷ್ಠಾಪಿತಾ ॥ ೪ ॥

॥೧೪೬೭॥ ಶಕ ವರುಷ ಸಂದಂದು ಕ್ರೋಧಿ ಸಂವತ್ಸರದ ಮಾಘ ಶುದ್ಧ ರವಿವಾರದಲು ಶ್ರೀ ಚಂದಲದೇವಿಯರ ಕುಮಾರ ಅರಿರಾಯ ಗಂಡರ ಧಾವಣಿ ಶ್ರೀ ವೀರ ಪಾಂಡ್ಯಪ್ಪೊಡೆಯರೂ ಕಾರ್ಕಳದ ಪಾಂಡ್ಯ ನಗರಿಯಲ್ಲೂ ಚತುರ್ಮ್ಮುಖದ ಬಸ್ತಿಯನೂ ಕಟ್ಟಿಸಿ – – – ದರೆಂಬಲ್ಲಿ, ಆ ಚತುರ್ಮುಖವಾದ ಕೆರೆ ಬಸದಿಯನ್ನು ಚಂದ್ರ ವಂಶದ ಹಾಗೂ ಜಿನದತ್ತರಾಯನ ಅನ್ವಯದ ಭೈರವ ರಾಜನ ಪಟ್ಟ ಸೋದರಿಯಾದ ಚಂದಲನಾದ ಅರಿರಾಯ ಗಂಡರ ಧಾವಣಿ ವೀರ ಪಾಂಡ್ಯ ಒಡೆಯನು ಶಾಲಿವಾದಲ್ಲಿ, 'ಅಂಕಾನಾಂ ವಾಮತೋ ಗತಿಃ' ಎಂಬ ನಿಯಮಾನುಸಾರವಾಗಿ ಋತು=೬, ಶೈಲ=೭, ವರ್ಷಗಳು ವಿಗತ=ಸಂದು, ಅಂದರೆ ಕನ್ನಡವಂತೆ ೧೪೬೭ ಶಕ ವರ್ಷಗಳು ಸಂದು, ಅಂದು ನಡೆಯುತ್ತಿದ್ದ 'ಕ್ರೋ ಸ್ವತ್ಯಮಾನದ ಪ್ರಭವಾದಿ ೬೦ ಸಂವತ್ಸರಗಳಲ್ಲಿ ೩೮ನೆಯದಾದ) ಕ್ರೋಧಿ 'ಮಾಘೇ ಸೀತೇ ತುರ್ಯ್ಯಕೇ' ಅಂದರೆ ಕನ್ನಡ ವಚನದಲ್ಲಿ ಅರುಹಿದ ಪ್ರಕಾ(ಚೌತಿ) ರವಿವಾರದಂದಿನ 'ಕರ+ಭೇ' ಅಂದರೆ ಕರ(=ಹಸ್ತ) +ಭೇದ ಅಶ್ವಿನ್ಯಾದಿ ನಕ್ಷತ್ರಗಳಲ್ಲಿ ೧೩ನೆಯದಾದ ಹಸ್ತ ನಕ್ಷತ್ರದಲ್ಲಿ ಪ್ರತಿಷ್ಠಾಪಿಸಿರುತ್ತದೆ. ಆದರೆ ಈ ಕಾಲವಿವರವು ತಕ್ಕಷ್ಟು ವಿಷಮವಾಗಿದೆ. ಏಕೆಂದರೆ–

೧) ಶಾಲಿವಾಹನ ಶಕದ ವರ್ಷಗಳನ್ನು ಪ್ರಾಯಿಕವಾಗಿ ಯಿಂದಲೇ ಸೂಚಿಸುವ ವಾಡಿಕೆಯ ಮೇರೆಗ ಇತ್ತೀಚೆಯ ಕ್ರೋಧಿ ಸಂವತ್ಸರ ೧೮೨೬=ಕ್ರಿ.ಶ. ೧೯೦೪–೫ ಎಂಬುದರಿಂದ, ಈ ಶಾಸನದ ಕ್ರೋಧಿ ವಣತೆ ಶಾ.ಶ(ವಿಗತ) ೧೪೬೭=ಕ್ರಿ.ಶ. ೧೫೪೫–೪೬ ಅಲ್ಲ, ನೇರಾಗಿ ೧೪೬೬ನೆಯ, ಅಂದರೆ ಕ್ರಿ.ಶ.೧೫೪೪–೪೫ನೆಯ ವರ್ಷವಾಗಿರ ಬೇಕು.

೨) ಶಾ.ಶ(ವಿಗತ) ೧೪೫೬ ಜಯ ಸಂವತ್ಸರ (ಸಂ)_ಕ್ರಿ೧೫೩೪–೩೫ರಿಂದ ಶಾ.ಶ(ಪಿಗತ) ೧೪೭೧ ಸೌಮ್ಯ ಸಂ–ಕ್ರ.ಶ. ಮಾಘ ಶುದ್ಧ ೪(ಚೌತಿ)ಯ ತಿಥಿ

ಯಾವಂದೂ ರವಿವಾರ ಬಂದಿರಲಿಲ್ಲ.

೩) ಆ ಪ್ರತಿಷ್ಠೆ ಕರ+ಭೇ=ಹದ್ತ+ನಕ್ಷತ್ರೇ, ಅಂದರೆ ಹಸ್ತತೆಂದೂ ಸ್ಪಷ್ಟವಿದೆ, ಹಾಗೂ ಅಮಾಂತ(ಅಂದರೆ ಪುಷ್ಯ ಬಹುಳ ಅಮಾಸದಿಂದ ಮಾಘ ಬಹುಳ ಅಮಾವಾಸ್ಯೆಯ ವರೆಗೂ) ಮಾಘ ಮಾಸದಲ್ಲಿ ತದಿಗೆ, ಬಹುಳ ಚೌತಿ, ಅಥವಾ ಬಹುಳ ಪಂಚಮಿಯಂದು ಬರಬೇಕಲ್ಲವೆ ಏಕೆ? ಆ ಮಾಸದ ಶುಕ್ಲ ಪಕ್ಷದಲ್ಲಿಯ ಯಾವ ತಿಥಿಯಲ್ಲೂ ಸರ್ವಥಾವಿದೆ. ಅತ ಏವ 'ಮಾಘೇ ಸಿತೇ ತುರ್ಯ್ಯಕೇ' ಎಂಬಲ್ಲಿ 'ಮಾಘೇಸಿತೇ' +ಅಸಿತೇ' ಎಂದು ಯಥಾವತ್ತಾಗಿ ಅವಗ್ರಹಿಸಿ, ಆ ಪ್ರತಿಷ್ಠೆ 'ಮಾಘೇ ಅಂದರೆ ಮಾಘ ಬಹುಳ ಚೌತಿಯಂದು ಆಯಿತೆಂದು ನೇರಾಗಿ ಅರ್ಥ; ಆತ ಏವ ಈ ಶಾಸನದಲ್ಲಿಯ ಕನ್ನಡ ವಚನದಲ್ಲಿ 'ಮಾಘ ಶುದ್ಧ' ಎಂದು ಬಹುಶಃ 'ವದ್ಯ'(=ಬಹುಳ)ದ ಎಡೆಯಲ್ಲಿ ತೀರ ತಪ್ಪಾಗಿ ಕೆತ್ತಲ್ಪಟ್ಟಿದೆ.

೪) ಮಾಘ ಬಹುಳ ಚೌತಿಯಾದರೂ ಶಾ.ಶ.(ವಿಗತ) ಸಂ=ಕ್ರಿ.ಶ. ೧೫೪೦-೪೧ರಲ್ಲಿ ಕ್ರಿ.ಶ.೧೫೪೧ನೆಯ ಜನವರಿ ೧೬ನೆಯ ಹಾಗೂ ಶಾ.ಶ.(ವಿಗತ) ೧೪೬೯ ಪ್ಲವಂಗ ಸಂ=ಕ್ರಿ.ಶ.೧೫೪೭-೪೮ರ ಜನವರಿ ೨೯ನೆಯ ತಾರೀಖು ರವಿವಾರ, ಹೀಗೆ ಈ ಎರಡು ದಿನ ಮಾತ್ರ ಗೂಡಿತ್ತಲ್ಲದೆ, ಆನಡುವೆ ಆ ತಿಥಿ ಯಾವಂದೂ ಆದಿತ್ಯವಾರ ಬಂದಿರಲಿಲ್ಲ. ಸೂರ್ಯೋದಯವಾದ ಹೆಚ್ಚುಕಡಿಮೆ ೨೨ ಗಳಿಗೆ.

೫) ತುಳು ನಾಡಿನಲ್ಲಿ ಆಳಿದ ಜೈನರಾದ ಭೈರರಸರು ಇಲ್ಲಿಯ ಮಿಕ್ಕ ಜೈನರಂತೆಯೇ ಕಟ್ಟಿನ ಮೇರೆಗೆ ಅವರಲ್ಲಿ ಪಟ್ಟವಾಗುತ್ತಿದ್ದುದು ತಂದೆಯ ಬಳಿಕ ಮಗನಿಗಲ್ಲ, ಸೋದರಮಾವನಿಗೆ. ಆದಕಾರಣ ಪೂರ್ವಾಧಿಕಾರಿಯ ಸೋದರಿಯ ಅಂದರೆ ಉತ್ತರಾಧಿಕಾರಿಯ ಹೆಸರನ್ನು ನಕ್ಷತ್ರವಿಲ್ಲದ ಕ್ರಿ.ಶ.೧೫೪೧ ಜನವರಿ ೧೬ನೆಯ ತಾರೀಖಿನ ಮಾಘ ಬ।೪ಗಿಂತ ಸೂರ್ಯೋದಯದ ಮುಂಚೆಯೇ ತೊಡಗಿ ಸೂರ್ಯಾಸ್ತಮಯ ವಾದ ಮೇಲೂ ಆ ನಕ್ಷತ್ರವಿದ್ದ ಕ್ರಿ.ಶ. ೧೫೪೮ ಜನವರಿ ೨೯ನೆಯ ತಾರೀಖಿನ ಮಾಘ ಬ।ಯೇ ಹೆಚ್ಚಿಗೆ ಸಂಭವನೀಯವೆನಿಸುವುದರಿಂದ ಇದೇ ಆ ಪ್ರತಿಷ್ಠೆಯ ತೇದಿ ಎಂದು ಒಮ್ಮೆ ತೋರಿದರೆ ಸಹಜವೇ.

ಬರಲುಳ್ಳ ಜಯಸಂವತ್ಸರ ಶಾ.ಶ. ೧೮೭೬=ಕ್ರಿ.ಶ.೧೯೫೪-೫೫ ಆಗುತ್ತದಾದರೂ, ರಾಜಶೇಖರ ವಿಲಾಸದ ರಚನ ಕಾಲದ ತೇದಿ ಕ್ರಿ.ಶ. ೧೬೫೪ ಜನವರಿ ೧೧ ನೆಯ ತಾರೀಖೂ ಬುಧವಾರವಾಗುತ್ತದೆ.

ಇದೆಲ್ಲವನ್ನೂ ಚೆನ್ನಾಗಿ ಪರಿಶೀಲಿಸಿ, ಕಾರ್ಕಳದ ಕೆರೆಬಸ್ತಿಯ ಮೇಲಣ ಶಾಸನೋಕ್ತ ವಾದ ಶಾ.ಶ.ವಿಗತ (೧೪೬೭ ಅಲಲ್) ೧೪೬೬ನೆಯ ವರ್ಷದ ಅಂದರೆ ಕ್ರಿ.ಶ.೧೫೪೪-೪೫ನೆಯ ಕ್ರೋಧಿ ಸಂವತ್ಸರದಲ್ಲೇ ಮಾಘ ಬಹುಳ ಚೌತಿಯ ತಿಥಿ ಕ್ರಿ.ಶ. ೧೫೪೫ ಜನವರಿ ೩೧ನೆಯ ತಾರೀಖು ಶನಿವಾರ ಬಂದಿದ್ದು ಹಸ್ತ ನಕ್ಷತ್ರದಿಂದ ಒಡಗೂಡಿತ್ತು ಎಂಬುದನ್ನು ಮನವರಿಸಿ, ಅದರೊಂದಿಗೆ ಸೂರ್ಯಗ್ರಹಣಕ್ಕೆ ಆದಿತ್ಯವಾರವೇ ಬೇಕು, ಚಂದ್ರಗ್ರಹಣಕ್ಕೆ ಸೋಮವಾರವೇ ಬೇಕು ಎಂದಿಲ್ಲವಾದರೂ, ಅವು ಆ ವಾರಗಳಂದು

ಒದಗಿದ್ದರೆ ದಾನಧರ್ಮಕ್ಕೆ ಹೆಚ್ಚು ಪ್ರಶಸ್ತವೆಂದೇನೋ, ಉದಾ(೧) ಚಾಳುಕ್ಯ ವಿಕ್ರಮ ವರ್ಷ ೫ನೆಯ ರೌದ್ರಿ ಸಂವತ್ಸರ ಜ್ಯೇಷ್ಠ ಬಹುಳ ಅಮಾವಾಸ್ಯೆ ಆದಿತ್ಯವಾರ ಸೂರ್ಯಗ್ರಹಣ–ಕ್ರಿ.ಶ.೧೦೮೦ ಜೂನು ೨೦ ತಾರೀಖು (ಆದಿತ್ಯವಾರವಲ್ಲ) ಶನಿವಾರದ ಸೂರ್ಯಗ್ರಹಣದಂದಿನ ಹಳೇಬನ್ನೂರ ಶಿಲಾ ಲೇಖನದಲ್ಲಿ ಶನಿವಾರದಂದು ಘಟಿಸಿದ ಚಂದ್ರಗ್ರಹಣವನ್ನು ಮಾರನೆಯ ರವಿವಾರಕ್ಕೂ, ೨) ಶಾ.ಶ.೧೨೦೧ ಪ್ರಮಾಥಿ ಸಂ। ಆಶ್ವಯುಜ ಶುದ್ಧ ಹುಣ್ಣಿಮೆ ಸೋಮವಾರ ಚಂದ್ರಗ್ರಹಣ=ಕ್ರಿ.ಶ.೧೨೭೯ ಸಪ್ತಂಬರ ೨೧ನೆಯ ತಾರೀಖು(ಸೋಮವಾರವಲ್ಲ) ಗುರುವಾರದ ರಾತ್ರಿಯ ಚಂದ್ರ ಗ್ರಹಣದಂದಿನ ಜಗಳೂರು ನಂ.೩೦ನೆಯ ಶಿಲಾಶಾಸನದಲ್ಲಿ ಆ ಚಂದ್ರಗ್ರಹಣವನ್ನು ೪ ದಿನಗಳ ತರುವಾಯದ ಸೋಮವಾರಕ್ಕೂ ಹೊಂದಿಸಿರುವುದನ್ನು ನೆನವರಿಸಿದರೆ, ಪ್ರತಿಷ್ಠೆಗೆ ಅಮೃತ ಸಿದ್ಧಿ ಯೋಗವೇ ಬೇಕೆಂದು ಎಲ್ಲಿಯೂ ಹೇಳಿಲ್ಲವಾದರೂ, ಹಸ್ತ ನಕ್ಷತ್ರವು ರವಿವಾರ ಬಂದರೆ ಅಮೃತಸಿದ್ಧಿಯೋಗ ಎಂಬ ಶ್ರೇಯಸ್ಕರವಾದ ಶುಭಯೋಗವಾಗುವ ಕಾರಣ, ಕ್ರಿ.ಶ. ೧೫೪೫ ಜನವರಿ ೩೧ನೆಯ ತಾರೀಖು ಶನಿವಾರದ ಹಸ್ತ ನಕ್ಷತ್ರದಲ್ಲಿ ಆದ ಆ ಶುಭಕಾರ್ಯವು ಮತ್ತೂ ಶುಭತರವೆನಿಸುವಂತೆ ಅದನ್ನು ಒಕ್ಕಣಿಸುವಲ್ಲಿ ಆ ತೇದಿಯನ್ನು ಸುಲಭವಾಗಿ ಮಾರನೆಯ ಆದಿತ್ಯವಾರಕ್ಕೆ ಹಚ್ಚಿಸಿರಬೇಕೆಂದು ನಿಷ್ಕೃಷ್ಟವಾಗಿ ಮನದಟ್ಟುವುದರಿಂದ, ಕಾರ್ಕಳದ ಆ ಕೆರೆಬಸ್ತಿಯ ಪ್ರತಿಷ್ಠೆಯ ನೇರಾದ ಇಂಗ್ಲಿಷು ತೇದಿಯಾದರೊ ಕ್ರಿ.ಶ.೧೫೪೫ ಜನವರಿ ೩೧ನೆಯ ತಾರೀಖು ಶನಿವಾರವೇ ಸರಿ ಎಂಬಲ್ಲಿ ಯಾವ ಸಂಶಯವೂ ಇಲ್ಲ.

ಇದು ಮಂಜೇಶ್ವರ ಗೋವಿಂದ ಪೈಯವರ ವಿಷಮವಾದ ಒಂದು ತೇದಿ' ಲೇಖನದ ಸಾರ. ಪೈಯವರ ಸಂಶೋಧನೆಯ ಮಾದರಿಯೂ ಹೌದು. ಇಲ್ಲಿ ಅವರು 'ಇಂಗ್ಲಿಷ್ ತೇದಿ' ಜನವರಿ ೩೧ನೆಯ ತಾರೀಖು' ಎಂದು ಗುರುತಿಸಿದ್ದು ಅವರ ಪಾಂಡಿತ್ಯಕ್ಕೆ ಸಾಕ್ಷಿಯಾಗಿದೆ.

ಇಲ್ಲಿ ಬಳಕೆಯಾಗಿರುವ ಅಂಶಗಳು ತುಂಬಾ ಮಹತ್ವದವುಗಳು. ಇಂಗ್ಲಿಷ್ ತೇದಿಯ ಕುರಿತು ಮಂಜೇಶ್ವರ ಗೋವಿಂದ ಪೈಯವರು ತಳದ ನಿಲುವು ಗಮನಾರ್ಹವಾಗಿದೆ.

*ವಿವರಗಳಿಗೆ ನೋಡಿ: ಗ್ರಹಣ, ಮುಳಿಯ ತಿಮ್ಮಪ್ಪಯ್ಯ ೧೯೮೮ ಶ್ರದ್ಧಾಂಜಲಿ ಪುಟ. ೨೮೨–೨೮೮*

**೩೭೪. ತೊಟ್ಟಿಲಿಗ**

"*ತೊಟ್ಟಿಲಿಗಂ ಗಜಪ್ರಿಯನಪ್ಪುದರಿಂ*" ಎಂದು ಪಂಪ ಭಾರತದಲ್ಲಿ ಬರುತ್ತದೆ.

(ಪಂಪ ಭಾರತ ೧–೪೩)

ತೊಟ್ಟಿಲಿಗಂ ಎಂದರೆ ತೊಟ್ಟಿಲಮಗು. ತೊಟ್ಟಿಲಮಗುವೆಂಬುದಕ್ಕೆ ವಿಶೇಷ ಅರ್ಥವು ಇದೆ. 'ಅವನು ಆಗ ತೊಟ್ಟಿಲ ಮಗು' ಎಂದು ಹೇಳುವ ಕ್ರಮ ಈಗಲೂ ಇದೆ. ತೊಟ್ಟಿಲ ಕೂಸು ಎಂದರೆ ಸಣ್ಣ ಕೂಸು. ತೊಟ್ಟಿಲಲ್ಲಿ ಮಲಗಿರುವ ಕೂಸು ಎಂಬುದು ಭಾವಾರ್ಥ.

**೩.೭೫. ತೊಟ್ತಿರ್**

"***ತೊಟ್ತಿರೊಳಟ್ಟಿಯನಾಗಲೀವೆನೇ***" *(ಪಂಪ ಭಾರತ ೧೦-೪೫)*

ತೊಟ್ಟು ಎಂದರೆ ತೊತ್ತು; ದಾಸಿ ಎಂಬ ಅರ್ಥವಿದೆ.

ತೊತ್ತುಗಳ ಮಾರಾಟವೂ ಹತ್ತನೆಯ ಶತಮಾನದಲ್ಲಿ ನಡೆಯುತ್ತಿತ್ತು ಎಂಬುದು ಗಮನಾರ್ಹ.

ಸೇವಕನಾದವನು ಶ್ರೇಷ್ಠಮಟ್ಟದಲ್ಲಿರಬೇಕೆಂದರೆ ತನ್ನ ಒಡೆಯನಿಗೆ ಬಗ್ಗಿಕೊಂಡಿರಬೇಕು. ಜೀವಧನವನ್ನು ಕೊಂಡು ಬಾಳುವೆನೆಂಬುವನು ಪ್ರಾಣ ಕೊಡಲು ಸಿದ್ಧನಿರಬೇಕು. ಅದಕ್ಕಾಗಿ ಸೇವಕನಿಗಿಂತ ಮೂಢನಾದವನು ಯಾರೂ ಇಲ್ಲ (ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ, ಶ್ಲೋಕ ೨೨ ವಚನ) ಮೂಢರ ಸ್ವಭಾವವನ್ನು ಇಲ್ಲಿ ಹೇಳಲಾಗಿದೆ.

**ಭೃತ್ಯರೊಳಗಾವನಾ**ನೊರ್ವಂ ವೇಳೆಯಲ್ಲಿ ಯಥೋಚಿತವಾಗಿ ಆಳ್ದಂಗೆ ಹಿತಮಪ್ಪ ನಿಷ್ಠುರಮಂ ಬಿನ್ನಪಂಗೆಯ್ದಪನಾ **ಭೃತ್ಯನೊಡೆಯನಿಂ** ಹೊಲ್ಲೆಹಂ ಬಂದೊಡಂ ಕೊಂಡಾಡಬೇಕು ಎಂಬುದುಪಜೀವಿಗೆ ಗುಣಮೆಂದು ಪೇಟ್ದ ನೀತಿಯುಂಟು. ಸೇವಕನು ನಿಷ್ಠುರವೆನಿಸಿದರೂ ಒಡೆಯನಿಗೆ ಹೇಳಬೇಕು. ಅದರಲ್ಲಿ ಮುಚ್ಚುಮರೆಯಿರಬಾರದು. ಆಳುವವನಿಂದ ಕೇಡುಂಟಾದರೂ ಕೊಂಡಾಡಬೇಕು. ಇದು ನೀತಿಯೆಂದು ಕರ್ಣಾಟಕ ಪಂಚತಂತ್ರದಲ್ಲಿ (ಭೇದ ಪ್ರಕರಣ, ಶ್ಲೋಕ ೫೬) ಹೇಳಲಾಗಿದೆ. ಒಡೆಯ ಮತ್ತು ಆಳಿನ ಸಂಬಂಧವು ಹೇಗಿರಬೇಕು ಎಂಬುದನ್ನು ಇದು ನಿರೂಪಿಸುತ್ತದೆ. ಸೇವಕನು ಒಡೆಯನ ಹಿತದೃಷ್ಟಿಯಿಂದ ಕೆಲವನ್ನು ಹೇಳಲೇಬೇಕಾಗುತ್ತದೆಯೆಂದು ಇಲ್ಲಿಯ ವಾದ. ಆಳುವವನಲ್ಲಿ ಅಧಿಕಾರವಿರುತ್ತದೆ. ಆಳಿನಲ್ಲಿ ಅಧಿಕಾರವಿರುವುದಿಲ್ಲ. ಆದರೂ ಅವರ ನಡುವೆ ಸಂವಾದಗಳಿರುತ್ತವೆ.

ಪಗೆಯಾಪ್ಪ **ಭೃತ್ಯನಂ,** ಅಲುಗಾಡುವ ಹಲ್ಲಂ, ದುಷ್ಟನಪ್ಪ ಮಂತ್ರಿಯಂ ಬೇರ್ವೆರಸಿ ಕೀೞ್ವುದೇ ಸುಖಂ. ಹಗೆಯಾದ ಸೇವಕನನ್ನು, ಅಲುಗಾಡುವ ಹಲ್ಲನ್ನು ದುಷ್ಟನಾಗಿರುವ ಮಂತ್ರಿಯನ್ನು ಬೇರುಸಹಿತ ಕಿತ್ತುಬಿಡುವುದು ಉತ್ತಮ. (ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ, ಶ್ಲೋಕ ೫೭)

ಬೌದ್ಧ ಕೃತಿಯಲ್ಲಿಯೂ ದಾಸ್ಯದ ಪರಿಕಲ್ಪನೆಯು ಬಂದಿದೆ.

ತ್ರಿಪಿಟಕಗಳ ಪ್ರಾಚೀನ ಭಾಗಗಳಲ್ಲಿ ಶೂದ್ರ ಎನ್ನುವುದಕ್ಕಿಂತ ದಾಸ, ಕಮ್ಮ (ರ್ಮ)ಕಾರ ಎಂಬ ಪದಗಳೇ ಹೆಚ್ಚು ಬಳಕೆಯಾಗಿವೆ. ಕೃಷಿ ಕೆಲಸಗಳಲ್ಲಿ ಅವರನ್ನು ತೊಡಗಿಸಲಾಗುತ್ತಿತ್ತು. ಭೂರಹಿತ ಶೂದ್ರರೇ ಕರ್ಮಕಾರರಾಗಿದ್ದರು. ದಾಸರು ಬಹುಪಾಲು ಶೂದ್ರರೇ. ಬುದ್ಧನೇ ದೀಘನಿಕಾಯದಲ್ಲಿ (ಪುಟ.೧೦೪) ಮೂರು ವರ್ಣಗಳ ಬಗ್ಗೆ ಹೇಳಿ ನಂತರ "ಸುದ್ದೋ (ಶೂದ್ರೋ) ವಾ ಸುದ್ದದಾಸೋ ವಾ" ಎಂದಿದ್ದಾನೆ. ಶೂದ್ರದಾಸನೆಂದರೆ ಶೂದ್ರನ ದಾಸನಲ್ಲ; ಅವನು ಶೂದ್ರನಾದ ದಾಸ. ಧರ್ಮಸೂತ್ರಗಳಲ್ಲಿಲ್ಲದ ಶೂದ್ರ-ದಾಸ ಸಮೀಕರಣ ಬೌದ್ಧ ಕೃತಿಯಲ್ಲಿರುವುದು ಸ್ವಾರಸ್ಯಕರ. ಮುಂದೆ ಮೌರ್ಯೋತ್ತರ ಕಾಲದಲ್ಲಿ ಮನು ಈ ಸ್ಥಿತಿಯನ್ನು ಸ್ಪಷ್ಟವಾಗಿಯೇ ಹೇಳುತ್ತಾನೆ.

ಋಗ್ವೇದದಲ್ಲಿ ದಾಸರ ಪರಿಕಲ್ಪನೆಯಿದೆ.

ಋಗ್ವೇದದಲ್ಲಿ ಆರ್ಯರ ಶತ್ರುಗಳೆಂದು ಕರೆಯಲಾಗುವವರು (೧) ವಣರು (೨) ದಾಸರು(ದಸ್ಯುಗಳು) ವಣರು ಧನವಂತರೆಂದೂ, ಲೋಭಿಗಳೆಂದೂ ವೇದಗಳಲ್ಲಿ ವರ್ಣಿತವಾಗಿದೆ. ನಂತರದ ಕಾಲದಲ್ಲಿ ಪ್ರಚುರಗೊಂಡ ವಣಿಕರು (ವ್ಯಾಪಾರಸ್ಥರು). ಪಣಂ (ನಾಣ್ಯ). ವಣ್ಯಂ (ಸರಕು) ಎಂಬ ಶಬ್ದಗಳನ್ನು ಗಮನಿಸಿ, ಮೇಲೆ ಹೇಳಿದ ವಣರು ಬಹುಶ: ಸಿಂಧೂ ನಾಗರೀಕತೆಯ ವ್ಯಾಪಾರಸ್ಥರ ಅವಶೇಷಗಳಿರಬಹುದು ಎನ್ನುತ್ತಾರೆ ಕೊಸಾಂಬಿ. ಇಂದ್ರನು ಇವರ ಸಂಪತ್ತನ್ನು ಲೂಟಿ ಮಾಡುತ್ತಾನೆ. ಇವರು ರಾಕ್ಷಸರೆಂದೂ, ಆರ್ಯರ ಶತ್ರುಗಳೆಂದೂ ನಿರೂಪಿಸುತ್ತಾನೆ. ಒಂದು ಸಂದರ್ಭದಲ್ಲಿ ಶುನಕ ರೂಪದಲ್ಲಿ ಸರಮಾಎಂಬ ಮಾತೃದೇವತೆಯನ್ನು ಇಂದ್ರನು ವಣರ ಬಳಿಗೆ ರಾಯಭಾರಿಯಾಗಿ ಕಳಿಸಿ ತನಗೆ ಪಶುಗಳನ್ನು 'ಕಪ್ಪ'ವಾಗಿ ಕೊಡಬೇಕೆಂದೂ, ತಪ್ಪಿದಲ್ಲಿ ಆಗುವ ಪ್ರಮಾದಕರ ಪರಿಣಾಮಗಳನ್ನು ಎದುರಿಸಬೇಕಾಗುತ್ತದೆ ಎಂದೂ ಬೆದರಿಸುತ್ತಾನೆ.

'ದಾಸ' ಎಂದರೆ ನಂತರದ ಕಾಲದಲ್ಲಿ ಸೇವಕ, ಭೃತ್ಯ. ಆದರೆ ಋಗ್ವೇದ ಕಾಲದಲ್ಲಿ 'ದಾಸ' ಎಂದರೆ ಕೇವಲ ಆರ್ಯೇತರ ಎಂದಷ್ಟೇ ಅರ್ಥ. ಇವರು ಆರ್ಯರಿಗೆ ಮುಖ್ಯ ಶತ್ರುಗಳಾಗಿ ಕಾಣುತ್ತಾರೆ. ಇವರನ್ನು ಕೂಡ ರಾಕ್ಷಸರೆಂದೇ ವರ್ಣಿಸುತ್ತಾರೆ. ಅರ್ಬುದ ಎಂಬ ದಾಸನನ್ನು ಇಂದ್ರನು ತನ್ನ ಕಾಲ ಕೆಳಗೆ ಹಾಕಿ ತುಳಿದು ಕೊಂದನು. ನದಿಯ ನೀರಿಗೆ ಅಡ್ಡಲಾಗಿ ಮಲಗಿದ ವೃತ್ರನೆಂಬ ದಾಸನನ್ನು ವಜ್ರಾಯುಧದಿಂದ ಹೊಡೆದು ಈ 'ದಾಸರು' ದೀನದರಿದ್ರರೋ, ಸೇವಕರೋ ಆಗಿದ್ದಿರಲಾರರು ಎಂಬುದನ್ನು ಮತ್ತೊಮ್ಮೆ ಹೇಳಬೇಕಾಗಿದೆ. ಆರ್ಯರು ಕೃಷಿಕ ವರ್ಗ ಸಮಾಜವನ್ನು ರೂಪಿಸಿದ ನಂತರದಲ್ಲಿ, ಈ ದಾಸರಲ್ಲಿ ಕೆಲವರನ್ನು ಶೂದ್ರರನ್ನಾಗಿಸಿ ತಮ್ಮ ಅಧೀನವಾಗಿಸಿಕೊಂಡ ಮೇಲೆ ಇವರ ಹೆಸರೇ ದೀನತೆಯನ್ನು ಸೇವಕತನ ಸ್ವಭಾವನ್ನು ಸೂಚಿಸುವ ಪದವಾಗಿ ಬಿಟ್ಟಿತು. ಋಗ್ವೇದ ಕಾಲದಲ್ಲೇನೂ ಇಂಥ ಅರ್ಥದಲ್ಲಿ ಈ ಮಾತಿನ ಪ್ರಯೋಗವಿಲ್ಲ. ದಾಸರು ಎಂದರೆ ಆರ್ಯೇತರ ಜನ ಮಾತ್ರ. ಅವರು ಕಪ್ಪಗಿದ್ದವರು. (ಅವರ ಪುರಗಳನ್ನು ಕೃಷ್ಣಗರ್ಭ ಎನ್ನಲಾಗಿದೆ. ಎಂದರೆ ಕಪ್ಪಗಿನ ಜನರನ್ನು ತನ್ನ ಹೊಟ್ಟೆಯಲ್ಲಿ ಧರಿಸುವುದು ಎಂಬ ಆರ್ಥ) ಚಪ್ಪಟೆ ಮೂಗುಳ್ಳವರು (ಅನಾಸ–ಎಂದರೆ ಮೂಗಿಲ್ಲದವರು).

ಈ ದಾಸರು ಭೃತ್ಯರಾಗಿ, ಸೇವಕರಾಗಿ ಇನ್ನೂ ಅಧೀನರಾಗಿರದಿದ್ದ ಕಾಲಕ್ಕೆ ಮುಂಚೆಯೇ (ಅಂದರೆ ಋಗ್ವೇದ ಕಾಲದಲ್ಲಿಯೇ) ಆರ್ಯ–ದಾಸ ಮುಖ್ಯರ ವಿಲೀನತೆ ಆರಂಭವಾಗಿದ್ದಿತು. ಈ ವಿಲೀನತೆಯಲ್ಲಿ ಪುರೋಹಿತರು ಮುಖ್ಯಪಾತ್ರ ವಹಿಸಿದರು. ಆಗ ದಾಸ ಪುರೋಹಿತರೂ, ಆರ್ಯ ಪುರೋಹಿತರು ಒಂದಾಗಿ, ಇಬ್ಬರೂ ಕೂಡಿದ ಒಂದು ಬಲವಾದ ಬ್ರಾಹ್ಮಣ ವರ್ಗ ಸೃಷ್ಟಿಯಾಯಿತು. ಸಿಂಧೂ ನಾಗರಿಕತೆಯಲ್ಲಿ ಪುರೋಹಿತ ಪ್ರಾಬಲ್ಯ ಇದ್ದ ಸ್ಥಿತಿಯನ್ನು ಗುರುತಿಸಿದರೆ, ಬಹುಶ: ಈ ಬ್ರಾಹ್ಮಣ ಗೋತ್ರಗಳೂ, ಋಷಿಗಳೂ ಬಹುಮಟ್ಟಿಗೆ ದಾಸರಿಂದಲೇ ಬಂದವರು ಎಂಬುದು ಕೊಸಾಂಬಿಯವರ ಅಭಿಪ್ರಾಯ.

ಯಜಮಾನ ಸಂಸ್ಕೃತಿಯ ಅಥವಾ ಆಳುವ ವರ್ಗ ಆಸ್ತಿಯನ್ನು ಹೊಂದಿದ್ದಾಗ ಉಳಿದ ವರ್ಗಗಳನ್ನು ಆಳಿಸಿಕೊಳ್ಳುವ ವರ್ಗವಾಗಿ ನೋಡುತ್ತದೆ. ಆಳಿಸಿಕೊಳ್ಳುವ ವರ್ಗಗಳನ್ನು ದಾಸರೆಂದು ಪರಿಗಣಿಸಲಾಯಿತು. ದಾಸವರ್ಗದ್ದು ದೈಹಿಕ ಶ್ರಮವೆನ್ನುವುದು ಗಮನಾರ್ಹ.

*ವಿವರಗಳಿಗೆ ನೋಡಿ: ಡಿ.ಡಿ. ಕೊಸಾಂಬಿ ೧೯೯೮ ಪ್ರಾಚೀನ ಭಾರತದಲ್ಲಿ ಚರಿತ್ರೆ ಪುಟ. ೮೨-೮೩*

*ಆರ್.ಎಸ್. ಶರ್ಮ ೨೦೦೪ ಪ್ರಾಚೀನ ಭಾರತದಲ್ಲಿ ಶೂದ್ರರು*

### ೩೭೬. ತೋಯಮಂತ್ರ

*ದ್ಯುನದೀಜಂ ಕುಡೆ **ತೋಯ**ಮಂತ್ರಬಲದಿಂದ ಪೊಕ್ಕಿರ್ದಪಂ ಕಾಲವಂ.......*

*(ಸಾಹಸ ಭೀಮ ವಿಜಯ ೬-೩೯)*

ತೋಯ ಮಂತ್ರವೆಂದರೆ ಜಲದ ಮೂಲಕ ನಡೆಸುವ ಮಂತ್ರ. ಕ್ರಿಯಾವಿಧಿಯು ಅಲ್ಲಿ ಬಣ್ಣಿತವಾಗಿದೆ. ಜಲ ಸ್ತಂಭನ ವಿದ್ಯೆಯೆಂದು ಅದನ್ನು ಕರೆಯುತ್ತಾರೆ. ಇದರಿಂದಾಗಿ ಕೌರವನು ವೈಶಂಪಾಯನ ಸರೋವರದಲ್ಲಿ ಅಡಗಿ ಕುಳಿತುಕೊಳ್ಳುವಂತಾಯಿತು. ಇದು ಪ್ರಾಚೀನ ವಿದ್ಯಾ ಪ್ರಕಾರಗಳಲ್ಲಿ ಒಂದು ಎಂದು ಪರಿಗಣಿತವಾಗಿದೆ.

### ೩೭೭. ತ್ಯಾಗ

'ಪ್ರಾಚೀನ ಕರ್ನಾಟಕದ ಸಾಮಾಜಿಕ ಮೌಲ್ಯಗಳಲ್ಲಿ 'ಚಾಗ' (ತ್ಯಾಗ) ಮತ್ತು 'ಬೀರ' ಈ ಎರಡೂ ಬಹುಮುಖ್ಯವಾಗಿದ್ದುವು. ಈ ರೀತಿಯ ತ್ಯಾಗ ಮನೋಭಾವವನ್ನು ವೀರತ್ವದ ಮಟ್ಟಕ್ಕೇರಿಸಿ ಹೊಗಳಿರುವುದನ್ನು ಕಾಣಬಹುದು. ಶ್ರೀಮಂತನಲ್ಲದ ಒಬ್ಬ ವ್ಯಕ್ತಿಗೆ ದೇವಸ್ಥಾನವನ್ನು ಕಟ್ಟಿಸಬೇಕೆಂಬ ಬಯಕೆ ಮೂಡಿದರೆ ಆಗ ಆತ ಬಹು ಸಹಜವಾಗಿಯೇ ವೀರ ಪ್ರತಿಜ್ಞೆಯನ್ನು ಕೈಗೊಂಡವನಂತೆ ಕಾರ್ಯಶೀಲನಾಗಬೇಕಾಗುತ್ತದೆ. ಇದಕ್ಕೆ ಕೆಲವು ನಿದರ್ಶನಗಳನ್ನು ಕೊಡಬಹುದು. ಕುಂಬಾರ ಜಾತಿಯ ಬಮ್ಮಣ ಎಂಬಾತನು ತಲೆಯನ್ನು ತೊಳೆಯದೆ ಅನ್ನವುಣ್ಣದೆ 'ವೀರ ವ್ರತ'ವನ್ನು ಕೈಗೊಂಡು ಕುಂಭೇಶ್ವರ ದೇವರನ್ನು ಪ್ರತಿಷ್ಠೆ ಮಾಡಿಸಿದ ವಿಷಯವನ್ನು ಶಾಸನವೊಂದು ತಿಳಿಸುತ್ತದೆ. ಎಂದು ಶೇಷಶಾಸ್ತ್ರಿ ಹೇಳುತ್ತಾರೆ.

ಪಂಪನ ಸುಪ್ರಸಿದ್ಧವಾದ 'ಚಾಗದಭೋಗದಕ್ಕರದ...........

ಸಾಲುಗಳನ್ನು ನೆನಪಿಸಿಕೊಳ್ಳಬಹುದು. ಇರುವುದನ್ನು ಇನ್ನೊಬ್ಬರಿಗೆ ಉದಾರವಾಗಿ ಕೊಟ್ಟರೆ ಅದು ತ್ಯಾಗವಾಗುತ್ತದೆ. ಅದು ಸ್ವಯಂ ಇಚ್ಛೆಯಿಂದ ಮಾಡುವ ಕರ್ಮ. ಉದಾ: ದೇಹತ್ಯಾಗ. ಜೈನಧರ್ಮದಲ್ಲಿ ಇದೊಂದು ಪ್ರಮುಖ ಪರಿಕಲ್ಪನೆಯಾಗಿದೆ. ಭೂತ್ಯಾಗ; ಸತಿತ್ಯಾಗ; ಪ್ರಾಣತ್ಯಾಗ– ಹೀಗೆ ಬೇರೆ ಬೇರೆ ಪರಿಭಾಷೆಗಳು ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಉಕ್ತವಾಗಿದೆ.

*ವಿವರಗಳಿಗೆ ನೋಡಿ: ಡಾ. ಆರ್. ಶೇಷಶಾಸ್ತ್ರಿ ೨೦೦೪ ಕರ್ನಾಟಕದ ವೀರಗಲ್ಲುಗಳು ಪುಟ. ೨೭.*

೩೭೮. ತ್ರಯಾಗ್ನಿ

ಈ ಕುರಿತು ಚಾವುಂಡರಾಯ ಪುರಾಣದಲ್ಲಿ ಬರುತ್ತದೆ: ಆಹವನೀಯ; ಗ್ರಾಹ್ಯಪತ್ಯ, ದಕ್ಷಿಣಾಗ್ನಿಗಳೆಂಬುದು ಮೂರು ವಿಧವೆಂದು ಚಾವುಂಡರಾಯ ಪುರಾಣದಲ್ಲಿ ಬರುತ್ತದೆ. (ಶಾಂತಿ ಪುರಾಣಂ ಪುಟ. ೧೯೮)

(ಅಪಾನ–) ಗಾರ್ಹಪತ್ಯ, (ವ್ಯಾನ–) ಅನ್ವಾಹಾರ್ಯಪಚನ, (ಪ್ರಾಣ–) ಆಹವನೀಯ (ಪ್ರಶ್ನೆ.೪–೩) ಅಥವಾ ಗಾರ್ಹ್ಯಪತ್ಯ, (ಪಿತಾ), ದಕ್ಷಿಣ (ಮಾತಾ), ಆಹವನೀಯ (ಗುರು) (ಮನು. ೨–೨೩೧; ಅಮರ. ೨–೭–೪೨೪) ತನುಗಳು (ಅನುಕ್ರಮವಾಗಿ): ಪೃಥಿವಿ, ಅಗ್ನಿ, ಅನ್ನ, ಆದಿತ್ಯ; ಅಪ್ಪು, ದಿಕ್ಕುಗಳು, ನಕ್ಷತ್ರಗಳು, ಚಂದ್ರ; ಪ್ರಾಣ, ಆಕಾಶ, ದ್ಯುಲೋಕ, ಮಿಂಚು (ಛಾಂದೋಗ್ಯ. ೪–೧೧–೧, ೪–೧೨–೧, ೪–೧೩–೧) (ಆ) ಜ್ಞಾನಾಗ್ನಿ, ದರ್ಶನಾಗ್ನಿ, ಕೋಷ್ಠಾಗ್ನಿ (ಜಠರಾಗ್ನಿ) (ಸಂ.೯). (ಇ) ಕ್ರೋಧಾಗ್ನಿ, ಕಾಮಾಗ್ನಿ, ಉದರಾಗ್ನಿ (ಉತ್ತಪು.೩೮೧–೨೦೨). ಎಂದು ಶ್ರೀ ವತ್ಸ ನಿಘಂಟಿನಲ್ಲಿ ಕೊಡಲಾಗಿದೆ. ಗ್ರಾಹ್ಯಪತ್ಯ–ಗೃಹಸ್ಥರು ಮಾಡುವ ಯಜ್ಞವಿಧಿ. ಆಹವನೀಯ ಆಹ್ವಾನಿಸಲಾಗಿರುವುದು. ದಕ್ಷಿಣಾಗ್ನಿ(ಮಾತಾ) ಎಂದು ಮೂರು ವಿಧ. ಗ್ರಾಹಪತ್ಯ. ಆಹವನೀಯ ದಕ್ಷಿಣಾಗ್ನಿಗಳು ಸುಪ್ರಸಿದ್ಧವಾದವುಗಳು.

೩೭೯. ತ್ರಿಪುಂಡ್ರ

*"ಬೊಬ್ಬಿಱಿದುಂ ತ್ರಿಪುಂಡ್ರಮಿಟ್ಟು ಕೂಕಿಱಿದುಂ ತೇಗಿಯುಂ"*

*(ಪಂಪಭಾರತ. ೧೨–೧೫೮ವ)*

ಹಣೆಯ ಮೇಲೆ ಧರಿಸುವ ಮೂರು ಗೆರೆಯನ್ನು ತ್ರಿಪುಂಡ್ರವೆಂದು ಕರೆಯುತ್ತಾರೆ.

ಹಾಗೆ ಕುಡಿದು ತನ್ನ ಶತ್ರುವಿನ ರಕ್ತವೆಂಬ ಹೆಂಡದಲ್ಲಿ ಅಳತೆ ಮೀರಿ ಸೊಕ್ಕಿ ಹೋಗಿ ತಾನೂ ಹಿಡಿಂಬೆಯೂ ಅವರ ಪಕ್ಕೆ ನರಗಳ ಮಾಂಸಗಳ ಸಂದಿಗಳಲ್ಲಿದ್ದ ಕೆಂಪಾದ ರಕ್ತವನ್ನು ಮೈಗೆ ಬಳಿದುಕೊಂಡು ಹಣೆಯಲ್ಲಿ ಮೂರು ಎಲೆಗಳನ್ನು ಧರಿಸಿ ಗಟ್ಟಿಯಾಗಿ ತೇಗಿ ನೇರವಾಗಿ ಓಡಿ ಸುತ್ತಲೂ ತಿರುಗಿ ನಕ್ಷತ್ರಮಂಡಲಕ್ಕೆ ನೆಗೆದು ಸರದಿಯ ಮೇಲೆ ಆಡುವಾಗ ಎರಡು ಸೈನ್ಯಗಳೂ ಆಶ್ಚರ್ಯಪಟ್ಟು ನೋಡಿದವು.

ತ್ರಿಪುಂಡ್ರವೆಂದರೆ ಹಣೆಯಲ್ಲಿ ಮೂರು ವಿಭೂತಿಯ ಅಡ್ಡನಾಮ ಧರಿಸುವುದು. ನಾಮಗಳು ಮತ್ತು ತಿಲಕಗಳು ಧಾರ್ಮಿಕ ಸಂಕೇತಗಳಾಗಿವೆ. ಕಸ್ತೂರಿ ತಿಲಕ; ಉದ್ದನಾಮ ವೈಷ್ಣವ ಸಂಕೇತಗಳು, ಅಡ್ಡನಾಮವು ಶೈವ ಸಂಕೇತ, ಶಿವನು ಸ್ಮಶಾನದ ಬೂದಿಯನ್ನು ಧರಿಸುತ್ತಿದ್ದನು.

೩೮೦. ತ್ರಿಲೋಕ

**"ಸಾಲೋಕನಾಂ ತ್ರಿಲೋಕಾನಾಂ ಯದ್ವಿದ್ಯಾ ದರ್ಪಣಾಯತೇ"** ಜೈನ ಧರ್ಮದಲ್ಲಿ ಮೂರು ಲೋಕಗಳ ಬಗ್ಗೆ ಮಾತ್ರ ಉಲ್ಲೇಖವಾಗುತ್ತದೆ.–ಊರ್ಧ್ವ ಲೋಕ: ಮಧ್ಯಮ

ಲೋಕ ಹಾಗೂ ಅಧೋಲೋಕಗಳು. ಪುರಾಣಗಳ ಪ್ರಕಾರ ಸಪ್ತ ಲೋಕಗಳು.

ಇವುಗಳಲ್ಲಿ ಸ್ವಾಭಾವಿಕವಾಗಿ ಅಧೋಲೋಕದ ಆಕಾರವು ಬೆತ್ತದ ಆಸನದಂತೆ, ಮಧ್ಯಲೋಕದ ಆಕಾರವು ನಿಲ್ಲಿಸಿದ ಅರ್ಧ ಮೃದಂಗದಂತೆ–

ಊರ್ಧ್ವಲೋಕದ ಆಕಾರವು ನಿಲ್ಲಿಸಿದ ಮೃದಂಗದಂತೆ ಇರುತ್ತದೆ. ಈಗ ಈ ಮೂರು ಲೋಕಗಳ ಆಕೃತಿ ಪರಿಮಾಣವನ್ನು ಶ್ರೀವತ್ಸ ನಿಘಂಟಿನಲ್ಲಿ ಹೀಗೆ ನಿರೂಪಿಸಲಾಗಿದೆ.

ಅಧೋಲೋಕ, ಮಧ್ಯಲೋಕ ಮತ್ತು ಊರ್ಧ್ವಲೋಕಗಳು ಅನುಕ್ರಮವಾಗಿ ಏಳುರಜ್ಜು, ಒಂದುಲಕ್ಷ ಯೋಜನೆ ಮತ್ತು ಒಂದು ಲಕ್ಷ ಯೋಜನೆ ಕಡಿಮೆ ಏಳು ರಜ್ಜುಗಳಷ್ಟು ಎತ್ತರವಾಗಿವೆ.

ಲೋಕ–೩: (ಅ) ಇಹಲೋಕ–(ಭೂಮಿ), ಅಂತರ್–(ಅಂತರಿಕ್ಷ), ದ್ಯು–(ದ್ಯೌ) (ಛಾಂದೋಗ್ಯ. ೩೦). (ಆ) ಮನುಷ್ಯಲೋಕ, ಪಿತೃ–, ದೇವ–,(ಬೃಹದಾ.೧–೫–೧೬); ಕೇನ. ಭಾ.೫ ಐತರೇ. ೨೫). (ಇ) ಪುತ್ರ, ಕರ್ಮ, ಉಪಾಸನಾ (ಬೃಹದಾ. ೧–೫–೧೬). (ಈ) ಭೂಃ, ಭುವಃ, ಸ್ವಃ(ಬೃಹದಾ. I-೧–೫–೪; ಗೀತಾಭಾ.೩೭೮; ಗೌಧಸೂ. ೨೫–೬ ಭಾ). (ಉ) ನೋ. ಜಗತ್ತು–೩ (ಊ) ಅಧೋಲೋಕ, ಮಧ್ಯ–, ಊರ್ಧ್ವ– (ಆದಿಪು; ೧–೫೦) (ಋ) ಜನಲೋಕ–, ತಪೋ–, ಸತ್ಯ– (ವಿಷ್ಣುಪು. II-೭–೧೯–ಪು. ಇಂ. II ೫೪).

ಲೋಕ–೪: (ಅ) ಕರ್ಮಿ, ಭಕ್ತ, ಜ್ಞಾನಿ, ಯೋಗಿ (ರಾಮಗೀತಾ. ೧೧–೩). (ಆ) ದೇವಲೋಕ, ಸತ್ಯಲೋಕ, ವೈಕುಂಠ, ಕೈಲಾಸ.

ಲೋಕ–೫: (ಅ) ಸತ್ಯಲೋಕ, ವೈಕುಂಠಲೋಕ, ಕೈಲಾಸ, ಆಶ್ರಯ, ನಿರಾಶ್ರಯ (ಕಪಿಲಗೀತಾ. ೨–೨೬).

(ಆ) ಸಮಸ್ತಲೋಕ, ಅಧೋ–, ಊರ್ಧ್ವ–, ತಿರ್ಯಕ್–, ಮನುಷ್ಯ–(ಜೈಧ. ೩೨೦).

ಲೋಕ–೭: ಭೂಲೋಕ (ಭೂಃ), ಭುವರ್ಲೋಕ (ಭುವಃ), ಸ್ವರ್ಲೋಕ (ಸ್ವಃ), ಮಹರ್ಲೋಕ (ಮಹಃ), ಜನಲೋಕ(ಜನಃ) ತಪೋಲೋಕ(ತಪಃ), ಸತ್ಯಲೋಕ (ಸತ್ಯಮ್) (ವಾಯುಪು. ಪೂ. ೫೦–೭೯; ಗರುಡ. ೧೫–೫೮; ಯಾಪ್ರಪಾ. ೧–೩). ಸ್ಥಾನಗಳು: ನಾಭಿಮಧ್ಯ, ಉದರ, ಹೃದಯ, ಕಂಠ, ವಕ್ತ್ರ, ಲಲಾಟ, ಬ್ರಹ್ಮರಂಧ್ರ (ಗರುಡ. ೧೫–೫೮, ೫೯)

ಲೋಕ–೮: ಅಗ್ನಿ, ಹೃದಯ, ಚಕ್ಷುಸ್ಸು, ಶ್ರೋತ್ರ, ಹೃದಯ, ಚಕ್ಷುಸ್ಸು, ಹೃದಯ, ಹೃದಯ (ಬೃಹದಾ. II –೧೨೪).

ಲೋಕ–೯: ಪಿತೃಲೋಕ, ಮಾತೃ–, ಭ್ರಾತೃ–, ಸ್ವಸೃ–, ಸಖೀ–, ಗಂಧಮಾಲ್ಯ, ಅನ್ನಪಾನ–, ಗೀತವಾದಿತ್ರ–, ಸ್ತ್ರೀ–(ಛಾಂದೋಗ್ಯ. ೮–೨–೧–೯).

ಲೋಕದ ಪರಿಕಲ್ಪನೆಯು ವಿಶಿಷ್ಟವಾಗಿದೆ. ಮೇಲೆ ಸೂಚಿತವಾದಂತೆ ಲೋಕವೆನ್ನುವುದಕ್ಕೆ ಬೇರೆ ಅರ್ಥಗಳಿವೆ.

**೩೮೧. ತ್ರಿಶುದ್ಧಿ**

*ಬಗೆ ಶುದ್ಧಂ ತನು ಶುದ್ಧಮಾಸ್ತುತಿ ಪದಾರ್ಥಂ ಶುದ್ಧಮಿಂತೀ* **ತ್ರಿಶು**
**ದ್ಧಿಗಳಿಂ** *ಧ್ಯಾನಿಸುವೆಮ್ಮನೋತೆರಗುವೆಮ್ಮಂ ಬಂದಿಪೆಮ್ಮಂ ತ್ರಿಕಾ*
*ಲಗಯೋಗರ್ ಪರಮೇಶ್ವರರ್ ಪರಸುಗಿಂ ವಾತ್ಸಲ್ಯದಿಂ ಸರ್ವ ಸಾ*
*ಧುಗುಣಂ ಸಾಧುಗಳಪ್ಪೆಮಾ ಪರಕೆಯಿಂದಾಮುಂ ವ್ರತ ವ್ರಾತದೊಳ್ ॥*

*(ಶಾಂತಿಪುರಾಣಂ ೧-೫)*

ಮೂರು ಕಾಲಗಳನ್ನೂ ಅರಿತ ಯೋಗಿಗಳೂ ಪರಮೇಶ್ವರರೂ ಆದ ಸರ್ವ ಸಾಧುಗಳು ನಿರ್ಮಲವಾದ ಮನಸ್ಸು, ದೇಹ ಮತ್ತು ಸ್ತೋತ್ರ ಪದಾರ್ಥಗಳೆಂಬ ಈ ಮೂರು ಬಗೆಯ ಶುದ್ಧಿಗಳಿಂದ ಸದಾ ಧ್ಯಾನಮಾಡುತ್ತಾ, ಪ್ರೀತಿಯಿಂದ ನಮಸ್ಕಾರ ಮಾಡುವ ನಮ್ಮನ್ನು, ನಾವು ಕೂಡ ವ್ರತಗಳ ಅನುಷ್ಠಾನದಿಂದ ಸಾಧುಗಳೇ ಆಗುವಂತೆ ಆಶೀರ್ವದಿಸಲಿ. ಪೊನ್ನನು ಹೇಳಿರುವಂತೆ 'ಬಗೆ ಶುದ್ಧ(ಗುಣ ನಡತೆ); ತನು ಶುದ್ಧ; (ದೇಹ ಶುದ್ಧ) ಪದಾರ್ಥ ಶುದ್ಧವೆನ್ನುವ ಮೂರು ಬಗೆಯ ಶುದ್ಧಗಳು. ಪೊನ್ನನ ಎರಡನೆಯ ವಾಕ್ಯವೂ ಅಷ್ಟೇ ಮುಖ್ಯ-ವ್ರತಗಳ ಅನುಷ್ಠಾನದಿಂದ ನಮ್ಮನ್ನು (ವ್ರತ-ವ್ರಾತಗಳಿಂದ) ಸಾಧು(ಸಂತರು) ಆಗುವಂತೆ ಆಶೀರ್ವದಿಸಲಿ. ಇದು ಕವಿಯ ಮನೋಭಿಲಾಷೆಯನ್ನು ಬಿಂಬಿಸುತ್ತದೆ.

**೩೮೨. ತ್ರೈವಿದ್ಯೆ**

ತ್ರೈವಿದ್ಯನೆಂದರೆ ಋಕ್, ಯಜಸ್, ಸಾಮವೇದಗಳನ್ನು ತಿಳಿದವನು. ಜೈನರಲ್ಲಿ ಜೀವಸ್ಥಾನ, ಕ್ಷುದ್ರಕ ಸಂಬಂಧ, ಬಂಧ ಸ್ವಾಮಿತ್ವ, ವಿಚಯಗಳೆಂಬ ಆರು ಖಂಡಾಗಮವನ್ನು ಮೂರು ಖಂಡಗಳನ್ನು ತಿಳಿದವನು. ಶಾಂತಿನಾಥ ಕವಿಯು ತ್ರಿವಿದ್ಯೆಯನ್ನು ಈ ರೀತಿಯಾಗಿ ವಿವರಿಸಿದ್ದಾನೆ: ವ್ಯಾಕರಣ, ತರ್ಕ, ಸಿದ್ಧಾಂತಗಳು ಇವುಗಳನ್ನು ಯಾರು ಓದಿರುತ್ತಾರೆಯೋ ಅವರು ತ್ರೈವಿದ್ಯಾ ಪಾರಂಗತರು.

*ವಿವರಗಳಿಗೆ ನೋಡಿ: ಸುಕುಮಾರ ಚರಿತಂ ೧, ೨೮*

## ದ

**೩೮೩. ದಂಡ**

*ಅನಂಗ ಜನ್ಮನ ಕವರ್ತೆಯ* **ದಂಡ***ದ ಪಾಂಗಿದೆಂತುಟೊ*

*(ಪಂಪ ಭಾರತ ೫-೧೩)*

ಮನ್ಮಥನ ಈ ಸೂರೆಯ ಈ ಶಿಕ್ಷೆ(ದಂಡ)ಯ ರೀತಿ ಅದೆಂತಹುದೋ ಎಂದು ಇಲ್ಲಿಯ ಅರ್ಥ.

ಇದು ಮನ್ಮಥನು ನೀಡಿದ ದಂಡ. ಇನ್ನೊಂದು ರೀತಿ ಇದೆ:

ಸಾಮಾದಿಯಾಗಿ **ದಂಡ**ಪರ್ಯಂತಮಾವುಪಾಯಂ ನಾಲ್ಕು ತೆಱನಕ್ಕುಂ, ಅವಱೊಳಗೆ

**ದಂಡ**ಮೆಂಬುದು ಪಾಪವನುಳ್ಳುದು, ಅದು ಕಾರಣದಿಂ **ದಂಡ**ಮಂ ಬಿಟ್ಟು ಕಳೆವುದು......... (ಕರ್ಣಾಟಕ ಪಂಚತಂತ್ರ, ಭೇದಪ್ರಕರಣ, ಶ್ಲೋಕ ೧೧೮)

ಸಾಮ, ದಾನ, ಭೇದ ದಂಡ ನಾಲ್ಕು ಉಪಾಯಗಳು. ಆದರೆ ದಂಡವನ್ನು ಪ್ರಯೋಗಿಸುವುದು ತಪ್ಪು. ಆದುದರಿಂದ ದಂಡವನ್ನು ಪ್ರಯೋಗಿಸಬಾರದು, ಅದು ಪಾಪಕರ.

"ದಂಡವಿಲ್ಲದಿದ್ದರೆ ಧರ್ಮಾರ್ಥ ಕಾಮವೆಂಬ ತ್ರಿವರ್ಗವೂ ಇರುವುದಿಲ್ಲ. ದಂಡವು ತಿಳುವಳಿಕೆಯಿಂದ ಮಾಡಲ್ಪಡುತ್ತದೆ. ವಸಾಹತುಪೂರ್ವದಲ್ಲಿ ರಾಜದಂಡಕ್ಕೆ ವಿಶೇಷ ಅಧಿಕಾರವಿತ್ತು. ರಾಜರು ಜನರ ನಿಯಂತ್ರಣಕ್ಕೆ ದಂಡವನ್ನು ಬಳಸುತ್ತಿದ್ದರು. ಆತ್ಮ ರಕ್ಷಣೆಯೂ ದಂಡನೀತಿಯಲ್ಲಿದೆ" ಎಂದು ಕೌಟಿಲ್ಯ ಹೇಳುತ್ತಾನೆ.

ಕೌಟಿಲ್ಯನು ರಾಜನನ್ನು 'ದಂಡಧರ' ಎಂದು ಕರೆದಿದ್ದಾನೆ. ಮನು ಹೇಳಿರುವುದನ್ನು ಗಮನಿಸಿದರೆ ಈ ಮಾತಿನ ಅರ್ಥ ಸ್ಪಷ್ಟವಾದೀತು. ಮನು ಹೇಳುವುದಿದು. "ಲೋಕಕ್ಕೆ ರಾಜನಿಲ್ಲದಿದ್ದಾಗ ಅದು ಭಯಪೀಡಿತವಾಗಿತ್ತು. ದುಷ್ಟ ಶಿಕ್ಷಣ ಶಿಷ್ಟ ಪರಿಪಾಲನೆಗಳ ಮೂಲಕ ಲೋಕವನ್ನು ರಕ್ಷಿಸುವುದಕ್ಕಾಗಿ ಬ್ರಹ್ಮನು ರಾಜನನ್ನು ಸೃಷ್ಟಿಸಿದನು. ರಾಜನಿಗೆ ನೆರವಾಗಲು ತನ್ನ ಮಗನೂ ಸರ್ವಭೂತ ಹತ ರಕ್ಷಕನೂ ಆದ ದಂಡನನ್ನು ಸೃಷ್ಟಿಸಿದನು. ದಂಡನು ಬ್ರಹ್ಮ ತೇಜಸ್ಸಿನಿಂದ ಪ್ರಕಾಶಿತನು. ಅವನ ಭಯದಿಂದ ಸರ್ವಭೂತಗಳೂ ತಮ್ಮ ಧರ್ಮವನ್ನನುಸರಿಸುವುವು. ದಂಡವೇ ಪ್ರಭುವು. ನಾಲ್ಕು ಆಶ್ರಮಗಳವರೂ ತಮ್ಮ ಧರ್ಮಗಳನ್ನು ಪಾಲಿಸುವುದಕ್ಕೆ ಅವನೇ ಹೊಣೆ. ಸರ್ವವೂ ನಿದ್ರಿಸುತ್ತಿರುವಾಗ ಅವನು ಜಾಗ್ರತನಾಗಿರುವನು. ಧರ್ಮದ ಮೂರ್ತಿಯೇ ಅವನು. ಧೀಮಂತನಾದ ದೊರೆ ದಂಡನ ನೆರವಿನಿಂದ ಪ್ರಜಾಕ್ಷೇಮವನ್ನುಂಟುಮಾಡುವನು. ಪ್ರಜಾಕ್ಷೇಮದ ಅಥವಾ ಲೋಕಕಲ್ಯಾಣದ ಸಾಧನೆಗೆ ದೇವತೆಗಳ ನೆರವು ಸಿಗಬೇಕಾದರೂ ದಂಡನ ಸಹಾಯದಿಂದಲೇ. ಅಸಂಸ್ಕೃತನಾದ ಅಕೃತಾತ್ಮನಾದ ರಾಜನ ಕೈಯ್ಯಲ್ಲಿನ ದಂಡ ಅವನಿಗೆ ಶತ್ರುವಾಗುವುದು. ಅವನ ವಂಶವನ್ನು ನಿರ್ಮೂಲ ಮಾಡುವುದಲ್ಲದೆ ಅವನ ರಾಜ್ಯದ ಪ್ರಜೆಗಳೂ ಋಷಿಮುನಿಗಳೂ ದೇವತೆಗಳೂ ಸಂಕಟಕ್ಕೀಡಾಗುವರು". ರಾಜನು ನಾಲ್ಕು ರೀತಿಯಲ್ಲಿ ವ್ಯವಹರಿಸಬೇಕು. ಸಾಮ, ದಾನ, ಭೇದ, ದಂಡ. ಮೊದಲನೆಯ ಸಾಮವು ಹಿತವಚನವನ್ನು ಸೌಮ್ಯ ಮಾರ್ಗವನ್ನು ಸೂಚಿಸುತ್ತದೆ. ಎರಡನೆಯದು ಭೇದ, ಅಂದರೆ ಶತ್ರುಪಕ್ಷದಲ್ಲಿ ಭೇದೋಪಾಯದಿಂದ ತಾರತಮ್ಯ ಉಂಟಾಗುವಂತೆ ಮಾಡುವುದು. "ಭೇದದಲ್ಲಿ ಹೊಕ್ಕಿರಿದನೋ ಪರಮಾತ್ಮ" ಎಂದು ಕರ್ಣ ಕೃಷ್ಣನ ಬಗ್ಗೆ ಹೇಳುವುದನ್ನು ಇಲ್ಲಿ ನೆನಪಿಸಿಕೊಳ್ಳಬೇಕು. ಕೃಷ್ಣ ಸಂಧಾನ ಮುರಿದುಬಿದ್ದು, ಕೃಷ್ಣನು ಮರಳಿಗೆ ಹೊರಡುವಾಗ ಮಾರ್ಗಮಧ್ಯದಲ್ಲಿ ಸಿಕ್ಕಿದ ಕರ್ಣನಿಗೆ ಅವನ ಜನ್ಮವೃತ್ತಾಂತವನ್ನು

ತಿಳಿಸುತ್ತಾನೆ. ಇದನ್ನು ಭೇದೋಪಾಯ ಎನ್ನಬಹುದು. ದಾನವೆಂದರೆ ಇನ್ನೊಬ್ಬರಿಗೆ ಕೊಡುವುದು. ಇದರಲ್ಲಿ ಪ್ರತಿಫಲಾಪೇಕ್ಷೆಯು ಇರಕೂಡದು. ಕೊನೆಯದು ದಂಡ. ದಂಡವೆಂದರೆ ಶಿಕ್ಷೆಯೆಂಬ ಅರ್ಥವು ಇದೆ. ರಾಜನು ಈ ರೀತಿಯ ನಾಲ್ಕು ಮಾರ್ಗಗಳನ್ನು ಕೈಗೊಳ್ಳುತ್ತಾನೆ. ಇದನ್ನು ರಾಜಧರ್ಮವೆಂದು ಕರೆಯುತ್ತಾರೆ. ಒಂದು ದೃಷ್ಟಿಯಿಂದ ಇವು ರಾಜ ಶಾಸನವೂ ಹೌದು. ಆದರೆ ರಾಜ ಶಾಸನಕ್ಕೆ ಯಾವುದೇ ರೀತಿಯ ಬರಹ ರೂಪಗಳಾಗಿಲ್ಲ. ವಸಾಹತು ಪೂರ್ವದ ರಾಜಾಡಳಿತ ಇದನ್ನು ಹೊಂದಿತ್ತು ಎಂದು ರಣಜಿತ್ ಗುಹಾ ಹೇಳುತ್ತಾರೆ.

ಧರ್ಮವನ್ನು ಕಾಪಾಡಲು ಪರಮಾತ್ಮನು ದಂಡವನ್ನು ನಿರ್ಮಿಸಿದನು. ಇವರ ಹೆದರಿಕೆಯಿಂದ ಎಲ್ಲಾ ಜೀವಿಗಳು ಸನ್ಮಾರ್ಗವನ್ನು ಅವಲಂಬಿಸಬೇಕಾಗುತ್ತದೆ. ಈ ತತ್ವದ ಪುರುಷಾಕಾರವಿದ್ದಂತೆ ರಾಜನಿದ್ದಾನೆ. ರಾಜನು ದೇವಾಂಶನು ಆದುದರಿಂದ ಪ್ರಜಾರಕ್ಷಣೆಯಲ್ಲಿ ಆತನು ನಿಜಕ್ಕೂ ದೇವರ ಪ್ರತಿನಿಧಿಯಾಗಿದ್ದಾನೆ ಎಂದು ಮನು ಹೇಳುತ್ತಾನೆ.

ಇಂತಹ ರಾಜಕಾರ್ಯಸಿದ್ಧಿ, ಧರ್ಮರಕ್ಷಣೆ, ಇವು ನೆರವೇರಲು ಬ್ರಹ್ಮನು ಸ್ವತೇಜಸ್ಸಿನ ದಂಡವನ್ನು ನಿರ್ಮಿಸಿದನು ಎಂದು ಮನುವಿನ ಅಭಿಪ್ರಾಯ. ಮತ್ತೊಂದು ಕಡೆ ಅವನು ಹೀಗೆ ಹೇಳಿದ್ದಾನೆ:

ಆ ದಂಡ ಭಯದಿಂದ ಎಲ್ಲ ಪ್ರಾಣಿಗಳು ತಾವು ಅರ್ಜಿಸಿದ ಧನ, ಕನಕ ಪತ್ನಿ-ಪುತ್ರರನ್ನು ತಪ್ಪದೆ ಅನುಭವಿಸುತ್ತಾರೆ. ಶಾಸನದಂಡ ಭಯವಿಲ್ಲದಿದ್ದರೆ ದುರ್ಬಲರು ಪ್ರಬಲರ ಹಿಂಸೆಗೊಳಗಾಗುವರು.

ಧರ್ಮ, ಅರ್ಥ, ಕಾಮ ಮೋಕ್ಷಗಳು ದಂಡಧರನಾದ ರಾಜನ ಮೇಲೆ ನಿಂತಿದೆ. ದುರ್ಬಲರನ್ನು ಬಲಿಷ್ಠರು ನೋಣೆದು ಹಾಕುವರು. ಅದುದರಿಂದ ದುರ್ಬಲರನ್ನು ಕಾಯುವುದು ರಾಜನಿಗೆ ಸೇರಿದೆ. ಅದಕ್ಕಾಗಿ ಅವನು ದಂಡ ಪ್ರಯೋಗಿಸುವುದು ಸರಿಯೆಂದು ಕೌಟಿಲ್ಯನ ಅಭಿಪ್ರಾಯ. ಇದನ್ನೇ ಅವನು ದಂಡನೀತಿಯೆಂದು ಕರೆಯುತ್ತಾನೆ.

ಸಾಮಾನ್ಯ ಜನರು ಮಾಡಿದ ಯಾವ ಅಪರಾಧಕ್ಕೆ ಒಂದು ಕಾರ್ಷಾಪಣ ದಂಡವೋ, ಅದೇ ಅಪರಾಧ ರಾಜನು ಮಾಡಿದರೆ ಸಾವಿರ ಪಣ ದಂಡನೆಯು. ಆ ದಂಡಧನವನ್ನು ನೀರಿಗೆಸೆಯಬಹುದು. ಬ್ರಾಹ್ಮಣನಿಗೆ ಕೊಡಬಹುದು. ಇದು ಪಕ್ಷಪಾತವಿಲ್ಲದ ದಂಡವಿಧಾನವು ಎಂದು ಮನುವು ವಿಧಿಸಿದ್ದಾನೆ.

'ದಂಡ' ಶಬ್ದವು ಆರ್ಯಭಾಷಾ ವರ್ಗಕ್ಕೆ ಸೇರಿದ್ದಲ್ಲ. ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದ ಟಿ. ಬರ್ರೋ ಅವರು, ಸಂಸ್ಕೃತ ಸಾಹಿತ್ಯದಲ್ಲಿ ಸೇರಿರುವ ಇಂತಹ ಅನೇಕ ದೇಶೀಯರ ಪದಗಳನ್ನು ಎತ್ತಿ ಸಾಧಾರಣವಾಗಿ ವಿವರಿಸಿದ್ದಾರೆ. ತಂಡ (ದಂಡ)- ಎಂಬ ಸಮೂಹಾರ್ಥದ ದೇಶೀಯ ಶಬ್ದವುಂಟು ಎಂದು ಶಂಬಾ ಜೋಶಿ ಹೇಳಿದ್ದಾರೆ.

ದಂಡವು ವಿಧಿವತ್ತಾದ ಶಾಸನ. ಪಾಳೇಯಗಾರಿ ಮತ್ತು ಜಮೀನುದಾರಿ ಪದ್ಧತಿಯಲ್ಲಿ ದೇಹದಂಡನೆಯು ಅಪರಾಧಕ್ಕೆ ಅನುಗುಣವಾಗಿ ಭಿನ್ನವಾಗುತ್ತಿತ್ತು. ಈ ರೀತಿಯ

ಸಮಾಜಗಳಲ್ಲಿ ಮನೋದಂಡನೆಗಿಂತ ದೇಹ ದಂಡನೆಯು ಪ್ರಧಾನವಾಗಿದೆ. ಮತ್ತು ದೇಹದಂಡನೆಯು ಪಣದಂಡನೆಯು ಭಿನ್ನ ಭಿನ್ನ ಮನು ಹೇಳಿರುವುದನ್ನು ಗಮನಿಸಬೇಕು. ಅವನ ಪ್ರಕಾರ ಅಪರಾಧಿ ರಾಜನು ಸಾವಿರ ಪಣ ಬ್ರಾಹ್ಮಣನಿಗೆ ನೀಡಿದರೆ ಅಪರಾಧವು ಪರಿಹಾರವಾಗುತ್ತದೆ.

*ವಿವರಗಳಿಗೆ ನೋಡಿ: ಶ್ರೀ ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳು ೨೦೧೦*
*ಕೌಟಿಲ್ಯನ ಅರ್ಥಶಾಸ್ತ್ರ ಪುಟ. ೫೯೨*
*Ranajith Guha 1998 Dominance without the hegemony*
*Ranjith Guha (Ed) 1989 Subaltern Studies, Vol. I*
*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೭ -೨೨; ೪-೩೦೧, ೯-೩೦೩-೧೧), (೭-೧೪),(೭-೧೫), (೮-೩೩೬)*
*ಎಂ. ವಿ. ಕೃಷ್ಣರಾವ್ ೧೯೫೩ ಕೌಟಿಲ್ಯ*
*R.P. Kangle 1988 The kautiliyaArthashastra. (part-3)*
*ಶಂಬಾ ಜೋಶಿ ೧೯೯೯ ಹಾಲುಮತ ದರ್ಶನ ಸಂಪುಟ. ೩ ಪುಟ. ೧೬.*

**೩೮೪. ದಕ್ಷಿಣೋತ್ತರ ಮಾರ್ಗ**

ಕವಿರಾಜ ಮಾರ್ಗಕಾರನು ವಿಶೇಷವಾಗಿ ಉಕ್ತಿ ಪ್ರಭೇದವನ್ನು ತಿಳಿಸಿದ್ದಾನೆ. ಹಾಗೂ ದಕ್ಷಿಣೋತ್ತರ ಮಾರ್ಗವನ್ನು ವಿವರಿಸಿದ್ದಾನೆ.

'ಕನ್ನಡ ನಾಡಿನ ನಡುವಣ ಕಿಸುವೊಳಲು, ಕೊಪಣನಗರ, ಪುಲಿಗೆರೆ ಒಂಕುಂದ ಎಂಬ ನಾಲ್ಕು ಸೀಮಾಂತರ್ಗತ ಭಾಗವೇ ತಿರುಳ್ಗನ್ನಡ. ಆ ತಿರುಳ್ಗನ್ನಡದಿಂದ ತೆಂಕ ಕಾವೇರಿಯವರೆಗಿನ, ಬಡಗ ಗೋದಾವರಿಯವರೆಗಿನ ಪ್ರಾಂತದವುಗಳಿಗೆ ಕ್ರಮವಾಗಿ 'ತೆಂಗನ್ನಡ' 'ಬಡಗನ್ನಡ'ವೆಂದು ಅಂಕಿತವಿಟ್ಟುಕೊಳ್ಳಬೇಕು. ಈ ಅಂಕಿತಗಳೆಂದರೆ ಬರಿಯ ಕಲ್ಪಿತಗಳು ಎಂದು ಭಾವಿಸಬಾರದು. ಮುಂದೆ ದ್ವಿತೀಯ ಪರಿಚ್ಛೇದ ೧೦೨-೧೧೦ರವರೆಗಿನ ಪದ್ಯಗಳಲ್ಲಿ ಸರಿಯಾಗಿ 'ಇದು ದಕ್ಷಿಣ ಮಾರ್ಗ ವಿಚಕ್ಷಣೋದಿತಂ ಇವುತ್ತರ ಮಾರ್ಗವರ್ತಿಗಳ್ ಎಂದು ಮುಂತಾಗಿ ಕೆಲವು ದೃಷ್ಟಾಂತ ಪದ್ಯಗಳಿಂದ ವಿಸ್ತರಿಸಿದ್ದಾನೆ. ಆ ತಿರುಳ್ಗನ್ನಡ ನಾಡಿನಿಂದ ತೆಂಕಣ ಶೈಲಿಯನ್ನೇ ದಕ್ಷಿಣ ಮಾರ್ಗವೆಂದೂ, ಬಡಗಣವನ್ನೇ ಉತ್ತರ ಮಾರ್ಗವೆಂದೂ ಗ್ರಂಥಕಾರನಾಡಿದುದೆಂಬಲ್ಲಿ ಸಂಶಯವಿಲ್ಲ.

ಇಲ್ಲಿ ದಕ್ಷಿಣೋತ್ತರ ಮಾರ್ಗದ ಬಗ್ಗೆ ಮುಳಿಯ ಅಭಿಪ್ರಾಯ ಗಮನಾರ್ಹ. ಪ್ರಾಂತ್ಯ ಎನ್ನುವುದನ್ನು ನಾವೀಗ ಪ್ರದೇಶ ಎನ್ನುವ ಅರ್ಥದಲ್ಲಿ ಬಳಸುತ್ತೇವೆ. ಕವಿರಾಜ ಮಾರ್ಗದಲ್ಲಿ ನಾಲ್ಕು ಪ್ರಾಂತ್ಯಗಳ ಹೆಸರುಗಳು ಉಲ್ಲೇಖಗೊಂಡಿವೆ. ಕನ್ನಡನಾಡಿನ ನಡುವಣ 'ಕಿಸುವೊಳಲು' 'ಕೊಪಣನಗರ' 'ಪುಲಿಗೆರೆ'. 'ಒಂಕುಂದ' ಇದರಲ್ಲಿ ಪುಲಿಗೆರೆಯದ್ದು ಅಚ್ಚ ಕನ್ನಡವೆಂದು ಪಂಪನು ಹೇಳಿಕೊಂಡಿದ್ದಾನೆ. ಕವಿರಾಜ ಮಾರ್ಗದಲ್ಲಿ ಈ ರೀತಿಯಾಗಿ ಪ್ರಾಂತ್ಯ ಭೇದವನ್ನು ಹೀಗೆ ಹೇಳಲಾಗಿದೆ:

೧)  .........ಇದು ದಕ್ಷಿಣಮಾರ್ಗ ವಿಚಕ್ಷಣೋದಿಂ ॥ ೧೦೨ ॥
೨)  ..........ಇದು ದಕ್ಷಿಣಮಾರ್ಗ ವಿಶೇಷ ಭಾಷಿತಂ ॥ ೧೦೪ ॥
೩)  ................................ಇದು ದಾಕ್ಷಿಣಾತ್ಯಕಂ ॥ ೧೦೮ ॥
೪)  ............................ಎಂಬುದು ದಕ್ಷಿಣಾಯನಂ ॥ ೧೦೯ ॥
೫)  ................................ಎಂಬುದು ದಕ್ಷಿಣಾಪಥಂ ॥ ೧೧೦ ॥
೬)  ............................ಇವುತ್ತರ ಮಾರ್ಗವರ್ತಿಗಳ್ ॥ ೧೦೫ ॥
೭)  ............................ಇದಕ್ಕುರಮುದೀಚ್ಯವಾಚಕಂ ॥ ೧೦೮ ॥
೮)  ................................ಇದು ಉತ್ತರಾಯಣಂ ॥ ೧೦೯ ॥
೯)  ..........................................ಇದುತ್ತರಾಪಥಂ ॥ ೧೧೦ ॥
೧೦)  .........................ಎಂಬುದಿದುತ್ತರೋತ್ತರಂ ॥ ೧೦೬ ॥

ಇವುಗಳೊಳಗೆ ಆದಿಯ ಐದರ ಪದ ಶೈಲಿ ನಡುವಣ ಕನ್ನಡದ ತಿರುಳ್ನಾಡಿನಿಂದ ತೆಂಕಣ ಕಾವೇರಿವರೆಗಿನದೆಂದೂ ಮತ್ತಿನ ನಾಲ್ಕರದು ಬಡಗಣ ಗೋದಾವರಿವರೆಗಿನದೆಂದೂ ಸಿದ್ಧವಾಗುತ್ತದೆ. ಇವಲ್ಲದೆ ಇನ್ನೊಂದು ಮಾರ್ಗವನ್ನೂ "....ಎಂಬುದಿದುತ್ತರೋತ್ತರಂ ॥ ೧೦೬ ॥ ಎಂದು ದೃಷ್ಟಾಂತಿಸಿದ್ದಾನೆ.

(ನೋಡಿ : ಕವಿರಾಜಮಾರ್ಗ.)

*ವಿವರಗಳಿಗೆ ನೋಡಿ: ಪೆಲ್ಡನ್ ಪೊಲಾಕ್–ವಿಶ್ವಾತ್ಮಕ ದೇಶಭಾಷೆ*
*ಕೆ.ವಿ.ಸುಬ್ಬಣ್ಣ 2007 ಕವಿರಾಜಮಾರ್ಗ ಮತ್ತು ಕನ್ನಡ ಜಗತ್ತು*
*ಮುಳಿಯ ತಿಮ್ಮಪ್ಪಯ್ಯ ೧೯೫೪ ಕನ್ನಡನಾಡೂ ದೇಸಿ ಸಾಹಿತ್ಯವೂ ಪುಟ. ೨೦*
*ಮುಳಿಯ ತಿಮ್ಮಪ್ಪಯ್ಯ ೧೯೮೮ ಶ್ರದ್ಧಾಂಜಲಿ ಸಂಪುಟ ೨ ಪುಟ. ೪೭೪*
*ಡಾ.ಕೆ.ಕೃಷ್ಣಮೂರ್ತಿ ೧೯೬೧ ಕನ್ನಡ ಕಾವ್ಯಾಲಂಕಾರ ಪೀಠಿಕೆ: ೪೧, ೪೨, ೪೩*

**೩೮೫. ದಮ್ಮ**

*ಕವಿವರರುಂ ಪೆಂಡವಾಸದೊಳ್ವೆಂಡಿರ್ಕಳುಂ ವಿಮಾನಂಗಳ ಮುಂದಾಡುತ್ತಂ* ***ದಮ್ಮಮುಮಂ*** *ಪೊನ್ನುಮಂ*

*ಕೇಳಿ ಮಾಡಿ ಮುಂದೆ...........   (ಡಿ.ಎಲ್.ಎನ್. ೨೦೦೯ ಪುಟ. ೧೨೮).*

'ದಮ್ಮ' ಎನ್ನುವುದು ಹಣವೆನ್ನುವ ರೂಪದಲ್ಲಿ ಬಳಕೆಯಾಗಿದೆ. ದ್ರಮ್ಮದಿಂದ ದಮ್ಮ ಬಂದಿದೆ.

ಈಶಾನ್ಯ ಭಾರತದಲ್ಲಿ ಹಲವು ನಗರಗಳು ತಲೆಯೆತ್ತಿದುವು. ಅಲಹಾಬಾದಿನ ಬಳಿಯ ಕೌಶಾಂಬಿ, ಉತ್ತರ ಪ್ರದೇಶದ ದಿಯೋರಿಯಾ ಜಿಲ್ಲೆಯಲ್ಲಿರುವ ಕುಶೀನಗರ, ವಾರಣಾಸಿ, ಬಿಹಾರದಲ್ಲಿರುವ ವೈಶಾಲಿ, ಚಿರಾಂಡ್ ಮತ್ತು ರಾಜಗೃಹಗಳು ಉತ್ತಮ ಉದಾಹರಣೆಗಳು. ಈ ನಗರಗಳಲ್ಲೆಲ್ಲಾ ಕುಶಲ ಕಸುಬುಗಾರರು ಮತ್ತು ವ್ಯಾಪಾರಿಗಳು ನೆಲೆಸಿದ್ದು ಅವರು ಮೊಟ್ಟಮೊದಲಿಗೆ ನಾಣ್ಯಗಳನ್ನು ಬಳಸಲಾರಂಭಿಸಿದರು.

ಈ ಅತ್ಯಂತ ಪ್ರಾಚೀನ ನಾಣ್ಯಗಳು ಕ್ರಿ.ಪೂ. ಐದನೆಯ ಶತಮಾನದವು. ಅವುಗಳನ್ನು ಕಚ್ಚು ಗುರುತಿನ ಅಥವಾ ಪಂಚ್‌ಮಾರ್ಕ್ಡ್ ನಾಣ್ಯಗಳೆಂದು ಕರೆಯುತ್ತಾರೆ. ಅವು ಪೂರ್ವ ಉತ್ತರ ಪ್ರದೇಶದಲ್ಲಿ ಹಾಗೂ ಬಿಹಾರದಲ್ಲಿ ಚಲಾವಣೆಗೆ ಬಂದವು. ಈ ನಾಣ್ಯಗಳು ವ್ಯಾಪಾರ ವ್ಯವಹಾರಗಳನ್ನು ಬಲಪಡಿಸಿದವು. ಇದರಿಂದ ವರ್ಣವಿಭಜಿತ ಸಮಾಜದಲ್ಲಿ ಮೂರನೆಯ ಸ್ಥಾನದಲ್ಲಿದ್ದ ವೈಶ್ಯರು ತಮ್ಮ ಸ್ಥಾನವನ್ನು ಉನ್ನತಗೊಳಿಸುವ ಬೇರಾವುದಾದರೂ ಮತಧರ್ಮದತ್ತ ಗಮನ ಹರಿಸತೊಡಗಿದರು. ಸಹಜವಾಗಿ ಅವರು ಮಹಾವೀರ ಮತ್ತು ಗೌತಮ ಬುದ್ಧರಿಗೆ ಧಾರಾಳವಾಗಿ ಬೆಂಬಲ ನೀಡಿದರು. ಸೇಠಿಗಳೆಂದು ಹೆಸರಾಗಿದ್ದ ವ್ಯಾಪಾರಸ್ಥರು ಗೌತಮ ಬುದ್ಧನಿಗೂ ಅವನ ಶಿಷ್ಯರಿಗೂ ಕೊಡುಗೈಯಿಂದ ಕಾಣಿಕೆಗಳನ್ನಿತ್ತರು. ಇದಕ್ಕೆ ಹಲವು ಕಾರಣಗಳನ್ನು ಗುರುತಿಸಬಹುದು. ಆರಂಭ ಹಂತದಲ್ಲಿ ಜೈನ ಹಾಗೂ ಬೌದ್ಧ ಮತಗಳು ಪ್ರಚಲಿತವಾಗಿದ್ದ ವರ್ಣ ವ್ಯವಸ್ಥೆಗೆ ಮಹತ್ವ ನೀಡಲಿಲ್ಲ. ಎರಡನೆಯದಾಗಿ ಅವೆರಡು ಮತಗಳೂ, ರಾಜ್ಯ ರಾಜ್ಯಗಳ ನಡುವಣ ಯುದ್ಧಗಳಿಗೆ ತಡೆ ವಿಧಿಸಿ, ವ್ಯಾಪಾರ ವಾಣಿಜ್ಯಗಳಿಗೆ ಪ್ರೋತ್ಸಾಹ ನೀಡಬಹುದಾಗಿದ್ದಂತಹ ಅಹಿಂಸೆಯನ್ನು ಪ್ರತಿಪಾದಿಸುತ್ತಿದ್ದುವು. ಮೂರನೆಯದಾಗಿ ಬ್ರಾಹ್ಮಣೀಯ ನ್ಯಾಯಶಾಸ್ತ್ರ ಗ್ರಂಥಗಳಾದ ಧರ್ಮಸೂತ್ರಗಳು ಬಡ್ಡಿಯ ಮೇಲೆ ಹಣವನ್ನು ಸಾಲ ನೀಡುವುದನ್ನು ಧಿಕ್ಕರಿಸಿ, ಅಂತಹವರನ್ನು ಖಂಡಿಸುತ್ತಿದ್ದುವು. ಆ ಕಾರಣದಿಂದ ವಿಸ್ತಾರಗೊಳ್ಳುತ್ತಿದ್ದ ವ್ಯಾಪಾರ ವಾಣಿಜ್ಯಗಳಿಗಾಗಿ ಬಡ್ಡಿಗೆ ಹಣ ನೀಡುತ್ತಿದ್ದ ವೈಶ್ಯರಲ್ಲಿ ಸಮಾಜವು ಗೌರವ ಭಾವ ತಳೆದಿರಲಿಲ್ಲ. ಅವರು ತಮ್ಮ ಸ್ಥಾನಮಾನಗಳನ್ನು ಉತ್ತಮ ಪಡಿಸಿಕೊಳ್ಳುವುದಕ್ಕೆ ಕಾತುರರಾಗಿದ್ದರು.

ಹಾಗೆಯೇ ಹಣದ ಚಲಾವಣೆಯು ವ್ಯಾಪಾರಕ್ಕೆ ಉತ್ತೇಜನ ನೀಡಿತು. ವೈದಿಕ ಗ್ರಂಥಗಳಲ್ಲಿ ಕಂಡುಬರುವ ನಿಷ್ಕ ಮತ್ತು ಶತಮಾನ ಎಂಬವು ನಾಣ್ಯಗಳ ಹೆಸರು ಎಂದು ಪರಿಗಣಿತವಾಗಿದ್ದರೂ ಅವು ಲೋಹದಲ್ಲಿ ಮಾಡಿದ ಪ್ರತಿಷ್ಠೆಯ ವಸ್ತುಗಳಾಗಿದ್ದುವೆಂದು ತೋರುತ್ತದೆ. ದೊರೆತಿರುವ ನಾಣ್ಯಗಳು ಕ್ರಿ.ಪೂ. ಆರನೆಯ ಶತಮಾನಕ್ಕಿಂತ ಹಿಂದಕ್ಕೆ ಹೋಗುವುದಿಲ್ಲ. ವೇದ ಕಾಲದಲ್ಲಿ ವಸ್ತುಗಳ ಅದಲು-ಬದಲು ಅಥವಾ ವಿನಿಮಯ ಜರುಗುತ್ತಿತ್ತು. ಕೆಲವೊಮ್ಮೆ ಧನಗಳು ನಾಣ್ಯಗಳ ಕಾರ್ಯ ನಿರ್ವಹಿಸಿರಬಹುದು. ಮೊದಮೊದಲ ಲೋಹ ನಾಣ್ಯಗಳು ಗೌತಮ ಬುದ್ಧನ ಕಾಲಕ್ಕೆ ಸೇರಿದವು. ಅತ್ಯಂತ ಪ್ರಾಚೀನವಾದಂತಹವು ಬಹುಮಟ್ಟಿಗೆ ಬೆಳ್ಳಿಯವಾದರೂ, ಕೆಲವು ತಾಮ್ರದವೂ ಇವೆ. ಅವು ಕಚ್ಚು ಗುರುತು ನಾಣ್ಯಗಳು. ಅವುಗಳ ಮೇಲೆ ಬೆಟ್ಟ, ಮರ, ಮೀನು, ಎತ್ತು, ಆನೆ, ಬಾಲಚಂದ್ರ ಇತ್ಯಾದಿ ಚಿತ್ರಗಳನ್ನು ಮೂಡಿಸಲಾಗಿದೆ. ಅತ್ಯಂತ ಪ್ರಾಚೀನವಾದಂತಹವು ಪೂರ್ವ ಉತ್ತರ ಪ್ರದೇಶ ಮತ್ತು ಮಗಧಗಳಲ್ಲಿ, ಕೆಲವೇ ಕೆಲವು ತಕ್ಷಶಿಲೆಯಲ್ಲೂ ದೊರೆತಿವೆ. ಪಾಲಿ ಗ್ರಂಥಗಳು ವ್ಯಾಪಕವಾದ ಹಣ ಚಲಾವಣೆಯನ್ನೂ, ಕೂಲಿ ಮತ್ತು ಬೆಲೆಗಳು ನಾಣ್ಯಗಳಲ್ಲಿ ನೀಡಲ್ಪಡುತ್ತಿದ್ದುದನ್ನೂ ಸೂಚಿಸಿವೆ. ಹಣ ಎಷ್ಟುಮಟ್ಟಿಗೆ ಸಾಮಾನ್ಯ ಬಳಕೆಗೆ ಬಂದಿತ್ತೆಂದರೆ, ಸತ್ತ ಇಲಿಯ ಬೆಲೆಯನ್ನು ಸಹ

ಹಣರೂಪದಲ್ಲಿ ಅಂದಾಜು ಮಾಡಲಾಗುತ್ತಿತ್ತು.

ಮೌರ್ಯೋತ್ತರ ಕಾಲದಲ್ಲಿ ಗ್ರೀಕರ ಸಂಪರ್ಕದಿಂದ ಭಾರತೀಯ ಜ್ಯೋತಿಷ್ಯ ಹಾಗೂ ಖಗೋಳ ವಿಜ್ಞಾನಿಗಳಿಗೆ ಬಹಳ ಲಾಭವಾಯಿತು. ಗ್ರಹಗಳ ಚಲನೆಗೆ ಸಂಬಂಧಪಟ್ಟ ಹಲವಾರು ಗ್ರೀಕ್ ಶಬ್ದಗಳನ್ನು ಸಂಸ್ಕೃತ ಗ್ರಂಥಗಳಲ್ಲಿ ಕಾಣಬಹುದು. ಸಂಸ್ಕೃತದಲ್ಲಿ ಜ್ಯೋತಿಷ್ಯವನ್ನು ಹೋರಾ ಶಾಸ್ತ್ರವೆಂದು ಸಹ ಕರೆಯುತ್ತಾರೆ. ಅದು ಹೋರೋಸ್ಕೋಪ್ ಎಂಬ ಗ್ರೀಕ್ ಶಬ್ದದಿಂದ ರೂಪತಳೆದುದು. ಗ್ರೀಕ್ ಭಾವನೆಗಳಿಂದ ಭಾರತೀಯ ಜ್ಯೋತಿಷ್ಯವು ಪ್ರಭಾವಿತವಾಗಿದೆ. ಕಚ್ಚು ಗುರುತಿನ ನ್ಯಾಣಗಳಿಗೆ ಹೋಲಿಸಿದರೆ ಗ್ರೀಕ್ ನಾಣ್ಯಗಳು ಆಕಾರ, ಮುದ್ರೆ ಎರಡರಲ್ಲೂ ಬಹಳ ಉತ್ತಮವಾಗಿದ್ದುವು. ಗ್ರೀಕ್ ಭಾಷೆಯ ನಾಣ್ಯ ಸೂಚಕ ಶಬ್ದ ಡ್ರಾಕ್ಮಾ ಎಂಬುದು ಭಾರತದಲ್ಲಿ ಡ್ರಾಮ್ಮಾ ಎಂದಾಯಿತು. ಗ್ರೀಕ್ ಅರಸರು ತಮ್ಮ ನಾಣ್ಯಗಳ ಮೇಲೆ ಬ್ರಾಹ್ಮಿಲಿಪಿಯನ್ನೂ, ಭಾರತೀಯ ಸಂಕೇತಗಳನ್ನೂ ಬಳಸತೊಡಗಿದರು. ನಾಯಿಗಳು, ದನಗಳು, ಸಂಬಾರ ವಸ್ತುಗಳು ಮತ್ತು ದಂತದ ವಸ್ತುಗಳನ್ನು ಅವರು ರಫ್ತು ಮಾಡುತ್ತಿದ್ದರು. ಆದರೆ ಅವರು ಭಾರತದಿಂದ ಯಾವುದಾದರೂ ಕುಶಲ ಕಲೆ ಅಥವಾ ಕಸುಬನ್ನು ಕಲಿತರೇ ಎಂಬುದು ಸ್ಪಷ್ಟವಾಗಿ ತಿಳಿದುಬಂದಿಲ್ಲ ಎಂದು ಆರ್.ಎಸ್.ಶರ್ಮ ಹೇಳುತ್ತಾರೆ.

*ವಿವರಗಳಿಗೆ ನೋಡಿ: ಆರ್. ಎಸ್. ಶರ್ಮ ೨೦೦೭*
*ಪ್ರಾಚೀನ ಭಾರತ ಪುಟ. ೯೧-೯೩, ೧೧೮-೧೧೯, ೧೬೪*

**೩೮೬. ದರ್ಭಾಧಿಕಾರ**

*ಚಾತುರ್ವರ್ಣ್ಯದೊಳಂ ದ್ವಿಜ*
*ಜಾತಿಗೆ **ದರ್ಭಾಧಿಕಾರ**ಮಲ್ಲದೆ ವಂಶೋ ।*
*ದ್ಭೂತನೃಪೋಚಿತಮರಿಯಂ*
*ಘಾತಿಪ ಶಸ್ತ್ರಾಸ್ತ್ರಮವರ್ಗೆ ಜಾತಿವಿರುದ್ಧಂ ॥*

*(ಸಾಹಸ ಭೀಮ ವಿಜಯ ೨-೧೭)*

ದರ್ಭೆ ಹಿಡಿದ (ಬ್ರಾಹ್ಮಣ ವೇಷಧಾರಿಯಾದ) ಧರ್ಮರಾಜನೂ, ಹುಟ್ಟು ಹಿಡಿದು (ಅಡುಗೆಭಟ್ಟನಾದ) ಭೀಮನೂ, ಕೈಗೆಟ್ಟ (ಬೃಹನ್ನಳೆಯಾದ) ಅರ್ಜುನನೂ, ಕೋಲು ಹಿಡಿದ (ದನಕಾಯುವ, ಕುದುರೆ ಕಾಯುವ) ನಕುಲ ಸಹದೇವರೂ ಹಾಗೆಯೇ ತಣ್ಣಗಿರಬಾರದೆ? ಶಸ್ತ್ರಾಸ್ತ್ರಗಳನ್ನು ಎತ್ತಿಕೊಂಡು ಬರುವ ಆಡಂಬರವಾದರೂ ಏಕೆ ಅವರಿಗೆ? ದ್ರೌಪದಿಯೂ ಗಂಧ ಅರೆಯುವ ದಾಸಿಯಾಗಿರಲಿಲ್ಲವೆ? ವಿರಾಟರಾಜನ ಅರಮನೆಯಲ್ಲಿ ಹೀಗೆ ಇವರೆಲ್ಲರಿಗೆ ಉಂಟಾಗಿದ್ದ ಸ್ಥಿತಿಯೇನು ಕೇಡೆ?

ವಿರಾಟ ರಾಜನ ಆಸ್ಥಾನದಲ್ಲಿ ಪಾಂಡವರು ಹೇಗಿದ್ದರು ಎಂದು ಪದ್ಯ ಮತ್ತು ಅದರ ವಿವರಣೆಯು ತಿಳಿಸುತ್ತದೆ. ದರ್ಭೆ ಪಾಣಿ ಅಂದರೆ ಬ್ರಾಹ್ಮಣ ವೇಷದ ಧರ್ಮರಾಯ. ದರ್ವೀಕರ ಎಂದರೆ ಸೌಟು ಹಿಡಿಯುವುದು ಜರ್ಜರ ಹಸ್ತ ಎಂದರೆ ಜಿಲ್ಲು ಹಿಡಿಯ

ಬೇಕಾದ ಕೈ ದ್ರಸ್ಮಾತ್ಮಜರು ಎಂದರೆ ಅಶ್ವಿನಿ ಕುಮಾರರು. ನಕುಲ– ಸಹದೇವರು ದಂಡ ಮುಷ್ಟೀಕರರು ಅಂದರೆ ದನ–ಕುದುರೆ ಕಾಯಲು ಕೋಲು ಹಿಡಿದರು. ದ್ರೌಪದಿಯು ಗಂಧದಾಯಕಿ ಅಂದರೆ ಗಂಧ ತೇಯುವವಳು. ಸಾಹಸ ಭೀಮ ವಿಜಯದಲ್ಲಿ ಕೌರವನು ಈ ರೀತಿಯಲ್ಲಿ ಹೇಳುತ್ತಾನೆ.

ಮತ್ಸ್ಯಗೃಹದಲ್ಲಿ (ವಿರಾಟನ ಅರಮನೆಯಲ್ಲಿ) ಇಂತಹ ಕೀಳು ಬಾಳನ್ನು ಬಾಳಿದವರು ಇಂದು ಶಸ್ತ್ರ ಹಿಡಿಯುವಂತಾದರೇ? ಅಷ್ಟು ಸೊಕ್ಕು ಬಂದೀತೆ ಅವರಿಗೆ? ಎಂಬುದು ಅವನ ಮಾತಿನ ಇಂಗಿತವಾಗಿದೆ.

ದರ್ಭೆಯನ್ನು ಹಿಡಿಯುವುದು ಕೂಡಾ ಅಧಿಕಾರವೆಂಬ ಪರಿಕಲ್ಪನೆ ಬಂದಿರುವುದು ವಿಶೇಷ. ರಾಜರಿಗೆ ದಂಡಾಧಿಕಾರ. ಬ್ರಾಹ್ಮಣರಿಗೆ ದರ್ಭಾಧಿಕಾರವೆಂದಿರುವುದು ಧಾರ್ಮಿಕ ಹಿತಾಸಕ್ತಿಯನ್ನು ಸೂಚಿಸುತ್ತದೆ. ಎರಡನೆಯದು ದರ್ಭೆಯನ್ನು ಹಿಡಿಯುವುದು ಬ್ರಾಹ್ಮಣರ ಹಕ್ಕು. ಅದನ್ನು ಉಳಿದ ಜಾತಿಯವರು ಬಳಸುವಂತಿಲ್ಲ.

*ವಿವರಗಳಿಗೆ ನೋಡಿ: ಸಾಹಸ ಭೀಮ ವಿಜಯ ೩–೩೪.*

**೩೮೭. ದರ್ಶನ ವಿಶುದ್ಧಿ**

*"ಸಿದ್ಧಾರ್ಥ ಭಟಾರರಂ ಕಂಡು ಸುಕೌಶಳಸ್ವಾಮಿ ಜಾತಿಸ್ಮರನಾಗಿ **ದರ್ಶನವಿಶುದ್ಧಿ**ಯೊಳ್ ಕೂಡಿದ ಶುಭಪರಿಣಾಮದಿಂದಂ ಬಂದಿಸಿದಾಗಳವಧಿ ಜ್ಞಾನಮುಮಾಗೆ ಅವರ ತನ್ನ ಮುನ್ನಿನ ಭವಾಂತರಂಗಳೆಲ್ಲಮಂ ಪ್ರತ್ಯಕ್ಷಮಾಗಱಿದು ಮನದೊಳಿಂತೆಂದು ಬಗೆದನ್..........*

*(ಡಿ.ಎಲ್.ಎನ್. ವಡ್ಡಾರಾಧನೆ ೨೦೦೯ ಪುಟ. ೧೫೩ – ೧೫೫)*

ದರ್ಶನ ವಿಶುದ್ಧಿಯೆಂದರೆ ಜೈನ ತೀರ್ಥಂಕರರ ತತ್ವಕ್ಕೆ ಕಾರಣವಾಗುವ ಹದಿನಾರು ಭಾವಗಳಲ್ಲಿ ಒಂದು. ಸಮ್ಯಕ್ ದರ್ಶನದ ಬಗೆಗಿನ ಪರಿಶುದ್ಧ ದೃಷ್ಟಿ. ಉಪಯೋಗದಲ್ಲಿ ದರ್ಶನೋಪಯೋಗ, ಜ್ಞಾನೋಪಯೋಗ ಎಂಬ ಎರಡು ಪ್ರಕಾರಗಳು. ದರ್ಶನೋಪಯೋಗ– ವಿಶೇಷಜ್ಞಾನರಹಿತವಾದ ಸಾಮಾನ್ಯ ಅನುಭೂತಿಯು ದರ್ಶನೋಪಯೋಗವು. ಇದರಲ್ಲಿ ಚಕ್ಷುರ್ದರ್ಶನ, ಅಚಕ್ಷುರ್ದರ್ಶನ, ಅವಧಿದರ್ಶನ, ಕೇವಲದರ್ಶನ ಎಂಬ ನಾಲ್ಕು ಪ್ರಕಾರಗಳುಂಟು. ಚಕ್ಷುರಿಂದ್ರಿಯದಿಂದಾಗುವ ಅನುಭೂತಿಯು ಅಚಕ್ಷುರ್ದರ್ಶನವು; ಕರ್ಣರಸನಾದಿ ಇಂದ್ರಿಯಗಳಿಂದಾಗುವ ಅನುಭೂತಿಯು ಅಚಕ್ಷುರ್ದರ್ಶನವು; ಸ್ಥೂಲೇಂದ್ರಿಯಗಳಿಗೆ ಗೋಚರವಾಗದ ವಿಷಯಗಳು ಕೆಲವೊಂದು ಮರ್ಯಾದೆ(ಅವಧಿ)ಯಿಂದ ಗೋಚರವಾಗುವುದು ಅವಧಿ ದರ್ಶನವು; ಜಗತ್ತಿನೊಳಗಿನ ಸಮಸ್ತ ವಸ್ತುಗಳ ನಿತ್ಯವಾದ ಅಪರೋಕ್ಷಾನುಭೂತಿಯು; ಕೇವಲದರ್ಶನವು. ಅವಧಿದರ್ಶನ, ಕೇವಲದರ್ಶನಗಳು ಅಸಾಧಾರಣಗಳು; ಎಂದರೆ ಅವು ಎಲ್ಲ ಜೀವರಲ್ಲಿರುವುದಿಲ್ಲ. ಕೇವಲದರ್ಶನವು ಮುಕ್ತ ಜೀವರಲ್ಲಿ ಮಾತ್ರ ಇರುವುದು.

ದರ್ಶನವೆಂದರೆ ಒಳನೋಟ. ಜೈನಧರ್ಮದ ಪ್ರಕಾರ ದರ್ಶನವು ಜ್ಞಾನಕ್ಕೆ

ಸಂಬಂಧಿಸಿರುವುದು ಷಡ್ದರ್ಶನಗಳು ಬೇರೆ. ಜೈನಧರ್ಮ ಹೇಳುವ ದರ್ಶನವು ಬೇರೆ.

ದರ್ಶನ– ರೂಪಾದಿ ವಿಶೇಷ ವಿಷಯಗಳ ಜ್ಞಾನವಿಲ್ಲದೆ ಉಂಟಾಗುವ ಸಾಮಾನ್ಯದ ಅನುಭೂತಿಯ ದರ್ಶನವು. ಇದು ಚಕ್ಷುರ್ದರ್ಶನ, ಅಚಕ್ಷುರ್ದರ್ಶನ, ಅವಧಿದರ್ಶನ, ಕೇವಲದರ್ಶನ ಎಂದು ನಾಲ್ಕು ಬಗೆಯಾಗಿದೆ. ಚಾಕ್ಷುಷ ಅನುಭೂತಿಯೆಲ್ಲವೂ ಚಕ್ಷುರ್ದರ್ಶನವು. ಉಳಿದ ಇಂದ್ರಿಯಗಳ ಅನುಭೂತಿಯು ಅಚಕ್ಷುರ್ದಶನವು. ಸ್ಥೂಲೇಂದ್ರಿಯಗಳಿಗೆ ಅಗಮ್ಯವಾದ ವಿಷಯಗಳ ಅನುಭೂತಿಯು ಅವಧಿದರ್ಶನವು; ವಿಶ್ವದೊಳಗಿನ ಎಲ್ಲ ವಸ್ತುಗಳ ಅಪರೋಕ್ಷ–ಅನುಭೂತಿಯು ಕೇವಲದರ್ಶನವು.

*ವಿವರಗಳಿಗೆ ನೋಡಿ: ಮಹದೇವ ಪ್ರಭಾಕರ ಪೂಜಾರ ೧೯೭೬*
*ಜೈನಧರ್ಮ ಪರಿಭಾಷೆ ಪುಟ. ೪, ೪೧.*

**೩೮೮. ದಶಗುಣಧರ್ಮಗಳು**

'ಮಹಾನುಭಾವೆಗೆ **ದಶಗುಣ** ಧರ್ಮ ಪ್ರಭಾವಮನೆ' (೩–೨೧ವ) ಎಂದಿದೆ.

ಅಜಿತತೀರ್ಥಂಕರ ಪುರಾಣದಲ್ಲಿ ದಶಗುಣಧರ್ಮದ ಬಗ್ಗೆ ಬರುತ್ತದೆ. ದಶ ಗುಣವೆಂದರೆ ಹತ್ತು ಪಟ್ಟು. ಹಾಡಬೇಕಾದ ಕೃತಿಯಲ್ಲಿ ನಿರೀಕ್ಷಿಸುವ ಹತ್ತು ಗುಣ ಎಂಬ ಅರ್ಥವೂ ಇದೆ. ಹಾಗೆಯೇ ಜೈನರಲ್ಲಿ ದಶ ಕುಲಧರ್ಮ ಎನ್ನುವ ಪರಿಕಲ್ಪನೆಯಿದೆ. ಸನ್ಯಾಸಿ ಅನುಸರಿಸಬೇಕಾದ ಕ್ಷಮೆ, ಮಾರ್ದವ, ಆರ್ಜವ, ಸತ್ಯ ಶೌಚ, ಸಂಯಮ, ತಪಸ್ಸುತ್ಯಾಗ ಅಕಿಂಚನ್ಯ, ಬ್ರಹ್ಮಚರ್ಯಗಳೆಂಬ ಹತ್ತು ಧರ್ಮಗಳು.

'ದಮ', 'ತಪ', ಗಳೆಂದರೆ, ಅಭ್ಯಾಸಬಲದಿಂದ ಯತಿಗಳಲ್ಲಿ ಮಾತ್ರವೇ ನೆಲೆವಡೆವ ಕಠಿನವಾದ ಇಂದ್ರಿಯ ನಿಗ್ರಹಗಳೆಂಬ ಮಹಾವ್ರತರೂಪ ಧರ್ಮಗಳಲ್ಲ. ವ್ಯಕ್ತಿಯ 'ದಯೆ', 'ದಾನ', 'ಶೀಲ'ಗಳನ್ನು ಸ್ಥಿರಗೊಳಿಸಿ ಸಮಾಜವನ್ನು ಬೆಳಗಿಸಲಿರುವ ಅಣುವ್ರತ ರೂಪವಾದ ಸಂಸಾರ ಧರ್ಮಾಂಗಗಳೆಂಬುದನ್ನು ಮರೆಯಬಾರದು. ಆಗಮಿಕವಾದ 'ಆದಿಪುರಾಣ'ದಲ್ಲಿಯೂ ಲೌಕಿಕವಾದ 'ಸಮಸ್ತಭಾರತ'ದಲ್ಲಿಯೂ ತೋರುವ ಈ ಅಭಿನ್ನವಾದ ಪದ್ಯಾರ್ಥವನ್ನು ಗಮನಿಸಬಹುದು.

ಕಟಿದವರ್ಗಟ್ಟುವದಟಿಸ್ತೊಡವರೇಟ್ವರೆ ಮೇಣವರಿಂ ಬಟಿಕ್ಕೆ ತಾ
ಮುಟಿವರೆ ಯೇಟಿರಂತವ ರಣಂ ತಮಗಂ ಬರ್ದುಕಿಲ್ಲ ಧರ್ಮಮಂ ।
ಘಟಿಯಿಸಿ ಕೊಳ್ವುದೊಂದೆ ಚದುರಿಂತುಟು ಸಂಸ್ಕೃತಿಧರ್ಮಮೇಕೆ ಬಾ
ಯಟಿವುದದೇಕೆ ಚಿಂತಿಸುವುದೇಕೆ ಪಲುಂಬುವುದೇಕೆ ನೋವುದೋ ॥

(ಆದಿಪುರಾಣಂ ೩–೫೩)

ಇಂಥ 'ಸಂಸ್ಕೃತಿಧರ್ಮ'ವನ್ನು ಅದೊಂದು ತರದ 'ದಮ', 'ತಪ'ಗಳಿಲ್ಲದ ವ್ಯಕ್ತಿಗಳಿಗೆ ಅನುಸರಿಸಲಾಗುವುದೇ? ಆಗದಿದ್ದರೂ ಅಂಥ ಇಂದ್ರಿಯನಿಗ್ರಹ ಭಾವನೆ ವಿಶ್ವ ಸಂಸಾರದಲ್ಲಿ ಸಾಮಾನ್ಯವಾಗಿ ಹರಡಿಕೊಂಡಿರುವುದು ಅವಶ್ಯವೆಂಬುದುನ್ನು ಯಾರು ಅಲ್ಲಗಳೆಯಲಾರರು. ಹಾಗಿಲ್ಲದ ಜೀವನವೆಂದರೆ ಅದೊಂದು ರೌರವಜೀವನವೇ

ಆಗಿ ಬಿಡುವುದು. ಅದರಿಂದ, ಮೇಲೆ ಹೇಳಿದ ಪಂಚಾಂಗಧರ್ಮವು ಜೈನರಿಗೆ ಮಾತ್ರ ಸಂಬದ್ಧವಲ್ಲ, ಎಂಬುದನ್ನು ಎಲ್ಲರೂ ಒಪ್ಪಲೇಬೇಕು. ನಮ್ಮೆಣಿಕೆಯಲ್ಲಿ ಇದು ವಿಶ್ವಕ್ಕೂ ದೇಸಿಯಾದ ಧರ್ಮ. ಆಯಾ ದೇಶಗಳಲ್ಲಿ, ಭಾಷೆಗಳಲ್ಲಿ ಇದಕ್ಕೆ ಭಿನ್ನಭಿನ್ನ ನಾಮಗಳೂ ಇರಬಹುದು. ಇದನ್ನೇ ಆಯಾ ಮತದವರು ತಂತಮ್ಮ ಮಾರ್ಗ (ಮತ) ಧರ್ಮವನ್ನಾಗಿ ವಿಸ್ತರಿಸಿಕೊಂಡಿದ್ದಾರೆ. ವಾಙ್ಮಯದಲ್ಲಿ ಹೇಗೆ 'ದೇಸಿಯಂ ಪೊಸತು ಮಾಡಿಕೊಂಡೇ' 'ಮಾರ್ಗಮಂ ಪೊಸೆಯಿಸ' ಬೇಕಾಗುವುದೋ ಹಾಗೆ, ಈ ಮೂಲಧರ್ಮವನ್ನು 'ಪೊಸತು ಮಾಡಿ'ಯೇ ಭಿನ್ನಭಿನ್ನ ಮತಧರ್ಮಗಳನ್ನು ಸಮಾಜಗಳೊಳಗೆ ವಿಸ್ತರಿಸಿಕೊಳ್ಳ ಬೇಕಾಗುವುದು. 'ಧಾರಣಾಯಾಃ ಧರ್ಮಃ' ಎಂದು ಮೊದಲಾದ ವ್ಯುತ್ಪತ್ತಿಯನ್ನು ನೋಡಿದರೂ 'ಸಂಸಾರವನ್ನು – ತನ್ಮೂಲಕವಾಗಿ ವಿಶ್ವವನ್ನು – ಧರಿಸುವಿಕೆಯಿಂದಲೇ', 'ಧರ್ಮ'ವೆಂಬ ಹೆಸರಾದುದೆಂದು ಗೊತ್ತಾಗುತ್ತಿದೆ. ಇದನ್ನೀಕ್ಷಿಸಿದರೆ, ಪ್ರಪಂಚಧಾರಕ ಪೋಷಕವಾದ ಮನೋವಾಕ್ಕಾಯ ವಿಲಸವನ್ನೇ ಧರ್ಮವೆನ್ನುವುದೆಂದು ಸಿದ್ಧವಾಗುತ್ತಿದೆ. ಧರ್ಮವು ಯಾರ ಸೊತ್ತೂ ಅಲ್ಲ – ಈ ಪ್ರಪಂಚವೇ ಅದರ ಸೊತ್ತು, ಎನ್ನಬಹುದು. ಆ ಧರ್ಮವನ್ನೇ 'ಪರಮಾತ್ಮ' ಎಂದು ಕರೆದರೆ ತಪ್ಪಾಗದು. ಅದರಿಂದ, ಮೇಲೆ ಸೂಚಿಸಿದ 'ನಾಸ್ತಿಕ' ಬಂಧುಗಳೂ ತೃಪ್ತರಾಗಬಹುದೆಂದು ತೋರುತ್ತಿದೆ.

ದಯೆ, ದಾನ, ದಮ, ತಪ, ಶೀಲಗಳು ಧರ್ಮಕ್ಕೆ ಮೂಲ ಬುನಾದಿಯನ್ನು ಒದಗಿಸಿದೆ. ಈ ಕುರಿತು ಪಂಪನ ಆದಿಪುರಾಣದಲ್ಲಿ ಹೀಗೆ ಬರುತ್ತದೆ.

"ಭವರಾಶಿ ನಿಮಗ್ನರಂ ದಯೆ, ದಮಂ, ದಾನಂ, ಶೀಲಮಂ
ಬಿವೆ ಮೆಯ್ಯಾಗಿರೆ ಸಂದಧರ್ಮಮ–ಪೊತ್ತೆತ್ತುಗುಂ ಮುಕ್ತಿಪ
ರ್ಯಾವಸಾನಂಬರ ಮಾನುಷಂಗಿಕ ಫಲಂ" (ದ್ವಿತೀಯಾಶ್ವಾಸ. –೭)

'ದಯ', 'ದಮಂ', 'ದಾನಂ', 'ತಪಂ', 'ಶೀಲಂ' ಎಂಬವುಗಳು ಧರ್ಮಕ್ಕೆ ಅಂಗಗಳಾಗಿವೆ. ಅಂಗೋಪಾಂಗ ಕ್ರಿಯಾವಿಶಿಷ್ಟವಾದ ಮೈಯಲ್ಲಿ ಜೀವವನ್ನು ಹೇಗೋ, ಹಾಗೆ ದಯಾದಿಗಳ ಕೂಟದಲ್ಲಿ ಧರ್ಮವನ್ನೂ ಊಹಿಸಿ ತಿಳಿದುಕೊಳ್ಳಬಹುದು. ಮೈಯ ಅಂಗಗಳೊಳಗೆ ಕೆಲವರ ನ್ಯೂನತೆ ಹೀನತೆಗಳಿಂದ ಚೈತನ್ಯಪ್ರಸಾರದಲ್ಲಿ ವಿಕಲತೆ ತೋರುವಂತೆ, ದಯಾ ದಮಾದಿಗಳ ವೈಕಲ್ಯದಿಂದಲೂ ಧರ್ಮವಿಕಾಸವು ಕುಗ್ಗಿ ಹೋಗುತ್ತಿದೆ. ಅದರಿಂದಲೇ ಪಂಪನು, ಅಂಗಪರಿಪೂರ್ಣವಾದ ಧರ್ಮವೇ 'ಪೊತ್ತೆತ್ತುಗುಂ ಮುಕ್ತಿ ಪರ್ಯವಸಾನಂಬರ'ವೆಂದು ಹೇಳಿದುದು. ಈ ಪಂಚಾಂಗಗಳೊಳಗೆ ಆಂತರಿಕ ವರ್ಗಕ್ಕೆ ಸೇರಿದರೆ, ತಪಸ್ಸು ದಾನಗಳು ಬಾಹ್ಯದಲ್ಲಿಯೂ ಕೂಡಿವೆ. ಈ ಇಬ್ಬಗೆಯವುಗಳೂ ಶೀಲ ಅಥವಾ ಸ್ವಭಾವದಲ್ಲಿ ಮಿಳಿತವಾಗಿವೆ. ಹೀಗೆ ಮಿಳಿತವಾದ ಸ್ವಭಾವವೆಂದರೆ, ಪರಮಾತ್ಮನ ಅಥವಾ ವಿಶ್ವಚೈತನ್ಯದ ಅಂಗವಾಗಿದ್ದುಕೊಂಡು, ವಿಶ್ವಸಮಾಜ ಪ್ರಕೃತಿಯನ್ನು ತನ್ನತ್ತ ಸೆಳೆಯುವ ಆಕರ್ಷಕ ಶಕ್ತಿ, ಎನ್ನಬಹುದು. ಅದನ್ನೇ ನಾವೀಗ ಧರ್ಮವೆನ್ನುವುದು. ಕಾಲುವೆಗಳು ಭಿನ್ನಭಿನ್ನವಾಗಿ ಹರಿವಂತೆ, ಸಮಾಜಭೇದದಿಂದಾಗಿ ಧರ್ಮವೂ ವಿವಿಧವಾಗಿ ತೋರುತ್ತಿದೆ. ಎಲ್ಲವುಗಳ ಗುರಿಯೂ ಒಂದೇ. ಗುರಿವಡೆದ ಮೇಲೆ ಯಾವ ಭೇದವೂ

ಇರಲಾರದು. ಅದರಿಂದ 'ಧರ್ಮವನ್ನೇ ಪರಮಾತ್ಮ ಎಂದು ಕರೆದರೆ ತಪ್ಪಾಗದು' ಎಂದು ನಾವು ಮೇಲೆ ಹೇಳಿದುದು. ಜೈನನಾದುದರಿಂದ ಸ್ವಮತ ಧರ್ಮಪ್ರವಾಹವನ್ನು ಅವನು ಆಗಮಿಕ ಮಾರ್ಗದಲ್ಲಿ ಹರಿಯಿಸಿದರೂ, ಎಲ್ಲ ಧರ್ಮಗಳಿಗೂ ಆಧಾರವಾದ ಈ ಪ್ರಪಂಚಧರ್ಮವೇ ಆ ಮಹಾಕವಿಯ ಹೃದಯದಿಂದ ಸುರಿದಿದೆ ಎಂಬುದು ಈ ಧರ್ಮಸ್ವರೂಪ ಕಥನದಿಂದ ಗೊತ್ತಾಗುತ್ತಿದೆ ಎನ್ನುವುದು ಮುಳಿಯ ಅಭಿಪ್ರಾಯ.

ಧರ್ಮ– ನಿಶ್ಚಿಯನಯಾನುಸಾರವಾಗಿ– 'ಭವಸಾಗರದಲ್ಲಿ ಬೀಳುವ ಆತ್ಮನನ್ನು ಧರಿಸುವುದು' ಧರ್ಮವು; ಎಂದರೆ ನಿಜ ಶುದ್ಧಾತ್ಮಸ್ವರೂಪ ಭಾವನೆಯೇ ಧರ್ಮವು; ಇದಕ್ಕೆ ಸಾಧಕವಾದುದು. ಸ್ವರ್ಗಾದಿ–ಇಷ್ಟ ಸಾಧಕವಾದುದು ವ್ಯವಹಾರನಯದಿಂದ ಧರ್ಮವೆನಿಸುವುದು. ಇದು ಕ್ಷಮೆ, ಮಾರ್ದವ, ಆರ್ಜವ, ಶೌಚ, ಸತ್ಯ, ಸಂಯಮ, ತಪ, ತ್ಯಾಗ, ಆಕಿಂಚನ್ಯ, ಬ್ರಹ್ಮಚರ್ಯ ಎಂದು ಹತ್ತು ಬಗೆಯಾಗಿದೆ. ಈ ಶಬ್ದಗಳ ಹಿಂದೆ ಉತ್ತಮ ಶಬ್ದವನ್ನಿಟ್ಟು ಉತ್ತಮ ಕ್ಷಮೆ ಮೊದಲಾಗಿ ಪ್ರಯೋಗಿಸುವರು. ಸಾಧುಗಳು ಆಹಾರ ಮೊದಲಾದವುಗಳಿಂದ ಕ್ರೋಧ ಪರಿಣಾಮವನ್ನು ಮಾಡಿಕೊಳ್ಳದಿರುವುದು ಉತ್ತಮಕ್ಷಮೆ; ಕುಲ, ಜಾತಿ, ರೂಪ, ಜ್ಞಾನ ಮೊದಲಾದುವುಗಳಿಂದ ಗರ್ವ ಪಡದಿರುವುದೂ, ಅನ್ಯರ ತಿರಸ್ಕಾರದಿಂದ ತಾನು ನೊಂದುಕೊಳ್ಳದಿರುವುದೂ ಗರ್ವ ಪಡದಿರುವುದೂ, ಅನ್ಯರ ತಿರಸ್ಕಾರದಿಂದ ತಾನು ನೊಂದುಕೊಳ್ಳದಿರುವುದೂ ಉತ್ತಮ ಮಾರ್ದವವು; ಮನೋವಚನಕಾಯಗಳ ಕುಟಿಲತೆಯನ್ನು ಕಳೆದುಕೊಂಡು ಸರಳತನದಿಂದ ನಡೆವುದು ಉತ್ತಮ ಆರ್ಜವವು; ಪರರ ಧನ, ಮೊದಲಾದುವನ್ನು ಅಪಹರಿಸುವ ಇಚ್ಛೆಯನ್ನು ಮಾಡದಿರುವುದು ಉತ್ತಮ ಶೌಚವು; ಸಮಸ್ತ ಪ್ರಾಣಿಗಳೊಡನೆ ಹಿತ–ಮಿತ್ರಪ್ರಿಯವಾದ ಸತ್ಯವನ್ನಾಡುವುದು ಉತ್ತಮ ಸತ್ಯವು; ಪಂಚೇಂದ್ರಿಯಗಳನ್ನೂ ಮನಸ್ಸನ್ನೂ ಸ್ವಾಧೀನದಲ್ಲಿರಿಸಿಕೊಳ್ಳುವುದು ಉತ್ತಮ ಸಂಯಮವು; ತ್ರಸಜೀವಗಳ ಪೀಡೆಯನ್ನು ಮಾಡದಿರುವುದೂ, ಇಂದ್ರಿಯಗಳ ಇಷ್ಟಾನಿಷ್ಟ ವಿಷಯಗಳಲ್ಲಿ ರಾಗದ್ವೇಷಗಳನ್ನು ಮಾಡದಿರುವುದೂ ಉತ್ತಮ ಸಂಯಮವು; ಕರ್ಮಕ್ಷಯ ನಿಮಿತ್ತವಾಗಿ ಉಪವಾಸ ಮೊದಲಾದ ದ್ವಾದಶವಿಧ ತಪಸ್ಸನ್ನಾಚರಿಸುವುದು ಉತ್ತಮತಪವು;

ಜ್ಞಾನಾದಿದಾನವು ಉತ್ತಮ ತ್ಯಾಗವು; ಧನಧಾನ್ಯಶರೀರಾದಿ ಬಾಹ್ಯ ಪರಿಗ್ರಹವನ್ನೂ ರಾಗದ್ವೇಷಾದಿ ಉತ್ತಮ ತ್ಯಾಗವು; ಧನ ಧಾನ್ಯಶರೀರಾದಿ ಬಾಹ್ಯಪರಿಗ್ರಹ ಉತ್ತಮಾ ಕಿಂಚನ್ಯವು. ಮನೋವಾಕ್ಕಾಯಗಳಿಂದ ಸ್ತ್ರೀ ವಿಷಯಾಸಕ್ತಿಯನ್ನು ಬಿಡುವುದು ಉತ್ತಮಬ್ರಹ್ಮಚರ್ಯವು. ಇವು ದಶಧರ್ಮಗಳೆನಿಸುವುವು.

ಐದು ಧರ್ಮಾಂಗಗಳು  ಎಂದು ಮುಳಿಯ ಹೇಳುತ್ತಾರೆ:

'ದಯೆ–ದಮಂ–ದಾನಂ–ತಪಂ–ಶೀಲಂ' ಎಂಬುವುಗಳೇ ವ್ಯಕ್ತಿಗತ ಧರ್ಮದ ಭಿನ್ನ ಭಿನ್ನರೂಪಗಳೆಂದು ಹೇಳಿದೆಯಷ್ಟೆ. ಈ ಐದು ಧರ್ಮಾಂಗಗಳೊಳಗೆ (೧) 'ದಯೆ–ದಾನ' (೨) 'ದಮ–ತಪ' (೩) 'ಶೀಲ'ಗಳೆಂದು ಮೂರು ವಿಭಾಗಗಳನ್ನಾಗಿ ಮಾಡಬಹುದು. ಯಾಕೆಂದರೆ, ಆದಿಯ ಎರಡೂ ಅನ್ಯವ್ಯಕ್ತಿಗಳಲ್ಲಿ ತನಗೊದಗಿದ

ಮನಃಪ್ರವಣತೆ. ಮತ್ತಿನವೆರಡೂ ಆ ತನ್ನ ಮನಃಪ್ರವಣತೆಗಾಧಾರವಾದ ಕಾರಣಗಳು. ಕಡೆಯದೆಂದರೆ, ಎರಡನೆಯವುಗಳಿಂದ ಜನಿಸಿ, ಒಂದನೆಯವುಗಳ ಫಲವಾಗಿ ಆಶ್ರಯವಾಗಿ ಮಾತ್ರವಲ್ಲ; ಲೋಕಕ್ಕೂ ಒಂದು ದೃಷ್ಟಾಂತವಾಗಿರುವುದು. ಅದನ್ನೇ ಹೀಗೆ ವಿಸ್ತರಿಸಬಹುದು. 'ದಮ–ತಪ'ಗಳೆಂಬ ಎರಡು ಧರ್ಮಕಾರಣಗಳಾದರೆ, 'ದಯೆ–ದಾನ–ಶೀಲ'ಗಳು ಧರ್ಮಕಾರ್ಯಗಳೆನ್ನಬಹುದು. ಈ ಮೂರರೊಳಗೂ ವ್ಯಕ್ತಿಯಲ್ಲಿ ಶಾಶ್ವತವಾಗಿ ನೆಲಸಿದ 'ದಯೆ' ಕಾರಣವಾದರೆ 'ದಾನ' ಕಾರ್ಯವು. ಆ ಕಾರಣ ಕಾರ್ಯಗಳ ಅಥವಾ 'ದಯಾದಾನ'ಗಳ ಕೂಟವೆ ಶೀಲವೆನ್ನಬೇಕು. ಇಂಥ ಧರ್ಮವು ಪ್ರಪಂಚ ಪುರುಷನಲ್ಲಿದೆ ಎನ್ನುವುದು ಹೇಗೆ? ಸ್ವಭಿನ್ನವಾದ ವ್ಯಕ್ತಿಯೇ ಇಲ್ಲವಾದುದರಿಂದ ಅವನ 'ದಯೆ–ದಾನ'ಗಳು ಯಾವ ವ್ಯಕ್ತಿಯನ್ನು ಕುರಿತು? ಯಾವಾಗ 'ದಯೆ–ದಾನ'ಗಳಿಲ್ಲವೋ, ಅವುಗಳಿಗಾಶ್ರಯಗಳಾದ 'ದಮ–ತಪಂ'ಗಳೂ ಇಲ್ಲ. ಹಾಗೆಂದ ಮೇಲೆ ಉಭಯ ಮಧ್ಯಗತ 'ಶೀಲ'ವೂ ಇಲ್ಲವೆಂದಾಗುವುದಲ್ಲವೇ? ಆದರೆ, ಇಲ್ಲಿ–ಸ್ವ–ಸ್ವಭಿನ್ನವ್ಯಕ್ತಿಗಳ ಸಮಬಂಧವನ್ನು ಹುಡುಕುವುದಲ್ಲ. ತಾಯಿಗೆ ಮಗು ಹೇಗೆ ಸ್ವಭಿನ್ನ ವ್ಯಕ್ತಿಯಾದರೂ ಸ್ವಾಭಿನ್ನ ವ್ಯಕ್ತಿಯೆಂದು ಹಿಂದಿನ ವಿಮರ್ಶೆಯಿಂದ ಗೊತ್ತಾಗಿದೆಯೋ ಹಾಗೆ, ಪ್ರಪಂಚ ಪುರುಷನಿಗೆ ಲೌಕಿಕ ವ್ಯಕ್ತಿಗಳೆಲ್ಲವೂ, ಸ್ವಭಿನ್ನವಲ್ಲವಾದರೂ ಭಿನ್ನಗಳೆ ಎಂದು ಭಾವಿಸಬೇಕು.

*ವಿವರಗಳಿಗೆ ನೋಡಿ: ಮುಳಿಯ ತಿಮ್ಮಪ್ಪಯ್ಯ ೨೦೦೬*

*ನಾಡೋಜಪಂಪ ಪುಟ. ೬ ಸಂಪುಟ ೨ ಪುಟ. ೭೪೧*

*ಮಹದೇವ ಪ್ರಭಾಕರ ಪೂಜಾರ ೧೯೭೬ ಜೈನಧರ್ಮ ಪರಿಭಾಷೆ ಪುಟ. ೯೪*

**೩೪೯. ದಶಪ್ರಾಣ**

*ಪಂಚಸ್ಥಾವರಕ್ಕಮಸಂಜ್ಞೆಗಂ ಚತುಃಪಂಚಮಾತ್ರಮಕ್ಕುಂ ಸಂಜ್ಞೆ ಜೀವಂ ಷಟ್ಪರ್ಯಾಪ್ತಕಮಕ್ಕುಂ ಪಂಚೇಂದ್ರಿಯಪ್ರಾಣಂ ಮನೋವಾಕ್ಕಾಯಬಲ ಪ್ರಾಣಮಾಯುಃ ಪ್ರಾಣಮುಮುಚ್ಛ್ವಾಸನಿಶ್ವಾಸಪ್ರಾಣಮುಮೆಂಬ* ***ದಶಪ್ರಾಣಂ****ಗಳೇಕೇಂದ್ರಿಯಾದಿಗಳ್ಗೆ ಚತುಷ್ಷಟ್‌ಸಪ್ತಾಷ್ಟನವದಶಪ್ರಾಣಪ್ರಮಾಣಮಕ್ಕುಮೆಂದುನಿಶ್ಚಯಂಗೆಯ್ವುದು......*

*(ಸುಕುಮಾರ ಚರಿತಂ ಅಷ್ಟಮಾಶ್ವಾಸಂ ಪ.ಸಂ ೬ ವ)*

ದಶಪ್ರಾಣವೆಂದರೆ ಐದು ಪ್ರಾಣವಾಯುಗಳು. (ಪ್ರಾಣ, ಅಪಾನ; ವ್ಯಾನ; ಉದಾನ; ಸಮಾನ) ಮತ್ತು ಐದು ಉಪವಾಯುಗಳು (ನಾಗ, ಕೂರ್ಮ, ಕೈಕರ, ದೇವದತ್ತ, ಧನಂಜಯ).

**೩೫೦. ದಳಿಂಬ**

*......ತೀರ್ಥ ಜಲಂಗಳಂ ಮಿಂದು* ***ದಳಿಂಬ****ಮನುಟ್ಟು*
*ಮುತ್ತಿನತೊಡುಗೆಗಳಂ ತೊಟ್ಟು ದರ್ಭಶಯನದೊಳಿರ್ದು..........*

*(ಪಂಪ ಭಾರತ ೧–೧೧೮ ವ)*

ದೂರ್ವಾಸಮುನಿಗಳು ಕುಂತಿ ಭೋಜನ ಮನೆಗೆ ಬಂದಾಗ ಕೊಟ್ಟ ಐದು ಮಂತ್ರವನ್ನು ಕೊಟ್ಟು, ಯಾರನ್ನು ಧ್ಯಾನಿಸುತ್ತೀಯೋ ಅವರು ಬಂದು ನಿನಗೆ ಪುತ್ರಸಂತಾನವನ್ನು ಕೊಡುತ್ತಾರೆಂದು ಹೇಳುತ್ತಾರೆ. ಅದನ್ನು ಕುಂತಿಯು ಪಾಂಡುರಾಜನಲ್ಲಿ ಹೇಳುತ್ತಾಳೆ. ಪಾಂಡುರಾಜನು ಅದೇ ರೀತಿಯಲ್ಲಿ ವರ್ತಿಸುವಂತೆ ಹೇಳುತ್ತಾನೆ. 'ಕುಂತಿಯು ಹಾಗೆಯೇ ಮಾಡುತ್ತೇನೆಂದು ಪವಿತ್ರ ತೀರ್ಥಗಳಲ್ಲಿ ಸ್ನಾನಮಾಡಿ ಶುಭ್ರವಸ್ತ್ರವನ್ನು ಧರಿಸಿ ಮುತ್ತಿನ ಆಭರಣವನ್ನು ತೊಟ್ಟು ದರ್ಭೆಯಿಂದ ಮಾಡಿದ ಹಾಸಿಗೆ ಮೇಲಿದ್ದು.....ಎಂದು ಪಂಪ ವರ್ಣಿಸುತ್ತಾನೆ. ಇಲ್ಲಿ ದಳಿಂಬವೆಂದರೆ ಮಡಿಬಟ್ಟೆಯೆಂದರ್ಥ. ಎರಡನೆಯದಾಗಿ ಪುತ್ರರ ಸಂತಾನಕ್ಕಾಗಿ ಕುಂತಿಯು ಪವಿತ್ರ ಸ್ನಾನ ಮಾಡಿರುವುದು, ದರ್ಭೆಯ ಹಾಸುಗೆಯ ಮೇಲೆ ಮಲಗಿರುವುದು ಗಮನಾರ್ಹ.

**೩೯೧. ದಾಂಪತ್ಯ**

ಕ್ರಿ.ಪೂ. ಐನೂರರ ಬಳಿಕ ರೂಪುಗೊಂಡ ಪ್ರಬಲವಾದ ರಾಜಕೀಯ ವ್ಯವಸ್ಥೆಯು ತನಗೆ ಪೂರಕವಾಗಿ ಧರ್ಮ, ನೀತಿಗಳ ನಿಯಮಾವಳಿಗಳನ್ನು ರೂಪಿಸಿತು. ಇಂತಹ ರಾಜಕೀಯ ವ್ಯವಸ್ಥೆಯ ರೂಪುರೇಷೆಗಳು ಋಗ್ವೇದ ಕಾಲದಲ್ಲಿ ಅಸ್ಪಷ್ಟವಾಗಿ ಕಾಣಸಿಗುತ್ತವೆಯಾದರೂ ಅವುಗಳ ಮೂರ್ತರೂಪ ಕಾಣಸಿಗುವುದು ಕ್ರಿ.ಪೂ. ಐನೂರರ ಬಳಿಕ. ಅರ್ಯರ ಪ್ರಾಬಲ್ಯವು ತನಗೆ ಇಷ್ಟವಾದ ಮೌಲ್ಯಗಳನ್ನು ರೂಪಿಸಿತು. ಇದರ ಪರಿಣಾಮವಾಗಿ ಲಂಪಟತನ, ಕರಪದ್ಧತಿ, ರಾಜಕೇಂದ್ರಿತ ರಾಜಕೀಯ ವ್ಯವಸ್ಥೆ, ಜಾತಿಯ ನೆಲೆಗಳ ಪ್ರಾಬಲ್ಯ ಸ್ಪಷ್ಟ ರೂಪವನ್ನು ತಾಳಿದವು. ರಾಜರು ಆಡಳಿತ ವ್ಯವಸ್ಥೆಯ ಕೇಂದ್ರವಾಗಿ ಅವರಿಗೆ ಅನುಗುಣವಾಗದ ಮೌಲ್ಯಗಳು ಸಿದ್ಧಗೊಂಡಾಗ ಸಹಜವಾಗಿ ಕೇಂದ್ರೀಕೃತ ಅರ್ಥ ವ್ಯವಸ್ಥೆಯು ರೂಪುಗೊಳ್ಳುತ್ತವೆ. ಆಸ್ತಿಯ ಪರಿಕಲ್ಪನೆಯಲ್ಲಿ ಸಂಚಯದ ಮನೋಧರ್ಮ ಅಡಕವಾಗಿದೆ. ಇದರ ಪರಿಣಾಮವಾಗಿ ದಾಸ, ಶೂದ್ರ, ಮ್ಲೇಚ್ಛದಂತಹ ಪರಿಕಲ್ಪನೆಗಳು ಹುಟ್ಟಿಕೊಳ್ಳುತ್ತವೆ. ಇಂತಹ ಧಾರ್ಮಿಕ ವ್ಯವಸ್ಥೆಯಲ್ಲಿ ಹೆಣ್ಣಿಗೆ ಎರಡನೆಯ ದರ್ಜೆಯ ಸ್ಥಾನವು ಕಲ್ಪಿತವಾಯಿತು. ಇದರ ಪರಿಣಾಮವಾಗಿ ದಾಂಪತ್ಯವು ಪುತ್ರ ಸಂತಾನಕ್ಕಾಗಿ ಎನ್ನುವ ಕಲ್ಪನೆಯು ಕಾಣಿಸಿಕೊಂಡಿತು.

*ವಿವರಗಳಿಗೆ ನೋಡಿ: Basham A.L. (Ed) 1975 A Cultural History of India P. 20-26.*

**೩೯೨. ದಾದಿ**

*ಪಂಡಿತೆಯೆಂಬ ನೆಗಳ್ತೆಯ*
*ಕೊಂಡಾಟದ* **ದಾದಿ** *ತನ್ನನೋದಿಸುತಿರೆ ಕ।*
*ಯ್ಕೊಂಡ ಕಳಾಪರಿಣತೆಯೊಳ್*
*ಪಂಡಿತೆಯಿಂದಾಕೆ ಪರಮಪಂಡಿತೆಯಾದಳ್ ॥ (ಆದಿಪುರಾಣ ೩ -೨೧)*

ದಾದಿಯೆಂದರೆ ಇಲ್ಲಿ ಸೇವಕಿಯೆಂದರ್ಥ. ಓದು ಕಲಿತ ಸಾಮಾನ್ಯಳು ಈಕೆ.

ಈಕೆಯಿಂದಲೇ ಶ್ರೀಮತಿ ಕಲಿತು ಪರಮ ಪಂಡಿತೆಯಾಗಿರುವುದು ವಿಶೇಷ. ಆ ಕಾಲದಲ್ಲಿ ದಾದಿಯರೂ ಓದಿನಲ್ಲಿ ನಿಷ್ಣಾತರಾಗಿದ್ದರು. ಜೊತೆಗೆ ಇತರ (ವಜ್ರಜಂಘ ಸತಿ) ಕಲಾ ಪರಿಣತಿಯೂ ಅವರಲ್ಲಿರುತ್ತಿತ್ತೆಂಬುದು ವ್ಯಕ್ತವಾಗುತ್ತದೆ.

ಕ್ಷೀರಧಾತ್ರಿ (ಹಾಲೂಡಿಸುವವಳು) ಮಜ್ಜನಧಾತ್ರಿ (ಸ್ನಾನ ಮಾಡಿಸುವವಳು) ಕಿಳವನಧಾತ್ರಿ (ಆಟವಾಡಿಸುವವಳು) ಮಂಡನಧಾತ್ರಿ (ಅಲಂಕಾರ ಮಾಡುವವಳು) ಅಂಕಧಾತ್ರಿ (ಲೇಪನ ಮಾಡುವವಳು) ಇವರ ಕುರಿತು ವಡ್ಡಾರಾಧನೆಯ ಸುಕೌಶಳ ಸ್ವಾಮಿಯ ಕತೆಯಲ್ಲಿ ಬರುತ್ತದೆ. (ಅನು. ಟಿ. ಕೇಶವಭಟ್ಟ ೨೦೧೦ ಪುಟ. ೮೨)

**೩೯೩. ದಾನಶಾಸನ**

ಯಾರಾದರೂ ಒಬ್ಬರು ಮತ್ತೊಬ್ಬರಿಗೆ ಯಾವುದನ್ನಾದರೂ ಕೊಡುವುದನ್ನು ದಾನವೆಂದು ಕರೆಯುತ್ತಾರೆ. ದಾನವು ಬೇರೆ ಬೇರೆ ರೂಪದಲ್ಲಿರಬಹುದು. ಆದರೆ ದಾನದ ಹಿಂದೆ ಸದುದ್ದೇಶವಿರುತ್ತದೆ. ದಾನಗಳು ಸಾಮಾನ್ಯವಾಗಿ ದೇವಾಲಯದಲ್ಲಿ ನಡೆಯುವ ಪೂಜೆ, ಪುನಸ್ಕಾರಗಳಿಗೋ, ಒಂದು ಮಠದಲ್ಲಿ ನಡೆಯುವ ವಿದ್ಯಾದಾನಕ್ಕೋ, ದೇವಾಲಯದಲ್ಲಿ ಪೂಜೆ ಮಾಡುವ ಪೂಜಾರಿಗಳಿಗೋ, ನರ್ತಿಸುವ ನರ್ತಕಿಯರಿಗೋ, ಸಾಂಸ್ಕೃತಿಕ ವಿಷಯಗಳಿಗೋ, ಅರವಟ್ಟಿಗೆ, ಕೆರೆ–ಬಾವಿ, ಮುಂತಾದ ಲೋಕೋಪಯೋಗಿ ಕಾರ್ಯಗಳಿಗೋ ವ್ಯಕ್ತಿಯೊಬ್ಬನ ಸೇವೆ ಪರಾಕ್ರಮಗಳನ್ನು ಮನ್ನಿಸಿಯೋ ನೀಡಿದ ದಾನವಾಗಿರುತ್ತವೆ. ದಾನವಾಗಿ ನೀಡುವ ಆರ್ಥಿಕ ಮೂಲವು ಭೂಮಿಯಾಗಿರಬಹುದು, ನಗದುರೂಪದ ಹಣವಾಗಿರಬಹುದು ಅಥವಾ ಅಗತ್ಯ ವಸ್ತುಗಳ ಪೂರೈಕೆ ಇರಬಹುದು ದಾನಶಾಸನದಲ್ಲಿ ದಾನ ನೀಡುವ ವ್ಯಕ್ತಿಯ ವಿವರ ಹಾಗೂ ದಾನಸ್ವೀಕರಿಸುವವರ ವಿವರಗಳು ನಮಗೆ ದೊರೆಯುತ್ತವೆ. ಅನೇಕ ದಾನ ಶಾಸನಗಳಲ್ಲಿ ದಾನ ನೀಡುವವರನ್ನು ವೈಭವೀಕರಿಸಲಾಗುತ್ತದೆ.

*ವಿವರಗಳಿಗೆ ನೋಡಿ: ಶ್ರೀ ಶೇಷಶಾಸ್ತ್ರಿ ೨೦೦೫ ಶಾಸನ ಪರಿಚಯ ಪುಟ. ೭.*

**೩೯೪. ದಾಯಾದಿ**

**..........ದಾಯಾದ್ಯರಂ**

*ಪಿರಿಯ ಮಾಡಿದಿರಮ್ಮ ಸಾವುಮುಟಿವುಂ ದೈವೇಚ್ಛೆಯಾಗದೆ ॥*

*(ಪಂಪ ಭಾರತ ೨–೮೯)*

ದಾಯಾದಿಗಳನ್ನು ದೊಡ್ಡವರನ್ನಾಗಿ ಮಾಡಿದಿರಿ, ನಮ್ಮ ಸಾವು ಬದುಕುಗಳು ಈಗ ಅದೃಷ್ಟಾಧೀನವಾಗದೆ ಇರುತ್ತದೆಯೆ? ಇದು ಧೃತರಾಷ್ಟ್ರನಲ್ಲಿ ಕೌರವ ಹೇಳುವ ಮಾತು. ದಾಯಾದಿ ಕಲಹಕ್ಕೆ ಇದು ಉತ್ತಮ ಉದಾಹರಣೆಯಾಗಿದೆ. ಸೋದರರಲ್ಲಿ ಒಬ್ಬನು ವಿಭಾಗ ಕಾಲದಲ್ಲಿ ಯಾವುದಾದರೂ ಕಾರಣದಿಂದ ಭಾಗ ಸ್ವೀಕರಿಸದೆ ಉಳಿದು ಸತ್ತರೆ ಅವನ ಅಂಶವು ಲೋಪ ಹೊಂದುವುದಿಲ್ಲ. ಈ ಅರ್ಥದಲ್ಲಿ ದಾಯಾದಿಗಳ

ನಡುವಣ ಹಂಚಿಕೆಯ ಕ್ರಮವು ಚರ್ಚಾರ್ಹವಾಯಿತು.

*ವಿವರಗಳಿಗೆ ನೋಡಿ: ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೯-೨೧೧.*

**೩೯೫. ದಾರಿಕಳ್ಳರು ಮತ್ತು ವೀರರ ಸ್ಮಾರಕಗಳು**

ವ್ಯಾಪಾರದ ಸಲುವಾಗಿಯೋ ಅಥವಾ ಪ್ರಯಾಣದ ನಿಮಿತ್ತವಾಗಿಯೋ ಹೋರಟ ಪಥಿಕರ ಮೇಲೆ, ದಾರಿಕಳ್ಳರು ಬಂದು ಎರಗಿ ಅವರ ಬಳಿಯಿರುವ ಒಡವೆ ವಸ್ತುಗಳನ್ನು ಅಪಹರಿಸುತ್ತಿದ್ದರು. ಇಂಥ ಕಳ್ಳರಿಗೆ ಹೆದರದೆ ಅವರೊಂದಿಗೆ ಹೋರಾಡಿ ಮಡಿದವರಿಗಾಗಿ ಸ್ಮಾರಕ ಶಿಲೆಗಳನ್ನು ಹಾಕಿಸಿರುವ ಹಲವಾರು ನಿದರ್ಶನಗಳು ಇವೆ. ಕ್ರಿ.ಶ. ೧೨೯೧ರ ಒಂದು ವೀರಗಲ್ಲು – 'ಶಾಉರಣ್ಣ' ಮತ್ತು'ಸಾದ' ಎಂಬುವರು ಹನಿಯೂರು ಗ್ರಾಮದ ಸಂತೆಗೆ ಹೋಗಿ, ಬರುತ್ತಿರುವಾಗ ದಾರಿಗಳ್ಳರು ಅವರನ್ನು ಆಕ್ರಮಣ ಮಾಡುತ್ತಾರೆ. ಆಗ 'ಶಾ ಉರಣ್ಣ'ನೂ 'ಸದಾ'ನೂ ಅವರೊಡನೆ ಹೋರಾಡುತ್ತಾರೆ. ಈ ಹೋರಾಟದಲ್ಲಿ ಶಾ ಉರಣ್ಣನು ಸಾಯುತ್ತಾನೆ. ಆಗ ಅವನ ಪರಾಕ್ರಮವು ತಿಳಿಯುವಂತೆ, ವೀರಗಲ್ಲನ್ನು ಅವನ ತಂದೆ ಮತ್ತು ಸೋದರರು ನಿಲ್ಲಿಸಿದರು ಎಂಬ ವಿಷಯವನ್ನು ತಿಳಿಸುತ್ತದೆ.

ಕಳ್ಳರು ರಾತ್ರಿಯ ವೇಳೆ ಮನೆಗಳಿಗೋ ಅಥವಾ ದೇವಾಲಯಗಳಿಗೂ ನುಗ್ಗಿ ಅಥವ ಕನ್ನವಿಕ್ಕಿ ಅಪಹರಿಸುತ್ತಿದ್ದುದುಂಟು. ಸುಮಾರು ಒಂಭತ್ತನೆಯ ಶತಮಾನಕ್ಕೆ ಸೇರಿದ ಒಂದು ಶಾಸನದಿಂದ ಮನೆಗೆ ಕನ್ನ ಹಾಕಿ ಕಳ್ಳತನ ಮಾಡಲು ಬಂದ ಒಂಭತ್ತು ಜನ ಕಳ್ಳರನ್ನು ಕೊಂದು ಮಡಿದ ತನ್ನ ಆಳು 'ಕಲಿಯ ಗಂಡ' ಎಂಬುವನಿಗೆ ಮುತ್ತರಸ ಎಂಬುವನು ಪರಿಹಾರವಾಗಿ ಜಮೀನನ್ನು ದತ್ತಿ ಬಿಟ್ಟ ವಿಷಯ ತಿಳಿಯುತ್ತದೆ. ಕ್ರಿ.ಶ ೧೪೩೨ರ ಮತ್ತೊಂದು ವೀರಗಲ್ಲಿನಿಂದ ಸ್ವಾರಸ್ಯವಾದ ವಿಷಯ ತಿಳಿಯುತ್ತದೆ. ಶಿವರಾತ್ರಿಯ ದಿನ ಎಲ್ಲರೂ ಉಪವಾಸ ಇದ್ದು, ಊರ ಹೊರಗಿನ 'ದೇವರ ವನ'ದಲ್ಲಿ ಜಾಗರಣೆ ಮಾಡುತ್ತಿರುವಾಗ, ಕಳ್ಳರು ಇದೇ ಸರಿಯಾದ ಸಮಯವೆಂದು ಶಿವ ದೇವಾಲಯವನ್ನು ಮುತ್ತಿಗೆ ಹಾಕುತ್ತಾರೆ. ಅದು ಹೇಗೋ ಜನರಿಗೆ ತಿಳಿದು ಕಳ್ಳರನ್ನು ಹಿಡಿಯಲು ಹೊರಡುತ್ತಾರೆ. ಕಳ್ಳರೊಡನೆ ಹೋರಾಡುವಲ್ಲಿ ಮಲ್ಲಯ ಎಂಬುವನು ಸಾಯುತ್ತಾನೆ. ಕಳ್ಳರೊಡನೆ ಹೋರಾಡಿದವರೂ ಕೂಡಾ ಗೌರವಿಸಬೇಕಾದ ವ್ಯಕ್ತಿಗಳು ಎಂಬ ಕಾರಣಕ್ಕೆ ಅವರ ಸ್ಮಾರಕಗಳನ್ನು ನಿಲ್ಲಿಸುತ್ತಾರೆ. ಎರಡನೆಯದಾಗಿ ದಾರಿಕಳ್ಳರನ್ನು ಎದುರಿಸುವುದು ಮಹತ್ವದ್ದು ಎಂಬ ಕಾರಣಕ್ಕೆ ಅವರ ಸ್ಮಾರಕವಿರುತ್ತದೆ ಎಂದು ಶೇಷಶಾಸ್ತ್ರಿಯವರು ಹೇಳುತ್ತಾರೆ.

*ವಿವರಗಳಿಗೆ ನೋಡಿ: ಶ್ರೀ ಶೇಷಶಾಸ್ತ್ರಿ ೨೦೦೫ ಶಾಸನ ಪರಿಚಯ ಪುಟ. ೨೭-೨೮.*

## ೩೯೬. ದಾಹೋತ್ತರ ಕ್ರಿಯೆ

...........ಪಾಂಡುರಾಜನೊಡನೆ ದಾಹೋತ್ತರದಂತೆ...........

(ಪಂಪ ಭಾರತ ೨-೨೬ ವ)

ದಾಹೋತ್ತರ ಎಂದು ಪಂಪ ಭಾರತದಲ್ಲಿ ಬರುತ್ತದೆ.

ದಾಹ ಎಂದರೆ ಸಂಸ್ಕೃತ ಭಾಷೆಯಲ್ಲಿ ಸುಡುವುದು. ಉತ್ತರ ಕ್ರಿಯೆಯೆಂದರೆ ಹಿರಿಯರ ಮರಣಾನಂತರದಲ್ಲಿ ಮಕ್ಕಳು ಮಾಡುವ ಪಿತೃಕರ್ಮ.

ಎನೆ ಇದಾವ ಗಹನಮವರ್ಗ್ಗಳ್ಗಂ **ಸಂಸ್ಕಾರವಿಧಿಯಿಂದ** ಸಂಸ್ಕಾರಮಂ ಮಾಟ್ಪೆನೆಂದಾಗಳ್ .......

(ಪಂಪಭಾರತ ೧೦-೧೯ವ)

"ಇದೇನು ಮಹಾ ? ಅವರೆಲ್ಲರಿಗೂ ವಿಧಿಪೂರ್ವಕವಾಗಿ ಉತ್ತರಕ್ರಿಯೆಯನ್ನು (ಸಂಸ್ಕಾರವಿಧಿ ಪೂರ್ವಕ) ಮಾಡುವೆನು" ಎಂದು ಧರ್ಮರಾಜನು ಹೇಳುತ್ತಿರುವಾಗಲೇ ಇಲ್ಲಿ ಉತ್ತರಕ್ರಿಯೆಯ ವಿಧಿ ವಿಧಾನಗಳನ್ನು ಶಾಸ್ತ್ರೋಕ್ತ ರೀತಿಯಲ್ಲಿ ಹೇಳಲಾಯಿತು.

'ಸುಕುಮಾರಸ್ವಾಮಿ ಕಥೆ'ಯಲ್ಲಿ ಸುಕುಮಾರಸ್ವಾಮಿಯು ಸತ್ತಾಗ ತಾಯಿ ಹಾಗೂ ಅವನ ಹೆಂಡಂದಿರು ಆತನ "ರೂಪಮಂ ತೇಜಮುಮಂ ಯೌವನಮಂ ಲಾವಣ್ಯಮಂ ಸೌಭಾಗ್ಯಮಂ ಯಶಮಂ ಮೆಲ್ಲಂ ನುಡಿಯ ಬಲ್ಮೆಯಂ ಶುಚಿತ್ವಮಂ ಶೌಚಮಂ ಶ್ರೀಯಂ ಸಂಪತ್ತಂ ಸೊಬಗಂ ಒಲ್ಮೆಯಂ, ಧೈರ್ಯಮುಂ ಎಂದಿವು ಮೊದಲಾ ಗೊಡೆಯವಾತನೊಳ್ ನೆಲಸಿರ್ದ ಗುಣಂಗಳಂ ನೆನೆ ನೆನೆದನಿಬರುಂ ಪ್ರಲಾಪಂಗೆಯ್ಯುತ್ತಂ ಸೈರಿಸಲಾಜಿದೆ ನಿರಂತರಂ ಮೂರ್ಛೆವೋಗುತ್ತಂ ನೀಡುಂ ಬೇಗಂ ದುಃಖಂಗೆಯ್ದರ್" ಯತಿಯ ಶವವನ್ನು ಶವಸಂಸ್ಕಾರಕ್ಕೆ ತೆಗೆದುಕೊಂಡು ಹೋಗುವಾಗ "ಧ್ವಜಪತಾಕೆಗಳು ಮನೆತ್ತಿಸಿ ಚಾತುರ್ವರ್ಣ ಶ್ರವಣ ಸಂಘ ಸಹತಂ ಪಟುಪಟಹ ತುಣವ ಭಂಭಾ ಮರ್ದಲೆ ಝಲ್ಲರಿ ಮುಕುಂದ ತಾಳ ಕಾಹಳ ಶಂಕ ವಂಶ ವೀಣಾಸ್ವರಂಗಳೆಸೆಯೆ ಕವಿವರರುಂ ಪೆಂಡವಾಸದೊಳ್ವೆಂಡಿರ್ಕಳುಂ ವಿಮಾನಂಗಳ ಮುಂದಾಡುತ್ತಂ ದಮ್ಮಮುಮಂ ಪೊನ್ನುಮಂ ಕೇಳಿ ಮಾಡಿ ಮುಂದೆ ಸೂಸುತ್ತ" ಒಯ್ಯುತ್ತಿದ್ದರು. ಇಂದೂ ಸಾಮಾನ್ಯರಲ್ಲಿ ಶವಸಂಸ್ಕಾರಕ್ಕೆ ಹೋಗುವಾಗ ಶವವನ್ನು ಮೆರವಣಿಗೆ ಮಾಡುತ್ತಾ ಕಹಳೆ, ಹಲಿಗೆ, ತಾಳ ಇತ್ಯಾದಿ ವಾದ್ಯಗಳನ್ನು ಬಾರಿಸುತ್ತಾ ಎಲೆ, ಹೂ, ಹಣ್ಣು ಎರಚುತ್ತ ಮೃತ ದೇಹವನ್ನು ಸ್ಮಶಾನಕ್ಕೆ ಒಯ್ಯುತ್ತಾರೆ.

"ಸುಕುಮಾರಸ್ವಾಮಿಯ ಕಾಲಂಗೆಯ್ದೆಡೆ ಈಗಳುಂ ಪುಣ್ಯಮುಂ ಪವಿತ್ರ ಮುಮಾದುದು ಮತ್ತಂ ಮಹಾಪುರುಷನ ಶರೀರಮಂ ಚತುರ್ನಿಕಾಯಾಮರತತಿಗಳ್ ಭಕ್ತಿಯಿಂದಗರು ಕಾಳಾಗರು ಗೋಶೀರ್ಷ ಚಂದನಂ ಮೊದಲಾ ಗೊಡೆಯ ಅನೇಕ ಸುಗಂಧ ದ್ರವ್ಯಂಗಳಿಂದಂ ಪೂಜಿಸಿದ ವಸ್ತುಗಳ್ ಕಾಲಾಂತರದಿಂ ಕರಗಿ ಬಿಟ್ಟುದಾ ಸ್ಥಾನಕ್ಕೆಂ ಗಂಧವತಿಯೆಂಬ ತೊಱೆಯಾದುದು ದೇವರ್ಕಳ್ ಪೊಗಟ್ದಿ ಕಳಕಳಧ್ವನಿಯಿಂ ಪೆಂಡಿರ್ಕಳ ಪ್ರಳಾಪಂಗೆಯ್ದುಟ್ಟಿ ಕಳಕಳ ಧ್ವನಿಯಿಂದಂ ಕಳಕಳಾಯತಮೆಂದು

ಸಿದ್ಧಾಯತನಮಾದುದು" ಅದೇ ರೀತಿಯಾಗಿ "ಕಾರ್ತಿಕ ಋಷಿಯರ್ ಮುಡುಪಿದಲ್ಲಿ ಅವರ ತಂಗೆಯಪ್ಪ ವೀರಶ್ರೀ ಬಸದಿಯಂ ಮಾಡಿದೊಡಂದಿಂದಿತ್ತ ಸ್ವಾಮಿಯೆಂಬ ತೀರ್ಥಮಾಯ್ತು" ಎಂದು ವಡ್ಡಾರಾಧನೆಯಲ್ಲಿ ಬರುತ್ತದೆ.

ಋಗ್ವೇದದಲ್ಲಿ ಮೃತಶರೀರದ ದಹನ ಹಾಗೂ ಖನನಗಳೆರಡನ್ನೂ ಕುರಿತು ಪ್ರಸ್ತಾವಿಸಲಾಗಿದೆ. "ಎಲೈ ಅಗ್ನಿಯೆ ಇವನನ್ನು ಅತಿಶಯವಾಗಿ ದಹಿಸಬೇಡ ನೋಯಿಸಬೇಡ ಇವನ ಚರ್ಮವನ್ನು ವಿಕೃತಗೊಳಿಸಬೇಡ, ಶರೀರವನ್ನು ಚದುರಿಸಬೇಡ ಅಗ್ನಿಯೇ ಇವನನ್ನು ಹದವಾಗಿ ದಹಿಸಿದ ಮೇಲೆ ಈ ಮೃತನನ್ನು ಪಿತೃಗಳ ಕಡೆಗೆ ಕಳುಹು" ಎಂದು ಋಗ್ವೇದದಲ್ಲಿ ಬರುತ್ತದೆ. (೧೦-೧೬-೧)

೧. ಸಾವಿನ ಆಗಮನ ತಿಳಿದ ಸಂದರ್ಭದಲ್ಲಿ ದಾನ ಮಾಡುವುದು. ೨. ಅಂತ್ಯ ಕ್ರಿಯೆಗಿಂತ ಮುಂಚೆ ಪವಿತ್ರಾಗ್ನಿಗೆ ಹೋಮ ಮಾಡುವುದು. ೩. ಶವದಾನಿ-ಶವವನ್ನು ರುದ್ರಭೂಮಿ ಒಯ್ಯಲೋಸುಗ ಚಟ್ಟಕ್ಕೆ ಇಡುವುದು. ೪. ಶವವನ್ನು ಸಾಗಿಸುವುದು, ೫. ಶವದ ಮೆರವಣಿಗೆ ೬. ಅನುಸ್ತರಸಿ-ಮೃತ್ಯು ಸಾಗರವನ್ನು ಅನುಕೂಲವಾಗಲೆಂದು ಹಸುವನ್ನು ಸ್ವತಂತ್ರವಾಗಿ ಬಿಡುವುದು. ೭. ಅಗ್ನಿಸ್ಪರ್ಶ ೮. ಉದಕಕರ್ಮ -ಚಿತಾಗ್ನಿಗೆ ನೀರೆರೆಯುವುದು ೯. ಶೋಕತಪ್ತರನ್ನು ಸಂತೈಸುವುದು ೧೦. ಅಶೌಚ ಸಾವನ್ನು ಮೈಲಿಗೆಯೆಂದು ಮೃತನ ಬಂಧುವರ್ಗದವರು ಮಿಕ್ಕವರಿಂದ ದೂರವಿರುವುದು. ೧೧. ಅಸ್ಥಿ ಸಂಚಯನ-ದಹಿಸಿ ಉಳಿದ ಮೂಳೆಗಳನ್ನು ಶೇಖರಿಸಿ ನೀರಿನಲ್ಲಿ ಬಿಡುವುದು. ೧೨. ಶಾಂತಿಗಾಗಿ ಕರ್ಮ ೧೩. ಸ್ಮಾರಕ ೧೪. ಶ್ರಾದ್ಧ (ಸತ್ತವರಿಗೆ ನೈವೇದ್ಯವರ್ಪಿಸುವ ಕ್ರಮ) ೧೫. ಸಂಪಿಂಡೀಕರಣ (ಮೃತ ಆತ್ಮವನ್ನು ಪಿತೃ ಗಣದೊಂದಿಗೆ ಸೇರಿಸುವ ಕ್ರಮ) ಸಂಸ್ಕಾರಗಳಾಗಿವೆ.

ಎರಡು ವರ್ಷವಾಗದ ಮಗುವಿಗೆ ಅಗ್ನಿ ಸಂಸ್ಕಾರವು ಬೇಡ. ಜಲ ತರ್ಪಣ ಬೇಡ. ಕಾಡಿನ ಕಟ್ಟಿಗೆಯಂತೆ ಪರಿಗಣಿಸಬಹುದು ಎಂದು ಮನು ಹೇಳುತ್ತಾನೆ.

*ವಿವರಗಳಿಗೆ ನೋಡಿ: ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೫-೬೯*

*ವಿ.ಎಲ್. ಪಾಟೀಲ್ ೨೦೦೯ ವಡ್ಡಾರಾಧನೆ ಜಾನಪದೀಯ ಅಧ್ಯಯನ ಪುಟ. ೧೬೫-೧೬೬*

*ಯುಗಯಾತ್ರೀ ಭಾರತೀಯ ಸಂಸ್ಕೃತಿ ೧೯೭೧ ಸಂಪುಟ. ೨ ಪುಟ. ೩೦೩*

**೩೯೭. ದಿಬ್ಯ**

*ಪಂಪ 'ನಲ್ಮೆಗೆ ದಿಬ್ಯಂ ಬಿಡಿವಂತೆವೋಲ್'..............(ಪಂಪ ಭಾರತ ೧-೭೦)*

ಪ್ರಮಾಣ ಮಾಡುವುದಕ್ಕೆ ಹಿಡಿದುಕೊಳ್ಳುವ ಕಾದ ಕಬ್ಬಿಣ ಮುಂತಾದವು. ವಿವಾದವೊಂದನ್ನು ನಿರ್ಣಯಿಸಲು ಮಾನುಷ ಪ್ರಮಾಣಗಳ ಅಭಾವವಿರುವಾಗ ಅನುಸರಿಸುವ ವಿಧಾನವೇ ದಿವ್ಯ ಎನ್ನಲಾಗಿದೆ. "ತತ್ರ ಮಾನುಷ ಪ್ರಮಾಣಾ ನಿರ್ಣೇಯ ಸ್ಯಾಪಿ ನಿರ್ಣಾಯಕಂ ಯತ್ತದ್ದಿವ್ಯಮಿತಿ ಲೋಕ ಪ್ರಸಿದ್ಧಂ" ಪ್ರಾಚೀನ ಕರ್ನಾಟಕದಲ್ಲಿ ಪ್ರಚಲಿತದಲ್ಲಿದ್ದ ಸಪ್ತದಿವ್ಯಗಳಾವುವೆಂದರೆ – ಕೋಶ, ರವಿ, ತಂಡುಲ, ಅಗ್ನಿ, ತಪ್ತಮಾಷ,

ಜಲ, ವಿಷ.

ದಿವ್ಯವನ್ನು ಹಿಡಿಯುವ ವ್ಯಕ್ತಿಯೇ ಶೋಧ್ಯನೆನಿಸುತ್ತಾನೆ. ಕಾಸಿದ ಕಬ್ಬಿಣದ ತುಂಡನ್ನು ಕೈಯಲ್ಲಿ ಹಿಡಿದೋ, ಕಾಸಿದ ತುಪ್ಪದಲ್ಲಿ ಕೈಯದ್ದಿಯೋ ಅಂತೂ ದಿವ್ಯದ ಪರೀಕ್ಷೆಯಲ್ಲಿ ಗೆದ್ದು ಬರಬೇಕಾಗುತ್ತಿತ್ತು. ಕನ್ನಡ ಕಾವ್ಯಗಳಲ್ಲಿಯೂ ದಿವ್ಯದ ಪ್ರಸ್ತಾಪವಿದೆ. ಪಂಪಭಾರತ, ಶಾಂತಿಪುರಾಣ, ಧರ್ಮಾಮೃತ, ಪಂಪರಾಮಾಯಣ, ಬಸವಣ್ಣನವರ ಷಟ್‌ಸ್ಥಲದ ವಚನಗಳು ಸಿದ್ಧರಾಮಚಾರಿತ್ರ ಇತ್ಯಾದಿ ದಿವ್ಯಗಳನ್ನು ಸಾಮಾನ್ಯವಾಗಿ ದೇವಸ್ಥಾನಗಳಲ್ಲಿ ಬ್ರಾಹ್ಮಣರ ಮುಂದೆ ನಡೆಯಿಸುತ್ತಿದ್ದುದು ಕಂಡು ಬರುತ್ತದೆ.

ಪಂಪ ಇಲ್ಲಿ 'ನಲ್ಮೆಗೆ ದಿಬ್ಬಂಬಿಡಿದಂತೆ ವೊಲ್' ಎಂದಿರುವುದು ಪ್ರೀತಿಯ ನಿರ್ದೋಷಿತ್ವವನ್ನು ಹೇಳುವುದಕ್ಕಾಗಿ ಶಂತನು ಸತ್ಯವತಿಯ ಕೈ ಹಿಡಿಯುವಾಗಿನ ಸಂದರ್ಭದಲ್ಲಿ. ಪ್ರಾಚೀನ ಕರ್ನಾಟಕದಲ್ಲಿ ದಿವ್ಯವು ಸಹಜವೂ ಶಾಸ್ತ್ರೋಕ್ತವೂ ಆದ ಪದ್ಧತಿಯಾಗಿದ್ದಿತೆಂದು ಹೇಳಬಹುದು.

*ವಿವರಗಳಿಗೆ ನೋಡಿ: P.V. Kane 1941 History of dhasmashastra (Vol- III) P. 363*

*ಡಾ. ಎಂ. ಚಿದಾನಂದ ಮೂರ್ತಿ ೧೯೭೦ ಸಂಶೋಧನೆ ತರಂಗ ಪುಟ. ೮೭–೧೦೪.*

**೩೯೮. ದೀವದ ಬೇಂಟೆ**

ಗಾಳಿಯಂ ಕಟಿವುಮುಟಿವುಂ ಕಾಪುಂ ಮೇಪುಂ ತೋಡುಂ ಬೀಡುಂ ದೆಸೆಯುಂ ಮೆಚ್ಚುಂ ಬೆಚ್ಚುಂ ಪೋಗುಂ ಮೇಗುಂ ಬೆದಱುಂ (ಕೆದಱುಂ) ಪೆರ್ಚುಂ ಕುಂದುಮನಱಿದು

*ಕಾಣಲುಂ ಕಾಣಿಸಲುಂ ಕಡಂಗಲುಂ ಕಡಂಗಿಸಲುಮಡಂಗಿಸಲುಮೊಡ್ಡಲು ಮೊಡ್ಡಿಸಲುಂ ಪುಗಿಸಲುಂ ಮಿಗಿಸಲುಂ ಕಾಣದುದಂ ಕಾಣಿಸಲುಂ ಮಾಣದುದಂ ಮಾಣಿಸಲುಮೇಱಿದುದನೇಱಿಸಲುಂ ಜಾಣನಾಗಿ ಮೂಱು ಕೊಂಬುಮನಾಱು ನಾಣ್ಪೋಗುಮನೆರಲ್ಪುಜ್ಜೆಯುಮಂ ಮೂಱು ಪೊಟ್ಟುಮಂ ಮೃಗದ ಮೂಱೆರವುಮ ನಾಱುರಯ್ಕೆಯುಮಂ ಗಾಳಿಯುಮನೆಱಂಕೆಯುಮಂ ಬಲ್ಲನಾಗಿ ನಂಬಿದ ಬರವುಮಂ ನಂಬದ ಬರವುಮನಱಿದು ಮಲೆಯದುದಂ ಮಲೆಯಿಸಲುಂ ಮಲೆದುದಂ ತೊಲಗಿಸಲುಂ ನಂಬದುದಂ ನಂಬಿಸಲುಂ ನಂಬಿದುದಂ ಬಿಡಸಲುಮೊಳಪುಗುವುದರ್ಕೆಡೆ ಮಾಡಲುಮೆಡೆಯಾಗದ ಮೃಗಮನವುಂಕಿಸಲುಮೊಲ್ದುಮೊಲ್ಲದ ನಲ್ಲರಂತೆ ಮಿಡುಕಿಸಲುಂ ಪಣಮುಡಿದರಂತಡ್ಡಂ ಮಾಡಲುಮೆಸೆದ ದೆಸೆಗಳ್ಗೋಡಿಸಲುಂ ಕುಮಾರಸ್ವಾಮಿಯ ನಿಮ್ಮಡಿಯ ಕೆಲದೊಳಾನೆ ಬಲ್ಲೆಂ–* ('ವಿ.ವಿಜಯ'. ವಚನ ಪಂಚಮಾಶ್ವಾಸ ೪೬ ವ)

ಇದರ ಕುರಿತು ಮುಳಿಯ ತಿಮ್ಮಪ್ಪಯ್ಯರ ವ್ಯಾಖ್ಯಾನ ಹೀಗಿದೆ:

ಇಂದು ರಾತ್ರಿಯಲ್ಲಾಡುವ ಬೇಟೆ ಎಂಬುದನ್ನು 'ದೀವದ' (ದೀಪದ) ಎಂಬ ವಿಶೇಷಣವೇ ಸೂಚಿಸುತ್ತಿದೆ. ಈ ತರದ ಬೇಟೆಯನ್ನೀಗಲೂ ನಟ್ಟಿರುಳಿನಲ್ಲಾಡು ವವರುಂಟು. ಆದರೆ, ಇದು ಅಧಾರ್ಮಿಕವಾದ ಬೇಟೆ; ಇದನ್ನಾಡಬಾರದು ಎಂದು ತಿಳಿದು ಬಂದ ಈ 'ದೀವದ ಬೇಂಟೆ'ಯ ಬಗೆಯನ್ನೊಂದಿಷ್ಟು ಮೊತ್ತ ಮೊದಲು

ವಿವರಿಸಿದರೆ ದೇಸಿಯನ್ನರಿಯದ ವಾಚಕರಿಗೆ ಹೆಚ್ಚಿನ ಅನುಕೂಲ್ಯವಾಗಬಹುದೆಂದು ಭಾವಿಸುತ್ತೇವೆ.

ಮುಕ್ಕಡೆಯಲ್ಲಿಯೂ ಮುಚ್ಚುಳಗೊಂಡು ಒಂದೆಡೆಯಲ್ಲಿ ಮಾತ್ರವೇ ತೆರೆದುಕೊಂಡಿರುವ ಪೆಟ್ಟಿಗೆಯೊಂದರೊಳಗೆ, ಕುಪ್ಪಿಗೆಯಿಂದಾವೃತವಾಗಿ ಗಾಳಿಗೆ ನಂದಿ ಹೋಗದೆ ಜ್ವಲಿಸುವ ಒಂದು ದೀಪವನ್ನು ಅಲುಗಾಡುವಂತೆ ನೆಲೆಗೊಳಿಸಬೇಕು. ತೆರೆದ ಬಾಗಿಲನ್ನು ಮುಂದುಮಾಡಿದ ಆ ಪೆಟ್ಟಿಗೆಯನ್ನು ಹೊತ್ತುಕೊಂಡು, ಪಳಗಿದವನೊಬ್ಬನು ಮೆಲ್ಲ ಮೆಲ್ಲನೆ ಮುಂಬರಿಯುತ್ತಾ ತನಗೆ ಹೊಲಬಾದ ಮೃಗಗಳ ಇಕ್ಕೆಪಕ್ಕೆಗಳತ್ತ ಹೋಗಬೇಕು. ಸಜ್ಜಾದ ಕೋವಿಯನ್ನೆತ್ತಿಕೊಂಡು, ಜಾಣ ಬೇಟೆಗಾರನೊಬ್ಬನು ಆ ದೀಪದ ಪೆಟ್ಟಿಗೆಯನ್ನು ಹಿಂಬಾಲಿಸಿಕೊಂಡು ಸದ್ದಿಲ್ಲದೈದಬೇಕು. ಸದ್ದಿನ ಸುದ್ದಿಯೂ ಇಲ್ಲದ ಕಗ್ಗತ್ತಲೆಯ ಕಾಡಿನೊಳಗೆ, ಅಂತರಾಳದಲ್ಲಿ ತನ್ನತ್ತಲೇ ಹರಿದುಬರುತ್ತಿರುವ ಜ್ಯೋತಿ ರಿಂಗಣವದು ಪಕ್ಕೆಯಲ್ಲಿದ್ದ ಮೃಗದ ಕಣ್ಣನ್ನು ಕುಕ್ಕುತ್ತಿದೆ. ಆ ಜ್ಯೋತಿಯೆಂದರೆ ತನ್ನನ್ನು ಗಿಳಂಕರಿಸಲಿಕ್ಕೆಂದು ಹುಡುಕುತ್ತಾ ಬರುತ್ತಿರುವ ಪ್ರಬಲವಾದ ಮೃಗದ ಕಣ್ಣೋ, ಅಥವಾ ಬೇರಾವುದಾದರೂ ಅಪಾಯಕರ ವ್ಯಕ್ತಿಯೋ ಎಂದು ಮೃಗಮದು ದಿಗಿಲುಗೊಳ್ಳುತ್ತಿದೆ. ಅಂಜುಕುಳಿಯಾಗಿದ್ದರೆ ಅದು ಓಡಲಾರಂಭಿಸುವುದು; ಧೈರ್ಯಶಾಲಿಯಾಗಿದ್ದರೆ ಮಲೆದು ಮೇಲೆ ಹಾರಲಿಕ್ಕೆ ಸನ್ನದ್ಧವಾಗುವುದು. ನೆಟ್ಟಗಿದಿರಾದಲ್ಲಿ, ಆ ಜ್ಯೋತಿ ಕಣ್ಣನ್ನು ಕುಕ್ಕುವುದರಿಂದ ಮೃಗವು ಕುರುಡುಗೊಂಡು ಸ್ತಬ್ಧವಾಗುವುದು. ಹೇಗಾದರೂ ಸರಿ. ಪಕ್ಕೆಯಲ್ಲಿದ್ದ ಮೃಗವು ಎದ್ದು ಚಲಿಸಬೇಕು; ಆ ಚಲನವು ತಮ್ಮ ಕಣ್ಣಿಗೆ ವ್ಯಕ್ತವಾಗಿ ತೋರಬೇಕು ಎಂಬ ಬೇಟೆಗಾರನ ಗುರಿ ಈಡೇರುತ್ತದೆ. ಬೇಟೆಗಾರರೊಳಗೆ ದೇಸಿಯಾಗಿರುವ ಈ ಸಂಗತಿಯನ್ನರಿತುಕೊಂಡರೆ, ಹಿಂದೆ ದೃಷ್ಟಾಂತಿಸಿದ, ಮುಂದೆ ದೃಷ್ಟಾಂತಿಸಲಿರುವ, ಈ 'ದೀವದ ಬೇಂಟೆ'ಯ ಒಳವನ್ನರಿತುಕೊಳ್ಳಲು ಸುಗಮವಾಗಬಹುದು. ಇನ್ನು ಕ್ರಮವಾಗಿ ಹಿಂದಿನ ವಚನಾಂಗಗಳ ತಾತ್ಪರ್ಯವನ್ನವಧರಿಸಲಾರಂಭಿಸುವ.

ಕಾಲ ದೇಶಗಳೊಡನೆ 'ದೀವದ ಬೇಂಟೆ'ಯ ಸ್ವರೂಪ ಕಥನವನ್ನು ಹಿಂದಿನ ಅಡಿಗಟ್ಟಿನಲ್ಲಿಯೇ ಸಮಕಟ್ಟಿದಂತಾಯಿತು. ಇನ್ನು ಕವಿವಚನಾನುಸಾರವಾಗಿ, ಆ 'ದೀವದ ಬೇಂಟೆ'ಯ ಲಕ್ಷಣಗಳನ್ನು ಕ್ರಮವಾಗಿ ಪ್ರತೀಕ್ಷಿಸುವ ಬೇಟೆಗಾರನು 'ಗಾಳಿಯುಂ' ಮೊದಲಾಗಿ 'ಪೆರ್ಚುಂ ಕುಂದುಂ'ವರೆಗಿನವುಗಳನ್ನು 'ಅಱಿದ'ವನಾಗಿರಬೇಕು ಎನ್ನುತ್ತಾನೆ. 'ಗಾಳಿ'ಯ ಅಲೆತವನ್ನರಿವುದು ಅವಶ್ಯವೆಂಬುದನ್ನು ಹಿಂದೆಯೇ ಸೂಚಿಸಿದೆವು. 'ಕಟೆ'ವು 'ಉಟೆ'ವು ಎಂದರೆ ಇಕ್ಕೆಪಕ್ಕೆಗಳಿಂದ ತೊಲಗಿದ ಮತ್ತು 'ಉಟೆ'ದಿರುವ ಮೃಗಗಳ ಹೊಲಬನ್ನೂ, 'ಕಾಪು' 'ಮೇಪು' (ಕಾಯುವಿಕೆ–ಮೇಯುವಿಕೆ)ಗಳನ್ನೂ ಅರಿತಿರತಕ್ಕುದು. ತುಡುವ ಬಿಡುವ (ತೋಡುಂ ಬೀಡುಂ) ವಿಷಯಗಳನ್ನೂ ಹೆಣ್ಣಗಂಡು ಮೃಗಗಳೊಡ ವೆರೆದು ಮೈಮರೆದಿರುವ 'ದೆಸೆ'ಯನ್ನೂ 'ಕೊಸೆ' (ರತಿವಿಶೇಷ)ಯನ್ನು ತಿಳಿದಿರತಕ್ಕದು. ಅವುಗಳಿಗೆ ಮೆಚ್ಚಾವುದು ಬೆಚ್ಚಾವುದು ಎಂಬ ವಿವೇಚನೆ, ಅವುಗಳ 'ಪೋಗು ಮೇಗು'ಗಳ ತಿಳಿವು, ಬೆದರಿಕೆ ಕೆದರಿಕೆಗಳ ಸ್ವರೂಪ–ಕಾರಣಗಳು, ಹೆಚ್ಚುವ ಅಲ್ಲವೆ ಮದಮೇರುವ

ಮತ್ತು 'ಕುಂದು'ವ ಲಕ್ಷಣ ಕಾಲ ದೇಶದಿಗಳನ್ನೆಲ್ಲ ತಿಳಿದವನಾಗಿರಬೇಕು. ಹೌದು; ಗುಪ್ತಚಾರಕರ ಮುಖಾಂತರವಾಗಿ ಹಗೆಗಳೊಡ್ಡಿನ ಒಳಗಿನ ಗುಟ್ಟನ್ನೆಲ್ಲ ವಿಚಕ್ಷಣನಾದ ಯೋಧನರಿತಿರಬೇಕಾದಂತೆ, ಕುಶಲನಾದ ಬೇಟೆಗಾರನು ಕಾಡಿನ ಮೃಗಗಳ ಹೊಲಬನ್ನೆಲ್ಲ ಬಲ್ಲವನಾಗಿರಬೇಕೆಂದು ಸೂಚಿಸುತ್ತಾನೆ. ಹಾಗೆ ಅವುಗಳ ಪ್ರಕೃತಿಯನ್ನರಿತವನಾದರೆ ಮಾತ್ರವೇ ಮುಂದೆ ವರ್ಣಿಸುವ ಈ ಮೃಗಯೋದ್ಯಮಕ್ಕೆ ಅವನು ಸಮರ್ಥನಾಗುವನೆಂದು ತಾತ್ಪರ್ಯ.

ದೀಪಧಾರಕನೂ ಅಂಥ ಚತುರನೇ ಆಗಿರಬೇಕು. ಆ ಕಗ್ಗತ್ತಲೆಯಲ್ಲಿಯೂ ಮೃಗವನ್ನು ತಾನು ಕಾಣಲಿಕ್ಕೆ, ಹಿಂಬಾಲಿಸುವ ಬೇಟೆಗಾರನಿಗೆ ಕಾಣಿಸಲಿಕ್ಕೆ, ಉತ್ಸಾಹಗೊಳ್ಳ (ಕಡಂಗ)ಲಿಕ್ಕೆ, ಮೃಗವು ಉತ್ಸಾಹವಳಿದಲ್ಲಿ ಮುಂಬರಿವಂತೆ 'ಕಂಡಂಗಿಸಲಿ'ಕ್ಕೆ, ಮುಂಬರಿದು ಬರುವಲ್ಲಿ ಸಂದರ್ಭಕ್ಕನುವಾಗಿ ತಾನಡಗಲಿಕ್ಕೆ, ಮೃಗವು ಅಡಗುವಂತೆ ಮಾಡಿಸಲಿಕ್ಕೆ, ಒಡ್ಡಲಿಕ್ಕೆ ಒಡ್ಡಿಸಲಿಕ್ಕೆ, ಆ ಮೃಗವನ್ನು ತನ್ನತ್ತ ಹೋಗಿಸಲಿಕ್ಕೆ ಮಿಗಿಸಲಿ (ಮೀರಿ ಬರಿಸಲಿ)ಕ್ಕೆ ಸಮರ್ಥನಾಗಿರಬೇಕು. ಮಾತ್ರವಲ್ಲ. ಕಾಣದ ಮೃಗವನ್ನು ಹಿಂಬಾಲಿಸುವ ಕೈದುಕಾರನಿಗೆ ಸನ್ನೆಯಿಂದ ಕಾಣಿಸಲೂ, ಹಿಂಜರಿಯದೆ ಮುಂಬರಿಯುವುದನ್ನು (ಮಾಣದುದಂ) 'ಮಾಣಿಸ' (ತೊಲಗಿಸ)ಲೂ, ಏರಿ ಬಾರದುದನ್ನೇರಿಸಲೂ ಜಾಣನಾಗಿರಬೇಕು. ಇದು ಆ ದೀಪಧಾರಕನಾದ ಬೇಟೆಗಾರನ ಮುಖ್ಯ ಲಕ್ಷಣವೆಂಬುದನ್ನರಿಯಬೇಕು.

'ಮೊಟು ಕೊಂಬುಮಂ' ಎಂದರೆ ಮೃಗಗಳ ಮೂರು ಸಂಕೇತ ಸ್ಥಾನಗಳನ್ನೂ 'ಅಟು ನಾಣ್ಪೋಗುಮಂ... ಬಲ್ಲನಾಗಿ'ರಬೇಕವನು. ಈ 'ಕೊಂಬು', ನಾಣ್ಪೋಗು' ಪದಗಳನ್ನು ಒಟ್ಟಿಗಿಟ್ಟು ಭಾವಿಸಿದರೆ, ಬೇಟೆಗನು ಮೃಗಗಳ ಶೃಂಗಾರಾನುಭಾವಗಳನ್ನರಿತವನಾಗಿರಬೇಕು ಎಂಬುದೇ ಕವಿಯ ತಾತ್ಪರ್ಯವೆಂದು ತೋರುತ್ತಿದೆ. ಶೃಂಗಾರೋದ್ರೇಕದಿಂದ ಮೈಮರೆತ ಅನೇಕಾನೇಕ ರಾಜಕುಮಾರರು ತಮ್ಮನ್ನೂ ತಮ್ಮ ರಾಜ್ಯವನ್ನೂ ನೀತಿಕೋವಿದನಾದ ಹಗೆಗೊಪ್ಪಿಸಿ ಬಯಲಾದುದಕ್ಕೆ ಪುರಾಣ, ಚರಿತ್ರೆಗಳು ಮಾತ್ರವೇ ಅಲ್ಲ, ಆಧುನಿಕ ಕಾಲದ ದೃಷ್ಟಾಂತಗಳೂ ಒದಗಬಹುದು. ಇರಲಿ 'ನಾಣ್ಪೋಗು' ಎಂಬುದಕ್ಕೆ ನಿಘಂಟುಕಾರರು ಪ್ರಶ್ನಾರ್ಥಚಿಹ್ನವನ್ನು ಹಾಕಿರುತ್ತಾರೆ (ವಿ. ವಿಜಯ ನಿಘಂಟು ಪು. ೪೫೮) ನಾಣಿನ + ಪೋಗು ಎಂಬ ವಿಗ್ರಹಾನುಸಾರವಾಗಿ ಅದಕ್ಕೆ 'ಲಜ್ಜಾ' ಎಂಬುದೂ ಒಂದಾಗಿದೆ. 'ಕೊಂಬು' (ಸಂಕೇತ ಸ್ಥಾನ) ಗೋಂಡಾದ ಶೃಗಾರೋದ್ರೇಕದಿಂದಾಗಿ 'ನಾಣ್‌ಪೋಗು'ವ ಸಂದರ್ಭದಲ್ಲಿ ಮೈಮರೆತುಹೋಗುವ ಆ ಮೃಗದಂಪತಿಗಳ ಅನುಭಾವ ಭೇದಗಳನ್ನೇ ಕವಿ ಇಲ್ಲಿ ಸೂಚಿಸಿದುದಾಗಿರಬೇಕು. 'ಸತ್ವಾನಮಪಿ ಲಕ್ಷ್ಯತೇ ವಿಕೃತಿಮಚ್ಚಿತ್ತಂ ಭಯ ಕ್ರೋಧಯೋಃ' (ಅಭಿಜ್ಞಾನ ಶಾಕುಂತಲ ಪು.೫) ಎಂಬ ಕಾಳಿದಾಸನ ಹೇಳಿಕೆಯಲ್ಲಿ ಮೃಗಯಾಪರಿಚಯದಿಂದ ಮೃಗಗಳ ಭಯಕ್ರೋಧಾದಿ ವಿಕೃತಿಗಳನ್ನು ತಿಳಿಯಬಹುದೆಂಬುದೂ, ಹಿಂದೆ ದೃಷ್ಟಾಂತಿಸಿದ ಪಂಪನ 'ಬಗೆಯಂ ತೆಗೆಯನಲ್ಲಾಟಮಂ' ಎಂಬ ಪದ್ಯಭಾಗದಲ್ಲಿ ಮೃಗಗಳ ಸಾಮಾನ್ಯ

ಚಿತ್ತವಿಕಾರವನ್ನೆಲ್ಲ ತಿಳಿದುಕೊಳ್ಳಬಹುದೆಂಬದೂ ಸಮಾನವಾಗಿದೆ. 'ಪುಗಿಲ' ಹೆಜ್ಜೆಯೊಂದು 'ಪೋಗಿ'ನ ಹೆಜ್ಜೆ ಇನ್ನೊಂದು, ಎಂದು 'ಎರಟ್ಟಜ್ಜೆಗಳು' ಆ ಹೊಕ್ಕ ಹೋರಟ ಹಜ್ಜೆಗಳನ್ನರಿತುಕೊಳ್ಳಲಾರದವನಾದರೆ, ಕಾಡಿನೊಳಗಿಲ್ಲದ ಮೃಗಕ್ಕಾಗಿ ವೃಥಾ ಆಯಾಸ ಪಡುವ, ಪಟ್ಟರೂ ಅಕೃತಾರ್ಥನಾಗುವ ಸಂದರ್ಭವಿದೆ, ಎಂದು ತಾತ್ಪರ್ಯ. ಆ ಮೃಗವರ್ಗದ ಶಕ್ತಿ ಉತ್ಸಾಹಗಳು 'ಏರುವ–ಇಳಿಯುವ–ಸಮತಟ್ಟಾಗಿರುವ' ಮೂರು ನಿಯಮಿತ ಸಮಯ ಸಂದರ್ಭಗಳಿಗೆ ಎಂದು ಬೇಟೆಗಾರರು ಹೇಳುತ್ತಾರೆ. ನಕ್ಷತ್ರಗತಿ ಗಳಿಂದಲೂ ಅವುಗಳನ್ನು ನಿರ್ಧರಿಸಿಕೊಂಡು ಬೇಟೆಗೈದುವುದು ನಾಡವರೊಳಗೆ ರೂಢವಾಗಿದೆ. ಅದನ್ನೇ 'ಮೂಱುಪೋೞ್ತುಮಂ.... ಬಲ್ಲನಾಗಿ' ಎಂದು ಕವಿ ಸೂಚಿಸಿರುವುದು. 'ಮೃಗದ ಮೂಱೆರವು'ಗಳು ಎಂದರೆ ಹಿಂದಿನ ಪದ್ಯದಲ್ಲಿ ತೋರುವ ಮೃಗಗಳ 'ಇರ್ಕೆ ಪಕ್ಕೆ ನಿಲ್ವೆಡೆ'ಗಳು 'ಅಱು' ಆರಯ್ಕೆ' ಎಂದರೆ ಆ 'ಮೂಱು ಇರವು'ಗಳನ್ನು ನಿರ್ಭಯವಾಗಿ ಕಾಪಾಡಿಕೊಳಲಿಕ್ಕೆಂದು ಆ ಮೃಗಗಳೇ ಕಲ್ಪಿಸಿಕೊಂಡ ಆರು ತರದ ಕಾಪುಗಳಾಗಿರಬೇಕು. ಯುದ್ಧ ಸಂದರ್ಭದಲ್ಲಿ ಕೋಟೆಯೊಳಗಿನ 'ಇಕ್ಕೆ ಪಕ್ಕೆ ನಿಲ್ವೆಡೆ'ಗಳನ್ನು ಕಾದುಕೊಳ್ಳುವ ಕೊತ್ತಳ ಆಳ್ವೇರಿ ಕಂದಕ' ಮೊದಲಾದವುಗಳು ಹೇಗೋ ಹಾಗೆ ಮೃಗಗಳೂ ತರತರದ ಕಾಪುಗಳನ್ನೊದಗಿಸಿಕೊಳ್ಳುತ್ತಿವೆ. ಹಿಂದೆ ವಿವರಿಸಿ 'ನಾಣ್ಪೋಗಿ'ನ ಆರು ಭೇದಗಳಂತೆ ಈ ಆರು ಭೇದಗಳಾವುವೆಂಬುದು ನಮ್ಮ ವಿವೇಚನೆಗೆ ಹೊರಗಾಗಿಯೇ ಉಳಿದಿವೆ. 'ಗಾಳಿಯು (ಮನೆ) ಱಂಕೆಯುಮಂ ಬಲ್ಲಾನಾಗಿ' ಎಂಬಲ್ಲಿ ಮೊದಲಿನದಾದ ವಾಯುಪರಿಜ್ಞಾನದ ವಿಷಯವಾವಶ್ಯಕವೆಂಬುದು ಹಿಂದೆಯೇ ಸೂಚಿತವಾಗಿದೆಯಷ್ಟೆ. ನಿಘಂಟುಕಾರರು 'ರೆಕ್ಕೆ' ಎಂಬ ಅರ್ಥವನ್ನೀವ 'ಎಱಂಕೆ' ಪದವು ೧೦ನೇ ಆಶ್ವಾಸನದ ೫೧ನೆಯ ವಚನಗತವಾದುದರಿಂದ, ಇದು ತದ್ಭಿನ್ನವೇ ಸರಿ. ಇಲ್ಲಿ ತೋರುವ 'ಎಱಂಕೆ'ಯೆಂದರೆ ತದ್ಬಿನಾರ್ಥಕವೆಂಬುದನ್ನು ಈ ಸಂದರ್ಭವೂ ಸೂಚಿಸುತ್ತಿದೆ. ಈ 'ಎಱಂಕೆ' ಎಂಬ ಪಾಠಕ್ಕೆ ಬದಲಾಗಿ 'ಕ–ಖ' ಪ್ರತಿಗಳಲ್ಲಿ 'ಎರುಕ' ಎಂಬ ಪಾಠಾಂತರವಿದೆ ಎಂಬುದನ್ನು ಸಂಪಾದಕರ ಅಡಿ ಟಿಪ್ಪಣದಿಂದ ತಿಳಿದುಕೊಳ್ಳಬಹುದು. ಅದನ್ನಾಧರಿಸಿ, 'ಎರಂಕೆ' ಎಂಬುದು ಶುದ್ಧಪಾಠವಾಗಿರಬಹು ದೆಂದು ನೋಡುವ. 'ಎರಡು+ಅಂಕೆ' ಎಂಬ ವಿಗ್ರಹಕ್ಕನುವಾದರೆ, ಅದು 'ಈರಂಕೆ' ಎಂದಾಗಬೇಕು. ಅಥವಾ 'ಎರಂಕೆ' ಎಂಬ ಪ್ರಯೋಗವೂ ಇದ್ದುದೋ ಗೊತ್ತಿಲ್ಲ. ಮೊದಲು ಮುಂದಿನ ಪದ್ಯದಲ್ಲಿ ಈ 'ದೀವದ ಬೇಂಟೆ'ಯೊಳಗಿನ 'ಬದ್ದೆ–ಪಜ್ಜೆಗಳ' ವಿವೃತಿಯನ್ನೀಕ್ಷಿಸಿಕೊಳ್ಳುವ

ಪದಮುಮನಿಂಬುಮನಣಮಱ್
ಯದ(ದೇವು) ದು ಬಿದ್ದೆ ಬೆಳ್ಮಿಗಂ ಪಜ್ಜೆ ದಲೆಂ
ಬುದನೆರಡುಮನಱೆವಾತನೆ
ಚದುರಂ ಚದುರಂಗ ಬದ್ದೆವಜ್ಜೆಗಳೊಳವೇ

ಮೃಗಗಳ 'ಪದ(ಪಾದ)'ವನ್ನೂ 'ಇಂಬ(ಇಕ್ಕೆಯ)'ನ್ನೂ ಅರಿಯದಿದ್ದರೆ,

'ಅದೇವುಗದು ಬದ್ದೆ?' ಎಂಬ ಪ್ರಶ್ನದಿಂದ ಮಿಗಗಳ ಹಜ್ಜೆ-ಇಂಬುಗಳನ್ನರಿವ ಜಾಣ್ಮೆಗೆ 'ಬದ್ದೆ' ಎಂಬ ಹೆಸರೆಂಬುದು ಸೂಚಿತವಾಗುತ್ತಿದೆ. ಈ 'ಬದ್ಧ'ಗೆ ನಿಘಂಟುವಿನಲ್ಲಿ ಅರ್ಥವಿಲ್ಲ. 'ಬದ್ದೆದಲ್ಲಳಂ' ಎಂಬ ಪದಕ್ಕೆ 'ಶೂರರನ್ನು ತಲ್ಲಣಗೊಳಿಸುವವನು' ಎಂಬ ಅರ್ಥವಿದೆ. ಇದು ದ್ರೌಪದೀ ವಿಕ್ರಮಾರ್ಜುನರ ಪ್ರಥಮ ಶೃಂಗಾರ ವಿಲಾಸ ಸಂದರ್ಭವರ್ಣನೆ. ಇಲ್ಲಿ 'ಬರ್ದೆ(ಪ್ರೌಢ)ಯರನ್ನು ತಲ್ಲಣಗೊಳಿಸುವವನು' ಎಂಬುದೇ ಇದಕ್ಕೆ ಅರ್ಥವಾಗಿರಬೇಕು. 'ಸುರತಮಕರಧ್ವಜ' ಎಂಬ ನಾಮಸಾರ್ಥಿಕ್ಕವನ್ನು ವಿವರಿಸುವಲ್ಲಿ 'ಎಂತಪ್ಪ ಬರ್ದೆಯರುಮಂ ಬಗೆಗೆ ವರಿಸುವ ತಕ್ಕಿನೊಳ್' ಎಂದು ಹೇಳುವುದರಿಂದ ಅದು ವ್ಯಕ್ತವಾಗುತ್ತಿದೆ. ಆದರೆ ಅಲ್ಲಿ 'ಬರ್ದೆ' ಎಂದಿದ್ದರೆ ಇಲ್ಲಿ 'ಬದ್ದೆ' ಎಂದಿರುವುದಲ್ಲವೆ? ಎನ್ನಬಹುದು. ಆದರೆ ಅಲ್ಲಿ 'ಬರ್ದೆ' ಎಂಬ ಆ ದಡ್ಡಕ್ಕರದ ರೇಫಕ್ಕೆ ಬದಲಾಗಿ ದಕಾರವು ಸೇರಿ, 'ಉರ್ದು' 'ಉದ್ದು' ಎಂದಾದಂತೆ, ದ್ವಿತ್ವವಡೆದು ರೂಪುಗೊಂಡಿದೆ ಎಂದೆಣಿಸಬಹುದು. ಅದಂತಿರಲಿ. ಸಂಶಯಾತ್ಮಕವಾದ 'ಎರಂಕೆ (ಎಱಂಕೆ)'ಯ ಸ್ವರೂಪವನ್ನವಗಾಹಿಸಿಕೊಳ್ಳುವುದು ಹೇಗೆ ಎಂಬುದನ್ನು ನೋಡುವ.

ಮೇಲೆ ದೃಷ್ಟಾಂತಿಸಿದ ಪದ್ಯದಲ್ಲಿ ಮೃಗಗಳ 'ಪದ'ವನ್ನೂ 'ಇಂಬ'ನ್ನೂ 'ಅಟೆ'ವುದೇ ಮೃಗಯಾವಿನೋದದ 'ಬದ್ದೆ' ಎನ್ನಿಸುತ್ತಿದೆ ಎಂದು ಸೂಚಿತವಾಗುತ್ತಿದೆ. ಆ ತಿಳಿವೆಂದರೆ, ಬೇಟೆಯಲ್ಲಿ ಪ್ರಮುಖವಾದ ಪ್ರೌಢಿಮೆಯೂ ಹೌದು. ಪ್ರೌಡೆ ಎಂಬುದೇ 'ಬುರ್ದೇ-ಬದ್ದೆ' ಎಂಬ ರೂಪಾಂತರಗಳನ್ನೊಂದಬಹುದೆಂದು ನಮ್ಮಣಿಕೆ. ಅದರಂತೆ 'ಪ್ರೌಢಿಮೆ' ಎಂಬ ಪದದಿಂದಲೇ ಮೃಗಯಾವಿನೋದದ ಈ 'ಬದ್ದೆ' ಪದವೂ ವಿಕೃತಿಗೊಂಡು ದೇಶಿವಡೆದಿತ್ತು ಎಂದು ತೋರುತ್ತಿದೆ. ಈ 'ಬದ್ಧ'ಎಂದರೆ, ಮೃಗಗಳ ದವನ್ನರಿವ ಇಂಬನ್ನರಿವ 'ಎರಡು ಅಂಕೆ' (ಎರಂಕೆ) ಗಳಿದೊಡಗೂಡಿದ 'ಮೃಗಯಾಂಗ'ವಾಗಿರಬಹುದೆಂದು ತೋರುತ್ತಿದೆ. ಅದರಿಂದ 'ಎರಂಕೆಯುಮಂ ಬಲ್ಲನಾಗಿ' ಎಂದರೆ, 'ಬದೆಯರಿವನ್ನೊಂದಿದವನಾಗಿ' ಎಂಬುದೇ ಅರ್ಥವಾಗಿರಬಹುದೆ?

ಮೃಗಗಳ 'ಬರವಿ'ನೊಳಗೆ (ಆಗಮನದೊಳಗೆ) ನಂಬಿದ ಬರುವಾವುದು ನಂಬದ ಬರವಾವುದು ಎಂಬ ಭೇದವನ್ನು, ಚತುರರಾದ ದೀವಗಾರ ಬೇಟೆಗಾರರು, ಅವುಗಳ ಪಾಪ ವಿನ್ಯಾಸ ಕ್ರಮದಿಂದಲೇ ಪರಿಚ್ಛೇದಿಸಿಬಿಡುತ್ತಾರೆ. ಬೇಟೆಗಾರರ ಪ್ರವೇಶವನ್ನೂ ದೀಪದ ವಂಚನೆಯನ್ನೂ ಪೂರ್ವಾನುಭವದಿಂದಲೇ ಅರಿತ ಕೆಲವು ಮೃಗಗಳು ಹಿಂಜರಿದು ಬಿಡುತ್ತವೆ. ಹಾಗೆ 'ಮಲೆಯದು'ದನ್ನು ಉಪಾಯಾಂತರದಿಂದ 'ಮಲೆಯಿಸಲಿ'ಕ್ಕೆ 'ನಂಬದು'ದನ್ನು ನಂಬಿಸಲಿಕ್ಕೆ, ಅಂಥ ಪರಿಚ್ಛೇದಿಸಿದ ಬೇಟೆಗಾರರೇ ಸಮರ್ಥರಾಗುತ್ತಾರೆ. ಮಾತ್ರವಲ್ಲ, ಹಾಗೆ 'ಮಲೆದ- ನಂಬಿದ' ಕೋಟ್ಮಿಗವದು ಸಂದರ್ಭಾನುಸಾರವಾಗಿ ತಮ್ಮ ಕೈಮೀರಿದುದೆಂದು ತೋರಿದರೆ, ಪ್ರತ್ಯುಪಾಯಪ್ರಯೋಗದಿಂದ 'ಮಲೆದುದ'ನ್ನು 'ತೊಲಗಿಸಲಿ'ಕ್ಕೂ 'ನಂಬಿದ' ನಂಬುಗೆಯನ್ನು 'ಬಿಡಿಸಿ' ಆವಿಶ್ವಾಸಕ್ಕೆಡೆಮಾಡಲಿಕ್ಕೂ ಅವರೇ ಬಲ್ಲಿದರು. ಮತ್ತು ಮೃಗವು 'ಒಳಪುಗುವುದರ್ಕೆಡೆ' ಇಲ್ಲದಿದ್ದರೆ 'ಎಡೆಮಾಡ'ಬೇಕು ಎಂತೂ 'ಎಡೆಯಾಗದುದನ್ನವುಂಕಿಸ' ಬೇಕು. ಈ

ಸಂದರ್ಭದಲ್ಲಿ ದೀವದ ಬೇಟೆಗಾರರು ಪ್ರತಿಭಾವಂತರಾಗಿರಬೇಕೆಂಬುದನ್ನು ಕವಿ ಅಲಂಕಾರಿಕವಾಗಿ ಸೂಚಿಸುತ್ತಾನೆ. ಎದೆಯೊಳಗೆ 'ಒಲ್ದುಂ' ಬಾಹ್ಯಾನುಭಾವದಲ್ಲಿ 'ಒಲ್ಲದ'ರಂತೆ ನಟಿಸುವ 'ನಲ್ಲ'ರು ಹೇಗೆ ಅನುರಕ್ಷೆಯರಾದ ನಲ್ಲೆಯರನ್ನು 'ಮಿಡುಕಿಸಿ' ಮೇಲ್ವಾಯಿಸಿಕೊಳ್ಳುತ್ತಾರೋ ಹಾಗೆ ಕೆಲವಡೆಯಲ್ಲಿ 'ಪಣಮುಡಿದ (ನಿರ್ಧನಿಕರಾದ)' ನಲ್ಲರು ಹೇಗೆ ತಲೆಮರಸಿ ಹೋಗುತ್ತಾರೋ ಹಾಗೆ ಕೆಲವಡೆಯಲ್ಲಿ, ವರ್ತಿಸಿ ಈ ಬೇಟೆಗಾರರು ಕಾರ್ಯಸಾಧನೆಗೈಯಬೇಕು. ಎನ್ನುತ್ತಾನೆ. ದೀವದ ಬೇಟೆ ಎಂಬುದು ಮೃಗಯಾ ಬೇಧಗಳೊಳಗೆ ಕೀಳ್ತರಗತಿಯದೆಂಬುದನ್ನು ಈ ಹೋಲಿಕೆಯೇ ಹೊಳೆಯುತ್ತಿದೆ. ಮಾತ್ರವಲ್ಲ ಭಣವನ್ನು 'ಎಸೆದ ದೆಸೆಗಳ್ಗೆ' ತಾನಾಗಿ ಓಡುವಂತೆ ಮೃಗಗಳಿಗೆ ದಿಗ್ಭ್ರಮೆಯುಂಟುಮಾಡುವುದೂ ಒಂದು ಜಾಣ್ಮೆ ಎಂದು ದೀವದ ಬೇಟೆಯ ವರ್ಣನೆಯನ್ನು ಮುಗಿಸುತ್ತಾನೆ. ಪಂಪನು ಬೇಟೆಯ ವಿಧಾನಗಳಲ್ಲಿ ದೀವದ ಬೇಂಟೆಯನ್ನು ವಿವರಿಸಿದ್ದಾನೆ. ಪಂಪ ಭಾರತದಲ್ಲಿ ವಿಶಿಷ್ಟ ಸಾಂಸ್ಕೃತಿಕ ವಿವರವಾಗಿ ಇದು ಮಂಡಿತವಾಗಿದೆ.

*ವಿವರಗಳಿಗೆ ನೋಡಿ: ಮುಳಿಯ ತಿಮ್ಮಪ್ಪಯ್ಯ ೨೦೦೬ ನಾಡೋಜಪಂಪ ಪುಟ. ೨೬೦–೬೫*

**೩೪೯. ದುರ್ಜನ**

ಯಾವನು ಸಜ್ಜನರ ಬುದ್ಧಿಯನ್ನು ಅತಿಕ್ರಮಿಸಿ **ದುರ್ಜನರ** ವಶದಲ್ಲಿರುವನೋ ಅವನು ತಾನಿದ್ದ ಸ್ಥಳದಲ್ಲಿಯೇ ಹಗೆಯ ವಶವಾಗುವನು ಎಂದು ಕರ್ಣಾಟಕ ಪಂಚತಂತ್ರ (ಭೇದಪ್ರಕರಣ, ಶ್ಲೋಕ ೬೨)ರಲ್ಲಿ ಬರುತ್ತದೆ. ದುರ್ಜನರ ವಶದಲ್ಲಿರುವವನು ಹಗೆಯ ವಶವಾಗುವುದರಲ್ಲಿ ಸಂಶಯವಿಲ್ಲ.

ದುರ್ಜನಂಗೆ ನೂಱು ಲೇಸಂ ಮಾಡಿದೊಡಂ ಕೆಡುವುದು; ಅಱಿಯದವನ ಮುಂದೆ ನೂಱು ಸುಭಾಷಿತವನೋದಿದೊಡಂ ಕೆಡುವುದು; ಕೇಳದವಂಗೆ ನೂಱು ಮಾತಂ ಪೇಳ್ದೊಡಂ ಕೆಡುವುದು, ಮಱಹುಳ್ಳವಂಗೆ ನೂಱು ಬುದ್ಧಿಯಂ ಪೇಳ್ದೊಡಂ ಕೆಡುವುದು.

(ಕರ್ಣಾಟಕ ಪಂಚತಂತ್ರ, ಭೇದಪ್ರಕರಣ, ಶ್ಲೋಕ ೯೮)

ದುರ್ಜನನಾದವನಿಗೆ ನೂರು ಒಳ್ಳೆಯದನ್ನು ಮಾಡಿದರೂ ಕೆಡುವುದು. ಅರಿಯದವನ ಮುಂದೆ ನೂರು ಸುಭಾಷಿತ ಓದಿದರೂ ಕೆಡುವುದು. ಅರಿಯದವನ ಮುಂದೆ ನೂರು ಮಾತು ಹೇಳಿದರೂ ಅದು ನಿಷ್ಪ್ರಯೋಜಕ. ಮರೆಯುವವನಿಗೆ ಎಷ್ಟು ಬುದ್ಧಿ ಹೇಳಿದರೆ ಏನು ಪ್ರಯೋಜನ? ಸಜ್ಜನ ಮತ್ತು ದುರ್ಜನರ ನಡುವಣ ವ್ಯತ್ಯಾಸವು ನಿರ್ಣಯಗೊಳ್ಳುವುದು ಸಾಮಾಜಿಕವಾಗಿ ಪ್ರತಿಯೊಂದು ಸಮಾಜವು ತನ್ನ ತನ್ನ ನೈತಿಕ ನಿಲುವುಗಳನ್ನು ಹೊಂದಿರುತ್ತದೆ. ಅದಕ್ಕೆ ಅನುಸಾರವಾಗಿ ವ್ಯಕ್ತಿಯನ್ನು ಗುಣನಡತೆಗಳನ್ನು ನಿರ್ಣಯಿಸುತ್ತದೆ. 'ಪಂಚತಂತ್ರ'ದಲ್ಲಿ ದುರ್ಜನರ ಬಗೆಗಿನ ವ್ಯಾಖ್ಯೆಯು ಈ ದೃಷ್ಟಿಯಿಂದ ಕವಿಯೊಬ್ಬನ ಮಾತು ಮಾತ್ರವಲ್ಲ.

ದುಷ್ಟರು ಸ್ವಭಾವದಿಂದಲೇ ಕಠೋರ ಮನಸ್ಸುಳ್ಳವರಾಗಿರುತ್ತಾರೆ, ಕಾರಣವಿಲ್ಲದೇ ಜನರೊಡನೆ ಕಲಹ ಮಾಡುತ್ತಾರೆ. ಇತರರ ಸ್ವತ್ತು ತಮಗೆ ಬೇಕೆಂದು ಅಪಹರಣದಲ್ಲಿ ಉದ್ಯುಕ್ತರಾಗುತ್ತಾರೆ. ಪರಸ್ತ್ರೀಯರನ್ನು ಸದಾ ಬಯಸುತ್ತಾರೆ. ಸಜ್ಜನರ ಉತ್ಕರ್ಷವನ್ನು ಸಹಿಸುವುದಿಲ್ಲ. ತಮ್ಮ ಬಂಧುಗಳಲ್ಲೇ ಮಾತ್ಸರ್ಯ ತೋರಿಸುತ್ತಾರೆ

*ವಿವರಗಳಿಗೆ ನೋಡಿ: ಭರ್ತೃಹರಿಯ ನೀತಿಶತಕ ೧೯೭೪ ಶ್ಲೋಕ-೪೨.*

**೪೦೦. ದುರ್ವಿಳಸನ**

ವಿಳಸನವೆಂದರೆ ಆಟ "ದುರ್ವಿಳಸನಮಂ" ದುರಾದೃಷ್ಟದ ಪ್ರತಿನಿಧಿ. ವಿಧಿಲೀಲೆ ಎನ್ನುವುದಕ್ಕೆ ಸಮಾನಾರ್ಥಕವಾಗಿ ಇದನ್ನು ಬಳಸಲಾಗುತ್ತದೆ.

*ಅವಧರಿಸದೆ ನಿನ್ನೊಳ್ ಪಿರಿ*
*ದವಿನಯಮಂ ನೆಗಳ್ತೆ ದೋಷಮಂ ತಪದೊಳ್ ನೀ*
*ಗುವೆನಸದಾಗ್ರಹಮಂ ಬಿಸು*
*ಡುವುದೊರ್ಮೆಗೆ ಮಳಿವುದೆನ್ನ* **ದುರ್ವಿಳಸನಮಂ**

*(ಆದಿಪುರಾಣ ೧೪-೧೩೦, ೧೩೧)*

ಎಂದು ಬೇಡಿಕೊಂಡು ಬಾಹುಬಲಿ ತಪಶ್ಚರಣ ನಿಶ್ಚಳ ನಿಶ್ಚಯಮನನಾದ ಬಾಹುಬಲಿಯು ಇಲ್ಲಿ ದುರ್ವಿಳಸನ ಎಂದಿದ್ದಾನೆ. ಕೋಪವೆಲ್ಲವೂ ಮಾಯವಾಗಿ 'ಎತ್ತೆತ್ತ ಗೆಯ್ದೆನಿದಂ ತಮ್ಮನೊಳ್' ಎಂದಾಯಿತು. ಉಳಿದ ಒಬ್ಬನೇ ತಮ್ಮನೂ ತಪಸ್ಸಿಗೆ ಹೊರಟುಹೋಗುವುದೇ ಹೋದ. 'ನೀನೊರ್ಬನ್ನೆ ಮನುವಂಶಕ್ಕೆ ಲಲಾಮನಪ್ಪನುಜನ್ನೆ, ಬೇಡಮವನಮಂ ಸಾರ್ವುದುಂ ಆನದಾರ್ಗೆ ಮಳಿವೆಂ ಮತ್ಪ್ರಾಜ್ಯ ಸಾಮ್ರಾಜ್ಯಮಂ ಕೊಳ್ಳುತ್ತಾ ತಮ್ಮನ ಪಾದಗಳಿಗೆ ಬೀಳುತ್ತಾನೆ. ಅವನ ಕಣ್ಣೀರು ಬಾಹುಬಲಿಯ ಪಾದಗಳನ್ನು ತೊಳೆದವು. 'ಅಗ್ರಜನತ್ಯುನ್ನತಮಪ್ಪ ಪುಸ್ತಕದ ಮೇಗೋರಂತೆ ಪಾಯ್ವಾಗಳಿಂದ ಬಾಹುಬಲಿ 'ನಿಧೀಶಂಗೆ ವಂಶಜ ರಾಜ್ಯಾಭಿಷವೋತ್ಸವ'ವನ್ನು ಮಾಡಿದನು.

ಭರತನಿಗೆ ಬಾಹುಬಲಿಯು ಹೇಳುವ ಮತ್ತೊಂದು ಮಾತು ಗಮನಾರ್ಹ: ಅಣ್ಣನು ಬಯಸಿದ ಹೆಣ್ಣಿಗೆ ಮತ್ತು ಮಣ್ಣಿಗೆ ಬಯಸಿದ್ದು ದುರ್ವಿಳಸನ. ಆದುದರಿಂದ ಅದನ್ನು ಮರೆತುಬಿಡು. ಈ ದೋಷವನ್ನು ಬಗೆಹರಿಸಲು ನಾನು ತಪಕ್ಕೆ ತೆರಳುತ್ತೇನೆ ಎನ್ನುತ್ತಾನೆ. ಇದು ವಿಧಿವಾದವನ್ನು ಎತ್ತಿ ಹಿಡಿಯುತ್ತದೆ. ಹಣೆ ಬರಹ ಎಂಬುದನ್ನು ಈ ಮಾತು ಸಂಕೇತಿಸುತ್ತದೆ.

*ವಿವರಗಳಿಗೆ ನೋಡಿ: ಮುಳಿಯ ತಿಮ್ಮಪ್ಪಯ್ಯ ೧೯೮೮ ಶ್ರದ್ಧಾಂಜಲಿ*

**೪೦೧. ದುಷ್ಟ ನೃಪಾಲರ್**

*ಮೊದಲೊಳ್ ರಾಜ್ಯಾಭಿಷೇಕ ಪ್ರಬಲಜಲಮೆ ಕರ್ಚಿತ್ತು ದಾಕ್ಷಿಣ್ಯಮಂ ಹೋ*
*ಮದ ಧೂಮಂ ಚಿತ್ರದೊಳ್ ತೊಟ್ಟನೆ ಮಲಿನತೆಯಂ ಪೊರ್ದಿಸಿತ್ತೊಪ್ಪಿರಲ್ ಕ।*

*ಟ್ಟಿದ ಪಟ್ಟಂ ಬರ್ಪ ಮುಪ್ಪಂ ಮಱೆಯಿಸಿತಧಿಕಕ್ಷಾಂತಿಯಂ ವಿಪ್ರವರ್ಗಾ*
*ಸ್ಪದ ದರ್ಭಾನೀಕ ಸಮ್ಮಾರ್ಜನಿ ಕಳೆದುದೆನಲ್ **ದುಷ್ಟರಪ್ಪರ್ ನೃಪಾಲರ್** ॥*

*(ಕರ್ಣಾಟಕ ಕಾದಂಬರಿ, ೨-೮೭)*

ರಾಜರಿಗೆ ಮೊದಲು ಪಟ್ಟಾಭಿಷೇಕ ಕಾಲದಲ್ಲಿ ಅಭಿಷೇಕ ಮಾಡುವ, ಮೇಲಿಂದ ವೇಗವಾಗಿ ಇಳಿಯುವ ನೀರೇ ಅವರ ದಾಕ್ಷಿಣ್ಯ ಗುಣ (ಇನ್ನೊಬ್ಬರ ಮನಸ್ಸಿಗೆ ನೋವನ್ನುಂಟುಮಾಡಬಾರದೆಂಬ ಮನೋಭಾವ)ವನ್ನು ತೊಳೆಯಬಿಡುತ್ತದೆ. ಪಟ್ಟಾಭಿಷೇಕ ಸಮಯದಲ್ಲಿ ಮಾಡುವ ಹೋಮದ ಹೊಗೆಯು ತಟ್ಟನೆ ಮನಸ್ಸಿನಲ್ಲಿ ಮಲಿನತೆಯನ್ನುಂಟು ಮಾಡುತ್ತದೆ. ಚಂದವಾಗುವಂತೆ ತಲೆಗೆ ಕಟ್ಟಿರುವ ರೇಷ್ಮೆಯ ವಸ್ತ್ರವೇ ಮುಂದೆ ಬರುವ ಮುಪ್ಪನ್ನು ಮರೆಸುತ್ತದೆ. ಬ್ರಾಹ್ಮಣರ ಕೈಯಲ್ಲಿರುವ ದರ್ಭೆಯ ಕಂತೆಯೆಂಬ ಕಸಕಂತೆಯು ಕ್ಷಮಾಗುಣವನ್ನು ತೊಡೆದುಹಾಕುತ್ತದೆ. ಹೀಗಾಗಿ ರಾಜರು ದುಷ್ಟರಾಗುತ್ತಾರೆ.

ಶಾಸ್ತ್ರಹೀನನನ್ನು ಅಮಾತ್ಯ ಮುಂತಾದ ಸಹಾಯಕರ ಸಂಪತ್ತಿಯಿಂದ ಎಲ್ಲೆಲ್ಲಿ ತಿಳಿಯದೋ ಅಲ್ಲಲ್ಲಿ ತಿಳಿಯಪಡಿಸಿ ಸರಿಮಾಡಬಹುದು: ಶಾಸ್ತ್ರ ತಿಳಿದು ಅದನ್ನು ಮೀರುವವನು: ಶಾಸ್ತ್ರ ವಿರುದ್ಧವಾದ ಹಟವನ್ನಿಟ್ಟುಕೊಂಡು ಆ ಬುದ್ಧಿಯಿಂದ ಅನ್ಯಾಯವಾಗಿ ರಾಜ್ಯವನ್ನೂ ಮತ್ತು ತನ್ನನ್ನೂ ಸಹ ನಾಶಗೊಳಿಸಿಕೊಳ್ಳುವನು. ಆದ್ದರಿಂದ ಶಾಸ್ತ್ರಜ್ಞಾನ ವಿಹೀನ(ಅಂಧನೇ). ಒಳ್ಳೆಯವನು ಎಂದು ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಬರುತ್ತದೆ.

ಸಾಮಾನ್ಯವಾಗಿ ರಾಜರು ಕೋಪ ಸ್ವಭಾವದವರು, ಸ್ವಲ್ಪ ಅಸಮಾಧಾನವಾದರೂ ಭಯಂಕರ ಕೋಪ ಹೊಂದಿ ಶಿಕ್ಷಿಸುತ್ತಾರೆ. ಅಗ್ನಿಯನ್ನಿಟ್ಟುಕೊಂಡು ಹೋತೃ ಎಂಬ ಋತ್ವಿಜನು ಹೋಮ ಮಾಡುತ್ತಿರುತ್ತಾನೆ. ಅಗ್ನಿಗೆ ಆಜ್ಯ ಹವಿಸ್ಸು ಮುಂತಾದವುಗಳನ್ನು ಸಮರ್ಪಿಸುತ್ತಾನೆ. ಆದರೂ ಪ್ರಮಾದದಿಂದ ಎಲ್ಲಿಯಾದರೂ ಅದರ ಸ್ಪರ್ಶವಾದರೆ ಅದು ಅವನನ್ನು ಸುಡದೇ ಬಿಡುವುದಿಲ್ಲ. ಅದರಂತೆ ರಾಜನಿಗೆ ತನ್ನವರೆಂಬ ಮಮತೆ ಇಲ್ಲದೆ ಶಿಕ್ಷಿಸುತ್ತಾನೆ. ಇಂತಹವನನ್ನು ಆಶ್ರಯಿಸಬಾರದು.

*ವಿವರಗಳಿಗೆ ನೋಡಿ: ಶ್ರೀ ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳು ೨೦೧೦*
*ಕೌಟಿಲೀಯ ಅರ್ಥಶಾಸ್ತ್ರ ಪುಟ. ೪೫೩*
*ಭರ್ತೃಹರಿಯ ನೀತಿಶತಕ ೧೯೭೪- ಶ್ಲೋಕ-೪೭.*

**೪೦೨. ದೇವಗತಿ**

ಜನಪದರಲ್ಲಿ ದೇವಲೋಕ ಅತ್ಯುತ್ತಮವಾದದ್ದು. ಅಲ್ಲಿ ಸರ್ವಶ್ರೇಷ್ಠನಾದ ಭಗವಂತ ನಿರುತ್ತಾನೆ. ಆತನ ಸಾನ್ನಿಧ್ಯದಲ್ಲಿ ಪುಣ್ಯಕಾರ್ಯಗೈದ ಜೀವಿಯು ಸರ್ವಸುಖಭೋಗವನ್ನು ಅನುಭವಿಸುತ್ತಾ ಅಲ್ಲಿಯೇ ನೆಲಸುತ್ತದೆಂಬ ಭಾವನೆ ಅವರದು ಮತ್ತು ಹಿಂದೂ ಧರ್ಮದ ಚಿಂತನೆಯು ಅದೇ ಆಗಿದೆ. ಜೈನಧರ್ಮದ ಚಿಂತನೆಯು ಈ ಲೋಕದ

ಕಲ್ಪನೆಯನ್ನು ಒಪ್ಪಿಕೊಂಡು ಮುಂದುವರಿದು ಪುಣ್ಯ ಫಲವು ಸಹ ಪಾಪ ಫಲದಂತೆಯೇ ಬಂಧನಕಾರಿಯಾದದ್ದು. ಇದು ವಿದ್ಯಾಪ್ರಚಾರ ಮಾಡುವುದು, ಜಾತಿಯ ಉನ್ನತಿಯನ್ನು ಮಾಡುವುದು, ಪರೋಪಕಾರ ಮಾಡುವುದು, ಧರ್ಮದ ಪಾಲನೆ ಮಾಡುವುದು ಇತ್ಯಾದಿ ಕರ್ಮಫಲಗಳಿಂದ ಪುಣ್ಯ ಬಂಧವು ಪ್ರಾಪ್ತವಾಗುತ್ತದೆ. ಆ ಪುಣ್ಯ ಬಲದಿಂದ ಸ್ವರ್ಗ (ದೇವಲೋಕ) ದೊರೆಯುತ್ತದೆಂದು ಜೈನಧರ್ಮ ತಿಳಿಸುತ್ತದೆ. ವಡ್ಡಾರಾಧನೆಯಲ್ಲಿ ಸಾಮಾನ್ಯವಾಗಿ ಬರುವ ಎಲ್ಲಾ ನಾಯಕ ಪಾತ್ರಗಳು ಧರ್ಮಪಾಲನೆ ಮಾಡಿ ಕಷ್ಟವನ್ನು ಅನುಭವಿಸಿ ಮೋಕ್ಷಕ್ಕೆ ಹೋಗದೇ ಈ ದೇವಲೋಕಕ್ಕೆ ಬರುತ್ತವೆ. "ಅರಸು ಜನ್ಮಕ್ಕೆ ಬಂದು ಮೋಕ್ಷದ ಬಾಗಿಲಿಗೆ ಬಂದ ಅನೇಕ ನಾಯಕರು ದೇವಲೋಕಕ್ಕೆ ಮರಳುತ್ತಾರೆ. ಸುಕುಮಾರಸ್ವಾಮಿ, ಸುಕೌಶಳಸ್ವಾಮಿ, ಗಜಕುಮಾರ, ಸನತ್ಕುಮಾರ ಮುಂತಾದವರೆಲ್ಲ ದೇವಲೋಕಕ್ಕೆ ಹೋಗುತ್ತಾರೆ. ಮೋಕ್ಷಕ್ಕೆ ಸಲ್ಲುವವರು ಕೆಲವೇ ಕೆಲವರು ಹಾಗೂ ಅವರೂ ಕೂಡ ಕೆಲವೊಮ್ಮೆ ಅಂಥ ಮಹತ್ವದ ವ್ಯಕ್ತಿಗಳಾಗಿರುವುದಿಲ್ಲ. ಮೋಕ್ಷಕ್ಕೆ ಸಲ್ಲುವವರ ತಪಶ್ಚರ್ಯವನ್ನು ಕೂಡ ಅಂಥ ಕಠಿಣ ಎಂಬಂತೆ ಚಿತ್ರಿಸುವುದಿಲ್ಲ. ಬದಲಾಗಿ ತೀರ ಘೋರವಾದ ಹಿಂಸೆಯನ್ನು ಸಹಿಸಿ ಮರಣ ಹೊಂದಿದ ವರ್ಣನೆ ಬರುವ ಸಂದರ್ಭಗಳಲ್ಲೆಲ್ಲಾ ಆ ವ್ಯಕ್ತಿಗಳು ದೇವಲೋಕದಲ್ಲಿ ಹುಟ್ಟುತ್ತಾರೆ" ಪ್ರಾಯಶಃ ಇದಕ್ಕೆ ಕಾರಣ ಜನರ ನೈಜ ಬದುಕಿನ ಸುಖಲೋಲುಪತೆಯನ್ನು ದೇವಲೋಕವೆಂಬ ಇನ್ನೊಂದು ಲೋಕದಲ್ಲಿ ತೋರಿಸಿ ಆ ಮೂಲಕ ಜನತೆಯನ್ನು ಅಲ್ಲಿಗೆ ಕರೆದೊಯ್ಯುವ ಮತ್ತು ಧರ್ಮದ ಜನಪ್ರಿಯತೆಯನ್ನು ಹೆಚ್ಚಿಸುವ ಒಂದು ಮಾರ್ಗ, ಅಂಥ ಲೋಕದ ಕಲ್ಪನೆಯು ಲಲಿತಘಟೆಯ ಕಥೆಯಲ್ಲಿ ಈ ರೀತಿ ಬರುತ್ತದೆ.

"ಧರ್ಮಕಾರ್ಯವನ್ನು ಮಾಡಿದವರು ಹದಿನಾರು ಕಲ್ಪಗಳಲ್ಲಿಯೂ ಅದಕ್ಕಿಂತ ಮೇಲಿರುವ ನವಗ್ರೈವೇಯಕಗಳಲ್ಲಿಯೂ, ಅದಕ್ಕಿಂತ ಮೇಲಿರುವ ನವನುದ್ದಿಸೆಗಳಲ್ಲಿಯೂ, ಅದಕ್ಕಿಂತ ಮೇಗಣ ಪಂಚ ಅಣುತ್ತರೆಗಳಲ್ಲಿಯೂ ಇಂದ್ರ, ಪ್ರತೀಂದ್ರ, ಸಾಮಾನಿಕ, ತ್ರಯಸ್ತ್ರಿಂಶ, ಪಾರಿಷದ ಆತ್ಮರಕ್ಷ, ಲೋಕಪಾಲ, ಅಹಮಿಂದ್ರ ಎಂಬ ಪದವಿಯನ್ನು ಪಡೆದು ಹುಟ್ಟುತ್ತಾರೆ. ಈ ಲೋಕದಲ್ಲಿ ಅವರಿಗೆ "ಅಣಿಮಾ, ಮಹಿಮಾ, ಲಘಿಮಾ, ಪ್ರಾಪ್ತಿ, ಪಾಗಲ್ಭ್ಯ, ಈಶಿತ್ವ, ವಶಿತ್ಸ, ಕಾಮರೂಪಿತ್ವ ಎಂಬ ಎಂಟು ಗುಣಗಳಿಂದ ಕೂಡಿದ ಐಶ್ವರ್ಯ ಸಿದ್ಧಿಸುತ್ತದೆ. ದಿವ್ಯವಾದ ರೂಪ, ಲಾವಣ್ಯ, ಸೌಭಾಗ್ಯಕಾಂತಿಗಳನ್ನು ಅವರು ಪಡೆಯುತ್ತಾರೆ. ಅವರ ಉಸಿರು ಪರಿಮಳಿಸುತ್ತದೆ. ಆಯುಷ್ಯವಿರುವ ತನಕ ನವಯೌವನರಾಗಿಯೇ ಉಳಿಯುತ್ತಾರೆ. ಯಾವುದೇ ದುಃಖ ಅಥವಾ ರೋಗ ಇರುವುದಿಲ್ಲ. ಕಟಕ, ಕಟಿಸೂತ್ರ, ಕುಂಡಲಾದಿ ಹದಿನಾರು ಆಭರಣಗಳನ್ನು ಧರಿಸಿ, ದಿವ್ಯ ವಸ್ತ್ರಗಳನ್ನುಟ್ಟು, ಸೂರ್ಯನಿಗಿಂತ ಅಧಿಕ ತೇಜೋವಂತರಾಗಿ ರೆಪ್ಪೆ ಹೊಡೆಯುವಷ್ಟು ತೆರಪಿಲ್ಲದೇ ಎರಡು ಸಾಗರೋಪಮ ಕಾಲದಿಂದ ಮೂವತ್ಮೂರು ಸಾಗರೋಪಮ ಕಾಲದವರೆಗೆ ದಿವ್ಯಭೋಗಗಳನ್ನು ಅನುಭವಿಸುತ್ತಾರೆ. ಆಟ–ಪಾಠ ವಿನೋದಂಗಳಿಂದ ದೇವಿಯರು ಅಪ್ಸರೆಯರೊಂದಿಗೆ ಪಲಕಾಲವು ದಿವ್ಯಸುಖವನ್ನು ಅನುಭವಿಸಿ

"ಆಯುಷ್ಯಾಂತದೊಳ್" ತಿರುಗಿ ಬರುತ್ತಾರೆ. ಈ ರೀತಿಯಾಗಿ ಜೀವಿಯು ಶತೃತ್ವ ಅಥವಾ ಮಿತ್ರತ್ವಗಳಿಂದ ಪಾಪ-ಪುಣ್ಯಗಳನ್ನು ಗಳಿಸಿ ಅದಕ್ಕನುಗುಣವಾಗಿ ಭವದಲ್ಲಿ ತಿರುಗುತ್ತಿರುತ್ತದೆ. ಹೀಗೆ ಜೀವಿಯು ಭವದಲ್ಲಿ ತಿರುಗುವದಕ್ಕೆ ಭವಾವಳಿಯೆಂದು ಕರೆಯುತ್ತಾರೆ. ಜನಪದರು ಸಹ ದೇವಲೋಕದಲ್ಲಿ ಎಲ್ಲ ಸುಖಭೋಗಗಳನ್ನು ಅನುಭವಿಸಬಹುದೆಂದು ನಂಬಿರುತ್ತಾರೆ. ಆದರೆ ಜೀವಿಯು ದೇವಲೋಕದಲ್ಲಿ ಯಾವುದೋ ಅಹಿತ ಘಟನೆಯನ್ನು ಮಾಡಿದರೆ ಅದು ಶಾಪಗ್ರಸ್ತವಾಗಿ, ಭೂಲೋಕಕ್ಕೆ ಬಂದು ಇಲ್ಲಿ ಬದುಕುತ್ತದೆ ಮತ್ತೆ ಶಾಪವಿಮೋಚನೆ ಮಾಡಿಕೊಂಡು ಪುನಃ ದೇವಲೋಕವನ್ನು ಸೇರುತ್ತದೆಂದು ನಂಬಿರುತ್ತಾರೆ.

**೪೦೩. ದೇವತೆಗಳು**

ಗ್ರಾಮದೇವತೆಗಳ ಆರಾಧನೆಯ ಕ್ರಮವು ಹೆಚ್ಚು ಉಗ್ರವಾದ ನೆಲೆಯಲ್ಲಿರುವಂತೆ ಕನ್ನಡ ಕಾವ್ಯಗಳಲ್ಲಿ ಚಿತ್ರಿತವಾಗಿದೆ. ಸಾಮಾನ್ಯ ಜನರು ತಾವು ಸೇವಿಸುತ್ತಿದ್ದ ಕಳ್ಳು, ಮಾಂಸ ಇತ್ಯಾದಿಗಳನ್ನೇ ಈ ದೇವತೆಗಳಿಗೆ ಅರ್ಪಿಸುತ್ತಿದ್ದರೆನ್ನುವುದಕ್ಕೆ ಕನ್ನಡ ಕಾವ್ಯಗಳಲ್ಲಿ ಹೇರಳವಾದ ಆಧಾರಗಳು ದೊರೆಯುತ್ತವೆ. ಸಾಮಾಜಿಕ ರೋಗ ರುಜಿನಗಳಿಗಾಗಿ ಮಾತ್ರವೇ ಈ ರೀತಿಯ ದೇವತೆಗಳ ಆರಾಧನೆಯು ನಡೆಯುತ್ತಿದ್ದು, ಈ ಆರಾಧನೆಯ ಹಿನ್ನೆಲೆಯಲ್ಲಿ ಸಮಷ್ಟಿಯ ಪ್ರಜ್ಞೆಯು ಕೆಲಸ ಮಾಡಿರುವುದನ್ನು ಗಮನಿಸಬಹುದು. ಕೆಲವೊಮ್ಮೆ ಇದೇ ತಾಂತ್ರಿಕ ಪಂಥದ ರೂಪವನ್ನು ತಾಳಿರುವುದಕ್ಕೂ ನಿದರ್ಶನಗಳು ದೊರೆಯುತ್ತವೆ. ಇಂತಹ ದೇವತೆಗಳ ಆರಾಧನೆಗಳು ಅನೇಕ ಬಾರಿ ಜಾತ್ರೆಗಳ ಸ್ವರೂಪದಲ್ಲಿಯೂ ಇದ್ದುದನ್ನು ಕೆಲವು ಕನ್ನಡ ಕಾವ್ಯಗಳು ತಿಳಿಸುತ್ತವೆ.

ಕಾಯಿಲೆಗಳ ನಿವಾರಣೆ, ಗ್ರಾಮ ಸಂರಕ್ಷಣೆ, ಲೈಂಗಿಕ ಮುಕ್ತತೆಗಳಂತಹ ಆಶಯಗಳು ಇಂತಹ ಜನಪದ ಸ್ತ್ರೀ ದೇವತೆಗಳ ಆರಾಧನೆಯಲ್ಲಿ ಮುಖ್ಯವಾಗಿ ಇರುವುದನ್ನು ಗಮನಿಸಬಹುದು. ಜೈನ ಧರ್ಮದ ದೇವತೆಗಳು ಈ ರೀತಿಯಿವೆ.

ದೇವತೆಗಳಲ್ಲಿ ಮುಖ್ಯವಾಗಿ ಭವನವಾಸಿ, ವ್ಯಂತರವಾಸಿ, ಜ್ಯೋತಿಷ್ಕ, ವೈಮಾನಿಕ ಎಂದು ನಾಲ್ಕು ವರ್ಗಗಳು. ಮೊದಲಿನ ಮೂರು ವರ್ಗಗಳ ದೇವರು ಕೃಷ್ಣ, ನೀಲ, ಕಾಪೋತ, ಪೀತ, ಲೇಶ್ಯಗಳುಳ್ಳವರು. ಹದಿನಾರನೆಯ ಸ್ವರ್ಗದವರೆಗೆ ಈ ನಾಲ್ಕು ತೆರದ ದೇವತೆಗಳಲ್ಲಿ ಕ್ರಮದಿಂದ ೧೦, ೮, ೫, ೧೨ ಭೇದಗಳುಂಟು. ಎಂದರೆ ಭವನ ವಾಸಿಗಳಲ್ಲಿ ೧೦, ವ್ಯಂತರರಲ್ಲಿ ೮, ಜ್ಯೋತಿಷ್ಕರಲ್ಲಿ ೫. ಕಲ್ಪವಾಸಿ ವೈಮಾನಿಕರಲ್ಲಿ ೧೨ ಭೇದಗಳು. ಈ ನಾಲ್ಕೂ ಪ್ರಕಾರದ ದೇವತೆಗಳಲ್ಲಿ ಇಂದ್ರ, ಸಾಮಾನಿಕ, ತ್ರಾಯಸ್ತ್ರಿಂಶ, ಪಾರಿಷದ, ಆತ್ಮರಕ್ಷ, ಲೋಕಪಾಲ, ಅನೀಕ, ಪ್ರಕೀರ್ಣಕ, ಆಭಿಯೋಗ್ಯ, ಕಿಲೀಷಿಕ ಎಂದು ಹತ್ತು ಭೇದಗಳಿವೆ. ದೇವತೆಗಳ ಪರಮಾಯುಷ್ಯವು ೧ ಸಾಗರದಿಂದ ೩೩ ಸಾಗರದವರೆಗಿರುವುದು. ದೇವ, ನಾರಕ, ಮನುಷ್ಯ ಇವರ ಹೊರತು ಉಳಿದ ಜೀವಗಳು ತಿರ್ಯಂಚಗಳು. ಈ ನಾಲ್ಕು ಜನ್ಮಗಳಿಗೆ ಚತುರ್ಗತಿಗಳೆಂಬ ಹೆಸರು. ಸೂಕ್ಷ್ಮವಾದ

ಏಕೇಂದ್ರಿಯ ಜೀವಗಳು ಸಂಪೂರ್ಣ ಲೋಕವನ್ನೆಲ್ಲ ತುಂಬಿರುವುವು. ಲೋಕದ ಯಾವ ಭಾಗವೂ ಈ ಸೂಕ್ಷ್ಮ ಜೀವಗಳಿಂದ ತುಂಬದೆ ಇಲ್ಲ.

ಉಷೋದೇವತೆಯ ಬಗ್ಗೆ ಋಗ್ವೇದದಲ್ಲಿ ಹೀಗೆ ಬರುತ್ತದೆ. ಊರ್ವಶಿಗೆ, ಅರುಣೋದಯದ ದೇವತೆಯಾದ ಉಷಸ್ ಮತ್ತು ಪ್ರಾಯಶಃ ೫: ೪೧.೧೯ರಲ್ಲಿ ಬರುವ ಬೃಹದ್ದಿವಾ ಜೊತೆಯಲ್ಲಿ ಸಂಬಂಧವಿತ್ತು. ಇದು ತೀರಾ ಮುಖ್ಯವಾದ ಅಂಶ. ಆದರೆ ಹೆಚ್ಚಿನ ಅನುವಾದಗಳಲ್ಲಿ ಇದು ಕಾಣೆಯಾಗಿದೆ. ೧೦:೯೫.೨ ರಲ್ಲಿ ತಾನು ಮೊದಲ ಮುಂಜಾನೆಯಂತೆ ಹಾದು ಹೋದೆ ಎಂದು ಊರ್ವಶಿಯು ಹೇಳುತ್ತಾಳೆ. ಇದು ಕೇವಲ ಒಂದು ಉಪಮೆಯಾಗಿ ಕಾಣುತ್ತದೆ. ಅದು ಕೇವಲ ಉಷಸ್ ಪಟ್ಟವಲ್ಲ ಒಬ್ಬ ಮಾತೃದೇವತೆಯ ಪಟ್ಟವೂ ಆಗಿತ್ತು ಎಂದು ಡಿ.ಡಿ.ಕೊಸಾಂಬಿ ವಿವರಿಸುತ್ತಾರೆ.

(ಬೃಹದ್ದೇವತಾ ಸೂರ್ಯ, ಸರಣ್ಯು ಮತ್ತು ವೃಷಪಾಯೀಯನ್ನು ಕೂಡಾ ಉಷಸ್ ಸ್ವರೂಪಗಳಾಗಿ ತೆಗೆದುಕೊಳ್ಳುತ್ತದೆ. ಮಾತಿನ ದೇವತೆ ವಾಕ್‌ಳನ್ನು ಅಲ್ಲಿ ದುರ್ಗಾ, ಸರಮಾ, ಊರ್ವಶಿ ಮತ್ತು ಯಮಿಯೊಂದಿಗೆ ಮಧ್ಯ ವಲಯದಲ್ಲಿ (೧೧–೭೭)ಮತ್ತು ಉಷಸ್‌ನೊಂದಿಗೆ ೧ ೭೯–೮೦ ರಲ್ಲಿ ಸಮೀಕರಿಸಲಾಗಿದೆ. 'ಊರ್ವಶೀ' ಎಂಬ ಪದದಿಂದ ವ್ಯುತ್ಪತ್ತಿಯಾಗಿದೆ(೧ ೫.೯). ಇಂತಹ ವೈದಿಕೋತ್ತರ ವ್ಯಾಖ್ಯೆಗಳಲ್ಲಿ ಕಾಣುವ ಸಮ್ಮಿಶ್ರಣಗೊಳಿಸುವ ಪ್ರವೃತ್ತಿಯನ್ನು ಸಾಧ್ಯವಾದ ಎಲ್ಲಾ ರೀತಿಯಲ್ಲೂ ಗಮನಕ್ಕೆ ತಗೊಂಡರೆ, ಈ ಹೆಣ್ಣು ದೇವತೆಗಳಲ್ಲಿ ಏನೋ ಸಾಮಾನ್ಯ ಅಂಶ ಇರುವುದು ಸ್ಪಷ್ಟವಾಗುತ್ತದೆ. ಇವರೆಲ್ಲಾ ಮಾತೃದೇವತೆಗಳಾಗಿರುವುದು ಮಾತ್ರವೇ ಆ ಸಮಾನ ಅಂಶವಾಗಿರಲು ಸಾಧ್ಯ. ಸರಮಾ ಮತ್ತು ಹೆಸರು 'ಮಾ' ದಿಂದ ಕೊನೆಗೊಳ್ಳುವ ಇತರ ಎಲ್ಲಾ ದೇವತೆಗಳಿಗೆ ನಮಗೆ ನಂತರದ್ದಾದರೂ ಸ್ಪಷ್ಟವಾದ ಪ್ರಮಾಣ ಅಮರಕೋಶ ೧.೧.೨೯ರಲ್ಲಿ ಕಾಣುತ್ತದೆ. ಇಂದಿರಾ ಲೋಕಮಾತಾ ಮಾ ಕ್ಷೀರೋದ – ತನಾಯಾ ರಮಾ. ಈ ಪದವಿಯನ್ನು ಪಡೆಯುವುದು ಅವಳ ವಿಧಿಯಾಗಿತ್ತು. ಅಂತೆಯೆ ಬಲಿಯಾಗುವುದು ಅವಳ ಪ್ರಿಯಕರನ ವಿಧಿಯೂ ಆಗಿತ್ತು. ಋಗ್ವೇದದಲ್ಲಿ (೧೦:೯೫. ೮.೯) ಅಪ್ಸರೆ ಹಾಗೂ ಅವಳ ಸಂಗಾತಿಯರು ತಮ್ಮ ಬಟ್ಟೆಗಳನ್ನು ಕಳಚುವುದನ್ನು ಗಮನಿಸಿದ್ದೇವೆ. ಋಷಿಗಳನ್ನು ಆಕರ್ಷಿಸಿ ತಪೋಭ್ರಷ್ಟರನ್ನಾಗಿ ಮಾಡಲು ಮೇನಕೆ ಮತ್ತಿತರರು ಕೂಡ ಇದೇ ರೀತಿ ಮಾಡುತ್ತಿದ್ದರು. ತೀರಾ ಗಮನಾರ್ಹವಾದ ಅಂಶವೆಂದರೆ ಗಂಡಸರ ಮುಂದೆ ಹೀಗೆ ಹೆಚ್ಚಾಗಿ ಬೆತ್ತಲಾಗುತ್ತಿದ್ದವಳು ಉಷಸ್ ದೇವತೆ. ೧.೧೨೩.೧೧ರಲ್ಲಿ ಅವಳು ತಾಯಿಯಿಂದ ಅಲಂಕೃತಗೊಂಡ ಯುವತಿಯಂತೆ ತನ್ನ ದೇಹವನ್ನು ಪ್ರದರ್ಶಿಸುತ್ತಾಳೆ. ೧.೧೨೪.೭ರಲ್ಲಿ "ಉಷಾ ಹಸ್ರೇಮ ನಿ ರಿಣೀತೇ ಅಪ್ಸಾಃ" ಎಂದು ಬರುತ್ತದೆ. ಅವಳು ತನ್ನ ಗುಪ್ತ ಸೌಂದರ್ಯವನ್ನು ಉನ್ಮತ್ತ ತರುಣಿಯಂತೆ ಅಥವಾ 'ಹಸ್ರ' ಎಂಬುದನ್ನು ಪರಿಗಣಿಸಿದಲ್ಲಿ ನಸುನಗುವ ಯುವತಿಯಂತೆ ಪ್ರದರ್ಶಿಸುತ್ತಾಳೆ. ಹೀಗಾಗಿ ಉಷಸ್ ಒಬ್ಬ ತೀರಾ ಪ್ರಮುಖ ಮಾತೃದೇವತೆ ಎಂಬುದು ಸ್ಪಷ್ಟ. ಅಕ್ಷರಶಃ ಪ್ರಾತಃ ಕಾಲದ ಮಾತೆ. ಈ ಸ್ಥಾನ ಅವಳ ಕೈತಪ್ಪಿ ಹೋಗಿದ್ದು ಹೇಗೆ?

ವಸಿಷ್ಠ ಅಭೂತ್ ಉಷಾ ಇಂದ್ರತಮಾ ಮೇಘೋನೀ (೭:೭೯.೩) ಎನ್ನುತ್ತಾನೆ. ಅವನು ಬಳಸಿರುವ ಅನಿಶ್ಚಿತ ಭೂತಕಾಲದ ಪ್ರಯೋಗದಿಂದ ಹಿಂದೊಮ್ಮೆ ಉಷಸ್ ಇಂದ್ರನಿಗೆ ಸರಿಸಮನಾದ ದೇವತೆಯಾಗಿದ್ದಳು, ಆದರೆ ಈಗ ಅವಳಿಗೆ ಆ ಸ್ಥಾನವಿಲ್ಲ ಎಂದು ಭಾಸವಾಗುತ್ತದೆ. ಈ ಎರಡೂ ದೇವತೆಗಳ ನಡುವಿನ ಸಂಘರ್ಷದ ಕಥೆ ಇದನ್ನು ಸಮರ್ಥಿಸುತ್ತದೆ.

*ವಿವರಗಳಿಗೆ ನೋಡಿ: Mishra. O.P. 1985 Mother Goddess in India.*

*Drimaton; James . J. 1980 Cult of Goddess*

*ಮಹದೇವ ಪ್ರಭಾಕರ ಪೂಜಾರ ೧೯೭೬ ಜೈನಧರ್ಮ ಪರಿಭಾಷೆ ಪುಟ. ೫೭–೫೮, ೬೦*

*ಡಿ.ಡಿ. ಕೊಸಾಂಬಿ ೨೦೦೩ ಪುರಾಣ ಮತ್ತು ವಾಸ್ತವ ಪುಟ. ೮೭, ೮೯.*

## ೪೦೪. ದೇವದಾಸಿಯರು

ಕರ್ನಾಟಕದ ಸಂದರ್ಭದಲ್ಲಿ ವಿರೂಪಾಕ್ಷ ದೇವಳ (ಪಟ್ಟದ ಕಲ್ಲು) ಶಾಸನದಲ್ಲಿ 'ದೇಗುಲದ ಸೂಳೆ'ಯ ಕುರಿತು ಬರುವ ಉಲ್ಲೇಖವೇ 'ದೇವದಾಸಿ' ಪದ್ಧತಿಯ ಪ್ರಥಮ ಉಲ್ಲೇಖವಾಗಿದೆ. ಈ ಶಾಸನದ ಕಾಲ ಕ್ರಿ.ಶ. ೭೭೮–೭೩ ಕರ್ನಾಟಕದಲ್ಲಿ ಕ್ರಿ.ಶ. ೮೦೨ರ ತಾಮ್ರಪಟದ ಶಾಸನ, ಕ್ರಿ.ಶ. ೮೫೦ರ ಶಾಸನ, ಕ್ರಿ.ಶ. ಸು. ೮೦೦ರ ವಿಜಯೇಶ್ವರ ದೇವಸ್ಥಾನದ ಶಾಸನ, ಕ್ರಿ.ಶ. ೯೪೭ರ ಶಾಸನಗಳು ದೇವಸ್ಥಾನದ ಸೂಳೆಯರ ಕುರಿತಂತೆ ಹೇಳುತ್ತವೆ (ಚಿದಾನಂದಮೂರ್ತಿ ಎಂ. ೧೯೭೯. ಪು. ೧೮೪). ಹತ್ತನೆಯ ಶತಮಾನದ ತರುವಾಯ 'ಸೂಳೆ' ಮತ್ತು 'ಪಾತ್ರ'ವೆಂಬ ವ್ಯತ್ಯಾಸವು ಕಂಡು ಬರುತ್ತದೆಯೆಂದೂ, 'ಪಾತ್ರ' ಎಂದರೆ ಶಬ್ದ, ನೃತ್ಯ, ಗೀತಾದಿಗಳಲ್ಲಿ ಪರಿಣತ ಳಾದವಳೆಂದೂ, 'ಸೂಳೆ'ಯು ಸೇವಾಕಾರ್ಯ ಮಾಡುವವಳನ್ನು ಸೂಚಿಸುತ್ತದೆಯೆಂದೂ ಡಾ. ಚಿದಾನಂದ ಮೂರ್ತಿಯವರು ಅಭಿಪ್ರಾಯ ಪಡುತ್ತಾರೆ (ಅದೇ. ಪುಟ. ೧೮೪–೧೮೫).

ಕ್ರಿ.ಶ. ೧೦೫೪ರ ಅಕ್ಕೇಶ್ವರ ದೇವಸ್ಥಾನದ ಶಾಸನ: ಕ್ರಿ.ಶ. ೧೦೫೮ರ ನಾಗೇಶ್ವರದ ಶಾಸನ: ಕ್ರಿ.ಶ. ೧೧೧೨ರ ಶಾಸನಗಳು ದೇವದಾಸಿಯರ ಕುರಿತಂತೆ ಹೇಳುತ್ತವೆ. (ಅದೇ ಪುಟ. ೧೮೫–೧೮೭).

'ದೇವದಾಸಿ' ಪದವು ಅದಕ್ಕೂ, ಆಚರಣೆಗೂ ಸಂಬಂಧವಿರುವುದನ್ನು ಸೂಚಿಸುತ್ತದೆ. ದೇವದಾಸಿ ಪದ್ಧತಿಯು ಭಾರತದಲ್ಲಿ ಮಾತ್ರವಲ್ಲದೆ, ಇತರ ದೇಶಗಳಲ್ಲಿಯೂ ಅಸ್ತಿತ್ವದಲ್ಲಿದೆ ಎಂದು ಕ್ರೂಕೆಯವರು ಅಭಿಪ್ರಾಯ ಪಡುತ್ತಾರೆ ಚರಿತ್ರೆಕಾರರ ಪಿತಾಮಹನಾದ ಹಿರೋಡೋಟಸ್ ತನ್ನ ಗ್ರಂಥದಲ್ಲಿ 'ವಿವಾಹಕ್ಕೆ ಮೊದಲು ಎಲ್ಲಾ ಸ್ತ್ರೀಯರು ಆಚಾರ ಪ್ರಕಾರವಾಗಿ ದೇವತೆಯ ಸಮಕ್ಷಮದಲ್ಲಿ ಇತರರೊಡನೆ ಸಂಭೋಗ ಮಾಡಬೇಕು' ಎಂದು ಬರೆದಿರುತ್ತಾನೆ (ಧರ್ಮರಾವ. ತಾಪಿ. (ಮೂ.) ೧೯೮೩. ಪು. ೩೪). 'ಮದುವೆ ಮಾಡಿಕೊಳ್ಳದೆ ಜೀವಿತ ಕಾಲವನ್ನು ದೇವಾಲಯದಲ್ಲಿಯೇ ಈ ಲೈಂಗಿಕ

ಕೆಲಸಗಳಿಂದ ದೇವತಾರಾಧನೆಯನ್ನು ಮಾಡಬೇಕೆಂದು ನಿಶ್ಚಯಿಸಿದ ಸ್ತ್ರೀಯರೂ ಇದ್ದರು. ತಮ್ಮ ಜೀವಿತವನ್ನೆಲ್ಲಾ ಭಗವತ್ಸೇವೆಗೆ ಸಮರ್ಪಿಸಿದ ಈ ಹೆಂಗಸರು ಆ ದಿನಗಳಲ್ಲಿ ಗೌರವಾರ್ಹರಾಗಿದ್ದರು. ಈ ವೃತ್ತಿಯಲ್ಲಿ ಸಂಪಾದಿಸಿದ ಅಲ್ಪ-ಸ್ವಲ್ಪ ಹಣವನ್ನು ಇವರು ದೇವಾಲಯಕ್ಕೆ ದಾನ ಮಾಡುವರು. ಹೀಗೆ ದೇವಾಲಯಗಳಿಗೆ ತಮ್ಮ ಸರ್ವಸ್ವವನ್ನೂ ಧಾರೆಯೆರೆದಿರುವವರು ದೇವದಾಸಿಗಳಾದರು'

(ಅದೇ. ಪುಟ. ೩೫).

ಭಾರತದ ದೇವಸ್ಥಾನಗಳಲ್ಲಿ ಭಗವಂತನನ್ನು ಜೀವಂತ ವ್ಯಕ್ತಿಯೆಂಬಂತೆ ಭಾವಿಸಿ, ವೈಭವದಲ್ಲಿ ಬಾಳುವ ಒಬ್ಬ ವ್ಯಕ್ತಿಯ ಎಲ್ಲ ಭೋಗಗಳನ್ನು ಭಗವಂತನಿಗೆ ಅರ್ಪಿಸುವುದು ರೂಢಿಯಲ್ಲಿದೆ. ದೇವದಾಸಿ ಸಂಪ್ರದಾಯದ ಮೂಲ ಇಲ್ಲಿರಬಹುದು. ಕರ್ನಾಟಕದ ಶಾಸನಗಳಲ್ಲಿ 'ಅಂಗಭೋಗ' ಮತ್ತು 'ರಂಗಭೋಗ' ಎಂಬ ಮಾತುಗಳು ಬರುತ್ತವೆ. ವಿಗ್ರಹದ ದೇಹಕ್ಕೆ ಸಲ್ಲುವ ಭೋಗ ಎಂದರೆ ಸ್ನಾನ, ಗಂಧಲೇಪನ, ಧೂಪ, ದೀಪ, ಪುಷ್ಪ ಇತ್ಯಾದಿ ಅಂಗ ಭೋಗಗಳು. ಗರ್ಭಗುಡಿಯ ಮುಂದಿನ ರಂಗದ ಮೇಲೆ ಎಂದರೆ ದೇವತಾ ಮೂರ್ತಿಯ ಮುಂದೆ ಸುಂದರಿಯರಿಂದ ನಡೆಯುವ ಗೀತ, ನೃತ್ಯಗಳೇ ರಂಗ ಭೋಗಗಳು. ದೇವದಾಸಿಯರು ರಂಗಭೋಗದ ಉಪಕರಣಗಳು. (ಚಿದಾನಂದ ಮೂರ್ತಿ ಎಂ. ೧೯೭೬. ಪುಟ. ೧೮೩).

ಈ ರೀತಿಯ ಪವಿತ್ರ ಸೂಳೆಗಾರಿಕೆಯ ಸಿಂಧೂಕೊಳ್ಳದ ನಾಗರಿಕತೆಯಲ್ಲಿ ಪ್ರಾರಂಭವಾಗಿರಬಹುದೆಂಬ ಅಭಿಪ್ರಾಯವನ್ನು ವಿದ್ವಾಂಸರು ಹೊಂದಿದ್ದಾರೆ. ಋಗ್ವೇದದ ಕಾಲಕ್ಕೆ ಇದು ಸಾಕಷ್ಟು ಪ್ರಚಲಿತವಾಗಿತ್ತೆಂದೂ ತಿಳಿದು ಬರುತ್ತದೆ. ವೇದಗಳಲ್ಲಿ ಬರುವ ಪುಂಶ್ಚಲಿ (ಋಗ್ವೇದ I 124. 7IV 5.5 ಅಥರ್ವವೇದ I 17.1) ಮತ್ತು ಮಹಾನಗ್ನಿ (ಅಥರ್ವವೇದ XV 2.) ಮುಂತಾದವುಗಳು ದೇವದಾಸಿ ಪದ್ಧತಿಯ ಸೂಚಕಗಳಾಗಿವೆ (ಅದೇ. ಪುಟ. ೧).

'ಮಹಾನಿರ್ವಾಣ ತಂತ್ರ'ದಲ್ಲಿ ದೇವದಾಸಿಯ ಉಲ್ಲೇಖವಿದೆ (ಅದೇ.). 'ಗೌತಮಧರ್ಮಸೂತ್ರ'ದಲ್ಲಿಯೂ ದೇವದಾಸಿ ಪದ್ಧತಿಯ ಬಗೆಗೆ ಸೂಚನೆಗಳಿವೆ

(ಗೌತಮಧರ್ಮ ಸೂತ್ರ. ೨-೧೩. ೧೬)

ಮೌರ್ಯರ ಕಾಲದ ಜೋಗಿ ಮಾರ ಗುಹೆಯ ಶಾಸನವು ಸ್ಪಷ್ಟವಾಗಿ ದೇವದಾಸಿ ಪದ್ಧತಿಯನ್ನು ಶ್ರುತಪಡಿಸುತ್ತದೆ. ಇದರ ಕಾಲ ಕ್ರಿ.ಪೂ. ಮೂರನೇ ಶತಮಾನ ಗುಪ್ತ ಸಾಮ್ರಾಜ್ಯದಲ್ಲಿ ಇವು ಪ್ರಚಲಿತವಾಗ ತೊಡಗಿದವು ಎಂದು ತಿಳಿದು ಬರುತ್ತದೆ. ಬಾಣನ ಕಾದಂಬರಿಯಲ್ಲಿ ಕಾಮನ ದೇವಸ್ಥಾನದಲ್ಲಿ ನೃತ್ಯಗಾತಿಯರು ನೃತ್ಯ ಮಾಡಿದ ವಿವರವು ಬರುತ್ತದೆ (ಅದೇ. ಪುಟ. ೧೨೧). ಉಜ್ಜಯಿನಿಯ ಮಹಾಕಾಲ ದೇವಸ್ಥಾನದಲ್ಲಿ ನರ್ತಕಿಯರಿದ್ದ ವಿಷಯವನ್ನು ಕಾಳಿದಾಸನು ನಿರೂಪಿಸುತ್ತಾನೆ (ಮೇಘದೂತ; ೧.೩೫) (ಚಿದಾನಂದ ಮೂರ್ತಿ ಎಂ. ೧೯೭೩, ಪುಟ ೧೮೩). ಭವಿಷ್ಯ ಪುರಾಣವು ದೇವದಾಸಿಯರ ಕುರಿತು ಉಲ್ಲೇಖಮಾಡಿದೆ (ಅದೇ. ಪುಟ. ೧೮೩). ರಾಜತರಂಗಿಣಿ

ಯಲ್ಲಿಯೂ ದೇವದಾಸಿಯರ ವಿಚಾರವು ಬರುತ್ತದೆ ಅಶೋಕನ ಶಾಸನಗಳಲ್ಲಿ ದೇವದಾಸಿಯರ ಉಲ್ಲೇಖವಿದೆ. ರಾಜರಾಜ ಚೋಳನು (ಕಾಲ: ೯೮೫-೧೦೧೪) ನಾನೂರು ದೇವದಾಸಿಯರನ್ನು ತಂಜಾವೂರಿನ ದೇವಸ್ಥಾನಕ್ಕೆ ಒಪ್ಪಿಸಿದ ವಿವರವು ಸಿಗುತ್ತದೆ (ಅದೇ. ಪು. ೨೪೫). ಗುಜರಾತಿನ ಸೋಮನಾಥ ದೇವಸ್ಥಾನದಲ್ಲಿ ಐನೂರು ಜನ ದೇವದಾಸಿಯರಿದ್ದರೆಂದು ತಿಳಿಯುತ್ತದೆ (ಅದೇ. ಪು. ೨೪೫).

ಒಟ್ಟಾಗಿ ಹೇಳುವುದಾದರೆ, ಆರನೇ ಶತಮಾನದ ವೇಳೆಗೆ 'ದೇವದಾಸಿ ಪದ್ಧತಿ' ಪ್ರಚಲಿತವಾಯಿತು. ಅದಕ್ಕಿಂತ ಮೊದಲು, ದೇವದಾಸಿ ಪದ್ಧತಿಯು ಆ ಹೆಸರಿನಲ್ಲಿ ಪ್ರಚಲಿತವಿರಲಿಲ್ಲವೆಂದು ತೋರುತ್ತದೆ.

'ದೇವದಾಸಿ' ಪದವು ಅದಕ್ಕೂ ಆಚರಣೆಗೂ ಸಂಬಂಧವಿರುವುದನ್ನು ಸೂಚಿಸುತ್ತದೆ. ದೇವದಾಸಿ ಪದ್ಧತಿಯು ಭಾರತದಲ್ಲಿ ಮಾತ್ರವಲ್ಲದೆ ಇತರ ದೇಶಗಳಲ್ಲಿಯೂ ಅಸ್ತಿತ್ವದಲ್ಲಿದೆ ಎಂದು ಕ್ರೂಕೆಯವರು ಅಭಿಪ್ರಾಯ ಪಡುತ್ತಾರೆ. ಚರಿತ್ರೆಕಾರರ ಪ್ರಪಿತಾಮಹನಾದ ಹಿರೋಡೋಟಸ್ ತನ್ನ ಗ್ರಂಥದಲ್ಲಿ ವಿವಾಹಕ್ಕೆ ಮೊದಲು ಎಲ್ಲಾ ಸ್ತ್ರೀಯರು ಆಚಾರ ಪ್ರಕಾರವಾಗಿ ದೇವತೆಯ ಸಮಕ್ಷಮದಲ್ಲಿ ಇತರರೊಡನೆ ಸಂಭೋಗ ಮಾಡಬೇಕು ಎಂದು ಬರೆದಿರುತ್ತಾನೆ. (ಧರ್ಮರಾವ್ ತಾಪಿ ೯ಮೂಲ ೧೯೮೩ ಪುಟ.೩೪) ಮದುವೆ ಮಾಡಿಕೊಳ್ಳದೆ ಜೀವಿತ ಕಾಲವನ್ನು ದೇವಾಲಯದಲ್ಲಿಯೇ ಈ ಲೈಂಗಿಕ ಕೆಲಸಗಳಿಂದ ದೇವತಾರಾಧನೆಯನ್ನು ಮಾಡಬೇಕೆಂದು ನಿಶ್ಚಯಿಸಿದ ಸ್ತ್ರೀಯರೂ ಇದ್ದರು. ತಮ್ಮ ಜೀವಿತವನ್ನೆಲ್ಲಾ ಭಗವತ್ಸೇವೆಗೆ ಸಮರ್ಪಿಸಿದ ಈ ಹೆಂಗಸರು ಆ ದಿನಗಳಲ್ಲಿ ಗೌರವಾರ್ಹರಾಗಿದ್ದರು. ಈ ವೃತ್ತಿಯಲ್ಲಿ ಸಂಪಾದಿಸಿದ ಅಲ್ಪಸ್ವಲ್ಪ ಹಣವನ್ನು ಇವರು ದೇವಾಲಯಕ್ಕೆ ದಾನಮಾಡುವರು. ಹೀಗೆ ದೇವಾಲಯಗಳಿಗೆ ತಮ್ಮ ಸರ್ವಸ್ವವನ್ನೂ ಧಾರೆಯೆರೆದಿರುವವರು ದೇವದಾಸಿಗಳಾದರು. (ಅದೇ ಪುಟ. ೩೫)

ಕರ್ನಾಟಕದ ಸಂದರ್ಭದಲ್ಲಿ ವಿರೂಪಾಕ್ಷ ದೇವಳ(ಪಟ್ಟದ ಕಲ್ಲು) ಶಾಸನದಲ್ಲಿ 'ದೇಗುಲದ ಸೂಳೆ'ಯ ಕುರಿತು ಬರುವ ಉಲ್ಲೇಖವೇ ದೇವದಾಸಿ ಪದ್ಧತಿಯ ಪ್ರಥಮ ಉಲ್ಲೇಖವಾಗಿದೆ. ಈ ಶಾಸನದ ಕಾಲ ಕ್ರಿ.ಶ. ೭೭೮-೭೩.

ಕರ್ನಾಟಕದಲ್ಲಿ ಕ್ರಿ.ಶ. ೮೦೨ರ ತಾಮ್ರಪಟದ ಶಾಸನ, ಕ್ರಿ.ಶ. ೮೫೦ ರ ಶಾಸನ, ಕ್ರಿ.ಶ. ಸು. ೮೦೦ರ ವಿಜಯೇಶ್ವರ ದೇವಸ್ಥಾನದ ಶಾಸನ, ಕ್ರಿ.ಶ.೯೪೭ ರ ಶಾಸನಗಳು ದೇವಸ್ಥಾನದ ಸೂಳೆಯರ ಕುರಿತಂತೆ ಹೇಳುತ್ತವೆ. (ಚಿದಾನಂದ ಮೂರ್ತಿ.ಎಂ.೧೯೭೯ ಪುಟ.೧೮೪) ಹತ್ತನೆಯ ಶತಮಾನದ ತರುವಾಯ ಸೂಳೆ ಮತ್ತು ಪಾತ್ರವೆಂಬ ವ್ಯತ್ಯಾಸವು ಕಂಡುಬರುತ್ತದೆಯೆಂದೂ, 'ಪಾತ್ರ' ಎಂದರೆ ಶಬ್ದ, ನೃತ್ಯ, ಗೀತಾದಿಗಳಲ್ಲಿ ಪರಿಣತಳಾದವಳೆಂದೂ, ಸೂಳೆಯು ಸೇವಾಕಾರ್ಯ ಮಾಡುವವಳನ್ನು ಸೂಚಿಸುತ್ತದೆ ಯೆಂದೂ ಡಾ.ಚಿದಾನಂದ ಮೂರ್ತಿಯವರು ಅಭಿಪ್ರಾಯಪಡುತ್ತಾರೆ. (ಅದೇ ಪುಟ.೧೮೪-೧೮೫) ಕ್ರಿ.ಶ. ೧೦೫೪ರ ಅಕ್ಕೇಶ್ವರ ದೇವಸ್ಥಾನದ ಶಾಸನ: ಕ್ರಿ.ಶ.೧೦೫೮ ರ ನಾಗೇಶ್ವರದ ಶಾಸನ: ಕ್ರಿ.ಶ. ೧೧೧೨ರ ಶಾಸನಗಳು ದೇವದಾಸಿಯರ ಕುರಿತಂತೆ

ಹೇಳುತ್ತವೆ. (ಅದೇ ಪುಟ.೧೮೫, ಪುಟ.೧೮೭)

ದೇವಾಲಯದ ನೃತ್ಯ ಪದ್ಧತಿಯು ಆಚರಣೆ ಬದ್ಧ ಸ್ವರೂಪವನ್ನು ಇಟ್ಟುಕೊಂಡ ವೇಶ್ಯಾ ಪದ್ಧತಿಯಾಗಿದೆ. ದಾಸಿ ಪದವು ವರ್ಗೀಕೃತ ಸಮಾಜದ ಕೆಳಗಿನ ದರ್ಜೆಯ ಗುಲಾಮತನದ ಸೂಚಕ ಪದವಾಗಿದೆ. ದೇವರ ಗುಲಾಮ ಹೆಣ್ಣುಗಳ ಸಂಸ್ಕೃತಿಯನ್ನು ದೇವದಾಸಿ ಪದ್ಧತಿಯು ಸೂಚಿಸುವುದಾದರೂ, ಇದಕ್ಕೂ ರಾಜಕೀಯ ಸಂಸ್ಕೃತಿಗೂ ಸ್ಪಷ್ಟವಾದ ಸಂಬಂಧವಿರುವುದನ್ನು ಶಾಸನಗಳು ಪ್ರತಿಪಾದಿಸುತ್ತವೆ. ಆದುದರಿಂದ ರಾಜ್ಯಶಾಹಿ ವ್ಯಕ್ತಿತ್ವವು ಕೆಳವರ್ಗದ ಸ್ತ್ರೀಯರನ್ನು ದೇವದಾಸಿಯನ್ನಾಗಿ ಮಾಡಿರುವುದನ್ನು ಗಮನಿಸಬಹುದಾಗಿದೆ. ಈ ದೃಷ್ಟಿಯಿಂದ, ದೇವದಾಸಿ ಪದ್ಧತಿಯ ಮೇಲೆ ಇಬ್ಬಗೆಯ ಪ್ರಭಾವವು ಉಂಟಾಗಿರುವುದನ್ನು ಕಾಣಬಹುದು. ಅ) ರಾಜ್ಯಶಾಹಿ ಪದ್ಧತಿ ಆ) ಮತ್ತು ಧಾರ್ಮಿಕ ಗುಲಾಮಿತನ.

ದೇವದಾಸಿಯರಲ್ಲಿ ಏಳು ವಿಧವಿದೆ:

೧. ದತ್ತಾ –ತನ್ನನ್ನು ತಾನೇ ಯಾವುದಾದರೊಂದು ದೇವಾಲಯವೊಂದಕ್ಕೆ ಅರ್ಪಿಸಿಕೊಂಡವಳು.
೨. ವಿಕ್ರೀತಾ –ದೇವಾಲಯದ ಸೇವಾ ಕಾರ್ಯಗಳಿಗೆ ತನ್ನನ್ನೇ ಮಾರಿಕೊಂಡವಳು.
೩. ಭೃತ್ಯಾ– ತನ್ನ ಕುಟುಂಬದವರ ಪೋಷಣೆಗಾಗಿ ದೇವದಾಸಿಯಾದವಳು.
೪. ಭಕ್ತಾ – ಕೇವಲ ಭಕ್ತಿಭಾವದಿಂದ ಪ್ರೇರಿತಳಾದ ದೇವಾಲಯವನ್ನು ಪ್ರವೇಶಿಸಿದವಳು.
೫. ಹೃತಾ–ಅಪಹರಿಸಿಕೊಂಡು ತಂದ ಹೆಣ್ಣು. ದೇವಸ್ಥಾನಕ್ಕೆ ಉಡುಗೊರೆಯಾಗಿ ಬಂದವಳು.
೬. ಅಲಂಕಾರಾ – ರಾಜ ಅಥವಾ ಮಂತ್ರಿಯಾದ ಯುವತಿಯನ್ನು ಅಪೇಕ್ಷಿತ ಪರಂಪರೆಯಲ್ಲಿ ಸಂಪೂರ್ಣ ದೀಕ್ಷಿತೆಯೆಂದು ಭಾವಿಸುತ್ತಿದ್ದರೋ ಅಂತಹ ಯುವತಿಯನ್ನು ಅಲಂಕರಿಸಿ ದೇವಾಲಯಕ್ಕೆ ಒಪ್ಪಿಸುತ್ತಿದ್ದರು.
೭. ರುದ್ರಗಣಿಕಾ ಅಥವಾ ಗೋ ಪಿಕಾ–ನಿಯಮಿತ ವೃತ್ತಿ ಅಥವಾ ವೇತನ ಪಡೆದು ನಾಟ್ಯಗಾಯನ ಮೊದಲಾದ ಕೆಲಸ ನಿರ್ವಹಿಸುವವಳು. (ಕನ್ನಡ ವಿಶ್ವಕೋಶ (ಸಂ:೯) ೧೯೭೭ ಪುಟ.೭೧೮) ದೇವಾಲಯದಲ್ಲಿನ ನರ್ತನಸೇವೆಯು ಹೆಣ್ಣಿನ ಪಾತ್ರ ಇರುವುದು ಗಮನಾರ್ಹ.

ದೇವಾಲಯಗಳಿಗೆ ಹೆಣ್ಣನ್ನು ಬಿಡುವ ಸಂಪ್ರದಾಯ ಕರ್ನಾಟಕದಲ್ಲಿ ಯಾವಾಗ ಆರಂಭಗೊಂಡಿತು ಎನ್ನುವುದರ ಸ್ಪಷ್ಟ ಚಿತ್ರಣ ಸಿಗುವುದಿಲ್ಲ. ಶಾಸನಗಳೇ ಹೆಚ್ಚಿನ ಮಟ್ಟಿಗೆ ಈ ಸಂಪ್ರದಾಯದ ಕುರಿತು ಮಾಹಿತಿಯನ್ನು ನೀಡುವ ಆಕರಗಳು. ಕರ್ನಾಟಕದಲ್ಲಿ ದೇವಾಲಯದ ನೃತ್ಯಗಾರ್ತಿಯರ ಕುರಿತು ಶಾಸನಗಳಲ್ಲಿ ಪ್ರಾಚೀನವಾದದ್ದೆಂದರೆ ಕ್ರಿ.ಶ.೭೭೮–೭೭೯ರ ಪಟ್ಟದಕಲ್ಲು ಶಾಸನ. ಈ ಶಾಸನದಲ್ಲಿ ದೇಗುಲದ ಸೂಳೆ ಎನ್ನುವ ಉಲ್ಲೇಖವಿರುವುದು ಕಂಡುಬಂದಿದೆ. ಅದೇ ರಿತಿ ದೇವದಾಸಿ, ಸೂಳೆ ಪಾತರ ಮುಂತಾದ ಉಲ್ಲೇಖಗಳು ಆನೇಕ ಶಾಸನಗಳಲ್ಲಿ ಇವೆ. ದೇವಾಲಯಗಳಲ್ಲಿ ಸೇವೆ ಸಲ್ಲಿಸುತ್ತಿದ್ದ

ಇವರಲ್ಲಿ ಅನೇಕ ವಿಂಗಡನೆಗಳಿದ್ದವು. ಅವುಗಳೆಂದರೆ ಅಂಗಭೋಗ, ಕಂಬದ, ಮಾಡದ, ಚಾಮರದ, ಪಾತ್ರದ ಹಾಗೂ ಓಲಗದ ಸೂಳೆಯರು. ಅಂಗಭೋಗದವರು ದೇವರ ಅಂಗಕ್ಕೆ ಸಂಬಂಧಪಟ್ಟ ಸ್ನಾನ, ಪೂಜೆ, ನೈವೇದ್ಯ ಮುಂತಾದ ಕರ್ತವ್ಯಗಳನ್ನು ಮಾಡುತ್ತಿದ್ದರು. ರಂಗಭೋಗದವರು ದೇವಾಲಯದ ಗರ್ಭಗೃಹದ ಮುಂಭಾಗದ ನವರಂಗದಲ್ಲಿ ದೇವರ ಸೇವೆ ಮಾಡುತ್ತಿದ್ದರು. ಇವರಲ್ಲಿ ವಿವಿಧ ಬಗೆಗಳಲ್ಲಿ ಕಾರ್ಯನಿರ್ವಹಿಸುವವರಿದ್ದರು. ಅವರುಗಳೆಂದರೆ ಕಂಬದ, ಮಾಡದ, ಚಾಮರದ, ಪಾತ್ರದ ಹಾಗೂ ಓಲಗದವರು. ಕಂಬದವರು ದೇವಸ್ಥಾನದ ರಂಗಮಂಟಪದ ಅಲಂಕಾರಕ್ಕೋಸುಗ ಅಲ್ಲಿಯ ಕಂಬಗಳ ಹತ್ತಿರ ಪೂಜೆ ಮುಗಿಯುವವರೆಗೆ ಅಲಂಕಾರ ಮಾಡಿಕೊಂದು ನಿಲ್ಲುವವರು. ದೇವಸ್ಥಾನದ ಗರ್ಭಗೃಹದ ಎಡಬಲ ಪಕ್ಕದಲ್ಲಿರುವ ಮಾಡಗಳ ಹತ್ತಿರ ಅಲಂಕಾರಕ್ಕಾಗಿ ನಿಂತುಕೊಳ್ಳುವವರು ಪಾತರದವರು ದೇವರಿಗೆ ಚಾಮರದ ಸೇವೆ ಮಾಡುವವರು ಚಾಮರದವರು. ದೇವಾಲಯಗಳಲ್ಲಿ ನರ್ತನ ಮಾಡುವವರು ಪಾತರದವರು. ಅದೇ ರೀತಿ ದೇವಾಲಯಗಳಲ್ಲಿ ಸಂಗೀತ ಸೇವೆ ಸಲ್ಲಿಸುವವರು ಓಲಗದವರು. ಇಲ್ಲಿ ಬಳಸಲಾದ ಸೇವೆ, ಕರ್ತವ್ಯ ಮುಂತಾದ ಪದಗಳು ಪ್ರಭುತ್ವದ ಹಿನ್ನೆಲೆಯಿಂದ ಬಂದವು.

ದೇವಾಲಯಗಳಲ್ಲಿ ವಿವಿಧ ಸೇವೆಗಳಿಗೆ ನಿಯೋಜಿತರಾಗಿದ್ದ ಈ ಮಹಿಳೆಯರು ತಮ್ಮ ಸೇವೆಯನ್ನು ನೆರವೇರಿಸದಿದ್ದರೆ ಅವರ ಮೇಲೆ ಶುಲ್ಕ ವಿಧಿಸಲಾಗುತ್ತಿತ್ತು. ವೈದಿಕ ಮೂಲದ ಕೆಲವು ಪುರಾಣಗಳು ದೇವಾಲಯಗಳಲ್ಲಿ ಕೆಲಸ ಮಾಡುವ ಮಹಿಳೆಯರನ್ನು ವೇಶ್ಯೆಯರು ಎಂದು ಕರೆದುದು ಮಾತ್ರವಲ್ಲದೆ, ಅವರನ್ನು ದೇವಾಲಯಗಳು ಕೊಂಡುಕೊಳ್ಳಬೇಕು ಎಂಬುದಾಗಿಯೂ ಸೂಚಿಸುತ್ತವೆ. ಪುರಾಣಗಳ ಈ ಆಶಯಗಳು ಮಹಿಳೆಯರು ದೇವರ ಹೆಸರಿನಲ್ಲಿ ಶೋಷಣೆಗೊಳಗಾಗುತ್ತಿದ್ದುದನ್ನು ಹೇಳುತ್ತವೆ. ದೇವಾಲಯಗಳಲ್ಲಿ ನಡೆಯುತ್ತಿದ್ದ ಸಂಗೀತ, ನೃತ್ಯಗಳು ದೇವರನ್ನು ಓಲೈಸುವುದಕ್ಕಾಗಿ ಅಥವಾ ದೇವರ ಪ್ರೀತ್ಯರ್ಥವಾಗಿ ಎಂಬ ವಿವರಣೆಯನ್ನು ಪಡೆದುಕೊಂಡಿತ್ತು. ಆದರೆ ನಿಜಾರ್ಥದಲ್ಲಿ ಸಂಗೀತ ಮತ್ತು ನೃತ್ಯ ದೇವಾಲಯಗಳಲ್ಲಿ ಮಹಿಳೆಯರ ಶೋಷಣೆಗೆ ಸಾಧನಗಳಾಗಿದ್ದವು. ಈ ಕಾರಣಕ್ಕಾಗಿಯೇ ಸಂಗೀತ ಮತ್ತು ನೃತ್ಯ ಅಂದಿನ ಸಮಾಜದಲ್ಲಿ ಹೆಚ್ಚಿನ ಮಹತ್ವವನ್ನು ಪಡೆದುಕೊಂಡಿರಬೇಕು. ದೇವಾಲಯಗಳಲ್ಲಿ ಸಂಗೀತ ಮತ್ತು ನೃತ್ಯ ಸೇವೆ ಸಲ್ಲಿಸುತ್ತಿದ್ದವರಿಗೆ ದಾನದತ್ತಿಗಳನ್ನು ನೀಡಲಾಗುತ್ತಿತ್ತು. ಇದು ಈ ವ್ಯವಸ್ಥೆಯನ್ನು ಇನ್ನಷ್ಟು ಜನಪ್ರಿಯಗೊಳಿಸುವ ಹಾಗೂ ಮುಂದುವರಿಸಿಕೊಂಡು ಹೋಗುವ ಉದ್ದೇಶವನ್ನು ಹೊಂದಿತ್ತು. ಅದೇ ರೀತಿ ದೇವಾಲಯಗಳಲ್ಲಿ ಮಹಿಳೆಯರು ಸೇವೆ ಸಲ್ಲಿಸುವ ಪದ್ಧತಿಯನ್ನು ಶಾಶ್ವತವನ್ನಾಗಿಸುವ ಹಾಗೂ ಆ ಮೂಲಕ ಧರ್ಮ, ದೇವರುಗಳ ಹೆಸರಿನಲ್ಲಿ ಶೋಷಣೆ ನಡೆಸುವ ಉದ್ದೇಶಗಳು ದಾನ ನೀಡುವುದರಲ್ಲಿ ಅಡಕವಾಗಿರುತ್ತಿದ್ದವು.

*ವಿವರಗಳಿಗೆ ನೋಡಿ: Gururajachar S. 1974*

*Some aspect of economic & Social Life in Karnataka P. 245*

*James Hastings: (Ed): 1967 Encyclopedia Religion & Ethics P. 406*
*Candra Cakravati 1963 Sex Life in Ancient India Firms P. 101*
*Motichandra 1973 The world of Courtesans P.1, 45*
*Stein M.A. 1961 Kalhana's Rajatarangini A Chronicle of Kings of Koshmir Vol-II P. 17*
*Nilakanta Sastri (Ed) 1972 Foreign Notices of South-India P.171*
*Basham A.L. (Ed) 1975 A Cultural History of India P.58-59*
*Stein, Burton (Ed) 1976 Essays on South India P.48*
*ಶ್ರೀಕಂಠಶಾಸ್ತ್ರೀ ೨೦೦೬ ಭಾರತೀಯ ಸಂಸ್ಕೃತಿ ಪುಟ. ೨೦೫*
*ಡಾ. ಶಿವಾನಂದ ವಿರಕ್ತಮಠ ೧೯೭೮ ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ ಪುಟ. ೬೧*
*ಚಿದಾನಂದ ಮೂರ್ತಿ ಎಂ. ೧೯೭೯ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ*
*ಶ್ರೀ ಕಂಠಯ್ಯ .ಕೆ. ೧೯೮೫ ವಿಜಯನಗರ ಕಾಲದ ಅರಸೊತ್ತಿಗೆಯ ಜನಜೀವನ ಚಿತ್ರಣ ಪುಟ. ೨೬೧*
*ಮೋಹನಕೃಷ್ಣ ರೈ ೨೦೦೪ ಪ್ರಭುತ್ವ ಮತ್ತು ಜನತೆ ಪುಟ. ೧೩೬, ೧೩೭*

**೪೦೫. ದೇವಮಾತೃಕ**

*..........ಬಟಿಕಂ ದೇವಮಾತೃಕ ಸಾಧಾರಣಾನೂಪಜಾಂಗಳ ಭೇದಂಗಳಂ.............*
*(ಆದಿಪುರಾಣ ೮-೬೩ ವ)*

ಪಂಪನು ಮಳೆಯ ನೀರಿನಿಂದ ತರೀ ಫಸಲು ಬೆಳೆಯುವ ಪ್ರದೇಶವನ್ನು ದೇವಮಾತೃಕವೆಂದು ಕರೆದಿದ್ದಾನೆ. ಪ್ರಾಚೀನ ಕೃಷಿ ಪದ್ಧತಿಗಳಲ್ಲಿ ಇದೂ ಒಂದು.

ದೇವ: (ತ್ರಜನ್ಯ) ಮಾತಾ ಇವಯಸ್ಯ – ದೇವಮಾತೃಕ. ಋಗ್ವೇದದಲ್ಲಿ ನೀರಾವರಿ ವ್ಯವಸಾಯ ಸಹಜವಾದ ಕೃತಕ ಕಾಲುವೆಗಳ ಮೂಲಕ ಭೂಮಿಗೆ ನೀರುಣ್ಣಿಸುವ ವಿಧಾನದ ಉಲ್ಲೇಖಗಳು ಬರುತ್ತವೆ. 'ಕೃಷಿ ಎಂತಿ ಕೃಷತ್ವ' ಎಂಬ ವ್ಯಾಖ್ಯೆ ಋಗ್ವೇದದಲ್ಲಿ ದೊರೆಯುತ್ತದೆ (೧೦–೩೪) "ನೇಗಿಲುಗಳನ್ನು ಹೂಡಿರಿ ನೊಗಗಳನ್ನು ವಿಸ್ತಾರಗೊಳಿಸಿರಿ. ಹರಗಿದ ಮಡಿ ಸಾಲುಗಳಲ್ಲಿ ಕಾಳುಗಳನ್ನು ಬಿತ್ತನೆ ಮಾಡಿರಿ ನಾವು ಮಾಡಿದ ಸ್ತುತಿಗಳಿಂದ (ದೇವತೆಗಳಲ್ಲಿ) ಉತ್ತಮ ಬೆಳೆ ಬರುತ್ತದೆ. ಕೊಯ್ಲು ಮಾಡುವವರು ಕುಡುಗೋಲುಗಳನ್ನು ತೆಗೆದುಕೊಂಡು ಮಾಗಿದ ಪೈರಿನ ಕಡೆ ಬರುವಂತಾಗಲಿ" ಎಂದು ಋಗ್ವೇದದಲ್ಲಿ ಬರುತ್ತದೆ. (೧೦–೧೦೧–೩.)

**೪೦೬. ದೇವರು**

"ದೇವರು ಮತ್ತು ವಿಶ್ವ ಹಾಗೂ ಅವೆರಡರ ಪರಸ್ಪರ ಸಂಬಂಧ – ಇವುಗಳ ವಿಷಯವಾಗಿ ಮೇಲ್ಮಟ್ಟದ ಚಿಂತನೆಗೆ, ಹೆಚ್ಚು ಸ್ಪಷ್ಟವಾದ 'ದಿವ್ಯತೆ'ಯ ಆರಾಧನೆಯು ದಾರಿಯಾಗುವುದು. ಅಂತಹ ಆರಾಧನೆಯು ಕಣ್ಣಿಗೆ ಕಾಣಿಸುವ ದೇವತಾಚಿಹ್ನೆ ಅಥವಾ ನಿಜವಾದ ಪ್ರತಿಮೆಗಳು ಇರುವ ದೇವಾಲಯಗಳಲ್ಲಿ ನಡೆಯಬಹುದು. ಯಾಗವ್ಯವಸ್ಥೆಯು

ಸಾರ್ವಜನಿಕ ಸಂಸ್ಥೆಯಾಗಿ ಸದಾಕಾಲದಲ್ಲಿ ನಡೆಯುವುದಲ್ಲ: ಗೊತ್ತಾದ ತಿಂಗಳುಗಳಲ್ಲಿ ಮಾತ್ರ ನಡೆಸಲ್ಪಡುವುದು. ದೈನಂದಿನ ಯಜ್ಞವು ಮನೆಯಲ್ಲಿ ನಡೆಯುವುದು. ಆದರೆ ದೇವಾಲಯಗಳಲ್ಲಿನ ಭಗವದಾರಾಧನೆಯಾದರೋ ಸಾರ್ವಕಾಲಿಕ. ಇಂತಹ ದೇವಾಲಯಗಳಲ್ಲಿ ದಿವ್ಯತೆಯ ಸಂಪರ್ಕವನ್ನು ಪಡೆಯುವುದು. ಅನುಭಾವಿಕ ಧೀಶಕ್ತಿಯುಳ್ಳ ಕೆಲವೇ ಕವಿಗಳು ಮಾತ್ರವಲ್ಲ: ಇತರರೂ ಸಹ ಬೆಂಕಿಯೊಂದೇ ಕಾಣಿಸುವ ಮತ್ತು ತಾವು ಭಾಗವಹಿಸುವ ಸಂದರ್ಭಗಳಾವುವೂ ಇಲ್ಲದ ಯಾಗಗಳಲ್ಲಿ ಸಾಧ್ಯವಾಗ ಬಹುದಾದುದಕ್ಕಿಂತಲೂ ಮಿಗಿಲಾಗಿ ಭಗವಂತನ ವಾಸ್ತವ ದರ್ಶನವನ್ನು ಪಡೆಯುವರು. ದೇವಾಲಯ ಪೂಜೆಯೊಡನೆ ಸಂಗತವಾದ ದೇವತಾ ಸ್ಪಷ್ಟತೆ, ಸಮಾಜ ಮತ್ತು ಅವಿಚ್ಛಿನ್ನತೆ – ಇವುಗಳು ಆಲೋಚನಾ ಪದ್ಧತಿಯ ಬೆಳವಣಿಗೆಗೆ ಹೆಚ್ಚು ಯೋಗ್ಯವಾದ ಆವರಣವಾಗಿರುತ್ತವೆ." ದೇವರು ಎಂಬ ಪರಿಕಲ್ಪನೆಯು ವಿಶಿಷ್ಟವಾದುದು. ಭಾರತೀಯರಲ್ಲಿ ದೇವರ ಪರಿಕಲ್ಪನೆಯು ವಿಶಿಷ್ಟವಾಗಿದೆ. ಒಂದೊಂದು ಮತಗಳು ಅಥವಾ ಪಂಥಗಳು ತಮ್ಮ ತಮ್ಮ ದೇವರ ಕಲ್ಪನೆಯನ್ನು ವಿಶಿಷ್ಟವಾಗಿ ಮಂಡಿಸಿದ್ದನ್ನು ಕಾಣಬಹುದು. ದೇವರಿಗೆ ಆಕಾರವಿದೆಯೆಂಬಲ್ಲಿಂದ ಪ್ರಾರಂಭಿಸಿ ದೇವರಿಗೆ ಆಕಾರವಿಲ್ಲವೆಂದು ಚರ್ಚೆ ಗಳಾಗಿವೆ. ವೈಷ್ಣವ ಪಂಥದವರು ವಿಷ್ಣುವನ್ನು ಶ್ರೇಷ್ಠದೇವರು ಎಂದು ಕರೆಯುತ್ತಾರೆ. ಶೈವ ಪಂಥದ ಪ್ರಕಾರ ಶಿವನೇ ಶ್ರೇಷ್ಠ. ಎಲ್ಲಾ ಅಧಿಕಾರವುಳ್ಳವನು. ಆದರೆ, ಬ್ರಹ್ಮನಿಗೆ ಆರಾಧನೆಯಿಲ್ಲ.

ಭಾಗವತದ ಆಧ್ಯಾತ್ಮಿಕದೃಷ್ಟಿ ವಿಷ್ಣುಪುರಾಣದರಂತೆಯೇ ಇದೆ. "ಅದ್ವಯಜ್ಞಾನ ಯಾವುದೋ ಅದೇ ಶಾಶ್ವತ ಮೂಲತತ್ತ್ವ ಅದನ್ನೇ ತತ್ತ್ವವಿದರು ಬ್ರಹ್ಮ, ಪರಮಾತ್ಮ, ಮತ್ತು ಭಗವತ್ ಎಂದು ಕರೆಯುತ್ತಾರೆ ಎಂಬುದಾಗಿ ಭಾಗವತ ಸ್ಪಷ್ಟವಾಗಿ ನಿರೂಪಿಸುತ್ತದೆ. ವಿಷ್ಣುಪುರಾಣದ ಹಾಗೆ ಭಾಗವತವೂ ಪರಮಾತ್ಮನ ನಿರ್ಗುಣ ಮತ್ತು ಸಗುಣ ಸ್ವರೂಪಗಳನ್ನು ಸ್ವೀಕರಿಸುತ್ತದೆ. ಒಂದು ಪ್ರಸಿದ್ಧವಾದ ಶ್ಲೋಕದಲ್ಲಿ, ಭಗವಂತನು ಬ್ರಹ್ಮನಿಗೆ ತನ್ನ ನಿಜಸ್ವರೂಪವನ್ನು ಪ್ರಕಟಗೊಳಿಸುತ್ತಾನೆ: "ಆದಿಯಲ್ಲಿ(ಎಂದರೆ, ನಾನು ವಿಶ್ವವ್ಯವಸ್ಥೆಯಂತೆ ವ್ಯಕ್ತವಾಗುವ ಮುಂಚೆ, ನನಗೆ ನಾನೇ ಆಧಾರನಾಗಿ ನನ್ನೊಳಗೆ ನಾನೊಬ್ಬನೇ ಇದ್ದೆ: ನನಗಿಂತ ಹೊರತಾಗಿ ವ್ಯಕ್ತಾವ್ಯಕ್ತವಾವುದೂ ಇರಲಿಲ್ಲ. ಈ ವಿವಿಧ ಸೃಷ್ಟಿಯನ್ನು ನಿರ್ಮಿಸಿದ ಮೇಲೂ ಇರುವವನು ನಾನೊಬ್ಬನೇ (ಏಕೆಂದರೆ, ಇವೆಲ್ಲ ನನ್ನ ವ್ಯಕ್ತಸ್ವರೂಪಗಳು, ನನಗೆ ಹೊರತಾಗಿ ನನ್ನನ್ನು ಅವಲಂಬಿಸದೆ ಇರುವ ಯಾವುದೂ ಈ ಜಗತ್ತಿನಲ್ಲಿ ಇಲ್ಲವೇ ಇಲ್ಲ.) ಈ ವಿವಿಧ ಸೃಷ್ಟಿಗಳೆಲ್ಲವೂ ವಿಲಯಕ್ಕೆ ಸಂದ ಬಳಿಕವೂ ಉಳಿಯುವವನು ನಾನೊಬ್ಬನೇ(ಕಾಲಪ್ರವೃತ್ತವಾದ ನನ್ನ ಈ ಅಭಿವ್ಯಂಜನೆಗಳೆಲ್ಲವೂ ಕಾಲಕ್ರಮದಲ್ಲಿ ನನ್ನಲ್ಲಿಯೇ ಲಯಹೊಂದುತ್ತವೆ.)

ಆತ್ಮ ಮತ್ತು ಪರಮಾತ್ಮರ ನಡುವಣ ಸಂಬಂಧದ ಬಗ್ಗೆ ಭಾರತೀಯ ಮತ ಸಿದ್ಧಾಂತಗಳಲ್ಲಿ ಬೇರೆ ಬೇರೆ ಚರ್ಚೆಗಳಿವೆ. ಆತ್ಮ–ಪರಮಾತ್ಮ ಬೇರೆಯಲ್ಲ.(ಅದ್ವೈತ) ಆತ್ಮ ಪರಮಾತ್ಮದ ಒಂದು ಅಂಶ(ದ್ವೈತ) ತಪಸ್ಸಿನ ಆತ್ಮಾನುಭವ ಪಡೆದು ಮೋಕ್ಷ

ಹೊಂದುವರು (ಜೈನ) ಹೀಗೆ ಪರಮಾತ್ಮನನ್ನು ಬೇರೆ ಬೇರೆ ಅರ್ಥಗಳಲ್ಲಿ ಕಾಣಲಾಗಿದೆ.

*ವಿವರಗಳಿಗೆ ನೋಡಿ: ದೇವರು; ಏಕದೇವತೋಪಾಸನೆ*

*ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦ ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ ಪುಟ. ೩೧.*

**೪೦೭. ದೇಶಿ**

ದೇಶೀ (ವಸ್ತ್ರ) ಎಂದರೆ ಉರಟು, ಒರಟು ಎಂಬುದನ್ನು ಇಂದಿಗೂ ಕೋಶಗಳಿಂದ ತಿಳಿಯಬೇಕಾಗಿಲ್ಲ. ತಂದೆ ತಾಯಿಗಳನ್ನು ಕಳೆದುಕೊಂಡು ತಬ್ಬಲಿಯಾದ ಚಂದ್ರಹಾಸನನ್ನು, ಲಕ್ಷ್ಮೀಶ ಕವಿಯು ಜೈಮಿನಿಯಲ್ಲಿ, 'ದೇಶಿಕನು' ಎಂದು ನಿರ್ದೇಶಿಸಿದ್ದಾನೆ.

*ವಿವರಗಳಿಗೆ : ಶಂಬಾ ಜೋಶಿ ೧೯೯೯ ಹಾಲುಮತ ದರ್ಶನ ಸಂಪುಟ ೩ ಪುಟ. ೫೦*

*ರಾಜೇಂದ್ರ ಚೆನ್ನಿ ೧೯೯೯ ದೇಶೀವಾದ*

**೪೦೮. ದೇಸಿನೃತ್ಯ**

ಪಂಪನ 'ಆದಿಪುರಾಣ'ದಲ್ಲಿ ಬರುವ 'ಜತ್ತಲಟ್ಟದ ಮಣಿಯಂತದೇಂ ಪುದುಳಮಾದುದೊ' (೭-೧೨೬) ಮಾತು ದೇಸಿ ನೃತ್ಯದ ಸೂಚನೆಯನ್ನು ಕೊಡುತ್ತದೆ. ಇದಕ್ಕೆ ಟಿಪ್ಪಣಿಯನ್ನು ಮಂಡಿಸುತ್ತಾ ಇದು ನಟ್ಟಗಣೆಯ ಮೇಲೆ ತಿರುಗುವ ಒಂದು ನೃತ್ಯವೆಂದು ಹೇಳಲಾಗಿದೆ.

ಪಂಪ ಭಾರತದಲ್ಲಿ ದೇಸಿ ನೃತ್ಯದ ಉಲ್ಲೇಖವಿದೆ. (೭-೮೭) ದೇಹದಲ್ಲಿ ಪ್ರತಿಯೊಂದು ಅಂಗವನ್ನು ಚಲಿಸುವುದು ದೇಶಿ ನೃತ್ಯವೆಂದು ಪಂಪನು ವ್ಯಾಖ್ಯಾನಿಸುತ್ತಾನೆ. (೭-೯೧) ಈ ರೀತಿಯ ನೃತ್ಯಗಳಲ್ಲಿ ಕುಣಿಯುವವರ ಸ್ವಭಾವ ಮನೋರಂಜನೆಯೇ ಪ್ರಧಾನವಾಗಿರುತ್ತದೆ ಎನ್ನುವಂತೆ ಕೃತಿಕಾರರು ಚಿತ್ರಿಸಿದ್ದಾರೆ. ಬಹುತೇಕ ಸಂದರ್ಭಗಳಲ್ಲಿ ದೇಸಿ ನೃತ್ಯವು ಮಧುಪಾನದಿಂದ ಉಂಟಾಗುತ್ತದೆ ಎನ್ನುವ ವಿವರಗಳು ಕೃತಿಗಳಲ್ಲಿ ದೊರೆಯುತ್ತವೆ.

**೪೦೯. ದೇಸಿಯೊಳ್ ಪುಗುವುದು ಎಂದರೇನು?**

ಈ ಕುರಿತು ಮುಳಿಯ ತಿಮ್ಮಪ್ಪಯ್ಯ ಹೀಗೆ ಹೇಳುತ್ತಾರೆ:

ಪಂಪನ ಕಾವ್ಯಗಳೊಳಗೆ ಮಾತ್ರವಲ್ಲ: ಬೇರೆ ಕನ್ನಡ ಕಾವ್ಯಗಳಲ್ಲಿಯೂ 'ದೇಸಿ - ದೇಸೆ-ದೇಶಿ' ಎಂಬ ಪದಗಳು ಅಲ್ಲಲ್ಲಿ ತೋರುತ್ತಿವೆ. ಈ ಮೂರು ಪದಗಳೊಳಗೆ ಒಂದಿಷ್ಟು ರೂಪಾಂತರತೆ ಇದ್ದರೂ, ಎಲ್ಲವೂ ಒಂದೇ ಎಂಬಲ್ಲಿ ಸಂದೇಹವಿಲ್ಲ. 'ಸಮಸ್ತ ಭಾರತ'ದ ನಿಘಂಟುವಿನಲ್ಲಿ ಮಾತ್ರವಲ್ಲ. ಇತರ ನಿಘಂಟುಗಳಲ್ಲಿಯೂ 'ದೇಸಿ'ಗೆ 'ಸೊಬಗು' ಎಂಬ ಅರ್ಥವು ತೋರಬಹುದು. ಅದು ಲಾಕ್ಷಣಿಕಾರ್ಥವೇ ಆಗಿರಬೇಕೆಂಬುದನ್ನು ಆ ಪದದ ಹೆಸರಿನಿಂದಲೇ ನಿರ್ಧರಿಸಿಕೊಳ್ಳಲೂಬಹುದು. 'ದೇಸಿ', ಪದಕ್ಕೆ ಅದರ ಸ್ವರೂಪದಿಂದಲೇ ಸೂಚಿತವಾಗುವ 'ದೇಶಸಂಬದ್ಧವಾದುದು' ಎಂಬ

ವಾಚ್ಯಾರ್ಥವಿದ್ದಿರಬೇಕು. ಎಂಬುದು ಸಿದ್ಧವಾಗುತ್ತಿದೆ. ಈ 'ದೇಶಿ ದೇಶಿ' ಎಂಬ ಒಂದು ವಿಶಿಷ್ಟಧರ್ಮವು ಕಾವ್ಯಪ್ರಪಂಚದಲ್ಲಿ ಮಾತ್ರವೇ ಅಲ್ಲ. ಸಂಗೀತ, ವೈದ್ಯಶಾಸ್ತ್ರ ಮೊದಲಾದವುಗಳಲ್ಲಿಯೂ ಇರುವಂತೆ ತೋರುತ್ತಿದೆ. ಸಂಗೀತದೊಳಗೆ 'ತೋಡಿ', 'ದೇಶಿ ತೋಡಿ' ಎಂದು ಒಂದೇ ರಾಗದಲ್ಲಿ ಇಕ್ಕವಲನ್ನು ನೋಡಿರಿ. ಇದು ಒಂದೇ ರಾಗದೊಳಗೆ 'ದೇಸಿ' ಬೆರೆದು ಅದೊಂದು ವಿಶಿಷ್ಟರಾಗವೆನ್ನಿಸಿದುದಕ್ಕೆ ಆಧಾರವಾಯಿತು. ಇನ್ನು 'ಬಂಗಾಳ', 'ಕನ್ನಡ', 'ಮಾಳವ', 'ಗೌಳ' ಮೊದಲಾಗಿ ಆಯಾ ದೇಶನಾಮಗಳನ್ನೇ ಪಡೆದು ರೂಪುಪಡೆದ ರಾಗಗಳನ್ನೆಷ್ಟೋ ನೋಡಬಹುದು. ಈ ದೃಷ್ಟಾಂತಗಳಿಂದ ಆ 'ಬಂಗಾಳ', ಕನ್ನಡಿ'ದಿಗಳು ವಿಶಿಷ್ಟದೇಶಗಳಲ್ಲಿ ನೆಲೆಗೊಂಡ 'ದೇಶಿ'ರಾಗಗಳು ಎಂಬುದು ಸಿದ್ಧವಾಗುತ್ತಿದೆ. ಇಂಥ ದೇಶಿಗಳೊಳಗೆ ನಮ್ಮ 'ಯಕ್ಷಗಾನ', 'ತುಂಡುಪದ', 'ಜೋಗುಳ' ಮೊದಲಾದ ಹಾಡುಗಳೂ ಸೇರುತ್ತಿವೆ ಎನ್ನಬೇಕು. ಇವುಗಳು ಸಂಗೀತ ದೇಸಿಗಳಾದರೆ, ವೈದ್ಯದೊಳಗಿನ ದೇಸಿಗಳನ್ನೀಕ್ಷಿಸಿರಿ" ಎಂಥ ಪ್ರಸಿದ್ಧ ಪಾಶ್ಚಾತ್ಯ – ಪೌರ್ವಾತ್ಯ ವೈದ್ಯರ ಕೈಗೂ ನಿಲುಕದ ರೋಗಗಳಾದರೂ ಸರಿ: 'ಮೂಲಿಕೆ ಮದ್ದು' ಎನ್ನುವ 'ಕೊಡಸೊಪ್ಪ'ನ್ನು 'ತೋಡನೀರಿ'ನಲ್ಲರೆದು ಕುಡಿಸಿ ಗುಣಗೊಳಿಸುವ ಎಷ್ಟೋ ಮಂದಿ ಹಳ್ಳಿಗರೀಗಲೂ ಇದ್ದಾರೆ. 'ಯಾವ ಪುಸ್ತಕವಾದ ಈ ಮಸ್ತಕದಲ್ಲಿದೆ' ಎಂದು ಹೇಳಿದುದೂ ನಮ್ಮಲ್ಲಿ ಹಲವರಿಗೆ ಈಗಲೂ ಗೊತ್ತಿದೆ. ಅಂಥ ಮೂಲಿಕೆ ಮದ್ದುಗಳನ್ನೇ ವೈದ್ಯದೊಳಗಿನ 'ದೇಸಿ' ಎನ್ನಬೇಕು. ಇದನ್ನವಧರಿಸಿದರೆ, ವಿದ್ವಾಂಸರು ನಿರೂಪಿಸುವ ಲಕ್ಷಣಕ್ಕೊಳಗಾಗದಿರುವ, ಅದರಿಂದಲೇ ವರ್ಗೀಕರಣಕ್ಕೆ ಸಿಲುಕದೆ ಹೊರಗಾಗಿರುವ, ಸಂಗೀತ – ವೈದ್ಯಾದಿಗಳಲ್ಲಿ ವಿಶಿಷ್ಟ ಸೌಂದರ್ಯ ವಿಶಿಷ್ಟ ಫಲದಾಯಕವಾದ ದೇಶೀಯ ಪದ್ಧತಿಯನ್ನೇ 'ದೇಸಿ' ಎನ್ನುವುದು ಎಂಬುದು ಸಿದ್ಧವಾಗುತ್ತಿದೆ. 'ಸಮಸ್ತಭಾರತ'ದಿಂದಲೇ ಎತ್ತಿಕೊಂಡ ಮುಂದಿನ ಪದ್ಯದಲ್ಲಿ ಈ ಅಭಿಪ್ರಾಯವನ್ನು ಸಂಕಲನೆ ಮಾಡುವ.

ಆಡದ ಮೆಯ್ಗಳಿಲ್ಲ ನಿಡುಮೆಯ್ಗಳುಮಾಡಿದುವಂತೆ ಮೆಟ್ಟುವಳ್
ನೋಡಿದರೆಲ್ಲರಂ ಪಿಡಿದು ಮೆಟ್ಟಿದಳಿಟ್ಟಳಮಾಯ್ತು ದೇಸಿ ಕೆ
ಯ್ಯೂಡಿದುದಿಲ್ಲ ಮಾರ್ಗಮೆನೆ ವಿಸ್ಮಯಮಾಗಿರೆ ತನ್ನ ಮುಂದೆ ಬಂ
ದಾಡಿದಳಾ ತಿಲೋತ್ತಮೆಯನೊಲ್ದನುಮಿಲ್ಲ ನರೇಂದ್ರತಾಪಸಂ.

(ವಿಕ್ರಮಾರ್ಜುನವಿಜಯ. ೭–೯೧)

ಇಲ್ಲಿ ವಿಕ್ರಮಾರ್ಜುನನ ತಪಸ್ಸನ್ನು ಕೆಡಿಸಲಿಕ್ಕೆಂದು ಬಂದ ಅಪ್ಸರಃಸ್ತ್ರೀಯರೊಳಗಿನ ತಿಲೋತ್ತಮೆಯ 'ಇಟ್ಟಳ'ವಾದ 'ದೇಸಿ' ನರ್ತನವೂ, ಅದು ಗುರಿಮುಟ್ಟದೆ ನಿರರ್ಥಕವಾದ ವಿಷಯವೂ ಸಕಾರಣವಾಗಿ ಮನೋರಂಜಕವಾಗಿ ವರ್ಣಿತವಾಗಿದೆ. ಈ ಸಂದರ್ಭದಲ್ಲಿ, ಇದಕ್ಕಿಂತಲೇ ಹಿಂದಿನ 'ಉರ್ವಸಿ ದೇಸಿಗೆ ದೇಸೆಯಾಡಿದಳ್' (ಪು. ೮೭) ಎಂಬ, ದೇಸಿಗಳನ್ನು ಎಣಿಸಿಕೊಳ್ಳಬೇಕು. ಕವಿ ಈ ವರ್ಣನ ವ್ಯಾಜದಿಂದ ಕಲಾಸಮೂಹದೊಳಗಿನ 'ದೇಸಿಮಾರ್ಗ'ಗಳೆಂಬೆರಡು ಪ್ರಮುಖಾಂಗಗಳನ್ನೂ ವಿಂಗಡಿಸಿ ತೋರಿಸಿದ್ದಾನೆಂಬುದು ವ್ಯಕ್ತವಾಗುತ್ತಿದೆ. 'ದೇಶಿ' ಇಟ್ಟಳ (ಅತಿಮನೋಹರ)ವಾದರೂ 'ಮಾರ್ಗವು'

ಕೈಗೂಡದಿರುವುದಕ್ಕೆ ಕಾರಣವೇನು? ನಾಟ್ಯ, ಸಂಗೀತಗಳಲ್ಲಿ ಯಾವ ಯಾವ ಅಂಗಗಳು ಚಲಿಸತಕ್ಕುವು, ಯಾವುವು ಚಲಿಸತಕ್ಕುವಲ್ಲ ಎಂಬ ಮಾರ್ಗೀಯ (ಶಾಸ್ತ್ರೀಯ) ನಿಯಮವಿದೆ.

ಛಂದೋಗೀತಕಮಾಸದ್ಯ ತ್ವಂಗಾನಿ ಪರಿವರ್ತಯೇತ್
ಏಷ ಕಾರ್ಯೋ ವಿಧಿರ್ನಿತ್ಯಂ ನೃತ್ತಾಭಿನಯವಾದಿತೇ

'ಛಂದೋಬದ್ಧವಾದ ಸಂಗೀತಕ್ಕನುವಾಗಿಯೇ ಭಾವವ್ಯಂಜಕವಾಗಿ ಅಂಗಗಳನ್ನು ಅಲುಗಿಸಬೇಕೆಂಬುದು ನೃತ್ಯಾಭಿನಯದಲ್ಲಿ ನಿತ್ಯವಾದ ನಿಯಮ' – ಎಂಬುದಿದು ಭರತನ ನಾಟ್ಯಶಾಸ್ತ್ರ ವಚನ. ತಿಲೋತ್ತಮಾ ನರ್ತನದಲ್ಲಿ ಆ ಮಾರ್ಗವು ಅದೃಶ್ಯವಾದುದಷ್ಟೇ ಅಲ್ಲ, ಅದನ್ನು ಮಾಸಿಸುವ 'ದೇಸಿ'ಯ ನರ್ತನ ಮಾತ್ರವೇ ತೋರುತ್ತಿದೆ – ಎಂಬುದು 'ಆಡದ ಮೆಯ್ಗಳಿಲ್ಲ ನಿಡುಮೆಯ್ಗಳು ಮಾಡಿಡುವು' ಎಂಬುದರಿಂದ ವ್ಯಕ್ತವಾಗುತ್ತಿದೆ. ಅಷ್ಟೇ ಅಲ್ಲ, 'ನೋಡಿದರೆಲ್ಲರಂ ಪಿಡಿದು ಮೆಟ್ಟುವ'ಂತೆ ಅವಳ ಪಾದವು ವಿಲಕ್ಷಣವಾಗಿ ಚಲಿಸುತ್ತಿತ್ತು. ಅದರಿಂದ ದೇಸಿ 'ಇಟ್ಟಳ' ವಾದರೂ 'ಕೆಯ್ಗೂಡಿದುದಿಲ್ಲ ಮಾರ್ಗ' ಎನ್ನಬೇಕಾಯಿತು. ಗ್ರಮ್ಯಾವಸ್ಥೆಗೊಂಡ ಕುಣಿತದಲ್ಲಿ ಮಾರ್ಗವೆಲ್ಲಿಂದ? ಆಕೆಯ ಮಟ್ಟಿಗದು ಅಂದವಾಗಿದ್ದರೂ ಸುಸಂಸ್ಕೃತರಾದವರೊಲವು ಅದರತ್ತ ಬಾಗಲಾರದೆಂಬುದೇ ತಾತ್ಪರ್ಯ.

ಆ ವರ್ಗದತ್ತ ಸಹೃದಯರ ಮನಸ್ಸನ್ನು ಗುರಿಗೊಳಿಸಲು ಲಕ್ಷಣಶಾಸ್ತ್ರವನ್ನೇ 'ಮಾರ್ಗ'ವೆಂದು ಕರೆವುದು. ಆ ಲಕ್ಷಣದ ಸೂತ್ರಕ್ಕೊಳಗಾಗದೆ ಬೇರೆ ಬೇರೆಯಾಗಿ ಚದರಿದುದೇ ದೇಸಿ. ಆ ದೇಸಿಗಳೊಳಗೆ ಸಹೃದಯರೆದೆಗೊಪ್ಪದುದು 'ಗ್ರಾಮ್ಯ'ವೆಂದೂ ಒಪ್ಪುವುದು 'ಅಗ್ರಾಮ್ಯ'ವೆಂದೂ ಎರಡು ಭೇದವಿದೆ. ಈ ಭಾವನೆಯನ್ನೇ ವಾಮನಾಚಾರ್ಯನು ರೂಪಾಂತರವಾಗಿ ಬಣ್ಣಿಸುವುದನ್ನೀಕ್ಷಿಸಿರಿ. 'ಲೋಕಮಾತ್ರ ಪ್ರಯುಕ್ತಂ ಗ್ರಾಮ್ಯಂ (ನಾಡು ನುಡಿಯಲ್ಲಿ ಭಿನ್ನಭಿನ್ನವಾದ ದೇಸಿಗಳಲ್ಲಿ ಮಾತ್ರವೇ ಉಪಯುಕ್ತವಾದುದು ಗ್ರಾಮ್ಯ) ಎಂಬ ಸೂತ್ರದಿಂದ, ಆಡುವ ಮಾತನ್ನು ಅಥವಾ ದೇಶ್ಯವಾಗಿ ಮಾತ್ರವೇ ಉಪಯುಕ್ತವಾಗುವುದನ್ನು 'ಗ್ರಾಮ್ಯ'ವೆನ್ನುತ್ತಾನೆ. ಮುಂದೆ, 'ಅಗ್ರಾಮ್ಯತ್ವಮುದಾರತಾ' (ಗ್ರಾಮ್ಯತೆ ಎಂಬ ದೋಷದಿಂದ ರಹಿತವಾಗಿ ಮನೋಹರ ವಾದ ಗುಣಕ್ಕೆ ಉದಾರತೆ ಎಂಬ ಹೆಸರು) ಎಂದು ಉದಾರತಾರೂಪ ಗುಣವನ್ನು ಲಕ್ಷಿಸುತ್ತನೆ. ಇದರಿಂದ, 'ಉದಾರತೆ' ಎಂಬ ಗುಣವೂ ಅಂದವಾದ ದೇಸಿಯಿಂದಲೇ ಸಂಘಟಿತವಾಗಿದೆ ಎಂಬುದು ಸ್ಫುಟವಾಗುತ್ತಿದೆ. ಆದರೆ, ವಾಮನನು 'ದೇಶಿ'ಯನ್ನಿಲ್ಲಿ ಹೆಸರೆತ್ತಿ ಹೇಳದುದರಿಂದ 'ಉದಾರತೆ'ಯಲ್ಲಿ ಆ ದೇಶಿಯ ಸಂಬಂಧವಿದೆ ಎಂದು ಭಾವಿಸುವುದು ತಪ್ಪೆಂದು ಆಕ್ಷೇಪಿಸಬಾರದು. ದೊಷವಿರುದ್ಧವಾದುದೇ ಗುಣಸಾಮಾನ್ಯ ಲಕ್ಷಣವಷ್ಟೆ. 'ಲೋಕ ವಿರುದ್ಧ' ಮೊದಲಾದ ದೋಷವಿರುದ್ಧವಾದುದೇ ಗುಣಸಾಮಾನ್ಯ ಲಕ್ಷಣವಷ್ಟೆ. 'ಲೋಕ ವಿರುದ್ಧ' ಮೊದಲಾದ ದೋಷಭೇದಗಳನ್ನು ವಾಮನನೇ ಲಕ್ಷಿಸುವ ಸೂತ್ರಾರ್ಥವನ್ನವಗಾಹಿಸಿರಿ. 'ದೇಶ ಕಾಲ ಸ್ವಭಾವ ವಿರುದ್ಧಾರ್ಥಾನಿ ಲೋಕವಿರುದ್ಧಾನಿ (ದೇಶಕಾಲ ಸ್ವಭಾವಗಳಿಗೆ ವಿರೋಧವಾದ ಅರ್ಥಗಳೇ ಲೋಕವಿರುದ್ಧಗಳು) ಇದರಿಂದ

ಉತ್ತಮ ದೇಶಿಗಳು, ಗುಣಮಾರ್ಗ ಸಂಬದ್ಧಗಳೇ ಆಗುವುವೆಂಬುದು ವ್ಯಕ್ತವಾಗುತ್ತಿದೆ. ಹಿಂದೆ ಬಣ್ಣಿಸಿದ ತಿಲೋತ್ತಮೆಯ ನರ್ತನದ ದೇಸಿ 'ಇಟ್ಟಳ'ವಾಗಿದ್ದರೂ ಮಾರ್ಗದಲ್ಲಿ ಕೈಗೂಡಲಿಲ್ಲ. ಹಾಗೆ ಕೈಗೂಡದಿರಲಿಕ್ಕೆ, 'ಆಡದ ಮೆಯ್ಗಳಿಲ್ಲ ನಿಡುಮೆಯ್ಗಳುಮಾಡಿದವು' ಎಂಬಲ್ಲಿ ತೋರುವಂತೆ, ಲಕ್ಷಣರಹಿತವಾದ ಮೆಟ್ಟು (ಗತಿ)ಗಳು ರಸಿಕಾರಸಿಕ ಭೇದವಿಲ್ಲದೆ ನೋಡಿದವರೆಲ್ಲರ ಎದೆಯನ್ನೂ 'ಪಿಡಿದು ಮೆಟ್ಟು'ವಂತಿದ್ದ ನರ್ತನ ಗ್ರಾಮ್ಯತೆಯೇ ಕಾರಣ. ಮಾರ್ಗವಡೆಯದ ದೇಸಿಯಲ್ಲಿ ಮಾರ್ಗಾನುಯಾಯಿಯಾದ 'ನರೇಂದ್ರ ತಾಪಸ'ನ ಒಲವು ಹರಿವುದೆ? ಹರಿಯದು. ಹಿಂದಿನ ವರ್ಣನೆಯಲ್ಲಿ, ನೃತ್ಯ ದೊಳಗಿನ 'ದೇಸಿ', 'ಮಾರ್ಗ'ಗಳನ್ನು ಕವಿ ಪರಿಚ್ಛೇದಿಸಿ ನಿರೂಪಿಸಿದ್ದಾನೆ. ನಮಗಿಲ್ಲಿ ಬೇಕಾದುದು ವಾಙ್ಮಯದ ದೇಸಿಯಲ್ಲವೆ? ಎಂದು ಕೇಳಬಹುದು. ಹೌದು. ನಾವೂ ಆ ಗುರಿಯನ್ನೇ ಹಿಡಿದು ಹೊರಟವರು. ಪಂಪನೆದೆಯ ಹೆದ್ದಾರಿಯಲ್ಲಿ ಸುಳಿಯುತ್ತಾ ಬಂದರೆ, ಒಂದಿಷ್ಟು ತಡವಾಗುವುದೆಂಬುದು ಯಾರಿಗಾದರೂ ಕಟ್ಟಿಟ್ಟ ಗಂಟೇ ಸರಿ. ಮುಂದಿನ ಪದ್ಯವನ್ನು ನೋಡಿರಿ.

ಅಸಿಯಳವುಂಕಿ ಕೆಂದಳದೊಳೊತ್ತುವ ನೀರ್ ಮೊಗಮಂ ಪಳಂಚೆ ಬಂ
ಚಿಸಲಿನಿಸಾನುಮಂ ಮುಱುಗಿದಾಗಡೆ ಭೋಂಕನೆ ಬಂದು ಬಾಳೆಮೀನ್
ಮುಸುಱೆ ನಿರಂತರಂ ಕರ್ದುಕೆ ಸತ್ಕವಿಯೊಳ್ ಸಮನಾಗಿ ಮಾರ್ಗಮಂ
ಪೊಸಯಿಸಿ ದೇಸಿಯಂ ಪೊಸತು ಮಾಡಿದಳೊರ್ವಳಪೂರ್ವ ರೂಪದಿಂ

(ವಿಕ್ರಮಾರ್ಜುನ ವಿಜಯ.೫-೬೪)

## ೪೧೧. ದೇಸಿರಾಗ

ಅಗ್ಗಳನು 'ಚಂದ್ರಪ್ರಭ ಪುರಾಣ'ದಲ್ಲಿ ಹೀಗೆ ಹೇಳುತ್ತಾನೆ: ಷಡ್ಜ ಮಧ್ಯಮ ಗ್ರಾಮ ಸಂಬಂಧಗಳಾದ ಹದಿನೆಂಟು ಜಾತಿಗಳಲ್ಲಿ ಹುಟ್ಟಿದ ಗ್ರಾಮರಾಗ, ಅಲ್ಲಿ ಹುಟ್ಟಿದ ಭಾಷೆ, ಭಾಷೆಗಳಲ್ಲಿ ಹುಟ್ಟಿದ ವಿಭಾಷೆ, ವಿಭಾಷೆಗಳಲ್ಲಿ ಹುಟ್ಟಿದ ಅಂತರಭಾಷೆ, ಅವುಗಳ ಅಂಗಗಳಾದ ರಾಗಾಂಗ, ಭಾಷಾಂಗ, ಉಪಾಂಗ, ಕ್ರಿಯಾಂಗ ಎಂಬ ದೇಶೀರಾಗ ಗಳಲ್ಲಿಯೂ, ಮತ್ತು ಸ್ಥಾನತ್ರಯ ನಿಯತವೂ ಸ್ಥಾಯಿಯ ಮೊದಲಾದ ವರ್ಣಯುಕ್ತವೂ ಅಮುಕ್ತಸ್ಥಾನ ರಂಜನವೂ, ನಾನಾರಸಾಲಂಕಾರ ಸಹಿತವೂ ಅಂದವಾದ ಸಾದನ್ಯಸದಿಂದ ಇಂಪಾಗಿಯೂ, ತಂ. ಹ. ಯ. ಎ. ಎ. ಆ. ದ. ತಿನಂ ನಿತ ಎಂಬ ಗೀತಾಲಕ್ಷಣಗಳಿಂದ ಉಪಲಕ್ಷಿತವೂ ಗಮಕಮಣೀಯವೂ, ಸಕಲಗೀತ ವಸ್ತುರೂಪವೂ ಆದ ಅಲಾಪಿ ಯಲ್ಲಿಯೂ, ವಿಸ್ತರ, ಸಂಕೀರ್ಣ, ಶುದ್ಧ, ಮಿಶ್ರ ಎಂಬ ನಾಲ್ಕು ಬಗೆಯ ರಾಗಗಳಿಂದ ಉದ್ಗ್ರಾಹ, ಧ್ರುವ, ವೇಳಾಪ, ಭೋಗ ಎಂಬ ನಾಲ್ಕು ಧಾತ್ವಂಗಗಳಿಂದ, ಸ್ವರ, ಪದ, ಬಿರುದ, ಪಾಟ, ತೆನ್ನ ತಾಳ, ಎಂಬ ಆರು ಅಂಗಗಳಿಂದ ನಳ, ಕೃತ, ಪ್ರಸನ್ನ, ವ್ಯಕ್ತ, ಪೂರ್ಣ, ಸಮ ಸುಕುಮಾರ, ಸುರಕ್ತ, ಶಿಕ್ಷಣ, ಮಧುರ, ವಿನಿಕೃಷ್ಟ ಎಂಬ ಹತ್ತು ಗುಣಗಳಿಂದ ಶೋಭಿಸುವ ಗೀತಕವೆ ಮೊದಲಾದ ಶುದ್ಧ ಪ್ರಬಂಧಗಳಲ್ಲಿಯೂ, ಮಾತೃಕವೇ

ಮೊದಲಾದ ದೇಶೀ ಪ್ರಬಂಧಗಳಲ್ಲಿಯೂ... (೧೫-೭೧ವ).

ಇದು ದೇಶೀಯ ಶೈಲಿಯನ್ನು ಸ್ಪಷ್ಟಪಡಿಸುತ್ತದೆ. ದೇಶಿರಾಗವನ್ನು ಹಾಡಿದ ಸ್ತ್ರೀಯರ ಕುರಿತು 'ಪಂಪಭಾರತ' (೭-೯೦) 'ಲೀಲಾವತಿ ಪ್ರಬಂಧ' (೭-೨೩). ಮುಂತಾದ ಕೃತಿಗಳಲ್ಲಿಯೂ ವಿವರಗಳು ಬಂದಿವೆ.

ಸಂಗೀತದಲ್ಲಿಯೂ ಮಾರ್ಗ ಮತ್ತು ದೇಶಿ ಎಂದು ವ್ಯತ್ಯಾಸವಿದ್ದು ಅವುಗಳ ವ್ಯತ್ಯಾಸವು ಇಂತಿದೆ.

೧. ದೇಶೀ ಸಂಗೀತದಲ್ಲಿ ಸ್ವರ ಪ್ರಧಾನ, ಮಾರ್ಗೀ ಸಂಗೀತವು ಪ್ರಧಾನವಾಗಿದೆ.

೨. ಮಾರ್ಗಸಂಗೀತವು ಅನೇಕ ಕಟ್ಟು ನಿಟ್ಟುಗಳಿಂದ ಕೂಡಿದೆ. ದೇಶಿ ಸಂಗೀತದಲ್ಲಿ ಮಾರ್ಗೀ ಸಂಗೀತದಂತೆ ಕಟ್ಟುನಿಟ್ಟಾದ ನಿಯಮಗಳಿಲ್ಲ.

೩. ಮಾರ್ಗೀ ಸಂಗೀತದಲ್ಲಿ ಬದಲಾವಣೆ ಸಾಧ್ಯವಿಲ್ಲ. ದೇಶಿ ಸಂಗೀತದಲ್ಲಿ ಪರಿವರ್ತನೆ ಸಾಧ್ಯ (ಪಾಠಕ: ಬಿ.ಡಿ. ೧೯೭೫. ಪು. ೭-೮)

ಪ್ರಾಚೀನ ಕನ್ನಡ ಕಾವ್ಯಗಳಲ್ಲಿಯೂ ಸ್ತ್ರೀಯರು ಹಾಡಿದ ವಿಚಾರಗಳನ್ನು ಮೇಲಿನಂತೆ ಎರಡು ವಿಭಾಗ ಮಾಡಬಹುದು. ಸೋಮರಾಜನ 'ಉದ್ಭಟ ಕಾವ್ಯ'ದಲ್ಲಿ ವರನಾಡಿ, ಗೌಳ, ವರಾಳಿ, ಅರಭಿ, ಮೇಘರಂಜಿ, ಶಶಿಮಂಜರಿ, ಗುರ್ಜರಿ, ದೇಸಿ, ದೇವ ಗಾಂಧಾರಿ, ವಸಂತ, ಮಧು ಮಾಧವಿ, ಭೈರವಿ ಮೊದಲಾದ ರಾಗಗಳಿಂದ ಗಾಯಕಿಯರು ಹಾಡಿದ ವಿಚಾರ ಬರುತ್ತದೆ. (೨-೧೧೫, ೧೧೬) ಬಾಹುಬಲಿ ಪಂಡಿತನ 'ಧರ್ಮನಾಥ ಪುರಾಣ' ಕಾವ್ಯದಲ್ಲಿ ಮಲಹರಿ ಮೇಘರಂಜಿ, ಘಳಮಂಜರಿ, ತೊಂಡಿ, ವಸಂತವೆಂಬ ರಾಗವನ್ನು ಹಾಡಿದ ವಿಷಯವು ವ್ಯಕ್ತವಾಗಿದೆ. (೬-೧೪) ನಂಜುಂಡ ಕವಿಯ 'ರಾಮನಾಥ ಚರಿತ್ರೆ'ಯಲ್ಲಿ ಗೌಳ, ವಸಂತ, ವೇಳಾವಳಿ, ಮಾರ್ಗ, ಹಿಂದೋಳ, ಗುಂಡಕ್ರಿಯೆ ರಾಗಗಳ ಹೆಸರುಗಳು ಬಳಕೆಯಾಗಿವೆ. (೨೮ನೇ ಸಂಧಿ ೨ನೇ ಅಶ್ವಾಸ: ೨೧,೨೭,೨೮) ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಉಲ್ಲೇಖಗೊಂಡ ಮುಖ್ಯ ರಾಗಗಳನ್ನು ಇಲ್ಲಿ ಗುರುತಿಸಲಾಗಿದೆ.

ಮೇಳಕರ್ತರಾಗಗಳು ಈ ಕೆಳಗಿನಂತಿವೆ :

ಸಂಗೀತ ರಾಗ : ಭೂಪಾಲಿ (ಭೂಪ) ಸಮಯ : ರಾತ್ರಿ ೧ನೇ ಪ್ರಹರ ರಾಗ : ದೇಸ ರಾತ್ರಿಯ ೨ನೇ ಪ್ರಹರ ರಾಗ : ಖಮಾಜ, ಖಮಾಜ ರಾತ್ರಿ ೨ನೇ ಪ್ರಹರ, ರಾಗ : ಬಾಗೇಶ್ರೀ, ಮಧ್ಯರಾತ್ರಿ

ರಾಗ : ದುರ್ಗಾ, ಸಮಯ : ರಾತ್ರಿಯ ೨ನೇ ಪ್ರಹರ, ರಾಗ : ಕಾಫಿ, ಸಮಯ : ರಾತ್ರಿಯ ೨ನೇ ಪ್ರಹರ

ಜೌನಪುರಿ (ಜೀವನಪುರಿ), ಹಗಲಿನ ೨ನೇ ಪ್ರಹರ, ರಾಗ : ಭೈರವಿ, ಶೃಂಗಾರ ರಸದ ಗೀತಗಳು ಇದರಲ್ಲಿರುತ್ತವೆ. ಕೆಲವರು 'ಮ' ವಾದಿಸ್ವರವೆನ್ನುವರು. ಆದರೆ ಅದರಿಂದ ರಾಗದ ಗಂಭೀರತೆ ಹೆಚ್ಚಾಗಿ ಶೃಂಗಾರರಸದ ಗೀತಗಳನ್ನು ಹಾಡಲು ಬರುವುದಿಲ್ಲ.

ರಾಗ : ಭೈರವ, ಸಮಯ : ಪ್ರಾತಃಕಾಲ, ರಾಗ : ಬಿಹಾಗ, ಸಮಯ : ರಾತ್ರಿ ೨ನೇ ಪ್ರಹರ ಈ ರಾಗದಲ್ಲಿ ತೀವ್ರ 'ಮ' ವು ವಿವಾದಿ ಸ್ವರವಾಗಿದೆ. ಮಂದ್ರ 'ನಿ' ಗ್ರಹ ಸ್ವರವಾಗಿದೆ.

ರಾಗ: ತಿಲಂಗ, ಸಮಯ: ರಾತ್ರಿ ೨ನೇ ಪ್ರಹರ ಶೃಂಗಾರ ರಸದ ಪದ್ಯಗಳಿರುತ್ತವೆ. ಇದೊಂದು ಕ್ಷುದ್ರ ಪ್ರಕೃತಿಯ ರಾಗವಾಗಿದೆ. ರಾಗ ೪ ಮಾಲಕಂಸ (ಮಾಲವ–ಕೌಶಿಕ)

ಸಮಯ: ರಾತ್ರಿಯ ೪ನೇ ಪ್ರಹರ, ರಾಗವು ಗಂಭೀರವಾಗಿದೆ. ಧೀರಮನುಷ್ಯನ ಶಾಂತಿ ಸ್ವಭಾವವನ್ನು ಅಭಿವ್ಯಕ್ತಗೊಳಿಸುತ್ತದೆ. ರಾಗ: ಬಿಭಾಸ್ (ವಿಭಾಸ್), ಸಮಯ: ಪ್ರಾತಃಕಾಲ ಇದು ಗಂಭೀರವಾದ ರಾಗವಾಗಿದೆ. ರಾಗ: ಪಟದೀಪ, ಸಮಯ: ಸಾಯಂಕಾಲ ಈ ರಾಗವನ್ನು ಹೆಚ್ಚಾಗಿ ತಾರಸಪ್ತಕದಲ್ಲಿ ಹಾಡುವರು. ರಾಗ: ಯಮನ (ಕಲ್ಯಾಣ), ಸಮಯ: ರಾತ್ರಿ ೧ಣೆ ಪ್ರಹರ, ರಾಗ: ಕೇದಾರ, ಸಮಯ ರಾತ್ರಿ ೨ನೇ ಪ್ರಹರ, ರಾಗ : ಅಲ್ಹೈಯಾ ಬಿಲಾವಲ, ಸಮಯ: ಹಗಲಿನ ೧ನೇ ಪ್ರಹರ, ಪ್ರಾತಃಕಾಲದ ಕಲ್ಯಾಣವೆಂತಲೂ ಕರೆಯುವರು. ರಾಗ: ಗೌಡ ಸಾರಂಗ, ಸಮಯ: ಹಗಲಿನ ೩ನೇ ಪ್ರಹರ, ಮಿಯಾಂ ಮಲ್ಹಾರ, ರಾಗ: ಕಾಮೋದ, ಸಮಯ: ರಾತ್ರಿಯ ೧ನೇ ಪ್ರಹರ ಇದಕ್ಕೆ ಶ್ಯಾಮಕಲ್ಯಾಣ ಮತ್ತು ಶುದ್ಧ ಸಾರಂಗಗಳು ನಿಕಟವರ್ತಿಯಾಗಿದೆ. ರಾಗ: ಧಾನಿ, ಸಮಯ: ಸಾಯಂಕಾಲ ಚಂಚಲ ಪ್ರಕೃತಿಯರಾಗವಾಗಿದೆ. ರಾಗ: ಮಾಂಡ, ಸಮಯ: ರಾತ್ರಿ ಇದು ಕ್ಷುದ್ರಪ್ರಕೃತಿಗೆ ಸೇರಿದ ರಾಗವಾಗಿದೆ. ಠುಮ್ರಿ, ದಾದ್ರಾ ಇತ್ಯಾದಿ ಚಂಚಲ ಪ್ರಕೃತಿಯ ಗೀತಗಳನ್ನು ಈ ರಾಗದಲ್ಲಿ ಹಾಡುತ್ತಾರೆ. ರಾಗ: ಸೋಹಿನಿ, ಸಮಯ: ಮಧ್ಯರಾತ್ರಿಯ ನಂತರ, ಸೋಹಿನಿ ರಾಗವು ಚಂಚಲ ಪ್ರಕೃತಿಯ ರಾಗವಾಗಿದೆ. ರಾಗ: ಪೂರ್ವಿ ಸಮಯ: ಸೂರ್ಯಾಸ್ತದ ಸಮಯ ಇದೊಂದು ಜನಕ ರಾಗವಾಗಿದೆ. ಶಾಂತವಾತಾವರಣ ಅಭಿವ್ಯಕ್ತಗೊಳಿಸಲು ಕೋಮಲ ರೆ– ಧಗಳು ಮತ್ತು ತೀವ್ರ 'ಮ' ಪ್ರಯೋಗವಿರುವ ರಾಗಗಳು ಉತ್ತಮವೆಂದು ಸಮಗೀತಜ್ಞರ ಅಭಿಪ್ರಾಯವಿದೆ. ರಾಗ: ತಿಲಕ ಕಾಮೋದ ಸಮಯ: ರಾತ್ರಿಯ ೨ನೇ ಪ್ರಹರ ತಿಲಕ ಕಾಮೋದ ಕ್ಷುದ್ರ ಪ್ರಕೃತಿಗೆ ಸೇರಿದ ರಾಗವಾದುದರಿಂದ ಶೃಂಗಾರ ರಸದ ಪದ್ಯಗಳನ್ನು ಇದರಲ್ಲಿ ಹಾಡುತ್ತರೆ. ರಾಗ: ಕಲಾವತಿ (ವಲಚಿ) ಸಮಯ: ಮಧ್ಯರಾತ್ರಿಯ ಆರಂಭದಲ್ಲಿ ಇದು ಕರ್ನಾಟಕ ಪದ್ಧತಿಯಿಂದ ತೆಗೆದುಕೊಳ್ಳಲಾಗಿದೆ. ರಾಗ: ಶಂಕರಾ] ಸಮಯ: ರಾತ್ರಿಯ ೨ನೇ ಪ್ರಹರ ರಾಗ: ಹಮೀರ ಸಮಯ: ರಾತ್ರಿ ೧ನೇ ಪ್ರಹರ ಹಂಸಧ್ವನಿ, ಸಮಯ : ರಾತ್ರಿ ೧ನೇ ಪ್ರಹರ ಹಂಸಧ್ವನಿ ಕರ್ನಾಟಕ ಪದ್ಧತಿಯಿಂದ ಆಯ್ದುಕೊಂಡಿದೆ. ರಾಗ: ಶಿವರಂಜನಿ ಸಮಯ: ಮಧ್ಯರಾತ್ರಿ ಇದು ಕರ್ನಾಕ ಪದ್ಧತಿಯಿಂದ ಆಯ್ದುಕೊಂಡಿದೆ. ರಾಗ: ಛಾಯಾನಟ, ಸಮಯ: ರಾತ್ರಿಯ ೧ನೇ ಪ್ರಹರ ಕಣ್ ಸ್ವರಗಳ ಉಚ್ಚಾರದಿಂದಾಗಿ ರಾಗವು ಹಾಡಲು ಕಠಿನವಾಗಿದೆ. 'ಪರೆ' ಸ್ವರಸಂಗತಿ ಇದೆ. ತಾರಸಪ್ತಕಕ್ಕೆ 'ಪಸ' ಎಂದು ಹೋಗುವರು. ರಾಗ: ಪೀಲು, ಸಮಯ: ಅನಿಶ್ಚಿತ ಈ ರಾಗವು ಸಂಕೀರ್ಣ ಜಾತಿಗೆ ಸೇರಿರುವುದರಿಂದ ಗಾನಸಮಯ ಅನಿಶ್ಚಿತವಾಗಿದೆ. ಹಗಲಿನ ೩ನೇ ಪ್ರಹರದಲ್ಲಿ

ಹಾಡಲು ಸಮಗೀತಜ್ಞರು ಅಭಿಪ್ರಾಯಪಡುವರು. ಆರೋಹದಲ್ಲಿ 'ರೆ-ಧ' ದುರ್ಬಲವಾಗಿದೆ. ಇದು ಚಂಚಲ ಪ್ರಕೃತಿಯ ರಾಗವಾಗಿರುವುದುರಿಂದ ಶೃಂಗಾರ ರಸದ ಪದಗಳನ್ನು ಹಾಡುತ್ತಾರೆ. ರಾಗ: ದೇಸಕಾರ, ಸಮಯ: ಪ್ರಾತಃಕಾಲ, ಈ ರಾಗಕ್ಕೆ ಗಂಭೀರತೆ ಕಡಿವೆ. ರಾಗ: ಪೂರಿಯಾ ಸಮಯ: ರಾತ್ರಿ ೨ನೇ ಪ್ರಹರ ಇದು ಪೂರ್ವಾಂಗ ಪ್ರಧಾನ ರಾಗವಾಗಿದೆ. ಇದಕ್ಕೆ ಮಾರವಾ, ಹಿಂಡೋಲ, ಸೋಹಿನಿ ನಿಕಟವರ್ತಿ ರಾಗಗಳಾಗಿವೆ. ಪೂರಿಯಾ ರಾಗವು ಗಂಭೀರವಾಗಿದ್ದು, ಮೀಂಡರಾಗವು ಪ್ರಧಾನವಾಗಿದೆ. ರಾಗ: ಶುದ್ಧ-ಸಾರಂಗ, ಸಮಯ: ಮಧ್ಯಾಹ್ನಕೆಲವರು ಸಾರಂಗವನ್ನು ತೋರಿಸಲು ಸ್ವಲ್ಪ ಕೋಮಲ 'ನಿ' ಯನ್ನು ಪ್ರಯೋಗಿಸುವರು. ಈಗ ಕೋಮಲ 'ನಿ' ಉಪಯೋಗಿಸುವುದನ್ನು ಬಿಟ್ಟಿದ್ದಾರೆ. ರಾಗ: ರಾಗೇಶ್ರೀ ಸಮಯ: ರಾತ್ರಿ ೨ನೇ ಪ್ರಹರ, ಸಮಯ: ಸಾಯಂಕಾಲ ಇಲ್ಲವೆ ರಾತ್ರಿ, ರಾಗ: ಕಾಲಿಂಗಡಾ, ಸಮಯ: ಪ್ರಾತಃಕಾಲ. ಇದು ಚಂಚಲ ಪ್ರಕೃತಿಯ ರಾಗ. ಯಾವ ಸ್ವರಗಳ ಮೇಲೂ ಆಂದೋಲನವಿಲ್ಲ. ರಾಗ: ತೋಡಿ, ಸಮಯ: ಹಗಲಿನ ೨ನೇ ಪ್ರಹರ ಇದೊಂದು ಜನಕರಾಗವಾಗಿದೆ. ಇದರಲ್ಲಿ 'ಪ' ಸ್ವರ ಅಲ್ಪವಿದ್ದರೂ ಅನಿವಾರ್ಯವಾಗಿದೆ. ಇಲ್ಲದಿದ್ದರೆ ಗುಜರಿ ತೋಡಿಯಾಗುವುದ. ತೋಡಿ ರಾಗವು ಗಂಭೀರವಾಗಿದೆ. ಮಂದ್ರ-ಮಧ್ಯ ಸಪ್ತಕಗಳಲ್ಲಿ ಹೆಚ್ಚು ವಿಸ್ತಾರ ಮಾಡಬಹುದು. ರಾಗ: ಮುಲ್ತಾನಿ

ಸಮಯ: ಹಗಲಿನ ೪ನೇ ಪ್ರಹರ, ರಾಗ: ಮಧುವಂತಿ (ಮಧುಮಾಲತಿ), ಸಮಯ: ಹಗಲಿನ ೩ನೇ ಪ್ರಹರ, ರಾಗ: ಮಾರು ಬಿಹಾಗ, ಸಮಯ: ರಾತ್ರಿಯ ೧ನೇ ಪ್ರಹರ, ಇದು ಸಂಕೀರ್ಣ ಜಾತಿಗೆ ಸೇರಿದೆ. ಚಲನೆ ಬಹಳ ವಕ್ರವಿದೆ. ರಾಗ: ಚಂದ್ರಕಂಸ, ಸಮಯ: ಮಧ್ಯರಾತ್ರಿ ರಾಗ: ಮಧುಕಂಸ, ಸಮಯ: ಸಾಯಂಕಾಲ ಇಲ್ಲವೆ ರಾತ್ರಿ ಇದು ಅರ್ವಾಚೀನ ರಾಗ, ಮಾಲಕಂಸದಂತೆ ಇದ್ದರೂ ಚಲನೆ ಮುಲ್ತಾನಿಯದಾಗಿದೆ. ರಾಗ: ಗುಣಕಲಿ (ಗುಣಕ್ರಿ) ಸಮಯ: ಪ್ರಾತಃಕಾಲ, ರಾಗ: ಕೀರವಾಣಿ, ಸಮಯ: ಸಾಯಂಕಾಲ, ಇದನ್ನು ಕೀರವಾಣಿ ಎಮಬ ಕರ್ನಾಟಕ ಪದ್ಧತಿಯ ಮೇಳದಿಂದ ಆಯ್ದುಕೊಂಡಿದೆ. ಪೂರ್ವಾಂಗ ಕಾಫಿಮತ್ತು ಉತ್ತರಾಂಗ ಭೈರವ ಸ್ವರಗಳಿರುತ್ತವೆ. ರಾಗ: ಪೂರಿಯಾ-ಧನಾಶ್ರೀ, ಸಮಯ: ಹಗಲಿನ ೪ನೇ ಪ್ರಹರ ರಾಗವು ವಕ್ರವಿದೆ. ಪೂರ್ವಿಗೆ ನಿಕಟವರ್ತಿ ರಾಗ. ರಾಗ: ರಾಮಕಲಿ, ಸಮಯ: ಪ್ರಾತಃಕಾಲ ಆಂದೋಲನದ ಸ್ವರಬೇಕಿಲ್ಲ. ರಾಗ: ಪರಜಸಮಯ: ರಾತ್ರಿಯ ೪ನೇ ಪ್ರಹರ ಉತ್ತರಾಂಗ ಪ್ರಧಾನವಾದ ರಾಗ. ಆಂದೋಲನ, ಮೀಂಡ, ವಿಲಂಬಿತ ಲಯಗಳಿಗೆ ಆಸ್ಪದವಿಲ್ಲ. ಇದರಲ್ಲಿ ಬಡಾಖ್ಯಿಲ ಹಾಡುವುದುಲ್ಲ. ರಾಗ: ಬಸಂತ, ಸಮಯ: ಮಧ್ಯರಾತ್ರಿಯ ನಂತರ; ವಸಂತ್ರುತು. ರಾಗ: ದರಬಾರಿ ಕಾನಡಾ, ಸಮಯ: ಮಧ್ಯರಾತ್ರಿ ಗಂಭೀರವಾದ ರಾಗ. ಇದರಲ್ಲಿ ಗಂಭೀರ ಮನುಷ್ಯನ ಭಾವ ವ್ಯಕ್ತವಾಗುತ್ತದೆ. ರಾಗ: ನಂದ (ಆನಂದಿ), ಸಮಯ: ರಾತ್ರಿಯ ೨ನೇ ಪ್ರಹರ, ರಾಗ: ಜೋಗಿಯಾ (ಜೋಗಿ) ಸಮಯ: ಪ್ರಾತಃಕಾಲ ಇದು ಕರುನಾರಸ ಪ್ರಧಾನವಾದ ರಾಗ. ಇದನ್ನು ಸಾಯಂಕಾಲ

ದಲ್ಲಿಯೂ ಹಾಡುವರು. ಮಂದಿರದಲ್ಲಿ ಯಾವಾಗಲೂ ಹಾಡಬಹುದು. ರಾಗ: ಶ್ರೀ ಸಮಯ: ಸಾಯಂಕಾಲ, ಪೂರ್ವಿ–ಪೂರಿಯಾ ಧನಾಶ್ರೀ ಇದಕ್ಕೆ ನಿಕಟವರ್ತಿಗಳು. ಹಾಡಲು ಕಠಿಣವಾದ ರಾಗವಾಗಿದೆ. ರಾಗ: ಕೌಸಿ ಕಾನಡಾ (ಮಾಲಕಂಸ ಅಂಗ) ಸಮಯ: ರಾತ್ರಿಯ ೩ನೇ ಪ್ರಹರ, ಕೌಶಿಕ –ಕಾನಡಾ ಬೇರೊಂದಿದೆ. ಅದರಲ್ಲಿ 'ರೆ' ಇದೆ. ಮಾಲಕಂಸ, ನಾಯಕಿಗಳ ಮಿಶ್ರಣವಿದೆ. ಕೌಸಿ: ಕಾನಡಾ (ಬಾಗೇಶ್ರೀ ಅಂಗ) ಸಮಯ: ಮಧ್ಯರಾತ್ರಿ, ರಾಗ : ಶ್ಯಾಮ–ಕಲ್ಯಾಣ, ಸಮಯ: ರಾತ್ರಿಯ ೧ನೇ ಪ್ರಹರ

ರಾಗ: ಆಭೋಗಿ–ಕಾನಡಾ, ಸಮಯ: ಮಧ್ಯರಾತ್ರಿ, ರಾಗ: ಮೇಘ ಮಲ್ಹಾರ, ಸಮಯ: ವರ್ಷಾಋತು, ರಾಗ: ಭಟಿಯಾರ, ಸಮಯ: ಅಂತಿಮರಾತ್ರಿ, ಈ ರಾಗವು ವಕ್ರ ಮತ್ತು ವಿಚಿತ್ರವಾಗಿದ್ದರೂ ಪ್ರಭಾವಶಾಲಿಯಾದ ರಾಗವಾಗಿದೆ. ರಾಗ: ನಾಯಕಿ–ಕಾನಡಾ, ರಾಗ: ದೇಸಿ (ದೇಸಿತೋಡಿ), ಸಮಯ: ಹಗಲಿನ ೨ನೇ ಪ್ರಹರ, ರಾಗ: ಗೌಡ ಮಲ್ಹಾರ, ಸಮಯ: ವರ್ಷಾಋತು, ರಾಗ: ಸೂರಮಲ್ಹಾರ, ಸಮಯ: ಮಧ್ಯಾಹ್ನ ವರ್ಷಾಋತು, ರಾಗ: ಖಂಬಾವತಿ, ಸಮಯ: ರಾತ್ರಿ ೨ನೇ ಪ್ರಹರ, ರಾಗ: ನಟಬಿಹಾಗ, ಸಮಯ: ರಾತ್ರಿಯ ೧ನೇ ಪ್ರಹರ, ರಾಗ: ಬೈರಾಗಿ–ಭೈರವ, ಸಮಯ: ಪ್ರಾತಃಕಾಲರಾಗ: ಭೂಪಾಲ–ಸಮಯ: ಹಗಲಿನ ೨ನೇ ಪ್ರಹರ, ಭಕ್ತಿರಸ ಪ್ರಧಾನವಾದ ರಾಗ. ಶೃತಿ ಮನೋಹರವಾಗಿದೆ.

ರಾಗ: ಪೂರ್ವಾಕಲ್ಯಾಣ ಸಮಯ: ಸೂರ್ಯಾಸ್ತದ ಸಮಯಕಲ್ಯಾಣಕ್ಕಿಂತ ಮೊದಲು ಹಾಡುವುದರಿಂದ ಇದಕ್ಕೆ 'ಪೂರ್ವಾಕಲ್ಯಾಣ' ಹೆಸರಿದೆ. ಕೆಲವರು 'ಪೂರಿಯಾ ಕಲ್ಯಾಣ'ವೆನ್ನುವರು.

'ರಸ'ದ ನಿರ್ಣಯ ವಿವಾದಾಸ್ಪದವಿದೆ. ಭೀಮ (ಗಾವತಿ), ಸಮಯ: ಸಾಯಂಕಾಲ, ರಾಗ: ನಟಮಲ್ಲಾರ

ಸಮಯ: ರಾತ್ರಿಯಲ್ಲಿ, ರಾಗ: ರಾಮದಾಸಿ ಮಲ್ಲಾರ, ಸಮಯ: ವರ್ಷಾಋತು ಇದೊಂದು ಅಪ್ರಚಲಿತ ರಾಗವಾಗಿರುವುದರಿಂದ ಇದರ ನಿಯಮಗಳನ್ನು ಬರೆಯುವುದು ಕಠಿಣ. ರಾಗ: ಮಾರವಾ, ಸಮಯ: ಸಾಯಂಕಾಲ ಪ್ರಭಾವಶಾಲಿಯಾದ, ಚಂಚಲ ಪ್ರಕೃತಿಯ ರಾಗವಾಗಿದೆ. ರಾಗ: ಹಿಂಡೋಲ ಸಮಯ: ಮಧ್ಯರಾತ್ರಿಯ ನಂತರ, ರಾಗ: ಲಲಿತಸಮಯ: ರಾತ್ರಿಯ ೪ನೇ ಪ್ರಹರ ಇದನ್ನು ಮಧ್ಯರಾತ್ರಿಯ ನಂತರ ಹಾಡುತ್ತಾರೆ. ರಾಗ: ಶುದ್ಧ ಕಲ್ಯಾಣ, ಸಮಯ: ರಾತ್ರಿಯ ೧ನೇ ಪ್ರಹರ

ದೇಸಿಯ ಉಗಮ

ಮಾರ್ಗ ಮತ್ತು ದೇಸಿಯ ಕುರಿತು ಕನ್ನಡದಲ್ಲಿ ಸಾಕಷ್ಟು ವಿವರಣೆಗಳು ಬಂದಿವೆ. ಇದು ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಬಂದಿವೆ. ಇದು ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಭಾಷೆಯ ಬಳಕೆ ಮತ್ತು ಅದರ ನಿರೂಪಣೆಯಂತೆಯೂ ಚರ್ಚಿತವಾಗಿದೆ.

" ಆ ಹಿಂದಿನ ದೇಸಿಗಬ್ಬಗಳೇ ಇಂದು ತೋರುವದಿಲ್ಲವಾದರೂ ಪಂಪನಂಥ ಮಹಾಕವಿಗಳು ಅವನ್ನು ಹೊಗಳುವುದರಿಂದ ತಮ್ಮ ಮಾರ್ಗೀಯ ಮಹಾಕಾವ್ಯಗಳಲ್ಲಿ

'ದೇಸಿಯೊಳ್ ಪುಗುವುದು' ಎಂದುದರಿಂದ ಉತ್ತಮವಾದ ದೇಸಿ ಪದ್ಧತಿ ಸರ್ವಥಾ ಗ್ರಾಹ್ಯವೆಂಬುದನ್ನು ಮರೆಯಬಾರದು. ಮಾರ್ಗ ಕಾವ್ಯಪದ್ಧತಿ ಲಕ್ಷಣ ಗ್ರಂಥದ ಅತಿಬಂಧನದಿಂದ ವಿರಸವಾಗುವಂತೆ, ಅದರ ಗಂಧ ಗಾಳಿಗೂ ಎಡೆಗೊಡದಿದ್ದಲ್ಲಿ ದೇಸಿ ಮಾಸಿಹೋಗುವುದು. 'ಅತಿ ಸರ್ವತ್ರ ವರ್ಜಯೇತ್' ಎಂದಲ್ಲವೆ ಎಚ್ಚರಿಕೆಯ ಮಾತು? ನಾಡಿನ ಸಾರ್ವಜನಿಕವಾದ ಸಂಸ್ಕೃತಿಯ ಸಾರವೆಂದರೆ ದೇಸಿ. ಅದನ್ನು ಯಾವ ಬಗೆಯಲ್ಲೂ ವಿಕೃತಿಗೊಳಿಸಬಾರದು. ಮಾರ್ಗಸಾಹಿತ್ಯವಾಗಲಿ, ಲಕ್ಷಣಪದ್ಧತಿ ಯಾಗಲಿ, ತಮ್ಮ ಹೊರೆಯನ್ನು ಅದರ ಮೇಲೆ ಬಾಗಿಸಿದಲ್ಲಿ ಹೊರಿಸಿದಲ್ಲಿ, ಅದರ ತನ್ನತನ ಮಾಯವಾಗುವುದು. ಈಗಿನ ನಾಗರಿಕರೆಂಬುವರಿದಿರಿನಲ್ಲಿ ಹೇಗೆ ಹಳ್ಳಿಗರು ಅಂಜಿ, ನಾಚಿ, ಮುಗ್ಗರಿಸಿದ ಮನಸ್ಸಿನಿಂದ ವರ್ತಿಸುತ್ತಾರೋ ಹಾಗೆ ಮಾರ್ಗಸಾಹಿತ್ಯ ದಿದಿರಿನಲ್ಲಿ ದೇಸಿ ತಳಮಳಿಸುತ್ತಿದೆ. ಅಂಥ ಹಳ್ಳಿಗರಲ್ಲಿ ಆದರ್ಶ ಜೀವನದ ಸಾರಸತ್ವವೇ ಇಲ್ಲ ಎಂಬ ತಾತ್ಪರ್ಯವೋ? ಅಲ್ಲ, ಬೇಕಾದಷ್ಟಿದೆ. ಅದನ್ನು ಕಾಪಾಡಿ ನಿಜವಾದ ದೇಶೋದ್ಧಾರಕ್ಕೆ ನೆರವಾಗುವುದು ಉತ್ತಮ ನಾಗರಿಕನ ಕರ್ತವ್ಯ.

ಪಂಪನು ಮಾರ್ಗ ಮತ್ತು ದೇಸಿ ಭಾಷೆಗಳನ್ನು ತನ್ನ ಕಾವ್ಯದಲ್ಲಿ ಸಮನ್ವಯ ಗೊಳಿಸಿದ್ದೇನೆ ಎಂದು ಹೇಳಿಕೊಂಡಿದ್ದಾನೆ. ದೇಸಿಯು ಪ್ರಾಚೀನ ಕನ್ನಡ ಕಾವ್ಯ ಮಾರ್ಗದಲ್ಲಿ ಬಹಳ ಮುಖ್ಯವಾದ ನಿರೂಪಣಾ ಕ್ರಮವಾಗಿತ್ತು ಎನ್ನುವುದು ಮೇಲಿನ ಉಲ್ಲೇಖದಿಂದ ಸ್ಪಷ್ಟವಾಗುತ್ತದೆ. ಮಾರ್ಗ ಮತ್ತು ದೇಸಿರಾಗಗಳ ಕುರಿತು ಮುಳಿಯ ತಿಮ್ಮಪ್ಪಯ್ಯನವರು ಹೇಗೆ ಹೇಳಿದ್ದಾರೆ (೧೯೮೮. ೨ ಪು. ೫೦೭–೫೦೮)

ನಮ್ಮ ನಾಟದೇಶದ ಇತಿಹಾಸವು ಸಂಗೀತಶಾಸ್ತ್ರದಿಂದಲೂ ಸ್ವಲ್ಪ ಮಟ್ಟಿಗೆ ತಿಳಿದು ಬರುವಂತಿದೆ. ಸಂಗೀತವು "ಮಾರ್ಗ, ದೇಶಿ" ಎಂದೆರಡು ವಿಧವಾಗಿದೆ. ಆ ಎರಡು ಸಂಗೀತವನ್ನು ಸಂಗೀತ ಶಾಸ್ತ್ರದಲ್ಲಿ ಹೀಗೆ ವಿಂಗಡಿಸಿದೆ:–

ಸ್ವರ್ಗೇ ಮಾರ್ಗಾಶ್ರಿತಂ ದೇಶಾಶ್ರಿತಂ ಭೂತಲರಂಜಕುಂ ।
ತತ್ತದ್ದೇಶೀಯಯಾ ರೀತ್ಯಾ ಯತ್ಸ್ಯಲ್ಲೋಕಾನ್ಮರಂಜನು ॥
ದೇಶೇ ದೇಶೇನು ಸಂಗೀತಂ ತದ್ದೇಶೀತ್ಯಭಿಧೀಯತೇ ।

[ಮಾರ್ಗ ಸಂಗೀತವು ಸ್ವರ್ಗದಲ್ಲಿ ಪ್ರಸಿದ್ಧವಾಗಿದೆ. ದೇಶೀ ಸಂಗೀತವು ಭೂತಲ ರಂಜಕವು. ಆಯಾ ದೇಶೀಯರೀತ್ಯನುಸಾರವಾಗಿ ಗಾನಮಾಡಲ್ಪಡುವುದರಿಂದ "ದೇಶಿ" ಎಂಬ ಹೆಸರಾಯಿತು.]

ಅಷ್ಟೇ ಅಲ್ಲ; ಗೀತ–ವಾದ್ಯ–ನೃತ್ಯಗಳೆಂಬ ಅಂಗತ್ರಯಗೂಡಿ ಸಂಗೀತವೆನಿಸುವುದು. ಅದರಿಂದ ಗೀತ–ವಾದ್ಯ–ನೃತ್ಯಗಳೆಂಬ ಮೂರರಲ್ಲಿಯೂ ಮಾರ್ಗ–ದೇಶಿಗಳೆಂಬ ಎರಡು ಭೇದಗಳಿವೆಯೆಂಬುದು ಸಿದ್ಧಾಂತವಾಗುತ್ತದೆ. ಸಂಗೀತಾಂತರ್ಗವಾದ ಗೀತವು ರಾಗಾಶ್ರಯವಾಗಿ ಮೂಡುವುದು. ಅಂತಹ ರಾಗಗಳೊಳಗೆ "ಬೈರವ, ಭೂಪಾಲ, ಶ್ರೀರಾಗ, ಫಲಮಂಜರಿ, ವಸಂತ, ಮಾಳವ, ಬಂಗಾಳ, ನಾಟಿ" ಎಂಬ ಪ್ರಸಿದ್ಧಗಳಾದ ಪುರುಷರಾಗಗಳೆಂಟು. ಮೊದಲಿನ ಐದು ರಾಗಗಳು ದೇಶೀಯಗಳೊ ಅಥವಾ

ಸ್ವರ್ಗೀಯಗಳೊ ಎಂಬುದನ್ನು ವಿಚಾರಪೂರ್ವಕವಾಗಿ ನಿರ್ಣಯಿಸುವುದು ಪ್ರಕೃತಕ್ಕೆ ಸುಲಭಸಾಧ್ಯವಲ್ಲವಾದರೂ, ಮತ್ತಿನಮಾಳವ, ಬಂಗಾಳ, ನಾಟಿಗಳೆಂಬ ರಾಗಗಳು ದೇಶೀಯಗಳೆಂದು ಅವುಗಳ ಹೆಸರುಗಳಿಂದಲೆ ವ್ಯಕ್ತವಾಗುತ್ತದೆ. ಈ ಪ್ರತಿಯೊಂದು ರಾಗವನ್ನೂ ಆಶ್ರಯಿಸಿದ ಸ್ತ್ರೀರಾಗಗಳೂ, ಪುತ್ರೀಪುತ್ರರಾಗಗಳೂ, ದಾಸೀ ದಾಸರಾಗ ಗಳೂ, ಮಿಶ್ರರಾಗಗಳೂ ಬಹಳವಾಗಿರುತ್ತವೆ. ಇದರಿಂದ ನಮ್ಮ ನಾಟದೇಶದಲ್ಲುದಿಸಿದ ಗೀತ–ವಾದ್ಯ ನೃತ್ಯಗಳಿಂದೊಡಗೂಡಿದ ವಿಶಿಷ್ಟವಾದ ಸಂಗೀತವೊಂದು ಅತಿಪೂರ್ವ ಕಾಲದಲ್ಲೇ ನೆಲಸಿದ್ದುದೆಂದು ಗೊತ್ತಾಗುತ್ತದೆ. ಆ ಮೇಲೆ ನಾಟ ದೇಶವು ಕರ್ಣಾಟಕ (ನಾಟ) ಸಂಗೀತವನ್ನೆ ಆಶ್ರಯಿಸುತ್ತಿದ್ದಾರೆ. ವಿಶಿಷ್ಟವಾದ ಸಂಗೀತವು ಆಯಾ ದೇಶಗಳ ವಿಶಿಷ್ಟವಾದ ಸಂಸ್ಕೃತಿ (Culture) ಯನ್ನು ಪಸರಿಸಲಿಕ್ಕೆ ಪ್ರಬಲವಾಗಿರುವುದೆಂಬುದು ಸಹೃದಯರಾದವರಿಗೆ ಹೊಸತಲ್ಲ.

*ವಿವರಗಳಿಗೆ ನೋಡಿ: ಮುಳಿಯ ತಿಮ್ಮಪ್ಪಯ್ಯ ೧೯೮೮ ಶ್ರದ್ಧಾಂಜಲಿ ಸಂಪುಟ. ೨ ಪುಟ. ೪೦೯.*

## ೪೧೧. ದ್ರವಿಳ

*ದಕ್ಷಿಣಾಪಥದೊಳ್ ದ್ರವಿಳ ವಿಷಯದೊಳ್ ದಕ್ಷಿಣ ಮಧುರೆಯೆಂಬುದು*
*ಪೊಱಲದನಾಳ್ವೊಂ ಸುಂದರ ಪಾಂಡ್ಯನೆಂಬೊನರಸನ್ ..............*

*(ಡಿ.ಎಲ್.ಎನ್. ೨೦೦೯ ಪುಟ. ೮೦)*

'ದ್ರವಿಳ' ಎಂಬುದು ದಕ್ಷಿಣಾಪಥದಲ್ಲಿ ದ್ರಾವಿಡದೇಶ ಎಂಬರ್ಥದಲ್ಲಿ ಬಂದಿದೆ. ಶುದ್ಧ ದ್ರಮಿಳ ಜನರು' ಎಂದು ಟೀಕೆಯಾಗಿಯೂ ಬರುತ್ತದೆ. ದ್ರಮಿಳರು ಎಂದರೆ 'ಅನಾಗರಿಕರು' ಎಂಬರ್ಥದಲ್ಲಿಯೂ ಬಳಕೆಯಾಗಿರುವುದೂ ಇದೆ.

*ವಿವರಗಳಿಗೆ ನೋಡಿ: ದೇಸಿಗ, ನಾಡಾಡಿ*

## ೪೧೨. ದ್ರವ್ಯ

ದ್ರವ್ಯ (ಎಂದರೆ ವಸ್ತು) ಜೈನ ದರ್ಶನದಲ್ಲಿ ಒಂದು ಮುಖ್ಯ ಭಾವನೆಯಾಗಿದೆ. ಅದು ಒಂದು ವಸ್ತುವನ್ನು ಅಥವಾ ಪದಾರ್ಥವನ್ನು ಸೂಚಿಸುತ್ತದೆ. "ಗುಣಪರ್ಯಾಯವತ್ ದ್ರವ್ಯಮ್" ಎಂಬ ಉಮಾಸ್ವಾಮಿಗಳ ಸೂತ್ರ ಗುಣಗಳೂ, ಪರ್ಯಾಯಗಳೂ (ಎಂದರೆ ವಿವಿಧ ಪ್ರಕಾರಗಳು) ಯಾವುದಕ್ಕಿದೆಯೋ ಅದು ವಸ್ತುವೆಂದು ಹೇಳುತ್ತದೆ. ಜಗತ್ತಿನಲ್ಲಿರುವ ಯಾವ ದಿಟದ ವಸ್ತುವೇ ಆಗಲಿ ಸ್ವಕೀಯವಾದ ಗುಣಗಳನ್ನು ಹೊಂದಿದ್ದು, ವಿವಿಧ ರೂಪಪರಿವರ್ತನೆಗೆ ಒಳಗಾಗಿರತಕ್ಕದ್ದು. ಆದ್ದರಿಂದ ಗುಣಗಳನ್ನೂ ಪ್ರಕಾರಗಳನ್ನೂ ವಸ್ತುವಿನಿಂದ ಬೇರ್ಪಡಿಸಲಾಗುವುದಿಲ್ಲ. ವಸ್ತುವಿನಿಂದ ಗುಣಗಳನ್ನು ಬೌದ್ಧಿಕವಾಗಿ ಪೃಥಕ್ಕರಿಸಿ ಅವುಗಳನ್ನು ಕುರಿತು ನಾವು ಮಾತನಾಡಬಹುದು. ಆದರೆ ಗುಣಗಳು ಅವು ಆಶ್ರಯಿಸಿರುವ ವಸ್ತುವಿನಿಂದ ನಿಜವಾಗಿಯೂ ಅಭೇದ್ಯ. ಹೀಗೆಯೇ ಬೌದ್ಧಿಕವಾಗಿ ವಸ್ತುವಿನ ವಿಷಯವನ್ನೂ ಕುರಿತು ನಾವು ಹೇಳಬಹುದು: ಆದರೆ ತನ್ನ ಗುಣಗಳನ್ನು

ಬಿಟ್ಟುಬಿಟ್ಟರೆ ವಸ್ತುವೇ ಇರುವುದಿಲ್ಲ. ಆದ್ದರಿಂದ ಗುಣಮುಕ್ತ ದ್ರವ್ಯವಾಗಲಿ, ದ್ರವ್ಯ ಮುಕ್ತ ಗುಣವಾಗಲಿ ಬರಿಯ ಬೌದ್ಧಿಕ ಪೃಥಕ್ಕರಣಗಳು.

ಜೈನಮತವು ದ್ರವ್ಯದ ಬಗ್ಗೆ ಈ ರೀತಿಯ ನಿಲುವನ್ನು ತಳೆಯುವುದು ಗಮನಾರ್ಹ.

"ದ್ರವ್ಯ ಅರ್ಥಾತ್ ವಸ್ತುವು ಜೈನದರ್ಶನದ ಒಂದು ಮುಖ್ಯ ಭಾವನೆ. ಅದು ಒಂದು ವಸ್ತುವನ್ನು ಅಥವಾ ಪದಾರ್ಥವನ್ನು ಸೂಚಿಸುತ್ತದೆ. 'ಗುಣ ಪರ್ಯಾಯವದ್ ದ್ರವ್ಯಮ್' ಎಂಬ ಉಮಾಸ್ವಾಮಿಗಳ ಸೂತ್ರದ ಪ್ರಕಾರ ದ್ರವ್ಯವು ಗುಣ ಹಾಗೂ ಪರ್ಯಾಯಗಳುಳ್ಳದ್ದು. ವಸ್ತುವಿನ ಇರುವಿಕೆಗೆ ಅತ್ಯಂತ ಅವಶ್ಯವಾಗಿರುವುದು ಗುಣವಾದರೆ, ದೇಶ ಕಾಲ ಜನ್ಯವಾದದ್ದು ಪರ್ಯಾಯ. ಇದು ಇತರ ದರ್ಶನಗಳು ಹೇಳುವ 'ಪ್ರಕಾರ'ಕ್ಕೆ ಸಮಾನ. ಜಗತ್ತಿನಲ್ಲಿರುವ ಯಾವುದೇ ವಸ್ತುವಾದರೂ ಸ್ವಕೀಯವಾದ ಗುಣಗಳನ್ನು ಹೊಂದಿದ್ದು ರೂಪಪರಿವರ್ತನೆಯಿಂದ ಬೇರ್ಪಡಿಸಲಾಗುವುದಿಲ್ಲ. ಗುಣ ವೆಂಬುದು ಮೌಲಿಕವಾದುದು. ಪರ್ಯಾಯವೆಂದರೆ ವಸ್ತುವಿನ ವೈವಿಧ್ಯಕ್ಕೆ ಕಾರಣ ವಾದುದು. ಹೀಗೆ ಏಕತ್ವ ಮತ್ತು ಬಹುತ್ವಗಳಿಗೆ ಗುಣ ಮತ್ತು ಪರ್ಯಾಯಗಳು ಕಾರಣವಾಗುತ್ತವೆ.

ದ್ರವ್ಯಗಳನ್ನು ಏಕದೇಶ ವ್ಯಾಪಿ ಹಾಗೂ ಬಹುದೇಶ ವ್ಯಾಪಿಯೆಂದು ವಿಭಾಗಿಸಿದೆ. ಏಕದೇಶ ವ್ಯಾಪಿಯಾದುದು ಕಾಲವೊಂದೇ. ಇತರ ಪದಾರ್ಥಗಳೆಲ್ಲ ವಿಸ್ತಾರವನ್ನು ಹೊಂದುವವುಗಳಾಗಿವೆಯಾದ್ದರಿಂದ ಅವುಗಳನ್ನು ಬಹು ಪ್ರದೇಶ ವ್ಯಾಪಿಯೆನ್ನಲಾಗಿದೆ.

ವಿಸ್ತಾರವನ್ನು ಧರಿಸುವ ಅಂದರೆ ಅವಯವುಳ್ಳ ವಸ್ತುಗಳಿಗೆ 'ಅಸ್ತಿಕಾಯ'ಗಳೆಂದು ಹೆಸರು. ಅಸ್ತಿ–ಎಂಬುದು ಸತ್ತೆ ಅರ್ಥಾತ್ ಇರವನ್ನು ಸೂಚಿಸಿದರೆ 'ಕಾಯ' ಎಂಬುದು ಅವಯವ ಅಥವಾ ವಿಸ್ತಾರವನ್ನು ಸೂಚಿಸುತ್ತದೆ. ಈ ವಿಧವಾದ ದ್ರವ್ಯಗಳು ಐದು– ಜೀವಾಸ್ತಿಕಾಯ, ಪುದ್ಗಲಾಸ್ತಿಕಾಯ, ಆಕಾಶಾಸ್ತಿಕಾಯ, ಧರ್ಮಾಸ್ತಿಕಾಯ ಮತ್ತು ಅಧರ್ಮಾಸ್ತಿಕಾಯ.

ದ್ರವ್ಯ ಅಥವಾ ಪದಾರ್ಥಗಳನ್ನು ಜೀವ ಮತ್ತು ಅಜೀವ ಎಂದು ವಿಭಾಗಿಸುವ ಕ್ರಮವೂ ಇದೆ. ಜೀವ ಮತ್ತು ಅಜೀವಗಳೆರಡೂ ಅಸ್ತಿಕಾಯಗಳೂ ದೇಶವ್ಯಾಪಿಗಳೂ ಆಗಿವೆ. ಜೀವನನ್ನು ಪ್ರಜ್ಞೆಯುಳ್ಳವ, ಚೇತನ ಎಂದು ಹೇಳಬಹುದು. ಅಜೀವವು ಪ್ರಜ್ಞೆಯಿಲ್ಲದ್ದೂ ಜಡವೂ ಆಗಿದೆ. ಪುದ್ಗಲ, ಆಕಾಶ, ಧರ್ಮ ಮತ್ತು ಅಧರ್ಮಗಳು ಅಜೀವ ವರ್ಗಕ್ಕೆ ಸೇರಿದವು.

ಕಾಲವೂ ಅಜೀವವೇ ಆದರೂ ಆದ ಏಕದೇಶವ್ಯಾಪಿಯೂ ಅನಸ್ತಿಕಾಯವೂ ಆಗಿದೆ. ಕಾಲವು ಅಸ್ತಿಕಾಯವಲ್ಲ. ಅಂದರೆ ಅದಕ್ಕೆ ಶರೀರವಿಲ್ಲ."

ದ್ರವ್ಯದ ಪರಿಕಲ್ಪನೆಯು ವಿಶಿಷ್ಟವಾದುದು. ದ್ರವ್ಯಕ್ಕೆ ಜೈನಧರ್ಮದ ಪ್ರಕಾರ ಗುಣವಿದೆ. ದ್ರವ್ಯವನ್ನು ಜೀವ –ಅಜೀವವೆಂದು ಎರಡು ರೀತಿಯಲ್ಲಿ ಜೈನಧರ್ಮವು ವರ್ಗೀಕರಿಸುತ್ತದೆ.

*ವಿವರಗಳಿಗೆ ನೋಡಿ: ಪ್ರಭಾಕರ ಜೋಶಿ ೨೦೦೮*

*ಭಾರತೀಯ ತತ್ವಶಾಸ್ತ್ರ ಪ್ರವೇಶ ಪುಟ. ೩೦–೩೧*

*ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦ ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ*

೪೧೩. ದ್ವಾದಶಾಂಗಗಳು

*ಸೌಧರ್ಮಂ ಮೊದಲಾಗೊಡೆಯ ದೇವಲೋಕದೊಳ್ ಪುಟ್ಟಿದರಿತ್ತ ಗಂಧಭಾಜನ ಮುನಿಯುಂ* **ದ್ವಾದಶಾಂಗ** *ಚತುರ್ದಶ ಪೂರ್ವಮಪ್ಪಾಗಮಮೆಲ್ಲಮಂಕಲ್ತು ಪಲಕಾಲಮುಗ್ರೋಗ್ರತಪಶ್ಚರಣಂಗೆಯ್ದು.............*

*(ಡಿ.ಎಲ್.ಎನ್. ೨೦೦೯ ಪುಟ. ೯೩).*

ಜೈನಾಗಮದಲ್ಲಿ ಬರುವ ದ್ವಾದಶಾಂಗಗಳು ಇಂತಿವೆ.

೧) ಆಚಾರಾಂಗ – ಯತಿಯ ನಡವಳಿಕೆಯನ್ನು ತಿಳಿಸುತ್ತದೆ. ೨) ಸೂತ್ರಕೃತಾಂಗ – ಜ್ಞಾನ, ವಿನಯ, ಧಾರ್ಮಿಕ ಕ್ರಿಯೆ ಮೊದಲಾದುವನ್ನು ಇದು ಹೇಳುತ್ತದೆ. ೩) ಸ್ಥಾನಾಂಗ–ಜೀವ ಪುದ್ಗಲ ಮೊದಲಾದ ದ್ರವ್ಯಗಳ ಸ್ಥಾನವನ್ನು ತಿಳಿಸುತ್ತದೆ. ೪) ಸಮವಾಯಾಂಗ – ದ್ರವ್ಯ ಕಾಲ ಕ್ಷೇತ್ರ ಭಾವಗಳ ದೃಷ್ಟಿಭೇದಗಳಿಂದ ತೋರುವ ಸಾಮ್ಯವನ್ನು ತಿಳಿಸುತ್ತದೆ. ೫) ವ್ಯಾಖ್ಯಾಪ್ರಜ್ಞಪ್ತಿ – ಗಣಧರರ ಪ್ರಶ್ನೆಗಳಿಗೆ ತೀರ್ಥಂಕರರ ಉತ್ತರಗಳನ್ನು ತಿಳಿಸುತ್ತದೆ. ೬) ಜ್ಞಾತೃಧರ್ಮಕಥಾಂಗ – ಧಾರ್ಮಿಕ ಕಥೆ, ಗಣಧರ ತೀರ್ಥಂಕರರ ಸಂವಾದವಿದೆ. ೭) ಉಪಾಸಕಾಧ್ಯಾಯಾಂಗ – ಶ್ರಾವಕಾಚಾರಗಳನ್ನು ತಿಳಿಸುತ್ತದೆ. ೮) ಅಂತಕೃದ್ದಶಾಂಗ – ಪ್ರತಿ ತೀರ್ಥಂಕರರ ಕಾಲದಲ್ಲಿಯೂ ಉಪಸರ್ಗವನ್ನು ಸಹಿಸಿ ತಪಸ್ಸು ಮಾಡಿದ ಹತ್ತು ಹತ್ತು ಮುನಿಗಳ ಚರಿತ್ರೆಯಿದೆ. ೯) ಅನುತ್ತರೋಪಪಾದಕ ದಶಾಂಗ – ಪ್ರತಿ ತೀರ್ಥಂಕರರ ಕಾಲದಲ್ಲಿಯೂ ತಪಸ್ಸಿನಿಂದ ಐದು ಅನುತ್ತರಗಳಲ್ಲಿ ಹುಟ್ಟಿದ ಹತ್ತು ಮುನಿಗಳ ಚರಿತ್ರೆಯಿದೆ. ೧೦) ಪ್ರಶ್ನವ್ಯಾಕರಣಾಂಗ – ಪ್ರಾಣಿಗಳ ಸುಖದುಃಖದ ಪ್ರಶ್ನೆಗಳಿಗೆ ಉತ್ತರವಿದೆ. ೧೧) ವಿಪಾಕ ಸೂತ್ರಾಂಗ – ಕರ್ಮಗಳ ಪರಿಪಾಕ ಸ್ವರೂಪವನ್ನು ತಿಳಿಸುತ್ತದೆ. ೧೨) ದೃಷ್ಟಿ ಪ್ರವಾದಾಂಗ – ಬೇರೆ ಬೇರೆ ದರ್ಶನಗಳನ್ನು ವಿವರಿಸಿ ಸಮ್ಯಗ್ ದರ್ಶನವನ್ನು ತಿಳಿಸುತ್ತದೆ.

*ವಿವರಗಳಿಗೆ ನೋಡಿ: ಬಾಹ್ಯಾಂಭಂತರ: ಕಾಯೋತ್ಸರ್ಗ: ಧರ್ಮಧ್ಯಾನ: ಶುಕ್ಲಧ್ಯಾನ.*

೪೧೪. ದ್ವಿಜರು

*ಆ ವಿಪ್ರೋತ್ತಮನ ಮಗಂ*
*ಭೂವಿಶ್ರುತನೀಶ್ವರಾರ್ಯನೆಂಬೊಳ್ಪೆಸರಿಂ ।*
*ದೇವದ್ವಿಜಗುರುಜನಪದ*
*ಸೇವಾನಿರತಂ ಪರೋಪಕಾರಾಭಿರತಂ ॥ (ಪಂಚತಂತ್ರ ೧–೪೭)*

ಆ ಬ್ರಾಹ್ಮಣ ಶ್ರೇಷ್ಠನ ಮಗ ಪ್ರಸಿದ್ಧನಾದ ಈಶ್ವರಾರ್ಯನೆಂಬ ಒಳ್ಳೆಯ ಹೆಸರಿನಿಂದ ದೇವ ಬ್ರಾಹ್ಮಣ ಗುರು ಜನಪದ ಸೇವಾ ನಿರತನಾಗಿಯೂ ಪರೋಪಕಾರಿಯೂ ಆಗಿದ್ದನು. ಭೂಮಿಶ್ರುತ ಅವನೀಶ್ವರರು ಅಂದರೆ ಬ್ರಾಹ್ಮಣರು. ದೇವದ್ವಿಜ ಗುರು ಅಂದರೂ ಬ್ರಾಹ್ಮಣರೇ. ದ್ವಿಜ ಎಂದರೆ ಎರಡನೆಯ ಬಾರಿ ಹುಟ್ಟಿದವನು. ಉಪನಯನದ ಅನಂತರ ಬ್ರಾಹ್ಮಣನು ಎರಡನೆಯ ಬಾರಿ ಹುಟ್ಟುತ್ತಾನೆ.

ದ್ವಿಜನ್ಮ ಘೋಷದಿಂದ ಪಾಪ ನಾಶವಾಗುವುದು. ಅಂದರೆ ಬ್ರಾಹ್ಮಣರ ವೇದಘೋಷ ದಿಂದ ಪಾಪನಾಶವಾಗುವುದು ಎಂಬುದು ಒಂದು ನಂಬಿಕೆ. (ಪಂಪ ಭಾರತ ೪-೧೫)

ಚಾರು ವಿವಿಧಾಗ್ನಿ ಕಾರ್ಯ ಪ್ರಾರಂಭ ಮಹಾದ್ವಿಜನ್ಮ ಘೋಷದಿಂ ಹೋ ದೂರಮುಮತಳಾಳಂಕಾರ ಸಂಸಾರ ಸಾರ ಗಂಗಾದ್ವಾರಂ (ಪಂಪಭಾರತ ೪-೧೫)

ಬ್ರಹ್ಮನ್ ಮತ್ತು ಕ್ಷತ್ರ ಎಂಬ ಭಾವವಾಚಕ ಪದಗಳು ವೃತ್ತಿ ಗುಣವನ್ನು ಸೂಚಿಸುತ್ತವೆ. ಉಳಿದ ಆರ್ಯಜನರ ನಾಮಧೇಯ ವಿಶ್. ಈ ಮೂರು ಹೆಸರುಗಳು ಆರ್ಯ ವರ್ಗವನ್ನು ಪೂರೈಸುತ್ತವೆ. ಆರ್ಯರು ಮೂರು ವರ್ಣಗಳ ಜನರು ಎಂಬ ವಾಕ್ಯವನ್ನು ಸಂಸ್ಕೃತ ಗ್ರಂಥಗಳಲ್ಲಿ ಕಾಣುತ್ತೇವೆ. ಬ್ರಾಹ್ಮಣರು ಬ್ರಹ್ಮನಿಂದ ಜನಿಸಿದರು ಎಂಬ ನಂಬಿಕೆಯೂ ಇದೆ. ಬ್ರಹ್ಮದಿಂದ ಬ್ರಾಹ್ಮಣ: ಕ್ಷತ್ರದಿಂದ ಕ್ಷತ್ರಿಯ: ವಿಶ್ ನಿಂದ ವೈಶ್ಯ ಹುಟ್ಟಿದೆ ಮತ್ತು ಇವು ಸಂಸ್ಕೃತ ವ್ಯಾಖ್ಯಾನಗಳು ಎಂಬುದು ಗಮನಾರ್ಹ.

ನಾಲ್ಕು ವರ್ಣಗಳಲ್ಲಿ ಬ್ರಾಹ್ಮಣನು ಪ್ರಭುವು. ಸಂಸ್ಕಾರ, ನಿಯಮ, ಪ್ರಕೃತಿ ವಿಶೇಷಗಳು ಹೆಚ್ಚುಗಾರಿಕೆಗಳು. ಇದರ ತೀರ್ಮಾನವು ಕ್ಷಣಿಕವಲ್ಲ ಎಂದು ಮನು ಹೇಳುತ್ತಾನೆ.

ಪಡೆಯಲ್ಬಾರದು ಮುನ್ನನಂತಭವದೊಳ್ ಮಾನುಷ್ಯಮಂ ಮತ್ತೆಯುಂ ಪಡೆಯಲ್ಬರ್ಕುಮೆ ವಿಪ್ರಜಾತಿಯನದಂ ಪೆತ್ತುಂ ಮುನೀಂದ್ರತ್ವಮಂಪಡೆಯಲ್ಬರ್ಕುಮೆ ಮತ್ತಮಾರ್ಗೆ ಪಡೆಯಲ್ ದೇವತ್ವಮಂ ನೋಡದಂ ಪಡೆದಾನಿಂತಿರೆ ಶಾಪದಿಂದಕಟ ತಿರ್ಯಗ್ಜಾತಿಯೊಳ್ ಬಿದ್ದೆನೇ.................... (ಕರ್ಣಾಟಕ ಕಾದಂಬರಿ ೧೦-೧೫) ಮೊದಲು ಅನೇಕ ಜನ್ಮಗಳಲ್ಲಿ ಮನುಷ್ಯ ಜನ್ಮವನ್ನು ಪಡೆಯುವದು ಬಹಳ ಕಷ್ಟ. ಮತ್ತೆ ಅದರಲ್ಲೂ ಬ್ರಾಹ್ಮಣ ಜಾತಿಯನ್ನು ಪಡೆಯಲು ಸಾಧ್ಯವೆ? ಒಂದು ವೇಳೆ ಬ್ರಾಹ್ಮಣತೆಯನ್ನು ಪಡೆದರೂ ಮುನೀಂದ್ರನಾಗಿ ಹುಟ್ಟಲು ಸಾಧ್ಯವೇ? ಮತ್ತೆ ಅದರಲ್ಲೂ ದೇವತ್ವವನ್ನು ಪಡೆಯಲು ಯಾರಿಗೆ ತಾನೇ ಸಾಧ್ಯವಾದೀತು? ಹೀಗಿರಲು ನಾನು ಆ ದೇವತ್ವವನ್ನು ಪಡೆದಿದ್ದರೂ, ಅಯ್ಯೋ, ಶಾಪದಿಂದ ಹೀಗೆ ತಿರ್ಯಗ್ಜಾತಿಯಲ್ಲಿ ಬಿದ್ದುಬಿಟ್ಟೆನಲ್ಲ! ಎಂದು ಕರ್ಣಾಟಕ ಕಾದಂಬರಿಯಲ್ಲಿ ಬರುತ್ತದೆ. ಬ್ರಾಹ್ಮಣಜಾತಿಯ ಶ್ರೇಷ್ಠತೆಯನ್ನು ಇಲ್ಲಿ ಹೇಳಲಾಗಿದೆ.

ಬ್ರಹ್ಮಹತ್ಯದೋಷಕ್ಕೆ ಮನು ಮತ್ತು ಯಾಜ್ಞವಲ್ಕ್ಯರು ಹನ್ನೆರಡು ವರ್ಷ ವ್ರತವಾಚರಿಸ ಬೇಕೆಂದು ಹೇಳುತ್ತಾರೆ. ಅನುದ್ದೇಶಪೂರ್ವಕ ನರಹತ್ಯೆ ಮಾಡಿದವನು ಕಾಡಿನಲ್ಲಿ ಗುಡಿಸಲನ್ನು ಕಟ್ಟಿಕೊಂಡು ಭಿಕ್ಷೆ ಬೇಡಿಕೊಂಡು ಮೃತನ ತಲೆಬುರುಡೆಯನ್ನು ಲಾಂಛನವನ್ನಾಗಿಸಿಕೊಂಡು ಇರಬೇಕಾಗುತ್ತದೆ.

(ಬ್ರಾಹ್ಮಣ) ಜ್ಞಾನೋಪಾಸಕನು, ಧರ್ಮದ ಪ್ರತ್ಯಕ್ಷ ರೂಪವು. ಆತ್ಮಜ್ಞಾನವೇ ಪ್ರಮುಖವು. ಮೋಕ್ಷವೇ ಆತ್ಮಜ್ಞಾನವು-ಗಮ್ಯವು ಎನ್ನುವುದು ಮನು ಅಭಿಪ್ರಾಯ.ಈ ನಿಲುವು ಒಂದು ರೀತಿಯ ವ್ಯಾಖ್ಯಾನಗಳು ಮಾತ್ರ.

ಬ್ರಾಹ್ಮಣವು ವ್ಯಕ್ತಿಯ ಆಧ್ಯಾತ್ಮಿಕ ಬೆಳವಣಿಗೆಯ ಒಂದು ಹಂತವನ್ನು ಪ್ರತಿನಿಧಿಸುತ್ತದೆ.

ಎಂಬುದು ಲೇಖಕನ ನಿಲುವು. ಅದು ಎಲ್ಲಾ ಪಾಪಗಳ ವಿಸರ್ಜನೆ, ಅದು ಕುಂದ ಪುಷ್ಪ ಹಾಗೂ ಚಂದ್ರನಂತೆ ಪ್ರಕಾಶಮಾನವಾದುದು. (ಕುಂದೇಂದು ಧವಳ ಹಿ ಬ್ರಾಹ್ಮಂತ್ವಂ), ಧಾರ್ಮಿಕ ಸಂಕಲ್ಪ (ವ್ರತ) ಮತ್ತು ಸಂಯಮಗಳ ಪಾಲನೆಯಿಂದ ಅದನ್ನು ಗಳಿಸಬಹುದು. ಯಾರು ಸ್ವಾರ್ಥ, ಅಹಂಕಾರ, ಮಮಕಾರ, ದುರಾಸೆ ಮತ್ತು ಕಾಮಗಳಿಂದ ದೂರವಿರುತ್ತಾನೋ ಅವನು ಬ್ರಾಹ್ಮಣ. ಮೇಲಿನ ಗುಣಗಳನ್ನು ಹೊಂದಿಲ್ಲದವನು ಚಾಂಡಾಲನೆನಿಸುತ್ತಾನೆ.

ಅಶ್ವಘೋಷನ ವಜ್ರ ಸೂಚಿಯಲ್ಲಿ ಇವುಗಳಿಗೆ ಮುಖ್ಯ ಪ್ರತಿಕ್ರಿಯೆಯಿದೆ:

ದೇಹವು ಬ್ರಾಹ್ಮಣನಾದರೆ ಬ್ರಾಹ್ಮಣನ ಶರೀರವನ್ನು ಸುಡುವ ಅಗ್ನಿಯೂ (ಪಾವಕ = ಶುದ್ಧೀಕರಿಸುವ ದೇವತೆ) ಪಾಪಿಯಾಗುತ್ತಾನೆ. ಬ್ರಾಹ್ಮಣ ಹತ್ಯೆ ನಿಷಿದ್ಧವೆಂಬುದಕ್ಕೆ ಈ ಪ್ರತಿಕ್ರಿಯೆ ಬಂದಿದೆ.

ಬ್ರಾಹ್ಮಣರು ತಮ್ಮ ಸಂಬಂಧಿಗಳಾದ ಬ್ರಾಹ್ಮಣರ ಶವಗಳನ್ನು ಚಿತೆಯಲ್ಲಿ ಸುಟ್ಟರೆ ಬ್ರಾಹ್ಮಣ ಹತ್ಯೆಯ ಪಾತಕವನ್ನು ಮಾಡಿದಂತಾಗುತ್ತದೆ. ಬ್ರಾಹ್ಮಣರ ಸಂಪರ್ಕಕ್ಕೆ ಬಂದ ಕ್ಷತ್ರಿಯರು, ವೈಶ್ಯರು ಮತ್ತು ಶೂದ್ರರೂ ಸಹ ಬ್ರಾಹ್ಮಣರಾಗುತ್ತಾರೆ. ಆದರೆ ಎಂದೂ ಹಾಗೆ ಆಗಿಲ್ಲ.

ಬ್ರಾಹ್ಮಣನ ದೇಹವನ್ನು ನಾಶಗೊಳಿಸಿದ ಮೇಲೆ ಪ್ರಾರ್ಥನೆ, ಪೂಜೆ, ಅಧ್ಯಯನ, ಬೋಧನೆ, ದಾನ ಮತ್ತು ಅದರ ಫಲಗಳೂ ನಾಶವಾಗಬೇಕಾಗುತ್ತದೆ. ಆದರೆ ಅದನ್ನು ನೀವು ಒಪ್ಪುವುದಿಲ್ಲ. ಆದ್ದರಿಂದ ದೇಹದಿಂದ ಒಬ್ಬನು ಬ್ರಾಹ್ಮಣನಾಗುವುದಿಲ್ಲ ಎಂದು ನಮ್ಮ ಗ್ರಹಿಕೆ. ಬ್ರಾಹ್ಮಣಿಕೆ ಮತ್ತು ದೇಹದ ನಡುವಣ ಚರ್ಚೆಯು ಇಲ್ಲಿ ಮುಖ್ಯ.

ಜ್ಞಾನದಿಂದ ಒಬ್ಬನು ಬ್ರಾಹ್ಮಣನಾಗುವುದಿಲ್ಲ. ಏಕೆಂದರೆ ಎಷ್ಟೇ ಜ್ಞಾನವಿದ್ದರೂ ಅದಕ್ಕೆ ಬೆಲೆಯಿಲ್ಲ. ಇದ್ದಿದ್ದರೆ ಜ್ಞಾನಿಗಳಾದ ಶೂದ್ರರೆಲ್ಲರೂ ಬ್ರಾಹ್ಮಣರಾಗುತ್ತಿದ್ದರು. ಕೆಲವು ವೇಳೆ ವೇದ, ವ್ಯಾಕರಣ, ಮೀಮಾಂಸ, ಸಾಂಖ್ಯಾ, ವೈಶೇಷಿಕ, ಜ್ಯೋತಿಷ ಇತ್ಯಾದಿಗಳ ಮೇಲೆ ಶೂದ್ರರು ಪಾಂಡಿತ್ಯ ಸಾಧಿಸಿರುವುದನ್ನು ನೋಡಬಹುದು. ಆದ್ದರಿಂದ ಜ್ಞಾನವೂ ಸಹ ಬ್ರಾಹ್ಮಣತ್ವಕ್ಕೆ ಕಾರಣವಾಗುವುದಿಲ್ಲ.

ಒಳ್ಳೆಯ ನಡತೆಯಿಂದಲೂ ಬ್ರಾಹ್ಮಣನಾಗಲು ಸಾಧ್ಯವಿಲ್ಲ. ಹಾಗಿದ್ದರೆ ಒಳ್ಳೆಯ ನಡತೆಯ ಶೂದ್ರರೆಲ್ಲರೂ ಬ್ರಾಹ್ಮಣರಾಗುತ್ತಿದ್ದರು. ಅನೇಕ ನಟರು, ಭಟ (ಸೈನಿಕ)ರು, ಕೈವರ್ತರು (ಮೀನುಗಾರರು), ಭಂಡ (ವಿದೂಷಕ) ಇತ್ಯಾದಿಗಳು ಒಳ್ಳೆಯ ನಡತೆಯವರಾಗಿದ್ದರೂ ಅವರು ಬ್ರಾಹ್ಮಣರಾಗಿಲ್ಲದಿರುವುದನ್ನು ನಾವು ನೋಡುತ್ತೇವೆ. ಆದ್ದರಿಂದ ತನ್ನ ಸದ್ಗುಣಗಳಿಂದ ಒಬ್ಬನು ಬ್ರಾಹ್ಮಣನಾಗಲಾರ. ಇಲ್ಲಿ 'ಜನ್ಮನಾ ಜಾಯತೇ ಜಂತು: ಕರ್ಮಣಾ ಜಾಯತೇ ದ್ವಿಜಃ ಮಾತನ್ನು ನೆನಪಿಸಿಕೊಳ್ಳಬಹುದು.

ತನ್ನ ವೃತ್ತಿಯಿಂದಲೂ ಒಬ್ಬನು ಬ್ರಾಹ್ಮಣನಾಗಲಾರ. ಕ್ಷತ್ರಿಯ, ವೈಶ್ಯ, ಶೂದ್ರರು ಪ್ರಾರ್ಥನೆ, ಅಧ್ಯಯನ, ಮಂತ್ರ ಪಠನ, ಬೋಧನೆ, ದಾನ ಇತ್ಯಾದಿಗಳಿಂದ ಕೂಡಿದ್ದರೂ ಅವರನ್ನು ನೀವು ಬ್ರಾಹ್ಮಣರೆಂದು ಒಪ್ಪುವುದಿಲ್ಲ. ಆದ್ದರಿಂದ ವೃತ್ತಿಯಿಂದಲೂ ಬ್ರಾಹ್ಮಣತ್ವ

ಸಾಧ್ಯವಿಲ್ಲ. ಇಲ್ಲಿ ವೃತ್ತಿ ಮತ್ತು ಬ್ರಾಹ್ಮಣತ್ವಕ್ಕಿರುವ ಸಂಬಂಧವನ್ನು ಹೇಳಲಾಗಿದೆ.

ವೇದಪಾರಂಗತನಾಗುವುದರಿಂದ ಒಬ್ಬನು ಬ್ರಾಹ್ಮಣನಾಗುವುದಿಲ್ಲ. ರಾವಣ ಹೆಸರಿನ ಒಬ್ಬ ಋಗ್, ಯಜುರ್. ಸಾಮ ಮತ್ತು ಅಥರ್ವ ವೇದಗಳ ಮೇಲೆ ಪ್ರಭುತ್ವಗಳಿಸಿದ್ದ. ರಾಕ್ಷಸರ ಪ್ರತಿಯೊಂದು ಮನೆಯಲ್ಲೂ ವೇದಾನುಷ್ಠಾನ ನಡೆದಿತ್ತು. ಆದರೆ ಅವರನ್ನು ಬ್ರಾಹ್ಮಣರೆಂದು ಅಂಗೀಕರಿಸಿರಲಿಲ್ಲ. ಆದ್ದರಿಂದ ವೇದ ಪಾಂಡಿತ್ಯದಿಂದಲೂ ಒಬ್ಬನು ಬ್ರಾಹ್ಮಣನಾಗಲಾರ ಎಂದು ನಾವು ತಿಳಿಯುತ್ತೇವೆ. ಶಾಸ್ತ್ರಗಳ ಜ್ಞಾನದಿಂದ, ವಿವಿಧ ಸಂಸ್ಕಾರಗಳಿಂದ, ಕುಲದಿಂದ ವೇದ ಪಠನದಿಂದ ಮತ್ತು ಯಾವುದೇ ವೃತ್ತಿ (ಕರ್ಮ)ಯಿಂದ ಬ್ರಾಹ್ಮಣತ್ವ ಪ್ರಾಪ್ತಿಯಾಗುವುದಿಲ್ಲ. ಬ್ರಾಹ್ಮಣತ್ವವು ಆಧ್ಯಾತ್ಮದ ಬೆಳವಣಿಗೆಯಲ್ಲಿ ಒಂದು ಹಂತವನ್ನು ಪ್ರತಿನಿಧಿಸುತ್ತದೆ. ಅದು ಎಲ್ಲ ಪಾಪಗಳ ನಿರ್ಮೂಲ ಹಾಗೂ ಕುಂದ ಪುಷ್ಪ ಮತ್ತು ಚಂದ್ರನ ಧವಳಕಾಂತಿಯಂತೆ ಶ್ವೇತವೂ ಆಗಿದೆ.

*ವಿವರಗಳಿಗೆ ನೋಡಿ: ಬಿ.ವಿ.ವೀರಭದ್ರಪ್ಪ ೨೦೦೭*

*ಅಶ್ವಘೋಷನ ವಜ್ರಸೂಚಿ ಪುಟ. ೭, ೮, ೧೨, ೫, ೧೫, ೧೬, ೧೭*

*ಯುಗಯಾತ್ರೀ ಭಾರತೀಯ ಸಂಸ್ಕೃತಿ ಸಂಪುಟ. ೨ ೧೯೭೧ ಪುಟ. ೨೩೯, ೨೪೬*

*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೧೦-೩, ೧-೯೮*

*ದಿ. ನಾಗೇಶ ರಂಗೋ ಕುಲಕರ್ಣಿ ೨೦೦೭ ಯಾಜ್ಞವಲ್ಕ್ಯ ಸ್ಮೃತಿ ಉಪೋದ್ಘಾತ ಪ್ರಕರಣ - ೧೦.*

**೪೧೫. ಧರ್ಮ**

*ಎಲ್ಲಾ* ***ಧರ್ಮ****ದ ತಿರುಳಂ ಕೇಳ್ವುದು; ಕೇಳ್ದ ತೆಱನಂ ಲೇಸಾಗವಧರಿಪುದು : ತನಗೆ*

*ಪ್ರತಿಕೂಲಮಪ್ಪುದ ಪೆಱರ್ಗೆ ಮಾಡಲಾಗದು (ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ, ಶ್ಲೋಕ ೩೭)*

ಎಲ್ಲಾ ಧರ್ಮದ ತಿರುಳನ್ನು ಕೇಳುವುದು, ಕೇಳಿದ ರೀತಿಯಲ್ಲಿ ಆಚರಣೆಗೆ ತರುವುದು. ತನಗೆ ಪ್ರತಿಕೂಲವಾದುದನ್ನು ಬೇರೆಯವರಿಗೂ ಮಾಡಬಾರದು. ಇದು ಪಂಚತಂತ್ರ ನಿಲುವು ಕೂಡಾ ಹೌದು. ಈ ಮಾತುಗಳು ಎಲ್ಲಾ ಧರ್ಮಗಳು ಅಂತಿಮವಾಗಿ ಒಂದೇ ತತ್ವವನ್ನು ಹೇಳುತ್ತವೆಯೆಂದು ಸೂಚಿಸುತ್ತದೆ. ಎಲ್ಲಾ ಧರ್ಮಗಳ ಅಂತಿಮವಾದ ನಿಲುವು ಧರ್ಮದ ಆಚರಣೆ ಮತ್ತು ಹೆರವರಿಗೆ ಹಿಂಸೆಯನ್ನು ನೀಡದಿರುವುದು. ಯಾವ ಮನುಷ್ಯನಿಗೂ ಕೇಡು ಬಗೆಯುವುದು ಬೇಡವೆಂಬುದು ಧರ್ಮಗಳ ಸಾರಸರ್ವಸ್ವ. ಮಾರ್ಗಂದಪ್ಪಿದ ಕುರುಡರನಱದ ಬಟ್ಟೆಗುಯ್ವರೆ ಪಿರಿಯರ್

(ಶಾಂತಿಪುರಾಣ ೪-೧೦೧)

ಕುರುಡರಂತೆ ಹಾದಿತಪ್ಪಿದರವನ್ನು ಧರ್ಮ ಮಾರ್ಗಕ್ಕೆ ಯಾರು ತಂದು ನಿಲ್ಲಿಸುವರೋ ಅವರೇ ಹಿರಿಯರು.

ಶರಣಾಗತಜನಭರಣಂ

ಪರತರಧರ್ಮಂ ತಪಸ್ವಿಗಳ್ಗದಱಿಂದಂ ॥
ಪೊರೆಯೆನ್ನನಿಲ್ಲದೊಡೆ ಹಾ
ಸ್ಮರಶೀತಮಯೂಖರಿಂದೆ ಹತನಾದಪ್ಪೆಂ ॥ (ಕರ್ಣಾಟಕ ಕಾದಂಬರಿ, ೮–೪೦)

ತಪಸ್ವಿಗಳಿಗೆ ಶರಣಾಗತರನ್ನು ಕಾಪಾಡುವುದೇ ಬಹಳ ಶ್ರೇಷ್ಠವಾದ ಧರ್ಮ.

"ಎಂದೆನ್ನಂ ಪಿಡಿದುಕೊಂಡು ದಕ್ಷಿಣಾಭಿಮುಖನಾಗಿ ಪೋಪುದುಮೆನಗಿಂ ಪ್ರಾಣಪರಿತ್ಯಾಗಮೇ ಪ್ರತಿಕ್ರಿಯೆಯೆಂದು ನಿಶ್ಚೈಸುವಿನಮನ್ನೆಗಂ ಮುಂದೆ ಜೀರ್ಣವಾಗುರಾಗ್ರಥನವ್ಯಗ್ರರುಂಗೃಹೀತಕಾಂಡಕೋದಂಡರುಂ ಉದ್ದಂಡಪಾಣಿಗಳುಂ ಬಹುವಿಧಗ್ರಾಹಕ ವಿಹಂಗಮವಾಚಾಲನಾಕುಶಲರುಂ ಕೌಲೇಯಕಮುಕ್ತಿಸಂಚಾರಣ ಚತುರರುಮಪ್ಪ ಚಂಡಾಲಶಿಶುಗಳ್ ದೆಸೆದೆಸೆಗೆಪರಿದು ಬೇಂಟೆಯಾಡುತ್ತಮಿರೆ ಮತ್ತಮಾನಂತೆ ಪೋಗೆವೋಗೆ ಪೊಲಸಿನ ಗಂಧಮಂ ಪೊತ್ತು... (ಎಂದು ಹೇಳಿ ನನ್ನನ್ನು ಹಿಡಿದುಕೊಂಡು ದಕ್ಷಿಣಾಭಿಮುಖವಾಗಿ ಹೋಗುತ್ತಿದ್ದನು. ನನಗಿನ್ನು ಪ್ರಾಣತ್ಯಾಗವನ್ನು ಬಿಟ್ಟು ಬೇರೆ ದಾರಿಯೇ ಇಲ್ಲವೆಂದು ನಿಶ್ಚಯಿಸಿದೆನು. ಅಷ್ಟರಲ್ಲಿ ಮುಂದೆ ಹರಿದು ಹೋದ ಬೇಲಿಗಳನ್ನು ಹೊಲಿಯುವುದರಲ್ಲಿ ತತ್ಪರರಾದ, ಬಿಲ್ಲು ಬಾಣಗಳನ್ನು ಹಿಡಿದುಕೊಂಡಿರುವ, ದೊಣ್ಣೆಯನ್ನು ಹಿಡಿದುಕೊಂಡಿರುವ, ಹಕ್ಕಿಗಳನ್ನು ಹಿಡಿಯಲು ಸಹಾಯ ಮಾಡುವ ನಾನಾ ಬಗೆಯ ಹಕ್ಕಿಗಳಿಗೆ ಶಿಕ್ಷಣ ಕೊಡುವುದರಲ್ಲಿ ಕುಶಲರಾದ, ನಾಯಿಗಳನ್ನು ಛೂ ಬಿಡುವುದರಲ್ಲೂ, ಓಡಾಡಿಸುವುದರಲ್ಲೂ ಸಮರ್ಥರಾದ ಚಂಡಾಲ ಬಾಲಕರು ದಿಕ್ಕುದಿಕ್ಕುಗಳಲ್ಲೂ ಓಡಾಡಿ ಬೇಟೆಯಾಡುತ್ತಿರಲು, ಬಹಳ ದುರ್ನಾತವನ್ನುಂಟುಮಾಡಿ ಸ್ವಲ್ಪಮಟ್ಟಿಗೆ ಮುತ್ತಿಕೊಂಡು) ಕಂಟು ಹೊಗೆಯಿಂದ ಆವೃತವಾದ ಬೇಡರ ಬೀಡನ್ನು ಕಂಡೆನು. ಅಲ್ಲೋ ಮೂಳೆಗಳೇ ಮನೆಯ ಕಸ. ಪ್ರಾಣಿಗಳ ಕೊಬ್ಬೇ ತುಪ್ಪ, ನಾಯಿಗಳೇ ಪರಿವಾರ, ಮದ್ಯವೇ ಭೋಗವಸ್ತು, ರಕ್ತವೇ ದೇವರ ಪೂಜೆಯ ಸಾಮಗ್ರಿ, ಪ್ರಾಣಿ ಬಲಿಯೇ ಧರ್ಮ ! ಎನಿಸಿದ್ದಿತು. ಇಲ್ಲಿ ಬೇಡರ ಧರ್ಮದ ಕುರಿತು ಹೇಳಲಾಗಿದೆ.

ಧರ್ಮ– ಜೈನಮತದಲ್ಲಿ ಧರ್ಮವೆಂದರೆ ಪುಣ್ಯಕಾರ್ಯವೆಂಬುದೊಂದೇ ಅಲ್ಲ. ಇಂಗ್ಲಿಷ್ ಭಾಷೆಯಲ್ಲಿ "ಪ್ರಿನ್ಸಿಪಲ್ ಆಫ್ ಮೋಶನ್" ಎಂದರೆ ಯಾವ ಅರ್ಥವೋ ಆ ಅರ್ಥದಲ್ಲಿಯೂ ಜೈನರು ಧರ್ಮ ಶಬ್ದವನ್ನು ಉಪಯೋಗಿಸುವರು. ಜಲವು ಗತಿಶೀಲವಾದ ಮೀನಿಗೆ, ಅದರ ಗಮನಕ್ಕೆ ಸಹಾಯಕವಾಗಿರುವಂತೆ ಧರ್ಮವು ಪುದ್ಗಲಗಳಿಗೂ, ಜೀವಕ್ಕೂ ಗತಿವಿಷಯದಲ್ಲಿ ಸಹಾಯಕವಾಗಿರುವುದು. ಧರ್ಮವು ಅಮೂರ್ತವೂ, ನಿಷ್ಕ್ರಿಯವೂ, ನಿತ್ಯವೂ ಆಗಿರುವುದು. ಇದು ಜೀವ, ಪುದ್ಗಲ ಇವುಗಳ ಗತಿಗೆ ಸಹಾಯಕವಷ್ಟೇ ಹೊರತು ಅವುಗಳ ಗತಿಯನ್ನುಂಟುಮಾಡುವುದಲ್ಲ.

ಧರ್ಮದ ವ್ಯಾಖ್ಯಾನ ಜೈನಧರ್ಮದಲ್ಲಿ ಈ ರೀತಿಯಲ್ಲಿದೆ:

ಧರ್ಮ – ಇದು ಅಮೂರ್ತವೂ (ರೂಪ, ರಸ, ಗಂಧ, ಸ್ಪರ್ಶರಹಿತ) ಶಬ್ದರಹಿತವೂ, ನಿಷ್ಕ್ರಿಯವೂ, ತಿಲದಲ್ಲಿ ತೈಲದಂತೆ ಸಂಪೂರ್ಣ ಲೋಕಾಕಾಶ ವ್ಯಾಪಕವೂ

ಆಗಿದೆ. ತನ್ನ ಅಗುರುಲಘು ಗುಣದ ಹಾನಿವೃದ್ಧಿಗಳಿಂದ ಯಾವಾಗಲೂ ಪರಿಣಾಮವನ್ನು ಹೊಂದುವುದಾದರೂ ನಿತ್ಯವಾಗಿದೆ. ಇದು ಗಮನ ಕ್ರಿಯೆಯಿಂದ ಕೂಡಿದ ಜೀವ ಪುದ್ಗಲಗಳ ಗತಿಗೆ ಸಹಾಯಕವಾಗಿದೆ. ನೀರು ಗತಿಶೀಲವಾದ ಮೀನಿನ ಗತಿಗೆ ಸಹಾಯ ಮಾಡುವುದು; ನೀರು ಮೀನಿನೊಡನೆ ಗಮನ ಮಾಡದೆ, ಮೀನನ್ನು ಗಮನದಲ್ಲಿ ತೊಡಗಿಸದೆ, ತಾನಾಗಿ ಗಮನ ಮಾಡುವ ಮೀನಿಗೆ ಉದಾಸೀನವಾಗಿ ಸಹಾಯವನ್ನು ಮಾತ್ರ ಮಾಡುವಂತೆ ಧರ್ಮ ದ್ರವ್ಯವೂ ಜೀವಪುದ್ಗಲಗಳ ಗತಿಗೆ ಸಹಾಯ ಮಾಡುವುದು. ಧರ್ಮದ್ರವ್ಯವು ತನ್ನ ಅಸ್ತಿತ್ವದಿಂದಲೇ ಉಂಟಾದುದರಿಂದ ಬೇರೆ ಏತರಿಂದಲೂ ಉಂಟಾಗಿಲ್ಲ. ಎಂದರೆ ಅದು ಅನ್ಯ ದ್ರವ್ಯದ ಕಾರ್ಯವಲ್ಲ; ಸ್ವಯಂ ಸಿದ್ಧವಾಗಿದೆ. ಧರ್ಮದ್ರವ್ಯದ ಪ್ರದೇಶಗಳು ಆಕಾಶದ್ರವ್ಯಗಳ ಪ್ರದೇಶಗಳಲ್ಲಿ ಸೇರಿಕೊಂಡಿವೆ.

ಕೆಲವರು 'ಧರ್ಮ' ಎಂದರೆ 'ಮತ' (Religion) ಎಂಬ ಅರ್ಥವನ್ನೆಸಗುತ್ತಾರೆ. 'ಸ್ವಧರ್ಮ-ಪರಧರ್ಮ'ಗಳೆಂದರೆ ಕ್ರಮವಾಗಿ 'ತಾನು ಹುಟ್ಟಿದ ವಂಶಾನುಕ್ರಮವಾಗಿ ಅನುಸರಿಸಿ ಬಂದ ಮತ'ವೆಂದು, ತದ್ವಿರುದ್ಧವಾದ ಮತವೆಂದು ಅರ್ಥವೆಸಗುತ್ತಾರೆ. ಹೀಗೆ ಅರ್ಥವೆಸಗುವಲ್ಲಿ "ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ" ಎಂಬ ಗೀತೋಕ್ತಿಯನ್ನು ಆಧಾರವಾಗಿ ಹೇಳುವುದೂ ಉಂಟು. ಆದರೆ, ಹೀಗೆಲ್ಲ ಕಲಿತುಬಂದ ಆಧಾರವು ಕಲೆತು ಬರಬೇಕಾದ ಪುರುಷಾರ್ಥಧರ್ಮದ ಲಕ್ಷಣವಲ್ಲ ಎಂಬುದನ್ನು ಮರೆಯಬಾರದು. ಈ 'ಧರ್ಮ' ಅಥವಾ 'ಮತ' ಎಂಬುದು ವ್ಯಾಪಕವಾದ ಪುರುಷಾರ್ಥ ಧರ್ಮದ ಒಂದು ವ್ಯಾಪ್ಯವಾದ ಅಂಗವೆನ್ನಿಸಬಹುದಲ್ಲದೆ ಅದೇ ಇದಾಗದು. ಅದು ಸಮುದ್ರವಾದರೆ ಇದು ಅದರೊಳಗಿನ ಒಂದೊಂದು ಕಾಲುವೆಗಳ ನೀರು. ಕಾಲುವೆಗಳದು ಸಿಹಿನೀರಾಗಿಯೂ, ಕಡಲಿನದು ಉಪ್ಪುನೀರಾಗಿಯೂ ಹಲವರಿಗೆ ತೋರುತ್ತಿದೆ ಎಂಬುದು ಸರಿಯೇ. ಆದರೆ ಈ ಸೀನೀರ ಕಾಲುವೆಗಳು ಹುಟ್ಟಿ ಹೊದ್ದಲಿಕ್ಕೆ ಆ ಉಪ್ಪು ನೀರಿನ ಕಡಲೇ ಆಧಾರವೆಂಬುದನ್ನು ಅಂಧಶ್ರದ್ಧೆಯರಿಯದಿದ್ದರೂ ಪರಾಂಬರಿಕೆ ಕಾಣದಿರಲಾರದು. ಕೆಲಮಂದಿಗಳ ಕೂಟದ ಅಂತರಂಗವನ್ನು ಅದೊಂದು ರೀತಿಯಲ್ಲಿ ಪಳಗಿಸುವುದರಿಂದ ಆ ಮಟ್ಟಿಗೆ ಆಯಾ ಮತಗಳೂ ಧರ್ಮಗಳೆನ್ನಿಸಬಹುದು. ಆದರೆ, ಇತರ ಮತಗಳೆಂದರೆ 'ಮತವಲ್ಲ-ಕುಮತ'ವೆಂದು ಸಾರುವ ಟೀಕೆ ಟಿಪ್ಪಣಿಗಳ ಹೊಯ್ಯಾಲೆಯದು ಮತವಾಗದು, ಧರ್ಮವಾಗದು. ಮಿತ್ರರೊಬ್ಬರು 'ಕ್ರೈಸ್ತಮತ-ಮಹಮ್ಮದೀಯಮತ-ಹಿಂದೂಮತ'ಗಳೆ ಮೊದಲಾದ ಮತಗಳೆಂದರೆ ಸಂಪೂರ್ಣ ಭಿನ್ನಗಳೆಂದೂ-ಭಿನ್ನಭಿನ್ನ ಮತಗಳು ಐಕ್ಯವಾಗಿ ಇತರ ಸಮಾಜಕ್ಕೆ ತೊಡಕೇನೂ ಆಗದಂತೆ ನಡೆಯುವುದೂ ಸ್ವಮತ ಭ್ರಷ್ಟನಾಗುವುದೂ ಒಂದೇ ಎಂದೂ ಹೇಳಿದರು. ಆಗ ಮೇಲೆ ಉದಾಹರಿಸಿದ ಭಗವದ್ಗೀತಾ ವಾಕ್ಯವನ್ನು ಅವರೂ ಉದಾಹರಿಸಿದರು. ಅವರು ತಮ್ಮ ವಿಶ್ವಾಸಾನುಸಾರವಾಗಿಯೇ ಹಾಗೆಂದುದೆಂಬಲ್ಲಿ ಸಂಶಯವಿಲ್ಲ. ಆದರೆ ಅಂಥ 'ವಿಶ್ವಾಸ'ಕ್ಕೆ 'ಶ್ವಾಸವಿಲ್ಲದಿರುವಿಕೆ' ಎಂಬ ಅರ್ಥವೆಸಗುವುದೇ ತಕ್ಕುದೆಂದು ನನ್ನ ಭಾವನೆ. ಮತಭೇದಗಳೆಂದರೆ ಹಿಂದೆಂದ ಜಲಭೇದಗಳಂತಿರಬೇಕಲ್ಲದೆ, ಕಲ್ಲು-

ನೀರುಗಳಂತೆ ತೀರ ಅಸಮಾನಗಳಾಗಿರಲಾರವು. ಹಾಗೆ ಬೆರೆಯಲಾರದಂತಿರುವ ಎರಡರೊಳಗೊಂದು ಮತವಲ್ಲ ಎಂದು ಮುಳಿಯ ತಿಮ್ಮಪ್ಪಯ್ಯನವರು ಹೇಳಿದ್ದಾರೆ.

ಧರ್ಮವೆಂದರೆ ಒಂದಾನೊಂದು ವಸ್ತುವನ್ನು ಆ ವಸ್ತುವನ್ನಾಗಿ ಧರಿಸಿರುವ ಎಂದರೆ ಉಳಿಸಿರುವ ಗುಣ ಅಥವಾ ಲಕ್ಷಣ ("ಧೃಣ್" ಧಾರಣೇ) ಅದೇ ಅದರ ತತ್ವ ತತ್+ತ್ವ) ಅದರ ಅದಾಗಿರುವಿಕೆ.

*ವಿವರಗಳಿಗೆ ನೋಡಿ: ಮಹಾದೇವ ಪ್ರಭಾಕರ ಪೂಜಾರ ೧೯೭೬ ಜೈನಧರ್ಮ ಪರಿಭಾಷೆ ಪುಟ. ೧, ೭೧*
*ಮುಳಿಯ ತಿಮ್ಮಪ್ಪಯ್ಯ ೧೯೮೮ ಶ್ರದ್ಧಾಂಜಲಿ ಸಂಪುಟ ೨ ಪುಟ. ೭೩೬–೩೭*
*ಡಿ. ವಿ. ಜಿ. ೧೯೭೫ ಋತ, ಸತ್ಯ, ಧರ್ಮ ಪುಟ. ೯.*

**೪೧೬. ಧರ್ಮ–ಕಾವ್ಯಧರ್ಮ**

*ಇದುವೆ ಸುಕವಿಪ್ರಮೋದ*
*ಪ್ರದಮಿದುವೆ ಸಮಸ್ತಭವ್ಯಲೋಕಪ್ರಮುದ ।*
*ಪ್ರದಮೆನೆ ನೆಗಳ್ದಾದಿಪುರಾ*
*ಣದೊಳಱವುದು* ***ಕಾವ್ಯಧರ್ಮಮಂ ಧರ್ಮಮುಮಂ*** *॥*

*(ಆದಿಪುರಾಣ ೧–೩೮)*

ಧರ್ಮ–ಕಾವ್ಯಧರ್ಮದ ಕುರಿತು ಹೇಳುವಾಗ ಕಾವ್ಯಧರ್ಮ ಮತ್ತು ಧರ್ಮ ಎರಡನ್ನೂ ಮೇಳವಿಸಿ ಕಾವ್ಯವನ್ನು ಬರೆದಿದ್ದೇನೆ ಎಂದು ಪಂಪ ಹೇಳಿದ್ದಾನೆ. ಧರ್ಮವೇ ಕಾವ್ಯಧರ್ಮವಾಗಿ ಹರಿಯುವುದು.

ದಯೆ, ದಮ, ದಾನ, ತಪ, ಶೀಲವೆಂಬ ಈ ಐದು ಧರ್ಮಾಂಗಗಳಿಂದಲೇ ಜೈನಯತಿಗಳ ದಶಧರ್ಮಗಳು ಹತ್ತಾಗಿ ವಿಸ್ತರಿಸಿರಬೇಕು. ಆಗಮಿಕಗಳಾದ ಆ ದಶಧರ್ಮಗಳೊಡನೆ ಸಾಹಿತ್ಯಸಮ್ಮತಗಳೆನ್ನಿಸುವ ದಶಗುಣಗಳು ಹಾಸುಹೊಕ್ಕಾದುದ ರಿಂದಲೇ ಪಂಪನು 'ಆದಿಪುರಾಣದೊಳಱ'ವುದು ಕಾವ್ಯ ಧರ್ಮಮಂ ಧರ್ಮಮುಮಂ' ಎಂದು ಹೇಳಿರಬೇಕು.

ಪಂಪನ ಪ್ರಕಾರ ಧರ್ಮ ಮತ್ತು ಕಾವ್ಯಧರ್ಮ ಬೇರೆಯಲ್ಲ ಎಂಬುದು ವಿಶ್ಲೇಷಣೆಗೆ ಯೋಗ್ಯವಾಗಿದೆ.

**೪೧೭. ಧರ್ಮಧ್ಯಾನ**

"ಅಜ್ಞಾವಿಚಯಮಪಾಯ ವಿಚಯಂ ವಿಪಾಕ ವಿಚಯಂ. ಸಂಸ್ಥಾನವಿಚಯಮೆಂಬ ನಾಲ್ಕು **ಧರ್ಮ ಧ್ಯಾನ**ಮಂಧ್ಯಾನಿ ಸುತ್ತುಂ" (ಆದಿಪುರಾಣ ೧೦–೧೪.ವ) ಧರ್ಮಧ್ಯಾನ ಎಂದರೆ ಧರ್ಮವಿಷಯಗಳನ್ನು ಸದಾ ನೆನೆಯುತ್ತಿರುವುದು.

ಇಲ್ಲಿ ಧರ್ಮ ಮತ್ತು ಧ್ಯಾನ ಎಂಬ ಎರಡು ಶಬ್ದಗಳೂ ಕೂಡಿವೆ. ಧರ್ಮವೆಂದರೆ – ಜೀವ ಪುದ್ಗಲಗಳ ಗತಿಗೆ ಸಾಧನವಾದ ದ್ರವ್ಯ ಅಥವಾ ಶ್ರೇಯಸಾಧನವಾದ

ಆಳಿಸಿಕೊಳ್ಳುವ ಸಂಬಂಧವೇ ಮುಖ್ಯ. ಈ ರೀತಿಯ ಸಂಬಂಧಗಳಲ್ಲಿ ಜಮೀನುದಾರಿ ಪದ್ಧತಿಯ ವ್ಯಾಖ್ಯಾನಗಳೂ ಮುಖ್ಯವಾಗಿವೆ.

ಜೈನ ಧರ್ಮದ ಒಂದು ಕವಲು ದಿಗಂಬರ ಸಂಪ್ರದಾಯ. ಈ ಸಂಪ್ರದಾಯ ದಲ್ಲಿಯಂತೂ ಸ್ತ್ರೀಯರಿಗೆ ನೇರ ಮೋಕ್ಷವಿಲ್ಲ. ಮರುಭವದಲ್ಲಿ ಸ್ತ್ರೀಯು ಪುರುಷನಾಗಿ ಹುಟ್ಟಿದರೆ ಮಾತ್ರ ಮೋಕ್ಷ ಸಾಧ್ಯ. ಬಂಡವಾಳಶಾಹಿ ವ್ಯವಸ್ಥೆಯೆಂಬುದು ತುಂಬಾ ಆಕರ್ಷಕವಾಗಿ ವ್ಯವಸ್ಥೆಯೊಂದು ಈ ರೀತಿಯ ಪದಗಳನ್ನು ಬಳಸುವುದಕ್ಕೂ ವ್ಯತ್ಯಾಸವಿದೆ. ಆದರೆ 'ಸ್ವಾತಂತ್ರ್ಯ' ಮತ್ತು 'ಸಮಾನತೆ'ಯ ಕಲ್ಪನೆಯ ವೈಧಿಕ ಧರ್ಮಕ್ಕೆ ಪ್ರತಿಯಾಗಿ ಬಂದ ಜೈನ ಧರ್ಮದ ಉದಾರತೆಯು ಸೂಚನೆಗಳನ್ನು ಕೊಡುವುದರಿಂದ ಮಾತ್ರ ಮೇಲಿನ ಮಾತನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಧರ್ಮದ ಎದುರಿನಲ್ಲಿ ನಿಜವಾದ ಸ್ವಾತಂತ್ರ್ಯವಿಲ್ಲ.

ನಮ್ಮ ಈಗಿನ ಮುಖ್ಯವಾದ ಪರಿಭಾಷೆಯು ಜೈನಸಾಹಿತ್ಯದಲ್ಲಿ ಬೇರೊಂದು ಆಯಾಮದಲ್ಲಿ ಕೆಲಸ ಮಾಡಿದೆ. ಹೀಗಾಗಿ ಜೈನ ಸಾಹಿತ್ಯವು ಹೇಳುವಂತೆ ಧರ್ಮವು ಲಿಂಗಭೇದವನ್ನು, ವರ್ಗವನ್ನೂ ಜಾತಿಯನ್ನೂ ಹಿಡಿತದಲ್ಲಿ ಇಡುವ ಪರಿಭಾಷೆಯಾಯಿತು. ಜೈನ ಸಾಹಿತ್ಯವು ಪ್ರಭುವಿನ ಸೇವೆ ಮತ್ತು ಧರ್ಮದ ಸೇವೆಯನ್ನು ದ್ವಂದ್ವ ಮುಖೇನ ಎತ್ತಿಹಿಡಿದಿದೆ. ಜೈನಸಾಹಿತ್ಯದ ಪ್ರಕಾರ ಇವೆರಡೂ ಭಿನ್ನವಾದುದು. ಆದರೂ ಪರೋಕ್ಷವಾಗಿ ಇವೆರಡಕ್ಕೆ ಸಂಬಂಧವಿದೆ. ಇಲ್ಲದಿದ್ದರೆ ಕರ್ನಾಟಕದಲ್ಲಿ ಜೈನ ಧರ್ಮವೆಂಬುದಕ್ಕೆ ರಾಜಾಶ್ರಯ ದೊರೆಯುತ್ತಿರಲಿಲ್ಲ. ದಂಡ, ಧರ್ಮ, ಭಕ್ತಿ, ಧಾರ್ಮಿಕ ಪ್ರತಿಭಟನೆ ಸ್ವ – ಹಿಂಸೆ (ಸಲ್ಲೇಖನ ಇತ್ಯಾದಿ) ಜೈನ ಸಾಹಿತ್ಯದಲ್ಲಿ ನಿರ್ದಿಷ್ಟ ಅರ್ಥವಂತಿಕೆಯನ್ನು ಪಡೆದುಕೊಂಡಿದೆ. ಎದುರಿನ ಜ್ಞಾತಜಗತ್ತಿನಲ್ಲಿ ಪ್ರಭುತ್ವವಿದೆ. ಈ ಪ್ರಭುತ್ವವು ರಾಜ್ಯಲಕ್ಷ್ಮಿಗಾಗಿ ಹಂಬಲಿಸುತ್ತದೆ. ಆದರೆ ಇದಕ್ಕಿಂತ ಹೊರತಾದ 'ಅಜ್ಞಾನ'ವಾದುದಕ್ಕೆ ಜೈನ ಸಾಹಿತ್ಯದ ಪ್ರಕಾರ ಮಹತ್ವವಿದೆ.

ಜೈನಕವಿಗಳು ಹಾಡಿಹೊಗಳುವ ಅತ್ತಿಮಬ್ಬೆಯನ್ನು ನೋಡಿ. ಈ ಅತ್ತಿಮಬ್ಬೆಯು ಸಾಹಿತ್ಯ ಪ್ರಚಾರವನ್ನು ಮಾಡಿದಳು ಎಂದು ಕವಿ ರನ್ನ ವಿವರಿಸುತ್ತಾನೆ. ಅಕ್ಷರಸ್ಥ ಪರಂಪರೆಯೊಂದು ಸಾಹಿತ್ಯವನ್ನು ನೋಡಿದ ಕ್ರಮಕ್ಕೂ ಇದು ಒಳ್ಳೆಯ ಉದಾಹರಣೆ ಯಾಗಬಲ್ಲದು. ಸಾಹಿತ್ಯ ಮತ್ತು ಪ್ರಭುತ್ವ ಎರಡೂ ಪರಸ್ಪರ ಒಪ್ಪಂದ ಮಾಡಿಕೊಂಡ ಹಾಗೆಯೇ ಸಾಹಿತ್ಯವನ್ನು ಸಾಂಸ್ಥಿಕ ಪರಿಭಾಷೆಯಾಗಿ ಕೂಡ ನೋಡಿಕೊಂಡುದರ ದೆಸೆಯಿಂದ ಸಾಹಿತ್ಯಕ್ಕೆ 'ಕೌಶಲ'ವೆಂದು ಅರ್ಥ ಬಂದುಬಿಟ್ಟಿತು. ಹತ್ತನೆಯ ಶತಮಾನದ ಕಾವ್ಯದ ಪಾಲಿನ ಈ ವಿಚಾರ ಸತ್ಯ.

"ಜೈನ ಸಾಹಿತ್ಯ"ವನ್ನು ಬೇರೊಂದು ರೀತಿಯಲ್ಲಿ, ಬೇರೊಂದು ಕೋನದಲ್ಲಿ ಓದಬಹುದು.

೪೧೯. ಧಾರ್ಮಿಕ ನಂಬಿಕೆಗಳು

ಇವುಗಳನ್ನು ಅತಿಮಾನುಷ ನಂಬಿಕೆಗಳು ಎಂದೂ ಕರೆಯಬಹುದು. ಮಾನವನ ಬದುಕಿನಲ್ಲಿ ಭಯ ಮತ್ತು ಅಸ್ಥಿರ ಭಾವನೆಗಳು ಅತಿಮಾನುಷ ನಂಬಿಕೆಗಳಿಗೆ ಮೂಲ. ಕೆಲವು ನಂಬಿಕೆಗಳು ಧಾರ್ಮಿಕ ಸ್ವರೂಪದವು ಆಗಿದ್ದರೂ, ಆ ನಂಬಿಕೆಗಳಲ್ಲಿನ ಕ್ರಿಯೆ ಲೌಕಿಕವಾಗಿರುತ್ತದೆ.

ಡರಕೆಮನ್ ಪ್ರಕಾರ, ನಂಬಿಕೆಗಳು ಅಭಿಪ್ರಾಯ ಮತ್ತು ಅಭಿವ್ಯಕ್ತಿಯ ರೂಪದಲ್ಲಿರುತ್ತವೆ. ಆದರೆ, ಆಚರಣೆಗಳು ಕ್ರಿಯಾತ್ಮಕ ರೂಪದಲ್ಲಿರುತ್ತವೆ. ಧಾರ್ಮಿಕ ಅನ್ನಬಹುದಾದ ನಂಬಿಕೆಗಳು ವಾಸ್ತವ ಮತ್ತು ಆದರ್ಶದ ಮಧ್ಯೆ ಇರುತ್ತವೆ. ಅಷ್ಟೇ ಅಲ್ಲ ಈ ರೀತಿಯ ನಂಬಿಕೆಗಳಲ್ಲಿ ಗುಂಪಿನ ಆಲೋಚನೆಯೂ ಇರುತ್ತವೆ.

ಈ ಹಿನ್ನೆಲೆಯಲ್ಲಿ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಬರುವ ಧಾರ್ಮಿಕ ಆಶಯಗಳುಳ್ಳ ನಂಬಿಕೆಗಳಲ್ಲಿ 'ಏಕಸೂತ್ರವಿರುವುದೂ ಕಂಡು ಬರುತ್ತದೆ. ಪುತ್ರ ಸಂತಾನಾಭಿಲಾಷಿಯಾದ ಹೆಣ್ಣು ಜೈನಧರ್ಮದವಳಾಗಿದ್ದರೆ ಯಕ್ಷಿಯನ್ನು ಪೂಜಿಸುವುದು – ಕನ್ನಡ ಕಾವ್ಯಗಳಲ್ಲಿ ಚಿತ್ರಿತವಾಗಿದೆ. ಇದರ ಮೂಲ ತತ್ವ ಒಂದೇ ಆಗಿರುತ್ತದೆ.

ಧಾರ್ಮಿಕ ಆಶಯವುಳ್ಳ ನಂಬಿಕೆಗಳಲ್ಲಿ ಮುಖ್ಯವಾಗಿ ಈ ಕೆಳಗಿನ ಕಾರಣಗಳು ಅಡಕವಾಗಿರುತ್ತವೆ : ೧. ಸಂತಾನ ಲಾಭ, ೨. ಸತ್ತನಂತರವೂ ಮೋಹ ಸಂಬಂಧ ಏರ್ಪಡುತ್ತದೆ, ೩. ಕೆಟ್ಟ ಜನ್ಮವನ್ನು ಹೋಗಲಾಡಿಸಲು ತಪವಾಚರಣೆ, ೪. ಮದುವೆಯ ಸಂದರ್ಭದ ಸಪ್ತಪದಿ – ಇತ್ಯಾದಿ.

ವೈಯಕ್ತಿಕ ನಂಬಿಕೆಗಳು ಹುಟ್ಟುವಾಗ ವ್ಯಕ್ತಿಯೊಬ್ಬನಿಗೆ ಮಾತ್ರ ಸಂಬಂಧಿಸಿದರೂ ಕ್ರಮೇಣ ಒಂದು ಸಮಾಜ ಅದನ್ನು ಅನುಕರಿಸಿದಾಗ ಅದು ಸಾಂಸ್ಕೃತಿಕ ನಂಬಿಕೆಯಲ್ಲಿಯೇ ಸೇರಿ ಹೋಗುತ್ತದೆ. ಇದೇ ರೀತಿಯಲ್ಲಿ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಹೆಣ್ಣಿನ ನಂಬಿಕೆಗಳ ಕುರಿತಂತೆ ಈ ಕೆಳಗಿನಂತೆ ಮುಖ್ಯ ವಿಭಾಗ ಮಾಡಬಹುದಾಗಿದೆ: ೧. ಧಾರ್ಮಿಕ ಆಶಯಗಳುಳ್ಳ ಸ್ತ್ರೀ ಸಂಬಂಧ ನಂಬಿಕೆಗಳು, ೨. ಸಾಮಾಜಿಕ ಆಶಯವುಳ್ಳ ಸ್ತ್ರೀ ಸಂಬಂಧ ನಂಬಿಕೆಗಳು, ೩. ಕುಟುಂಬ ಕೇಂದ್ರಿತ ಸ್ತ್ರೀ ನಂಬಿಕೆಗಳು ೪. ಇತ್ಯಾದಿ.

ಸಾಹಿತ್ಯ ಕೃತಿಯೂ ಕೂಡಾ ಸಾಂಸ್ಕೃತಿಕ ಸಂಗತಿಗಳನ್ನು ಒಳಗೊಳ್ಳುವುದರಿಂದ ಮೇಲೆ ಸೂಚಿಸಿರುವಂತೆಯೇ ನಂಬಿಕೆಗಳನ್ನು ಅಧ್ಯಯನ ಮಾಡಬಹುದು.

*ವಿವರಗಳಿಗೆ ನೋಡಿ: Durkheim .E. 1970 Suicide P: 43-44*

೪೨೦. ಧ್ರುವ ಪ್ರಯೋಗ

*ಗಾನರ ಸಾಮೃತಮೆಸೆಗುಂ **ಧ್ರುವಪ್ರಯೋಗಾ**ನುಗತಂ...............*

*(ಅಜಿತತೀರ್ಥಂಕರ ಪುರಾಣ ತಿಲಕ ೫–೧೦)*

ಇಲ್ಲಿ ರನ್ನನು ಗಾನಸುಧೆಯ ಕುರಿತು ಹೇಳುತ್ತಾನೆ. ಧ್ರುವ ಪ್ರಯೋಗವನ್ನುವುದು ಧ್ರುವರಾಗದ (ಧ್ರುಮೆ)ರಾಗವನ್ನು ಸೂಚಿಸುತ್ತದೆ. ಸಂಗೀತದ ಒಂದು ರಾಗದ ಹೆಸರಿದು.

ಯಾವುದೇ ರಾಗವನ್ನು ಶುದ್ಧ ಮತ್ತು ಸ್ವತಂತ್ರ ಮತ್ತು ರಾಗದ ಛಾಯೆ ಸ್ಥಿರವಾಗಿಟ್ಟು ಹಾಡಬೇಕಾದರೆ ರಾಗದ ಚಲನೆಯಲ್ಲಿ ಯಾವ ಸ್ವರವನ್ನು ದೀರ್ಘವಾಗಿ ಉಚ್ಚರಿಸಬೇಕು. ಯಾವ ಸ್ವರಗಳನ್ನು ಮಿತವಾಗಿ ಉಪಯೋಗಿಸಬೇಕು.: ಯಾವ ರಾಗವನ್ನು ವಕ್ರವಾಗಿಸಬೇಕು. ಯಾವ ಸ್ವರವನ್ನು ಮೀಂಟಿ ರೂಪದಲ್ಲಿ ಬಳಸಬೇಕು ಎಂಬುದು ಸಂಗೀತಕಾರನಿಗೆ ತಿಳಿದಿರುತ್ತದೆ. ಜೊತೆಗೆ ರಾಗದ ಜೊತೆಗೆ ಸ್ವರಸಂಗತಿಗಳಾವುವು ಎಂದೂ ಅರ್ಥಮಾಡಿಕೊಳ್ಳಬೇಕು.

*ವಿವರಗಳಿಗೆ ನೋಡಿ: ದೇಸಿರಾಗ.*

## ನ

### ೪೨೧. ನಂಬಿಕೆ

*ಮೊದಲೊಳುತ್ಕೃಷ್ಟಜಾತಿಯೊಳ್ ಪುಟ್ಟಿ ತಿರ್ಯಗ್ಜಾತಿಗೆ ಬೀೞ್ದಂದೇ ನಿನ್ನ ವಿವೇಕಮಱೆದಂತುಟೆವಲಮಿನ್ನಿನಗೆ ಜಾತಿಗೆ ತಕ್ಕಂತಾಹಾರಮನಾಚರಿಸೆ ದೋಷಮಿಲ್ಲ ಮಲ್ಲದೆಯುಂ ಭಕ್ಷ್ಯಾಭಕ್ಷ್ಯನಿಯಮಿತರ್ಗಾಪದ್ವಿಷಯದೊಳ್ ಪ್ರಾಣಸಂಧಾರಣಾರ್ಥ ಮಭೋಜ್ಯೋಪಭೋಗಮುಂಟೀಗಳೆತ್ತಾನುಮಾನಿತ್ತುದನೊಲ್ಲೆನೆಂಬೆಯಪ್ಪೊಡೆ ಚಂಡಾಲಭಾಂಡದಿಂ ಭೂಮಿಪತಿತಮಾದಂಬುವುಂ ಪವಿತ್ರಮೆಂಬುದುಂಟದಱೆಂ ಕ್ಷುತ್ಪಿಪಾಸೆಗಳಿನಾಯಾಸಂಬಡದೆ ಮುನಿಜನೋಚಿತಮಪ್ಪ ನವಫಲಂಗಳನುಪಭೋಗಿಸೆಂದು ನುಡಿಯೆ....... (ಕರ್ಣಾಟಕ ಕಾದಂಬರಿ, ೧೦-೪೭ವ.)*

ಚಂಡಾಲರ ಪಾತ್ರೆಯಿಂದ ಭೂಮಿಗೆ ಬಿದ್ದ ನೀರೂ ಪವಿತ್ರವಾದುದೇ ಎಂದು ಹೇಳುತ್ತಾರೆ. ಇದು ಕರ್ಣಾಟಕ ಕಾದಂಬರಿಯಲ್ಲಿ ಉಕ್ತವಾದ ಮಾತು.

'ಪಂಪಭಾರತ'ದಲ್ಲಿಯ ಮಾದ್ರಿಯು, 'ಸತ್ತನಂತರವೂ ಜೀವನವಿದೆ'. ಸ್ವರ್ಗದಲ್ಲಿದ್ದು ಗಂಡನ ಇಷ್ಟಾರ್ಥವನ್ನು ಸಲ್ಲಿಸುತ್ತೇನೆ ಎಂದು ಭಾವಿಸುತ್ತಾಳೆ. (೨-೨೨) ಸತ್ತ ನಂತರವೂ ಜೀವನವಿದೆ ಎಂಬ ನಂಬಿಕೆಯು ಕೆಲವು ಜನಾಂಗಗಳಲ್ಲಿ ಇತ್ತು. ಮೊದಲಿಗೆ ಇಂತಹ ನಂಬಿಕೆಯು ಇದ್ದಿರಲಾರದು. ವಿಧವೆಯೂ ತನ್ನ ಮೈದುನನಿಂದ ಮಗನನ್ನು ಪಡೆಯುವ ಅವಕಾಶವು ತಪ್ಪಿದ ನಂತರ, ಈ ನಂಬಿಕೆಯನ್ನು ಹೆಚ್ಚು ಪ್ರಚಲಿತಗೊಳಿಸಲೆತ್ನಿಸಿರುವುದು ಕಂಡುಬರುತ್ತದೆ. ಇದರ ಪರಿಣಾಮವಾಗಿ ಸಹಗಮನ ಪದ್ಧತಿಯಾಗಿ ಈ ನಂಬಿಕೆಯು ದೃಢಗೊಂಡಿದೆ. ಇದು ಮುಖ್ಯವಾಗಿ ಭಾವನಾ ವಾದಕ್ಕೆ ಸಂಬಂಧಿಸಿದ ವಿಚಾರ. ಈ ರೀತಿಯ ಸಂದರ್ಭಗಳು ಅನೇಕ ಕೃತಿಗಳಲ್ಲಿ ಬರುತ್ತವೆ. ನಾಗಚಂದ್ರನ 'ರಾಮಚಂದ್ರ ಚರಿತಪುರಾಣ'ದಲ್ಲಿ ಹೆಣ್ಣಿಗೆ ಬಲಗಣ್ಣು ಅದುರಿದರೆ ಕೆಟ್ಟದಾಗುತ್ತದೆ. ಅದಕ್ಕಾಗಿ ಜಿನಾಭಿಷೇಕವನ್ನು, ಜಿನಪೂಜೆಯನ್ನು ಮಾಡಿದರೆ ಪರಿಹಾರವಾಗುತ್ತದೆ ಎಂದು ಬರುತ್ತದೆ. (೧೫-೬೫ವ)

ಧನುಸ್ಸನ್ನು ಎತ್ತಬೇಕಾದರೆ ಅದಕ್ಕೆ ಮೂರು ಸಲ ಸುತ್ತು ಬಂದು ಅದಕ್ಕೆ ನಮಸ್ಕರಿಸಿ ಬಿಲ್ಲೆತ್ತಬೇಕು ಎಂಬ ನಂಬಿಕೆಯು ಪಂಪ ಭಾರತದಲ್ಲಿ ವ್ಯಕ್ತವಾಗಿದೆ. (ಪಂಪ ಭಾರತ ೩–೫೮ವ)

*ವಿವರಗಳಿಗೆ ನೋಡಿ: ನಂಜಮ್ಮಣ್ಣಿ ಎಂ. ೧೯೭೧ ಸಾಮಾಜಿಕ ಮಾನವಶಾಸ್ತ್ರ ಪುಟ. ೧೪೩*

*Rajeshwari Sharma 1980 Vedic Mythology (Vol-I) P. 90*

### ೪೨೨. ನಯ

*ಎಱಕುಮೀಯದಿರ್ಕುಮೆ* ***ನಯ****ಮಂ................ (ಶಾಂತಿಪುರಾಣ ೪–೭೬)*

*ಎರಗಿದರೆ ಸಾಕು ನಯವು ತನ್ನಿಂದ ತಾನಾಗಿಯೇ ಬರುತ್ತದೆ. ನಯವಿನಯವು ಸಂಸ್ಕಾರದಿಂದ ಬರುವಂತಹುದು. ಹಿರಿಯರಿಗೆ; ದೇವರಿಗೆ; ಎರಗುವುದು ಎಂದರೆ ನಮಸ್ಕರಿಸುವುದು ಎಂದರ್ಥ. ಅದು ನಯ ವಿನಯದಿಂದ ಬರುತ್ತದೆ.*

*ನಯಮನೆ ಒಂದೆ ಮಾೞ್ಪುದು ಚದುರಂ.............. (ಶಾಂತಿಪುರಾಣ ೨–೫೯)*

ನಯವೊಂದೇ ಚತುರನ ಮಾರ್ಗ.

ಭಾರತೀಯ ದರ್ಶನಗಳಲ್ಲಿ ನಯವಿಚಾರವು ಜೈನದರ್ಶನದ ವಿಶಿಷ್ಟತ್ವವು. ಪದಾರ್ಥದ ಸಂಪೂರ್ಣತೆಯ ಕಡೆಗೆ ಅಷ್ಟೊಂದು ಲಕ್ಷ್ಯವನ್ನಿಡದೆ ಪ್ರಮಾತೃವಿನ ಅಭಿಪ್ರಾಯಕ್ಕೆ ವಿಷಯವಾದ ಯಾವುದೊಂದೇ ಭಾವವನ್ನು ಅನುಲಕ್ಷಿಸಿ ವಿಷಯವನ್ನು ನಿರೂಪಿಸುವುದು ನಯವೆನಿಸುವುದು. ಅದು ದ್ರವ್ಯಾರ್ಥಿಕ ನಯವೆಂದೂ ಪರ್ಯಾಯಾರ್ಥಿಕ ನಯವೆಂದೂ ದ್ವಿವಿಧವಾಗಿದೆ. ದ್ರವ್ಯಾರ್ಥಿಕ ನಯಕ್ಕೆ ದ್ರವ್ಯವೂ, ಪರ್ಯಾಯಾರ್ಥಿಕ ನಯಕ್ಕೆ ಪರ್ಯಾಯವೂ ವಿಷಯಗಳು. ದ್ರವ್ಯಾರ್ಥಿಕನಯವು ನೈಗಮ, ಸಂಗ್ರಹ, ವ್ಯವಹಾರ ಎಂದು ಮೂರು ಬಗೆಯಾಗಿದೆ; ಮತ್ತು ಪರ್ಯಾಯಾರ್ಥಿಕ ನಯ ಋಜುಸೂತ್ರ, ಶಬ್ದ, ಸಮಭಿರೂಢ, ಏವಂಭೂತ ಎಂದು ನಾಲ್ಕು ಬಗೆಯಾಗಿದೆ.

ಯಥಾರ್ಥ ಜ್ಞಾನ ಅಥವಾ ಸಮ್ಯಕ್ ಜ್ಞಾನದಿಂದ ತಿಳಿದಿರುವ ವಸ್ತುವಿನ ಒಂದು ಅಂಶವನ್ನು ಯಾವ ಜ್ಞಾನವು ತಿಳಿಯುತ್ತದೆ ಅದನ್ನು ನಯವೆಂದು ಹೇಳುತ್ತಾರೆ. 'ಪ್ರವಚನ ಸಾರ' ಗ್ರಂಥದಲ್ಲಿ ೪೭ ನಯಗಳನ್ನು ಹೇಳಲಾಗಿದೆ. 'ತತ್ವಾರ್ಥಸೂತ್ರ'ದಲ್ಲಿ ೭ ನಯಗಳನ್ನು ಹೇಳಿದ್ದಾರೆ. ದ್ರವ್ಯಾರ್ಥಿಕ ಮತ್ತು ಪಯಾರ್ಯಾರ್ಥಿಕ ಅಥವಾ ನಿಶ್ಚಯನಯ ಮತ್ತು ವ್ಯವಹಾರನಯವೆಂದೂ ನಯದಲ್ಲಿ ೨ ಭೇದಗಳಿವೆ.

ಯಾವ ನಯವು ಆತ್ಮಾಶ್ರಿತವಾದ – ಸ್ವಾಶ್ರಿತವಾದ ಕಥನ ಮಾಡುತ್ತದೆ. ಅದನ್ನು ನಿಶ್ಚಯನಯವೆಂದು ಹೇಳುತ್ತಾರೆ.

ಅ) ಯಾವ ನಯವು ಆತ್ಮನ ಭೂತಾರ್ಥ – ಸತ್ಯಾರ್ಥ ಸ್ವಭಾವದ ಕಥನ ಮಾಡುತ್ತದೆಯೋ ಅದನ್ನು ನಿಶ್ಚಯನಯವೆಂದು ಹೇಳುತ್ತಾರೆ.

ಆ) ಯಾವ ನಯವು ದ್ರವ್ಯದ ಯಾವ ಪರ್ಯಾಯಾವಾಗಿದೆಯೋ ಅದನ್ನು ಸದೇ ದ್ರವ್ಯದ ಪರ್ಯಾಯವೆಂದು ಹೇಳುತ್ತದೆಯೋ ಅದನ್ನು ನಿಶ್ಚಯನಯವೆಂದು

ಹೇಳುತ್ತಾರೆ.

ಇ) ಯಾವ ನಯವು ಸ್ವ-ದ್ರವ್ಯ-ಪರದ್ರವ್ಯಗಳ ಮತ್ತು ಅವುಗಳ ಪರಿಣಾಮಗಳ ಅದರಂತೆ ಕಾರಣ – ಕಾರ್ಯ ಮೊದಲಾದವುಗಳ ಯಥಾವತ್ತಾದ ಕಥನ ಮಾಡುತ್ತದೆಯೋ ಅದನ್ನು ನಿಶ್ಚಯನಯವೆಂದು ಹೇಳುತ್ತಾರೆ.

ನಿಶ್ಚಯನಯದಲ್ಲಿ ನಾಲ್ಕು ಭೇದಗಳಿವೆ.

೧) ಪರಮಶುದ್ಧ ನಿಶ್ಚಯನಯ:- ಹೇಗೆಂದರೆ – ಜೀವವು ಸತ್ತಾ. ಚೈತನ್ಯ ಹಾಗೂ ಜ್ಞಾನ ಮೊದಲಾದ ಶುದ್ಧ ಪ್ರಾಣಗಳಿಂದ ಜೀವಂತವಾಗಿದೆ.

೨) ಶುದ್ಧ ನಿಶ್ಚಯನಯ:- ಸಾಕ್ಷಾತ್ ಶುದ್ಧ ನಿಶ್ಚಯನಯ ಹೇಗೆಂದರೆ – ನಿರುಪಾಧಿ ಸ್ಫಟಿಕ ಮಣಿಯಂತೆ ಆತ್ಮನು ಸಮಸ್ತ ರಾಗಾದಿ ವಿಕಲ್ಪರೂಪದ ಉಪಾಧಿಯಿಂದ ರಹಿತನಾಗಿದ್ದಾನೆ.

೩) ಏಕದೇಶಶುದ್ಧ ನಿಶ್ಚಯನಯ:- ಹೇಗೆಂದರೆ – ಪರಮಧ್ಯಾನದಲ್ಲಿ ಸ್ಥಿರವಿರುವ ಜೀವವನ್ನು ಪರಮಾತ್ಮಸ್ವರೂಪನೆಂದು ತಿಳಿಯುವುದು ಮತ್ತು ಹೇಳುವುದು.

೪) ಅಶುದ್ಧ ನಿಶ್ಚಯನಯ:- ಹೇಗೆಂದರೆ – ಆತ್ಮನು ಸಂಪೂರ್ಣ ಮೋಹ – ರಾಗ – ದ್ವೇಷರೂಪದ ಭಾವಕರ್ಮಗಳ ಕರ್ತೃ ಹಾಗೂ ಭೋಕ್ತೃವಾಗಿದ್ದಾನೆ.

ಯಾವ ನಯವು ಪರಾಶ್ರಿತ ಕಥನ ಮಾಡುತ್ತದೆ ಆ ನಯವನ್ನು ವ್ಯವಹಾರನಯ ವೆಂದು ಹೇಳುತ್ತಾರೆ.

ವ್ಯವಹಾರನಯದ ಇತರ ಅನೇಕ ಪರಿಭಾಷೆಗಳು ಹೀಗಿವೆ.

ಅ) ಯಾವ ನಯವು ಆತ್ಮನ ಅಭೂರ್ಥಸ್ವಭಾವದ ಕಥನ ಮಾಡುತ್ತದೆಯೋ ಅದನ್ನು ವ್ಯವಹಾರನಯವೆಂದು ಹೇಳುತ್ತಾರೆ.

ಬ) ಯಾವ ನಯವು ವಸ್ತುವಿನ ಅಯಥಾರ್ಥ ಸ್ವರೂಪದ ಕಥನವನ್ನು ಮಾಡುತ್ತದೆಯೋ ಅದನ್ನು ವ್ಯವಹಾರ ನಯವೆಂದು ಹೇಳುತ್ತಾರೆ.

ಕ) ಯಾವ ನಯವು ಯಾವುದೇ ಒಂದು ದ್ರವ್ಯದ ಪರ್ಯಾಯವನ್ನು ಅದೇ ದ್ರವ್ಯದ್ದೆಂದು ಹೇಳದೆ ಇನ್ನೊಂದು ದ್ರವ್ಯದ್ದೆಂದು ಹೇಳುತ್ತದೆಯೋ ಆ ನಯವನ್ನು ವ್ಯವಹಾರನಯವೆಂದು ಹೇಳುತ್ತಾರೆ.

ಡ) ಯಾವ ನಯವು ಸ್ವ-ದ್ರವ್ಯ – ಪರದ್ರವ್ಯಗಳನ್ನು ಅವುಗಳ ಅವಸ್ಥೆಗಳನ್ನು ಮತ್ತು ಕಾರಣ – ಕಾರ್ಯ ಮೊದಲಾದವುಗಳನ್ನು ಅಯಥಾರ್ಥವಾಗಿ ಹೇಳುತ್ತದೆಯೋ ಅದನ್ನು ವ್ಯವಹಾರ ನಯವೆಂದು ಹೇಳುತ್ತಾರೆ.

ವ್ಯವಹಾರ ನಯದಲ್ಲಿ ನಾಲ್ಕು ಭೇದಗಳಿವೆ.

೧. ಅನುಪಚರಿತ ಸದ್‌ಭೂತ ವ್ಯವಹಾರನಯ : ಹೇಗೆಂದರೆ – ಕೇವಲ ಜ್ಞಾನಾದಿಗಳು ಜೀವದ ಗುಣಗಳಾಗಿವೆ.

೨. ಉಪಚರಿತ ಸದ್‌ಭೂತ ವ್ಯವಹಾರನಯ : ಹೇಗೆಂದರೆ – ಮತಿ ಜ್ಞಾನಾದಿ ಗುಣಗಳೂ ಜೀವದ ಗುಣಗಳಾಗಿವೆ.

೩. ಅನುಪಚರಿತ ಅಸದ್‌ಭೂತ ವ್ಯವಹಾರನಯ :ಹೇಗೆಂದರೆ –ಶರೀರವು ಜೀವದ್ದಾಗಿದೆ.

೪. ಉಪಚರಿತ ಅಸದ್‌ಭೂತ ಅವ್ಯವಹಾರನಯ : ಹೇಗೆಂದರೆ – ದೇವದತ್ತನ ಧನ.

*ವಿವರಗಳಿಗೆ ನೋಡಿ: ಮಹಾದೇವ ಪ್ರಭಾಕರ ಪೂಜಾರ್ ೧೯೭೬ ಜೈನಧರ್ಮ ಪರಿಭಾಷೆ ಪುಟ. ೯.*
*ಶ್ರೀಮದ್ ಭಗವತ್ಕುಂದಕುಂದಾಚಾರ್ಯ ವಿರಚಿತ ೨೦೦೯ ಪ್ರವಚನಸಾರ*
*ಶ್ರೀ ಎಂ. ಬಿ. ಪಾಟೀಲ ೨೦೧೦ ತತ್ವಾರ್ಥಸೂತ್ರ*

**೪೨೩. ನರಕಗತಿ**

*ವಚನದಿನಾತ್ಮೀಯಪಿತೃಮರಣಮುಮನಾತನ **ನರಕಗತಿ**ಗಮನಮುಮನರಿದು*
*ಕರುಣಾರಸಾರ್ದ್ರಹೃದಯನದಂ........ (ಆದಿಪುರಾಣ)*
*ಪಾಪ ಕರ್ಮಗಳಿಗೆ ನರಕಗತಿಯು ಒದಗುತ್ತದೆಯೆಂದು ಇದರ ಭಾವಾರ್ಥ.*
*ಒರ್ವನೆ ಸುರಗತಿಯೊಳ್ ಸುೞಿ*
*ದೊರ್ವನೆ ನರಗತಿಯೊಳಿೞಿಯೊ ।*
*ಳೊರ್ವನೆ **ನಾರಕಗತಿ**ವೊ*
*ಕ್ಕೊರ್ವನೆ ದೇಹಿಗೆ ಸಹಾಯರೊರ್ವರುಮೊಳರೇ ॥*
*(ಅಜಿತತೀರ್ಥಂಕರ ಪುರಾಣ ತಿಲಕಂ ೬–೫೨)*

ಸುರಗತಿಯಲ್ಲಿ ಸುಳಿದು, ಒಬ್ಬನೆ ನರಕಗತಿಗೆ ಇಳಿದ ತಿರ್ಯಕ್ ಜಂತುವಾಗಿ ಹುಟ್ಟಿ, ನರಕವನ್ನು ಅನುಭವಿಸುವವನಿಗೆ ಯಾವ ರೀತಿಯಲ್ಲಿಯೂ ಸಹಾಯ ಮಾಡುವುದು ಅಸಾಧ್ಯವೆಂಬ ಪರಿಕಲ್ಪನೆಯು ಇಲ್ಲಿದೆ.

ನಿನ್ನುಮಂ ಸ್ತಿಮಿತಸಾಗರಚರ ಧರಣೇಂದ್ರಂ ತೀವ್ರದುಃಖಮನನುಭವಿಸುವುದನರಿದು ಮೋಹದಿಂ ಸಮ್ಯಗ್ದರ್ಶನಮಂ ಕೆಯ್ಕೊಳಿಸಿದನಾನಾರಕಪಟಲಂಗಳೆಂತೆನೆ ಮಂದರದಿಂ ಮೊದಲಿಂ ಕೆಳಗೆ ಲಕ್ಷಂಯೊಜನಾಂತರದೊಳೊಂದೋರೊಂದು ರಜ್ಜು ಪ್ರಮಾಣಾಂತರಿತಂಗಳಕ್ಕುಮವಾವುವೆಂದೊಡೆ ರತ್ನಪ್ರಭೆಯುಂ ಘರ್ಮೆಯುಮೆಂಬ ಪ್ರಥಮ ಭೂಮಿಯುಂ ಶರ್ಕರಾ ಪ್ರಭೆಯುಂ ವಂಶೆಯು ಮೆಂಬೆರಡನೆಯ ಭೂಮಿಯುಂ (ಧೂಮಪ್ರಭೆಯುಂ ಅರಿಷ್ಟೆಯುಮೆಂಬಯ್ದನೆಯ ಭೂಮಿಯುಂ) ತಮಃಪ್ರಭೆಯುಂ ಮಘವಿಯುಮೆಂಬಾರನೆಯ ಭೂಮಿಯುಂ ಮಹಾ ತಮಃಪ್ರಭೆಯು ಮಾಘವಿಯುಮೆಂಬೇೞನೆಯ ಭೂಮಿಯುಮೊಂದೊಂದಕ್ಕೆರಡೆರಡು ಪೆಸರಕ್ಕು....ಈ ಕುರಿತು ಹಂ.ಪ.ನಾ. ಹೀಗೆ ವಿವರಿಸಿದ್ದಾರೆ:

ನೀನು ನರಕದಲ್ಲಿ ಘೋರವಾದ ದುಃಖವನ್ನು ಅನುಭವಿಸುತ್ತಿರುವುದು ತಿಳಿದು ಸ್ತಿಮಿತಸಾಗರನಾಗಿದ್ದ ಧರಣೇಂದ್ರನು ಮೋಹದಿಂದ ಒಂದು ನಿನಗೆ ಸಮ್ಯಗ್ದರ್ಶನವನ್ನು ಒದಗಿಸಿದನು. ಆ ನರಕ ಪಟಲಗಳು ಹೇಗಿವೆಯೆಂದರೆ–ಮಂದರದ ತಳದಿಂದ ಕೆಳಗೆ

ಒಂದು ಲಕ್ಷ ಯೋಜನೆ ದೂರದಲ್ಲಿ ಒಂದೊಂದೂ ಒಂದು ರಜ್ಜು ಪ್ರಮಾಣವಾಗಿ ಏಳು ನರಕ ಭೂಮಿಗಳುಂಟು. ರತ್ನಪ್ರಭೆ ಅಥವಾ ಘರ್ಮೆಯೆಂಬುದು ಮೊದಲನೆಯದು; ಶರ್ಕರಾ ಪ್ರಭೇಯೆಂದೂ ವಂಶೆಯೆಂದೂ ಹೆಸರಾದುದು ಎರಡನೆಯದು; ವಾಲುಕಾಪ್ರಭೆ ಹಾಗೂ ಶೈಲೆ ಎಂಬ ಹೆಸರಿನದು ಮೂರನೆಯದು; ಪಂಕಪ್ರಭೆ ಹಾಗೂ ಆಂಜನೆಯೆಂಬುದು ನಾಲ್ಕನೆಯ ನರಕಭೂಮಿ; ಧೂಮಪ್ರಭೆ ಅಥವಾ ಅರಿಷ್ಟೆಯೆಂಬುದು ಐದನೆಯ ಭೂಮಿ; ತಮಃಪ್ರಭೆಯೆಂದೂ ಮಘವಿಯೆಂದೂ ಹೆಸರಿರುವುದು ಆರನೆಯ ಭೂಮಿ; ಮಹಾತಮಃಪ್ರಭೆ ಹಾಗೂ ಮಾಘವಿ ಎಂದು ಹೆಸರಾದುದು ಏಳನೆಯದು.

(ಶಾಂತಿಪುರಾಣ ೭-೮೪ ವ)

ಜೈನಧರ್ಮದ ಪ್ರಕಾರ ನರಕವು ಒಂದೇ ಅಲ್ಲ. ನರಕಗಳು ಬೇರೆ ಬೇರೆ ಇವೆ. ಏಳು ರೀತಿಯ ನರಕಗಳನ್ನು ಜೈನರು ವಿವರಿಸುತ್ತಾರೆ.

ಅಜಿತ ತೀರ್ಥಂಕರ ಪುರಾಣದ ೧೧ನೆಯ ಆಶ್ವಾಸದಲ್ಲಿ ಬೇರೆ ಬೇರೆ ನರಕಗಳ ವಿವರಣೆ ಹೀಗಿದೆ:

ಈ ಭಾಗದಲ್ಲಿ ನರಕಗಳಿಗೆ ಬೇರೆ ಬೇರೆ ಹೆಸರುಗಳಿವೆ. ಮಂದರಾಚಲದ ಅಧೋಭಾಗದ ಚಿತ್ತೆಯೆಂಬ ನೆಲದಿಂದ ಕೆಳಗೆ ಹದಿನಾರು ಸಾವಿರ ಯೋಜನಾಂತರದಲ್ಲಿ ನಾಗಗಳು ವಾಸ ಮಾಡುತ್ತದೆ. ಅದರ ಕೆಳಗೆ ಸಹಸ್ರ ಯೋಜಾನಾಂತರದಲ್ಲಿ ಅಸುರರಿರುತ್ತಾರೆ. ಅಲ್ಲಿಂದ ಕೆಳಗೆ ಸಹಸ್ರ ಯೋಜನೆಯ ಅಂತರದಲ್ಲಿ ರತ್ನಪ್ರಭೆಯೆಂಬ ಮೊದಲ ನರಕವಿರುವುದು. ರತ್ನ ಪ್ರಭೆಯಿಂದ ನರಕದ ಕೆಳಗೆ ಅಸಂಖ್ಯಾತ ಯೋಜನಾಂತರ ದಲ್ಲಿ ಹಂಸೆಯೆಂಬ ನರಕವಿರುತ್ತದೆ. ಅನಂತರ ವಾಲುಕ ಪ್ರಭೆಯೆಂಬ ನರಕವಿರುವುದು. ಅಲ್ಲಿಂದ ಕೆಳಗೆ ಪಂಕಪ್ರಭೆಯೆಂಬ ನರಕವೂ ಅದರ ಕೆಳಗಡೆ ಧೂಮಪ್ರಭೆಯೆಂಬ ನರಕವೂ ಇರುತ್ತದೆ. ಅದರಿಂದ ಕೆಳಗೆ ತಮ ಪ್ರಭೆಯು, ಅನಂತರ ಕಾಳ ಮಹಾಕಾಳ ರೌರವ ಮಹಾನರಕ ಇರುವುದು. ಇಲ್ಲಿ ನರಕದ ಕಲ್ಪನೆಗಳು ವಿಶಿಷ್ಟವಾಗಿದೆ. ಆದರೆ ಜೈನರಲ್ಲಿ ಬೇರೆ ಬೇರೆ ನರಕಗಳ ಕಲ್ಪನೆಯಿರುವುದು ವಿಶಿಷ್ಟವಾಗಿದೆ. ಅಹಿಂಸಾ ಪರಮೋ ಧರ್ಮ: ಎಂದು ಸಾರುವ ಜೈನಧರ್ಮ ನರಕದ ಬೀಭತ್ಸ ಚಿತ್ರಣಕ್ಕಾಗಿ ಒತ್ತು ನೀಡಿದೆ. ಕೆಲವು ಶಾಸ್ತ್ರಗ್ರಂಥಗಳಲ್ಲಿ ಇಪ್ಪತ್ತೊಂದು ನರಕಗಳಿವೆಯೆಂದು ಹೇಳಿದ್ದಾರೆ:

(ಅ) ತಾಮಿಸ್ರ, ಅಂಧತಾಮಿಸ್ರ, ಮಹಾರೌರವ, ರೌರವ, ಕಾಲಸೂತ್ರ, ಮಹನರಕ, ಸಂಜೀವನ, ಮಹವೀಚಿ, ತಪನ, ಸಂಪ್ರತಾಪನ, ಸಂಘಾತ(ಸಂಹತ), ಸಕಾಲೋಲ, ಕುಡ್ಮಲ, ಪ್ರತಿಮೂರ್ತಿಕ(ಪೂತಿಮೃತ್ತಿಕ), ಲೋಹಶಂಕು, ಋಜೀಷ, ಪಂಥಾನ, ಶಾಲ್ಮಲೀ, ನದೀ, ಅಸಿಪತ್ರವನ, ಲೋಹದಾರುಕ(ಲೋಹದಾರಕ) (ಮನು.೪-೮೮-೯೦). (ಆ) ತಾಮಿಸ್ರ, ಅಂಧತಾಮಿಸ್ರ, ರೌರವ, ಮಹಾರೌರವ, ಕುಂಭೀಪಾಕ, ಕಾಲಸೂತ್ರ, ಅಸಿಪತ್ರವನ, ಸೂಕರಮುಖ, ಅಂಧಕೂಪ, ಕೃಮಿಭೋಜನ, ಸಂದಂಶ, ತಪ್ತೋರ್ಮಿ, ವಜ್ರಕಂಟಕ ಶಾಲ್ಮಲಿ, ವೈತರಣಿ, ಪೂಯೋದ, ಪ್ರಾಣರೋಧ, ವಿಶಸನ, ಲಾಲಾಭಕ್ಷ್ಯ, ಸಾರಮೇಯಾದನ, ಅವೀಚಿ, ಅಯೋರೇತಃಪಾನ (ಭಾಗ. ೫-೨೬-೬). (ಇ)

ತಾಮಿಸ್ರ, ಲೋಹಕುಂಡ, ಮಹಾರೌರವ, ಶಾಲ್ಮಲೀ, ರೌರವ, ಕುಡ್ಮಲ, ಕಾಲಸೂತ್ರಕ, ಪೂತಿಮೃತ್ತಿಕಾ, ಸಂಘಾತ, ಲೋಹಿತೋದ, ಸವಿಷ, ಸಂಪ್ರತಾಪನ, ಮಹಾನಿರಯ, ಕಾಕೋಲ, ಸಂಜೀವನ, ಮಹಾಪದ, ಅವೀಚಿ, ಅಂಧತಾಮಿಸ್ರ ಕುಂಭೀಪಾಕ, ಸಂಪ್ರತಾಪನ, ತಪನ (ಗರುಡ.೩–೬೦–೭). ಮತ್ತೆ ಕೆಲವರು ಇಪ್ಪತ್ತೆಂಟು ನರಕ ಹೇಳಿದ್ದಾರೆ.

(ಆ)+ಕ್ಷಾರಕರ್ದಮ, ರಕ್ಷೋಗಣಭೋಜನ, ಶೂಲ ಪ್ರೋತಾ, ದಂದಶೂಕ, ಅವಟನಿರೋಧನ, (ಅಕ್ಷಿ) ಪರ್ಯಾವರ್ತನ, ಸೂಚೀಮುಖ (ಭಾಗ. ೫–೨೬–೭).

ನರಕದ ಎಂಟು ಭೇದಗಳ ಕುರಿತು ಹೇಳಿದ್ದಾರೆ: ರೌರವ, ಧ್ವಾಂತ, ಶೀತ, ಉಷ್ಣ, ಸಂತಾಪ, ಅಂಬುಜ, ಮಹಾಂಬುಜ, ಕಾಲಸೂತ್ರ; ಮಹಾನರಕದ ಎಂಟು ಭೇದಗಳೂ: ಸೂಚೀಮುಖ, ಕಾಲ, ಖಡ್ಗ, ಕ್ಷುರಧಾರೆ, ಅಂಬರೀಷಕ, ತಪ್ತಾಂಗಾರ, ಮಹಾದಾಹ, ಸಂತಾಪ; ರಾಜನರಕ ಎಂಟು ಭೇದಗಳು: ಲಾಕ್ಷಾಪ್ರಲೇಪ, ಮಾಂಸಾದ, ನಿರುಚ್ಛ್ವಾಸ, ಸನಿಃಶ್ವಾಸ, ಯುಗ್ಮಾದ್ರಿ, ಶಾಲ್ಮಲಿ, ಮೋಹ ಪ್ರದೀಪಕ, ಕ್ಷುತ್ಪಿಪಾಸಕ, ಕ್ರಿಮಿಕುಲ; ರಾಜರಾಜನರಕದ ಎಂಟು ಭೇದಗಳು: ಲೋಹಸ್ತಂಭ, ವಿಣ್ಮೂತ್ರ, ವೈತರಣೀನದಿ, ತಾಮಿಸ್ರ, ಅಂಧತಾಮಿಸ್ರ, ಕುಂಭೀಪಾಕ, ಮಹಾರೌರವ, ಮಹಾಪದಾನುಗವೀಚಿ (ವಿಚಿಂ.೩–೨೯೮, ೨೯೯).

ನರಕದ್ವಾರ ಮೂರು ವಿಧ: ಕಾಮ, ಕ್ರೋಧ, ಲೋಭ (ಗೀತಾ. ೧೬–೨೧). ಕೆಲವರು ನಾಕುವಿಧವೆಂದು ಹೇಳುತ್ತಾರೆ. ಕಾಮ, ಲೋಭ, ಕ್ರೋಧ, ದಂಭ (ಗಣೇಶ ಗೀತಾ. ೧೦–೨೩).

ನರಕದ್ವಾರ–ಐದು ವಿಧವೆಂದು ತಿಳಿಸುತ್ತಾರೆ: ಜೀವಹಿಂಸಾ, ಸುರಾಪಾನ, ಅಗಮ್ಯಾಗಮನ, ಚೌರ್ಯ, ವಿಶ್ವಾಸಘಾತ (ಲಕ್ಷ್ಮೀಪೂಜನ ಮಂತ್ರ–ಸಂ.೭೯).

ಚಾರ್ವಾಕಮತವು ಸ್ವರ್ಗ ಮತ್ತು ನರಕದ ಪರಿಕಲ್ಪನೆಯನ್ನು ನಿರಾಕರಿಸಿರುವುದು ಗಮನಾರ್ಹ.

ಏಳು ನರಕಗಳಲ್ಲಿ ಸೇರಿ ೪೯ ಪಟಲಗಳುಂಟು. ಪಟಲಗಳಿಗೆ ಇಂದ್ರಕ, ಪ್ರಸ್ತಾರ, ಅಂತರ್ಭೂಮಿ ಎಂಬ ಹೆಸರುಗಳೂ ಉಂಟು. ಯಾವ ನರಕಬಿಲಗಳ ಮೇಲ್ಭಾಗವು ಒಂದೇ ಸಮತಲದಲ್ಲಿ ಆಗುವುದೋ ಆ ಬಿಲಗಳು ಒಂದು ಪಟಲದವೆಂದು ಹೇಳುವರು. ಪಟಲವೆಂದರೆ ಅಂತಸ್ತು (ನೆಲೆ) ಎಂದು ಹೇಳಬಹುದು. ಪ್ರತಿಯೊಂದು ನರಕ ಭೂಮಿಯಲ್ಲಿ ಮೇಲೂ ಕೆಳಗೂ ಒಂದೊಂದು ಸಾವಿರ ಯೋಜನ ಬಿಟ್ಟು ನಡುವೆ ಪಟಲಗಳಿರುತ್ತವೆ. ಅವುಗಳಲ್ಲಿ ಇಂದ್ರಕ, ಶ್ರೇಣೀಬದ್ಧ, ಪ್ರಕೀರ್ಣಕ ಎಂಬ ಮೂರು ತರದ ಬಿಲಗಳಿರುತ್ತವೆ. ಇಂದ್ರಕಗಳೆಂಬಿವು ಮಧ್ಯದಲ್ಲಿಯ ಮುಖ್ಯಬಿಲಗಳು. ಶ್ರೇಣೀಬದ್ಧಗಳೆಂಬಿವು ಇಂದ್ರಕಗಳ ಎಂಟೂ ದಿಕ್ಕುಗಳಲ್ಲಿಯೂ ಇರುತ್ತವೆ. ಪ್ರಕೀರ್ಣಕ ಗಳೆಂಬಿವು ಅವುಗಳ ಸುತ್ತಲೂ ನಡು ನಡುವೆ ಪೂವಲಿಗೆದರಿದಂತೆ ನಾನಾ ಪ್ರಕಾರವಾಗಿ ಇರುತ್ತವೆ.

ಮದ್ಯವನ್ನು ಸೇವಿಸುವ, ಮಾಂಸವನ್ನು ತಿನ್ನುವ, ಜೀವಗಳನ್ನು ಕೊಲ್ಲುವ ಮತ್ತು

ಬೇಟೆಯಿಂದ ತೃಪ್ತರಾಗುವ ಮತ್ತು ಕ್ಷಣಿಕ ಸುಖಕ್ಕಾಗಿ ಪಾಪಗಳನ್ನು ಮಾಡುವ ಜೀವಗಳು ನರಕದಲ್ಲಿ ಅನೇಕ ದುಃಖಗಳನ್ನು ಹೊಂದುತ್ತವೆ.

ಲೋಭ, ಕ್ರೋಧ, ಭಯ ಮತ್ತು ಮೋಹಗಳ ಪ್ರಭಾವದಿಂದ ಸುಳ್ಳು ಹೇಳುವವರೂ ಕೂಡ, ನಿರಂತರ ಭಯಾನಕವೂ ಉಗ್ರದುಃಖದಿಂದ ತುಂಬಿದುದೂ ದಾರುಣವೂ ಆದ ನರಕದಲ್ಲಿ ಬೀಳುವರು.

"ನಾಗ-ಸರ್ಪಗಳು ಪಾತಾಳದಲ್ಲಿರುತ್ತವೆ. ಪತ್>ಪಾತ ಅಧಃಪಾತ. ನರಲೋಕದ ಕೆಳಗಿನಲೋಕ : ನರ-ಕ=ನಾರ- ಲೋಕ! ಆದರೆ, ಇದೆಲ್ಲ ಸಾಂಕೇತಿಕ. ಪಾತಾಳ = ಅಧೋಲೋಕ; ಇದು ಕವಿ ನಿರ್ಮಿತ ಶುದ್ಧ ಸಾಂಕೇತಿಕ ಸಂಕಲ್ಪನೆ; (concept). ಈ ವಿಚಾರವು 'ಕಾಲ್ಪನಿಕ' ಎಂದರೆ ತೀರ ನಿರಾಧಾರವಲ್ಲ. ಆದರೆ ದಿಕ್ಕಾಲ-ಪರಿಸರಸ್ಥ ಜೀವನಾನುಭವದಲ್ಲಿ ಇದಕ್ಕೆ ಸ್ಥಾನವಿಲ್ಲ" ಎಂದು ಶಂಬಾ ಅಭಿಪ್ರಾಯ.

*ವಿವರಗಳಿಗೆ ನೋಡಿ: ಲೋಕಾಯತ; ಚಾರ್ವಾಕಮತ*

*ಡಾ. ಟಿ.ವಿ. ವೆಂಕಟಾಚಲಶಾಸ್ತ್ರಿ ೧೯೯೯ ಶ್ರೀವತ್ಸ ನಿಘಂಟು ಪುಟ. ೪೯*

*ಶಂಬಾ ಜೋಶಿ ೧೯೯೯ ಸಂಪುಟ. ೪ ಪುಟ. ೨೬*

*ಮಹದೇವ ಪ್ರಭಾಕರ ಪೂಜಾರ ೧೯೭೬ ಜೈನಧರ್ಮ ಪರಿಭಾಷೆ ಪುಟ. ೪೯.*

**೪೨೪. ನವ ಪುಣ್ಯ**

*ಇದಿರ್ಗೊಳ್ವುದು ಕಾಲ್ಗರ್ಚುವು*
*ದುದಾತ್ತಮಪ್ಪೆಡೆಯೊಳಿರಿಪುದರ್ಚಿಪುದೆಱಗಿ ।*
*ಪುದು ಕರಣ ಶುದ್ಧಿ ವಡೆವುದು*
*ಪದೆದನ್ನಮ ನೀವುದೆಂಬ **ನವಪುಣ್ಯಂ** ॥ (ಆದಿಪುರಾಣ ೪-೯೬)*

ಇದಿರ್ಗೊಳ್ಳುವುದು, ಪಾದ ಪ್ರಕ್ಷಾಳನ, ಶ್ರೇಷ್ಠಸ್ಥಾನದಲ್ಲಿ ಕುಳ್ಳಿರಿಸುವುದು, ಪೂಜಿಸುವುದು, ನಮಸ್ಕರಿಸುವುದು, ತ್ರಿಕರಣ ಶುದ್ಧಿ, ಅನ್ನವೀಯುವುದು ನವಪುಣ್ಯವೆಂದು ಪಂಪನು ವಿವರಿಸುತ್ತಾನೆ.

**೪೨೫. ನಶ್ವರ**

*ಆದಿಪುರಾಣದಲ್ಲಿ ಜೀವನದ ನಶ್ವರತೆಯ ಬಗ್ಗೆ ಈ ಕೆಳಗಿನಂತೆ ಬರುತ್ತದೆ:*
*ದೊರೆಕೊಳೆ ಕಾಲಲಬ್ಧಿ, ಬಗೆದಂತಿರೆ ಕೂಡೆ ಗುರೂಪದೇಮಾ ।*
*ವರಿಸೆ ಜಿನೇಂದ್ರಭಕ್ತಿ, ಪೊಳಪೊಣ್ಮೆ ದಯಾರಸಮಿಂತು ನಾಡೆಯುಂ ॥*
*ಪರಿಕರದಿಂ ಮನಕ್ಕಳವು ಸಾರೆ ಭವಾಬ್ಧಿತಟಂ ಸಮೀಪಮಾ ।*
*ಗಿರೆ ದೊರೆಕೊಂಡ ದೃಷ್ಟಿವಿಭವಂ ಕಳೆಗುಂ ಖಳಕರ್ಮಬಂಧಮಂ॥*
*(ಆದಿಪುರಾಣ ೫-೫೩)*

ಅಲ್ಲಿನವರೆಗೂ, - ಜೀವದ ಅಹಂಕಾರಕ್ಕೆ ಬಲವಾದ ಆಘಾತವಾಗಿ, ವಿನಯದ

ಉದಯವಾಗಿ ಅಧ್ಯಾತ್ಮದ ಬಾಗಿಲು ತೆರೆಯುವ ಸುಮುಹೂರ್ತದವರೆಗೂ-ಜೀವ ಅಹಂಕಾರಪೋಷಕವಾದ ಉಪಪ್ರಯೋಜನಗಳಲ್ಲಿ ತೊಳಲುತ್ತದೆ. ನಶ್ವರವಾದುದನ್ನೇ ಶಾಶ್ವತವೆಂದು ಭ್ರಮಿಸುತ್ತದೆ. ಅಂತಹ ಉಪಪ್ರಯೋಜನಗಳಲ್ಲಿ ತೊಡಗಿದ ಮಹತ್ವಾಕಾಂಕ್ಷಿಯ ಚಿತ್ರವೊಂದನ್ನು ಮಹಾಕವಿ ಪಂಪ ತನ್ನ ಆಗಮಕಾವ್ಯವಾದ ಆದಿಪುರಾಣದ ಕಡೆಯ ಭಾಗದಲ್ಲಿ ಚಿತ್ರಿಸಿದ್ದಾನೆ.

ಕಾಲಲಬ್ಧಿ; ಗುರೂಪದೇಶ; ಜಿನೇಂದ್ರನಲ್ಲಿ ಭಕ್ತಿ; ದಯೆ; ಮನಸ್ಸಿಗೆ ಅರಿವು ಉಂಟಾದಾಗ ಖಳಕರ್ಮ ಬಂಧದಿಂದ ನಿವೃತ್ತಿ ಹೊಂದಬಹುದು. ನಶ್ವರವಾದುದನ್ನು ಶಾಶ್ವತವೆಂದು ನಂಬಬೇಕಾಗಿಲ್ಲ. ಯಾವಾಗ ಭವದ ಹಂಗನ್ನು ತೊರೆಯುತ್ತೇವೆಯೋ ಆಗ ನಿಜವಾಗಿಯೂ ಆಧ್ಯಾತ್ಮವಾದಿಗಳಾಗುತ್ತೇವೆ. ಜೀವನದ ನಶ್ವರತೆಗೆ ಭಾರತೀಯ ಹೆಚ್ಚಿನ ದಾರ್ಶನಿಕರು ಒತ್ತುಕೊಟ್ಟಿದ್ದಾರೆ.

ಜೀವನವು ನಶ್ವರವೆಂದು ತಿಳಿಯುವುದು ಈಶ್ವರೀಯ ವಾದ. ನಶ್ವರ ಎನ್ನುವಲ್ಲಿ ಮತ್ತೊಂದು ಪರಿಕಲ್ಪನೆಯಿದೆ. ಅದು ಸತ್ತ ಅನಂತರದಲ್ಲಿ ಜೀವವು ಸ್ವರ್ಗವನ್ನು ಸೇರುತ್ತದೆ ಎನ್ನುವುದು.

*ವಿವರಗಳಿಗೆ ನೋಡಿ: ಮುಳಿಯ ತಿಮ್ಮಪ್ಪಯ್ಯ ೧೯೮೮ ಶ್ರದ್ಧಾಂಜಲಿ*

**೪೨೬. ನಾಕಲೋಕಚ್ಯುತಿ**

*..................ಪೊಣ್ಮುವ ಭಯಮುಮಂ ಭೋಂಕೆನೆ ಕಂಡು* ***ನಾಕಲೋಕಚ್ಯುತಿ*** *ಯನಾಗಳಱಿದು ಮನದೊಳಳ್ಕಿ ಬೆಳ್ಕನೆವೋಗಿ,*

*(ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೩-೩೮)*

ನಾಕಲೋಕವೆಂದರೆ ಸ್ವರ್ಗ ಲೋಕವೆಂದರ್ಥ. ಯಾರಾದರೂ ಮರಣವಪ್ಪಿದರೆ ನಾವು ಅವರು 'ಅಸ್ತಂಗತರಾದರು' 'ದಿವಂಗತರಾದರು' ಅವರು 'ಸ್ವರ್ಗಲೋಕ' ಸೇರಿದರು ಎಂದು ಬಳಸುತ್ತೇವೆ. ಸ್ವರ್ಗಲೋಕ ಸೇರಿದರೆ ಅವರಿಗೆ ಮರುಜನ್ಮವಿಲ್ಲ. ಆದರೆ ನರಕಕ್ಕೆ ಸೇರಿದರೆ ಮರುಜನ್ಮವಿದೆ. ಯಾಕೆಂದರೆ, ನರಕ ಪ್ರಾಪ್ತಿಯಾಗುವುದು ದುಷ್ಕರ್ಮ ಗಳಿಂದ. ಸ್ವರ್ಗಲೋಕ ಸಿಗುವುದು ಪುಣ್ಯದ ಫಲದಿಂದ. ನರಕಗಳ ಬಗ್ಗೆ ಜೈನರ ಪರಿಕಲ್ಪನೆಯು ಬೇರೆ ಇದೆ.

ನಾಕಚ್ಯುತಿ ಜೈನಧರ್ಮದ ವಿಶಿಷ್ಟ ಪರಿಭಾಷೆ. ವೈದಿಕ ಪುರಾಣಗಳಲ್ಲಿ ನಾಕ ಒಂದು. ಅದರ ಅಧಿಪತಿ ಇಂದ್ರ. ಅವನು ಚ್ಯುತಿ ಹೊಂದುವುದಿಲ್ಲ.

*ವಿವರಗಳಿಗೆ ನೋಡಿ: ನರಕ.*

**೪೨೭. ನಾಗಬಂಧ**

*..........ನಾಗಶಯ್ಯೆಯೊಳು*
*ನಾಗಿಣಿ* ***ನಾಗಬಂಧ****ದೊಳ್ ತಳ್ತು ಗುಣಾರ್ಣವನಂ*
*ಮರುಳ್ಚಿದಳ್............... (ಪಂಪಭಾರತ ೪-೧೭)*

ನಾಗಶಯ್ಯೆಯಲ್ಲಿ ನಾಗಬಂಧ ರತಿಬಂಧದಲ್ಲಿ ಸೇರಿಕೊಂಡು ಮರುಳು ಮಾಡಿದಳು. ನಾಗಬಂಧವೆನ್ನುವುದು ರತಿಕ್ರೀಡೆಯ ಒಂದು ಭಂಗಿ. ನಾಗಗಳು ಮೈಥುನದಲ್ಲಿ ತೊಡಗುವಾಗ ಒಂದಕ್ಕೊಂದು ಬೆಸೆದುಕೊಂಡು ಸುದೀರ್ಘಕಾಲ ಇರುತ್ತವೆ. ಅವಕ್ಕೆ ಆ ಸಂದರ್ಭದಲ್ಲಿ ಬೇರೆ ಅರಿವು ಇರುವುದಿಲ್ಲ. ಹಾವುಗಳು ಎಣೆಯಾಡುವುದನ್ನು ನೋಡಬಾರದೆನ್ನುವ ನಂಬಿಕೆಯಿದೆ. ನಾಗಬಂಧ ಲೈಂಗಿಕ ಕ್ರೀಡೆಯಲ್ಲಿನ ಒಂದು ರೀತಿಯ ಪಟ್ಟು ಎಂದೇ ಹೇಳುತ್ತಾರೆ.

**೪೨೮. ನಾಗರಿಕ**

*.............ಮೇಳದ ನಾಗರಿಕ ವಿಟ, ವಿದೂಷಕ ಪೀಠ ಮರ್ದಕರ್ಕಳ್ವೆರಸು ಕಾಮದೇವನೋಲಗಕ್ಕೆ ಬರ್ಪಂತೆ..............* *(ಪಂಪ ಭಾರತ ೪-೭೯ವ)*

ಜೊತೆಗಾರರಾದ ನಾಗರಿಕ(ಜಾಣನಾದ ಪಟ್ಟಣದವನು) ವಿಟ (ಸ್ತ್ರೀಲೋಲರಾದ ರಾಜಕುಮಾರರ ಸ್ನೇಹಿತ, ವಿದೂಷಕ(ಹಾಸ್ಯಗಾರ) ಪೀಠಮರ್ದಕ (ಸ್ತ್ರೀ ಸಂಪಾದನೆಯಲ್ಲಿ ರಾಜಕುಮಾರರಿಗೆ ಸಹಾಯ ಮಾಡುವವನು) ರೊಡಗೂಡಿ ಮನ್ಮಥನ ಸಭಾಸ್ಥಾನಕ್ಕೆ ಬರುವಂತೆ................

ನಾಗರಿಕನೆಂದರೆ ಪಟ್ಟಣದವನು. ನಗರದಲ್ಲಿ ವಾಸಿಸುವವನನ್ನು ನಾಗರಿಕನೆಂದು ಕರೆಯುತ್ತೇವೆ. ಇಂಗ್ಲಿಷಿನಲ್ಲಿ ಇದನ್ನು Civilized ಎಂದು ಕರೆಯುತ್ತಾರೆ. ನಾಗರಿಕನೆಂದರೆ ಓದಿದವನು; ತಿಳಿದವನು; ವಿವೇಕವಂತನೆಂದು ಕರೆಯುತ್ತಾರೆ. ಅನಾಗರಿಕನೆಂದರೆ ವಿವೇಕರಹಿತ; ಮೂಢ; ಅವಿವೇಕಿ: ತಿಳುವಳಿಕೆ ರಹಿತ ಮತ್ತು ನಡವಳಿಕೆಯಲ್ಲಿ ಸಭ್ಯತೆಯಿಲ್ಲದವನು ಎಂದರ್ಥ ಬರುತ್ತದೆ. ಇಂಗ್ಲಿಷ್ ನಾಗರಿಕ ಎಂಬುದಕ್ಕೆ ೧೭ ಮತ್ತು ಹದಿನೆಂಟನೆಯ ಶತಮಾನದಲ್ಲಿ ಹೆಚ್ಚು ಅರ್ಥಬಂತು. ನಾಗರಿಕ ಎಂಬುದರ ವ್ಯಾಖ್ಯೆಯು ಸಾಮಾಜಿಕ ನಿಯಮಕ್ಕೆ ಅನುಸಾರವಾಗಿ ಬೇರೆ ಬೇರೆಯಾಗುತ್ತದೆ. ಸಂಸ್ಕೃತಿಯ ಸಾಂದರ್ಭಿಕ ಅರ್ಥವನ್ನು ನಾಗರಿಕ ಎಂಬುದಕ್ಕೆ ಬಳಸಲಾಯಿತು. ಇಂಗ್ಲಿಷಿನಲ್ಲಿ ಪುನರುಜ್ಜೀವನ ಕಾಲಘಟ್ಟದ ಅನಂತರ ನಾಗರಿಕ ಎಂಬುದಕ್ಕೆ ವಿಶೇಷ ಅರ್ಥ ಬಂತು. ಇದರಿಂದ ಸಂಸ್ಕೃತಿ ಮತ್ತು ನಾಗರಿಕತೆ ಎಂಬುದಕ್ಕೆ ವಿಶೇಷ ರೂಪ ಬಂತು ಕೂಡಾ. ಆದರೆ ಭಾರತದಲ್ಲಿ ನಾಗರಿಕ ಎಂಬುದಕ್ಕೆ ವಿಶೇಷ ಅರ್ಥ ಬಂದಿರುವುದು ವಸಾಹತುಶಾಹಿ ಕಾಲಘಟ್ಟದಲ್ಲಿ 'ಆಧುನಿಕನಾಗರಿಕ' ಪಶ್ಚಿಮದ ನಾಗರಿಕ ವಿಜ್ಞಾನ ಮತ್ತು ತಂತ್ರಜ್ಞಾನ ತಿಳಿದ ನಾಗರಿಕ ಎಂಬುದಕ್ಕೆ ವಿಶೇಷ ರೀತಿಯ ಅರ್ಥಗಳು ಬಂದವು.

*ವಿವರಗಳಿಗೆ ನೋಡಿ: Raymond Williams 1983 Keywords P. 57-59.*

**೪೨೯. ನಾಗರು**

ನಾಗರು ಕಂನಾಡಿನಲ್ಲಿ ಬಂದು ನೆಲೆಸಿದ ಬಳಿಕ ಇಲ್ಲಿಯ ಜನಗಳಲ್ಲಿ ಬೆರೆತು

ಒಂದಾದರೆಂದು ತೋರುತ್ತದೆ. ನಾಗರ ಕನ್ಯೆಯರು ತುಂಬ ಚೆಲುವೆಯರೆಂದು ಪೂರ್ವ ಕಾಲದಲ್ಲಿ ಖ್ಯಾತಿಯಿದ್ದಿತು. ಕದಂಬ ರಾಜರು ನಾಗಕನ್ಯೆಯರನ್ನು ಮದುವೆಯಾದರು. ಸಿಂದರೊಡನೆ ಚಾಲುಕ್ಯರಾಜರ ಬೀಗತನವಿದ್ದುದು ತಿಳಿದುಬರುತ್ತದೆ. ಈಗ ಸಿಂದಗಿಯವರೆಂಬ ಕೆಲವು (ಸಿರಿವಂತರ) ಮನೆತನಗಳುಂಟು. ಅವರೆಲ್ಲ ಸಿಂದರ ಬಳಗವೆಂದೇ ನಿಶ್ಚಿತವಾಗಿ ಹೇಳಲಿಕ್ಕಾಗದೆ ಇದ್ದರೂ ಅವು ಐತಿಹಾಸಿಕ ಮಹತ್ವದ ಕುಳಗಳೆಂಬಲ್ಲಿ ಸಂದೇಹವಿಲ್ಲ. ಬನವಾಸಿ ನಾಡಿನಲ್ಲಿ ನಾಗರಖಂಡದ ಭಾಗಕ್ಕೆ ಹತ್ತಿರ ಸುಮಾರಾಗಿ ಹೈವೆ ಅಥವಾ ಹೈಗವೆಂಬ ಹೆಸರುಂಟು. ಅಲ್ಲಿಯ ಬ್ರಾಹ್ಮಣರಿಗೆ ಹವಿಕರೆಂದು ಕರೆವ ವಾಡಿಕೆಯಿದೆ. ಇವರನ್ನು ಕದಂಬ ಮಯೂರಶರ್ಮನು ಅಹಿಚ್ಛತ್ರದಿಂದ ತಂದನೆಂದು ಒಂದು ಕತೆಯಿದೆ. ಅಹಿಚ್ಛತ್ರದಿಂದ ಬಂದು ನೆಲೆಸಿದ ಈ ಜನರಿರುವ ಪ್ರದೇಶವೆಂದೇ ಇದಕ್ಕೆ (ಅಹಿವೆ?=)ಹೈವೆ ಎಂದು ಹೆಸರು ಬಂದಿರಬಹುದೆ?

ಕಂನಾಡಿನಲ್ಲಿ ಹವ್ಯಕರದೊಂದೇ ಸ್ವತಂತ್ರ ಗುಂಪು ಇದ್ದಂತಿದೆ. ಇವರು ಅಹಿಚ್ಛತ್ರದಿಂದ ಬಂದುದನ್ನೂ ನಾಗರೂ ಅತ್ತಣವರೆ ಆಗಿರುವುದನ್ನೂ ನೋಡಿದರೆ ಗುಜರಾತಿನಲ್ಲಿರುವಂತೆ ಇವರೂ ನಾಗರ ಬ್ರಾಹ್ಮಣರಾಗಿರಬಹುದೆ? ಎಂಬ ಒಂದು ವಿಚಾರವು ತಲೆದೋರುತ್ತದೆ. ಆದರೆ, ನಾಗರ ಬ್ರಾಹ್ಮಣರ ಮತ್ತು ಹವ್ಯಕರ ಗೋತ್ರಸೂತ್ರಗಳ ವಿಚಾರವನ್ನೂ ಮಾಡಬೇಕಲ್ಲದೆ ಆಧುನಿಕ ಶಾಸ್ತ್ರೀಯ ಪದ್ಧತಿಯಿಂದ ರೂಪ ಆಕಾರಾದಿಗಳ ಅಳತೆ (Anthropometrical measurements) ಮಾಡಿದಲ್ಲದೆ ಯಾವ ಕೊನೆಯ ನಿರ್ಣಯವನ್ನೂ ಹೇಳಲಿಕ್ಕಾಗುವುದಿಲ್ಲ. ಮೈಸೂರ ಶಾಸನಗಳಲ್ಲಿ ಅಹಿಚ್ಛತ್ರಪುರ (ವಿಜಯ ಪುರ), ಅಹಿಚ್ಛತ್ರ ಅಗ್ರಹಾರ ಎಂಬ ಹೆಸರುಗಳು ಆಗಾಗ ಬಂದಿವೆ. ಆದುದರಿಂದ, ಅಲ್ಲಿಂದ ಕಂನಾಡಿಗೆ ಬ್ರಾಹ್ಮಣರೂ ಬೇರೆ ಜನಗಳೂ ಬಂದ ಬಗೆಗೆ ಸಂದೇಹವಿಲ್ಲ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೨ ಪುಟ. ೧೮೧.*

**೪೩೦. ನಾಗಾರಾಧನೆ**

*ನಾಗಶರ್ಮನಾತನ ಭಾರ್ಯೆ ತ್ರಿವೇದಿಯುಮಗಣ್ಯಮನ್ಯಲಕ್ಷ್ಮೀ ಭಾಜನರಾಗಿಯುಂ ಸಂತಾನಮಿಲ್ಲದುಬ್ಬೆಗದಿಂ ಪುತ್ರಾರ್ಥಿಗಳಾಗಿ **ನಾಗಸ್ಥಾನದ ನಾಗರ್ಗೆ** ಪರಸಲ್ವೋದರವ ರೆಂದು ಪೇಳೆ ಕೇಳ್ದು ಭೋಗಾಸಕ್ತೆಯಾಗಿರ್ಪಾಗಳ್....................*

*(ಸುಕುಮಾರ ಚರಿತಂ ತೃತೀಯಾಶ್ವಾಸಂ ಪ.ಸಂ. ೪೪ ವ)*

ನಾಗಪ್ರತಿಮೆಯ ಪೂಜೆಯು ಶಾಕ್ತ, ಶೈವ, ವೈಷ್ಣವ, ಬೌದ್ಧ ಮತ್ತು ಜೈನ ಸಂಪ್ರದಾಯಗಳಲ್ಲಿವೆಯೆಂದು ಶಂಬಾ ಜೋಶಿ ಹೇಳುತ್ತಾರೆ. ನಾಗವು ಸೃಜನ ಶಕ್ತಿಯ ಪ್ರತೀಕವೆಂದು ಅವರ ನಿಲುವು.

ಪ್ರಪಂಚದ ಆದಿದೈವತ ನಾಗ-ಸರ್ಪ; ನಾಗ-ಸರ್ಪ-ಸಂಕೇತಕ್ಕೆ ಕತ್ತಲೆ, ರಾತ್ರಿ, ಚಂದ್ರ, ಆಪ : ರಸ ಎಂಬ ಭಾಯಾರ್ಥಗಳು ಸಂಭವಿಸುವುದನ್ನು ವಿವರಿಸಿದ್ದಾಗಿದೆ.

'ನಾಗಪೂಜೆ' ಎಂದರೆ ಇಂದ್ರಿಯ (ವೃತ್ತಿಗಳ) ಪೂಜೆಯಾಗಿದೆ, ಎಂಬ ಪ್ರಜ್ಞೆ ಮೂಡುತ್ತದೆ! ಈ ವೈಯಕ್ತಿಕ ಪ್ರಜ್ಞೆಯೊಡನೆ ಸಾಮಾಜಿಕ ಪ್ರಜ್ಞೆ (ಸವಿತೃ=ಸೂರ್ಯನ)

ಉದಯವಾಗುವುದು ಅನಿವಾರ್ಯ. ಆಗ ಅನಿಷ್ಟ ಪ್ರಕಾರವು ತಲೆಯೆತ್ತಿದ್ದುಂಟು; ಭಾರತೀಯ ನಾಗ-ಸಂಪ್ರದಾಯದ ಸಂಶೋಧಕ ವ್ಹೊಗೆಲ್ ಕಂಡಿರುವಂತೆ. ನಾಗನು ಸಂತನಾಗಿ ಮಾರ್ಪಡುತ್ತಾನೆ! ವೀರ್ಯವಂತನ ಭೋಗವೃತ್ತಿ, ಮೃತ್ಯುವನ್ನು ಅಪ್ಪಿದಂತೆ! ಈ ವಿಪರೀತ ಅನುಭವ ಭೋಗಿಯನ್ನು ತ್ಯಾಗವೀರ ನನ್ನಾಗಿಸುತ್ತದೆ. ಈ ಮಾತು ಭಾರತದಲ್ಲಿ ಮಾತ್ರವಲ್ಲ; ಜಾಗತಿಕ ಸ್ವರೂಪದ ದೃಶ್ಯವಾಗಿದೆ.

!ವೃತ್ರ : ಅಹಿ-ಹನ್ ಇಂದ್ರನು ಸೌರನು; ಪ್ರಕಾಶತತ್ತ್ವದ ಪ್ರತಿಮೆ, ಎಂದಲ್ಲಿ ವೃತ್ರ: ಅಹಿ (:ನಾಗ) ಕತ್ತಲೆಯ ಪ್ರತೀಕವಿರಲೇಬೇಕಾಯ್ತು!

ಋಗ್ ವೇದದಲ್ಲಿ ನಾಗಪ್ರತಿಮಾ ಪೂಜೆಯು ಇಲ್ಲವೇ ಇಲ್ಲ ಎಂದು ತಜ್ಞರು ಸಾರಿದ್ದಾರೆ. ಆದರೆ, ಈ ಸಂಹಿತೆಯಲ್ಲಿಯೆ 'ಸಾರ್ಪರಾಜ್ಞೀ ಸೂರ್ಯೋ ವಾ' ಈ ದೈವತ್ವವು ಉಂಟು.

ಭಾದ್ರಪದ ಆಶ್ವೀಜಗಳಲ್ಲಿ ಇಂತಹ ದಾರದ ಹಬ್ಬಗಳಿವೆ. ದೀಪಾವಳಿಯ ಪ್ರಾರಂಭದ, ನರಕಚತುರ್ದಶಿ, ನಿಜವಾಗಿ ಹಾವಿಗೆ ಸಂಬಂಧಿಸಿದ್ದೇ. ನರಕ ಇದರ ಉಚ್ಚಾರವು, ನಾರಕ ಎಂದೂ ಉಂಟು. ವಾಜಸನೇಯ ಸಂಹಿತೆ, ಅಥರ್ವವೇದ ಇವುಗಳಲ್ಲಿ 'ನಾರಕ' ಈ ಪದಪ್ರಯೋಗವೆ ಇದೆ. ನರಕಾಸುರನನನು ಯಾದವ ಕೃಷ್ಣನು ಕೊಂದನೆಂದು ಸಾಂಪ್ರದಾಯಿಕ ನಂಬುಗೆಯಿದೆ. ಯಮುನಾ ನದಿಯಲ್ಲಿ ಕೊಲ್ಲಲ್ಪಟ್ಟ ಕಾಲಿಯನಂತೆ ನರಕ : 'ನಾರಕ'ನೆಂಬುವನೂ ಒಬ್ಬ ನಾಗರಾಜನೇ ಸರಿ. ಇದನ್ನು, 'ನಾರ' ಈ ಶಬ್ದ ಸಂಕೇತವೆ ಸಾರಿ ಹೇಳುತ್ತಿದೆ. ಏಕೆಂದರೆ ನಾರ : ನೀರು ಮತ್ತು ನಾಗ (ಹಾವು) ಇವು ಸಮಾನಾರ್ಥಕ (ಶಬ್ದ) ಸಂಕೇತಗಳೂ ಅಹುದು. ಆದರೆ,, 'ನಾರಕ'ನು ನಾಗರೂಪ ನೆಂಬುದು ಪುರಾಣಕಥೆಗಳಲ್ಲಿ ಬಚ್ಚಿ ಉಳಿದಿದೆ! 'ನಾರಕ'ನು ಸರ್ಪನೆಂದರೆ 'ನಾರಣ'ನೂ ಸರ್ಪನೆಂಬುದು ಬಯಲಿಗೆ ಬರಲಿದೆ! 'ನಾರ'-'ನಾರಕ' ಈ ಶಬ್ದಸಂಕೇತಗಳ ಮೂಲಕ, ನಾಗ ಮತ್ತು ನೀರು ಇವೆರಡರಲ್ಲಿ ಇರುವ ಅನ್ಯೋನ್ಯ ಸಂಬಂಧವು ಬೆಳಕಿಗೆ ಬರುತ್ತಿದೆ. 'ನಾರ' ಎಂದು ನೀರಿಗೆ ಇನ್ನೊಂದು ಹೆಸರು. 'ನಾರಾಯಣ' ವಿಷ್ಣುದೈವತಕ್ಕೆ ಜಲಶಾಯೀ ಎಂಬ ಪರ್ಯಾಯ ನಾಮವಿದೆ. ಇದೇ ಮೇರೆಗೆ ದೇವರ ಶೇಷ-ಶಯನ ಪ್ರತಿಮಾ ಚಿತ್ರಗಳು ಸುಪ್ರಸಿದ್ಧವಾಗಿವೆ. ಈ ಹಿನ್ನೆಲೆಯಲ್ಲಿ ನೀರು : ನಾರ ಮತ್ತು ಹಾವು ಇವು ಸಮಾನಾರ್ಥ ಪದಗಳಾಗುತ್ತವೆ. 'ಆಪೋನಾರಾಃ ಎಂದು ಹೇಳಿ 'ಆಪೋ ವೈ ನರಸೂನವಃ' ಇರುವುದಾಗಿ ಮಹಾಭಾರತವು ಹೇಳುತ್ತಿದೆ. ಆದಕಾರಣ 'ನರಸೂನವಃ' ಎಂದರೆ ನರರ ಸಂತಾನವು, ನೀರಿನ ರೂಪದ್ದೇ ಆಯಿತು. ಇಂತು ನಾರ ಮತ್ತು ನರ, ಇವು ಎರಡೂ ಅಭಿನ್ನ ನಾಗಪ್ರತಿಮೆಯ ಎರಡು ರೂಪಗಳೆ ಎಂಬುದು ಇಲ್ಲಿ ದೃಢಪಡುತ್ತಿದೆ.

ನಾಗ ಪೂಜೆ ಎಂದರೆ 'ನಾಗ'ನು ಮೈಯಲ್ಲಿ ಬರುತ್ತಿದ್ದಂತಹ ಒಂದು 'ದಿವ್ಯ' ವ್ಯಕ್ತಿಯ ಪೂಜೆಯಿಂದಲೆ ಈ ಸಂಪ್ರದಾಯವು ಆರಂಭವಾಗಿದೆ ಎಂಬಲ್ಲಿ ಸಂದೇಹವೇ ಇಲ್ಲ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯ ಸಂಪುಟ. ೪*

*ಪುಟ. ೩೨, ೩೪, ೪೩, ೧೧೩, ೧೪೨, ೧೪೪*

೪೩೧. ನಾಟ್ಯಧರ್ಮಿ

*"ಆಗಳ್ ನಾಟ್ಯವಿಧಿಯಂ ನಿರ್ವರ್ತಿಸಿ ಶೃಂಗಾರಾದಿಗಳಪ್ಪೊಂಬತ್ತುಂ ರಸಂಗಳು ಮನೆಂಟುಂ ಸ್ಥಾಯೀಭಾವಕಂಗಳುಮಂ ಮೂವತ್ತುಮೂಱು ಸಂಚಾರಿಕೆಗಳುಮಂ ಎಂಟು ಸಾತ್ವಿಕಭಾವಂಗಳುಮನಾಂಗಿಕ ಸಾತ್ವಿಕ ವಾಚಿಕಾಹಾರ್ಯಕಮೆಂಬ ನಾಲ್ಕಭಿನಯಮುಮಂ ಲೋಕಧರ್ಮಿ **ನಾಟ್ಯಧರ್ಮಿ**ಯೆಂಬೆರಡುಂ ಧರ್ಮಿಯುಮಂ ಭಾರತಿಯುಂ ಸಾತ್ವತಿಯುಂ ಕೈಶಿಕಿಯುಮಾರಭಟಯುಮೆಂಬ ನಾಲ್ಕುಂವೃತ್ತಿ - ಯುಮಂ ಮನಾವತಿಯುಂ ದಾಕ್ಷಿಣಾತ್ಯೆಯುಂ ಪಾಂಚಾಲಿಯುಂ ಮಾದ್ರಮಾಗಧಿಯುಮೆಂಬ ನಾಲ್ಕುಂ ವೃತ್ತಿಯುಮಂ ದೇವಸಿದ್ಧಿ ಮಾನುಷಸಿದ್ಧಿಯೆಂಬೆರಡುಂ ಸಿದ್ಧಿಯುಮಂ ಷಡ್ಜವೃಷಭಗಾಂಧಾರಮಧ್ಯಮಪಂಮಧೈವತನಿಷಾದಂಗಳೆಂಬ ಸಪ್ತಸ್ವರಮುಮನಂತು ಸಂಗ್ರಹವಾಕ್ಯದೊಳ್ ಪೇೞ್ದ ಪನ್ನೊಂದಧಿಕಾರದೊಳ್ ನೆರೆದ ನಾಟಕಮುಂ ಪ್ರಕರಣಮುಂ ಚಾರಣಮುಂ ಬಾಣಮುಂ ಸಮವತಾರಣಮುಂ ಡಿಮಮುಂ ಈಹಾಮೃಗಮುಂ ವ್ಯಾಯೋಗಮುಂ ಪ್ರಹಸನಮುಂ ವೀಧಿಯುಮೆಂಬ ದಶರೂಪಲಕ್ಷಣಮುಮಂ ಪಾತ್ರಸಂಕ್ರಮಣದೊಳ್ ನೆಱೆಯೆ ತೋಱಿ ಭರತದ ಸಾರಸರ್ವಸ್ವಮುಮಂ ನಾಟ್ಯಧರ್ಮದೊಳ್ ಸೌಧರ್ಮಕಲ್ಪೇಶ್ವರಂ ಪ್ರತ್ಯಕ್ಷಂ ಮಾಡಿದಾಗಳ್ ಅಂತು ವಾದಕನುಪವಾದನಿನೆಸೆವ ಹೃದ್ಯವಾದ್ಯವಿಶೇಷಂಗಳೊಳ್ ನೆಗೞ್ವ ಸಮಪಾಣಿಯುಮಧಃ ಪಾಣಿಯುಮುಪರಿಪಾಣಿಯುಮೆಂಬ ಪಾಣಿತ್ರಯದೊಳಂ ದ್ರುತವಿಲಂಬಿತಮಧ್ಯಮಮೆಂಬ ಲಯತ್ರಯದೊಳಂ ಸಮಯಶ್ರೋತಾವಹೆಯುಂ ಗೋಪುಚ್ಛೆಯುಮೆಂಬ ತ್ರಿತಯದೊಳಂ ಚಿತ್ರದಕ್ಷಿಣೆಕಾರ್ತಿಕೆಯೆಂಬ ವೃತ್ತಿತ್ರಯದೊಳಂ ಗುರುಸಂಚಯ ಲಘುಸಂಚಯ ಗುರುಲಘುಸಂಚಯಮೆಂಬ ಸಂಚಯತ್ರಯದೊಳಂ ಸಮಪ್ರಹಾರ ವಿಷಮಪ್ರಹಾರ ಸಮವಿಷಮಪ್ರಹಾರಮೆಂಬ ಪ್ರಹಾರತ್ರಯದೊಳಂ ಮತ್ತಂ.........."*

ವಾದಕನು ವಾದ್ಯವಿಶೇಷರೀತಿಯ ಬಾರಿಸಿದವನು ತ್ರಿಭಂಗಿಯಲ್ಲಿ ನಾಟ್ಯವನ್ನು ಆಡಲಾಯಿತು. ಇಲ್ಲಿ ರನ್ನನು ನಾಟ್ಯಧರ್ಮವನ್ನು ವಿವರಿಸಿದ್ದಾನೆ.

ಇಲ್ಲಿ ರನ್ನ ನಾಟ್ಯ ಧರ್ಮಿಯೆಂದು ಕರೆದಿರುವುದು ವಿಶೇಷ. ಧರ್ಮ; ನಾಟ್ಯಧರ್ಮ; ಪತಿಧರ್ಮ; ಸತಿಧರ್ಮ; ಹೀಗೆ ಧರ್ಮದ ವ್ಯಾಖ್ಯೆಗಳು ಬೇರೆ ಬೇರೆಯಾಗಿರುವುದನ್ನು ಗಮನಿಸಬೇಕು. ನಾಟ್ಯಧರ್ಮವೆಂದರೆ ನಾಟ್ಯಕ್ಕೆ ನಿಷ್ಠವಾಗಿರುವುದು ಎಂದರ್ಥ.

ನಾಟಕ ವಿಧಿಯ ಭಿನ್ನ ಪ್ರಕಾರಗಳು ಈ ಕೆಳಗಿನಂತಿವೆ:

೧. ವಡ್ಡಾರಾಧನೆಯಲ್ಲಿ ಬರುವ ವಿಷಯವಿದು: "ನಾಟಕಮಂ ನೋಡುತ್ತಿರ್ಪನ್ನೆಗಂ"

೨. ನಾಟಕ ಎನ್ನುವುದು ಒಂದು ಪ್ರದರ್ಶನಾತ್ಮಕ ಕಲೆ.

೩. ಕುಳಿಶಧರಂ ಪೊಗೞ್ದು ಮನಂ

೪. ಗೊಳೆ ಮಾಡಿದನೈಂದ್ರಮೆಂಬ **ನಾಟಕ**ವಿಧಿಯಂ (ಅಜಿತತೀರ್ಥಂಕರ ಪುರಾಣ ೫-೬ವ)

೫. ರನ್ನನ ಅಜಿತತೀರ್ಥಂಕರ ಪುರಾಣ ತಿಲಕದಲ್ಲಿ ಬಂದಿರುವ ನಾಟಕವಿಧಿಯು

ನಾಟಕವನ್ನೇ ಸೂಚಿಸುತ್ತದೆ. ನಾಟಕವನ್ನುವುದು ಒಂದು ರಂಗ ಪ್ರಕಾರ. ಇದರಲ್ಲಿ ಇರಬೇಕಾದ ಕನಿಷ್ಟ ಅಂಶಗಳು ಎಂದರೆ ನಾಟಕದ ವಸ್ತು: ನಾಟಕದ ಕ್ರಿಯೆ ಸಂಭಾಷಣೆ. ಇದಕ್ಕೆ ಪೂರಕವಾಗಿ ನಿರ್ದೇಶನ: ರಂಗವೇದಿಕೆ: ನಟರು: ನೇಪಥ್ಯ: ಬೆಳಕು: ಮುಖವರ್ಣಿಕೆಗಳಿರುತ್ತವೆ. ರನ್ನನು "ಕುಳಿಶಧರಂ ಪೊಗೞ್ದು ಮನಂಗೊಳೆ ಮಾಡಿದನ್ಯೆಂದ್ರ ಮೆಂಬನಾಟಕವಿಧಿಯಂ" ಎಂದು ಬಳಸುತ್ತಾನೆ. ನಾಟಕವಿಧಿ ನಾಟಕದ ಕ್ರಿಯೆಯನ್ನು ಸೂಚಿಸುತ್ತದೆ.

೬. ಇದರ ವಸ್ತು ಪ್ರಸಿದ್ಧವಾಗಿರುವುದು. ರಾಜರ್ಷಿ ಇಲ್ಲವೆ ಧೀರೋದಾತ್ತ ನಾಯಕನಿರುವನು, ಶೃಂಗಾರ ಇಲ್ಲವೆ ವೀರರಸ ಪ್ರಧಾನವಾಗಿರುವುದು, ಅಯ್ದರಿಂದ ಏಳರವರೆಗೆ ಅಂಕಗಳಿರುವುವು.

೭. ಅಂಕದಲ್ಲಿ ಒಂದು ದಿವಸದ ವೃತ್ತಾಂತ ಮಾತ್ರ ಇರಬೇಕು. ಕ್ರೋಧ, ಪ್ರಸಾದ, ಶಾಪೋತ್ಸರ್ಗ, ವಿದ್ರವ, ಯುದ್ಧ, ರಾಜ್ಯದಭ್ರಂಶ, ಮರಣ ಮುಂತಾದುದನ್ನು ಪ್ರತ್ಯೇಕವಾಗಿ ತೋರಿಸದೆ ಪ್ರವೇಶಕಗಳಿಂದ ಸೂಚಿಸಬೇಕು. ಒಂದು ಅಂಕದಲ್ಲಿ ಅನೇಕ ಬೇರೆ ಬೇರೆ ಘಟನೆಗಳು ಇರಕೂಡದು. ಒಂದು ಅಂಕದಲ್ಲಿ ತಿಂಗಳಿನ ಇಲ್ಲವೆ ವರ್ಷದ ಅವಧಿಯಲ್ಲಿ ಜರುಗಿದ್ದನ್ನು ಬೇರೆ ಬೇರೆ ಪ್ರವೇಶ(ಕ)ಗಳಲ್ಲಿ ತೋರಿಸಬೇಕು. ಅಂಕದ ಕೊನೆಗೆ ಎಲ್ಲ ಪಾತ್ರಗಳ ನಿಷ್ಕ್ರಮಣ. ಪ್ರವೇಶಗಳಲ್ಲಿ ಮಧ್ಯಮ ಇಲ್ಲವೆ ನೀಚಪಾತ್ರಗಳೆ ಇರಬೇಕು. ಅಂಕಗಳ ನಡುವೆ ಇಲ್ಲವೆ ಪ್ರಾರಂಭದಲ್ಲಿ ಮಧ್ಯಮ ಇಲ್ಲವೆ ಮಧ್ಯಮ ಮತ್ತು ನೀಚಪಾತ್ರಗಳನ್ನು 'ವಿಷ್ಕಂಭಕ'ವಾಗಿ ಬಳಸಬೇಕು. ಉತ್ತಮ ಮತ್ತು ಮಧ್ಯಮ ಪಾತ್ರಗಳು ಸಂಸ್ಕೃತದಲ್ಲಿ ಮಾತನಾಡಬೇಕು. ಅಂಕ ಮುಗಿದಾಗ ಕತೆಯ 'ಬೀಜ' ಎಂದರೆ ಪ್ರಾರಂಭವಾದ ಸನ್ನಿವೇಶವನ್ನು ಕೊನೆಗಾಣಿಸಬಾರದು. (ಅದೇ ಅಂಕದಿಂದ ಅಂಕಕ್ಕೆ ಬೆಳೆಯುವುದು)

೮. ವಡ್ಡಾರಾಧನೆಯ ಸನತ್ಕುಮಾರ ಚಕ್ರವರ್ತಿಯ ಕತೆಯಲ್ಲಿ 'ಅತಿರಂಜನೆ'ಯೆಂಬ ನಾಟಕ ಪ್ರದರ್ಶನದ ವಿವರ ಬರುತ್ತದೆ. (ವಡ್ಡಾರಾಧನೆ(ಅನು) ಟಿ. ಕೇಶವಭಟ್ಟ. ೨೦೧೦. ಪು.೧೦೦)

೯. 'ವಡ್ಡಾರಾಧನೆ'ಯಲ್ಲಿ ನಾಗಶ್ರೀ ಎಂಬಾಕೆಗೆ ಕಾವ್ಯ, ನಾಟಕ ಕಲೆಯನ್ನು ಕಲಿಸಿದ ವಿಚಾರವು ಬರುತ್ತದೆ. (೧. ಪು.೩೬) 'ಪಂಪಭಾರತ'ದಲ್ಲಿ ಅರ್ಜುನ ಬೃಹನ್ನಳೆ ಯಾಗಿದ್ದಾಗ, ವಿರಾಟನ ಮಗಳಾದ ಉತ್ತರೆಗೆ 'ಪಲವು ಪಾತ್ರಂಗಳನಾಡಿಸುತ್ತುಂ' ಇದ್ದ ಘಟನೆಯು ಉಕ್ತಗೊಂಡಿದೆ. (೮-೫೫ವ) ಸ್ತ್ರೀಯರು 'ನಾಟಕಮನಾಡಿದ' ವಿಷಯವು ದುರ್ಗಸಿಂಹನ 'ಪಂಚತಂತ್ರ' ಕೃತಿಯಲ್ಲಿ ಪ್ರಸ್ತಾವಿತವಾಗಿದೆ. (ಪರೀಕ್ಷಾವ್ಯಾವರ್ಣನಂ – ೨೬೦ವ).

೧೦. ಸೌಧರ್ಮ ಕಲ್ಪದೊಳಾ ಸೌಧರ್ಮೇಂದ್ರಂ ತನ್ನ ದೇವಸಭೆಯ ನಡುವೆ ಸಿಂಹಾಸನ ಮಸ್ತಕಸ್ಥಿತಂ ದೇವರ್ಕ್ಕಳಿಂ ಪರಿವೇಷ್ಟಿತನಾಗಿ ಸೌದಾ(ಮಿ)ನಿಯೆಂಬ ನಾಟಕಮಂ ನೋಡುತ್ತಿರ್ಪ್ಪನ್ನೆಗಂ....(ಡಿ.ಎಲ್.ಎನ್.೨೦೦೯ ಪುಟ. ೧೦೯).

ಅಂಕ:

ಇದನ್ನು 'ಉತ್‌ಸೃಷ್ಟಿಕಾಂಕ' ಎಂದೂ ಕರೆಯಲಾಗುತ್ತಿದೆ. ವಸ್ತು ಪ್ರಸಿದ್ಧವಾಗಿರಬಹುದು, ಇಲ್ಲದಿರಬಹುದು. ಮಾನವ ನಾಯಕ ರಸ ಕರುಣ ಅಂಕ ಒಂದು. ಇದರಲ್ಲಿ ದೇವತೆಗಳ ಪಾತ್ರಗಳು ಇರಕೂಡದು. ಯುದ್ಧ, ಉದ್ಧತ ಹೋರಾಟಗಳೂ ಇರಕೂಡದು. ಸ್ತ್ರೀಯಳ ರೋದನ, ನಿರ್ವೇದಗಳಿಂದ ಕೂಡಿದ್ದು, ಕೇವಲ ಭಾರತೀ ವೃತ್ತಿಯದು.

ನಾಟ್ಯಶಾಸ್ತ್ರದಲ್ಲಿ ಈ ಕುರಿತು ಬರುತ್ತದೆ. (ಅಜಿತ ತೀರ್ಥಕರ ಪುರಾಣತಿಲಕಂ. ೫-೩೦.ವ)

ಅಂಕವೆಂದರೆ ಕಾಳಗವೆಂಬ ಅರ್ಥವೂ ಇದೆ. ಉದಾ : ಕೋಳಿಅಂಕ.

ಪಾತ್ರ:

ಸಂಗ್ರಾಮರಂಗಕ್ಕೆ ಪಾತ್ರಂಗಳಂ ಸಮೆಯಿಸುವ .......... (ಪಂಪ ಭಾರತ ೨-೫೯ ವ)

(ಹಾಗೆ ದ್ರೋಣಾಚಾರ್ಯನು ಮುಂದೆ ಬರುವ ಯುದ್ಧ ರಂಗಕ್ಕೆ ಪಾತ್ರಗಳನ್ನು ಸಿದ್ಧಪಡಿಸುವ ಸೂತ್ರಧಾರನ ಹಾಗೆ ಶಸ್ತ್ರ ವಿದ್ಯಾಭ್ಯಾಸವನ್ನು ಮಾಡಿಸುತ್ತಿರಲು ಅನೇಕ ದೇಶದ ಒಡೆಯರಾದ ಹಲವು ರಾಜಕುಮಾರರ ಮಧ್ಯದಲ್ಲಿ ನಕ್ಷತ್ರ ಸಮೂಹದ ಮಧ್ಯದ ಪೂರ್ಣಚಂದ್ರನ ಹಾಗೆ ಶಸ್ತ್ರ ಕಲೆಯನ್ನು ಧರಿಸಿ ತನ್ನನ್ನು ಗೆದ್ದಿರುವ ಸಾಮಂತ ಚೂಡಾಮಣಿಯಾದ ಅರ್ಜುನನ (ಅರಿಕೇಸರಿಯು) ಬಾಣ ಪ್ರಯೋಗ ಪಾಂಡಿತ್ಯವನ್ನು ಪರೀಕ್ಷಿಸಬೇಕೆಂದು-

ನಾಟಕದಲ್ಲಿ ಸೂತ್ರಧಾರನು ಮುಖ್ಯ ಅವನು ನಾಟಕದ ಒಟ್ಟು ಸೂತ್ರವನ್ನು ನಿರ್ದೇಶಿಸುವುದರಿಂದ ಅವನಿಗೆ ಸೂತ್ರಧಾರನೆಂದು ಹೆಸರು ಬಂದಿದೆ. ಸೂತ್ರಧಾರನು ನಾಟಕದ ಪಾತ್ರ. ಅದರ ಕ್ರಿಯೆ ನಾಟಕದ ನಿರೂಪಣೆಯನ್ನು ಮಾಡುತ್ತಾನೆ. ಆದುದರಿಂದ ಅವನಿಗೆ ಸೂತ್ರಧಾರನೆಂಬ ಹೆಸರು ಇದೆ.

ಪ್ರಹಸನ: ಎರಡು ವಿಧ, ಶುದ್ಧ ಮತ್ತು ಸಂಕೀರ್ಣ, ವಸ್ತು ಕಲ್ಪಿತ. ತಾಪಸ-ಭಿಕ್ಷು-ಶ್ರೋತ್ರಿಯ-ಬ್ರಾಹ್ಮಣ ಇವರ ಚರಿತ್ರೆಗೆ ಸಂಬಂಧಿಸಿದ್ದು, ನೀಚ ಜನರುಳ್ಳದ್ದು. ಹಾಸ್ಯಸಂಭಾಷಣೆಗಳಿದ್ದುದು; ಶುದ್ಧ ಪ್ರಹಸನ. ವೇಶ್ಯಾ ಚೇಟ, ನಪುಂಸಕ, ಧೂರ್ತ, ವಿಟ, ಬಂಧಕೀ ( ಒಬ್ಬನಿಗಿಂತ ಹೆಚ್ಚು ಗಂಡಸರೊಡನೆ ಹೆಂಡತಿಯಂತೆ ವರ್ತಿಸುವಳು) ಈ ಪಾತ್ರಗಳ ನಡೆ-ನುಡಿಗಳ ಬಹಿರಂಗ ಪ್ರದರ್ಶನವನ್ನು ತೋರಿಸುವುದು.

ನಾಟ್ಯಶಾಸ್ತ್ರದಲ್ಲಿ ಈ ಕುರಿತು ಬರುತ್ತದೆ. (ಅಜಿತ ತೀರ್ಥಕರ ಪುರಾಣತಿಲಕಂ. ೫-೩೦.ವ)

ಪ್ರಕರಣ: ವಸ್ತು ಕವಿಕಲ್ಪಿತವಾಗಿರುವುದು, ಬ್ರಾಹ್ಮಣ ಇಲ್ಲವೆ ಅಮಾತ್ಯ ಇಲ್ಲವೆ ಶ್ರೇಷ್ಠಿ ಇದರ ನಾಯಕ, ರಸ, ಶೃಂಗಾರ, ಅಯ್ದರಿಂದ ಹತ್ತು ಅಂಕಗಳು. ಇದರಲ್ಲಿ ಉದಾತ್ತನಾಯಕನಿರುವುದಿಲ್ಲ. ದೇವತೆಗಳ ಚರಿತ್ರವೂ ಇರುವುದಿಲ್ಲ. ರಾಜರೂ ಇರುವುದಿಲ್ಲ.

ಪ್ರಕರಣದ ಕುರಿತು ಅಜಿತತೀರ್ಥಕರ ಪುರಾಣ ತಿಲಕಂನಲ್ಲಿ ಬರುತ್ತದೆ. (೫–೩೦.ವ.)

ದಾಸ, ವಿಟ, ಶ್ರೇಷ್ಠಿ, ವೇಶ್ಯಾಸ್ತ್ರೀ, ನೀಚಕುಲದ ಸ್ತ್ರೀ ಈ ಪಾತ್ರಗಳು ಇಲ್ಲಿ ಇರಬಹುದಾಗಿದೆ. ಆದರೆ ಅಮಾತ್ಯ, ಶ್ರೇಷ್ಠಿ, ಬ್ರಾಹ್ಮಣ, ಪುರೋಹಿತ ಇವರ ಗೃಹದೊಳಗಿನ ಘಟನೆಗಳ ಸಂದರ್ಭದಲ್ಲಿ ವೇಶ್ಯಾ ಸ್ತ್ರೀಯ ಪಾತ್ರವಿರಕೂಡದು. ಇದು ನಾಟ್ಯಶಾಸ್ತ್ರದಲ್ಲಿ ಬರುತ್ತದೆ.

ಭಾಣ:

ಕವಿಕಲ್ಪಿತ ಕತೆ ಧೂರ್ತ ಇಲ್ಲವೆ ವಿಟ ಪಾತ್ರ. ಬೇರೆ ಪಾತ್ರಗಳೆ ಇಲ್ಲ. ಶೃಂಗಾರ, ಇಲ್ಲವೆ ವೀರ ರಸ. ಅಂಕ ಒಂದು. ಒಂದೇ ಪಾತ್ರವು ಆಕಾಶಭಾಷಿತ (ರಂಗಸ್ಥಲದಲ್ಲಿ ಇಲ್ಲದ ಪಾತ್ರ) ಸಹಾಯದಿಂದ, ಇಲ್ಲವೆ ಅದರೊಡನೆ ಸಂಭಾಷಣೆಯನ್ನು ನಡೆಸುವುದು.

ನಾಟ್ಯಶಾಸ್ತ್ರದಲ್ಲಿ ಈ ಕುರಿತು ಬರುತ್ತದೆ. (ಅಜಿತ ತೀರ್ಥಕರ ಪುರಾಣತಿಲಕಂ. ೫–೩೦.ವ)

ವೀಥೀ: (ಅಜಿತ ತೀರ್ಥಕರ ಪುರಾಣತಿಲಕಂ. ೫–೩೦.ವ)

ಒಂದು ಇಲ್ಲವೆ ಎರಡು ಪಾತ್ರಗಳುಳ್ಳ ಒಂದೇ ಅಂಕದ ನಾಟಕ. ವಸ್ತು ಕವಿಕಲ್ಪಿತ. ರಸ ಶೃಂಗಾರ. ಇದರಲ್ಲಿ ಅರ್ಥವಾಗದ ಮಾತುಗಳಿಗೆ ಅರ್ಥ ಹೆಚ್ಚುವುದು, ಒಂದಕ್ಕೆ ತೊಡಗಿ ಇನ್ನೊಂದನ್ನು ಮಾಡುವುದು, ಅಸಂಬದ್ಧ ಮಾತಿಗೆ ಅಸಂಬದ್ಧ ಉತ್ತರವನ್ನು ಕೊಡುವುದು–ಮುಂತಾಗಿ ಹಾಸ್ಯಜನಕವಾಗಿರುವುದು. ಪಾತ್ರಗಳು ಅಥವಾ ಇಲ್ಲವೆ ಉತ್ತಮ ಇಲ್ಲವೆ ಮಧ್ಯಮ ಇರಬಹುದು.

ವ್ಯಾಯೋಗ ಎಂದರೆ ಪ್ರಸಿದ್ಧ ವಸ್ತು ದೇವತೆ ಇಲ್ಲವೆ ರಾಜರ್ಷಿ ನಾಯಕ. ಶೃಂಗಾರ, ಹಾಸ್ಯ ರಸಗಳು ವರ್ಜ್ಯ, ಅಂಕ ಒಂದು. ಸ್ತ್ರೀ ಪಾತ್ರಗಳು ತೀರ ಕಡಿಮೆ, ಹೆಚ್ಚು ಪುರುಷಪಾತ್ರಗಳು. ಒಂದು ದಿವಸದ ಘಟನೆ. ಯುದ್ಧ–ಸಂಘರ್ಷಗಳಿರುವುವು.

ನಾಟಕಕ್ಕೆ ಸಂಬಂಧಪಟ್ಟಿರುವುದು ಇದು (ಅಜಿತತೀರ್ಥಕರ ಪುರಾಣತಿಲಕಂ ೫–೩೦.ವ)

ಸಮವಕಾರ ಎಂದರೆ ವಸ್ತು ಪ್ರಸಿದ್ಧವಾದದ್ದು ದೇವರು, ದಾನವರು ನಾಯಕ, ವೀರರಸ–ಇದರಲ್ಲಿ ಮೂರು ಅಂಕಗಳು. ಇಲ್ಲಿ ಮೂರು ವಿಧದ ವಿದ್ರವಗಳು, ಮೂರು ವಿಧದ ಕಪಟಗಳು, ಮತ್ತು ಮೂರು ವಿಧದ ಶೃಂಗಾರಗಳು. ಯುದ್ಧದಿಂದ ಇಲ್ಲವೆ ಜಲದಿಂದ ಸಂಭವಿಸಿದ ವಿದ್ರವ, ಬೆಂಕಿ ಇಲ್ಲವೆ ಆನೆಗಳಿಂದ ಸಂಭವಿಸಿದ ವಿದ್ರವ, ನಗರದಲ್ಲಿ ಗಲಭೆಯಿಂದ ಸಂಭವಿಸಿದ ವಿದ್ರವ. ಹೀಗೆ ಮೂರು ಆನುಷಂಗಿಕವಾಗಿ, ದೈವವಶಾತ್ತಾಗಿ, ಇನ್ನೊಬ್ಬನಿಂದಾಗಿ ಆಗುವ ಮೂರು ಕಪಟಗಳು. ಧರ್ಮ ಅರ್ಥ, ಕಾಮ ಇವುಗಳಿಗಾಗಿ ಸಂಭವಿಸುವ ಮೂರು ತರದ ಶೃಂಗಾರಗಳು.

ನಾಟ್ಯಶಾಸ್ತ್ರದಲ್ಲಿ ಪ್ರಸ್ತಾವಗೊಂಡಿರುವ ವಿಷಯವಿದು.

ಅಜಿತತೀರ್ಥಕರ ಪುರಾಣತಿಲಕಂನಲ್ಲಿ ಪಂಚ ಸಂಧಿಗಳ ಕುರಿತ ಬರುತ್ತದೆ. (೫–೩೦ ವ)

ಪಂಚ ಸಂಧಿಗಳು ಎಂದರೆ ನಾಟಕದ ಶಿಲ್ಪದಲ್ಲಿ ಬರುವ ಐದು  ಇವೇ ಐದು ಸಂಧಿಗಳು ಮುಖ ಸಂಧಿಯಲ್ಲಿ ಕಥೆ ಇನ್ನೂ ಬೀಜರೂಪವಾಗಿರುತ್ತದೆ; ನಾಯಕನು ತನ್ನ ಕಾರ್ಯವನ್ನು ಆರಂಭಿಸಿರುತ್ತಾನೆ. ಪ್ರತಿಮುಖದಲ್ಲಿ ಕಥೆ ಇನ್ನೂ ಸಲ್ಪ ಬೆಳೆಯುತ್ತದೆ; ನಾಯಕನು ಕಾರ್ಯಸಾಧನೆಗಾಗಿ ಯತ್ನ ಮಾಡುತ್ತಾನೆ. 'ಗರ್ಭ'ಸಂಧಿಯಲ್ಲಿ ಕಾರ್ಯಫಲವು ಕೈಗೂಡುವ ಸೂಚನೆ ತೋರುತ್ತದೆ. 'ಅವಮರ್ಶ' ಸಂಧಿಯಲ್ಲಿ ಕಥೆ ಇನ್ನಷ್ಟು ಮುಂದುವರಿಯುತ್ತದೆ. ನಾಯಕನು ಕೋಪ ವ್ಯಸನ ವಿಲೋಭನಾದಿಗಳಿಂದ ಸ್ವಲ್ಪ ತಡೆದು ನಿಲ್ಲುತ್ತಾನೆ. ನಿರ್ವಹಣ ಸಂಧಿಯಲ್ಲಿ ಹಿಂದೆ ನಾನಾ ಮುಖವಾಗಿದ್ದ ಕಾರ್ಯವೆಲ್ಲವೂ ಏಕ ಮುಖವಾಗಿ ಮುಗಿಯುತ್ತದೆ.

ನಾಗವರ್ಮನ ಕಾವ್ಯಾವಲೋಕನದಲ್ಲಿ ದೃಶ್ಯಕಾವ್ಯದ ಕುರಿತು ವಿವರಗಳಿವೆ.

ಸವಸಂದಮುಖಂ ಪ್ರತಿಮುಖ
ಮವಮರ್ಶಂ ಗರ್ಭಮಂತೆ ನಿರ್ವಹಣಮೆನಿ-॥
ಪ್ಪುವವೆಯ್ದೆ ಸಂಧಿಯಕ್ಕುಂ
ಸುವಿಹಿತ ಕವಿಮಹಿತ ವಿತತಕೃತಿ ಪದ್ಧತಿಯೊಳ್ ॥ ಸೂ. ೨೪೬ ॥
ಉಪಯೋಗದೆ ಬೀಜ ಬಿಂ- ।
ದು ಪತಾಕೆ ಪ್ರಕರಿ ಕಾರ್ಯಮೆನೆ ಪಂಚವಿಧಂ ॥
ನಿಪುಣ ಕವಿರಚನೆಯೊಳ್ ಸ-
ಪ್ರಪಂಚದಿಂದೊಂದಿ ತೋರುಗುಂ ಸಂಧ್ಯಂಗಂ ॥ ಸೂ. ೨೪೭ ॥

ಇಲ್ಲಿ ತೋರುವ "ಮುಖ, ಪ್ರತಿಮುಖ, ಅವಮರ್ಶ, ಗರ್ಭ, ನಿರ್ವಹಣ" ಎಂಬುವುಗಳಿಗೆ ಸಂಧಿ ಎಂದೂ, "ಬೀಜ, ಬಿಂದು, ಪತಾಕೆ, ಪ್ರಕರಿ, ಕಾರ್ಯ" ಎಂಬುವುಗಳಿಗೆ ಸಂಧ್ಯಂಗ ಎಂದೂ ಹೆಸರು. ಸಂಧಿ ಎಂದರೆ ವಸ್ತು ರೂಪವಾದ ಅರ್ಥವನ್ನು ಕಥೆಯ ಬೆಳವಣಿಗೆಗನುವಾಗಿ ಅಲ್ಲಲ್ಲಿ ಸಂಧಿಸುವ ದೃಶ್ಯಕಾವ್ಯಶರೀರವಾದ ಶಬ್ದರೂಪವಾದರೆ, ಸಮಧ್ಯಂಗ ಎಂಬುದು ಆ ಶರೀರಾಂತರ್ಗತವಾದ ವಸ್ತು (ಕಥಾನಕ) ಅಲ್ಲಲ್ಲಿ ಕೂಟವಡೆದು ಶರೀರದಲ್ಲಿ ಹೊಳೆಯುವ ಆಂತರಿಕವಾದ ಕಥಾಭಾಗವು. ಇದರ ಹೆಚ್ಚಿನ ವಿವೇಚನೆಯನ್ನು ದಶರೂಪಕಾದಿ ಲಕ್ಷಣಗ್ರಂಥಗಳಲ್ಲೇ ಪರಿಶೀಲಿಸಿಕೊಳ್ಳಬೇಕು. ಗ್ರಂಥಕಾರನು ಈ ದೇಸಿಗಬ್ಬ ವಿವರಣಾಂತ್ಯ (ಗ್ರಂಥಾಂತ್ಯ)ದಲ್ಲಿ ಈ ಸಂಧಿ, ಸಂಧ್ಯಂಗಗಳನ್ನು ಸೂಚಿಸಿದುದರಿಂದ, ದೇಸಿಯೊಳಗೆ ದೃಶ್ಯಭೇದವಿದ್ದುದೆಂದೂ, ಆ ದೃಶ್ಯವೇ 'ಬಾಜನೆಗಬ್ಬ'ವೆಂದೂ ನಿರ್ಧರಿಸಿಕೊಳ್ಳುವಂತಿದೆ.

ಇದೇ ನಾಗವರ್ಮನಿಗಿಂತ (ಸು. ೧೧೪೫) ಸ್ವಲ್ಪ ಕಾಲಕ್ಕೆ ಮೇಲೆ ಕವಿಕಾಮ (ಸು. ೧೨೦೦)ನೆಂಬ ಬಲು ಮೇಲು ತರಗತಿಯ ಲಾಕ್ಷಣಿಕ ಕವೀಶ್ವರನೊಬ್ಬನಿದ್ದನು. ಅವನ ಇತರ ಗ್ರಂಥಗಳಾವವೂ ದೊರಕಲಿಲ್ಲ. ಆದರೆ, ಅತ್ಯುತ್ತಮವೆನ್ನಿಸಿದ ಶೈಲಿ, ವಿಷಯ ಗಳನ್ನೊಳಕೊಂಡ "ಶೃಂಗಾರರತ್ನಾಕರ" ಎಂಬ ಲಕ್ಷಣಗ್ರಂಥವೊಂದು ಪ್ರಕಟವಾಗಿದೆ. ಆ ಗ್ರಂಥದ ತೃತೀಯ ಪರಿಚ್ಛೇದಾಂತದಲ್ಲಿ ಸಾರಿ ಹೇಳುವ ಮಾತನ್ನು ಭಾವಿಸಿರಿ:

ಇದನೋದಿ ತಿಳಿದ ಕವಿ ಮೆರೆ-
ವುದು ಪೇೞ್ದಭಿನಯಿಸಿ ನಾಟಕಂಗಳನಂತೇಂ ।
ಪದೆದೊಡೆ ಬರ್ಕ್ಕುಮೆ ಕಣ್ಣೆ -।
ಲ್ಲದೆಯುಂ ಬಗೆದೆಗೆವರೊಳರೆ ವರ್ಣಕ್ರಮಮಂ ॥ ೯೨ ॥ (ಪರಿ.೩)

ಉತ್ತಮ ನಾಟಕ ಕವಿಯಾಗತಕ್ಕವನು ಎಂಥವನಾಗಿರಬೇಕು ಎಂಬುದನ್ನಿಲ್ಲಿ ಸೂಚಿಸುತ್ತಾನೆ. ಈ ಶೃಂಗಾರ ರತ್ನಾಕರವೆಂಬ ಲಕ್ಷಣಗ್ರಂಥವನ್ನು ಮೊದಲು ಓದಿ ಮನನ ಮಾಡಿಕೊಳ್ಳಬೇಕು. ಆಮೇಲೆ ಉದ್ದಿಷ್ಟ ನಾಟಕವನ್ನು ಬರೆಯಬೇಕು, ಮತ್ತು (ರಂಗದಲ್ಲಿ) ಅವನು ಅಭಿನಯಿಸಿ ಸಹೃದಯರಾದ ನೋಟಕರಿದಿರಿನಲ್ಲಿ "ಮೆರೆವುದು." ಇದರಿಂದ ಉತ್ತಮ ನಾಟಕಕವಿ ಎನ್ನಿಸಬೇಕಾದರೆ ಸ್ವತಃ ಅಭಿನಯ ನಿಪುಣನಾದ ನಟನಿರಬೇಕೆಂದು ಸೂಚಿಸಿದಂತಾಗುತ್ತದೆ.

ಭಾರತಿ ಸಾತ್ವ(ತಿ) ಕೈಶಿ(ಕಿ)
ಯಾರಭಟಿಯುಮೆಂಬ ವೃತ್ತಿಯೊಳ್ ರಸಮೆಂ ಸಂ
ಚಾರಿಸುವ (ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೯ -೨೬)

ಈ ಪ್ರವೃತ್ತಿಯನ್ನು ಒಟ್ಟಾರೆ ನಾಲ್ಕು ವಿಧಗಳನ್ನಾಗಿ ವಿಭಾಗಿಸಬಹುದೆಂದೂ ಹೇಳಲಾಗಿದೆ. ಆ ನಾಲ್ಕು ವಿಭಾಗಗಳೆಂದರೆ (೧)ಭಾರತೀ, (೨)ಸಾತ್ವತೀ, (೩)ಕೈಶಿಕೀ, ಮತ್ತು (೪) ಆರಭಟೀ. 'ಪ್ರವೃತ್ತಿ' ಎಂಬ ಹೆಸರನ್ನು ಇಲ್ಲಿ ಕೊಡಲಾಗಿದ್ದರೂ ಮಿಕ್ಕ ಎಲ್ಲ ಸಂದರ್ಭಗಳಲ್ಲಿ ಅದನ್ನು 'ವೃತ್ತಿ' ಎಂದೇ ಕರೆಯಲಾಗಿದೆ. ಈ ನಾಲ್ಕು 'ವೃತ್ತಿ'ಗಳ ವ್ಯಾಖ್ಯೆ-ವೈಶಿಷ್ಟ್ಯಗಳು ಹೀಗಿವೆ:-

ಭಾರತೀ: ಇದರಲ್ಲಿ ಮಾತು ಮುಖ್ಯ. ಗಂಡಸರೆ ಪಾತ್ರ ವಹಿಸತಕ್ಕದ್ದು. ಹೆಂಗಸರು ಇರತಕ್ಕದ್ದಲ್ಲ('ಸ್ತ್ರೀವರ್ಜಿತಾ'). ಮಾತು-ಸಂಭಾಷಣಗಳು 'ಸಂಸ್ಕೃತ' ಭಾಷೆಯಲ್ಲಿ. ನಟರು ಪಾತ್ರಗಳ ಹೆಸರುಗಳನ್ನು ವಹಿಸದೆ ತಂತಮ್ಮ ನಿಜನಾಮಧೇಯಗಳಿಂದಲೆ ಭಾಗವನ್ನು ವಹಿಸುವರು.

ಸಾತ್ವತೀ: ವಾಚಿಕಾಭಿನಯ, ಆಂಗಿಕ ಅಭಿನಯಗಳಿಂದ ಆಡತಕ್ಕದ್ದು. ಹರ್ಷ-ಶೋಕ ಮೊದಲಾದ ಉತ್ಕಟ ಭಾವನೆಗಳಿರತಕ್ಕದ್ದು.

ಕೈಶಿಕೀ: ಇದರಲ್ಲಿ ಸ್ತ್ರೀಯರೂ ಭಾಗವಹಿಸಬಹುದು. ವೇಷಭೂಷಣಗಳು ನಯವಾದುವೂ ಇರಬೇಕು, ಉಜ್ವಲವಾದುವೂ ಇರಬೇಕು. ನೃತ್ಯಗೀತಗಳೂ ಸಾಕಷ್ಟಿರಬೇಕು. ಶೃಂಗಾರಕ್ಕೆ ಹೆಚ್ಚಿನ ಅಭಿವ್ಯಕ್ತಿ.

ಆರಭಟೀ: ಕಪಟ, ಮೋಸ, ಕಲಹ, ಜಾದು ಇಂತಹಗಳಿಗೆ ಸಂಬಂಧಿಸಿದ್ದು. ಈ ವೃತ್ತಿಗಳ ಬಗ್ಗೆ ಬೇರೆ ಬೇರೆ ಕಡೆ ಬೇರೆ ಬೇರೆಯಾಗಿ ಹೇಳಿದ್ದರಿಂದ ಇವುಗಳ ನಿಶ್ಚಿತ ಸ್ವರೂಪ ಇಂತಹದು ಎಂದು ತಿಳಿಯುವುದು ಸುಲಭವಾಗಿಲ್ಲ.

೧. ಕೈಶಿಕ್ಯಾದಿವೃತ್ತಿ (ರಸಾನುಗುಣವಾದ ಪದಗಳ ಜೋಡಣೆ.) ೨. ನಡತೆ
(ಪಂಪ ಭಾರತ ೧-೯)

ನಾಟ್ಯಶಾಸ್ತ್ರದಲ್ಲಿ ಇದು ಬರುತ್ತದೆ. ಕೈಶಕೀ, ಭಾರತೀ, ಸಾತ್ವತೀ, ಆರಭಟೀಯೆಂಬುವು ವೃತ್ತಿಗಳು.

ಮಧುಕೈಟಭರನ್ನು ಕೊಲ್ಲಲು ವಿಷ್ಣುವು ಅಂಗಹಾರಗಳಿಂದ ಯುದ್ಧಮಾಡುತ್ತಾನೆ. ಅವರ ಹೆಜ್ಜೆಯ ಭಾರದಿಂದ ಭಾರತೀವೃತ್ತಿ ಹುಟ್ಟಿತು ಎಂಬ ಕತೆಯಿದೆ. ಅಮೇಲೆ ಶಾಂರ್ಙಧನುಸ್ಸಿನಿಂದ ಅತಿ ಸತ್ವಯುತವಾಗಿ ಬಾಣ ಬಿಡುವಾಗ ಸಾತ್ವತೀ ಹುಟ್ಟಿತು ವಿಷ್ಣುವು ಶಿಖಾ (ಕೇಶವನ್ನು) ಕಟ್ಟಿಸಜ್ಜಾದಾಗ ಕೈಶಿಕೀ ಹುಟ್ಟಿತು ಭಾರತೀಯಲ್ಲಿ ಮಾತು ಮುಖ್ಯ. ಸ್ತ್ರೀಪಾತ್ರವರ್ಜ್ಯ ಸಂಸ್ಕೃತಭಾಷೆ ನಾಲ್ಕು ಅಂಕಗಳಿರುತ್ತವೆ. ಭಾರತೀಲೋಕಧರ್ಮಿ ಮಿಕ್ಕ ಮೂರು ನಾಟ್ಯಧರ್ಮಿಗಳು ಭಾರದಿಂದ ಭಾರತೀ ಹುಟ್ಟಿದಂತೆ–ಉಳಿದ ಮೂರು ಶಬ್ದ ಸಾಮ್ಯವನ್ನು ಹೊಂದಿವೆ.

ವಿವರಗಳಿಗೆ ನೋಡಿ: ನಾಟ್ಯಧರ್ಮಿ, ನಾಟಕ

ಮುಳಿಯ ತಿಮ್ಮಪ್ಪಯ್ಯ ೧೯೮೮ ಶ್ರದ್ಧಾಂಜಲಿ ಸಂಪುಟ. ೨ ಪುಟ. ೪೨೫

ಆಮೂರ ಜಿ. ಎಸ್. ೨೦೦೬ ಶ್ರೀರಂಗ ಸಾರಸ್ವತ (ಸಂಪುಟ.೮) ಪುಟ. ೨೫೫, ೬೪೭

**೪೩೨. ನಾಡವರ್ಗಳ್**

*“ಆ ನಾಡವರ್ಗಳ್ ಪದನಱಿದು ನುಡಿಯಲುಂ, (ಪರರು) ನುಡಿದುದಂ ಅಱಿದು ಆರಯಲುಂ ಆರ್ಪರ್, ನಿಜದಿಂ ಚದುರರ್. ಕುಱಿತೋದದೆಯುಂ ಕಾವ್ಯಪ್ರಯೋಗ ಪರಿಣತಮತಿಗಳ್ (ಪ್ರ.ಪ.ಪ.೩೮). ಕುರಿತವರಲ್ಲದೆ ಮತ್ತಂ ಪೆರರುಂ ತಂತಮ್ಮ ನುಡಿಯೊಳ್ ಎಲ್ಲರ್ ಜಾಣರ್ ... (೩೯). ಜಾಣರ್ಕಳಲ್ಲದವರುಂ ಪೂಣಿಗರ್ (ಕೃತಪ್ರತಿಜ್ಞರು); ಅರಿಯದೆಯುಂ (ಇತರರ ಕೃತಿಯೊಳಗೆ) ಅವಗುಣದಾ ತಾಣಮದು ಇನಿಸು ಎಡೆವೆತ್ತೊಡೆ ಮಾಣದೆ ಅದನೆ ಪಿಡಿದು ಅರಿವವೋಲ್ ಕೃತಿಗಳಂ ಕೆಡೆನುಡಿವರ್ (೪೦).”*

ನಾಡವರ್ಗಳ್ ಎಂದರೆ ‘ನಾಡವರು’ ‘ಆಯಾ ನಾಡಿನ ಮನುಷ್ಯರು’ ಎಂದು ಅರ್ಥ. ಇದರ ಕುರಿತು ಕವಿರಾಜಮಾರ್ಗಕಾರನು ಹೀಗೆ ಹೇಳಿದ್ದಾನೆ:

ಇದರಿಂದ ಕನ್ನಡನಾಡಿನ ಆಗಿನ ಸಂಸ್ಕೃತಿಯ ಮಟ್ಟ ಹೇಗಿತ್ತೆಂಬುದು ಗೊತ್ತಾಗುತ್ತಿದೆ. ಆಗ ಸಂಸ್ಕೃತ ಪ್ರಾಕೃತಗಳು ಮಾತ್ರವೇ ಪ್ರಮುಖ ಸಾಹಿತ್ಯಭಾಷೆಗಳು. ಅವುಗಳೊಳಗೆ ಲಕ್ಷ್ಯ ಲಕ್ಷಣಗಳೆಂಬ ಎರಡೂ ಬಗೆಯ ಗ್ರಂಥಗಳು ದೊರೆಯುತ್ತಿದ್ದುದರಿಂದ ‘ಬಗೆದಂತೆ ಸಮರ ಪೇಳಲ್’ ಎಂದರೆ ಬೇರೆ ಯಾರ ಸಹಾಯಕ್ಕೂ ಎರವಾಗದೆ ಆ ಗ್ರಂಥಗಳಿಂದಲೇ ತಮ್ಮ ಸಂದೇಹಗಳನ್ನು ಬಗೆಹರಿಸಿಕೊಂಡು, ಹೊಸ ಪ್ರಂಬಂಧಗಳನ್ನು ನಿರ್ಮಿಸಬಹು ದಾಗಿತ್ತು. ಕನ್ನಡದ ಪರಿಸ್ಥಿತಿ ಹಾಗಿದ್ದಿಲ್ಲ. ಕನ್ನಡಕ್ಕೆ ನಾಡವರೇ ಒವಜರಾಗಿದ್ದರು. ‘ತಿರಿಕೊರಗೊಂಡು’ (ಇತರ ಲಕ್ಷಣಗ್ರಂಥಗಳನ್ನೋದಿ ಅವಗಾಹಿಸಿಕೊಂಡು) ಕನ್ನಡ ಕವಿ ಲೇಖಕರಿಗೆ ಬೋಧಿಸಲು ಅವರಿಗೆ ಅಸಾಧ್ಯವಾಗಿತ್ತು. ‘ಕನ್ನಡಕ್ಕೆ ನಾಡವರೊವಜರ್’ ಎಂಬುದು, ಮೇಲಿಂದ ಮೇಲೆ ನಾಡವರನ್ನು ಹೊಗಳಿದಂತೆ ಭಾಸವಾಗುತ್ತಿದೆ. ಆದರಿದು,

ಕನ್ನಡ ಸಾಹಿತ್ಯದೊಳಗಿದ್ದ ನ್ಯೂನತೆಯನ್ನೇ ಗ್ರಂಥಕಾರನು ಯಾರಿಗೂ ನೋವಾಗದಂತೆ ಬಣ್ಣಿಸಿದ ಬಗೆ ಎಂಬುದನ್ನು ಮರೆಯಲಾಗದು. 'ಕನ್ನಡಕ್ಕೊವಜರಾದ ನಾಡವರು, ಪರಮಾಚಾರ್ಯರವೋಲ್ ಸ್ತೈತಿರಲಜೆಯರ್' ಎಂಬುದರಿಂದ ಆ ಭಾವನೆ ಸಿದ್ಧವಾಗುತ್ತಿದೆ."

*ವಿವರಗಳಿಗೆ ನೋಡಿ: ಮುಳಿಯ ತಿಮ್ಮಪ್ಪಯ್ಯ ೧೯೮೮ ಶ್ರದ್ಧಾಂಜಲಿ ಸಂಪುಟ. ೨ ಪುಟ. ೪೦೪.*

**೪೩೩. ನಾಡಾಡಿ**

"ಕುಂತಿನೆಲದೊಳ್ ಮೆಯ್ಯನೀಡಾಡಿ **ನಾಡಾಡಿ**ಯಲ್ಲದೆ ಪಳಯಿಸಿ" ಎಂದು ಪಂಪ ಭಾರತದಲ್ಲಿ ಬರುತ್ತದೆ. *(ಪಂಪ ಭಾರತ ೨-೨೪ ವ)*

*ನಾಡಾಡಿಗಳಿದರೂಪುಂ*
*ಗಾಡಿಯುಮೆಸೆದೊಪ್ಪೆ ದೇಸೆ ಕಣ್ಗಂ ಮನಕಂ*

*(ಅಜಿತತೀರ್ಥಂಕರ ಪುರಾಣ ತಿಲಕಂ ೫-೨೨)*

ನಾಡಾಡಿಗಳೆಂದರೆ ಜನಸಾಮಾನ್ಯರು. ನಾಡಾಡಿ ಎಂದರೆ ಸಾಮಾನ್ಯ ಮನುಷ್ಯ. ಒಂದು ನಾಡಿನಲ್ಲಿ ವಾಸಿಸುತ್ತಿರುವವನು. ದೇಸಿಗ; ಹಾಳಾದವನು ಎಂಬರ್ಥ. ಕಿಟ್ಟೆಲ್ ನಿಘಂಟಿನಲ್ಲಿದೆ. ನಾಡಾಡಿಯೆನ್ನುವುದಕ್ಕೆ ಅನಂತರ ಹೀನಾರ್ಥವು ಬಂದಿತು. ನಾಡಾಡಿಯೆಂದರೆ ಸಾಮಾನ್ಯ ಮನುಷ್ಯರು ವರ್ಗೀಕರಿಸಿದಾಗ 'ನಾಗರಿಕ' 'ಅನಾಗರಿಕ' ಎಂಬ ಅರ್ಥವು ಬರುತ್ತದೆ.

*ವಿವರಗಳಿಗೆ ನೋಡಿ: ಮರಿಯಪ್ಪ ಭಟ್ಟ ಎಂ. ೧೯೬೯*
*ಕಿಟ್ಟೆಲ್‌ರ ಕನ್ನಡ-ಇಂಗ್ಲೀಷ್ ನಿಘಂಟು ಪುಟ. ೯೦೩*

**೪೩೪. ನಾಡೋಜ**

ಪಂಪನೆಂದರೆ ನಮ್ಮ ಕ್ನನಡದ ವಿಶಿಷ್ಟ ಸಂಸ್ಕೃತಿಯ ತಿರುಳು; ಅದ್ವಿತೀಯ ಮಹಾಕವಿ; 'ಚತುರಂಗಬಲ ಭಯಂಕರಣ', 'ನಾಡೋಜ', ಯಾವ ನಾಡಿನಲ್ಲಾದರೂ ಸರಿ ಇಂಥ ವಿಭೂತಿಪುರುಷರುದಯಿಸಿದರೆ ಪುಣ್ಯ ಪರಿಪಾಕವದು ಎಂದೇ ಹೇಳಬೇಕು. ಸುಸಂಸ್ಕೃತರಾದ ಆಯಾ ನಡವರು ಅದರಿಂದೆಚ್ಚರವಡೆಯದಿರಲಾರರು. ಕಾಳಿದಾಸನಿಂದ ಉದ್ಬುದ್ಧವಾದ ನಮ್ಮ ಭಾರತವರ್ಷ, ಷೇಕ್‌ಸ್ಪಿಯರನ್ನು ಹಾಡಿ ಹುರುಪ್ಪೊಂದಿದ ಇಂಗ್ಲೆಂಡು, ಮೊದಲಾದ ದೇಶಗಳೆ ಇದಕ್ಕೆ ದೃಷ್ಟಾಂತ. ಹಿಂದಿನ ಸಂಸ್ಕೃತಿಯ ನೆಲವನ್ನು ಹದವಡೆಯಿಸಿ ಅಂದಿನ ಸಂಸ್ಕೃತಿಯ ಬೀಜವನ್ನು ಬಿತ್ತಿ, ಮುಂದಿನ ಸಂಸ್ಕೃತಿಯ ಬೆಳೆಯನ್ನು ಬೆಳೆಯಿಸುವ ಉತ್ತಮ ಕೃಷಿಕರೆಂದರೆ ಮಹಾಕವಿಗಳು. ನಮ್ಮ ಪಂಪನು ಕನ್ನಡದಲ್ಲಿ ಅಂಥ ಕೃಷಿಕರ ಸಾಲಿಗೆ ಸೇರಿದವನು. ಅವನ ಹಿರಿಯರ ಹುಟ್ಟೂರು. 'ವೆಂಗಿಪಟು'. ಆದರೆ ಅವನು ಹುಟ್ಟಿ ಬೆಳೆದ, ಬೆಳೆದು ಬಾಯ್ದೆರೆದ ನಾಡಾವುದೆಂಬುದರ ನೆಡುಗುರಿ ಇನ್ನೂ ಸರಿಯಾಗಿ ಕಂಗೊಳಿಸಲಿಲ್ಲವೆಂದೇ ಹೇಳಬೇಕು. ಪುಲಿಗೆರೆಯೇ ಆ ಪುಣ್ಯಭೂಮಿ ಎಂದು ತರ್ಕಿಸಲಿಕ್ಕೆ ಅಡಿಗಟ್ಟೇನೂ ಇದೆ. ಆದರೆ ಆ ಸಿದ್ಧಾಂತದ ಇಡಿಗಟ್ಟು ಇನ್ನೂ ನೆಲೆಗೊಳ್ಳಲಿಲ್ಲ.

ಮುಳಿಯ ತಿಮ್ಮಪ್ಪಯ್ಯನವರು ಪಂಪನಿಗೆ ನಾಡೋಜನೆಂಬ ಹೆಸರು ಕೊಟ್ಟರು. ಅನಂತರ ಪಂಪನಿಗೆ ನಾಡೋಜ ಎಂಬುದು ಜನಪ್ರಿಯವಾಯಿತು. ನಾಡಿಗೆ ಓಜನಂತೆ (ಉಪಾಧ್ಯಾಯನಂತೆ) ಇರುವುದು ಎಂದು ಇದರ ಅರ್ಥ. ಪ್ರಶಸ್ತಿಗಳಿಗೂ ನಾಡೋಜನೆಂಬ ಹೆಸರು ಇಡುವಂತಾಯಿತು ಎಂಬುದು ಗಮನಾರ್ಹ.

*ವಿವರಗಳಿಗೆ ನೋಡಿ: ಮುಳಿಯ ತಿಮ್ಮಪ್ಪಯ್ಯ ೨೦೦೬ ನಾಡೋಜಪಂಪ ಪುಟ. ೧೫೦*

**೪೩೫. ನಾಮಕರಣ**

ಜಾತಕರ್ಮದ ಸಂದರ್ಭದಲ್ಲಿ ತಂದೆಯು ಮಗುವಿಗೆ ಇಡುವ ಹೆಸರನ್ನು ಮಗುವಿನ ಕಿವಿಯಲ್ಲಿ ಮೂರು ಬಾರಿ ಹೇಳಿದ ಬಳಿಕ ಮಗುವಿಗೆ 'ಬಾಯೆಣ್ಣೆ'ಯನ್ನು ಇಕ್ಕುವ ಪದ್ಧತಿಯನ್ನು ಹರಿಹರನು ಪ್ರಸ್ತಾಪಿಸಿದ್ದಾನೆ. ಮಗುವಿಗೆ 'ಬಾಯೆಣ್ಣೆ'ಯನ್ನು ಇಕ್ಕುವ ಕ್ರಮದ ಬಗ್ಗೆ ಇತರೆಡೆಗಳಲ್ಲಿಯೂ ಮಾಹಿತಿ ದೊರೆಯುತ್ತದೆ. ನಾಮಕರಣವು ತಂದೆ ತಾಯಿ ಮತ್ತು ಮಗುವಿಗೆ ಮಾತ್ರ ತಿಳಿದಿರಬೇಕು ಎನ್ನುವ ನಂಬಿಕೆಯಿತ್ತು. ಅದಕ್ಕಾಗಿ ಮಗುವಿಗೆ ಕಿವಿಯಲ್ಲಿ ಮಾತ್ರ ಹೆಸರನ್ನು ಹೇಳುವ ಪದ್ಧತಿ ರೂಢಿಯಲ್ಲಿತ್ತು. ಇದಕ್ಕೆ ಲಿಂಗ ವ್ಯತ್ಯಾಸಗಳಿರಲಿಲ್ಲ. ಆಮೇಲೆ ತಂದೆಯು ತನ್ನ ನಾಲ್ಕನೆಯ ಬೆರಳಿನಲ್ಲಿ ಮೂರು ಬಾರಿ 'ಬಾಯೆಣ್ಣೆ'ಯನ್ನು ಮಗುವಿನ ಬಾಯಿಗೆ ಇಡುವ ಕ್ರಮವಿತ್ತು.

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಸಾಮಾನ್ಯವಾಗಿ ಕಂಡು ಬರುವ ಈ ಅಂಶಗಳು ಸಂಸ್ಕೃತಿಯೊಂದರ ಸೂಚನೆಯನ್ನು ಕೊಡುತ್ತವೆ. ಧಾರ್ಮಿಕವಾಗಿ ವ್ಯತ್ಯಾಸಗಳಿದ್ದರೂ ಮೂಲ ಆಶಯವು ಮುಖ್ಯವಾಗಿ–'ಸ್ತ್ರೀದೇವತಾರ್ಚನೆಯಿಂದ ಮಕ್ಕಳಾಗುತ್ತವೆ' ಎನ್ನುವ ನಂಬಿಕೆಯಿಂದ ಕೂಡಿರುತ್ತವೆ. ಜೈನಕಾವ್ಯಗಳು ಕೃಷ್ಣಯಕ್ಷಿಯ ಆರಾಧನೆಯಿಂದ ಮಕ್ಕಳಾಗುತ್ತವೆ ಎನ್ನುವ ನಂಬಿಕೆಯನ್ನು ಪ್ರತಿಪಾದಿಸಿವೆ. ಸ್ತ್ರೀದೇವತೆ ಮುಖ್ಯವಾಗಿ ಫಲವತ್ತತೆಯನ್ನು ಕರುಣಿಸುವವಳು ಎನ್ನುವ ನಂಬಿಕೆಯೇ ಇದಕ್ಕೆ ಕಾರಣವಾಗಿರಬಹುದು. ಗೌರಿಯು ಸಮೃದ್ಧಿಯ ಸೂಚನೆಯೆಂದು ದೇವಿಪ್ರಸಾದ ಚಟ್ಟೋಪಾಧ್ಯಾಯ ಅವರು ತಮ್ಮ 'ಲೋಕಾಯತ' ಕೃತಿಯಲ್ಲಿ ಅಭಿಪ್ರಾಯ ಪಡುತ್ತಾರೆ.

ಮಗುವಿಗೆ ನಾಮಕರಣ ಮಾಡುವುದು ಸರ್ವೇಸಾಮಾನ್ಯ ವಿಷಯ. ಈ ನಾಮಕರಣಕ್ಕಾಗಿ ಹೆಸರನ್ನು ಆಯ್ಕೆ ಮಾಡುವುದು ಜನಪದರಿಗೆ ಸಮಸ್ಯೆಯಾಗಿ ಕಾಡಿಲ್ಲ. ಅವರು ಸಹಜವಾಗಿ ಅಜ್ಜ–ಅಜ್ಜಿಯರ ಹೆಸರುಗಳನ್ನೇ ಮೊಮ್ಮಕ್ಕಳಿಗೆ ಇಡುವುದನ್ನು ಕಾಣುತ್ತೇವೆ. ಕೆಲವೊಮ್ಮೆ ಗುರುವಿನ ಇಲ್ಲವೆ ದೇವರ ಹೆಸರುಗಳನ್ನು ಇಟ್ಟು ಬಿಡುತ್ತಾರೆ. ಅದೇ ರೀತಿಯಾಗಿ ವಡ್ಡಾರಾಧನೆಯಲ್ಲಿ ಕಥೆಗಳಲ್ಲೂ ಒಂದು ಮಗು ಹುಟ್ಟುವಾಗ ನಡೆದ ಘಟನೆ ಅಥವಾ ಸಂದರ್ಭಗಳನ್ನು ಆಧರಿಸಿ ಹೆಸರುಗಳನ್ನು ಇಟ್ಟಿರುವುದು ಕಂಡುಬರುತ್ತದೆ. ಉದಾ : ನಾಗಶ್ರೀ; ಸಿರಿದಿಣ್ಣ; ಗುರುದತ್ತ; ದಂಡಕ.

ಮುಖ್ಯವಾಗಿ ನಾಮಕರಣವನ್ನು ಹುಟ್ಟಿ ಹತ್ತು ಅಥವಾ ಹದಿನೈದು ದಿನಗಳಲ್ಲಿ ಮಾಡಬೇಕು. ಇತರ ಶುಭದಿನಗಳಲ್ಲಿಯೂ ಆಗಬಹುದು. ನಕ್ಷತ್ರ, ಮರ, ನದಿ, ಅಂತ್ಯಜ,

ಪರ್ವತ, ಪಕ್ಷಿ, ನಾಗಭಯಂಕರ ಇತ್ಯಾದಿ ಅರ್ಥದ ಹೆಸರು ಹುಡುಗಿಗೆ ಇರಬಾರದು.

ಸ್ತ್ರೀಯನ್ನು ಯಾವಾಗಲೂ ಭವತಿ, ಸುಭಗೀ, ಶೋಭನೆಯೆಂದು ಕರೆಯಬೇಕು ಎಂದು ಮನು ಹೇಳುತ್ತಾರೆ.

ಹುಟ್ಟಿದ ಮಗುವಿಗೆ ಯಾವುದಾದರೂ ಕಾಯಿಲೆ ಬಂದರೆ ಅಥವಾ ಮಗು ದೇವರ ಹರಕೆಯಿಂದ ಹುಟ್ಟಿದರೆ ಆ ಮಗುವಿಗೆ ಆಯಾ ದೇವರ ಹೆಸರಿಡುವುದು ರೂಢಿ. ಇಲ್ಲಿಯೂ ಅದೇ ಅಮಶವು ಮುಖ್ಯವಾಗಿದೆ. ವ್ಯತ್ಯಾಸವೆಂದರೆ–ಮೇಲು ಜಾತಿಯ ಜನರಿಗೆ ಒಂದು ರೀತಿಯ ಹೆಸರು ಕೆಳ ಜಾತಿಯ ಜನರಿಗೆ ಮತ್ತೊಂದು ರೀತಿಯ ಹೆಸರಿರುತ್ತದೆ. ಮತ್ತು ಮೇಲು ಜಾತಿಯ ಜನರಲ್ಲಿ ಅಜ್ಜನ ಹೆಸರನ್ನು ಮೊಮ್ಮಗನಿಗೆ ಇಡುತ್ತಾರೆ. ಮಗುವಿನ ತಂದೆಯ ಹೆಸರನ್ನು ಮೊದಲನೆಯ ಮಗನಿಗೆ; ತಾಯಿಯ ಹೆಸರನ್ನು ಮೊದಲ ಮಗಳಿಗೆ; ತಾಯಿಯ ತಂದೆ (ಅಜ್ಜ) ಎರಡನೆಯ ಮಗನಿಗೂ ತಾಯಿಯ ತಾಯಿಯ ಹೆಸರನ್ನು ಎರಡನೆಯ ಮಗಳಿಗೂ ಇಡುವುದು ರೂಢಿ. ಆದರೆ ಇದೇ ಮಾದರಿಯ (ಅನುವಂಶಿಕ ಹೆಸರು) ಹೆಸರಿಡುವ ಕ್ರಮವು ಬುಡಕಟ್ಟು ಜನರಲ್ಲಿಲ್ಲ. ಮತ್ತು ಬುಡಕಟ್ಟು ಜನರ ಹೆಸರು ಅವರು ಹುಟ್ಟಿದ ದಿನ ಅಥವಾ ಕೌಟುಂಬಿಕ ಹಿರಿಯರ ಆಸಕ್ತಿಯ ಮೇಲೆ ನಿರ್ಧರಿತವಾಗುತ್ತದೆ. ಸೋಮವಾರ ಹುಟ್ಟಿದರೆ ಚೋಮ (ಸೋಮ ಚೋಮ: ಪುಲ್ಲಿಂಗ) ಚೋಮ (ಸ್ತ್ರೀಲಿಂಗ) ಮಂಗಳವಾರ ಹುಟ್ಟಿದರೆ (ತುಳುವಿನಲ್ಲಿ ಮಂಗಳವಾರಕ್ಕೆ ಅಂಗಾರ ಎಂದು ಕರೆಯುತ್ತಾರೆ) ಅಂಗಾರ.

ಗಂಡು ಮಗುವಾದರೆ ದೇವಸ್ಥಾನಕ್ಕೆ ಬಂದು ಚವಲ (ಮೊದಲನೆಯ ಬಾರಿ ದೇವರಿಗೆ ಮುಡಿಯೊಪ್ಪಿಸುವುದು ಅಥವಾ ಕ್ಷೌರಮಾಡಿಸುವುದು) ಮಾಡಿಸುವುದು ಒಂದು ಸಾಂಸ್ಕೃತಿಕ ನಂಬಿಕೆಯಾಗಿದೆ.

ಸಂಪ್ರದಾಯವಂತರಲ್ಲಿ ಮಕ್ಕಳಿಗೆ ಕುಲಾಚಾರದ ದೇವರ ನಾಮಗಳಂತೆ, ಆ ದೇವರ ಆಯುಧಾದಿ ಹೆಸರುಗಳೂ ಮನೆತನದಲ್ಲಿ ನಡೆದು ಬಂದಿದೆ. 'ಬಸವ' ಶಿವನ ವಾಹನ; ಮಯೂರ ಸೇನಾನಿ ಸ್ಕಂದನ ವಾಹನ, ಕದಂಬ ವಂಶದಲ್ಲಿ 'ಶಿವ–ರಥ' ರಾಜನಾದವನು; ಸಿಂಘಣ ಇದೇ ಬಗೆಯ ಹೆಸರು. ಎರಡನೆಯ ಪುಲಿಕೇಶಿಯ ತಂದೆ ಕೀರ್ತಿವರ್ಮನನ್ನು 'ಕತ್ತಿ'ಯರಸರನೆಂದು ಸಂಬೋಧಿಸಿದ ತಾಮ್ರಪಟವುಂಟು. ಇದಕ್ಕೆ ಸಂಬಂಧಿಸಿದಂತೆ ಶಂ.ಬಾ. ಅವರ ವಾದ ಹೀಗಿದೆ:

ಹೆಣ್ಣುಮಕ್ಕಳಿಗೆ ನದೀ ಹೆಸರನ್ನು ಇಡಕೂಡದು ಎಂಬ ವಾಡಿಕೆಯುಂಟಾಗಲು ಕಾರಣವೇನಿರಬಹುದು? ನದಿಯು ಕೆಳಕೆಳಗೆ ಇಳಿಯುತ್ತ ಹೋಗುವವಳು (ಆಪಗಾ). ಕೆಳಗೆ ಹರಿಯುತ್ತ ಹೊರಡುವುದು ಅಧೋಮಾರ್ಗದಲ್ಲಿ ಸಾಗಿದಂತೆ. ಆದಕಾರಣ ಸ್ತ್ರೀಯರಿಗೆ ನದಿಯ ಹೆಸರು (ಇಂತಹ ಆದರ್ಶವು) ಅವರಿಗೆ ಬೇಡ; ಎಂದು ಈ ನಿರ್ಬಂಧದ ಕಾರಣವನ್ನು ಹೇಳಲಾಗುತ್ತದೆ. 'ನಾರಿ : ನೀರೆ' ಈ ಪ್ರಾಚೀನ ಸಂಕೇತ (ಪ್ರತಿಮೆ) ಸಂಸ್ಕೃತ ಸಂಪ್ರದಾಯವಂತರಲ್ಲಿ ಮರೆತು ಹೋದುದು ಸ್ಪಷ್ಟವಿದೆ. (ನಾರಿ)

ನೀರೆಯರ ನೀರು ಅವರನ್ನು ಸನ್ಮಾರ್ಗದಿಂದ ದೂರ ಒಯ್ಯುವುದು ಎಂಬ ಅನುಭವ ಬಂದ ಸಮಾಜದಲ್ಲಿ ಈ ನಿರ್ಬಂಧ ಅವಶ್ಯವೆನಿಸಿರಲಿಕ್ಕೆಬೇಕು. ನೀರು ಕೆಳಕೆಳಗೆ ಹೋಗುವುದು ನಿಸರ್ಗದ ನಿಯಮವೆ ಆಗಿದೆ. ಮಹಿಳೆಯರಿಗೆ ಗಂಗಾ, ಗೋದಾ, ಯಮುನಾ, ಕಾವೇರಿ, ಕೃಷ್ಣವೇಣಿ ಈ ಬಗೆಯ ನದೀನಾಮ ಇರಲೇಬಾರದಾಗಿತ್ತು. ಏಕೆಂದರೆ, ನದಿಗಳು ಎಂದೂ ಮೇಲ್ಗಡೆ ಹರಿಯುವದಕ್ಕೆ ಪ್ರಾರಂಭಿಸಿಲ್ಲ. ನದಿಯ ಹಸರು ಸ್ತ್ರೀಲಿಂಗವಾಚಿ. ಹೆಣ್ಣು ಕೂಸುಗಳಿಗೆ ಇಡಲು ಯೋಗ್ಯವಾದುದು. ಜಲತತ್ವವು ಉತ್ಪತ್ತಿ ಲಕ್ಷಣವುಳ್ಳದ್ದೆಂದು ಹೆಣ್ಣಿಗೆ ನದಿಯ ಹೆಸರು ಇಡಬೇಕೆಂಬ ಪದ್ಧತಿಯು ಬಂದಿರಬಹುದು. ಆದರೆ, ಆ ರೀತಿ ನಾಮಕರಣ ಸಲ್ಲದು ಎಂಬುದಕ್ಕೆ ನದಿಯ ಗತಿ ಅಧೋಗತಿ ಎಂಬುದು ಕಾರಣವಾಗಿರಬೇಕು ಎಂಬ ವಿಧಾನವನ್ನು ಗ್ರಂಥದಲ್ಲಿ ಮಾಡಿದೆ. ಆದರೆ, ಇದು ಸಮಾಜಶಾಸ್ತ್ರದ ವಿಷಯವಾಯಿತು. ಅಲ್ಲಿ ರೂಢಿ ಸಂಪ್ರದಾಯಗಳಿಗೆ ಸಾಮಾಜಿಕ ಬೆಲೆಯು ಇರುವುದು. ಸ್ತ್ರೀಯು ಪ್ರಧಾನವಾಗಿದ್ದ ಸಮಾಜದಲ್ಲಿ ಸ್ತ್ರೀಯ ಯಾವ ಗುಣವೂ ಗೌರವವನ್ನೇ ತೋರುವುದು. ಅವಳೇ ಪದ್ಧತಿಯ ಬೆಲೆಯನ್ನು ನಿರ್ಣಯಿಸುವವಳು. "ನಾನು ಬೇಕಾದರೆ ನೀನು ಬಾ" ಎಂದು ಗಂಡಸಿಗೆ ಆಜ್ಞೆ ಹೇಳಿ ತಾನು ತನ್ನ ಮನೆಯಲ್ಲಿ ಅಧಿಕಾರಿಯಾಗಿ ಇರಬಹುದು. ಗಂಡಸು ತಾನು ಎಲ್ಲಿಂದಲೋ ಬಂದವ ಎಂಬ ಅತಿಥಿಯ ಹಾಗೆ ಬಂದು ಹೋಗಬೇಕಾಗುವುದು. ಅವನಿಗೆ ಆ ಮನೆಯಲ್ಲಿ, ಮಕ್ಕಳ ಬಗ್ಗೆ ಯಾವ ಅಧಿಕಾರವೂ ಇರದು. ನದಿಯ ನಾಮಕರಣಕ್ಕೆ ಉಂಟಾದ ಅಗೌರವವು ಸ್ತ್ರೀಪ್ರಧಾನ-ಮಾತೃಪ್ರಧಾನ ಸಮಾಜವ್ಯವಸ್ಥೆಯ ಲಕ್ಷಣವಲ್ಲ. 'ನಾಗ' ಈ ಹೆಸರನ್ನು ಇಡುವುದು ಮಕ್ಕಳ 'ಆಲಂಕರಣ ಎಂದುದಕ್ಕೆ ಕಾರಣವಿದೆ : ಅಲಂಕೃ-ಆರಂಕೃ ಎಂಬ ಮಾತು ವೇದಗಳಲ್ಲಿ ಬರುತ್ತದೆ. ಅಲ್ಲಿರುವ ಮೂಲಾರ್ಥವು ಒಂದು ಕಾಲದ ನಮ್ಮ ನಂಬುಗೆಗಳ ಸ್ವರೂಪವನ್ನು ಬೆಳಕಿಗೆ ತರುತ್ತಿದೆ. 'ಅಲಂ' - 'ಅರಂ' ಈ ಪದಕ್ಕೆ ಯೋಗ್ಯ ಎಂಬ ಅರ್ಥವಿದ್ದು, ಸಾಕಷ್ಟು ಸಾಮರ್ಥ್ಯಯೋಗ್ಯತೆ, ಶಕ್ತಿ ಪ್ರಾಪ್ತವಾಗಲೆಂದು ಮಂತ್ರಸಾಮರ್ಥ್ಯಯುಕ್ತ 'ದಿವ್ಯ' ನಾಮವನ್ನು ಧಾರಣ ಮಾಡಲಾಗುತ್ತಿತ್ತು.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯*

*ಹಾಲುಮತ ದರ್ಶನ ಸಂಪುಟ. ೩ ಪುಟ. ೧೨೧, ೧೬೫, ೧೯೮*

*Devi Prasad Chattopadyaya 1981 Lokayata*

*P. 235, 328, 357, 168-170*

*Apte V.M. 1954 Religious life in the Griha Sutras P. 68*

*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೩-೯, ೧-೧೪೫*

೪೩೬. ನಾರಾಯಣ

'ನಾರಾ' ಎಂದರೆ ನೀರು. ಅಯನವು ಎಂದರೆ ಆಶ್ರಯ. ಬ್ರಹ್ಮನು ಅಂಡದವನು, ಜಲಾಶ್ರಯನು ಆದುದರಿಂದ ನಾರಾಯಣ ಶಬ್ದವು ಬ್ರಹ್ಮವಾಚಕವು ಎಂದು ಮನು ಹೇಳುತ್ತಾನೆ.

ನಾರಾಯಣನು ತ್ರಿಮೂರ್ತಿಗಳಲ್ಲಿ ಒಬ್ಬ. ಜಗತ್ತಿನ ರಕ್ಷಣೆಯ ಕಾರ್ಯ ಇವನಿಗೆ ಸೇರಿದ್ದು. ಜಲದಲ್ಲಿ ವಾಸ, ದಶಾವತಾರವನ್ನು ಎತ್ತಿ, ಭೂಮಿಗೆ ಬಂದು ಭಕ್ತರ ರಕ್ಷಣೆ ಮಾಡಿದನೆಂದು ನಂಬಿಕೆಯಿದೆ.

ಜಲಶಾಯಿ ನಾರಾಯಣ–ವಿಷ್ಣು ಪ್ರತಿಮೆಯ 'ನಾಭಿ' ಕಮಲದಲ್ಲಿ ಹುಟ್ಟುವ ಬ್ರಹ್ಮನು, ನಾರಣರೂಪನು ಎಂದರೆ, ನಾಗರೂಪನೇ ಸರಿ. ಋಗ್ವೇದದ ಪ್ರಜಾಪತಿಯೆ, ಆ ಬಳಿಕ ಬ್ರಹ್ಮನ್ ಎನಿಸುತ್ತಾನೆ. ಅಲ್ಲಿ ಪ್ರಜಾಪತಿ, ಆಪ : ರಸ ಸ್ವರೂಪಿಯಾಗಿರುವ ಬಗೆಗೆ ಭಿನ್ನಾಭಿಪ್ರಾಯಗಳಿಲ್ಲ. ನಾರ : ಆಪ ಸಂಕೇತವು ರಸ : ರೇತ ಎಂಬ ಅರ್ಥವುಳ್ಳದು. ಆ ಕಾರಣದಿಂದ ಋಗ್ವೇದದ 'ಆಪ: ರಸ ಅಥವಾ 'ಮಧುಮತ್ ಪಯಸ್' ಇದು ವೇದದಲ್ಲಿಯೆ ಮೆಲ್ಲನೆ 'ಪುಷ್ಕರ'– ಪದ್ಮ, ಕಮಲವಾಗಿ ರೂಪ–ಆಕೃತಿ ಬದಲಿಸಿಕೊಳ್ಳುತ್ತದೆ. 'ನಾಗ'ವು ಬೇಕಾದ ವೇಷ ಧರಿಸಬಲ್ಲುದು, ಎಂಬ ಮೂಲಶ್ರದ್ಧೆಯನ್ನು ಮರೆತರೆ ಈ ಆಪ : ರಸ ಸಂಕೇತ : ಪ್ರತಿಮೆಗಳ ಸ್ವಾರಸ್ಯದ ಅಂತರಾರ್ಥಕ್ಕೆ ಎರವಾಗಬೇಕಾಗುತ್ತದೆ. ಈ ರಹಸ್ಯಾರ್ಥವನ್ನು ಶತಪಥ ಬ್ರಾಹ್ಮಣವೆ ಬಯಲಿಗೆ ತರುತ್ತಿದೆ: ಆಪೋ ವೈ ಪುಷ್ಕರಂ (೬–೪–೨೨; ೭–೪–೧.೮). 'ಆಪೋ ವೈ ಪ್ರಜಾಪತಿಃ–ಪರಾಮೇಷ್ಠೀ' ಎಂದು ವಾಜಸನೇಯ ಸಂಹಿತೆ ಹೇಳುತ್ತದೆ! (೧೪.೯). ಈ ಪ್ರಜಾಪತಿ : ಬ್ರಹ್ಮನ್ ಸೃಜನಶಕ್ತಿಯ ದೈವತ ಎಂಬ ಬಗೆಗೆ ಸಂದೇಹ ಪಡಬೇಕಾಗಿಲ್ಲ ಎಂದು ಶಂಬಾ ಅಭಿಪ್ರಾಯ.

ಋಗ್ವೇದದ ಋಷಿ ನಾರಾಯಣನೂ ಜಲಸಂಪ್ರದಾಯದವನೇ ಆಗಿರಬೇಕು. ವೇದಕಾಲದ ಯದು–ತುರ್ವಸಾದಿಗಳ ಕಥಾಭಾಗಗಳು ಸಂಗ್ರಹಿಸಿ ಮಹಾಭಾರತದಲ್ಲಿ ಹೆಣೆದುಕೊಂಡ ವ್ಯಾಸರಿಗೆ (ಅವರೂ ನಾರಾಯಣ ಸಂಪ್ರದಾಯದವರೇ) 'ನಾರಾಯಣ' ನಾಮದ ರಹಸ್ಯಾಥ್ವು ತಿಳಿದಿರಲೇಬೇಕು. 'ಆಪೋ–ನಾರಃ ಇತಿಪ್ರೋಕ್ತಾ' ಎಂದು ತಲೆಮಾರಿನಿಂದ ತಲೆಮಾರಿಗೆ ನಡೆದು ಬಂದ (ಇತಿಪ್ರಥಕ್ತಾಃ) ಗುಹ್ಯಾರ್ಥವು ಇದು, ಎಂದು ಭಾರತದಲ್ಲಿ ಹೇಳಲಾಗಿದೆ ಎನ್ನುವುದು ಶಂಬಾ ನಿಲುವು.

ವೇದಗಳಲ್ಲಿನ ವಿಷ್ಣುವಿಗೂ, ಈಚಿನ ಹಿಂದೂಮತದಲ್ಲಿನ ವಿಷ್ಣುವಿಗೂ ನಾಮ ಮಾತ್ರ ಇರುವ ಸಾದೃಶ್ಯದ ಜತೆಗೆ 'ತ್ರಿವಿಕ್ರಮ'ನೆಂಬ ಮತ್ತೊಂದು ವಿಶ್ಲೇಷಣೆ. 'ಶಿವ' ಎಂಬ ಪದವೂ 'ರುದ್ರ' ಎಂಬ ಪದವೂ ಸಮಾನಾರ್ಥಕವಾಗಿರುವುದೊಂದನ್ನು ಉಳಿದು, ವೇದದ 'ರುದ್ರ'ನಿಗೂ ಅರ್ವಾಚೀನ ಹಿಂದೂಮತದ 'ಶಿವ'ನಿಗೂ ಹೋಲಿಕೆಗಳು ತೀರ ಅತ್ಯಲ್ಪ. ಹೊಸಧರ್ಮವು ವೇದಗಳಿಗೆ ತನ್ನ ನಿಷ್ಠೆಯನ್ನು ತೋರ್ಪಡಿಸಿದರೂ, ಗ್ರಾಮಗಳ ಅಸಂಖ್ಯಾತ ದೇವ –ದೇವಿಯರು ಅನೇಕ ವಿಧವಾದ ತಮ್ಮ ಕರ್ತವ್ಯಗಳು,

ಕಥೆಗಳು ಮತ್ತು ವಿಶ್ಲೇಷಣೆಗಳೊಂದಿಗೆ ವೈದಿಕಧರ್ಮದಲ್ಲೆಲ್ಲಾ ಕ್ರಾಂತಿಯನ್ನು ಎಬ್ಬಿಸಿದರು. ವಿಷ್ಣುವಿನ ಆರಾಧನೆಯು ರುದ್ರ; ಗಣಪತಿ; ಗೌರಿಯರ ಆರಾಧನೆಯ ಅನಂತರ ರೂಪುಗೊಂಡಿರುವುದು ಸ್ಪಷ್ಟ.

*ವಿವರಗಳಿಗೆ ನೋಡಿ: DeviPrasad Chattopadyaya 1981 Lokayata P. 235, 328, 357, 149, 168-169; 170*

*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೧-೧೦*

*ಶಂಬಾ ಜೋಶಿ ೧೯೯೯ ಸಂಪುಟ. ೩ ಪುಟ. ೧೭೧, ಸಂಪುಟ. ೪ ಪುಟ. ೧೭೬*

## ೪೩೭. ನಾಟ್ಕಡಿಗಳೆ

*ಎಟ್ಟಿಟ್ಟನೆಱದು ನಿಮ್ಮಂ*
***ನಾಟ್ಕಡಿಗಳಿ**ದೊಡೆ ಮದೀಯ ನಾಥಂ ಬೇರಂ....*

*(ಪಂಪ ಭಾರತ ೧೨-೧೭೮)*

(ನನ್ನ ಸ್ವಾಮಿಯಾದ ದುರ್ಯೋಧನನು ವರ್ಷಗಳ ಅವಧಿಯ ಕಟ್ಟುಪಾಡಿನಿಂದ ನಿಮ್ಮನ್ನು ನಾಡಗಡಿಯಿಂದ ಹೊರದೂಡಿದಾಗ ಬೇರನ್ನೂ ಬಿಕ್ಕೆಯನ್ನೂ ತಿಂದ ದಿವಸಗಳಲ್ಲಿ ನಾಶವಾಗದ ಪೌರುಷವು ಈಗ ಹೊಸದಾಯಿತೇನು?)

ನಾಡ+ಕಡೆ+ಕಳೆ=ನಾಟ್ಕಡಿಗಳೆ ಆಗಿರಬಹುದು. ದೇಶದ ಹೊರಕ್ಕೆ ಹಾಕು.

ನಾಟ್ಕಡಿಗಳೆ ಎಂದರೆ ನಾಡ ಗಡಿಯಿಂದ ದೂರಮಾಡಿದಾಗ ಎಂದರ್ಥ. ನಾಡಿನಿಂದ ಹೊರಹಾಕುವುದು ಒಂದು ರೀತಿಯ ಶಿಕ್ಷೆಯೂ ಆಗಿತ್ತು ಎಂಬುದು ಗಮನಾರ್ಹ. ಊರಿನ ಪ್ರವೇಶ ನಿಷಿದ್ಧವೆಂಬುದು ಅಪರಾಧಕ್ಕೆ ಶಿಕ್ಷೆಯಾಗಿತ್ತು. ಬೇರೆ ಬೇರೆ ವಿಧದ ಶಿಕ್ಷೆಗಳಲ್ಲಿ ಇದೂ ಒಂದು.

## ೪೩೮. ನಿಯೋಗ

*ಆದಾನುಂ ತಪೋ **ನಿಯೋಗ**ದೊಳಿರ್ಪೆಂ ॥*

ಅಮ್ಮಗಳಿರಾ ಇನ್ನು ದುರ್ಯೋಧನನಲ್ಲಿ ಹಗೆತನವನ್ನು ಮರೆತು ಸುಖವಾಗಿರಿ. ನಾನೂ ತಪಸ್ಸಿನ ನಿಯಮದಲ್ಲಿ ಇರುತ್ತೇನೆ. ಎಂಬುದು ಪದ್ಯಭಾಗದ ಅರ್ಥ. ನಿಯೋಗವೆಂದರೆ ಕಾರ್ಯ. ನಿಯಮವೆಂಬ ಅರ್ಥವೂ ಇದೆ. ನಿಯೋಗಿಸಿ ಎಂದರೆ ಹೇಳಿ ಮಾಡಿಸಿ ಎಂದರ್ಥ. ನಿಯೋಗಕ್ಕೆ ಮತ್ತೊಂದು ಅರ್ಥವೂ ಇದೆ.

ಪುತ್ರಸಂತಾನವಿಲ್ಲದಿದ್ದರೆ ನಿಯೋಗವು ಚಾಲ್ತಿಯಲ್ಲಿರುತ್ತಿತ್ತು.

'ನಿಯೋಗ'ದ ಸಂದರ್ಭವಿರುವ ಕುಂತಿ ಆದಿತ್ಯರ ಸಂಬಂಧ ಇತರ ದೇವತೆಗಳೊಂದಿಗಿನ ಸಂಬಂಧದಲ್ಲಿ ಮಾತ್ರ ಪಂಪನು ಬದಲಾವಣೆ ಮಾಡಿಕೊಂಡಿದ್ದಾನೆ. ಈ ದೇವತೆಗಳಿಗೆ ಮತ್ತು ಕುಂತಿಗೆ ಲೈಂಗಿಕ ಸಂಬಂಧ ಏರ್ಪಟ್ಟಿದೆ ಎನ್ನುವುದನ್ನು ಪಂಪನು ನಿರಾಕರಿಸುತ್ತಾನೆ. (ಅದೇ ಪು. ೧-೯೪, ೧-೧೧೯) ಹಾಗೆಯೇ, ಅಂಬಿಕೆ,

ಅಂಬಾಲಿಕೆಯರಿಗೆ ವ್ಯಾಸನ ದಿವ್ಯದೃಷ್ಟಿ ಸಂಯೋಗದಿಂದ ಶಿಶುಗಳು ಜನಿಸುವ ಪ್ರಸಂಗ ಕೂಡಾ (ಅದೇ ೧-೮೫)

ವಿಶ್ವರೂಪನ ಪ್ರಕಾರ. ನಿಯೋಗದ ಅಧಿಕಾರವು ಕೇವಲ ಶೂದ್ರರಿಗೆ ಮತ್ತು ವಂಶಚ್ಛೇದವಾಗುವ ಪರಿಸ್ಥಿತಿ ಬಂದಾಗ ಕ್ಷತ್ರಿಯರಿಗೆ ಮಾತ್ರ ಮೀಸಲು. ಈತನ ಕಾಲ ಸುಮಾರು (ಕ್ರಿ.ಶ. ೭೫೦-೧೦೦೦) ಪಂಪನ ಕಾಲಕ್ಕಾಗಲೇ, 'ನಿಯೋಗ' ಪದ್ಧತಿಯು ಮಾಯವಾಗಿರಬೇಕೆಂದು ಈ ಆಧಾರದ ಮೂಲಕ ಗುರುತಿಸಬಹುದು.

ಪುತ್ರಸಂತಾನವಿಲ್ಲದಿದ್ದರೆ ಸ್ತ್ರೀಯು ನಿಯೋಗದ ಮೂಲಕ ಮಕ್ಕಳನ್ನು ಪಡೆಯಬಹುದಿತ್ತು. ಗಂಡನ ತಮ್ಮನಿಂದ ಕುಲಗುರುಗಳಿಂದ ಋಷಿಮುನಿಗಳಿಂದ ಪುತ್ರ ಸಂತಾನ ಪಡೆಯಬಹುದಾದರೂ ಅದರಲ್ಲಿ ಪುತ್ರ ಸಂತಾನವೊಂದೇ ಗುರಿಯಾಗಿರಬೇಕು. ಗಂಡನು ರೋಗಿಷ್ಟನಾಗಿದ್ದರೂ ನಿಯೋಗದ ಮೂಲಕ ಪುತ್ರ ಸಂತಾನ ಪಡೆಯಬಹುದಿತ್ತು. ಆದರೆ ನಿಯೋಗ ಪದ್ಧತಿಗೂ ಅದರದೇ ಆದ ನಿಯಮಗಳಿದ್ದವು ನಿಯೋಗ ಪದ್ಧತಿಯ ಕುರಿತು ಋಗ್ವೇದದಲ್ಲಿಯೂ ಬರುತ್ತದೆ. ಆರ್ಯರು ಸಹಗಮನ ಪದ್ಧತಿಯನ್ನು ನಿಲ್ಲಿಸಿದರು ವಿಧವೆಯನ್ನು ಆಕೆಯ ಮೈದುನನಿಗೆ ಅಥವಾ ಕುಟುಂಬದ ಯಾರಾದರು ಒಬ್ಬರಿಗೆ ಮದುವೆ ಮಾಡಿಸತೊಡಗಿದರು. ಹೆಚ್ಚು ಮಕ್ಕಳನ್ನು ಪಡೆಯುವುದು ಇದರ ಉದೇಶ. ಇದಕ್ಕಾಗಿ 'ನಿಯೋಗ' ಪದ್ಧತಿಯನ್ನು ಜಾರಿಗೆ ತಂದರು. ದಾಸ ಸ್ತ್ರೀಯರನ್ನು ಪತ್ನಿಯರಂತೆ ಬಳಸಿಕೊಳ್ಳತೊಡಗಿದರು.

ವ್ಯಾಸಭಾರತದಲ್ಲಿ ಸತಿಯರಿಗಿದ್ದ ವಿಶೇಷ ನಿಯೋಗಾಧಿಕಾರವನ್ನು ಪಂಪನು ತನ್ನ 'ವಿಕ್ರಮಾರ್ಜುನ ವಿಜಯ' ಕೃತಿಯಲ್ಲಿ ನಿರಾಕರಿಸುತ್ತಾನೆ. (೧-೮೫ವ, ೧-೧೧೯) ಇದು ಹತ್ತನೇ ಶತಮಾನದಲ್ಲಿ ಪ್ರಚಲಿತವಿದ್ದ ಆಶಯವಾಗಿರಬೇಕು.

ಪಂಪಕವಿಯ 'ವಿಕ್ರಮಾರ್ಜುನ ವಿಜಯ'ದಲ್ಲಿ ಅಂಬಿಕೆ, ಅಂಬಾಲಿಕೆ ಮತ್ತು ವ್ಯಾಸರ ಸಂಬಂಧದ ಕುರಿತು ಪಂಪನು ಹೀಗೆ ಹೇಳುತ್ತಾನೆ: "ಅಂತುದಿವ್ಯ ಸಂಯೋಗದೊಳಿರ್ವರುಂ ಗರ್ಭಮಂತಾಳ್ವರ (೧-೮೫ವ) ಪರಾಂಗನಾರತಿಯು ನಿಷಿದ್ಧ ಎನ್ನುವ ಧಾರ್ಮಿಕ ಬದಲಾವಣೆಯು ಇದಕ್ಕೆ ಒಂದು ಕಾರಣವಾಗಿದೆ. ಆದರೆ ಇದು ನಿಯೋಗ ಪದ್ಧತಿ.

ವಿಶ್ವರೂಪನ ಪ್ರಕಾರ ನಿಯೋಗದ ಅಧಿಕಾರವು ಕೇವಲ ಶೂದ್ರರಿಗೆ ಮತ್ತು ವಂಶಭೇದವಾಗುವ ಪರಿಸ್ಥಿತಿ ಬಂದಾಗ ಕ್ಷತ್ರಿಯರಿಗೆ ಮೀಸಲು. ಈತನ ಕಾಲ ಸುಮಾರು ಕ್ರಿ.ಶ. ೭೫೦-೧೦೦೦)

ಸೋದರರರಲ್ಲಿ ಒಬ್ಬನು ಮೃತನಾಗಿ ನಿಃಸಂತತಿಯಾಗಿದ್ದರೆ ವಿಧಿವತ್ತಾಗಿ ಮುಂದೆ ಹೇಳುವ ನಿಯೋಗದಿಂದ ಗರ್ಭಾದಾನಕ್ಕೆ ಸಮ್ಮತಿಯಿದ್ದರೂ ಇತರ ಕಾಮವಿಕಾರಗಳನ್ನು ಅನುರಾಗಪೂರ್ವಕವಾಗಿ ಸೋದರನ ಪತ್ನಿಯಲ್ಲಿ ಆಚರಿಸಬಾರದು. ಇಂತಹ ಕಾಮ ಪ್ರವೃತ್ತಿಯು ದಿಧಿಷೂಪತಿಯೆಂಬ ನಿಂದಾಕಾರಣವಾಗಿ ಅವನ ಅಪಾತ್ರತೆಯನ್ನು ಕಲ್ಪಿಸುವುದು. ಹವ್ಯಕವ್ಯಗಳಿಗೆ ಅರ್ಹನಲ್ಲ. ಕಾಮಕ್ರೀಡೆಯಿಲ್ಲ. ಸಂತತಿ ಜನನವು ಮಾತ್ರ ಅಪೇಕ್ಷಿತವು.

ಸೋದರರು ಸೋದರರ ಪತ್ನಿಯರ ಅಂಗಸಂಗವನ್ನು ಮಾಡಿದರೆ ಧರ್ಮಪತಿತ

ರಾಗುವರು. ಸಂತಾನಕ್ಕಾಗಿ ವಿನಾಯತಿಯಿದೆ.

ಅಣ್ಣ-ತಮ್ಮಂದಿರಲ್ಲಿ ಯಾರಿಗೂ ಸಂತತಿಯಿಲ್ಲವಾದಾಗ ಸೋದರ ಪತ್ನಿಯಲ್ಲಿ ಸೋದರನಿಂದ ವಾ ಸಪಿಂಡನಿಂದ ಯುಕ್ತಸಂತಾನವಾಗುವವರೆಗೆ ಸಂಬಂಧವು ನಿಷಿದ್ಧವಲ್ಲ.

ಹಿಂದೆ ಹೇಳಿದ ನಿಯೋಗ ವಿಧಿಯ ವಿವರವು: ಇದು ಸೋದರ ಪತ್ನಿ ವಿಧವೆಯಲ್ಲಿ ಸಂತಾನಕ್ಕಾಗಿ ನಿಯುಕ್ತನು ಗೋಘೃತವನ್ನು ಮೈಗೆ ಹಚ್ಚಿಕೊಂಡು ಮೌನವಾಗಿ ರಾತ್ರಿಯಲ್ಲಿ ಋತುಕಾಲದಲ್ಲಿ ಗರ್ಭದರ್ಶನ ಪರ್ಯಂತ ಸಹವಾಸ ಮಾಡಬೇಕು. ದ್ವಿತೀಯ ಸಂತತಿಯು ನಿಷಿದ್ಧ.

ಕೆಲಮಂದಿ ಆಚಾರ್ಯರು ನಿಯೋಗದಿಂದ ಎರಡು ಸಂತತಿಯನ್ನು ಸಮ್ಮತಿಸುತ್ತಾರೆ. ಆಯುಸ್ಸು ಅನಿಶ್ಚಿತವಾದುದರಿಂದ ಒಂದು ಸಂತತಿಯು ನಿಯೋಗದ ಉದ್ದೇಶವನ್ನು ಪೂರ್ಣಗೊಳಿಸಿಲ್ಲ ಎಂದು ಅವರ ಅಭಿಪ್ರಾಯವು.

ನಿಯೋಗ ವಿಧಿಯಲ್ಲಿ ಅವರು ಕಾಮಪ್ರವೃತ್ತರಾದರೆ ಅದು ಪಾಪವು. ವಿಧಿಯನ್ನು ಮೀರಬಾರದು.

ನಾರದಸ್ಮೃತಿಯು ಎರಡು ಶಾಖೆಗಳಲ್ಲಿ ಬಂದಿದೆ – ಒಂದು ಚಿಕ್ಕದು, ಇನ್ನೊಂದು ದೊಡ್ಡದು; ಅದು 'ವ್ಯವಹಾರ'ವನ್ನು ಮಾತ್ರ ಪ್ರತಿಪಾದಿಸುತ್ತದೆ. ಅದರಲ್ಲಿ ಮನುವಿನ ಅನುಸರಣೆ ನಿಕಟವಾಗಿದ್ದರೂ ಅಷ್ಟಾದಷ 'ವ್ಯವಹಾರ ಪದ'ಗಳ ಬಗ್ಗೆ ಮಾರ್ಪಾಡುಗಳಿರುವುದಿಲ್ಲದೆ, 'ನಿಯೋಗ,' ಸ್ತ್ರೀಯರ ಪುನರ್ವಿವಾಹ, ನಿಯಮಾನುಸಾರ ವಾಗಿ ದ್ಯೂತ – ಇವಕ್ಕೂ ಅವಕಾಶವಿದೆ.

ಪುನರ್ವಿರಚಿತ ರೂಪವುಳ್ಳ ಬೃಹಸ್ಪತಿಸ್ಮೃತಿಯಲ್ಲಿ ವ್ಯವಹಾರ, ಆಚಾರ (ಸಂಸಾರ, ಶ್ರಾದ್ಧ, ಆಶೌಚ, ಆಪದ್ಧರ್ಮ), ಪ್ರಾಯಶ್ಚಿತ್ತ – ಇವನ್ನು ಪ್ರತಿಪಾದಿಸುವ ಏಳು ಭಾಗಗಳಿವೆ. ಹೆಚ್ಚಾಗಿ ಆ ಸ್ಮೃತಿಯು ಶ್ಲೋಕರೂಪದಲ್ಲಿದ್ದರೂ, ಕೆಲವು ಗದ್ಯ ಪಂಕ್ತಿಗಳನ್ನೂ ಒಳಗೊಂಡಿದೆ. ವಿಶೇಷವಾಗಿ ಮನುಸ್ಮೃತಿಯನ್ನು (ಸ್ವಯಂಭು, ಭೃಗು – ಈ ಎರಡು ಪಾಠಗಳನ್ನೂ) ಅನುಸರಿಸುವ ಅದು ಮನುಸ್ಮೃತಿಗೆ ವಾರ್ತಿಕ (ಶ್ಲೋಕರೂಪದ ಟಿಪ್ಪಣಿ) ಹಾಗೂ ಪರಿಶಿಷ್ಟವೆಂದು ಪ್ರಸಿದ್ಧವಾಗಿದೆ. ಮನುವಿನಂತೆ ಬೃಹಸ್ಪತಿಯೂ 'ನಿಯೋಗ'ಕ್ಕೆ ವಿರೋಧಿಯಾಗಿದ್ದಾನೆ. ಅಷ್ಟಾದಶ 'ವ್ಯವಹಾರ ಪದ'ಗಳಲ್ಲಿ ಹದಿನಾಲ್ಕನ್ನು ಲೌಕಿಕಕ್ಕೆ (ಧನಮೂಲ) ಮತ್ತು ನಾಲ್ಕನ್ನು ದಂಡಕ್ಕೆ ಸಂಬಂಧಪಟ್ಟಂತೆ ಎರಡು ಬೇರೆ ಬೇರೆ ವರ್ಗಗಳಾಗಿ ಮಾಡಿದ್ದಾನೆ. ಅಲ್ಲದೆ ಒಂಭತ್ತು ಬಗೆಯ ರುಜುವಾತುಗಳು ('ದಿವ್ಯ'ಗಳು) ಅವನಿಂದ ಪ್ರತಿಪಾದಿತವಾಗಿದೆ.

*ವಿವರಗಳಿಗೆ ನೋಡಿ: ಯುಗಯಾತ್ರೀ ಭಾರತೀಯ ಸಂಸ್ಕೃತಿ ೧೯೭೧ ಪುಟ. ೨೨೬*

*ಪಿ.ವಿ. ಕಾಣೆ ೨೦೦೩ ಧರ್ಮಶಾಸ್ತ್ರದ ಇತಿಹಾಸ ಪುಟ. ೩೦೯*

*ಭಗವತ್ ಶರಣ್ ಉಪಾಧ್ಯಾಯ ೨೦೦೪*

*ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ ಪುಟ. ೨೨೬–೨೨೭*

*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೯–೫೮–೬೩ ಋಗ್ವೇದ ೧–೩೨–೧೧*

### ೪೪೯. ನಿರ್ನಾಮಿಕೆಯರು

*........ತಂದು ತಂದಿಕ್ಕಿದೆಂಜಲೆವುಱುಮಂ ತಿಂದು ಪೆಸರುಮಿಲ್ಲದೆ*

*ನಿರ್ನಾಮಿಕೆಯೆಂದು ಪೆಸರಾಗಿ ಬಳೆಯ.......(ಆದಿಪುರಾಣ ೩-೩೩)*

ಹೆಸರು ಇಲ್ಲದವರನ್ನು ನಿರ್ನಾಮಿಕೆ ಯಾರೆಂದು ಕರೆದಿರುವುದು ಗಮನಾರ್ಹ.

ಗಂಡುಸಂತಾನವಿಲ್ಲದ ಕುಟುಂಬದ ಆಸ್ತಿಯನ್ನು ಅರಸನು ಮುಟ್ಟುಗೋಲು ಹಾಕುತ್ತಾನೆ. ದಿಕ್ಕಿಲ್ಲದ ಹೆಂಗಸರು ಕೂಲಿಮಾಡಿ ಬದುಕುತ್ತಾರೆ. ಕೆಳವರ್ಗದಲ್ಲಿ ಹುಟ್ಟಿದ ಮಗುವು ದುರ್ನಾತದಿಂದ ಕೂಡಿದ್ದರೆ ರಾಜಭಟರು ಒಡಿಸುತ್ತಾರೆ. ಎಂಜಲನ್ನು ತಿಂದು ಬದುಕುವ ವರ್ಗವೂ ಇತ್ತು. ತೀರಾ ಕೆಳವರ್ಗದಲ್ಲಿ ತಂದೆ – ತಾಯಿಯಿಲ್ಲದೆ ಮಗುವನ್ನು ನಿರ್ನಾಮಿಕೆಯೆಂದೂ ಕರೆಯುತ್ತಿದ್ದರು. ಎಂದು 'ಆದಿಪುರಾಣ'ದಲ್ಲಿ ಬರುತ್ತದೆ. (೩–೩೩) ಇಲ್ಲಿಯ ತಾತ್ವಿಕ ನೆಲೆಗಳನ್ನು ಹೀಗೆ ಗುರುತಿಸಬಹುದಾಗಿದೆ.

ಪುತ್ರ ಸಂತಾನವಿಲ್ಲದುದಕ್ಕೆ ಮನೆಯನ್ನು ಮುಟ್ಟುಗೋಲು ಹಾಕುವುದು ಇದು ಪಿತ್ರಾರ್ಜಿತ ಆಸ್ತಿ ಮತ್ತು ಅದರ ವರ್ಗಾಂತರದ ಸೂಚನೆಯಾಗಿದೆ. ಇಲ್ಲಿ ಪಿತೃಪ್ರಧಾನ ಸಮಾಜದ ಸೂಚನೆಯಿದೆ. ವಾರಸುದಾರರಿಲ್ಲದವರನ್ನು ನಿರ್ನಾಮಿಕೆಯರೆಂದು ಕರೆಯುತ್ತಾರೆ.

ಅನಾಥೆಯಾಗಿರುವ ಸ್ತ್ರೀಯರು ಒಂದು ಕಡೆ ನೆಲೆಯಾದರೆ ಊರಿನಿಂದ ಊರಿಗೆ ವರ್ಗಾಂತರವಾಗುತ್ತಾರೆ.

ಕೂಲಿ ಮಾಡಿ ಬದುಕುವ ವರ್ಗ.

ನಿರ್ನಾಮಿಕೆಯರು ಎಂದರೆ ಹೆಸರಿಲ್ಲದವರು. ಗತಿಗೋತ್ರವಿಲ್ಲದವರು. ಹತ್ತನೆಯ ಶತಮಾನದ ಸಾಮಾಜಿಕ, ಆರ್ಥಿಕ ಪರಿಸ್ಥಿತಿಯನ್ನು ಇದು ವಿವರಿಸುತ್ತದೆ. ಗಂಡು ಸಂತಾನ ಇಲ್ಲದವರ ಆಸ್ತಿಯನ್ನು ಮುಟ್ಟುಗೋಲು ಹಾಕುತ್ತಿದ್ದರು ಎಂಬುದೇ ಆಗಿನ ರಾಜಕೀಯ ಪರಿಸ್ಥಿತಿಯನ್ನು ವಿವರಿಸುತ್ತದೆ.

### ೪೫೦. ನಿರ್ವಾಣ

ಹಾಗಾದರೆ ಸಮಸ್ತ ಆಧ್ಯಾತ್ಮಿಕ ಸಾಧನೆಗಳ ಅಂತಿಮ ಗುರಿಯಾದ ನಿರ್ವಾಣ ಎನ್ನುವುದು ಏನು? ಮುಕ್ತಿ ಎನ್ನುವುದು ನಿರ್ನಾಮತೆಗೆ ಇನ್ನೊಂದು ಪದವಾದರೆ, ನೈತಿಕ ಸಾಧನೆಯ ಮೂಲವಾಹಿನಿ ಕಡಿದುಹೋಗುತ್ತಿತ್ತು. ಅದು ಶಾಶ್ವತವಾಗಿ ಒಂದು ವ್ಯಕ್ತಿತ್ವದ ಇರುವಿಕೆಗೆ ಸಂವಾದಿಯಾದರೆ, ಸ್ವಾರ್ಥತೆಗೆ ಅವಕಾಶವಾಗುತ್ತಿತ್ತು. ಯಾವುದೇ ಒಂದು ಖಚಿತವಾದ ನಿಲುವನ್ನು ತಾಳಲು ಇಚ್ಛಿಸದ ಬುದ್ಧನು ಹೇಳುತ್ತಿದ್ದುದು: (ಉದಾ: ಬ್ರಹ್ಮಜಾಲಸುತ್ತ ಮತ್ತು ಪೊತ್ಥಪಾದ ಸುತ್ತಗಳಲ್ಲಿ) ನಿರ್ವಾಣವು ಇರುವಿಕೆಯನ್ನಾಗಲಿ ಇಲ್ಲದಿರುವಿಕೆಯನ್ನಾಗಲಿ ಪ್ರತ್ಯೇಕವಾಗಿ ಸೂಚಿಸುವುದಿಲ್ಲ. ಏಕಕಾಲದಲ್ಲಿ ಅವೆರಡೂ ಹೌದು ಎಂದಾಗಲಿ ಅವೆರಡೂ ಅಲ್ಲವೆಂದಾಗಲಿ ಅದರರ್ಥವಲ್ಲ. ಅದು ಮಾತಿನಲ್ಲಿ ವರ್ಣಿಸಲಾಗದುದು. ಆರಿಹೋದ ದೀಪದ ಬೆಳಕು ಎಲ್ಲಿಗೆ ಅಥವಾ

ಯಾವ ದಿಕ್ಕಿನಲ್ಲಿ ಹೋಯಿತು ಎಂದು ಕೇಳುವುದು ಹೇಗೆ ಅಸಂಬದ್ಧವೋ ಹಾಗೆ ಅಗಲಿದ ಸಂತನಿಗೆ ಒಂದು ನೆಲೆಯನ್ನಾಗಲಿ, ಅಥವಾ ಒಂದು ದಿಕ್ಕನ್ನಾಗಲಿ ನಿರ್ದೇಶಿಸಲು ಯತ್ನಿಸುವುದು ಅಸಂಬದ್ಧ. ಅವೆರಡೂ ಆರಿಹೋಗುತ್ತವೆ ಅಷ್ಟೆ (ನಿಬ್ಬುತೋ) ಪ್ರಜ್ಞೆಗೆ ನಿಲುಕದಂತೆ ಮಾಯವಾಗುತ್ತವೆ. ಬುದ್ಧನ ಈ ಮೌನ ಅವನು ಅಗಲಿದ ಆತ್ಮವು ಏನಾಗುತ್ತದೆಂಬುದನ್ನು ತಿಳಿದಿರಲಿಲ್ಲವೆಂದೋ ಅಥವಾ ಅದನ್ನು ಕುರಿತು ಉಪದೇಶಿಸಲಿಲ್ಲವೆಂದೋ ಭಾವನೆಯನ್ನು ಉಂಟುಮಾಡೀತು. ಆದರೆ ವಿನಾಶವಾದದ ವಿರುದ್ಧವಾಗಿ ಅವನು ನೇತ್ಯಾರ್ಥಕ ಪದಗಳಲ್ಲಿ ನಿರ್ವಾಣ ಎಂದರೆ ಜೀವನದ ಕೆಡುಕುಗಳನ್ನು ಕೊನೆಗಾಣಿಸುವುದು ಎಂದರ್ಥ ಎಂದು ಹೇಳಿದನು. ಆಸೆಯ ಜ್ವಾಲೆಗಳಿಂದ ಸುತ್ತುವರಿದ ಒಂದು ಪ್ರಪಂಚದಿಂದ ತಪ್ಪಿಸಿಕೊಳ್ಳುವುದಕ್ಕೆ ಸಮಾನ ಅದು. ಎಂದರೆ ಎಲ್ಲ ಬಗೆಯ ಆಸೆಗಳ, ಮೋಹ, ಜುಗುಪ್ಸೆ, ಭ್ರಮೆಗಳ ನಿರ್ಮೂಲನ, ವಿವಿಧ ಧ್ಯಾನ, ಸಮಾಧಿಗಳ ಮೂಲಕ ಆತ್ಮವು ಹೇಗೆ ಮೇಲೇರುತ್ತದೆ ಎಂಬುದನ್ನು ವರ್ಣಿಸುತ್ತಾ ಬುದ್ಧನು ಶೂನ್ಯದ ಅಕಿಂಚನ್ಯ ಕ್ಷೇತ್ರದ ಮೇಲೆ ಪ್ರಜ್ಞೆಯು ನಿಲುಕಬಹುದಾದ ಉನ್ನತ ಕ್ಷೇತ್ರಗಳು ಕೆಲವನ್ನು ಇರಿಸುತ್ತಾನೆ. ಆ ಮೂಲಕ, ಶೂನ್ಯವೇ ಆಧ್ಯಾತ್ಮಿಕ ಜೀವನದಲ್ಲಿ ಅಂತಿಮವಲ್ಲ ಎಂದು ಹೇಳುತ್ತಾನೆ. ನಿರ್ವಾಣದ ಅವರ್ಣನೀಯತೆಯು ಅದನ್ನು ನೇತ್ಯಾತ್ಮಕವಾಗಿ ಎಲ್ಲ ಭಾವೋದ್ವೇಗಗಳ ನಿರ್ಮೂಲನ (ಕ್ಲೇಶಾವರಣ) ನಿಜವಾದ ಜ್ಞಾನಕ್ಕಿರುವ ಅಡಚಣೆಗಳ ನಿರ್ಮೂಲನ (ಜ್ಞೇಯಾವರಣ) ಎಂದು ನಾವು ವರ್ಣಿಸಲು ತಡೆಯಾಗಬಾರದು. ಬುದ್ಧನು ಬೋಧಿಯನ್ನು ಪಡೆದ ತಕ್ಷಣವೇ ತನ್ನ ತತ್ವದಲ್ಲಿ ಸಾಮಾನ್ಯ ಜನರಿಗೆ ಎರಡು ಎಡರುಗಳು (ಕಾರಣತಾವಾದ ಮತ್ತು ನಿರ್ವಾಣ) ಎದುರಾಗುತ್ತವೆಂದು ಯೋಚಿಸಿದನು ಎಂದೂ, ಜನರಿಗೆ ತನ್ನ ಸಂದೇಶವನ್ನು ಬೋಧಿಸಲು ಅವನು ಕರುಣಾಮಯ ಸ್ವಭಾವ (ಅವನಿಗೆ ಬ್ರಹ್ಮಾಸಹಂಪತಿ ದರ್ಶನವಾದ ಪ್ರಸಂಗದಿಂದ ಸೂಚಿತವಾಗಿದೆ) ಹಲವರ ಸಂತೋಷ, ಲಾಭಗಳಿಗಾಗಿ ಆಧ್ಯಾತ್ಮಿಕ ಉಪದೇಶದ ಹೊರೆಯನ್ನು ಅವನು ಹೊತ್ತುಕೊಳ್ಳುವಂತೆ ಮಾಡಿತು. ಆದರೆ ಅವು ಇಂದಿಗೂ ಒಗಟುಗಳಾಗಿಯೇ ಉಳಿದಿವೆ. ಅದರಲ್ಲಿಯೂ ನಿರ್ವಾಣವು ಅನ್ವೇಷಕರ ಮನೋಭಾವನೆ ಮತ್ತು ಸಾಂಸ್ಕೃತಿಕ ಮಟ್ಟಗಳಿಗೆ ತಕ್ಕಂತೆ ಬೇರೆ ಬೇರೆ ರೂಪಗಳನ್ನು ತಾಳಿದೆ.

ನಿರ್ವಾಣವು ಅಸಂಸ್ಕೃತ ಸ್ಕಂಧವೆಂಬ ಭಾವನೆಯೇ ಅದಕ್ಕೆ ಭಾವರೂಪ ಲಕ್ಷಣವನ್ನು ನೀಡಿತು. ವಿಮೋಕ್ಷ ಎಂಬುದು ಎಲ್ಲ ಪ್ರಜ್ಞೆಯ ಸಂಪೂರ್ಣ ಸ್ಥಗಿತ ಸ್ಥಿತಿ ಎಂಬುದಕ್ಕೆ ಸಮ. ಆದುದರಿಂದಲೇ ಅದು ಎಲ್ಲ ಅರಿವನ್ನೂ ಮೀರಿದ ಶಾಂತಿ ಸ್ಥಿತಿ. ಆದರೆ ಸ್ವರ್ಗ ಸುಖಕ್ಕೂ ಅದಕ್ಕೂ ಏನೂ ಸಂಬಂಧವಿಲ್ಲ. ಏಕೆಂದರೆ 'ಅರ್ಹತ್'ನು ಸ್ವರ್ಗಸುಖವನ್ನು ಪರಿಪೂರ್ಣತೆಯ ಕಡೆಗೆ ನಡೆಯುವಲ್ಲಿ ಎದುರಾದ ಮೋಸ, ಮಾಯಾಜಾಲ ಎಂದು ಪರಿಗಣಿಸಿ ತಿರಸ್ಕರಿಸುತ್ತಾನೆ. ಆದರೂ ಮುಂದೆ ನಿರ್ವಾಣವನ್ನು ಅಮೃತತ್ವ ಪ್ರಾಪ್ತಿ ಎಂದು ವರ್ಣಿಸಿದುದು ಮತ್ತು ಸುಖ ಎಂದು ಅದನ್ನು ಹೇಳಿದುದು ಒಂದು ಶಾಶ್ವತ

ಆನಂದ ಪರಿಸ್ಥಿತಿಯೊಡನೆ ಅದನ್ನು ಸಮೀಕರಿಸಲು ಅನುವಾಯಿತು. ಬ್ರಾಹ್ಮಣ ಧರ್ಮದ ಯೋಗಿ, ಜೈನ ಧರ್ಮದ ತೀರ್ಥಂಕರ (ಸಿದ್ಧನ ವಿಷಯವಿರಲಿ) ಹಾಗೂ ಬೌದ್ಧ ಧರ್ಮದ ಅರ್ಹತ್ – ಇವರು ದೇವತೆಗಳಿಗಿಂತ ಉತ್ತಮರಾದವರು, ದೇವತೆಗಳ ದೀರ್ಘವೂ ಆದರೆ ಮಿತಿಯುಳ್ಳುದೂ ಆದ ಬದುಕಿಗಾಗಿ ಅನುಕಂಪ ವ್ಯಕ್ತಪಡಿಸುವವರು ಹಾಗೂ ಅದಕ್ಕಾಗಿ ಹೊಟ್ಟೆಕಿಚ್ಚು ಪಡದವರು ಸಂತನಿಗೆ ವಿಮೋಚನೆಯ ದಾರಿಯಲ್ಲಿ ಎಷ್ಟೋ ಅದ್ಭುತಶಕ್ತಿಗಳು, ಅಲೌಕಿಕ ಜ್ಞಾನಗಳು ಲಭ್ಯವಾಗುತ್ತವೆ.

ನಿರ್ವಾಣ ಎನ್ನುವುದಕ್ಕೆ ಈ ರೀತಿಯ ಅರ್ಥಗಳಿವೆ: ಮೋಕ್ಷ, ಕೈವಲ್ಯ, ಶಾಂತತೆ, ಶೂನ್ಯ, ಬೆತ್ತಲೆ, ಸಾವು; ಅಂತ್ಯಕರ್ಮ. ಒಮ್ಮೆ ನಿರ್ವಾಣವನ್ನು ಹೊಂದಿದರೆ ಮತ್ತೆ ಕರ್ಮಗಳ ಕೋಟಲೆಗಳಿಲ್ಲವೆಂಬುದು ನಂಬಿಕೆಯಾಗಿದೆ. ಇದು ಕರ್ಮವನ್ನು ಯಾವ ದೃಷ್ಟಿಕೋನದಲ್ಲಿ ನೋಡುತ್ತದೆಯೆಂಬುದನ್ನು ಸೂಚಿಸುತ್ತದೆ.

ಮಾಧ್ಯಮಿಕರ ತರ್ಕ ಕೇವಲ ನಿಷೇಧದಲ್ಲಿಯೇ ಕೊನೆಯಾಗುವುದೆಂದೂ ವ್ಯಾಪಕವಾದ ಅಭಾವವಾದವನ್ನೇ ಈ ಸಿದ್ಧಾಂತ ಪ್ರತಿಪಾದಿಸುವುದೆಂದೂ ಯಾರಾದರೂ ಯೋಚಿಸಬಹುದು. ಆದರೆ ಈ ವಿಮರ್ಶೆ ತಪ್ಪು ತಿಳಿವಳಿಕೆಯಿಂದ ಬಂದುದು: ಈ ಸಿದ್ಧಾಂತದ ಸ್ವರೂಪವನ್ನು ಗ್ರಹಿಸದ ಕಾರಣ ಬಂದುದು. ಇದರ ವಿಧಾನ ನಿಷೇಧಕವಾಗಿದೆಯೇ ವಿನಾ ಗುರಿಯಲ್ಲ. ತತ್ವಗ್ರಹಣದಲ್ಲಿ ಬುದ್ಧಿಯ ಸಾಮರ್ಥ್ಯವನ್ನು ನಿಷೇಧಿಸುವುದು ತತ್ವದ ನಿಷೇಧವಲ್ಲ. ಬುದ್ಧಿಯೇ ಜ್ಞಾನದ ಏಕೈಕ ರೂಪವಲ್ಲ. ಮಾಧ್ಯಮಿಕ ತರ್ಕ ತತ್ವದ ಅಂತರ್ಜ್ಞಾನ ಅಥವಾ ಅದ್ವಯ ಜ್ಞಾನವನ್ನು ಮೂರು ಕೋಟಿಗಳಿಂದ ಮುಟ್ಟುತ್ತದೆ. ಮೊಟ್ಟಮೊದಲಿಗೆ ಆಗ್ರಹ ಸಿದ್ಧಾಂತಗಳು ತೃಪ್ತಿಪಟ್ಟುಕೊಳ್ಳುವ ದೃಷ್ಟಿವಾದಗಳ ಸಂಘರ್ಷವೇಳುತ್ತದೆ. ಈ ದೃಷ್ಟಿಗಳು ಅಥವಾ ವಿಕಲ್ಪಗಳು ತತ್ವಕ್ಕೆ ವಿರುದ್ಧವಾದವೆಂಬ ಅರಿವಿನೊಡನೆ ಎರಡನೆಯ ಕೋಟಿ ಹುಟ್ಟುತ್ತದೆ. ಇದು ಪ್ರಸಂಗವಾದಗಳಿಂದ ದೃಢಪಡುತ್ತದೆ. ಬುದ್ಧಿಯ ಪೂರ್ಣ ನಿರಾಕರಣೆ ಒಮ್ಮೆಯೇ ತತ್ವದ ಅಂತರ್ಜ್ಞಾನವಾಗಿದೆ. ‘ಇದೆ’ ಮತ್ತು ‘ಇಲ್ಲ’ ಎಂಬ ದ್ವಂದ್ವಗಳಿಂದಿದು ನಿರ್ಮುಕ್ತವಾಗಿದೆ. ಅದೇ ಪ್ರಜ್ಞೆ ಅಥವಾ ಅದ್ವಯಜ್ಞಾನ. ಅದಕ್ಕೂ ನಿರ್ವಾಣಕ್ಕೂ ತಾದಾತ್ಮ್ಯವಿದೆ.

*ವಿವರಗಳಿಗೆ ನೋಡಿ: ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦*

*ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ ಪುಟ. ೧೭೦, ೨೧೩*

## ೪೪೧. ನಿರ್ವಾಯ

*ನೆಜಿೞ್ದು **ನಿರ್ವಾಯಂ** ನರುವಾಯಂ ಮುಂ ಮೊನೆ*
*ನೆರಕೆ ನಾರಾಚಂ ತಗರ್ತಲೆಯಂ...... (ಪಂಪ ಭಾರತ ೧೩–೫೯)*

(ಕೂಡಿಕೊಂಡು ನಿರ್ವಾಯ, ನರುವಾಯ, ಮುಮ್ಮೊನೆ, ನೆರಕೆ, ನಾರಾಚ ತಗರ್ತಲೆ ಮರ್ಮಸ್ಥಾನವನ್ನು ಭೇದಿಸುವ ಕಣೆಗೆಲೆಯಂಬು, ಕಕ್ಕಂಬು, ಕಲ್ಲಂಬು, ಮೊನೆಯಂಬು, ಇವುಗಳ ಕಣ್ಣನ್ನು ತುಂಬಿಕೊಳ್ಳಲು....)

ನಿರ್ವಾಯವೆಂದರೆ ಅಲಗಿಲ್ಲದ ಬಾಣವೆಂದು ಅರ್ಥ.

ಪಂಪಭಾರತದಲ್ಲಿ ಉಕ್ತವಾದಂತೆ ಬೇರೆ ಬೇರೆ ಆಯುಧಗಳಿದ್ದವು.

**೪೪೨. ನಿಷಿಧಿಗಲ್ಲುಗಳು**

ನಿಷಿಧಿ ಎಂದರೆ ಜೈನ ಮುನಿಗಳ ಸಮಾಧಿ. ಗದ್ದುಗೆ, ಸಮಾಧಿಯ ಮೇಲೆ ನೆಟ್ಟಕಲ್ಲುಗಳು ಎಂಬ ಅರ್ಥಗಳಿವೆ.

ಈ ಆರ್.ಶೇಷಶಾಸ್ತ್ರಿಯವರು ನಿಷಿಧಿ ಕಲ್ಲಿನ ಕುರಿತು ಈ ರೀತಿ ವಿವರಿಸಿದ್ದಾರೆ. ಜೈನ ಧರ್ಮದ ಸಲ್ಲೇಖನ ವ್ರತವನ್ನು ಸ್ವೀಕರಿಸಿ ದೇಹವನ್ನು ತ್ಯಾಗಮಾಡಿದವರ ಬಗ್ಗೆ ಈಗಾಗಲೇ ಸಾಕಷ್ಟು ಪ್ರಸ್ತಾಪಿಸಿದ್ದೇವೆ. ಇಲ್ಲಿ ಅಂತಹವರ ಸ್ಮಾರಕ ಶಿಲೆಗಳ ಶಿಲ್ಪಗಳ ಶಿಲ್ಪವನ್ನು ಪರಿಚಯ ಮಾಡಿಕೊಡುವ ಪ್ರಯತ್ನವನ್ನು ಮಾತ್ರ ಮಾಡುತ್ತೇವೆ. ಇಂಥ ಸ್ಮಾರಕಗಳನ್ನು ನಿಷಿಧಿ ಕಲ್ಲುಗಳೆಂದು ಕರೆಯುತ್ತಾರೆ. ಇವುಗಳ ಶಿಲ್ಪದ ವಿವರಗಳನ್ನು ಸಹ ಸಾಮಾನ್ಯವಾಗಿ ವೀರಗಲ್ಲುಗಳ ಶಿಲ್ಪದಂತೆಯೇ ಎರಡು ಮೂರು ಹಂತಗಳಲ್ಲಿ ಬಿಡಿಸಲಾಗಿರುತ್ತದೆ.

ಮೊದಲ ಹಂತದಲ್ಲಿ ಅಂದರೆ, ತಳಭಾಗದಲ್ಲಿ ವ್ರತವನ್ನು ಸ್ವೀಕರಿಸುವ ವ್ಯಕ್ತಿಯು ಗುರುವಿನ ಬಳಿ ಕುಳಿತು ಉಪದೇಶ ಸ್ವೀಕರಿಸುತ್ತಿರುವಂತೆಯೂ ವ್ಯಾಸ ಪೀಠದ ಮೇಲೆ ಧರ್ಮಗ್ರಂಥವನ್ನು ಪಠಣ ಮಾಡುತ್ತಿರುವ ಗುರುವನ್ನು ಶಿಲ್ಪದ ವಿವರಗಳಲ್ಲಿ ಬಿಡಿಸಲಾಗಿರುತ್ತದೆ. ಗಂಡ ಹೆಂಡಿರುಗಳಿಬ್ಬರೂ ಒಟ್ಟಿಗೆ ವ್ರತವನ್ನು ಸ್ವೀಕರಿಸಿದ್ದರೆ ಅವರಿಬ್ಬರೂ ಉಪದೇಶದಲ್ಲಿ ಸ್ವೀಕರಿಸುತ್ತಿರುವಂತೆ ಶಿಲ್ಪವನ್ನು ಬಿಡಿಸಲಾಗಿರುತ್ತದೆ. ಗಂಡನಾದವನು ವ್ರತದ ಮೂಲಕ ದೇಹವನ್ನು ತ್ಯಜಿಸಿದಾಗ ಆತನ ಹೆಂಡತಿಯು ಸಹಗಮನದ ಮೂಲಕ ತನ್ನ ಗಂಡನನ್ನು ಅನುಸರಿಸಿದ್ದರೆ ಆಗ ಉಪದೇಶವನ್ನು ಪಡೆಯುತ್ತಿರುವ ತನ್ನ ಗಂಡನ ಬದಿಯಲ್ಲಿ ಹೆಣ್ಣು ತನ್ನ ಬಲಗೈಯನ್ನು ಎತ್ತಿ ತೋರಿಸುತ್ತಿರುವಂತೆ ಬಿಡಿಸಲಾಗಿರುತ್ತದೆ.

ಎರಡನೆಯ ಹಂತದಲ್ಲಿ ವ್ಯಕ್ತಿಯು ಗುರುವಿನಿಂದ ಕಲಿತ ವ್ರತವನ್ನು ಸಾಧನೆ ಮಾಡುತ್ತ ಸಿದ್ಧಿಯ ಹಂತವನ್ನು ತಲುಪುತ್ತಿರುವಂತೆ, ಅಂದರೆ ಅವನು ಜಿತೇಂದ್ರಿಯನಂತೆ ಅವನು ಮುಕ್ತಿಯನ್ನು ಪಡೆದು ಪದ್ಮಾಸನದಲ್ಲಿ ಕುಳಿತಿರುವಂತೆ ಬಿಡಿಸಲಾಗಿರುತ್ತದೆ. ಈ ನಿಷಿಧಿ ಕಲ್ಲುಗಳಿಗೂ ಕೆಲವೊಮ್ಮೆ ಕೀರ್ತಿ ಮುಖವನ್ನು ಬಿಡಿಸಿರುವುದುಂಟು. ಈ ಸ್ಮಾರಕಗಳ ಮೇಲೆ ಶಿಲ್ಪದ ವಿವಿಧ ಹಂತಗಳನ್ನು ಪ್ರತ್ಯೇಕಿಸುವ ಭಾಗಗಳಲ್ಲಿ ಶಾಸನವನ್ನು ಕೊರೆಯಲಾಗಿರುತ್ತದೆ.

*ವಿವರಗಳಿಗೆ ನೋಡಿ: ಆರ್. ಶೇಷಶಾಸ್ತ್ರಿ ೨೦೦೫ ಶಾಸನ ಪರಿಚಯ ಪುಟ. ೬೦-೬೧.*

**೪೪೩. ನೀಚರ ಸ್ವಭಾವ**

*ನೀಚಂಗುಪಕಾರವಂ ಮಾಡಿದೊಡೆ ಅಪಕಾರವನೆ ಮಾಡುವನಲ್ಲದೆ*

*ಶಾಂತನಾಗಲಜೆಯಂ*

*ಅದೆಂತೆಂದೊಡೆ ಪಾವಿಂಗೆ ಪಾಲನೆಜೆದೊಡೆ ವಿಷಂ ಪೆರ್ಚುವಂತೆ (ಪಂಚತಂತ್ರ, ಭೇದಪ್ರಕರಣ, ಶ್ಲೋಕ ೭೬)*

ನೀಚರಿಗೆ ಉಪಕಾರ ಮಾಡಿದರೂ ಅವರು ಅಪಕಾರವನ್ನೇ ಮಾಡುತ್ತಾರೆ. ಹಾವಿಗೆ ಹಾಲೆರೆದರೆ ಯಾವ ಪ್ರಯೋಜನವಿದೆ. ಅದು ಅದರ ವಿಷವನ್ನು ಬಿಡಲಾರದು. ಅದರಂತೆ ನೀಚರೂ ಕೂಡಾ ಉಪಕಾರ ಮಾಡಿದವರಿಗೆ ಅಪಕಾರ ಮಾಡದೆ ಬಿಡಲಾರರು.

ಯಾರು ಉತ್ತಮರು ಮತ್ತು ಯಾರು ನೀಚರು ಎಂದು ನಿರ್ಣಯಿಸುವುದು ನೈತಿಕ ವ್ಯಾಖ್ಯೆಗೆ ಸಂಬಂಧಿಸಿದೆ. ನೀತಿಶಾಸ್ತ್ರವು ಉತ್ತಮರು, ಮಧ್ಯಮರು ಮತ್ತು ನೀಚರು ಎಂದು ವರ್ಗೀಕರಿಸುತ್ತದೆ. ಉತ್ತಮ ಧಾರ್ಮಿಕ ಚೌಕಟ್ಟಿನೊಳಗೆ ನೀತಿಯುತರಾಗಿ ಬಾಳುತ್ತಾರೆ. ಅಧಮ ಅನೀತಿಯನ್ನೇ ತಮ್ಮ ಜೀವನಕ್ರಮವಾಗಿರಿಸಿಕೊಳ್ಳುತ್ತಾರೆ. ಮಧ್ಯಮರು ನೀತಿ-ಅನೀತಿಗಳ ಮಧ್ಯೆ ಇರುತ್ತಾರೆ. ಆದುದರಿಂದ ನೀಚರಿಗೆ  ಸಾಮಾಜಿಕ ಮಾನ್ಯತೆಯಿಲ್ಲವೆಂಬುದು ಗಮನಾರ್ಹ. ದುರ್ಜನ ಸ್ವಭಾವಮಂ ಕಂಡು ಯತ್ನದಿಂ ನಡೆಸುವೊಡಂ ನೈಜಗುಣಂ ಬಿಡದು; ಅದು ಎಹಗೆಂದೊಡೆ ನಾಯಬಾಲಮಂ ಕಾಸಿ ತಿರ್ದಿದೊಡಂ ಕೊಂಕು ಮಾಣದಹಗೆ (ಭೇದ  ಪ್ರಕರಣ, ಶ್ಲೋಕ  ೭೨)

ದುರ್ಜನರು ತಮ್ಮ ಸ್ವಭಾವವನ್ನು ಬಿಡುವುದಿಲ್ಲ. ಅವರ ನೈಜ ಗುಣವು ಎಷ್ಟು ತಿದ್ದಿದರೂ ಬದಲಾಗಲು ಸಾಧ್ಯವಿಲ್ಲ. ನಾಯಿಯ ಬಾಲವಿದ್ದ ಹಾಗೆ ಅವರ ಗುಣ. ನಾಯಿ ಬಾಲದ ಡೊಂಕು ಇರುವ ಹಾಗೆ ದುರ್ಜನರ ಸ್ವಭಾವ.  ಇದಕ್ಕೆ ಸಂವಾದಿಯಾದ ಮತ್ತೊಂದು ಗಾದೆಯಿದೆ. 'ನಾಯಿಯ ಬಾಲಕ್ಕೆ ನಳಿಗೆ ಹಾಕಿದರೂ ನೇರವಾದೀತೇ ? ವ್ಯಾವಹಾರಿಕವಾಗಿ ಈಗಲೂ ಈ ಮಾತನ್ನು ಬಳಸುತ್ತೇವೆ. ಅವನ ಬುದ್ಧಿಯು ನಾಯಿಯ ಬಾಲವಿದ್ದಂತೆ. ಉತ್ತಮ ಮತ್ತು ನೀಚವೆಂಬುದು ಸಾಮಾಜಿಕ ನಿಯಮಾವಳಿಗೆ ಸಂಬಂಧಿಸಿದೆ.

**೪೪೪. ನೀತಿ ಮತ್ತು ಧರ್ಮ**

ಜ್ಞಾನಲಾಭಕ್ಕಾಗಿ ನಾವು ವೈರಾಗ್ಯವನ್ನು ಬೆಳೆಸಿಕೊಳ್ಳಬೇಕು. ನಮ್ಮ ಅಹಂಕಾರ ಸ್ವಭಾವಗಳನ್ನು ತುಳಿದು ನಮ್ಮ ಕರ್ತವ್ಯಗಳನ್ನು ನಿಯಮಬದ್ಧವೂ ಅನಾಸಕ್ತವೂ ಆದ ರೀತಿಯಲ್ಲಿ ಪಾಲಿಸಬೇಕು. ಶಂಕರರು ವೇದಾಂತದ ಅಧ್ಯಯನಕ್ಕೆ ಅಗತ್ಯವಾದ ಅಧಿಕಾರ ಚತುಷ್ಟಯವನ್ನು ಹೇಳಿದ್ದಾರೆ. ಅವು (೧) ನಿತ್ಯಾನಿತ್ಯ ವಿವೇಕ. (೨) ಐಹಿಕಾಮುಷ್ಮಿಕಗಳಲ್ಲಿ ಸುಖಲಾಭ ಮತ್ತು ದುಃಖ ನಿವಾರಣೆಯ ಅಪೇಕ್ಷೆಯಿಂದ ಬಿಡುಗಡೆ. (೩) ಸಮ, ದಮ, ವೈರಾಗ್ಯ, ಉಪರತಿ, ತಿತಿಕ್ಷಾ, ಸಮಾಧಾನ ಮತ್ತು ಶ್ರದ್ಧೆ ಇವುಗಳ ಪ್ರಾಪ್ತಿ. (೪) ಮೋಕ್ಷಾಪೇಕ್ಷೆ. ನೈತಿಕ ಜೀವನ ನಮ್ಮ ಭಾವಗಳನ್ನು ಶುದ್ಧಿಮಾಡಿ ಅಹಂಕಾರವನ್ನು ನಿರ್ಮೂಲನೆ ಮಾಡಿ ಸತ್ಯವನ್ನು ಅರಿಯುವುದಕ್ಕೆ ನಮ್ಮನ್ನು ಸಿದ್ಧಪಡಿಸುತ್ತದೆ. ವೇದಾಂತದಲ್ಲಿ ಈ ವಿಷಯಗಳು ಪ್ರಸ್ತಾವಿತವಾಗಿವೆ.

ಶಂಕರರ ಮೂಲ ನಿಲುವೆಂದರೆ –ವಿವೇಕ, ಅಪೇಕ್ಷೆಯಿಂದ ಬಿಡುಗಡೆ. ವೈರಾಗ್ಯ ಮತ್ತು ಮೋಕ್ಷಾಪೇಕ್ಷೆ. ಇದರಿಂದ ಶಂಕರರ ನಿಲುವು ಸ್ಪಷ್ಟ.

*ವಿವರಗಳಿಗೆ : ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦ ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ ಪುಟ. ೨೯೯*

**೪೪೫. ನೀರಾವರಿ**

ನೀರಾವರಿ ಎಷ್ಟು ಮಹತ್ವದ್ದು ಎನ್ನುವುದನ್ನು ವಿಜ್ಞಾನೇಶ್ವರರು ತಮ್ಮ ಮಿತಾಕ್ಷರದಲ್ಲಿ ಈ ರೀತಿ ಹೇಳಿದ್ದಾರೆ, 'ನೀರಾವರಿ ಕೆಲಸಕಾರ್ಯಗಳು ರಾಜ್ಯದ ಮೊದಲ ಕೆಲಸವಾಗಿದೆ. ಅಣೆಕಟ್ಟುಗಳನ್ನು ನಿರ್ಮಿಸುವುದರಿಂದ ಕೆಲವರಿಗೆ ಅನ್ಯಾಯವಾದರೂ ಹಲವಾರು ಜನರಿಗೆ ನ್ಯಾಯ ಸಿಗುತ್ತದೆ, ಅನುಕೂಲವಾಗುತ್ತದೆ. ಈ ಕಾರಣದಿಂದಾಗಿ ಅಣೆಕಟ್ಟು ನಿರ್ಮಾಣವನ್ನು ಯಾರೂ ವಿರೋಧಿಸಬಾರದು'.

ಮೋಹನಕೃಷ್ಣ ರೈಯವರು ವಿವರಿಸುವಂತೆ ಕೃಷಿಗೆ ಸಂಬಂಧಿಸಿದ ಹಾಗೆ ಪ್ರಾಚೀನ ಕಾಲದಲ್ಲಿ ಎರಡು ರೀತಿಯಲ್ಲಿ ಕೃಷಿ ಚಟುವಟಿಕೆಯು ನಡೆಯುತ್ತಿತ್ತು. ಒಂದು ಮಳೆಯನ್ನು ಆಶ್ರಯಿಸಿದ ಕೃಷಿ. ಇದು ಮಳೆಗಾಲದಲ್ಲಿ ನಡೆಯುತ್ತಿತ್ತು. ಆದುದ್ದರಿಂದ ಈ ಪದ್ಧತಿಯಲ್ಲಿ 'ಏಕಬೆಳೆ' ಮಾತ್ರ ಸಾಧ್ಯವಾಗಿತ್ತು. ಕೆರೆ ನೀರನ್ನು ಆಶ್ರಯಿಸಿದ ಬೆಳೆಗಳು ವರ್ಷದಲ್ಲಿ ಮೂರು ಬೆಳೆಯನ್ನು ತೆಗೆಯುತ್ತಿದ್ದರು. ಹೀಗಾಗಿ ಕೆರೆ ನಿರ್ಮಾಣ ಪದ್ಧತಿಯು ಸಹಜವಾಗಿಯೇ ರೂಪುಗೊಂಡವು. ಆಂಡಯ್ಯನಲ್ಲಿ ಬರುವ ಈ ಕೆಳಗಿನ ಸಾಲುಗಳು ಇದಕ್ಕೆ ಪೂರಕವಾಗಿದೆ. "ಕೆರೆಯ ಕಟ್ಟಿಸು ಬಾವಿಯ ತೋಡಿಸು" ಇದು ಕೆರೆಗೆ ಇರುವ ಪ್ರಾಶಸ್ತ್ಯವನ್ನು ಸೂಚಿಸುತ್ತದೆ. ನೀರಾವರಿ ವ್ಯವಸ್ಥೆಯು ಒಂದು ಸಮಾಜದಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತದೆ. ಮೇಲಿನ ಮಾತುಗಳು ನೀರಾವರಿಯ ಕೆಲಸ–ಕಾರ್ಯಗಳನ್ನು ವಿವರಿಸುತ್ತವೆ. ನೀರಾವರಿ ವ್ಯವಸ್ಥೆ– ಕೃಷಿ ಚಟುವಟಿಕೆಗೂ ಸಂಬಂಧವಿದೆ. ಅದರಂತೆ ಕೃಷಿಯಲ್ಲಿ ಪ್ರಧಾನ ಪಾತ್ರವಹಿಸುವ ನೀರಾವರಿ ವ್ಯವಸ್ಥೆ ಪರೋಕ್ಷವಾಗಿ ಸಂಪನ್ಮೂಲದ ವ್ಯವಸ್ಥೆಗೆ ಕಾರಣವಾಗುತ್ತದೆ. ಕೆರೆ ಮತ್ತು ಬಾವಿಗಳ ನೀರಾವರಿಯು ಎರಡು ಉದ್ದೇಶಗಳನ್ನು ಹೊಂದಿವೆ.

೧. ಕೃಷಿ ಚಟುವಟಿಕೆಗೆ ಪೂರಕವಾಗಿ

೨. ಮನುಷ್ಯ ದಿನಂದಿನ ಬದುಕಿಗೆ ಅವಶ್ಯವಾದ ನೀರಿನ ಬಳಕೆಗಾಗಿ ಕೆರೆ, ಬಾವಿಗಳು ನೀರಿನ ಶೇಖರಣ ಕೇಂದ್ರಗಳು ಎಂಬುದನ್ನು ಮರೆಯಲಾಗದು.

*ವಿವರಗಳಿಗೆ ನೋಡಿ: ಮೋಹನಕೃಷ್ಣ ರೈ ೨೦೦೪ ಪ್ರಭುತ್ವ ಮತ್ತು ಜನತೆ.*

*ಡಾ.ಎಂ. ಚಿದಾನಂದ ಮೂರ್ತಿ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ*

**೪೪೬. ನುಡಿವಳಿ**

*........ಧರ್ಮಪುತ್ರಂಗೆ ತನ್ನ ನುಡಿದ ನುಡಿವಳಿಯಂ ನೆನೆದು.........*

*(ಪಂಪಭಾರತ ೧೧–೪೩)*

ಪಂಪ ಭಾರತದಲ್ಲಿ ವಾಗ್ದಾನ; ಪ್ರತಿಜ್ಞೆ ಪದಕ್ಕೆ ಪರ್ಯಾಯವಾಗಿ ನುಡಿವಳಿ ಎಂದು ಬಂದಿದೆ. ವಾಗ್ದಾನ ಅಥವಾ ಪ್ರತಿಜ್ಞೆಗೆ ವಿಶೇಷ ಅರ್ಥವಿದೆ. ಶಪಥಗೈಯ್ಯುವುದು. ಪೂಣ್ಕೆ ಇವುಗಳು ಕೂಡಾ ವಾಗ್ದಾನವನ್ನು ಸೂಚಿಸುತ್ತದೆ. ವಾಗ್ದಾನವೆಂದರೆ ವಾಕ್‌ನ ದಾನ. ಮಾಡಿಯೇ ತೀರುತ್ತೇನೆ ಎಂಬುದು ಪ್ರತಿಜ್ಞೆಯ ಮೂಲಭಾವ. ಮಾತಿಗೆ ಇರುವ ಮಹತ್ವವನ್ನು ಇದು ಸೂಚಿಸುತ್ತದೆ. ಇಟ್ಟ ಕಾಲನ್ನು ಹಿಂದಕ್ಕೆ ತೆಗೆಯಲಾರೆ ಮತ್ತು ಕೊಟ್ಟ ಮಾತನ್ನು ವಾಪಾಸು ಪಡೆಯಲಾರೆ ಎಂಬುದು ಪ್ರತಿಜ್ಞೆಯ ಮೂಲರೂಪ ವಾಗಿದೆ. ಕೊಟ್ಟ ಮಾತಿಗೆ ಇರುವ ಮಹತ್ವವನ್ನು ಪ್ರತಿಜ್ಞೆಯು ಸೂಚಿಸುತ್ತದೆ. ವಾಸ್ತವ ವಸಾಹತು ಪೂರ್ವದ ಸನ್ನಿವೇಶದಲ್ಲಿ ವಾಗ್ದಾನ ಮಹತ್ವದ್ದಾಗಿತ್ತು. ಮಾತೇ ನಿಜವಾದ ಮಾನದಂಡ. ಮಾತಿಗಿರುವ ಮಹತ್ವ ಉಳಿದುದಕ್ಕೆ ಇರಲಿಲ್ಲ. ನಾಲಿಗೆ ಕುಲವ ಅರುಹಿತು ಎನ್ನುವುದು ಇದರಿಂದ ಬಂತು. ನಾಲಿಗೆ ಬೇಕು ಬೇಕಾದ ರೀತಿಯಲ್ಲಿ ಹೊರಳಿಸಬಾರದು ಎಂಬುದು ನೀತಿ. ಆದುದರಿಂದ ಲಿಖಿತ ಆಧಾರವಿಲ್ಲದೆಯು ಅನೇಕ ವ್ಯವಹಾರಗಳು ನಡೆಯುತ್ತಿದ್ದವು ಎಂಬುದಿಲ್ಲಿ ಗ್ರಾಹ್ಯ.

**೪೪೭. ನೃತ್ಯ**

ಕ್ರಿ.ಶ.೧೫೮೭ರ ಸಿಂಹಭೂಪಾಲನ 'ಲಾಸ್ಯರಂಜನ' ಕೃತಿಯಲ್ಲಿ ನಾಟ್ಯದ ಬಗೆಗೆ ಅನೇಕ ವಿವರಗಳನ್ನು ಕೊಡುತ್ತಾನೆ. ಕೆಲವನ್ನು ಸಂಗ್ರಹಿಸಿ ಇಲ್ಲಿ ಹೇಳಲಾಗಿದೆ.

೧. ನಾಟ್ಯದಲ್ಲಿ ಎರಡು ವಿಧವಿದೆ. ಮಾರ್ಗ ಮತ್ತು ದೇಶೀ, ಬ್ರಹ್ಮ, ಇಂದ್ರ ಮೊದಲಾದವರು ಅಭಿನಯಿಸಿದುದು ಮಾರ್ಗ. ಈ ಭೂಲೋಕದಲ್ಲಿ ದೇಶ ದೇಶಗಳಲ್ಲೂ ಅದನ್ನು ವಿಸ್ತರಿಸಿ ಅಭಿನಯಿಸುವುದೇ ದೇಶೀ. (೧-೨೦, ೨೧)
೨. ಮೇಳ ವಾದ್ಯದವರ ವಿವರ: ನೃತ್ಯ ಮಂದಿರದಲ್ಲಿ ಇಬ್ಬರು ತಾಳದವರು, ಇಬ್ಬರು ಮದ್ದಳೆಯವರು, ಇಬ್ಬರು ಸಂಗೀತಕಾರರು, ಇಬ್ಬರು ಕಹಳೆಯವರೂ, ಇಬ್ಬರು ಕೊಳಲೂದುವವರೂ, ಇಬ್ಬರು ತಂಬೂರಿ ಬಾರಿಸುವವರೂ ಇರಬೇಕು (೧-೪೨)
೩. ನರ್ತಕಿ ಲಕ್ಷಣ: ಅತಿಸ್ಥೂಲ ಶರೀರವಿಲ್ಲದವಳೂ, ಅತಿಕೃಶ ದೇಹವನ್ನುಳ್ಳದವಳೂ, ಅತಿ ಎತ್ತರವಾಗಿರದವಳೂ, ಅತಿ ಕುಳ್ಳಾಗಿಲ್ಲದವಳೂ, ವಿಕಲಾಂಗಳಲ್ಲದವಳೂ, ಕೋಮಲ ಕಂಠವುಳ್ಳದವಳೂ, ರೂಪವತಿಯೂ, ಮಿತಭಾಷಿಣಿಯೂ, ದಾನಿಯೂ, ದೇಶಭಾಷಾ ಪ್ರವೀಣೆಯೂ, ದೈವಗುರು ಬ್ರಾಹ್ಮಣರನ್ನು ವಂದಿಸುವವಳೂ, ಉಬ್ಬಿರುವ ಕುಚ, ವಿಸ್ತಾರವಾದ ನಿತಂಬ ಇವುಗಳನ್ನು ಉಳ್ಳವಳೂ, ಯುಕ್ತಿವಂತೆಯೂ, ಗೀತವಾದ್ಯ ಮೊದಲಾದ ಕಲೆಗಳಲ್ಲಿ ವಿಲಾಸೆಯೂ ಆದವಳನ್ನು ನೃತ್ಯಮಾಡಲು ರಾಜರು ನೇಮಿಸಬೇಕು. (೧-೪೩, ೪೬)
೪. ನಾಟ್ಯ, ನೃತ್ಯ ಇವೆರಡನ್ನು ಪರ್ವ ಕಾಲಗಳಲ್ಲೂ, ನೃತ್ಯವನ್ನು ರಾಜರ ಪಟ್ಟಾಭಿಷೇಕ, ಮಹೋತ್ಸವ, ದಂಡಯಾತ್ರೆ, ಹರಿಹರ ಪೂಜೆ ಮತ್ತು ಉತ್ಸವ, ವಿವಾಹ, ಮನೋಹರ

ಪ್ರಸಂಗ, ಪುತ್ರೋತ್ಸವ, ಪುರ ಪ್ರವೇಶ, ಗೃಹ ಪ್ರವೇಶ, ದಾನಕಾಲ ಇವುಗಳಲ್ಲಿ ಅಭಿನಯಿಸಬೇಕು.(೧–೪೮)

೫. ಭಾವಾಭಿನಯವಿಲ್ಲದೆ ಕೈ ಕಾಲುಗಳನ್ನು ಆಡಿಸುವುದೇ ನೃತ್ಯ. ಇದರಲ್ಲಿ ಮೂರು ವಿಧ.

ಅ. ರಜ್ಜಂ ಭ್ರಮಣ (ಹಗ್ಗದಾಟ) ಮೊದಲಾದವು ವಿಷಮ ನೃತ್ಯಗಳು:

ಆ. ವಿಧವಿಧವಾದ ರೂಪವನ್ನು ಹೊಂದಿರುವುದೇ ವಿಕಟ ನೃತ್ಯ.

ಇ. ಆಂಗಿಕ ಮೊದಲಾದ ಅಲ್ಪಕರಣಗಳನ್ನು ಮಾಡುವುದು ಲಘುನೃತ್ಯ. (೧–೬೩, ೬೭)

೬. ಕೇವಲ ಅಂಗಾಭಿನಯಗಳಿಂದ ಭಾವಗಳನ್ನು ತೋರಿಸುವುದೇ ನೃತ್ಯ (೧–೬೨)
(ನೋಡಿ : ನಾಟಕ; ಅಂಗಾಹಾರ; ಕರಣಾಂಗಹಾರ; ಪ್ರಹಸನ)

**೪೪೮. ನೇಕಾರರು**

ನೇಯ್ಗೆನೇಕಾರರ ಪ್ರಮುಖ ವೃತ್ತಿ. ಈ ವೃತ್ತಿಗೆ ಸಂಬಂಧಿಸಿದಂತೆ ನೂಲುವವರು, ಬಣ್ಣಹಾಕುವವರು ಇರುತ್ತಾರೆ. ವಡ್ಡಾರಾಧನೆಯಲ್ಲಿ ನೇಕಾರರ ಉಲ್ಲೇಖವು ಚಾಣಾಕ್ಯ ರಿಸಿಯ ಕಥೆಯಲ್ಲಿ ಬರುತ್ತದೆ. ಚಾಣಾಕ್ಯನು ಯುದ್ಧದಲ್ಲಿ ಸೋತು ಹಸಿದು "ಒಬ್ಬ ನೇಕಾರನ ಮನೆಗೆ ಹೋಗಿ ತಿನ್ನಲು ಏನಾದರೂ ಕೊಡುವಂತೆ ಅಲ್ಲಿಯ ಹೆಣ್ಣು ಮಗಳನ್ನು ಕೇಳುತ್ತಾನೆ. ಅವಳು ಕುಳಿತುಕೋ ಮಗು ಎಂದು ಮಣೆ ಹಾಕಿ ತಟ್ಟೆ ಇಟ್ಟು ಬಿಸಿ ಅಂಬಲಿಯನ್ನು ಬಡಿಸುತ್ತಾಳೆ. ಇದರಿಂದ ಆಗ ನೇಕಾರರಿದ್ದುದು ತಿಳಿದು ಬರುತ್ತದೆ. ನೇಕಾರ ಅಜ್ಜಿ ಚಾಣಾಕ್ಯನಿಗೆ ಅಂಬಲಿ ಬಡಿಸಿರುವುದನ್ನು ನೋಡಿದಾಗ ನೇಕಾರರು ಬಡತನದ ಜೀವನ ನಡೆಸುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ. ಅವರು ಬಡವರಾಗಿದ್ದರೂ ಅತಿಥಿ ಸತ್ಕಾರ ಮಾಡುವುದನ್ನು ಮರೆಯುತ್ತಿರಲಿಲ್ಲ.

ಕರ್ನಾಟಕದಲ್ಲಿ ಬಹಳ ಹಿಂದಿನಿಂದಲೂ ವಾಣಿಜ್ಯ ಕ್ಷೇತ್ರದಲ್ಲಿ ನೇಕಾರರಿಗೆ ಪ್ರಮುಖ ಪಾತ್ರವಿತ್ತು. ಕರ್ನಾಟಕ ಹತ್ತಿ ದೇಶ–ವಿದೇಶಗಳಲ್ಲಿ ವಿಖ್ಯಾತವಾಗಿತ್ತು ಎಂಬುದು ಗಮನಾರ್ಹ.

*ವಿವರಗಳಿಗೆ ನೋಡಿ: ಡಾ. ವಿ.ಎಲ್. ಪಾಟೀಲ್ ೨೦೦೯*
*ವಡ್ಡಾರಾಧನೆ ಜಾನಪದೀಯ ಅಧ್ಯಯನ ಪುಟ. ೧೭೭.*

**೪೪೯. ನೈಗಮ**

ನೈಗಮ– ವಸ್ತುವಿನ ಸ್ವರೂಪವನ್ನು ವಿವೇಚಿಸದೆ ಯಾವುದೊಂದು ಬಾಹ್ಯವಿಷಯದ ಸಂಬಂಧದಿಂದ ವಿಚಾರ ಮಾಡುವುದು ನೈಗಮವು. ಕಟ್ಟಿಗೆ, ನೀರು, ಅಕ್ಕಿ ಮೊದಲಾದ ಉಪಕರಣಗಳನ್ನಿಟ್ಟು ಕೊಂಡಿರುವ ಮನುಷ್ಯನನ್ನು ಕುರಿತು ನೀನು ಏನು ಮಾಡುವೆ ಎಂದು ಕೇಳಿದರೆ ಆತನು ಅನ್ನವನ್ನು ಮಾಡುತ್ತೇನೆ ಎಂದು ಹೇಳುವನು. ಈ ಉತ್ತರವು ನೈಗಮನಯವನ್ನನುಸರಿಸಿರುವುದು. ಇಲ್ಲಿ ಕೆಲಸದಲ್ಲಿ ತೊಡಗಿಸಿದ ಕಟ್ಟಿಗೆ, ನೀರು,

ಬೆಂಕಿ ಮೊದಲಾದ ತೊಡಗಿಸಲ್ಪಟ್ಟ ಸ್ವರೂಪದಿಂದ ನಿರ್ದೇಶಮಾಡದೆ ಅವು ಯಾವ ಉದ್ದೇಶದಿಂದ ತೊಡಗಿಸಲ್ಪಟ್ಟಿವೆಯೋ ಆ ಉದ್ದೇಶವನ್ನನುಲಕ್ಷಿಸಿ ಹೇಳಲ್ಪಟ್ಟಿವೆ.

*ವಿವರಗಳಿಗೆ ನೋಡಿ: ಮಹಾದೇವ ಪ್ರಭಾಕರ ಪೂಜಾರ್ ೧೯೭೭ ಜೈನಧರ್ಮ ಪರಿಭಾಷೆ ಪುಟ. ೯.*

**೪೫೦. ನ್ಯಾಯ-ವೈಶೇಷಿಕ**

*ಈ ಲೋಕದೊಳ್ ತತ್ವನಿಶ್ಚಯಂಗೆಯ್ವುದೆ ಕಾರಣಮಾಗಿ ಸಮಯಸಿದ್ಧಾಂತಂಗಳ್ ಪಲವಾದವು. ಅಲ್ಲಿ ಧರ್ಮಮಧರ್ಮಮೆಂದೆರಡೆ ಭೇದಮಕ್ಕುಂ, ಅವಾವುವೆಂದೊಡೆ- ನ ಹಿಂಸ್ಯಾತ್ ಸರ್ವಭೂತಾನಿ, ಎಂದು ಅಕಳಂಕ ತರ್ಕಪ್ರತಿಷ್ಠಾ ನಿಶ್ಚಯ ಜೈನ ಸಿದ್ಧಾಂತವಾದಿಗಳುಂ; ಅಹಿಂಸಾ ಲಕ್ಷಣೋ ಧರ್ಮಃ ಎಂಬ* **ವೈಶೇಷಿಕ ನೈಯಾಯಿಕ** *ಸಾಂಖ್ಯ ಮೀಮಾಂಸಕ ಷಟ್ತರ್ಕಸಿದ್ಧಾಂತವಾದಿಗಳುಂ; (ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ, ೨೮ ವಚನ)*

'ನ್ಯಾಯ' ಮತ್ತು 'ವೈಶೇಷಿಕ' ಇವು ಸ್ವತಂತ್ರ ತರ್ಕವಿಚಾರದ ಆಧಾರದ ಮೇಲೆ ನಿಂತಿರುವ ವಸ್ತುಸತ್ಯತಾ ವಾದವನ್ನು ಅವಲಂಬಿಸುವ, ದರ್ಶನಗಳು. ಬೌದ್ಧದಾರ್ಶನಿಕರ ನೈರಾತ್ಮವಾದ ಮತ್ತು ವಿಜ್ಞಾನವಾದಗಳಿಗೆ ಇವು ಪ್ರಬಲವಾದ ಪ್ರತಿದ್ವಂದ್ವಿಗಳು. 'ನ್ಯಾಯ'ವು ಮುಖ್ಯವಾಗಿ ತರ್ಕ ಮತ್ತು ಪ್ರಮಾಣಶಾಸ್ತ್ರ; 'ವೈಶೇಷಿಕ'ವು ಪ್ರಧಾನವಾಗಿ ಭೌತಶಾಸ್ತ್ರ ಮತ್ತು ಆಧ್ಯಾತ್ಮಶಾಸ್ತ್ರ. ಆದರೆ ಎರಡಕ್ಕೂ ಮೂಲತತ್ವಗಳು ಸಮಾನವಾಗಿವೆ: ಗುರಿಯೂ ಸಮಾನವೇ; ಜೀವಾತ್ಮನ ಮೋಕ್ಷವೇ ಆ ಗುರಿ.

ಆತ್ಮವು ನಿತ್ಯವೂ ವಿಭುವೂ ಆದ ದ್ರವ್ಯ. ಜ್ಞಾನ, ಇಚ್ಛೆ, ದ್ವೇಷ, ಪ್ರಯತ್ನ, ಸುಖ, ದುಃಖ, ಪುಣ್ಯ, ಪಾಪ, ಈ ಎಂಟೂ ಆತ್ಮನ 'ಗುಣ'ಗಳು. ಇವು ಯಾವವೂ ಯಾವುದೇ ಭೌತದ್ರವ್ಯದ ಗುಣಗಳಾಗುವಂತಿಲ್ಲ. ಆದ್ದರಿಂದ ಅಭೌತವದ 'ಆತ್ಮ'ವೆಂಬ ದ್ರವ್ಯವೊಂದಿರ ಬೇಕು: ಅದೇ ಈ ಗುಣಗಳಿಗೆ ಆಶ್ರಯ. ಆತ್ಮವು ಶರೀರ. ಇಂದ್ರಿಯ, ಮನಸ್ಸು, ಜ್ಞಾನ ಸಂತಾನ, ಇವೆಲ್ಲಕ್ಕಿಂತಲೂ ಬೇರೆ ಮತ್ತು ವಿಭಿನ್ನ. ನ್ಯಾಯ-ವೈಶೇಷಿಕರಲ್ಲಿ ಕೆಲವರು ಆತ್ಮ ಪ್ರತ್ಯಕ್ಷ ಗ್ರಾಹ್ಯವಲ್ಲವೆಂದೂ, ಅದರ ಅಸ್ತಿತ್ವ ಶ್ರುತಿ ಪ್ರಮಾಣದಿಂದಲೂ ಮತ್ತು ಚೇತನ ಪ್ರಕಾರಗಳಾದ ಉಪಲಬ್ಧಿ, ಇಚ್ಛೆ, ದ್ವೇಷ ಮುಂತಾದವುಗಳ ಮೇಲಿಂದ ಮಾಡಬಹುದಾದ ಅನುಮಾನದಿಂದಲೂ, ಸಿದ್ಧಪಡುತ್ತದೆ ಎಂದು ಹೇಳುತ್ತಾರೆ. ನ್ಯಾಯ-ವೈಶೇಷಿಕರಲ್ಲಿ ಇತರರು, ಅಂತರ ಅಥವಾ ಮಾನಸಪ್ರತ್ಯಕ್ಷದಿಂದ ಆತ್ಮ ಗ್ರಾಹ್ಯವೆನ್ನುತ್ತಾರೆ: 'ನಾನು ಇದ್ದೇನೆ', 'ನಾನು ಅರಿಯುತ್ತಿದ್ದೇನೆ', 'ನಾನು ಸುಖಿ' ಮುಂತಾಗಿ ಹೇಳುವಾಗ ಇರುವ 'ನಾನು' ಎಂಬ ಅನುಭವವೇ ಮಾನಸಪ್ರತ್ಯಕ್ಷದ ವಿಷಯ:ಜ್ಞಾನ ಅಥವಾ ಬುದ್ಧಿ ಆತ್ಮದ 'ಗುಣ'ವಾದರೂ ಅದು ಮುಖ್ಯವಾದ ಅಥವಾ ಅವಿಯೋಜ್ಯವಾದ ಗುಣವಲ್ಲ. ಆತ್ಮ ಸಂಸಾರಿಯಾಗಿರುವ ಅವಸ್ಥೆಯಲ್ಲಿ ಮಾತ್ರ ಅದು ಗುಣ: ಆದ್ದರಿಂದ ಅದು ಔಪಾಧಿಕ. ತತ್ವಜ್ಞಾನದಿಂದ ಮೋಕ್ಷಸಿದ್ಧಿಯಾದಾಗ, ಆತ್ಮವು ತನಗೆ ಶರೀರದೊಡನೆ ಇರುವ ಸಂಬಂಧದಿಂದ ಮುಕ್ತವಾಗುತ್ತದೆ. ಆಗ ಸುಖ, ದುಃಖ, ಅಥವಾ ಯಾವುದೇ

ಬಗೆಯ ಬುದ್ಧಿವ್ಯಾಪಾರ ಅನುಭವಗೋಚರವಾಗದು.

ಆತ್ಮದ ಬಗ್ಗೆ ಬೇರೆ ಬೇರೆ ಮತಗಳು ಬೇರೆ ಬೇರೆ ನಿಲುವುಗಳನ್ನು ತಳೆದಿದ್ದಾರೆ. ಎಂಬುದು ಗಮನಾರ್ಹ. ನ್ಯಾಯ-ವೈಶೇಷಿಕ ಪಂಥ ಮತ್ತು ಅದು ಆತ್ಮದ ಬಗ್ಗೆ ವ್ಯಕ್ತಪಡಿಸುವ ಅಭಿಪ್ರಾಯವು ಆದಿಪುರಾಣದಲ್ಲಿ ಚರ್ಚೆಗೆ ಗುರಿಯಾಗಿದೆ.

ಆದರೆ ನೈಯಾಯಿಕರ ಈ ಮತವನ್ನು ಬೇರೆ ದಾರ್ಶನಿಕರು ಒಡಂಬಡುವುದಿಲ್ಲ; ಈ ಕರ್ಮಫಲವಾದವೇ ನೈಯಾಯಿಕರಿಗೆ ಈಶ್ವರಾಸ್ತಿತ್ವಸಾಧಕವಾದ ಯುಕ್ತಿಯು. ಕರ್ಮಕ್ಕೂ, ಫಲಕ್ಕೂ ಸಂಬಂಧವನ್ನುಂಟು ಮಾಡುವುದಕ್ಕಾಗಿಯೇ ಈಶ್ವರನು ಬೇಕಾಗಿದ್ದರೆ ಈಶ್ವರನನ್ನು ಒಡಂಬಡದೆ ಫಲವನ್ನು ಸಂಪೂರ್ಣವಾಗಿ ಕರ್ಮಾಧೀನವೆಂದು ಒಪ್ಪುವುದು- ಎಂದರೆ ಕರ್ಮವೇ ಫಲೋತ್ಪಾದನ ಮಾಡುವುದೆಂದು ಹೇಳುವುದು ಅಸಂಗತ ವಾಗಲಾರದು; ಬೌದ್ಧರು ಇದೇ ಮತವನ್ನೊಪ್ಪುವರು.

ನ್ಯಾಯವು ತರ್ಕಪದ್ಧತಿಯಲ್ಲಿ ವಿಶ್ಲೇಷಣಾ ಪಂಥವಾಗಿ ಬೆಳೆಯಿತು. ಅದರ ಪ್ರಕಾರ ಜ್ಞಾನಾರ್ಜನೆಯಿಂದ ಮೋಕ್ಷವನ್ನು ಪಡೆಯಬಹುದು. ಅದಕ್ಕಿಂತ ಮುಖ್ಯವಾಗಿ ಈ ದರ್ಶನದ ಪ್ರಕಾರ ಒಂದು ವಾಕ್ಯ ಅಥವಾ ಅಭಿಪ್ರಾಯವನ್ನು ಅನುಮಾನ, ವಾದ ಮತ್ತು ವಿಶ್ಲೇಷಣೆಗಳಿಂದ ಪರೀಕ್ಷಿಸಬಹುದು. ಅದು ತರ್ಕವನ್ನು ಹೇಗೆ ಬಳಸುತ್ತದೆಂಬುದನ್ನು ತಿಳಿಸಲು ಕೆಳಗಿನ ಉದಾಹರಣೆ ನೀಡಲಾಗಿದೆ. ೧. ಬೆಟ್ಟದ ಮೇಲೆ ಬೆಂಕಿ ಇದೆ, ೨. ಏಕೆಂದರೆ ಅದು ಹೊಗೆ ಹೊಮ್ಮಿಸುತ್ತಿದೆ, ೩. ಯಾವುದು ಹೊಗೆ ಹೊಮ್ಮಿಸುತ್ತದೋ ಅದರಲ್ಲಿ ಬೆಂಕಿಯಿದೆ. (ಉದಾ : ಅಡಿಗೆ ಒಲೆ)

ತರ್ಕಕ್ಕೆ ದೊರೆತ ಮಹತ್ವದಿಂದ ಭಾರತೀಯ ವಿದ್ವಾಂಸರು ಕ್ರಮಬದ್ಧವಾಗಿ ಚಿಂತನೆ ಮಾಡುವುದಕ್ಕೂ, ತಮ್ಮ ಸಮರ್ಥನೆ ನೀಡುವುದಕ್ಕೂ ಸ್ಪಷ್ಟವಾದ ದಾರಿ ದೊರೆಯಿತು.

ನ್ಯಾಯ-ವೈಶೇಷಿಕದ ಇತಿಹಾಸ ಇಪ್ಪತ್ತು ಶತಮಾನಗಳನ್ನು ವ್ಯಾಪಿಸುತ್ತದೆ. ಎರಡು ಕಾಲಾವಧಿಗಳಲ್ಲಿ ಅದನ್ನು ವಿಭಾಗಿಸುವುದುಂಟು: ಒಂದು 'ಪ್ರಾಚೀನ', ಇನ್ನೊಂದು 'ನವೀನ'. ಪ್ರಾಚೀನ ನ್ಯಾಯ-ವೈಶೇಷಿಕ ಗೌತಮ, ಕಣಾದರಿಂದ (ಸುಮಾರು ಕ್ರಿ.ಪೂ. ಮೂರನೆಯ ಶತಮಾನ) ಆರಂಭವಾಗುತ್ತದೆ; ಗಂಗೇಶನ ಆಗಮನದ ಹೊತ್ತಿಗೆ (ಸುಮಾರು ಕ್ರಿ.ಶ. ೧೨೦೦) ಮುಗಿಯುತ್ತದೆ. 'ನ್ಯಾಯ'ದ ಮೊದಲ ಶಾಸ್ತ್ರೀಯ ಕೃತಿಯೇ ಗೌತಮರ ನ್ಯಾಯ-ಸೂತ್ರ. ಪ್ರಾಚೀನ ನ್ಯಾಯದ ಇತರ ಪ್ರಮುಖ ಕೃತಿಗಳೆಂದರೆ – ವಾತ್ಸ್ಯಾಯನನ ನ್ಯಾಯ-ಭಾಷ್ಯ ಅಥವಾ ನ್ಯಾಯಸೂತ್ರ ವ್ಯಾಖ್ಯಾನ (ಸುಮಾರು ಕ್ರಿ.ಶ. ೪೦೦), ಉದ್ಯೋತಕರನ ನ್ಯಾಯ-ವಾರ್ತಿಕ (ಕ್ರಿ.ಶ. ೬ನೆಯ ಶತಮಾನ), ವಾಚಸ್ಪತಿಮಿಶ್ರನ ನ್ಯಾಯ-ವಾರ್ತಿಕ-ತಾತ್ಪರ್ಯ-ಟೀಕೆ (ಕ್ರಿ.ಶ. ೯ನೇ ಶತಮಾನ), ಉದಯನನ ನ್ಯಾಯ-ವಾರ್ತಿಕ-ತಾತ್ಪರ್ಯ-ಪರಿಶುದ್ಧಿ (ಕ್ರಿ.ಶ. ೧೦ನೆಯ ಶತಮಾನ), ಜಯಂತನ ನ್ಯಾಯ-ಮಂಜರೀ ಮತ್ತು ಭಾವರ್ವಜ್ಞನ ನ್ಯಾಯ-ಸಾರ (ಕ್ರಿ.ಶ. ೧೦ನೆಯ ಶತಮಾನ). ವೈಶೇಷಿಕ ದರ್ಶನದಲ್ಲಿ, ಮೊದಲ ಶಾಸ್ತ್ರೀಯ ಕೃತಿ ಕಣಾದರ ವೈಶೇಷಿಕ-ಸೂತ್ರ; ಇದು ಗೌತಮರ ನ್ಯಾಯ-ಸೂತ್ರಕ್ಕಿಂತಲೂ ಪ್ರಾಚೀನವೆಂದು ತೋರುತ್ತದೆ.

ವೈಶೇಷಿಕ ಸೂತ್ರಕ್ಕೆ ಈಗ ಭಾಷ್ಯವಾವುದೂ ಉಪಲಬ್ಧವಿಲ್ಲ; ಸಿಂಹಳದ ರಾಜ ರಾವಣನು ಒಂದು ಭಾಷ್ಯವನ್ನು ಬರೆದಿದ್ದನೆಂದು ಪ್ರವಾದವನ್ನು ಕೇಳುತ್ತೇವೆ. ಪ್ರಶಸ್ತಪಾದನ ಪದಾರ್ಥ-ಧರ್ಮ-ಸಂಗ್ರಹ (ಕ್ರಿ.ಶ. ೪ನೆಯ ಶತಮಾನ)ವನ್ನೇ ಸಾಮಾನ್ಯವಾಗಿ ವೈಶೇಷಿಕ-ಸೂತ್ರ ಭಾಷ್ಯವೆನ್ನುವುದು ರೂಢಿ. ಆದರೆ ಅದು ಭ್ಯಾಷ್ಯ-ಶೈಲಿಯಲ್ಲಿ ಇಲ್ಲ; ವೈಶೇಷಿಕ ದರ್ಶನದ ಒಂದು ಸ್ವತಂತ್ರ ವಿವರಣಗ್ರಂಥದಂತೆ ಬರೆಯಲ್ಪಟ್ಟಿದೆ. ಈ ಪ್ರಶಸ್ತಪಾದನ ಕೃತಿಗೆ ಮೂರು ಉತ್ತಮ ಟೀಕೆಗಳಿವೆ. ಅವು ಯಾವುವೆಂದರೆ – ವ್ಯೋಮಶಿವನ ವ್ಯೋಮವತೀ (ಕ್ರಿ.ಶ. ೯ನೆಯ ಶತಮಾನ), ಶ್ರೀಧರನ ನ್ಯಾಯ-ಕಂದಲೀ ಮತ್ತು ಉದಯನನ ಕಿರಣಾವಲೀ (೧೦ನೆಯ ಶತಮಾನ). ಉದಯನನ ಲಕ್ಷಣಾವಲೀ ವೈಶೇಷಿಕದರ್ಶನದ ಒಂದು ಪ್ರಕರಣಗ್ರಂಥ. ಶಿವಾದಿತ್ಯನ ಸಪ್ತ-ಪದಾರ್ಥೀ ಮತ್ತು ವಲ್ಲಭಾಚಾರ್ಯನ ನ್ಯಾಯ-ಲೀಲಾವತೀ. ಇವೆರಡೂ ಪ್ರಾಚೀನಕಾಲದ ಕಡೆಗೆ ಬರುವ ನವೀನ ತರ್ಕಶಾಸ್ತ್ರದ ಮುನ್‌ಸೂಚನೆಯನ್ನು ತೋರಿಸುವ ಎರಡು ಮುಖ್ಯ ಕೃತಿಗಳು. ಪ್ರಾಚೀನ ನ್ಯಾಯ-ವೈಶೇಷಿಕ ದರ್ಶನದಲ್ಲಿ ನಿರೂಪಣೆಯ ಸೌಕರ್ಯಕ್ಕಾಗಿ ಎರಡು ವಿಭಾಗ ಮಾಡಬಹುದು:- ಪ್ರಮಾಣಶಾಸ್ತ್ರ ಮತ್ತು ಆಧ್ಯಾತ್ಮಶಾಸ್ತ್ರ ಎಂದು.

*ವಿವರಗಳಿಗೆ ನೋಡಿ: ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦*
*ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ ಪುಟ. ೨೨೮*
*ಆರ್. ಎಸ್. ಶರ್ಮ ೨೦೦೭ ಪ್ರಾಚೀನ ಭಾರತ ಪುಟ. ೨೪೮*
*ಮಹದೇವ ಪ್ರಭಾಕರ ಪೂಜಾರ ೧೯೭೬ ಜೈನಧರ್ಮ ಪರಿಭಾಷೆ ಪುಟ. ೮೬*

## ಪ

**೪೫೧. ಪಂಚಗವ್ಯ**

*ಆಗಳಾ ಪೊಱಲ ಬೀದಿಗಳೊಳೆಲ್ಲಂ ಗಂಧೋದಕ*
***ಪಂಚಗವ್ಯಂ**ಗಳಂ ತಳಿಯಿಸಿ ............ (ಪಂಪ ಭಾರತ ೪-೫ ವ)*

ಆಗ ಪಟ್ಟಣದ ಬೀದಿಗಳಲ್ಲೆಲ್ಲ ಶ್ರೀ ಗಂಧದ ನೀರನ್ನೂ ಪಂಚಗವ್ಯವನ್ನೂ ಸಿಂಪಡಿಸಿ ಹಸುವಿಗೆ ಸಂಬಂಧಪಟ್ಟ ಹಾಲು ಮೊಸರು, ತುಪ್ಪ, ಗಂಜಲ, ಸಗಣಿ ಇವುಗಳನ್ನು ಮಿಶ್ರಮಾಡಿ ಶುದ್ಧಿಗಾಗಿ ಉಪಯೋಗಿಸುವ ಪದಾರ್ಥವೇ ಪಂಚಗವ್ಯವೆಂದು ಇಲ್ಲಿಯ ಅಭಿಪ್ರಾಯ. ಪಂಚಗವ್ಯವನ್ನು ತಳಿಸುವುದು ಎಂದರೆ ಶುದ್ಧಿಗೊಳಿಸುವುದು ಎಂದರ್ಥ. ಹಸು ಪವಿತ್ರ ಹಸುವಿನ ಹಾಲು ಅಷ್ಟೇ ಪವಿತ್ರವೆಂಬ ನಂಬಿಕೆಯ ತಳಹದಿಯ ಮೇಲೆ ಇದು ರೂಪುಗೊಂಡಿದೆ.

ಹಾಲು, ಮೊಸರು, ಗಂಜಲ, ಸಗಣಿ-ಇವುಗಳು ತುಂಬಾ ಪವಿತ್ರವಾದ ವಸ್ತುಗಳು. ಇಲ್ಲಿ ಗೋವಿಗೆ ಕೊಟ್ಟ ಮಹತ್ವವು ಗಮನಾರ್ಹ.

**೪೫೨. ಪಂಚಗುರು**

*ಪಂಚಗುರುಸಮಕ್ಷದೊಳ್ ಬಾಹ್ಯಾಭ್ಯಂತರಪರಿಗ್ರಹಪರಿತ್ಯಾಗಪುರಸ್ಸರಂ ವೀರಸಂಸ್ಥಾನಾರೂಢನಂ*

*ಮಹಾಬಳನಂ ಜಾತರೂಪಧರನಂ ಮಾಡಿ (ಆದಿಪುರಾಣ ೨-೫೧ ವ)*

ಪಂಚಪರಮೇಷ್ಠಿಗಳು; ಅರ್ಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ ಮತ್ತು ಸರ್ವಸಾಧುಗಳು. ಇವರು ಪಂಚಗುರುವೆನಿಸಿಕೊಳ್ಳುತ್ತಾರೆ.

ಮುನಿವೃಂದೋಚ್ಚಾರಿತಂ ಪಂ
ಚನಮಸ್ಕೃತಿಗಾಂತು ಕಿವಿಯನರ್ಹತ್ವದಮಂ.....

(ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೨-೫೭)

ಪಂಚನಮಸ್ಕೃತಿ ಅಂದರೆ ಪಂಚಪರಮೇಷ್ಠಿಗಳಿಗೆ ಮಾಡುವ ನಮಸ್ಕಾರ. ಪಂಚ ಎಂದರೆ ಐದು. ನಮಸ್ಕರಿಸುವುದು ಎಂದರೆ ಹಿರಿಯರಿಗೆ ಕಿರಿಯರು ಕೊಡುವ ಗೌರವವೂ ಹೌದು. ನಮಸ್ಕಾರ ಪದ್ಧತಿಯಲ್ಲಿ ವ್ಯತ್ಯಾಸವಿದೆ. ಅದರಲ್ಲಿ ಹಿರಿಯರು–ಕಿರಿಯರು, ಗಂಡ–ಹೆಂಡತಿ, ಗುರು–ಶಿಷ್ಯ, ದೇವರು–ಮನುಷ್ಯ, ತಂದೆ–ತಾಯಿ ಮಗ/ಮಗಳು.

ಆಧುನಿಕ ಪರಿಭಾಷೆಯಲ್ಲಿಯೂ ಇದು ಚಾಲ್ತಿಯಲ್ಲಿದೆ. ಪಂಪ ಇಲ್ಲಿ ನಮಸ್ಕೃತಿ ಎಂದು ಬಳಸಿರುವುದು ಗಮನಾರ್ಹವಾಗಿದೆ.

*ವಿವರಗಳಿಗೆ ನೋಡಿ: ಪಂಚ ಪರಮೇಷ್ಠಿಗಳು.*

**೪೫೩. ಪಂಚ ತಂತ್ರ ಪ್ರಕಾರಗಳು (ಐದುಂ ತಂತ್ರಗಳ್)**

*ಅನೇಕ ಪ್ರಕಾರಕಪಟೋಪಾಯಂಗಳಿಂದತಿಸ್ನೇಹಿತರೊಳ್ ಪೃಥಗ್ಭಾವಮಂಮಾೞ್ಪುದೇ* ***ಭೇದಮೆಂಬುದು,*** *ಆವ ಕಾರ್ಯಮುಮಂ ವಿಚಾರಪೂರ್ವಕಮಲ್ಲದೆ ನೆಗೞಲಾಗ ದೆಂಬುದನಱಿಪುವುದು* ***ಪರೀಕ್ಷೆಯೆಂಬುದು*** *; ಎಂತುಂ ನಂಬದರಂ ನಂಬುವಂತೆ ನುಡಿದೊಡಂಬಡಿಸಿಯೊಳಪೊಕ್ಕು ನೆಗೞ್ವುದು* ***ವಿಶ್ವಾಸಮೆಂಬುದು*** *; ಪೆಱರ ಬಗೆಯಱಿದುಸಂಧಾನಂಗೆಯ್ದು ವಂಚಿಸುವುದು* ***ವಂಚನೆಯೆಂಬುದು*** *; ಅನ್ಯರೆಲ್ಲರು ಮನತಿಸ್ನೇಹದಿಂ ತನ್ನವರಂ ಮಾಡಿಕೊಳ್ವುದು* ***ಮಿತ್ರಕಾರ್ಯಮೆಂಬುದು*** *; ಇಂತು ಐದುಂ ತಂತ್ರಂಗಳ ಪ್ರಕಾರಂ. (ಪಂಚತಂತ್ರ ಪೀಠಿಕಾಪ್ರಕರಣ ೪ವ)*

ಸ್ನೇಹಿತರಲ್ಲಿ ಒಡಕುಂಟು ಮಾಡುವುದು ಭೇದ. ವಿಚಾರಿಸಿಕೊಳ್ಳದೆ ಕೆಲಸ ಮಾಡುವುದು ಸರಿಯಲ್ಲ. ಆದುದರಿಂದ ಸರಿಯಾಗಿ ಪರೀಕ್ಷಿಸಿ ಕೆಲಸ ಮಾಡುವುದು ಪರೀಕ್ಷೆಯೆನಿಸಿಕೊಳ್ಳುತ್ತದೆ. ನಂಬದವರನ್ನು ನಂಬುವಂತ ಮಾತಿನಲ್ಲಿ ಒಪ್ಪಿಸಿ ಕೆಲಸ ಮಾಡುವುದು ವಿಶ್ವಾಸವೆನಿಸಿಕೊಳ್ಳುತ್ತದೆ. ಅನ್ಯರ ಬಗೆಯನ್ನು ತಿಳಿದು ಸಂಧಾನಗೆಯ್ದು ವಂಚಿಸುವುದು ವಂಚನೆಯೆನ್ನಿಸಿಕೊಳ್ಳುತ್ತದೆ. ಸಂಬಂಧಿಸಿದವರನ್ನು ನಂಬುವಂತೆ ಮಾಡಿ ತಮ್ಮವರನ್ನಾಗಿಸಿಕೊಳ್ಳುವುದು ಮಿತ್ರಕಾರ್ಯ. ದುರ್ಗಸಿಂಹನ ಪಂಚ ತಂತ್ರದ ಕುರಿತು ತ.ಸು.ಶಾ.ಮ ರಾಯರು ಹೀಗೆ ಹೇಳುತ್ತಾರೆ:

“ದುರ್ಗಸಿಂಹನು ಪಂಚತಂತ್ರವನ್ನು ಚಂಪೂರೂಪದಲ್ಲಿ ಕನ್ನಡಿಸಿದ್ದಾನೆ. ಆತನ ಗ್ರಂಥದ ಆದಿಯಲ್ಲಿರುವ ಕೆಲವು ಪದ್ಯಗಳಿಂದ ಕವಿಯ ವಿಚಾರವಾಗಿ ನಮಗೆ ಇಷ್ಟು ಮಾತ್ರ ತಿಳಿದು ಬರುತ್ತದೆ–ಕರ್ಣಾಟಕದ ಕಿಸುಕಾಡನಾಡಿನ ಸೈಯಡಿ ಎಂಬ ಅಗ್ರಹಾರದಲ್ಲಿ “ತರ್ಕ”, ವ್ಯಾಕರಣ, ಕಾವ್ಯ, ನಾಟಕ, ಭರತ ವಾತ್ಸ್ಯಾಯನಾದ್ಯಶೇಷ ವಿದ್ಯಾ ಸಮುದ್ರತರಣ ಗುಣೈಕ ಪುಣ್ಯ”ನಾದ ದುರ್ಗಮಯ್ಯನೆಂಬ ಧರಾಮರಾಗ್ರಗಣ್ಯನಿದ್ದನು. ಈತನ ಮಗ “ದೇವ, ದ್ವಿಜ, ಗುರು, ಜನಪದ ಸೇವಾನಿರತ”ನಾದ ಈಶ್ವರಾರ್ಯ. ಈ ಈಶ್ವರಾರ್ಯನಿಗೂ, ಈತನ ಮಡದಿ ರೇವಾಂಬಿಕೆಗೂ ಮಗನಾಗಿ ಜನಿಸಿದವನು ಕವಿ ದುರ್ಗಸಿಂಹ. ಈತನು ಸ್ಮಾರ್ತ ಬ್ರಾಹ್ಮಣ, ಕಮ್ಮೆ ಕುಲದವನು, ಗೌತಮ ಗೋತ್ರದವನು. ಮಹಾಯೋಗಿಗಳಾದ ಶಂಕರಭಟ್ಟರು ಈತನ ಗುರುಗಳು. “ಸತ್ಯಾಶ್ರಯ ಕುಲತಿಲಕ”, “ಕೀರ್ತಿ ವಿದ್ಯಾಧರ”, “ಚೋಳ ಕಾಲಾನಲ” ಇತ್ಯಾದಿ ಬಿರುದುಗಳಿಂದ ಕೂಡಿದ ಒಂದನೆಯ ಜಯಸಿಂಹ ಜಗದೇಕಮಲ್ಲ ರಾಜನಲ್ಲಿ “ಶ್ರೀಗಂಡ ಭೂರೀಶ್ರಯ”ನೆಂಬ ಬಿರುದುಳ್ಳ ಸಿಂಹ ಸನ್ನಾಹನೆಂಬ ದಂಡನಾಯಕನಿದ್ದನು. “ತಚ್ಚರಣ ಕಮಲಭೃಂಗ”ನಾದ ಕುಮಾರಸ್ವಾಮಿಯು ದುರ್ಗಸಿಂಹನಿಗೆ ಜಗದೇಕಮಲ್ಲನಲ್ಲಿ ಸಂಧಿ ವಿಗ್ರಹಿಯ ಪದವಿಯನ್ನು ಕೊಡಿಸಿದನು. ದೊರೆಯ ಅನುಗ್ರಹಕ್ಕೆ ಪಾತ್ರನಾದ ಕವಿ ಸುಖಜೀವನವನ್ನು ಬಾಳಿದುದಲ್ಲದೆ, ದೈವಭಕ್ತನಾಗಿದ್ದು, ತನ್ನ ಹುಟ್ಟಿದೂರಿನಲ್ಲಿ ಹರಿಹರ ಭವನಗಳನ್ನು ಕಟ್ಟಿಸಿ ಕೀರ್ತಿಶಾಲಿಯಾದನು.

ಜಗದೊಳ್ ಪತಿಹಿತದೆಡೆಯೊಳ್
ನೆಗಳ್ದನಜನೊನೇಕದಂತನಿಂ ಪವನಜನಿಂ
ಖಗರಾಜನಿನೀ ದುರ್ಗಂ
ದ್ವಿಗುಣಂ ತ್ರಿಗುಣಂ ಚತುರ್ಗುಣಂ ಪಂಚಗುಣಂ.

ಕವಿಯು ತನ್ನ ಗ್ರಂಥದ ಮೂಲದ ಮಹತ್ತನ್ನು ಕುರಿತು ಹೀಗೆ ಹೇಳುತ್ತಾನೆ: ಗಿರಿ ತನೂಜೆಯು ಶಿವನನ್ನು ಕುರಿತು “ದೇವ ನೀನೆನಗೊಂದಪೂರ್ವಮಪ್ಪ ಕಥೆಯಂ ಪೇಳಲ್ವೇಳ್ಪುದೆನೆ” ಪರಶಿವನು ಅಪೂರ್ವವಾದ ಒಂದು ಕಥೆಯನ್ನು ಆಕೆಗೆ ಹೇಳುತ್ತಿದ್ದನು. ಆಗ ಪುಷ್ಪದಂತನೆಂಬ ಗಣಪ್ರಧಾನನು ಅದನ್ನೆಲ್ಲಾ ಅಮೂಲಾಗ್ರವಾಗಿ ಕೇಳಿದನು. ಕಾರಣಾಂತರದಿಂದ ಆತನು ಭೂಲೋಕದಲ್ಲಿ ಗುಣಾಢ್ಯನೆಂಬ ಹೆಸರಿನಿಂದ ಹುಟ್ಟಿ, ತಾನು ಶಿವನಿಂದ ಕೇಳಿದ್ದ ಕಥೆಯನ್ನು ಪೈಶಾಚಕ ಭಾಷೆಯಲ್ಲಿ ಬೃಹತ್ಕಥೆಯೆಂಬ ಹೆಸರಿನಿಂದ ಹೇಳಿದನು. ಅವುಗಳನ್ನು ಕೇಳಿದ ವಸುಭಾಗ ಭಟ್ಟನೆಂಬ ಕವಿ “ಆ ಕಥಾಸಮುದ್ರದೊಳ್ ಪಂಚರತ್ನಮಪ್ಪೈದು ಕಥೆಗಳನಾಯ್ದುಕೊಂಡು ಪಂಚತಂತ್ರಮೆಂದು ಪೆಸರಿಟ್ಟು ಸಮಸ್ತ ಜಗಜ್ಜನೋಪಕಾರಾರ್ಥಂ ಪೇಳ್ದನ್”.

ಆ ವಸುಭಾಗ ಭಟ್ಟ ಕೃತಿಯಂ ವಸುಧಾಧಿಪ ಹಿತಮನಖಿಲವಿಬುಧಸ್ತುತಮಂ ಪಸತಾಗಿರೆ ವಿರಚಿಸುವೆಂ ವಸುಮತಿಯೊಳ್ ಪಂಚತಂತ್ರಮಂ ಕನ್ನಡದಿಂ ಎಂದು ಕವಿ ಹೇಳಿಕೊಂಡಿದ್ದಾನೆ.

ಪಂಚತಂತ್ರದ ಐದು ಕತೆಗಳು ಐದು ರೀತಿಯ ತತ್ವಗಳನ್ನು ಒಳಗೊಂಡಿವೆಯೆಂದು ತ.ಸು.ಶಾಮರಾಯರು ಅಭಿಪ್ರಾಯ ಪಡುತ್ತಾರೆ:

ಸೌರೂಪ್ಯಪುರದ ರಾಜನಾದ ಅಮರಶಕ್ತಿಯು ಸ್ವೇಚ್ಛಾಚಾರಿಗಳಾದ ತನ್ನ ಮೂವರು ಮಕ್ಕಳನ್ನು ತಿದ್ದಿ ಹಾದಿಗೆ ತರಲು, ವಸುಭಾಗ ಭಟ್ಟನನ್ನು ಬೇಡಿದನಂತೆ. ಆತನು "ಅರ್ಥಶಾಸ್ತ್ರಾಭಿಪ್ರಾಯೋಪಾಯಂಗಳಪ್ಪುವೈದು ಕಥೆಗಳಂ ಪೇಳ್ದು, ತಿಳಿಪಿ, ರಾಜಪುತ್ರರಂ ಸತ್ಪಾತ್ರರಂ ಮಾಡಿ ತಾನುಂ ಸ್ವಾರ್ಥ ಸಿದ್ಧಿಯೊಳ್ ಕೂಡಿದಂ." ಆ ಐದು ಕಥೆಗಳೂ ಅರ್ಥಶಾಸ್ತ್ರದ ಐದು ತತ್ವಗಳನ್ನು ಬೋಧಿಸುತ್ತವೆ.–೧) ಅತಿ ಸ್ನೇಹಿತರೊಳ್ ಪೃಥಗ್ಭಾವಂ ಮಾಳ್ಪುದು ಭೇದವೆಂಬುದು. ೨) ಎಂತು ನಂಬದರಂ ನಂಬುವಂತೆ ನುಡಿದೊಡಂಬಡಿಸಿ ಯೊಳಪೊಕ್ಕು ನೆಗಳ್ವುದು ವಿಶ್ವಾಸಮೆಂಬುದು. ೩) ಆವ ಕಾರ್ಯಮುಮಂ ವಿಚಾರಪೂರ್ವಕಮಲ್ಲದೆ ನೆಗಳಿಲಾಗದೆಂಬುದಳಿಪುವುದು ಪರೀಕ್ಷೆಯೆಂಬುದು. ೪) ಅನ್ಯರೆಲ್ಲರುಮನತಿಸ್ನೇಹದಿಂ ತನ್ನವರಂ ಮಾಡಿಕೊಳ್ವುದು ಮಿತ್ರಕಾರ್ಯಮೆಂಬುದು"– ಈ ಐದು ತಂತ್ರಗಳೂ ಪಿಂಗಳಕನೆಂಬ ಸಿಂಹಕ್ಕೂ ಸಂಜೀವಕನೆಂಬ ಎತ್ತಿಗೂ ನಡೆದ ವ್ಯವಹಾರದಲ್ಲಿ ಆಚರಣೆಗೆ ಬಂದಿದೆ. ಶಾಸ್ತ್ರ ವಿಷಯವನ್ನು ಕಾಂತಾಸಮ್ಮಿತವಾಗಿ ಮಾರ್ಪಡಿಸಿರುವ ಸಮ್ಮೋಹನಶಕ್ತಿಯ ಮಹಿಮೆಯನ್ನು ನೋಡಿ!

*ವಿವರಗಳಿಗೆ ನೋಡಿ: ತೆಕ್ಕುಂಜ ಗೋಪಾಲಕೃಷ್ಣ ೧೯೫೬ ಶ್ರದ್ಧಾಂಜಲಿ ಪುಟ. ೧೨೮–೧೨೯*

**೪೫೪. ಪಂಚತ್ವ**

*ಬಂಚಿಸಿ ತನ್ನನುಜೆಯ ಧನ*
*ಮಂ ಚಪಳಂ ಕೊಂಡು ಪುಸಿದು ಕಳವಳಿಸಿ ಖಳಂ ।*
***ಪಂಚತ್ವ*** *ಮನ್ಯೆದಿ ಮರು*
*ಚ್ಚಂಚಳಮನನೀಗಳಲ್ತೆ ವಾನರನಾದಂ ॥*

*(ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೫–೧೮)*

ಪಂಚತ್ವವೆಂದರೆ ಸಾವು. ಸಂಸ್ಕೃತದಲ್ಲಿ ಪಂಚತಾ ಅಂದರೆ ಮರಣ; ಸಾವು; ಶರೀರಕ್ಕೆ ಆರಂಭಕವಾದ ಪಂಚಮಹಾಭೂತಗಳು. ಕನ್ನಡದಲ್ಲಿ ಪಂಚತ್ವವೆಂದರೆ ಸಾವು ಎಂದು ಪಂಪ ಬಳಸಿದರೂ ಅಷ್ಟಾಗಿ ಈ ಪದವು ಚಾಲ್ತಿಯಲ್ಲಿಲ್ಲ. ಸ್ವಲ್ಪಮಟ್ಟಿಗೆ ಇದು ಅಪರೂಪವಾದ ಪದ. ಪಂಚ ಮಹಾಭೂತಗಳಲ್ಲಿ ಪ್ರಾಣವು ಲೀನವಾಗುವುದರಿಂದ ಪಂಚತ್ವವೆಂದು ಬಂದಿರಬೇಕು.

'ಗದಾಯುದ್ಧ'ದಲ್ಲಿಯೂ ರನ್ನ ಈ ಪದವನ್ನು ಬಳಸಿದ್ದಾನೆ. ದುಶ್ಶಾಸನನ ಮರಣ ಸಂದರ್ಭದಲ್ಲಿ.

"ನಿಜಜೀವಂ ಪರಲೋಕದೊಳ್ ನಿಜಮಹಾಮಾಂಸಂ ಪಿಶಾಚಾಸ್ಯದೊಳ್ ನಿಜರಕ್ತಂ ರಿಪುಕುಕ್ಷಿಯೊಳ್.......ಪಂಚತ್ವಮಂ ಪೊರ್ದಿದಯ್" (ಗ.ಯು–೫–೫)

ಇಲ್ಲಿ ದುಶ್ಶಾಸನನದು ವಿಲಕ್ಷಣ ಪಂಚತ್ವವಾಗಿದೆ.

**೪೫೫. ಪಂಚ ಮಹಾಪಾತಕಂಗಳ್**

*ಬಾಲವಧೆ ಸ್ತ್ರೀವಧೆ ಗೋವಧೆ ಬ್ರಾಹ್ಮಣವಧೆ ಋಷಿವಧೆಯೆಂ ದೀ*

***ಪಂಚಮಹಾಪಾತಕಂಗಳಂ** ಗೆಯ್ದವರುಂ...........*

*(ಡಿ.ಎಲ್.ಎನ್.೨೦೦೯ ಪು.೧೪೦).*

ಬಾಲವಧೆ, ಸ್ತ್ರೀವಧೆ, ಗೋವಧೆ, ಬ್ರಾಹ್ಮಣವಧೆ, ಋಷಿವಧೆ, ಪಂಚಮಹಾಪಾತಕಗಳು ಎಂದು ವಡ್ಡಾರಾಧನೆಯು ಹೇಳುತ್ತದೆ.

ಬ್ರಹ್ಮ ಹತ್ಯೆ, ಸುರಾಪಾನ, ಸ್ತೇಯ ಮತ್ತು ಗುರುತಲ್ಪ ಗಮನವನ್ನು ಮಹಾಪಾತಕವೆಂದು ಗೌತಮದಿಂದ ಹಿಡಿದು ಮನು, ಯಾಜ್ಞವಲ್ಕ್ಯರು ಹೇಳಿದ್ದಾರೆ. ಪಾಪಿಗಳೊಡನೆ ಸೇರುವುದೂ ಮಹಾಪಾತಕವಾಗಿದೆ.

..........ಭಟ್ಟರಾ ನಿಮ್ಮಂ ಪಂಚಮಹಪಾತಕನ ಮನೆಗೊಡಗೊಂಡು ವೋಗಿ...... (ವಡ್ಡಾರಾಧನೆ ೨೦೧೦ ಸುಕುಮಾರಸ್ವಾಮಿಯ ಕತೆ ಪುಟ.೧೮)

ಬಾಲ; ಸ್ತ್ರೀ; ಬ್ರಾಹ್ಮಣ; ಋಷಿ; ಗೋವು ಇವು ಮತಾಚಾರಕ್ಕೆ ಸಂಬಂಧಿಸಿದವು.

*ವಿವರಗಳಿಗೆ ನೋಡಿ: ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ*

*ಯುಗಯಾತ್ರೀ ಭಾರತೀಯ ಸಂಸ್ಕೃತಿ ೧೯೭೧ ಸಂಪುಟ. ೨ ಪುಟ. ೨೮೫*

*ದಿ. ನಾಗೇಶ ರಂಗೋ ಕುಲಕರ್ಣಿ (ಅನು) ೨೦೦೭ ಯಾಜ್ಞವಲ್ಕ್ಯ ಸ್ಮೃತಿ*

**೪೫೬. ಪಂಚ ಮಹಾವಾದ್ಯಗಳು**

*“.........ಪಲತೆಜಿದ ಪಜೆಗಳಂ ಪೊಯ್ಸಿಯುಂ ಶಂಖಂಗಳಂ ಪೂರೈಸಿಯುಂ ಭೇರಿಗಳಂ ತಾಟಿಸಿಯುಂ*

*ಕಹಳೆಗಳನೊತ್ತಿಸಿಯುಂ **ಪಂಚಮಹಾವಾದ್ಯಂಗಳಂ** ನಕುಲನಾಸ್ಫೋಟಿಸಿ........*

*(ಸಾಹಸ ಭೀಮ ವಿಜಯ ೭-೧ ವ)*

ಕೊಂಬು, ತಮಟೆ, ಶಂಖ, ಭೇರಿ, ಜಾಗಟೆ ಇವು ಪಂಚ ಮಹಾವಾದ್ಯಗಳು. ಇವುಗಳನ್ನು ಬಾರಿಸುತ್ತ ಪಾಂಡವರು ವೈಶಂಪಾಯನ ಸರೋವರದಲ್ಲಿ ಅಡಗಿದ್ದ ಕೌರವನನ್ನು ಪೊರಮಡಿಸಲು ಪ್ರಯತ್ನಿಸಿದರು. ಧ್ವನಿಗಳ ಆಸ್ಫೋಟ ಇಲ್ಲಿ ಗಮನಾರ್ಹ.

*ವಿವರಗಳಿಗೆ : ಚಿದಾನಂದಮೂರ್ತಿ ಎಂ. ೨೦೦೮ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ*

**೪೫೭. ಪಂಚರತ್ನ ಮಂಗಳಜಳ**

*ಅಗಲ್ ಪಂಚರತ್ನಗರ್ಭ ವಿವಿಧೌಷಧಿಸಂದರ್ಭ ಶಾತಕುಂಭಕುಂಭಸಂಭೃತ **ಮಂಗಳಜಳಂಗಳಿಂದಂ** ಮಿಸಿಸೆ ಮಿಂದಳಂಕಾರಮಂದಿರಕ್ಕೆ ವಂದು ನೆಱೆಯೆ ಕೈಗೆಯ್ಯೆ...................... (ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೪-೩೫ವ)*

ಸುವರ್ಣ, ರಜತ, ಮುಕ್ತಾ, ಮಾಣಿಕ್ಯ, ಪ್ರವಾಳಕ ಅಥವಾ ನೀಲ, ವಜ್ರ, ಪದ್ಮರಾಗ ಮುತ್ತು ಹವಳಗಳನ್ನು ಪಂಚರತ್ನವೆನ್ನುತ್ತಾರೆ. ಪಂಚರತ್ನಗಳು ಶಾತ ಕುಂಭವೆಂದರೆ

ಚಿನ್ನದ ಕಲಶ, ಕಲಶದಲ್ಲಿನ ನೀರು ಮಂತ್ರ ಪೂರಿತವಾದರೆ ಆಗ ಅದು ಮಂಗಳಜಲವಾಗುತ್ತದೆ. ಕಲಶದಲ್ಲಿರುವ ನೀರನ್ನು ತಲೆಗೆ ಸುರಿದರೆ ಆಗ ಮಂಗಳಜಲದ ಸ್ನಾನವಾಗುತ್ತದೆ. ಶುಭಕಾರ್ಯಕ್ಕೆ ಮಂಗಳಸ್ನಾನವಾಗಬೇಕು. ಇದು ಬಹಿರ್‌ಶುದ್ಧಿಗೆ ಕಾರಣವಾಗುತ್ತದೆ. ಲೌಕಿಕವಾಗಿ ಇದನ್ನು 'ಮಡಿ'ಯೆಂದು ಕರೆಯುತ್ತಾರೆ. ವ್ರತಕ್ಕೆ ಕೂರುವ ಮುನ್ನ ಮಂಗಳ ಸ್ನಾನವಾದರೆ – ಅನಂತರ ಅವರು ಯಾರನ್ನು ಮುಟ್ಟಬಾರದು. ಮುಟ್ಟಿದರೆ ಮೈಲಿಗೆಯಾಗುತ್ತದೆಯೆಂಬ ನಂಬಿಕೆಯಿದೆ.

**೪೫೮. ಪಂಚಸಮಿತಿಗಳು**

ಈರ್ಯಾ, ಭಾಷಾ, ಏಷಣಾ, ಆದಾನನಿಕ್ಷೇಪಣ ಮತ್ತು ಉತ್ಸರ್ಗ ಇವು ೫ ಸಮಿತಿಗಳಾಗಿವೆ. (ತ. ಸೂ. ೯–೫)

ಅನಂತಾನುಬಂಧಿ, ಅಪ್ರತ್ಯಾಖ್ಯಾನಾವರಣ ಮತ್ತು ಪ್ರತ್ಯಾಖ್ಯಾನಾವರಣ ಕ್ರೋಧ–ಮಾನ–ಮಾಯೆ–ಲೋಭಗಳ ಅಭಾವವಾಗಿ ಹೋಗಿರುವುದರಿಂದ ಮುನಿರಾಜರು ಯಾವಾಗ ಆಹಾರ–ವಿಹಾರ–ನಿಹಾರ ಮತ್ತು ದೇವದರ್ಶನ, ತೀರ್ಥವಂದನೆ ಮೊದಲಾದ ಪ್ರಶಸ್ತ ಪ್ರಯೋಜನದಿಂದ ಗಮನ ಮಾಡುತ್ತಿದ್ದರೆ ನಾಲ್ಕು ಮೊಳ ಮುಂದೆ ಭೂಮಿಯನ್ನು ನೋಡಿಕೊಂಡು ಹಗಲು ಹೊತ್ತಿನಲ್ಲಿ ಪ್ರಾಸುಕ ಮಾರ್ಗದಿಂದಲೇ ಗಮನ ಮಾಡುತ್ತಾರೆ, ಅವರ ಈ ಕ್ರಿಯೆಯನ್ನು ಈರ್ಯಾಸಮಿತಿಯೆಂದು ಹೇಳುತ್ತಾರೆ.

ಇದೇ ಪ್ರಕಾರ ಮೇಲೆ ಹೇಳಿದ ಕಷಾಯಗಳ ಅಭಾವವಾಗಿ ಹೋಗುವುದರಿಂದ ಮುನಿರಾಜರು ಇತರರಿಗೆ ನೋವನ್ನುಂಟು ಮಾಡುವ ಕರ್ಕಶ–ನಿಂದ್ಯ ವಚನಗಳನ್ನೆಂದೂ ಆಡುವುದಿಲ್ಲ. ಯಾವಾಗ ಮಾತನಾಡುತ್ತಾರೋ ಆಗಂತೂ ಹಿತ–ಮಿತ–ಪ್ರಿಯ ಮತ್ತು ಸಂದೇಹ ರಹಿತ, ಮಿಥ್ಯಾತ್ವರೂಪ ರೋಗದ ನಾಶ ಮಾಡುವಂಥ ವಚನಗಳನ್ನೇ ಆಡುತ್ತಾರೆ. ಅವರ ಈ ಪ್ರಕಾರದ ವಾಚಿಕ ಕ್ರಿಯೆಯನ್ನು ಭಾಷಾಸಮಿತಿಯೆಂದು ಹೇಳುತ್ತಾರೆ.

ಧ್ಯಾನ, ಅಧ್ಯಯನ ಮತ್ತು ತಪಸ್ಸುಗಳಲ್ಲಿ ಬಾಧೆಯನ್ನುತ್ಪನ್ನ ಮಾಡುವಂಥ ಕ್ಷುಧೆ–ತೃಷೆಗಳುಂಟಾದರೆ ತಪಶ್ಚರಣಾದಿಗಳ ವೃದ್ಧಿಯ ಸಲುವಾಗಿ ಮುನಿರಾಜರು ನಲವತ್ತಾರು ದೋಷಗಳನ್ನು ನಿವಾರಿಸಿ ಕುಲೀನ ಶ್ರಾವಕರ ಮನೆಯೊಳಗೆ ಹಗಲು ಹೊತ್ತಿನಲ್ಲಿ ಎದ್ದು ನಿಂತು ಒಂದು ಬಾರಿ ಅನುದ್ದಿಷ್ಟ ಆಹಾರ ಗ್ರಹಣ ಮಾಡುತ್ತಾರೆ. ಅದನ್ನು ಏಷಣಾ ಸಮಿತಿಯೆಂದು ಹೇಳುತ್ತಾರೆ.

ಮುನಿರಾಜರು ತಮ್ಮ ಶುದ್ಧಿ, ಸಂಯಮ ಮತ್ತು ಜ್ಞಾನಸಾಧನದ ಉಪಕರಣಗಳಾದ ಪಿಂಛ, ಕಮಂಡಲು ಮತ್ತು ಶಾಸ್ತ್ರಗಳನ್ನು ಸಾವಧಾನತೆಯೊಡನೆ ಎಂದರೆ ಅದರಿಂದ ಯಾವುದೇ ಪ್ರಕಾರದ ಬಾಧೆಯುಂಟಾಗುದಂತೆ ಎಚ್ಚರಿಕೆಯಿಂದ ಎತ್ತಿಕೊಳ್ಳುತ್ತಾರೆ–ಇಡುತ್ತಾರೆ. ಮುನಿಗಳ ಈ ಪ್ರಮಾದರಹಿತ ಕ್ರಿಯೆಯನ್ನು ಆದಾನ–ನಿಕ್ಷೇಪಣಸಮಿತಿಯೆಂದು ಹೇಳುತ್ತಾರೆ.

ಸಾಧುಗಳು ಯಾವುದು ನಿರ್ಜಂತುಕವಾಗಿದೆ, ಅಚಿತ್ತವಾಗಿದೆ, ಏಕಾಂತವಾಗಿದೆ, ನಗರದಿಂದ ದೂರ ನಿರ್ಜನವಾಗಿದೆ, ಪರರ ಅವರೋಧದಿಂದ ರಹಿತವಾಗಿದೆ ಮತ್ತು ಎಲ್ಲಿ ಬಿಲ ಹಾಗೂ ಛಿದ್ರಗಳಿಲ್ಲ ಅಂಥ ಸ್ಥಾನದಲ್ಲಿ ಮಲ-ಮೂತ್ರ ಹಾಗೂ ಕಫಾದಿಗಳನ್ನು ಕ್ಷೇಪಣ ಮಾಡುತ್ತಾರೆ. ಅವರ ಈ ಕ್ರಿಯೆಯನ್ನು ಪ್ರತಿಷ್ಠಾಪನ ಸಮಿತಿಯೆಂದು ಹೇಳಲಾಗುತ್ತದೆ.

**೪೫೫. ಪಂಚಾಗ್ನಿ**

*ಇಲ್ಲಿಂದ ಸ್ತನಯುಗಮಶ್ರುತಸ್ನಾತಂ*
*ಸಮೀಪತರವೃತ್ತಿ ಹೃದಯಶೋಕಾಗ್ನೇಃ*
*ಚರತಿ ವಿಮುಕ್ತಾಹಾರಂ*
*ವ್ರತಮಿವ ಭವತೋ ರಿಪುಸ್ತ್ರೀಣಾಂ ॥*
*ವೀರರ ವೀರ ವಿಮುಕ್ತಾ*
*ಹಾರಂ ಭವದರಿವಧೂಸ್ತನದ್ವಿತಯಂ ಕ*
*ಣ್ಣೀರಿಂ ಮಿಂದೆರ್ದೆಗಿರ್ಚಿಂ*
*ದೋರಂತಿರೆ ಬೆಂದು ಚರಿಸುತಿರ್ಪುದು ತಪಮಂ*

*(ಕರ್ಣಾಟಕ ಕಾದಂಬರಿ, ೧-೫೪)*

ಪಂಚಾಗ್ನಿಯೆಂದರೆ ಐದು ಬಗೆಯ ಅಗ್ನಿಗಳು - ಪವನ, ಪಾವನ, ಆಹವನೀಯ, ತ್ರೇತಾ, ಗಾರ್ಹಪತ್ಯ. ಇದರಲ್ಲಿ ಕೊನೆಯದನ್ನು ಗೃಹಸ್ಥರು ಆಚರಿಸಬೇಕು. ಋಷಿಗಳು ಬೇಸಿಗೆಯಲ್ಲಿ ನಾಲ್ಕು ಕಡೆ ಬೆಂಕಿ ಉರಿಸಿ, ಮಧ್ಯೆ ಕುಳಿತು, ನಡುನೆತ್ತಿಗೆ ಸೂರ್ಯನ ಬಿಸಿಲು ಬೀಳುವಾಗ ತಪಸ್ಸನ್ನು ಆಚರಿಸುವ ಕ್ರಮವನ್ನು ಪಂಚಾಗ್ನಿ ಮಧ್ಯದ ತಪಸ್ಸು ಎಂದು ಹೇಳುತ್ತಾರೆ. ನಾಗವರ್ಮನು ಕಿರ್ಚಿಂದೋರಂತಿರೆ ಬೆಂದು ಚರಿಸುತಿರ್ಪುದು ತಪಮಂ ಎಂದು ಹೇಳುತ್ತಾನೆ. ಇದು ಉಗ್ರವಾದ ತಪಸ್ಸು. ಇದರಲ್ಲಿ ವಿಮುಕ್ತಾಹಾರ ಎಂದರೆ ಆಹಾರದಿಂದ ವಿಮುಕ್ತವಾಗಿರಬೇಕು ಎಂದರ್ಥ.

ಬೆಂಕಿ: ವೇದದ ಕಾಲದ ಅಧಿದೇವತೆ.

ಅಗ್ನಿ ಐದು ಬಗೆ:

ಕಾಲಾಗ್ನಿ – ಕಾಲಕ್ಕೆ ಸಂಬಂಧಿಸಿದ್ದು
ಕ್ಷುಧಾಗ್ನಿ – ಹಸಿವೆಗೆ ಸಂಬಂಧಿಸಿದ್ದು
ಶೀತಾಗ್ನಿ – ಶೀತಕ್ಕೆ ಸಂಬಂಧಿಸಿದ್ದು
ಜ್ಞಾನಾಗ್ನಿ – ಜ್ಞಾನಕ್ಕೆ ಸಂಬಂಧಿಸಿದ್ದು

ಈ ಐದು ಅಗ್ನಿಗಳು ನಮ್ಮ ದೇಹದಲ್ಲಿದೆಯೆಂದು ಹೇಳುತ್ತಾರೆ.

ಶ್ರೌತ ಸಿದ್ಧಾಂತದಲ್ಲಿ ಗ್ರಾಹಪತ್ಯ ಅಗ್ನಿ; ಆಹಾವೇನೀಯ ಮತ್ತು ದಕ್ಷಿಣಾಗ್ನಿ. ಋಗ್ವೇದದಲ್ಲಿ ಅಗ್ನಿಯ ಕುರಿತು ವಿಶೇಷವಾದ ಸೂತ್ರಗಳಿವೆ. ಅವನು ದೇವತೆಗಳ

ಪುರೋಹಿತ. ವಿಶ್ವವ್ಯಾಪಾರದಲ್ಲಿನ ನಡೆಯುವ ನಿಯಮಕ್ಕೂ ಋತವೆಂದು ಹೆಸರು. ಅವನು ನಿಯಮಕ್ಕೆ ಅಧಿಪತಿ. ಅವನು ನಿಯಮಕ್ಕೆ ಅಧಿಪತಿಯಾಗಿರುವುದರಿಂದ ಮಾತರಿಶ್ವನ ಎಂಬುದು ಅವನ ಮತ್ತೊಂದು ಹೆಸರು.

ಬೆಂಕಿಯಿಂದ (ಅನಲ) ಅಶುಚಿಯಾದ ವಸ್ತುಗಳು ಶುಭ್ರವಾಗುತ್ತವೆ. ಅಂದರೆ ಬೆಂಕಿಯಿಂದ ಉರಿದು ಬೂದಿಯಾಗಿ ಶುಭ್ರವಾಗುತ್ತವೆ ಅಥವಾ ಪರಿವರ್ತಿತವಾಗುತ್ತವೆ. ನಾಗವರ್ಮನು ಕರ್ಣಾಟಕ ಕಾದಂಬರಿಯಲ್ಲಿ ಚಂಡಾಲ ಕನ್ಯೆಯನ್ನು ವಿವರಿಸುವಾಗ ಈ ರೀತಿಯಾಗಿ ಹೇಳುತ್ತಾನೆ. ಅನಲ ಎನ್ನುವುದು ಸಂಸ್ಕೃತ ಪದ. ಅನಲ ಎಂದರೆ ಅಗ್ನಿ, ಬೆಂಕಿ ಅರ್ಥವಿರುವ ಹಾಗೆಯೇ ಜೀರ್ಣ ಮಾಡುವ ಶಕ್ತಿ ಎಂಬ ಅರ್ಥವನ್ನೂ ಹೊಂದಿದೆ. (ಪಂಪಭಾರತದ ಖಾಂಡವದಹನ ಪ್ರಕರಣ)

ಇಂದ್ರನನ್ನು ಬಿಟ್ಟರೆ ಅಗ್ನಿಯನ್ನು ಸ್ತುತಿಸಿರುವಷ್ಟು ಮತ್ತೆ ಯಾವ ದೇವತೆಯನ್ನೂ ಸ್ತುತಿಸಿಲ್ಲ. ಇವನ ಸ್ತೋತ್ರಕ್ಕಾಗಿಯೇ ಸುಮಾರು ಇನ್ನೂರು ಸೂಕ್ತಗಳಿವೆ. ಅಗ್ನಿಯ ಪೂಜೆ ಹಿಂದೂಗಳಲ್ಲೂ ಪಾರಸಿಕರಲ್ಲೂ ವಿಶೇಷವಾಗಿ ಆಚರಣೆಯಲ್ಲಿದೆ. ದೇವತೆಗಳನ್ನು ಕರೆದುಕೊಂಡು ಬರುವವನು ಅಗ್ನಿ. ಅವನು ದೇವತೆಗಳ ಪುರೋಹಿತ, ಯಜ್ಞಕ್ಕೆ ಹೋತೃ. ಅವನು ಋತದ ಗೋಪಾ. ವಿಶ್ವ ವ್ಯಾಪಾರದಲ್ಲಿ ಕಾಣಬಹುದಾದ ಕ್ರಮಕ್ಕೂ ನಮ್ಮ ನಡತೆಯಲ್ಲಿ ಕಾಣಬಹುದಾದ ನಿಯಮಕ್ಕೂ ಋತ ಎಂದು ಹೆಸರು. ಅಗ್ನಿ ಆ ನಿಯಮಕ್ಕೆ ಅಧಿಪತಿ. ಮಾತರಿಶ್ವನ್ ಎಂಬುದು ಅವನ ಇನ್ನೊಂದು ಹೆಸರು.

ಅವನು ಪ್ರಕಾಶಮಾನವಾದ ದೇವತೆ; ಸೂರ್ಯನಂತೆ, ಮಿಂಚಿನಂತೆ ಹೊಳೆಯುತ್ತಾನೆ. ಅವನು ರಾತ್ರಿಯಲ್ಲಿ ಬೆಳಗಿ ಕತ್ತಲನ್ನು ಓಡಿಸುತ್ತಾನೆ. ಅವನು ಚಿನ್ನದಂತೆ ಪ್ರಕಾಶಮಾನವಾದ ರಥವನ್ನು ಪಡೆದಿರುತ್ತಾನೆ. ಹೊಗೆಯೇ ಅವನ ಧ್ವಜ. 'ಧೂಮಕೇತು' ಎಂಬುದು ಅವನ ಹೆಸರುಗಳಲ್ಲಿ ಒಂದು. ಅಗ್ನಿ 'ದ್ಯೌಃ'ನ ಮಗ. ದ್ಯಾವಾಪೃಥಿವಿಗಳ ಮಗ ಎಂದು ಹೇಳುವುದೂ ಉಂಟು. ಹವಿಸ್ಸನ್ನು ಹೊತ್ತುಕೊಂಡು ಹೋಗಿ ದೇವತೆಗಳಿಗೆ ಅವರವರ ಭಾಗವನ್ನು ಹಂಚುವುದು ಅಗ್ನಿಯ ಕೆಲಸ. ಸತ್ತವರನ್ನು ಪಿತೃಲೋಕಕ್ಕೆ ಕರೆದುಕೊಂಡು ಹೋಗುವುದೂ ಅವನ ಕೆಲಸ. ಅಗ್ನಿ ಮಾನವರಿಗೆ ಬಹಳ ಹತ್ತಿರದ ಸಂಬಂಧಿ. ಅವನು ಅವರ ತಂದೆ, ಅಣ್ಣ, ಅವರ ಮಗನೆಂದೂ ಕೆಲವು ವೇಳೆ ಹೇಳುವುದುಂಟು. ಅವನು ಅವರೊಡನೆ ಅವರ ಮನೆಯಲ್ಲಿ ವಾಸಿಸುತ್ತಾನೆ. ಆದುದರಿಂದ ಅವನಿಗೆ 'ಗೃಹಪರಿ' ಎಂದು ಹೆಸರು ಬಂದಿದೆ.

ಅಗ್ನಿ ಋತದ ಗೋಪನಲ್ಲದೆ ಜ್ಞಾನಿ, ಎಲ್ಲವನ್ನೂ ತಿಳಿದವನು. ಆದುದರಿಂದ ಅವನನ್ನು 'ಜಾತವೇದಸ್' ಎಂದು ಕರೆಯುವುದು ವಾಡಿಕೆ. ಅವನು ಮಾನವನಿಗೆ ಬಹಳ ಉಪಕಾರಿ; ಸಂತಾನ, ಸಂಪತ್ತು ಮತ್ತು ಸೌಖ್ಯಗಳನ್ನು ಕೊಡುತ್ತಾನೆ.

*ವಿವರಗಳಿಗೆ ನೋಡಿ: ಜಿ. ಹನುಮಂತರಾವ್ ೨೦೦೧ ಋಗ್ವೇದ ಸೂಕ್ತಗಳು ಪುಟ. ೮೪-೮೫*

*ಟಿ.ವಿ.ವೆಂಕಟಾಚಲಶಾಸ್ತ್ರಿ ೧೯೬೯ ಶ್ರೀವತ್ಸ ನಿಘಂಟು*

**೪೬೦. ಪಂಚಾ ವ್ರತಗಳು**

*ಅದೆಂತೆಂದೊಡೆ,* ***ಹಿಂಸಾನೃತಸ್ತೇಯಾಬ್ರಹ್ಮಪರಿಗ್ರಹ****ಪರಿತ್ಯಾಗಮೆಂಬಯ್ದುಂ ಮಹಾವ್ರತಂಗಳೊಳ್ ನೆರೆದು.*

*(ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೬-೨೭ವ)*

ಅಹಿಂಸೆ, ಸುಳ್ಳು ಹೇಳಬಾರದು, ಅಸ್ತೇಯ, ಅಪರಿಗ್ರಹ, ತ್ಯಾಗ ಇವು ಐದು ಮಹಾವ್ರತಗಳು ಎಂದು ಪಂಪ ಹೇಳುತ್ತಾನೆ. ಇದುವೇ ಪಂಚಾಣು ವ್ರತಗಳು.

ಆದಿಪುರಾಣದಲ್ಲಿ ಬರುವ ಬಹುತೇಕ ಪರಿಕಲ್ಪನೆಗಳು ಧಾರ್ಮಿಕ ಪರಿಭಾಷೆಗಳು ಮೇಲಿನವು ಅದಕ್ಕಿಂತ ಹೊರತಲ್ಲ. ವಡ್ಡಾರಾಧನೆಯಲ್ಲಿಯೂ ಪಂಚಾಣುವ್ರತದ ಬಗ್ಗೆ ಬರುತ್ತದೆ.

ವಡ್ಡಾರಾಧನೆಯಲ್ಲಿ ನಾಗಶ್ರೀ ಎಂಬುವಳು – ಅಹಿಂಸೆ, ಸತ್ಯ, ಅಸ್ತ್ರೇಯ, ಪರದಾರ ನಿವೃತ್ತಿ, ಮಿತಿಯುಳ್ಳ ಸ್ವೀಕರಣ – ಎಂಬ ಪಂಚಾಣುವ್ರತಗಳನ್ನು ಸ್ವೀಕರಿಸಿದ ವಿಚಾರವಿದೆ (ಪು. ೫೧) ಆಕೆಯು ಮತ್ತು ಆಕೆಯ ತಾಯಿಯು ಕಂತಿಯರ ಪಕ್ಕ ತಪಸ್ಸನ್ನು ಆಚರಿಸಿದ ವಿಷಯವು ಬರುತ್ತದೆ (ಅದೇ. ಪು. ೫೫). ಮರುಜನ್ಮದಲ್ಲಿ ಆಕೆಯು ಸುಭದ್ರನೆಂಬ ಸೆಟ್ಟಿಗೆ ಮಗನಾಗಿ ಜನಿಸುತ್ತಾಳೆ. (ಅದೇ. ಪು. ೫೫). ಜೈನ ದಿಗಂಬರರ ಪ್ರಕಾರ ಸ್ತ್ರೀಗೆ ಮೋಕ್ಷವಿಲ್ಲ. ಆದರೆ, ಬೌದ್ಧಮತದ ಪ್ರಕಾರ ಸ್ತ್ರೀಯರಿಗೆ ಮೋಕ್ಷದ ಅಧಿಕಾರವಿದೆ. ಶ್ವೇತಾಂಬರ (ಜೈನ) ಸಂಪ್ರದಾಯವೂ ಇದನ್ನೇ ಪ್ರತಿಪಾದಿಸಿತು. ನಾಗಶ್ರೀಯು ಪಂಚಾಣುವ್ರತವನ್ನು ಸ್ವೀಕರಿಸಿದರೂ, ಅವಳು ಮರುಜನ್ಮದಲ್ಲಿ ಪುರುಷನಾಗಿ ಜನಿಸುವುದು ಧಾರ್ಮಿಕವಾದ ಮಿತಿಯನ್ನು ತೋರಿಸುತ್ತದೆ. ಅಷ್ಟೇ ಅಲ್ಲದೆ ಇದು ವೈದಿಕ ಧರ್ಮದ ಪ್ರಭಾವವನ್ನು ಸೂಚಿಸುತ್ತದೆ.

*ವಿವರಗಳಿಗೆ ನೋಡಿ : Gururajachar S. 1974*

*Some aspect of economic & Social Life in Karnataka P. 244, 75.*

**೪೬೧. ಪಂಡಿತಿಕ್ಕೆ**

*ಒಳ್ಳಿತಪ್ಪ ದಿವಸ ವಾರ ನಕ್ಷತ್ರ ಮುಹೂರ್ತದೊಳತಿಬಲಮಹಾರಾಜನಂ ಕಂಡಿರ್ವರುಂ ಬೇಜೆಬೇಜುಪಶ್ಲೋಕಿಸಿ ಕ್ರಿಯಾಕಾರಕ ಸಂಬಂಧದಿಂದಂ ವಖ್ಯಾಣಿಸಿ ತಮ್ಮ* ***ಪಂಡಿತಿಕ್ಕೆ****ಯನಜೆಪಿದೊಡೆ ಸಭೆಯೊಳಿರ್ದ್ದ ಪಂಡಿತ ಜನಮೆಲ್ಲಂ ಮೆಚ್ಚಿ ಬಿಚ್ಚಳಿಸಿ ಪೊಗಟ್ದೊಡರಸಂ ಸಂತುಷ್ಟಚಿತ್ತನಾಗಿ ಒಸೆದು ನಿಮ್ಮ ತಂದೆಯ ಮಂತ್ರಿಪದಮಂ ಬಾಟಿಮಂ ಕೈಕೊಳ್ಳಿಮೆಂದು ಕೊಟ್ಟೊಡೆ......................(ಡಿ.ಎಲ್.ಎನ್.೨೦೦೯ ಪು.೪೮).*

ಮೇಲಿನ ಗದ್ಯಭಾಗದಲ್ಲಿ ರಾಜನು ಮಂತ್ರಿ ಪದವಿಗೆ ಆಯ್ಕೆ ಮಾಡುವಾಗ ಪರೀಕ್ಷಿಸುವ ವಿಧಾನವು ಚರ್ಚೆಯಾಗಿದೆ. ರಾಜನು ಅಭ್ಯರ್ಥಿಗಳಿಗೆ ಬೇರೆ ಬೇರೆ ಪ್ರಶ್ನೆಗಳನ್ನು ಕೇಳುತ್ತಾನೆ. ಕ್ರಿಯಾ-ಕಾರಕ ಸಂಬಂಧ ಮುಂತಾದವುಗಳನ್ನು ಕೇಳಿದ್ದಕ್ಕೆ ಅಭ್ಯರ್ಥಿಗಳು ಸರಿಯಾಗಿ ಉತ್ತರಿಸುತ್ತಾರೆ. "ತಮ್ಮ ಪಂಡಿತಿಕ್ಕೆ" (ಪಾಂಡಿತ್ಯ) ಪ್ರದರ್ಶನ

ಮಾಡಿ ಅಭ್ಯರ್ಥಿಗಳು ಗೆಲುವು ಸಾಧಿಸಿ ತಮ್ಮ ತಂದೆಯವರು ಪಡೆದಿದ್ದ ಮಂತ್ರಿ ಹುದ್ದೆಯನ್ನು ಪಡೆಯುತ್ತಾರೆ.

ಪಂಪಭಾರತದಲ್ಲಿಯೂ ಈ ರೀತಿಯಾಗಿ ಬರುತ್ತದೆ.

ಕಂದದ ಮೊದಲುಮಂ ವೃತ್ತದ ತುದಿಯುಮನೊಂದುಮಾಡಿ ಪದಮಿಕ್ಕಿಯೋದಿ *ಪಂಡಿತಿಕ್ಕೆಗೆ ಮುಯ್ವಾಂತು... (ಪಂಪ ಭಾರತ ೪-೯೫)*

(ಒಂದು ಕಂದಪದ್ಯದ ಆದಿಯನ್ನೂ ಮತ್ತೊಂದು ವೃತ್ತದ ಅಂತ್ಯವನ್ನೂ ಒಂದುಗೂಡಿಸಿ ಓದಿ ತನ್ನ ಪಾಂಡಿತ್ಯಕ್ಕೆ ಮೆಚ್ಚಿಕೊಳ್ಳುತ್ತಾನೆ.) ಒಟ್ಟಿನಲ್ಲಿ ಪಂಡಿತಿಕ್ಕೆಯೆಂದರೆ ಪಾಂಡಿತ್ಯ ಎಂದು ಅರ್ಥ.

ವ್ಯಾಕರಣ ಕ್ರಿಯಾ-ಕಾರಕ ಸಂಬಂಧ, ಬೇರೆ ಬೇರೆ ಶ್ಲೋಕಗಳ ಕಲಿಕೆಗಳು ಪಾಂಡಿತ್ಯಕ್ಕೆ ಮಾನದಂಡಗಳು.

**೪೬೨. ಪಂಡಿತೆ**

*"ಪಂಡಿತೆಯೆಂಬ ನೆಗಟ್ತೆಯ ಕೊಂಡಾಟದ ದಾದಿ ತನ್ನನೋದಿಸುತಿರೆ ಕಯ್ಕೊಂಡ ಕಳಾಪರಿಣತೆಯೊಳ್ ಪಂಡಿತೆಯಿಂದಾಕೆ ಪರಮ ಪಂಡಿತೆಯಾದಳ್...............*

*(ಬಸವರಾಜು ಎಲ್. (ಸಂ) ೧೯೭೬ ೩-೨೦).*

ಹೆಣ್ಣಿಗೆ ವಿದ್ಯೆಯನ್ನು ಹೇಳಿಕೊಡುವವರು ಸಹಜವಾಗಿ ಅನೇಕ ವಿದ್ಯೆಗಳಲ್ಲಿ ಪರಿಣತಿಯನ್ನು ಹೊಂದಿದವರಾಗಿರಬೇಕಾಗುತ್ತದೆ. "ಪಂಡಿತೆಯೆಂಬ ಪೆಸರನಾ ಪದದೊಳ್ ನನ್ನಿ ಮಾಡಿದ ಪಂಡಿತೆಯುಂ ಬೆರಸು" (ಅದೇ ೪-೮೧ವ) ಎನ್ನುವ ಪಂಪನ ಮಾತು ಈ ಅಭಿಪ್ರಾಯಕ್ಕೆ ಪೋಷಕವಾಗಿದೆ. ಪಂಡಿತದ ಸ್ತ್ರೀವಚನ ಪಂಡಿತೆ.

ವಾತ್ಸ್ಯಾಯನನ 'ಕಾಮಸೂತ್ರ'ದಲ್ಲಿ ಆರು ಮಂದಿ ಅಧ್ಯಾಪಿಕೆಯರು ಈ ರೀತಿಯಲ್ಲಿರುತ್ತಾರೆ:

೧. ಪುರುಷನ ಸಹವಾಸ ಹೊಂದಿದ ಎಂದರೆ ಜತೆಗಾರ ದಾಯಿಯ ಮಗಳು
೨. ನಿರ್ದೋಷವಾಗಿ ಮಾತಾಡುವ ಗೆಳತಿ
೩. ಸಮ ವಯಸ್ಕಳಾದ ಚಿಕ್ಕಮ್ಮ
೪. ಚಿಕ್ಕಮ್ಮನಂತೆಯೇ ವಿಶ್ವಾಸಕ್ಕೆ ಯೋಗ್ಯಳಾದ ವೃದ್ಧದಾಸಿ
೫. ಮೊದಲಿನಿಂದಲೂ ಪರಿಚಯವಿದ್ದ ಭಿಕ್ಷುಕಿ
೬. ತನ್ನ ಅಕ್ಕ (ವೆಂಕಟ ಭಸ್ಮೆ ಜಿ. ೧೯೮೩. ಪು. ೯)

'ಆದಿಪುರಾಣ'ದಲ್ಲಿ ಶ್ರೀಮತಿಯ ಬಗ್ಗೆ ಪಂಪನು ಹೇಳುವಾಗಲೂ ಶಿಕ್ಷಣದ ಪ್ರಸ್ತಾಪ ಇದೆ:

*ವಿವರಗಳಿಗೆ ನೋಡಿ: Acharya vipin 1973 Kamasutra Chandra Bandhu.*

೪೬೩. ಪಂದಿವೇಂಟೆ

ನೆಲನಂ ನಿೞುಗೆಯುಂ ನಡೆವೊಂದು ಪದಮುಮಂ ಸೋವಳಿ ಮೇವಳಿ
ಬಿಸುವಳಿಯುಂ
ಬಲಮಂ ಶಕುನಮನೊಳ್ಕಿತ್ತುಪಾಯಮಂ ಪಿಡಿವಂದೀತನೆ ವಂದಿ ಕುರುಡು
ಕುಂಟೆಂ ।
ದಲಸದಱಿಂತು ಬಲ್ಮೆಗೆ ಬೆರಲೆತ್ತಿ ಪಜ್ಜೆಯುಂ ನೆಲೆಗಳಂ ಕಿಡಲೀಯದೆ
ಸಿಲೆಯ ಮೇಲಾದೊಡಂ ಶಕುನಮಂ ನಿಱಿಪಂತೆ ನಿಱಿಸುವೆಂಪಂದಿಯಂನೀಂ
ಮೆಚ್ಚಲುಂ ॥ (ವಿಕ್ರಮಾರ್ಜುನವಿಜಯಂ ೫-೪೬)

ಈ ಪದ್ಯದೊಳಗಿನ 'ನೆಲನಂ ... ಪದಮುಮಂ... ಅಱಿದು ಎಂದರೇನೆಂಬುದನ್ನು ಹಿಂದೆ ವಿವರಿಸಿದೆವು. ಮುಂದಿನ 'ಸೋವಳಿ', 'ಮೇವಳಿ', 'ಬಿಸುವಳಿ' ಎಂಬ ಪದಗಳೊಳಗೆ ಮೊದಲಿನದಕ್ಕೆ 'ವಿ.ವಿಜಯ' ನಿಘಂಟುಕಾರರು 'ಅಟ್ಟುವಿಕೆ?' ಎಂದು ಪ್ರಶ್ನಾರ್ಥಕ ಚಿಹ್ನದೊಡನೆ ಅರ್ಥವನ್ನು ಸೂಚಿಸಿದ್ದಾರೆ. ಅದಕ್ಕೆ ಅದೇ ಅರ್ಥವೆಂಬಲ್ಲಿ ನಮಗಂತೂ ಸಂದೇಹವಿಲ್ಲ. ಆದರೆ, ಅವರು 'ಸೋವು' ಎಂಬ ಧಾತುವಿನ ಮುಂದೆ 'ಅಟ್ಟು' ಎಂಬ ಅರ್ಥವನ್ನಿತ್ತು, '೨-೧೭-೧೩-೫೬ವ' ಎಂಬ ದೃಷ್ಟಾಂತ ಸಂದರ್ಭಗಳನ್ನು ಸೂಚಿಸಿ, ಆ ಮೇಲೆ 'ಸೋವಳಿ = ಅಟ್ಟುವಿಕೆ? ಎಂದು ಬರೆದಿರುತ್ತಾರೆ. ಆ ಧಾತುರೂಪವಾಗುತ್ತಿದ್ದರೆ ಭಾವಾರ್ಥಕವಾದ ತದ್ಧಿತ 'ವೞಿ ಪ್ರತ್ಯಯದೊಡಗೂಡಿ 'ಸೋವುವಳಿ' ಎಂದಾಗಬೇಕಾಗಿತ್ತು. ಮಾತ್ರವೇ ಅಲ್ಲ, ಅವರೇ ಸೂಚಿಸಿದ ದೃಷ್ಟಾಂತದಲ್ಲಿ ತೋರುವ 'ಪೆಡಸಾರ್ವನರಿಗಳುಮಂ ತಾನೆ ಸೋದು ಸೋದರನಟಲೊಳ್ ಕಣ್ಣ ನೀರ್ಗಳಂ ಸುರಿದು ಎಮಬ ದುರ್ಯೋಧನನ ದುಃಖನಿರೂಪಕ ವಚನಭಾಗದ 'ಸೋದು' ಎಂಬ ಭೂತಕಾಲ ಕ್ರಿಯಾರೂಪದಿಂದ ಆ ಧಾತುರೂಪವು 'ಸೋ' ಎಂದು ಮಾತ್ರವೇ ಆಗಿತ್ತೆಂದು ಸ್ಫುಟವಾಗುತ್ತಿದೆ. 'ಮೇವಳಿ -ಬಿಸುವಳಿ' ಗಳಿಗೆ ನಿಘಂಟುವಿನಲ್ಲಿ ಅರ್ಥವಿಲ್ಲ. 'ಮೇ-ಬಿಸು' ಧಾತುಗಳ 'ವಳಿ' ಪ್ರತ್ಯಯವನ್ನೊಂದಿ ರೂಪವುಡೆದಲ್ಲಿ ಆ ಪದಗಳಿಗೆ ಕ್ರಮವಾಗಿ 'ಮೇಯುವಿಕೆ - ಬೆಸೆಯುವಿಕೆ' ಎಂಬ ಅರ್ಥಗಳೊದಗುವಲ್ಲಿ ಸಂದೇಹವಿಲ್ಲ. ಅದರಿಂದ, ಹಂದಿಗಳು ಅಬಲಮೃಗಗಳನ್ನು ಅಟಟಿದ ಗುರತಾವುದೇ? ಮೇಯುತ್ತಿದ್ದ ಕುರುಹೇನು? ಬೆಸೆದ ಹೊಲಬೆಲ್ಲಿ? ಎಂಬುದನ್ನು ಬೇಟೆಗಾರನು 'ಅಲಸದಟಿತ' ನಾಗಬೇಕೆಂಬ ಸೂಚಿಸಿ ದಂತಾಗುತ್ತಿದೆ. ಮತ್ತು ಅವನು ಮೃಗಯಾವಿಷಯಕವಾದ 'ಬಲಮಂ ಶಕುನಮಂ' ಭಾವಿಸಿದವನಾಗಬೇಕು. ಬೇಟೆಗಾರರು, ಶಕುನವನ್ನಿಂದಿಗೂ ಜೋಯಿಸರಲ್ಲಿ ವಿಚಾರಿಸಿಕೊಂಡೇ ಬೇಟೆಗಡಿಯಿಡುತ್ತಾರೆ. 'ಒಳ್ಕಿತ್ತುಪಾಯವ'ನ್ನು ಬಳಸುವವನಾಗಿರ ತಕ್ಕುದೆಂಬುದನ್ನು ಹಿಂದಿನ ಭಾಗದಲ್ಲಿಯೇ ವಿವರಿಸಿದ್ದಾನೆ. ಅದಲ್ಲದೆ, 'ಪಿಡಿವಂದಿ', 'ತನೆವಂದಿ', 'ಕುರುಡು(ವಂದಿ)' 'ಕುಂಟು(ವಂದಿ)' ಇವುಗಳೊಳಗಿನ ಭೇದಗಳನ್ನೂ ಅಲಸದೆ ವಿವೇಚನಾಪೂರ್ವಕವಾಗಿ ಅರಿತವನಾಗಿರಬೇಕು. ಈ ಪದಗಳ ಅರ್ಥಭೇದಗಳು ನಿಘಂಟುವಿನಲ್ಲಿ ತೋರುವುದಿಲ್ಲ. ಕನ್ನಡ ಕಾವ್ಯಗಳಲ್ಲಿ 'ಪಿಡಿ' ಎಂಬುದಕ್ಕೆ 'ಪೆಣ್ಣಾನೆ'

ಎಂಬ ಅರ್ಥವೇನೋ ಪ್ರಸಿದ್ಧವಾಗಿದೆ. ಆದರೂ, ಕಿಟ್ಟೆಲರವರು ನಿಘಂಟುವಿನೊಳಗೆ 'ಹೆಣ್ಣೊಂಟೆ –ನಾಡಿನ ಹೆಣ್ಣು ಹಂದಿ' ಎಂಬ ಅರ್ಥಗಳಲ್ಲಿ, ಆ ಪದವು ತಮಿಳು ಮಲೆಯಾಳಗಳ ರೂಢವಾಗಿದ್ದ ಹೆಸರೆಂದು ಭಾವಿಸಬಹುದು. ಇದನ್ನನುಸರಿಸಿ ನೋಡಿದರೆ, ಇಲ್ಲಿಯ 'ಪಿಡಿವಂದಿ' ಎಂದರೆ 'ಹೆಣ್ಣುಹಂದಿ' ಎಂಬಲ್ಲಿ ಸಂದೇಹವಿಲ್ಲ. ಇನ್ನು ಮುಂದಿನದನ್ನವಲೋಕಿಸುವ, 'ತೆನೆ' ಎಂಬ ಪದವು ನಮ್ಮಲ್ಲಿಯ ಹಳಗನ್ನಡ – ತುಳುಭಾಷೆಗಳಲ್ಲಿ 'ಎಮ್ಮೆ, ದನ ಮೊದಲಾದ ಪಶುಗಳ ಗರ್ಭ'ವೆಂಬ ಅರ್ಥದಲ್ಲಿ ದೇಸಿವಡೆದಿದೆ. ಕಿಟ್ಟೆಲರವರು ನಿಘಂಟುವಿನ ೭೮೮ನೆಯ ಪುಟದ 'ತನೆ' ಪದದ ವಿವೃತ್ತಿಯನ್ನು ನೋಡಿರಿ – "ತನೆ ಕರಗಿದ ಆಕಳು (ಸ್ರವದ್ಗರ್ಭೆ, ಅವತೊಕ) ತನೆಯ ಆವು (ಪ್ರಪ್ರೌಹಿ, ಗರ್ಭಿಣಿ) ತನೆ ಬಲಿಯೆ ಪಲಿಕ್ಕಿ ಎನಿಸುಗು ತನೆ ನಿಲಲು ಪ್ರಪ್ರೌಹಿ, ಇದರಿಂದ 'ತನೆಮಂದಿ'ಎಂದರೆ ಗರ್ಭಿಣಿಯಾದ 'ಪಿಡಿವಂದಿ' ಎಂಬಲ್ಲಿ ಯಾವ ಸಂಶಯವೂ ಇಲ್ಲದೆಂತಾಘುತ್ತಿದೆ. ಆ ಮೇಲಿನ 'ಕುರುಡು', 'ಕುಂಟು' ಎಂಬುವುಗಳು ಸಂದರ್ಭಾನುಸಾರವಾಗಿ ಹಂದಿಯ ವಿಶೇಷಣಗಳೇ, ಎಂಬುದನ್ನು ವಾಚಕರು ಸುಲಭವಾಗಿ ಅವಗಾಹಿಸಿಕೊಳ್ಳಬಹುದು. ಹಂದಿವಿಂಡಿನೊಳಗೆ, 'ಪಿಡಿವಂದಿ' ಇದು, 'ತನೆಮಂದಿ ಇದು, 'ಕುರುಡು'ವಂದಿ ಇದ್ದು, 'ಕುಂಟು'ವಂದಿ ಇದು–ಎಂದು ಅರಿತುಕೊಳ್ಳಬೇಕು. ಇಂಥವುಗಳನ್ನು ತೊಲಗಿಸಬೇಕಲ್ಲದೆ. ಕೊಲ್ಲುವುದು ಧರ್ಮವಲ್ಲ ಎಂಬುದೇ ಆ ಮಾತಿನ ಸೂಚನೆ. ಈ ರೀತಿಯಲ್ಲಿ ಬೇಟೆಗಾರನು ಮೃಗಯಾ ಚಾತುರ್ಯದ 'ಬಲ್ಮೆಗೆ' ಇರಬೇಕು. ಹೆಚ್ಚೇನು? ಬೆಳ್ಗಣಿಯರು ತಮ್ಮ ಬೇಳಂಬ ಮಂತ್ರೌಷಧ ಬಲದಿಂದಾಗಿ, ಶಕುನದ ಹಕ್ಕಿಯನ್ನು ಕುಳಿತ 'ಶಿಲೆಯ ಮೇಲಾ'ದರೂ ಕಾಲು ಹುಗಿದುಹೋದುದೋ ಎಂದು ತೋರುವ ಹಾಗೆ ಸ್ತಬದ್ದವಾಗಿಸುವಂತೆ, ಕಾಡುಹಂದಿಯನ್ನು ಕೂಡ ಓಡುತ್ತಿರುವ 'ಶಿಲೆಯ ಮೇಲಾದ'ರೂ ನಿಲ್ಲಿಸಿ 'ಪಂದಿವೇಂಟೆ'ಯ ಜಾಣ್ಮೆಯಿಂದ ನಿನ್ನನ್ನು ಮುಚ್ಚಿಸುವೆನು ಎಂಬುದಿದು ಬೇಂಟೆಯನ ಆತ್ಮ ವಿಶ್ವಾಸದ ಮಾತು.

ಆಮೇಲೆ ತದುಪಯುಕ್ತವಾಗುವ ನಾಯಿಯ ಲಕ್ಷಣವನ್ನು ಸುರಿ ಆ 'ಪಂದಿ ವೇಂಟೆ'ಯ ವಿಷಯವನ್ನು ಮುಗಿಯಿಸುತ್ತಾನೆ. 'ಆಸಿಯ ನಡುವುಂ ಅಗಲುರಮುಂ ತಳ್ತು ಕಟ್ಟಿದ ಕಿವಿಯುಂ ಕವಿದ ಪುರ್ವುಂ ತೋರಮಾಗಿ ನಿರ್ಮಾಂಸಮಪ್ಪ ಕಾಲ್ಗಳುಂ ನೆಲನಂ ಮುಟ್ಟಿದುಗುರ್ಗಳುಮನುಳ್ಳುದಾಗಿ ಜಾತ್ಯಶ್ವದಂತೆ ಬೇಗಮಾಗಿ' ಇರಬೇಕೆಂಬ **'ಪಂದಿವೇಂಟೆಯ ನಾಯ'** ಲಕ್ಷಣಾಂಶವಿದು ಸುಗಮವೇ ಆಗಿದೆ. ದೇಸಿ ಮಾಸಿ ಹೋದುದರಿಂದ ಸುಗಮವಲ್ಲದ ಮುಂದಿನವನ್ನವಧರಿಸಿ – 'ಕೋಳಿ ಕಾಳಿಕಾಜನಂತೆ ಬಟೆಯಟಿಪಿಡಿದು' ಹರಿವುದಾಗಿರಬೇಕದು. ಈ 'ಕೋಳಿ ಕಾಳಿ ಕಾಟಿ' ಪದವು 'ವಿ ಪಿಜಯ' ನಿಘಂಟು (ಪು. ೪೪೩)ವಿನಲ್ಲಿ ಪ್ರಶ್ನಾರ್ಥಕ ಚಿಹ್ನದಿಂದೊಡಗೂಡಿದೆ. ನಮ್ಮ ದಕ್ಷಿಣ ಕನ್ನಡದ ದಕ್ಷಿಣ ಪ್ರಾಂತದಲ್ಲಿ ಕೋಳಿ, ನಾಯಿ, ಕರುಗಳನ್ನೆತ್ತಿಕೊಂಡು ಹೋಗುವ ಕಿರುಚಿರತೆಯನ್ನು ಕೋಳೀ ಕಾಟ(ರ) ಎನ್ನುತ್ತಾರೆ. ಅದು ವಾಸನೆಯ ಮೂಲಕವಾಗಿ 'ಬಟೆಯಟೆ'ದು ಬಂದು ತನ್ನ ಕೊಳ್ಳೆಯಾದ ಪ್ರಾಣಿಯನ್ನು ಹಿಡಿವುದೂ ಪ್ರಸಿದ್ಧವಾಗಿದೆ.

ಮತ್ತಿನ 'ಕಾಳಿ" ಎಂಬ ಪದವು ಆ ದೇಸಿವೆಸರನ್ನೊಂದದಿದ್ದರೂ, ಔಪಮ್ಯ ಸಂದರ್ಭವನ್ನೀಕ್ಷಿಸಿದರೆ ನಮ್ಮ 'ಕೋಳಿಕಾಜಿ' ನೇ ಪಂಪನೆನ್ನುವ ಆ 'ಕೋಳಿ ಕಾಳಿ ಕಾಜಿ'ನಾಗಿರಬಹುದೆಂದು ತೋರುತ್ತಿದೆ. ಆದರೆ 'ಕೋಳಿ ಕಾಳಿ ಕಾಟಿ' ಎಂಬ ಹೆಸರು ಅದಕ್ಕೆ ಹೇಗೆ ಒದಗಿರಬೇಕೆಂಬುದು ಸರಿಯಾಗಿ ಗೊತ್ತಾಗುವುದಿಲ್ಲ. 'ಕೋಳಿ'ಗಳನ್ನೊಯ್ದು 'ಕಾಳೆಸಗು'ವುದರಿಂದ ಅಲ್ಲವೆ ಭಕ್ಷಿಸುವುದರಿಂದ, ಆ ಹೆಸರು ಒದಗಿದುದಾಗಿರಬೇಕೆಂದು ಊಹಿಸಬಹುದು. ಕುಕ್ಕುಟಾರ್ಥದ ಆ ಪದವು 'ಕೋಟಿ' ಆಗಬೇಕಲ್ಲದೆ 'ಕೋಳಿ' ಎಂದಲ್ಲ ಎಂಬ ಆಕ್ಷೇಪವುಂಟಾಗಬಹುದು. ಆದರೆ 'ಟಟ-ಕುಳ'ಗಳ ಭೇದದ ಬಳಕೆ, ಕನ್ನಡದಲ್ಲಿ ಹಿಂದಿನ ಕಾಲದಿಂದಲೇ ಮಾಸಿಹೋಗುತ್ತಾ ಬಂದಿದೆ ಎಂಬುದನ್ನರಿತು ಕೊಳ್ಳಬೇಕು. ಅದಂತಿರಲಿ 'ತುಂಬಿನ ನೀರನು(ನ್ತು) ರ್ಚಿ ದಾಗಳಡೆ ಪರಿದು' ಎಂದರೆ, ತೂಬಿನ ಅಡೆಪವನ್ನು ಸೆಳೆದೊಡನೆ ನೀರು ಹೇಗೆ ಹರಿಉತ್ತಿದೆಯೋ ಹಾಗೆ, ಹಾಸನ್ನುರ್ಚಿದೊಡನೆ ಉತ್ಸಾಹದಿಂದ ಆ ಬೇಟೆನಾಯಿ ಗುರಿಯತ್ತ ಹರಿಯುವಂಥದಾಗಿರ ಬೇಕೆಂದು ಅನ್ವಯಾರ್ಥ ಮಾತ್ರವಲ್ಲ, ಅದು 'ಮುನ್ನೆಂಯುರಾಳಂತೆ ಕಾಧಿಯಲಸದು'ದಾಗಿರಬೇಕು. 'ಸೂಟಿಯಂತೆ ಕೋಳಂ ಮಟ್ಟು ಅಟ್ಟಿಸ'ದುದಾಗಿರಬೇಕು. ಕೊಳ್ಳೆಯಂತಿರುವ ಒಡವೆಯನ್ನು ಪಡೆದ ವೇಶ್ಯೆ ಹೇಗೆ ಮತ್ತೆ ವಿಟನಲ್ಲಿ ಮೇಲೆ, ಅದರಿಂದಟ್ಟಿಸಿಕೊಳ್ಳಲೆಡೆಗೂಡದಿರಬೇಕು. 'ತಕ್ಕನಂತೆ ನಂಬಿಸ'ಬೇಕು. 'ಒತ್ತರದಂತೊತ್ತ' ಬೇಕು. ಆ ಒತ್ತರ (ಒತ್ತು + ಆರ್ + ಅ=ತಿದಿ) ದಂತೆ ಮುಂದೊತ್ತಿ 'ಉರಿಯಳುರ್ವಂತೆ' ಅವರಿಸಬೇಕು. ಅಂಥ ನಾಯಿಗಳಿಂದೋ ಡವೆರೆದ ಪಂದಿವೇಂಟೆಯ ವೈಶಿಷ್ಟವನ್ನು ಕವಿ ಹೀಗೆ ಬಣ್ಣಿಸಿ ಮುಗಿಸುತ್ತಾನೆ.

ಹಂದಿಯು ಬೆಳೆಗಳಿಗೆ ಉಪದ್ರವಕಾರಿ ಪ್ರಾಣಿ. ಬೆಳೆಯನ್ನು ರಕ್ಷಿಸಲು ಈಗಲೂ ಹಂದಿಯನ್ನು ಬೇಟೆಯಾಡುತ್ತಾರೆ. ಮಲೆನಾಡಿನಲ್ಲಿ ಹಂದಿಬೇಟೆ ವಿಶಿಷ್ಟವಾಗಿದೆ. ಬೇಟೆಗಾರನಿರಬೇಕಾದ ವಿಶೇಷ ಕೌಶಲವನ್ನು ಪಂಪನು ಹದವಿಡಿದು ಬರೆದಿರುವುದು ಗಮನಾರ್ಹ.

*ವಿವರಗಳಿಗೆ ನೋಡಿ: ಮುಳಿಯ ತಿಮ್ಮಪ್ಪಯ್ಯ ೨೦೦೬ ನಾಡೋಜಪಂಪ ಪುಟ. ೨೬೦-೬೫.*

**೪೬೪. ಪಂದೆ**

*ಕಲಿ ಪಂದೆಯೆಂದು ಬಗೆಯದೆ*
*ಕುಲಜಂ ಕುಲಹೀನನೆಂದು ಬಗೆಯದೆ ತರುಣಂ ।*
*ಸಲೆ ವೃದ್ಧನೆಂದು ಬಗೆಯದೆ*
*ನೆಲಸುವೆ ನಿನ್ನಿಂ ನಿಕೃಷ್ಟರೆಂಬರುಮೊಳರೇ ॥ (ಸಾಹಸ ಭೀಮ ವಿಜಯ ೯-೬)*

ಪಂದೆಯೆಂದರೆ ಹೇಡಿಯೆಂದು ಅರ್ಥ ಈ ಮೇಲಿನ ಪದ್ಯವನ್ನು ಈ ಕೆಳಗಿನಂತೆ ವಿವರಿಸಿದೆ ವೀರನಾರು, ಹೇಡಿಯಾರು ಎಂದು ವಿಚಾರಿಸದೆ, ಕುಲೀನನಾರು ಕುಲಹೀನನಾರು ಎಂದು ಯೋಚಿಸದೆ, ಚಿಕ್ಕವರು ದೊಡ್ಡವರು ಎಂಬ ಭೇದವರಿಯದೆ,

ಯಾರಲ್ಲಾದರೂ ಹೋಗಿ ನೆಲೆಸುವ ನೀನು, ನಿನಗಿಂತ ತುಚ್ಛರಾದವರೂ ಉಂಟೇ ?

ರಣಹೇಡಿಗಳಿಗೆ ಸಮಾಜದಲ್ಲಿ ಸ್ಥಾನವಿಲ್ಲದ ಕಾಲದಲ್ಲಿ ರನ್ನಕವಿ ಬದುಕಿದ್ದ. 'ಪಂದೆಯಂ ಪಾವಡರ್ದಂತೆ' – ಎಂಬ ಮಾತು ಆ ಕಾಲದ್ದೇ. ಹೇಡಿಯ ಮೈಮೇಲೆ ಹಾವು ಏರಿದಂತೆ ಎಂಬ ಅರ್ಥವನ್ನು ಕೊಡುತ್ತದೆ. ಮೊದಲೇ ಪುಕ್ಕಲು ಸ್ವಭಾವದವನ ಮೇಲೆ ಹಾವು ಏರಿದರೆ ಇನ್ನಷ್ಟು ಹೆದರಿ ಕಂಗಾಲಾಗುವುದಿಲ್ಲವೇ? ಪಂದೆ ಎಂಬ ಶಬ್ದ ಅನೇಕ ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಬಳಕೆಯಾಗುತ್ತದೆ. ಪಕಾರ ಹಕಾರವಾಗಿಯೂ ಪ್ರಯೋಗವಾಗಿದೆ ಎಂಬುದು ಗಮನಾರ್ಹ.

**೪೬೫. ಪಗರಣ**

*"ಲೋಗರ್ **ಪಗರಣಿ**ಗರಾಗಿ ಎನಿತಾನುಂ ತೆಱದ ರೂಪಂಗಳಂ" ..........*

*(ಡಿ. ಎಲ್. ಎನ್. ೨೦೦೯. ಪು. ೧೬೨)*

ಪ್ರಾಚೀನ ಕಾಲದಿಂದಲೂ ಜನಪದರನ್ನು ರಂಜಿಸುತ್ತಾ ಬಂದಿರುವ 'ಪಗರಣ ಇಂದಿನ ನವನಾಗರಿಕ ಕಾಲದವರೆಗೂ ಉಳಿಸಿಕೊಂಡು ಬಂದಿರುವುದು ಅದರ ಜನಪ್ರಿಯತೆಯನ್ನು ತಿಳಿಸುತ್ತದೆ. ಸಂಸ್ಕೃತ ನಾಟಕ ಪ್ರಭೇದಗಳಲ್ಲಿ 'ಪ್ರಕರಣ ರೂಪಕವೇ ಕನ್ನಡದಲ್ಲಿ 'ಪಗರಣ'ವಾಗಿದೆ ಎಂಬುದು ಸರ್ವಸಮ್ಮತ ಅಭಿಪ್ರಾಯವಾಗಿದೆ. ಈ ಪಗರಣ> ಹಗರಣ> ಹಗಣವಾಗಿ ಶಾಬ್ಧಿಕ ಪರಿವರ್ತನೆಯಾಗಿದೆ. ಹಾಸ್ಯ ಪ್ರಧಾನವುಳ್ಳ ಈ ಹಗರಣದ ಅರ್ಥವು ಒಂದು ಕೃತಕ (ಅಸಂಭವ)ವೆಂಬ ಅರ್ಥದತ್ತ ಹೊರಳಿದೆ.

ಕನ್ನಡದ ಮೊದಲ ಗ್ರಂಥವಾದ ಕವಿರಾಜಮಾರ್ಗದಲ್ಲಿ "ಶ್ರುತಿಕಷ್ಟ, ಶ್ರುತಿದುಷ್ಟ, ಅರ್ಥದುಷ್ಟ ಮತ್ತು ಕಲ್ಪನೋಕ್ತಿಕಷ್ಟ ಇವು ಕಾವ್ಯದೋಷಗಳು, ಶ್ರುತಿಕಷ್ಟ, ಅರ್ಥದುಷ್ಟ, ಕಲ್ಪನೋಕ್ತಿಕಷ್ಟ ಈ ಮೂರು "ನಗಿಸುಗುಮಪ್ಪುದರಿನಲ್ಲಿಗಂತವದೋಷಂ" ಆದ್ದರಿಂದ ಇವು ಪಗರಣದಲ್ಲಿರಬಹುದೆಂದು ಹೇಳಲಾಗಿದೆ. ಇದರಿಂದ ಪಗರಣ ಹಾಸ್ಯ-ವಿನೋದಗಳಿಂದ ಮತ್ತು ಅಶ್ಲೀಲ ಅಸಂಬದ್ಧ ಸಂಭಾಷಣೆಗಳಿಂದ ಕೂಡಿರಬಹುದೆಂದು ತಿಳಿಯುತ್ತದೆ.

ವಿದ್ವಾಂಸರಾದ ಕವಿಗಳು ನಾಟಕಗಳನ್ನು ರಚಿಸಿರದಿದ್ದರೂ, ಜನಸಾಮಾನ್ಯರಲ್ಲಿ 'ಪಗರಣ' (ಸಂ. ಪ್ರಕರಣ)ಗಳೆಂಬ ಜನಪ್ರಿಯ ನಾಟಕಗಳಿದ್ದವು. ಪಗರಣದ ಉಲ್ಲೇಖ ಅತ್ತಿಮಬ್ಬೆಯ ಲಕ್ಕುಂಡಿ ಶಾಸನದಲ್ಲಿದೆ. ("ಪಗರಣಂ ಅಣ್ಮ........") ಕವಿರಾಜಮಾರ್ಗ, ಧರ್ಮಾಮೃತ, ಕುಮಾರವ್ಯಾಸ ಭಾರತ ಮುಂತಾದ ಕಾವ್ಯಗಳಲ್ಲಿ ಬರುವ ಸಂಗತಿಗಳನ್ನು ನೋಡಿದರೆ, ಪಗರಣವು ವೇಷ, ಅಭಿನಯಗಳೇ ಪ್ರಧಾನವಾಗಿದ್ದು, ವಾಚಿಕಾಂಶವು ಅವುಗಳಿಗೆ ಅಧೀನವಾಗಿದ್ದ ಒಂದು ಬಗೆಯ ವಿನೋದ ವೇಷ ಪ್ರದರ್ಶನ ಎಂಬ ಭಾವನೆ ಬರುತ್ತದೆ.

*ವಿವರಗಳಿಗೆ ನೋಡಿ: ಡಾ. ಎಂ ಚಿದಾನಂದಮೂರ್ತಿ ೨೦೦೮*

*ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪುಟ. ೫೧೮*

ಡಾ. ವಿ.ಎಲ್. ಪಾಟೀಲ ೨೦೦೯ ವಡ್ಡಾರಾಧನೆ ಜಾನಪದೀಯ ಅಧ್ಯಯನ ಪುಟ. ೧೯೨-೧೯೩
ಶೇಷ ನವರತ್ನ ೨೦೦೮ ಯಜುರ್ವೇದ ಪುಟ. ೪೦-೪೨
ಡಾ|| ಟಿ.ವಿ.ವೆಂಕಟಾಚಲಶಾಸ್ತ್ರಿ ೧೯೯೯ ಶ್ರೀ ವತ್ಸ ನಿಘಂಟು ಪುಟ. ೩೨೫
ಯುಗಯಾತ್ರೀ ಭಾರತೀಯ ಸಂಸ್ಕೃತಿ ೧೯೭೧ ಸಂಪುಟ. ೨ ಪುಟ. ೩೨೬
ಭರ್ತೃಹರಿಯ ನೀತಿಶತಕ ೧೯೭೪-ಶ್ಲೋಕ-೩೮
ಎಂ. ವಿ. ಕೃಷ್ಣರಾವ್ ೧೯೫೩ ಕೌಟಿಲ್ಯ ಪುಟ. ೧೦

**೪೬೬. ಪಚ್ಚುಗೊಡು**

*ಮೂವತ್ತೆರಡು ಖಂಡಗಳಂ ಮಾಡಿ ಮೂವತ್ತಿರ್ವರ್ ಸೊಸೆವಿರ್ಕಳ್ಗೆ* **ಪಚ್ಚುಗೊಟ್ಟೊಡವರುಂ**........(ಡಿ.ಎಲ್.ಎನ್ ೨೦೦೯ ಪುಟ.೬೯)

ಪಚ್ಚುಕುಡು, ಪಚ್ಚುಕೊಡು, ಪಚ್ಚುಗುಡು ಪರ್ಚುಗುಡು, ಪರ್ಚುಗೊಡು(ಕ್ರಿ) ಹಂಚಿಕೊಡು; ವಿಭಾಗ ಮಾಡಿ ನೀಡು; ಪಾಲು ಮಾಡಿ ಕೊಡು:

**೪೬೭. ಪಟ್ಟಣ**

*"ಆ ಪುರಾಣಕ್ಕಂ ಲೋಕಾಕಾರ ಕಥನ ಮುಂದೇಶನಿವೇ ಶೋಪದೇಶಮುಂ ನಗರ ಸಂಪತ್ತರಿ ವರ್ಣನ ಮುಂ" (ಆದಿಪುರಾಣ ೧. ೪೨. ವ.)*

ಐನೂರು ಗ್ರಾಮವಿರುವವು ಪಟ್ಟಣವೆನಿಸಿಕೊಳ್ಳುತ್ತದೆ.

(ವಡ್ಡಾರಾಧನೆ – ಕಾರ್ತಿಕ ಋಷಿಯ ಕತೆ. (ಟಿ. ಕೇಶವಭಟ್ಟ (ಅನು) ಪು.೨೦೧)

ಹರಪ್ಪ, ಮೊಹೆಂಜೊದಾರೋಗಳ ನಂತರದಲ್ಲಿ ನಮ್ಮ ದೇಶದಲ್ಲಿ ಯಾವುದೇ ನಗರವೂ ಒಂದು ಯೋಜಿತ ರೀತಿಯಲ್ಲಿ ನಿರ್ಮಾಣವಾದವಲ್ಲವೆಂದೂ, ಆ ನಗರಗಳು ಅಕ್ಕಪಕ್ಕದ ಹಲವು ಗ್ರಾಮಗಳು ಕೂಡಿಕೊಂಡದ್ದರಿಂದ ನಿರ್ಮಾಣಗೊಂಡವುಗಳೆಂದೂ, ನಗರಗಳ ರಹದಾರಿಗಳು ಹೀಗೊಮ್ಮೆ ಹಳ್ಳಿಗಳನ್ನು ಕೂಡಿಸಿದ್ದರಿಂದಾಗಿ ನಿರ್ಮಾಣ ಗೊಂಡವು ಎಂಬುದರಿಂದಾಗಿಯೇ ಅಷ್ಟೊಂದು ಅವ್ಯವಸ್ಥೆಯದಾಗಿ ನಿರ್ಮಾಣಗೊಂಡವು ಎಂಬುದರಿಂದಾಗಿಯೇ ಅಷ್ಟೊಂದು ಅವ್ಯವಸ್ಥೆಯದಾಗಿ ಇರುತ್ತವೆ ಎಂದೂ ಕೊಸಾಂಬಿ ಯವರು ವಿವರಿಸುತ್ತಾರೆ. ನಗರಗಳ ನಿರ್ಮಾಣದಲ್ಲಿನ ಅರಾಜಕತೆ ಅರ್ಥವಾಗುತ್ತದೆ.

ಪೂರ್ವಕಾಲದ ಪಟ್ಟಣಗಳು ಮಹಾಪ್ರಾಕಾರ-ಆವರಣವುಳ್ಳವುಗಳು. ನಾಲ್ಕು ದಿಕ್ಕಿಗೆ ನಾಲ್ಕು ಮಹಾದ್ವಾರಗಳು. ಅಂತಹ ನಗರನಿವಾಸದ ವ್ಯವಸ್ಥೆ ಇರುವಲ್ಲಿ ಹೊರಗಿನ ಸ್ಮಶಾನಕ್ಕೆ ಶವವನ್ನು ಕೊಂಡೊಯ್ಯುವಾಗ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರನ್ನು ಪೂರ್ವ, ಉತ್ತರ, ಪಶ್ಚಿಮ, ದಕ್ಷಿಣದ್ವಾರಗಳನ್ನು ಕ್ರಮವಾಗಿ ಆಶ್ರಯಿಸಬಹುದು. ಈ ವ್ಯವಸ್ಥೆಯಿಂದ ಮಾರ್ಗ ನೋಡಿಯೇ ಶವವನ್ನು ಗುರುತಿಸಬಹುದು. ಇಂತಹ ರೀತಿಯು ಸರ್ವತ್ರ ಇದೆ. ಕಾಲುಂಗುರ, ಉದ್ದಬೊಟ್ಟು, ಬೈತಲೆ, ಅಂಗಾರ, ಭಸ್ಮ ಇತ್ಯಾದಿಗಳಿಂದ ಒಂದೊಂದು ವಿಷಯದ ಸೂಚನೆಯನ್ನು ಕೊಡುವುದಕ್ಕಾಗಿ ಮಾಡುವುದುಂಟು. ರಾಷ್ಟ್ರದ

ಎಲ್ಲ ಮಟ್ಟದ ಅಧಿಕಾರಿಗಳಿಗೆ ಮರಣಪೂರ್ವದಲ್ಲಿ ಮತ್ತು ಮರಣೋತ್ತರ ವಿವಿಧ ಚಿಹ್ನ, ತುಪಾಕಿನ ಗುಂಡಿನ ಸಂಖ್ಯೆ, ಸೈನಿಕ ಸಂಖ್ಯೆ ಇವುಗಳಿಂದ ವರ್ಗಭೇದ, ಗೌರವ, ತಾರತಮ್ಯ, ಕಲ್ಪನೆಯು ಎಂದೂ ಇರುವುದಿಲ್ಲ. ಒಮ್ಮೆ ಒಂದು ಬದಲಾಯಿಸಿರ ಬಹುದು. ಕಲ್ಪನೆಯು ಎಂದೂ ಇಲ್ಲದಾಗುವುದಿಲ್ಲ. ಜೀವನಾವಶ್ಯಕ ಸಾಮಗ್ರಿ ವ್ಯವಸ್ಥೆಗಳಲ್ಲಿ ಸಮಾನತೆಯಲ್ಲದೆ ಅನ್ಯತ್ರ ಅಸಮಾನತೆಯು ನಿಂದೆಗಾಗಿ ವಿರಚಿತವಾಗುವುದಲ್ಲ ಎಂದು ಮನು ಹೇಳುತ್ತಾನೆ.

ಮೋಹನ ಕೃಷ್ಣ ರೈಯವರು ಹೀಗೆ ಹೇಳುತ್ತಾರೆ:

ಕ್ರಿ.ಶ. ೮ರಿಂದ ೧೪ನೆಯ ಶತಮಾನಗಳ ಅವಧಿಯಲ್ಲಿ ಅನೇಕ ಪೇಟೆ-ಪಟ್ಟಣಗಳು ಅಸ್ತಿತ್ವಕ್ಕೆ ಬಂದಿದ್ದವು. ಅವುಗಳಲ್ಲಿ ಕೆಲವು ಹೊಸದಾಗಿ ಹುಟ್ಟಿಕೊಂಡರೆ ಇನ್ನು ಕೆಲವು ಹಿಂದೆಯೇ ಅಸ್ತಿತ್ವದಲ್ಲಿದ್ದವು. ಶಾಸನಗಳು ಮತ್ತು ಸಾಹಿತ್ಯಕ ಕೃತಿಗಳು ಈ ಅಧ್ಯಯನಕ್ಕೆ ಪ್ರಮುಖ ಆಧಾರಗಳಾಗಿವೆ. ಕ್ರಿ.ಶ. ೭ರಿಂದ ೧೦ನೆಯ ಶತಮಾನಗಳವರೆಗಿನ ಶಾಸನಗಳಲ್ಲಿ ಪುರ ಎನ್ನುವ ಪದದ ಉಲ್ಲೇಖವಿದ್ದರೆ, ಕ್ರಿ.ಶ. ೧೧ರಿಂದ ೧೩ನೆಯ ಶತಮಾನಗಳವರೆಗಿನ ಶಾಸನಗಳಲ್ಲಿ ನಗರ, ಮಹಾನಗರ, ಪಟ್ಟಣ ಎನ್ನುವ ಉಲ್ಲೇಖಗಳಿರುವುದು ಕಂಡುಬರುತ್ತದೆ. ಅದೇ ರೀತಿ ಆಡಳಿತ ಪಟ್ಟಣಗಳು, ಧಾರ್ಮಿಕ ಪಟ್ಟಣಗಳು, ವಾಣಿಜ್ಯ ಪಟ್ಟಣಗಳೂ, ಶೈಕ್ಷಣಿಕ ಪಟ್ಟಣಗಳು ಮುಂತಾದ ವಿವಿಧ ಸ್ವರೂಪದ ನಗರಕೇಂದ್ರಗಳ ಉಲ್ಲೇಖಗಳು ಸಿಗುತ್ತವೆ. ಓ.ಪಿ. ಪ್ರಸಾದ್ ಅವರು ಕ್ರಿ. ಶ. ೮ರಿಂದ ೧೨ನೆಯ ಶತಮಾನಗಳ ಅವಧಿಯಲ್ಲಿದ್ದ ಕೆಲವು ಪ್ರಮುಖ ಪೇಟೆ-ಪಟ್ಟಣಗಳ ಪಟ್ಟಿಯನ್ನು ನೀಡಿದ್ದಾರೆ. ಅವುಗಳೆಂದರೆ, ಬನವಾಸಿ, ಬಾದಾಮಿ, ತಲಕಾಡು, ಶ್ರವಣಬೆಳಗೊಳ, ಪೊಬುಚ್ಚ, ಮುಳುಗುಂದ, ಪುಲಿಗೆರೆ, ಬಂಕಾಪುರ, ಮಾನ್ಯಖೇಟ, ಅಣ್ಣಿಗೆರೆ, ಕಲ್ಯಾಣಿ, ಮಂಗಳೂರು, ಗುತ್ತಿ, ಉಚ್ಚಂಗಿ, ಐಹೊಳೆ, ಲಕ್ಕುಂಡಿ, ದೋರಸಮುದ್ರ, ಬಳ್ಳಿಗಾವೆ, ಕುಡತಿನಿ, ಸೂಡಿ, ಸೊಸೆವೂರು, ಕೋಲಾರ, ಅರಸಿಕೆರೆ, ಬೆಳಗಾಂ, ರೋಣ, ಭಟ್ಕಳ, ಬಾರಕೂರು, ಬಸ್ರೂರು, ಕೊಪ್ಪಳ, ಕುರುಗೋಡು, ಹಾನ್‌ಗಲ್, ಕುರುವತ್ತಿ, ಹೊನ್ನಾವರ, ಗದಗ ಮುಂತಾದವು. ಇವುಗಳಲ್ಲಿ ಅನೇಕ ನಗರ ಕೇಂದ್ರಗಳು ೧೩ ಮತ್ತು ೧೪ನೆಯ ಶತಮಾನಗಳಲ್ಲೂ ಅಸ್ತಿತ್ವದಲ್ಲಿದ್ದವು. ಅದೇ ರೀತಿ ಇನ್ನೂ ಅನೇಕ ಹೊಸ ನಗರ ಕೇಂದ್ರಗಳು ಹುಟ್ಟಿಕೊಂಡವನು. ಅವುಗಳೆಂದರೆ, ಐಹೊಳೆ, ಬೇಲೂರು, ಹಳೇಬೀಡು, ಬಳ್ಳಿಗಾವೆ, ಮಂಗಳೂರು, ಬಾರಕೂರು, ಗದಗ, ಕೊಪ್ಪಳ, ಶ್ರವಣಬೆಳಗೊಳ, ಲಕ್ಕುಂಡಿ, ಹೊನ್ನಾವರ, ಮೂಗೂರು, ಉಪೇಂದ್ರಪುರ, ಸೋಮನಾಥಪುರ, ತಲಕಾಡು, ತೊಣ್ಣೂರು ಮುಂತಾದವು.

ನಾಗರಿಕತೆಯಿಂದ ನಗರ ನಗರದಿಂದ ನಾಗರಿಕತೆ ಹೀಗೆ ಇವುಗಳಿಗೆ ದ್ವಂದ್ವಾತ್ಮಕ ಸಂಬಂಧವಿದೆ. ನಗರದಲ್ಲಿ ವಾಸಿಸುವವರನ್ನು ನಾಗರಿಕರೆಂದೂ ಹಳ್ಳಿಯಲ್ಲಿ ವಾಸಿಸುವವರನ್ನು ಹಳ್ಳಿಗರೆಂದೂ ಕರೆಯುತ್ತಾರೆ. ಪಟ್ಟಣ ವರ್ಣನೆ ಪುರವರ್ಣನೆಗಳು ಕನ್ನಡ ಕಾವ್ಯಗಳಲ್ಲಿ ಮಾಮೂಲಿ ಆದಿಪುರಾಣದಲ್ಲಿ ಈ ರೀತಿಯಾಗಿ ಬರುತ್ತದೆ.

ಹಳ್ಳಿಗರನ್ನು ಪ್ರಾಚೀನ ಕನ್ನಡ ಸಾಹಿತ್ಯದ "ನಾಡಾಡಿಗಳು" 'ದೇಸಿಗರು' ಎಂದು ಕರೆದಿರುವುದು ಗಮನಾರ್ಹವಾಗಿದೆ. ಹಳ್ಳಿಗರನ್ನು ಪ್ರತ್ಯೇಕಿಸಿರುವುದು ಇಲ್ಲಿ ಉಲ್ಲೇಖನೀಯ ಈ ಪ್ರಭೇದ ಸಾಮಾಜಿಕ ವರ್ಗಗಳ ಉದಯಕ್ಕೂ ಕಾರಣವಾಗಿರುತ್ತವೆ.

ಪಟ್ಟಿಯಲ್ಲಿ ಒಕ್ಕಲುತನದ ಮಟ್ಟದಿಂದ ಮುಂದಿನ ವ್ಯಾಪಾರೋದ್ಯೋಗ, ರಾಜ್ಯವ್ಯವಹಾರದ ಕಾಲದ ಅರ್ಥವೂ ಲಾಕ್ಷಣಿಕವಾಗಿ ಮುಂದೆ ಬಂದುದುಂಟು. ಪಟ್ಟ, ಪಾಟ; ಪಟ್ಟಣ; ಹಟ್ಟ, ಹಾಟ, ಪೇಟೆ ಎಂಬಿವೆ. ಮೊದಲಾದ ಶಬ್ದಗಳು ಇದಕ್ಕೆ ದೃಷ್ಟಾಂತ. ಪ್ರತಿಷ್ಠಾನದ ರೂಪವೆಂದು ಹೇಳುವ ಪೈಠಣವು ಪಟ್ಟಣ, ಪೇಠ ಶಬ್ದಗಳಿಗೇ ಹೆಚ್ಚು ಸಮೀಪವಾಗಿದೆ. ಅದರ ನಿಜವಾದ ಹೆಸರು ಪಟ್ಟಣವೆಂದಿರಬೇಕೆಂದು ನನ್ನ ತಿಳುವಳಿಕೆ ಎಂದು ಶಂಬಾ ಅಭಿಪ್ರಾಯ.

ಪಟ್ಟಿ, ಹಟ್ಟಿಗಳಷ್ಟೇ ಅಲ್ಲ; ಪಾಡಿಗಳೂ ಮಹಾರಾಷ್ಟ್ರದಲ್ಲಿವೆ. ಹಟ್ಟ ಮತ್ತು ಹಾಟ ಎಂಬುವುದಕ್ಕೆ ಆರಿಯ ಮಾತಿನಲ್ಲಿ ಇರುವ ಅರ್ಥಗಳಿವು:

ಹಟ್ಟ, ಹಾಟ: ಪೇಟೆ; ಸಂತೆ; ತಿರುಗುವ ಪೇಟೆ; ಜಾತ್ರೆ; ಹಾಟವಟಿ; ಹಟ್ಟವಟ; ಹಾಟ ಬಾಜಾರ ಎಂಬ ಜೋಡು ನುಡಿಗಳನ್ನೂ ಅಲ್ಲಿ ಹೇಳಿದ್ದಾರೆ;

ಹಟ್ಟಿ: ೧. ಸಣ್ಣಸಂತೆ; ಜಾತ್ರೆ; ೨. ಒಂದೇ ಬಗೆಯ ವ್ಯವಸಾಯದ ಅಥವಾ ಜಾತಿಯ ಜನರ ಮನೆಗಳ ಎಡೆ; ೩. ಊರಿಂದ ಕಿರಿದು ಅಂತರದಲ್ಲಿರುವ ಭಿಲ್ಲ, ರಾಮೋಶಿ ಮೊದಲಾದವರ ಬಿಡಾರ; ೪. ಭಿಲ್ಲ, ರಾಮೋಶಿ, ಕೊರಚರ ಬೀಡು; ೫. ಇಂತಹರ ತಂಡ; ಟೋಳಿ. ಅಗಲಕಡಿಮೆ ಇದ್ದು ಉದ್ದವಾಗಿರುವ ನೆಲದ ತುಂಡು; ಹೊಲ; (ಅಲ್ಲದೆ ಇನ್ನೂ ಹಲವು ಬೇರೆ ಬಗೆಯ ಅರ್ಥಗಳೂ ಉಂಟು.)

ಪಾಡಾ, ಪಾಡಿ: ೧. ಒಕ್ಕಲುತನದ ಅನುಕೂಲತೆಗಾಗಿ ಊರಿಂದ ಸ್ವಲ್ಪ ದೂರ ಹೊಲದ ಹತ್ತಿರಕಟ್ಟಿದ ಗುಡಿಸಲುಗಳ; 'ವಾಡಿ' ಸಣ್ಣಹಳ್ಳಿ; ೨. ಒಕ್ಕಲತನದವರ ಗುಡಿಸಲು; ೩. ಪಟ್ಟಣದೊಳಗಿನ ಪೇಟೆ, ದೊಡ್ಡ ಓಣಿ; ಎಂಬ ಅರ್ಥಗಳನ್ನು ಕೊಟ್ಟು ಇದು ಗುಜರಾತಿಯಲ್ಲಿ ಪಾಡೋ (ಹಳ್ಳಿ) ಬಂಗಾಳಿಯಲ್ಲಿ ಪಾಡಾ (ಪೇಟೆ); ಸಿಂಧಿಯಲ್ಲಿ ಪಾಡೋ (ವಸತಿ ಸ್ಥಾನ) ಎಂಬ ತೆರನಾಗಿ ಬಳಕೆಯಲ್ಲಿರುವುದಾಗಿ ಹೇಳಿದೆ.

ಸ್ಥಿತಿ, ಅವಸ್ಥೆ ಎಂಬರ್ಥದ ಪಡು ಧಾತುವಿನ ರೂಪಗಳಾದ ಪಾಡು ಎಂಬ ಶಬ್ದವೂ ಮರ್‍ಹಾಟಿಯಲ್ಲಿದೆ. ಪಕ್ವಸ್ಥಿತಿ–ಪಾಡು ಎಂಬುದನ್ನು ಏಕನಾಥನು ಉಪಯೋಗಿಸಿದ್ದಾನೆ. 'ಅಂಬಯಾ ಪಾಡೂ ಲಾಗಲಾ ಜಾಣ'. ಜ್ಞಾನೇಶ್ವರಿಯಲ್ಲಿಯೂ ಈ ಪದವಿದೆ. 'ಪಾಡ–ಪಂಚಾಯಿತ' ಎಂಬ ಪಡೆನುಡಿ ಇದ್ದು ಊರ ಪಂಚರು ಸೇರಿ ಮಾಡಿದ ಊರ ಸ್ಥಿತಿಯ ಚೌಕಶಿ ಎಂದು ಅದರ ಅರ್ಥ.

'ಹಟ್ಟ' ಶಬ್ದಕ್ಕಿರುವ 'ಪೇಟೆ'ಯೆಂಬರ್ಥವು ಮನನೀಯವಾಗಿದೆ. ಖೇಟ ಅಥವಾ ಖೇಡವೆಂಬ ಸಂಸ್ಕೃತ ಜನ್ಯ ಶಬ್ದದಲ್ಲೂ ಒಕ್ಕಲತನದ ಊರೆಂಬ ಧ್ವನಿಯಿದೆ. ಇದು ಮೂಲ ಸಂಸ್ಕೃತ ಪದವಲ್ಲ. ಪಾಕೃತದಿಂದ ಸಂಸ್ಕೃತದಲ್ಲೂ ದೇಶಭಾಷೆಗಳಲ್ಲೂ ಸೇರಿದೆ. ಕುಡಿ ಎಂದರೆ ಒಕ್ಕಲರ ಊರು, ಎಂಬಂತೆ ಖೇಡ ಅಥವಾ ಖೇಟವೆಂದರೂ ಅದೇ

ಅರ್ಥವೆ ಇದೆ. ಖೇಟ 'ಅಥವಾ ಖೇಡವನ್ನು ಕ್ಷೇತ್ರ, ಖೇತಗಳೊಡನೆ ಹೋಲಿಸಿ ನೋಡಬಹುದು. ಖೇಡ ಧಾತುವಿಗೆ ಪ್ರಾಕೃತದಲ್ಲಿ ಕೃಷ್, ಒಕ್ಕಲತನ ಮಾಡು ಎಂದರ್ಥವಿದೆ. ಆದ ಕರಾಣ ಖೇಡ (ಹಳ್ಳಿ) ಎಂಬ ನಾಮಪದವು ಖೇಡ (ಒಕ್ಕಲುತನ ಮಾಡು) ಧಾತುವಿನಿಂದ ಬಂದಿತೆಂದು ಊಹಿಸಿದರೆ ತಪ್ಪಾಗಲಾರದು. ಮರ್‍ಹಾಟಿಯಲ್ಲಿ ಖೇಡೆಗಾವ ಎಂದು ಹಳ್ಳಿಗೆ ಹೆಸರು. ಖೇಟ-ಖೇಡಗಳಿಗೆ ಕೆಲವು ಕೋಶಗಳಲ್ಲಿ ಮಣ್ಣುಗೋಡೆಯ ಪ್ರಕಾರವಿದ್ದ ಪಟ್ಟಣ, ನದಿ ಅಥವಾ ಪರ್ವತದ ನೆರೆಯ ದೊಡ್ಡ ಊರು ಎಂದು ಅರ್ಥ ಕೊಟ್ಟಿದೆ. ಆದರೆ, ಇದು ಆರಂಭದ ಮೂಲಾರ್ಥವಲ್ಲ. ಮುಂದಿನ ಕಾಲದಲ್ಲಿ ಪ್ರಾಪ್ತವಾದ ವಿಶೇಷಾರ್ಥ.

ಪತ್ತನ<ಪಟ್ಟಣ>ಪಾಟಣ ಎಂದರೆ ರಾಜಧಾನಿ ಸ್ಥಾನ, ಗೋಪ(ರಾಜ)ರು ಪಟ್ಟಿರುವ ಸ್ಥಳ, ಅವರ 'ಪಟ್ಟ' (ಸಿಂಹಾಸನ) ಇರುವ ಮಹಾನಗರ ಎಂಬ ಲಕ್ಷಣಾರ್ಥವು ಇದರಲ್ಲಿ ಕಾಣಿಸಿಕೊಂಡುದುಂಟು. ಈ ಸ್ಥಳನಾಮಗಳ ಹೆಚ್ಚಳವು ಆ ಪ್ರದೇಶದಲ್ಲಿ ದನಗಾರರ (=ಕುರುಬ ಧನಗರರ) ಪ್ರಭಾವವು -ಪ್ರಭುತ್ವವು ಎಷ್ಟೋ ಬೆಳೆದಿರಬೇಕೆಂಬುದರ ನಿದರ್ಶಕವಾಗಿದೆ.

ಕುಡಿಯ ಬಳಿಕ ಪೊಲ, ಪೊಟಲುಗಳು ಬೆಳೆದು ಬಂದುವು. ಪೊಳಲುಗಳ ಪ್ರಾಚೀನತೆಗೆ ಮುದಿಪೊಳಲು=ಮುದುವೊಳಲು (ಮುಧೋಳ) ಎಂಬ ಊರುಗಳೇ ಸಾಕ್ಷಿ.

ಇಂದ್ರನು ಶತ್ರುಗಳ ಪುರ (ಕೋಟೆ)ಗಳನ್ನು ನಾಶ ಮಾಡಿದ ವರ್ಣನೆಗಳು ವೇದದಲ್ಲಿ ಬರುತ್ತವೆ. ಪುರಗಳಿಗೆ ಕೋಟೆ ಎಂದು ವೇದತಜ್ಞರು ಅರ್ಥ ಹೇಳಿದ್ದಾರೆ. ಇಂದ್ರನಿಗೆ 'ಪುರಂದರ'ನೆಂದು ಹೆಸರು. ಆ ಪುರಗಳು ಮುಖ್ಯವಾಗಿ ಪರ್ವತಗಳ ವೈರಿ ಎಂದು ಪುರಾಣ ಕಥೆಗಳಿಂದ ತಿಳಿಯುತ್ತದೆ.

ಋಗ್ವೇದದಲ್ಲಿ ಪುರುಷದ ಉಲ್ಲೇಖವಿಲ್ಲದಿದ್ದರೂ ಪುರ ಶಬ್ದವು ಹಲವೆಡೆಗೆ ಬಂದಿದೆ... ಪುರದಲ್ಲಿ ಇರುವವನು ಎಂಬರ್ಥದಲ್ಲಿ ದೇಹಿಗೆ ಪುರುಷ ಈ ಹೆಸರು ಬಂದಿತಾಗಿ ವೈದಿಕ ಸಾಹಿತ್ಯದಿಂದಲೇ ಗೊತ್ತಾಗುತ್ತದೆ. ಪುರೀ ಲಿಂಗ ಶರೀರೆ ಶೇತೇ ಸಃ ಪುರಷ ಎಂಬುದು ವಾಖ್ಯೆ. ಈ ವಾಖ್ಯೆಯಲ್ಲಿ ಪುರುಷ ಆಗಬೇಕಾಗಿದ್ದುದು ಪುರಷ ಆದುದುರ ಅರ್ಥ ಹೊರಡದು. ಹೀಗೇಕೆ ಎಂದು ಕೇಳಿದಾಗ ಅದು ಛಾಂದಸ ಪ್ರಯೋಗ ಎಂದು ಹೇಳಲಾಗುವುದು. ಆದರೆ, ವೇದಗಳಲ್ಲಿ ಪುರು ಶಬ್ದವು ಬರುತ್ತದೆ. ಪುರು ವಿದ್ವಾನ್ ಎಂಬ ಶಬ್ದವು ಸರ್ವಜ್ಞ (Omniscient) ಎಂಬ ಅರ್ಥದಲ್ಲಿ ಬಂದಿದೆ. ಪುರು ರೂಪಂ, ಪುರುಕೃತ್, ಪುರುಹೂತ ಎಂಬ ಪದಗಳೂ ಬರುವುವು. ಇವುಗಳಲ್ಲಿಯ 'ಪುರು 'ಶಬ್ದಕ್ಕೆ ಪ್ರಾಚೀನ, ಸರ್ವತ್ರ, ದಿವ್ಯ, ಸುಂದರ ಎಂಬ ಅರ್ಥಗಳು ಆಗಿರುವುವು. ಪುರುಚ ಎಂಬುಎದಕ್ಕೆ Soul of the universe ಎಂಬ ಅರ್ಥವೂ ಇದೆ. Pupil of the eye ಎಂದೂ ಇದೆ. ಮೇಲ್ನೋಟಕ ಎಂದೂ ಇದೆ. ಪುರು+ಸ್ಥ - ಪುರುಷಃ ಎಲ್ಲ ಕಡೆಗೂ ಇರುವರ ಎಂಬ ರೂಪವು ಇದು. ಸಹಸ್ರಾಕ್ಷ, ಸಹಸ್ರ

ಶೀರ್ಷ ಸಹಸ್ರ ಬಾಹು, ಸಹಸ್ರ ಪಾತ್, ಇವು ಪುರುಷನ ವಿಶೇಷಣಗಳು. ಆದ್ದರಿಂದ ಪುರುಷ ಇದು ಪುರ ಶಬ್ದದಿಂದ ಉಂಟಾಗಿರದೆ, ಪುರ– Omni –ಸ್ಥ– Present ಎಂಬುದಾಗಿ ಆಗಿರಬಹುದೆಂದು ಪುರು ಶಬ್ದದ ಅರ್ಥದಿಂದ ಹೊರಡುತ್ತದೆ.

ನಗರದ ಸುತ್ತಲೂ ಕೋಟೆ–ಕೊತ್ತಳಗಳನ್ನು ಕಟ್ಟಿ ಭದ್ರತೆಯಲ್ಲಿ ಜೀವಿಸುತ್ತಿದ್ದ ಜನರಿಗೆ ವೇದಕಾಲದ ಋಷಿಗಳು ಪೂರು ಎಂದು ಹೆಸರು ಕೊಟ್ಟಿರುವ ಸಾಧ್ಯತೆ ಇದೆ. ಆರ್ಯರಿಗಿಂತ ಮೊದಲೇ ಇದ್ದ ಹರಪ್ಪಾ. ಮೊಹೆಂಜೊದಾರೋದಂಥ ಪುರಾತನ ನಗರಗಳನ್ನು ನೋಡಿದಾಗ 'ಪೂರು' ಹೆಸರಿನ ಔಚಿತ್ಯ ಸ್ಪಷ್ಟವಾಗುತ್ತದೆ. ಪೂರುವಿನ ಉಳಿದ ತಮ್ಮಂದಿರು ಇನ್ನೂ ಪಶುಪಾಲನ ವೃತ್ತಿಯಲ್ಲಿದ್ದರೆಂದು ಅವರ ಹೆಸರುಗಳ ಮೇಲಿಂದ ವ್ಯಕ್ತವಾಗುತ್ತದೆ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೧ ಪುಟ. ೧೩೯*

*ಸಂಪುಟ. ೨ ಪುಟ. ೧೮೭, ೧೪೭–೧೫೩*

*ಸಂಪುಟ. ೩ ಹಾಲುಮತದರ್ಶನ ಪುಟ. ೩೧, ೫೫, ೨೦೦*

*ಮೋಹನ ಕೃಷ್ಣರೈ ಕೆ. ೨೦೦೯ ಚರಿತ್ರೆ ಕಥನ. ಪುಟ. ೮೬–೮೭*

*ಡಿ. ಡಿ. ಕೊಸಾಂಬಿ ೧೯೯೮ ಪ್ರಾಚೀನ ಭಾರತದ ಚರಿತ್ರೆ ಪುಟ. ೧೧*

*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೫–೯೨*

**೪೬೮. ಪಟ್ಟಬಂಧ**

*"........ಪಟ್ಟಬಂಧನ ಮಹೋತ್ಸವಮಂ ಜಗದೆ 'ಕಮಲ್ಲನಾ........."*

*(ಪಂಪಭಾರತ ೧೪–೧೯)*

ಪಟ್ಟಬಂಧನವೆನ್ನುವುದು ಒಂದು ವಿಶೇಷವಾದ ಆಚರಣೆ. ಮೇಲೆ ಪಂಪನು ವಿವರಿಸಿದಂತೆ ಪಟ್ಟಬಂಧಕ್ಕೆ ಋಷಿಶ್ರೇಷ್ಠರು ಬರುತ್ತಾರೆ. ಈಶ್ವರನ ನಂದಿಯ ಕೊಂಬಿನಿಂದ ಎಬ್ಬಿಸಿದ ಮಣ್ಣನು ತರುವುದು ಭೂಮಿಯ ಆಳ್ವಿಕೆಯ ದೃಷ್ಟಿಯಿಂದ ವಿಶೇಷವಾಗಿದೆ. ವರುಣ ಹದಿನಾಲ್ಕು ಮಹಾನದಿಗಳಿಂದ ನೀರನ್ನು ತರುತ್ತಾನೆ. ಸರಸ್ವತಿ, ಭಾಗೀರಥಿ, ಯಮುನಾ, ಗೋದಾವರೀ, ಕೃಷ್ಣವೇಣೀ, ತಾಮ್ರಪರ್ಣಿ, ಸುವರ್ಣಮುಖೀ, ನರ್ಮದಾ, ತುಂಗಭದ್ರಾ, ಚಂದ್ರಭಾಗಾ, ಚರ್ಮಣ್ವತೀ, ಕುಮುದ್ವತೀ, ಸರಯೂ, ಫಲ್ಗುಣಿಗಳು ಹದಿನಾಲ್ಕು ಮಹಾನದಿಗಳು. ಕೆಲವರು ಗಂಗಾ, ಸಿಂಧು, ರೋಹಿತ್, ರೋಹಿತಾಸ್ಯಾ, ಹರಿತ್, ಹರಿಕಾಂತಾ, ಸೀತಾ, ಸೀತೋದಾ ನಾರೀ, ನರಕಾಂತಾ, ಸುವರ್ಣ ಕಲಾ, ರೂಪ್ಯಕೂಲಾ, ರಕ್ತ, ರಕ್ತೋದಗಳು ಹದಿನಾಲ್ಕು ಮಹಾನದಿಗಳು ಎಂದು ಕರೆಯುತ್ತಾರೆ. ಬಿಳಿಯಕೊಡೆ, ಚಾಮರ, ಸಿಂಹಾಸನ, ಕುಲಧನ, ಮುಕುಟ, ರಾಜದಂಡಗಳೆಂಬ ರಾಜಚಿಹ್ನೆಗಳನ್ನು ಕೊಡಲಾಯಿತು. ಪೂರ್ಣಕುಂಭಗಳು ಎನ್ನುವುದು ಮಂಗಲ ಜಲದಿಂದ ತುಂಬಿದ ಕಲಶಗಳು. ವೇಶ್ಯಾಸ್ತ್ರೀಯರಿಗೆ ಮತ್ತು ಸಾಮಂತ ರಾಜರಿಗೆ

ಉಡುಗೊರೆ ನೀಡುವುದು ಮತ್ತು ಸಾಮಂತರಾಜ ಸ್ತ್ರೀಯರು ನೃತ್ಯ ಮಾಡುವುದು ಗಮನಾರ್ಹ. ಚಕ್ರವರ್ತಿಗಳು ಸಾಮಂತ ರಾಜರನ್ನು ಹೇಗೆ ನೋಡುತ್ತಿದ್ದರು ಎಂಬುದಕ್ಕೆ ಇದು ಉದಾಹರಣೆಯಾಗಿದೆ.

ನಾಳೆಯೇ ಪಟ್ಟವನ್ನು ಕಟ್ಟುವ ದಿವಸವೆಂದು ದೇವಲೋಕದ ಶಿಲ್ಪಿಯಾದ ಮಯನೆಂಬುವನಿಂದ ಪಂಚರತ್ನಮಯವಾದ ಸಭಾಮಂಟಪವನ್ನು ತರಿಸಿದರು. ವಸಿಷ್ಠ, ಕಶ್ಯಪ, ವ್ಯಾಸ, ವಿಶ್ವಾಮಿತ್ರ, ಭಾರದ್ವಾಜರೇ ಮೊದಲಾದ ಋಷಿಶ್ರೇಷ್ಠರನ್ನು ಬರಮಾಡಿದರು. ಮಾತಲಿಯ ಕಯ್ಯಲ್ಲಿ ದೇವೇಂದ್ರನು ಕಲ್ಪವೃಕ್ಷದ ಚಿಗುರುಗಳನ್ನೂ ಐರಾವತವೆಂಬಾನೆಯೂ ಈಶ್ವರನ ನಂದಿಯೂ ಕೊಂಬಿನಿಂದ ಎಬ್ಬಿಸಿದ ಮಣ್ಣನ್ನೂ ಆಕಾಶಗಂಗೆಯ ನೀರನ್ನೂ ನಮೇರು ಮಂದಾರ ಪಾರಿಜಾತಗಳೆಂಬ ದೇವಲೋಕದ ಮರಗಳ ಹೂವುಗಳಿಂದ ಕೂಡಿದ ನೀರುಗಳನ್ನೂ ಕಳುಹಿಸಿಕೊಟ್ಟನು. ವರುಣದೇವನು ಉಪ್ಪು, ಹಾಲು, ಕಬ್ಬಿನ ರಸ, ಮೊಸರು, ಜೇನು, ತುಪ್ಪ, ಸಿಹಿನೀರುಗಳ ಏಳು ಸಮುದ್ರಗಳ ಮತ್ತು ಹದಿನಾಲ್ಕು ಮಹಾನದಿಗಳ ಪುಣ್ಯತೀರ್ಥವನ್ನು ಕಳುಹಿಸಿಕೊಟ್ಟನು. ಅವನ್ನು ಥಳಥಳನೆ ಹೊಳೆಯುವ ಸ್ವಚ್ಛವಾದ ಬಿಳಿಯ ಕೊಡಗಳಲ್ಲಿ ತುಂಬಿ ತಂದಿರುವ ವೇಶ್ಯಾಸ್ತ್ರೀಯರಿಗೂ ಸಾಮಂತರಾಜ ಸಮೂಹಕ್ಕೂ ಉಡುಗೊರೆಯನ್ನು ಕೊಟ್ಟನು. ಶ್ವೇತಚ್ಛತ್ರ(ಬಿಳಿಯ ಕೊಡೆ) ಚಾಮರ, ಸಿಂಹಾಸನ, ಪಟ್ಟದಾನೆ, ಕುಲಧನವೇ ಮೊದಲಾದ ರಾಜ್ಯಚಿಹ್ನೆಗಳನ್ನು ಬೇರೆ ಬೇರೆ ರೀತಿಯಿಂದ ಪ್ರತಿಷ್ಠೆ ಮಾಡಿಸಿದನು. ಗಂಗಾ ಜಲದಿಂದ ಪವಿತ್ರವನ್ನಾಗಿ ಮಾಡಲ್ಪಟ್ಟ ಶರೀರವುಳ್ಳವನೂ ರೇಷ್ಮೆಯ ವಸ್ತ್ರದ ಹೊದಿಕೆಯುಳ್ಳವನೂ ಆದ ಅರ್ಜುನನನ್ನು ನಮಸ್ಕಾರಮಾಡಿಸಿ ಮಂಗಳವಾದ್ಯಗಳೂ ಮಂಗಳಗೀತೆಗಳೂ ಪ್ರಕಾಶಿಸುತ್ತಿರಲು ಕಳಕಳಧ್ವನಿಯಿಂದ ಆವರಿಸಲ್ಪಟ್ಟು ಜಾಗರಣೆಯಿರಿಸಿದನು. ಮಾರನೆಯ ದಿವಸ ಪ್ರಶಸ್ತವಾದ ಜೋಯಿಸರಿಂದ ನಿಷ್ಕರ್ಷಿಸಲ್ಪಟ್ಟ ಶುಭಮುಹೂರ್ತದಲ್ಲಿ ನೂರೆಂಟು ಪೂರ್ಣಕುಂಭಗಳನ್ನು ನಾಲ್ಕು ವೇದಗಳಲ್ಲಿಯೂ ಪಂಡಿತರಾದ ಬ್ರಾಹ್ಮಣರು ಎತ್ತಿಕೊಂಡು ಮಂತ್ರಪೂತವಾದ ನೀರಿನಿಂದ ಸ್ನಾನಮಾಡಿಸಿದರು. ಸಮುದ್ರಘೋಷದಂತೆ ಮಂಗಳವಾದ್ಯ ಧ್ವನಿಯು ಹೆಚ್ಚಿದುವು. ಮಂಗಳಗೀತೆಗಳ ಧ್ವನಿಯಿಂದ ದಿಕ್ಕುಗಳ ಒಳಭಾಗವೆಲ್ಲ ಶಬ್ದಮಾಡಿ ಸೊಗಯಿಸಿದುವು. ಅಲಂಕಾರ ಮಾಡಿಕೊಂಡಿರುವ ಸಾಮಂತರಾಜರ ಸ್ತ್ರೀಯರು ಮುಂಭಾಗದಲ್ಲಿ ನೃತ್ಯವಾಡಿದರು. ಜಯಜಯ ಧ್ವನಿಯು ಒಂದೇ ಸಮನಾಗಿ ಭೋರೆಂದು ಧ್ವನಿಮಾಡುತ್ತಿರಲು ವೇಶ್ಯಾಸ್ತ್ರೀಯರು ಬಂದು ನೃತ್ಯವಾಡಿದರು. ಇಂದು ಈ ವೈಭವದಲ್ಲಿ ಅರಿಗನಿಗೆ(ಅರ್ಜುನನಿಗೆ) ರಾಜ್ಯಾಭಿಷೇಕವಾಯಿತು.

### ೪೬೯. ಪಣಿಗಳು

ಯದು-ತುರ್ವಶರಂತೆ ಋಗ್ವೇದದಲ್ಲಿ ಅಡಿಗಡಿಗೆ ಕಾಣಿಸಿಕೊಳ್ಳುವ ಜನ ಇನ್ನೊಂದಿದೆ. ಅವರು ಪಣಿಗಳು. ಪಣಿಗಳು ಸಂಪೂರ್ಣವಾಗಿ ಆರ್ಯ ವಿರೋಧಿಗಳೆಂದೇ ಆ ವರ್ಣನೆಗಳಿಂದ ಕಂಡುಬರುತ್ತದೆ. ಯದು-ತುರ್ವಶರು ಕೆಲಬಾರಿ ಆರ್ಯರ ಹಗೆಗಳಾಗಿ

ಶಂಬಾರಾದಿಗಳೊಡನೆ ಇದ್ದ ವರ್ಣನೆಗಳು ದೊರೆಯುವಂತೆ, ಅವರು ಆರ್ಯರ ಗೆಳೆಯರಾಗಿಯೂ ಇದ್ದುದನ್ನು ಋಗ್ವೇದದಲ್ಲಿ ಕಾಣಬಹುದು. ಆದರೆ, ಪಣಿಗಳು ಮಾತ್ರ ಯಾವಾಗಲೂ ಆರ್ಯರ ತುರುಗಳನ್ನು ಓಡಿಸಿಕೊಂಡು ಹೋಗುವ ಕಾಯಕದವರಾಗಿದ್ದರು.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೨ ಪುಟ. ೧೭೪*

**೪೭೦. ಪಣ್ಯಾಂಗನೆ**

*ಸುತ್ತಿಱಿದ ಕಾಲ್ಲಾಪಿನ ಕಡಿತಲೆಯ*
*ಬಳಸಿದಗಣ್ಯ **ಪಣ್ಯಾಂಗನಾ** ಜನದ ನಡುವೆ ಮಣಿಮಯ...*

*(ಪಂಪ ಭಾರತ ೩–೫೫ ವ)*

(ಈ ಕಡೆ ಮಿಂಚನ್ನೇ ಮುಸುಕಿದ್ದಾರೆಯೋ ಎನ್ನುವಂತಿರುವ ಅಸಂಖ್ಯಾತರಾದ ವೇಶ್ಯಾಸ್ತ್ರೀಯರ ಮಧ್ಯೆ ರತ್ನ ಖಚಿತವಾದ ಪೀಠದ ಮೇಲೆ) ವೇಶ್ಯೆಗಿರುವ ಪರ್ಯಾಯ ನಾಮಗಳಲ್ಲಿ ಇದು ಒಂದು. ಇದರರ್ಥ ವಿಕ್ರಯಿಸಲು; ಮಾರಲು ಅರ್ಹವಾದ ವಸ್ತು; ವ್ಯವಹರಿಸಲು ಯೋಗ್ಯವಾದ ಅಂಗನೆಯೆಂದರೆ ಹೆಂಗಸು. ಪಣ್ಯ ಎಂದರೆ ವರ್ತಕ; ಅಂಗಡಿ ಬೀದಿ ಎಂಬ ಅರ್ಥದಲ್ಲಿ ಪಣ್ಯ ವೀಥಿ, ಪಣ್ಯಶಾಲಾ, ಪಣ್ಯಾಜೀವ ಎಂಬ ಪದಗಳು ಬರುತ್ತವೆ.

ಪಣೆಯೆಂದರೆ ವಾಸ್ತವವಾಗಿ ಕೃಷಿ ಮಾಡುವ ಸ್ಥಳ. ಪಣ್ಯ ಎಂದರೆ ಪಣ್ಣೆಯ. ಪಣ್ಣೆಯವೆಂದರೆ ಪಣೆ. ಆದುದರಿಂದ ಪಣ್ಯಾಂಗನಾ ವೇಶ್ಯಾಸ್ತ್ರೀಯೆಂದರೂ ಈ ದೃಷ್ಟಿಯಿಂದ ಇದರ ವ್ಯುತ್ಪತ್ತಿ ಬೇರೆಯಾಗುತ್ತದೆ. ಪಣ್ಯವರ್ಮವೆಂದರೆ ವೇಶ್ಯೆಯರ ಬೀದಿ ಎಂದು ಅರ್ಥ. ಸೂಳೆಯರ ಬೀದಿಯಲ್ಲಿ ಹೋಗುವವರನ್ನು "ನೀತಿಗೆಟ್ಟಾಡುವವರ್" ಎಂದು ಶಾಂತಿನಾಥ ಕವಿಯು ಹೇಳುತ್ತಾನೆ. (ಸುಕುಮಾರ ಚರಿತಂ ೨–೭)

**೪೭೧. ಪತಿ**

'ಪತಿ' ಈ ಸಂಕೇತ ಪ್ರಾಮುಖ್ಯದಿಂದ ಶೈವ ಸಂಪ್ರದಾಯದವರ ಸೊತ್ತು ಆಗಿದೆ. 'ಅಯ್ಯ' 'ಆಚಾರಿ' (ರ್ಯ) ಹಂಚಿಹೋದಂತೆ. ಅರ್ವಚೀನ ಪಶು–ಪತಿ ಮಠ–ಪತಿ ಇಂತಹ ಪ್ರಯೋಗಗಳು ಮಾತ್ರವಲ್ಲ; ವ್ರಾತ–ಪತಿ, ಸ್ತೇನಾನಾಂ–ಪತಿ, ಅರಣ್ಯಾನಾಂ ಪತಿ, ಪತ್ತೀನಾಂ ಪತಿ, ಗಣ–ಪತಿ ಇತ್ಯಾದಿ ಪ್ರಯೋಗಗಳು ರುದ್ರಾಧ್ಯಾಯದಲ್ಲಿ ಬಂದಿವೆ. ಕೆಲವು ಸಂಕೇತಗಳು, ಕೆಲವೊಂದು ಪಕ್ಷ– ಪಂಥಗಳ ವಿಶೇಷ ಸಂಬಂಧದ ಮೂಲಕ ಅವರ ವೈಶಿಷ್ಟ್ಯ ಸೂಚಕವಾಗಿ ನಿಲ್ಲುತ್ತವೆ. ಹೀಗೆ 'ಪತಿ' ಇದು ಶೈವ ಸಂಪ್ರದಯದ ಚಿಹ್ನವಾಗಿರುವದು ಕಂಡುಬರುತ್ತದೆ ಎಂದು ಶಂಬಾ ಹೇಳುತ್ತಾರೆ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯*
*ಹಾಲುಮತ ದರ್ಶನ ಸಂಪುಟ. ೩ ಪುಟ. ೧೩೭.*

## ೪೭೨. ಪಥ್ಯಾಹಾರ

*ಉದರ ಸಮಾಗ್ನಿಯ ಚಿಹ್ನದ*
*ಪದದೊಳ್ ವೈದ್ಯೋಕ್ತನಪ್ಪ ಬಾಣಸಿಗನವೋಲ್ ।*
*ತ್ರಿದಶಾಮೃತಾನ್ನಮಂ ಕಂಡು*
*ವುದರ್ಗೆ ಭೋಜ್ಯಾಂಗ ತುಂಗ ಕಲ್ಪಮಹೀಜಂ ॥*

*(ಶಾಂತಿಪುರಾಣ ೬-೧೧೫ ವ)*

"ವೈದ್ಯೋಕ್ತನಪ್ಪ ಬಾಣಸಿಗನವೋಲ್" ಎಂದು ಪೊನ್ನ ಬಣ್ಣಿಸುತ್ತಾನೆ. ವೈದ್ಯರ ಸಲಹೆಯಂತೆ ಅಡುಗೆಯವನು ರೋಗಿಗೆ ಪಥ್ಯಾಹಾರ ಒದಗಿಸುವಂತೆ ಎನ್ನುವುದು ಇಲ್ಲಿಯ ಭಾವಾರ್ಥ. ಆಯುರ್ವೇದ ಶಾಸ್ತ್ರದಲ್ಲಿ ರೋಗ ನಿಧಾನಕ್ಕೆ ಪಥ್ಯಾಹಾರ ಅಗತ್ಯ. ಅಂದರೆ ಆಹಾರದ ವಿಷಯದಲ್ಲಿ ರೋಗಿಯು ಕಟ್ಟುನಿಟ್ಟಾಗಿರಬೇಕು. ಪಥ್ಯವೆಂದರೆ ರೋಗಿಗೆ ಬಾಧಕವಾಗದಿರುವಂಥದ್ದು. ಅಪಥ್ಯವೆಂದರೆ ರೋಗಿಯ ದೇಹಕ್ಕೆ ಹೊಂದದಿರುವುದು. ಯೋಗ್ಯವಾದ, ಹಿತವಾದ, ಉಚಿತವಾದ, ಒಳಿತಾಗಬಹುದಾದ್ದು ಪಥ್ಯ. "ಅವನ ಮಾತು ಪಥ್ಯವಾಗಲಿಲ್ಲ" ಅಂದರೆ ಅವನ ಮಾತು ಹಿಡಿಸಿಲ್ಲವೆಂದು ಅರ್ಥ. ಪಥ್ಯಾಹಾರವೆಂದರೆ ರೋಗಿಯು ವೈದ್ಯರು ಹೇಳಿದಂತೆ ಅನುಪಾನದ ಮೇರೆಗೆ ಅನ್ನಾಹಾರಗಳನ್ನು ಸೇವಿಸುವುದು.

## ೪೭೩. ಪದಾರ್ಥ

*"ಜೀವಾದಿ ಪದಾರ್ಥಂಲಳೊ*
*ಳಾವುದು ಸಂದಿಗ್ಧ ಮಾದೊಡಂ........*

*(ಅಜಿತ ತೀರ್ಥಂಕರ ಪುರಾಣ ತಿಲಕಂ ೫-೭೦)*

ಪದಾರ್ಥವೆಂದರೆ ಲೌಕಿಕ ಅರ್ಥದಲ್ಲಿ ಅನ್ನಕ್ಕೆ ಜೊತೆಯಾಗಿ ಬರುವ ಪಲ್ಯ, ಸಾರು: ಸಾಂಬಾರುಗಳು. ಪದಾರ್ಥಕ್ಕೆ ವಸ್ತುವೆಂಬ ಅರ್ಥವೂ ಇವೆ. ಜೀವ, ಅಜೀವ, ಆಸ್ರವ, ಬಂಧ, ಸಂವರ ನಿರ್ಜರ, ಮೋಕ್ಷ, ಪಾಪ, ಪುಣ್ಯ-ಇವುಗಳು ಜೈನದಲ್ಲಿ ಪದಾರ್ಥಗಳು ಎನಿಸಿಕೊಂಡಿವೆಯೆಂದು ರನ್ನ ಬರೆಯುತ್ತಾನೆ. (ಅಜಿತತೀರ್ಥಂಕರ ಪುರಾಣ ತಿಲಕಂ ೫-೭೦)

ಪದಾರ್ಥ ಸ್ವರೂಪವೆಂದರೆ ಪದ ಮತ್ತು ಅರ್ಥದ ಸೇರುವಿಕೆಯನ್ನು ಸೂಚಿಸುತ್ತದೆ. ಪದಾರ್ಥಸ್ವರೂಪ ಪ್ರಪಂಚಘಟಕಗಳಾದ ಪದಾರ್ಥಗಳ ಸ್ವರೂಪವನ್ನು ಅತಿಸಂಗ್ರಹ ವಾಗಿಯಾದರೂ ಇಲ್ಲಿ ಸೂಚಿಸಿದಿರುವುದು ಸರಿಯಲ್ಲ. ಪದಾರ್ಥಗಳ ವಿವರಣೆಯನ್ನು ತರ್ಕ ಸಂಗ್ರಹಕಾರನಾದ ಅನ್ನಂಭಟ್ಟಾಚಾರ್ಯನು ಹೀಗೆ ವಿವರಿಸುತ್ತಾನೆ:

ದ್ರವ್ಯಗುಣಕರ್ಮವಿಶೇಷಸಾಮಾನ್ಯ ಸಮವಾಯಾಽಭಾವಾಃ ಸಪ್ತಪದಾರ್ಥಾಃ (ಸೂತ್ರ ೨)

ಈ ಏಳು ಪದಾರ್ಥಗಳೊಳಗೆ ಕಡೆಯ 'ಅಭಾವ'ವನ್ನು ಪದಾರ್ಥವನ್ನಾಗಿ ಸ್ವೀಕರಿಸಬೇಕೋ ಬೇಡವೋ ಎಂಬಲ್ಲಿ ವಾದವಿದ್ದಂತೆ ತೋರುತ್ತಿದೆ. 'ಸಮವಾಯ' ಎಂದರೆ, ನೂಲು ಬಟ್ಟೆಗಳೊಳಗೆ ಅಲ್ಲವೆ ಮಣ್ಣು ಗಡಿಗೆಗಳೊಳಗೆ ಇರುವಂಥ ಅವಿಚ್ಛೇದ್ಯವಾದ ಒಂದು ಸಂಬಂಧ. 'ವಿಶೇಷ' ಎಂದರೆ, ಇಂದ್ರಿಯ ಗೋಚರಗಳಲ್ಲದ ಅನಂತವಾದ ಪ್ರತಿಯೊಂದು ಪರಮಾಣುವಿನಲ್ಲಿಯೂ ಇರುವಂತೆ ಕಲ್ಪಿಸಿಕೊಂಡ ಅದೊಂದು ಧರ್ಮ. ಈ 'ಅಭಾವ-ಸಮವಾಯ-ವಿಶೇಷ'ಗಳೆಂಬ ಅತಿ ಸೂಕ್ಷ್ಮವಿಚಾರ ಗ್ರಾಹ್ಯಗಳಾದ ಮೂರು ಪದಾರ್ಥಗಳೂ ವಿಚಾರಿಸಿದಲ್ಲಿ ಹಿಂದಿನ ನಾಲ್ಕು ಪದಾರ್ಥ ಗಳೊಳಗೆ ಅಡಕವಾಗಿರುತ್ತವೆ. ಅದರಿಂದ, ದ್ರವ್ಯಾದಿಗಳಾದ ನಾಲ್ಕು ಪದಾರ್ಥಗಳೇ ಪ್ರಕೃತಕ್ಕೆ ಸಾಕೆಂದು ಲಾಕ್ಷಣಿಕರ ಇಲ್ಲಿ 'ಕ್ರಿಯಾ' ಎಂದು ಕರೆದುದು. ವ್ಯಾಕರಣಶಾಸ್ತ್ರ ಪದ್ಧತಿಯಂತೆ 'ಕ್ರಿಯಾ-ಕರ್ಮ'ಗಳೊಳಗಿನ ಭೇದವು ಇಲ್ಲಿ ಇಲ್ಲವೆಂಬುದನ್ನು ಭಾವಿಸಿಕೊಳ್ಳಬೇಕು. 'ಸಾಮಾನ್ಯ'ವೆಂಬ ಪದಾರ್ಥವನ್ನೆ ಇಲ್ಲಿ 'ಜಾತಿ' ಎಂದು ಹೇಳಿದುದು. ಈ ನಾಮಾಂತರವನ್ನು ನ್ಯಾಯಶಾಸ್ತ್ರವಾದರೂ ಒಪ್ಪಿಕೊಂಡಿದೆ.

ನಾಲ್ಕು ಪದಾರ್ಥಗಳೊಳಗಿನ ಭೇದಗಳನ್ನು ಮುಳಿಯ ತಿಮ್ಮಪ್ಪಯ್ಯನವರು ಹೀಗೆ ಕಲ್ಪಿಸುತ್ತಾರೆ.

೧. ದ್ರವ್ಯ:- ಪ್ರಥಿವಿ, ಅಪ್, ತೇಜಸ್, ವಾಯು, ಆಕಾಶ, ಕಾಲ, ದಿಕ್, ಆತ್ಮ, ಮನಸ್- ಎಂಬ ಒಂಬತ್ತು ವಿಧದ ದ್ರವ್ಯಗಳು.

೨. ಗುಣ:- ರೂಪ, ರಸ, ಗಂಧ, ಸ್ಪರ್ಶ, ಸಂಖ್ಯಾ, ಪರಿಮಾಣ, ಪೃಥಕ್ತ್ವ, ಸಂಯೋಗ, ವಿಭಾಗ, ಪರತ್ವ, ಅಪರತ್ವ, ಗುರುತ್ವ, ದ್ರವತ್ವ, ಸ್ನೇಹ, ಶಬ್ದ, ಬುದ್ಧಿ, ಸುಖ, ದುಃಖ, ಇಚ್ಛಾ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ, ಸಂಸ್ಕಾರ- ಎಂದು ಇಪ್ಪತ್ತನಾಲ್ಕು ಗುಣಗಳು.

೩. ಕರ್ಮ (ಕ್ರಿಯಾ):- ಉತ್ಕ್ಷೇಪಣ, ಅವಕ್ಷೇಪಣ, ಆಕುಂಚನ, ಪ್ರಸಾರಣ, ಗಮನ- ಎಂದು ಐದು ಕರ್ಮಗಳು.

೪. ಸಾಮಾನ್ಯ (ಜಾತಿ):- ಪರ, ಅಪರ- ಎಂಬ ಎರಡು ಜಾತಿಗಳು.

ಇವುಗಳೊಳಗೆ ಸ್ವತಂತ್ರವಾಗಿ, ಪ್ರಧಾನವೆನಿಸಿದುದು 'ದ್ರವ್ಯ'. ಮತ್ತಿನ 'ಗುಣಕರ್ಮ'ಗಳು, ಸ್ವರಗಳನ್ನೊಂದಿ ಭಾಷಾಭಿವೃದ್ಧಿಗೆ ಅವಶ್ಯ ಸಾಧಕಗಳಾದ ವ್ಯಂಜನಗಳಂತೆ 'ದ್ರವ್ಯ'ಗಳನ್ನು ವ್ಯಕ್ತಗಳನ್ನಾಗಿ ಮಾಡುತ್ತವೆ. ಬಿಳಿ, ಕಪ್ಪು, ಸಿಹಿ, ಮೊದಲಾದ 'ಗುಣ'ಗಳೂ, ಹೋಗುವಿಕೆ, ಬರುವಿಕೆ ಮೊದಲಾದ 'ಕರ್ಮ'ಗಳೂ ತದಾಶ್ರಯಗಳಾದ "ದ್ರವ್ಯ"ಗಳ ಮೂಲಕವಾಗಿಯೇ ವ್ಯಕ್ತಗಳಾಗುವುವು ಎಂಬುದನ್ನು ಭಾವಿಸಿಕೊಳ್ಳಬೇಕು, "ದ್ರವ್ಯ"ಗಳೂ, "ಗುಣ"ಗಳು, "ಕರ್ಮ"ಗಳು-ಎಂಬ ಭಿನ್ನ ಭಿನ್ನ ಪದಾರ್ಥಗಳ ಒಳಗೊಳಗೆ ಇರುವ ಸಮಾನತಾ ರೂಪಧರ್ಮವನ್ನೇ "ಸಾಮಾನ್ಯ" ಅಲ್ಲವೆ "ಜಾತಿ" ಎನ್ನುವುದು. ಲೋಕದಲ್ಲಿ ಬ್ರಾಹ್ಮಣಜಾತಿ, ವೈಶ್ಯಜಾತಿ ಇತ್ಯಾದಿ ಪದಗಳು ರೂಢಿಗೊಂಡುದು ಈ ಕಾರಣದಿಂದಲೆ. ಪ್ರಪಂಚವು ಪೂರ್ವೋಕ್ತ ಪದಾರ್ಥಗಳಿಂದಲೇ ರೂಪು ಪಡೆದಿದೆ; ಅವುಗಳ ಭಿನ್ನ ಭಿನ್ನ ಕ್ರಮದ

ಸಂಪರ್ಕದಿಂದಲೇ ಮಾರ್ಪುಗೊಳ್ಳುತ್ತಲೂ ಇದೆ.

*ವಿವರಗಳಿಗೆ : ಮುಳಿಯ ತಿಮ್ಮಪ್ಪಯ್ಯ ೧೯೮೮ ಶ್ರದ್ಧಾಂಜಲಿ ಸಂಪುಟ. ೨ ಪುಟ. ೫೩೦-೫೩೧.*

**೪೭೪. ಪದಿರು**

*ಯಮದಂಡನೆಂದಂ ದೇವಾ ನೀಂ*
*ಗೆಲೆಯಾಂ ಸೋಲ್ತೆನುಂ ಸತ್ತೆನುಮೆಂದಿರ್ವರ್* ***ಪದಿರಿನಿಂ***
*ನುಡಿವ ಸೂಟಿಕ್ಕಾತುಗಳಂ ಕಾಪಿನವರುಂ...........ಕೇಳ್ದು (ಡಿ.ಎಲ್.ಎನ್ ೨೦೦೯ ವಡ್ಡಾರಾಧನೆ ೧೨೫-೧೦ ಪುಟ. ೧೬೯)*

ಒಗಟು; ಗೂಢಾರ್ಥವುಳ್ಳ ಮಾತು.

ಪದರು, ಪದಿರು, ಪದುರು, ಹದರು, ಹದಿರ್, ಹದಿರು ಹದುರು (ನಾ) ಅ. ಎರಡರ್ಥವುಳ್ಳ ಮಾತು; ದ್ವಂದ್ವಾರ್ಥದ ನುಡಿ:

ಜಾನಪದದ ಪ್ರಕಾರಗಳಲ್ಲಿ ಒಗಟು ಕೂಡಾ ಒಂದು. ಒಗಟನ್ನು ಬಿಡಿಸುವವನನ್ನು ಜಾಣನೆಂದು ಕರೆಯುತ್ತಾರೆ. ಒಗಟು ಸುಲಭವಾಗಿ ತಿಳಿಯದ ಮಾತು. ಗೂಢವಾದ ಮಾತು. ಒಗಟು ಹೇಳುವುದು ಮತ್ತು ಅದರ ಅರ್ಥವನ್ನು ಬಿಡಿಸುವುದು ಒಂದು ಮನೋರಂಜನೆಯೂ ಹೌದು. ಉದಾಃ ಅಂಕು ಡೊಂಕು ಸಂಕಪಾಲ ಮೂರು ತಲೆ ಹತ್ತು ಕಾಲು.

ಅಂಕು ಡೊಂಕು ಸಂಕಪಾಲ ಎಂದರೆ ಅಂಕು ಡೊಂಕಾಗಿ ಸಂಕಪಾಲದಂತೆ ಹೋಗುವ ಗೆರೆಗಳು. ಮೂರು ತಲೆಯೆಂದರೆ ಉಳುವವನು ಮತ್ತು ಎರಡು ಎತ್ತು. ಹತ್ತು ಕಾಲು ಎಂದರೆ ಎತ್ತುಗಳ ಎಂಟು ಕಾಲು ಮನುಷ್ಯರ ಎರಡು ಕಾಲುಗಳು.

**೪೭೫. ಪರಂಗನಾರತಿ**

*ಪುಸಿಯ* ***ಪರಾಂಗನಾರತದ*** *ಮದ್ಯದ ಮಾಂಸದ ಮೆಯ್ಗೊಳಲ್ದದು*
*ವ್ಯಸನಿಯ ಮಾಡಿದೋದೆ ನಿಮಗಾಗಮಮಾಗಿರಸತ್ಯವಾದಮಂ ।*
*(ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೨-೧೧)*

ಸುಳ್ಳು, ಪರಸ್ತ್ರೀ ಸಂಬಂಧ, ಮದ್ಯ ಮಾಂಸಗಳ ಸೇವನೆಗಳಿಗೆ ಒಗ್ಗಿದ ದುರ್ವ್ಯಸನಿ" ಎಂದು ಬರುತ್ತದೆ. ಯಾರು ಈ ಕೆಲಸ ಮಾಡುತ್ತಾರೋ ಅವರು ದುರ್ವ್ಯಸನಿಗಳು. 'ನಿಮಗೆ ಆಗಮ ಅಸತ್ಯವೆಂದೆನ್ನಿಸುತ್ತದೆ. ಜೀವನಿಲ್ಲವೆಂದು ಹೇಳುತ್ತೀರಿ. ಹೀಗೆಲ್ಲಾ ಹೇಳಲು ನಾಲಿಗೆಯಾದರೂ ಹೇಗೆ ಹೊರಳುತ್ತದೆ? ಇದು ತಾತ್ವಿಕ ಪ್ರಶ್ನೆ, ಲೋಕಾಯತರ ಮತ್ತು ಜೈನರ ನಡುವಣ ಸಂಘರ್ಷವನ್ನು ಸೂಚಿಸುತ್ತದೆ.

"ಸ್ವರ್ಗ ಮೋಕ್ಷ ಖಾಲಿ ಮಾತುಗಳು. ಪರಲೋಕಕ್ಕೆ ಹೋಗುವುದನ್ನು ಕಲ್ಪಿಸಿಕೊಳ್ಳಲಾಗಿರುವ ಆತ್ಮ ಯಾವುದು ಇಲ್ಲ. ವರ್ಣಾಶ್ರಮ ಧರ್ಮ ಫಲಕಾರಿಯಲ್ಲ. ಅಗ್ನಿಹೋತ್ರ, ಮೂರು ವೇದಗಳು ಶರೀರಕ್ಕೆ ಬೂದಿ ಮೆತ್ತಿಕೊಳ್ಳುವುದು ಅರ್ಥಹೀನ.

ಶ್ರಾದ್ಧಾದಿಗಳು ಅರ್ಥಹೀನ. ಕರ್ಮ ಸಿದ್ಧಾಂತ ಅರ್ಥಹೀನ. ಇವುಗಳು ಚಾರ್ವಾಕ ಮತದ ಪ್ರಮುಖ ನಿಲುವು. ಇದನ್ನು ಪ್ರಶ್ನಿಸುವುದು ಜೈನಧರ್ಮದ ಮುಖ್ಯ ತಾತ್ವಿಕತೆಯೂ ಆಗಿತ್ತು ಎಂಬುದಿಲ್ಲಿ ಗಮನಾರ್ಹ.

ವ್ಯಭಿಚಾರಕ್ಕೆ 'ಯಮಧರ್ಮ ಸಾರ'ದಲ್ಲಿ ಹೀಗೆ ಬರುತ್ತದೆ. ಶೂದ್ರನೊಡನೆ ವ್ಯಭಿಚಾರ ಮಾಡುವ ಬ್ರಾಹ್ಮಣ ಸ್ತ್ರೀಯನ್ನು ನಾಯಿಗಳಿಗೆ ಆಹಾರವಾಗಿ ಎಸೆಯಬೇಕೆಂದೂ, ಕ್ಷತ್ರಿಯನೊಡನೆ ಅಥವಾ ವೈಶ್ಯನೊಡನೆ ವ್ಯಭಿಚಾರ ಮಾಡಿದ್ದರೆ ತಲೆಬೋಳಿಸಬೇಕೆಂದೂ, ಕತ್ತೆಯ ಮೇಲೆ ಕೂರಿಸಿ ಮೆರವಣಿಗೆ ಮಾಡಬೇಕೆಂದೂ ಹೇಳಿದೆ.

ವ್ಯಭಿಚಾರ ಮಾಡಿದ ಸ್ತ್ರೀಯ ಮೂಗನ್ನು ಕೊಯ್ದು ಶಿಕ್ಷಿಸಬೇಕು. (ಪಂಚತಂತ್ರ ಪುಟ. ೧೧೨) ಇತ್ಯಾದಿ ವಿಚಾರವು ಪ್ರಕಟವಾಗಿದೆ. ಹೆಂಡತಿಯನ್ನು ಮರಳಿ ಪಡೆಯಬಹುದು ಎನ್ನುವ ಆಶಯವೂ ಈ ಕೃತಿಯಲ್ಲಿ ಪ್ರಕಟಗೊಂಡಿದೆ. (ಅದೇ ಪು. ೧೮೮) ಗಂಡನಿಗೆ ಹಿತವಾದವನ್ನು ಮಾಡುತ್ತಾಳೆ. (ಪರೀಕ್ಷಾ ವ್ಯಾವರ್ಣನಂ. ಪು.೨೩೪) ಇಬ್ಬರು ಹೆಂಡಿರಿಗೆ ಪರಸ್ಪರ ವೈರವು ಸಹಜ. (ವಿಶ್ವಾಸ ಪ್ರಕರಣ: ಪು. ೨೭೮) 'ರಾಮಚಂದ್ರ ಚರಿತ ಪುರಾಣ' ಕೃತಿಯಲ್ಲಿ ಹೆಂಡತಿಯು ಗಂಡನ ರಥದ ಸಾರಥ್ಯವನ್ನು ಕೈಗೊಳ್ಳುತ್ತಾಳೆ. (೩-೫೨) ಹೆಂಡತಿಯು ಗಂಡನಿಗೆ ಸೇವೆ ಮಾಡಿದಲ್ಲಿ ಗಂಡನು ಹೆಂಡತಿಗೆ ಮೆಚ್ಚುಕೊಡುತ್ತಾನೆ. (ಅದೇ ೩-೬೪) ಪರಪುರುಷನನ್ನು ಸೋಂಕಿದರೆ ಪತಿವ್ರತೆಯು ನಾಲಗೆ ಕಿತ್ತು ಸಾಯುವುದರ ಮೂಲಕ ತನ್ನನ್ನು ತಾನೇ ಶಿಕ್ಷಿಸಿಕೊಳ್ಳುತ್ತಾಳೆ. (ಅದೇ ೯-೧೪೯ವ) 'ದೈಹಿಕ ಪಾವಿತ್ರ್ಯದ ಸ್ಥಿತಿಯು ನಾಗರಿಕ ಜನಾಂಗದ ಒಂದು ಸ್ಥಿತಿಯಾಗಿದೆ. ಇಂತಹ ಕಡೆ ಸಾಮಾನ್ಯವಾಗಿ ಪುರುಷನೇ ಸಮಾಜದಲ್ಲಿ ಉನ್ನತವಾದ ಸ್ಥಾನವನ್ನು ಪಡೆಯುತ್ತಿರುತ್ತಾನೆ. ಹೆಣ್ಣಿಗೆ ಲೈಂಗಿಕವಾದ ಸ್ವಾತಂತ್ರ್ಯವು ಇರುವುದಿಲ್ಲ. ಇಲ್ಲಿಯೇ ಹೇಳಬಹುದಾದ ಮತ್ತೊಂದು ಅಂಶವೆಂದರೆ, ಇದು ದೇಹವಾದವನ್ನು ನಿರಾಕರಿಸುವ ಪ್ರಯತ್ನವಾಗಿದೆ. ತಾಂತ್ರಿಕರಲ್ಲಿ ದೇಹಪಾವಿತ್ರ್ಯದ ಕುರಿತಂತೆ ಶಂಕೆಯಿಲ್ಲ. (ಅದೇ ಪು. ೩೦೭) ಭಾರತೀಯ ಪರಂಪರೆಯಲ್ಲಿ ಚರ್ಚಿತವಾಗಿರುವ 'ಬೀಜ ಪ್ರಾಧಾನ್ಯ' ಮತ್ತು 'ಕ್ಷೇತ್ರ ಪ್ರಧಾನ್ಯ' ಸ್ಥಿತಿಯಲ್ಲಿ 'ಕ್ಷೇತ್ರಪ್ರಾಧಾನ್ಯ'ವು ಹೆಣ್ಣಿನ ಪ್ರಾಧಾನ್ಯವನ್ನು ಸೂಚಿಸುತ್ತಿರುತ್ತದೆ. 'ಬೀಜ ಪ್ರಧಾನ್ಯ' ಸ್ಥಿತಿಯಲ್ಲಿ ಗಂಡು ಫಲವತ್ತತೆಯ ಪ್ರತೀಕವಾಗುವುದು ಮತ್ತು ಅವನು ಸಾಮಾಜಿಕವಾಗಿ ಉನ್ನತ ಸ್ಥಾನದಲ್ಲಿ ಇರುವುದರ ಸೂಚನೆಯೂ ಇರುತ್ತದೆ. (ಅದೇ ಪು.೩೨೦) ಅತ್ಯಂತ ಕೆಳವರ್ಗದಲ್ಲಿ ಹೆಣ್ಣಿನ ಪಾವಿತ್ರ್ಯದ ಬಗೆಗೆ ಹೆಚ್ಚಿನ ಶಂಕೆಗಳಿರುವುದಿಲ್ಲ. (ಅದೇ ಪು. ೩೧೩) ಈ ಆಧಾರಗಳ ಹಿನ್ನೆಲೆಯಲ್ಲಿ ಸ್ಪಷ್ಟವಾಗುವ ಸಂಗತಿಯೆಂದರೆ, ಮೇಲೆ ಉಕ್ತವಾದ 'ರಾಮಚಂದ್ರ ಚರಿತ ಪುರಾಣ'ದ ಪ್ರಸಂಗದಲ್ಲಿ ಪತಿವ್ರತೆಯು ತನ್ನ ಶೀಲ ಮತ್ತು ಪಾವಿತ್ರ್ಯದ ರಕ್ಷಣೆಗಾಗಿ ಸಾವನ್ನು ಪಡೆಯಲು ಸಿದ್ಧಳಿದ್ದಾಳೆ. ಇದರ ಹಿನ್ನೆಲೆಯಲ್ಲಿ ಬೀಜ ಪ್ರಾಧಾನ್ಯವಾದ ಸ್ಥಿತಿಯು ಇದೆ. ಮತ್ತು ಪುರುಷ ವರ್ಗವು ಸಾಮಾಜಿಕ ಸ್ಥಿತಿಯೊಂದನ್ನು ಹಿಡಿತದಲ್ಲಿ ಇರಿಸಿಕೊಂಡ ವಾತಾವರಣದ ಪರಿಚಯವಾಗುತ್ತದೆ.

೪೭೬. ಪರದಾರಗಮನ

*ಆಯು ತವೆ ಪಾರಪರಿಗನೆ*
*ಪಾಯಮನೆತ್ತರಿವನುಚಿತ ವಾಕ್ಯಾರ್ಥಂ ಕೊ ।*
*ಳ್ಳೀಯೆ* ***ಪರದಾರಗಮನಮ***
*ನಾಯುಷ್ಯಾಂತಮುಮೆನಲ್ ಮನಂದಂದಪನೇ ॥ ೫೧ ॥*

*(ಶಾಂತಿಪುರಾಣ ೫-೫೧)*

ಪರಸ್ತ್ರೀಗಮನದಿಂದ ಆಯುಷ್ಯ ತೀರುವುದು ಎಂದು ಇಲ್ಲಿಯ ಪರಿಕಲ್ಪನೆಯಾಗಿದೆ. ಪರಸ್ತ್ರೀಗಮನ ಸಭ್ಯತೆಯಲ್ಲ. ಅದು ಸಂಸ್ಕಾರವೂ ಅಲ್ಲವೆಂಬ ಧ್ವನಿ ಇಲ್ಲಿ ಮುಖ್ಯವಾಗಿದೆ.

ಕ್ರಿ.ಶ. ೯೧೬ರ ಪರ್ಷಿಯಾ ದೇಶದ ಸುಲೇಮಾನ್ ಎಂಬ ಪ್ರವಾಸಿಗ ಹೀಗೆ ಹೇಳುತ್ತಾನೆ: 'ವ್ಯಭಿಚಾರಗೈದವರನ್ನು ಮರಣದಂಡನೆಗೆ ಗುರಿಪಡಿಸುತ್ತಾರೆ. ಈ ಶಿಕ್ಷೆ ಇಂಡಿಯಾ ದೇಶದಲ್ಲೆಲ್ಲಾ ಇದೆ. ಆದರೆ ಗಂಡಸು ಹೆಂಗಸಿನ ಮೇಲೆ ಬಲಾತ್ಕಾರ ಮಾಡಿದರೆ ಗಂಡಸಿಗೆ ಮಾತ್ರ ಮರಣದಂಡನೆ. ಹೆಂಗಸಿನ ಒಪ್ಪಿಗೆಯಿಂದ ವ್ಯಭಿಚಾರ ಮಾಡಿದರೆ ಆಕೆಗೂ ಆಕೆಯ ಮಿಂಡನಿಗೂ ಮರಣದಂಡನೆ ವಿಧಿಸುತ್ತಾರೆ.

ಮನುವು ವ್ಯಭಿಚಾರಕ್ಕೆ ಈ ಕೆಳಗಿನ ಶಿಕ್ಷೆಯನ್ನು ಹೇಳಿದ್ದಾರೆ:

ಗಂಡು ತನಗಿಂತ ಹೀನ ಜಾತಿಯ ಸ್ತ್ರೀಯನ್ನು ಸೇವಿಸಿದರೆ ಏನೂ ದಂಡನೆಯಿಲ್ಲ. ಹೆಣ್ಣು ತನಗಿಂತ ಕೀಳು ಜಾತಿಯ ಪುರುಷನನ್ನು ಹಿಂಬಾಲಿಸಿದರೆ ಅವಳನ್ನು ಮನೆಯಲ್ಲಿ ಬಂದೋಬಸ್ತಿನಲ್ಲಿಟ್ಟು ಅವನನ್ನು ಮರೆಯುವಂತೆ ಮಾಡಬೇಕು.

ಹೀನನು ಉತ್ತಮ ಸ್ತ್ರೀಯನ್ನು ವಶೀಕರಿಸಿದರೆ ಹಿಂಸಾರ್ಹನು. ಹೀನಳನ್ನು ಮೋಹಿಸಿದವನನ್ನು ಅವಳ ತಂದೆಯು ಸಮ್ಮತಿಸಿದರೆ ದ್ರವ್ಯ ಕೊಟ್ಟು ಮದುವೆಯಾಗ ಬಹುದು. ಸಮಜಾತಿಯವನು ಅಂತಹ ಕನ್ಯೆಯ ಸಮ್ಮತಿಯಿಲ್ಲದೆ ಬಲಾತ್ಕಾರದಿಂದ ದೂಷಿಸಿದರೆ ಅವನ ಕೈಬೆರಳನ್ನು ಕಡಿಯಬೇಕು.

ಸ್ವಜಾತಿಯ ಹೆಣ್ಣು ಅನುರಕ್ತಳಾಗಿ ಪುರುಷಸಂಗ ಪಡೆದರೆ ಗಂಡಿಗೆ ಹಿಂಸೆಯಿಲ್ಲ. ಇನ್ನೊಂದು ಪಣ ಧನದಂಡನೆಯು.


*ವಿವರಗಳಿಗೆ ನೋಡಿ: ಎಸ್.ಜಿ.ಸರ್ದೇಸಾಯಿ ೨೦೦೨*
*ಪ್ರಾಚೀನ ಭಾರತದಲ್ಲಿ ದಾರ್ಶನಿಕ ಸಂಘರ್ಷ ಮತ್ತು ಅದರ ಸಾಮಾಜಿಕ ಮಹತ್ವ ಪುಟ. ೨೮-೩೦.*
*ಪಿ.ವಿ.ಕಾಣೆ (ಮೂಲ) ರಾಮಚಂದ್ರ ರಾವ್: ಎಸ್.ಕೆ. (ಅನು) ೧೯೮೦*
*ಧರ್ಮಶಾಸ್ತ್ರದ ಇತಿಹಾಸ ಪುಟ. ೨೮೮-೨೯೧*
*ಎಚ್.ಎಲ್ ನಾಗೇಗೌಡ (ಸಂ) ೧೯೬೪ ಪ್ರವಾಸಿ ಕಂಡ ಇಂಡಿಯಾ ಪುಟ. ೩೦೭*
*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೮-೩೬೦.*

**೪೭೭. ಪರಮತ ಖಂಡನೆ**

*("ಮೇಲೆ ನಿಸುವಜಿನಧರ್ಮಂ*

*ಪೋಲದು ಪೆಱವಿಧರ್ಮದತೆಱ ನಂ"*

*(ಅಜಿತ ತೀರ್ಥಂಕರ ಪುರಾಣ ತಿಲಕಂ ೨-೭೭)*

ಕವಿಗಳು ತಮ್ಮ ಮತವನ್ನು ಹೊಗಳಿ ಅನ್ಯಮತವನ್ನು ತೆಗಳುವುದು ಸಾಮಾನ್ಯವಾಗಿದೆ. ಇಲ್ಲಿ ರನ್ನ ಕವಿಯು ಅದೇ ಕೆಲಸವನ್ನು ಮಾಡಿದ್ದಾನೆ. ಅವನ ಪ್ರಕಾರ ಜೈನಧರ್ಮ ಶ್ರೇಷ್ಠವಾದುದು. ಜೈನಧರ್ಮ ಅನ್ಯರು ಹೇಳುವ ಧರ್ಮದ ರೀತಿಯಂತಿಲ್ಲ. ಜೈನ ಧರ್ಮವೆಂಬುದು ಹಸುವಿನ ಹಾಲಿನಂತೆ. ಅನ್ಯಮನಸ್ಸುಗಳು ನಾಯಕಳ್ಳಿಯ ಹಾಲಿನಂತೆ ಇವುಗಳಿಗೆ ಪರಸ್ಪರ ತುಲನೆ ಅಸಾಧ್ಯ ಎಂದು ಅಜಿತತೀರ್ಥಂಕರ ಪುರಾಣ ತಿಲಕದಲ್ಲಿ ಹೇಳುತ್ತಾನೆ.

ಶಿವನು ಒಮ್ಮೆ ಲಿಂಗರೂಪವಾಗಿ ನಿರಾಕಾರ ರೂಪನಾಗುತ್ತಾನೆ; ಇನ್ನೊಮ್ಮೆ ಪಂಚವಕ್ತ್ರ ದಶಭುಜನಾಗಿ ಸಾಕಾರ ರೂಪನಾಗಿದ್ದಾನೆ. ಇವೆಲ್ಲವನ್ನೂ ನೋಡಿದರೆ ಆ ಪರಶಿವನು ಇಂದ್ರಜಾಲಿಗನೇ ಆಗಿರಬೇಕು ಎನ್ನುತ್ತಾನೆ ಬ್ರಹ್ಮಶಿವ (೮-೨೮)

"ಖಳರಾದವರೂ, ಕ್ರೂರರಾದವರನ್ನು ಸಂತೋಷ ಉತ್ಸಾಹದಿಂದ ದೇವರೆಂದು ನಂಬುವುದೇ?.... ಕ್ರೂರನಾಗಿರುವವನನ್ನು ಆಪ್ತನೆಂದು ಹಿಡಿದು ಮೋಕ್ಷಕ್ಕೆ ಹೋಗುವೆನೆಂಬುವವನು ಮೂಢನಲ್ಲದೆ ಚತುರನಲ್ಲ (೭-೩೩೬) ಎನ್ನುತ್ತಾನೆ ನಯಸೇನ.

ಹೀಗೆ ಅನೇಕ ಜೈನ ಕವಿಗಳು ವೈದಿಕ, ಶೈವ ಮುಂತಾದ ಅನ್ಯಮತಗಳನ್ನು ಖಂಡಿಸಿದ್ದಾರೆ.

**೪೭೮. ಪರಮೇಷ್ಠಿ**

*ಮೊದಲೊಳೆ ಸಿದ್ಧಭಕ್ತಿ ಸಕಳ ಕ್ರಿಯೆಗಾದುದು ಸಿದ್ಧ ಮಾತಕಾ*

*ಪೆದವಿಗೆ................. (ಅಜಿತ ತೀರ್ಥಂಕರ ಪುರಾಣ ತಿಲಕಂ ೧-೨)*

ಇಂದ್ರಾದಿಗಳ ಮೂಲಕ ವಂದನೀಯವಿರುವ ಆ ಪರಮಾತ್ಮ ಸ್ವರೂಪದಲ್ಲಿ ಸ್ಥಿರಗೊಂಡವನು ಪರಮೇಷ್ಠಿಯಿದ್ದಾನೆ. ಅವನು ಅಂತರಂಗದಲ್ಲಂತೂ ಘಾತಿಕರ್ಮಗಳ ನಾಶದಿಂದ ಪ್ರಕಟವಾದ ಅನಂತಜ್ಞಾನ, ದರ್ಶನ, ಸುಖ, ವೀರ್ಯ ಸ್ವರೂಪವಾದ ತನ್ನ ಆ ನಿರ್ವಿಕಾರ, ಅವಿನಾಶೀ ಪರಮಾತ್ಮ ಸ್ವರೂಪದಲ್ಲಿ ಸ್ಥಿರನಿದ್ದಾನೆ, ಮತ್ತು ಬಾಹ್ಯದಲ್ಲಿ ಇಂದ್ರ ಮೊದಲಾದ ಅಸಂಖ್ಯಾತ ದೇವಗಳಿಂದ ವಂದನೀಯವಿರುವ ಸಮವಸರಣ ಸಭೆಯ ಮಧ್ಯದಲ್ಲಿ ಮೂರು ಪೀಠಿಕೆಗಳ ಮೇಲೆ ದಿವ್ಯ ಸಿಂಹಾಸನದಲ್ಲಿ ನಾಲ್ಕು ಅಂಗುಲ ಅಂತರಾಳದಲ್ಲಿ ಅರವತ್ನಾಲ್ಕು ಚಾಮರಸಹಿತ ವಿರಾಜಮಾನರಿದ್ದಾರೆ. ಮೂರು ಛತ್ರ ಮೊದಲಾದ ದಿವ್ಯಸಂಪತ್ತಿನಿಂದ ವಿಭೂಷಿತರಿದ್ದಾರೆ. ಇಂದ್ರಾದಿಕದೇವ ಮತ್ತು ಮನುಷ್ಯ ಮೊದಲಾದ ನಿಕಟ ಭವ್ಯರಿಗೆ ಧರ್ಮೋಪದೇಶ ರೂಪದ ಅಮೃತದ ಪಾನ ಮಾಡಿಸುತ್ತ ಜನ್ಮ-ಜರೆ-ಮರಣಗಳ ದುಃಖಗಳನ್ನು ನಿರಾಕರಣ ಮಾಡುತ್ತ

ವಿರಾಜಮಾನರಿದ್ದಾರೆ. ಇಂಥ ಭಗವಾನ ಆಪ್ತರನ್ನು ಪರಮೇಷ್ಠಿಯೆಂದು ಹೇಳುತ್ತಾರೆ.

ಪೆಣೆದೆಂಟು ಕಿಲ್ಬಿಷಂಗಳ್ಕಿಡೆ ಕಿಡದ ಗುಣಂ ಪೊರ್ದೆ ಬಂದೆಂಟುಮಾದಂ
ತಣಿವಂ ಕೈಕೊಂಡಮೂರ್ತಚರಮತನುಸಮಾಕಾರರುದ್ಭೂತಲೇಪರ್ ।
ಪ್ರಣುತರ್ನಿತ್ಯರ್ಜಗನ್ಮಂಗಳನಿಳಯರನಂತತ್ರಿಲೋಕೈಕಚೂಡಾ
ಮಣಿಗಳ್ಸಿದ್ಧರ್ ಸ್ವಕೀಯಪ್ರಭುತೆಯನೆಮಗಂ ಮಾಳ್ಕಿತಿಪ್ರೀತಿಯಿಂದಂ ॥

(ಆದಿಪುರಾಣ. ೧-೨ ॥

ತಪಸ್ಸಿನಿಂದ ಘಾತಿ ಅಘಾತಿ ಕರ್ಮಗಳನ್ನು ನಾಶಮಾಡಿ ದೇಹವನ್ನು ತ್ಯಜಿಸಿ ಸಿದ್ಧಶಿಲೆಗೆ ಹೋಗಿ ಶಾಶ್ವತಸುಖದಲ್ಲಿ ನೆಲೆಸಿದವರು. ಇವರು ಅಯೋಗಕೇವಲಿಗಳು.

ಯಾರು ಸಿದ್ಧಿಯನ್ನು ಪಡೆಯುತ್ತಾರೋ ಅವರೆಲ್ಲ ಸಿದ್ಧರು. 'ಸಿದ್ಧಿತ್ವ' ಎನ್ನುವುದಕ್ಕೆ ಮತಭೇದಗಳಿಲ್ಲ. ಜೈನಧರ್ಮದಲ್ಲಿ ಸಿದ್ಧರಿಗೂ ಸಾಧನೆಯ ಅಗತ್ಯವಿದೆ. ಸಾಧಿಸುವುದು ಅಂದರೆ ಇಲ್ಲಿ ತಪಸ್ಸು ಮಾಡುವುದು ಎಂದರ್ಥ.

*ವಿವರಗಳಿಗೆ ನೋಡಿ: ಶ್ರೀ ಎಂ. ಬಿ. ಪಾಟೀಲ್ ೨೦೦೭ ರತ್ನಕರಂಡ ಶ್ರಾವಕಾಚಾರ.*

**೪೭೯. ಪರೀಷಹಗಳು**

ಪೆತ್ತ **ಪರೀಷಹ** ಜಯಮೆ ತಪಂ – ಜನ್ನ

ಕ್ಷುತ್ಪಿ ಪಾಸಾಶೀತೋಷ್ಣದಂ ಶಮಶಕ ನಾಗ್ನ್ಯಾರತಿ ಸ್ತ್ರೀಚರ್ಯಾನಿಷದ್ಯಾ ಶಯ್ಯಾಕ್ರೋಶವಧ ಯಾಚನಾಲಾಭ ರೋಗ ತೃಣ ಸ್ಪರ್ಶಮಲಸತ್ಕಾರ ಪುರಸ್ಕಾರ ಪ್ರಜ್ಞಾ ಜ್ಞಾನಾದರ್ಶನಾನಿ । ಹಸಿವು, ಬಾಯಾರಿಕೆ, ಶೀತ, ಉಷ್ಣ ದಂಶಮಶಕ, ನಗ್ನತೆ, ಅರತಿ, ಸ್ತ್ರೀ, ಚರ್ಯಾ, ನಿಷದ್ಯಾ, ಶಯ್ಯ, ಅಕ್ರೋಶ, ವಧೆ, ಯಾಚನೆ, ಅಲಾಭ, ರೋಗ. ತೃಣಸ್ಪರ್ಶ, ಮಲ, ಸತ್ಕಾರ ಪುರಸ್ಕಾರ, ಪ್ರಜ್ಞಾ, ಅಜ್ಞಾನ ಮತ್ತು ಅದರ್ಶನ ಇವು ಇಪ್ಪತ್ತೆರಡು ಪರೀಷಹಗಳು ಇವು ತಪೋವಿಘ್ನಕಾರಿಗಳು.

*ವಿವರಗಳಿಗೆ ನೋಡಿ: ಶ್ರೀ ಎಂ. ಬಿ. ಪಾಟೀಲ್ ೨೦೧೦ ತತ್ವಾರ್ಥ ಸೂತ್ರ ೯-೯*

**೪೮೦. ಪಶು**

ಈ ಕುರಿತಂತೆ ಮಿರ್ಜಿಯವರು ಈ ರೀತಿಯಲ್ಲಿ ಹೇಳುತ್ತಾರೆ. ಶೈವ ದೃಷ್ಟಿಯು ಜೀವಾತ್ಮರನ್ನು 'ಪಶು' ಎಂದು ಸಂಬೋಧಿಸಿತು. ಈ ಪಶುಗಳು ಮೂರು ಪ್ರಕಾರವಾಗಿರುವವು: ೧) ವಿಜ್ಞಾನಕಲರು, ೨) ಪ್ರಲಯ ಕಲರು, ೩) ಸಕಲರು ಜೈನತತ್ವವು ಸಂಸಾರಿ ಜೀವನಗಳಲ್ಲಿಭವ್ಯ, ಅಭವ್ಯರೆಂದು ಎರಡು ವಿಧವಾಗಿ ವಿಂಗಡಿಸಿದೆ. ಭವ್ಯರಲ್ಲಿ 'ಕಾಲಲಬ್ಧಿ'ಯನ್ನು ಹೊಂದಿದವರು ವಿಶಿಷ್ಟ ತರಗತಿಯವರು. ದೂರಭವ್ಯರು ಇನ್ನೊಂದು ತರಗತಿಯ ಜನರು ವಿಜ್ಞಾನ, ಯೋಗ, ಸನ್ಯಾಸಗಳಿಂದ ಕಾರ್ಮಿಕ ಮಲಗಳನ್ನು ತೊಳೆದುಕೊಂಡು ಕಲೆಗಳ ಸಂಬಂಧವನ್ನು ಕಡಿದೊಗೆದ ಜೀವಾತ್ಮರು ವಿಜ್ಞಾನಕಲರು, ಇವರಲ್ಲಿ ಸಮಾಪ್ತಕಲುಷರೆಂದು ಅಸಮಾಪ್ತ ಕಲುಷರೆಂದೂ ಎರಡು ಪ್ರಕಾರಗಳಿವೆ.

ವಿಜ್ಞಾನಕಲರು ಜೈನದರ್ಶದಲ್ಲಿ ಹೇಳಿದ 'ಕೇವಲಿ'ಗಳಂತೆ ಇರುವರು. ಕೇವಲಿಗಳ ಆತ್ಮನು ಜ್ಞಾನ ದರ್ಶನಗಳಿಗೆ ಇಂದ್ರಿಯ ಮೊದಲಾದವುಗಳು ನೆರವನ್ನು ಅಪೇಕ್ಷಿಸುವುದಿಲ್ಲ. ಅದರಿಂದ ಕೇವಲ ಎನಿಸಿಕೊಳ್ಳುವನು. ಇವನು ಇನ್ನೂ ದೇಹಧಾರಿಯಾಗಿರುವುದರಿಂದ 'ಸಯೋಗಿ' ಎನಿಸುವನು. ಆದರೆ ಘಾತಿಕರ್ಮಗಳಿಂದ ದೂರನಾಗಿರುವುದರಿಂದ 'ಜಿನ' ನೆನಿಸುವನು. ಅವನೇ ಅರಹಂತನು ಇವರಂತೆಯೇ ಸಮಾಪ್ತ ಕಲುಷರು ಶೈವ ದರ್ಶನದ ಪ್ರಕಾರ ವಿದ್ಯೇಶ್ವರರು. ಇವರು ಅನಂತ, ಸೂಕ್ಷ್ಮ, ಶಿವೋತ್ತಮ ಏಕನೇತ್ರ, ಏಕರುದ್ರ, ತ್ರಿಮೂರ್ತಿ, ಶ್ರೀಕಂಠ ಮತ್ತು ಶಿಖಂಡಿಯೆಂದು ಎಂಟು ವಿಧ ಈ ಪ್ರಕಾವನ್ನು ಜೈನರು ಸಿದ್ಧರ ಎಂಟು ಗುಣಗಳೊಡನೆ ಹೋಲಿಸಬಹುದು. ಅವು ೧) ಸಮ್ಯಕ್ತ್ವ, ೨) ದರ್ಶನ, ೩) ಜ್ಞಾನ, ೪) ಅಗುರು ಲಘುತ್ವ (ಜಡವೂ ಅಲ್ಲ ಹಗುರೂ ಅಲ್ಲ), ೫) ಅವಗಾಹನತ್ವ, ೬) ಅನಂತವೀರ್ಯತ್ವ, ೭) ಅವ್ಯಾಬಾಧತ್ವ (ಬಾಧೆಯಿಲ್ಲದ) ಹೀಗಿವೆ. ಈ ಗುಣಗಳಿಂದ ಕೂಡಿದ ಸಿದ್ಧರು ಯಾವ ಕಾರ್ಯವನ್ನು ಮಾಡರು. ಸ್ವಭಾವಸ್ಥಿತರಿವರು. ವಿದ್ಯೇಶ್ವರರು ಸಹ ಪುರುಷರಿಗೆ ಯೋಗ್ಯವಾದ ದೊಡ್ಡ ಅಧಿಕಾರಗಳಲ್ಲಿರುವರು. ಜೈನರ ಅರಹಂತ, ಸಿದ್ಧರ ಅವಸ್ಥೆಗಳಂತೆಯೇ ಶೈವದರ್ಶನದ ಅಸಮಾಪ್ತಕಲುಷ, ಸಮಾಪ್ತಕಲುಷರ ಸ್ಥಿತಿಗಳಿವೆ.

*ವಿವರಗಳಿಗೆ ನೋಡಿ: ಮಿರ್ಜಿ ಅಣ್ಣಾರಾಯ ೨೦೦೬*

*ಮಿರ್ಜಿ ಅಣ್ಣಾರಾಯರ ಆಯ್ದ ಲೇಖನಗಳು ಪುಟ. ೭೦-೭೧.*

*ಗುರುಲಿಂಗಕಾಪಸೆ (ಸಂ ೧) ೨೦೦೬ ಮಧುರಚೆನ್ನರ ಲೇಖನಗಳು*

**೪೮೧. ಪಾಗುಡ**

*ಗಂಧಭಾಜನನೃಪತಿಗೆ **ಪಾಗುಡ** ಮಟ್ಟಿದೊಡಂ............*

*(ಡಿ.ಎಲ್.ಎನ್. ೨೦೦೯ ಪುಟ.೭೮)*

ಅರಸೊತ್ತಿಗೆಯ ಕಾಲದಲ್ಲಿ ಚಾಲ್ತಿಗೆ ಬಂದ ಬಹುಮುಖ್ಯ ಕಲ್ಪನೆಗಳಲ್ಲಿ ಪಾಗುಡ (ಕಾಣಿಕೆ)ಯೂ ಒಂದು. ಪಾಗುಡವೆಂಬ ಪದವನ್ನು ಗಮನಿಸಿದರೆ ಇದು ಕನ್ನಡದ ಪದವಲ್ಲವೆಂಬುದು ಸ್ಪಷ್ಟ. ಪ್ರಾಕೃತದಲ್ಲಿ ಪಾವುಡ ಸಂಸ್ಕೃತದಲ್ಲಿ ಪಾಹುಡ (ಅಷ್ಟ ಪಾಹುಡ)ವೆಂಬ ಜೈನಧರ್ಮದ ಕೃತಿಯಿದೆ. ರಾಜರಿಗೆ ಕಪ್ಪ ಕಾಣಿಕೆಯನ್ನು ಸೋತವರು ನೀಡುತ್ತಾರೆ. ಅದರೊಂದಿಗೆ ತಮ್ಮ ಶರಣಾಗತಿಯನ್ನು ಒಪ್ಪಿಕೊಳ್ಳುತ್ತಾರೆ. ಹೀಗೆ ಶರಣಾದವರು ಅನಂತರ ಸಾಮಂತರಾಗಿಯೋ: ಯಾವುದೋ ಪ್ರಾಂತ್ಯ ಮಾಂಡಲಿಕ ರಾಗಿಯೋ ಉಳಿಯುತ್ತಾರೆ. ಕಾಣಿಕೆಗಳಲ್ಲಿ ಬಹು ವಿಧಗಳಿವೆ: ಗುರು ಕಾಣಿಕೆ- ಗುರುವಿಗೆ ನೀಡುವ ಕಾಣಿಕೆ, ಶಿಷ್ಯ ಭಕ್ತಿ ಮುಖ್ಯ.

೨) ದೇವರಿಗೆ ಕಾಣಿಕೆ-ಭಕ್ತಿಯಿಂದ ದೇವರಿಗೆ ಅರ್ಪಿಸುವುದು. ಇಲ್ಲಿ ಭಕ್ತಿ ಮುಖ್ಯ.

೩) ಭೃತ್ಯನ ಕಾಣಿಕೆ- ಯಜಮಾನನಿಗೆ ಸೇವಕನು ನೀಡುವ ಕಾಣಿಕೆ. ಇಲ್ಲಿ ದಾಸ್ಯ ಎಂಬುದು ಮುಖ್ಯ.

೪) ರಾಜ ಕಾಣಿಕೆ– ರಾಜನಿಗೆ ಪ್ರಜೆಗಳು ನೀಡುವ ಕಾಣಿಕೆ. ಪ್ರಜೆಗಳಿಗೆ ರಕ್ಷಣೆಯನ್ನು ನೀಡಿದ್ದಕ್ಕೆ ಕೃತಜ್ಞತೆ.

**ಪಾಗುಡ, ಪಾವಡ, ಪಾವುಡೆ, ಪಾಹುಡ(ನಾ)**

ಪಾಗುಡ ಎಂದರೆ ಉಡುಗೊರೆ; ಉಪಾಯನ: ಗೌರವಸೂಚಕವಾಗಿ ಕೊಡುವ ಕಾಣಿಕೆ:

*ವಿವರಗಳಿಗೆ ನೋಡಿ: ಜಯಚಂದಭಾಬಡಾ ೨೦೧೦ ಅಷ್ಟಪಾಹುಡ*

**೪೮೨. ಪಾಣಿಗ್ರಹಣ**

*ಬ್ರಾಹ್ಮಣ ಜನಾಂಗದಲ್ಲಿ ಕೈನೀರು ಎರೆದು ಕನ್ಯಾದಾನವನ್ನು ಮಾಡುತ್ತಿದ್ದ ಆಚರಣೆಯ ಉಲ್ಲೇಖವು ವಡ್ಡಾರಾಧನೆಯಲ್ಲಿದೆ. ನಾಗದತ್ತನ ಮನೆಗೆ ಪೋಗಿ ಕೂಸಂ ಬೇಡಿ ಪೆತ್ತಂ ನಾಗದತ್ತನುಮಷ್ಟಾಹ್ನಿಕ ಮಹಾಮಹಿಮೆಯನೆಂಟು ದಿವಸಂ ಮಾಡಿ ಪ್ರಶಸ್ತ ದಿನ ವಾರ, ನಕ್ಷತ್ರ, ಮುಹೂರ್ತ ಹೋರಾಲಗ್ನದೊಳ್ ಕೂಸಿನನುಕೂಲದೊಳ್* **ಪಾಣಿಗ್ರಹಣ** *ಪುರಸ್ಸರ ಸುಕೇಶಿನಿಯಂ ಗಂಧಭಾಜನನೆಂಬರಸಂಗೆ ಕೊಟ್ಟನಿಂತು ಮಹಾವಿಭೂತಿಯಿಂದಂ ಮದುವೆ ನಿಂದು ಗಂಧಭಾಜನ ನೃಪತಿಯುಂ ಸುಕೇಶಿಯೊಳಿಷ್ಟವಿಷಯಕಾಮ ಭೋಗಂಗಳಂ ಪಲಕಾಲಮನುಭವಿಸುತ್ತಿರೆ...............*

*(ಡಿ.ಎಲ್.ಎನ್ ೨೦೦೯ ಪು.೭೭).*

ಪಾಣಿಗ್ರಹಣವೆಂದರೆ ಕೈಹಿಡಿಯುವುದು. ಇಲ್ಲಿ ಗ್ರಹಣವೆಂದರೆ ಹಿಡಿಯುವಿಕೆ, ಪಾಣಿಯೆಂದರೆ ಕೈ, ಪಾಣಿ ಗ್ರಹಣವೆಂದರೆ ವರನು ವಧುವಿನ ಕೈಹಿಡಿಯುವುದು. ಅಗ್ನಿಯ ಸುತ್ತ ವಧುವಿನ ಕೈಹಿಡಿದು ನಡೆಯುವುದು ವಿವಾಹದ ಒಂದು ಸಂಸ್ಕಾರವಿಧಿ.

ಉದಾ: ಚಂದ್ರಗ್ರಹಣ (ರಾಹು ಚಂದ್ರನನ್ನು ಹಿಡಿಯುವುದು.) ಗೋಗ್ರಹಣ. (ಗೋವುಗಳನ್ನು ಹಿಡಿಯುವುದು) ಪ್ರಾಣಿಗ್ರಹಣವೆಂದರೆ ಮದುವೆಯನ್ನು ಸಂಕೇತಿಸುತ್ತದೆ. (ಉದಾ: ಯಯಾತಿ – ದೇವಯಾನಿ ಸಂಬಂಧದಲ್ಲಿ ಯಯಾತಿಯು ದೇವಯಾನಿ ಕೈಹಿಡಿದುದೇ ಮದುವೆಗೆ ಕಾರಣವಾಯಿತು. ಇಲ್ಲಿ ಪಾಣಿಗ್ರಹಣ ಮುಖ್ಯ. ಇದು ಶುಭ, ಚಂದ್ರಗ್ರಹಣ, ಸೂರ್ಯಗ್ರಹಣವೆನ್ನುವಲ್ಲಿ ರಾಹು, ಚಂದ್ರ–ಸೂರ್ಯರನ್ನು ಹಿಡಿಯುತ್ತಾನೆ ಎನ್ನುವುದು ನಂಬಿಕೆ. ಗೋಗ್ರಹಣ ಶುಭವಲ್ಲ.

'ವಡ್ಡಾರಾಧನೆ'ಯಲ್ಲಿ ದೊರೆಯುವ ವಿವರಗಳು. ಮದುವೆಗೆ ಪ್ರಶಸ್ತವಾದ ದಿನ, ವಾರ, ನಕ್ಷತ್ರ, ಲಗ್ನವನ್ನು ನೋಡುವುದು ಹೆಣ್ಣಿನ ಜನ್ಮ ನಕ್ಷತ್ರಗಳನ್ನು ಲೆಕ್ಕ ಹಾಕುವುದು, ಮೂಹೂರ್ತ ನಿಶ್ಚಯಿಸುವುದು ಮದುವೆಯಲ್ಲಿ ಪ್ರಧಾನ ಅಂಶಗಳಾಗಿದ್ದವು. (ಅದೇ) ವಿವಾಹಕ್ಕೆ ದಿನ, ವಾರಗಳನ್ನು ನಿಶ್ಚಯಿಸುವಾಗ 'ಸಮಯೋಗ' 'ಕಲ್ಯಾಣ ಕರಣ'ವು ಮುಖ್ಯವಾದುದಾಗಿತ್ತು ಎಂದು ಪಂಪನು 'ಆದಿಪುರಾಣ'ದಲ್ಲಿ ವರ್ಣಿಸುತ್ತಾನೆ. (ಬಸವರಾಜು ಎಲ್ (ಸಂ) ೧೯೭೬, ೪–೩೦ವ) ವಿವಾಹ ಮಂಟಪದಲ್ಲಿ ಮದುವೆಯ ಕಾರ್ಯವು ನಡೆಯುತ್ತಿತ್ತು. (ಅದೇ ೪–೩೦ವ) ಕೆಯ್ನೀರೆರೆದು ಪಾಣಿಗ್ರಹಣವನ್ನು ಮಾಡಿದ

ವಿಷಯವು 'ಆದಿಪುರಾಣ'ದಲ್ಲಿಯೂ ಉಕ್ತಗೊಂಡಿದೆ.

ಅಂತು ಕೈನೀರೆಱೆದು **ಪಾಣಿಗ್ರಹಣಂ**ಗೆಯಿಸಿದಾಗಳ್........ (ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೪-೪೮ವ)

ಮದುವೆಯ ಸಂದರ್ಭವನ್ನು ಕವಿಯು ಹೀಗೆ ವರ್ಣಿಸುತ್ತಾನೆ. ಕೈನೀರೆರೆದು (ಧಾರೆಯೆರೆದು) ಪಾಣಿಗ್ರಹಣ ಮಾಡಿಸಿ(ಕೈ ಹಿಡಿಯುವಂತೆ ಮಾಡಿಸುವುದು.)

ಪಂಪನ 'ಆದಿಪುರಾಣ'ದಲ್ಲಿ ವಧೂವರರನ್ನು ಕಳುಹಿಸಿ ಕೊಡುವಾಗಿನ ಚಿತ್ರಣವು ಈ ರೀತಿಯಲ್ಲಿದೆ. (ಬಸವರಾಜು. ಎಲ್. (ಸಂ) ೧೯೭೬. ೪-೫೪ವ)

"ಅಂತು ತರಿಸಿ ಮತ್ತಮ್ ಆತ್ಮೀಯ ಸ್ಥಪತಿ ರತ್ನವಿರಚಿತ ಮಣಿಕನಕ ಖಚಿತ ಶಿಬಿಕಾಂದೋಳಾದಿ ಯಾನಂಗಳುಮಂ, ಕನಕಮನ ಯೋಗಳಂಕೃತಂಗಳಾಗಿ ಸೊಗಯಿಸುವ, ಕರಿಯ ಸಿರಿಯ ಮೆಯ್ಯ, ನಿಡಿದ ಕಿವಿಯ ಕುಣಿದು ಮೆಟ್ಟುವ ಬಜ್ಜರಿಗತ್ತೆಗಳುಮಂ ವ್ಯೂಢದೊಳೊಡಂಬಟ್ಟ ಪಿಡಿಗಳುಮಂ, ಮುಳವ ತಿಳಿವ ಗಂಡರ ಪೆಂಡಿರ ನುಡಿಗಳನೆ ಬಂಡಳಿಸುವ ಪುರುಳಿಗಳುಮನ್, ಅಕಾಂಡ ತಾಂಡವಾರಂಭ ಶೌಂಡಶಿಖಂಡಿ ಮಂಡಳಮುಮಂದ ಲೀಲಾಸಸಗಮನಮನ್ ಆಲಸಗಮನೆಯು ಯುರ್ಗುಪದೇಶಂಗೆಯ್ವ ದೀವದ ರಾಜಹಂಸೆಗಳುಮಂ ಕುಬ್ಬ-ವಾಮನ, ಬಧಿರ - ಮೂಕ - ಕಿರಾತೋನ್ಮತ್ತ ಜಡಜನಂಗಳುಮಂ ಗಾಯಕಿ - ವಾದಕ - ನರ್ತಕ - ಕಥಕ - ಪುಣ್ಯಪಾಠಕ - ವೈತಾಳಿನಿಕೆಯುಮಂಕೊಟ್ಟು. ಪಂಡಿತೆಯುಮನ್ ಒಡವೋಪಂತಂ ಮಾಡಿ"

ಮದುವೆಯ ಆಚಾರದ ಕುರಿತಂತೆ ಪಂಪನ ವರ್ಣನೆಗಳಲ್ಲಿ ಕಂಡುಬರುವ ಅಂಶಗಳನ್ನು ಈ ಕೆಳಗಿನಂತೆ ಕ್ರೋಡೀಕರಿಸಬಹುದು:

ಗಂಡು - ಹೆಣ್ಣು ಒಂದೇ ಹಸೆಯ ಮೇಲೆ ಕುಳಿತುಕೊಳ್ಳುವುದು. ಧಾರೆಯೆರೆಯು ವುದು. ಪಾಣಿಗ್ರಹಣ ಕ್ರಿಯೆ.

ಹೆಣ್ಣಿನೊಂದಿಗೆ ಬಳುವಳಿಯನ್ನು ಕೊಡುವುದು.

ಈ ನಾಲ್ಕು ಅಂಶಗಳು ಪರಸ್ಪರ ಪೂರಕವಾದ ಕ್ರಿಯೆಗಳಾಗಿವೆ. ಗಂಡು ಹೆಣ್ಣು ಒಂದೇ ಹಸೆಯಲ್ಲಿ ಕುಳಿತ ಮೇಲೆ ಧಾರೆಯೆರೆಯುವ ಕ್ರಿಯೆಯು ನಡೆಯುತ್ತದೆ. ಧಾರೆಯನ್ನು ಹೆಣ್ಣಿನ ತಂದೆಯೇ ಎರೆಯುತ್ತಾನೆ. ರಾಜಕ್ಕೆ ಆಧಾರವಾಗಿ ಪಂಪನು ಹೇಳುವ "ಕೆಯ್ನೀಜೆದು ಪಾಣಿಗ್ರಹಣಗೆಯ್ದುದಾಗಳೆ" ಎಂಬ ಮಾತನ್ನು ಗಮನಿಸಿದೆ. ಹೆಣ್ಣಿನ ಕೈಯನ್ನು ಹಿಡಿಯುತ್ತಾನೆ. ಅನಂತರ ಹೆಣ್ಣಿನ ತಂದೆಯು ಹೆಣ್ಣಿನೊಂದಿಗೆ ಬಳುವಳಿಯನ್ನು ಕೊಡುತ್ತಾನೆ. ಇದೆಲ್ಲವೂ ಕನ್ಯಾದಾನದ ಪರಿಕಲ್ಪನೆಗೆ ಅನುಗುಣವಾಗಿ ರೂಪುಗೊಂಡಿರುವ ಆಚರಣೆಗಳೇ ಆಗಿವೆ. 'ಚಿಗುರಿನಿಂದ ಕೂಡಿದ ಕಳಸ, ಮಂಗಳವಾದ ವಾದ್ಯ, ಮನೋಹರವಾಗಿರುವ ಮೇಲು ಕಟ್ಟಿನ ಸಾಲುಗಳು, ಸುತ್ತುವರಿದಿದ್ದ ವೇದ ಪಂಡಿತರ ಸಮೂಹ' - ಈ ರೀತಿಯ ವರ್ಣನೆಯು 'ಪಂಪಭಾರತ'ದಲ್ಲಿ ಬರುತ್ತದೆ. (ಅನಂತರಂಗಾಚಾರ್ ಎನ್ (ಅನು) ೧೯೭೭ ೭-೧೦೭) ಇವು ಪಂಪನ ಕಾಲದ

ವೈವಾಹಿಕ ಆಚರಣೆಗಳೆಂದು ತಿಳಿಯಬಹುದು. ಮದುವೆಗೆ ಮುನ್ನ ವಧುವು ತಂದೆ ತಾಯಿಯರಿಗೆ ನಮಸ್ಕರಿಸುವ ಕ್ರಮವು 'ಪಂಪಭಾರತ'ದಲ್ಲಿ ಚಿತ್ರಿತವಾಗಿದೆ. (ಅದೇ ೩-೪೭ವ) ಹೀಗೆ ನಮಸ್ಕರಿಸಿದಾಗ ತಂದೆ - ತಾಯಿಗಳು ಮಗಳಿಗೆ ಮುತ್ತಿನ ಸೊಸೆಯಿಕ್ಕಿದ ವಿಷಯವು ಉಕ್ತವಾಗಿದೆ. (ಅದೇ ೩-೪೮) ಇದು ಕೇವಲ ಶುಭಕಾರ್ಯೈಕೆಯ ಸಂಪ್ರದಾಯವಾಗಿ ರೂಪುಗೊಂಡಿರಬೇಕು.

ಪಾಣಿಗ್ರಹಣವೆಂದರೆ -ಕೈಹಿಡಿಯುವುದು ಎಂದರ್ಥವಾದರೂ ಇದಕ್ಕೆ ಬೇರೆ ಅರ್ಥ ಬರುತ್ತದೆ. ತುಳುವಿನಲ್ಲಿ ಕೈ ಹಿಡಿಯುವುದನ್ನು 'ಕೈಪತ್ತುನೆ'ಯೆಂದು ಒಂದು ಸಂಪ್ರದಾಯವಿದೆ. ಗಂಡಸು ಎರಡನೆಯ ಮದುವೆಯಾದರೆ ಆ ಮದುವೆ 'ಕೈಪತ್ತುನ ಮದ್ಮೆ' ಎಂದು ಕರೆಯುತ್ತಾರೆ. ಇದರಲ್ಲಿ ಕೈಧಾರೆಯೆರೆಯುವುದು ಮುಂತಾದ ಸಂಪ್ರದಾಯಗಳು ಇರುವುದಿಲ್ಲ. ಪಂಪನು ಕೈನೀರು ಎರೆಯುವುದು. ಕೈಹಿಡಿಯುವುದನ್ನು ವಿವರಿಸುತ್ತಾನೆ. ವೈದಿಕ ಸಂಪ್ರದಾಯದಲ್ಲಿ ಬೊಗಸೆಯಲ್ಲಿ ಅಕ್ಕಿಯನ್ನು ಹಿಡಿದುಕೊಂಡು ವಧುವು ಕುಳಿತಿರಬೇಕು. ಕೆಳಗೆ ಹರಿವಾಣವಿರುತ್ತದೆ. ಅವಳ ಬೊಗಸೆಯ ಮೇಲೆ ವರನೂ ಬೊಗಸೆಯಲ್ಲಿ ಅಕ್ಕಿಯನ್ನು ಹಿಡಿದುಕೊಂಡು ಕುಳಿತಿರಬೇಕು. ಅನಂತರ ಅವರ ಕೈಗಳಿಗೆ ಕೊಂಬುಗಿಂಡಿಯಲ್ಲಿ ಮಂತ್ರೋಚ್ಚಾರಣೆಯ ನೀರು ಬಿಡಲಾಗುತ್ತದೆ. ಇದು ಒಂದು ಆಚರಣೆ. ಎರಡನೆಯದಾಗಿ ಹೋಮಕ್ಕೆ ವರನ ಕಿರುಬೆರಳನ್ನು ಹಿಡಿದುಕೊಂಡು ವಧುವು ಮೂರು ಸುತ್ತು ಬರುತ್ತಾಳೆ. ಇದನ್ನು ಪಾಣಿಗ್ರಹಣವೆಂದು ಕರೆಯುತ್ತಾರೆ. ಆದಿ ಪುರಾಣದಲ್ಲಿ ಈ ಚಿತ್ರಣವಿದೆ.

ಕಂಕಣವನ್ನು ಕಟ್ಟುವುದು, ಕೈ ನೀರೆರದು ಕನ್ಯೆಯರ್ನನ್ನು ಕೊಡುವುದು ಮದುವೆಯ ಪದ್ಧತಿಯಲ್ಲಿತ್ತು. ವಿವಾಹಮಂಟಪದಲ್ಲಿ ಕನಕ ಕಳಶದಿಂದ "ಕೈ ನೀರೆರೆದು ಪಾಣಿಗ್ರಹಣ" ವನ್ನು ಮಾಡಿಸುತ್ತಿದ್ದರು. "ಪಸೆಯೊಳ್ ಗುಣಾರ್ಣವನನಾ ದ್ರುಪದಜೆಯನೊಡನೆ ಕುಳ್ಳಿರಿಸಿ... ಕೆಯ್ನೀರೆಱೆದು ಪಾಣಿಗ್ರಹಂಗೆಯ್ಸೆ". ಅರ್ಜುನನಿಗೆ ಸನ್ಯಾಸಿ ವೇಷವನ್ನು ತಪ್ಪಿಸಿದರೂ ವೀರನಾಗಿ ಹೋರಾಟವೇ ಇಲ್ಲದೆ ಕಳ್ಳನಂತೆ ಅವನು ಮಾಡಿದ "ಸುಭದ್ರಾಹರಣ"ವನ್ನು ತಪ್ಪಿಸಲು ಅವನಿಗೆ ಸಾಧ್ಯವಾಗಲಿಲ್ಲ. ಕೊನೆಗೆ ಕೃಷ್ಣನೇ ಕೈ ನೀರೆರೆದು ಅರ್ಜುನ ಸುಭದ್ರೆಯರ ವಿವಾಹವನ್ನು ಮಾಡಿಕೊಡುತ್ತಾನೆ.

ಅರ್ಜುನ ದ್ರೌಪದಿಯರ ವಿವಾಹದ ವರ್ಣನೆಯಲ್ಲಿ "ದಂಪತಿಗಳ್ ಸಪ್ತಾರ್ಚಿಯಂ ಮೂರು ಸೂಳ್ ಬಲವಂದು ನಿಂದಿಂಬಳಿಯುಮಾಕೆ ಪುರೋಹಿತನ ಪೇಳ್ದೋಜೆಯಾಳ್ ಲಾಜೆಯನ್ನಾಗಿ ಕುಂಡದೊಳ್ ಸುರಿದು" ಮುಂತಾದವು ಅಗ್ನಿಗೆ ಪ್ರದಕ್ಷಿಣೆ ಮಾಡಿ ಅರಳನ್ನು ಸುರಿಯುವ ವೈದಿಕ ವಿವಾಹ ಪದ್ಧತಿಯನ್ನೇ ಹೇಳುತ್ತದೆ.

"ಕುಲಾಪವಾದವಾಗೆಯು ಮೆನಗಿನ್ನೇ ದೊರೆ ವಿವಾಹಮಯಸದೊಳಾದೀ ಕಜೆಕರ್ಜೆಪೋಗವೀ ಕೆಯ್ನೀರೊಳ್" ಎಂದು ಸಿ.ವೀರಣ್ಣ ಹೇಳುತ್ತಾರೆ.

ಅಥರ್ವವೇದದಲ್ಲಿ ಪಾಣಿಗ್ರಹಣದ ಕುರಿತು ಹೀಗೆ ಬರುತ್ತದೆ: "ನನ್ನ ದಕ್ಷಿಣ ಹಸ್ತದಲ್ಲಿ(ಬಲಗೈ) ಕ್ರತು ಶಕ್ತಿಯಿದೆ. ಅಂದರೆ ಕರ್ಮ, ಸಂಕಲ್ಪ, ಪುರುಷಾರ್ಥವಿದೆ.

ವಾಮಹಸ್ತದಲ್ಲಿ ಸಫಲತೆ ಇದೆ". ನಾವು ಈ ಲೋಕದಲ್ಲಿ ಇಹ; ಪಿತೃ; ದೇವಲೋಕದ ಋಣವನ್ನು ಕಳೆಯೋಣ. ಆ ಮೂಲಕ ವಿಮುಕ್ತರಾಗೋಣ, ಪಾಣಿಗ್ರಹಣದ ಉದ್ದೇಶವಿದು ಎಂದು ವೇದಗಳಲ್ಲಿ ಬರುತ್ತದೆ.

ಹತ್ತನೆಯ ಶತಮಾನದಲ್ಲಿ ವಿವಾಹದ ಆಚರಣೆಯನ್ನು ಹೇಗೆ ಮಾಡುತ್ತಿದ್ದರು ಎನ್ನುವುದಕ್ಕೆ ಪಂಪನು ದ್ರೌಪದಿಯ ವಿವಾಹ ಪ್ರಸಂಗದಲ್ಲಿ ಕೊಡುವ ವಿವರಣೆಯನ್ನು ಗಮನಿಸಬಹುದು. (ಅದೇ. ೩-೭೪,೭೫ವ) 'ವಿವಾಹಗೃಹದ ಮಧ್ಯೆ ಹಸಿಯ ಮಣ್ಣಿನಿಂದ ಚಚ್ಚೌಕದ ಜಗುಲಿಯಲ್ಲಿ ವಧೂ-ವರರನ್ನು ಕುಳ್ಳಿರಿಸಿದರು. ಹೋಮ ಮಾಡಿಸಿದರು. ಅಗ್ನಿ ಸಮಕ್ಷಮದಲ್ಲಿ ಧಾರೆಯೆರೆದು ಪಾಣಿಗ್ರಹಣ ಮಾಡಿಸಿದರು. ದ್ರೌಪದಿಯ ಕಿರುಬೆರಳನ್ನು ಗುಣಾರ್ಣವನು ಹಿಡಿದುಕೊಂಡು ಅಗ್ನಿ ಮೂರು ಬಾರಿ ಪ್ರದಕ್ಷಿಣೆ ಮಾಡಿದ ಬಳಿಕ ದ್ರೌಪದಿಯು ಪುರೋಹಿತನು ಹೇಳಿದ ಕ್ರಮದಲ್ಲಿ ಲಾಜಹೋಮವನ್ನು ಮಾಡಿದಳು'.

ಇಲ್ಲಿಯ ಆಚರಣೆಗಳು ಮುಖ್ಯವಾಗಿ ವೈದಿಕ ಧರ್ಮದ ಆಶಯವನ್ನು ಪ್ರಕಟಿಸುವಂತಹುದೇ ಆಗಿದೆ. ವಿವಾಹದ ಅನಂತರ ಸ್ಮಾರ್ತ ಅಗ್ನಿಸ್ಥಾಪನೆಯ ವಿಷಯವನ್ನು ದೇವಲನು ಹೇಳುತ್ತಾನೆ. ಅಗ್ನಿಸ್ಥಾಪನೆ, ಅಗ್ನಿಗೆ ಸುತ್ತು ಬರುವುದು - ಇತ್ಯಾದಿಗಳು ಬ್ರಾಹ್ಮಣ ಧರ್ಮದ ಸೂಚಕಗಳಾಗಿವೆ. ಸಪ್ತಾರ್ಚ, ಲಾಜಾಹೋಮ (ಇದನ್ನು ಹೆಣ್ಣೇ ಮಾಡಬೇಕು) ಇತ್ಯಾದಿಗಳನ್ನು ಇಂದಿಗೂ ಬ್ರಾಹ್ಮಣ ಜನಾಂಗದಲ್ಲಿ ಕಾಣಬಹುದು.

ಹೀಗೆ ಗೃಹಿಣಿಯ ಉನ್ನತ ಆದರ್ಶವನ್ನು ಪ್ರತಿಷ್ಠಿತಗೊಳಿಸಿದ ಈ ಸೂಕ್ತದಲ್ಲಿಯೇ ಅಗ್ನಿಸಾಕ್ಷಿಯಾಗಿ ಅಧುವಿನ ಪಾಣಿಗ್ರಹಣ ಮಾಡಿದ ಉಲ್ಲೇಖವಿದೆ. ಋಗ್ವೇದದಲ್ಲಿ ಸ್ತ್ರೀಯರಿಗೆ 'ಗೃಹಸ್ವಾಮಿನಿ', 'ಆನಂದ', ಕಲ್ಯಾಣೀ' ಎಂದು ಸಂಬೋಧಿಸಲಾಗಿದೆ. 'ಜಾಯೇದಸ್ತಮ್, ಕಲ್ಯಾಣೀರ್ಜಾಯಾ ಸುರಾಣಾಂ ಗೃಹೇತೇ (೩-೫೩-೪;೬). ಪುರುಷನ ಜೊತೆಗೆ ಯಜ್ಞಕಾರ್ಯದಲ್ಲಿ ಸಹಭಾಗಿನಿಯಾಗುವ ಅವಕಾಶವನ್ನಿತ್ತು, ಅವಳಿಗೆ ದೈವಿಕ ಹಾಗು ಆತ್ಮಿಕ ಸಾಧನೆಯಲ್ಲಿ ಸಮಾನವಾದ ಅನುಕೂಲವನ್ನುಂಟು ಮಾಡಲಾಗಿದೆ. ಪುರುಷನ ರಾಗದ ಭೋಗದ ಸಾಧನವಾದ ಹೆಣ್ಣು ತನ್ನ ಸುಂದರ ಮಾತುಗಳಿಂದ ಪತಿಯನ್ನು ಆಕರ್ಷಿಸುತ್ತಾಳೆ. 'ಜಾಯಾ ಪತಿಂ ವಹತಿ ವಗ್ನುನಾ' (೧೦-೩೨-೩). ಹಾಗೆಯೇ ಸೋಮರಸವು ಆನಂದಗೊಳಿಸುವಂತೆ ಪತ್ನಿಯು ಪತಿಯನ್ನು ಪ್ರಸನ್ನಗೊಳಿಸುತ್ತಾಳೆ, 'ಜಾಯೇವ ಪತ್ಯಾವಧಿ ಶೇವ ಮಹಂತೇ' (೯-೮೨-೪). ಹೀಗೆ ಹೆಣ್ತನದ ರಾಗಮಯತೆಯನ್ನು ಮಾರ್ಮಿಕವಾಗಿ ಚಿತ್ರಿಸಿದ ಋಗ್ವೇದವು ಹೆಣ್ಣನ್ನು "ಪೃಥಿವಿರೂಪಾ" ಎಂದು ಕರೆದು, ಅವಳ ತಾಯ್ತನದ ಪಾವಿತ್ರ್ಯವನ್ನು ಉಗ್ಗಡಿಸಿದೆ. ಋಗ್ವೇದದಲ್ಲಿ ಸ್ವಯಂವರವಿಧಿಯ ವಿವಾಹದ ಬಗೆಗೆ ಪ್ರಸ್ತಾಪವಿದೆ. ವೇದಗಳಲ್ಲಿ ಉಕ್ತವಾಗಿದೆ. (ಪಂಪ ಭಾರತ ೧-೧೩೪)

ವರನ ಚಿಕ್ಕಮ್ಮ ಮತ್ತು ತಾಯಿ ವಧುವಿಗೆ ಕಸ್ತೂರಿಯ ಬೊಟ್ಟನ್ನು ಇಟ್ಟು, ಮುತ್ತಿನ ಮಂತ್ರಾಕ್ಷತೆಗಳನ್ನು ತಳಿದು, ಹೂಮಾಲೆಯನ್ನು ಇತ್ತು, ಮಣಿಪಾತ್ರೆಗಳಿಮದ

ಕೂಡಿದ ವಿಚಿತ್ರ ವಸ್ತ್ರಾಭರಣಗಳನ್ನು ಕೊಟ್ಟು, ರನ್ನದ ಬಾಗಿನವನ್ನು ಕೊಟ್ಟು ಹರಸುವ ವಿಚಾರವು 'ರಾಮಚಂದ್ರ ಚರಿತ ಪುರಾಣ'ದಲ್ಲಿ ಉಕ್ತವಾಗಿದೆ. (ಹಿರೇಮಠ, ಆರ್.ಸಿ. (ಸಂ) ೧೯೭೫. ೫-೧೨೭) ನಾಗಚಂದ್ರನ ಪ್ರಕಾರ, ಕೈಗೆ ಧಾರೆಯೆರೆಯುವುದು ಸಂತಾನ ವೃಕ್ಷವು ಬೆಳೆಯಲೆಂದು (ಅದೇ ೫-೧೨೭ವ)

ಕೆಲವಡೆಯಲ್ಲಿ ಹೆಣ್ಣಿಗೆ 'ಮಾಂಗಲ್ಯ'ವನ್ನು ಕಟ್ಟುವ ವಿವರಗಳಿವೆ. 'ಕಾಮಿನಿಯರ ಕರಿಮಣಿ ಸರವೆ ಕಪ್ಪು'. (ಪುರಂದರದಾಸ ಕೀರ್ತನೆ ೩-೧೬೧) 'ಅರಗಳಿಗೆ ಪತಿಯಗಲಬಾರದು' ಎಂಬ ಅಚ್ಚಮಂಗಲಸೂತ್ರ ಕಟ್ಟಿ ನಿನ್ನ ಕೊರಳಿಗೆ' (ಪುರಂದರದಾಸ ಕೀರ್ತನೆ ೨-೧೯೬-೨) ಎಂಬ ಮಾತುಗಳು ಅರ್ಥವತ್ತಾಗಿವೆ.

ವಿವಾಹದಲ್ಲಿ ನಡೆಯುತ್ತಿದ್ದ ಈ ರೀತಿಯ ಆಚರಣೆಗಳು ಅಲ್ಪಸ್ವಲ್ಪ ಬದಲಾವಣೆ ಗೊಂಡಿದ್ದರೂ, ಪೂರ್ಣ ಪ್ರಮಾಣದ ಬದಲಾವಣೆಯು ಕಂಡು ಬರುವುದಿಲ್ಲ. ವಿವಾಹದಲ್ಲಿ ನಡೆಯುತ್ತಿದ್ದ ಆಚರಣೆಗಳನ್ನು ಗಮನಿಸಿದಲ್ಲಿ ವಿವಾಹವನ್ನು ಒಂದು ಪವಿತ್ರ ಆಚರಣೆಯಾಗಿ ನಡೆಸುತ್ತಿದ್ದುದು ಕಂಡು ಬರುತ್ತದೆ.

**೪೮೩. ಪಾತ್ರರಿಗೆ ದಾನ**

*ಗೋದಾನಂ, ಭೂದಾನಂ, ಅನ್ನದಾನಂ, ಹಿರಣ್ಯದಾನಂ ಇವೆಲ್ಲವುಂ ಬಾರ್ತೆಯಲ್ಲ. ಸರ್ವದಾನಂಗಳೊಳಭಯಪ್ರದಾನಮೇ ಮುಖ್ಯಮೆಂದು ಬಲ್ಲರ್ ಪೇೞ್ವರ್ (ಕರ್ಣಾಟಕ ಪಂಚತಂತ್ರ, ಭೇದಪ್ರಕರಣ,ವಚನ ೧೦೨)*

ಅಭಯದಾನದ ಪ್ರಾಮುಖ್ಯತೆಯನ್ನು ಕರ್ಣಾಟಕ ಪಂಚತಂತ್ರದಲ್ಲಿ ಹೇಳಲಾಗಿದೆ.

ಗೋದಾನ, ಭೂದಾನ, ಅನ್ನದಾನ, ಚಿನ್ನದಾನದಿಂದ ಯಾವ ಪ್ರಯೋಜನಗಳೂ ಇಲ್ಲ. ಅವು ಕ್ಷಣಕಾಲಕ್ಕೆ ಮಾತ್ರ ಸೀಮಿತ. ಅಭಯದಾನವು ಮನುಷ್ಯನಿಗೆ ದೃಢತೆಯನ್ನು ತಂದುಕೊಡುತ್ತದೆ. ಆತ್ಮವಿಶ್ವಾಸ ಮೂಡಿಸುತ್ತದೆ. ಅಷ್ಟೇ ಅಲ್ಲ, ಸೋತವರಿಗೆ ಅಭಯವು ರಕ್ಷಣೆಯನ್ನು ನೀಡುತ್ತದೆ. ಆದುದರಿಂದ ಅಭಯದಾನವು ಮುಖ್ಯವಾಗಿದೆ.

ಅಪಾತ್ರರಾದವರಿಗೆ ದಾನ ಮಾಡುವುದರಿಂದ ಉಪಯೋಗವಿಲ್ಲ. ಅಪಾತ್ರರಿಗೆ ದಾನ ಮಾಡುವುದರಿಂದ ಪಾಪ ಬರುವುದೇ ಹೊರತು ಮತ್ತೇನೂ ಅಲ್ಲ. ಆದರೆ ಪಾತ್ರರಾದವರಿಗೆ ದಾನ ಮಾಡುವುದರಿಂದ ತನಗೂ ದಾನ ಸ್ವೀಕರಿಸಿದವನಿಗೂ ಪುಣ್ಯ ಸಂಚಯವಾಗುವುದು ಎಂದು ಚಾವುಂಡರಾಯನು ವಿವರಿಸುತ್ತಾನೆ. (ಚಾವುಂಡರಾಯ ಪುರಾಣ-ಮೇಘರಥ ಚರಿತಂ ಪುಟ. ೧೨೭) ಋಗ್ವೇದದಲ್ಲಿಯೂ ದಾನದ ವಿಷಯವು ಬರುತ್ತದೆ. ದಾನಿಯೊಡನೆ ಎಲ್ಲರೂ ಸ್ನೇಹ ಮಾಡಿಕೊಳ್ಳುವರು. ದಾನಿಯು ಅಮೃತತ್ವವನ್ನು ಹೊಂದುತ್ತಾನೆ. ದಾನ ಹೀನನನ್ನು ಅವನ ಗೆಳೆಯರೂ ತೊರೆದಾನು. ಧನದಾನ ಮಾಡುವ ಮತ್ತೊಬ್ಬನ ಸಖ್ಯವನ್ನು ಸಹಾಯಾಪೇಕ್ಷಿ ಮಿತ್ರನು ಹೊಂದಬಹುದು. (ಋಗ್ವೇದ ೧೦-೧೧೭-೩; ೧೦-೧೭-೪; ೧-೧೨೫-೬)

ಪ್ರತ್ಯುಪಕಾರವನ್ನು ಬಯಸಿ ಫಲವನ್ನು ನಿರೀಕ್ಷಿಸಿಕೊಂಡು ಕ್ಲೇಶದಿಂದ ಕೊಡುವ

ದಾನವು ರಾಜಸ. ದೇಶ ಕಾಲವನ್ನು ಲೆಕ್ಕಿಸದೆ ಅಯೋಗ್ಯರಾದವರಿಗೆ ತಿರಸ್ಕಾರದಿಂದ ಕೊಡುವ ದಾನವು ತಾಮಸ ದಾನ. ಫಲಾಕಾಂಕ್ಷೆಯಿಲ್ಲದೆ ನೀಡುವ ದಾನವು ಸಾತ್ವಿಕ ದಾನವಾಗಿದೆ ಎಂದು ಭಗವದ್ಗೀತೆಯಲ್ಲಿ ಬರುತ್ತದೆ.

ವಡ್ಡಾರಾಧನೆಯ ಚಾಣಕ್ಯರಿಸಿಯ ಕಥೆಯಲ್ಲಿ ಬ್ರಾಹ್ಮಣರಿಗೆ ಅಗ್ರಹಾರ (ದತ್ತಿಗ್ರಾಮ) ಕುರಿತು ವಿವರಗಳು ಬರುತ್ತವೆ.

(ಟಿ. ಕೇಶವಭಟ್ಟ. ೨೦೧೦. ಪು. ೩೦೫)

"ನರ್ತಕಿಯರಿಗೆ ಅಂದು ರಾಜನ ಆಶ್ರಯವಿತ್ತು. ಅನೇಕ ರಾಜ ನರ್ತಕಿರಯರು ಪರಂಪರಾಗತವಾಗಿ ರಾಜನ ಓಲಗದಲ್ಲಿ ಸೇವೆ ಸಲ್ಲಿಸುತ್ತಿದ್ದರು. ಅವರಿಗೆ ಉಂಬಳ ರೂಪದಲ್ಲಿ ಪ್ರತಿಫಲ ದೊರೆಯುತ್ತಿತ್ತು" ಎಂದು ಶಿವಾನಂದ ವಿರಕ್ತ ಮಠ ಅವರು ಹೇಳುತ್ತಾರೆ.

ನರ್ತಕಿಯರಿಗೆ ಕೊಡುವ ದಾನವನ್ನು ಉಂಬಳವೆಂದು ಕರೆಯುತ್ತಿದ್ದರು. ಇದರ ಇನ್ನೊಂದು ರೂಪವೆಂದರೆ ದತ್ತಿ. ಒಬ್ಬನು ಇನ್ನೊಬ್ಬನಿಗೆ ತನ್ನ ಆಸ್ತಿಯನ್ನು ದಾನ ಮಾಡುತ್ತವೆ. ಹೀಗೆ ದಾನ ಮಾಡುವಾಗ ಕೆಲವು ನಿಯಮಗಳನ್ನು ಹೇರುತ್ತಾನೆ. ಆ ನಿಯಮದಂತೆ ಆಸ್ತಿಯ ಉತ್ಪನ್ನ ವೆಚ್ಚವಾಗಬೇಕಲ್ಲದೆ ಅದಕ್ಕೆ ವಿರುದ್ಧವಾಗಿ ಆಗ ಕೂಡದೆಂಬ ಬಂಧನವೂ ಇರುತ್ತದೆ. ಹೀಗೆ ಮಾಡಿದ ವ್ಯವಸ್ಥೆಯೇ "ದತ್ತಿ" ಎಂಬ ಹೆಸರಿನಲ್ಲಿ ಬಳಕೆಗೆ ಬರುತ್ತದೆ.

ಜನಪತಿ ಬರವೇಳ್ಪಾ ದೂ
ತನ ಮನಮಂ ಕೊಂಡು ದಾನಸನ್ಮಾನದಿನಿಂ ।
ದಿನ ದಿವಸಮೆ ಬೇಡುವುದಿರ
ದನಂತವೀರ್ಯಂಗೆ ಗಗನಚರಪತಿಸುತೆಯಂ ॥ (ಶಾಂತಿಪುರಾಣಂ ೨-೬೯)

ದಾನ ಸನ್ಮಾನಗಳ ಕುರಿತು ಕವಿಯು ಹೇಳಿದ್ದಾನೆ. ಭಾರತದ ಬಹುತೇಕ ಧರ್ಮಗಳು "ದಾನ"ವನ್ನು ಒಪ್ಪಿವೆ. ದಾನ ಮಾಡಿದರೆ ಪುಣ್ಯ ಬರುತ್ತದೆ. ಆದರಿಸಿ ಸನ್ಮಾನಿಸಿ ಅವರ ಆಶೀರ್ವಾದ ಪಡೆದರೂ ಪುಣ್ಯ ಬರುತ್ತದೆಯೆಂಬ ನಂಬಿಕೆಯು ಮುಖ್ಯವಾಗಿದೆ.

ಋಗ್ವೇದದಲ್ಲಿ ದಾನ ಮಾಡುವುದರ ಬಗೆಗೆ ಗೌರವಾದರಗಳು ವ್ಯಕ್ತವಾಗಿವೆ. ಸಂಹಿತೆಗಳಲ್ಲಿ ಅನೇಕ ಕಡೆ ರಾಜರ ಹೆಸರು. ಅವರ ವಂಶವಿಸ್ತಾರ. ಅವರು ಮಾಡಿದ ದಾನ ವರ್ಣನೆ, ಅವರಿಂದ ದಾನ ಪಡೆದ ಋಷಿಗಳ ವರ್ಣನೆಯು ಬರುತ್ತದೆ. ಇವುಗಳಿಗೆ ಸಂಬಂಧಿಸಿದ ಸ್ತುತಿಗಳಿವೆ. ಇವುಗಳನ್ನು ದಾನ ಸ್ತುತಿಗಳೆಂದು ಕರೆಯುತ್ತಾರೆ. ದಾನಸ್ತುತಿಗಳು ಸಂಪತ್ತಿನ ಅಸಮಾನ ಹಂಚಿಕೆಯನ್ನು ಪರೋಕ್ಷವಾಗಿ ವಿರೋಧಿಸುತ್ತವೆ. ಅನ್ನ ಬೇಡಿ ಬಂದವನಿಗೆ ಅನ್ನ ನೀಡುವವನೇ ನಿಜವಾದ ದಾತ. ಅವನಿಗೆ ಯಜ್ಞ ಫಲಗಳು ಸಿಗುವುವು. ದಾನಿಯೊಡನೆ ಎಲ್ಲರೂ ಸ್ನೇಹ ಮಾಡಿಕೊಳ್ಳುವರು. ಆಪ್ತನಾದ ಗೆಳೆಯನಿಗೆ ಧನಾದಿ ಸಹಾಯ ನಾಡದವನು ಮಿತ್ರನೇ ಅಲ್ಲ. ಅಂಥ ದಾನ ಹೀನನನ್ನು ಅವನ ಗೆಳೆಯನು ತೊರೆದಾನು. ಆಗ ಪ್ರಿಯರಿಂದ ಬಿಡಲ್ಪಟ್ಟ ಅವನ ಮನೆ. ಮನೆಯೆಂದು

ಎನಿಸಿಕೊಳ್ಳಲಾರದು. (ಋಗ್ವೇದ ೧೦-೧೧೭-೪)

ಮನು ಈ ಕೆಳಗಿನ ದಾನ ವಿಧಾನಗಳನ್ನು ಹೇಳಿದ್ದಾನೆ:

ಜ್ಯೋತಿಷ್ಟೋಮಾದಿ ಯಜ್ಞದಲ್ಲಿ ಋತ್ವಿಜನಾಗಿ ವ್ಯಾಪೃತನಾದವನಿಗೆ ಅಲಂಕೃತ ಕನ್ಯಾದಾನವು ದೈವವಿವಾಹವು.

ಬೇಡಿದವನಿಗೆ ಮತ್ಸರವಿಲ್ಲದೆ ಇದ್ದದ್ದು ಕೊಡಬೇಕು. ಆದುದರಿಂದ ಎಂದಾದರೂ ಸತ್ಪಾತ್ರದಾನವಾಗಿ ತನ್ನ ದುರಿತ ನಿವೃತ್ತಿಯಾಗುವುದು.

ಜಲದಾನದಿಂದ ತೃಪ್ತಿಯು, ಅನ್ನದಾನದಿಂದ ಅಕ್ಷಯ ಸುಖವು, ತಿಲದಾನದಿಂದ ಸತ್ಪ್ರಜೆಯು, ದೀಪದಾನದಿಂದ ಉತ್ತಮ ದೃಷ್ಟಿಯು ದಾತೃವಿಗೆ ಲಭಿಸುವುದು.

ಭೂದಾನದಿಂದ ಭೂಮಿಯು, ಹಿರಣ್ಯದಾನದಿಂದ ದೀರ್ಘಾಯುಸ್ಸು, ಗೃಹದಾನ ದಿಂದ ಒಳ್ಳೆ ಮನೆಯು, ಬೆಳ್ಳಿದಾನದಿಂದ ಸೌಂದರ್ಯವು, ಕಾಲಾಂತರದಲ್ಲಿ ಪ್ರಾಪ್ತವಾಗುವುದು.

ವಸ್ತ್ರದಾನದಿಂದ ಚಂದ್ರನು, ಅಶ್ವದಾನದಿಂದ ಅಶ್ವಿನಿದೇವತೆಗಳು, ವೃಷಭದಾನದಿಂದ ಐಶ್ವರ್ಯ ದೇವತೆಯು, ಕರೆಯುವ-ಗೋದಾನದಿಂದ ಸೂರ್ಯನು ತೃಪ್ತಿಯನ್ನು ಹೊಂದುತ್ತಾರೆ.

ವಾಹನ, ಮಂಚಗಳ ದಾನದಿಂದ ಒಳ್ಳೆ ಹೆಂಡತಿ, ಅಭಯ ದಾನದಿಂದ ಐಶ್ವರ್ಯ, ಧಾನ್ಯದಾನದಿಂದ ಸುಖ, ವೇದಾರ್ಥ ದಾನದಿಂದ ಬ್ರಹ್ಮಪ್ರೀತಿ, ಇವುಗಳನ್ನು ಸಂಪಾದಿಸುವನು.

ನೀರು, ಅನ್ನ, ಗೋವು, ಎಮ್ಮೆ, ಬಟ್ಟೆ, ಎಳ್ಳು, ಚಿನ್ನ, ತುಪ್ಪಗಳ ದಾನಕ್ಕಿಂತ ಬ್ರಹ್ಮಜ್ಞಾನ ದಾನವು ಪ್ರಧಾನವು ಬಹುಫಲವುಳ್ಳದು.

*ವಿವರಗಳಿಗೆ ನೋಡಿ: ಶೇಷ ನವರತ್ನ ೨೦೦೮ ಋಗ್ವೇದ ಪುಟ. ೩೭-೩೮.*

*ಡಿ.ವಿ.ಜಿ. ೧೯೬೬ ಭಗವದ್ಗೀತೆ ಶ್ಲೋಕಗಳು – ೧೭ ೫-೬,೨೧,೨೨*

*ಡಾ. ಶಿವಾನಂದ ವಿರಕ್ತಮಠ ೧೯೭೮ ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ ಪುಟ. ೬೧*

*ಶೇಷನವರತ್ನ ೧೯೮೯ ನಾಲ್ಕು ವೇದಗಳು*

*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೪-೨೨೮; ೨೩೦, ೩-೨೮*

**೪೮೪. ಪಾಪ**

*ಅಱೆಯುತ್ತಂ ಕಲ್ಲೊಳ್ ನಾ*
*ರಱಸುವುದುಂ **ಪಾಪ**ಸೂತ್ರದೊಳ್ ಧರ್ಮಮನೋ ।*
*ತಱಸುವುದುಮಿವರೊಳಕ್ಕರ*
*ಮಱಸುವುದುಂ ಭಾವಿಪಂದು ನಿಷ್ಫಳಮಲ್ತೇ ॥*

*(ಸುಕುಮಾರ ಚರಿತಂ ದ್ವಿತೀಯಾಶ್ವಾಸಂ ಪ.ಸಂ. ೨೩)*

ಕಲ್ಲಿನಲ್ಲಿ ನಾರನ್ನು ಅರಸುವುದು, ಪಾಪಸೂತ್ರದಲ್ಲಿ ಧರ್ಮವನ್ನು ಅರಸುವುದು,

ಇಂಥವರಲ್ಲಿ ಅಕ್ಷರವನ್ನು ಅರಸುವುದು ಅಂದರೆ ವಿದ್ಯೆಯನ್ನರಸುವುದು ನಿಷ್ಫಲವೆಂದು ಕವಿಯ ಅಭಿಪ್ರಾಯವಾಗಿದೆ.

'ಆದಿಪುರಾಣ'ದಲ್ಲಿ ಹೆಣ್ಣೊಬ್ಬಳು ತನ್ನ ಕಷ್ಟಕ್ಕೆ ಕಾರಣ ತನ್ನ **'ಪಾಪದ ಫಲ'** ಎಂದು ತನ್ನನ್ನು ತಾನು ಹಳಿದು ಕೊಳ್ಳುತ್ತಾಳೆ. (೩-೩೪) ಮುನಿಗಳಿಗೆ ಅವಮಾನ ಮಾಡಿದರಲ್ಲಿ ಮರು ಜನ್ಮದಲ್ಲಿ ಕೆಟ್ಟ ಅನುಭವವನ್ನು ಪಡೆಯಬೇಕಾಗುತ್ತದೆ ಎಂಬ ವಿಚಾರವೂ ಈ ಕೃತಿಯಲ್ಲಿ ಬರುತ್ತದೆ. ಕೆಟ್ಟ ಜನ್ಮವನ್ನು ಹೋಗಲಾಡಿಸಲು ವ್ರತಾಚರಣೆಯನ್ನು ಮಾಡಬೇಕೆಂದು ಅದೇ ಪ್ರಸಂಗವು ನಿರೂಪಿಸುತ್ತದೆ. (೩-೩೯) ಹೆಣ್ಣು ತಪವಾಚರಿಸಿದರೆ ಅನಂತರದ ಜನ್ಮದಲ್ಲಿ ಆಕೆಯು ಗಂಡಾಗಿ ಹುಟ್ಟುತ್ತಾಳೆ ಎನ್ನುವ ನಂಬಿಕೆಯನ್ನು ಈ ಕಾವ್ಯವು ಹೊಂದಿದೆ. (೩-೫೦ವ) ಇವುಗಳು ಮುಖ್ಯವಾಗಿ ಜೈನ ಧರ್ಮದ ನಂಬಿಕೆಗಳಾಗಿವೆ. 'ಜೈನಧರ್ಮವು ಸ್ತ್ರೀಯರಿಗೆ ಮೋಕ್ಷವಿಲ್ಲವೆಂದು ಹೇಳಿದ್ದರೂ ಅವರು ವ್ರತಗಳನ್ನು ತಪಸ್ಸನ್ನು ಮಾಡಿ ಪುರುಷ ಜನ್ಮಪಡೆದು ಮೋಕ್ಷ ಪಡೆಯಬಹುದೆಂದು ಹೇಳಿತ್ತು ಎಂದು ಹೇಳುತ್ತಾರೆ.

ಜೈನಧರ್ಮವು ಸುಗುಣ ಮತ್ತು ದುರ್ಗುಣವೆಂದು ಬೇರೆ ಮಾಡುತ್ತದೆ. ದುರ್ಗುಣವು ಮರುಜನ್ಮಕ್ಕೆ ಕಾರಣವಾಗುತ್ತದೆ. ಕರ್ಮದೊಂದಿಗೆ ಬೆರೆತ ಜೀವವನ್ನು ಬದ್ಧ ಜೀವವೆಂದು ಕರೆಯುತ್ತಾರೆ. ಪಾಪವೆಂದರೆ ಅಪರಾಧ, ಕೇಡು, ಜೈನಧರ್ಮದ ಪ್ರಕಾರ ಪಾಪವೆನ್ನುವುದು ಅಜೀವ.

ಮಧು, ಮದ್ಯಮಾಂಸ ಸೇವನೆ, ವಧಾನುರಾಗ: (ಹಿಂಸಾರತಿ) ಜಿನಾಗಮದಲ್ಲಿ ಅರುಚಿ: ಕುಟಿಲತೆಗಳು ಪಾಪಹೇತುಗಳಾಗಿವೆ. ಇವು ಜೈನ ಧರ್ಮದ ನಂಬಿಕೆಗಳಾಗಿವೆ ಯೆಂದು ರನ್ನ ಹೇಳುತ್ತಾನೆ.

(ಅಜಿತತೀರ್ಥಂಕರ ಪುರಾಣ ತಿಲಕಂ ೨-೬೮)

*ವಿವರಗಳಿಗೆ ನೋಡಿ: ಎಂ. ಹಿರಿಯಣ್ಣ. ೧೯೯೨*

*ಭಾರತೀಯ ತತ್ವಶಾಸ್ತ್ರದ ರೂಪುರೇಷೆಗಳು ಪುಟ. ೧೭೬*

*ಸಿ. ವೀರಣ್ಣ ೧೯೮೭ ಪ್ರಾಚೀನ ಸಾಹಿತ್ಯ ರಾಜಸತ್ತೆಯ ವೈಭವದ ಕಾಲ ಪುಟ ೬೯*

*ಡಾ. ಟಿ.ವಿ.ವೆಂಕಟಾಚಲಶಾಸ್ತ್ರೀ ೧೯೯೯ ಶ್ರೀವತ್ಸ ನಿಘಂಟು ಪುಟ. ೨೨೪-೨೨೫*

**೪೮೫. ಪಾರದರ**

*ಆಯು ತವೆ **ಪಾರದರಿಗ**ನಪಾಯಮನೆತ್ತಜಿವಂ (ಶಾಂತಿಪುರಾಣ ೫-೫೧)*

ಆಯುಷ್ಯ ಮುಗಿದ ಹಾದರಿಗನು ಅಪಾಯವನ್ನೇನು ಬಲ್ಲನು?

ಸಂಸ್ಕೃತದಲ್ಲಿ ಅಪಾಯವೆಂದರೆ ಅಗಲಿಕೆ; ನಾಶ; ಹಾನಿ; ಕೇಡು, ದುರ್ಘಟನೆಯೆಂಬ ಅರ್ಥವಿದೆ. ಹಾದರಿಗ ಆಯುಷ್ಯ ತೀರಿದ ಬಳಿಕ ಅಪಾಯವನ್ನು ಏನು ತಿಳಿದಾನು? ಹಾದರಿಗನೆಂದರೆ ವಿಷಯಲಂಪಟ. ಹಾದರ ಮಾಡುವವನು. ಅವನಿಗೆ ಅಪಾಯವು (ಶಿಕ್ಷೆ) ತಪ್ಪಿದ್ದಲ್ಲವೆಂಬುದು ಇಲ್ಲಿಯ ಭಾವಾರ್ಥ.

ನೀಚವರ್ಗದವರೊಡನೆ ಇಟ್ಟುಕೊಳ್ಳುವ ಸಂಬಂಧದಿಂದ ಪಶು, ಯಾನ ಇತ್ಯಾದಿಗಳ ಸಂಗದಿಂದ ರಾಜಸೇವೆಯ ಸ್ವೀಕಾರದಿಂದ ಕುಲಗಳು ಅಧೋಗತಿಗೆ ಇಳಿಯುತ್ತವೆ ಎಂದು ಮನುವಿನ ಅಭಿಪ್ರಾಯ.

ಸೇವಕನಾದವನು ಮೊದಲು ಅರಸನಿಗೂ, ಅನಂತರ ಪ್ರಧಾನಿಗೂ, ಅರಸನ ಮಿತ್ರರಿಗೂ, ಧೂರ್ತರಿಗೂ ಭೀತನಾಗಿರಬೇಕು. ಅಲ್ಲದೆ ತನ್ನ ದೈನ್ಯದಿಂದ ಸುಖ ಪಡುವೆನೆಂಬವನು ಲಂಪಟತನದ ಕಷ್ಟವನ್ನು ಸಹಿಸಬೇಕು. ಇಂಥ ಹಗುರವಾದ ಜೀವನೋಪಾಯಕ್ಕಿಂತ ಸ್ವತಂತ್ರವಾಗಿ ಬದುಕುವ ನಾಯಿಯಾಗಿರುವುದು ಲೇಸು ಎಂದು ಕರ್ಣಾಟಕ ಪಂಚತಂತ್ರದಲ್ಲಿ ಬರುತ್ತದೆ (ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ, ೨೩ ಶ್ಲೋಕ ವಚನ).

ಗಂಡನು ಲಂಪಟನಾದಾಗ ಹೆಣ್ಣು ಅದನ್ನು ಪ್ರತಿಭಟಿಸುವ ಚಿತ್ರಣವು ಪ್ರಾಚೀನ ಕನ್ನಡ ಕೃತಿಗಳಲ್ಲಿ ದೊರೆಯುತ್ತವೆ. ವಡ್ಡಾರಾಧನೆಯಲ್ಲಿ, ಜನಮತಿಯೆಂಬ ಗೌಡತಿಯನ್ನು ಅರಸನು ಮದುವೆಯಾಗುತ್ತಾನೆ. ಇದರಿಂದಾಗಿ ಅವನ ಅರಸಿಯು, 'ಎನ್ನಂ ಬಿಸುಟ್ಟರಸಂ ಪೋದೊನೆಂದು' ಆತನ ವಿವಾಹವನ್ನು ಪ್ರತಿಭಟಿಸಿ ಬೇರೊಂದು ಪ್ರಸಾದದಲ್ಲಿರುತ್ತಾಳೆ. (೧೦ ಪು.೨೨೪) ಇದೇ ಕೃತಿಯಲ್ಲಿ ಅಗ್ನಿರಾಜನು ತನ್ನ ಕಿರಿಯ ಮಗಳಾದ ಕೃತ್ತಿಕೆಯನ್ನು ಕಂಡು ಮೋಹಿಸಿ, ಮದುವೆಯಾಗಲಿಚ್ಛಿಸುತ್ತಾನೆ. ಇದನ್ನು ಕೃತ್ತಿಕೆಯ ತಾಯಿಯಾದ ವೀರಮತಿ ಮಹಾದೇವಿಯಲ್ಲಿ ತಿಳಿಸುತ್ತಾನೆ. ಈ ವಿಷಯವನ್ನು ತಿಳಿದು ವ್ಯಸನಗೊಂಡ. ವೀರಮತಿ ಮಹಾದೇವಿಯು ತಪವಾಚರಿಸುತ್ತಾಳೆ. (ಕಾರ್ತಿಕ ಋಷಿಯ ಕತೆ ಪು: ೨೩೧-೨೩೩).

ಪೊನ್ನನ 'ಶಾಂತಿಪುರಾಣ'ದಲ್ಲಿ ಅನಂತ ಶ್ರೀ ಎಂಬವಳನ್ನು ವಜ್ರಾಂಗನೆಂಬವನು ಅಪಹರಿಸಿ ಕೊಂಡೊಯ್ಯುತ್ತಾನೆ. ಈ ಸನ್ನಿವೇಶವನ್ನು ಗಮನಿಸಿದ, ವಜ್ರಾಂಗನ ಪ್ರಾಣೇಶ್ವರಿ ವಜ್ರಮಾಳಿನಿಯು ಅದನ್ನು ಪ್ರತಿಭಟಿಸಿ ವಜ್ರಾಂಗನನ್ನು ಬೆನ್ನಟ್ಟಿಬರುತ್ತಾಳೆ. ಇದರಿಂದ ಗಗನತಳದಲ್ಲಿ ಸಂಚರಿಸುತ್ತಿದ್ದ ವಜ್ರಾಂಗನು ಅನಂತಶ್ರೀಯ ಕೈಯನ್ನು ಬಿಡುತ್ತಾನೆ. (೪-೯೩, ೯೮)

ಅಭಯಘೋಷ ಅರಸನು ಕನಕಲತೆಯೆಂಬ ಮೊದಲ ಪತ್ನಿಯಿದ್ದಾಗಲೂ, ಪೃಥ್ವಿಷೇಣಿಯನ್ನು ಮದುವೆಯಾಗುತ್ತಾನೆ. ಇದರಿಂದ ವ್ಯಥೆಗೊಂಡ ಕನಕಲತೆಯು ಗಂಡನನ್ನು ಒಲಿಸಲು ಮಂತ್ರವಾದವನ್ನು ಉಪಯೋಗಿಸುತ್ತಾಳೆ. ಇದನ್ನು ತಿಳಿದ ಪ್ರಥ್ವಿಷೇಣಿಯು ತಪವಾಚರಿಸುತ್ತಾಳೆ. (೯-೫೦ ವ, ೫೨) 'ಚಾವುಂಡರಾಯ ಪುರಾಣ' ದಲ್ಲಿ ಅಸ್ಪೃಶ್ಯ ಕುಲಸಂಭವ ತನ್ನಳಿಯನು ಗ್ರಾಮ ಮೃಗರೂಪದಿಂ ತನ್ನ ಮಗಳ ಕಾಲ್ಗಳೊಳೆ ಪೊರಳ್ದು ತಿಳಿವಂತೆ ಮಾಡೆ ಮತ್ತಂ ಪೂರ್ವ ಸ್ವರೂಪದೊಳಿರ್ದನಂ ಕಂಡು' ಎಂದು ಬರುತ್ತದೆ. (ಆದಿಪುರಾಣ ಪು.೮೬) ಇದು ಪ್ರತಿಭಟನೆಯ ಅಂಶವನ್ನು ಒಳಗೊಂಡಿದೆ.

ದಾಂಪತ್ಯೇತರ ಲೈಂಗಿಕ ಸಂಬಂಧಗಳನ್ನು ಲಿಂಗತಾರತಮ್ಯಕ್ಕೆ ಅನುಸಾರವಾಗಿಯೂ

ಗುರುತಿಸಲಾಗುತ್ತದೆ. ಗಂಡೊಬ್ಬ ಹೆಣ್ಣನ್ನು ಶಾಶ್ವತವಾಗಿ ಹೊಂದಿದ್ದರೆ ಅವಳನ್ನು 'ಇಟ್ಟುಕೊಂಡವಳು' ಎಂದು ಗುರುತಿಸಲಾಗುತ್ತದೆ. ಹೆಣ್ಣು–ಗಂಡನ್ನು ಹೊಂದಿದ್ದರೆ ಗಂಡು–ಮಿಂಡನಾಗುತ್ತಾನೆ. ಹೆಣ್ಣು–ಗಂಡಸರೊಂದಿಗೆ ಲೈಂಗಿಕ ಸಂಬಂಧ ಹೊಂದಿದ್ದರೆ ಅವಳನ್ನು 'ಸೂಳೆ' ಎನ್ನಲಾಗುತ್ತದೆ.

ಸೂಳೆಯ ಉಲ್ಲೇಖ ಶಾಸನಗಳಲ್ಲಿಯೂ ಬರುತ್ತವೆ. ಉದಾ: ಮಹಾಕೂಟಶಾಸನ.
*ವಿವರಗಳಿಗೆ ನೋಡಿ: ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೪ – ೩, ೭, ೧೫೨*

**೪೪೬. ಪಾರ್ವೊಕ್ಕಲ್**

*ಒಬ್ಬಳೇ ಹೆಂಡತಿ, ಮೂವರ್ ಪುತ್ರರ್, ಎರಡಾರ ಬೆವಸಾಯಂ, ಹತ್ತು ಹಸು ಕಱೆಹ*

*ಮಧ್ಯದೇಶದೊಳ್ ಸುಕ್ಷೇತ್ರಮಪ್ಪ ತಾಣದೊಳಿರ್ಪುದೇ ಸೇವ್ಯಂ (ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ, ೩೬ ವಚನ)*

ಇಲ್ಲಿ ಬೆವಸಾಯ, ಹತ್ತು ಹಸುವಿನ ಕರವು ಕುರಿತು ಪಂಚತಂತ್ರದಲ್ಲಿ ಬರುತ್ತದೆ. ಆದರೆ ವ್ಯವಸಾಯ ಮಾಡುವವನು ಬ್ರಾಹ್ಮಣ ಇದನ್ನು ಗಮನಿಸಬೇಕು.

ಇದನ್ನು ಮಾಮೂಲಿಯಾದ ಅರ್ಥದಲ್ಲಿ 'ಜೀವನೋಪಾಯ'ವೆಂದು ಕರೆಯುತ್ತೇವೆ. ಎರಡನೆಯದಾಗಿ ಬೇಸಾಯ: ಹತ್ತು ಹಸುವಿನ ಕರೆವು ಎಷ್ಟು ಮುಖ್ಯವಾಗಿತ್ತು ಎಂಬುದನ್ನು ಅರ್ಥವಿಸಿಕೊಳ್ಳಬೇಕು. ಬ್ರಾಹ್ಮಣರು ಬೇಸಾಯ ಮಾಡಬಾರದೆಂದು ಸ್ಮೃತಿಗಳು ಹೇಳುತ್ತವೆ.

ಜಾತಿಯ ದೃಷ್ಟಿಯಿಂದ ಬ್ರಾಹ್ಮಣರು ಅತ್ಯಂತ ಮೇಲ್ತುದಿಯಲ್ಲಿದ್ದಾರೆಂದು ನಾವು ಹೇಳುವಾಗಲೂ ಬ್ರಾಹ್ಮಣರಲ್ಲಿರುವ ಬೇರೆ ಬೇರೆ ಶ್ರೇಣೀಕರಣಗಳನ್ನು ಗಮನಿಸಬೇಕು.

೧. ಸನ್ಯಾಸಿಗಳು : ಬ್ರಾಹ್ಮಣರಲ್ಲಿರುವ ಈ ವರ್ಗ ಐಹಿಕ ಸುಖೋಪಭೋಗ ತ್ಯಜಿಸಿರುತ್ತಾರೆ.
೨. ಆಧ್ಯಾತ್ಮಿಕ ಬ್ರಾಹ್ಮಣರು : ಜಗತ್ತಿನೊಂದಿಗೆ ಕನಿಷ್ಠ ಸಂಬಂಧ ಹೊಂದಿರುವವರು.
೩. ವ್ಯಾವಹಾರಿಕ ಬ್ರಾಹ್ಮಣರು: ಪೂಜಾರಿ ವೃತ್ತಿಯಿಂದ ಹೊರಗಿನವರು.
೪. ದೇವಸ್ಥಾನದ ಅರ್ಚಕರು : ದೇವರು ಮತ್ತು ಜನಸಮೂಹದ ನಡುವೆ ಇರುವವರು.
೫. ಉತ್ತರ ಕ್ರಿಯೆಯಲ್ಲಿ ಭಾಗವಹಿಸುವವರು: ಆಧ್ಯಾತ್ಮಿಕ ಮತ್ತು ಲೌಕಿಕದ ಮಧ್ಯೆ.
೬. ಅಡುಗೆಯ ಬ್ರಾಹ್ಮಣರು : ಅಡುಗೆಯ ಕೆಲಸದಲ್ಲಿ ಮಾತ್ರ ಭಾಗವಹಿಸುವವರು.

ಅಂದರೆ ಈ ರೀತಿಯ ಬ್ರಾಹ್ಮಣರ ವರ್ಗೀಕರಣವಲ್ಲದೆ ಬೇರೊಂದು ಮಾದರಿಯೂ ಇದೆ. ಅದನ್ನು ಹವ್ಯಕರು; ಮಾಧ್ವರು; ಕರ್ಹಾಡರು; ಸ್ಥಾನಿಕರು; ಶಿವಳ್ಳಿಯವರು ಇತ್ಯಾದಿ ವರ್ಗಗಳೆಂದು ಕರೆಯುತ್ತಾರೆ. ಬ್ರಾಹ್ಮಣರು ಮೂಲತಃ ಆರಾಧನೆ ಹಾಗೂ ಪೂಜಾರಿ ವೃತ್ತಿಯನ್ನು ನಂಬಿದ್ದರೂ ಅದುವೇ ಅವರ ಜೀವನೋಪಾಯದ ಹಾದಿಯಾಗಿರಲಿಲ್ಲ. (ಪು. ೨೦೫)

ಇದರ ಬಗೆಗೆ ಹೇರಳವಾದ ಉದಾಹರಣೆಗಳು ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ದೊರೆಯುತ್ತವೆ.

*ವಿವರಗಳಿಗೆ ನೋಡಿ: M.N. Srinivas 1987 The dominant caste and other essays*

**೪೮೭. ಪಾವಿತ್ರ್ಯ**

'ವಡ್ಡಾರಾಧನೆ' ಕೃತಿಯಲ್ಲಿ ಅತಿಬಳನ ಹೆಂಡತಿಯನ್ನು ವರ್ಣಿಸುವಾಗ ಅವಳು ಸತ್ಯ ಶೌಚಾಚಾರಗಳಿಂದಲೂ ಇಷ್ಟ ವಿಷಯಗಳಿಂದಲೂ ಕೂಡಿದ್ದಳೆಂದು ಬರುತ್ತದೆ. (ಸುಕುಮಾರ ಸ್ವಾಮಿಯ ಕತೆ: ಪು.೧೦) ಇದೇ ಕೃತಿಯಲ್ಲಿ ಪತ್ನಿಗೆ ಪತಿಯ ಮೇಲಿರುವ ಪ್ರೇಮವು ಜನ್ಮಾಂತರಗಳಲ್ಲಿಯೂ ಬರುತ್ತದೆ ಎನ್ನುವ ಆಶಯವು ಕತೆಯೊಂದರಲ್ಲಿ ಪ್ರಕಟವಾಗಿದೆ. (ಸುಕೌಶಳ ಸ್ವಾಮಿಯ ಕತೆ: ಪು.೭೪) ಮತ್ತೊಂದು ಕತೆಯಲ್ಲಿ 'ಕಾದಲನ ವಿಯೋಗಂ ಕಾರಣಮಾಗೆ ಪ್ರಾಣವಲ್ಲಭನ ಸುರಿಗೆಯಂ ಕೊಂಡು ತನ್ನಂ ತಾನಿಱಿದು ಸತ್ತ ಸುಕೀರ್ತಿಯೆಂಬವಳ ವಿಷಯವು ಬರುತ್ತದೆ. (ಅದೇ ಪು.೭೭) ಈ ಎಲ್ಲಾ ಸಂದರ್ಭಗಳಲ್ಲಿಯೂ ಹೆಂಡತಿಯು ಗಂಡನನ್ನು ಅನುಸರಿಸುತ್ತಾಳೆ ಎನ್ನುವ ನಂಬಿಕೆಯು ಕ್ರಿಯಾಶೀಲವಾಗಿದೆ.

ವಸಿಷ್ಠಸ್ಮೃತಿಯಲ್ಲಿ ಹೆಣ್ಣು ಮೂರು ಜನರ ಒಳಗಾಗಿರುತ್ತಾಳೆ. ಸೋಮ (ಚಂದ್ರ), ಗಂಧರ್ವ (ಆಬಿಡೋ) ಮತ್ತು ಅಗ್ನಿ (ಉಷ್ಣ) ಸೋಮನು ಶುಭ್ರತೆಯನ್ನು ಕೊಡುತ್ತಾನೆ. ಗಂಧರ್ವನು ಒಳ್ಳೆಯ ರಾಗವನ್ನು ಕರುಣಿಸುತ್ತಾನೆ. (ರಾಗ-ವರ್ಣ) ಸೋಮ ಋತುವನ್ನು ಕೊಡುತ್ತಾನೆ. ಅಗ್ನಿಯು ಅಸೌಖ್ಯವನ್ನು ನಿವಾರಿಸುತ್ತಾನೆ. ಆದ್ದರಿಂದ ಹೆಣ್ಣು ಪವಿತ್ರಳಾಗಿರುತ್ತಾಳೆ. (ವಸಿಷ್ಠ ಸ್ಮೃತಿ ೨೩-೧೯,೯)

ಸ್ತ್ರೀಯು ಅಲಂಕೃತಳಾಗಿ ಗಂಡನಿಗೆ ಮನೋಹರಳಾಗದಿದ್ದರೆ ಮನೆಯವರಿಗೂ ತನಗೂ ಸುಖವಿಲ್ಲ. ಸಂತೋಷವಿಲ್ಲ. ಪರಪುರುಷ ಸಂಕ್ರಾತಳಾದರೆ ಪವಿತ್ರತೆಯೂ ಇಲ್ಲ ಎಂದು ಮನುವಿನ ಅಭಿಪ್ರಾಯ. ಅವನು ಶಿಲ್ಪ, ಬಡ್ಡಿಗೆ ಹಣಕೊಡುವುದು, ಸ್ವಜಾತಿಯಲ್ಲಿ ಸಂತತಿಯಿಲ್ಲದೆ ಶೂದ್ರಸ್ತ್ರೀ ಸಂತತಿ ಮಾತ್ರವಿರುವುದು, ಗೋವು-ಕುದುರೆಗಳ ಮಾರಾಟ, ಕೃಷಿ, ರಾಜಸೇವೆಗಳಿಂದ ಕುಲವು ಕೆಡುವುದು. ಮತ್ತು ಅಯಾಜ್ಯಯಾಜನ ನಾಸ್ತಿಕ್ಯಗಳೂ ಭೂಷಣಗಳಲ್ಲ. ಇವುಗಳನ್ನು ಮಾಡುತ್ತಿರುವುದರಿಂದ ಸ್ವಕರ್ಮವನ್ನು ಬಿಟ್ಟಂತಾಗುವುದೆಂಬ ದೋಷವು ಎಂದು ಹೇಳುತ್ತಾನೆ.

ವೇದಶಾಸ್ತ್ರಗಳನ್ನು ಸಮೃದ್ಧವಾಗಿ ಸಂಪಾದಿಸಿಕೊಂಡು ನಿರ್ಧನರಾಗಿದ್ದರೂ ಆ ಕುಲವು ಸತ್ಕುಲವು. ಕೀರ್ತಿಯುಳ್ಳದ್ದು ಎಂದು ಮನು ಪ್ರತಿಪಾದಿಸುತ್ತಾನೆ.

'ಪವಿತ್ರ' ಮತ್ತು 'ಅಪವಿತ್ರ'ವೆನ್ನುವುದು ಕೂಡಾ ಮನಸ್ಸಿನ ಭಾವನೆಗೆ ಸಂಬಂಧಿಸಿದ ವಿಷಯ. ಹಾಗೆಯೇ ಇದು ಸಾಮಾಜಿಕ ವರ್ತನೆಯ ಮೇಲೂ ಪ್ರಭಾವ ಬೀರುತ್ತದೆ. ಅನೇಕ ಸಂದರ್ಭಗಳಲ್ಲಿ 'ಪವಿತ್ರ' ಮತ್ತು 'ಅಪವಿತ್ರ'ವೆಂದು ಕರೆಯುವ ಸಂಗತಿಗಳಿಗೆ ಯಾವ ಆಧಾರವೂ ಇಲ್ಲ. 'ಪವಿತ್ರ'ವೆಂದರೆ ಶುದ್ಧ : ಮಡಿ : ಶುಭವೆನ್ನುವ ಕಲ್ಪನೆಯು

ಇರುವ ಹಾಗೆಯೇ 'ಅಪವಿತ್ರ'ವೆಂದು ಕರೆಯುವುದಕ್ಕೆ 'ಅಶುಭ', 'ಅಮಂಗಲ', 'ಮೈಲಿಗೆ' ಯೆಂಬ ಅರ್ಥವಿದೆ. ಹಾಗೆಯೇ 'ಶೌಚ' – ಅಶೌಚ'ವೆನ್ನುವ ಪರಿಭಾಷೆಯೂ ಚಾಲ್ತಿಯಲ್ಲಿದೆ. ಮಡಿ ಮತ್ತು ಮೈಲಿಗೆಯೆನ್ನುವ ಪರಿಕಲ್ಪನೆಯನ್ನು ಹುಟ್ಟುಹಾಕಿರುವುದು ವೈದಿಕ ಧರ್ಮವೆಂದು ಹೇಳಲಾಗುತ್ತಿದೆ. ಆದರೆ ಮಡ್ಡಿ ಮೈಲಿಗೆಯ ಪರಿಕಲ್ಪನೆಯು ಎಲ್ಲಾ ಜನಾಂಗಗಳಲ್ಲಿ ಇವೆಯೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಉದಾಹರಣೆಗೆ ಬ್ರಾಹ್ಮಣರಲ್ಲಿ 'ಶುಭಕರಣ', 'ಶುಭನಕ್ಷತ್ರ', 'ಶುಭಮಹೂರ್ತ'ದ ಪರಿಕಲ್ಪನೆಯು ಇರುವ ಹಾಗೆಯೇ ಬುಡಕಟ್ಟುಗಳಲ್ಲಿ 'ಶುಭಶಕುನ', 'ಅಪಶಕುನ'ದ ಪರಿಕಲ್ಪನೆಗಳಿವೆ. ಮುಸ್ಲಿಮರಲ್ಲಿಯೂ 'ಹರಮ್' ಎಂದರೆ ಮಡಿಯಿಲ್ಲದ್ದು ಎನ್ನುವ ನಂಬಿಕೆಯಿದೆ. ಇದು ದೈನಂದಿನ ಬದುಕಿನಲ್ಲಿ ಹಾಸುಹೊಕ್ಕಾಗಿರುವ ನಂಬಿಕೆಯೂ ಹೌದು. 'ಶುಭ' ಎನ್ನುವುದು ಒಂದು ಪೂರ್ವಪದ. ಇದನ್ನು ಸೇರಿಸಿಕೊಂಡು ಅನೇಕ ಭಾಷಿಕರಚನೆಗಳಿವೆ. 'ಶುಭಮಹೂರ್ತ' (ಶುಭಕಾಲ) ಶುಭದಿವಸ (ದಿನಕ್ಕೆ ಸಂಬಂಧಿಸಿದ್ದು – ಉದಾ: ಕೆಲವರಿಗೆ ಮಂಗಳವಾರ ಶುಭದಿನವಲ್ಲ) ಶುಭಕಾರ್ಯ (ಕೆಲಸಕ್ಕೆ ಸಂಬಂಧಿಸಿರುವುದು) ಶುಭಸಂಕಲ್ಪ (ಮನಸ್ಸಿಗೆ ಸಂಬಂಧಿಸಿದ್ದು) ಶುಭಾರಂಭ (ಆರಂಭಕ್ಕೆ ಸಂಬಂಧಿಸಿದ್ದು). ಅಶುಭ ಮಹೂರ್ತ (ಮದುವೆಗೆ ಸಂಬಂಧಿಸಿದ್ದು) ಶುಭಯಾತ್ರೆ (ಯಾತ್ರೆಗೆ ಸಂಬಂಧಿಸಿದ್ದು) ಶುಭಶಕುನ (ನಂಬಿಕೆಗೆ ಸಂಬಂಧಿಸಿದ್ದು) – ಹೀಗೆ ಬೇರೆ ಬೇರೆ ಸಂದರ್ಭಗಳನ್ನು ಇವು ಸೂಚಿಸುತ್ತವೆ. ಗ್ರಹಗಳಿಗೆ ಸಂಬಂಧಿಸಿದ ಹಾಗೆ ಕೂಡಾ ಶುಭ ಮತ್ತು ಅಶುಭವೆಂಬ ವರ್ಗೀಕರಣವಿದೆ (ಶನಿ=ಅಶುಭಗ್ರಹ).

ಇದೇ ಮಾದರಿಯಲ್ಲಿ ಶುದ್ಧ ಮತ್ತು ಅಶುದ್ಧ (ಮಡಿ ಮತ್ತು ಮೈಲಿಗೆ)ಯ ಪರಿಕಲ್ಪನೆಯಿದೆ. ಕೆಳಜಾತಿಯ ಜನರ ಸ್ಪರ್ಶ; ಪ್ರಾಣಿಗಳು; ಚರ್ಮದ ವಸ್ತುಗಳು; ಮಾಂಸಾಹಾರ; ಹುಟ್ಟು ಮತ್ತು ಸಾವು – ಅಶುದ್ಧವೆಂದು ತಿಳಿಯಲಾಗಿದೆ.

೧. ಕುಲ – ಕುಟುಂಬ

೨. ಅರ್ಥ – ದೈನಂದಿನ ವ್ಯವಹಾರ

೩. ಶರೀರ – ದೇಹಸಂಬಂಧಿ

ಈ ಮಾದರಿಯ ಪಾವಿತ್ರ್ಯವನ್ನು ಬಾಲದಿಂದಲೇ ತರಬೇತಿಗೊಳಿಸಲಾಗುತ್ತದೆ. ಆದರೆ ಈ ಮಡಿ ಮೈಲಿಗೆಯ ಪರಿಕಲ್ಪನೆಯು ಬೇರೆ ಬೇರೆ ರೀತಿ ಇರುವುದಕ್ಕೆ ಸಾಧ್ಯ.

ಪವಿತ್ರ ಮತ್ತು ಅಪವಿತ್ರವೆಂಬ ಪರಿಭಾಷೆಯು ಸಾಂಸ್ಕೃತಿಕವಾಗಿಯೂ ಮುಖ್ಯವಾದ ಅಂಶವೊಂದನ್ನು ಪ್ರತಿಪಾದಿಸುತ್ತದೆ. 'ಸ್ವ ಸಂಸ್ಕೃತಿ'ಯು ಪವಿತ್ರವೆಂದು ಅನ್ಯಸಂಸ್ಕೃತಿಯನ್ನು 'ಅಪವಿತ್ರ'ವೆಂದು ತಿಳಿಯುವುದರ ಮೂಲಕ 'ಸ್ವಂತ' ಮತ್ತು 'ಅನ್ಯ'ದ ನಡುವೆ ಭಿನ್ನತೆ: ಅಂತರಗಳನ್ನು ಕಾಪಾಡುತ್ತದೆ. 'ಮಡಿ' ಯೆನ್ನುವುದು ಶ್ರೇಷ್ಠ 'ಮೈಲಿಗೆ'ಯು ಕನಿಷ್ಠವೆಂಬ ತಿಳುವಳಿಕೆಯು ಮೂಲತಃ ಮನಸ್ಸು; ದೇಹ; ಸಂಸ್ಕೃತಿ; ನಿಸರ್ಗ; ಗಂಡು;ಹೆಣ್ಣು; ಮಾತುಗಳಿಗೆ ಅನ್ವಯವಾಗುವುದು ಕೂಡಾ ಅಷ್ಟೇ ನಿಜ.

೧. ನಿಸರ್ಗ (ನೈಸಗಿಕ) ಮೈಲಿಗೆ – ಸಂಸ್ಕೃತಿ ಪವಿತ್ರ

೨. ಹೆಣ್ಣು (ಮೈಲಿಗೆ) – ಗಂಡು (ಮಡಿ)
೩. ಸಹಜ ದೇಹ (ಮೈಲಿಗೆ) – ಗಂಡು (ಮಡಿ)
೪. ಅಶ್ಲೀಲ ಮಾತು (ಮೈಲಿಗೆ) – ಸುಸಂಸ್ಕೃತ ಭಾಷೆ (ಮಡಿ)
೫. ಶೂದ್ರ (ಮೈಲಿಗೆ) – ಬ್ರಾಹ್ಮಣ (ಮಡಿ)

ಅನೇಕ ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಇವು ಅಲ್ಲಲ್ಲಿ ಉಲ್ಲೇಖಗೊಂಡಿವೆ.

*ವಿವರಗಳಿಗೆ ನೋಡಿ: Louis Dumont 1999 Hono hericha*
*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೩–೬೨, ೬೪; ೬೬*

**೪೮೮. ಪಿಶಾಚಿಗಳು**

ಸಾಯಣರು ಪಿಶಾಚಿಗಳನ್ನು 'ಕೃತ್ಯಾ' ಎಂದು ಕರೆದಿದ್ದಾರೆ

ವಿಕ್ರಮಾರ್ಜುನ ವಿಜಯ; ಸಾಹಸಭೀಮ ವಿಜಯಗಳಲ್ಲಿ ಬರುವ ಮರುಳುಗಳನ್ನು ನೆನಪಿಸಿಕೊಳ್ಳಬಹುದು.

*ವಿವರಗಳಿಗೆ ನೋಡಿ: ಶೇಷ ನವರತ್ನ ೧೯೮೯ ನಾಲ್ಕು ವೇದಗಳು ಪುಟ. ೧೩೬.*

**೪೮೯. ಪುಂಸವನ**

ರತ್ನ ಸುವರ್ಣವೃಷ್ಟಿಯಂ ಮಾಡುತ್ತಿರಲಿಂದ್ರನಾಜ್ಞೆಯಿಂ ದಿಕ್ಕು ಮಾರಿಯರು ದಿವ್ಯೌಷಧ ಜಲಂಗಳಿಂ.......... ಎಂದು ಬರುತ್ತದೆ. *(ವ್ರತಪೂಜಾ ವಿಧಿ ೧೯೭೫ ಪುಟ.೫೯೭)*

ಗರ್ಭಧಾರಣೆಯು ನಿಶ್ಚಿತವಾದ ಮೇಲೆ ತಾಯಿಗೆ ಶಾರೀರಿಕ ಮತ್ತು ಮಾನಸಿಕ ಚಿಕಿತ್ಸೆಯನ್ನು ನೀಡಲಾಗುತ್ತದೆ. ಗರ್ಭಧಾರಣೆಯಾದ ಮೂರು ಅಥವಾ ನಾಲ್ಕನೆಯ ತಿಂಗಳಲ್ಲಿ ಚಂದ್ರನು ಪುರುಷ ನಕ್ಷತ್ರದಲ್ಲಿರುವಾಗ ಅದರಲ್ಲಿಯೂ ಪುಷ್ಯ ನಕ್ಷತ್ರದಲ್ಲಿರುವ ಯಾವುದಾದರೂ ಒಂದು ದಿನ ಪುಂಸವನವನ್ನು ಆಚರಿಸಲಾಗುವುದು. ಆ ದಿನ ತಾಯಿಯು ಉಪವಾಸವಿರುತ್ತಾಳೆ. ಮತ್ತು ಆಲದ ಮರದ ಕುಡಿಯನ್ನು ಕುಟ್ಟಿ ತೆಗೆದ ರಸವನ್ನು ಆ ರಾತ್ರಿ 'ಹಿರಣ್ಯಗರ್ಭಾಹ' ಮುಂತಾದ ವೇದಮಂತ್ರಗಳನ್ನು ಉಚ್ಚರಿಸುತ್ತಾ ಆಕೆಯ ಮೂಗಿನ ಹೊಳ್ಳೆಯಲ್ಲಿ ಹಾಕುತ್ತಾರೆ. ಪುರುಷ ನಕ್ಷತ್ರದೊಂದಿಗೆ ಚಂದ್ರನ ಸಂಯೋಗವಾಗುವುದು ಗಂಡು ಸಂತಾನ ಇಲ್ಲವೆ ಪೌರುಷವುಳ್ಳ ಶಿಶುವಿನ ಜನನದ ಸೂಚಕ. ಆದ್ದರಿಂದಲೇ ಪುಂಸವನವೆಂದರೆ ಭ್ರೂಣವನ್ನು ಸ್ವಚ್ಛಗೊಳಿಸಲಾಗುತ್ತದೆ. ಸುಶ್ರುತನು ವಟಶುಂಗ, ಸಹದೇವಿ ಮತ್ತು ವಿಶ್ವದೇವ ಎಂಬ ಗಳನ್ನು ಹಾಲಿನೊಂದಿಗೆ ಪುಡಿಮಾಡಿ ಗರ್ಭಿಣಿ ಸ್ತ್ರೀಯ ಮೂಗಿನ ಬಲಹೊಳ್ಳೆಯಲ್ಲಿ ಮೂರು ನಾಲ್ಕು ತೊಟ್ಟನ್ನು ಹಾಕಿದಲ್ಲಿ ಗಂಡು ಸಂತಾನವಾಗುವುದೆಂದು ಹೇಳಿದ್ದಾನೆ.

*ವಿವರಗಳಿಗೆ ನೋಡಿ: ಯುಗಯಾತ್ರೀ ಭಾರತೀಯ ಸಂಸ್ಕೃತಿ ೧೯೭೧ ಸಂಪುಟ. ೨ ಪುಟ. ೨೯೪*
*ಪಂಡಿತ ಎನ್.ಎಲ್. ಭಟ್ಟಾಚಾರ್ಯ ೧೯೭೩ ಸುಶ್ರುತ ಸಂಹಿತಾ*

## ೪೯೦. ಪುತ್ರಕಾಮೇಷ್ಠಿಯಾಗ

.........ಪುತ್ರಕಾಮೇಷಷ್ಟಿಗೆಯ್ದೆ ಹೋಮ ಕುಂಡೆದಲ್ಲಿ........

ದ್ರುಪದನು ದ್ರೋಣನನ್ನು ಸೋಲಿಸಲು; ಅರ್ಜುನನಿಗೆ ತಕ್ಕ ಮಡದಿಯಾಗುವ ಮಗಳನ್ನು ಪಡೆಯಲು ಪುತ್ರಕಾಮೇಷ್ಠಿಯಾಗವನ್ನು ಮಾಡುತ್ತಾನೆ.

(ಪಂಪ ಭಾರತ ೩-೩೨ವ)

ಯಾವುದೇ ಯಜ್ಞ-ಯಾಗಾದಿಗಳನ್ನು: ಪೂಜೆಗಳನ್ನು ಮಾಡುವಾಗ ಪುರೋಹಿತರು ಮೊದಲು ಸಂಕಲ್ಪ ಮಾಡಿಕೊಳ್ಳಿ ಎಂದು ಹೇಳುತ್ತಾರೆ. ಸಂಕಲ್ಪವೆಂದರೆ ಮನಸ್ಸಿನಲ್ಲಿ ತಮ್ಮ ಇಚ್ಚಿತ ಕಾಮನೆಗಳನ್ನು ಸೂಚಿಸುವುದು. ಯಜ್ಞ-ಯಾಗಾದಿಗಳು ಮುಗಿದ ಮೇಲೆ ಪುರೋಹಿತರು "ಸಂಕಲ್ಪ ಸಿದ್ಧಿ ರಸ್ತು" ಎಂದು ಹೇಳುತ್ತಾರೆ. ಅಂದರೆ ಸಂಕಲ್ಪವು ಈಡೇರಲಿ ಎಂಬುದು ಭಾವಾರ್ಥ. ಹಾಗೆಯೇ ಕೆಲವು ಯಾಗಗಳಿಗೆ ನಿರ್ದಿಷ್ಟ ಉದ್ದೇಶವಿರುತ್ತದೆ. ಅದರಂತೆ ಸಂಕಲ್ಪವನ್ನು ಮಾಡಿಕೊಳ್ಳುತ್ತಾರೆ. ಅಶ್ವಮೇಧ ಯಾಗ; ಪುತ್ರಕಾಮೇಷ್ಠಿಯಾಗ ಇದಕ್ಕೆ ಉದಾಹರಣೆಗಳಾಗಿವೆ. ಪುತ್ರ ಕಾಮೇಷ್ಠಿಯಾಗವು ಪುತ್ರಾಕಾಂಕ್ಷೆಗಾಗಿ ನಡೆಸುವ ಯಾಗವಾಗಿದೆ.

## ೪೯೧. ಪುದ್ಗಲ

ಪುದ್ಗಲವೆಂಬ ಪದವನ್ನು ಜೈನರು ವಿಶಿಷ್ಟ ಅರ್ಥದಲ್ಲಿ ಬಳಸುತ್ತಾರೆ. ಪೂರಯತಿ ಗಲಯತಿ ಇತಿ ಪುದ್ಗಲಮ್ - ಎಂದರೆ ಸೇರುವ ಮತ್ತು ಬೇರೆ ಆಗುವಂಥ ಗುಣವುಳ್ಳದ್ದು ಪುದ್ಗಲ. ಇದನ್ನು ಭೌತವಸ್ತು(Matter) ಅಥವಾ ಭೂ ಸಾಮಾನ್ಯವೆಂದು ಕರೆಯಬಹುದು. ಇತರ ದರ್ಶನಗಳಲ್ಲಿನ ಪ್ರಕೃತಿ, ಪ್ರಧಾನ, ಪರಮಾಣುಗಳಿಗೆ ಇದು ಸಂವಾದಿಯಾಗಿದೆ. ಈ ಪುದ್ಗಲಕ್ಕೆ ಎರಡು ರೂಪಗಳಿವೆ - ಪರಮಾಣು ಮತ್ತು ಸ್ಕಂದ ಅಥವಾ ಸಂಘಾತ. ಪುದ್ಗಲದ ವಿಭಾಗ ಮಾಡಲು ಬಾರದ ಸೂಕ್ಷ್ಮವಾದ ರೂಪಕ್ಕೆ ಅಣುವೆಂದು ಹೆಸರು. ನಿರವಯವಿ ಪರಮಾಣುಗಳೆಲ್ಲ ಒಂದೇ ವಿಧವುಗಳೆಂದು ಜೈನರ ವಾದ. ಆದರೂ ಅವು ಅನಂತ ವಸ್ತುಗಳ ಉದಯಕ್ಕೆ ಕಾರಣವಾಗಬಲ್ಲವು. ಪೃಥ್ವೀ, ಆಪ್, ತೇಜಸ್ಸು ಮತ್ತು ವಾಯು ಎಂಬ ನಾಲ್ಕು ವಿಧವಾದ ವ್ಯತ್ಯಾಸಗಳೂ ಕೂಡ ಅನಂತರ ಉತ್ಪನ್ನವಾದವು ಮತ್ತು ಗೌಣ. ವೈಶೇಷಿಕರು ಹೇಳುವಂತೆ ಅವು ಶಾಶ್ವತ ಮತ್ತು ಪ್ರಧಾನವಲ್ಲ. ಪರಮಾಣುಗಳೆಲ್ಲ ಒಂದೇ ರೂಪವಾದವು. ಪರಮಾಣುಗಳೆಲ್ಲ ಒಂದೇ ರೂಪದವಾಗಿದ್ದರೂ ರಸ, ಗಂಧ ಮುಂತಾದ ಲಕ್ಷಣಗಳನ್ನು ಬೆಳೆಸಿಕೊಂಡು ಬೇರೆಯಾಗುತ್ತವೆ. ಇವುಗಳಿಂದಲೇ ಪ್ರಪಂಚವು ಹುಟ್ಟಿದೆ. ಎರಡು ಅಥವಾ ಹೆಚ್ಚು ಪರಮಾಣುಗಳು ಸೇರಿದಾಗ ಸ್ಕಂದ ಅಥವಾ ಸಂಘಾತ ಎನಿಸಿಕೊಳ್ಳುತ್ತದೆ. ದೃಷ್ಟಿಗೋಚರವಾಗುವ ಯಾವತ್ತೂ ವಸ್ತುಗಳು ಈ ವರ್ಗಕ್ಕೆ ಸೇರುತ್ತವೆ.

### ೪೯೨. ಪುನರ್ಜನ್ಮ

*ಅವಸೃಜ ಪುನರಗ್ನೇ ಪಿತೃಭ್ಯೋ ಯಸ್ತ ಆಹುತಿಶ್ಚರತಿ ಸ್ವಧಾಭೀಃ*
*ಆಯುರ್ವಸಾನ ಉಪವೇತು ಶೇಷಃ ಸಂಗಚ್ಛತಾಂ ತನ್ವಾ*
*ಜಾತವೇಧಃ ॥ ೧೦-೧೬-೫*

ಋಗ್ವೇದದಲ್ಲಿ ಹೀಗೆ ಬರುತ್ತದೆ.

"ಅಗ್ನಿಯೇ! ಸಂಸ್ಕಾರಪೂರ್ವಕ ಅಗ್ನಿಯಲ್ಲಿ ಅರ್ಪಿತನಾದವನೂ, ಸ್ವಧಾಕಾರಗಳಿಂದ ಕೊಡಲ್ಪಟ್ಟ ಉದಯಕವುಳ್ಳವನೂ ಆದ ಈ ಮೃತನನ್ನು ಅವನ ಪಿತೃಗಳ ಸಮೀಪಕ್ಕೆ ಕೊಂಡು ಹೋಗು. ಇವನು ಅಯುಸ್ಸಿನಿಂದ ಯುಕ್ತನಾಗಿ ಶರೀರ ಹೊಂದಲಿ. ಎಲೈ ಜಾತವೇದನೆ, ನಿನ್ನ ಕೃಪೆಯಿಂದ ಇವನಿಗೆ ಶರೀರವು ಪ್ರಾಪ್ತವಾಗಲಿ".

*ವಿವರಗಳಿಗೆ ನೋಡಿ: ಶೇಷ ನವರತ್ನ ೨೦೦೮ ಋಗ್ವೇದ ಪುಟ. ೯೫.*

### ೪೯೩. ಪುನರ್ ವಿವಾಹ

ಪುನಭೂಣ ಎಂದರೆ ಎರಡನೆಯ ಸಲ ಮದುವೆಯಾದವಳು **ಪುನರೂಢಾ** ಎಂದೂ ಕರೆಯುತ್ತಾರೆ.

ಹೆಂಗಸಿನ ಪುನರ್ವಿವಾಹವನ್ನು ಕೌಟಿಲ್ಯನು ಒಪ್ಪುತ್ತಾನೆ.

ಮನು ಹೀಗೆ ಹೇಳುತ್ತಾನೆ: ಗರ್ಭಿಣಿಯಾಗದ ಹೆಣ್ಣನ್ನು ಎಂಟು ವರ್ಷ, ಹುಟ್ಟಿ ಬೆಳೆಯುವ ಸಾಯುವ ಸಂತಾನ ಹೆರುವವಳನ್ನು ಹತ್ತು ವರ್ಷ, ಕೇವಲ ಹೆಣ್ಣು ಹಡೆಯುವವಳನ್ನು ಹನ್ನೊಂದು ವರ್ಷಗಳವರೆಗೆ ಅನುಭವಿಸಿದ ಮೇಲೆ ಗಂಡ ಬೇರೆ ಮದುವೆಯಾಗಬಹುದು.

ಗಂಡನು ಎರಡನೆಯ ಮದುವೆಯಾದಾಗ ಮೊದಲನೆಯವಳು ಸಿಟ್ಟುಗೊಂಡರೆ ಅವಳನ್ನು ಹಗ್ಗದಿಂದ ಬಿಗಿಯಬೇಕು ಅಥವಾ ತವರು ಮನೆಯಲ್ಲಿ ಅವಳನ್ನು ಬಿಡಬೇಕು.

ಹೆಣ್ಣಿಗೆ ಲೈಂಗಿಕ ಸ್ವಾತಂತ್ರ್ಯವಿಲ್ಲ. ಆದ್ದರಿಂದ ಅವಳಿಗೆ ಪುನರ್ವಿವಾಹವಿಲ್ಲ.

ಮದ್ಯಪಾನ ಮಾಡುವ ಕೆಟ್ಟ ನಡತೆಯ, ಚಂಡಿಯಾದ, ರೋಗಿಯಾದ, ಹೆಂಡತಿಯನ್ನು ಬಿಟ್ಟು ಗಂಡನು ಬೇರೆ ಮದುವೆಯಾಗಬೇಕು.

*ವಿವರಗಳಿಗೆ : ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೫-೧೫೮, ೧೬೦, ೯-೬೫, ೯-೮೨*
*ಎಂ. ವಿ. ಕೃಷ್ಣರಾವ್ ೧೯೫೩ ಕೌಟಿಲ್ಯ*

### ೪೯೪. ಪುರಂಧ್ರಿಯರು

ಮಲಯುದ 'ಭಿಲ್ಲ(ಬಿಲ್ಲವ) ಪುರಂಧ್ರಿಯರು. ದಿನಾಲು ತಮ್ಮ ಅಡುಗೆಗೆ ಸುಡುತ್ತಿರುವ ಚಂದನತರು ಕಾಷ್ಠಗಳ ನರುಗಂಪಿಗೆ' ಮನಸೋತು ಮಲೆನಾಡಿನಲ್ಲಿ (ಮಾಳವದಲ್ಲಿ) ಕಾಲೂರಿರಬೇಕು. ಮಲೆನಾಡು ಮಾಳವಾ ಆಯಿತು ಎಂದು ಶಂಬಾ ಹೇಳುತ್ತಾರೆ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೧ ಪುಟ. ೧೭*

೪೯೫. ಪುರುಷಾರ್ಥ

ಪುರುಷಾರ್ಥತ್ರಿತಯಮನವ
ಧರಿಸದೆ ವೈರಾಗ್ಯಮೇಕೆ ಪುಟ್ಟಿದುದೋ ಚೆ
ಚ್ಚರಮೆಂಬುದನಾಂ ಪೋಗಿಯೆ
ನೆರೆದಲ್ಲಿಯಮಾತ್ಯಮುಖ್ಯಸುತನೊಳ್ ತಿಳಿವೆಂ

(ಕರ್ಣಾಟಕ ಕಾದಂಬರಿ, ೮-೧೨೦)

ಪುರುಷಾರ್ಥಗಳು ನಾಲ್ಕು, ಧರ್ಮ, ಅರ್ಥ, ಕಾಮ, ಮೋಕ್ಷವು ಅಂತಿಮವಾದುದು. ಅದಕ್ಕೆ ಪೂರಕವಾಗಿ ಧರ್ಮ, ಅರ್ಥ (ಹಣ) ಕಾಮ ಇರಬೇಕೆಂದು ಧರ್ಮಶಾಸ್ತ್ರಗಳು ಹೇಳುತ್ತವೆ.

ಮನುಷ್ಯಂ ಪುರುಷಾರ್ಥಸಿದ್ಧಿಯಂ ಮಾಡದಂದು, ಅಲಬ್ಧಲಾಭಂ ಪರಿರಕ್ಷಣಂ ರಕ್ಷಿತವಿವರ್ಧನಂವರ್ಧಿತತೀರ್ಥ

ಪ್ರತಿಪಾದನಮೆಂಬ ಚತುರ್ವಿಧ ಪುರುಷಾರ್ಥವೃತ್ತಿಯಾಗದೆಂದು (ಕರ್ಣಾಟಕ ಪಂಚತಂತ್ರ, ೭೩ ವಚನ, ಭೇದ ಪ್ರಕರಣ)

ಮನುಷ್ಯನು ಪುರುಷಾರ್ಥ ಸಿದ್ಧಿಯನ್ನು ಸಾಧಿಸಬೇಕು. ಪುರುಷಾರ್ಥಗಳು ನಾಲ್ಕು

೧. ಪಡೆಯದುದನ್ನು ಪಡೆಯುವುದು
೨. ಪಡೆದುದನ್ನು ರಕ್ಷಿಸಿಕೊಳ್ಳುವುದು
೩. ರಕ್ಷಿಸಿದುದನ್ನು ವೃದ್ಧಿಪಡಿಸುವುದು
೪. ವೃದ್ಧಿಪಡಿಸಿದುದನ್ನು ಸರಿಯಾಗಿ ವಿನಿಯೋಗಿಸುವುದು.

*ವಿವರಗಳಿಗೆ ನೋಡಿ: ಪಿ.ವಿ. ಕಾಣೆ ೨೦೦೩ ಧರ್ಮಶಾಸ್ತ್ರದ ಇತಿಹಾಸ*

೪೯೬. ಪುರೋಹಿತ

ಪುರೋಹಿತನೆಂದರೆ ಪುರಕ್ಕೆ ಹಿತವನ್ನು ಉಂಟು ಮಾಡುವವನು ಎಂದು ಮಾತ್ರ ಅರ್ಥವಲ್ಲ. ಅವನು ಮರದ ಕೆಲಸವನ್ನೋ ಗಾರೆಯ ಕೆಲಸವನ್ನೋ ಮಾಡಲಾರ ಎಂಬುದು ಕೂಡಾ ಅರ್ಥವೇ.

*ವಿವರಗಳಿಗೆ ನೋಡಿ: Romila Thapar 1975 The Past and Prejudice P. 31*

ಚರ್ಮಕಾರ, ಕಾವಲಿನವನು, ಕೋಶಾಧ್ಯಕ್ಷ

೪೯೭. ಪುಲಿಗೆರೆ

ಮಾರ್ಗಕಾರನ ಹೇಳಿಕೆ. "ರಾಜಧಾನಿಯ ಪಟವಹ ಸಾಜದ ಪುಲಿಗೆರೆಯ ತಿರುಳ ಕನ್ನಡದೊಳ್

ಇದು ಸ್ಥಳನಾಮ. ಆದರೆ ಚಾರಿತ್ರಿಕವಾಗಿ ಇದಕ್ಕೆ ಮಹತ್ವವಿದೆ.

ಕಿಸುವೊಳಲ್=ಬಿಜಾಪುರ ಜಿಲ್ಲೆಯ ಈಗಿನ ಪಟ್ಟದಕಲ್ಲು; ಕೊಪಣ=ಈಗಿನ ಕೊಪ್ಪಳ,

ಗದಗು ಬಳ್ಳಾರಿ ನಡುವಣ ರೈಲು ನಿಲ್ದಾಣ: ಪುಲಿಗೆರೆ=ಧಾರವಾಡ ಜಿಲ್ಲೆಯ(ಈಗಿನ) ಲಕ್ಷೇಶ್ವರ: ಒಂಕುಂದ=ಬೆಳಗಾವಿ ಜಿಲ್ಲೆಯಲ್ಲಿನ(ಈಗಿನ) ಒಕ್ಕುಂದ. ಈ ನಾಲ್ಕು ಪಟ್ಟಣಗಳ ನಡುವಣ ನಾಡೆ ಸಂಪೂರ್ಣವಾಗಿ ಅಚ್ಚಗನ್ನಡ ಮಾತಾಡುವ ಜನರ ಪ್ರದೇಶವಾಗಿತ್ತು ಎಂದು"

**೪೯೮. ಪುಷ್ಪದರ್ಶನ**

.......ಇಕ್ಷು ಪುಷ್ಪದವೊಲೆನ್ನಯ ನಿಷ್ಫಲ **ಪುಷ್ಪ ದರ್ಶನಂ**...........

*(ಪಂಪ ಭಾರತ ೧-೧೧೭)*

ರಜಸ್ವಲೆಯಾದ ಅನಂತರ ಗಂಡನನ್ನು ಸೇರುವುದರಿಂದ ಪುತ್ರಲಾಭವೆನ್ನುವುದು. ಇಲ್ಲಿಯ ಗಮನಾರ್ಹ ಅಂಶವಾಗಿದೆ. ರಜೋದರ್ಶನವು ನಿಷ್ಫಲವಾಗಬಾರದು. ಇದಕ್ಕೆ ಪೂರಕವಾಗಿ ಕುಂತಿಯು ಕಬ್ಬಿನ ಹೂವಿನಂತೆ ತನ್ನ ರಜಸ್ವಲೆ ತನವು ನಿಷ್ಫಲವಾಯಿತು ಎಂದು ಹೇಳುತ್ತಾಳೆ. ರಜಸ್ವಲೆಯಾದ ಸ್ತ್ರೀಯನ್ನು ಮುಟ್ಟಬಾರದು ಎನ್ನುವ ನಂಬಿಕೆಯು ಪಂಪಭಾರತದಲ್ಲಿ ಬಂದಿದೆ. (೭-೪೭)

ರಜೋದರ್ಶನದಿಂದ ಆರಂಭಿಸಿ ಹದಿನಾರು ದಿನ ಪರ್ಯಂತ ಋತು ಕಾಲವು. ಆದರೆ ಋತುವು (ರಜಸ್ಸು ಅತ್ಯಲ್ಪವಾಗಿ) ಪ್ರತ್ಯಕ್ಷವಾಗದೆ ಗರ್ಭಧಾರಣೆ ಆದುದು ತುಂಬ ಇದೆ. ಇದು ಪ್ರಥಮ ದ್ವಿತೀಯಾದಿ ಗರ್ಭಗಳಲ್ಲಿ ಸಾಮಾನ್ಯ.

ಎಂದು ಮನು ಹೇಳುತ್ತಾನೆ. ರಜೋದರ್ಶನ ಕಾಲದಿಂದ ಮೊದಲಿನ ನಾಲ್ಕು, ಹನ್ನೊಂದು, ಹದಿಮೂರು ಎಂದು ಆರು ರಾತ್ರಿಗಳು ಪ್ರಶಸ್ತವಲ್ಲ. ರಜಸ್ಸಿನ ಆರಂಭವು ರಾತ್ರಿಯಾದಾಗ ದಿನಕಾಲವು ಅಸ್ತವ್ಯಸ್ತವಾಗುವುದು. ದೈಹಿಕವಾಗಿ ವ್ಯತ್ಯಾಸವು ಇರುವುದರಿಂದ ಇದು ಸಾಮಾನ್ಯ ವಿಷಯವು. ಸಂತತಿಯ ಕ್ಷೇಮ ವಿಚಾರವನ್ನು ಹಿಂದೆ ಮಾಡಿ ಆಗಿದೆ.

೬-೮-೧೦-೧೨-೧೪-೧೬ನೆಯ ರಾತ್ರಿಗಳಲ್ಲಿ ಜನಿಸಿದ ಗರ್ಭವು ಗಂಡು, ೫-೭-೯-೧೫ನೆಯ ರಾತ್ರಿಗಳಲ್ಲಿ ಸ್ತ್ರೀಪ್ರಜೆಯು ಎಂದು ಸಿದ್ಧಾಂತವು ಎನ್ನುವುದು ಮನುವಿನ ಅಭಿಪ್ರಾಯ. ಅವನು ಮತ್ತೊಂದು ಕಡೆ ಹೀಗೆ ಹೇಳಿದ್ದಾನೆ: ತನ್ನ ಸ್ತ್ರೀಯು ರಜಸ್ವಲೆಯಾದಾಗ ಅವಳ ಎಲ್ಲ ತರದ ಸಂಬಂಧವನ್ನು ಬಿಡಬೇಕು.

ರಜಸ್ವಲಾ ಸಂಗವನ್ನು ಬಿಟ್ಟರೆ ಬುದ್ಧಿ, ವರ್ಚಸ್ಸು, ಬಲ ನೇತ್ರಶಕ್ತಿ, ಆಯುಸ್ಸು ಕ್ಷೀಣವಾಗದೆ ವೃದ್ಧಿಯಾಗುವುದು.

ರಜಸ್ವಲಾ ಸ್ತ್ರೀಯೊಡನೆ ಮಾತಾಡಬಾರದು. (ಆಮಂತ್ರಣ) ವರಣ ಮಾಡದೆ ಯಜ್ಞಕ್ಕೆ ಹೋಗಬಾರದು.

ಆದರೆ ಹುಡುಗಿಯು ಋತುಮತಿಯಾಗಿ ಮೂರು ವರ್ಷ ಕಾದಿದ್ದ ಮೇಲೆ ತನಗೆ ಅನುರೂಪ ಪತಿಯನ್ನು ತಾನು ವರಿಸಬಹುದು. ಆಮೇಲೆ ಹಿರಿಯರನ್ನು ನಿರೀಕ್ಷಿಸುವುದು ಬೇಡ.

ಋತು ಕಾಲದಲ್ಲಿ ರಾಣಿಗೆ ಋತ್ವಿಜರು ಇಂದ್ರಾ ಬಾರ್ಹಸ್ಪತ ಚರುವನ್ನು ಕೊಡಬೇಕು. ಗರ್ಭ ಮತ್ತು ಪ್ರಸವ ಕೌಮಾರಭೃತ್ಯ ಶುಶ್ರೂಶೆಯನ್ನು ಮಾಡಬೇಕು. ಪುರೋಹಿತನು ಪುತ್ರನನ್ನು ಸಂಸ್ಕರಿಸಬೇಕು. ಪ್ರೌಢನಾದ ಮೇಲೆ ವಿದ್ಯಾವಿನಯಶೀಲವನ್ನಾಗಿಸಬೇಕು ಎಂದು ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಬರುತ್ತದೆ.

*ವಿವರಗಳಿಗೆ ನೋಡಿ: ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭*

*ಮನುಸ್ಮೃತಿ ೩-೪೬;೪೮, ೪-೪೦;೪೧, ೪-೫೭, ೯-೯೦*

*ಶ್ರೀ ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳು ೨೦೧೧ ಕೌಟಿಲ್ಯನ ಅರ್ಥಶಾಸ್ತ್ರ ಪುಟ. ೧೩*

**೪೯೯. ಪೂರ್ವಭವಸ್ಮರಣೆ**

*"ಪೂರ್ವಭವಸ್ಮರಣೆ" (ಆದಿಪುರಾಣ ೩-೨೨ ವ)*

ಗಂಡ ಹೆಂಡಿರ ಸಂಬಂಧವು ಜನ್ಮಾಂತರಕ್ಕೂ ಬರುತ್ತದೆ. ಎಂಬುದಕ್ಕೆ ಪಂಪನ ಕಾವ್ಯದಲ್ಲಿ ಸ್ವಯಂ ಪ್ರಭೆ ಮತ್ತು ಲಲಿತಾಂಗ, ಶ್ರೀಮತಿ ಮತ್ತು ವಜ್ರಜಂಘರ ದಾಂಪತ್ಯದ ಉದಾಹರಣೆಯನ್ನು ಸಾಕ್ಷ್ಯವಾಗಿ ಕೊಡಲಾಗಿದೆ. ಶ್ರೀಮತಿಯು ತನ್ನ ಪೂರ್ವಭವದ ಗಂಡನನ್ನು ಸೇರುವುದಕ್ಕಾಗಿ ತಹತಹಿಸುವ ಚಿತ್ರಣವೂ ಬಂದಿದೆ.(ಆದಿಪುರಾಣ ೯೨-೭೭ವ, ೩-೨, ೩-೪, ೫೨೪)

ಈ ಚಿತ್ರಣವು ಪಾತಿವ್ರತ್ಯದ, ಗಂಡನ ಹಿತಾಸಕ್ತಿಯನ್ನು ರಕ್ಷಿಸುವುದಕ್ಕಾಗಿ ಬಂದಿರುವ ವಿಚಾರವಾಗಿದೆ. ವೈದಿಕ ಧರ್ಮಕ್ಕೆ ಪ್ರತಿಸಂಸ್ಕೃತಿಯಾಗಿ ಮೂಡಿದ ಜೈನಧರ್ಮವು ಕೂಡಾ 'ಏಕಪತಿತ್ವ', ಪಾತಿವ್ರತ್ಯದ ಮೇಲೆ ನಂಬಿಕೆ ಮುಂತಾದವುಗಳನ್ನು ಒತ್ತಾಯಿಸಿರುವುದಕ್ಕೆ ಮೇಲಿನ ವಿಚಾರವು ಸ್ಪಷ್ಟವಾದ ನಿದರ್ಶನವಾಗಿದೆ.

ಜನ್ಮಾಂತರದ ಕರ್ಮದ ಫಲದಿಂದ ಹೊಲತಿಯಾಗಿ ಹುಟ್ಟಿದ ಒಬ್ಬಳಿಗೆ ಮುನಿ ಯೊಬ್ಬನು ಶ್ರಾವಕ ವ್ರತವನ್ನು ಕರುಣಿಸಿದ ವಿಚಾರವು ಬರುತ್ತದೆ. ಅವಳು ಅಹಿಂಸಾದಿ ವ್ರತವನ್ನು ಕೈಗೊಳ್ಳುತ್ತಾಳೆ ಎಂದು 'ವಡ್ಡಾರಾಧನೆ'ಯು ಹೇಳುತ್ತದೆ (೧-ಪು. ೨೬. ಪು. ೩೦). ಶ್ರೇಣಿಕೃತ ಜಾತಿವ್ಯವಸ್ಥೆಯಲ್ಲಿ ಅತ್ಯಂತ ಕೆಳಜಾತಿಯಲ್ಲಿ ಇರುವ ಹೊಲತಿಯೊಬ್ಬಳಿಗೆ ಧಾರ್ಮಿಕ ಅಧಿಕಾರವನ್ನು ಕೊಟ್ಟು, ಅವಳನ್ನು ಜೈನಧರ್ಮಕ್ಕೆ ಪರಿವರ್ತಿಸಿರುವುದು ಇಲ್ಲಿಯ ಮೂಲ ಆಶಯವಾಗಿದೆ. ಈ ರೀತಿಯ ವ್ರತವನ್ನು ಕೊಡುವುದು ಸಾಮಾಜಿಕ ಪರಿವರ್ತನೆಯ ಒಂದು ಕ್ರಿಯಾತ್ಮಕ ಅಂಶವಾಗಿದೆ. ಧಾರ್ಮಿಕ ಸಂವಹನಕ್ಕೆ ಕೆಳವರ್ಗದ ಸ್ತ್ರೀಯರನ್ನು ಜೈನಧರ್ಮವು ಬಳಸಿಕೊಂಡಿರುವುದನ್ನು ಮೇಲಿನ ಘಟನೆಯು ಹೇಳುತ್ತದೆ. ಈ ಮೂಲಕ ವೈದಿಕ ಧರ್ಮಕ್ಕೆ ಪ್ರತಿಭಟನೆಯೂ ಇಲ್ಲಿ ವ್ಯಕ್ತವಾಗುತ್ತದೆ.

**೫೦೦. ಪೂರ್ವರಂಗ**

*ರಾಜಾದಿಮನುಜಸಭೆಗಂ ಮೆಚಿಯಲೆಂದು ಶುದ್ಧವಿಚಿತ್ರಮೆಂಬ* ***ಪೂರ್ವರಂಗ***

*ಪ್ರಸಂಗದೊಳ್ ಚರ್ಚರಪೂಜಾಮಂಗಳ ಪದೋಚ್ಚಾರಣ ಪುಷ್ಪಾಂಜಲಿ ವಿಕ್ಷೇಪಣಾದಿನಾಂದಿವಿಧಿಯಂ ನಿರ್ವರ್ತಿಸಿ ದೃಶ್ಯಶ್ರವ್ಯದೃಢಮಾತ್ರಾದಿ ಪ್ರಯೋಗಂಗಳೊಳಂ*

*(ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೭ -೧೧೫ ವ)*

ನಾಟಕವೆಂದರೆ ಲೋಕವೃತ್ತಾನುಕರಣ ಅಥವಾ ಕೃತಾನುಕರಣ. ಪಂಪ ಅದನ್ನಿಲ್ಲಿ ಪ್ರಸ್ತಾವಿಸಿದ್ದಾನೆ.

"ಇದು ರಂಗದಲ್ಲಿ ಎಲ್ಲಕ್ಕಿಂತ ಮುಂಚೆ('ಪೂರ್ವ') ಪ್ರಯೋಗಿಸಲ್ಪಡುವುದರಿಂದ ಇದಕ್ಕೆ 'ಪೂರ್ವರಂಗ' ಎಂಬ ಹೆಸರು. ತೆರೆಯ ಹಿಂದೆ ಇದನ್ನು ಗೀತ-ವಾದ್ಯಗಳಿಂದ ಪ್ರಾರಂಭಿಸಿ ತೆರೆಯನ್ನು ತೆಗೆದ ಮೇಲೆ ನೃತ್ತ-ಗೀತಗಳಿಂದ ಮುಂದೆ ಸಾಗಿಸಬೇಕು. ಅನೇಕ ತರದ ಚಾರೀಗಳನ್ನು ಬಳಸಿ ದೇವತೆಗಳ ಸ್ತುತಿ ಮಾಡಿ ನಾಂದೀ ಶ್ಲೋಕವನ್ನು ಪಠಿಸಬೇಕು. ಇದರಿಂದ ನಾಟಕದ ಪ್ರಾರಂಭ ಎಂಬುದಕ್ಕೆ ಇದಕ್ಕೆ ಉತ್ಥಾಪನ ಎಂಬ ಹೆಸರು; ತರುವಾಯ ಪರಿವರ್ತನ, ಎಂದರೆ ಸುತ್ತಲೂ ದೇವತೆಗಳನ್ನು ಕುಣಿಯುತ್ತ ವಂದಿಸುವುದು. ಮುಂದೆ ಅಭಿನಯದಿಂದ ಪ್ರಾರಂಭ, ಇದಕ್ಕೆ ರಂಗದ್ವಾರ ಎಂಬ ಹೆಸರು (ನಾಟಕದ ಬಾಗಿಲು). ಗೀತವಾದ್ಯಗಳಿಂದ ದೇವತೆಗಳು ಸಂತುಷ್ಟರಾಗುವರು, ದೈತ್ಯ-ದಾನವರು ಓಡಿ ಹೋಗುವರು, ವಿಘ್ನಗಳ ನಾಶವಾಗುವುದು, ವಾದ್ಯಮೇಳದಲ್ಲಿ ಲಯ ನಿಂತಾಗ ಪ್ರದಕ್ಷಿಣೆ, ಒಂದನೆಯ ಮತ್ತು ಎರಡನೆಯ ಲಯಸ್ಥಗಿತಗಳ ನಡುವೆ ಸೂತ್ರಧಾರನು ಪ್ರವೇಶಿಸುತ್ತಾನೆ; ಪುಷ್ಪಾಂಜಲಿಗಳಾದ, ಮತ್ತು ಒಬ್ಬ ಕಮಂಡಲು ಇನ್ನೊಬ್ಬ ಜರ್ಜರ ಹಿಡಿದುಕೊಂಡ ಇಬ್ಬರು ಪಾರಿಪಾರ್ಶ್ವಕರು (ಸೂತ್ರಧಾರನ ಜೊತೆಯ ನಟರು)ಪ್ರವೇಶಿಸುವರು. ಸೂತ್ರಧಾರನು ಅವರ ಮಧ್ಯದಲ್ಲಿ ನಿಲ್ಲುವನು. ಮೂವ್ವರೂ ಹೂಗಳನ್ನು ಚೆಲ್ಲಿ, ಮೂರು ಪ್ರದಕ್ಷಿಣೆ ಹಾಕುತ್ತ ವಂದಿಸುವರು. ಆಮೇಲೆ (ಅವರು ಕುಣಿಯುವ, ಅದರ ಜೊತೆಯ ಸಂಗೀತದ ವಿವರಣೆಯಾಗಿ) ಪೂರ್ವ-ದಕ್ಷಿಣ-ಪಶ್ಚಿಮ-ಉತ್ತರ ದಿಕ್ಪಾಲಕರನ್ನು ವಂದಿಸುವರು (ಇಲ್ಲಿ ಗೀತ ವಾದ್ಯಗಳ ಸೂಕ್ಷ್ಮಗಳ ವರ್ಣನೆ ಇದೆ). ಸೂತ್ರಧಾರನು ನಾಂದೀ ಶ್ಲೋಕವನ್ನು ಪಠಿಸುವನು. ದೇವತಾ ಸ್ತೋತ್ರ ಜರ್ಜರ ಸ್ತೋತ್ರಗಳಾದ ಮೇಲೆ ಪಾರಿಪಾರ್ಶ್ವಕರು. ಹಸ್ತಪಾದಗಳ ಪ್ರಚಾರ (ಎಂದರೆ ಕರಣ) ಬೇರೆ ಬೇರೆ ರಂಗಸ್ಥಲಕ್ಕೆ ಬೇರೆ ಬೇರೆ ಕಾಲದಲ್ಲಿರುವುದು. ಇದಾದ ಮೇಲೆ ಪಾತ್ರಗಳು ನಿಷ್ಕ್ರಮಿಸುವುವು. ಇದು ಶುದ್ಧ ಪೂರ್ವರಂಗ. ಮುಂದೆ ನರ್ತಕಿಯರು ಪ್ರವೇಶಿಸಿದಾಗ ಇದೇ ಮಿಶ್ರ ಇಲ್ಲವೆ ಚಿತ್ರ ಪೂರ್ವರಂಗ ಎನ್ನಿಸುವುದು. ಮುಗಿದ ಮೇಲೆ ಸೂತ್ರಧಾರನು ನಿಷ್ಕ್ರಮಿಸುವನು."

*ವಿವರಗಳಿಗೆ : ಆಮೂರ ಜಿ. ಎಸ್. ೨೦೦೬ ಶ್ರೀರಂಗ ಸಾರಸ್ವತ (ಸಂಪುಟ. ೮) ಪುಟ. ೬೦೧-೬೦೨.*

**೫೦೧. ಪೂರ್ವಾಂಗಗಳು**

*ಎಂಟು **ಪೂರ್ವಾಂಗಗಳೆಂದು** ಚಾವುಂಡರಾಯ ಪುರಾಣದಲ್ಲಿ ಬರುತ್ತದೆ.*

*(ಅಭಿನಂದನ ಪುರಾಣಂ ಪುಟ.೧೦೮)*

ನಿರ್ಭಯನಿಗೆ ನಿಃಶಂಕಿತ ಅಂಗವಿರುತ್ತದೆ. ಕರ್ಮಫಲದ ಇಚ್ಛೆ ಮಾಡುವುದಿಲ್ಲವೋ ಅದು ನಿಃಕಾಂಕ್ಷಿತ ಅಂಗ; ತಮ್ಮಲ್ಲಿ ತಮ್ಮ ಗುಣದ ದೊಡ್ಡಸ್ತಿಕೆಯ ಬುದ್ಧಿಯಿಂದ ತಮ್ಮನ್ನು ಶ್ರೇಷ್ಠವೆಂದು ಮನ್ನಿಸಿ ಪರದಲ್ಲಿ ಬುದ್ಧಿಯಿರುವುದು ಅದನ್ನು ವಿಚಿಕಿತ್ಸೆಯೆಂದು ಹೇಳುತ್ತಾರೆ. ಇದನ್ನು ನಿರ್ವಿಚಿಕಿತ್ಸೆ ಅಂಗವೆಂದು ಕರೆಯುತ್ತಾರೆ. ಯಥಾರ್ಥ ದೃಷ್ಟಿಯಿದ್ದರೆ ಅಮೂಢ ಅಂಗವೆಂದು ಕರೆಯುತ್ತಾರೆ. ಆತ್ಮಶಕ್ತಿಯನ್ನು ಹೆಚ್ಚಿಸುವುದು ಉಪಗೂಹನವೆಂದು ಕರೆಯುತ್ತಾರೆ. ಧರ್ಮಸ್ಥಾಪನೆಗೊಳಿಸುವುದು ಸ್ಥಿತಿಕರಣದ ಅಂಗ. "ಯಾವ ಕಪಟ ಭಾವನೆಯೂ ಇಲ್ಲದೆ ಸದ್ಭಾವನೆಯಿಂದ ಧರ್ಮಬಂಧುವಿಗೆ ಯೋಗ್ಯತೆಗೆ ತಕ್ಕಂತೆ ಆದರ ಸತ್ಕಾರಗಳನ್ನು ಮಾಡುವುದೇ ವಾತ್ಸಲ್ಯಾಂಗ ಜಿನ ಧರ್ಮದ ಉದ್ಯೋತ ಮಾಡುವುದು ಪ್ರಭಾವನಾ ಅಂಗ. ಇವು ಎಂಟು ಪೂರ್ವಾಂಗಗಳು.

**೫೦೨. ಪೃಥ್ವಿ**

ಈ ಭೂಮಿಯು ಮೊದಲು ಪೃಥುರಾಜನಿಂದ ಆಳಲ್ಪಟ್ಟಿದೆ. **ಪೃಥು**ವಿನ ಹೆಂಡತಿಯೆಂದೇ ಭೂಮಿಯನ್ನು ಹೇಳುವರು. ಮುಳ್ಳುಗಿಡ ಕಡಿದವನು ಹೊಲದ ಹಕ್ಕುದಾರನು. ಬಾಣ ಹೊಡೆದವನಿಗೆ ಮೃಗದ ಹಕ್ಕು. ಇದರಂತೆ ವಿವಾಹವಾದವನು ಹೆಣ್ಣಿಗೆ ಹಕ್ಕುದಾರನು. ಅಕ್ರಮಸಂಬಂಧವು ಸ್ವತ್ವವನ್ನು ಉಂಟು ಮಾಡುವುದಿಲ್ಲ.

*ವಿವರಗಳಿಗೆ ನೋಡಿ: ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ-೪೪*

**೫೦೩. ಪೆಂಡತಿ**

*ಪೆಂಡಿರ ಮಾತಂ ಸಲೆ ಕೈ*
*ಕೊಂಡವರಭಿಮತದೆ ನಡೆವನಪ್ಪೊಡೆ ಗಂಡಂ ।*
*ಗಂಡನಣಮಾಗಲಜೆಯಂ*
*ಭಂಡಂ ಮೇಣ್ ಷಂಡನಕ್ಕುಮಾ ಚಂಡಾಲಂ ॥ (ಪು.೧೦೮)*

*(ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ, ೨೨೧)*

ಹೆಂಡಿರ ಮಾತನ್ನು ಕೇಳಿ ಅವರ ಅಭಿಪ್ರಾಯದಂತೆ ನಡೆಯುವ ಗಂಡನು ಭಂಡ, ಷಂಡ ಮತ್ತು ಚಂಡಾಲರಿಗೆ ಸಮನಾಗುತ್ತಾನೆ. ಹೆಂಡಿರ ಮಾತನ್ನು ಕೇಳಬಾರದು ಎನ್ನುವುದಕ್ಕೆ ಇಲ್ಲಿ ಧ್ವನಿತ ಅರ್ಥವಿದೆ. ಹೆಂಗಸರು ಚಂಚಲ ಸ್ವಭಾವದವರು. ಹೆಂಗಸರು ನಂಬಿಕೆಗೆ ಅರ್ಹರಲ್ಲವೆಂಬ ಮಾತು ದುರ್ಗಸಿಂಹನ ಪಂಚತಂತ್ರದಲ್ಲಿದೆ.

ಎಲ್ಲ ಸಮಯದಲ್ಲೂ ಸ್ತ್ರೀಗೆ ರಕ್ಷಣೆ ನೀಡಬೇಕು. ರಕ್ಷಣೆ ನೀಡದಿದ್ದರೆ ಎರಡೂ ಕುಟುಂಬಗಳಿಗೆ ದುಃಖ ತಪ್ಪಿದ್ದಲ್ಲ. ರೋಗ, ಹೆಂಡ, ಜೂಜಿಗೆ ಬಲಿಯಾದ ಗಂಡನ ಸೇವೆ ಮಾಡದ ಹೆಂಡತಿಯನ್ನು ಅಲಂಕಾರ ಹಾಗೂ ಹಾಸಿಗೆ ನೀಡದೆ ಮೂರು ತಿಂಗಳವರೆಗೆ ನರಳಿಸಬೇಕು ಎಂದು ಮನು ಹೇಳುತ್ತಾನೆ.

ವಿವರಗಳಿಗೆ ನೋಡಿ: ಚಕ್ರಕೋಡಿ ಈಶ್ವರಶಾಸ್ತ್ರಿ 1967 ಮನುಸ್ಮೃತಿ 9-5, 9-78.

**೫೦೪. ಪೆಂಡಿರು ಪೆಂಡಿರೊಳೆಂತು ಬೆರೆಸುವುದು**

*ಬಂಡಣದೊಳನ್ನನೋಡಿಸಿ*
*ಕೊಂಡುಯ್ದಂ ನಿನ್ನನಾ ಸರಿತ್ಸುತನಾನುಂ ।*
*ಪೆಂಡತಿಯೆನಾದೆನದಱಿಂ*
***ಪೆಂಡಿರ್ ಪೆಂಡಿರೊಳದೆಂತು ಬೆರಸುವರಬಲೇ ॥***

*(ವಿಕ್ರಮಾರ್ಜುನವಿಜಯ ೧-೭೬)*

ಸ್ವಯಂವರ ಮಂಟಪದಲ್ಲಿ ನೆರೆದ ರಾಜಪುತ್ರರನ್ನೆಲ್ಲ ಜಯಿಸಿದ ಭೀಷ್ಮನು ತನ್ನನ್ನು ವರಿಸದುದರಿಂದ ಖಿನ್ನಳಾದ ಅಂಬೆ, ಮೊದಲು ತನಗುಂಗುರವಿಟ್ಟ ಸಾಲ್ವಲನೆಡೆಗೈದಿ, ತನ್ನನ್ನು ವರಿಸಬೇಕೆಂದು ಪ್ರಾರ್ಥಿಸಿದಳು. ಆಗ ಅಭಿಮಾನದ ಮೂರ್ತಿಯಾದ ಆ ವೀರಾಗ್ರೇಸರನೆಂದ ಮಾತಿದು. ಈ ಪದ್ಯದಲ್ಲಿ 'ಆನುಂ ಪೆಂಡತಿಯೆನಾದೆ'ನೆಂಬ ಭಾಗದವರೆಗೆ ಅಷ್ಟೊಂದು ಹೊಳಪು ತೋರುವುದಿಲ್ಲ. ಆದರೆ ತನ್ನನ್ನು 'ಪೆಂಡತಿ'ಯನ್ನಾಗಿ ಮಾಡಿದ ಮೇಲೆ 'ಪಂಡಿರ್ ಪೆಂಡಿರೊಳದೆಂತು ಕೂಡುವುದಬಲೇ' ಎಂದೆಳೆದ ಜೀವರೇಖೆ ಪದ್ಯಕ್ಕೆ ಮಾತ್ರವಲ್ಲ. ಸಾಲ್ವಲನ ಜೀವನ ಚಿತ್ರಕ್ಕೇ ಕಳೆಗೊಟ್ಟಿರುವುದನ್ನು ಭಾವಿಸಿರಿ. ತನ್ನಲ್ಲಿ ಆ ರಾಜಪುತ್ರಿಗವಹೇಳನವನ್ನುಂಟುಮಾಡಲಿಕ್ಕಾಗಿ, ತನ್ನ ನೋರೆಗೇ ಲಜ್ಜಾ ಸ್ವರೂಪದ ಮಸಿಯನ್ನು ಬಳಿದುಕೊಂಡ ಮಾತದು. ಆದರಿಂದ, ಅನ್ಯರೆದೆಯಲ್ಲಿ ಹಾಸ್ಯ, ಅವಳಂತರದಲ್ಲಿ ಜುಗುಪ್ಸೆ, ಎಲ್ಲೆಡೆಯಲ್ಲಿಯೂ ಸತ್ಯ, ಎಂಬವುಗಳನ್ನು ಲೇಪಿಸಿದ ಪದ್ಯವಿದು ನೂತನ ವಾದೊಂದು ರಸಾಹನವೇ ಆಗಿದೆ ಎನ್ನಬಹುದ. ಅದನ್ನಾಡುವ ಸಾಲ್ವಲನ ಮೋರೆ ಸೋಲದಿಂದ ಮರಾಣಚ್ಛಾಯೆಯನ್ನೇ ಹೊಂದಿರಬಹುದಾದರೂ, ಆ ಮಾತು ಪುರಾಣಚ್ಛಾಯೆಗೊಂಡಿಲ್ಲ. ವೀರತ್ವವೆಂಬುದು ತಾತ್ಕಾಲಿಕವಾದ ಸೋಲಗೆಲವುಗಳಲ್ಲಿರುವುದಲ್ಲ, ದೃಢನಿಶ್ಚಯದ ಅಂತರಂಗದಲ್ಲಿ. ಇಂತ ಗುಣವೀಗ ಆರ್ಥಿಕ ಕಾಂತಿ. ಪಂಪನ 'ವಿಕ್ರಮಾರ್ಜುನ ವಿಜಯ'ದಲ್ಲಂತೂ ಈ ಕಾಂತಿ ಎಲ್ಲೆಲ್ಲಿಯೂ ಹರಡಿ ಹಬ್ಬಿದೆ ಎನ್ನಬೇಕು.

ಮುಳಿಯ ತಿಮ್ಮಪ್ಪಯ್ಯನವರು ಪಂಪ ಭಾರತದ ಈ ಪ್ರಸಂಗದ ಕಡೆಗೆ ವಿಶೇಷ ಚರ್ಚೆಯನ್ನು ಮಾಡಿರುವುದು ಗಮನಾರ್ಹ.

*ವಿವರಗಳಿಗೆ ನೋಡಿ: ಮುಳಿಯ ತಿಮ್ಮಪ್ಪಯ್ಯ ೨೦೦೬ ನಾಡೋಜಪಂಪ*

**೫೦೫. ಪೆಣ್ಬುಯ್ಯಲ್ (ಪರಸ್ತ್ರೀ ಅಪಹರಣ)**

*ಅನ್ಯಾಯದಿಂ ಪರಸ್ತ್ರೀಹರಣಂಗೆಯ್ದಂ*
*ಮಹಾಪಾತಕನೆನೆಂದು ತನ್ನಂ ತಾನಾದಮಾನುಂ ನಿಂದಿಸಿ...........*

*(ಡಿ.ಎಲ್.ಎನ್.೨೦೦೯ ವಡ್ಡಾರಾಧನೆ ಪು.೧೦೮).*

ಪರಸ್ತ್ರೀ ಅಪಹರಣ ಎನ್ನುವುದು ಇಲ್ಲಿ ಮುಖ್ಯ. ಇದು ಪೆಣ್ಬುಯ್ಯಲ್ ಎಂಬುದನ್ನು ಸೂಚಿಸುತ್ತದೆ.

ಪೊನ್ನನ ಶಾಂತಿಪುರಾಣದಲ್ಲಿ ಸ್ತ್ರೀ ಅಪಹರಣದ ವಿಷಯ ಮತ್ತು ಕೊಡಗೂಸಿನ ಸಂಗತಿಯು ಬರುತ್ತದೆ.

(ಶಾಂತಿಪುರಾಣಂ ೩-೮೧ ವ)

ಪೆಣ್ ಎಂದರೆ ಹೆಣ್ಣು, ಪುಯ್ಯಲ್ ಅಂದರೆ ಅಪಹರಣ ಕಾಲದಲ್ಲಿನ ಅಳು. ಹೆಣ್ಣನ್ನು ಅಪಹರಿಸುವಾಗ ಹೆಣ್ಣು ಅಳುವುದನ್ನು ಅವಳ ಆರ್ತಧ್ವನಿಯನ್ನು ಪೆಣ್ಬುಯ್ಯಲ್ ಸೂಚಿಸುತ್ತದೆ.

ತಮ್ಮ ಶತ್ರುಗಳನ್ನು ಸದೆಬಡಿದು ಅವರ ಮೇಲೆ ಮತ್ತೂ ಸೇಡು ತೀರಿಸಿಕೊಳ್ಳುವ ಸಲುವಾಗಿ ಗೆಲುವಿನತ್ತ ಹೊರಟವರು ಸೋತವರ ಊರುಗಳ ಮೇಲೆ ಬೀಳುತ್ತಿದ್ದರು. ಇಂತಹ ಸಮಯಗಳಲ್ಲಿ ಅಸಹಾಯಕರಾದ ಹೆಣ್ಣುಮಕ್ಕಳು ಅಪಮಾನಕ್ಕೆ ಗುರಿಯಾಗುತ್ತಿದ್ದರು. ಅಷ್ಟೇ ಅಲ್ಲ, ಮನೆಗಳು ದರೋಡೆಗೆ ಒಳಗಾಗುತ್ತಿದ್ದವು.

ಶೇಷಶಾಸ್ತ್ರಿ ಹೀಗೆ ಹೇಳುತ್ತಾರೆ:

ಹೆಂಗಸರನ್ನು ಮಾನಭಂಗ ಮಾಡಲು ಯತ್ನಿಸಿದಾಗ ಅವರು ರಕ್ಷಣೆಗಾಗಿ ಕೂಗಿಕೊಳ್ಳುತ್ತಿದ್ದರು. ಇದನ್ನು ಕೇಳಿ ಸಹಿಸಲಾರದ ಗಂಡಸರು ಶಕ್ತಿಮೀರಿ ತಮ್ಮ ಪರಾಕ್ರಮವನ್ನು ತೋರುತ್ತಿದ್ದರು. ಶಾಸನಗಳಲ್ಲಿ ಇಂಥ ಘಟನೆಗಳನ್ನು 'ಪೆಣ್ಬುಯ್ಯಲ್ (ಅಂದರೆ 'ಹೆಂಗಸರ ಕೂಗು')' "ಪೆಣ್ಡಿರುತಡೆಯುರ್ಚ್ಚು" (ಹೆಣ್ಣುಮಕ್ಕಳ ಉಡೆಯನ್ನು ಬಿಚ್ಚಿ ಮಾನಭಂಗಕ್ಕೆ ಪ್ರಯತ್ನಿಸುವುದು) ಎಂಬುದಾಗಿ ಕರೆದಿದೆ. ಸುಮಾರು ಹದಿಮೂರನೆಯ ಶತಮಾನಕ್ಕೆ ಸೇರಿದ ಅಬ್ಬಲೂರಿನ ಎರಡು ವೀರಗಲ್ಲುಗಳಲ್ಲಿ ಆಕ್ರಮಣಕಾರರು ಹೆಂಗಸರ ಮಾನಭಂಗ ಮಾಡುತ್ತಿರುವ, ಮಾಡಿರುವ ವಿವರಗಳನ್ನು ಶಿಲ್ಪದಲ್ಲಿ ಬಿಡಿಸಲಾಗಿದೆ. ಮಾನಭಂಗಕ್ಕೆ ಯತ್ನಿಸಿದ ಆಕ್ರಮಣಕಾರರನ್ನು ಹಿಮ್ಮೆಟ್ಟಿಸಿದ ವೀರನ ಹಿಂದೆ ತಮ್ಮ ಒಂದು ಕೈಲಿ ಮರ್ಮಾಂಗವನ್ನು ಮತ್ತೊಂದು ಕೈ ಮತ್ತೊಂದು ಕೈಯಲ್ಲಿ ಸ್ತನಗಳ ಮುಚ್ಚಿಕೊಂಡು ಅವಮಾನದಿಂದ ತಲೆ ತಗ್ಗಿಸಿರುವ ಸ್ತ್ರೀಯರು, ಮಗುವನ್ನು ಹೊತ್ತ ತಾಯಿ, ಅಪಮಾನಕ್ಕೆ ಒಳಗಾದರೂ ತನ್ನ ಕಂದನನ್ನು ಎತ್ತಿಕೊಂಡು ಆ ಮೂಲಕ ತನ್ನ ಮರ್ಯಾದೆ ಕಾಪಾಡಿಕೊಳ್ಳಲು ಕಂಗಾಲು ಪಡುತ್ತಿರುವ ತಾಯಿ ಈ ಅಮಾನವೀಯ ಕೃತ್ಯಗಳನ್ನು ಕಂಡು ಏನೊಂದೂ ತಿಳಿಯದೆ ಬೆಕ್ಕಸ ಬೆರಗಿನಿಂದ ನೋಡುತ್ತಾ ತನ್ನ ಒಂದು ಕೈಯಿಂದ ತನ್ನ ತಾಯಿಯ ಕೈಹಿಡಿದಿರುವ ಮಗು ಮುಂತಾದ ಶಿಲ್ಪದ ವಿವರಗಳು ಮನಸ್ಸನ್ನು ಕಲಕುತ್ತದೆ.

ಪೆಣ್ ಎಂದರೆ ಹೆಣ್ಣು, ಪುಯ್ಯಲ್ ಅಂದರೆ ಅಪಹರಣ ಕಾಲದಲ್ಲಿನ ಅಳು. ಹೆಣ್ಣನ್ನು ಅಪಹರಿಸುವಾಗ ಹೆಣ್ಣು ಅಳುವುದನ್ನು ಅವಳ ಆರ್ತಧ್ವನಿಯನ್ನು ಪೆಣ್ಬುಯ್ಯಲ್ ಸೂಚಿಸುತ್ತದೆ.

ತಮ್ಮ ಶತ್ರುಗಳನ್ನು ಸದೆಬಡಿದು ಅವರ ಮೇಲೆ ಮತ್ತೂ ಸೇಡು ತೀರಿಸಿಕೊಳ್ಳುವ ಸಲುವಾಗಿ ಗೆಲುವಿನತ್ತ ಹೊರಟವರು ಸೋತವರ ಊರುಗಳ ಮೇಲೆ ಬೀಳುತ್ತಿದ್ದರು. ಇಂತಹ ಸಮಯಗಳಲ್ಲಿ ಅಸಾಯಕರಾದ ಹೆಣ್ಣುಮಕ್ಕಳು ಅಪಮಾನಕ್ಕೆ ಗುರಿಯಾಗುತ್ತಿದ್ದರು.

ಅಷ್ಟೇ ಅಲ್ಲ, ಮನೆಗಳು ದರೋಡೆಗೆ ಒಳಗಾಗುತ್ತಿದ್ದವು.

ಹೆಣ್ಣಿನ ಮಾನಭಂಗದ ಸಂದರ್ಭದಲ್ಲಿ ಹೋರಾಡಿದ ವೀರರನ್ನು ಸ್ಮಾರಕಗಳು ಹೊಗಳುತ್ತವೆ. ಆದರೆ ಪೆಣ್ಬುಯ್ಯಲ್ ಅನ್ನುವುದು ಮಾತ್ರ ಅತ್ಯಂತ ಅಮಾನವೀಯ ಪದ್ಧತಿಯಾಗಿದೆ.

ಪೆಣ್ಬುಯ್ಯಲುಗಳು ಯಾವಾಗ ಆಗುತ್ತಿದ್ದುವು ಎಂಬುದನ್ನು ಹೇಳುವುದು ಕಷ್ಟ. ಯುದ್ಧಾನಂತರ ಸೋತ ಅರಸರ ಊರುಗಳನ್ನು ಗೆದ್ದವರು ಆಕ್ರಮಿಸಿದಾಗ ನಡೆದಿರಬಹುದು ಅಥವಾ ಹೆಣ್ಣುಮಕ್ಕಳು ಒಂಟಿಯಾಗಿದ್ದಾಗ ನಡೆದಿರಬಹುದು. "ಒಮ್ಮೊಮ್ಮೆ ಕೇವಲ ಸ್ತ್ರೀಯರನ್ನು ಅವಮಾನಗೊಳಿಸುವ ಉದ್ದೇಶದಿಂದಲೂ ದಾಳಿಕಾರರು ಬರುತ್ತಿದ್ದರು" ಈ ರೀತಿಯ ಹುಯ್ಯಲುಗಳ ಪ್ರಸ್ತಾಪ ವೀರಗಲ್ಲುಗಳಲ್ಲಿ ಅಪರೂಪ. ಆದರೂ ಈ ಅಂಶ "ಪೆಂಡಿರುಡೆಯುಚ್ಚುವಾಗಳು" ಎಂಬ ವಾಕ್ಯದಲ್ಲಿ ಸೂಚಿತವಾಗಿದ್ದಂತೆ ತೋರುತ್ತದೆ. ಆದರೆ ಪೆಣ್ಬುಯ್ಯಲಿನ ವಿವರಗಳು ಅವುಗಳಿಂದ ದೊರೆಯುವುದಿಲ್ಲ ಎಂದು ಶೇಷಶಾಸ್ತ್ರಿಯವರ ಅಭಿಪ್ರಾಯ.

*ವಿವರಗಳಿಗೆ ನೋಡಿ: ಡಾ. ಆರ್. ಶೇಷಶಾಸ್ತ್ರಿ ೨೦೦೫ ಶಾಸನ ಪರಿಚಯ ಪುಟ. ೨೬-೨೭, ೧೫೮*
*ಡಾ. ಎಂ. ಚಿದಾನಂದಮೂರ್ತಿ ೨೦೦೮ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ*

**೫೦೬. ಪೆರ್ಗಡೆಗಳು**

*"ಅಟ್ಟಿದ ನಿಮ್ಮ* ***ಪೆರ್ಗಡೆ*** *ಬರ್ದುಂಕಿದನೆಂಬುದ ನಿಂದ್ರ*
*ಜಾಲಮಂ... (ಪಂಪಭಾರತ ೯-೮೯)*

ಪೆರ್ಗಡೆಗಳ ಕುರಿತು ಜಿ. ಎಸ್. ದೀಕ್ಷಿತರು "ನಾಡು ಅಥವಾ ಗ್ರಾಮದ ಮುಖ್ಯಸ್ಥ ಗಾವುಂಡ, ಪೆರ್ಗಡೆ ಎಂಬವರು ನಾಡುಗಳ ಇಲ್ಲವೆ ಹಳ್ಳಿಗಳ ಇಲ್ಲವೆ ಯಾವುದೇ ವಿಭಾಗದ ಮುಖ್ಯಸ್ಥರಾಗಿದ್ದಾರೆ. ತೆರಿಗೆ ಸಂಗ್ರಹಿಸುವ ಅಧಿಕಾರ ಹೊಂದಿದ್ದ ಪೆರ್ಗಡೆಯನ್ನು 'ಸುಂಕದ ಹೆಗ್ಗಡೆ' ಎಂದು ಕರೆದಿದ್ದಾರೆ" ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಈ ಮಾತಿನಿಂದ ಪೆರ್ಗಡೆಗಳಲ್ಲಿ ಕೆಲವರು ಯಾವುದೇ ವಿಭಾಗದ ಆಡಳಿತಾಧಿಕಾರಿಗಳಾಗಿದ್ದು ಮತ್ತೆ ಕೆಲವರು ಸುಂಕದಧಿಕಾರಿಗಳಾಗಿದ್ದರೆಂದು ತಿಳಿಯುತ್ತದೆ. 'ಪೆರ್ಗಡೆ' ಎಂಬುದು ಸಂಸ್ಕೃತದ 'ಮಹತ್ತರ' ಎಂಬುದರ ಸಮಾನ ಪದವಾಗಿರಲೂ ಸಾಧ್ಯ' ಎಂದು ಡಾ. ಎಂ. ಚಿದಾನಂದ ಮೂರ್ತಿಯವರು ಹೇಳಿದ್ದಾರೆ.

ಪೆರ್ಗಡೆಗಳು ವಿವಿಧ ತೆರನಾದ ಸುಂಕವನ್ನು ಸಂಗ್ರಹಿಸುವ ಅಧಿಕಾರಿಗಳಾಗಿದ್ದಾರೆ. ಅವರನ್ನು ಸುಂಕವೆಗ್ಗಡೆಗಳೆಂದು ಕರೆಯುತ್ತಾರೆ. ಅವರಲ್ಲಿ ಕೆಲವರು ಒಂದೇ ಸುಂಕವನ್ನು ಸಂಗ್ರಹಿಸುವ ಅಧಿಕಾರಿಗಳಾಗಿದ್ದರೆ ಮತ್ತೆ ಕೆಲವರು ಒಂದಕ್ಕಿಂತ ಹೆಚ್ಚು ಸುಂಕವನ್ನು ಸಂಗ್ರಹಿಸುವವರಿದ್ದಾರೆ. ಸಂಗ್ರಹಿಸುವ ಸುಂಕದಲ್ಲಿ ಕೆಲವು ಭಾಗ ಇವರಿಗೆ ಸಂಬಳವಾಗಿ ಸಲ್ಲುತ್ತಿತ್ತು.

ವಿವರಗಳಿಗೆ : *Dikshit G. S. 1974 Local Self Government in Medival Karnataka P. 37*
*ಡಾ. ಎಂ. ಚಿದಾನಂದಮೂರ್ತಿ ೨೦೦೮ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪುಟ. ೨೮೨.*

**೫೦೭. ಪೆರ್ವೇಂಟೆ**

*ಮತ್ತಂ ನೆಲನುಂ ಗಾಳಿಯುಂ ಕೆಯ್ಯುಂ ಮೃಗಮುಮನಱಿದು ಕಾಲಾಳೊಳಂ ಕುದುರೆಯೊಳಮೊಳಗಂ ಬರಲಾನೆ ಬಲ್ಲೆನಿದು* ***ಪೆರ್ವೇಂಟೆ****ಯಂದಂ......*

*(ವಿಕ್ರಮಾರ್ಜುನವಿಜಯ ೫-೪೩೮)*

ಈ ವಚನವು ಲಕ್ಷಣದೊಡನೆ ಪೆರ್ವೇಂಟೆಯನ್ನೂ, ಅದರಲ್ಲಿ ಸಮರ್ಥನಾದ ಬೇಟೆಗಾರನನ್ನೂ ಲಕ್ಷಿಸುತ್ತಿದೆ. 'ಪಿರಿದು+ಬೇಂಟೆ' ಎಂಬುದು ಆ ಪದದ ಮೈಕಟ್ಟು. ಹಿಂದನ ಪದ್ಯದಲ್ಲಿ ತೋರುವ ಮೃಗಯಾ ಸಾಮಾನ್ಯ ಲಕ್ಷಣಕ್ಕಿಂತ ವಿಶೇಷವಾಗಿ ಇಲ್ಲಿ ತೋರುವುದೆಂದರೆ ಬೇಟೆಗಾರನು 'ನೆಲ'ವನ್ನೂ 'ಕೆಯ್ಯ'ನ್ನೂ ಅರಿತಿರಬೇಕೆಂಬುದೊಂದು; ಕಾಲಾಳು ಕುದುರೆಗಳೊಡನೆ ವನದೊಳಗೆ ಪ್ರವೇಶಿಸಬೇಕೆಂಬುದಿನ್ನೊಂದು. ಕಾಡುಗುಡ್ಡಗಳಲ್ಲಿ ನೆಲವು ಹಳ್ಳತಿಟ್ಟಾಗಿ ಅಂಕುಡೊಂಕಾಗಿರುವುದು ಪ್ರಕೃತಿ. ಅದರಿಂದ, ತನ್ನವರೂ ಮೃಗಗಳೂ ನಿಂತಿರುವ ನೆಲಮಟ್ಟಗಳ 'ಗಣಿದ'ವನ್ನು ಅವಗಾಹಿಸಿಕೊಳ್ಳದಿದ್ದರೆ ಫಕ್ಕನೆ ಗುರಿದಪ್ಪಿಹೋಗಬಹುದು. ಒಂದಿಷ್ಟು ಗಾಳಿ ಅಲೆದುಬಿಟ್ಟರೆ, ಎಸೆದ ಅಲಗು ಗುರಿದಪ್ಪಿ ಹೋಗುವಲ್ಲಿ ಸಂದೇಹವೇ ಇಲ್ಲ. ಆದ್ದರಿಂದಲೇ ಅವನಿಗೆ ನೆಲದ ಪರಿಚಯವೂ ಗುರಿವಿಡಿದ ಕೈಯ ಹಿಡಿತದ ಬಿಗುವೂ ನೆಲೆಗೊಂಡಿರಬೇಕು, ಎಂಬುದು ಸೂಚಿತವಾಗುತ್ತಿದೆ. ಮುಂದೆ ವಿವರಿಸಲಿಕ್ಕಿರುವ ಬೇಟೆಗಳೊಳಗೆಲ್ಲ ಉತ್ತಮವಾದುದ ರಿಂದಲೇ, ಇದನ್ನು 'ಪೆರ್ವೇಂಟೆ' ಎಂದು ಹೆಸರಿಸಿದ್ದಾನೆಂದು ತೋರುತ್ತಿದೆ ಎಂದು ಮುಳಿಯ ಹೇಳುತ್ತಾನೆ.

ಬೇಟೆಯು ರಾಜರ ವ್ಯಸನಗಳಲ್ಲಿ ಒಂದು. ಪರ್ವೇಂಟೆಯು ಮೃಗ ಹಾವಳಿಯನ್ನು ತಡೆಗಟ್ಟುವುದಕ್ಕೆ ನಡೆಸಿರುವ ಬೇಟೆಯಿರಬಹುದು. ಇದು ವಿನೋದದ ಬೇಂಟೆಯೆಂದು ಅನಿಸುವುದಿಲ್ಲ. ಪಂಪನು ವಿವರಿಸಿರುವ ಪೆರ್ವೇಂಟೆಯ ಕ್ರಮವನ್ನು ನೋಡಿದರೆ ಹಾಗನಿಸುತ್ತದೆ.

*ವಿವರಗಳಿಗೆ ನೋಡಿ: ಮುಳಿಯತಿಮ್ಮಪ್ಪಯ್ಯ ೨೦೦೬ ನಾಡೋಜಪಂಪ ಪುಟ. ೨೬೦-೬೫.*

**೫೦೮. ಪೆಱತೊಂದು ಪ್ರಾಸಾದ**

'ವಡ್ಡಾರಾಧನೆ'ಯ 'ವೃಷಭಸೇನ ಭಟ್ಟಾರರ ಕಥೆ'ಯಲ್ಲಿ ವಿವಾಹ ವಿಚ್ಛೇದನದ ಕುರಿತ ಉಲ್ಲೇಖವು ಸಿಗುತ್ತದೆ. ಜನದತ್ತೆಯೆಂಬುವಳ, 'ಎನ್ನಂ ಬಿಸುಟ್ಟರಸಂ ಪೋದೊನೆಂದು' ಮುಳಿದು, 'ಇನ್ನಾತನೆನಗೆ ಬಾೞ್ತೆಯಲ್ಲನೆಂದು ತನ್ನ ಮಾಡದಿಂ ಪೊರಮಟ್ಟು ಪೆಱತೊಂದು ಪ್ರಾಸಾದದೊಳ್ ಪೋಗಿರ್ದೊಳ್' ಎಂದು ಈ ಕತೆಯಲ್ಲಿ ಬರುತ್ತದೆ.

(ಕೇಶವಭಟ್ಟ. ಟಿ (ಅನು) ೧೯೭೬. ಪು.೨೨೪) ಇಲ್ಲಿ ವಿವಾಹ ವಿಚ್ಛೇದನದ ಸೂಚನೆಯಿದ್ದು, ಇದಕ್ಕೆ ಕೃತಿಯೊಳಗಿನ ಕಾರಣಗಳು ಹೀಗಿದೆ.

- ಅರಸನು ತನ್ನನ್ನು ಬಿಟ್ಟು ಹೋದನೆಂದು ಅರಸಿಯು ತಿಳಿಯುವುದು.
- ಉಳಿದ ಅರಸಿಯರ ಎದುರು ತನಗೆ ಅಪಮಾನವಾಯಿತೆಂದು ಜಿನದತ್ತೆಯು ಭಾವಿಸುವುದು
- ಹೆಂಡತಿಯೇ ಗಂಡನನ್ನು ಬಿಟ್ಟು ಹೊರಡುವುದು.

ಪೊನ್ನನ 'ಶಾಂತಿಪುರಾಣ'ದಲ್ಲಿ ವಿವಾಹ ವಿಚ್ಛೇದನದ ಪ್ರಸ್ತಾವ ಬರುತ್ತದೆ. 'ದಾಸಿ ಪುತ್ರನಾದ ಕಪಿಲನು ದೂರದಿಂದಲೇ ವಿದ್ಯೆಯನ್ನು ಆಲಿಸಿ ಬುದ್ಧಿವಂತನಾಗುತ್ತಾನೆ. ಅನಂತರ ಆತನಿಗೆ ಮದುವೆಯಾಗುತ್ತದೆ. ಅವನ ಹೆಂಡತಿ (ಸತ್ಯಭಾಮೆ)ಯು ಕಪಿಲನು ದಾಸಿಪುತ್ರನೆಂದು ತಿಳಿದ ಮೇಲೆ 'ತನ್ನ ಗಂಡನು ಸುಳ್ಳು ಹೇಳಿದನೆಂದೂ, ವರ್ಣಾಶ್ರಮ ಧರ್ಮವು ಪ್ರಧಾನ' ವೆಂದೂ ಅರಸನಲ್ಲಿ ದೂರು ಕೊಡುತ್ತಾಳೆ. ಅರಸನು ಅವಳನ್ನು ತನ್ನ ಅಂತಃಪುರಕ್ಕೆ ಸೇರಿಸಿ, ಕಪಿಲನನ್ನು ನಗರದಿಂದ ಹೊರಗೆ ಹಾಕುತ್ತಾನೆ. (ನಾಗರಾಜಯ್ಯ ಹಂ.ಪ (ಅನು) ೧೯೮೨ ೬-೬೪ವ) ಕತೆಯಲ್ಲಿ ಉಲ್ಲೇಖಿತವಾದಂತೆ ಈ ವಿವಾಹ ವಿಚ್ಛೇದನಕ್ಕೆ ಮುಖ್ಯ ಕಾರಣ – ಗಂಡನು ನಿಮ್ನ ಜಾತಿಗೆ ಸೇರಿದ್ದಾನೆ ಎನ್ನುವುದೇ ಆಗಿದೆ.

ಪದ್ಯದ ಸಂದರ್ಭದಲ್ಲಿ ಸೂಚಿತವಾದಂತೆ ಇಲ್ಲೆ ವಿವಾಹ ವಿಚ್ಛೇದನಕ್ಕೆ ಎರಡು ಮುಖ್ಯ ಕಾರಣಗಳಿವೆ: ಕಿರಾತವರ್ಗದ ಸ್ತ್ರೀಯು ಪಂಚಾಣುವ್ರತವನ್ನು ಸ್ವೀಕರಿಸುವುದು. ಮತ್ತು ಅದರ ಪ್ರಭಾವಕ್ಕೆ ಸಿಲುಕಿದ ಅವಳು ಗಂಡನು ತಂದ ಪಕ್ಷಿಗಳನ್ನು ಬಿಡುವುದು.

ಇದನ್ನು ನೋಡಿದ ಗಂಡನು ಆಕೆಯನ್ನು ಹಿಂಸಿಸುವುದು ಮತ್ತು ಅದಕ್ಕಾಗಿ ಮನೆಯನ್ನು ಬಿಟ್ಟು ಹೋಗುವುದು.

ಈ ಘಟನೆಯ ಮೂಲಕ ಕೃತಿಕಾರನು ದಾಂಪತ್ಯ ವಿಚ್ಛೇದನದ ಒಂದು ಬಗೆಯನ್ನು ವಿವರಿಸುತ್ತಾನೆ. ಕೃತಿಯಲ್ಲಿ ಉಕ್ತವಾದ ಸಂದರ್ಭದ ಮೂಲಕವೇ ಚರ್ಚಿಸುವುದಿದ್ದರೆ, ಇಲ್ಲಿ ಜೈನಧರ್ಮವು ಬೇರೆ ಬೇರೆ ಜಾತಿಯನ್ನು ತನ್ನ ಧರ್ಮದ ಚೌಕಟ್ಟಿನೊಳಗೆ ಸೇರಿಸಿಕೊಳ್ಳುತ್ತಿತ್ತು ಎಂದು ತಿಳಿಯಬಹುದಾಗಿದೆ. ಹಾಗೆಯೇ ಈ ಧರ್ಮಪ್ರಸಾರದ ಹಿನ್ನೆಲೆಯಲ್ಲಿ ಕೆಲವೊಮ್ಮೆ ದಾಂಪತ್ಯದ ಚೌಕಟ್ಟು ಒಡೆಯುತ್ತಿತ್ತು ಎನ್ನುವುದನ್ನು ಈ ಸಂದರ್ಭವು ಸೂಚಿಸುತ್ತದೆ.

ನಾಗಚಂದ್ರನ 'ರಾಮಚಂದ್ರನ ಚರಿತ ಪುರಾಣ'ದಲ್ಲಿ ಸೊಸೆಯ ಮೇಲೆ ಅಪವಾದವನ್ನು ಹೊರಿಸಿ ಅವಳನ್ನು ಹೊರಗೆ ಅಟ್ಟುವ ಸನ್ನಿವೇಶವು ಹೀಗೆ ಚಿತ್ರಿತವಾಗಿದೆ. (ಹಿರೇಮಠ: ಆರ್.ಸಿ (ಸಂ) ೧೯೪೪ ಪು.೧೧-೫೦)

"... ಮದೀಯ ಮಾತೆಯ ಗರ್ಭದೊಳಾನಿರ್ಪುದುಮೆನ್ನ ತಾಯ್ವಿರತ್ತೆಯುಂ ಮಾವನುಂ".

'ಇಲ್ಲದ ದೋಷಮನಿಟ್ಟ:ವಿಲ್ಲದೆ ಪೊಜಿಮಡಿಸಿ ಕಳೆಯೆ ಶರಣಲ್ಲದೆತನ್ನಲ್ಲಿಗೆ

ಬರೆತಾನುಂಕ್ಯವೆ:ಯಿಲ್ಲದೆ ನಿರ್ಬುದ್ಧಿಪೊರ್ದಲೀಯದೆ ಕಳೆದಂ:'

ಇದೇ ಕೃತಿಯಲ್ಲಿ, ರಾಮಚಂದ್ರನು ಸೀತೆಯ ಪಾವಿತ್ರ್ಯವನ್ನು ಶಂಕಿಸುತ್ತಾನೆ. ಇದರಿಂದ ವಿಷಾದ ಪಟ್ಟ ಸೀತೆಯು ಸನ್ಯಾಸವನ್ನು ತೆಗೆದುಕೊಳ್ಳುತ್ತಾಳೆ. (ಅದೇ ೧೬-೨೫) ಗಂಡಿಗೆ ಹೆಣ್ಣಿನ ಬಗೆಗೆ ಇರುವ ಸಂಶಯದಿಂದ ಈ ವಿಚ್ಛೇದನವು ನಡೆಯುತ್ತದೆ. ಈ ಕೃತಿಯಲ್ಲಿ ಸೂಚಿತವಾದ ಎರಡೂ ಸಂದರ್ಭಗಳಲ್ಲಿಯೂ ಗಂಡಿನ ಅಧಿಕಾರ ಪ್ರವೃತ್ತಿಯು ಸ್ಪಷ್ಟವಾಗಿ ಎದ್ದು ಕಾಣುತ್ತದೆ. ಮತ್ತು ಈ ಎರಡೂ ಸಂದರ್ಭಗಳು ಪುರುಷ ಪ್ರಧಾನ ಸಾಮಾಜಿಕ ಸ್ಥಿತಿಯನ್ನು ಅಭಿವ್ಯಕ್ತಿಸುತ್ತವೆ.

ವಿವಾಹ ವಿಚ್ಛೇದನ

ವಿವಾಹ ವಿಚ್ಛೇದನಕ್ಕೆ ಕೆಲವು ಕಾರಣಗಳಿವೆ-

೧. ವ್ಯಭಿಚಾರ ೨. ಪರಿತ್ಯಜನೆ. ೩. ಮತಾಂತರ. ೪. ಬುದ್ಧಿಭ್ರಮಣೆ. ೫. ಕಾರ್ಯ

ಮಾನಸಿಕ ಗೊಂದಲದಲ್ಲಿ ಮನಸ್ಸಿನ ಸ್ಥಿಮಿಸದ ಅಭಾವ ಮುಖ್ಯಕಾರಣ.

೬. ಕುಷ್ಠರೋಗ. ೭. ಲೈಂಗಿಕರೋಗ. ೮. ಸಂಸಾರತ್ಯಾಗ ೯. ಮರಣದ ಪೂರ್ವಭಾವನೆ.

ಹೆಂಡತಿಗೆ ಇದಕ್ಕಿಂತ ಹೆಚ್ಚಿನ ಕಾರಣಗಳು ಇವೆ.

೧. ದ್ವಿಪತ್ನಿತ್ವ ೨. ಹಟ ಸಂಭೋಗ.

೧೯೭೬ ವಿವಾಹ ಕಾನೂನುಗಳ ತಿದ್ದುಪಡಿಯಲ್ಲಿ ಹುಡುಗಿಯು ಹದಿನೈದು ವರ್ಷವಾಗುವುದಕ್ಕಿಂತ ಪೂರ್ವದ ವಿವಾಹವಾದರೆ ವಿಚ್ಛೇದನಕ್ಕೆ ಅವಕಾಶವಿದೆ.

**೫೦೯. ಪೊಲತಿ**

ವಡ್ಡಾರಾಧನೆಯಲ್ಲಿ ನಾಗಶ್ರೀಯು ತನ್ನ ಹಿಂದಿನ ಭವದಲ್ಲಿ ಹೊಲತಿಯಾಗಿದ್ದಳು ಎಂಬ ವಿವರವು ಬರುತ್ತದೆ. ಅಸ್ಪೃಶ್ಯತೆಯು ಜಾತಿ ಶ್ರೇಣೀಕರಣದಲ್ಲಿ ಅತ್ಯಂತ ಕೆಳ ತುದಿಯಲ್ಲಿರುತ್ತದೆ. ಸ್ಪಶ್ಯ ಎಂದರೆ ಮುಟ್ಟಬಹುದಾದವನು. ಅಸ್ಪೃಶ್ಯವೆಂದರೆ ಮುಟ್ಟಬಾರದವನು. ಇದರಲ್ಲಿ ಮಡಿ, ಮೈಲಿಗೆ, ಪವಿತ್ರ-ಅಪವಿತ್ರ ಎಂಬ ಧೋರಣೆಯಿದೆ.

ಕ್ರಿ.ಶ. ೧೧೨೫ರ ಶಾಸನವೊಂದರಲ್ಲಿ 'ಪೊರೆಗೆ ಚಂಡಾಲಾಲಯಂ', 'ನೀರು ಸಾಗರಕ್ಕೆ ಹೋದ ಓಣಿಯಿಂ ಪೊಡುವಲು ಹೊಲೆಗೇರಿಯಂ ಪೊಡು ಮುಖವಾಗಿ' ಎನ್ನುವ ಮಾಹಿತಿಯಿದೆ. ಅದೇ ರೀತಿ ೧೦ನೆಯ ಶತಮಾನದ ಶಾಸನವೊಂದರಲ್ಲಿ, 'ಕಾಸರಗೋಡು ತಾಲೂಕಿನ ತಳಂಗೇರಿ ಎಂಬ ಊರ ಹೊರಗಡೆ ತೊರೆಯ ದಡದ ಹತ್ತಿರ ಪುತ್ತೂರಿನ ಹೊಲೆಯರ ಕೇರಿ ಇತ್ತು' ಎನ್ನುವ ವಿವರ ಸಿಗುತ್ತದೆ. ಶ್ರವಣಬೆಳಗೊಳ ಮತ್ತು ಜಿನನಾಥಪುರ ಪಟ್ಟಣಗಳ ಹೊರವಲಯಗಳಲ್ಲಿ ಕೆಳಜಾತಿಯವರು ವಾಸಿಸುತ್ತಿದ್ದರು ಎನ್ನುವ ವಿವರ ಶಾಸನವೊಂದರಲ್ಲಿದೆ. ಇವರ ವೃತ್ತಿಗಳನ್ನು ಮೇಲ್‌ವರ್ಗಗಳೇ ನಿರ್ಧರಿಸುತ್ತಿದ್ದವು. ಊರ ಕಸವನ್ನು ಗುಡಿಸುವುದು, ಸತ್ತ ದನವನ್ನು ಹೊತ್ತು ಸಾಗಿಸುವುದು, ಸ್ಮಶಾನದಲ್ಲಿ ಗುಂಡಿ ತೋಡುವುದು, ಮರಣ ದಂಡನೆಗೆ ಒಳಗಾದವರನ್ನು

ಗಲ್ಲಿಗೇರಿಸುವುದು ಮುಂತಾದವು ಅಸ್ಪೃಶ್ಯರು ಮಾಡಬೇಕಾದ ಕೆಲಸಗಳಾಗಿದ್ದವು. ಇಂಥ ಕೆಲಸಗಳನ್ನು ಮಾಡಿಸುವುದಕ್ಕಾಗಿ ಮಾನವರಲ್ಲಿಯೇ ಅಸ್ಪೃಶ್ಯರೆನ್ನುವ ವರ್ಗವೊಂದನ್ನು ಹುಟ್ಟು ಹಾಕಿ, ಅವರನ್ನು ತೀರ ನಿಕೃಷ್ಟವಾಗಿ ನೋಡಿಕೊಳ್ಳಲಾಯಿತು ಎಂದು ಮೋಹನಕೃಷ್ಣ ರೈ ಹೇಳುತ್ತಾರೆ.

*ವಿವರಗಳಿಗೆ ನೋಡಿ: ಮೋಹನಕೃಷ್ಣ ರೈ ೨೦೦೮ ಚರಿತ್ರೆ ಕಥನ ಪುಟ. ೬೬*

### ೫೧೦. ಪೊೞ್ತು

*ಇಂದು ನಾಳೆನ್ನದೆ ಬಂದ **ಪೊೞ್ತೀ ಪೊೞ್ತು** (ಶಾಂತಿಪುರಾಣ ೫–೩೬ ವ)*

ಇಂದು ನಾಳೆಯೆನ್ನದೆ ಬಂದ ಹೊತ್ತೇ ಹೊತ್ತು. ಹೊತ್ತು ಎಂದರೆ ಸಮಯ ಎಂದರ್ಥ. ಹೊತ್ತು ಕಾಯುವುದಿಲ್ಲ. ಅದು ಅದರ ಪಾಡಿಗೆ ನಡೆಯುತ್ತದೆ. ಆಧುನಿಕ ಪರಿಭಾಷೆಯ 'ಸಮಯ' ಎನ್ನವುದಕ್ಕೆ ನಿರ್ದಿಷ್ಟ ಗುಣ ಮತ್ತು ಅರ್ಥವಿದೆ. ಅದು ಆಧುನಿಕ ವೈಜ್ಞಾನಿಕ ಮನೋಧರ್ಮದಿಂದ ಹುಟ್ಟಿರುವಂಥದ್ದು.

ಪೊೞ್ತು ಎಂಬುದು ಹೊತ್ತು ಎಂದಾಗಿದೆ. ಹೊತ್ತಿನಂತೆ ಎಂದರೆ ಮುಂಜಾವು ಎಂಬ ಅರ್ಥವೂ ಇದೆ. ಒತ್ತಾರೆ, ವತಾರೆ, ವತ್ತರೆ, ಹೊತರೆ, ಹೊತ್ತಾರೆ ಎಂಬ ಗ್ರಾಮ್ಯ ಪದಗಳು ಚಾಲ್ತಿಯಲ್ಲಿವೆ.

ಹೊತ್ತು ಎಂಬುದಕ್ಕೆ ಸೂರ್ಯ ಎಂಬ ಅರ್ಥವೂ ಇದೆ. ಹೊತ್ತು ಮುಳುಗಿದ ಮೇಲೆ ಅಂದರೆ ಸೂರ್ಯಾಸ್ತವಾದ ಮೇಲೆ ಎಂದರ್ಥ. ಮಧ್ಯಾಹ್ನದ ಹೊತ್ತು ಹೊಳ್ಳುವುದು ತಡವಲ್ಲ' – ಜನಪದ ಗೀತೆಯಿಂದ ಆಯ್ದುಕೊಂಡ ಸಾಲು ಇದು. ಇಲ್ಲಿ ಮಧ್ಯಾಹ್ನದ ಸೂರ್ಯ ಮುಳುಗುವುದಕ್ಕೆ ಹೊರಳುವುದು ಎನ್ನಲಾಗಿದೆ.

*ವಿವರಗಳಿಗೆ ನೋಡಿ: Arjun Appadorai? Time narration and space (The Local culture)*

### ೫೧೧. ಪೌರುಷ

*ನಿಚ್ಚಟಗಲಿಗೆ **ಪೆಸರಕಲಿ** ನಿಂದಪನೇ (೨–೧೦೮)*

ನಿಶ್ಚಲ ಧೈರ್ಯ, ಎದೆಗೆಚ್ಚು ಇರುವ ವೀರ(ಕಲಿ)ನೆದುರು ಹೆಸರಿಗಷ್ಟೇ ವೀರನಾಗಿರುವವನು ನಿಲ್ಲುತ್ತಾನೆಯೇ? ಅವನಿಂದ ಪ್ರತಿಭಟಿಸಿ(ಪೆಸರಕಲಿ) ಹೋರಾಡಲು ಸಾಧ್ಯವಿಲ್ಲವೆಂಬ ಭಾವ.

ಕಂಡ ಸಹಾಯನಂ ಗೆಲ್ದೊಡಂ ತೇಜಮಿಲ್ಲಾ (ಶಾಂತಿಪುರಾಣ ೪–೭ ವ)

ಅಸಹಾಯಕನನ್ನು ಗೆದ್ದರೆ ಅವಕ್ಕೆ ತೇಜವಿಲ್ಲ.

ಅಧಿಕಂಗಶಕ್ಯಮೆಂಬರುಮೊಳರೇ (ಶಾಂತಿಪುರಾಣ ೧೦–೧೬೧)

ಪೌರುಷವಂತನಿಗೆ ಅಶಕ್ಯವೆಂಬುದು ಯಾವುದಾದರೂ ಇದೆಯೆ? ಪೌರುಷವೆನ್ನುವುದು ಪುರುಷ ಎಂಬುದರಿಂದ ಜನ್ಯವಾಗಿದೆ. ಶಕ್ತಿ, ಸಾಮರ್ಥ್ಯಗಳು ಪುರುಷರಿಗೆ ಎಂಬ ಪರಿಕಲ್ಪನೆಯಿಂದ ಇದು ಬಂದಿದೆ. ಪೌರುಷವೆನ್ನುವುದು ಒಂದು

ಮೌಲ್ಯವಾದಾಗ ಈ ರೀತಿಯ ಪರಿಕಲ್ಪನೆಗಳು ಹುಟ್ಟಿಕೊಳ್ಳುತ್ತವೆಯೆನ್ನುವುದು ಗಮನಾರ್ಹ.

**೫೧೨. ಪ್ರಜ್ಞಾ – ಉಪಾಯ**

ಇದು ಮುಂದೆ ಬುದ್ಧನ ಉಪದೇಶಗಳಲ್ಲಿ 'ಪ್ರಜ್ಞಾ' ಮತ್ತು 'ಉಪಾಯ' – ಪ್ರವಚನದ ವಸ್ತು ಮತ್ತು ರೀತಿಗಳನ್ನು ಒಂದಕ್ಕೊಂದಕ್ಕೆ ಜೋಡಿಸಲು ದಾರಿ ಮಾಡಿತು. ಆದರೆ ಶ್ರದ್ಧಾವಂತರೂ, ಮೂಢನಂಬಿಕೆಗಳನ್ನುಳ್ಳವರೂ ಆಗಿದ್ದ ಪುರೋಹಿತರು ಮತ್ತು ಲೌಕಿಕರು ವಿಸ್ತರಣಗಳನ್ನೂ, ಪ್ರಕ್ಷೇಪಗಳನ್ನೂ ಮಾಡಿರುವ ಸಾಧ್ಯತೆ ಇದೆಯೆಂಬುದನ್ನು ಮೊದಲ ನೋಟದಲ್ಲೇ ಹೇಳಿಬಿಡಬಹುದು. ಪ್ರತಿಸ್ಪರ್ಧಿಗಳಾಗಿದ್ದ ಪ್ರವಾದಿಗಳ ಪರವಾಗಿ ಮಂಡಿಸಿದ ಉತ್ತಮತರ ವಾದಗಳಿಗೆದುರಾಗಿಯೂ ಮತ್ತು ತಮ್ಮ ಗುರುವಿನ ಉನ್ನತಿಕೆಯನ್ನು ಅವರೆದುರಿಗೆ ಎತ್ತಿಹಿಡಿಯಲು ದೃಢಮನಸ್ಕರಾಗಿದ್ದುದರಿಂದಲೂ ಇದು ಸಾಧ್ಯವಾಗಿರಬಹುದು. ಸೂತ್ರ ಸಾಹಿತ್ಯವು ಬುದ್ಧನು ಬಹುಶಃ ಆಡುತ್ತಿದ್ದ ಮಗಧದ ಭಾಷೆಯಲ್ಲಿರದೆ ಶೌರಸೇನೀ ಪ್ರಾಕೃತದ ಒಂದು ರೂಪವಾದ ಅವಂತೀ ಭಾಷೆಗೆ ಸಂಬಂಧಪಟ್ಟ ಪಾಲಿಯಲ್ಲಿದೆ. ಆದರೂ ಓಲ್ಡೆನ್‌ಬರ್ಗ್‌ರವರು ಹೇಳಿರುವಂತೆ ಬುದ್ಧನು ಕೇವಲ ಸರಳವಾದ ವಿಷಯಗಳನ್ನೇ ಉಪದೇಶಿಸಿದನು. ತಾತ್ವಿಕ ವಿಷಯಗಳನ್ನಲ್ಲ ಎಂದುಕೊಂಡು ಬೌದ್ಧಧರ್ಮದ ಜಟಿಲವಾದ ಚಿಂತನೆಗಳಲ್ಲಿ ಪ್ರತಿಯೊಂದನ್ನೂ ಬಿಟ್ಟುಬಿಡುವಂತಿಲ್ಲ.

ಪ್ರಜ್ಞೆ ಮತ್ತು ಉಪಾಯಗಳ ಕುರಿತು ಬೌದ್ಧ ಮತದ ನಿಲುವು ಮೇಲಿನಂತಿದೆ. ಆದರೆ ಪ್ರಜ್ಞೆಯ ಕುರಿತು ಉಪನಿಷತ್ತು ಕಾಲದಿಂದಲೂ ಬೇರೆ ಬೇರೆ ಚರ್ಚೆಗಳು ಬಂದಿರುವುದು ಗಮನಾರ್ಹ.

*ವಿವರಗಳಿಗೆ ನೋಡಿ: ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦*
*ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ ಪುಟ. ೧೫೪*
*ಸ್ವಾಮಿ ಹರ್ಷಾನಂದ ೨೦೦೨ ವೇದಾಂತಸಾರ*

**೫೧೩. ಪ್ರತಿಬೋಧೆ**

ಮುನಿಪತಿ ನಿಮ್ಮೀ **ಪ್ರತಿಬೋ**
**ಧ**ನಮಿಂದಾದತ್ತು (ನಿ)ಮ್ಮ ದಯೆಯಿಂದದೆ ಕೃತಾ
ರ್ಥನೆನಾನ (ದ) ಲ್ಲದಿರ್ಪಂ......... (ಸುಕುಮಾರ ಚರಿತಂ ೧೨-೧೪)

ಪ್ರತಿಬೋಧೆಯೆಂದರೆ ದುರ್ಮಾರ್ಗಿಗಳಾದವರಿಗೆ, ನಡತೆಬಾಹಿರರಾದವರಿಗೆ ಪ್ರತಿಯಾಗಿ ಬೋಧಿಸುವುದು, ಎಚ್ಚರಿಸುವುದು, ತನ್ಮೂಲಕ ಅವರನ್ನು ಸರಿದಾರಿಗೆ ತರುವುದು ಎಂದರ್ಥ.

ಜೈನಧರ್ಮದ ಕಥಾನಾಯಕರು ವೈರಾಗ್ಯಪರರಾಗಲು ಅವರಿಗೆ ಕೆಲವೊಮ್ಮೆ ಪ್ರತಿಬೋಧೆಯ ಅಗತ್ಯವಿರುತ್ತದೆ. ಸಗರ ಚಕ್ರವರ್ತಿಯನ್ನು ಮಣಿಕೇತುವು ಪ್ರತಿಬೋಧಿಸಿ

ವೈರಾಗ್ಯ ಪರನನ್ನಾಗಿಸಿದ್ದು ಅಜಿತ ಪುರಾಣದಲ್ಲಿ ಕಂಡುಬರುತ್ತದೆ.

**೫೧೪. ಪ್ರತಿಹಾರಿ**

*ಮಹಾ **ಪ್ರತಿಹಾರನ** ಮೊಗಮಂ ನೋಡಿ.....(ಪಂಪ ಭಾರತ ೯-೩೦ ವ)*

ಒಡ್ಡೋಲಗದಲ್ಲಿದ್ದ ದುರ್ಯೋಧನನಿಗೆ ಮೂರನೆಯ ಬಾಗಿಲಿನಲ್ಲಿ ಬಂದಿದ್ದ ಕೃಷ್ಣನ ಆಗಮನವನ್ನು ಪ್ರತೀಹಾರಿಯು ಬಂದು ತಿಳಿಸಲು, ದುರ್ಯೋಧನನು ಭೀಷ್ಮನ ಮುಖವನ್ನು ನೋಡುವ ಸಂದರ್ಭ

ಪ್ರತಿಹಾರ ಸಂಸ್ಕೃತದ ಪದ. ಸಂಸ್ಕೃತದಲ್ಲಿ ಪ್ರತಿಹಾರವೆಂದರೆ ಬಾಗಿಲು ಎಂಬ ಅರ್ಥವೂ ಇದೆ. ಪ್ರತಿಹಾರದ ಕಾಯಕ ಮಾಡುವವನು ಪ್ರತಿಹಾರಿ ಎನಿಸಿಕೊಳ್ಳುತ್ತಾನೆ. 'ಪಡಿಯರ' ಎನ್ನುವುದು ಇದರ ತದ್ಭವ ರೂಪ. ಕೋಗಿಲರಯನ್ನು 'ಪಡಿಯರ ವಕ್ಕಿ' ಎಂದು ಕರೆಯುತ್ತಾರೆ. ಸಂಸ್ಕೃತದ ನಾಟಕಗಳಲ್ಲಿ ಪ್ರತಿಹಾರ ಚಾಲ್ತಿಯಲ್ಲಿತ್ತು. ದ್ವಾರಪಾಲಕನು ಬಂದವರ ವಿವರಗಳನ್ನು ರಾಜನಿಗೆ ಒಪ್ಪಿಸುತ್ತಾನೆ.

**೫೧೫. ಪ್ರತೀಕಾರ**

ಹೆಣ್ಣು ತನಗೆ ಅಪಮಾನವಾದಾಗ ಗಂಡಿನ ವಿರುದ್ಧ ಪ್ರತಿಭಟಿಸುವ ವಿಷಯವು ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಉಕ್ತವಾಗಿದೆ. 'ಪಂಪಭಾರತ'ದಲ್ಲಿ ಅಂಬೆಯು ಭೀಷ್ಮನಲ್ಲಿ **'ನಿನಗೆ ವದಾರ್ಥಮಾಗಿ ಪುಟ್ಟುವೆನಕ್ಕೆ'**ಯೆಂದು ಕೋಪಾಗ್ನಿಯಿಂದ ಅಗ್ನಿಯನ್ನು ಪ್ರವೇಶಿಸುತ್ತಾಳೆ. (೧-೮೦ವ)

ಈ ಉಲ್ಲೇಖವು ಮಹಾಭಾರತದಲ್ಲಿಯೂ ಇದೆ. (ರಾಮೇಶ್ವರಾವಧಾನಿ (ಸಂ) ೧೯೭೨. ಸಂ:೧ ಪು.೬೯೮)

ಇಲ್ಲಿ ಅಂಬೆಯು ಪ್ರತಿಭಟಿಸುವುದಕ್ಕೆ ಕೆಲವು ಮುಖ್ಯ ಕಾರಣಗಳಿವೆ:

ಅಂಬೆಯ ಪ್ರತಿಭಟನೆಯು ತನಗಿಷ್ಟ ಬಂದವನನ್ನು ಮದುವೆಯಾಗಲು ಸಾಧ್ಯವಾಗದ ಸಂದರ್ಭದಲ್ಲಿ ಹುಟ್ಟಿಕೊಂಡಿದೆ.

ಭೀಷ್ಮನು ಕರೆದು ತಂದುದರಿಂದ ಮದುವೆಯಾಗುವ ಸಂದರ್ಭವನ್ನೇ ತಾನು ಕಳೆದುಕೊಂಡೆ ಎಂದು ಅಂಬೆಯು ಭಾವಿಸುತ್ತಾಳೆ. ತನ್ನ ಯೌವನವು ಹಾಳಾಯಿತು ಎನ್ನುವುದು ಅಂಬೆಯ ಮುಖ್ಯ ತಾರ್ಕಿಕ ನಿಲುವು.

*'..........ಜವ್ವನಮದಡವಿಯೊಳಗೆ ಪೂತ ಪೂವಿನಂತೆ ಕಿಡಲೀಯದಾತನೆನ್ನಂ ಪಾಣಿಗ್ರಹಣಂ ಗೆಯ್ವಂತು ಮಾಡು......' (ವಿಕ್ರಮಾರ್ಜುನವಿಜಯ ೧-೭೬ವ)*

ಎಂದು ಪರಶುರಾಮನಲ್ಲಿ ಹೇಳುವ ಮಾತಿನಲ್ಲಿ ಈ ಅಭಿಪ್ರಾಯವು ವ್ಯಕ್ತವಾಗಿರುತ್ತದೆ.

ಅಂಬೆಯ ಬಯಕೆಯಲ್ಲಿ ನಿರ್ದಿಷ್ಟ ಉದ್ದೇಶವಿದೆ. ಒಂದು: ಭೀಷ್ಮನನ್ನು ಮದುವೆಯಾಗುವುದು. ಇಲ್ಲಿ ಭೀಷ್ಮನು ಯುದ್ಧದಲ್ಲಿ ಗೆದ್ದವನು ಎನ್ನುವ ಕಾರಣವಿದೆ. ಎರಡು: ಸಾಲ್ವನನ್ನು ಮದುವೆಯಾಗುವುದು. ಸಾಲ್ವ ಆಕೆ ಇಷ್ಟಪಟ್ಟ ವರ. ಈ ಎರಡೂ

ಉದ್ದೇಶಗಳು ಹಾಳಾದಾಗ ಅಂಬೆಯಲ್ಲಿ ಪ್ರತಿಭಟಿಸುವ ಅಂಶವು ಹುಟ್ಟಿಕೊಂಡಿದೆ.

ಮೇಲೆ ಉಕ್ತವಾಗಿರುವ ಪ್ರಸಂಗಗಳಲ್ಲಿ ಪ್ರತಿಭಟನೆಯು ಗಂಡಿನ ಲಂಪಟತನದಿಂದ ಉಂಟಾದುದಾಗಿರುತ್ತದೆ.

**೫೧೬. ಪ್ರಮೇಯ**

ಪ್ರಮೇಯವೆಂದರೆ ವಿಷಯ ಎಂದರ್ಥ.

ಆಭಾಸವಾದಿಯ ಪ್ರಕಾರ ಪರತತ್ವವೊಂದನ್ನು ಬಿಟ್ಟರೆ ಉಳಿದೆಲ್ಲವೂ ಆಭಾಸ. ಎಲ್ಲಾ ಆಭಾಸಗಳೂ ಪರತತ್ವದ ಅಭಿವ್ಯಕ್ತಿಗಳು. ಪ್ರಮಾತೃ, ಪ್ರಮೇಯ, ಪ್ರಮಾಣ ಮತ್ತು ಪ್ರಮಿತಿ ಕೂಡ ಒಂದು ಆಭಾಸವೇ. ಆಭಾಸವು ಒಂದು ಬಿಡಿ ಅಭಿವ್ಯಕ್ತಿ. ವ್ಯಾವಹಾರಿಕ ಜೀವನದಲ್ಲಿ, ಅದಕ್ಕೆ ಒಂದೇ ಪದವನ್ನು ಬಳಸಲಾಗುತ್ತದೆ. ಜೀವಾತ್ಮದ ಪ್ರಕಾಶವು ಒಂದು ಬಿಡಿ ಗ್ರಾಹ್ಯ ಆಭಾಸದ ಕಡೆಗೆ ಚಲಿಸುವುದರಿಂದ ಜ್ಞಾನಕ್ರಿಯೆಯು ಪ್ರಾರಂಭವಾಗುತ್ತದೆ. ಆ ಪ್ರಕಾಶವು ಪ್ರತಿಬಿಂಬವನ್ನು ಗ್ರಹಿಸುತ್ತದೆ. ಈ ಕ್ರಿಯೆಯು ಮಾನಸಿಕ ಪ್ರತಿಕ್ರಿಯೆಯೊಂದಿಗೆ ಆಂತರಿಕ ಆಭಾಸದ ಉದಯದೊಂದಿಗೆ ಮುಗಿಯುತ್ತದೆ. (ಪ್ರತ್ಯಾಭಾಸಂಪ್ರಮಾಣವ್ಯಾಪಾರಃ) ಪ್ರಥಮಜ್ಞಾನವು ಬಹುಮಟ್ಟಿಗೆ ಸಾಮಾನ್ಯ(ಜಾತಿ) ದಂತಿರುತ್ತದೆ. ವೈಯಾಕರಣರು ಅದನ್ನು ಅರ್ಥ ಎಂದು ಭಾವಿಸುತ್ತಾರೆ. ಈ ಪ್ರಥಮಜ್ಞಾನವು ದೇಶಕಾಲಗಳ ಉಪಾಧಿಗಳಿಂದ ಮುಕ್ತವಾಗಿರುತ್ತದೆ. ಪ್ರತಿ ಆಭಾಸವು ಸತ್ಯವಾದುದು. ಏಕೆಂದರೆ ಅದು ಪ್ರಥಮಜ್ಞಾನಕ್ಕೆ ವಿಷಯವಾಗಿರುತ್ತದೆ. ಅದು ಮಾತ್ರವೇ ಮಾನಸಿಕ ಪ್ರತಿಕ್ರಿಯೆಗೆ ವಸ್ತು. ವ್ಯಾವಹಾರಿಕ ಜೀವನದಲ್ಲಿ ವಸ್ತುವೊಂದರ ಕಾರ್ಯಸಾಮರ್ಥ್ಯವು ಅದನ್ನು ಅವಲಂಬಿಸಿರುತ್ತದೆ. ಅನಂತರ ಎರಡನೆಯ ಹಂತ ಪ್ರಾರಂಭವಾಗುತ್ತದೆ. ಪ್ರಥಮ ಜ್ಞಾನಕ್ರಿಯೆಯಲ್ಲಿ ಪ್ರತ್ಯೇಕವಾಗಿ ಗ್ರಾಹ್ಯವಾದ ವಿಭಿನ್ನ ಆಭಾಸಗಳನ್ನು ಸಂಯೋಜಿಸುವುದೇ ಅದರ ಸ್ವರೂಪ. ಇದು ಆಭಾಸಗಳ ಸಂಯೋಜಿತ ರೂಪದಲ್ಲಿ ಪರಿಣಮಿಸುತ್ತದೆ. ಇದು(ಕೇವಲ ಜ್ಞಾನದ ವಿಷಯಕ್ಕಿಂತ ಭಿನ್ನವಾಗಿ) ಜ್ಞಾತೃವಿನ ಉದ್ದೇಶಕ್ಕನುಸಾರವಾದ ಕ್ರಿಯೆಗೆ ವಿಷಯವಾಗಿರುತ್ತದೆ. ಆದರೆ ವಿಷಯವು, ಎಂದರೆ ಆಭಾಸಗಳ ಸಂಯೋಜಿತ ರೂಪವು ವ್ಯಾವಹಾರಿಕ ಜೀವನದಲ್ಲಿ ಅದನ್ನು ಬಳಸಲು ಇಚ್ಛಿಸಿದಾಗ, ಕಾಲದೇಶಗಳಿಗೆ ಸಂಬಂಧಿಸಿರುತ್ತದೆ. ಅಂಥ ಇಚ್ಛೆ ಇರದಿದ್ದಾಗ, ಅದು ಕಾಲದೇಶಗಳಿಂದ ಮುಕ್ತವಾಗಿರುತ್ತದೆ. ಹೀಗೆ ಪ್ರಮೇಯವಾದ ಪ್ರತಿಯೊಂದು ಆಭಾಸವೂ ಜಾತಿಸಾಮಾನ್ಯವಾಗಿರುತ್ತದೆ. ಈ ಕಾರಣದಿಂದಲೇ ಪ್ರತಿಯೊಂದು ಪದವೂ ಜಾತಿ ಸಾಮಾನ್ಯಾರ್ಥಕವಾಗಿರುತ್ತದೆ. "ಇದು" ಎಂಬ ಶಬ್ದ ಕೂಡ ಪ್ರಮೇಯವಾದ ಎಲ್ಲಕ್ಕೂ ಸಮಾನವಾದ ಜಾತಿಸಾಮಾನ್ಯವಾದ "ಇದು" ಎಂಬುದನ್ನು ಸೂಚಿಸುತ್ತದೆ. ಆದ್ದರಿಂದ ಪ್ರಮೇಯವು ಒಂದು ಆಭಾಸ. ಅದು ಯಾವಾಗಲೂ ಜಾತಿಸಾಮಾನ್ಯ. ಸಂಯೋಜಿತ ರೂಪವು ಕಾಲದೇಶಗಳಿಂದ ಉಪಹಿತವಾಗಿರುವಲ್ಲಿ ಮಾತ್ರ ಅದು ವ್ಯಕ್ತಿ ವಿಶೇಷವಾಗುತ್ತದೆ. ಆದರೆ ಆ ಸಂದರ್ಭದಲ್ಲಿ ಅದು ಜ್ಞಾನಕ್ಕೆ ವಿಷಯವಾಗಿರದೆ ಕ್ರಿಯೆಗೆ ವಿಷಯವಾಗುತ್ತದೆ.

ಪ್ರಮೇಯದ ಕುರಿತು ಮೇಲಿನಂತೆ ಅಭಿನವಗುಪ್ತನು ವಿವರಿಸಿದ್ದಾನೆ.

ಆಧುನಿಕ ಅನೇಕ ಸಿದ್ಧಾಂತಗಳು ಪ್ರಮೇಯ. ಪ್ರಯೋಗ ಮತ್ತು ಫಲಿತಗಳನ್ನು ಆಧರಿಸಿಕೊಂಡಿವೆ. ಆಧುನಿಕ ವಿಜ್ಞಾನವು ಊಹೆಯನ್ನು ಆಧರಿಸಿಕೊಂಡು ಪ್ರಯೋಗಕ್ಕೆ ತೊಡಗುತ್ತದೆ. ಊಹೆಯನ್ನು ಪ್ರಮೇಯವೆಂದು ಕರೆಯಲಾಗುತ್ತದೆ. ಪ್ರಮೇಯ ಮತ್ತು ಪ್ರಯೋಗದ ಮೂಲಕ ಫಲಿತವು ನಿರ್ಧರಿತವಾಗುತ್ತದೆ. ವಿಜ್ಞಾನವು ಕಾರ್ಯ–ಕಾರಣ ಸಂಬಂಧವನ್ನು ವಿವೇಚಿಸುತ್ತದೆ.

*ವಿವರಗಳಿಗೆ ನೋಡಿ: ಜಿ. ಟಿ. ದೇಶಪಾಂಡೆ ೨೦೦೦ಅಭಿನವಗುಪ್ತ ಪುಟ. ೬೪–೬೫.*

### ೫೧೭. ಪ್ರಶಸ್ತಿ ಶಾಸನಗಳು

*"......ಪ್ರತಿಜ್ಞೆಕ್ಷರಾವಳಿವಿನ್ಯಸ್ತ ವಿಶಾಲ ನಿಶ್ಚಳ ಶಿಲಾಸ್ತಂಭಂ"*

*(ಸಾಹಸ ಭೀಮ ವಿಜಯಂ ೧–೫೫)*

ಪ್ರಶಸ್ತಿ ಎಂದರೆ ಹೊಗಳಿಕೆ, ಬಿರುದು ಎಂದು ಅರ್ಥ. ಪ್ರಶಸ್ತಿಶಾಸನಗಳು ಯಾವನೇ ಒಬ್ಬವ್ಯಕ್ತಿಯ ಕುರಿತು ಹೊಗಳಿಕೆಯ ಮಾತುಗಳನ್ನು ಹೊಂದಿರುತ್ತದೆ. ಅವನ ಬಿರುದುಗಳನ್ನು ದಾಖಲಿಸುತ್ತವೆ.

ಯಾವನೇ ಒಬ್ಬ ವ್ಯಕ್ತಿಯ ಗುಣಗಳನ್ನು ಕೀರ್ತಿಸುವ ಉದ್ದೇಶದಿಂದಲೇ ಹಾಕಿಸಲಾಗಿರುವ ಶಾಸನಗಳು ಇವು. ಇವು ಸಾಮಾನ್ಯವಾಗಿ ಶಿಲಾಶಾಸನಗಳೇ ಆಗಿರುತ್ತವೆ. ಅರಸನೋ, ಅಧಿಕಾರಿಯೋ ದತ್ತಿ, ದಾನ ನೀಡಿದಾಗ, ಲೋಕೋಪಯೋಗಿ ಕಾರ್ಯಗಳನ್ನು ಮಾಡಿದಾಗ, ಅವುಗಳನ್ನು ತಿಳಿಸುವ ನೆವದಲ್ಲಿ, ಆ ವ್ಯಕ್ತಿಯನ್ನು ಮತ್ತು ಅವನ ವಂಶವನ್ನೂ ಕೀರ್ತಿಸುವ ಉದ್ದೇಶವನ್ನೇ ಮಹತ್ವದನ್ನಾಗಿ ಈ ಬಗೆಯ ಶಾಸನಗಳು ಮಾಡುತ್ತವೆ. ಕೇವಲ ದಾನ ಮಾಡಿದ ಸಂದರ್ಭದಲ್ಲಿ ಮಾತ್ರವಲ್ಲ, ವಿರೋಚಿತವಾದ ಕಾರ್ಯವನ್ನು ಎಸಗಿದಾಗ, ಆಯಾ ಧರ್ಮವು ಶ್ರೇಷ್ಠವಾದುದು ಅಥವಾ ಕಠಿಣವಾದುದು ಎಂದು ಭಾವಿಸಿರುವ ವ್ರತವನ್ನು ಯಶಸ್ವಿಯಾಗಿ ನಡೆಸಿದಾಗ, ತನ್ನ ಜೀವದ ಮೇಲೆ ಆಸೆ ತೊರೆದು ತಾನು ನಂಬಿದ ಮೌಲ್ಯಗಳಿಗಾಗಿ ನಡೆಸಿದಾಗ, ತನ್ನ ಜೀವವನ್ನೇ ತೆತ್ತ ಮಹಾಸತಿಯರ, ವೀರರ, ಗರುಡರ ವಿಷಯವನ್ನು ತಿಳಿಸುವ ಕೆಲವು ಶಾಸನಗಳು ಅವರನ್ನು ಮನತುಂಬಿ ಕೀರ್ತಿಸಿವೆ ಎಂದು ಶೇಷಶಾಸ್ತ್ರಿ ಹೇಳುತ್ತಾರೆ.

ಇದರಲ್ಲಿ ಹೊಗಳಿಕೆಯು ಪ್ರಧಾನವಾಗಿ ಎದ್ದು ಕಾಣಿಸುತ್ತದೆ. ಕೀರ್ತನೆಯ ಸ್ವಭಾವವು ಇದರಲ್ಲಿ ಮುಖ್ಯವಾಗಿರುವುದರಿಂದ ಪ್ರಶಸ್ತಿ ಶಾಸನಗಳು ಎಂದು ಗುರುತಿಸಲ್ಪಟ್ಟಿವೆ.

*ವಿವರಗಳಿಗೆ ನೋಡಿ: ಆರ್. ಶೇಷಶಾಸ್ತ್ರಿ ೨೦೦೫ ಶಾಸನ ಪರಿಚಯ ಪುಟ. ೧೭.*

### ೫೧೮. ಪ್ರಸವಧರ್ಮಿಣಿ

ಭಾರತೀಯ ಪರಂಪರೆಯಲ್ಲಿ ಹೆಣ್ಣನ್ನು ಪ್ರಕೃತಿಯೆಂದೂ ಗಂಡನ್ನು ಪುರುಷನೆಂದೂ ಕರೆಯಲಾಗಿದೆ. ಸುಶ್ರುತನು ತನ್ನ ಸುಶ್ರುತ ಸಂಹಿತೆಯಲ್ಲಿ ಹೆಣ್ಣನ್ನು ಜಡ, 'ಏಕ',

ಪ್ರಸವಧರ್ಮಿಣೀ ಎಂದು ಗುರುತಿಸುತ್ತಾನೆ.

*ವಿವರಗಳಿಗೆ ನೋಡಿ: ಪಂಡಿತ ಎನ್.ಎಲ್. ಭಟ್ಟಾಚಾರ್ಯ ೧೯೭೩ ಸುಶ್ರುತ ಸಂಹಿತಾ ಪುಟ. ೨೩*

**೫೧೯. ಪ್ರಸೂತಿ**

*ಪ್ರಸೂತಿಯುಂ ಸದ್ಯೋಯೌವನಮುಮುಳ್ಳ ಕಾರಣದಿಂದಾಗಳೆ................*

*(ಪಂಪ ಭಾರತ ೩–೨೦ ವ)*

ದೈವ ಸಂಕಲ್ಪದಿಂದ ರಾಕ್ಷಸರಿಗೆ ಕೂಡಲೇ ಗರ್ಭವನ್ನು ಧರಿಸುವುದೂ, ಕೂಡಲೇ ಹೆತ್ತು ಕೂಡಲೇ ಯೌವನಪ್ರಾಪ್ತಿಯೂ ಉಂಟಾಗಿರುವುದರಿಂದ ಆಗಲೇ ಹದಿನಾರು ವರ್ಷದ ಬಾಲಕನಾಗಿರಲು ಪಾಂಡವರು ಅಲ್ಲಿ ಮೂರು ವರ್ಷಕಾಲವಿದ್ದು ವೇದವ್ಯಾಸರ ಉಪದೇಶದ ಪ್ರಕಾರ ಏಕಚಕ್ರಪುರಕ್ಕೆ ಹೋಗುವ ಕಾರ್ಯವನ್ನು ಆಲೋಚಿಸಿದರು.

ಪ್ರಸೂ ತಾಯಿ; ಜನನಿಯೆಂದರ್ಥ. ಪ್ರಸವಿಸು ಎಂದರೆ ಹೆರು; ಪ್ರಸೂತಿಯೆಂದರೆ ಹೆರು ಎಂದರ್ಥ.

ಪ್ರಸೂತಿ ಗೃಹವನ್ನು ಬೇರೆ ಮಾಡಬೇಕೆಂಬ ನಂಬಿಕೆಯಿದೆ. ಪ್ರಸೂತಿ ಗೃಹದಲ್ಲಿ ವೃದ್ಧರಾದ ಕಂಚುಕಿಯರು ಗರ್ಭಿಣಿಯರ ಸೇವೆಗೆ ಇರಬೇಕು. ಕುಸುಮ ಇತ್ಯಾದಿಗಳು ಅದನ್ನು ಆವರಿಸಿಕೊಂಡಿರಬೇಕು (೮–೩೫ವ). ಆದಿವಾಸಿಗಳಲ್ಲಿ ಇರುವ ನಂಬಿಕೆಯ ನವೀಕರಣ ರೂಪವಾಗಿ ಇದು ಕಂಡುಬರುತ್ತದೆ. 'ಕೆಲವರಲ್ಲಿ ಸ್ತ್ರೀಯು ಪ್ರಸವಿಸುವ ಮೊದಲು ಮನೆಗೆ ಸ್ವಲ್ಪ ದೂರದಲ್ಲಿ ಮರದ ಬಳಿ ಕಟ್ಟಿಸಿರುವ ಹಟ್ಟಿಯಲ್ಲಿ ವಾಸ ಮಾಡುತ್ತಾಳೆ. ಪ್ರಸವಿಸುವ ವೇಳೆಯಲ್ಲಿ ಅವಳ ಸಹಾಯಕ್ಕೆ ಯಾರು ಇರುವುದಿಲ್ಲ. ಕಾರಣವೇನೆಂದರೆ, ಪ್ರಸವ ಕಾಲದಲ್ಲಿ ಎಷ್ಟೋ ಸ್ತ್ರೀಯರು ಮೃತರಾಗುತ್ತಾರೆ. ಕೆಲವು ವೇಳೆ ನಿಶ್ಯಕ್ತರಾಗಿ ಅನೇಕ ಕಾಯಿಲೆಗಳಿಗೆ ತುತ್ತಾಗುತ್ತಾರೆ. ಹೆರುವ ಕ್ರಿಯೆಯ ಬಗೆಗಿನ ಭಯ ಮತ್ತು ಅದರ ಕುರಿತಂತೆ ಹುಟ್ಟಿದ ನಂಬಿಕೆಯೇ ಈ ಸಂಪ್ರದಾಯವನ್ನು ಹುಟ್ಟುಹಾಕಿರಬೇಕು.

*ವಿವರಗಳಿಗೆ ನೋಡಿ: ನಂಜಮ್ಮಣ್ಣಿ .ಎಂ ೧೯೭೧ ಸಾಮಾಜಿಕ ಮಾನವಶಾಸ್ತ್ರ ಪುಟ. ೧೫೩*

**೫೨೦. ಪ್ರಾಚೀನ**

ಪ್ರಾಚೀನ ಮಧ್ಯಕಾಲೀನ, ಆಧುನಿಕ ಎಂದು ಕರೆಯಲು ಪ್ರಾರಂಭಿಸಿದವರು ಬ್ರಿಟಿಶ್ ಚರಿತ್ರೆಕಾರರು. ಅವರು Ancient, Middle, Modern ಎಂದು ಕರೆಯಲು ಶುರುಮಾಡಿದರು. ಅವರ ಪ್ರಕಾರ, ಆಧುನಿಕ ಚರಿತ್ರೆಯೆಂದರೆ, ಕೈಗಾರೀಕರಣಗೊಂಡು, ವೈಜ್ಞಾನಿಕವಾಗಿ ಮುಂದುವರಿದ ಬಂಡವಾಳವಾದ ಹುಟ್ಟಿಕೊಂಡ ಮತ್ತು ಅಭಿವೃದ್ಧಿಯ ಕಡೆಗೆ ಕಣ್ಣುಹಾಯಿಸಿದ ಮತ್ತು ಸ್ವಯಂ ಲಾಭಕರ ಯುಗವನ್ನು ಕಂಡದ್ದೆಲ್ಲವೂ "ಆಧುನಿಕ". ಈ ಆಧುನಿಕ ಕಾಲದಲ್ಲಿ ನಿಂತುಕೊಂಡು ಚರಿತ್ರೆಕಾರ ಬ್ರಿಟನ್ನಿನ ಅಥವಾ ಒಟ್ಟಾಗಿ ಪಶ್ಚಿಮ ಸಮಾಜದಲ್ಲಿರುವ 'ಕಾಲ' Time ಮತ್ತು 'ಅವಕಾಶ' Space ಪರಿಕಲ್ಪನೆಯಿಂದಾಗಿ ಪುನರುಜ್ಜೀವನದ ಹಿಂದಿನ ಕಾಲವನ್ನು ಮಧ್ಯಯುಗೀನ ಎಂದು ಕರೆದು, ಅದಕ್ಕಿಂತಲೂ

ಹಿಂದಿನ ಕಾಲವನ್ನು ಪ್ರಾಚೀನವೆಂದು ಕರೆದರು. ಯಾವುದನ್ನು ಚರಿತ್ರೆಕಾರರು ಹೀಗೆ ಗುರುತಿಸುವ ಪ್ರಯತ್ನದಿಂದಾಗಿ "ಚರಿತ್ರೆ" (ಕಾಲ) ಒಂದು ಉದ್ದನೆಯ ಸರಳ ರೇಖಾಕೃತಿ ಪರಿಕಲ್ಪನೆಯು ಹುಟ್ಟಿಕೊಂಡಿತು.

ಪ್ರಾಚೀನ: ತುಂಬಾ ಹಳೆಯದು. ಫ್ಯೂಡಲ್ ಗುಣ ಹೊಂದಿರುವುದು.

ಮಧ್ಯಕಾಲೀನ: ಪರಿವರ್ತನೆಯ ಕಾಲದ ಯುಗ ಈ ಕಾಲದಲ್ಲಿ ಹಣದ ಚಲಾವಣೆ ರೂಪುಗೊಂಡಿತು. ಪ್ರಭುತ್ವ ಹಾಗೂ ಚರ್ಚ್‌ಗಳು ಸಮಾಜದ ಮೇಲೆ ಬೀರಿದ ಪ್ರಭಾವ ಕಡಿಮೆಯಾಗತೊಡಗಿತು. ಚರ್ಚಿನ ಹಾದಿ, ಪ್ರಭುತ್ವದ ಹಾದಿ ಬೇರೆಯಾಗ ತೊಡಗಿತು ಹಾಗೂ ಅವುಗಳ ನಡುವೆ ಒಳ ಒಪ್ಪಂದ ನಡೆಯಿತು.

ಆಧುನಿಕ – ಹಿಂದಿನ ಚರಿತ್ರೆಯನ್ನು ಗುರುತಿಸಿದರೆ ಈ ಯುಗ ಆಧುನಿಕವಾದದ್ದು, ಇಲ್ಲಿ ವ್ಯಕ್ತಿವಾದ ಬೆಳೆಯಿತು. ವಿಜ್ಞಾನ ತಂತ್ರಜ್ಞಾನವು ಮುಂದುವರಿಯಿತು. ವಿನಿಮಯ ಮೌಲ್ಯಗಳು ಬದಲಾದವು.

**೫೨೧. ಪ್ರಾಚೀನ ರಾಜಕೀಯ ವ್ಯವಸ್ಥೆ**

ಪ್ರಾಚೀನ ಕಾಲದ ರಾಜಕೀಯ ಸ್ವರೂಪವನ್ನು ಮುಖ್ಯವಾಗಿ ಹೀಗೆ ಪರಿಗಣಿಸ ಬಹುದು.

೧. ರಾಜ – ರಾಜಕೀಯದ ಪರಮೋಚ್ಚ ಅಧಿಕಾರ ಹೊಂದಿದವನು.

೨. ಮಂತ್ರಿ – ರಾಜನ ರಾಜಕೀಯ ವ್ಯವಹಾರದ ಸಲಹೆಗಾರ.

೩. ಸೇನಾಧಿಪತಿ – ಸೇನೆಯ ಅಧಿಕಾರಿ.

೪. ಪುರೋಹಿತ – ಧಾರ್ಮಿಕ ಮುಖಂಡ.

೫. ಪ್ರಜೆಗಳು – ಸಾಮಾನ್ಯ ಜನರು ಮತ್ತು ರಾಜನೀತಿಗೆ ಅನುಸಾರವಾಗಿ ಬದುಕುವವರು.

ಉದಾರವಾದಿಗಳ ಪ್ರಕಾರ ಯಾವುದೇ ಒಬ್ಬ ವ್ಯಕ್ತಿ ತನಗೆ ಬೇಕಾದ ರೀತಿಯಲ್ಲಿ ಬದುಕುವಂತಿಲ್ಲ. ವಸಾಹತು ಪೂರ್ವದಲ್ಲಿ ಇದನ್ನು 'ರಾಜದ್ರೋಹ' ಎಂದು ಕರೆಯಲಾಗುತ್ತಿತ್ತು. ಮೇಲೆ ಹೇಳಿದ ನಾಲ್ಕು ಅಂಶಗಳನ್ನು 'ವಚನ ಚಳುವಳಿ' ಮತ್ತು 'ದಾಸ ಚಳುವಳಿ'ಯು ಒಡೆಯಲು ಯತ್ನಿಸಿತು. ಅಂದರೆ ಅಧಿಕಾರದ ಪರಮೋಚ್ಚ ಅಧಿಕಾರವನ್ನು ಈ ಚಳುವಳಿಗಳು ಮುರಿಯಲು ಯತ್ನಿಸಿದ್ದರಿಂದ ಅವು ತಮಗೆ ಬೇಕಾದ ಪರಿಕಲ್ಪನೆಗಳನ್ನು ಹುಟ್ಟುಹಾಕಿದವು. ಉದಾ: ಎಲ್ಲಾ ವಚನಕಾರರು ಮತ್ತು ದಾಸರು ಹುಟ್ಟುಹಾಕಿರುವ 'ಕೂಡಲಸಂಗಮ', 'ಚನ್ನಮಲ್ಲಿಕಾರ್ಜುನ', 'ಆದಿಕೇಶವ', 'ಪುರಂದರವಿಠಲ' ಇವರು ಯಾರೂ ಲೌಕಿಕದ ಅಧಿಕಾರ ಉಳ್ಳವರಲ್ಲ. ಭೌತಿಕ ಅಗತ್ಯವನ್ನು ಮೀರಿದ ಪ್ರಭುಗಳು ಇವರು. ಇದಕ್ಕೆ ಸಂವಾದಿಯಾಗಿ ಹದಿನೇಳನೆಯ ಶತಮಾನದ ರಾಜಕೀಯ ತತ್ವಜ್ಞಾನಿ ಜೇಮ್ಸ್ ಹ್ಯಾರಿಂಗ್‌ಟನ್ ಹೇಳಿದ ಪ್ರಮುಖ ಅಂಶಗಳನ್ನು ಇಲ್ಲಿ ಗಮನಿಸಬಹುದು. ಉದಾರವಾದಿ ಮಾನವತಾವಾದವು ಅಧಿಕಾರದ

ಎರಡು ಸ್ವರೂಪವನ್ನು ವಿವರಿಸುತ್ತದೆ ಅಥವಾ ವ್ಯತ್ಯಾಸಗೊಳಿಸುತ್ತದೆ.

• ನಾಗರಿಕ ಮಾನವತಾವಾದವು (Civil Humanism) ವಾಸ್ತವದ ಅಧಿಕಾರವನ್ನು ಒಂದು ರೀತಿಯಲ್ಲಿ ವಿವರಿಸುತ್ತದೆ.

• ಆದರೆ ಕಾನೂನು ಆಧಾರಿತ (Dejure) ಪ್ರಭುತ್ವದ ಸ್ವರೂಪ ಬೇರೆ. ಇಲ್ಲಿ ಅಧಿಕಾರದ ಸ್ವರೂಪ ಬೇರೆಯಾಗುತ್ತದೆ. ಅಧಿಕಾರದ ಹೊಣೆ ಭಿನ್ನವಾದ ನಿಲುವನ್ನು ತಳೆಯುತ್ತದೆ. ಅಧಿಕಾರದ ಹೊಣೆಗಾರಿಕೆಯು ಸಾಕ್ಷ್ಯ, ವಸ್ತುನಿಷ್ಠತೆ ಮುಂತಾದ ಅಂಶಗಳನ್ನು ಒಳಗೊಂಡಿದೆ.

• ಕಾನೂನು ಆಧಾರಿತ (Dejure) ಅಧಿಕಾರದಲ್ಲಿ ಪ್ರಭುತ್ವವು ಹಕ್ಕುದಾರಿಕೆಯನ್ನು ಹೊಂದಿದೆ ಮತ್ತು ಅದು ತನ್ನ ಅಧಿಕಾರವನ್ನು ಅದರದೇ ಅನ್ನಬಹುದಾದ ನ್ಯಾಯವನ್ನು ರೂಪಿಸಿಕೊಳ್ಳುತ್ತದೆ.

ಆದರೆ ಈ ಎರಡೂ ಪ್ರಭು ಸಂಹಿತೆಯಲ್ಲಿ ಅಧಿಕಾರದ ಹೊಣೆಗಾರಿಕೆಯನ್ನು ಬೇರೆ ಬೇರೆ ರೀತಿಯಲ್ಲಿ ವಿವರಿಸುತ್ತವೆ.

**೫.೨೨. ಪ್ರಾಣಿವಧೆ**

*__ಪ್ರಾಣಿಗಳಂ__ ಕೊಲಲಾಗದು, ಲೋಗರ ವಸ್ತುವಂ ಕೊಳಲಾಗದು, ಸತ್ಯವನೇ ನುಡಿವುದು ಕಾಲೋಚಿತದಲ್ಲಿ ತನ್ನ ಶಕ್ತಿಯನಱಿದು ದಾನಮಂ ಮಾೞ್ಪುದು; ಪರಸ್ತ್ರೀಯರ ಮಾತನಾಡುವಲ್ಲಿ ಮೂಕನಾಗಿರ್ಪುದು; ತೃಷ್ಣೆಯೆಂಬ ತೊಱೆಯಂ ಕಟ್ಟುವುದು; ಗುರುಗಳಲ್ಲಿ ವಿನಯಂಗೆಯ್ವುದು..* (*ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ, ೩೩ ವಚನ*)

ಪ್ರಾಣಿಗಳನ್ನು ಕೊಲ್ಲಬಾರದು. ಜನರ ವಸ್ತುಗಳನ್ನು ಕಳಬಾರದು. ಸತ್ಯವನ್ನೇ ನುಡಿಯಬೇಕು. ಕಾಲೋಚಿತವಾಗಿ ತನ್ನ ಶಕ್ತಿಯನ್ನರಿತು ದಾನ ಮಾಡಬೇಕು. ಪರಸ್ತ್ರೀಯರನ್ನು ಕುರಿತು ಮಾತಾಡಬಾರದು. ಗುರುಗಳಲ್ಲಿ ವಿನೀತರಾಗಿರಬೇಕು. ಸರ್ವ ಪ್ರಾಣಿಗಳಲ್ಲಿಯೂ ಅನುಕಂಪ ಇಡಬೇಕು. ಇದು ಸರ್ವಶಾಸ್ತ್ರಗಳಲ್ಲೂ ಮಾನ್ಯ (ಗದ್ಯಾನುವಾದ: ಚಂದ್ರಶೇಖರ ಐತಾಳ). ಪ್ರಾಣಿವಧೆಯ ಬಗ್ಗೆ ವೈದಿಕ ಧರ್ಮವೂ ವಿರೋಧ ವ್ಯಕ್ತಪಡಿಸಿರುವುದನ್ನು ಪಂಚತಂತ್ರವು ನಿರೂಪಿಸುತ್ತದೆ.

ಮೊದಮೊದಲು ಪ್ರಾಣಿವಧೆಯನ್ನು ಹಿಂಸೆಯೆಂದು ಯಾರೂ ನಂಬುತ್ತಿರಲಿಲ್ಲ. ಯಜ್ಞ-ಯಾಗಾದಿಗಳಲ್ಲಿ ಪ್ರಾಣಿವಧೆಯನ್ನು ಮಾಡುತ್ತಿದ್ದರು. ಅಶ್ವಮೇಧಯಾಗದಲ್ಲಿ ಕುದುರೆಯನ್ನು ಬಲಿಕೊಡುತ್ತಿದ್ದರು. ಬಲಿಕೊಟ್ಟ ಕುದುರೆಯ ವಪೆಯನ್ನು ಯಾರು ತಿನ್ನಬೇಕು: ಕಾಲಿನ ಮಾಂಸಖಂಡವನ್ನು ಯಾರು ತಿನ್ನಬೇಕೆಂದು ಎಂಬ ಲೆಕ್ಕಾಚಾರವಿತ್ತು. ಹಾಗೆಯೇ ಯಾಗದಲ್ಲಿ ಕರುವಿನ ತಲೆಯನ್ನು ಕಡಿಯುತ್ತಿದ್ದರು. ಅದರಿಂದಾಗಿ ಜೈಮಿನಿ ಭಾರತದಲ್ಲಿ ವಾಲ್ಮೀಕಿಗೆ ಗೋಘ್ನ ಎಂದು ಕರೆದಿದ್ದಾರೆ. ಅಗ್ನಿಕಾರ್ಯದಲ್ಲಿ ಯೂಪಸ್ತಂಭವು ಕೂಡಾ ಪ್ರಧಾನವಾದುದು. ಯಾಗದಲ್ಲಿ ಪ್ರಾಣಿಯ ಶಿರಸ್ಸನ್ನು ಅಗ್ನಿಗೆ ಅರ್ಪಿಸಿ ಅನಂತರ ಅದನ್ನು ಪ್ರಸಾದ ರೂಪವಾಗಿ ಸ್ವೀಕರಿಸಿದ ಅನೇಕ ಉದಾಹರಣೆಗಳಿವೆ. ಮೃಧು:

ಜೈನಧರ್ಮದ ಪ್ರಚಾರದಿಂದಾಗಿ ಅಹಿಂಸೆಯ ತತ್ವವು ಪ್ರಧಾನವಾಯಿತು. ಮತ್ತು ಅದರಿಂದ ಯಾಗದಲ್ಲಿ ಪ್ರಾಣಿ ವಧೆ ನಿಷೇಧಿತವಾಯಿತು ಎಂಬ ಚರ್ಚೆಯೂ ಇದೆ.

ಪಶುಗಳ ಮೆಯ್ಯೊಳೆನಿತು ರೋಮಮುಂಟನಿತು ಬಾರಿತಾಂ ಕೊಲಿಸಿಕೊಂಬಂ ವೃಥಾ ಪಶುವಧೆಯಂ ಮಾಡಿದವಂ, ನರಕವನೆಯ್ದುವಂ, ಪಶುತ್ವವನೆಯ್ದುವಂ. (ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ, ಶ್ಲೋಕ ೨೯)

ವೃಥಾಪಶುವಧೆಯನ್ನು ಮಾಡಿದವನು ಪಶುವಿನ ಮೈಯಲ್ಲಿ ಎಷ್ಟು ರೋಮಗಳಿವೆಯೋ ಅಷ್ಟು ಬಾರಿ ತನ್ನನ್ನು ಕೊಲ್ಲಿಸಿಕೊಳ್ಳುವನು. ಅಲ್ಲದೆ ನರಕವನ್ನೂ ಪಶುತ್ವವನ್ನು ಹೊಂದುವನು. ಇದೊಂದು ನೀತಿಪಾಠ. ಮೂಲತಃ ಹಿಂಸೆ ಅನಗತ್ಯ ಎಂಬುದನ್ನು ಇದು ಪ್ರತಿಪಾದಿಸುತ್ತದೆ.

*ವಿವರಗಳಿಗೆ ನೋಡಿ: ಅಹಿಂಸೆ: ಯಜ್ಞ*

**೫೨೩. ಪ್ರಾಯಶ್ಚಿತ್ತ**

ಜೈನ ಕಾವ್ಯಗಳಲ್ಲಿ ಬರುವ ಸಾಮಾನ್ಯ ಪರಿಕಲ್ಪನೆಯಿದು.

ಪಶ್ಚಾತಾಪವೂ ಇಲ್ಲದೆ ಪ್ರಾಯಶ್ಚಿತ್ತಗಳನ್ನೂ ಆಚರಿಸದೆ ದುಷ್ಕರ್ಮಾಚರಣೆಯಲ್ಲಿ ನಿರತರಾಗಿರುವ ಜನರು ನರಕಗಳನ್ನು ಹೊಂದುತ್ತಾರೆ. ವಿಶ್ವರೂಪನ ಪ್ರಕಾರ ಇದು, ಉದ್ದೇಶಪೂರ್ವಕವಾಗಿ ಪಾಪವನ್ನಾಚರಿಸುವವರಿಗೆ ಮಾತ್ರ ಅನ್ವಯಿಸುತ್ತದೆ– ಉದ್ದೇಶವಿಲ್ಲದೆ ಪಾಪವನ್ನೆಸಗಿದವರಿಗಲ್ಲ. ಯಾಜ್ಞವಲ್ಕ್ಯರು ಇಲ್ಲಿ ಇಪ್ಪತ್ತೊಂದು ನರಕಗಳನ್ನು ಎಣಿಕೆ ಮಾಡಿದ್ದಾರೆ; ಇವು ಮನುವು ಕೊಟ್ಟಿರುವ ಪಟ್ಟಿಯೊಡನೆ ಚೆನ್ನಾಗಿ ಹೊಂದಿಕೊಳ್ಳುತ್ತವೆ. ನರಕಗಳು, ದುಷ್ಕರ್ಮಗಳಿಗೆ ಪ್ರಾಯಶ್ಚಿತ್ತವನ್ನಾಚರಿಸುವವರಿಗೋಸ್ಕರ ಇರುವುವೆಂಬ ವಿಷಯದಲ್ಲಿ ಬೇರೆ ಬೇರೆಯ ಪುರಾಣಗಳು ಐಕಮತ್ಯವನ್ನೂ ಹೊಂದಿವೆ. ಪರಮತು, ಈ ವಲಯಗಳ ಸಂಖ್ಯೆ ಮತ್ತು ವರ್ಣನೆಗಳಲ್ಲಿ ಒಂದು ಪುರಾಣಕ್ಕೂ ಇನ್ನೊಂದು ಪುರಾಣಕ್ಕೂ ಗಮನಾರ್ಹವಾದ ಭೇದವಿರುತ್ತದೆ. ಮನು ಮತ್ತು ಯಾಜ್ಞವಲ್ಕ್ಯ ಇವರಿಬ್ಬರೂ ನಾಸ್ತಿಕವನ್ನು ಉಪಪಾತಕಗಳಲ್ಲಿ ಸೇರಿಸಿರುವರೆಂದೂ ಈ ಶಬ್ದದ ಅರ್ಥವು ಮೇಧಾ ತಿಥಿ ಮತ್ತು ಇತರರ ಪ್ರಕಾರ, (ಸ್ವರ್ಗ ಮತ್ತು ನರಕಗಳೆಂಬ) 'ಪರಲೋಕ'ದ ಅಸ್ತಿತ್ವದಲ್ಲಿ ನಂಬಿಕೆ ಇಲ್ಲದಿರುವುದೆಂದೂ ಇಲ್ಲಿ ಉಲ್ಲೇಖಿಸಬೇಕಾಗಿದೆ. ಯಾಜ್ಞವಲ್ಕ್ಯ ಸ್ಮೃತಿಯ ಪ್ರಾಯಶ್ಚಿತ್ತಾಧ್ಯಾಯದ ಮೊಟ್ಟಮೊದಲ ಪಙ್ತಿಯಲ್ಲಿಯೇ ನರಕಗಳ ಉಲ್ಲೇಖವು ಅವೆರಡರ ಅವಿಭಾಜ್ಯ ಸಂಬಂಧವನ್ನು ತೋರಿಸುತ್ತದೆ. ಮೇಲೆ ಉದ್ಧರಿಸಿದ ಮನುವಿನ ಮೂಲಗ್ರಂಥದ 'ಮನುಷ್ಯನು ನರಕವನ್ನು ಬಯಸುತ್ತಾನೆ' ಎಂಬ ಪದಗಳನ್ನು ಪ್ರಯೋಗಿಸಿರುತ್ತಾರೆಂಬ ವಿಷಯವು ಇದನ್ನು ಹೆಚ್ಚು ಸ್ಥಿರೀಕರಿಸುತ್ತದೆ. ಆಶ್ಚರ್ಯಕರವೆನ್ನಿಸುವಂತೆ, ಮನು ಮತ್ತು ಯಾಜ್ಞವಲ್ಕ್ಯರ 'ಇಂದ್ರಿಯ ಭೋಗಗಳಲ್ಲಿ ಆಸಕ್ತಿ' ಎಂಬ ಪದಪುಂಜವನ್ನು ವಿಶ್ವರೂಪನು ಪ್ರಾಯಶ್ಚಿತ್ತಗಳ ಅಕರಣಕ್ಕೆ ಸಮಾನವೆಂದು ಅರ್ಥ ಮಾಡಿದ್ದಾನೆ.

ಮೇಧಾ ತಿಥಿಯ ಪ್ರಕಾರ ಪ್ರಾಯಶ್ಚಿತ್ತ ಶಬ್ದವು ರೂಢಿಯ ಅರ್ಥದಲ್ಲಿ ನೈಮಿತ್ತಿಕ ಕರ್ಮದ ಒಂದು ಪ್ರಭೇದವನ್ನು ಹೇಳುತ್ತದೆ. ಈ ಶಬ್ದವು ತಪಸ್ಸೆಂದು ಅರ್ಥಕೊಡುವ ಪ್ರಾಯಸ್ ಮತ್ತು ನಿರ್ಧಾರವೆಂದು ಅರ್ಥಬರುವ ಚಿತ್ರ ಇವುಗಳ ಒಂದು ಸಮಾಸವೆಂದು ನಿರ್ವಚನ ಮಾಡುತ್ತದೆ. ಪ್ರಾಯಶ್ಚಿತ್ತವು ಕೇವಲ ಪಾಪ ಪರಿಹಾರಕ್ಕೆ ಸಾಧನವೆಂದು ಸೂತ್ರ ಕಲ್ಪವು ಹೇಳುತ್ತದೆ.

ವಿಶ್ವರೂಪನ ಪ್ರಕಾರ ಉದ್ದೇಶಪೂರ್ವಕವಾಗಿ ಪಾಪವೆಸಗಿದವರಿಗೆ ನರಕವು ಲಭಿಸುತ್ತದೆ. ಯಾಜ್ಞವಲ್ಕ್ಯರು ಇಪ್ಪತ್ತೊಂದು ನರಕವನ್ನು ಹೇಳಿದ್ದಾರೆ. ವಿಶ್ವರೂಪನು ಪ್ರಾಯಶ್ಚಿತ್ತವನ್ನು ಅಕರಣಕ್ಕೆ ಸಮಾನವೆಂದು ಅರ್ಥಮಾಡಿದ್ದಾನೆ.

ತಾಯಿ, ಮಗಳು, ಸೊಸೆಯರೊಡನೆ ನಡೆಸಿದ ವ್ಯಭಿಚಾರಕ್ಕೆ ಅಗ್ನಿ ಪ್ರವೇಶವೇ ಪ್ರಾಯಶ್ಚಿತ್ತವೆಂದು ವಿಷ್ಣುವು ಹೇಳುತ್ತಾನೆ. ಮನುವಿನ ಪ್ರಕಾರ ಬ್ರಹ್ಮಘ್ನನು ಸ್ವೇಚ್ಛೆಯಿಂದಲೇ ಬಿಲ್ಲಾಳುಗಳ ಬಾಣಕ್ಕೆ ಗುರಿಯಾಗಬೇಕು. ಯಾಜ್ಞವಲ್ಕ್ಯನು ಶರೀರದ ಅತೀ ಮುಖ್ಯ ಭಾಗಗಳನ್ನು ಯಜ್ಞಕ್ಕೆ ಆಹುತಿ ಮಾಡಬೇಕೆಂದು ಹೇಳುತ್ತಾನೆ.

*ವಿವರಗಳಿಗೆ ನೋಡಿ: ಯುಗಯಾತ್ರೀ ಭಾರತೀಯ ಸಂಸ್ಕೃತಿ ೧೯೭೧ ಸಂಪುಟ. ೨ ಪುಟ. ೨೮೬*

**೫೨೪. ಪ್ರಾರಬ್ಧ**

*ಕ್ಷಣಚಂಚಚ್ಚಮರೀರುಹಂ ಪಟುನಟಪ್ರಾರಬ್ಧಸಂಗೀತಕಂ*
*ತಣಿದಂ ಸಂತತಮಿಂತು ದಿವ್ಯಸುಖದೊಳ್ ಸಂಸಾರಸಾರೋದಯಂ... ॥*

*(ಆದಿಪುರಾಣ ೨-೭೯)*

ಪ್ರಾರಬ್ಧವೆನ್ನುವುದನ್ನು ಹೀಗೆ ಬಳಸುತ್ತೇವೆ: ಇದು ನನ್ನ ಪ್ರಾರಬ್ಧ. ಅಂದರೆ ಹಣೆಬರಹ. ಬ್ರಹ್ಮನಿಂದ ಬರೆಯಲ್ಪಟ್ಟದ್ದು. ಇನ್ನೊಂದು–ಪ್ರಾರಬ್ಧಕರ್ಮ. (ಆರ್ಜಿತಕರ್ಮ ಎನ್ನುವ ಅರ್ಥದಲ್ಲಿ) ಅಂದರೆ ಹಿಂದಿನ ಜನ್ಮದಿಂದ ಬಂದಿರುವಂಥ ಪಾಪ–ಪುಣ್ಯಗಳ ಶೇಷ ಭಾಗಗಳು. ಪಂಪ ಇಲ್ಲಿ ಪ್ರಾರಬ್ಧ ಎಂದರೆ ಪ್ರಾರಂಭಿಸಲ್ಪಟ್ಟ ಎನ್ನುವ ಅರ್ಥದಲ್ಲಿ ಬಳಸುತ್ತಾನೆ. "ಪಟು–ನಟ ಪ್ರಾರಬ್ಧ ಸಂಗೀತ" ಎಂದರೆ ಪ್ರಾರಂಭಿಸಲ್ಪಟ್ಟ ಸಂಗೀತ ಮತ್ತು ನಟನೆಯು ರಂಗದ ಮೇಲೆ ಪ್ರದರ್ಶಿಸಲ್ಪಟ್ಟಿತು. ಇಲ್ಲಿ ಪ್ರಾರಬ್ಧವು ಉಪಕ್ರಮಿಸಲ್ಪಟ್ಟ ಎಂಬ ಅರ್ಥದಲ್ಲಿ ಬಳಕೆಯಾಗಿದೆ. ವೇದಾಂತದ ಪ್ರಕಾರ ಪ್ರಾರಬ್ಧಗಳು ಮೂರು – ಇಚ್ಛಾ ಪ್ರಾರಬ್ಧ; ಅನಿಚ್ಛಪ್ರಾರಬ್ಧ; ಪರೇಚ್ಛಾಪ್ರಾರಬ್ಧ, ಪ್ರಾರಬ್ಧಕರ್ಮ ಸಂಸ್ಕಾರಗಳು ನಾಲ್ಕು: ತೀವ್ರ, ಮಧ್ಯ, ಮಂದ, ಸುಪ್ತ.

**೫೨೫. ಪ್ರೇತ**

*ಬಿಡದಟಿಲ್ವಬಂಧುಜನದೊ*
*ಟ್ಟುಡಿಯದ ಕಣ್ಣೀರ ಪೂರಮಾ ಪ್ರೇತಮನೋ*
*ಗಡಿಸದೆ ಸುಡುವುದು ಗಡಮಿ*
*ನ್ನುಡುಗುವುದೀ ಶೋಕಮಂ ಸರೋಜದಳಾಕ್ಷಿ ॥ (೨-೨೮)*

ನಿರಂತರವಾಗಿ ಅಳುವ ಬಂಧುಜನಗಳ ಕಣ್ಣೀರಿನ ಪ್ರವಾಹವು ಆ ಪ್ರೇತವನ್ನು ಅಸಹ್ಯ ಪಡುವ ರೀತಿಯಲ್ಲಿ ಸುಡುವುದಿಲ್ಲವೆ ಎನ್ನುವುದು ಇಲ್ಲಿಯ ಭಾವಾರ್ಥ. ಸತ್ತವನು ಪ್ರೇತವಾಗುತ್ತಾನೆ ಎಂಬುದು ನಂಬಿಕೆ.

ಶರೀರವನ್ನು ಬಿಟ್ಟ ಜೀವವನ್ನು ಪಂಪನು ಪ್ರೇತವೆಂದು ಕರೆಯುತ್ತಾನೆ. ಯಾರಿಗೆ ಶವಸಂಸ್ಕಾರಗಳು ಸರಿಯಾಗಿ ಜರುಗುವುದಿಲ್ಲವೋ ಅಂಥವರು ಪ್ರೇತವಾಗುತ್ತಾರೆ. ಮತ್ತು ಕೆಲವರಿಗೆ ಪಿಂಡ ಪ್ರಧಾನ ಕಾರ್ಯವು ಜರುಗಿರುವುದಿಲ್ಲ. ಪಿಂಡಪ್ರಧಾನ ಶ್ರಾದ್ಧಾದಿ ಕರ್ಮಗಳು ಸರಿಯಾಗಿ ಜರುಗಿಲ್ಲವಾದರೆ ಅಂಥವರ ಜೀವಾತ್ಮವು ಸ್ವರ್ಗಕ್ಕೆ ಹೋಗುವುದಿಲ್ಲ. ಅವರ ಜೀವಾತ್ಮ ಪ್ರೇತವಾಗಿ ಕಾಡುತ್ತದೆ. ಪ್ರೇತವು ಮನುಷ್ಯರನ್ನು ಹಿಡಿಯುತ್ತದೆ. ಮತ್ತು ಪ್ರೇತವು ಹಿಡಿದ ಮನುಷ್ಯರು ನಮ್ಮನ್ನು ಕಾಡ ತೊಡಗುತ್ತಾರೆ. ಇದಕ್ಕೆ ಪೂರಕವಾಗಿ ಮತ್ತೊಂದು ನಂಬಿಕೆಯಿದೆ. ಅದೇಂದರೆ ಸತ್ತವರು ಬ್ರಾಹ್ಮಣರಾಗಿದ್ದು ಅವರಿಗೆ ಸರಿಯಾದ ರೀತಿಯಲ್ಲಿ ಶವಸಂಸ್ಕಾರವಾಗಿಲ್ಲವಾದರೆ ಅವರು ಬ್ರಹ್ಮರಾಕ್ಷಸರಾಗುತ್ತಾರೆ. ಮೂರು ತಲೆಮಾರಿನ ಹಿಂದಿನವರಿಗೂ ಪಿಂಡಪ್ರಧಾನ ಮಾಡುವುದು ಈ ಕಾರಣಕ್ಕೆ.

*ವಿವರಗಳಿಗೆ ನೋಡಿ: ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ.*

**೫೨೬. ಪಟಿಗುಟ್ಟು**

*ಪೊಟ್ಟಿಜಿನೆ ನೇಸಮ್ರ್ಮೂಡೆ ಗರುಡನಾಭಿಯೆಂಬ ಮಂತ್ರವಾದಿ ಬಂದು **ಪಟೆಗುಟ್ಟಿ** ಮಂತ್ರಿಸಿ ದಾಷ್ಟಿಕನನೆತ್ತಿದಂ............. (ಡಿ.ಎಲ್.ಎನ್.೨೦೦೯ ಪು.೫೯)*

ಪಟೆಗುಟ್ಟಿ ಎಂದರೆ ತಮ್ಮಟೆ ಬಡಿದು ಎಂದರ್ಥ.

ವಡ್ಡಾರಾಧನೆಯಲ್ಲಿ ಉಕ್ತವಾದಂತೆ ಮಂತ್ರವಾದವೂ ಒಂದು ಶಾಸ್ತ್ರವಿಷಯವಾಗಿತ್ತು. ವಾಮಾಚಾರಕ್ಕಾಗಿ ಮಂತ್ರವನ್ನು ಕಲಿತವರು ಮಂತ್ರವಾದಿ ಎನಿಸುತ್ತಾರೆ.

ಇಲ್ಲಿ ಗರುಡನಾಭಿಯೆಂಬ ಮಂತ್ರವಾದಿಯು ತಮಟೆ ಬಡಿದು ಮಂತ್ರಿಸುತ್ತಾನೆ. ವಾಸ್ತವವಾಗಿ ಮಂತ್ರವೆಂದರೆ ಪವಿತ್ರವಾದ ಶ್ಲೋಕಪಠಣವೆಂದು ಅರ್ಥ. ಆಧ್ಯಾತ್ಮಿಕ ಶಕ್ತಿಯನ್ನು ಇದು ಸೂಚಿಸುತ್ತದೆ. ಸಂಸ್ಕೃತದಲ್ಲಿ 'ಮನ್' ಅಂದರೆ ಆಲೋಚಿಸು ಎಂದರ್ಥ. ಇದು ಧ್ವನಿಯನ್ನು (ಸ್ವರ) ಅವಲಂಬಿಸಿದೆ. ಮಂತ್ರಗಳು ಆಚರಣೆಗೆ ಸಂಬಂಧಿಸಿವೆ. ಮಂತ್ರಗಳಲ್ಲಿ ಎರಡು ವಿಧ: ಒಂದು 'ಕಾಂತಿಕ' ಅಂದರೆ ದೊಡ್ಡ ಧ್ವನಿಯಲ್ಲಿ ಉಚ್ಚರಿಸುವುದು. ಮತ್ತೊಂದು 'ಅಜಪ' ಎಂದರೆ ಅಂತರಂಗದಲ್ಲಿ ಧ್ಯಾನಸ್ಥರಾಗಿ ನುಡಿಯುವುದು. ಇದರಲ್ಲಿ ಪುನರಾವರ್ತನೆಯಿರುತ್ತದೆ. ಯಾರು ಮಂತ್ರಗಳ ಮೂಲಕ ಆಚರಣೆ ಮಾಡುತ್ತಾರೋ ಅವರೆಲ್ಲ ಮಂತ್ರವಾದಿಗಳೇ. ಮಂತ್ರವಾದಿಗಳೆಂದರೆ ವಾಮಾಚಾರಿಗಳು ಎಂಬ ಅರ್ಥವೂ ಇದೆ. ಮಾಯಾ–ಮಾಟ ಮೊದಲಾದ ಆಚಾರಗಳನ್ನು ಮಾಡುವವರು ಮಂತ್ರವಾದಿಗಳು. ಇವರನ್ನು ನೀಚೋಪಾಸಕರೆಂದೂ ಕರೆಯುತ್ತಾರೆ. ವಡ್ಡಾರಾಧನೆಯಲ್ಲಿ ಬರುವ ಮಂತ್ರವಾದಿಯು ಈ ರೀತಿಯನ್ನು ಅನುಸರಿಸುತ್ತಾನೆ.

# ಬ

### ೫೨೭. ಬಂದಿಕಾರ

*...........ದುರ್ಯೋಧನಂ ಬಂದಿಕಾಱನಂತೆ ಸೆಱೆಗೆಯ್ದು*
*ವ್ರಣ ವೈದ್ಯನಂತೆ ಕೊಡಸಾರಿಯಂ ವಿಡಿದು ಸೂಳೆಯಂತೆ*
*ಕಱಿವುೞಿವನಱಿದುಂ ರಸವಾದಿಯಂತೆ................ (ಪಂಪ ಭಾರತ ೬–೨೭)*

ಬಂದಿಕಾಱನೆಂದರೆ ಸೆರೆ ಹಿಡಿಯುವವನು. ವಡ್ಡಾರಾಧನೆಯಲ್ಲಿ ತಳಾರನೆಂದು ಬರುತ್ತಾನೆ. ಬಂದಿಕಾಱನು ಮದ್ದಾನೆಗಳನ್ನು ಕುದುರೆಗಳನ್ನು ಒಡ್ಡಿದಾಗ ಬಂಧಿಸುತ್ತಾನೆ. ವೈದ್ಯನು ಹುಣ್ಣುಗಳಿಗೆ ಚಿಕಿತ್ಸೆ ನೀಡುತ್ತಾನೆ. ಸೂಳೆಯ ಹಾಗೆ ಕಳೆದು ಉಳಿದುದನ್ನೆಲ್ಲ ತಿಳಿದು, ಪಾದರಸದಿಂದ ಚಿನ್ನವನ್ನು ಮಾಡುವ ರಸವಾದಿಯಂತೆ ಎಂದು ಪಂಪ ಬಣ್ಣಿಸುತ್ತಾನೆ. ಬಂದಿಕಾರವೆನ್ನುವುದೇ ಉದ್ಯೋಗವೊಂದನ್ನು ಸೂಚಿಸುತ್ತದೆ.

*ವಿವರಗಳಿಗೆ ನೋಡಿ: ವೃತ್ತಿಗಳು*

### ೫೨೮. ಬಂಧ – ಮೋಕ್ಷ

ಮಾನವರು ಇತರರ ಒಳಿತಿಗಿಂತ ಹೆಚ್ಚಾಗಿ ತಮ್ಮ ಒಳಿತನ್ನು ಬಯಸುತ್ತಾರೆ. ತಾವು ಇತರರಿಗಿಂತ ವಿಶಿಷ್ಟವಾದ ಒಂದು ಆತ್ಮವನ್ನು ಪಡೆದಿದ್ದೇವೆಂದೂ, ಅದನ್ನು ಪೋಷಿಸಿಕೊಂಡು, ಇಲ್ಲಿಗೂ ಮುಂದಕ್ಕೂ ಕಾಪಾಡಿಕೊಳ್ಳಬೇಕೆಂದೂ ಅವರು ಭಾವಿಸುತ್ತಾರೆ. ಈ ಭಾವನೆಯೇ ಅತೀವ ದುಃಖಕ್ಕೆ ಕಾರಣ ಎಂಬುದನ್ನು ಬುದ್ಧನು ಚೆನ್ನಾಗಿ ಮನವರಿಕೆ ಮಾಡಿಕೊಂಡಿದ್ದನು. ಕೆಳಗಿನ ಐದು ಬಂಧಗಳಲ್ಲಿ (ಸಂಯೋಜನಾ) ಶಾಶ್ವತ ವ್ಯಕ್ತಿತ್ವದಲ್ಲಿ ನಂಬಿಕೆ ಮೊದಲನೆಯದು. ಮೇಲಿನ ಐದು ಬಂಧಗಳಲ್ಲಿ ಸ್ವರೂಪ ಪ್ರಪಂಚದಲ್ಲಿ ಬದುಕಬೇಕೆಂಬ ಆಸೆ ಮತ್ತು ಆರೋಪ ಪ್ರಪಂಚದಲ್ಲಿ ಬದುಕಬೇಕೆಂಬ ಆಸೆ ಮೊದಲಿನ ಎರಡು ತಮ್ಮೊಂದಿಗೆ ಇರುತ್ತಲೇ ಹೋಗುತ್ತದೆಂದು ಭ್ರಮಿಸಿರುವ ಆತ್ಮದ ಸತ್ಯತೆಯಲ್ಲಿ ಅವರಿಗಿರುವ ನಂಬಿಕೆಯನ್ನು ಕಳೆದುಕೊಳ್ಳುವಂತೆ ಅವರನ್ನು ಪುಸಲಾಯಿಸಿದರೆ ಆಗ ಅವರು ಈ ಪ್ರಪಂಚದಲ್ಲಿ ಸ್ವಾರ್ಥದ ವ್ಯರ್ಥತೆಯನ್ನು ಮನಗಾಣುತ್ತಾರೆ. ದೇಹ ಸತ್ತಮೇಲೆ ಒಂದು ಭವಿಷ್ಯಜೀವನ ಬೇಕೆಂದು ಹಂಬಲಿಸುವುದರ ವ್ಯರ್ಥತೆಯನ್ನು ಮನಗಾಣುತ್ತಾರೆ. ಬುದ್ಧನು ಶಾಶ್ವತವಾದ ಆತ್ಮ ಇಲ್ಲ. ಆದರೆ ವ್ಯಕ್ತಿತ್ವದ ನಿರ್ಮಿತಿಗೆ ಸೇರುವ ಸ್ಕಂಧಗಳು ಉಳಿದಿರುತ್ತವೆ. ಮತ್ತೆ ಸ್ಕಂಧಗಳು ಕರಗಬಹುದು, ಆದರೆ ಒಬ್ಬ ವ್ಯಕ್ತಿಯೆಂದು ಕರೆಯಲ್ಪಡುವ ಸ್ಕಂಧ ಸಮೂಹದ ಕರ್ಮಗಳೂ ಮತ್ತೊಂದು ತಾತ್ಕಾಲಿಕ ಸ್ಕಂಧ ಸಮೂಹಕ್ಕೆ ಹರಿಯುತ್ತವೆ. ಇದು ಬೇರೊಬ್ಬ ವ್ಯಕ್ತಿ. ಆತ್ಮವು ಜನ್ಮಾಂತರಗಳಾಗುವುದಿಲ್ಲ. ಆದರೆ ಕರ್ಮ ಆಗುತ್ತದೆ. ಇದರಿಂದ ನಮ್ಮ ಹೊಣೆಯ ಅರಿವು ಹೆಚ್ಚಾಗಬೇಕು. ನಮ್ಮ ಕಾರ್ಯಗಳಿಂದ ನಾವು ಸತ್ತಮೇಲೆ ನಮ್ಮದೇ ಕರ್ಮಗಳಿಂದಾಗಿ ಬರಲಿರುವ ಇನ್ನೊಂದು ವ್ಯಕ್ತಿಯ ಸಂತೋಷ ಅಥವಾ ಸಂಕಟದ ತಳಹದಿಯನ್ನು

ಹಾಕುತ್ತಿದ್ದೇವೆಂಬ ಅರಿವು ಆಗಬೇಕು. ಬ್ರಾಹ್ಮಣಗಳ ತಾತ್ವಿಕರು ಈ ಸಿದ್ಧಾಂತವನ್ನು ಟೀಕಿಸಿದರು. ಇಲ್ಲಿ ಎರಡು ಅಸಾಂಗತ್ಯಗಳು ಇವೆ ಎಂದು ಅವರು ಹೇಳಿದ್ರು. ಕರ್ತೃವು ತನ್ನ ಕಾರ್ಯಗಳ ಫಲವನ್ನು ತಾನೇ ಅನುಭವಿಸುವುದಿಲ್ಲ. (ಕೃತಪ್ರಣಾಶ) ಮತ್ತು ಅವನ ನೈತಿಕ ಕಾರ್ಯಗಳ ಫಲವನ್ನು ಬೇರೆ ಯಾವನೋ ಒಬ್ಬನು ಅನುಭವಿಸುತ್ತಾನೆ (ಅಕೃತಾಭ್ಯುಪಗಮ). ಬುದ್ಧನ ಪೂರ್ವಜನ್ಮಗಳಲ್ಲಿ (ಜಾತಕ) ನಂಬಿಕೆ ವಾಸ್ತವವಾಗಿ ಒಂದು ಬಗೆಯ ನಿರಂತರತೆಯನ್ನು ಗುರುತಿಸಿತ್ತು. ನೈತಿಕ ಕ್ರಿಯೆಯೊಂದರ ಫಲ ಪ್ರಾಚೀನ ಬೌದ್ಧಧರ್ಮದ ಪ್ರಕಾರ, ಒಬ್ಬ ದೈವೀ ನ್ಯಾಯವಿಧಾಯಕನನ್ನಾಗಲಿ, ಅದೇ ಆತ್ಮವು ಹಲವು ದೇಹಗಳಲ್ಲಿ ಮುಂದುವರಿಯುವುದನ್ನಾಗಲಿ ಅವಲಂಬಿಸಿರಲಿಲ್ಲ. ನೈತಿಕ ನಿಯಮ ತನ್ನ ಕ್ರಿಯೆಯಲ್ಲಿ ಸರ್ವತಂತ್ರ ಸ್ವತಂತ್ರವಾಗಿತ್ತು. ಅದು ತನ್ನ ಕೆಲಸವನ್ನು ನಿಲ್ಲಿಸುತ್ತಿದ್ದುದು, ಇನ್ನೂ ಉನ್ನತ ನಿಯಮವಾದ ಆಧ್ಯಾತ್ಮಿಕ ಬೋಧಿಯೂ ಸಂಚಿತ ಹಾಗೂ ಆಗಾಮಿನ್ ಕರ್ಮಗಳ ಫಲಗಳನ್ನು ಸ್ಥಗಿತಗೊಳಿಸಿದಾಗ ಆಗಲೂ ಪ್ರಾರಬ್ಧ ಕರ್ಮಗಳನ್ನು ಅದು ನಾಶಗೊಳಿಸಲಾರದು. ಒಬ್ಬ ಬುದ್ಧ ಅಥವಾ ಒಬ್ಬ ಅರ್ಹಂತನು ಉಪಾಧಿಶೇಷ ನಿರ್ವಾಣವನ್ನು ಪಡೆಯುತ್ತಾನೆ. ವೇದಾಂತದ ಪರಿಭಾಷೆಯಲ್ಲಿ ಹೇಳುವುದಾದರೆ ಜೀವನ್ಮುಕ್ತನಾಗುತ್ತಾನೆ. ಸಾಯುವವರೆಗೂ ದೇಹ ಕೆಲಸಮಾಡುತ್ತಲೇ ಇರುತ್ತದೆ. ಆದರೆ ಎಲ್ಲ ಆಸೆಗಳೂ ಇಂಗಿರುವುದರಿಂದ ಅವನ ಆತ್ಮವು ಪುನರ್ಜನ್ಮಕ್ಕೆ ಅವಶ್ಯಕವಾದ ಚಲನಶಕ್ತಿಯನ್ನು ಪಡೆದಿರುವುದಿಲ್ಲ. ದೇಹ ಬಿದ್ದುಹೋದ ಮೇಲೆ ಅನುಪಾಧಿಶೇಷ ನಿರ್ವಾಣವನ್ನು ಅವನು ಪಡೆಯುತ್ತಾನೆ. ಬೇರೆ ದೇಹಧಾರಣೆ ಆಗುವುದಿಲ್ಲ. ವ್ಯಕ್ತಿತ್ವವಾಗಿ ರೂಪುಗೊಂಡಿದ್ದ ಪ್ರಜ್ಞೆಯ ಪ್ರವಾಹ ಬತ್ತಿಹೋಗಿರುತ್ತದೆ. ಇನ್ನು ಮುಂದೆ ಸಂಗ್ರಹಿತವಾದ ಕರ್ಮಗಳು (ಕಪ್ಪು, ಬಿಳುಪು, ಅಥವಾ ಮಿಶ್ರಿತ) ಪಕ್ವವೂ ಆಗವು (ವಿಪಾಕ) ಫಲವನ್ನೂ ಕೊಡವು (ಫಲ).

ಮಾಲುಂಕ್ಯಪುತ್ತ, ಉತ್ತಿಯ ಮತ್ತು ವಚ್ಚಗೊತ್ತ ಮುಂತಾದ ಅನ್ವೇಷಕ ಮತಿಗಳು ಕಥಾಗತನು ಸತ್ತಮೇಲೆ ಏನಾಗುತ್ತಾನೆಂದು ತಿಳಿಯಲು ಕುತೂಹಲಿಗಳಾದುದು ಸಹಜ. ಬುದ್ಧನು ಪವಿತ್ರ ಜೀವನವನ್ನು ನೇರವಾಗಿ ಕುರಿತುದಲ್ಲದೆ, ನಿರ್ವೋಹ, ನಿಃಕಾಮನೆ, ದುಃಖಕ್ಕೆ ತಡೆ, ಶಾಂತಿ, ಉನ್ನತವಾದ ಆಧ್ಯಾತ್ಮಿಕ ಬೋಧನೆಗಳಿಗೆ ಎಡೆಗೊಡದ ವಿಚಾರಗಳಲ್ಲಿ ಕುತೂಹಲ ತೋರಿಸುವುದನ್ನು ನಿರುತ್ಸಾಹಗೊಳಿಸುತ್ತಿದ್ದನು. ಅವನು ಹೇಳುತ್ತಿದ್ದನು (ಉದಾ: ಪಾಸಾದಿಕಸುತ್ತಂತದಲ್ಲಿ): ತಾನು ತಿಳಿದುಕೊಂಡಿದ್ದ ವಿಷಯಗಳಲ್ಲಿ ಕೆಲವನ್ನು ಬೇಕೆಂದೇ ಸ್ಪಷ್ಟವಾಗಿ ವಿವರಿಸಲು ಬಯಸಲಿಲ್ಲ (ಅವ್ಯಾಕೃತ) ಅವುಗಳಲ್ಲಿ ನಿರ್ವಾಣಾನಂತರ ಬುದ್ಧನ ಪರಿಸ್ಥಿತಿಯೂ ಒಂದು. ಏಕೆಂದರೆ ಅದರ ಪರಿಶೀಲನೆ ವ್ಯರ್ಥ, ಸಂಪ್ರದಾಯಬಾಹಿರ ಎಂದು ತಾನು ಭಾವಿಸಿದ್ದುದರಿಂದ. ಭಾರತೀಯ ತತ್ವಜ್ಞಾನ ಬಹುಮುಖ್ಯ ಪರಿಕಲ್ಪನೆಗಳಲ್ಲಿ ಇದೂ ಒಂದು. ಸಂಸಾರವನ್ನು ವೇದಾಂತವು ಬಂಧವೆಂದು ಕರೆಯುತ್ತದೆ. ಅದರಿಂದ ಬಿಡುಗಡೆ ಹೊಂದಿದಾಗ ದೊರೆಯುವುದು ಮೋಕ್ಷ. ಮೋಕ್ಷವೆನ್ನುವುದು ಆತ್ಯಂತಿಕವಾದ ಚರಮಾವಸ್ಥೆ. ಆದರೆ ಅನಂತರ ಪುನರ್‌ಜನ್ಮವಿಲ್ಲ.

ಆದುದರಿಂದ ವೇದಾಂತವು ಮೋಕ್ಷವನ್ನು ಅಂತಿಮ ಪದವಿಯೆಂದು ಅಂಗೀಕರಿಸುತ್ತದೆ.

*ವಿವರಗಳಿಗೆ ನೋಡಿ: ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦*

*ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ ಪುಟ. ೧೬೮-೧೬೯*

*ಅಜಿತ ತೀರ್ಥಂಕರ ಪುರಾಣ ತಿಲಕ ೨*

**೫೨೯. ಬಟ್ಟಾಡು**

*ತನ್ನೋರಗೆಗಳಪ್ಪ ಪಲಂಬರ್ ಮಾಣಿಗಳ್ವೆರಸು ಪೊಜಿವೊಟಲೊಳ್ ಬಟ್ಟಾಡುತ್ತಿರೆ*

*(ವಡ್ಡಾರಾಧನೆ ೭೩-೨೨)*

ಬೊಟ್ಟಾಡು (ಕ್ರಿ) ೧) ದುಂಡಗಿರುವ ವಸ್ತುಗಳಾದ ಚೆಂಡು, ಗೋಲಿ ಬಚ್ಚ ಮೊದಲಾದುವುಗಳಿಂದ ಆಡು: ಚೆಂಡಾಟ, ಗೋಲಿಯಾಟ ಮೊದಲಾದುವುಗಳನ್ನು ಆಡು:

ಬಟ್ಟಾಟದ ಕುರಿತು ವಡ್ಡಾರಾಧನೆಯಲ್ಲಿ ಬರುತ್ತದೆ. ಬಟ್ಟಾಟವೆಂದರೆ ಬಿಲ್ಲೆಯಾಟ. ಇದು ಹೊರಾಂಗಣ ಕ್ರೀಡೆಯ ಪ್ರಕಾರಗಳಲ್ಲಿ ಒಂದು. ಬಿಲ್ಲೆಯಾಟವೆಂದರೆ ಕುಂಟೋಬಿಲ್ಲೆ ಯಾಗಿರಬಹುದು. ಇದು ಹೊರಾಂಗಣ ಕ್ರೀಡೆಯ ಪ್ರಕಾರ ಕುಂಟೋ ಬಿಲ್ಲೆಯಲ್ಲಿ ಹುಡುಗಿಯರ ಪಾತ್ರ ಮಹತ್ವದ್ದು.

**೫೩೦. ಬಡಿಗರು**

ಪ್ರಾಚೀನ ಕಾಲದಿಂದಲೂ ಮರದ ಕೆತ್ತನೆ ಕೆಲಸದ ಮೂಲಕ ಅರಮನೆ, ದೇವಾಲಯ, ಮನೆ, ಕೃಷಿಗೆ ಬೇಕಾದ ಉಪಕರಣಗಳನ್ನು ತಯಾರಿಸುವ ಬಡಿಗರನ್ನು ಪಂಚಾಳರಲ್ಲಿ ಸೇರಿಸುತ್ತಾರೆ. ಬಡಿಗ, ಅಕ್ಕಸಾಲಿ, ಕಂಬಾರ, ಕಂಚುಗಾರ, ಕಲ್ಕುಡಿಗ–ಈ ಐವರನ್ನು ಪಂಚಾಳರೆಂದು ಕರೆಯುತ್ತಾರೆ. ಸಾಮಾನ್ಯವಾಗಿ ಕರಕುಶಲ ಕಲೆಯಲ್ಲಿ ಇವರು ಪರಿಣಿತರಾಗಿರುತ್ತಾರೆ.

ವಡ್ಡಾರಾಧನೆಯ 'ಗುರುದತ್ತ ಭಟಾರರ ಕಥೆ'ಯಲ್ಲಿ ಅಂಥ ಪರಿಣಿತ ಕರಕುಶಲಿಗಳ ಉಲ್ಲೇಖ ಬಂದಿದೆ. ಧಾತ್ರಿವಾಹನವೆಂಬ ಅರಸು ವಿಶ್ವಕರ್ಮ ವಿಶ್ವಮತಿ ಎಂಬ ತನ್ನ ಇಬ್ಬರು ಬಡಗಿಗಳನ್ನು ಕರೆಸಿ "ಆಱುದಿಂಗಳೊಳಗೆ ನೀಮಿರ್ವರುಮೋರೊರ್ವರ ಯ್ನೂಱು ರಥಂಗಳಂ ಬೇಗಂ ಮಾಡಿ ಎನಗೆ" ಒಪ್ಪಿಸಬೇಕೆಂದು ಅಪ್ಪಣೆ ಮಾಡುತ್ತಾನೆ. ಅರಸನ ಆಜ್ಞೆಯಂತೆ ವಿಶ್ವಕರ್ಮನು ಆರು ತಿಂಗಳಲ್ಲಿ ಐನೂರು ರಥಗಳನ್ನು ನಿರ್ಮಿಸಿ ಕೊಡುತ್ತಾನೆ. ಅದಕ್ಕೆ ಅರಸನು ಸಂತೋಷಪಟ್ಟು ಅವನಿಗೆ ತುಷ್ಟಿದಾನವನ್ನು ನೀಡುತ್ತಾನೆ. ಇದರಿಂದ ಬಡಿಗರು ತಮ್ಮ ಕೆಲಸದಲ್ಲಿ ಎಷ್ಟೊಂದು ಪರಿಣಿತಿ ಹೊಂದಿದ್ದರೆಂಬುದು ಗೊತ್ತಾಗುತ್ತದೆ. ಹಾಗೆಯೇ ಬಡಿಗರು ಇಂಥ ತಮ್ಮ ಕೆಲಸಕ್ಕೆ ಸಂಭಾವನೆಯನ್ನು ಪಡೆಯುತ್ತಿದ್ದರೆಂದು ತಿಳಿದು ಬರುತ್ತದೆ. ಇನ್ನು ವಿಶ್ವಕರ್ಮನು ನಿರ್ಮಿಸಿದ "ಗಾಲಿಯುಂ ಪದಿನಯ್ದು ದಿವಸಂಬರೆಗಂ ತನಗೆ ತಾನೆಯಂತರಿಕ್ಷದೊಳ್ ನೆಲನಂ ಮುಟ್ಟದೆ ತಿಱ್ರನೆ"

ತಿರುಗುತ್ತಿತ್ತು ಎಂಬುದನ್ನು ನೋಡಿದಾಗ ಅವರು ಅಪ್ರತಿಮಾ ಕೌಶಲ್ಯವುಳ್ಳವರಾಗಿದ್ದರೆಂದು ಗೊತ್ತಾಗುತ್ತದೆ. (ಡಿ. ಎಲ್. ಎನ್. ೨೦೦೯ ಪು. ೧೯೧)

ಇಂತಹ ಅನೇಕ ಉದಾಹರಣೆಗಳು ಕನ್ನಡ ಸಾಹಿತ್ಯದಲ್ಲಿ ಸಿಗುತ್ತವೆ. ಮರದ ಕೆಲಸಗಳನ್ನು ಮಾಡುವವನು ಬಡಗಿ (ಸಂ. ವರ್ಧಕಿ) ಪ್ರಾಚೀನ ಕಾಲದಲ್ಲಿ ದೇವಸ್ಥಾನಕ್ಕೆ ಸಂಬಂಧಿಸಿದ ಮರಗೆಲಸಗಳನ್ನು ಮಾಡಲು ಮುರಿದು ಹೋದ ಸಾಮಾನುಗಳನ್ನು ಸರಿಪಡಿಸಲು ಇವರಿಗೆ ಶಾಶ್ವತವಾದ ದತ್ತಿಗಳನ್ನು ಬಿಟ್ಟು ಕೊಡುತ್ತಿದ್ದರು. (BK I . I, i. 68, 1032 AD, EC III sa. 109. 1042 AD,) ತಕ್ಷ ಎಂದರೆ ಬಡಿಗ, ತಕ್ಷ್ ಆಖ್ಯಾತದ ಮುಖ್ಯಾರ್ಥ: ಮಾಡು ನಿರ್ಮಿಸು, ರೂಪಿಸು. ತಕ್ಷಕನು ಎಂದರೆ ಬಡಿಗನು ಮಾತ್ರವಲ್ಲ ಕುಶಲ ಕಲಾವಿದನು ಎಂಬರ್ಥವಾಗುತ್ತದೆ. ನಾಟಕದ ಸೂತ್ರಧಾರನೆಂದೂ ಅರ್ಥವಿದೆ. ಸೃಷ್ಟಿಕರ್ತ ವಿಶ್ವಕರ್ಮನಿಗೆ ತಕ್ಷಕ ಎಂದು ಹೆಸರಿದ್ದುದಾಗಿ ತಿಳಿಯುತ್ತದೆ.

ತ್ವಷ್ಟಾ (ಪ್ರಜಾಪತಿ: ವಿಶ್ವಕರ್ಮನು) ದೇವತೆಗಳ ಶಿಲ್ಪಿ ಎಂದು ಅಥರ್ವಣವೇದದಲ್ಲಿದೆ.

ವಿಶ್ವಕರ್ಮನಿಂದ ರಚಿತವಾದ ಒಂದು ಸೂಕ್ತವು ಋಗ್ವೇದದ ಹತ್ತನೆಯ ಮಂಡಲ ದಲ್ಲಿದೆ. ವಿಶ್ವಕರ್ಮನು ಸೃಷ್ಟಿಕರ್ತನೆಂದು ವರ್ಣಿಸಲ್ಪಟ್ಟಿದ್ದಾನೆ. ಇವನು ವಿಶ್ವತೋಮುಖನು. ಕಾಲಿನಿಂದ ಸ್ವರ್ಗವನ್ನೂ ಕೈಯಿಂದ ಭೂಲೋಕವನ್ನೂ ನಿರ್ಮಿಸುತ್ತಾನೆ. ವಿಶ್ವಕರ್ಮ ನಿಗಾಗಿ ಯಾಗಗಳು ಆಗುತ್ತಿದ್ದವು. ಋಗ್ವೇದದ ೧ನೆಯ ಮತ್ತು ೧೦ನೆಯ ಮಂಡಲದಲ್ಲಿ ಅನೇಕ ಹೊಸ ಮಾತುಗಳು ಬರುತ್ತದೆ. 'ಕಂ' ದೇವರ ಸೂಕ್ತದಂತೆ ವಿಶ್ವಕರ್ಮನು ಕುರಿತು ವರ್ಣನೆಯೂ ಹೊಸದು. ವಿಶ್ವನಿರ್ಮಾಣ ಮತ್ತು ಸಂರಕ್ಷಣದ ಏಕಮೇವ ಅಧಿಕಾರಿ ಯಾರು, ಎಂಬ ವಿವಾದಗಳ ಪ್ರತಿಧ್ವನಿ ಇಂತಹ ಕೆಲವು ಸೂಕ್ತಗಳಲ್ಲಿ ಕೇಳಬರುತ್ತದೆ. ಇಂದ್ರನ ಅದ್ವತೀಯತ್ವದ ಕಾಲವು ಮುಗಿದು ಆ ಸ್ಥಳವನ್ನು ತಮ್ಮ ತಮ್ಮ ಇಷ್ಟದೇವರಿಗೆ ದೊರಕಿಸಿ ಕೊಡುವಲ್ಲಿ ಋಷಿವರ್ಗದಲ್ಲಿ ಸ್ಪರ್ಧೆ ನಡೆದಂತೆ ತೋರುತ್ತದೆ. ಇಂದ್ರ ಸಂಪ್ರದಾಯದಲ್ಲಿ ಈ ನೂತನ ಪಂಥದ ಪಕ್ಷಪಾತಿಗಳ ಸಂಖ್ಯೆ ಹೆಚ್ಚುತ್ತಾ ಹೋಗಿ ಯಜ್ಞಸಂಸ್ಥೆಯ ಪ್ರಭಾವವು ಕ್ಷೀಣವಾಗುತ್ತ ಹೋಗಿರಬೇಕೆಂದು ಮುಂದಿನ ಕಾಲದ ಘಟನೆಗಳಿಂದ ಅರ್ಥವಾಗುತ್ತದೆ.

ಋಗ್ವೇದ ಕಾಲದಲ್ಲಿ ಶಿಲ್ಪವಿದ್ಯೆ ಸಾಕಷ್ಟು ಉನ್ನತ ಸ್ಥಿತಿಯಲ್ಲಿ ಇತ್ತು. ಅಂದಿನ ವಿವಿಧ ಪ್ರಕಾರದ ಅಲಂಕಾರಗಳು, ಪಾತ್ರೆಗಳು, ನಿವಸನಗಳು, ಯಜ್ಞವೇದಿಕೆಯ ಪ್ರಕಾರಗಳು ಇವೆಲ್ಲವುಗಳ ರಚನೆ ತಜ್ಞರಿಂದಲ್ಲದೆ ಬೀಡಿಹೋಕರಿಂದ ಆಗದು. ದೇವತೆಗಳೂ ರಾಜರೂ ರಥಗಳಲ್ಲಿ ತಿರುಗುತ್ತಿದ್ದರು. ಯುದ್ಧದಲ್ಲಿ ಬಂಡಿಗಳು ಮೊದಲು ಬೇಕು. ಉಭಯ ಪಕ್ಷದವರ ರಥಕಾರರು ಆಯುಧ ಸಿದ್ಧಪಡಿಸುವವರು ಇರಲೇಬೇಕು. 'ರಥೇಭ್ಯೋ ರಥಕಾರೇಭ್ಯೋ ನಮಃ' ಎಂಬ ವಂದನೆಯ ಮಂತ್ರವುಂಟು. ಈ ಮಂತ್ರವು ರುದ್ರಾಧ್ಯಾಯದಲ್ಲಿ ಬರುತ್ತದೆ. ಶೈವಸಂಪ್ರದಾಯಕ್ಕೆ ಸೇರಿದ ಜನವಿರಬೇಕೆಂದು ಎನಿಸುತ್ತದೆ. ಪಾಂಚಾಲರು ಇಂದು ವಿಶ್ವಕರ್ಮ ಬ್ರಾಹ್ಮಣರು ಎನಿಸುತ್ತಾರೆ ಎಂದು ಶಂಬಾ ಹೇಳುತ್ತಾರೆ.

ಅರ್ವಾಚೀನ 'ವಿಶ್ವಕರ್ಮ' ಬ್ರಾಹ್ಮಣರನ್ನು ಪಾಂಚಾಳರೆಂದು ಕರೆವ ವಾಡಿಕೆಯು, ಈ ಹಿನ್ನೆಲೆಯಲ್ಲಿ ವಿಶೇಷಾರ್ಥ ಪಡೆಯುತ್ತದೆ. ಉಪ್ಪಾರ, ಕಮ್ಮಾರ, ಬಡಿಗ, ಕಂಚುಗಾರ, ಸೊನ್ನಾರರೆಂಬ ಐದು ಶಾಖೆಗಳೆಲ್ಲ ಕೂಡಿ ಪಾಂಚಾಳರೆಂಬ ಹೆಸರು ಇರುವುದು ನಿಜ ಎಂದು ಶಂಬಾ ಹೇಳುತ್ತಾರೆ.

ತ್ವಷ್ಟಾರನೆಂದರೆ ಬಡಿಗ. 'ತಕ್ಷ್: ಕೆತ್ತು-ಬಾಚು, (ನುಣಪಾದ ಆಕಾರ ನಿರ್ಮಿಸು) ಆಖ್ಯಾತ ಸಾಧಿತ ನಾಮ-ಸಂಕೇತ, ತಷ್ಟು ಮತ್ತು ತಕ್ಷಕ.

ಕರ್ಣಾಟದೊಳಗಿನ ಅಮೃತ ಶಿಲ್ಪಿ ಜಕ್ಕ(ಣ)>ಯಕ್ಷ ಈ ಶಬ್ದ-ಪ್ರತಿಮೆಯ ಮೂಲಕ ದೊರೆವ ಮೌಲಿಕ ಪ್ರಕಾಶವು, ಋಗ್ವೇದದ ತ್ವಷ್ಟಾರ=ವಿಶ್ವಕರ್ಮರ ಸ್ಪಷ್ಟೀಕರಣಕ್ಕೆ ಉಪಯುಕ್ತವಿದೆ. ಕೇನೋಪನಿಷತ್ತಿನ 'ಯಕ್ಷ'ವು ಋಗ್ವೇದ ತ್ವಷ್ಟಾರ-ವಿಶ್ವಕರ್ಮ ಬಗೆಯ ಅದೇ ಅರ್ಥಗರ್ಭದ ಇನ್ನೊಂದು ಸಂಕೇತ ಎಂಬುದನ್ನೂ ಮನಗಾಣಿಸಿ ಕೊಡುತ್ತಿದೆ. ಈ ಪಾಂಚಾಳ ಮನೆತನಗಳು 'ಕಾಳೀ' ಉಪಾಸಕರವು! 'ಯಕ್ಷ' ಪ್ರತಿಮೆಯೊಡನೆ, ಕೇನೋಪನಿಷತ್ತಿನಲ್ಲಿ ಉಮಾ ಹೈಮವತಿಯು ಬರುತ್ತಾಳೆ. ವೇದದಲ್ಲಿ ಬರುವ 'ರಥಕಾರ'ರ ಉಲ್ಲೇಖಗಳಲ್ಲಿ ಈ ವಿಶ್ವಕರ್ಮ ಪರಂಪರೆಯವರು ಕೆಲವರು ಒಳಗೊಳ್ಳುತ್ತಿರಬೇಕು. ಋಭುಗಳು ಇವರಿಗೆ ಹತ್ತಿರದವರಾಗಿ ಕಾಣುತ್ತಾರೆ. ಸರ್ಪವಿದ್ಯೆಗಾಗಿ, ಮಂತ್ರ ಔಷಧಿಗಳಲ್ಲಿ ತಜ್ಞರೆಂದು, ನಿಕ್ಷಿಪ್ತ ಧನವನ್ನು ಕಾಣುವ ಅಂಜನಾದಿಗಳನ್ನು ಬಲ್ಲವರೆಂದು, ಪ್ರತಿಮಾ ಶಿಲ್ಪಿಗಳೆಂದು ಇವರ ಮನೆತನಗಳು ಕಳೆದ ತಲೆಮಾರಿನವರೆಗೂ ಪ್ರಖ್ಯಾತವಿದ್ದುವು ಎಂದು ಶಂಬಾರವರ ಅಭಿಪ್ರಾಯ. ಬಡಿಗರು ಬಹಳ ಹಿಂದಿನಿಂದಲೂ ತಮ್ಮ ಕುಶಲಕರ್ಮಕ್ಕೆ ಹೆಸರಾದವರು. ಕರ್ನಾಟಕದ ಸಾಂಸ್ಕೃತಿಕ ಪರಂಪರೆಗೂ ಅವರಿಗೂ ನಿಕಟ ಸಂಬಂಧವಿದೆ. ಪ್ರಾಚೀನ ಕೆತ್ತನೆಯ ಕೆಲಸಗಳಲ್ಲಿ ಅವರ ಕೊಡುಗೆಯೂ ಅಪಾರವಾಗಿದೆ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೩*

*ಹಾಲುಮತ ದರ್ಶನ ಪುಟ ೧೫೫, ೧೬೦, ೨೨೫, ಸಂಪುಟ ೪ ಪುಟ ೨೨೫, ೨೨೬.*

**೫೩೧. ಬತ್ತಮಾರಾಟ**

*ಇಂತಿವು ಮೊದಲಾಗೊಡೆಯ ಚಿತ್ರ ಕಥೆಗಳಂ ಪಟದೊಳ್ ಬರೆದು ಜನಂಗಳ್ಗೆ ತೋಱಿ ಪೇೞ್ದು ಬತ್ತಮಂ ಕಳ್ದೊ ನೀತನೊರ್ವಂ ಮೈನಯಿಕನೆಂಬೊಂ ಕಳ್ಳಂ ಮತ್ತೊರ್ವಂ ವೈನಯಿಕನೆಂಬೊಂಗಾಸಕ್ತರಾಗಿ ಕೇಳ್ವ ಜನಂಗಳ ದಾನ್ಯಮನಱುಮತ್ತುಬಳ್ಳಮನಿ(ರ್ಪ) ತ್ತು ಬಳ್ಳಮಂದಳೆಗುಮೀತನೊರ್ವ ವೈಕನೆಂಬೊಂಕಳ್ಳಂ ಮತ್ತೊರ್ವಂ ವ್ಯೋಮಕನೆಂಬೊಂ ವೈನೈಕನ ಕಳ್ದ ಧಾನ್ಯಮನೆಲ್ಲಮನಲ್ಲಿಯೆ ನೆಲಮನೆಯೊಳಗಿರ್ದು ಕಿಱಿದಾನುಮೊಂದು ಛಿದ್ರದ್ವಾರದೊಳಗಣ್ಗೆ ಬತ್ತಮಂ ಬರೆ ಕೊಳ್ವಂ ಪೊಱಗಣಳೆದ ಬತ್ತಮಂ ನೋಟಕ್ಕೆ ಕಿಱಿದಪ್ಪಂತಿರೆ ಇಂತು ಮೂವರುಮೊಂದಾಗಿ* **ಬತ್ತಮಂ ಮಾಱುವರಾ** *ಬತ್ತಂಗಳಂ ಕಳ್ದುಕೊಳ್ವರೀ ಪ್ರಕಾರದಿಂ ಮೂವರ್ಗಂ ಕಾಲಂ ಸಲೆ....................*

*(ಡಿ.ಎಲ್.ಎಸ್.೨೦೦೯ ಪು.೬೪)*

ಬಳ್ಳವೆಂದರೆ ಬತ್ತವನ್ನು ಅಳೆಯುವ ಸಾಧನ. ಕುಡುತೆ, ಸೇರು, ಬಳ್ಳಗಳು ಅಳತೆಯ ಪ್ರಮಾಣಗಳು. 'ವ್ಯಾಪಾರಂ ದ್ರೋಹಚಿಂತನಂ' ಎಂಬ ಮಾತಿನಂತೆ, ಅಲ್ಲದೆ 'ಪುಸಿಯದ ಬೇಹಾರಿಯೇ ಇಲ್ಲ' ಎಂಬಂತೆ ಆ ಕಾಲದಲ್ಲೂ ಬತ್ತವ್ಯಾಪಾರದಲ್ಲಿ ಮೋಸ ನಡೆಯುತ್ತಿದ್ದುದನ್ನು ಇದು ಹೇಳುತ್ತದೆ.

ಅಕ್ಕಿ ಆ ಕಾಲದಲ್ಲಿ ಆ ಪ್ರದೇಶಗಳ ಪ್ರಮುಖ ಆಹಾರ ಧಾನ್ಯವಾಗಿತ್ತು. ಪಾಲಿ ಗ್ರಂಥಗಳಲ್ಲಿ ಹಲವು ಬಗೆಯ ಬತ್ತಗಳು ಹಾಗೂ ಬತ್ತದ ನಾಟಿಗೆ ಸೂಕ್ತ ಶಬ್ದ ಬಳಕೆಯಾಗಿದೆ. ಬುದ್ಧನ ಕಾಲದಲ್ಲಿ ನಾಟಿ ಆರಂಭವಾಗಿರಬೇಕೆಂದು ತೋರುತ್ತದೆ. ಇದರಿಂದ ಬತ್ತದ ಉತ್ಪಾದನೆ ಅಪಾರವಾಗಿ ಹೆಚ್ಚಿತು. ಜೊತೆಗೆ ರೈತರು ಬಾರ್ಲಿ, ದ್ವಿದಳ ಧಾನ್ಯಗಳು, ಸಾಸಿವೆ, ನವಣೆ ಮುಂತಾದವು ಹತ್ತಿ ಹಾಗೂ ಕಬ್ಬುಗಳನ್ನು ಬೆಳೆಸುತ್ತಿದ್ದರು. ಅಲಹಾಬಾದ್ ಮತ್ತು ರಾಜಮಹಲ್‌ಗಳ ನಡುವಣ ಮೆಕ್ಕಲು ಮಣ್ಣಿನ ವಿಪುಲ ಫಲವತ್ತತೆ ಹಾಗೂ ನೇಗಿಲಿಗೆ ಕಬ್ಬಿಣದ ಗುಳ ಹೂಡಿದುದು ಇವೆರಡೂ ಕೂಡಿ ಕೃಷಿಯಲ್ಲಿ ಅಪಾರ ಅಭಿವೃದ್ಧಿ ಸಾಧ್ಯವಾಯಿತು ಎಂದು ಆರ್. ಎಸ್. ಶರ್ಮ ಹೇಳುತ್ತಾರೆ.

*ವಿವರಗಳಿಗೆ ನೋಡಿ: ಆರ್.ಎಸ್. ಶರ್ಮ ೨೦೦೭ ಪ್ರಾಚೀನ ಭಾರತ ಪುಟ. ೧೨೧*

### ೫೩೨. ಬತ್ತಲಿಗಸವಣ

*ಸೋಮಶರ್ಮನೆಂದನೀಯಯ್ಯುಮಣುಬ್ರತಮಂ ಕೈಕೊಂಡು ದೃಢಬ್ರತೆಯಾಗು ಸುವ್ರತೆಯಾಗು ಮಗಳೆ ಅವಗ್ಗೊಪ್ಪಿಸಲ್ವೇಡೆಂತುಮಾ ನಿರ್ಲಜ್ಜಂ **ಬತ್ತಲಿಗನಪ್ಪ ಸವಣ**ನಲ್ಲಿಗೆವೋಗಿ ಕಂಡು ನುಡಿದು ಕಾಡಿ ಬರ್ಪಂ ಬಾ ಮಗಳೆ ಎಂದು ಮಗಳನೊಡಗೊಂಡು ರಿಸಿಯರಲ್ಲಿಗೆ ಪೋಗಿ ..............*

*(ಡಿ. ಎಲ್. ಎನ್. ೨೦೦೯. ಪು. ೬೬)*

ಸೋಮಶರ್ಮನೆಂಬ ಬ್ರಾಹ್ಮಣ 'ಬತ್ತಲಿಗ ಸವಣ'ನ ಬಗ್ಗೆ ಮಾಡುವ ಟೀಕೆಯಿದು. 'ಬತ್ತಲಿಗ ಸವಣ'ನೆಂದರೆ ದಿಗಂಬರ ಸನ್ಯಾಸಿ ಎಂದರ್ಥ. 'ನನ್ನ ಮಗಳಿಗೆ ಯಾಕೆ ಅಣುವ್ರತವನ್ನು ಕೊಟ್ಟಿರಿ' ಎಂದು ಸೋಮಶರ್ಮನು ದಿಗಂಬರ ಸನ್ಯಾಸಿ ಸೂರ್ಯಮಿತ್ರ ಭಟಾರರ ಹತ್ತಿರ ಕೇಳುತ್ತಾನೆ. ಅದಕ್ಕೆ ಸೂರ್ಯಮಿತ್ರ ಭಟಾರರು 'ನಿಮ್ಮ ಮಗಳಲ್ಲ ತಮ್ಮ ಮಗಳು' ಎಂದು ಹೇಳುತ್ತಾರೆ. ಇಲ್ಲೊಂದು ಲೋಕೋಕ್ತಿ ಬಳಕೆಯಾಗಿದೆ. 'ಎಮ್ಮ ಮಗಳಿಗೆ ಬ್ರತವನ್ನು ಕೊಟ್ಟರೆ ನಿಮಗ್ಯಾಕೆ ಬೇನೆ?" ಸವಣರ ಮಾತಿದು. ಅನಂತರ ಅವಳು ಸೂರ್ಯಮಿತ್ರ ಭಟಾರರನ್ನು ಆಶ್ರಯಿಸುತ್ತಾಳೆ. ಇಲ್ಲಿ ಬ್ರಾಹ್ಮಣನ ಮಗಳಿಗೆ ಜೈನ ಸವಣನು ದೀಕ್ಷೆ ಕೊಡುವುದು ಗಮನಾರ್ಹ ಸಂಗತಿಯಾಗಿದೆ. ಎರಡನೆಯದಾಗಿ ಬ್ರಾಹ್ಮಣರ ಹುಡುಗಿಯು ಮತಾಂತರ ಹೊಂದಿರುವುದನ್ನು ಸೂಚಿಸುತ್ತದೆ. ಸವಣನು ಬ್ರಾಹ್ಮಣ ಹುಡುಗಿಗೆ ಅಣುವ್ರತವನ್ನು ಕೊಟ್ಟ ಮೇಲೆ ಅವಳನ್ನು ಜೈನಮತಕ್ಕೆ ಸೇರಿಸಿಕೊಳ್ಳುವ ಪ್ರತಿಕ್ರಿಯೆಯ ಭಾಗವಾಗಿ ಸವಣನು ತಮ್ಮ ಮಗಳು ಎಂದು ಕರೆಯುತ್ತಾನೆ. ಮೂರನೆಯದಾಗಿ ಇಲ್ಲಿ ಗಮನಿಸಬೇಕಾದ ಅಂಶವೆಂದರೆ

ವೈದಿಕ ಧರ್ಮದಲ್ಲಿ ಸ್ತ್ರೀಯರಿಗೆ ವ್ರತದ ದೀಕ್ಷೆಯಿಲ್ಲ.

**೫೩೩. ಬನದಬ್ಬೆ**

'ನೆಲನೆಲ್ಲಂ ಕೊಂಡಾಡುವೆಕ್ಕಲವಿರಿಯುಂ **ಬನದಬ್ಬೆಯುಂ** ಮಹಾಲಕ್ಷ್ಮಿಯುಂ ಕಂಚಿಯ ಕಾಮ ಕೋಟಿಯುಂ ಪಿಟ್ಟಾಪುರದ ವಾರಿಕಬ್ಬೆ ಶಾಕಿನಿಯುಂ ಪೊಣರ್ಮಾಲೆಯ ಮಂಗಳಾದೇವಿಯುಂ ಮೈಲಾಪುರದ ಕಾಮಾಕ್ಷಿಯೆಂಬವ ಮೊದಲಾದ ಮಹಾವ್ಯಂತರಗಳ' ಎಂದು ಬರುತ್ತದೆ. (ಧರ್ಮಾಮೃತ ೯-೧೦೮) 'ಮಾರಿಯಂ ಬಳಾರಿಯುಂ ಸಾಯ್ಗುಂ' (೨-೧೩೩) 'ಈತನೊಡನೆ ಮಾರಿಯುಂ ಬಳಾರಿಯುಂ ನುಡಿಗೆ (೪-೨೫೧) ಇಂಥ ನಯಸೇನ ಮಾತುಗಳು ಮಾರಿ ಮತ್ತು ಬಳಾರಿಗಳಿದ್ದುದನ್ನು ಸೂಚಿಸುತ್ತದೆ. ನಯಸೇನನು 'ಮಾರಿಗುತ್ತ'ವೆಂದು ಕರೆದಿರುವುದು (೮-೧೬೧) ಕಾಲರಾ ಬೇನೆಯೆಂದು ತೋರುತ್ತದೆ. (ಮಲ್ಲಾಪುರ ಬಿ.ವಿ. ೧೯೭೬ ಪು.೩೦೪) ಬನದಬ್ಬೆಯ ಕುರಿತು ನಯಸೇನನು ಉಲ್ಲೇಖಿಸುತ್ತಾನೆ. ಈ ದೇವತೆ ವಸಂತಾಂಬೆ ಇರಬಹುದೇ ಎಂದು ಪಿ.ಬಿ. ದೇಸಾಯಿಯವರು ಶಂಕಿಸಿದರೆ ಅವಳು ದುರ್ಗಿಯ ನಾಮಾಂತರಗಳಲ್ಲೊಂದಾದ ಭದ್ರಾಂಬಾ ಇರಬಹುದು ಎಂದು ಡಿ.ಎಲ್. ನರಸಿಂಹಾಚಾರ್ಯರು ಊಹಿಸುತ್ತಾರೆ. (ಶಬ್ದವಿಹಾರ ಪು.೪೮-೫೩) ಬಾದಾಮಿಯ ಬಳಿ ಈಗಲೂ ಪ್ರಸಿದ್ಧವಾಗಿರುವ ಬನಶಂಕರಿಗೆ 'ಬನದಬ್ಬೆ' ಎಂಬುದು ಮತ್ತೊಂದು ಹೆಸರು. ಶಾಸನಗಳಲ್ಲಿ 'ಬನದೇವಿ' ಎಂದು ಕರೆದಿದೆ. ಬಾದಾಮಿ ಅಮವಾಸ್ಯೆಯಲ್ಲಿ ಅಲ್ಲಿ ವಿಶೇಷ ಪೂಜೆ ಉಂಟು ಬನದಬ್ಬೆಯು ಸಸ್ಯಾಧಿದೇವತೆಯಾಗಿರಬೇಕೆಂದು ಚಿದಾನಂದಮೂರ್ತಿಯವರು ಊಹಿಸುತ್ತಾರೆ. (ಅದೇ ಪು. ೧೩೯) 'ಆಗಮಗಳಲ್ಲಿ ನೀಲಕಂಠೀ, ಕ್ಷೇಮಂಕರೀ ಹರಸಿದ್ಧಿ, ರುದ್ರಾಂಶದುರ್ಗಾ ವನದುರ್ಗ, ಅಗ್ನಿದುರ್ಗಾ, ಜಯದುರ್ಗಾ (ಜಲದುರ್ಗಾ) ವಿದ್ಯವಾಹಿನಿ, ರಿಪುಮಾರೀ ಎಂಬ ಹೆಸರುಗಳು ನವದುರ್ಗೆಯ ಹೆಸರುಗಳೆಂದು ಸಸ್ಯ ಪ್ರಪಂಚಕ್ಕೆ ಅಭಿಮಾನೀ ದೇವತೆಯೆನಿಸಿ ಶಾಕಾಂಬರಿಯಾಗಿ ಇರುತ್ತದೆಂದು ಎಸ್.ಕೆ.ರಾಮಚಂದ್ರರಾವ್ ಅವರು ಅಭಿಪ್ರಾಯ ಪಡುತ್ತಾರೆ. ಈ ದೃಷ್ಟಿಯಿಂದ ಬನದಬ್ಬೆಯು ದುರ್ಗೆಯ ಮತ್ತೊಂದು ಹೆಸರೆಂದೂ, ಅದು ಶಕ್ತಿಪೂಜೆಯನ್ನು ಸಂಕೇತಿಸುತ್ತದೆಯೆಂದೂ ತಿಳಿದುಕೊಳ್ಳಬಹುದಾಗಿದೆ. ನಯಸೇನನ ಪ್ರಕಾರ, 'ಇವು ವ್ಯಂತರ ದೇವತೆಗಳು ಹೊರಗೆ ಇವು ನೆಲೆಯೂರಿರುತ್ತದೆ'. ಬನದಬ್ಬೆಯ ಕುರಿತು ಚಿದಾನಂದಮೂರ್ತಿಯವರು 'ಅಮ್ಮ' 'ಅಬ್ಬೆ' 'ಅಲ್ಲಮ' 'ಬಾದುಬ್ಬೆ' ಲೇಖನದಲ್ಲಿ ಚರ್ಚಿಸಿದ್ದಾರೆ.

*ವಿವರಗಳಿಗೆ ನೋಡಿ: ಬಾದುಬ್ಬೆ ಪ್ರಬುದ್ಧ ಕರ್ಣಾಟಕ ೩೨-೪ ಪುಟ. ೮೧-೮೨*

*ಚಿದಾನಂದಮೂರ್ತಿ ಎಂ. ೧೯೭೬ ಸಂಶೋಧನಾ ತರಂಗ ಪುಟ. ೧೨೩, ೧೩೬, ೧೪೦*

*ರಾಮಚಂದ್ರ ರಾವ್ ಎಸ್.ಕೆ. ೧೯೭೫ ಮೂತಿಶಿಲ್ಪದ ನೆಲೆ-ಹಿನ್ನೆಲೆ ಪುಟ. ೧೭೫*

೫೩೪. ಬಹುಪತ್ನಿತ್ವ

*ಈಜಂಬೂದ್ವೀಪದಭರತಕ್ಷೇತ್ರದೊಳ್‌ಮಗಧೆಯೆಂಬುದುನಾಡಲ್ಲಿರಾಜಗೃಹಮೆಂಬುದು ಪೊಽಲದನಾಳ್ವೊಂಉಪಶ್ರೇಣಿಕನೆಂಬೊನರಸನಾತಂಗೆಜಯಾವತಿಮಹಾದೇವಿ ಮೊದಲಾಗಿಮೂಸಾಸಿರರಸಿಯರ್ಕಳಂತವರಿಷ್ಟವಿಷಯಕಾಮಭೋಗಂಗಳನನುಭವಿಸುತ್ತಂ ಪಲಕಾಲಂ ಸಲೆ ಮತ್ತೊಂದು ದಿವಸಂ..* (ಡಿ.ಎಲ್.ಎನ್.೨೦೦೯ ಪು.೨೦೬).

ಬಹುಪತ್ನಿತ್ವದ ಬಗೆಗೆ ಮೇಲಿನ ಪಠ್ಯಭಾಗ ಉಲ್ಲೇಖಿಸುತ್ತದೆ.

ಸುಕೌಶಳ ಸ್ವಾಮಿಯ ಕುರಿತಂತೆ ಹೇಳುತ್ತಾ 'ಸುಕೌಶಳ ಸ್ವಾಮಿಯು ಮೂದತ್ತಿರ್ವ್ವರ ಪೆಂಡಿರ್ಕಳೊಡನೆ ಇಷ್ಟ ವಿಷಯ ಕಾಮಭೋಗ ಸುಖಂಗಳಂ ಪಲಕಾಲಮನುಭವಿಸುತ್ತಿರೆ... (ಅದೇ ಪು.೯೫) ಇದು ಬಹುಪತ್ನಿತ್ವವನ್ನು ಕುರಿತ ಸೂಚನೆಯಾಗಿದೆ. ಬಹುಪತ್ನಿತ್ವದ ಸೂಚನೆಯು ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಅನೇಕ ಕಡೆ ಬರುತ್ತದೆ. 'ಆಸ್ತಿಯ ಸ್ವರೂಪಕ್ಕೆ ಅನುಗುಣವಾಗಿ ಬಹುಪತ್ನಿತ್ವದಲ್ಲಿ ಸಂಖ್ಯೆಯೂ ಕೂಡಾ ಬದಲಾಗುತ್ತದೆ. ಆಯಾಯಾ ವ್ಯಕ್ತಿಯ ಆಸ್ತಿಯ ವೈಭವಕ್ಕೆ ಅನುಗುಣವಾಗಿ ರೂಪುಗೊಳ್ಳುವ ಈ ರೀತಿಯ ಸಂಬಂಧಗಳು ನಿರ್ದಿಷ್ಟ ಸಂಖ್ಯಾಮಿತಿಯನ್ನು ಹೊಂದಿಲ್ಲ. ಈ ಅರ್ಥದಲ್ಲಿ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಬಹುಪತ್ನಿವಲ್ಲಭರಾದ ನಾಯಕರು ಸಿಗುವುದಕ್ಕೂ ಇವರು ಸಾಮಾನ್ಯವಾಗಿ ರಾಜರುಗಳು ಆಗಿರುವುದಕ್ಕೂ ನಿಕಟವಾದ ಸಂಬಂಧವಿದೆ. ಇವರು ಮೇಲು ವರ್ಗದ ಪ್ರತಿನಿಧಿಗಳೂ ಆಗಿರುತ್ತಾರೆ ಎನ್ನುವುದು ಗಮನಾರ್ಹ.

ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಕಾಣಿಸುವ ಮತ್ತೊಂದು ವಿವಾಹ ಕ್ರಮವೆಂದರೆ, ಬಹುಪತ್ನಿತ್ವದ ಪದ್ಧತಿ. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಬಹುತೇಕ ಕಡೆಗಳಲ್ಲಿ ಈ ರೀತಿಯ ಉಲ್ಲೇಖಗಳಿವೆ. ಗಂಡಸರು ಆಚರಿಸುತ್ತಿದ್ದ ಬಹುಪತ್ನಿತ್ವವು ಮುಖ್ಯವಾಗಿ ಗುಲಾಮಗಿರಿಯ ಪ್ರತೀಕವೆಂದೂ, ಇದು ಮಾತೃ ಅಧಿಕಾರವನ್ನು ಅಳಿಸಿ ಹಾಕಿದ ನಂತರದ ಬಹುಮುಖ್ಯ ಬೆಳವಣಿಗೆಯೆಂದೂ ಏಂಗೆಲ್ಸ್ ಹೇಳುತ್ತಾನೆ. ಇದಕ್ಕೆ ಶಾಸ್ತ್ರದ ಸಮ್ಮತಿಯೂ ಇದೆ. ಈ ರೀತಿಯ ವಿವಾಹ ಕ್ರಮದಲ್ಲಿ ಹೆಣ್ಣಿಗೆ ಹೆಚ್ಚಿನ ಸ್ಥಾನಮಾನವು ಕಲ್ಪಿತವಾಗಿರುವುದಿಲ್ಲ. ವಾಸ್ತವವಾಗಿ ಕನ್ನಡ ನಾಡಿನ ಚರಿತ್ರೆಯಲ್ಲಿ ಬಹುತೇಕ ರಾಜ - ಮಹಾರಾಜರು ಬಹುಪತ್ನಿವಲ್ಲಭರಾಗಿದ್ದರು. 'ಕೆಲವು ವೇಳೆ ಆ ಸಂಖ್ಯೆ ಸಾವಿರದವರೆಗೂ ಏರಿರುವುದು ಉತ್ಪ್ರೇಕ್ಷೆ ಇರಬಹುದು. ಮುಖ್ಯವಾದ ರಾಣಿಯರು ಇರುತ್ತಿದ್ದುದು ಕೆಲವರು ಮಾತ್ರ ಐತಿಹಾಸಿಕವಾಗಿಯೂ ಸತ್ಯವಾಗಿರುವ ಈ ವಿಷಯವು ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಪದೇ ಪದೇ ಕಾಣಿಸಿಕೊಂಡಿದೆ.

ಪ್ರಾಚೀನ ಕರ್ನಾಟಕದಲ್ಲಿ ಬಹುಪತ್ನಿತ್ವದ ಪದ್ಧತಿಯು ತುಂಬಾ ಪ್ರಬಲವಾಗಿದ್ದಂತೆ ತೋರುತ್ತದೆ. ರಾಜರಂತೂ ಯಾವಾಗಲೂ. ರಾಜರಂತೂ ಯಾವಾಗಲೂ 'ಬಹುವಲ್ಲಭ'ರು. ರಾಜನ ಪತ್ನಿಯರಲ್ಲಿ ಹಿರಿಯವಳೇ 'ಅಗ್ರಮಹಿಷಿ' ಅಥವಾ 'ಪಿರಿಯರಸಿ'. ಅವಳಿಗೂ ಉಳಿದ ರಾಣಿಯರಿಗೂ ಸಾಕಷ್ಟು ತಿಕ್ಕಾಟ ನಡೆಯುತ್ತಿದ್ದಿರಬೇಕು. ಏಕೆಂದರೆ ಅನೇಕ ಶಾಸನಗಳಲ್ಲಿ ಪಿರಿಯರಸಿಯರನ್ನು 'ಸವತಿಮದ ಭಂಜನೆ' ಎಂಬುದಾಗಿ

ಕರೆದಿರುವುದುಂಟು. ಸೋಮೇಶ್ವರ ಎಂಬ ರಾಜನಿಗೆ ಒಟ್ಟು ನಾಲ್ವರು ಪತ್ನಿಯರು. ಧವಳಶಂಖ, ಉದ್ದಂಡ, ಪುಂಡರೀಕ, ಕನಕದಂಡ, ಚಾಮರಸ್ತೋಮಗಳು ಪಟ್ಟದ ರಾಣಿಯ ಚಿಹ್ನೆಗಳಾಗಿದ್ದುವು. (ಬಹುಶಃ ಉಳಿದವರಿಗೆ ಈ ಗೌರವಗಳಿದ್ದಿಲ್ಲವೆಂದು ಕಾಣುತ್ತದೆ.) ರಾಜರಲ್ಲದೆ ಉಳಿದವರಲ್ಲಿಯೂ ಬಹುಪತ್ನಿತ್ವದ ಸಂಪ್ರದಾಯವಿದ್ದಿತು. ನಾಗದೇವ ಎನ್ನುವವನು ಅತ್ತಿಮಬ್ಬೆ ಮತ್ತು ಗುಂಡಮಬ್ಬೆ ಎಂಬ ಸೋದರಿಯರನ್ನು ಮದುವೆ ಮಾಡಿಕೊಂಡಿದ್ದನು. ಬೇಂಟೆಯ ತಿಪ್ಪೆಯ ನಾಯಕ ಎನ್ನುವವನಿಗೆ ಸೋವೆ ನಾಯಕಿತಿ ಮತ್ತು ಮಾಚವೆ ನಾಯಕಿತಿ ಎಂಬ ಇಬ್ಬರು ಪತ್ನಿಯರಿದ್ದರು. ಎಡೆವರದೇವ ಎಂಬ ಸಾಮಂತನಿಗೆ ಮೂವರು ಪತ್ನಿಯರಿದ್ದರು. ಮಾಚಗಾವುಂಡ ಎನ್ನುವವನ ನಾಲ್ಕನೆಯ ಹೆಂಡತಿ ಮಾಚಗಾವುಂಡಿಗೆ ಕಾಳಗಾವುಂಡ ಮತ್ತು ಲೆಂಕರಾಯರೆಂಬ ಮಕ್ಕಳಿದ್ದಂತೆ ಒಂದು ಶಾಸನವು ತಿಳಿಸುತ್ತದೆ.

ಸ್ವಜಾತಿ ಸ್ತ್ರೀಯಲ್ಲದೆ ಮದುವೆಯಾದ ಪರಜಾತಿಯ ಕಾಮಸ್ತ್ರೀಯಲ್ಲಿ ಸಂತತಿ, ಅಧರಚುಂಬನಮಸಹಶಯ್ಯೆ ಮಾಡದೆ ಕೇವಲ ಅಂಗಸಂಗ ಅನುಭವಿಸುವುದು ಒಳ್ಳೆಯದು. ಅದಕ್ಕೆ ಋತುಕಾಲ ಹೊರತು ಸುಖ ಅನುಭವಿಸುವುದು ಉಪಾಯವು. ಶಸ್ತ್ರಕ್ರಿಯೆ ಸಾಧ್ಯವಾದರೆ ತುಂಬಾ ಒಳ್ಳೆಯದು. ಕಾಮದಿಂದ ಮದುವೆಯಾದವಳಿಗೆ ಸಂತತಿಯ ಆಶೆ ಇಲ್ಲದಿರುವುದು ಸ್ವಾಭಾವಿಕ. ಸಂತತಿಗಾಗಿ ಮದುವೆಯಾಗುವವಳು ವಿವಾಹಿತನನ್ನು ಕಾಮಲೀಲೆಯಿಂದ ಸಂತೋಷಪಡಿ(ಅಪೇಕ್ಷಿ)ಸದಿರುವುದು ಯಥಾರ್ಥ ಎಂದು ಮನು ಹೇಳುತ್ತಾನೆ.

ಬಹುಪತ್ನಿತ್ವವು ಕ್ರಿ.ಶ.೮ರಿಂದ ೧೪ನೆ ಶತಮಾನದವರೆಗೆ ಯಾವ ಅಡೆತಡೆಯೂ ಇಲ್ಲದೆ ಮುಂದುವರಿದುಕೊಂಡು ಬಂದಿರುವುದಂತೂ ಸ್ಪಷ್ಟ. ಪ್ರತಿಯೊಂದು ಅರಸು ಮನೆತನಕ್ಕೆ ಸಂಬಂಧಿಸಿದ ಶಾಸನಗಳಲ್ಲಿ ಈ ವಿವರಗಳು ಸಿಗುತ್ತವೆ. ಅಂದಿನ ಸಮಾಜ ಬಹುಪತ್ನಿತ್ವವನ್ನು ಒಪ್ಪಿಕೊಂಡಿತ್ತು. ಇದರರ್ಥ ಸಮಾಜದ ಎಲ್ಲ ವರ್ಗಗಳಲ್ಲಿಯೂ ಈ ವ್ಯವಸ್ಥೆ ಸಮಾನವಾಗಿತ್ತು ಎಂದಲ್ಲ. ಬಹುಪತ್ನಿತ್ವವನ್ನು ರಾಜಪ್ರಭುತ್ವದ ಒಂದು ಲಕ್ಷಣ ಎಂಬುದಾಗಿ ಪರಿಗಣಿಸಲಾಗಿತ್ತು. ಸಾಮಾನ್ಯ ಜನಸಮುದಾಯದಲ್ಲಿ ಈ ಪದ್ಧತಿ ಪ್ರಚಾರದಲ್ಲಿತ್ತು ಎನ್ನುವುದಕ್ಕೆ ಸಾಕಷ್ಟು ಆಧಾರಗಳು ಸಿಗುವುದಿಲ್ಲ. ಮನುಸ್ಮೃತಿಯಲ್ಲಿ ಈ ವ್ಯವಸ್ಥೆಯ ಕುರಿತು ಹೇಳಲಾಗಿದೆ. ಬ್ರಾಹ್ಮಣರು ನಾಲ್ಕು ಜನರನ್ನು, ಕ್ಷತ್ರಿಯ ಮೂರು ಜನರನ್ನು, ವೈಶ್ಯ ಇಬ್ಬರನ್ನು, ಶೂದ್ರ ಒಬ್ಬಳನ್ನು ಮದುವೆಯಾಗಬಹುದೆಂದು ಹೇಳಲಾಗಿದೆ. ಇದು ಬಹುಪತ್ನಿತ್ವ ವ್ಯವಸ್ಥೆ ವೈದಿಕ ಹಿನ್ನೆಲೆಯ ಚಾತುರ್ವರ್ಣ ಪದ್ಧತಿಯನ್ನು ಸಂಪೂರ್ಣವಾಗಿ ಅವಲಂಬಿಸಿಕೊಂಡಿರುವುದನ್ನು ಸೂಚಿಸುತ್ತದೆ. ಚಕ್ರವರ್ತಿಗಳು ಮತ್ತು ಇತರ ಸಾಮಂತ ಅರಸರು ಅನೇಕ ಮಂದಿ ರಾಣಿಯರನ್ನು ಹೊಂದಿರುತ್ತಿದ್ದರು. ಅದೊಂದು ಪ್ರತಿಷ್ಠೆಯ ವಿಷಯವೂ ಆಗಿತ್ತು. ಇದು ಮೋಹನಕೃಷ್ಣ ರೈಯವರ ಅಭಿಪ್ರಾಯ.

*ವಿವರಗಳಿಗೆ ನೋಡಿ: ಏಂಗೆಲ್ಸ್ (ಮೂಲ) ೧೯೮೦ ಪುಟ. ೮೭*

*ತಿಪ್ಪೇರುದ್ರಸ್ವಾಮಿ. ಎಚ್ ೨೦೦೭ ಕರ್ನಾಟಕ ಸಂಸ್ಕೃತಿ ಸಮೀಕ್ಷೆ ಪುಟ. ೨೧೭*

ಡಾ. ಎಂ ಚಿದಾನಂದಮೂರ್ತಿ ೨೦೦೮ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪುಟ. ೪೬೩-೪೬೪
ಚಿದಾನಂದ ಮೂರ್ತಿ ಎಂ. ೧೯೯೨ ಹೊಸತು-ಹೊಸತು
ವಿವಾಹಪುರಾಣ- ಕನ್ನಡ ಅತ್ಯಂತ ಪ್ರಾಚೀನ ಶಾಸನಸ್ಥ ಜಾನಪದಕೃತಿ ಪುಟ. ೩೧೬ (ಲೇಖನ)
ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೩-೧೯
ಮೋಹನಕೃಷ್ಣ ರೈ ೨೦೦೯ ಚರಿತ್ರೆ ಕಥನ ಪುಟ. ೬೯
ಕಪಾಡಿಯಾ .ಕೆ.ಎಂ (ಮೂಲ) ಮಹೇಶ್ವರಪ್ಪ (ಅನು) ೧೯೭೮
ಭಾರತದಲ್ಲಿ ವಿವಾಹ ಮತ್ತು ಕುಟುಂಬ ಪುಟ. ೧೨೦-೧೪೬

**೫೩೫. ಬಳುವಳಿ**

ಸುಭದ್ರೆಯೆಂಬ ಕನ್ಯಾರತ್ನವನ್ನು ಕೊಟ್ಟು ಅನರ್ಘ್ಯ ರತ್ನಗಳನ್ನು ಬಳುವಳಿ ಕೊಟ್ಟ ವಿವರವು ಚಾವುಂಡರಾಯ ಪುರಾಣದ ಆದಿಪುರಾಣದಲ್ಲಿ ಬರುತ್ತದೆ. (೪೬ ವ) ತವರುಮನೆಯಿಂದ ಹೆಂಗಸರಿಗೆ ಕೊಡುವ ಉಡುಗೊರೆಗಳನ್ನು 'ಬಳುವಳಿ'ಯೆಂದು ಕರೆಯುತ್ತಾರೆ. ಇದು ಒಂದು ಸಂಪ್ರದಾಯ. ಇದಕ್ಕೆ 'ಬಾಳ ಬಳುವಳಿ' ಎಂತಲೂ ಕರೆಯುತ್ತಾರೆ.

ಪೊನ್ನನ 'ಶಾಂತಿಪುರಾಣ'ದಲ್ಲಿ ಬಳುವಳಿಯಾಗಿ ಬಂದ ಸ್ತ್ರೀಯು ಮತ್ತೊಬ್ಬರನ್ನು ಕೂಡಬಾರದು ಎನ್ನುವ ನಂಬಿಕೆಯು ವ್ಯಕ್ತವಾಗಿದೆ. (೬-೭೪,ವ ೭೫) ಇದು ನಿಷೇಧ ರೂಪದ ನಂಬಿಕೆಯಾಗಿದೆ.

**೫೩೬. ಬಾಂದೊರೆಯ ಮಗ**

*__ಅಱನ ಮಗಂ__ ಪ್ರಾರ್ಥಿಸೆ ಬಾಂ ।*

*__ದೊಱೆಯ ಮಗಂ__ ಮಾಡೆ ಸಂಧಿಯಾದಪುದೆನುತುಂ..........ಪೆಱಗಿಕ್ಕುವೆನಜ್ಜನಿರ್ದು ಮಾಣ್ಬೊಡಮೀಯೆಂ.............* (ಸಾಹಸಭೀಮ ವಿಜಯಂ ೧-೭೨)

ಮೇಲಿನ ಪದ್ಯದಲ್ಲಿ ರನ್ನನು ಅರನ ಮಗ ಮತ್ತು ಬಾಂದೊರೆಯ ಮಗನೆಂದು ಬರೆದಿದ್ದಾನೆ. ಅರನ ಮಗನೆಂದರೆ-ಯಮನ ಮಗ ಎಂದರ್ಥ. ಯಮನ ಮಗ ಧರ್ಮರಾಯ. ಬಾಂದೊರೆಯ ಮಗನೆಂದರೆ ಭೀಷ್ಮ. ಕುಂತಿಯು ದೂರ್ವಾಸರು ಕೊಟ್ಟ ಮಂತ್ರ ಬಲದಿಂದ ಯಮನಿಂದ ಧರ್ಮರಾಯನನ್ನು ಪಡೆದಳು. ಬಾಂದೊರೆಯೆಂದರೆ ಬಾನಿನ ತೊರೆ ಅಂದರೆ ದೇವರಿಗೆ ಅಂದರೆ ಭೀಷ್ಮನು ಗಂಗೆಯ ಮಗ ಎಂಬುದು ಇಲ್ಲಿ ಸೂಚಿತವಾಗಿದೆ. ಮೇಲಿನ ಪದ್ಯದ ಅರ್ಥ ಹೀಗಿದೆ: ಯಮನ ಮಗ (ಧರ್ಮರಾಜ)ನು ಬೇಡಿಕೊಂಡರೆ, ಆಕಾಶಗಂಗೆಯ ಮಗ (ಭೀಷ್ಮ)ನು ಮಾಡಿಸಿದರೆ ಶತ್ರುವಿನೊಡನೆ ಸಂಧಾನವಾದೀತೆಂದು ಕಳವಳಿಸ ಬೇಡ. (ಹಾಗೇನಾದರೂ ಸಂಧಿಯ ಮಾತು ಬಂದರೆ) ಅಣ್ಣನ ಮಾತನ್ನು ಮೀರುವೆನು; ಅಜ್ಜ ಭೀಷ್ಮನೇ ಮುಂದಾಗಿ ಬಂದರೂ ಸಂಧಿ ಮಾಡಗೊಡೆನು ಎಂಬುದು ಸಾಹಸಭೀಮ ವಿಜಯದಲ್ಲಿ ಭೀಮನ ಮಾತು.

ಭೀಷ್ಮನ ಮೊದಲ ಹೆಸರು ದೇವವ್ರತ. ಶಂತನು ಚಕ್ರವರ್ತಿಯ ಹಿರಿಯ ಹೆಂಡತಿ ಗಂಗೆಯಿಂದ ಹುಟ್ಟಿದ. ಪರಶುರಾಮನಿಂದ ವಿದ್ಯಾಭ್ಯಾಸ ಹೊಂದಿದ ತಾನು ಮದುವೆಯಾಗುವುದಿಲ್ಲ ಎಂದು ಪ್ರತಿಜ್ಞೆ ಮಾಡಿದ್ದರಿಂದ ಅವನಿಗೆ ಭೀಷ್ಮನೆಂಬ ಹೆಸರಾಯಿತು.

**೫೩೭. ಬಾಂಧವ್ಯ**

ವ್ಯಾಧಿಯಲ್ಲಿ, ಕಷ್ಟದಲ್ಲಿ, ಬರಗಾಲದಲ್ಲಿ, ಹಗೆಗಳು ಕೊಲ್ಲಲು ಬಂದಾಗ ಅರಮನೆಯ ದ್ವಾರದಲ್ಲಿ, ಸ್ಮಶಾನದಲ್ಲಿ ಯಾರು ನಮಗೆ ಸಹಾಯ ಮಾಡುತ್ತಾರೋ ಅವರು ನಮ್ಮ ನಿಜವಾದ ಬಂಧುಗಳು (ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ, ಶ್ಲೋಕ ೪೭, ಟೀಕೆ).

ಬಾಂಧವ್ಯದಲ್ಲಿ ಅನೇಕ ವಿಧಗಳಿವೆ – ಕುಲ ಬಾಂಧವ್ಯ, ಜಾತಿ ಬಾಂಧವ್ಯ, ಕುಟುಂಬ ಬಾಂಧವ್ಯ, ಔದ್ಯೋಗಿಕ (ಕಸುಬು) ಬಾಂಧವ್ಯ, ರಕ್ತ ಬಾಂಧವ್ಯ ಇತ್ಯಾದಿ. ಆದರೆ ಈ ಬಾಂಧವ್ಯಗಳು ಮೇಲು ನೋಟಕ್ಕೆ ಮಾತ್ರ. ಅದರಾಚೆಗೂ ಬಾಂಧವ್ಯವಿದೆಯೆಂದು ಪಂಚತಂತ್ರದಲ್ಲಿ ಹೇಳಲಾಗಿದೆ. ನಮ್ಮ ಕಷ್ಟಕಾಲದಲ್ಲಿ ಯಾರು ನಮಗೆ ಸಹಾಯ ಮಾಡುತ್ತಾರೋ ಅವರು ನಮಗೆ ನಿಜವಾದ ಬಂಧುಗಳು. 'ಆಪತ್ತಿಗಾದವನೆ ನೆಂಟ' ಎಂಬ ಗಾದೆಯನ್ನು ಸ್ಮರಿಸಿಕೊಳ್ಳಬಹುದು.

**೫೩೮. ಬಾಗವಸೆ**

*....................ಎಂದು ದೇವರ ಗುಂಡು ಗುಜಿಗುಜಿಗೊಂಡು ಪೊಗಳೆ ನ್ಯಾಯಪುರುಷಸಂತಾನಮಾನಸ ಸ್ಥಾನಂ ಬಿಲ್ಕುಟ್ಟಿ ಲಕ್ಷಣೋಪೇತಂ ಬಗೆ* ***ಬಾಗವಸೆ****ಮೆಂಬಿವನರಿದು ಧನುರ್ವಿದ್ಯೆಯೇ ರೂಪುಗೊಂಡಂತಿರ್ವರುಂ ಕಾದೆ..................*

(ಶಾಂತಿಪುರಾಣ ೪–೪೫ ವ)

ಇದರ ವಿವರಣೆಯನ್ನು ಹಂಪ.ನಾ. ಹೀಗೆ ನೀಡಿದ್ದಾರೆ. ಹೀಗೆಂದು ದೇವತೆಗಳ ಗುಂಪು ಗುಜುಗುಟ್ಟುತ್ತಿರಲಾಗಿ ನ್ಯಾಯಪುರುಷರು (ಯಾವುದು ಸರಿ ಯಾವುದು ತಪ್ಪೆಂದು ನೋಡಿ ನಿರ್ಣಯ ಕೊಡುವ ನಿಷ್ಪಕ್ಷಪಾತಿ ವೀಕ್ಷಕರು) ಹೊಗಳುವಂತೆ ಆಸನ(ಬಿಲ್ಗಾರನು ಬಾಣ ಬಿಡುವಾಗ ಮಂಡಿಯೂರಿ ಕುಳಿತಿರುವ ಭಂಗಿ). ಸ್ಥಾನ, ಬಿಲ್ಗುಟ್ಟಿ (ಧನಸ್ಸನ್ನು ಹಿಡಿಯುವ ರೀತಿ) – ಇವುಗಳನ್ನು ಧನುರ್ವೇದದ ಲಕ್ಷಣಾನುಸಾರಿಯಾಗಿ ಪಾಲಿಸಿ 'ಬಗೆ' 'ಬಾಗವಸ' ಎಂಬುವುಗಳನ್ನು ಚೆನ್ನಾಗಿ ತಿಳಿದುಕೊಂಡು ಬಿಲ್ವಿದ್ಯೆಯೇ ಮೈದಾಳಿದಂತೆ ಇಬ್ಬರೂ ಕಾದಾಡುತ್ತಿದ್ದರು.

**೫೩೯. ಬಾಜನೆಗಬ್ಬ**

ಬಾಜನಗಬ್ಬವು ಮಹಾಕಾವ್ಯವಾಗಿದೆನ್ನುವುದನ್ನು ಕಾವ್ಯಾವಲೋಕನದಲ್ಲಿ ವಿವರಿಸಲಾಗಿದೆ. ಆದರೆ ದೇಸಿಗಬ್ಬದ ಮಹಾಕಾವ್ಯರೂಪವು ನಿರೂಪಣೆಯಲ್ಲಿ ಬಹುದೊಡ್ಡ

ವ್ಯಾಪಕತೆಯನ್ನು ಪಡೆದುಕೊಳ್ಳುತ್ತದೆ. ಇದರ ವಿವರವು ಕಾವ್ಯಾದಲೋಕನದಲ್ಲಿ ಬರುತ್ತದೆ.

ಈ ಬಾಜನಗಬ್ಬವೆಂದರೆ ದೇಸಿಗಬ್ಬದೊಳಗಿನ ಮಹಾಕಾವ್ಯವೇ ಎಂಬಲ್ಲಿ ಸಂಶಯವಿಲ್ಲ.

ಸಂಶಯವಿರಬಹುದಾದವರ ನಿರ್ಧಾರಕ್ಕಾಗಿ ಕಾವ್ಯಾವಲೋಕನದ ಆ ಮುಂದಿನ ಸೂತ್ರವನ್ನು ದೃಷ್ಟಾಂತಿಸಿ ವಿವರಿಸುತ್ತೇನೆ:

*ನಗರಾರ್ಣವ ಸರಿದಟವೀ*
*ನಗಚಂದ್ರಾರ್ಕೋದಯರ್ತು ಸಲಿಲಕ್ರೀಡಾ*
*ದಿಗಳಾದಿಯಾಗೆ ಸರಸೋ*
*ಕ್ತಿಗಳಿಂ ವರ್ಣಿಸುಗೆ ವರ್ಣಕಂಗಳನದಱಿೊಳ್*

(ಕಾವ್ಯಾವಲೋಕನಂ ಸೂತ್ರ ಸಂಖ್ಯೆ ೯೫೭)

ನಗರ ಸಾಗರಾದಿಗಳಾದ ವರ್ಣನೆ ಎಂಬುದು ಹದಿನೆಂಟು ಬಗೆಯಲ್ಲಿದೆ. ಭಿನ್ನ ಭಿನ್ನ ಶಾಖೆಗೊಂಡು ಹಬ್ಬಿದ ಕಾವ್ಯಕಥಾನಕವು ಆಯಾ ದೇಶಕಾಲಗಳನ್ನು ಹೊಂದಿ ವಿಶಾಲವಾಗಿ ಹರಡುತ್ತಿದೆ. ಆಗ ಇದಿರಾಗಿ ಸಂಗಮಿಸಿದ ನಗರಾದಿಗಳನ್ನು ಬಣ್ಣಿಸಬೇಕಲ್ಲದೆ, ಬರಿಯ ಅವುಗಳನ್ನೆ ಒಂದರಿಂದ ಮೇಲೆ ಇನ್ನೊಂದನ್ನಾಗಿ ಬಣ್ಣಿಸುವುದಲ್ಲ. ಇದರಿಂದ 'ಬಾಜನೆಗಬ್ಬ' ವಿದು ಖಂಡಕಾವ್ಯವಲ್ಲ. ಮಹಾಕಾವ್ಯವೇ ಎಂದಂತಾಯಿತು. ಅದರಿಂದಲೇ ಹಿಂದಿನ 'ಪಾಡುಗಬ್ಬ'ಕ್ಕೆ ಸಂಬಂಧಿಸದ ಈ ವರ್ಣನೆಯನ್ನು, 'ಅದರೊಳ್' ಎಂದರೆ 'ಬಾಜನೆಗಬ್ಬ'ದಲ್ಲಿ ಮಾತ್ರವೆ ಬೆರಸಿ ಹೇಳಿದ್ದಾನೆ. (ಮುಳಿಯ ತಿಮ್ಮಪ್ಪಯ್ಯ. ೧೯೮೮. ಸಂ:೨. ಪು. ೪೨೩.)

ಇಲ್ಲಿ ವರ್ಣಿಸುವ ವರ್ಣಗರಿಗಳನದ ವೆ–ಳ್ ಎಂದು ಉಲ್ಲೇಖಿಸಿರುವುದು ಗಮನಾರ್ಹವಾಗಿದೆ. 'ನಗರಾರ್ಣವ' ಮೊದಲಾದ ಹದಿನೆಂಟು ರೀತಿಯ ವರ್ಣನೆಗಳು ಈ ಮಾದರಿಯ ಕಾವ್ಯಗಳಿರುತ್ತವೆ.

ಮಹಾಕಾವ್ಯ – ಲಘು ಕಾವ್ಯ

ಹಿಂದೆ ವಿವರಿಸಿದ ಜಾಣ್ಮೆಗಳಿಂದೊಡವೆರೆದು, ವಸ್ತು (ಕಥೆ)ಗಳನ್ನು 'ಮಹಾಧ್ವ'ದಲ್ಲಿ ಹರಿಯಿಸಿ ಕೃತಿ (ಕಾವ್ಯ)ಗಳನ್ನಾಗಿ ಹೆಣೆಯಬಲ್ಲವನೇ, ಮೇಲೆ ಲಕ್ಷಿಸಿದ 'ಎಲ್ಲರಿಂದಂ ಬಲ್ಲ'ವನು ಇಲ್ಲಿಯ 'ಮಹಾಧ್ವಕೃತಿ' ಎಂಬ ಪದವನ್ನೊಂದಿಷ್ಟು ವಿವೇಚಿಸುವ. 'ಅಧ್ವನ್' ಎಂದರೆ 'ಮಾರ್ಗ'ವೆಂಬರ್ಥ. ಮಹತ್ತಾದ ಅಲ್ಲವೆ ವಿಸ್ತೃತವಾದ ಕವಿಮಾರ್ಗದಲ್ಲಿ ಹರಿವ ಕೃತಿಯನ್ನೇ ಮಹಾಕೃತಿ, ಮಹಾಪ್ರಬಂಧ, ಮಹಾಕಾವ್ಯ ಎಂಬ ನಾಮಾಂತರಗಳಿಂದ ನಿರ್ದೇಶಿಸುವುದು. ಇದರಿಂದ, ಮಹಾಕವಿಯಾಗಿದ್ದವನು ಬರೆದುದರಿಂದಾಗಿ, ಮಹಾಕಾವ್ಯವಾಗುವುದಲ್ಲ, ಅಂಥ ಮಹಾಕಾವ್ಯವನ್ನೆಸಗುವವನೇ ಮಹಾಕವಿಯೆನ್ನಿಸುತ್ತಾನೆ ಎಂಬುದು ಸಿದ್ಧವಾಗುತ್ತಿದೆ. ನಮ್ಮ ಪಂಪಮಹಾಕವಿಯ 'ಆದಿಪುರಾಣ', 'ಸಮಸ್ತಭಾರತ' ಎಂಬ ಎರಡೂ ಇಂಥ ಮಹಾಧ್ವಕೃತಿಗಳು, ಇರಲಿ, 'ಕವಿರಾಜಮಾರ್ಗ' ಕಾರನು ಮಹಾಕಾವ್ಯ ಲಕ್ಷಣವನ್ನು ಬಣ್ಣಿಸಿದುದು ಅಂದವಾಗಿದ್ದರೂ ಅದು ಅತಿಸಂಗ್ರಹವಾಗಿ

ಹೋಗಿದೆ. ಅದರಿಂದ, ಮುಂದಿನ ಭಾಗದಲ್ಲಿ ಅದನ್ನೇ ಒಂದಿಷ್ಟು ವಿಸ್ತಾರವಾಗಿ ವಿಮರ್ಶಿಸುವ.

'ಮಹಾಧ್ವಕೃತಿ' ಎಂಬ ನುಡಿಯಿಂದಲೇ 'ಅಲ್ಪಾಧ್ವಕೃತಿ'ಯೆಂಬುದುಂಟೆಂದು ಸೂಚಿತವಾಗುತ್ತಿದೆ. ಆ ಅಲ್ಪಾರ್ಥವಕೃತಿಯ ಸ್ವರೂಪವನ್ನು ತಿಳಿದುಕೊಂಡರೆ ನಮಗಿಲ್ಲಿ ಮಹಾಧ್ವಕೃತಿಯೊಳವನ್ನು ಪರಿಭಾವಿಸಲು ಅನುಕೂಲವಾಗಬಹುದು. ಕಾವ್ಯದೊಳಗಿನ ಲಘುತ್ವ, ಮಹತ್ವ ಭೇದಗಳೆಂದರೆ ಪರಿಮಿತಿದೃಷ್ಟಿಯಿಂದಲೇ ಅಲ್ಲದೆ ಗುಣದೃಷ್ಟಿಯಿಂದಲ್ಲ, ಎಂಬುದನ್ನು ಗಮನಿಸಬಹುದು.

ಇಲ್ಲಿ, ಚತುರ್ವರ್ಗಗಳೊಳಗೆ ಯಾವುದಾದರೂ ಒಂದರಲ್ಲೂಡವರೆದು ಕಥಾಭಾಗವು ವರ್ಣಿತವಾಗಬೇಕೆಂದು ನಿಯಮ. ಅದು ಪ್ರಮುಖ ನಾಯಕ ಸಂಬದ್ಧವಾದ ಕಥಾಂಶವೇ ಆಗಿರತಕ್ಕುದೆಂಬುದು ತಾನಾಗಿ ವಿದಿತವಾಗುವುದಷ್ಟೆ. 'ಸಮಗ್ರೈಕರಸಯುಕ್ತ'ವಾಗ ತಕ್ಕುದು ಎಂದು ಸಾಮಾನ್ಯವಾಗಿ ಸೂಚಿತವಾಗಿದೆಯಲ್ಲೆ, ವಿಶೇಷವಾದ ಇಂಥ 'ರಸ'ವೇ ಆಗಿರಬೇಕು ಎನ್ನಲಿಲ್ಲ. ಅದರಿಂದ, ಧರ್ಮಾದಿ ಚತುರ್ವರ್ಗದೊಳಗೆ ನಾಯಕನ ಪ್ರಕೃತಿ ಗೊಪ್ಪುವ ವಿಷಯವಾವುದೋ ಅದನ್ನೊಂದಿಕೊಂಡಾ ಆ 'ಏಕರಸ'ವು ಹರಿಯ ಬೇಕೆಂಬುದು ವ್ಯಕ್ತವಾಗುತ್ತಿದೆ. ಮಾತ್ರವಲ್ಲ, ಕಾವ್ಯದೊಳಗೆ ಪ್ರತಿನಾಯಕೋಪನಾಯಕರ ಕಥಾಭಾಗವು, ಸ್ಫುಟವಾಗಿ ಹೊಳೆಯಬೇಕಾಗಿಲ್ಲವಷ್ಟೆ 'ಅಸಮಗ್ರಾನೇಕ ರಸಾ' ಎಂಬಲ್ಲಿ ತೋರುವ ಭಿನ್ನ ಭಿನ್ನ ಭಾವ-ಭಾವಸಂಕರಾದಿರೂಪದ ಅಸಂಪೂರ್ಣ ರಸಗಳೆಂದರೆ ಪ್ರತಿನಾಯಕಾದಿ ಸಂಬಂಧ್ಧಗಳೆಂದು, ಅವರ ಜೀವನದೊಳಗಿನ ಧರ್ಮಾರ್ಥಾದ್ಯುದ್ದೇಶ ಗಳೊಳಗೆ ಎಲ್ಲವೂ ಅಪೂರ್ಣವಾಗಿರಬೇಕೆಂದೂ ಸೂಚಿತವಾಗು ತ್ತಿದೆ. ಪ್ರತಿನಾಯಕಾದಿ ಒಂದಂಶವನ್ನು ಮಾತ್ರವೇ ಈ ಕಾವ್ಯದಲ್ಲಿ ವಿಸ್ತರಿಸುವುದರಿಂದ, ಇದು ಲಘುಕಾವ್ಯ ಅಥವಾ ಖಂಡಕಾವ್ಯ. ಪ್ರತಿನಾಯಕ -ಉಪನಾಯಕಾದಿಗಳೆಂಬ ಕಣಿವೆ ಕಾಲುವೆಗಳಲ್ಲಿ ಹರಿವ ವಿರುದ್ಧಾನುಕೂಲ ಭಾವನಾಪ್ರವಾಹಗಳೆಲ್ಲವೂ ನಾಯಕ ಕಥಾಭಾಗದ ಹೊಳೆಯಲ್ಲಿ ಕೂಡಲುಗೊಂಡು, ರಸಪ್ರವಾಹವಾಗಿ ಹರಿದು, ಧರ್ಮ ಸಾಗರದಲ್ಲಿ ಸಂಗಮವಾಗುವುದೇ ಈ ಲಘುಕಾವ್ಯದ ಗುರಿ ಎಂಬುದನ್ನು ಪರಿಭಾವಿಸ ತಕ್ಕದು.

*ವಿವರಗಳಿಗೆ ನೋಡಿ: ಮುಳಿಯ ತಿಮ್ಮಪ್ಪಯ್ಯ ೨೦೦೬ ನಾಡೋಜಪಂಪ ಪುಟ. ೨೯೪, ೨೯೮.*

### ೫೪೦. ಬಾರಿ

*ಗಂಧ ಹಸ್ತಿಯೊಡನೆ ಬಾರಿಯೊಳ್ ಮೂವತ್ತೆರಡು ಗಜಕ್ರೀಡೆಗಳಿಂದಂ ನೀಡುಂ ಬೇಗಂ ಕ್ರೀಡಿಸಿಯಾನೆಯಂ ಸೇದೆಗೆಡಿಸಿ ತನ್ನ ಬಿಸಕ್ಕೆ ಮಾಡಿಯೇಱಿ.......*

(ವಡ್ಡಾರಾಧನೆ ೩೪-೦೪)

ಆನೆಗಳನ್ನು ಹಿಡಿಯಲು ಕಟ್ಟಿದ ಕೋಟೆಯನ್ನು 'ಬಾರಿ'ಯೆಂದು ಕರೆಯುತ್ತಾರೆ. ಆನೆಗಳನ್ನು ಹಿಡಿಯಲು ಎರಡು ವಿಧಗಳಿವೆ: ಒಂದು ಖೆಡ್ಡಾ ರಚನೆ ಖೆಡ್ಡಾದಲ್ಲಿ ಗುಂಡಿಯನ್ನು ತೆಗೆದು ಅದರ ಮೇಲೆ ಮುಚ್ಚಿ ಯಾವುದಾದರೂ ಬೆಳೆಯನ್ನು

ತೆಗೆಯುವುದು. ಇನ್ನೊಂದು ಕೋಟೆಯನ್ನು ಕಟ್ಟಿ ಅದರ ಮೂಲಕ ಆನೆಗಳನ್ನು ಹಿಡಿಯುವುದು.

### ೫೪೧. ಬಾಲವದ್ದೆ

*ಬಾಲವದ್ದೆಯಂ ಕೂಸಂ ಸಿಸುವನವ್ಯಕ್ತನಂ ವಿಸುಟ್ಟೆಂತು*
*ತಪಂಬಟ್ಟೆ..................(ಡಿ.ಎಲ್.ಎನ್ ೨೦೦೯ ಪುಟ. ೮೯)*

ಬಾಲವದ್ದೆಯೆಂದರೆ ಬಾಣಂತಿ. ಬಾಣಂತಿಯರಿಗೆ ವಿಶೇಷ ಶುಶ್ರೂಷೆ ಅಗತ್ಯ. ಆದುದರಿಂದ ಬಾಣಂತಿಯರಿಗೆ ವಿಶೇಷ ಕೋಣೆಯು ಇರುತ್ತದೆ. ಇದನ್ನು 'ಸೂತಿಕಾಗೃಹ'ವೆಂದು ಕರೆಯುತ್ತಾರೆ. ಬಾಣಂತಿಯರು ಇರುವ ಜಾಗವು ಮೈಲಿಗೆಯೆಂದು ಅರ್ಥ.

ಬಾಲಪತಿ (ನಾ) ಹೆರಿಗೆಯಾಗಿ ಇನ್ನೂ ಆರೈಕೆಯನ್ನು ಹೊಂದುತ್ತಿರುವವಳು ಬಾಣಂತಿ ಎಂದಾಗಿರುವುದು ಗಮನಾರ್ಹ.

*ವಿವರಗಳಿಗೆ ನೋಡಿ: ಸೂತಕ*

### ೫೪೨. ಬಾಲ್ಯ ವಿವಾಹ

ಕೆಲವು ಕಾವ್ಯಗಳಲ್ಲಿ ಹೆಣ್ಣು ಮಗುವಿನ ಹುಟ್ಟಿಗೂ ಮದುವೆಯ ವಿಚಾರಕ್ಕೂ ಸಂಬಂಧವನ್ನು ಕಲ್ಪಿಸಲಾಗಿದೆ. 'ವಡ್ಡಾರಾಧನೆ'ಯಲ್ಲಿ ಹೆಣ್ಣು ಮಗುವೊಂದು ಗರ್ಭದಲ್ಲಿರುವಾಗಲೇ ಸೋದರಮಾವನ ಮಗನಿಗೆ ಆಕೆಯನ್ನು ಮದುವೆ ಮಾಡಿಕೊಡುವ ನಿಶ್ಚಯವಾಗಿರುತ್ತದೆ (ಕೇಶವ ಭಟ್ಟ ಟಿ. (ಅನು) ೧೯೭೬. ಪು. ೪೮). ಇದನ್ನು ಸೋದರ ಸಂಬಂಧವೆಂದು ಕರೆಯುತ್ತಾರೆ. ಹಾಗೆಯೇ ರಕ್ತ ಸಂಬಂಧವೆಂದು ಕೂಡಾ ಕರೆಯುವ ಕ್ರಮವಿದೆ. ಈ ರೀತಿಯ ಸಂಬಂಧಗಳಲ್ಲಿ ಮೊಟ್ಟ ಮೊದಲನೆಯದಾಗಿ ಕಾಣುವ ಅಂಶವೆಂದರೆ ಆಸ್ತಿ ವಿಚಾರಗಳು. ಆಸ್ತಿಯು ಈ ಸಂಬಂಧದಿಂದ ಬೇರೆಯವರ ಪಾಲು ಆಗುವುದಿಲ್ಲ.

"ವಡ್ಡಾರಾಧನೆ" ಕೃತಿಯಲ್ಲಿ ಹೆಣ್ಣಿನ ವಿವಾಹದ ವಯಸ್ಸಿನ ಕುರಿತಂತೆ ಹಲವು ರೀತಿಯ ಉಲ್ಲೇಖಗಳು ದೊರೆಯುತ್ತವೆ. ಬ್ರಾಹ್ಮಣ ಮನೆತನಕ್ಕೆ ಸೇರಿದ ದಂಪತಿಗಳು ತಮ್ಮ ಮಗಳು ಮೋದಾಳಿಯ ಗರ್ಭದಲ್ಲಿರುವಂತೆಯೇ ಮದುವೆಯ ನಿಶ್ಚಿತಾರ್ಥ ನಡೆಸಿ, ಹನ್ನೆರಡು ವರ್ಷದಲ್ಲಿ ಆಕೆಯ ವಿವಾಹಕ್ಕೆ ಅಣಿ ಮಾಡುತ್ತಾರೆ. (ಸುಕುಮಾರ ಸ್ವಾಮಿಯ ಕತೆ ಪು.೪೮) ಇದೇ ರೀತಿಯ ಉಲ್ಲೇಖವು ಈ ಕೃತಿಯಲ್ಲಿ ಮತ್ತೊಂದು ಕಡೆ ಉಲ್ಲೇಖವಾಗಿದೆ. (ಸನತ್ಕುಮಾರ ಚಕ್ರವರ್ತಿ ಕತೆ ಪು. ೧೨೧-೧೨೨)

ಐತಿಹಾಸಿಕವಾಗಿ ನೋಡಿದರೆ ವಿಜಯನಗರದ ಅರಸರ ಕಾಲದಲ್ಲಿ ಬಾಲ್ಯವಿವಾಹ ಪದ್ಧತಿಯು ಸಾಕಷ್ಟು ಪ್ರಚಲಿತವಾಗಿತ್ತು. ಲಿನ್ಸಕೋಟನ್ ಎಂಬ ವಿದೇಶಿ ಪ್ರವಾಸಿಗನು. 'ಈ ಕಾಲದಲ್ಲಿ ಹೆಣ್ಣು ಮಕ್ಕಳಿಗೆ ಏಳನೇ ವರುಷದಲ್ಲಿ ಮದುವೆಯಾಗುತ್ತಿತ್ತು' ಎಂದು

ದಾಖಲಿಸಿದ್ದಾನೆ. ಈ ರೀತಿಯ ವಿವಾಹ ಕ್ರಮದ ಮೇಲೆ ಬ್ರಾಹ್ಮಣ ಧರ್ಮದ ಪ್ರಭಾವ ಸಾಕಷ್ಟಿತ್ತು ಎಂದು ಇತಿಹಾಸಕಾರರು ಶತಮಾನದ ತರುವಾಯ 'ಕನ್ಯಾಶುಲ್ಕ'ದಂತಹ ಪಿಡುಗಿನಿಂದ ಮದುವೆಯು ಒಂದು ವ್ಯಾಪಾರ ಮಾದರಿಯಾಗಿ ರೂಪುಗೊಂಡಿತೆಂದು ಅಭಿಪ್ರಾಯಪಡುತ್ತಾರೆ. ಆದರೆ ಬರಬರುತ್ತ ಜನರು ಹಣದಾಸೆಗೆ ಒಳಗಾಗಿ ಮದುವೆಯನ್ನು ಒಂದು ವ್ಯಾಪಾರ-ವ್ಯವಹಾರವನ್ನಾಗಿ ಮಾಡಿದರು. ಕ್ರಮೇಣ ಈ ಪದ್ಧತಿ ತೀವ್ರವಾಗಿ ಹಿಂದೂ ಸಂಸಾರಗಳ ಆರ್ಥಿಕ ಪ್ರಗತಿಯ ಮೇಲೆ ಪರಿಣಾಮ ವನ್ನುಂಟುಮಾಡಿತು. ಸಾಮಾನ್ಯ ಜನರ ಮೇಲೆ ಇದರ ಪ್ರಭಾವ ಎಷ್ಟಿತ್ತೆಂಬುದನ್ನು ತಿಳಿಯಲು ಕಷ್ಟವಾದರೂ ಅನುಕೂಲಸ್ಥರು ಇಡೀ ಹಳ್ಳಿಯನ್ನೆ ಮದುವೆಯಲ್ಲಿ ಕನ್ಯಾಶುಲ್ಕವಾಗಿ ಕೊಡುವ ಪದ್ಧತಿ ಇತ್ತು.

ಎಳೆಯ ವಯಸ್ಸಿಗೆ ಹೆಣ್ಣಿಗೆ ಮದುವೆ ಮಾಡುವ ಕ್ರಮವು ವಿಜಯನಗರ ಅರಸರ ಕಾಲದಲ್ಲಿ ಹೆಣ್ಣು ಪ್ರಬಲವಾಗಿ ರೂಪುಗೊಂಡಿರಬಹುದೆಂದೂ ಮೇಲಿನ ಆಧಾರಗಳಿಂದ ತಿಳಿಯಬಹುದಾಗಿದೆ. ಕನ್ನಡ ಸಾಹಿತ್ಯದಲ್ಲಿ ವಿವಾಹ ಯೌವನದಲ್ಲಿ ನಡೆಯುತ್ತದೆ ಎನ್ನುವುದು ಹೆಚ್ಚು ವರ್ಣಿತವಾಗಿದೆ. ಕೆಲವೆಡೆಯಲ್ಲಿ ಬಾಲ್ಯದಲ್ಲಿ 'ವಿವಾಹ' ಎನ್ನುವುದು ಬಂದರೂ, ಕಾವ್ಯಗಳಲ್ಲಿ ಇದಕ್ಕೆ ಹೆಚ್ಚಿನ ಪ್ರಾಶಸ್ತ್ಯವಿಲ್ಲ.

೧೯೫೫ರಲ್ಲಿ ವರನ ವಯಸ್ಸು ಹದಿನೆಂಟಕ್ಕೂ, ವಧುವಿನ ವಯಸ್ಸು ಹದಿನೈದಕ್ಕೂ ನಿರ್ದಿಷ್ಟಪಡಿಸಲಾಯಿತು. ೧೯೭೮ರಲ್ಲಿ ವಿವಾಹದ ವಯಸ್ಸನ್ನು ಹೆಚ್ಚಿಸಲಾಯಿತು. ವಧುವಿನ ವಯಸ್ಸು ಹದಿನೈದರಿಂದ ಹದಿನೆಂಟಕ್ಕೇರಿತು.

ಸೋದರ ಸಂಬಂಧದಲ್ಲಿ ಮದುವೆಯೆನ್ನುವುದು ಕುಲಬಾಂಧವ್ಯದ ದೃಷ್ಟಿಯಿಂದ ಮುಖ್ಯ. ಈ ರೀತಿಯ ಸಂಬಂಧದ ಸಮಾಜಶಾಸ್ತ್ರೀಯ ವಿವರಣೆಗಳು ಬೇರೆ ಇವೆ. "Endogamy" ಮತ್ತು "Exogamy" ಎಂಬ ಎರಡು ರೀತಿಯ ವಿವಾಹ ಸಂಬಂಧ ಗಳನ್ನು ಸಮಾಜಶಾಸ್ತ್ರವು ಹೇಳುತ್ತದೆ. ಸೋದರ ಸಂಬಂಧವು Endogamy ವರ್ಗಕ್ಕೆ ಸೇರಿರುವುದು. ಸೋದರಮಾವನ ಮಗನನ್ನೋ, ಮಗಳನ್ನೋ, ಮದುವೆಯಾಗುವುದಕ್ಕೆ ಸೋದರ ಸಂಬಂಧವೆಂದು ಕರೆಯುತ್ತಾರೆ. ಸಹ ಉದರವೆಂದರೆ ಒಂದೇ ಹೊಟ್ಟೆಯಲ್ಲಿ ಹುಟ್ಟಿದ ಎಂದರ್ಥ. ಸೋದರ ಸಂಬಂಧವೆಂದರೆ 'ಕುಟುಂಬದೊಳಗಣ ವಿವಾಹ'ವೆಂದು ಅರ್ಥ.

ಸೋದರ ಸಂಬಂಧವು ನಡೆಯುವುದಕ್ಕೆ ಕೆಲವು ಮುಖ್ಯ ಕಾರಣಗಳನ್ನು ಸಮಾಜಶಾಸ್ತ್ರಜ್ಞರು ಹೇಳುತ್ತಾರೆ. ೧. ಆ ಪ್ರದೇಶದಲ್ಲಿ ಆ ಜನಾಂಗದ ಜನಗಳು ಕಡಿಮೆ ಇರುವುದು ೨. ರಕ್ತ ಸಂಬಂಧದ ಕುರಿತಂತೆ ಕಾಳಜಿ ೩. ಒಳ ಬಾಂಧವ್ಯದ ಲಕ್ಷಣ ೪. ಜಾತಿಯ ಬಗೆಗಿನ ಪ್ರೀತಿ ೫. ಆರ್ಥಿಕ ನೆಲೆಗಟ್ಟಿನ ದೃಷ್ಟಿ ೬. ಅಹಂಕಾರದ (ಜಾತಿ) ಇನ್ನೊಂದು ರೂಪ ೭. ಸಹಜ ದೃಷ್ಟಿ

ಸೋದರ ಸಂಬಂಧದಲ್ಲಿ ರಕ್ತ ಸಂಬಂಧದ ಪರಿಕಲ್ಪನೆಯಿದೆ. ಇದು ಸಂಬಂಧವನ್ನು ಶಾಶ್ವತಗೊಳಿಸುವ ಇರಾದೆಯನ್ನು ಹೊಂದಿರುತ್ತದೆ.

ವಿಜ್ಞಾನೇಶ್ವರನ ಅಭಿಪ್ರಾಯದಲ್ಲಿ ಇಬ್ಬರು ವ್ಯಕ್ತಿಗಳೊಳಗಿನ ಸಪಿಂಡ ಸಂಬಂಧವು ಅವರ ಶರೀರದ ಕಣಗಳಿಂದ ಉತ್ಪನ್ನವಾಗುತ್ತದೆ. ಅವನು ಈ ಸಂಬಂಧವನ್ನು ತಂದೆಯಿಂದ ಮೇಲ್ಮುಖವಾಗಿ ಏಳನೆಯ ಹಂತಕ್ಕೂ ತಾಯಿಯಿಂದ ಐದನೆಯ ಹಂತಕ್ಕೂ ನಿಗದಿ ಮಾಡಿದ್ದಾನೆ. ಮಿತಾಕ್ಷರದ ಅಭಿಪ್ರಾಯದಂತೆ ಸಪಿಂಡರು-ಒಬ್ಬ ಪುರುಷನ ಅಥವಾ ಅವನು ವರಿಸಬೇಕೆಂದಿರುವ ಹುಡುಗಿಯ ಒಬ್ಬನೇ ವಂಶಜನು ಅವನ ಅಥವಾ ಅವಳ ತಂದೆಯಿಂದ ಏಳನೇ ಹಂತದಿಂದ ಹೊರಗಿರದಿದ್ದರೆ ಅಥವಾ ಅವರಿಬ್ಬರ ಪೂರ್ವಜನು ಅವರ ತಾಯಿಯಿಂದ ಐದನೇ ಹಂತದಿಂದ ಹೊರಗಿರದಿದ್ದರೆ ಅವರು ಒಬ್ಬರನ್ನೊಬ್ಬರು ವಿವಾಹವಾಗುವಂತಿಲ್ಲ. ಸಪಿಂಡ ಸಂಬಂಧವೆಂದರೆ ಅರ್ಧರಕ್ತ ಸಂಬಂಧ ಏಕೋದರ ರಕ್ತ ಸಂಬಂಧ ಮತ್ತು ಪೂರ್ಣರಕ್ತ ಸಂಬಂಧ. ಎರಡನೆಯದಾಗಿ ಅನೌರಸ ಮತ್ತು ಔರಸ ರಕ್ತಸಂಬಂಧ ಮೂರನೆಯದಾಗಿ ದತ್ತಕದಿಂದ ಮತ್ತು ರಕ್ತದಿಂದ ಉಂಟಾದ ಸಂಬಂಧವನ್ನು ಒಳಗೊಳ್ಳುತ್ತದೆ.

*ವಿವರಗಳಿಗೆ ನೋಡಿ: ಶ್ರೀ ಕಂಠಯ್ಯ ಕೆ. ೧೯೮೩*

*ವಿಜಯನಗರ ಕಾಲದ ಅರಸೊತ್ತಿಗೆಯಲ್ಲಿ ಜನಜೀವನ ಚಿತ್ರಣ ಪುಟ. ೨೯೦*

*Vetuk Sylia(Ed) 1978 American Studies in the Anthropology P. 172*

*Jack Goody 1976 Production and Reproduction P. 3, 45*

*Khare.R. S. 1983 Normative Culture & Kinship P. 41*

**೫೪೩. ಬಾಹ್ಯತಪಗಳು**

ಹೆಸರೇ ಸೂಚಿಸುವಂತೆ ಈ ರೀತಿಯ ತಪಸ್ಸು ಬಾಹ್ಯದಲ್ಲಿ ಆಚರಿಸುವಂಥವು. ಇವುಗಳಲ್ಲಿ ಆರು ವಿಧಗಳಿವೆ.

೧) ಅನಶನ (ಆಹಾರವಿಲ್ಲದೆ ತಪಸ್ಸು ಮಾಡುವುದು) ೨) ಅವಮೋದಾರ್ಯ (ಹೊಟ್ಟೆ ತುಂಬುವುದಕ್ಕಿಂತ ಕಡಿಮೆ ತೆಗೆದುಕೊಳ್ಳುವುದು) ೩) ವೃತ್ತಿಸಂಖ್ಯಾನ (ನಿರ್ದಿಷ್ಟ ರೀತಿಯಲ್ಲಿ ಮಾತ್ರ ಭಿಕ್ಷ ಮಾಡುವುದಾಗಿ ಮಿತಿಹಾಕಿಕೊಳ್ಳುವುದು) ೪) ರಸತ್ಯಾಗ (ಹಾಲು, ಮೊಸರು ಮೊದಲಾದ ತನಗೆ ಪ್ರಿಯವಾದುದನ್ನು ಬಿಡುವುದು) ೫) ಕಾಯಕ್ಲೇಶ (ಗಾಳಿ, ಮಳೆ, ಬಿಸಿಲುಗಳಲ್ಲಿ ದೇಹವನ್ನು ದಂಡಿಸಿ ತಪಸ್ಸು ಮಾಡುವುದು) ೬) ವಿವಿಕ್ತಶಯ ನಾಶನ (ಏಕಾಂತವಾಗಿ ಕೂಡುವುದು, ಮಲಗುವುದು ಈ ಬಗೆಯ ತಪಸ್ಸು).

ಜೈನಾಗಮವನ್ನು ಬೋಧಿಸಿದ ಮಹಾವೀರನು ಈ ರೀತಿಯ ದೇಹದಮನ ಮಾಡುವುದು ಮಿಥ್ಯಾತಪಸ್ಸೆಂದೂ, ಅಂತಹ ತಪಸ್ವಿಗಳನ್ನು ಮಿಥ್ಯಾತಪಸ್ವಿಗಳೆಂದೂ ಹೇಳಿದ್ದಾನೆ. ಏಕಾಗ್ರತೆಯಿಂದ ಮಾತ್ರ ತಪಸ್ಸು ಸಾಧ್ಯ.

ಬಹುತೇಕ ತತ್ವಗಳು ಎರಡು ಪರಿಭಾಷೆಗಳನ್ನು ಚಾಲ್ತಿಗೆ ತಂದಿವೆ. ಒಂದು ಕರ್ಮ. (ಪ್ರವೃತ್ತಿಮಾರ್ಗ) ಇನ್ನೊಂದು ಧ್ಯಾನ. (ನಿವೃತ್ತಿಮಾರ್ಗ) ತಪಸ್ಸು ನಿವೃತ್ತಿ

ಮಾರ್ಗವನ್ನು ಸೂಚಿಸುತ್ತದೆ. ತಪವೆಂದರೆ ಅದರ ಮೂಲರೂಪ-ತಾಪ ಅಂದರೆ ದಹಿಸು. ತಪಸ್ಸು ಮಾಡುವುದೆಂದರೆ ತಾಪಕ್ಕೆ ಗುರಿಯಾಗುವುದು ಎಂದರ್ಥ.

**೫೪೪. ಬುಡಕಟ್ಟು**

ಋಗ್ವೇದದಲ್ಲಿ 'ಜನ' ಎಂಬ ಪದವು ೨೭೫ ಸಲ, ವಿಶ್ ಎಂಬ ಪದವು ೧೭೦ ಸಲ ಬಂದರೆ ಬ್ರಾಹ್ಮಣ ಎಂಬ ಪದವು ೧೫ ಸಲ ಮತ್ತು ಕ್ಷತ್ರಿಯ ಎಂಬ ಪದವು ೯ ಸಲ ಬರುತ್ತವೆ. ಇದರಿಂದ ಆ ಸಮಾಜ ವರ್ಗ ವಿಭಜಿತವಾಗಿರಲಿಲ್ಲ, ಬದಲು ಆ ಪ್ರಕ್ರಿಯೆಯ ಭ್ರೂಣಾವಸ್ಥೆಯಲ್ಲೇ ಇತ್ತು ಎನ್ನಬಹುದು. ಮೂಲತಃ ಅದರ ಬುಡಕಟ್ಟು ಲಕ್ಷಣ ಇನ್ನೂ ಉಳಿದಿತ್ತು.

'ದಸ್' ಎಂಬ ಧಾತುಸಾಧಿತ ದಾಸ ಶಬ್ದವೂ ಬಲ್ಬೂಥ, ತರುಕ್ಷ ಮುಂತಾದ ದಾಸ ನಾಯಕರ ಸ್ತುತಿಯೂ ದಾಸರು ಉದಾರ ದಾನಿಗಳಾಗಿದ್ದರೆಂದು ಹಾಗೂ ಹೊಸ ಸಮಾಜದಲ್ಲಿ ಉಚ್ಚಸ್ತರದಲ್ಲಿದ್ದರೆಂದೂ ಸೂಚಿಸುತ್ತದೆ.

ದಾಸರೆಂದರೆ ಯಾರು? ಇವರು ದಸ್ಯುಗಳಿಂದ ಭಿನ್ನರಲ್ಲವೆಂಬ ತಪ್ಪು ತಿಳುವಳಿಕೆ ಇದೆ. ದಸ್ಯು-ಹತ್ಯೆ ಇದ್ದಂತೆ ದಾಸ-ಹತ್ಯೆ ಇಲ್ಲ. ಆರ್ಯರ ಬುಡಕಟ್ಟುಗಳ ಒಳಜಗಳಗಳಲ್ಲಿ ದಾಸರು ಅವರೊಂದಿಗೆ ಇದ್ದಾರೆ. ದಸ್ಯುಗಳನ್ನೆಂದಂತೆ ದಾಸರನ್ನು ಅಪವ್ರತ, ಅನ್ಯವ್ರತ ಎಂದಿಲ್ಲ; ಆದರೆ, 'ದಾಸವಿಶಃ' ಎಂಬ ಪ್ರಸ್ತಾಪವಿದೆ. ಮೇಲಾಗಿ ಪ್ರಾಚೀನ ಇರಾನಿನ 'ದಾಹೆ' ಎಂಬ ಶಿಥಿಯನ್ ಬುಡಕಟ್ಟಿನವರೊಡನೆ ಇವರನ್ನು ಹೋಲಿಸಲಾಗಿದೆ. ದಸ್ಯುಗಳು ಆರ್ಯರಿಂದ ಪೂರ್ತಿ ಪ್ರತ್ಯೇಕವಾಗಿರುವಂತೆ ದಾಸರು ಪ್ರತ್ಯೇಕವಲ್ಲ. ಅಲ್ಲದೆ, ದಸ್ಯುಗಳನ್ನು ಸೂಚಿಸುವಂತಹ ಬೇರಾವ ಇಂಡೋ-ಯೂರೋಪಿಯನ್ ಪದವೂ ಇಲ್ಲ. ಶಬ್ದಸಾಮ್ಯವಿರುವ ಅವೆಸ್ತದ 'ದಹ್ಯು'ಗೆ ವಾಸಸ್ಥಳವೆಂದರ್ಥ. ತದ್ವಿರುದ್ಧವಾಗಿ 'ದಾಸ' ಪದವು ಮನುಷ್ಯ ವಾಚಕವಾಗಿದೆ. ಇದೇ ಅರ್ಥದಲ್ಲಿ ಹಲವು ಭಾಷೆಗಳಿಂದ 'ದಾಸ' ಪದಕ್ಕೆ ಸಮಾನಾರ್ಥಕ ಪದಗಳು ಲಭ್ಯವಿವೆ. ಗ್ರೀಕ್‌ನಲ್ಲಿ ದೂಲೋಸ್ ಎಂದಿದ್ದದ್ದು ಮೈಸೇನಿಯನ್‌ನಲ್ಲಿ 'ದೊ ಎರೋ' ಎಂದಾಗಿದೆ ಇರಾನಿನಲ್ಲಿ 'ದಹ' ಎಂಬ ಪದಪ್ರಯೋಗವಾಗಿದೆ. ಇಂಡೋ-ಯುರೋಪಿಯನ್‌ನಲ್ಲಿ ಇದ್ದಿರಬಹುದಾದ 'ದೋಸ್' ಎಂಬ ಮೂಲ ರೂಪ ಇದರಿಂದ ಸೂಚಿತವಾಗುತ್ತದೆ. ಎಚ್. ಡಬ್ಲ್ಯು. ಬೈಲಿ 'ದಾಸ' ಎನ್ನುವುದು ಒಂದು ಗುಂಪಲ್ಲವೆಂದೂ, ಆರ್ಯೇತರ ಸಾಮಾನ್ಯ ಪಂಗಡಗಳನೇಕಕ್ಕೆ ಆ ಹೆಸರೆಂದೂ ಪ್ರಾಚೀನ ಪರ್ಶಿಯನ್‌ನ ಆಧಾರದಿಂದ ಹೇಳುತ್ತಾನೆ. ಆದರೆ ಒಂದಂಶವನ್ನು ಗಮನಿಸಬೇಕು: ಅದೇನೆಂದರೆ, 'ದಾಸ' ಶಬ್ದವು ಋಗ್ವೇದದಲ್ಲಿ ಆರ್ಯರ ಹಾಗೂ ಅವರ ಬೆಂಬಲಿಗರ ವಿರೋಧಿಗಳು ಎಂಬರ್ಥದಲ್ಲಿ ಪ್ರಯೋಗವಾಗಿದೆ. 'ದಸ್' ಎಂಬ ಧಾತುವಿನಿಂದ 'ದಾಸ' ಶಬ್ದದ ವ್ಯುತ್ಪತ್ತಿಯನ್ನು ಹೇಳಿದಾಗ ಅದಕ್ಕೆ 'ಕ್ರೂರವಾಗಿ ನಡೆಸಿಕೊಳ್ಳುವುದು' ಎಂಬರ್ಥ ಬರುತ್ತದೆ. ದಾಸರೆಂದು ಕರೆಸಿಕೊಂಡವರೆಲ್ಲಾ ಒಂದು ನಿರ್ದಿಷ್ಟ ಜನಾಂಗದವರಾಗಿಲ್ಲದೆ ಬೇರೆ ಬೇರೆ ಜನಾಂಗಗಳಿಗೆ ಸೇರಿದ್ದಿರಬಹುದು;

ಆದರೆ ಅವರನ್ನೆಲ್ಲಾ ಒಟ್ಟಾಗಿ ಒಂದು ಗುಂಪಿನವರೆಂದು ಋಗ್ವೇದದ ಕಾಲದಲ್ಲಿ ಪರಿಗಣಿಸಲಾಗಿದ್ದಿತೆಂಬುದು ನಿಸ್ಸಂಶಯ. ಇರಾನಿನಲ್ಲೂ 'ದಹ' ಎಂಬ ಜನಾಂಗದವರು ಇದ್ದರು; ಪ್ರಾಚೀನ ಪರ್ಷಿಯನ್ ಭಾಷೆಯಲ್ಲಿ ಅವರನ್ನು 'ದಹಾ' ಎಂದು ಕರೆಯುತ್ತಿದ್ದರೆಂಬುದು ಝರ್ಕ್ಸೆಸ್‌ನ ಒಂದು ಶಾಸನದಿಂದ ತಿಳಿದುಬರುತ್ತದೆ. ಪ್ರಾಚೀನ ಭಾರತದಲ್ಲಿ 'ದಾಸ' ಪದವು ನಿಂದಾರ್ಥದಲ್ಲಿ ಬಳಕೆಯಾದದ್ದು ಸಾಕಷ್ಟು ನಂತರದ ಕಾಲದಲ್ಲೇ ಎಂಬ ಊಹೆಗೆ ಆಧಾರವಿದೆ.

ದಸ್ಯು, ದಸ್;ದಾಸ ಇವೆಲ್ಲಾ ಹತ್ತಿರದ ಪದಗಳು. ದಸ್‌ನಿಂದ ದಾಸ್ಯವು ಬಂದಿದೆ. ಆದರೆ ಗಮನಿಸಬೇಕಾದ ಅಂಶವೆಂದರೆ – ದಾಸತ್ವ ಯಜಮಾನಿಕೆಯನ್ನು ಒಂದು ಹಂತದಲ್ಲಿ ಒಪ್ಪಿಕೊಳ್ಳುತ್ತದೆ ಎಂದು ಆರ್.ಎಸ್. ಶರ್ಮ ಹೇಳುತ್ತಾರೆ.

ನಾಡವರು, ಬಂಟರು, ಒಕ್ಕಲರು, ಕುಡುವರು, ರೆಡ್ಡಿಗಳು, ಗಂಗಡಿಕಾರರು, ಗೌಡರು, ಕ್ಷತ್ರಿಯರು, ಬ್ರಹ್ಮಕ್ಷತ್ರಿಯರು, ಎಂಬೀ ಬಗೆಯ ಭೇದಾಭೇದಗಳು ಬೆಳೆದುದುಂಟು. ಆದರೆ, ಮೊದಲಲ್ಲಿ ಇವೆಲ್ಲ ಜನಗಳು ಒಂದೇ ಬುಡಕಟ್ಟಿನವರೆಂದು ಸ್ವಲ್ಪ ಸೂಕ್ಷ್ಮ ನಿರೀಕ್ಷಣೆಯಿಂದ ಕಂಡುಕೊಳ್ಳಬಹುದಾಗಿದೆ. ಇದು ಶಂಬಾರವರ ಅಭಿಪ್ರಾಯ.

*ವಿವರಗಳಿಗೆ ನೋಡಿ: ಆರ್.ಎಸ್. ಶರ್ಮ ೨೦೦೪ ಪ್ರಾಚೀನ ಭಾರತದಲ್ಲಿ ಶೂದ್ರರು*

*ಶಂಬಾ ಜೋಶಿ ೧೯೯೯ ಸಂಪುಟ. ೨ ಪುಟ. ೬೩*

**೫೪೫. ಬುದ್ಧಿತತ್ತ್ವ**

ಬುದ್ಧಿತತ್ತ್ವದ ಕುರಿತು ಅಭಿನವಗುಪ್ತನ ವಿವರಣೆಯು ಈ ಕೆಳಗಿನಂತಿದೆ.

ಬುದ್ಧಿಯು ತ್ರಿಗುಣಗಳ ಪರಿಣಾಮ. ಅದು ಎಲ್ಲೆಡೆಗಳಿಂದಲೂ ಪ್ರತಿಬಿಂಬಗಳನ್ನು ಗ್ರಹಿಸಬಲ್ಲದು. ಅದು ಒಳಗಿನಿಂದ ಆತ್ಮಪ್ರಕಾಶದ ಪ್ರತಿಬಿಂಬವನ್ನು ಮತ್ತು ಹೊರಗಿನಿಂದ ಬಾಹ್ಯವಸ್ತುಗಳ ಪ್ರತಿಬಿಂಬವನ್ನು ಗ್ರಹಿಸುತ್ತದೆ. ಬುದ್ಧಿಯ ಮೇಲೆ ಪ್ರತಿಬಿಂಬವನ್ನು ಮೂಡಿಸುವ ವಸ್ತುಗಳು ಎರಡು ಬಗೆಯಾಗಿವೆ: (೧) ಬಾಹ್ಯ: ಮಡಕೆಯಂಥ ಸ್ಥೂಲವಸ್ತು: ಪ್ರತ್ಯಕ್ಷದ ಕಾಲದಲ್ಲಿ ಇದರ ಪ್ರತಿಬಿಂಬವು ಕಣ್ಣುಗಳ ಮೂಲಕ ಗ್ರಾಹ್ಯವಾಗುತ್ತದೆ; (೨) ಆಂತರಿಕ: ಸಂಸ್ಕಾರಗಳ ಪುನರುದ್ಬೋಧದಿಂದ ನಿರ್ಮಿತವಾದ ಕಲ್ಪನೆಗಳು. ಪ್ರತಿಬಿಂಬನದ ಪರಿಣಾಮವಾಗಿ, ಕನ್ನಡಿಯಂತಿರುವ ಬುದ್ಧಿಯ ತೋರ್ಕೆಯ ಪರಿಣಾಮವನ್ನು ಬುದ್ಧಿವೃತ್ತಿ ಅಥವಾ ವೃತ್ತಿ ಜ್ಞಾನ ಎಂದು ಕರೆಯಲಾಗಿದೆ.

ಬುದ್ಧಿತತ್ತ್ವವನ್ನು ಜ್ಞಾನತತ್ತ್ವವೆಂದು; ಜ್ಞಾನವೆಂದೂ ವೇದಾಂತಿಗಳು ಹೇಳಿದ್ದಾರೆ.

*ವಿವರಗಳಿಗೆ ನೋಡಿ: ಅದ್ವೈತ; ಜ್ಞಾನ; ಅನಂತಜ್ಞಾನ*

*ಜಿ.ಟಿ. ದೇಶಪಾಂಡೆ ೨೦೦೦ ಅಭಿನವಗುಪ್ತ ಪುಟ. ೬೦*

**೫೪೬. ಬುಧಸೇವ್ಯತೆ**

*ನೆಗಟ್ದಿರಸಂ ಮನಂಗೊಳಿಸೆ ಮಾರ್ಗಮೊಡಂಬಡೆ ದೇಸೆ ಕಬ್ಬಮಂ*
*ಬಗೆಗೊಳಲಿಂತು ಪೇಳ್ದುದು ಮಹೀಭುಜಸಾರ್ಥಕಮಲ್ಲದಂತೆ ಕೆ*
*ಮ್ಮಗೆ ಕೊಳಲಾಟಿಪಂ ದೊರೆಯೊ ಶಕ್ಕನೊ ಕಳ್ಳನೊ ಬಂದಿಕಾಜಿನೋ*
*ಪಗೆವನೊ ಮೊಮ್ಮನೋ ಮಗನ ದಾಯಿಗನೋ* **ಬುಧಸೇವ್ಯ***ವಂದನಾ*

*(ಸಾಹಸಭೀಮ ವಿಜಯಂ ೧-೩೬)*

ರನ್ನನು ಪಂಪನಿಗಿಂತ ಕೊಂಚ ಭಿನ್ನವಾಗಿ ಇಲ್ಲಿ ಆಲೋಚಿಸಿದ್ದಾನೆ. ರಸ-ಮಾರ್ಗ-ದೇಸಿ ಈ ಮೂರು ತನ್ನ ಕಾವ್ಯ ಮಾರ್ಗವೆಂದು ಹೇಳಿಕೊಂಡಿದ್ದಾನೆ.

ರಸವು ತನ್ನ ಕಾವ್ಯ ಮಾರ್ಗದಲ್ಲಿ ಒಂದು ಎಂದು ರನ್ನನು ಹೇಳಿದ್ದಾನೆ 'ರಸಂ ಮನಂಗೊಳಿಸೆ' ಅಂದರೆ ರಸವು ಮನವನ್ನು ಸೂರೆಗೊಳ್ಳುವಂತೆ ತಾನು ಕಾವ್ಯವನ್ನು ಬರೆದಿದ್ದೇನೆ ಎಂದು ಹೇಳಿಕೊಂಡಿದ್ದಾನೆ. ಮಾರ್ಗಶೈಲಿ ಮತ್ತು ದೇಸಿ ಗದ್ಯವನ್ನು ತನ್ನ ಕೃತಿಯಲ್ಲಿ ಅಳವಡಿಸಿದ್ದೇನೆ. ಒಟ್ಟು ಕಾವ್ಯವನ್ನು ಬರೆದುದನ್ನು ಸುಮ್ಮನೆ ಬರೆದುದನ್ನೆಲ್ಲಾ ಯೋಚಿಸದೆಯೋ, ಶತ್ರುವೋ, ಬಂಧುವೋ ಯಾರೋ ಆಗಿರುತ್ತಾನಷ್ಟೇ. ಒಟ್ಟಾರೆ ಹುರುಳಿಲ್ಲದ (ನಿಷ್ಪ್ರಯೋಜಕ) ಬರಹಗಳನ್ನು ರಾಜರಾದವರು ಸ್ವೀಕರಿಸಬಾರದೆಂಬುದು ರನ್ನನ ರತ್ನದಂತಹ ಮಾತು.

**೫೪೭. ಬೃಹಸ್ಪತಿ ಮತ**

*ಕಾಯಾಕಾರಪರಿಣತ ಪೃಥ್ವಪ್ತೇಜೋ ವಾಯುಗಳತ್ತಣಿಂ ಬಂದು ಗರ್ಭಾದಿಮರಣ ಪರ್ಯಂತಂ ತದಾತ್ಮಕಂ ಚೈತನ್ಯಂ ಪುಟ್ಟುಗುಂ; ಅದರಿಂ ಪರಲೋಕಮಿಲ್ಲ; ಪರಲೋಕಮಿಲ್ಲಂದಂದು ತಲ್ಲೋಕ ಸುಖಾನುಭವಾಪೇಕ್ಷೆಯಿನೈಹಿಕಸುಖವಿಮುಖನಾಗಿ ಶರೀರಾರ್ಥವ್ಯಯಂಮಾಡು ವಾತಂ ಕಯ್ಯದಂ ಬಿಟ್ಟು ಕಾಲದರ್ಕೆರಿಗುವಾತನಂ ಪೋಲ್ಗುಂ – ಎಂದು* **ಬೃಹಸ್ಪತಿ ಮತಾನುಸಾರಿ***ಯಪ್ಪ ಮಹಾಮತಿ ನುಡಿದು....................*

*(ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೨-೯ವ)*

ಕಾಯಾಕಾರ ಪರಿಣತ, ಪೃಥ್ವಿಅಪ್, ತೇಜೋ; ವಾಯುಗಳಿಂದತ್ತಣಿಂ ಬಂದು; ಗರ್ಭದಿಂದ ಪ್ರಾರಂಭಿಸಿ ಮರಣ ಪರ್ಯಂತ ಚೈತನ್ಯ ಇರುವುದು. ಆದುದರಿಂದ ಪರಲೋಕವಿಲ್ಲ. ಪರಲೋಕವಿಲ್ಲದಿರುವುದರಿಂದ ಅದರ ಸುಖಕ್ಕಾಗಿ ಲೌಕಿಕ ಸುಖಾನುಭವ ದಿಂದ ವಿಮುಖರಾಗುವುದು ಸರಿಯಲ್ಲ. ಐಹಿಕಸುಖವನ್ನು ತೊರೆಯುವುದು ಅರ್ಥಹೀನ ಎಂದು **ಬೃಹಸ್ಪತಿ** ಮತಾನುಸಾರಿ(ಲೋಕಾಯಿತ ಧರ್ಮಕ್ಕೆ ಸೇರಿದವನು) ಮಹಾಮತಿಯು ನುಡಿದನು. ಇಲ್ಲಿ ಜೈನ ಮತದ ನಂಬಿಕೆ ಮತ್ತು ಬೃಹಸ್ಪತಿ ನಂಬಿಕೆಯ ನಡುವೆ ಉಂಟಾಗುವ ವೈಚಾರಿಕ ಸಂಘರ್ಷವೇ ಮುಖ್ಯ.

ಯಾಸ್ಕರ ಅಭಿಪ್ರಾಯದಂತೆ ಬೃಹಸ್ಪತಿಯು ಅಗ್ನಿಯ ರೂಪ. ಇವನನ್ನು 'ಬ್ರಹ್ಮಣಸ್ಪತಿ' ಎಂತಲೂ ಕರೆದಿದ್ದಾರೆ. ಬೃಹಸ್ಪತಿಯು ಮಂತ್ರಾಭಿಯಾನಿಯಾದ ದೇವತೆ ಋಗ್ವೇದದಲ್ಲಿ

ಬೃಹಸ್ಪತಿಯ ಕುರಿತಂತೆ ಈ ರೀತಿ ಬರುತ್ತದೆ. ಬೃಹಸ್ಪತಿಯು ಕತ್ತಲೆಯನ್ನು ನಾಶ ಮಾಡಿದನು. ಇವನು ಬಿಲ್ಲಿನ ಹೆದೆ 'ಋತ'. ಇವನು ಮಂತ್ರಸಾಧಕ ದೇವತೆಗಳಲ್ಲಿ ಇವನು ದೇವ, ಬೃಹಸ್ಪತಿಗೆ ಹವಿಸ್ಸರ್ಪಿಸಿದರೆ ಸೌಭಾಗ್ಯ ದೊರೆಯುತ್ತದೆ. ಚೋರರು, ಪ್ರಾಣಘಾತುಕರು, ಕೊಲೆ ಪಾತಕರು ಪೂಜಾ ವಿಧಾನಗಳಲ್ಲಿ ವಿಘ್ನವೊಡ್ಡುವ ಪಾಪಿಗಳಿಂದ ರಕ್ಷಿಸು ಎಂದು ಋಗ್ವೇದದಲ್ಲಿ ಬರುತ್ತದೆ. ಬೃಹಸ್ಪತಿಯು ಅನ್ನಕ್ಕೆ ಅಧಿದೇವತೆಯೂ ಹೌದು. 'ಅನ್ನಸ್ಯಪಾತಾ' ಇದನ್ನು ಸೂಚಿಸುತ್ತದೆ. ಬೃಹಸ್ಪತಿ, ಇಂದ್ರ, ಸೋಮನನ್ನು ಆರಾಧಿಸುವವರು ವೀರರಾಗುತ್ತಾರೆ. ಪಾಪಕರ್ಮ ಮಾಡದಂತೆ ಅವನನ್ನು ಪ್ರಾರ್ಥಿಸುತ್ತಾರೆ. ಸಾಹಸಕಾರ್ಯದವನು, ಕರ್ಮವನ್ನು ಸಾಧಿಸಲು ಸಹಾಯ ಮಾಡುವವನು ಯಜ್ಞಕ್ಕೆ ಸಹಕಾರಿ. ಬೃಹಸ್ಪತಿ ಮತ ಮತ್ತು ಜೈನ ಧರ್ಮಕ್ಕಿರುವ ಭಿನ್ನಾಭಿಪ್ರಾಯಗಳು ಈ ಮೇಲಿನ ಸುಸ್ಪಷ್ಟ ಎಂದು ಕೃಷ್ಣರಾವ್ ಹೇಳುತ್ತಾರೆ.

"ಬೃಹಸ್ಪತಿ ಮತವೆಂಬುದು ಹೆಂಡ ಕುಡಿದು ಮತ್ತೇರಿದವನು ಆಡುವ ಹುಚ್ಚು ಹುಚ್ಚಾದ ಮಾತಿಗೆ ಸಮಾನವಾದುದು. ಹಾಗಲ್ಲದಿದ್ದರೆ ಈ ಪ್ರಮಾದಿಗೆ ಚಾರ್ವಾಕನೆಂಬ ಹೆಸರು ಹೇಗೆ ಬರುತ್ತಿತ್ತು?

(ಶಾಂತಿಪುರಾಣ ೮–೧೩೭)

ಅಯ್ಯಾ, ಕೇಳು. ನಿಮ್ಮ ಅಭಿಪ್ರಾಯದಂತೆ ಪೃಥಿವಿಯೆ ಮೊದಲಾದ ನಾಲ್ಕು ಭೂತಗಳ ಸಂಯೋಗದಿಂದಲೆ ಜೀವ ಹುಟ್ಟುವುದಾದರೆ (ಒಲೆಯ ಮೇಲೆ ಪಾತ್ರೆಯಿಟ್ಟು ಅಡುಗೆ ಮಾಡುವಾಗ) ಒಲೆಯ ಬೆಂಕಿ, ಮಣ್ಣಿನ ಮಡಕೆ, ಅದರೊಳಗೆ ಎಸರಾದ ನೀರು, ಅಡುಗೆ ಭಟ್ಟನು ಊದುವ ಗಾಳಿ – ಈ ನಾಲ್ಕೂ ಭೂತಗಳ ಸಂಯೋಗದಿಂದ ಇಲ್ಲಿ ಜೀವ ಏಕೆ ಹುಟ್ಟುವುದಿಲ್ಲ? ಹಾಗೆ ಆಗಲಾರದು. ದೇಹಾಕಾರ ಪರಿಣತವಾದ ಭೂತ ಸಮೂಹವೇ ಜೀವ ಜನಕವೆಂದು ನೀನು ವಾದಿಸುವುದಾದರೆ, ಅಂತ್ಯಸಂಸ್ಕಾರಕ್ಕಾಗಿ ಶವವನ್ನಿಟ್ಟ ಭೂಮಿ, ಹೊತ್ತಿಸಿದ ಕಿಚ್ಚು, ತಳಿದ ನೀರು, ಬೀಸುವ ಗಾಳಿ – ಈ ನಾಲ್ಕರ ಸಂಯೋಗದಿಂದ ಅಲ್ಲಿ ಜೀವೋತ್ಪತ್ತಿಯಾಗಲೇಬೇಕು. (ಆದರೆ ಹಾಗೆ ಎಂದಿಗೂ ಆಗುವುದಿಲ್ಲ.) ಇದು ನಿಶ್ಚಿತವಾದುದು; ಮಂದರ ಪರ್ವತದಂತೆ ನಿಶ್ಚಲವಾದುದು. ಇದನ್ನು ಅಲ್ಲಗಳೆಯುವುದು ನಿಮ್ಮ ನೆಚ್ಚಿನ ಬೃಹಸ್ಪತಿಗೂ ಸಾಧ್ಯವಿಲ್ಲ. ಅದರಿಂದ ಪೃಥಿವಿಯೆ ಮೊದಲಾದ ಭೂತಗಳ ಸಂಬಂಧವಿಲ್ಲದೆ ಪ್ರತ್ಯೇಕವಾಗಿದ್ದು ದರ್ಶನ ಜ್ಞಾನಗಳೇ ಲಕ್ಷಣವಾಗುಳ್ಳ ಜೀವವೆಂಬ ಇನ್ನೊಂದು ತತ್ವವು ಎಲ್ಲಾ ಕಾಲಕ್ಕೂ ಉಂಟು. ಇದಕ್ಕೆ ಉಪಪತ್ತಿ ಯಾವುದೆಂದರೆ – ನಾವೂ ನೀವೂ ತಿಳಿದಂತೆ ಪೂರ್ವಜನ್ಮ ಸ್ಮರಣೆಯಿಂದ ಕೆಲವರು ತಮ್ಮ ಜನ್ಮಾಂತರ ವೃತ್ತಾಂತಗಳನ್ನು ಹೇಳುವುದೂ, ಪಿಶಾಚಗ್ರಸ್ತನಾದವನು ಮಂತ್ರದ ಪ್ರಭಾವದಿಂದ ಆವೇಶಗೊಂಡು ತನ್ನ ಪೂರ್ವಭವದ ಹೆಸರನ್ನೂ ಕೃತಿಗಳನ್ನೂ ಹೇಳುವುದೂ – ಚಿಕ್ಕ ಮಕ್ಕಳಿಂದ ಹಿಡಿದು ಮುಪ್ಪಿನ ಮುದುಕರವರೆಗೆ ಎಲ್ಲರಿಗೂ ಚಿರಪರಿಚಿತವಾದ ವಿಷಯ ಮತ್ತು ಸಾರ್ವಭೌಮರಾದ ಚಕ್ರವರ್ತಿಗಳನ್ನು ಕಂಡು ಜನಸಾಮಾನ್ಯರು ಮೊದಲಾಗಿ ಎಲ್ಲರೂ "ಇದು ಹಿಂದಿನ ಜನ್ಮದಲ್ಲಿ ಗಳಿಸಿದ ಪುಣ್ಯದ

ಫಲ"ವೆಂದು ನುಡಿಯುವರು.

(ಶಾಂತಿಪುರಾಣ ೮-೧೩೭ ವ)

ಆದುದರಿಂದ ಜೀವವೆಂಬುದು ಇಲ್ಲದೆ ಇಲ್ಲ. ಆ ಜೀವಕ್ಕೆ ಈ ಜನ್ಮವೂ ಉಂಟು, ಜನ್ಮಾಂತರಗಳೂ ಉಂಟು. ಜೀವತತ್ವಕ್ಕೆ ಪಾಪದಿಂದಲೂ, ಪುಣ್ಯದಿಂದಲೂ, ಅವುಗಳ ಬೆರಕೆಯಿಂದಲೂ ಭವಾವಳಿಯುಂಟಾಗುವುದು. 'ಸಂಸಾರಿ'ಯೆನಿಸುವ ಈ ಜೀವದ ಸುಖಕ್ಕೂ, ದುಃಖಕ್ಕೂ ಅವೆರಡರ ಮಿಶ್ರಣಕ್ಕೂ ಸಂಸಾರವೇ ಆಸ್ಪದವಾಗಿದೆ.

(ಶಾಂತಿಪುರಾಣ ೮-೧೩೯)

ಆದುದರಿಂದ ಆತ್ಮದ ಮಾತು ಪ್ರಮಾಣಸಿದ್ಧವಾಗಿದ್ದು ಪದಾರ್ಥಗಳೆಲ್ಲ ಪ್ರತ್ಯಕ್ಷಗಳೇ ಆಗಿವೆ. ಮಾಂಸ, ನಯನ ಮೊದಲಾದ ವಿಷಯವೆಲ್ಲ ಅಪ್ರತ್ಯಕ್ಷವೆಂಬ ಜಡವಾದವು "ಕಂಡಲ್ಲದೆ ಅರಿಯಲಾರೆ"ನೆಂಬ ನಾಣ್ಣುಡಿಯನ್ನು ಹೋಲುವುದು. ಹೀಗೆ ವಾದಿಸಲಾಗಿ ಪ್ರತಿವಾದಿಯು ನಿರುತ್ತರನಾದನು. ಪಕ್ಷತ್ಯಾಗವು (ಮಂಡಿಸಿದ ಪಕ್ಷವನ್ನು ಬಿಟ್ಟು ವಾದಿಸುವುದು) ವಾದದಲ್ಲಿ ತರ್ಕದೋಷ. ಹಾಗೆ ಆ ದೋಷವನ್ನೆ ಮಾಡಿ ಆತನು –

(ಶಾಂತಿಪುರಾಣ ೮-೧೪೧ ವ)

ಅಂತು ನಿರುತ್ತರನಾಗಿ ಪ್ರತಿವಾದೀಂದ್ರಂ ವನಪ್ರವಿಷ್ಟಕರೀಂದ್ರ ವಿಚ್ಛಿನ್ನ ಮದಸಲಿಲ ಪ್ರವಾಹನಾಗಿರ್ದೊಡಂಬಟ್ಟು ಕುಡಿಸೆ – ಜೀವನಿಲ್ಲೆಂದು ವಾದಿಸುವ ಬೌದ್ಧಮತದಲ್ಲಾಗಲಿ ಚಾರ್ವಾಕಮತದಲ್ಲಾಗಲಿ ಈ ಕ್ರಮದಿಂದ ಅವರ ಸಿದ್ಧಾಂತವೊಂದು, ನಡವಳಿಕೆ ಯಿನ್ನೊಂದು – ಅವರ ಮಾತಿಗೇ ಅದು ವಿರುದ್ಧವಾಗಿದೆ." ಹೀಗೆ ಬೌದ್ಧಮತವನ್ನು ತಿರಸ್ಕರಿಸಿ ತನ್ನನ್ನು ವಾದದಲ್ಲಿ ಗೆಲ್ಲಲು ಪ್ರಯತ್ನಿಸಿದ ಲೋಕಾಯತ ಮತಾವಲಂಬಿಯನ್ನು ನಿರುತ್ತರಗೊಳಿಸಿ ಗೆದ್ದು ಅನೇಕ ಯುಕ್ತಿಗಳಿಂದ ಚಾರ್ವಾಕವಾದಿಯನ್ನು 'ಅಯ್ಯೋ ಪಾಪ' ಎಂಬವಸ್ಥೆಗೆ ಇಳಿಸಿದನು.

ವಿದ್ವಾಂಸರು ನೆರೆದ ಸಭೆಯಲ್ಲಿ ವಜ್ರಾಯುಧನ ವಾಣಿಯೆಂಬ ವಜ್ರಾಘಾತದಿಂದ ಆ ಕಪಟ ವಟ ವೇಷಧಾರಿಯ ಗರ್ವಪರ್ವತ ಸೀಳಿ ನುಚ್ಚುನೂರಾಯಿತು. ಈ ಮೇರೆಗೆ ಇಷ್ಟೊಂದು ಹಿರಿಯನೂ ಚತುರ ವಿದ್ವಾಂಸನೂ ಆದ ಪಂಡಿತನೊಡನೆ ಅರಸನು ಅಮೃತಾಕ್ಷರವನ್ನು ಮುಕ್ಕುಳಿಸುವಂತೆ ನುಡಿದು ಉಪನ್ಯಾಸ ಮಾಡಲಾಗಿ ಆ ಸಭಾಮಂದಿರದ ತಾರ್ಕಿಕರಿಗೆಲ್ಲ ಅದು ಮೆಚ್ಚುಗೆಯಾಯಿತು. ಹೀಗೆ ನಿರುತ್ತರನಾದ ಪ್ರತಿವಾದಿಯು ಕಾಡಿನಲ್ಲಿ ಹೊಕ್ಕು ಮದವನ್ನೆಲ್ಲ ಕಳೆದುಕೊಂಡ ಆನೆಯಂತೆ ಮದವಿಳಿದು (ಸೋತೆನೆಂದು) ಒಡಂಬಡುವಂತಾಯಿತು. (ಶಾಂತಿಪುರಾಣ ೮-೧೪೭-೧೪೯)

ಮನು ಮತ್ತು ಯಾಜ್ಞವಲ್ಕ್ಯರು ನಾಸ್ತಿಕ್ಯವನ್ನು ಪಾತಕವೆಂದು ಪರಿಗಣಿಸಿದ್ದಾರೆ.

*ವಿವರಗಳಿಗೆ ನೋಡಿ: ಯುಗಯಾತ್ರೀ ಭಾರತೀಯ ಸಂಸ್ಕೃತಿ ೧೯೭೧ ಸಂಪುಟ. ೨ ಪುಟ. ೨೪೪*

**೫೪೮. ಬೆಚ್ಚುನೀರ್**

*ಮದದ ನೀರೊಳೆ ಲೋಕವಾರ್ತೆಗೆ ಬೆಚ್ಚುನೀರ್ದಳಿದಾಗಳಾ*
*ಮದಗಜಾಂಕುಶದಿಂದೆ ಪೆರ್ಚಿಸಿ ನಾಭಿಯಂ ಮದದಂತಿ ದಂ।*
*ತದೊಳೆ ಕಟ್ಟಿದ ತೊಟ್ಟಿಲಂ ನಯದಿಂದಮೇಱಿಸೆ ಬಾಳಕಾ*
*ಲದೊಳೆ ತೊಟ್ಟಿಲಿಗಂ ಗಜಪ್ರಿಯನಪ್ಪುದಂ ಸಲೆ ತೋಱಿದಂ॥*

(ವಿಕ್ರಮಾರ್ಜುನವಿಜಯ ೧-೪೩)

ಬೆಚ್ಚು ನೀರು ಎಂದರೆ ಹೆದರಿಕೆ ಹೋಗುವುದಕ್ಕಾಗಿ ಎರಚುವ ನೀರು.

ಬೆಚ್ಚುನೀರೆಂದರೆ, ಮಕ್ಕಳ ಮೇಲೆ ಪರಿಣಮಿಸಬಹುದಾದ ಲೋಕದ ದೃಷ್ಟಿಬಾಧೆ ಪಿಶಾಚಿಪೀಡೆ ವಚನದೋಷಗಳನ್ನು ಬೆಚ್ಚಿಸಿ ಹೋಗಾಡಿಸಲೆಂದು ಪರಂಪರಾಗತ ವಿಶ್ವಾಸದಿಂದ ಎರಚುವ ಅದೊಂದು ಮಂತ್ರಪೂರಿತವಾದ ಬೇಳಂಬದ ನೀರು. ಆ ತರದ ನಡವಳಿ ಇಂದಿಗೂ ನಾಡಿನೊಳಗೆ ನೆಲೆಗೊಂಡಿರುವುದನ್ನು ನೋಡಬಹುದು. ಈ ಕುಮಾರನ ವಿಷಯವಾಗಿ ನೆಲೆವಡೆದ ಅಂಥ 'ಲೋಕವಾರ್ತೆ' ಏನಾಗಿರಬಹುದು? ಚಲುವಿನ ನೆಲೆಗಳಾದ ಮರಿಮಕ್ಕಳ ಮೇಲೆ ಬಲೆಯಾಗಿ ಬೀಸುವ ಕೆಲವೇ ವ್ಯಕ್ತಿಗಳ ಕಣ್ಮನಸ್ಸುಗಳು ಲೋಕದಲ್ಲುಂಟು. ಅವನ್ನೇ, ಮಹಾಕವಿಯಾದ ಪಂಪನು 'ಲೋಕವಾರ್ತೆ' ಎಂಬ ಸಾಮಾನ್ಯವಾದ ಪದದಿಂದ ನಿರೂಪಿಸಲೊಲ್ಲನೆಂದೇ ನಮ್ಮೆಣಿಕೆ ಮಾತ್ರವಲ್ಲ. ಈ ರಾಜಕುಮಾರನಿಗೆರಚಿದ ಲೋಕವಾರ್ತಾನಿವಾರಕವಾದ ಬೆರ್ಚುನೀರೆಂದರೆ ಸಾಮಾನ್ಯವಾದ ನೀರಲ್ಲ; ವಿಶೇಷವಾದ ಆನೆಗಳ 'ಮದದ ನೀರು' ಅದರಂತೆ ವಿಶೇಷವಾದ 'ಮದಗಜಾಂಕುಶದಿಂದೆ' ನಾಭಿಯನ್ನು ಪೆರ್ಚಿಸಿದುದು 'ಮದದಂತಿ ದಂತದೊಳೆ ಕಟ್ಟಿದ ತೊಟ್ಟಿಲ'ನ್ನೇರಿಸಿದುದೂ ವಿಶೇಷವಾದೊಂದು ಲೋಕವಾರ್ತಾ ನಿವೃತ್ತಿಗಾಗಿಯೇ ಎಂಬಲ್ಲಿ ಸಂದೇಹವಿಲ್ಲ ಎಂದು ಮುಳಿಯ ತಿಮ್ಮಪ್ಪಯ್ಯ ಹೇಳುತ್ತಾರೆ.

*ವಿವರಗಳಿಗೆ ನೋಡಿ: ಮುಳಿಯ ತಿಮ್ಮಪ್ಪಯ್ಯ ೨೦೦೬ ನಾಡೋಜ ಪಂಪ ಪುಟ. ೪೧.*

**೫೪೯. ಬೆದಂಡೆ ಗಾಣರು**

*ಬೀಣೆಯ ಕೊೞಲ ಬೆದಂಡೆಯ*
*ಗಾಣರ ಬೞಿವಿಡಿದು ಸುೞಿದು.........ಕಥಕ*
*ಶ್ರೇಣಿಯೊಡ ನೆಳಸಿ ಬಳಸುವ*
*ನಾಣಿಲಿಗಳನೀ ಬುಧಾಳಿಯೊಳ ಪುಗಿಸುವುದೇ*

ವೀಣೆಯ, ಕೊಳಲಧ್ವನಿಯನ್ನು ಬೆದಂಡೆಯ ಗಾಣರ(ಗಾಯಕರ) ಕಥಕ ಶ್ರೇಣಿಯನ್ನು ಬಳಸುವವರನ್ನು ಬುಧಾಳಿಯಲ್ಲಿ (ಪಂಡಿತರು) ಪುಗಿಸುವುದೆ? (ಪ್ರವೇಶಿಸುವಂತೆ ಮಾಡುವುದೆ?) ಎಂದು 'ಸುಕುಮಾರ ಚರಿತ' ಕೃತಿಯಲ್ಲಿ ಬರುತ್ತದೆ.

(ಶಾಂತಿನಾಥ ಕವಿ ೨-೨೪)

ಪಂಡಿತರು ಬೇರೆ ಬೆದಂಡೆ ಗಾಣರು ಬೇರೆ. ಬೆದಂಡೆ ಗಾಣರನ್ನು ಪಂಡಿತ

ಮಂಡಲಿಯ ನಡುವೆ ಹಾಡಲು ಬಿಡುತ್ತಿರಲಿಲ್ಲವೆಂದು ಮೇಲಿನ ವ್ಯಂಗ್ಯ ವಾಕ್ಯದಿಂದ ತಿಳಿಯಬಹುದು. ಬೆದಂಡೆಯವರನ್ನು ಹೀಗಳೆಯುವ ಈ ಮಾತಿನಲ್ಲಿ ಪಂಡಿತರನ್ನು ಎತ್ತಿ ಹಿಡಿಯುವ ಪ್ರಯತ್ನವೂ ಇದೆ.

**೫೫೦. ಬೆದಂಡೆ-ಚತ್ತಾಣ**

*ನುಡಿಗೆಲ್ಲಂ ಸಲ್ಲದ ಕ*
*ನ್ನಡದೊಳ್ **ಚತ್ತಾಣಮುಂ ಬೆದಂಡೆ**ಯು ಮೆಂದೀ*
*ಗಡಿನ ನೆಗಳ್ತೆಯ ಎಂದು ಕವಿರಾಜಮಾರ್ಗಕಾರನು ಹೇಳುತ್ತಾನೆ. (೧-೩೩)*

*ಕಂದಮುಮಮಳಿನ ವೃತ್ತಮು*
*ಮೊಂದೊಂದೆಡೆಗೊಂ (ಡು) ಜಾತಿಜಾಣೆಸೆಯೆ ಬೆಡಂ*
*ಗೊಂದಿವರಳಮರೆ ಪೇರಲ್*
*ಸುಂದರ ರೂಪಾ **ಬೆದಂಡೆಗಬ್ಬ**ಮದಕ್ಕುಂ (ಕವಿರಾಜಮಾರ್ಗ ೧-೩೪)*

ಬೆದಂಡೆಗಬ್ಬದ ಕುರಿತು ಕವಿರಾಜಮಾರ್ಗದಲ್ಲಿ ಮೇಲಿನಂತೆ ವಿವರಣೆಯಿದೆ. ಕವಿರಾಜಮಾರ್ಗಕಾರನು ಜಾಣ್ಮೆಯ; ಬೆಡಗಿನ; ಸುಂದರ ರೂಪವನ್ನು ಹೊಂದಿರುವುದೇ ಬೆದಂಡೆಗಬ್ಬ ಎಂದು ಹೇಳುತ್ತಾನೆ.

ಬೆದಂಡೆ-ಚತ್ತಾಣ: ಬೆದಂಡೆ(ಸಂ.ವೈದಂಡಿಕಾ). ಚತ್ತಾಣ(ಸಂ. ಚಿತ್ರಾಯತನ).

ಕಂದಪದ್ಯವೂ 'ಅಮಳಿನ' (ದೋಷ ರಹಿತವಾದ) ವೃತ್ತವೂ ಒಂದೊಂದು ಎಡೆಗೆ ಒಂದೊಂದರಂತೆ ಕೂಡಿ, 'ಜಾತಿಜಾಣು' (ದೇಸಿಗೆ ವಿಶಿಷ್ಟವಾದ ಕೌಶಲ) ಇವುಗಳಲ್ಲಿ ಬೆಡಗಿನಿಂದ ಸೇರಿಕೊಂಡಿದ್ದರೆ ಅದು ಬೆದಂಡೆಗಬ್ಬವೆನಿಸುವುದು.

ಹಲವು ಕಂದಗಳು, ಚೆಲುವಾದ ವೃತ್ತ ಅಕ್ಕರ ಚೌಪದಿ ಗೀತಿಕೆ ತ್ರಿಪದಿ - ಇವು ಸೊಗಸುವಡೆದು ಮೆರೆಯುತ್ತಿದ್ದರೆ ಅದು ಚತ್ತಾಣ.

ಬೆದಂಡೆ - ಚತ್ತಾಣಗಳು ಹಿಂದಿನ ದೇಸಿಗಬ್ಬದ ವಿಶಿಷ್ಟ ನಾಮಗಳಾಗಿರಬಹುದೆಂದೂ, ಎರಡನೆಯ ನಾಗವರ್ಮನು ತನ್ನ 'ಕಾವ್ಯಾವಲೋಕನ'ದಲ್ಲಿ ವಿವರಿಸಿರುವ 'ಬಾಜನೆಗಬ್ಬ'ವು 'ಚತ್ತಾಣ'ದ ನಾಮಾಂತರವಾಗಿರಬಹುದೆಂದೂ, ಅವನು ಹೇಳುವ 'ಪಾಡುಗಬ್ಬ'ದ ಒಳಪ್ರಭೇದಗಳಿವೆಂದೂ ಈ ಬಾಜನೆಗಬ್ಬ ಮುಂತಾದ ದೇಸಿಗಬ್ಬದ ಸಂತತಿಯಲ್ಲಿಯೆ ಇಂದಿನ 'ಯಕ್ಷಗಾನ ಪ್ರಬಂಧ' ಇಲ್ಲವೆ 'ಬಯಲಾಟದ ಪ್ರಬಂಧ'ವು ತಲೆದೋರಿರಬೇಕೆಂದೂ, ಒಟ್ಟಿನ ಮೇಲೆ 'ಬೆದಂಡೆ-ಚತ್ತಾಣ'ಗಳೆಂದರೆ ಹಿಂದಣ ದೇಸಿಯಾದ ದೃಶ್ಯ - ಶ್ರವ್ಯಗಳೆಂಬ ಕಾವ್ಯಭೇದಗಳಾಗಿದ್ದಿರಬೇಕೆಂದೂ ಮುಳಿಯ ತಿಮ್ಮಪ್ಪಯ್ಯನವರು ಅಭಿಪ್ರಾಯಪಟ್ಟಿದ್ದಾರೆ.

(ಕ.ರಾ.ವಿವೇಕ-೧ ಪು.೧೧೯-೧೨೩ ನೋಡಿ.

'ಬೆದಂಡೆ' ಎಂಬುದು "ಕೇಳಲಿಕ್ಕೂ ನೋಡಲಿಕ್ಕೂ ಇರುವ ದೇಸೀಗಾನದ ದೃಶ್ಯಕಲೆ"

ಎಂದು ಕೆ.ಪಿ.ವೆಂಕಪ್ಪಶೆಟ್ಟಿ ಅವರ ಮತ: 'ನಾಟ್ಯಗರಣ'ಗಳಲ್ಲಿ ರೂಢಿಗೊಂಡ ಅತ್ಯುತ್ತಮವಾದ 'ಮೋಹಿನೀ ಕಲೆ'ಯಾದ ಯಕ್ಷಗಾನವೇ ಈ ಬೆದಂಡೆಯಾಗಿರಬಹುದು. ('ಸಮರ್ಪಣೆ' ಗ್ರಂಥದಲ್ಲಿ 'ಯಕ್ಷಗಾನ ಕಲೆ' ಎಂಬ ಅವರ ಲೇಖನವನ್ನು ನೋಡಿ.) 'ನಾಡ ಹಗರಣ' ದೇಸೀ ನಾಟಕವೇ ಇದ್ದಿರಬೇಕು. (ಕ.ಮಾರ್ಗದಲ್ಲೂ 'ಪಗರಣ'ದ ಉಲ್ಲೇಖವಿದೆ. ಪ.೧–೬೮).

"ಚತ್ತಾಣ(=ಚಿತ್ರಾಯತನ). ಬೆಂದಂಡೆ(=ವೈದಂಡಿಕ) ಎಂಬ ಪದ್ಯ ಬಂಧ ಜಾತಿಗಳು, ನಮಗೆ ತಿಳಿದಮಟ್ಟಿಗೆ, ಸಂಸ್ಕೃತದ ಅಲಂಕಾರ ಗ್ರಂಥಗಳಲ್ಲಿ ಕೂಡ ಎಲ್ಲಿಯೂ ಉಕ್ತವಾಗಿಲ್ಲ."

ಚತ್ತಾಣ

ಚತ್ತಾಣದ ಕುರಿತು ಮುಳಿಯ ತಿಮ್ಮಪ್ಪಯ್ಯನವರು ಬಹು ಮುಖ್ಯವಾದ ಚರ್ಚೆಯನ್ನು ಎತ್ತಿಕೊಂಡಿದ್ದಾರೆ. ಲಾಕ್ಷಣಿಕರ ದೃಷ್ಟಿಯಲ್ಲಿ ಕಾಣುವುದಾದರೆ ಅದನ್ನು ಶ್ರವ್ಯ ಎನ್ನಬಹುದು. ಈ ಉಪನ್ಯಾಸದಲ್ಲಿ ದೇಸಿಯೊಳಗಿನ ಇನ್ನೊಂದು ಭೇದವೆನ್ನಬಹುದಾದ ದೃಶ್ಯದ ಅಥವಾ ದೇಸಿ ನಾಟಕ (ಆಟ)ದ ಸ್ವರೂಪವನ್ನು ಈಗ ಪರೀಕ್ಷಿಸಿ ನೋಡುವ ಕವಿರಾಜ ಮಾರ್ಗಕಾರನು ಚತ್ತಾಣವೆಂದೂ, ಕಾವ್ಯಾವಲೋಕನಕಾರನು ಬಾಜನೆಗಬ್ಬವೆಂದೂ ಹೆಸರಿಸಿದುವು ದೇಸಿ ದೃಶ್ಯಕಾವ್ಯದ ಎರಡು ಹೆಸರುಗಳೆಂದೇ ನನ್ನ ಭಾವನೆ. ಚತ್ತಾಣದ ಸ್ವರೂಪವನ್ನೀಕ್ಷಿಸಿರಿ:–

ಕಂದಗಲ್ಪಲವಾಗಿರೆ ।
ಸುಂದರವೃತ್ತಂಗಳಕ್ಕರಂ ಚೌಪದಿಮ ॥
ತ್ತಂದಲ್ ಗೀತಿಕೆ ತಿವದಿಗ ।
ಳಚಿದಂಬೆತ್ತೆಸೆಯೆ ಪೇರ್ದೊಡದು ಚತ್ತಾಣಂ

ಈ ಲಕ್ಷಣವನ್ನೀಕ್ಷಿಸುವಾಗಲೇ ಇದು 'ಬೆದಂಡೆ'ಯಿಂದ ಪರಿಮಾಣದಲ್ಲಿ ದೊಡ್ಡದೆಂಬುದು ವ್ಯಕ್ತವಾಗುತ್ತಿದೆ. 'ಚತ್ತಾಣ' ಎಂಬ ಹೆಸರು ಹೇಗೆ ಮೈಗೊಂಡಿರಬಹುದೆಂಬುದು ಇನ್ನೂ ಕಗ್ಗಂಟಿನೊಳಗಿನದಾಗಿಯೇ ಇದೆ. 'ಜಕ್ಕ+ತಾಣಂ' ಎಂಬುದೇ ಉಚ್ಚಾರಣದ ಪದ್ಧತಿಯಿಂದ, ಮಧ್ಯದ 'ಕ್ಕ'ಕಾರವು ಲೋಪಿಸಿ 'ಜತ್ತಾಣಂ' ಎಂದಾಗಿರಬಹುದು; ಆದಿಯ ಜಕಾರವು 'ಚ'ಕಾರವಾಗಿ ಮತ್ತೆ ಮಾರ್ಪಟ್ಟುದಿರಬಹುದು; ಎಂದು ಹಿಂದೊಮ್ಮೆ ನಾನೂ ಸಂದೇಹಿಸಿದ್ದೇನೆ. ಕೆಲವೆಡೆಯಲ್ಲಿ 'ಚತ್ತಾಣ' ಎಂಬುದಕ್ಕೆ ಬದಲಾಗಿ 'ಜತ್ತಾಣ' ಎಂಬುದಾಗಿಯೂ ತೋರುತ್ತಿದೆ. ಆ ಭಾವನೆಯೇ ಸಾಧು ಎಂದಾದರೆ 'ಜತ್ತಾಣ'ವೇ ಮೂಲರೂಪವಾಗಿರಬೇಕು. ಆದರೆ ಈ ಪದಕ್ಕೆ ಮೂಲಾಶ್ರಯವಾದ ಕವಿರಾಜಮಾರ್ಗದ ಅಚ್ಚಾದ ಎರಡು ಪ್ರತಿಗಳಲ್ಲೂ 'ಚತ್ತಾಣ'ವೆಂಬ ರೂಪವೇ ಇದೆ. ಈ ಪೂರ್ವದ 'ಚತ್ತಾಣ' ರೂಪವು 'ಜಕ್ಕತಾಣ' ಎಂಬುದರಿಂದ 'ಜತ್ತಾಣ'ವಾಗಿ ಪರಿಣಮಿಸಿ ಕಡೆಗೆ ಮಾರ್ಪಟ್ಟುದು ಎಂದರೆ ಹುರುಳಿಲ್ಲದ ವಾದ ಮಾತ್ರವೇ ಆಗುವುದೆಂದು ಸಂಶಯವಾಗುತ್ತಿದೆ. ಅದರಿಂದ ಆ ಪದವು ಹೇಗೆ ರೂಪಿಸಿರಬಹುದು?

ಹೇಗೆ ಈ ವಿಶಿಷ್ಟವಾದ ದೇಸಿಗಬ್ಬದ ಹೆಸರಾಗಿ ಪರಿಣಮಿಸಿರಬಹುದು?

ಚತ್ತಾಣವು ದೇಸಿಗಬ್ಬದ ಸ್ವರೂಪವನ್ನು ನೋಡಿದರೆ ಅದು ಕವಿರಾಜಮಾರ್ಗಕ್ಕಿಂತಲೂ ಹಿಂದೆ ಪ್ರಚಲಿತದಲ್ಲಿತ್ತು ಎಂದು ತಿಳಿಯುತ್ತದೆ. ಚೌಪದಿ(ನಾಲ್ಕು ಸಾಲಿನ ಹಾಡು) ಗೀತಿಕೆ; ಚತ್ತಾಣಂಗಳು ದೇಸಿಗಬ್ಬಗಳು ಎಂಬುದು ಗಮನಾರ್ಹವಾಗಿದೆ. ಚತ್ತಂ ಎಂದರೆ ತಕ್ಕು ಎಂಬ ಅರ್ಥವಿದೆ. ಆಣಂ ಎಂದರೆ ಹಾಡುಗಾರ ಎಂದರ್ಥವಾಗಿದೆ. ಚತ್ತ ಮತ್ತು ಆಣಂ ಎಂಬ ಪದಗಳು ಸೇರಿಕೊಂಡು ಚತ್ತಾಣವಾಗಿದೆ.

*ವಿವರಗಳಿಗೆ ನೋಡಿ: ತೀ.ನಂ.ಶ್ರೀ. ೨೦೦೬ ಭಾರತೀಯ ಕಾವ್ಯಮೀಮಾಂಸೆ ಪುಟ. ೪೫೯*
*ಎಂ.ವಿ.ಸೀತಾರಾಮಯ್ಯ ಅವರ ಟಿಪ್ಪಣಿಗಳು*
*ಮುಳಿಯ ತಿಮ್ಮಪ್ಪಯ್ಯ ೧೯೮೮ ಶ್ರದ್ಧಾಂಜಲಿ ಸಂಪುಟ. ೨ ಪುಟ. ೪೨೦*

**೫೫೧. ಬೆಲೆವೆಣ್**

*ಕಡುಗೂರ್ಪಿಲ್ಲದ ಕರವಾಳ್*
*ಕಡುಪಿಲ್ಲದ ಕುದುರೆ ಗಾಡಿಯಿಲ್ಲದ ಬೆಲೆವೆಣ್ ।*
*ನಡೆಯಿಲ್ಲದ ಕರ್ತೆ ಮನ*
*ಕ್ಕೊಡಂಬಡಂ ಮಾಳ್ಕುಮರ್ತಿಯಂ ಮಾಡುಗುಮೇ.. ॥*

*(ಅಜಿತತೀರ್ಥಂಕರ ಪುರಾಣ ತಿಲಕಂ ೬-೮೬)*

ಹರಿತವಿಲ್ಲದ ಕತ್ತಿ (ಕರವಾಳ್) ಕಡುಪಿಲ್ಲದ ಕುದುರೆ ಮತ್ತು ಸೌಂದರ್ಯವಿಲ್ಲದ ಬೆಲೆವಣ್ (ಸೂಳೆ) ಇವುಗಳಿಂದ ಯಾವ ಪ್ರಯೋಜನವೂ ಇಲ್ಲ. ಸುರತ ಸುಖಕೊಟ್ಟುದಕ್ಕೆ ಬೆಲೆಯನ್ನು ಕೇಳುವವಳು 'ಬೆಲೆವೆಣ್'. ಆಧುನಿಕವಾಗಿ ಇವರನ್ನು ಲೈಂಗಿಕಕಾರ್ಯ ಕರ್ತೆಯರು (Sex workers) ಎಂದು ಕರೆಯುತ್ತಾರೆ.

ಋಗ್ವೇದದಲ್ಲಿ ಇದಕ್ಕಿಂತ ಭಿನ್ನವಾದಂತಹ ವೇಶ್ಯಾವೃತ್ತಿಯ ಅಸ್ಪಷ್ಟ ಕುರುಹುಗಳನ್ನು ನೋಡಬಹುದು. ಬಹುಶಃ ಅದು, ಆರ್ಯಪೂರ್ವ ಮಾತೃದೇವತಾ ಪಂಥಗಳಿಗಿಂತಲೂ ಹೆಚ್ಚಾಗಿ ಆರ್ಯರ ಸಾಮುದಾಯಿಕ ವಿವಾಹದ ಕುರುಹುಗಳಿದ್ದಿರಬಹುದು. ಹೀಗೆಂದ ಮಾತ್ರಕ್ಕೆ ಆ ಎರಡು ಪಂಥಗಳ ನಡುವೆ ಸಂಪರ್ಕವೇ ಇರಲಿಲ್ಲ ಎಂದೇನು ಆಗಬೇಕಾಗಿಲ್ಲ. ಈ ಬಗ್ಗೆ ಋಗ್ವೇದದಲ್ಲಿ (೧-೧೬೭-೪) ಒಂದು ನಿರ್ದಿಷ್ಟ ಉದಾಹರಣೆ ದೊರಕುತ್ತದೆ. ರೋದಸೀ ಎಂಬ ದೇವತೆಯು ಮರುತ್‌ಗಳೆಲ್ಲರಿಗೂ ಪತ್ನಿ. ಅವಳಿಗೆ ಸಾಧಾರಣೀ ಎಂಬ ಹೆಸರಿತ್ತು. (ಜೊತೆಗೆ, ಯವ್ಯಾ ಎಂಬ ಹೆಸರೂ ಇತ್ತು. ಅಂದರೆ ಬಹುಶಃ ಫಲವತಿ ಎಂದಿರಬಹುದೇ? ಅದರ ಅರ್ಥ ಅಗ್ರಾಹ್ಯವಾಗಿದೆ) ಅಥವಾ ಒಂದು ತೆರನಾದ ವೇಶ್ಯಾವೃತ್ತಿಯನ್ನು ಸೂಚಿಸುತ್ತದೆಯೋ ಎಂಬುದು ಸ್ಪಷ್ಟವಿಲ್ಲ. ಬೇರೊಂದು ಕಡೆಯಲ್ಲಿ ರೋದಸಿಯನ್ನು (ತಪ್ಪು ಉಚ್ಚಾರದಿಂದಾಗಿ) ದ್ಯಾವ-ಪೃಥ್ವಿ ಜೊಡಿಯೊಂದಿಗೆ ಸಮೀಕರಿಸಲಾಗಿದೆ. ಇದರಿಂದ ಸಮಸ್ಯೆ ಮತ್ತಷ್ಟು ಬಿಗಡಾಯಿಸಿದೆ. ಏಕೆಂದರೆ ಇಲ್ಲಿ ಒಬ್ಬರಲ್ಲ ಇಬ್ಬರು ದೇವತೆಯರಿದ್ದಾರೆ ಎಂದಾಗುತ್ತದೆ. ಅಶ್ವಿನಿ ದೇವತೆಗಳು

ಸೋಮನೊಂದಿಗೆ ಸೂರ್ಯಳ ಮದುವೆಯನ್ನು ಮಾಡುವ ಮಧ್ಯಸ್ತಿಕೆ ವಹಿಸಿಕೊಳ್ಳುತ್ತಾರೆ (೧೦. ೮೫: ೮–೯ರ ಪ್ರಕಾರ ಇದು ಮೂಲದಲ್ಲಿ ಚಂದ್ರ ದೇವನೊಂದಿಗೆ ಸೂರ್ಯದೇವಿಯ ಮದುವೆ). ಹೀಗೆ ವಿವಾಹದ ಮಧ್ಯಸ್ತಿಕೆಯನ್ನು ವಹಿಸಿಕೊಳ್ಳುವ ಮುಲಕ ಅಶ್ವಿನಿದೇವತೆಯರು ಸಂಬಂಧದ ದೃಷ್ಟಿಯಿಂದ ಅವಳಿಗೆ ಸಹೋದರರಾಗುತ್ತಾರೆ. ಆದರೆ ಋಗ್ವೇದದ ಇನ್ನೊಂದು ಸೂಕ್ತದ ಪ್ರಕಾರ (೪. ೪೩.೬) ಅವರು ಅವಳ ಪತಿಯರು. ಇದು ಕೂಡ ಹಿಂದಿನ ಸಾಮುದಾಯಿಕ ವಿವಾಹ ಪದ್ಧತಿಯ ಪ್ರಕಾರ ಅಸಮಂಜಸ ಎಂದೆನಿಸಿಕೊಳ್ಳುವುದಿಲ್ಲ. ನಂತರದ ಸಂಪ್ರದಾಯದಲ್ಲಿ ಸೂರ್ಯಳನ್ನು ಉಷಸ್ ಹಾಗೂ ಊರ್ವಶಿಯೊಂದಿಗೆ ಸಮೀಕರಿಸುವುದನ್ನು ಈಗಾಗಲೇ ಗಮನಿಸಿದ್ದೇವೆ, ನಂತರದ ಸೂಕ್ತವು ಸೂರ್ಯಳ ಮದುವೆಯನ್ನು ಪ್ರಚಲಿತದಲ್ಲಿರುವ ವಿವಾಹ ವಿಧಿಯನ್ನಾಗಿ ಮಾರ್ಪಡಿಸಿದೆ. ಮಾನವ ದಂಪತಿಗಳು ದೇವ ದಂಪತಿಗಳ ಪಾತ್ರ ಧರಿಸಿದಾಗ ಈ ರೀತಿ ಆಗುತ್ತದೆ. ಮದುವೆಯ ನಿರ್ಣಾಯಕ ಘಟ್ಟದಲ್ಲಿ ವರನು ತನ್ನ ಹೆಂಡತಿಯ ಕೈಯ್ಯನ್ನು ಹಿಡಿದುಕೊಳ್ಳುತ್ತಾನೆ (೧೦. ೮೫–೩೬), ಆದರೆ ಅದರ ಮುಂದಿನ ಋಕ್ಕಿನಲ್ಲಿ ವಧುವನ್ನು ಹಲವು ಮದಿ ಪುರುಷರ ವೀರ್ಯವನ್ನು (ಬೀಜವನ್ನು) ಧರಿಸುವಳು ಎಂದು ಸಂಬೋಧಿಸಲಾಗಿದೆ; "ಯಸ್ಯಾಂ ಬೀಜಂ ಮನುಷ್ಯಾ ವಪಂತಿ". ಬಹುಶಃ ತೀರಾ ಪುರಾತನ ಕಾಲದಲ್ಲಿ, ಹೆಂಗಸೊಬ್ಬಳು ಯಾರನ್ನಾದರೂ ಮದುವೆಯಾದಳೆಂದರೆ, ಆಕೆ ಆತನ ಸಹೋದರರಿಗೆ ಅಥವಾ ಕುಲಬಾಂಧವರಿಗೂ ಪತ್ನಿಯಾಗುತ್ತಿದ್ದಂತಹ ಪದ್ಧತಿ ಇದ್ದಿರಲೇಬೇಕು. ಇಲ್ಲವಾದಲ್ಲಿ ಆಕೆಗೆ ಬಳಸಿರುವ ಇಂಥ ಸಾರ್ವತ್ರಿಕ ಸಂಬೋಧನೆಯು ವಿಲಕ್ಷಣ ಎನಿಸಿಕೊಳ್ಳುತ್ತದೆ.

ಋಗ್ವೇದದ 'ವಿಷ್ಯಾ ಇವ ವ್ರಾ ಅನಸ್ವಂತಃ, (೧.೧೨೬.೫.) ಅನ್ನುವುದನ್ನು ಗೆಲ್ಡನರನು ಚೆನ್ನಾಗಿಯೇ ಅನುವಾದಿಸಿದ್ದಾನೆ ಎನ್ನಿಸುತ್ತದೆ. ಏಕೆಂದರೆ 'ವಿಷ್ಯಾ' ಎನ್ನುವುದು ಸ್ತ್ರೀಲಿಂಗ ಬಹುವಾಚಕ ಪದ. ಅದನ್ನು ವೇಶ್ಯೆ ಎಂದು ಅನುವಾದಿಸುವುದು ಈ ಸಂದರ್ಭದಲ್ಲಿ ತೀರಾ ಒರಟಾಗಿ ತೋರುತ್ತದೆ. ಅವರು, ಸಾಮೂಹಿಕ ವಿವಾಹ ಪದ್ಧತಿಯ ಪ್ರಕಾರ ಇಡೀ ಅಲೇಮಾರಿ ಬುಡಕಟ್ಟಿಗೇ ಪತ್ನಿಯಾಗಿದ್ದವರು. ಹಾಗೂ ಅವರು ಪ್ರಯಾಣ ಮಾಡುತ್ತಿದ್ದ ಎತ್ತಿನ ಗಾಡಿಗಳು ಕೇವಲ ಸಾಗಾಣಿಕೆಯ ಸಾಧನ ವಾಗಿದ್ದಿರಬಹುದು. ಅದಕ್ಕೂ ಉಷಸ್ಸಿನ ವಾಹನಕ್ಕೂ ಸಂಬಂಧವಿರಬೇಕೆಂದೇನಿಲ್ಲ. ಸಾಯಣನು ವ್ರಾ ಮತ್ತು ಉಷಸ್ ಇವುಗಳನ್ನು ಸಮಾನಾರ್ಥಕ ಪದಗಳಾಗಿಯೇ ಎರಡು ಕಡೆ ಬಳಸಿದ್ದಾನೆ. 'ವಿಶ್ಯಾ' ಎನ್ನುವುದು ಒಂದು ಮನೆಯಲ್ಲಿನ ಎಲ್ಲಾ ಗಂಡಸರಿಗೂ ಸೇರಿದಂಥ ಹೆಂಗಸನ್ನು ಸೂಚಿಸುತ್ತದೆ. ಈ 'ವಿಶ್ಯಾ' ಎಂಬ ಪದ ಎರಡಕ್ಕೂ ಮೂಲ ಪದ ಒಂದೇ ಎಂದು ಕಾಣುತ್ತದೆ. 'ಗಣಿಕಾ' ಎಂಬುದಂತೂ ಸ್ಪಷ್ಟವಾಗಿ 'ಗಣಪತ್ನಿಯರು' ಎನ್ನುವುದರಿಂದ ಹುಟ್ಟಿಕೊಂಡಿದೆ. ಸಾಕಷ್ಟು ಅಭಿವೃದ್ಧಿಹೊಂದಿದ, ಆದರೆ ಆದಿಮ ಆಚರಣೆಗಳನ್ನು ಇನ್ನೂ ಉಳಿಸಿಕೊಂಟಿರುವಂಥ ಎಷ್ಟೋ ಸಮಾಜದಲ್ಲಿ ಸಾಮೂಹಿಕ ವಿವಾಹ ರದ್ದಾಗಿದ್ದರ ಪರಿಣಾಮವಾಗಿ ವೇಶ್ಯಾವೃತ್ತಿ ಹುಟ್ಟಿಕೊಂಡಿರುವುದನ್ನು

ಗಮನಿಸಬಹುದು. ಇವೆರಡೂ ಕೂಡ ಹೊಸ ಆಸ್ತಿ ವಿಧಾನದಿಂದ ಉಂಟಾದ ಪರಿಣಾಮಗಳೇ ಆಗಿವೆ. ಇವೆಲ್ಲಾ, ಅಲ್ಲಿಯವರೆಗೂ ಇದ್ದಂಥ ಸಾಮೂಹಿಕ ಉತ್ಪಾದನಾ ವಿಧಾನದ ಸ್ಥಾನದಲ್ಲಿ ಪಿತೃಪ್ರಧಾನ ಖಾಸಗಿ ಆಸ್ತಿಯ ವ್ಯವಸ್ಥೆಯು ಅಸ್ತಿತ್ವಕ್ಕೆ ಬಂದದ್ದರಿಂದಲೇ ಆದಂತಹ ಬದಲಾವಣೆಗಳು. ಅಥರ್ವ ವೇದದ ಋಕ್ಕೊಂದರಲ್ಲಿ (೧೫) ಆ ಕಾಲದಲ್ಲಿ ಅಷ್ಟೊಂದು ರೂಢಿಯಲ್ಲಿ ಇಲ್ಲದಿದ್ದ, ಫಲವತ್ತತೆಗೆ ಸಂಬಂಧಿಸಿದ ವ್ರಾತ್ಯ ವಿಧಿಯಲ್ಲಿ ವೇಶ್ಯೆಯರಿಗೆ ಪ್ರಾಮುಖ್ಯ ನೀಡಿರುವುದನ್ನು ಕಾಣಬಹುದು ಪಣ್ಯಾಂಗನೆ ಎಂದು ಕರೆಯುತ್ತಾರೆ.

(ನೋಡಿ : ಕೊಸಾಂಬಿ. ೨೦೦೩. ಪುರಾಣ ಮತ್ತು ವಾಸ್ತವ ೯೪–೯೬)

**೫೫೨. ಬೆಳ್ಳ**

*ಆ ಬ್ರಾಹ್ಮಣಸಮಿತಿ ಬೇಳೆ ದೇವರ್ ತಣಿಯುಂಡರ್*

*ಎನ್ನಂ ಬೆಸಸುವುದು ರಾಜಸೂಯಂ**ಬೇಳಲ್***

*ಅತ್ತ ದುರ್ಯೋಧನನ ಬೆಸದೊಳಾತನ ಪುರೋಹಿತಂ ಕನಕಸ್ವಾಮಿಯೆಂಬಂ ಪಾಂಡವ*

*ಗಾಭಿಚಾರಮಾಗ ಬೀಳ್ವ **ಬೇಳ್ವೆಯ** ಕೊಂಡದೊಳಗಣಿಂದಂ.*

ಬೆಳ್ಳರೆಂದರೆ ಅನಾಗರಿಕರಲ್ಲ.

ಇದರಿಂದ ಬೆಳ್ಳರೆಂದರೆ ಆಸ್ತಿಕರಾದ ವಿಶಿಷ್ಟ ದೇವತಾಭಕ್ತರು, ಅದೊಂದು ತರದ ವಾಙ್ಮಯಪ್ರವಣರು, ವೀರತ್ವ ಶೂರತ್ವಗಳಿಂದೊಡಗೂಡಿದವರು, ಮೊದಲಾದವುಗಳನ್ನು ಊಹಿಸಿಕೊಂಡರೆ ತಪ್ಪಾಗದು. ಆ ವಿಷಯವನ್ನು ಇನ್ನಷ್ಟು ವಿಚಾರಿಸಿ ನೋಡಿಕೊಳ್ಳುವ, 'ಬೇಳ್, ಬೇಳ್ವೆ'ಗಳೆಂಬ ಧಾತು, ಭಾವನಾಮಗಳಿಗೆ 'ಹೋಮಿಸು', 'ಯಜ್ಞ' ಎಂಬ ಅರ್ಥಗಳು ಕನ್ನಡದಲ್ಲಿ ರೂಢವಾಗಿವೆ.

ಎರಡು ದೃಷ್ಟಾಂತಗಳು 'ಬೇಳ್' ಧಾತುವಿನ ವೈದಿಕ ಮಾರ್ಗಾನುಸಾರವಾಗಿ 'ಹೋಮಿಸುವುದು' ಎಂಬರ್ಥವಾದರೆ, ಮತ್ತಿನ ಭಾವ ನಾಮಪದಕ್ಕೆ ತದ್ವಿರುದ್ಧವಾದ 'ಅಭಿಚಾರಾಗ್ನಿಕಾರ್ಯ'ವೆಂಬ ಅರ್ಥವು ಸ್ಫುಟವಾಗುತ್ತಿದೆ. ಮೊದಲಿನದು ಇಂದ್ರಾದಿಗಳ ತೃಪ್ತಿಗಾಗಿ ಮಾಡುವ ಕ್ರಿಯೆಯಾದರೆ, ಮತ್ತಿನದು 'ಬೆಳ್ಳಡಿಯ'ನ್ನು ಅವನಡಿಯ ದೇವತೆಗಳನ್ನೂ ಒಲಿಸಲಿಕ್ಕಾಗಿ ಆಚರಿಸಲ್ಪಡುವ ಒಂದು ತರದ ಹೋಮ. ಆದರೆ, ಎರಡೂ ಅಗ್ನಿಕಾರ್ಯಗಳೆ. 'ಬೇಳೆಂಬ'ವೆಂಬ ಇನ್ನೊಂದು ಪದವನ್ನೀಕ್ಷಿಸಿರಿ. 'ಬೇಳ್' ಧಾತುವಿನಿಂದ ಹುಟ್ಟಿದುದಾದರೂ ಅದು ವೈದಿಕಕ್ರಿಯೆಯಲ್ಲಿ ಉಪಯೋಗಿಸಲ್ಪಡದೆ ಅಭಿಚಾರ (ಮಾಟ)ದಲ್ಲಿಯೂ, ಲಾಕ್ಷಣಿಕವಾಗಿ ವಂಚನಾದಿ ಕ್ರಿಯೆಗಳಲ್ಲಿಯೂ ದೃಢವಾಗಿದೆ. ಅಗ್ನಿಸಂಬಂಧದಿಂದಾಗಿ ವೈದಿಕ ಯಾಗದಲ್ಲುಪಯುಕ್ತವಾದರೂ ಆ 'ಬೇಳ್'ಧಾತು ಬೆಳ್ಳರ ಅಭಿಚಾರಾಗ್ನಿ ಕಾರ್ಯಸೂಚಕವಾಗಿಯೇ ನೆಲೆಗೊಂಡುದು ಎಂದೆಣಿಸಿದರೆ ಆ ಮಾರ್ಗವಾಗಲಾರದು. ಅದರಿಂದ 'ಬೇಳ್' ಎಂಬುದರ ನಿಜವಾದ

ಅರ್ಥವು 'ಬೆಳಗು' (ಬೆಳ್ + ಆಗು = ಬೆಳಕನ್ನಾಗಿಸು) ಎಂದೇ ಆಗಿರಬೇಕು. ಹಾಗೆ ಬೆಳಕಿಗೆ ಆಧಾರವಾದ ತೇಜೋಮಯ ದ್ರವ್ಯವೆಂದರೇ 'ಬೆಂಕಿ (ಬೆಳ್+ಕಿ)'ಗೆ ಆ ಹೆಸರಾಗಿರಬೇಕು. ದುಸ್ಯುವರ್ಗದೊಳಗಿನವರಾಗಿ ಅರಣ್ಯವಾಸಿಗಳಾಗಿದ್ದು ಕಲ್ಲು – ಅರಣಿಗಳಿಂದ ಮೊತ್ತ ಮೊದಲು ಬೆಂಕಿಯನ್ನುಂಟು ಮಾಡಿದ ಪಂಗಡದವರಿಗೆ ಬೆಳ್, ಬೆಳ್ಳ, ಮೇಲು ಮೊದಲಾದ ಹೆಸರುಗಳಾದುವೆಂದು ಭಾವಿಸಿದರೆ ತಪ್ಪಾಗುವುದೆ? ಆಧುನಿಕರಾದ ಚರಿತ್ರ ವಿಮರ್ಶಕರು ಸಿದ್ಧಾಂತಿಸುವ, ಅತಿ ಪುರಾತನಕಾಲದ ನಮ್ಮ ನಾಡಿನ ಅಂಥ ಜನರೆಂದರೆ ಈ ಬೆಳ್ಳರೇ ಆಗಿರಲಿಕ್ಕಿಲ್ಲವೆ?

ಬೆಳ್ಳಕ್ಕರಿಗರು ಎಂದರೆ ಬೇರೆ ಅರ್ಥವೂ ಬರುತ್ತದೆ. ಅದೇ ರೀತಿ ಬೆಳ್ಳವೆಂದರೆ ಮಳೆಗಾಲದಲ್ಲಿ ನದಿಯಲ್ಲಿ ಹೆಚ್ಚು ನೀರು ಬರುವುದಕ್ಕೂ 'ಬೆಳ್ಳ'ವೆಂದು ಕರೆಯುತ್ತಾರೆ.

*ವಿವರಗಳಿಗೆ ನೋಡಿ: ಮುಳಿಯ ತಿಮ್ಮಪ್ಪಯ್ಯ ೨೦೦೬ ನಾಡೋಜಪಂಪ ಪುಟ. ೬೬*

**೫೫೩. ಬೇಕನಾಟ**

ಸಾಯಣ– ಯಾಸ್ಕರ 'ಬೇಕನಾಟ' ಪದದ ವ್ಯುತ್ಪತ್ತಿ.

ವೇದಾರ್ಥ ವಿವರಣದಲ್ಲಿ ಸಾಯಣಾಚಾರ್ಯನಿಗೆ ಯಾಸ್ಕನ 'ನಿರುಕ್ತ'ವು ಬಹುಮಟ್ಟಿಗೆ ಸಹಾಯಕವಾಗಿದೆ ಎಂಬಲ್ಲಿ ಸಂದೇಹವಿಲ್ಲ. ಆದರೆ, ಆ 'ನಿರುಕ್ತ'ಕಾರನು ಈ 'ಬೇಕನಾಟ' ಪದಕ್ಕೆ ಯಾವ ಅರ್ಥವನ್ನು ವ್ಯುತ್ಪಾದಿಸಿದ್ದಾನೆಂಬುದನ್ನು ನೋಡುವ, 'ದ್ವಿಗುಣಕಾರಿಣೋ ವಾ ದ್ವಿಗುಣದಾಯಿನೋ ವಾ ದ್ವಿಗುಣಂ ಕಾಮಯಂತ ಇತಿ ವಾ' ಎಂಬುದು ಆತನ ವ್ಯುತ್ಪತ್ತಿ. 'ಬೇಕನಾಟರೆಂದರೆ ಕೊಟ್ಟುದರ ಇಮ್ಮಡಿ ಹಣವನ್ನೆಸಗುವವರು, ಅಥವಾ ಕೇಳಿದುದಕ್ಕೆರಡಷ್ಟು ಸಾಲವನ್ನು ಕೊಡುವವರು, ಅಲ್ಲವೆ ದ್ವಿಗುಣ (ಎರಡಷ್ಟು) ದ್ರವ್ಯವನ್ನಾಶಿಸುವವರು' ಎಂದು ಇದರ ತಾತ್ಪರ್ಯ. ಸಾಯಣನಂತೆ 'ಬೇ', 'ಏಕ' ಪದಗಳನ್ನವನು ಸಂದುಗೂಡಿಸುವುದಿಲ್ಲವಾದರೂ, 'ಬೇಕ' ಎಂಬುದೇ 'ದ್ವಿಗುಣ' ಎಂಬರ್ಥದಲ್ಲುಪಯುಕ್ತವಾದ ಪದವೆಂಬುದು ಅವನ ಭಾವನೆ ಇದ್ದಂತೆ ತೋರುತ್ತಿದೆ. ಆದರೆ 'ಬೇಕ' ಪದವು ಹೇಗೆ ರೂಪಿಸಿತು, ಅದರ ನಿರುಕ್ತಿ ಹೇಗೆ ಎಂಬುದನ್ನು 'ನಿರುಕ್ತ'ಕಾರನಾಗಲಿ, ವ್ಯಾಕ್ಯಾತೃ ದುರ್ಗಾಚಾರ್ಯನಾಗಲಿ, ನಿರೂಪಿಸಲಿಲ್ಲ.

'ಬೇಕನಾಟ' ಪದದಿಂದ ಅಂಥ ನೀಚಾರ್ಥವನ್ನು ಹೊಸೆದು ತಂದ ಮೇಲೆ ವ್ಯಾಖ್ಯಾನಕಾರರು 'ಅಹರ್ದೃಶ' ಪದದಿಂದಲೂ ಅದಕ್ಕನುವಾದ ಅರ್ಥವನ್ನೇ ಹಿಂಡಿದುದು ಆಶ್ಚರ್ಯವಲ್ಲ. ಆದರೆ 'ಅಸೂರ್ಯಂ ಪಾಶ್ಯಃ' ಎಂಬ ಪುರಾತನವಾದೊಂದು ಪದವಿದೆ. ಅದಕ್ಕೆ 'ಸೂರ್ಯನನ್ನೀಕ್ಷಿಸಿದ ಕಷ್ಟಾಸಹಿಷ್ಣುಗಳಾದವರು' ಎಂಬರ್ಥ. ಅರಸರ ಅಂತಃಪುರ ಸ್ತ್ರೀಯರಿಗೆ ವಿಶೇಷಿಸುವ ಪ್ರಸಿದ್ಧವಾದ ಪದವದು. ಅದರಂತೆ 'ಅಹರ್ದೃಶಃ' ಎಂಬುದಕ್ಕೆ 'ಬಿರುಬಿಸಿಲನ್ನೂ ಗಣಿಸದ ಶ್ರಮಸಹಿಷ್ಣುಗಳು – ಬಲಶಾಲಿಗಳು' ಎಂಬ ಅರ್ಥವೇ ವ್ಯಕ್ತವಾಗುತ್ತಿದೆಯಲ್ಲವೆ? ಇರಲಿ, ಅಷ್ಟೊಂದು ಹೆಣಗಾಡಿದರೂ ವ್ಯಾಖ್ಯಾನಕಾರರು ತಮ್ಮ ಗುರಿಯನ್ನಾದರೂ ಮುಟ್ಟಿ ಕೃತಾರ್ಥರಾಗಲಿಲ್ಲ ಎಂಬುದು ಮುಂದೆ ಸ್ಫುಟವಾಗುತ್ತಿದೆ.

ಅಂಥ 'ಬೇಕನಾಟರನ್ನೆಲ್ಲ ಗೆದ್ದ ಇಂದ್ರನು ಪಣಿಗಳನ್ನೂ ಗೆದ್ದನು ಎನ್ನಬೇಕೆ? ಎಂಬ ಮಾತಿನ ಮಟ್ಟಿನಲ್ಲೇ ಆ 'ಬೇಕನಾಟ'ರೆಂದರೆ ಅತಿ ಸಮರ್ಥರು ಎಂಬುದು ಹೊಳೆಯುತ್ತಿದೆ. 'ಬೇಕನಾಟ'ರೆಂದರೆ ಕ್ಷುದ್ರಜೀವಿಗಳು ಎಂದಾದರೆ, ಅವರನ್ನಣಗಿಸಿದ ಇಂದ್ರನಿಗೆ, ಮುಂದೆ ಈ ಪಣಿಗಳನ್ನೊತ್ತಿದುದರಿಂದ ಮಹಿಮೆಯಾದರೂ ಹೇಗೊದಗಬೇಕು?.

'ಬೇಕನಾಟಾನ್' ಎಂಬಲ್ಲಿ 'ವೇ' ಮತ್ತು 'ಬೇಕ' ಎಂಬವು 'ದ್ವಿ' ಮತ್ತು 'ದ್ವಿಕ' ಎಂಬವುಗಳ ಅಪಭ್ರಂಶರೂಪಗಳೆಂದು ಭಾವಿಸುವಲ್ಲಿಯೇ ವ್ಯಾಖ್ಯಾನಕಾರರ ಹಿಡಿತವು ಸಡಿಲಾಗಿದೆ. ಮಂತ್ರದ್ರಷ್ಟಾರರು ಇಂಥ ಅಪಭ್ರಂಶ ಪದಪ್ರಯೋಗವೆಸಗಿದರೆಂದರೆ ಸಾಯಣಾಚಾರ್ಯನ ಮಾತು ಕೊರಳಿಂದ ಮೇಗಿನದಲ್ಲದೆ ಎದೆಯಿಂದೇರಿದುದಲ್ಲವೆಂದೇ ತೋರುತ್ತಿದೆ ಮಾತ್ರವಲ್ಲ. ಆ ಪದಕ್ಕೆ ವೃದ್ಧಿಜೀವಿಗಳೆಂಬ ಅರ್ಥವನ್ನು ತುರುಕಿದ ಕ್ರಮವಂತೂ 'ಒತ್ತಾಯದ ಸಾಕ್ಷಿ'ಯೇ ಎಂಬುದನ್ನು ವಾಚಕರೇ ಸುಲಭವಾಗಿ ಎಣಿಸುವಂತಿದೆ. ಆ ಮೇಲಿನ 'ಅಹರ್ದೃಶ' ಪದವ್ಯುತ್ಪತ್ತಿಯಂತೂ ಅದೇ 'ಒತ್ತಾಯದ ಸಾಕ್ಷಿ'ಯ ಪುನರ್ವಿಚಾರಣೆಯಾದಂತೆ ಹೊಳೆಯುತ್ತಿದೆ. ವ್ಯಾಖ್ಯಾನಕಾರರು ಆ 'ಬೇಕನಾಟ'ರನ್ನೂ 'ಪಣಿ'ಗಳನ್ನೂ ನಾಸ್ತಿಕವರ್ಗದಲ್ಲಿ ಸೇರಿಸಲಿಕ್ಕಾಗಿ ಇಷ್ಟೊಂದು ಪ್ರಯತ್ನಿಸಿದುದಲ್ಲದೆ.

ಬೇಕನಾಟದ ಕುರಿತು ಪದ ವಿವೇಚನೆ ಮಾಡಿದವರಲ್ಲಿ ಮುಳಿಯ ತಿಮ್ಮಪ್ಪಯ್ಯನವರೂ ಒಬ್ಬರು. ಇದು ಸಾಂಸ್ಕೃತಿಕವಾಗಿಯೂ ಮಹತ್ವದ್ದು ಎಂಬುದು ಮುಳಿಯರ ವಾದದಿಂದ ಸ್ಪಷ್ಟವಾಗುತ್ತದೆ.

*ವಿವರಗಳಿಗೆ ನೋಡಿ: ಮುಳಿಯ ತಿಮ್ಮಪ್ಪಯ್ಯ ೨೦೦೬ ನಾಡೋಜಪಂಪ.*

**೫೫೪. ಬೇಟೆಯಲ್ಲಿ ಮಡಿದ ವೀರರ ಸ್ಮಾರಕಗಳು**

ಈ ವಿಭಾಗದ ಶಾಸನಗಳನ್ನು ಎರಡು ಬಗೆಯಾಗಿ ವಿಂಗಡಿಸಬಹುದು; ಮೊದಲನೆಯದಾಗಿ ಬೇಟೆಯ ತೊಡಗಿದ್ದ ವೀರರ ಅಂದರೆ; ಮನುಷ್ಯರ ವೀರಗಲ್ಲುಗಳು, ಎರಡನೆಯದಾಗಿ ಬೇಟೆಯಲ್ಲಿ ಮನುಷ್ಯನಿಗೆ ನೆರವಾಗಿ ನಿಂತ ಅವನ ನಾಯಿಗಳ ಸ್ಮಾರಕಗಳು – ಎಂಬುದಾಗಿ ಬೇಟೆಯು ಸಹಜವಾಗಿದ್ದ ಸಂದರ್ಭದಲ್ಲಿ ಇದು ರೂಪುಗೊಂಡಿದೆ.

ಯಾವುದಾದರೂ ದುಷ್ಟಮೃಗವೊಂದು ಬಂದು ಜನರಿಗೋ ಅಥವಾ ಅವನು ಬೆಳೆದ ಬೆಳೆಗಳಿಗೂ ಹಾನಿಯನ್ನುಂಟು ಮಾಡುತ್ತಿದ್ದರೆ ಅಂತಹ ದುಷ್ಟ ಮೃಗಗಳನ್ನು ಬೇಟೆಯಾಡಲು ಹೋಗಿ ಮಡಿದ ವೀರರ ಸ್ಮಾರಕ ಶಿಲೆಗಳು ನಮಗೆ ದೊರೆಯುತ್ತವೆ. ದುಷ್ಟ ಮೃಗಗಳು ಎಂದರೆ ಮುಖ್ಯವಾಗಿ ಹುಲಿ, ಚಿರತೆ ಮತ್ತು ಕಾಡುಹಂದಿಗಳು. ಕಾನಕಾನಹಳ್ಳಿಯ ವೀರಗಲ್ಲೊಂದು ಗ್ರಾಮಕ್ಕೆ ನುಗ್ಗಿ ಜನರನ್ನು ಹಿಂಸಿಸುತ್ತಿದ್ದ ಪೆಂಟಿ ಹುಲಿಯನ್ನು ಕೊಂದು ತಾನೂ ಸತ್ತ ವೀರನೊಬ್ಬನ ವಿಷಯವನ್ನು ತಿಳಿಸುತ್ತದೆ. ಮಂಡಿಕಲ್ಲು ಎಂಬ ಗ್ರಾಮಕ್ಕೆ ಹೆಬ್ಬುಲಿಯೊಂದು ನುಗ್ಗಿ ಎಮ್ಮೆಯ ಕರುವನ್ನು ಎತ್ತಿಕೊಂಡು ಹೋದಾಗ, ಅದೇ ಗ್ರಾಮದ ಕಮ್ಮಳದಾನ ಎಂಬುವವನು ತಾನು ಆ ಹುಲಿಯನ್ನು

ಒಂದು ಜಾವದೊಳಗೆ ಕೊಲ್ಲುವುದಾಗಿ ಪ್ರತಿಜ್ಞೆ ಮಾಡಿ ಅದರಂತೆ ಆ ಹುಲಿಯನ್ನು ಕೊಂದ ವಿಷಯವನ್ನು ಕ್ರಿ.ಶ. ೯೫೦ರ ವೀರಗಲ್ಲು ತಿಳಿಸುತ್ತದೆ. ಈ ವೀರಗಲ್ಲು ಕಮ್ಬುಳದಾನನ 'ಜಯಪತ್ರ'ವೂ ಹೌದು ಮತ್ತು ಅವನಿಗೆ ಬೇಟೆಯಲ್ಲಿ ಸಹಾಯಕ್ಕೆನಿಂತ ನಾಯಿಗಳೆರಡರ ಸ್ಮಾರಕವೂ ಹೌದು. ೨೦ನೇ ಶತಮಾನದ ಆದಿಭಾಗದಲ್ಲಿ ಚಿರತೆಯೊಡನೆ ಹೋರಾಡಿ ಮಡಿದ ಯೆರ್ರ ಮಂಚಯ್ಯ ಎಂಬುವವನ ಸ್ಮಾರಕವಾಗಿ ವೀರಗಲ್ಲನ್ನು ಹಾಕಿಸಿದ್ದಾರೆ. ಈ ವೀರಗಲ್ಲು ಚಿತ್ರದುರ್ಗ ಜಿಲ್ಲೆ ಮೊಳಕಾಲ್ಮೂರು ತಾಲ್ಲೂಕು, ಕೋನಸಾಗರ ಎಂಬ ಗ್ರಾಮದಲ್ಲಿದೆ. ಆರ್. ಶೇಷಶಾಸ್ತ್ರಿಯವರು ಮೇಲಿನಂತೆ ಅಭಿಪ್ರಾಯ ಪಟ್ಟಿದ್ದಾರೆ.

*ವಿವರಗಳಿಗೆ ನೋಡಿ: ಚಿದಾನಂದ ಮೂರ್ತಿ ಎಂ. ೨೦೦೮ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ*

*ಆರ್. ಶೇಷಶಾಸ್ತ್ರೀ ೨೦೦೫ ಶಾಸನ ಪರಿಚಯ ಪುಟ. ೨೦-೨೫*

*ಡಿ. ಡಿ. ಕೊಸಾಂಬಿ ೨೦೦೩ ಪುರಾಣ ಮತ್ತು ವಾಸ್ತವ ಪುಟ. ೪೬*

### ೫೫೫. ಬೌದ್ಧ

ಜೈನ ಗುರುಗಳಂತೆಯೇ ಬುದ್ಧನೂ ಸಹ ತನ್ನ ಅನುಯಾಯಿಗಳಿಗೆ ಒಂದು ಆಚಾರಸಂಹಿತೆಯನ್ನು ನಿಯಮಿಸಿದನು. ಅವು (೧) ಪರರ ಆಸ್ತಿಯ ಮೇಲೆ ಮನವಿಡಬೇಡ, (೨) ಹಿಂಸೆ ಮಾಡಬೇಡ, (೩)ಮದ್ಯಪಾನ ಮಾಡಬೇಡ, (೪) ಸುಳ್ಳು ಹೇಳಬೇಡ ಮತ್ತು (೫) ಭ್ರಷ್ಟಾಚಾರಕ್ಕಿಳಿಯ ಬೇಡ. ಇವು ಸಾಮಾನ್ಯವಾಗಿ ಎಲ್ಲ ಮತಧರ್ಮಗಳು ಸಹ ವಿಧಿಸುವ ಆಚಾರ ನಿಯಮಗಳು. ಆರ್.ಎಸ್. ಶರ್ಮ ಅವರು ಜೈನ ಮತ್ತು ಬೌದ್ಧಧರ್ಮದ ನಡುವಣ ವ್ಯತ್ಯಾಸಗಳನ್ನು ಮೇಲಿನಂತೆ ವಿವರಿಸಿದ್ದಾರೆ.

*ವಿವರಗಳಿಗೆ ನೋಡಿ: ಆದಿಪುರಾಣ ಎರಡನೇ ಆಶ್ವಾಸ*

ಬುದ್ಧನು ಹುಟ್ಟಿದ್ದು ಕ್ರಿಪೂ ಆರನೆಯ ಶತಮಾನದಲ್ಲಿ ಅದು ಆಧ್ಯಾತ್ಮಿಕ ಅಶಾಂತಿಯ ಕಾಲ. ಸಮಾಜವು ತನ್ನ ಪ್ರಾಚೀನ ನೆಲೆಗಳಿಂದ ವೇಗವಾಗಿ ದೂರ ಸರಿಯುತ್ತಿತ್ತು. ವೈದಿಕ ಯಜ್ಞಗಳ ಆಚರಣೆಗೆ ಪೂಜೆ ಪುರಸ್ಕಾರಗಳ ಒಳಸತ್ವದ ಪಾಲನೆಗಿಂತ ನಿಯಮಗಳ ಅಕ್ಷರಶಃ ಪರಿಪಾಲನೆಯೇ ಮುಖ್ಯವಾಯಿತು. ದೇವತೆಗಳ ಬಗೆಗೆ ಭಕ್ತಿಯ ಸ್ಥಾನವನ್ನು ಧರ್ಮಗ್ರಂಥಗಳ ಬಗೆಗೆ ವಿಧೇಯತೆ ಆಕ್ರಮಿಸಿತು. ಯಜ್ಞಯಾಗಾದಿಗಳ ಪಂಥವೇ ಸಿಕ್ಕುಸಿಕ್ಕಾಯಿತು, ಬಹಳ ದುಬಾರಿಯಾಯಿತು. ಅವುಗಳ ಫಲ ಅನಿಶ್ಚಿತವೂ ಆಯಿತು. ಅದಕ್ಕೆ ಕಾರಣ, ಯಾವುದಾದರೂ ಒಂದು ಯಾಜ್ಞಿಕ ವಿಧಿಯನ್ನು ಆಚರಿಸುವಾಗ ಉಂಟಾಗಬಹುದಾದ ಸಂಪ್ರದಾಯ ಲೋಪ. ಇದರ ಸಹಜವಾದ ಪರಿಣಾಮ ಏನಾಯಿತೆಂದರೆ ಯಜ್ಞ ಯಾಗಾದಿಗಳು ಪ್ರತಿಯೊಂದು ಬಗೆಯ ಯಜ್ಞದ ಸೂಕ್ಷ್ಮವಿವರಗಳನ್ನೂ ನೆನಪಿನಲ್ಲಿಟ್ಟುಕೊಂಡು ಮಂತ್ರಗಳನ್ನು ತಪ್ಪಿಲ್ಲದೆ ಉಚ್ಚರಿಸುವವರ ಏಕಸ್ವಾಮ್ಯವಾದುವು. ಯಾಗಾದಿಗಳಲ್ಲಿ ಪ್ರಾಣಿಹಿಂಸೆ ತಡೆಯಿಲ್ಲದೆ ಮುಂದುವರಿಯಿತು. ಮತ್ತು ಇವುಗಳಿಗೆ ರಾಜಮನೆತನದ ಪೋಷಣೆ ಹೆಚ್ಚಿದುದೂ ಪುರೋಹಿತ ವರ್ಗದ ದುರಾಸೆಯ ಬೆಳವಣಿಗೆಗೆ ಸ್ವಲ್ಪಮಟ್ಟಿಗೆ ಕಾರಣವಾಯಿತು.

ವಿಸ್ತಾರವಾದ ಮತಧರ್ಮ ಶಾಸ್ತ್ರ. ಜಟಿಲವಾದ ಯಾಗಾದಿ ಕ್ರಿಯೆಗಳು ಮತ್ತು ಪುರೋಹಿತ ವರ್ಗದ ಅಭ್ಯುದಯ, ಇವುಗಳಿಗೆ ವಿರುದ್ಧವಾಗಿ ಕೆಲಸ ಮಾಡಿದ ಅಂಶಗಳು ಇವು: ಏಕದೇವ ವಾದ ಮತ್ತು ಅದ್ವೈತ ಭಾವನೆಗಳನ್ನು ಬಿತ್ತಲು ತೊಡಗಿದ ತಾತ್ವಿಕ ಚಿಂತನೆಗಳು: ದುಬಾರಿ ವೆಚ್ಚದ ಯಜ್ಞಯಾಗಾದಿಗಳ ನೆರವಿಲ್ಲದೆಯೇ ವ್ಯಕ್ತಿಯು ತನ್ನ ಜೀವನದ ಕೊನೆಯ ಭಾಗದಲ್ಲಿ ಕಾಡಿಗೆ ಹೋಗಿ ಪರತತ್ವವನ್ನು ಕುರಿತು ಧ್ಯಾನಮಾಡಿ ಸಾಮೀಪ್ಯವನ್ನು ಸಾಧಿಸಬಹುದೆಂಬ ಆಚರಣೆಯ ಹೆಚ್ಚಳ: ಮತ್ತು ಸ್ವರೂಪ ಜ್ಞಾನ, ಧ್ಯಾನ, ಶೀಲಗಳು ಆಧ್ಯಾತ್ಮಿಕ ಪ್ರಗತಿಗೆ ಅನಿವಾರ್ಯ ನಿಯಮಗಳು ಎಂಬುದರ ಬಗೆಗೆ ಹೆಚ್ಚಿದ ಒತ್ತಡ. ಧರ್ಮದ ಪುನರುಜ್ಜೀವನದ ಅಗತ್ಯ ಕಂಡುಬಂದಿತು. ಬಹುಶಃ ಎರಡು ಕಾರಣಗಳಿಂದ, ಸಿಂಧೂ ಕಣಿವೆಯ ಸುಮೇರೋ ದ್ರಾವಿಡ ಸಂಸ್ಕೃತಿಯ ಒತ್ತಡ ಮತ್ತು ಆರ್ಯರ ಪ್ರಭಾವವನ್ನು ಮತ್ತೆ ಮತ್ತೆ ವಿರೋಧಿಸುತ್ತಾ, ಅವರ ಆರಾಧನಾಕ್ರಮ, ಚಿಂತನಾರೀತಿಗಳನ್ನೇ ಅನುಕರಿಸುತ್ತ ಇದ್ದ ಬೆಟ್ಟಗಾಡುಗಳ ಆದಿವಾಸಿಗಳಿದ್ದ ಪೂರ್ವ, ದಕ್ಷಿಣಗಳತ್ತ ಆರ್ಯಪ್ರಭುತ್ವದ ಸಂಸ್ಕೃತಿಯ ವಿಸ್ತರಣ ಇಷ್ಟು ದೀರ್ಘಕಾಲದ ನಂತರ ಈಗ ನಾಡಿನ ಈ ಪ್ರಾಚೀನ ಸಂಸ್ಕೃತಿಗಳಿಗೆ ಆರ್ಯರು ಎಷ್ಟರಮಟ್ಟಿಗೆ ಋಣಿಗಳಾಗಿದ್ದರೆಂದು ಖಚಿತವಾಗಿ ಹೇಳುವುದು ಕಷ್ಟ. ಶಿವ ಮತ್ತು ನಂತರದ ಶಕ್ತಿ ಆರಾಧನೆಗಳ ಜೊತೆಗೆ ಯೌಗಿಕ ಧ್ಯಾನ, ದೇಹದಂಡನೆ ಮತ್ತು ಪುನರ್ಜನ್ಮದಲ್ಲಿ ನಂಬಿಕೆ – ಇವೂ ಆರ್ಯೇತರ ಮೂಲಗಳಿಂದ ಬಂದುವು ಎಂದು ಊಹಿಸಿದೆ. ಮೊದಲಿನ ಬೌದ್ಧ ಸಾಹಿತ್ಯಗಳಲ್ಲಿ ಕಂಡುಬರುವ ವೈದಿಕ ತತ್ವಗಳ ಆಚಾರಗಳ ತಿಳುವಳಿಕೆ ಪಾರಿಭಾಷಿಕ ಅಂಶಗಳನ್ನು ಕುರಿತು ವಿಸ್ತಾರವಾದ ವಿವರಗಳನ್ನು ಒಳಗೊಂಡಿಲ್ಲ. ಬಹುಶಃ ಅವು ಜನಪ್ರಿಯವಾದ ನಂಬಿಕೆಗಳನ್ನು ಮತ್ತು ಧಾರ್ಮಿಕ ವಿಧಿಗಳನ್ನು ನೋಡಿ, ಕುಶಲತೆಯಿಂದ ಗಮನಿಸಿ ಸಂಗ್ರಹಿಸಿದ ವಿಷಯಗಳಿರಬಹುದು. ವೈದಿಕ ಧರ್ಮವನ್ನು ಕುರಿತು ಬೌದ್ಧ ಸಾಹಿತ್ಯದ ನಿಲುವು ಸಾಮಾನ್ಯವಾಗಿ ಅಪಹಾಸ್ಯದ್ದು. ವಾಸ್ತವವಾಗಿ ವೈದಿಕ ಆಚರಣೆಗಳನ್ನು ಕುರಿತ ಟೀಕೆ ಮೊದಲೇ ಪ್ರಾರಂಭವಾಗಿತ್ತು. ಏಕೆಂದರೆ, ಉಪನಿಷತ್ತುಗಳೂ ಕೂಡ ಯಾಗಾದಿ ಕರ್ಮಗಳ ಸಫಲತೆಯನ್ನು ಕೀಳುಗೈದುವು – ದಿವ್ಯವಾದ ಪರವನ್ನು ಗಳಿಸಲು ತತ್ವಜ್ಞಾನವೇ ಅತ್ಯುತ್ತಮವಾದ ದಾರಿ ಎಂದು ಒತ್ತಿ ಹೇಳಿದವು. ಈ ಪರಲೋಕವೆಂಬುದು ಸಮರ್ಪಕವಾದ ಯಜ್ಞ ಮಾಡಿ ಗಳಿಸಿಕೊಳ್ಳುವ ಸುಖಮಯವಾದ ಸ್ವರ್ಗಧಾಮವೇನಲ್ಲ. ಅದು ಒಂದು ದುಃಖರಹಿತ ಸ್ಥಿತಿ. ಬೇರೆ ಬೇರೆ ರೀತಿಗಳಲ್ಲಿ ಕಲ್ಪಿತವಾಗಿದ್ದರೂ ಕಷ್ಟಸಾಧ್ಯವಾದ ನೈತಿಕ ಶುದ್ಧಿಯಿಂದ. ವಿಷಯ ತೃಷ್ಣೆಯ ಸಂಕಟಗಳಿಂದ ದೂರ ಮೇಲೇರಿ ಅದರ ಆಕರ್ಷಣೆ ವಿಕರ್ಷಣೆಗಳಿಂದ ಪಾರಾಗಿ, ಈ ಪ್ರಪಂಚದ ಅಶಾಶ್ವತ ವಸ್ತುಗಳಿಗೆ ಅಂಟಿಕೊಳ್ಳದೆ ಇರುವುದರಿಂದ ಪಡೆಯುವ ಆಧ್ಯಾತ್ಮಿಕ ಶಾಂತಿ ಎಂದು ಎಲ್ಲರೂ ಪರಿಗಣಿಸಿರುವ ಸ್ಥಿತಿ.

*ವಿವರಗಳಿಗೆ ನೋಡಿ: ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦*

*ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ ಪುಟ. ೧೫೫*

*ಆರ್.ಎಸ್. ಶರ್ಮ ೨೦೦೭ ಪ್ರಾಚೀನ ಭಾರತ ಪುಟ. ೯೯*

**೫೫೬. ಬ್ರಹ್ಮಚರ್ಯ ವ್ರತ**

"..........ಅಂತುಮಲ್ಲದೆಯುಂ ಬ್ರಹ್ಮಚರ್ಯಕ್ಕಲಂಕಾರಮುಂ........"

ಈ ಕುರಿತು ಕರ್ಣಾಟಕ ಕಾದಂಬರಿಯಲ್ಲಿ ಬಂದಿದೆ.

(ಕರ್ಣಾಟಕ ಕಾದಂಬರಿ ೫-೨೭ವ)

ಉಪನಯನ ಸಂಸ್ಕಾರವಾದ ಮೇಲೆ ವಟುವು ಬ್ರಹ್ಮಚರ್ಯ ವ್ರತದಲ್ಲಿರುತ್ತಾನೆ. ಬ್ರಹ್ಮಚರ್ಯ ವ್ರತಧಾರಿಯು ನಿತ್ಯ ಸಂಧ್ಯಾವಂದನೆಯನ್ನು ಮಾಡಬೇಕು. ಅವನು ಸದಾ ಅಗ್ನಿಕಾರ್ಯಗಳನ್ನು ನೆರವೇರಿಸಬೇಕು. ಮತ್ತು ಪರಸ್ತ್ರೀಯರ ಒಡನಾಟ; ರತಿಕ್ರಿಯೆಗಳಲ್ಲಿ ತೊಡಗಬಾರದು. ನಿಯಮಾಚಾರಗಳನ್ನು ಮುರಿಯಬಾರದು. ನೈಷ್ಠಿಕ ಬ್ರಹ್ಮಚರ್ಯದಲ್ಲಿ ತೊಡಗಿದವನ ರೇತುಸ್ಖಲನವಾದರೆ ಅವನು ಅದಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು ಎಂಬ ನಿಯಮಗಳನ್ನು ಮನುವು ಹೇಳುತ್ತಾನೆ. ಮಹಾಭಾರತದಲ್ಲಿ ಬರುವ ಭೀಷ್ಮಾಚಾರ್ಯರು ನೈಷ್ಠಿಕ ಬ್ರಹ್ಮಚಾರಿಯೇ ಉಳಿದಿದ್ದರು ಎಂಬುದು ಗಮನಾರ್ಹ. ಗೃಹಸ್ಥಾಶ್ರಮಕ್ಕಿಂತ ಪೂರ್ವದ ಹಂತವೇ ಬ್ರಹ್ಮಚರ್ಯವ್ರತ.

*ವಿವರಗಳಿಗೆ ನೋಡಿ: ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ*

**೫೫೭. ಬ್ರಹ್ಮ ಮೀಮಾಂಸೆ**

ವೇದದಲ್ಲಿ ಅಡಗಿರುವ ಅಗಾಧ ಭಾವಗಳನ್ನು ಕಂಡುಹಿಡಿಯುವ ಮತ್ತು ಆ ಮೂಲಕವಾಗಿ ಬ್ರಹ್ಮನ ಅನಂತ್ಯ ಮತ್ತು ನಿರುಪಾಧಿಕ ಪೂರ್ಣತ್ವವನ್ನು ಕಂಡುಹಿಡಿಯುವ ಕ್ರಮವೇ ಬ್ರಹ್ಮಮೀಮಾಂಸೆ. ಈ ಅಗಾಧ ಭಾವಗಳನ್ನು ಕಂಡುಹಿಡಿಯುವುದೆಂದರೆ ಜ್ಞಾನಕ್ಕೂ ಮತ್ತು ಅನೇಕ ವಿಧವಾದ ಅಜ್ಞಾನಕ್ಕೂ ಇರುವ ವಿರೋಧವನ್ನು ಪರಿಶೀಲಿಸಿ ಅಜ್ಞಾನಕ್ಕೆ ವಿರುದ್ಧವಾಗಿ ಜ್ಞಾನವನ್ನು ಸ್ಥಾಪಿಸುವುದು. ಈ ವಿಧವಾದ ಭಾವಗಳ ಅಗಾಧತೆಯನ್ನು ಕಂಡುಹಿಡಿಯಲು ಸಾಧನವಾದ ಯುಕ್ತಿಯು ಶುದ್ಧವಾಗಿ ವೇದದಲ್ಲಿಯೇ ಅಡಗಿರುವುದು. ಇದು ಲೌಕಿಕ ಯುಕ್ತಿಗೆ ಮೀರಿದುದು. ಅದಕ್ಕೆ ಬಾಧಕವಾದುದು ಯಾವುದೂ ಇಲ್ಲ. ಸರ್ವಸಂಗತವಾದ ಆಧ್ಯಾತ್ಮ ದೃಷ್ಟಿಯು ಅದರ ಗುರುತು. ಈ ಕಾರಣದಿಂದ ಅದು ಸ್ವನಿರ್ವಾಹಕ. ಆದರೆ ಇದೇ ಯುಕ್ತಿಯನ್ನು ಲೌಕಿಕ ಜೀವನಕ್ಕೆ ಅಂಗವಾಗಿ ಉಪಯೋಗಿಸುವುದರಲ್ಲಿ ಸ್ವವ್ಯಾಹತಿ ಅಡಗಿರುವುದು. ಅದು ಅದನ್ನೇ ನಿರಾಕರಿಸಿಕೊಳ್ಳುವುದು. ಏಕೆಂದರೆ ಲೌಕಿಕ – ಜೀವನದಲ್ಲಿ ಯಾವುದೂ ನಿರುಪಾಧಿಕವಲ್ಲ ಮತ್ತು ಯಾವುದೂ ಪೂರ್ಣವಲ್ಲ.

ಗಮನಾರ್ಹ ಸಂಗತಿಯೆಂದರೆ ಆತ್ಮ ಮತ್ತು ಬ್ರಹ್ಮರ ಪ್ರಶ್ನೆಯು ಭಾರತದಲ್ಲಿ ವಿಶಿಷ್ಟ ಧಾರ್ಮಿಕ ಪರಿಭಾಷೆಯಾಯಿತು. ವೇದಾಂತದಲ್ಲಿ ತ್ರಿಮೂರ್ತಿಗಳಲ್ಲಿ ಒಬ್ಬನಾದ ಬ್ರಹ್ಮನ ಕುರಿತು ಚರ್ಚೆಯಿಲ್ಲ. ಬ್ರಹ್ಮದ ನಿರ್ವಚನವೇ ಅದರಲ್ಲಿ ಬೇರೆಯಾಗಿದೆಯೆಂಬುದು ಗಮನಾರ್ಹ.

*ವಿವರಗಳಿಗೆ ನೋಡಿ: ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦*

*ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ ಪುಟ. ೩೫೨.*

# ಭ

**೫೫೮. ಭಂಡ**

ಧನದೇವಂ ಪರದಿಂಗೆಂದು ಪಿರಿದುಂ ಸಾರಮಪ್ಪ **ಭಂಡಮಂ** ತೀವಿಕೊಂಡು ದಕ್ಷಿಣ ಮಧುರೆಗೆ ಪೋದೊಡೆ ............................ (ವಡ್ಡಾರಾಧನೆ ೭೦-೧೮)

ಅಸಲು; ಮೂಲಧನ; ಭಂಡವಾಳ:

ಭಂಡವೆಂಬುದಕ್ಕೆ ಅಸಲು, ಮೂಲಧನ, ಬಂಡವಾಳ, ಸರಕು, ಮಾರುವ ವಸ್ತು ಎಂಬೆಲ್ಲ ಅರ್ಥಗಳಿವೆ. ಇಲ್ಲಿ ಭಂಡವನ್ನು ಮಾರಾಟದ ಸರಕು ಎಂಬರ್ಥದಲ್ಲಿ ಬಳಸಲಾಗಿದೆ.

ತಮ್ಮ ಕೊಂಡು ಪೋದ **ಭಂಡಮಂ** ಮಾಱಿ..............

(ಡಿ.ಎಲ್.ಎನ್. ೨೦೦೯ ಪುಟ.೧೧೫)

ಭಂಡವೆಂದರೆ ಸರಕು, ಸರಕು ಎಂದರೆ ಮಾರಾಟ ವಸ್ತು. ವಸ್ತುವಿನ ಮಾರಾಟವು ವ್ಯಾಪಾರೋದ್ದಿಮೆಯನ್ನು ಸೂಚಿಸುತ್ತದೆ. ಎಲ್ಲಿ ಮಾರಾಟ ವಸ್ತುವಿರುತ್ತದೆಯೋ ಅದು ಮಾರುಕಟ್ಟೆಯ ವ್ಯವಸ್ಥೆಯನ್ನು ಸೂಚಿಸುತ್ತದೆ. ಮಾರಾಟವೆಂದರೆ ಅಲ್ಲಿ ವ್ಯಾಪಾರಿ ವರ್ಗವೊಂದು ಉದಯವಾಗುತ್ತದೆಯೆಂಬುದು ಗಮನಾರ್ಹ.

*ವಿವರಗಳಿಗೆ ನೋಡಿ : ಸೆಟ್ಟಿ*

**೫೫೯. ಭಕ್ತಿ ಮತ್ತು ತಂತ್ರವಾದ**

ಪ್ರತಿಮಾ ಶಿಲ್ಪ ಮತ್ತು ದೇವಾಲಯ ನಿರ್ಮಾಣಗಳಲ್ಲೂ ಏಳು ಎಂಟನೆಯ ಶತಮಾನಗಳ ನಂತರ ಪ್ರಾದೇಶಿಕವಾದ ಶೈಲಿಗಳು ರೂಪುಗೊಂಡವು. ದಕ್ಷಿಣ ಭಾರತವು ಬಹುಮಟ್ಟಿಗೆ ಶಿಲಾದೇವಾಲಯಗಳ ನಾಡಾಯಿತು. ಕಲ್ಲು ಮತ್ತು ಕಂಚು ಇವೆರಡೂ ಪ್ರತಿಮಾ ಶಿಲ್ಪದ ಮಾಧ್ಯಮಗಳಾದುವು. ಕಂಚಿನ ವಿಗ್ರಹಗಳು ಗಮನಾರ್ಹ ಪ್ರಮಾಣದಲ್ಲಿ ರೂಪುಗೊಂಡುವು. ಹಿಮಾಲಯ ಪ್ರದೇಶಗಳಲ್ಲಿಯೂ ಅವು ಸಾಕಷ್ಟು ಸಂಖ್ಯೆಯಲ್ಲಿ ಕಂಡುಬರುತ್ತವಾದರೂ ಬ್ರಾಹ್ಮಣೀಯ ದೇವಾಲಯಗಳಲ್ಲಿ ಬಳಕೆಯಾಗುತ್ತಿದ್ದ ಕಾರಣದಿಂದ ದಕ್ಷಿಣ ಭಾರತದಲ್ಲೂ, ಬೌದ್ಧ ದೇವಾಲಯಗಳು ಹಾಗೂ ಮಠಗಳಲ್ಲಿ ಪೂಜಿತ ವಾಗುತ್ತಿದ್ದುದರಿಂದ ಪೂರ್ವ ಭಾರತದಲ್ಲಿಯೂ ಅವು ವಿಪುಲವಾಗಿ ಪ್ರಚಲಿತಗೊಂಡವು. ದೇಶ್ಯಾದಂತವೂ ಪೂಜಿಸಲ್ಪಡುತ್ತಿದ್ದ ದೇವದೇವತೆಗಳು ಒಂದೇ ಆದರೂ ಒಂದೊಂದು ಪ್ರದೇಶವೂ ಒಂದೊಂದು ಮಾದರಿಯಲ್ಲಿ ಅವರುಗಳ ಪ್ರತಿಮೆಗಳನ್ನು ರೂಪಿಸತೊಡಗಿತು.

ಗುಪ್ತರ ಕಾಲದ ನಂತರ ಮತಧರ್ಮೀಯ ಕಲ್ಪನೆಗಳಲ್ಲಿಯೂ ಸಹ ಕೆಲವು ಬದಲಾವಣೆಗಳನ್ನು ಕಾಣಬಹುದು. ಹಿಂದೂ ದೇವತೆಗಳು ಹಂತಹಂತಗಳಲ್ಲಿ ಒಂದು ಶ್ರೇಣಿಯಲ್ಲಿ ವ್ಯವಸ್ಥೆಗೊಂಡವು. ಸಮಾಜವು ಸಂಸ್ಕಾರ, ಭೂಮಿಯ ಒಡೆತನ, ಸೇನಾಬಲ ಮುಂತಾದ ಪರಿಗಣನೆಗಳಿಂದ ಮೇಲು-ಕೀಳು ಹಂತಗಳಲ್ಲಿ ವ್ಯವಸ್ಥೆಗೊಂಡಿದ್ದಂತೆ ದೇವತೆಗಳೂ ಮೇಲು-ಕೀಳುಗಳಾಗಿ ವ್ಯವಸ್ಥೆಗೊಂಡವು. ವಿಷ್ಣು, ಶಿವ ಮತ್ತು ದುರ್ಗಾ

ಅತ್ಯುನ್ನತ ದೈವಗಳೆಂದು ಪರಿಗಣಿತರಾಗಿ, ಪರಿವಾರವಾಗಿ ಹಾಗೂ ಪರಿಚಾರಕರಾಗಿ ಕೆಳಸ್ಥಾನಗಳಲ್ಲಿ ನಿಯಮಿತಗೊಂಡ ಇತರ ಹಲವಾರು ದೇವದೇವತೆಗಳನ್ನು ಮೇಲಿನ ಅತ್ಯುಚ್ಚ ಸ್ಥಾನಗಳಲ್ಲಿ ಇರಿಸಲ್ಪಟ್ಟರು. ಬ್ರಹ್ಮ, ಗಣಪತಿ, ವಿಷ್ಣು, ಶಕ್ತಿ ಮತ್ತು ಶಿವ ಇವರನ್ನು 'ಪಂಚದೇವ' ಎಂದು ಕರೆದು ಪೂಜಿಸುವುದು ರೂಢಿಗೆ ಬಂತು. ಶಿವ ಅಥವಾ ಮತ್ತೆ ಯಾವುದಾದರೂ ದೇವರನ್ನು ಮುಖ್ಯ ಮಂದಿರದಲ್ಲಿ ಪ್ರತಿಷ್ಠಾಪನೆ ಮಾಡಿ, ಇತರ ನಾಲ್ಕು ದೇವರುಗಳನ್ನು ಸಣ್ಣ ಗುಡಿಗಳಲ್ಲಿ ಅದರ ಸುತ್ತ ಸ್ಥಾಪಿಸುತ್ತಿದ್ದರು. ಅಂತಹ ದೇವಾಲಯಗಳಿಗೆ 'ಪಂಚಾಯತನ' ಎಂದು ಹೆಸರು. ವೇದಕಾಲದ ಇಂದ್ರ, ವರುಣ, ಯಮ ಮುಂತಾದ ದೇವತೆಗಳು ಲೋಕಪಾಲರು ಅಥವಾ ದಿಕ್ಪಾಲಕರಾಗಿ ಕಾವಲು ಭಟರ ಸ್ಥಾನಕ್ಕೆ ಇಳಿಸಲ್ಪಟ್ಟರು. ಮಧ್ಯಕಾಲೀನ ದೇವತಾ ಸಮೂಹಗಳೂ ಸಾಮಾಜಿಕ ಶ್ರೇಣಿಗಳ ಮಾದರಿಯಲ್ಲಿಯೇ ರೂಪಿತವಾದ ದೈವಿಕ ಶ್ರೇಣಿ ವ್ಯವಸ್ಥೆಯ ಕಲ್ಪನೆಯ ಸ್ಪಷ್ಟ ಚಿತ್ರಣ ನೀಡುತ್ತವೆ. ಅಂತಹ ಹಲವು ದೇವತಾ ಸಮೂಹಗಳಲ್ಲಿ ಅತ್ಯುಚ್ಚ ಮಾತೃದೈವವು ಅಥವಾ ದೇವಿಯು ಇತರ ದೇವರುಗಳ ಹೋಲಿಕೆಯಲ್ಲಿ ಅತ್ಯುನ್ನತ ಸ್ಥಾನ ಪಡೆದಿರುವುದುಂಟು.

ಭಕ್ತಿ ಮತ್ತು ಅಹಿಂಸೆಗಳು ಭಾಗವತ ಮತಧರ್ಮದ ಪ್ರಮುಖ ಲಕ್ಷಣಗಳು. ಭಕ್ತಿ ಎಂದರೆ ಪ್ರೀತಿಪೂರ್ಣ ನಿಷ್ಠೆ. ಅದು ನಾಯಕನಿಗೆ ಬಣದ ಜನ ಅಥವಾ ಪ್ರಜೆಗಳು ರಾಜನಿಗೆ ತೋರುತ್ತಿದ್ದ ನಿಷ್ಠೆಯ ಬಗೆಯದು. ಅಹಿಂಸೆ ಅಥವಾ ಪ್ರಾಣಿಗಳನ್ನು ಕೊಲ್ಲದಿರುವ ತತ್ವವು ಕೃಷಿಕ ಸಮಾಜಕ್ಕೆ ಹೊಂದುವಂತಹುದು. ಅದು ಹಿಂದೆ ವಿಷ್ಣುವಿನೊಂದಿಗೆ ಕೂಡಿದು ಜೀವತತ್ವವಾದ ಫಲಪ್ರದತೆಗೆ ಅನುಗುಣವಾದುದು. ಆನರು ವಿಷ್ಣುವನ್ನು ಪೂಜಿಸಿ, ಅಕ್ಕಿ ಎಳ್ಳು ಮುಂತಾದುವನ್ನು ಅರ್ಪಿಸುತ್ತಿದ್ದರು. ಪ್ರಾಣಿ ಹತ್ತೆಯತ್ತ ಅವರಿಗಿದೆದ ಅಸಹ್ಯದಿಂದಾಗಿ ಅವರು ಶಾಕಾಹಾರವನ್ನು ಮಾತ್ರ ಸೇವಿಸತೊಡಗಿದರು.

ಭಕ್ತಿಯು ಆರಾಧನೆಯ ಒಂದು ಪರಿಕರವೂ ಹೌದು. ಭಕ್ತಿಯು ನಿಷ್ಠೆಯ ಪ್ರತೀಕವೂ ಹೌದು ಎಂಬುದನ್ನು ಮರೆಯಬಾರದು.

ಭಕ್ತಿಯ ಕಲ್ಪನೆಯು ಕೇವಲ ಶ್ವೇತಾಶ್ವತರ ಉಪನಿಷತ್ತಿನಲ್ಲಷ್ಟೇ ಅದೂ ಬೀಜ ರೂಪದಲ್ಲಷ್ಟೇ ಕಂಡುಬರುತ್ತದೆ. ಆದಾಗ್ಯೂ ಉಪನಿಷತ್ತುಗಳಿಗೆ ಗೀತೆಯಲ್ಲಿ ಸಾಕಷ್ಟು ಪ್ರಾತಿನಿಧ್ಯ ಸಿಕ್ಕಿದೆ.

ಇಷ್ಟಾಗಿಯೂ ನಂತರದ ಕಾಲದ ಅವಶ್ಯಗಳಿಗೆ ಹೊಂದಿಕೊಳ್ಳುವಂಥ ಆವಿಷ್ಕಾರ ವೊಂದು ಗೀತೆಯಲ್ಲಿತ್ತು. ಅದೇ ಭಕ್ತಿ ಅಂದರೆ, ವೈಯಕ್ತಿಕ ನಿಷ್ಠೆ. ಗೀತೆಯ ಕರ್ತೃ ಯಾರೇ ಆಗಿರಲಿ ಭಕ್ತಿ ಅವರಿಗೆ ಒಂದು ಸಮರ್ಥನೆಯಾಗಿತ್ತು ಮತ್ತು ಎಲ್ಲಾ ದೃಷ್ಟಿಕೋನ ಗಳನ್ನು ಒಂದು ದೈವಿಕ ಮೂಲದಿಂದ ಪಡೆಯಬಹುದಾಗಿದ್ದ ಏಕೈಕ ಮಾರ್ಗವಾಗಿತ್ತು. ನಂತರದಲ್ಲೂ ತೀರಾ ಕಳಪೆ ಕೃತಿಯಾದ ಅನುಗೀತೆಗೆ ಕೂಡ ಬೇಡಿಕೆ ಇತ್ತು ಎಂದರೆ, ಗೀತೆಯ ಕಾಲದಲ್ಲೇ ಗೀತೆಯ ಉದ್ದೇಶ ಪೂರ್ವಕವಾಗಿ ಈಡೇರಿರಲಿಲ್ಲ ಎಂದೆನಿಸುತ್ತದೆ. ಬೃಹತ್ ಕೇಂದ್ರೀಕೃತ ಏಕಚಕ್ರಾಧಿಪತ್ಯಗಳಲ್ಲಿ ಕೊನೆಯದು ಹರ್ಷನದು. ಅದು

ಅಂತ್ಯಗೊಂಡ ಮೇಲೆ ಮುಂಬರುವ ಹೊಸ ಪ್ರಭುತ್ವವು ಆಮೂಲಾಗ್ರವಾಗಿ ಊಳಿಗಮಾನ್ಯ ಪ್ರಭುತ್ವವೇ ಆಗಿರಬೇಕಿತ್ತು. ಗೇಣಿಯವನು ಒಡೆಯನಿಗೆ, ಅನುಚರನು ಪ್ರಮುಖನಿಗೆ, ಸಾಮಂತರು ರಾಜನಿಗೆ ಸಂಪೂರ್ಣವಾಗಿ ನಿಷ್ಠರಾಗಿಬೇಕು ಎನ್ನುವುದು ಪೂರ್ಣವಾಗಿ ಅಭಿವೃದ್ಧಿಗೊಂಡಿರುವ ಊಳಿಗಮಾನ್ಯ ವ್ಯವಸ್ಥೆಯ ಲಕ್ಷಣ. ಇದೊಂದು ಅಮೂರ್ತ ವಾದಂತಹ ಸ್ವಾಮಿ ನಿಷ್ಠೆ ಅಲ್ಲ. ಬದಲಾಗಿ ಇದು ಉತ್ಪಾದನಾ ಸಾಧನಗಳು ಮತ್ತು ಸಂಬಂಧಗಳ ಭದ್ರ ಬುನಾದಿಯ ಮೇಲೆ ರೂಪುಗೊಂಡ ಸ್ವಾಮಿನಿಷ್ಠೆ. ಇಲ್ಲಿ ಉತ್ಪಾದನಾ ಸಾಧನಗಳು ಮತ್ತು ಸಂಬಂಧಗಳೆಂದರೆ ಭೂಮಿಯ ಒಡೆತನ, ಮಿಲಿಟರಿ ಸೇವೆ, ತೆರಿಗೆ ಸಂಗ್ರಹಣೆ ಮತ್ತು ದೊಡ್ಡ ಉದ್ದಿಮೆದಾರರ ಮೂಲಕ ಸ್ಥಳೀಯ ಉತ್ಪನ್ನವನ್ನು ಸರಕಾಗಿ ಪರಿವರ್ತಿಸುವ ಪ್ರಕ್ರಿಯೆ. ಕ್ರಿ.ಶ. ೬ನೇ ಶತಮಾನಕ್ಕೆ ಮುಂಚಿತವಾಗಿ ಈ ವ್ಯವಸ್ಥೆ ಖಂಡಿತಾ ಸಾಧ್ಯವಿರಲಿಲ್ಲ. 'ಸಾಮಂತ' ಎಂಬುದು ಇಲ್ಲಿ ತೀರಾ ಮುಖ್ಯವಾಗುವ ಪದ. ಕ್ರಿ.ಶ. ೫೩೨ರ ವೇಳೆಗೆ ಆ ಪದಕ್ಕೆ ಕಡೇ ಪಕ್ಷ 'ನೆರೆಯ ಅರಸ' ಎಂಬ ಅರ್ಥವಾದರೂ ಇತ್ತು. ಆದರೆ ಕ್ರಿ.ಶ. ೫೩೨ರ ನಂತರ ಜಮೀನುದಾರಿ, ಜಹಗೀರುದಾರ ಎಂಬ ಅರ್ಥ ಪಡೆದುಕೊಂಡಿತು. ಹೊಸ ಜಹಗೀರುದಾರರು ದೊರೆಗೆ ನಿಷ್ಠರಾಗಿದ್ದರು. ತೆರಿಗೆ ಸಂಗ್ರಹಿಸಿಕೊಡುವ ಕಾರ್ಯವನ್ನೂ ನಿರ್ವಹಿಸಿ ಕೊಡುತ್ತಿದ್ದರು. ಮನುಸ್ಮೃತಿಯಲ್ಲಿನ ದೊರೆಗೆ ಸಾಮಂತರಾರೂ ಇರಲಿಲ್ಲ. ಇಡೀ ಆಡಳಿತವನ್ನು ಅವನೇ ನೇರವಾಗಿ, ಅಥವಾ ಯಾವುದೇ ಸ್ವತಂತ್ರ ಸ್ಥಾನಮಾನವಿರದ ರಾಜ - ನಿಯೋಗಿಗಳ ಮೂಲಕ ನಿರ್ವಹಿಸಬೇಕಾಗಿತ್ತು. ಊಳಿಗಮಾನ್ಯ ವ್ಯವಸ್ಥೆಯು 'ಬುಡ'ದಿಂದ ಮತ್ತಷ್ಟು ಬೆಳೆದಂತೆ ಭೂಮಿಯ ಮೇಲೆ ವಿಶೇಷ ಅಧಿಕಾರವಿಲ್ಲದಿದ್ದ (ಸಾಗುವಳಿಯ ಅಥವಾ ವಂಶ ಪಾರಂಪರ್ಯವಾದ ಒಡೆತನಕ್ಕೆ ಸಂಬಂಧಿಸಿದಂತೆ) ಜನರ ವರ್ಗವೊಂದು ಬೆಳೆಯಿತು. ಅವರು ತೆರಿಗೆಯನ್ನು ಸಂಗ್ರಹಿಸುತ್ತಿದ್ದರು ಹಾಗೂ ವಿಶೇಷ ಸಶಸ್ತ್ರ ಭಮಟನ ಕೆಲಸವನ್ನೂ ನಿರ್ವಹಿಸುತ್ತಿದ್ದರು. ಇಂತಹ ಸಮಾಜ ಹಾಗೂ ಅದರ ಪ್ರಭುತ್ವವನ್ನು ಒಟ್ಟಿಗೆ ಹಿಡಿದಿಡುವುದಕ್ಕೆ, ಸಹಕಾರಿಯಾದ ಅತ್ಯುತ್ತಮ ಧರ್ಮವೆಂದರೆ, ಭಕ್ತಿಗೆ ತುಂಬಾ ಪ್ರಾಶಸ್ತ್ಯ ನೀಡುವಂತಹ ಧರ್ಮ. ಭಕ್ತಿಗೆ ಪಾತ್ರನಾಗುವ ವ್ಯಕ್ತಿಯಲ್ಲಿ ಎಂತಹುದೇ ನ್ಯೂನತೆಗಳಿದ್ದರೂ ಕೂಡ ಅವನಲ್ಲಿ ಭಕ್ತಿಯಿಡುವುದು ಸಾಧ್ಯವಾಗಬೇಕು.

ಭಕ್ತಿಯ ಕಲ್ಪನೆಯು, ಫ್ಯೂಡಲ್ ಸಿದ್ಧಾಂತಕ್ಕೆ ಅನಿವಾರ್ಯವಾಗಿದ್ದರೂ ಕೂಡ, ಅದರ ಫಲವನ್ನು ಮಾತ್ರ ಎಲ್ಲರೂ ಸಮಾನವಾಗಿ ಅನುಭವಿಸುತ್ತಿರಲಿಲ್ಲ. ರಾಜರ ಭೋಗದ ಅರಮನೆಗಷ್ಟೇ ಅಲ್ಲದೇ, ಅದರ ಮತ್ತೊಂದು ಮುಖವಾದ, ಅಷ್ಟೇ ಶ್ರೀಮಂತವಾದ ಮತ್ತು ಆಡಂಬರಮಯವಾಗಿದ್ದ ದೇವಾಲಯಗಳಿಗೂ ಹಣ ಕೊಡುತ್ತಿದ್ದ ರೈತರಿಗೆ ಊಳಿಗಮಾನ್ಯ ವ್ಯವಸ್ಥೆಯ ಈ ತೆರಿಗೆಯು ತುಂಬಾ ಹೊರೆಯಾಯಿತು. ಆ ಕಾಲದಲ್ಲಿ ಬ್ರಾಹ್ಮಣ್ಯವು ತುಂಬಾ ಪ್ರಾಧಾನ್ಯಕ್ಕೆ ಬಂದಿತು.

*ವಿವರಗಳಿಗೆ ನೋಡಿ: ಋಣ; ಪ್ರಭುತ್ವ*

*ಆರ್.ಎಸ್. ಶರ್ಮ ೨೦೦೭ ಪ್ರಾಚೀನ ಭಾರತ ಪುಟ. ೨೧೩, ೨೬೩-೨೬೪*

*ಡಿ.ಡಿ. ಕೊಸಾಂಬಿ ೨೦೦೩ ಪುರಾಣ ಮತ್ತು ವಾಸ್ತವ ಪುಟ. ೨೩, ೪೩, ೪೫, ೪೭*

### ೫೬೦. ಭಕ್ತಿ ಮಾಧ್ಯಮವಾಗಿ ಸಂಗೀತ ನೃತ್ಯ

ದೇವರನ್ನು ಒಲಿಸಲು ಸ್ತ್ರೀಯರು ಸಂಗೀತ ಮತ್ತು ನೃತ್ಯದಲ್ಲಿ ತೊಡಗಿದ ವಿಷಯವು ಕೆಲವು ಕೃತಿಗಳಲ್ಲಿ ಉಕ್ತವಾಗಿದೆ. 'ಕರ್ಣಾಟಕ ಕಾದಂಬರಿ'ಯಲ್ಲಿ ಮಹಾಶ್ವೇತೆಯು ವೀಣೆಯನ್ನು ಬಾರಿಸುತ್ತಾ ಮಧುರವಾದ ಧ್ವನಿಯಿಂದ ಹಾಡಿದ ವಿಚಾರವು ಬರುತ್ತದೆ. (೪.೫೦-೫೫)

ದೇವರ ಆರಾಧನೆಯ ಸಂದರ್ಭದಲ್ಲಿ ಹಾಡುವ ಗೀತೆಗಳು ದೇವರನ್ನು ಸ್ತುತಿಸುತ್ತವೆ. ಆದುದರಿಂದ ಇವುಗಳನ್ನು ಸ್ತುತಿಪದ್ಯಗಳು ಎಂದು ಕರೆಯುತ್ತಾರೆ. ಸ್ತುತಿಪದ್ಯಗಳು ಮೊರೆಯಿಡುವ ದಾಟಿಯಲ್ಲಿರುತ್ತವೆ. ಉದಾ: ವಂದಿಪೆ ನಿನಗೆ ಗಣನಾಥ! ಮೊದಲೊಂದಿಪೆ ನಿನಗೆ ಗಣನಾಥ-ಸ್ತುತಿಯಲ್ಲಿ  ಇವುಗಳನ್ನು ವಂದ್ಯಸ್ತುತಿಯೆಂದು ಕರೆಯುತ್ತಾರೆ. ಇನ್ನೊಂದು ರೀತಿಯ ಸ್ತುತಿಪದ್ಯಗಳಿವೆ ಅವುಗಳನ್ನು ನಿಂದ್ಯಾಸ್ತುತಿಯೆಂದು ಕರೆಯುತ್ತಾರೆ. ದೇವರನ್ನು ನಿಂದಿಸುತ್ತಲೇ ಅವನನ್ನು ಗುಣಗಾನ ಮಾಡುವುದು. ಭಾಗವತ ಪರಂಪರೆಯಲ್ಲಿ ಇವುಗಳಿಗೆ ವಿಶಿಷ್ಟತೆಯಿದೆ. ಉದಾ: ದಾಸರ ಕೀರ್ತನೆಗಳು. "ನೀನ್ಯಾಕೋ ನಿನ್ನ ಹಂಗ್ಯಾಕೋ" ಎನ್ನುವ ಕೀರ್ತನೆಯು ನಿಂದಾಸ್ತುತಿಗೆ ಉದಾಹರಣೆಯಾಗಿದೆ. ಭಕ್ತಿಯನ್ನು ವ್ಯಕ್ತಪಡಿಸಲು ಭಜನೆಯೂ ಒಂದು ದಾರಿ. ಮಧ್ಯಕಾಲೀನ ಕನ್ನಡ ಸಾಹಿತ್ಯದಲ್ಲಿ ಬಂದ ಭಕ್ತಿಪಂಥವು ತಾಳ-ಲಯ-ಕೀರ್ತನೆ ಇವುಗಳನ್ನು ಬಳಸಿಕೊಂಡಿತು. ಇದರಿಂದಾಗಿ ಈವೊತ್ತಿಗೂ ಸಂಗೀತದಲ್ಲಿ ಕೀರ್ತನೆಗಳನ್ನು ಬಳಸಿಕೊಳ್ಳುವ ಕ್ರಮವಿದೆ.

### ೫೬೧. ಭಗವತಿ

'**ಭಗವತಿ**ಯೇಱುವೇಟ್ವಿತೆರದಿಂ ಕಥೆಯಾಯಿತು,' ಎಂದು ಪಂಪನು ಹೇಳುತ್ತಾನೆ.
(ಪಂಪ ಭಾರತ ೧೦-೧೬)

ಭಗವತಿಯೆಂದರೆ ದೇವತೆ. ದಕ್ಷಿಣ ಕನ್ನಡದಲ್ಲಿ ಭಗವತಿಯಾರಾಧನೆಯು ಈಗಲೂ ಇದೆ.

'ಭಗವತಿಯೇಱುವೇಟ್ವಿ ತೆರದಿಂ ಕಥೆಯಾಯ್ತಿವರೇಱು' ಎನ್ನುವ ಮಾತು 'ಪಂಪ ಭಾರತ'ದಲ್ಲಿ ಬರುತ್ತದೆ. (೧೦-೧೬) ಡಿ.ಎಲ್. ನರಸಿಂಹಾಚಾರ್ಯರು 'ಭಗವತಿ - ದುರ್ಗಾದೇವಿಯ' ಎಂದೂ ಯುದ್ಧಗಳನ್ನು ಹೇಳುವ, ತೆಱದಿ ರೀತಿಯಿಂದ ಎಂದೂ ಅರ್ಥಮಾಡುತ್ತಾರೆ. (ನರಸಿಂಹಾಚಾರ. ಡಿ.ಎಲ್. ೧೯೭೬ ಪು.೩೪೫-೬) ಕ್ರಿ.ಶ ಏಳು ಮತ್ತು ಒಂಬತ್ತನೆಯ ಶತಮಾನದ ವೇಳೆಗೆ ದಕ್ಷಿಣ ಭಾರತದಲ್ಲಿ ದುರ್ಗೆಯ ಪೂಜೆಯು ಹೆಚ್ಚು ಪ್ರಚಲಿತವಿತ್ತೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಭಾಗ ಆರಾಧನೆಯು ಕ್ರಿಸ್ತಪೂರ್ವದಲ್ಲಿಯೇ ಆಚರಣೆಯಲ್ಲಿದ್ದು ಚೀನಾದಿಂದ ಭಾರತಕ್ಕೆ ಡಾಯೋ ಸಿದ್ಧಾಂತದ ಮೂಲಕ ಬಂತೆಂದು ಚಂದ್ರ ಚಕ್ರವರ್ತಿಯವರು ಅಭಿಪ್ರಾಯ ಪಡುತ್ತಾರೆ. (ಅದೇ ಪು. ೮೯) ಪಂಪನ ಈ ಪದ್ಯಭಾಗವು (ಭಗವತಿಯುಎರುವೇಳ್ವತೆರ) ಜನಪದ ಪರಿಸರದಲ್ಲಿ ದುರ್ಗೆಯ ಮಾದರಿಯ ಜನಪದ ದೇವತೆಯನ್ನು ಸೂಚಿಸುತ್ತದೆ. ಇದು

ಮುಖ್ಯವಾಗಿ ನೀಚಾರ್ಥ ಸೂಚಕವಾಗಿ ಕೃತಿಯಲ್ಲಿ ಬಂದಿದೆ. ಬಹುಶಃ ಜೈನಧರ್ಮದ ಪ್ರಾದುರ್ಭಾವದ ಹೊತ್ತಿನಲ್ಲಿ ಈ ರೀತಿಯ ಆಚರಣೆಯು ಅರ್ಥಶೂನ್ಯವಾಗಿ ಕಂಡಿರಬೇಕು. ಇದಕ್ಕಾಗಿ ಪಂಪನು ಹೀಗೆ ಪ್ರತಿಪಾದಿಸಿರಬೇಕು. ಆದರೆ ಭಗವತಿಯ ಆರಾಧನೆಯ ಗುಡಿಗಳು ದಕ್ಷಿಣ ಕನ್ನಡದಲ್ಲಿ ಮತ್ತು ಕೇರಳದ ಗಡಿ ಪ್ರದೇಶದಲ್ಲಿ ಈಗಲೂ ಇವೆ: ಭಗವತಿಯ ವಿಶೇಷ ಉತ್ಸವ (ಕಳಿಯಾಟ)ವು ಹತ್ತು ವರ್ಷ, ಹನ್ನೆರಡು ವರ್ಷ, ಅರವತ್ತು ವರ್ಷಗಳಿಗೊಮ್ಮೆ ನಡೆಯುತ್ತದೆ. ವರ್ಷಕ್ಕೊಮ್ಮೆ ಜಾತ್ರೆಯಿರುತ್ತದೆ.

ಪಂಪ ಭಾರತದಲ್ಲಿ ಬರುವ 'ಭಗವತಿಯೇಱುವೇಟ್ವಿ ತೆರದಿಂ ಕಥೆಯಾಯ್ತಿವರೇಱು' ಎನ್ನುವ ಮಾತನ್ನು ಲಕ್ಷಿಸಿ ಡಿ.ಎಲ್. ನರಸಿಂಹಾಚಾರರು ಭಗವತಿ–ದುರ್ಗದೇವಿಯ ಏರು ವೇಳ್ವೆ–ಯುದ್ಧಗಳನ್ನು ಹೇಳುವ ಎಂದು ಅರ್ಥ ಮಾಡುತ್ತಾರೆ.

ದುರ್ಗೆಯು ಫಲವತ್ತತೆಯ ಮಾತೃ ದೇವತೆಯೆಂದು ದೇವಿಪ್ರಸಾದ ಚಟ್ಟೋಪಾಧ್ಯಾಯ ಹೇಳುತ್ತಾರೆ. ಮೊಹೆಂಜೊದಾರೋವಿನಲ್ಲಿ ದೊರೆತಿರುವ ದೇವಿಯ ಮೃಣ್ಮಯ ಪುತ್ಥಳಿಗಳಿಗೆ ಕೆಂಪು ಬಣ್ಣ ಬಳಿದಿರುವುದನ್ನು ಕಾಣಬಹುದು. ಈಗಲೂ ಕುಂಕುಮ, ಕೆಂಪು ದಾಸವಾಳ, ರಕ್ತವಸ್ತ್ರ, ರಕ್ತಫಲ ಮೊದಲಾದವು ದೇವಿಗೆ ಪ್ರಿಯವಾದುದೆಂಬ ಕಲ್ಪನೆಯಿದೆ. ಕೆಂಪು ದೇವತೆಯ ಪ್ರಿಯ ಬಣ್ಣವಾಗಿದ್ದು ಕೆಂಪು ಬಣ್ಣವು ಹುಟ್ಟಿನ ಸಂಕೇತವಾಗಿದೆ.

*ವಿವರಗಳಿಗೆ ನೋಡಿ: ರಾಮಚಂದ್ರರಾವ್ ಎಸ್.ಕೆ. ೧೯೮೧ ವಿವಾಹ ಪದ್ಧತಿಗಳು ಪುಟ. ೭೯*

*Chandra Chakravati 1963 Sex Life in Ancient India Firms P. 97*

*Bhattacharya Narendranath 1975 Ancient Indian Ritual and their Social Content P122*

**೫೬೨. ಭರತವಂಶ**

*"..............ಎಂದು ಶೋಕಂಗೆಯ್ಯೆ ರಾಜರಾಜಂ ಮಾಣಿಸಿ ನೀವಪ್ಪೊಡೆ ವಿದಿತ ವೇದಿತಜ್ಞರುಂ ಭಾವಿತಾತ್ಮರುಮಾಗಿರ್ದ ಜ್ಞಾನಿಗಳ್ ಅಂತೆ ನೆಗೞಲಾಗದೆಂದು ನಿಜಾಗಮನ ವೃತ್ತಾಂತಮಂ ಸಮರಪರಿಚ್ಛೇದಮುಮನಱಿಪಿದಡೆ ಕಿಱಿದಾನುಂ ಬೇಗಂ ಕ್ರಾಂತನಾಗಿರ್ದ ಮಗನೆ ಕಮಲನಾಭನ ನಾಭೀ ನಳಿನಸಂಭವಹಿರಣ್ಯಗರ್ಭನ ಮಸಸ್ಸಮಭವರಪ್ಪ ಸೋಮವಂಶದೊಳನೇಕರರಸುಮಕ್ಕಳುಮತಿಕ್ರಾಂತರಾದರ್. ಅವರೊಳ್ ಸತ್ಯನೆಂಬವಂಗೆ ಭರತನೆಂಬವನಾದಂ. ಆತನಿಂ ಬೞಿಕ್ಕ* ***ಭರತಾ***ನ್ವಯ*ಮೆಂಬುದಾದುದು ಆ* ***ಭರತ***ಕುಲದೊಳಪ್ರತಿಮಪ್ರಬಲಪ್ರತಾಪಂ ಪ್ರತೀಪನೆಂಬನಾತಂಗೆ ಪುಟ್ಟಿರ್ದ ಶಂತನುವುಂ ಬಾಹ್ಲಿಕನುಂವಿನುತನುಂ ದೇವಾಪಿಯುಮೆಂಬೀ ನಾಲ್ವರ್ ತನೂಜರಾದರ್ ಅಲ್ಲಿ ಶಂತನುಗಂಗಂಗಾದೇವಿಗಮಾಂ ಪುಟ್ಟಿದೆಂ ಬಾಲ್ಯಕಾಲದೊಳ್ ತೊಡಂಗಿ ಪರಿಗೃಹೀತ ಬ್ರಹ್ಮಚರ್ಯವ್ರತಪರಿಣತನಾದೆಂ ಎಮ್ಮಮ್ಮನಪ್ಪ ಶಂತುನುಗಂ ಯೋಜನಗಂಧಿಯೆನಿಸಿದ ಸತ್ಯವತಿಗಂ ಚಿತ್ರಾಂಗದನುಂ ವಿಚಿತ್ರವೀರ್ಯನುಮೆಂಬಿರ್ವರ್ ತನೂಜರಾದರ್ ಅವರಪರೋಕ್ಷದೊಳ್ ನಷ್ಟಸಂತತಿಯಾಗೆ ಕೃಷ್ಣದ್ವೈಪಾಯನರ ವರಪ್ರಸಾದದಿಂದಂಬಿಕೆಗೆ

ಧೃತರಾಷ್ಟ್ರನುಂ ಅಂಬಾಲಿಕೆಗೆ ಪಾಂಡುರಾಜನುಂ ಅವರ ಸೂಳೆಯುಪ್ಪಾಕೆಗೆ ವಿದುರನುಮೆಂಬ ಮೂವರ್ ತನೂಜರಾದರ್. ಇಂತು ಸೋಮವಂಶದಿಂದವಿಚ್ಛಿನ್ನಮಾಗಿ ಬಂದ ಭರತಾನ್ವಯದೊಳಿನ್ನೆವರಂ ಗೋತ್ರಕಲಹಮೆಂಬುದಾದುದಿಲ್ಲ. ನಿಮ್ಮೊಳಾದುದು ಇನ್ನಾನೆಂಬುದನಿಂಬುಕೆಯ್ವೆಯ ಪೊಡೆ' ಪಾಂಡವರನೊಡಂಬಡಿಸಿ ಸಂಧಿಯಂ ಮಾಡಿ ಪೂರ್ವಕ್ರಮದೊಳ್ ನಡೆವಂತು ಮಾಳ್ಪೆಂ ಇನ್ನಮವರೆಮ್ಮೆಂದುದಂ ಇಂಬುಕೆಯ್ಯದವರ್ ಮೀಱುವರಲ್ಲ. ನೀನುಮೆಮ್ಮ ಪೆೞ್ದುದಂ ಮೀಱದೆ ನೆಗೞಲ್ವೇೞ್ಕುಮೆನೆ ಸುಯೋಧನಂ ಮುಗುಳ್ನಗೆ ನಕ್ಕು...................

(ಸಾಹಸ ಭೀಮ ವಿಜಯ ೫–೪೪ ವ)

ಎಂದು ರನ್ನನು ವಿವರಿಸುತ್ತಾನೆ.

ಅದಕ್ಕೆ ಸಂಬಂಧಿಸಿದಂತೆ ಈ ರೀತಿಯ ವಿವರಣೆಗಳಿವೆ:

ಎಂದು ಶೋಕಿಸಲಾಗಿ, ದುರ್ಯೋಧನನು, ಅವನನ್ನು ತಡೆದು, ವಿನೀವು ಎಲ್ಲವನ್ನೂ ತಿಳಿದವರು, ಆತ್ಮಜ್ಞಾನಿಗಳು. ಹೀಗೆಲ್ಲ ದುಃಖವಶರಾಗಬಾರದುಹಿ ಎಂದು ನುಡಿದು ತಾನು ಬಂದು ಉದ್ದೇಶವನ್ನೂ, ಯುದ್ಧನಿರ್ಧಾರವನ್ನೂ ಅರಿಕೆ ಮಾಡಿಕೊಂಡನು. ಭೀಷ್ಮನು ಸ್ವಲ್ಪ ಹುಟ್ಟಿದವರು ಬ್ರಹ್ಮ. ಆತನು ಹೀಗೆಂದನು– ವಿಮಗನೆ, ವಿಷ್ಣುವಿನ ಹೊಕ್ಕುಳ ಕಮಲದಿಂದ ಹುಟ್ಟಿದವರು ಬ್ರಹ್ಮ. ಆತನ ಮಾನಸಪುತ್ರರು ಸಪ್ತರ್ಷಿಗಳು. ಅವರಲ್ಲಿ ಜಗತ್ಪೂಜ್ಯನಾದ ಅತ್ರಿಯ ಕಣ್ಣಿಂದ ಚಂದ್ರನು ಉದ್ಭವಿಸಿ, ಅವನಿಂದ ಸೋಮವಂಶವುಂಟಾಯಿತು. ಆ ವಂಶದಲ್ಲಿ ಅನೇಕ ರಾಜರು ಆಗಿಹೋದರು. ಅವರಲ್ಲಿ ಸತ್ಯನೆಂಬುವನಿಗೆ ಭರತನೆಂಬ ಮಗನಾದನು. ಅವನಿಂದ ಮುಂದೆ ಆ ವಂಶ ಭರತವಂಶವೆಂದಾಯಿತು. ಭರತಕುಲದಲ್ಲಿ ಅಸಾಮಾನ್ಯ ಪ್ರತಾಪಿಯಾದವನು ಪ್ರದೀಪ; ಆತನಿಗೆ ಶಂತನು, ಬಾಹ್ಲಿಕ, ವಿನುತ ಮತ್ತು ದೇವಾಪಿ ಎಂಬ ನಾಲ್ಕರು ಮಕ್ಕಳಾದರು. ಶಂತನುವಿಗೆ ಗಂಗಾದೇವಿಯಲ್ಲಿ ನಾನು ಹುಟ್ಟಿದೆನು. ಚಿಕ್ಕಂದಿನಿಂದ ಬ್ರಹ್ಮಚರ್ಯವನ್ನು ಸ್ವೀಕರಿಸಿ, ಅದರಲ್ಲಿ ಪರಿಣತನಾದೆನು. ನಮ್ಮ ತಂದೆ ಶಂತನುವಿಗೂ ಯೋಜನಗಂಧಿ ಯೆನಿಸಿದ ಸತ್ಯವತಿಗೂ ಚಿತ್ರಾಂಗದ ಹಾಗೂ ವಿಚಿತ್ರವೀರ್ಯ ಎಂಬಿಬ್ಬರು ಮಕ್ಕಳಾದರು. ಅದು ತೀರಿದ ಬಳಿಕ ವಂಶಕ್ಕೆ ಸಂತತಿಯಿಲ್ಲದಂತಾಗಲು ವ್ಯಾಸಮುನಿಗಳು ಪ್ರಸಾದದಿಂದ ಅಂಬಿಕೆಗೆ ಧೃತರಾಷ್ಟ್ರನೂ ಅಂಬಾಲಿಕೆಗೆ ಪಾಂಡು ರಾಜನೂ, ದಾಸಿಗೆ ವಿದುರನೂ ಹುಟ್ಟಿದರು ಎಂದು ಭೀಷ್ಮನು ಹೇಳುತ್ತಾನೆ.

ರಾಮಾಯಣದಲ್ಲಿ ಬರುವುದು ರಘುವಂಶದ ಕತೆ. ರಾಮಾಯಣವನ್ನು ಸೂರ್ಯವಂಶದ ಕತೆಯೆಂದೂ ಸೂರ್ಯವಂಶದವರು ಚಕ್ರವರ್ತಿಗಳಾಗಿದ್ದರೆಂದೂ ಹೇಳುತ್ತಾರೆ. ಮಹಾಭಾರತದಲ್ಲಿ ಬರುವುದು ಚಂದ್ರವಂಶದ ಕತೆ. ಚಂದ್ರವಂಶದ ಕತೆಯನ್ನು ಭರತವಂಶದ ಕತೆಯೆಂದು ಕರೆಯುವುದು ರೂಢಿ. ಚಂದ್ರವಂಶದಲ್ಲಿ ಅನಂತರ ಯದುವಂಶ ಮತ್ತು ಪುರುವಂಶವೆಂದು ಎರಡಾಯಿತು. "ಯದು, ಪುರುಗಳೆಂಬ ವಂಶವೆರಡಾಯ್ತು" ಎಂದು ಪದ್ಯಭಾಗವಿದೆ. ಸೂರ್ಯವಂಶದ ಹೆಗ್ಗಳಿಕೆಯೇನೆಂದರೆ – ಸೂರ್ಯ ಬಿಸಿಲು

ಎಲ್ಲೆಲ್ಲಿ ಬೀಳುತ್ತದೋ ಅದೆಲ್ಲವೂ ಸೂರ್ಯವಂಶದವರ ಸೊತ್ತಾಗಿತ್ತು ಎಂದು ಹೇಳುತ್ತಾರೆ.

*ವಿವರಗಳಿಗೆ ನೋಡಿ: Romila Thapar 1975 The Past and Prejudice*

**೫೬೩. ಭವವೈರತ್ವ**

*ಪೆಂಡತಿಯುಮೇಗಣಮುಳಿಸನುಟಿದುಋಷಿ ಯುರಮೇಗೆಮುನಿಸಾಗಿ ಭವಸಂಬಂಧಿಯಪ್ಪ ವೈರಂ ಕಾರಣಮಾಗಿ ಕ್ರೋಧಾಗ್ನಿ ಪೆರ್ಚಿಯೆನ್ನಂ.................*

*(ಡಿ.ಎಲ್.ಎನ್. ೨೦೦೯ ಪು.೧೯೭)*

ಪಸಿವಿನಿಂಸುಟ್ಟೊನಂ ಕಿಚ್ಚಿನಿಂ ಸುಟ್ಟಲ್ಲದುಣ್ಣೆನೆಂದು ಪ್ರತಿಜ್ಞೆಯು ಪುಲ್ದಬೆಂಟೆಯಂ ಪೊಸೆದು ಕಿಚ್ಚುಮಣ್ಣೆಯ ಕೊಡನುಂ ಬೆಂಟೆಯಮಂ ಕೊಂಡು ಪೋಗಿ.....................

(ಅದೇ ಪು.೧೯೭)

ಭವ ಸಂಬಂಧಿ ವೈರವೆಂದರೆ ಇಹಕ್ಕೆ ಸಂಬಂಧಿಸಿದ ವೈರ ಎಂದರ್ಥ. ವೈರವನ್ನು ಬೇರೆ ಬೇರೆ ಭವಾವಳಿಗಳಲ್ಲಿಯೂ ಬಂದು ಕಾಡುವುದು ಜೈನಧರ್ಮದ ಅನೇಕ ಕಾವ್ಯಗಳಲ್ಲಿ ಚಿತ್ರಿತವಾಗಿದೆ. ಇದು ಜೈನಧರ್ಮಕ್ಕೆ ವಿಶಿಷ್ಟವಾದುದು. ಹಿಂದಿನ ಜನ್ಮದಲ್ಲಿ ಮಾಡಿದ ಪಾಪ – ಪುಣ್ಯಗಳು ಮರು ಜನ್ಮದಲ್ಲಿಯೂ ಕಾಡುತ್ತವೆ. ಪಾಪ – ಪುಣ್ಯಾದಿ ಮರುಜನ್ಮಕ್ಕೂ ಬರುತ್ತವೆ ಎಂಬುದನ್ನು ವೈದಿಕ ಧರ್ಮವೂ ನಂಬುತ್ತದೆ.

**೫೬೪. ಭಸ್ಮ ಶಯ್ಯೆ**

*ಭಸ್ಮಶಯ್ಯಾ ತಳದೊಳ್ ಬಿಸುಸುಯ್ದು ಮೆಯ್ಯನಿಕ್ಕಿದಳಾಗಳ್*

*(ಕರ್ಣಾಟಕ ಕಾದಂಬರಿ, ೫–೨೦೯)*

ಕಟ್ಟುನಿಟ್ಟಾದ ಪಾಶುಪತವ್ರತವನ್ನು ಆಚರಿಸುವವರು ವಿಭೂತಿಯಿಂದ ಏರ್ಪಡಿಸಿರುವ ಹಾಸಿಗೆಯ ಮೇಲೆ ಮಲಗುತ್ತಾರೆ. ಅದಕ್ಕೆ 'ಭಸ್ಮಶಯ್ಯೆ' ಎಂದು ಹೇಳುತ್ತಾರೆ.

ಪಶುಪತಿಯೆಂದರೆ ಶಿವ. ಶಿವನನ್ನು ಆರಾಧಿಸುವ ವ್ರತವನ್ನು ಪಾಶುಪತ ವ್ರತವೆಂದು ಕರೆಯುತ್ತಾರೆ. ಕಠಿಣವಾದ ಪಾಶುಪತ ವ್ರತದಲ್ಲಿ (ವಿಭೂತಿಯೆಂದರೆ ವಿಶೇಷವಾಗಿ ಆಗುವಿಕೆ – ಪರಿವರ್ತನೆ) ಶಿವನ ಆರಾಧಕರು ವಿಭೂತಿಯನ್ನು ಧರಿಸುತ್ತಾರೆ. ಹಾಸಿಗೆಯ ಮೇಲೆ ಮಲಗುತ್ತಾರೆ. ಪರ್ಯಾಯವಾಗಿ ಇದು ಭಸ್ಮಲೇಪನ.

ಆಚಾರಹೀನರು, ಪಾಖಂಡಿಗಳು, ಸುರಾಪಾನ ಮಾಡುವವರು, ಜಟಾಭಸ್ಮಗಳನ್ನು ಧರಿಸುವವರಾಗಿದ್ದು ಇಂಥ ಮೂರ್ಖರು ನಿನ್ನ ಭಕ್ತರಾಗುವವರು ಮತ್ತು ಇಂದ್ರಾದಿಗಳ ಜೊತೆಗೆ ನಿನಗೆ ಹವಿರ್ಭಾಗ ದೊರೆಯಲಾರದು–ಇಂಥ ವರ್ಣನೆಗಳು ಭಾಗವತದಲ್ಲಿವೆ. ಶೈವ ಸಂಪ್ರದಾಯದಲ್ಲಿ ಈ ರೀತಿಯ ಅನಾಚಾರಗಳಿಗೆ ಅವಕಾಶವಿದೆ ಮತ್ತು ಇತ್ತು ಎಂಬುದನ್ನು ಈ ಪಂಥದ ಇತಿಹಾಸ ಬಲ್ಲವರಿಗೆ ಹೇಳುವ ಕಾರಣವಿಲ್ಲ ಎಂದು ಶಂಬಾ ಪ್ರತಿಕ್ರಿಯಿಸಿದ್ದಾರೆ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೧ ಪುಟ. ೧೭೪*

**೫೬೫. ಭಾಗವತ ಮತದ ಹುಟ್ಟು**

ಭಾಗವತ ತತ್ವವು ವಿಷ್ಣು ಅಥವಾ ಭಗವತ್‌ನ ಅರ್ಚನೆಯ ಸುತ್ತ ಬೆಳೆದು ಬಂತು. ಇದು ಮೌರ್ಯೋತ್ತರ ಕಾಲದಲ್ಲಿ ಹುಟ್ಟಿಕೊಂಡಿತು. ವೇದಕಾಲದಲ್ಲಿ ವಿಷ್ಣು ಒಬ್ಬ ಕಿರುದೇವತೆ, ಅವನು ಸೂರ್ಯನನ್ನೂ, ಫಲಾಭಿವೃದ್ಧಿಯನ್ನೂ ಪ್ರತಿನಿಧಿಸುವ ದೇವರು ಕ್ರಿ. ಪೂ. ಎರಡನೆಯ ಶತಮಾನದ ವೇಳೆಗೆ ಅವನು ನಾರಾಯಣ ಎಂಬ ಇನ್ನೊಂದು ದೈವದೊಂದಿಗೆ ಕೂಡಿ ನಾರಾಯಣ-ವಿಷ್ಣು ಎಂಬ ಹೆಸರನ್ನು ಪಡೆದನು. ಮೂಲತಃ ನಾರಾಯಣನು ಅವೈದಿಕ ಆದಿವಾಸಿ ಬಣದೇವತೆ. ಅವನನ್ನು ಭಗವತ್ ಎಂದೂ ಕರೆಯುತ್ತಿದ್ದರಾದ್ದರಿಂದ, ಅವನನ್ನು ಪೂಜಿಸುವವರು ಭಾಗವತರು ಎಂದು ಹೆಸರಾದರು. ಅವನು ಬಣದ ನಾಯಕನ ದೈವ ಅಂಶ. ಬಣದ ನಾಯಕನು ತನ್ನ ಕುಲಸ್ಥರಿಂದ ಕಾಣಿಕೆಗಳನ್ನು ಪಡೆದು, ಅವುಗಳನ್ನು ಕುಲಸ್ಥರಿಗೇ ಹಂಚುತ್ತಿದ್ದಂತೆ, ನಾರಾಯಣನು ತನ್ನ ಭಕ್ತರು ಅಥವಾ ಪೂಜಕರಿಗೆ ಒಳ್ಳೆಯ ಅದೃಷ್ಟದಲ್ಲಿ ಭಾಗಗಳನ್ನು ನೀಡುವವನು. ಇದಕ್ಕೆ ಪ್ರತಿಯಾಗಿ ಭಕ್ತರು ತಮ್ಮ ಭಕ್ತಿ ಅಥವಾ ವಿಧೇಯತೆಯನ್ನು ಅವನಿಗೆ ಸಲ್ಲಿಸಬೇಕು. ವಿಷ್ಣು ಹಾಗೂ ನಾರಾಯಣರು ಒಂದುಗೂಡಿದ ಕಾರಣ, ಅವರ ಭಕ್ತರು ಸಹ ಒಂದೇ ನೆರಳಿನಲ್ಲಿ ಕೂಡಿಕೊಂಡರು. ಅವರಲ್ಲಿ ಒಬ್ಬ ವೈದಿಕ ಹಾಗೂ ಮತ್ತೊಬ್ಬ ಅವೈದಿಕ ದೇವರುಗಳಾಗಿದ್ದರೂ, ಎರಡು ಸಂಸ್ಕೃತಿಗಳು, ಎರಡು ಬಗೆಯ ಜನ ಹಾಗೂ ಆ ಎರಡು ದೇವತೆಗಳೂ ಒಂದುಗೂಡಿದರು. ಕ್ರಮೇಣ ವಿಷ್ಣುವು ಪಶ್ಚಿಮ ಭಾರತದ ವೃಷ್ಣಿ ಬಣ್ಣದ ಕಥಾನುಕತಿತ ನಾಯಕನಾದ ಕೃಷ್ಣ-ವಾಸುದೇವನೆಂದೂ ಪರಿಗಣಿಸಲ್ಪಟ್ಟನು. ಕೃಷ್ಣ ಹಾಗೂ ವಿಷ್ಣುಗಳು ಒಂದೇ ಎಂದು ತೋರುವ ಸಲುವಾಗಿ ಮಹಾಭಾರತ ಮಹಾಕಾವ್ಯವನ್ನು ಪುನರ್‌ರಚಿಸಲಾಯಿತು. ಸುಮಾರು ಕ್ರಿ. ಪೂ. ೨೦೦ರ ವೇಳೆಗೆ ಈ ಮೂರು ವಾಹಿನಿಗಳ ಭಕ್ತರು ಹಾಗೂ ದೇವತೆಗಳು ಒಂದಾದರು. ಇದರ ಪರಿಣಾಮವಾಗಿ ಭಾಗವತ ತತ್ವ ಅಥವಾ ವೈಷ್ಣವ ಮತಧರ್ಮವು ರೂಪುಗೊಂಡಿತು.

ವಿಷ್ಣು-ನಾರಾಯಣ-ಕೃಷ್ಣ ಎಂಬ ಪದಗಳು ಕಾಲಾನಂತರದಲ್ಲಿ ಬೇರೆ ಬೇರೆ ರೂಪಗಳನ್ನು ಪಡೆದವು. ಭಾಗವತ ಪಂಥದ ಅಭ್ಯುದಯವು ಮಧ್ಯಯುಗೀನ ಕಾಲಘಟ್ಟ ಕರ್ನಾಟಕದಲ್ಲಿ ವಿಶಿಷ್ಟ ಪರಂಪರೆಯನ್ನು ರೂಪಿಸಿತು. ಅಷ್ಟೇ ಅಲ್ಲ ಭಾಗವತ ಮತಾವಲಂಬಿಗಳು ಶ್ರೀ ಕೃಷ್ಣನನ್ನು ಆರಾಧ್ಯ ದೈವವೆಂದು ಕೊಂಡಾಡಿದರು.

*ವಿವರಗಳಿಗೆ ನೋಡಿ: ಆರ್.ಎಸ್. ಶರ್ಮ ೨೦೦೭ ಪ್ರಾಚೀನ ಭಾರತ ಪುಟ. ೨೧೩*

**೫೬೬. ಭಾರ್ಗವ ಪರ್ಣಶಾಲೆ**

*................ಭಾರ್ಗವ ಪರ್ಣಶಾಲೆಯೊಳೆಡೆಮಾಡಿಕೊಂಡು*
*ಬ್ರಹ್ಮಲೋಕ ಮಿರ್ಪಂತಿರ್ದ ಬ್ರಹ್ಮಸಭೆಯೊಳಗೆ*
*ದೇವ ಬ್ರಾಹ್ಮಣರಾಗಿರ್ದರನ್ನೆಗಂ............ (ಪಂಪ ಭಾರತ ೩-೫೭)*

................ಆ ಪಟ್ಟಣವನ್ನು ಪ್ರವೇಶಿಸಿ ಎಲ್ಲಿಯೋ ಬೀಡು ಬಿಡಲು ಅವಕಾಶ

ದೊರೆಯುದೆ ಒಂದು ಕುಂಬಾರನ ಗುಡಿಸಲಿನಲ್ಲಿ (ಭಾರ್ಗವ ಪರ್ಣಶಾಲೆ) ಉಳಿದುಕೊಂಡು ಬ್ರಹ್ಮಸಭೆಯಲ್ಲಿ ದೇವ ಬ್ರಾಹ್ಮಣರಂತಿದ್ದರು.

ಭಾರ್ಗವ ಪರ್ಣಶಾಲೆಯೆಂದರೆ ಕುಂಬಾರನ ಗುಡಿಸಲು. ಇದು ಆ ಕಾಲದ ಕುಂಬಾರರ ಪರಿಸ್ಥಿತಿಯನ್ನು ವಿವರಿಸುತ್ತದೆ. ಕುಂಬಾರರು ಗುಡಿಸಲಲ್ಲಿ ವಾಸ ಮಾಡಿದರೆ ಸ್ಥಾನಕ್ಕೆ ಕುಂದು ಎಂಬ ಭಾವನೆಯೂ ಇಲ್ಲಿ ವ್ಯಕ್ತವಾಗಿದೆ.

**೫೬೭. ಭೂಮಿಯ ಬಿಡುವುದು**

*ಅಂತುಮಲ್ಲದೆಯುಂ ಆತ್ಮಾರ್ಥಂ ಪೃಥಿವೀಂ ತ್ಯಜೇತ್, ತನ್ನ ನಿಮಿತ್ತಮಾಗಿ ಭೂಮಿಯಂ ಬಿಡುವುದೆಂಬ ನೀತಿಶಾಸ್ತ್ರಮುಂಟು. ತಾನುಳ್ಳಡೆ ಮೂರು ಲೋಕಮುಂಟು ಎಂಬ ನಾಣ್ನುಡಿಯುಂಟು. ಆತ್ಮರಕ್ಷಣಮೇ ಪರಮ ಪುರುಷಾರ್ಥಮೆಂಬ ಸರ್ವಜನಸಮ್ಮತಮಂ ಕೇಳ್ದುಂ.............*

*(ಕರ್ಣಾಟಕ ಪಂಚತಂತ್ರ, ಭೇದಪ್ರಕರಣ, ೩ ವಚನ)*

'ಆತ್ಮಾರ್ಥಂ ಪೃಥಿವೀಂ ತ್ಯಜೇತ್' ಎಂಬ ಸಂಸ್ಕೃತ ವಾಕ್ಯದ ವಿಸ್ತರಣೆಯಿದೆ. ತಾನುಳ್ಳಡೆ ಮೂರು ಲೋಕಮುಂಟು ಎಂಬ ನಾಣ್ನುಡಿಯನ್ನು ಪಂಚತಂತ್ರದಲ್ಲಿ ವಿಸ್ತರಿಸಲಾಗಿದೆ. ಆತ್ಮದ ರಕ್ಷಣೆಯೇ ನಿಜವಾದ ಪುರುಷಾರ್ಥ. ಓದು ಸರ್ವಜನ ಸಮ್ಮತವಾದುದೂ ಹೌದು. ಆತ್ಮದ ಕಾರಣಕ್ಕೆ ಭೂಮಿಯನ್ನು ತ್ಯಜಿಸುವುದು ತಪ್ಪಲ್ಲ. ಆತ್ಮರಕ್ಷಣೆಯು ಮನುಷ್ಯನಿಗೆ ಪ್ರಧಾನವೆನ್ನುವುದು ಇದರ ಭಾವಾರ್ಥ.

ಭಂಡಾರವು ಸವೆದರೆ; ಪ್ರಜೆಗಳು ಕೆಟ್ಟರೆ, ಹಗೆಯು ಸಮೀಪದಲ್ಲಿದ್ದರೆ ಆ ದೇಶವನ್ನು ಬಿಟ್ಟು ಹೋಗಬೇಕು ಎಂಬ ಮಾತು ಪಂಚತಂತ್ರದಲ್ಲಿ ಬರುತ್ತದೆ. (ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ, ೧೪ ವಚನ)

**೫೬೮. ಭೈಕ್ಷ್ಯ**

*"ಲೋಗರ ಮನೆಗಳೊಳ್ ಭೈಕ್ಷ್ಯಮಂ ಬೇಡಿ ಮನೆ ಮನೆಯಂ ತೊೞಲ್ದು"*

*(ಡಿ.ಎಲ್. ನರಸಿಂಹಾಚಾರ್ ೨೦೦೯ ಪುಟ. ೧೬೭)*

'ಬೈಕಂದಿರಿದಿನ್ನಪ್ಪೊಡೆ' ಎಂದು ವಡ್ಡಾರಾಧನೆಯಲ್ಲಿ ಬರುತ್ತದೆ. ಬೈಕಂದಿರಿದು ಎಂದರೆ ಭಿಕ್ಷೆಗಾಗಿ ತಿರುಗಿ ಎನ್ನುವ ಅರ್ಥ. ಅಗ್ನಿ ಭೂತಿಯು ಭೈಕ್ಷಾನಿಮಿತ್ತ ಚರಿಗೆಗೆ ತೆರಳಿದ ಉಲ್ಲೇಖವು ವಡ್ಡಾರಾಧನೆಯಲ್ಲಿ ಬರುತ್ತದೆ.

ಭಿಕ್ಷೆಯಲ್ಲಿ ಬೇರೆ ಬೇರೆ ವಿಧಗಳಿವೆ. ಒಂದು ಯತಿಗಳು ಬೇಡುವ ಭಿಕ್ಷೆ. ಇದನ್ನು ಚರಿಗೆಯೆಂದು ಕರೆಯುತ್ತಾರೆ. ಇನ್ನೊಂದು ಬಡತನದ ಕಾರಣಕ್ಕಾಗಿ ಬೇಡುವ ಭಿಕ್ಷೆ. ಈ ಎರಡರ ಉಲ್ಲೇಖವೂ ವಡ್ಡಾರಾಧನೆಯಲ್ಲಿ ಬರುತ್ತದೆ. ಯತಿಗಳು ಬೇಡುವ ಭಿಕ್ಷೆಯು ಸೀಮಿತವಾದುದು. ಎಷ್ಟು ಬೇಕೋ ಅಷ್ಟನ್ನು ಮಾತ್ರ ಅವರು ಭಿಕ್ಷೆ ಬೇಡುತ್ತಾರೆ. ಬಡತನದಿಂದ ಬೇಡುವ ಭಿಕ್ಷೆಗೆ ಮಿತಿಯಿಲ್ಲ.

೩೭೯. ಭೋಜನ

*ಪ್ರಾಸುಕಮಪ್ಪಾಹಾರಮನಾದಮಾನುಂ ಭಕ್ತಿಯಿಂದಂ ಬಡ್ಡಿಸೆಯುಂಡಿನ್ ಬಟಿಕ್ಕೆ........*

*(ಡಿ.ಎಲ್.ಎನ್. ವಡ್ಡಾರಾಧನೆ. ಪು. ೧೭)*

ಸದ್ಯ ಮದುವೆಯಾದ ಹುಡುಗಿಯರು, ಮದುವೆಯಾಗದ ಹುಡುಗಿಯರು, ರೋಗಿಗಳು ಮತ್ತು ಗರ್ಭಿಣಿಯರು ಇವರಿಗೆ ಮೊದಲು ಊಟ ನೀಡಬೇಕು ಎಂದು ಮನು ಹೇಳುತ್ತಾನೆ.

ಅನ್ನ, ವಸನ, ವಸತಿ ಇವು ಮೂರು ಮನುಷ್ಯನ ಪ್ರಮುಖ ಸಮಸ್ಯೆಗಳಾಗಿವೆ. ದೇಹಧಾರಣೆಗೆ ಭೋಜನವು ಅತ್ಯಗತ್ಯ. ಸಾಲ ಮಾಡಿಯಾದರೂ ತುಪ್ಪ ತಿನ್ನು ಎನ್ನುವುದು ಒಂದು ಮತ. ಅನ್ನ, ವಸನ, ವಸತಿ ನಿರಾಕರಣೆಯು ಜೈನಧರ್ಮದ ಪ್ರಮುಖ ನಿಲುವಾಗಿದೆ. ಇವೆರಡೂ ಜೀವನದ ದೃಷ್ಟಿಕೋನಗಳನ್ನು ವಿವರಿಸುತ್ತವೆ.

*ವಿವರಗಳಿಗೆ ನೋಡಿ: ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೧-೧೧೪.*

# ಮ

೩೮೦. ಮಂಡಲ

*ತಜಿಸಂದು ಲಾಟರೊಳ್ತ*
*ತ್ತಿ ಜಿದೇಜಿಂ ಪೇಟ್ ಕೇಳ್ದು **ಮಂಡಲ**ಮಿನ್ನುಂ*
*ತಿಱುನೀರಿಕ್ಕುವುದೆನಿಸಿದ*
*ತಜಿಸಲವಿನ ಚಲದ ಬಲದ ಕಲಿ ನರಸಿಂಹಂ.. (ಪಂಪಭಾರತ ೧-೩೩)*

ರಾಜ್ಯವೆನ್ನುವುದನ್ನು ಪಂಪನು ಮಂಡಲವೆಂದು ಕರೆಯುತ್ತಾನೆ.

ರಾಜಧಾನಿಯ ಸುತ್ತಮುತ್ತಣ ಭಾಗವನ್ನು ರಾಜನೇ ನೇರವಾಗಿ ಆಳುತ್ತಿದ್ದು, ಉಳಿದ ರಾಜ್ಯಗಳನ್ನು ಮಂಡಲಗಳಾಗಿ ವಿಂಗಡಿಸುತ್ತಿದ್ದನು. ಹಾಗೆ ವಿಂಗಡಿಸಿ ಒಂದೊಂದು ಮಂಡಲಕ್ಕೂ ಮಂಡಲೇಶ್ವರನನ್ನು ನೇಮಿಸುತ್ತಿದ್ದನು.

ಪೊನ್ನನ ಶಾಂತಿಪುರಾಣದ ಮಂಡಲಿಕನು ಪಟ್ಟಣವನ್ನು ಆಳುವ ವಿಷಯ ಬರುತ್ತದೆ. (೧-೬೭)

ಊರನ್ನು (ಗ್ರಾಮವನ್ನು) ಆಳುವವನು ಗಾವುಂಡ. ಮಂಡಲವನ್ನು ಆಳುವವನು ಮಂಡಲಿಕ. ರಾಜನ ಅನಂತರದ ಮಹಾಮಂಡಲೇಶ್ವರನದು. ಅದರ ಅನಂತರ ಮಂಡಲೇಶ್ವರ. ಇದು ರಾಜಸತ್ತೆಯ ಅಧಿಕಾರದ ವಿಭಾಗ ಕ್ರಮಗಳನ್ನು ಸೂಚಿಸುತ್ತವೆ. ಯಾರು ಮಂಡಲವನ್ನು ಆಳುತ್ತಾರೋ ಅವರು ಮಂಡಲಿಕರು.

ಚಕ್ರವರ್ತಿಯ ಅನಂತರ ಬರುವವನು ಮಹಾಮಂಡಳಿಕ. ಅವನ ಅಧಿಕಾರವು

ಚಕ್ರವರ್ತಿಗಿಂತ ಕಡಿಮೆ. ಮಹಾಮಂಡಳಿಕನು ಚಕ್ರವರ್ತಿಯ ಕೈ ಕೆಳಗಿನವನೂ ಹೌದು.

'ಮಂಡಲ'ವೆನ್ನುವುದು ಪ್ರದೇಶವನ್ನು ಗುರುತಿಸಿಕೊಳ್ಳುವ ಮಾತು. ವಸಾಹತು ಪೂರ್ವದ ರಾಜಕೀಯ ಪರಿಭಾಷೆಯನ್ನು ರನ್ನನು ಇಲ್ಲಿ ಹೇಳಿದ್ದಾನೆ :

ಆರಂಭಕಾಲದಲ್ಲಿ ಸಾಮಂತರಾಜರ ಆಶ್ರಯದಿಂದ ಅಷ್ಟಷ್ಟೇ ಏಳಿಗೆ ಹೊಂದುತ್ತಾ ಬಂದು, ಮಂಡಲೇಶ್ವರ (ಚಾವುಂಡರಾಯ) ನಿಂದ ಅತ್ಯಂತವಾದ ಅಭ್ಯುದಯವನ್ನು ಪಡೆದ ಕವಿ ರನ್ನನು ಚಕ್ರವರ್ತಿಯಿಂದ ಉತ್ತರೋತ್ತರವಾಗಿ ಅಭಿವರ್ಧಿಸಿದನು.

ಸಾಮಂತರಾಜರು ಮಂಡಲೇಶ್ವರನ ಅನಂತರದವರು. ಚಕ್ರವರ್ತಿ ಪದವಿ – ಅನಂತರ ಮಂಡಲೇಶ್ವರ ಅದರ ಸಾಮಂತರ ರಾಜರು – ಹೀಗೆ ಮುಂದುವರಿಯುತ್ತದೆ. ರನ್ನನು ತನ್ನ ಒಡೆಯನನ್ನು ಈ ರೀತಿಯಾಗಿ ಗುರುತಿಸಿದ್ದಾನೆ.

ಅವರವರ ಆಳಿಕೆಯ ಪ್ರದೇಶದಲ್ಲಿ ಅಧಿರಾಜರಿಗಿದ್ದ ಸ್ಥಾನಮಾನಗಳೇ, ಗೌರವಗಳೇ ಸಾಮಂತರಿಗೂ ಇದ್ದವು. ಅಧಿರಾಜರಂತೆಯೇ ಇವರು ಮಂತ್ರಿಗಳನ್ನೂ, ಸೇನೆಯನ್ನೂ ಇತರ ಅಧಿಕಾರಿವರ್ಗವನ್ನೂ ಪಡೆದಿದ್ದರು. ಸಾಮಂತರಂತೆಯೇ ಮಂಡಲೇಶ್ವರರು ಅಧಿರಾಜನ ಅಧೀನರು, ತಮ್ಮ ಆಳಿಕೆಯ ಪ್ರದೇಶದಲ್ಲಿ ಸರ್ವಾಧಿಕಾರಿಗಳು, ಆದರೂ ಇಬ್ಬರಿಗೆ ಒಂದು ಸಣ್ಣ ವ್ಯತ್ಯಾಸವಿರುವಂತೆ ಕಾಣಿಸುತ್ತದೆ. ಸಾಮಂತರು ಯಾವುದೇ ಪ್ರಾಂತವನ್ನು ಮೊದಲಿನಿಂದಲೂ ಆಳುತ್ತಾ ಬಂದಿರತಕ್ಕವರು, ಅಧಿರಾಜನು ತಮ್ಮನ್ನು ಗೆದ್ದಿರುವುದರಿಂದ ಅವನ ಅಧೀನರು ಮತ್ತು ಸಮಯ ಸಿಕ್ಕಿದಾಗ ಸ್ವತಂತ್ರರಾಗಲು ಹವಣಿಸುವವರು. ಮಹಾಮಂಡಲೇಶ್ವರರನ್ನು ರಾಜ್ಯದ ಬೇರೆ ಬೇರೆ 'ಮಂಡಲ' ಅಥವಾ ಭಾಗಗಳಿಗೆ ಅಧಿರಾಜನು ನೇಮಿಸುತ್ತಿದ್ದಂತೆ ಕಾಣುತ್ತದೆ. ಇದಕ್ಕೆ ಸ್ಪಷ್ಟ ನಿದರ್ಶನವು ಹೆಗ್ಗಡದೇವನಕೋಟೆ ತಾಲ್ಲೂಕಿನ ಶಾಸನದಲ್ಲಿದೆ. ಕುಡಿಯರ ಒಡೆಯನೂ, ನುಗುನಾಡ ಅಧಿಪತಿಯೂ ಆದ ರವಿಗನಿಗೆ ಚೋಳಚಕ್ರವರ್ತಿಯು ಸತ್ತಿಗೆ, ಶಂಖ, ಝಲ್ಲರಿ ಮುಂತಾದುವನ್ನು ಕೊಟ್ಟು 'ಮಂಡಳೀಕ ಪದವಿ'ಯನ್ನು ದಯಪಾಲಿಸಿದಂತೆ ಆ ಶಾಸನವು ಹೇಳುತ್ತದೆ.

ಮಂಡಲೇಶ್ವರ ಮತ್ತು ಸಾಮಂತರಿಗೂ ರಾಜರಂತೆಯೇ ಪ್ರತ್ಯೇಕ ಧ್ವಜ, ಲಾಂಛನಗಳಿದ್ದುವು. ಅವರೂ ರಾಜರಂತೆ ತಮ್ಮ ತಮ್ಮ ಆಳಿಕೆಯ ಭಾಗಗಳಲ್ಲಿ ದೇಶಸಂಚಾರವನ್ನು ಕೈಗೊಂಡು ಜನರ ಕಷ್ಟಸುಖಗಳನ್ನು ವಿಚಾರಿಸುತ್ತಿದ್ದ ಪ್ರಸ್ತಾಪ ಅಲ್ಲಲ್ಲಿ ಬಂದಿದೆ. ಯುದ್ಧದ ಸಮಯದಲ್ಲಿ ಇವರು ತಮ್ಮ ಅಧಿರಾಜನ ಸಹಾಯಕ್ಕೆ ಹೋಗಿ ಅನೇಕ ದೇಶಗಳನ್ನು ಗೆದ್ದು ಕೊಟ್ಟದ್ದು ಉಂಟು. ಆದ್ದರಿಂದಲೇ ಹಲವು ಸಾಮಂತರನ್ನು ಚಕ್ರವರ್ತಿಯು ಕಟ್ಟಿಕೊಂಡ ನಚ್ಚಿನ ಅಲಗುಗಳೆಂದು ವರ್ಣಿಸಿರುವುದು. ಮಹಾ ಮಂಡಲೇಶ್ವರ ಎನ್ನುವುದು ಮಂಡಳೇಶ್ವರ ಎನ್ನುವ ಪದವಿಗಿಂತ ದೊಡ್ಡದು ಎಂಬುದು ಸ್ಪಷ್ಟವಾಗಿದೆ. ಒಬ್ಬ ಮಹಾಮಂಡಳೇಶ್ವರನ ಅಧೀನದಲ್ಲಿ ಹಲವು ಮಂಡಳೇಶ್ವರರಿರುತ್ತಿದ್ದರೆಂದು ಕಾಣುತ್ತದೆ. ಶ್ರೀಮನ್ಮಹಾಮಂಡಳೇಶ್ವರ ಜಗದೇಕಮಲ್ಲ ಮಲ್ಲದೇವನು ನಲವತ್ತು ನಾಲ್ವರು ಮಂಡಳಿಕರ ತಲೆಗಳನ್ನು ತೆಗೆದುಕೊಂಡ ಶೂರನಾಗಿದ್ದನೆಂದು ಶಾಸನವೊಂದು

ಹೇಳುತ್ತದೆ. "(ನಲವತ್ತು ನಾಲ್ವರ್ ಮಂಡಳಿಕರ ತಲೆಗೊಂಡ ಗಂಡ)" ಮಂಡಲೇಶ್ವರರು ಮಹಾಮಂಡಲೇಶ್ವರನಿಗೆ ಕಪ್ಪವನ್ನು ಕೊಡುತ್ತಿದ್ದಂತೆ ಶಾಸನವೊಂದರಿಂದ ತಿಳಿದುಬರುತ್ತದೆ. ಮಹಾಮಂಡಲೇಶ್ವರರು ತಮ್ಮ ಆಳಿಕೆಯ ಪ್ರದೇಶದ ಆದಾಯದ ಒಂದು ಭಾಗವನ್ನು ಚಕ್ರವರ್ತಿಗೆ ಸಲ್ಲಿಸುತ್ತಿದ್ದರು.

*ವಿವರಗಳಿಗೆ ನೋಡಿ: ಡಾ. ಎಂ. ಚಿದಾನಂದಮೂರ್ತಿ ೨೦೦೮*
*ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪುಟ. ૩૨૨-૩૨೮-૩૨೯.*

### ೫೭೧. ಮಂತ್ರ

*"ಆಳೋಚಿಸಿ ನಿಶ್ಚಿತ**ಮಂತ್ರ**ರಾಗಿ" (ಪಂಪ ಭಾರತ ೧-೮೪ ವ)* ಮಂತ್ರವೆಂದರೆ *ಇಲ್ಲಿ ಆಲೋಚನೆ.*

*ಮಂತ್ರವು ಹೊಱಪಟ್ಟಲ್ಲಿ ಕಾರ್ಯವು ಕಿಡುವುದು ; ಅದು ಕಾರಣಮದು ಎಲ್ಲಾ ಕಡೆಯಿಂದಲೂ ಗೋಪ್ಯವಾಗಿ ರಕ್ಷಿಸಲ್ಪಡತಕ್ಕದ್ದು*

*(ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ, ೧೪೨ ವಚನ)*

*ಮಂತ್ರವನ್ನು ರಹಸ್ಯವಾಗಿಟ್ಟುಕೊಂಡಿರುವುದು ಅಗತ್ಯ. ಅದನ್ನು ಹೊರಗೆಡಹಿದರೆ ಕಾರ್ಯ ಕೆಡುವುದು. ಬಿಲ್ಗಾಱನೆಚ್ಚಂಬು ಒರ್ಬನ ಕೊಲ್ವುದೋ ಕೊಲ್ಲದೋ ಸಂದೇಹವು; ಬುದ್ಧಿವಂತರ ಮಂತ್ರವು ಅರಸುಸಹಿತವಾಗಿರ್ದ ರಾಜ್ಯವನ್ನೇ ಕಿಡಿಸುವುದು. (ಕರ್ಣಾಟಕ ಪಂಚತಂತ್ರ, ವಿಶ್ವಾಸ ಪ್ರಕರಣ, ೨೧೫ ಶ್ಲೋಕ)*

*ಬಾಣವು ಒಬ್ಬನನ್ನು ಕೊಲ್ಲುವುದೋ - ಇಲ್ಲವೋ ಸಂದೇಹ. ಆದರೆ ಬುದ್ಧಿವಂತರ ಮಂತ್ರವು ಅರಸು ಸಹಿತವಾಗಿರ್ದ ರಾಜ್ಯವನ್ನೇ ಕಿಡಿಸುವುದು.*

*ಉಗುರಿಂದ ಚಿವುಟಲಪ್ಪುದಂ ಕೈಮೀಱಿದೊಡೆ ಕೊಡಲಿಯಿಂದೆಯುಂ ಕಡಿಯಲರಿದು.*

*(ಕರ್ಣಾಟಕ ಪಂಚತಂತ್ರ, ಮಿತ್ರಕಾರ್ಯ ಪ್ರಕರಣ, ಪು. ೧೯೯)*

ಉಗುರಿನಿಂದ ಚಿವುಟಲು ಸಾಧ್ಯವಾಗಬಹುದಾದ್ದನ್ನು ಮೀರಿದರೆ ಕೊಡಲಿಯಿಂದಲೂ ಕಡಿಯಲಾಗದು. ಇದು ನಾಣ್ಣುಡಿ.

ಉಪನಿಷತ್ತುಗಳಲ್ಲಿ ಮಂತ್ರಗಳು ನಾಲ್ಕು ತೆರನಾಗಿವೆ: ಮೂರು ಪ್ರಧಾನವಾಗಿ ಯಜ್ಞಕ್ಕೆ ಸಂಬಂಧಿಸಿದವು ೧) ಪಠಿಸಲು ಯೋಗ್ಯವಾದ ಪದ್ಯಗಳು (ಋಚ್), ೨) ಹಾಡಲು ಯೋಗ್ಯವಾದ ಪದ್ಯಗಳು (ಸಾಮನ್) ಮತ್ತು ೩) ಗದ್ಯರೂಪವಾದ ಪದ ಸಮುದಾಯ (ಯಜಸ್) ಮತ್ತು ಕೊನೆಯದಾಗಿ ೪) ಮೊದಲನೆಯ ಮತ್ತು ಮೂರನೆಯ ವಿಧಗಳಿಂದ ರೂಪಭೇದವಿಲ್ಲದಿದ್ದರೂ 'ಮಂತ್ರ' (ಯಕ್ಷಿಣೀ ವಿದ್ಯೆ) ಮಾಟ ಮತ್ತು ಸಂಸ್ಕಾರ (ವಿವಾಹ, ಅಭಿಷೇಕ, ಪ್ರೇತಕರ್ಮ ಮುಂತಾದವು)ಗಳಿಗೆ ಸಂಬಂಧಿಸಿದುವು. ಸಂಧಿನಿಯಮಗಳನ್ನನುಸರಿಸಿ ಸುವ್ಯವಸ್ಥಿತವಾದ ಈ ಮೇಲೆ ಹೇಳಿದವುಗಳೊಂದೊಂದರ ಒಟ್ಟು ಕೂಡಿಸಿದ ರೂಪವೇ ಸಂಹಿತೆ - ಋಗ್ವೇದಸಂಹಿತೆ, ಸಾಮವೇದಸಂಹಿತೆ, ಯಜುರ್ವೇದಸಂಹಿತೆ (ಬ್ರಾಹ್ಮಣ ಭಾಗ ಸೇರಿಯೇ ಅಥವಾ ಸೇರದೆಯೇ ಇದೆಯೇ

ಎಂಬುದರ ಆಧಾರದಿಂದ "ಕೃಷ್ಣ" ಮತ್ತು "ಶುಕ್ಲ") ಮತ್ತು ಅಥರ್ವವೇದ ಸಂಹಿತೆ. ಇವುಗಳನ್ನವಲಂಬಿಸಿದ "ಬ್ರಾಹ್ಮಣ"ಗಳು ಯಜ್ಞಗಳನ್ನು ವಿಸ್ತರಿಸಿ ಪ್ರಶಂಸಿಸುವ ಗದ್ಯರಚನೆಗಳು, ಇವು ಒಂದೊಂದು ಸಂಹಿತೆಗೂ ಸೇರಿಕೊಂಡಿದ್ದು ಮುಂದಿನ ಅಧ್ಯಾಯದಲ್ಲಿ ವಿವರಿಸಲಾಗುವ ತರ್ಕಾತೀತವೂ ತಾತ್ವಿಕವಿಷಯಕವೂ ಆದ ಅರಣ್ಯಕಗಳು ಮತ್ತು ಉಪನಿಷತ್ತುಗಳನ್ನು ತಮ್ಮೊಳಗೆ ಹೊಂದಿವೆ. ಪ್ರತಿಯೊಂದು ಸಂಹಿತೆಯೂ ಕೆಲವು ಬ್ರಾಹ್ಮಣಗಳೂ ಕಾಲಕ್ರಮದಲ್ಲಿ ಶಾಖಾ ಭೇದಗಳನ್ನು ಹೊಂದಿದವು. ಮಂತ್ರಗಳು ಪವಿತ್ರವಾದವು ಎಂಬ ನಂಬಿಕೆಯಿದೆ. ಆರಾಧನೆಯಲ್ಲಿ ಮಂತ್ರಗಳು ಮಹತ್ವದ ಪಾತ್ರವನ್ನು ವಹಿಸುತ್ತದೆ. "ದೈವ ಮಂತ್ರಾಧೀನಂ" ಎಂಬ ಸೂತ್ರಸಿದ್ಧ ವಾಕ್ಯವಿದೆ.

'ಬ್ರಹ್ಮ' ಎಂಬ ಶಬ್ದವು ಋಕ್ ಸಂಹಿತೆಯಲ್ಲಿ 'ಮಂತ್ರ' ಎಂಬ ಅರ್ಥಕ್ಕೆ ಪರ್ಯಾಯವಾದ ಪದವಾಗಿದೆ.

*ವಿವರಗಳಿಗೆ ನೋಡಿ: ಸ್ವಾಮಿ ರಂಗನಾಥಾನಂದ ೧೯೭೪ ಉಪನಿಷತ್ತು ಸಂದೇಶ*
*ಡಿ.ವಿ.ಜಿ. ೧೯೯೬ ಭಗವದ್ಗೀತೆ*
*ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳವರು ೧೯೭೩ ತೈತ್ತಿರೀಯೋಪನಿಷತ್ತು*
*ಶೇಷ ನವರತ್ನ ೧೯೮೯ ನಾಲ್ಕು ವೇದಗಳು ಪುಟ. ೭೯*

**೫೭೨. ಮಂತ್ರಾಲೋಚನೆ**

ಮಂತ್ರಿಯೊಂದಿಗೆ ರಾಜನು ಏಕಾಂತದಲ್ಲಿ ಚರ್ಚಿಸುವುದನ್ನು ಮಂತ್ರಾಲೋಚನೆಯೆಂದು ಕರೆಯುತ್ತಾರೆ. ಮಂತ್ರಾಲೋಚನೆಯು ಗೌಪ್ಯದ್ದು. ಪ್ರಾಚೀನ ರಾಜಕೀಯದಲ್ಲಿ ರಾಜ ಮಂತ್ರಿಯ ಸಂಬಂಧವು ಗಟ್ಟಿಯಾದುದು. ಗೌಪ್ಯದ ಅನೇಕ ಸಂಗತಿಗಳನ್ನು ಮಂತ್ರಿಯೊಂದಿಗೆ ರಾಜನು ಸಮಾಲೋಚಿಸುತ್ತಾನೆ. ಪ್ರಾಚೀನ ರಾಜಕೀಯ ವ್ಯವಸ್ಥೆಯಲ್ಲಿ ರಾಜನು ಮಂತ್ರಿ, ಸೇನಾಧಿಪತಿ, ಪುರೋಹಿತರೊಂದಿಗೆ ಮಂತ್ರಾಲೋಚನೆ ಮಾಡಿ ನಿರ್ಧಾರಕ್ಕೆ ಬರುತ್ತಿದ್ದರು. ಆದರೆ ಇದಕ್ಕೆ ಲಿಖಿತ ರೂಪವಿರುತ್ತಿರಲಿಲ್ಲ.

(ಶಾಂತಿಪುರಾಣ ೨-೮೧ ವ)

**೫೭೩. ಮಂತ್ರಿ**

*ಆರ್ ಕೆಲಂಬರ್ ನೀತಿಕುಶಲರ್ ದಂಡಸಾಹಸವ ಯವಹ ಅಸಾಧ್ಯಮಪ್ಪ ಕಾರ್ಯಂಗಳಂ ಸಾಮದಿಂದವೆ ಮಾಡಿ ನೃಪಂಗೆ ಸಂತೋಷಬಡಿಸುವರ್ ಅವರೀಗಲೆ ಮಂತ್ರಿಗಳ್ ಆರ್ ಕೆಲಂಬರ್ ತೆಜಿನಜೆಯದೆ ನಿಸ್ಸಾರಮಾಗಿ ಅಲ್ಪ ಫಲವಹಂತಹವನೆ ಮಾಡಲಿಚ್ಛೆಸಿಹರ್ ಅವರ್ ದಂಡಾಧಮರೆನಿಸಿಕೊಂಬರ್; ಅವರ ದುರ್ಣಯ ಚೇಷ್ಟೆಗಳಿಂದ ನೃಪನೈಶ್ವರ್ಯಂ ತೊಲೆಯಲ್ಲಿ ತೂಗಿಸಿ ಕೊಂಬುದು.*

*(ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ, ವಚನ ೧೨೦)*

ನೀತಿ ಕುಶಲರಾದವರು ದಂಡ-ಸಾಹಸಮಯವಾದ ಅಸಾಧ್ಯ ಕಾರ್ಯಗಳನ್ನು ಸಾಮದಿಂದ ಮಾಡಿ ನೃಪನನ್ನು ಸಂತೋಷಪಡಿಸುವರೋ ಅವರೇ ನಿಜವಾದ

ಮಂತ್ರಿಗಳು. ಯಾರು ಕ್ರಮವನ್ನರಿಯದೆ ನಿಸ್ಸಾರವಾದ ಅಲ್ಪ ಫಲವನ್ನುಂಟು ಮಾಡುವರೋ ಅವರು ದಂಡಾಧಮರೆನ್ನಿಸಿಕೊಳ್ಳುವರು. ಅವರ ದುರ್ನೀತಿಯಿಂದಾಗಿ ರಾಜನ ಐಶ್ವರ್ಯವು ತೊಲೆತೂಗಿಸಿಕೊಳ್ಳುವುದು (ಗದ್ಯಾನುವಾದ, ಗುಂಡ್ಮಿ ಚಂದ್ರಶೇಖರ ಐತಾಳ).

ಅರಸಿಂಗೆ ಹಿತವ ಮಾಡುವಾತಂ ಪ್ರಜೆಗೆ ಹಗೆಯಹನು; ಪ್ರಜೆಗೆ ಹಿತವ ಮಾಡುವಾತನನರಸುಗಳ್ ಕೈಪಿಡಿಯರು; ಇಂತುಮಹಂಥ ವಿರೋಧಂ ಸಮನಾಗಿ ಕಾಣಲ್ಪಡುತ್ತುಂ ಇರಲು ನೃಪಂಗಂ ಪ್ರಜೆಗಂ ಹಿತವಹಂತು ಮಾಡುವ **ಮಂತ್ರಿ** ದುರ್ಲಭನು

(ಪಂಚತಂತ್ರ ಪುಟ. ೧೬೦)

ಅರಸನಿಗೆ ಹಿತ ಮಾಡುವವನು ಪ್ರಜೆಗೆ ಹಗೆಯಾಗುವನು, ಪ್ರಜೆಗೆ ಹಿತಮಾಡುವವನು ಅರಸನಿಗೆ ಹಗೆ ಯಾಗುವುದು. ಈ ರೀತಿಯಿರುವ ವಿರೋಧವು ಸಮಾನವಾಗಿ ಕಂಡಿರಲು ನೃಪನಿಗೆ ಪ್ರಜೆಗೆ ಹಿತವಾಗುವಂತೆ ಮಾಡುವ ಮಂತ್ರಿ ದುರ್ಲಭವೆಂದು ಕರ್ಣಾಟಕ ಪಂಚತಂತ್ರದಲ್ಲಿ ಹೇಳುತ್ತದೆ. (ಭೇದ ಪ್ರಕರಣ, ೯ ವಚನ)

ವಡ್ಡಾರಾಧನೆಯ 'ಅಯ್ನೂರ್ವರ್ ರಿಸಿಯರ್ಕಳ ಕತೆಯಲ್ಲಿ ಪುರೋಹಿತ ವ್ಯಾಳ ಮತ್ತು ಮಂತ್ರಿದಂಡಕನ ಕತೆಯು ಬರುತ್ತದೆ.

(ಡಿ.ಎಲ್. ನರಸಿಂಹಾಚಾರ್ ೨೦೦೯ ಪುಟ.೨೧೯)

*ಕನಸಿನೊಳಿಂದು ಮೂವರುಮ**ಮಾತ್ಯರಸು**ಂಗೊಳೆ ಕಟ್ಟಿ ತಂದ ..................*

*(ಆದಿಪುರಾಣ ೩ – ೪೩)*

ಅಮಾತ್ಯರು ಎಂದರೆ ಮಂತ್ರಿಗಳು ಎಂದು ಅರ್ಥ. ಹಿಂದಿನ ರಾಜಕೀಯ ವ್ಯವಸ್ಥೆಯ ಚಿತ್ರಣವನ್ನು ಈ ರೀತಿಯಲ್ಲಿ ಕೊಡಬಹುದು. ರಾಜ, ಮಂತ್ರಿ, ಸೇನಾಧಿಪತಿ ಮತ್ತು ಪುರೋಹಿತ. ಈ ನಾಲ್ಕು ಮಂದಿಗಳ ಜವಾಬ್ದಾರಿಗಳು ಬೇರೆ ಬೇರೆ. ರಾಜನದು ರಾಜ್ಯಭಾರ ಮಾಡುವ ಕೆಲಸ. ಮಂತ್ರಿಯು ಅವನಿಗೆ ಸಲಹೆಯನ್ನು ನೀಡುತ್ತಾನೆ. ಸೇನಾಧಿಪತಿಯು ಸೇನೆಯ ಜವಾಬ್ದಾರಿ ಹೊರುತ್ತಾನೆ. ಪೌರೋಹಿತ್ಯದ ಕೆಲಸ ಪುರೋಹಿತನಿಗೆ, ಪುರದ ಹಿತವನ್ನು ಯಾರು ನೋಡಿಕೊಳ್ಳುತ್ತಾರೋ ಅವರು ಪುರೋಹಿತರು.

ಅಮಾತ್ಯರನ್ನು ಅರ್ಥೋಪಾದಿ, ಧರ್ಮೋಪಾಧಿ, ಕಾಮೋಪಾಧಿ, ಭಯೋಪಾಧಿ ಗಳಿಂದ ಪರೀಕ್ಷಿಸಿ ಅವರನ್ನು ನೇಮಕ ಮಾಡಿಕೊಳ್ಳಬೇಕೆಂದು ಕೌಟಲೀಯ ಅರ್ಥಶಾಸ್ತ್ರದಲ್ಲಿ ಬರುತ್ತದೆ.

ಅಂತಹ ಆಪ್ತಮಂತ್ರಿಗಳೊಡನೆ ವಿಚಾರ ಮಾಡುವಂತಹ ಎಲ್ಲ ವಿಷಯಗಳನ್ನು ವಿಮರ್ಶಿಸಬೇಕು. ಸಾಮಾನ್ಯವಾಗಿ ಸಂಧಿ, ಯುದ್ಧ, ರಾಷ್ಟ್ರಸ್ಥಿತಿ ಕಾರಣ ಉತ್ಪತ್ತಿಮೂಲ ಗಳಾದ ಖನಿ, ತನ್ನ ಮತ್ತು ರಾಜ್ಯದ ರಕ್ಷಣೆ, ಸತ್ಪಾತ್ರ ವಿನಿಯೋಗ ಮುಂತಾದ ವಿಷಯಗಳು ಚರ್ಚಿಸಲ್ಪಡತಕ್ಕವುಗಳು.

ಆ ಮಂತ್ರಿಗಳನ್ನು ಬೇರೆ – ಬೇರೆಯಾಗಿಯೂ ಒಟ್ಟಿಗೂ ಕರೆದು ಸಮಾಲೋಚನೆ

ನಡೆಸಬೇಕು. ಪ್ರತ್ಯೇಕ ವಿಚಾರದಲ್ಲಿ ಅಭಿಪ್ರಾಯವೂ, ಅವರೆಲ್ಲರ ಸಮ್ಮೇಳನದಲ್ಲಿ ವಿಮರ್ಶೆ ಸಾರಾಸಾರ ಗೌರವಲಾಘವಗಳೂ ತಿಳಿದು ಬರುವುವು. ಈ ರೀತಿ ತನ್ನ ಮತ್ತು ರಾಷ್ಟ್ರದ ಹಿತವನ್ನು ದೂರವಾಗಿ ಆಲೋಚಿಸಬೇಕು ಎಂದು ಮನು ಹೇಳುತ್ತಾನೆ.

ರಾಷ್ಟ್ರ ಸಂವಿಧಾನದಲ್ಲಿ ಸಚಿವರು ಬಹಳ ಮುಖ್ಯವಾದ ಹಾಗೂ ಅನಿವಾರ್ಯವಾದ ಅಂಗ. ದೊರೆಯು ತನ್ನ ಎಲ್ಲ ಕರ್ತವ್ಯಗಳನ್ನೂ ನೋಡಿಕೊಳ್ಳಲು ಅಸಾಧ್ಯವಾದುದರಿಂದ ಅವನು ತನ್ನ ಕರ್ತವ್ಯಗಳನ್ನು ತನ್ನ ಮಂತ್ರಿಗಳ ಮೇಲೆ ಹೊರಿಸಬೇಕು ಎಂಬುದಾಗಿ ಮಹಾಭಾರತದಲ್ಲಿ ಹೇಳಿದೆ. 'ಸಹಕಾರದಿಂದಲೇ ಪ್ರಭುತ್ವ ಸಾಧ್ಯ. ಒಂದೇ ಚಕ್ರ ಎಂದೂ ಉರುಳಲಾರದು. ಆದ್ದರಿಂದ ದೊರೆಯು ಮಂತ್ರಿಗಳನ್ನು ನೇಮಿಸಿಕೊಂಡು ಅವರ ಅಭಿಪ್ರಾಯವನ್ನು ಕೇಳಬೇಕು' ಎಂಬುದಾಗಿ ಕೌಟಿಲ್ಯ ಹೇಳಿದ್ದಾನೆ. ಕೌಟಿಲ್ಯನು ಅಮಾತ್ಯರಿಗೂ ಮಂತ್ರಿಗಳಿಗೂ ವ್ಯತ್ಯಾಸವಿದೆಯೆಂದು ಹೇಳುತ್ತಾನೆ. ಶಾಸ್ತ್ರಜ್ಞರೂ, ಅಸ್ತ್ರವಿದ್ಯಾ ಪ್ರವೀಣರೂ, ಸದ್ವಂಶೀಯರೂ, ಚೆನ್ನಾಗಿ ಪರೀಕ್ಷಿಸಲ್ಪಟ್ಟವರೂ ಆದ ಏಳೆಂಟು ಮಂತ್ರಿಗಳನ್ನು ದೊರೆಯು ನೇಮಿಸಬಹುದೆಂದು ಮನುವು ಹೇಳಿದ್ದಾನೆ.

*ವಿವರಗಳಿಗೆ ನೋಡಿ: ಯುಗಯಾತ್ರೀ ಭಾರತೀಯ ಸಂಸ್ಕೃತಿ ೧೯೭೧ ಪುಟ. ३೭೮*

*ಶ್ರೀ ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳು ೨೦೧೦ ಕೌಟಲೀಯ ಅರ್ಥಶಾಸ್ತ್ರ ಪುಟ. ೪೭*

*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೭-೫೬, ೫೭*

**೫೭೪. ಮತ**

'ಮತಾವಲಂಬಿ' ಎನ್ನುವ ಪದವು ಹಳೆಗನ್ನಡದಲ್ಲಿ ಆಗಾಗ ಉಕ್ತವಾಗಿದೆ. ವೇದದ ಕಾಲದ ಜನರು ಪೂಜಿಸಿದ ದೇವತೆಗಳ ವಿಚಾರ ಮುಂದಿನ ಭಾಗದಲ್ಲಿ ಬರುತ್ತದೆ. ಇವರ ಪೂಜೆ ಪ್ರಧಾನವಾಗಿ ಸ್ತೋತ್ರಗಳ, ನಮಸ್ಕಾರಗಳ, ಮತ್ತು ನೈವೇದ್ಯ(ಹವಿಸ್ಸು ಮುಂತಾದ)ಗಳ ಅರ್ಪಣೆ. ಮುಂದೆ ಇವು ಯಜ್ಞದ ಅಂಗಗಳಾಗಿ ಕಂಡುಬಂದರೂ ಈ ಎರಡು ಕ್ರಿಯೆಗಳಿಗೂ ಪರಸ್ಪರವಾಗಿ ಬೇರೆಯಾಗಿಯೂ ಒಟ್ಟಿಗೂ ಸ್ವತಂತ್ರವಾದ ಸ್ಥಾನ ಒಂದುಕಾಲಕ್ಕೆ ಇತ್ತೆಂಬ ಬಗೆಗೆ ಸಾಕ್ಷ್ಯವುಂಟು. ಯಜ್ಞಗಳಲ್ಲಿ ವ್ಯವಸ್ಥಿತವಾದ ವಿಧಿನಿಯಮಗಳನ್ನನುಸರಿಸಿ ಯಜುಸ್ಸುಗಳ ಉಚ್ಚಾರ, ಋಕ್ಕುಗಳ ಪಠನ, ಸಾಮಗಳ ಗಾಯನಗಳಿಂದೊಡಗೂಡಿ ವಿಧ್ಯುಕ್ತವಾಗಿ ಪ್ರತಿಷ್ಠಿತವಾದ ಒಂದು ಅಥವಾ ಅನೇಕ ಅಗ್ನಿಗಳಲ್ಲಿ ಹಾಲು, ಜೇನು, ತುಪ್ಪ, ಧಾನ್ಯಗಳು ಮತ್ತು ಅವುಗಳಿಂದ ಸಿದ್ಧವಾದ ಪದಾರ್ಥಗಳು, ಮಾಂಸ ಮುಂತಾದ ಇಷ್ಟವಾದ ಆಹಾರ ವಸ್ತುಗಳು, ಮತ್ತು ಸೋಮಲತೆಯ ಉತ್ತೇಜಕವಾದ ರಸ ಮುಂತಾದುವುಗಳನ್ನು ಅರ್ಪಿಸುವುದಾಗಿತ್ತು. "ಶ್ರೌತಯಜ್ಞ" ಎಂದು ಕರೆಸಿಕೊಳ್ಳುವ ದೊಡ್ಡ ಯಜ್ಞಗಳಿಗೆ ಅನೇಕ ಋತ್ವಿಕ್ಕುಗಳ ನಿರ್ದಿಷ್ಟವಾದ ಕೆಲಸಗಳ ಅಗತ್ಯವಿತ್ತು: ಆದರೆ ಸಂಸ್ಕಾರಪ್ರದವಾದ ಗೃಹ್ಯಕರ್ಮಗಳನ್ನು ಯಜಮಾನನೂ ಅವನ ಪತ್ನಿಯೂ ಋತ್ವಿಕ್ಕುಗಳ ಸಹಾಯದಿಂದಲೋ ಸಹಾಯ ವಿಲ್ಲದೆಯೋ ನಡೆಸಬಹುದಾಗಿತ್ತು. ಅಗ್ನಿಯು ತನ್ನವಶಕ್ಕೆ ಒಪ್ಪಿಸಲ್ಪಟ್ಟ ಹವಿಸ್ಸನ್ನು

ದೇವತೆಗಳಿಗೆ ತಲುಪಿಸಬೇಕೆಂದೂ ಅಥವಾ ಅವರನ್ನು ಕರೆತಂದು ಅವರ ಹವಿಸ್ಸನ್ನು ಸ್ವೀಕರಿಸುವಂತೆ ಮಾಡಬೇಕೆಂದೂ ಪ್ರಾರ್ಥಿತನಾಗುತ್ತಾನೆ. ಐಹಿಕಸೌಖ್ಯವನ್ನೂ ಮತ್ತು ಮರಣಾನಂತರ ಸ್ವರ್ಗೀಯ ಭೋಗಾನುಭವವನ್ನೂ ಕೊಡುವ ದೇವತೆಗಳ ಸಮುಖತೆಯನ್ನು ಸಂಪಾದಿಸುವುದಕ್ಕಾಗಿ ಸಿದ್ಧವಾದ ಯಜ್ಞವು ಕಾಲಕ್ರಮದಲ್ಲಿ ಅನಂತ ವೈವಿಧ್ಯಗಳನ್ನೂ ಹೆಚ್ಚು ಹೆಚ್ಚು ತರ್ಕಾತೀತ ಅನುಭಾವಿಕತೆಯ ಆಚ್ಛಾದನವನ್ನೂ ಹೊಂದತೊಡಗಿತು. ತೈ.ಸಂ. ೨.೫.೫.೬ರಲ್ಲಿ ಇದಕ್ಕೆ "ಕತ್ತಿಯ ಅಲುಗು" (ಕ್ಷುರಸ್ಯಧಾರಾ) ಎಂದು ಹೇಳಿದೆ – ವರಗಳನ್ನು ಹೇಗೋ ಹಾಗೆಯೇ ಮೃತ್ಯುವನ್ನೂ ತರಬಲ್ಲುದು. ದೀಕ್ಷಿತನಲ್ಲಿ ಸದಾಚಾರವನ್ನುಂಟು ಮಾಡಬಲ್ಲುದು. ಯಾವುದೊಂದು ವಸ್ತುವಿನ ಪ್ರಾಪ್ತಿಗಾಗಲೀ ಇದೇ ಸ್ವತಂತ್ರ ಸಾಧನವಾಗತೊಡಗಿತಲ್ಲದೆ ಮೊದಲಿಗೆ ದೇವತೆಗಳಿಗೇ ಮೀಸಲಾಗಿದ್ದ ಶ್ರದ್ಧೆಯನ್ನೂ ತನ್ನ ಕಡೆಗೆ ಸೆಳೆದುಕೊಂಡಿತು. (ಋ.ವೇ ೨.೨.೬.೩: ೧೦.೧೫೧: ತೈ.ಸಂ.೧.೬.೮.೧: ವಾ.ಸಂ ೧೯.೭೭: ತೈ.ಬ್ರಾ.೩.೧೨.೩.೨: ಕಾ.ಬ್ರಾ.೨.೮) ಅಂತೆಯೇ ದೇವತೆಗಳೂ ಸೃಷ್ಟಿಕರ್ತನಾದ ಪ್ರಜಾಪತಿಯೂ ಯಜ್ಞಮಾಡಿದರೆಂದು ಹೇಳಿರುವುದು ಬ್ರಾಹ್ಮಣಗಳಲ್ಲಿ ಬಾರಿಬಾರಿಗೂ ಕಂಡು ಬರುತ್ತದೆ. ಯಜ್ಞವು ಸಾಂಕೇತಿಕವಾಗಿ ಪ್ರಜಾಪತಿ, ವಿಷ್ಣು, ಸಂವತ್ಸರ ಅಥವಾ ಮೃತ್ಯು ಇವುಗಳಿಗೆ ಸಮಾನವೆಂದು ಭಾವಿಸಲಾಯಿತು.

ವಾಸ್ತವವಾಗಿ 'ಮತಿ'(ಮನಸ್ಸು) ಇದರಿಂದ ಜನ್ಯವಾದುದು ಮತ. ಅನಂತರ ಮತವೆಂಬುದಕ್ಕೆ ಎರಡು ವ್ಯಾಖ್ಯೆಗಳು ಬಂದವು: ಒಂದು–ಮತವೆಂದರೆ ಧರ್ಮ ಎಂಬ ಅರ್ಥ. ಇನ್ನೊಂದು ಮತವೆಂದರೆ ತಾತ್ವಿಕತೆಯೆಂಬ ಅರ್ಥದಲ್ಲಿ. ಇಲ್ಲಿ ಮತವೆಂದರೆ ಧರ್ಮವೆಂಬ ಅರ್ಥದಲ್ಲಿ ಬಳಸಲಾಗಿದೆ.

*ವಿವರಗಳಿಗೆ ನೋಡಿ: ತೈತ್ತಿರೀಯಾ ಬ್ರಾಹ್ಮಣ*
*ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳವರು ೧೯೭೩ ತೈತ್ತಿರೀಯೋಪನಿಷತ್ತು*
*ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦ ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ ಪುಟ. ೩೦*

**೫೭೫. ಮತ್ತರ್**

*"...........ಪನ್ನಿರ್ಮತ್ತಕ ಪರ್ವಿದಾಲದ ಮರದ ಮೊದಲ್ಗೆವೊಂದು.........."*

*ತಮ್ಮ ಹಗೆತನ ಹೆಚ್ಚುವುದನ್ನು ಸೂಚಿಸುವಂತೆ ಹನ್ನೆರಡು ಮತ್ತರಷ್ಟು ಅಗಲವಾಗಿ ಬೆಳೆದ ಆಲದ ಮರದ ಕೆಳಭಾಗಕ್ಕೆ........... (ಪಂಪ ಭಾರತ ೨–೩೦ ವ)*

ಮತ್ತರು ಎಂದರೆ ಭೂಮಿಯ ಒಂದು ಅಳತೆ. ಆ ಕಾಲದ ಮುಖ್ಯ ಅಳತೆ ಕ್ರಿ.ಶ ೧೧೦೫೮ರ ನಾಗಾಯಿ ಶಾಸನದಲ್ಲಿ ಈ ಭಾಗದ ಪಾಠ ಈ ರೀತಿ ಇದೆ. "ಶಾಲೆಯಲೋದುವ ವೇದಾಧ್ಯಾಯಿಗಳಿನ್ನೂರ್ವರ್ಗ್ಗಂ, ಶಾಸ್ತ್ರಾಧ್ಯಾಯಿಗಳಯ್ವದಿಂಬರ್ಗ್ಗಂ, ತದುಪಾಧ್ಯಾಯಿಗಳುೞ ಭಟ್ಟದರ್ಶನ ನ್ಯಾಸ ಪ್ರಭಾಕರ ವ್ಯಾಖ್ಯಾತೃಗಳ್ಮೊವರ್ಗ್ಗಂ, ವೇದವನೋದಿಸುವು ಪಾಧ್ಯಾಯರ್ಮ್ಮೂರ್ವರ್ಗ್ಗಂ ಶಾಲೆಯ ಸರಸ್ವತಿ ಭಂಡಾರಿಗರಾರ್ವ್ವರ್ಗ್ಗಮನ್ನು೨೫೭ ಮಾನಸರ ಅಶನಾಚ್ಛಾದನಕ್ಕಂ, ಜೀರ್ಣ್ಣೋದ್ಧಾರ, ಖಂಡ

ಸ್ಫುಟಿತ ನವಸುಧಾಕರ್ಮಕ್ಕಂ, ಗನ್ಧಾಕ್ಷತ, ಪುಷ್ಪ, ಧೂಪ, ದೀಪ, ನಿವೇದ್ಯಕ್ಕಂ, ತ್ರಿಪುರುಷ ದೇವರ ಶಾಲೆಯ ಪರಿಷ ಮಾನೀಯರ್ಗ್ಗೆ ಸರ್ವ್ವನಮಸ್ಯಮಾಗಿ ಕೊಟ್ಟಕೆಯ್ ಮಾಣಿಕೇಶ್ವರದ ಗಱಂ ಬಡಗ **ಮತ್ತರು** ೧೦೦೦ ಆ ಹೊಲಂ ನಾಗವಾವಿಯ ದಿಗ್ಗವಿಗೆಯ ಅರಲೂರು ಎಡೆವಾ ಅನದಕೆಳಗೆ ಪ್ರಭಾಕರ ವ್ಯಾಕ್ಯತೃಗೆ **ಮತ್ತರು** ೪೫, ಸರಸ್ವತೀ ಭಂಡಾರಿಗೆ **ಮತ್ತರು** ೩೦, ಘಟಿಕಾ ಪ್ರಹಾರಿಗೆ **ಮತ್ತರ್** ೩೦, ಪಂಚಕೇಶ್ವರಕ್ಕೆ **ಮತ್ತರು** ೪೫ ಚಣ್ಡೇಶ್ವರ ರೆಬ್ಬಂಗೆ **ಮತ್ತರು** ೨೦, ರಾಮೇಶ್ವರ ಸಿಡಿಲ ಹರಿಕಲ್ಲಗುತ್ತಿಪಳ್ಳಂ ಮಿರಿಕಿರಿಗೆ, ಮಾಲೆಯ ಕಾಂತಯ್ಯನ ಮಾನ್ಯಮನೆ ರೆಬ್ಬಭೂವ ಮಾನ್ಯಂಮೆನೆ ೨, ಎಂದಾಗಿ ವಿವರಗಳು ಬರುತ್ತದೆ.

ನಾಗಾಯಿ ವಿದ್ಯಾಕೇಂದ್ರದಲ್ಲಿದ್ದ ವೇದಾಧ್ಯಾಯಿಗಳ ಸಂಖ್ಯೆ ೨೦೦ ಶಾಸ್ತ್ರಾಧ್ಯಾಯಿಗಳ ಸಂಖ್ಯೆ ೫೦. ಭಟ್ಟದರ್ಶನ, ನ್ಯಾಸ, ಪ್ರಭಾಕರಗಳನ್ನು ಕಲಿಸುವ ಅಧ್ಯಾಪಕರು ೩೩ ಜನ ವೇದವನ್ನು ಕಲಿಸುವ ಉಪಾಧ್ಯಾಯರು ೩ಜನ ಸರಸ್ವತಿ ಭಂಡಾರಿ (ಗ್ರಂಥಪಾಲಕ)೧

ಆ ವಿದ್ಯಾಕೇಂದ್ರದಲ್ಲಿದ್ದ ಒಟ್ಟು ವಿದ್ಯಾರ್ಥಿಗಳು ಮತ್ತು ಅಧ್ಯಾಪಕರ ಸಂಖ್ಯೆ ೨೫೭ ಈ ಇನ್ನೂರ ಐವತ್ತೇಳು ಮಂದಿಗೆ ತಗಲುವ ಊಟ ವಸತಿಗಳ ಖರ್ಚು, ಶಾಲೆಯ ಜೀರ್ಣೋದ್ಧಾರ, ಸುಣ್ಣ ಬಣ್ಣ ಬಳೆಯುವುದಕ್ಕೆ, ಧೂಪ, ದೀಪ, ನೈವೇದ್ಯಗಳಿಗೆ ತಗಲುವ ವೆಚ್ಚಗಳನ್ನು ಭರಿಸುವುದಕ್ಕೆ ನೀಡಿದ ದತ್ತಿ ಮತ್ತು ಅಧ್ಯಾಪಕ ವರ್ಗದವರಿಗೆ ನೀಡಿದ ವೈಯಕ್ತಿಕ ದತ್ತಿಯ ವಿವರಗಳು ಈ ರೀತಿ ಇವೆ.

| | |
|---|---|
| ಭಟ್ಟದರ್ಶನ ವ್ಯಾಖ್ಯಾತೃಗೆ | ೩೫ ಮತ್ತರು |
| ನ್ಯಾಸ ವ್ಯಾಖ್ಯಾತೃಗೆ | ೩೦ ಮತ್ತರು |
| ಪ್ರಭಾಕರ ವ್ಯಾಖ್ಯಾತೃಗೆ | ೪೫ ಮತ್ತರು |
| ಸರಸ್ವತೀ ಭಂಡಾರಿಗೆ | ೩೦ ಮತ್ತರು |
| ಘಟಿಕಾ ಪ್ರಹಾರಿಗೆ | ೩೦ ಮತ್ತರು |
| ಪಂಚಿಕೇಶ್ವರ ದೇವಾಲಯಕ್ಕೆ | ೪೫ ಮತ್ತರು |
| ಚಣ್ಡೇಶ್ವರ ದೇವಾಲಯಕ್ಕೆ | ೨೦ ಮತ್ತರು |
| | ೨೩೫ ಮತ್ತರು ಜಮೀನು. |

ಇನ್ನು ಉಳಿದ ೭೬೫ ಮತ್ತರು ಜಮೀನಿಂದ ಬರುವ ಆದಾಯವನ್ನು ಮೇಲೆ ತಿಳಿಸಿದ ಸಾರ್ವಜನಿಕ ಕಾರ್ಯಗಳಿಗಾಗಿ ಉಪಯೋಗಿಸತಕ್ಕದ್ದು, ಜಮೀನು ಅಲ್ಲದೆ ಅಲ್ಲಿ ಕೆಲಸ ಮಾಡುವವರಿಗೆ ಎರಡು ಮನೆಗಳನ್ನು ಮಾನ್ಯವಾಗಿ ನೀಡಿರುವ ವಿಷಯವನ್ನು ಶಾಸನ ತಿಳಿಸುತ್ತದೆ.

ಸೊರಬ ತಾಲೂಕಿನ ಒಂದು ಶಾಸನ (E.C VIII Sb 135)

ಕೊಟ್ಟಿರುವ ಅಳತೆಗಳು ಹೀಗಿವೆ. ೧ ಮತ್ತರು=೪ ಹಾದ; ೧ ಹಾದ=೨೫ ಕಂಬ; ೧ ಮತ್ತರು=೧೦೦ ಕಂಬ

*ವಿವರಗಳಿಗೆ ನೋಡಿ: ಎಂ.ಚಿದಾನಂದಮೂರ್ತಿ ೨೦೦೮*

*ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪುಟ. ೪೩೭*

**೫೭೬. ಮತ್ಸ್ಯನ್ಯಾಯ**

*ದಂಡಧರರಿಲ್ಲದಂದು ತಂತಮ್ಮ ವೃತ್ತಿಗಳಂ ಪ್ರಜೆಗಳತಿ ಕ್ರಮಿಸಿ ನಡೆಗುಮೆಂದುಂ ಅತ್ಯಂತ ದುಷ್ಟ ಬಳವಜ್ಜನಗ್ರಸನದಿಂದ ದುರ್ಬಳ ಜನಂಗಳೊಳ್* **ಮತ್ಸ್ಯನ್ಯಾಯಂ** *ಪ್ರವರ್ತಿಸುಗುಮೆಂದುಂ..... (ಆದಿಪುರಾಣಂ–೮–೭೪ ವ)*

ಮತ್ಸ್ಯನ್ಯಾಯವೆಂದರೆ ದೊಡ್ಡಮೀನು ಸಣ್ಣಮೀನನ್ನು ಮನುಷ್ಯ ಹಿಡಿದು ನುಂಗುವುದು; ಹಾಗೆಯೇ ಈ ನ್ಯಾಯವನ್ನು ಮನುಷ್ಯ ವ್ಯವಹಾರ ಜಗತ್ತಿನಲ್ಲಿಯೂ ಬಳಸುತ್ತಾರೆ. 'ದುರ್ಬಲಸ್ಯ ಬಲೋರಾಜ' ಎಂಬಂತೆ ಬಲಿಷ್ಠನಾದವನು ದುರ್ಬಲನಾದವನನ್ನು ಹಿಡಿದು ಪೀಡಿಸುವ ಸಂದರ್ಭದಲ್ಲಿ ಬಳಸಬಹುದು. "ದೇಶದಲ್ಲಿ ಮತ್ಸ್ಯನ್ಯಾಯವು ತಾಂಡವವಾಡುವಾಗ ಅದರ ಉಪಟಳಗಳಿಂದ ತಪ್ಪಿಸಿಕೊಳ್ಳಲು ಜನರು ಇಚ್ಛಿಸಿದುದರ ಫಲವಾಗಿ ರಾಜಪದವಿಯ ಉದಯವಾಯಿತು ಎಂದು ಕೌಟಿಲ್ಯನು ಹೇಳುತ್ತಾನೆ. ಜಾತಕಗಳೂ ಹಾಗೆಯೇ ನಿರೂಪಿಸುತ್ತವೆ" "ದಂಡಹೀನೇ ಗತೇ ರಾಷ್ಟ್ರೇ ಮಾತ್ಸ್ಯೋನ್ಯಾಯ ಪ್ರವರ್ತತೇ" ಎಂದು ಅಭಿಲಷಿತಾರ್ಥ ಚಿಂತಾಮಣಿ ಗ್ರಂಥವು ಹೇಳುತ್ತದೆ. ಇದರರ್ಥ; ರಾಷ್ಟ್ರವು ದಂಡಹೀನವಾದಾಗ ಮಾತ್ಸ್ಯನ್ಯಾಯವು ಪ್ರವರ್ತಿಸುವುದು ಎಂದು. (ಅಭಿಲಷಿತಾರ್ಥ ಚಿಂತಾಮಣಿ, ಮೈಸೂರು ಪು.೧೭೮) ಇಲ್ಲಿ ದಂಡಹೀನವಾಗುವುದು ಎಂದರೆ ರಾಷ್ಟ್ರವು ಅರಾಜಕತೆ(Anarchy)ಯಿಂದ ಕೂಡಿರುವುದು ಎಂದರ್ಥ. ಆದ್ದರಿಂದ Anarchyಗೆ ಸಂವಾದಿಯಾಗಿ ಬಳಸುವ ಪದವೇ ಮಾತ್ಸ್ಯನ್ಯಾಯ.

ಶಾಲ, ಶಲಕ, ಕುಲಿಶ, ರಾಜೀವ, ಲೋಹಿತ, ಪಲ್ಲವಕ ಎಂಬ ಆರು ರೀತಿಯ ಮತ್ಸ್ಯಭೇದಗಳಿವೆ.

*ವಿವರಗಳಿಗೆ ನೋಡಿ: ಡಾ. ಟಿ.ವಿ. ವೆಂಕಟಾಚಲಶಾಸ್ತ್ರಿ ೧೯೯೯ ಶ್ರೀವತ್ಸ ನಿಘಂಟು ಪುಟ. ೨೭೬*

**೫೭೭. ಮದಗಳು**

*ಕುಲ***ಮದ***ವೊಂದು ಜಾತಿ***ಮದ***ವೊಂದು ವಯೋ***ಮದ***ವೊಂದು ಸಂದದೋ*
*ರ್ವಲ***ಮದ***ವೊಂದು ರಾಜ್ಯ***ಮದ***ವೊಂದಿನಿತುಂ ಮದಮೆಯ್ದೆ ಕೂಡೆ ಜಾ*
*ವಲಿಸೆ ಮದೋದ್ಧತರ್ಕಳಿರಲಾಜಿದೆ ಪೇಟ್ ಬೆಸನಾವುದೆಂದು ಭೂ*
*ತಲಪತಿಯಂ ಕದರ್ಥಿಸಿದರಂಕದ ಷಷ್ಟಿಸಹಸ್ರನಂದನರ್........*

*(ಅಜಿತತೀರ್ಥಂಕರ ಪುರಾಣ ತಿಲಕಂ ೧೦. ೧೦)*

ರನ್ನನು ಇಲ್ಲಿ ಯಾವ ಯಾವ ರೀತಿಯ ಮದಗಳಿವೆಯೆಂದು ವಿವರಿಸಿದ್ದಾನೆ. ಕುಲಮದ, ಜಾತಿಮದ, ವಯೋಮದ, ಬಾಹುಮದ, ರಾಜ್ಯಮದ ಮುಂತಾದವು ಮದೋದ್ಧತರುಗಳಿಗಿರುತ್ತವೆ. ಇವುಗಳಿಂದಲೇ ಅವರು ಭೂತಲಪತಿಯನ್ನು ಪೀಡಿಸುತ್ತಾರೆ ಎಂಬುದು ಅವನ ವಾದ. ಮದವೆನ್ನುವುದು ಅಹಂಕಾರದಿಂದ ಜನ್ಯವಾಗುವಂಥದು. ಕುಲ, ಜಾತಿ, ವಯಸ್ಸು, ಬಾಹು, ರಾಜ್ಯಮದಗಳು ಅಹಂಕಾರದಿಂದ ಹುಟ್ಟುತ್ತವೆ.

ಮದ–೩ : ೧ ವಿದ್ಯಾಮದ, ಧನಮದ, ಅಭಿಜನಮದ (ಮಹಾಭಾ. ಉದ್ಯೋಗ

೩೪–೪೪ ; ಶಕದ್ರು. III–೬೬೦). (ಆ) ಮುಸ್ತಾ, ಚಿತ್ರಕ, ವಿಡಂಗ (ಶಕದ್ರು. III–೬೬೦). (ಇ) ವಾಯುವಿನ : ಶೈತ್ಯ, ಸೌರಭ್ಯ, ಮಾಂದ್ಯ (ವಿಚಿಂ. ೨೧೩). (ಈ) ಮದ್ಯದ: ಪ್ರಥಮಮದ, ಮಧ್ಯಮಮದ, ಅಂತ್ಯಮದ (ಚರಕ. ೫೨೭–೧೨). (ಉ) ನೋ. ಮಧು–೩ ಬಿ.

ಮದ–೭ : ಕುಲ, ಯೌವನ, ಸ್ತ್ರೀ, ಅನ್ಯ, ಧನ, ವಿದ್ಯಾ, ಉದ್ಯೋಗ (ಕಿ).

ಮದ–೮ : ಬಿ ಕುಲ, ಛಲ (ಬಲ?), ಧನ, ರೂಪ, ಯೌವನ, ವಿದ್ಯಾ, ರಾಜ್ಯ, ತಪ(ವಿಚಿಂ.೪–೪೦೮; ವಚಶಾ.II-೧೨೨).ರೂಪ, ಯೌವನ, ಬಲ, ಪರಿವಾರ, ಅಧಿಕಾರ (ಕನಿ. ಪು. ೪೭೯). (ಆ) ಅನ್ನ, ಅರ್ಥ, ಸ್ತ್ರೀ, ವಿದ್ಯಾ, ಕುಲ, ರೂಪ, ಉದ್ಯೋಗ, ಯೌವನ(ಕಿ;ಶಬ್ದರ. ೮೪೦). (ಇ) ದೇಹಮದ, ಯೌವನ–, ಸ್ತ್ರೀ–, ಧನ–(ಪ್ರಾಪಂಚಿಕ), ವಿದ್ಯಾಮದ, ತಪೋ–, ಸಿದ್ಧಿ–, ಜ್ಞಾನ–(ಪಾರಮಾರ್ಥಿಕ), (ನಿರ್ಪಕ್ಷಸತ್ಯಜ್ಞಾನದರ್ಶನ–ಸಂ.೧೪೪). (ಈ) ಜ್ಞಾನ, ಪೂಜಾ, ಕುಲ, ಜಾತಿ, ಬಲ, ಋದ್ಧಿ(ಐಶ್ವರ್ಯ), ತಪ, ವಪು(ರತ್ನಕ. ದ. ಅ. ೨೫). ಅಥವಾ ಜಾತಿ, ಕುಲ, ಬಲ, ರೂಪ, ಶ್ರುತ, ಆಜ್ಞಾ, ಐಶ್ವರ್ಯ, ತಪಸ್ಸು(ತತ್ವಪ್ರ. ೬–೨೬೭). (ಉ) ಅಂತರಂಗದ: ಸಂಸ್ಥಿತ, ತೃಣೀಕೃತ, ವರ್ತಿನಿ, ಕ್ರೋಧಿನಿ, ಮೋಹಿನಿ, ಅತಿಚಾರಿಣಿ, ಗಂಧಚಾರಿಣಿ, ವಾಸಿನಿ(ವಚಶಾ.II–೧೨೧). (ಊ) ಅಷ್ಟಮೂರ್ತಿಯ: ಪೃಥ್ವಿ, ಸಲಿಲ, ಪಾವಕ, ಪವನ, ಅಂಬರ, ರವಿ, ಶಶಿ, ಆತ್ಮ (ವಚಶಾ.II–೧೨೦). (ಋ) ಆನೆಯ: ದಾನ(ಕಂಕುಳು), ಸೀಧು(ಕಣ್ಣುಗಳು), ಸಾಗರ(ಕಿವಿಗಳು), ಶೀಕರ (ಸೊಂಡಿಲ ತುದಿ), ಶಿಕ್ಯ(ಸ್ತನಾಗ್ರ), ಮದ(ಮೇಹನ), ಘರ್ಮ(ಹೃದಯ), ಮೇಘ(ಚರಣಗಳು) (ಶಬ್ದರ. ೮೪೦).

*ವಿವರಗಳಿಗೆ ನೋಡಿ: ಟಿ.ವಿ. ವೆಂಕಟಾಚಲಶಾಸ್ತ್ರಿ ೧೯೯೯ ಶ್ರೀವತ್ಸ ನಿಘಂಟು ಪುಟ. ೨೭೬.*

**೫೭೮. ಮನಃಪರ್ಯಯ ಜ್ಞಾನ**

ಇದು ಹಳೆಗನ್ನಡದಲ್ಲಿ ಅನೇಕ ಕಡೆ ಉಕ್ತವಾಗಿದೆ.

ಮನಃಪರ್ಯಯ–ಪರಚಿತ್ತಗತ ವಿಷಯಗಳ ಜ್ಞಾನವಾಗುವುದು ಮನಃಪರ್ಯಯ ಜ್ಞಾನವು. Occultist ರು ಇದನ್ನು Telebashy ಮತ್ತು Mind Reading ಎಂದು ಹೇಳುವರು. ಇದು ಋಜುಮತಿ, ವಿಪುಲಮತಿ ಎಂದು ಎರಡು ಬಗೆಯಾಗಿದೆ. ಋಜುಮತಿಯು ಸಂಕೀರ್ಣವಾದುದು. ವಿಪುಲಮತಿಯಿಂದ ವಿಶ್ವದೊಳಗಿನ ಸಮಸ್ತ ಚಿತ್ತಗಳ ವಿಷಯಗಳನ್ನು ಸೂಕ್ಷ್ಮವಾಗಿ ಕಾಣಬಹುದು.

ಮನಃಪರ್ಯಯ ಜ್ಞಾನ– ಮನಃಪರ್ಯಯ ಜ್ಞಾನಾವರಣೀಯ ಕರ್ಮದ ಕ್ಷಯೋಪಶಮವಾಗಲು ಪರರ ಮನಸ್ಸಿನೊಳಗಿನ ಪದಾರ್ಥಗಳ ವಿಶೇಷರೂಪವಾದ ವಿಕಲಜ್ಞಾನವು ಮನಃಪರ್ಯಯ ಜ್ಞಾನವು.

ನಾಗಾರ್ಜುನನ ನಿಲುವು ಈ ರೀತಿಯಲ್ಲಿದೆ.

ಮಮಕಾರ ಅಹಂಕಾರಗಳಿಂದ ಮುಕ್ತನಾದವನು ಇರುವುದಿಲ್ಲ.

ನಿರ್ಮಮಕಾರ ನಿರಹಂಕಾರಗಳೆಂಬುವು ನೋಡಲು ಅವು 'ಇಲ್ಲ'

**'ಉಪಶಮೆ'**ಯು ಮತ್ತೇನನ್ನೂ ಉಳಿಸಿಹೋಗುವುದಿಲ್ಲ. ಕಿಂಚಿತ್ ಉಳಿದರೆ ಅದು ಸ್ಥಿತವಾಗುತ್ತದೆ. ಶಾಶ್ವತವಾಗುತ್ತದೆ. **'ಇಲ್ಲ'** ಎನ್ನುವ ಗ್ರಹಿಕೆ **'ಉಂಟಾದರೆ'** ಅದು ಉಪಶಮೆಯಲ್ಲ. ಇಲ್ಲಿ ಮಾತು ಮಾತನ್ನು ದಾಟಲು ಸೂಚಿಸುತ್ತದೆ. **'ಶೂನ್ಯತೆ'**ಗೆ ಅಂಟಿಕೊಳ್ಳುವ ಸಾಧ್ಯತೆಗಳು ಇಂತಹ ಸಂದರ್ಭಗಳಲ್ಲಿ ಹೆಚ್ಚು. ಹಾಗಾಗಿ ನಾಗಾರ್ಜುನ ಆ ಸಾಧ್ಯತೆಯ ಬಗೆಗೆ ಎಚ್ಚರವಾಗಿರುವುದನ್ನು ಸೂಚಿಸುವುದರ ಜೊತೆಗೆ ಹೀಗೆ ನಿರಸನಗೊಂಡುದೇ ಮತ್ತೊಂದು **'ಆಕಾರ'** ಪಡೆದು ಶಾಶ್ವತವಾಗಿ ಬಿಡುವ ಸಾಧ್ಯತೆಯನ್ನು ಹತ ಮಾಡುತ್ತಿದ್ದಾನೆ. ಎಂದು ನಾಗಾರ್ಜುನನ ಮೂಲ ಮಾಧ್ಯಮಿಕದಲ್ಲಿ ಬರುತ್ತದೆ.

*ವಿವರಗಳಿಗೆ ನೋಡಿ: ಮಹಾದೇವ ಪ್ರಭಾಕರ ಪೂಜಾರ್ ೧೯೭೬ ಜೈನಧರ್ಮ ಪರಿಭಾಷೆ ಪುಟ. ೧೭*
*ಎಸ್. ನಟರಾಜ ಬೂದಾಳು ೨೦೦೬ ನಾಗಾರ್ಜುನನ ಮೂಲಮಾಧ್ಯಮಿಕಕಾರಿಕಾ ಪುಟ. ೯೧*
*ಡಿ.ವಿ.ಜಿ. ೧೯೯೬ ಭಗವದ್ಗೀತೆ ಸ್ವಾಮಿ ಚಿನ್ಮಯಾನಂದ ೧೯೮೮ ಆತ್ಮಬೋಧ*
*ಶಂಕರಭಟ್ಟ ಅಗ್ನಿಹೋತ್ರಿ ೧೯೮೩ ಸಾಧನಪಂಚಕ*

### ೫೭೯. ಮನೆವಾಟ್ತೆ

*.................ಕೈಮೀರಿದ* ***'ಮನೆವಾಟ್ತೆ'****ಗೆ ಮನೆ ವಾರ್ತೆಗೆ ಬುದ್ಧಿ ಹೇಳಲು ಅವಕಾಶವಿಲ್ಲವೆಂದು ಪಂಪ ಭಾರತದಲ್ಲಿ ಬರುತ್ತದೆ. (೭-೧೬ವ)*

ಮನೆವಾರ್ತೆಯೆಂದರೆ ಮನೆಯ ಸುದ್ದಿ. ಎರಡನೆಯದು ಮನೆ ವಾಟ್ತೆಯೆಂದರೆ ಮನೆಕೆಲಸ ಎಂದೂ ಆಗುತ್ತದೆ. ಮನೆವಾರ್ತೆಯನ್ನು ಹೊರಗೆಡಹಬಾರದು. ಅದರಿಂದ ಕುಟುಂಬವು ಹಾಳಾಗುತ್ತದೆಯೆಂದು ನಂಬಿಕೆಯಿದೆ. ಕೈಮೀರಿ ಹೋದ ಕೌಟುಂಬಿಕ ಸಂಗತಿಗಳು ಜರುಗಿದ ಮೇಲೆ ಬುದ್ಧಿ ಹೇಳಲು ಅವಕಾಶವಿಲ್ಲ.

### ೫೮೦. ಮಲಧಾರಿ ಸಿದ್ಧಾಂತ

*ಎಮಗೆ* ***ಮಲಧಾರಿಸಿದ್ಧಾಂ***
***ತ****ಮುನಿಶ್ವರಚರಣಸರಸಿಜಾತಂ ದೇವೇಂ ।*
*ದ್ರಮುನಿಷದಾಬ್ಜಂ ಜಯನಂ*
*ದಿಮುನಿಕ್ರಮಕಮಳಮೀಗೆ ಬೋಧೋದಯಮಂ ॥ (ಆದಿಪುರಾಣ ೧-೧೩)*

*ಮುನಿಜನದೋದಿಸಿದೋಜೆಯೊ*
*ಳನುವದಿಮುದಿದೊಂದೆ ಕೊಂಡಕುಂದಾನ್ವಯನಂ ।*
*ದನವನಶುಕಮೆಂದೆನಗಿನಿ*
*ಸನುಗ್ರಹಂಗೆಯ್ಗೆ ಕರುಣದಿಂ ಮುನಿನಿವಹಂ ॥ (ಆದಿಪುರಾಣ ೧-೧೪)*

'ದೇವೇಂದ್ರ ಮುನಿ' ಕವಿಯ ಗುರುವೆಂಬುದು ಮೊದಲೇ ಸೂಚಿತವಾಗಿದೆಯಷ್ಟೆ.

ಆ 'ದೇವೇಂದ್ರ ಮುನೀಂದ್ರ' ನೊಡನೆ ಮೇಲಿನ ಪ್ರಥಮ ಪದ್ಯದಲ್ಲಿ 'ಮಲಧಾರಿ ಸಿದ್ಧಾಂತ ಮುನೀಶ್ವರ – ಜಯನಂದಿ ಮುನಿ'ಗಳನ್ನೂ ಸ್ತುತಿಸಿದ್ದಾನೆ. ಮಾತ್ರವಲ್ಲ, ಮತ್ತಿನ ಪದ್ಯದಲ್ಲಿ ಆ 'ಮುನೀಜನದೋದಿಸಿದೋಜೆಯೊಳನುವದಿಸಿ'ದವನು ತಾನೆಂಬುದನ್ನೂ ಸೂಚಿಸಿದ್ದಾನೆ. ಇದರಿಂದ, ಆ ಗುರುಕುಲದೊಳಗಿದ್ದು ಅವರು ಓದಿಸಿದಂತೋದಿ ಪ್ರಬುದ್ಧನಾದವನು ನಮ್ಮ ಪಂಪನೆಂಬುದು ಹೊಳೆಯುತ್ತಿದೆಯಲ್ಲವೆ? ಅಷ್ಟೇ ಅಲ್ಲ, 'ಕೊಂಡಕುಂದಾನ್ವಯ ನಂದನವನ ಶುಕಂ ಇದೊಂದೆ' ಹಾಗೆ 'ಅನುವದಿಪುದು' ಎಂದುದರಿಂದ, ಅರ್ಥಗ್ರಹಣವಡೆಯಲಾರದ ಬಾಲ್ಯ ಮೊದಲ್ಗೊಂಡು ಪ್ರೌಢತೆಗೊಳ್ಳುವ ವರೆಗೂ ತಾನು ಅಲ್ಲೇ ಅಭ್ಯಾಸಿಸಿದವನೆಂದೂ, ತಾನೊಬ್ಬನೇ ಗುರುಗಳಿಗೆ ಪ್ರಿಯತಮ ನಾಗಿದ್ದವನೆಂದೂ ಸೂಚಿತವಾಗುತ್ತಿದೆ. ದೇವೇಂದ್ರ ಮುನೀಂದ್ರಾದಿ ಗುರುಗಳಿಂದ ಅಧಿಷ್ಠಿತವಾದ ಆ ಗುರುಕುಲವು, ಪುಲಿಗೆರೆ ಪ್ರಾಂತವನ್ನೊಂದಿದ ಕನ್ನಡದ ತೆಂಕನಾಡಿ ನೊಳಗೆ ಯಾವ ಕಡೆಯಲ್ಲಿದ್ದುದೋ ಗೊತ್ತಿಲ್ಲ. ಶ್ರವಣಬೆಳ್ಗೊಳದಲ್ಲಿಯೋ ಅಥವಾ, ಜೈನಸಂಸ್ಕೃತಿಗೆಡೆಯಾದ ಪುಲಿಗೆರೆಯೇ ಮೊದಲಾದ ಈ ಕನ್ನಡ ನಾಡುಗಳೊಳ ಗೊಂದರಲ್ಲಿಯೋ ಅದು ಇದ್ದಿರಬೇಕೆಂದು ಅನುಮಾನಿಸಿದರೆ ತಪ್ಪಾಗದು. ಕವಿಯ ವಂಶ ವಿಮರ್ಶಾವಸರದಲ್ಲಿ ಊಹಿಸಿದಂತೆ, ಬಡವನಾಗಿ ವೆಂಗಿಪಳುವನ್ನು ತೊರೆದ ಪಂಪನ ತಂದೆ ಅಭಿರಾಮದೇವನು ಪುಲಿಗೆರೆ ಪ್ರಾಂತದಲ್ಲಿ ನೆಲಸಿರಬೇಕು. ಆ ಗುರುಕುಲದ ಮುನೀಂದ್ರರಲ್ಲಿ ವಿದ್ಯಾಭ್ಯಾಸಕ್ಕಾಗಿ ಕಿರುಹರೆಯದ ಮಗನನ್ನೊಪ್ಪಿಸಿರಲೂಬೇಕು ಎಂದು ಮುಳಿಯ ಹೇಳುತ್ತಾರೆ.

**೫೮೧. ಮಹತ್**

ಮೊದಲನೆಯ ವಿಕೃತಿ ಮಹತ್, ಇದಕ್ಕೆ ಬುದ್ಧಿಯೆಂದೂ ಹೆಸರು. ದೇಶ ಕಾಲಗಳ ದೃಷ್ಟಿಯಿಂದ ಎಲ್ಲ ವಿಕೃತಿಗಳಿಗಿಂತಲೂ ಮಹತ್ತಮವಾದ ಪ್ರಮಾಣವುಳ್ಳದ್ದರಿಂದ ಅದಕ್ಕೆ ಮಹತ್ ಎಂದು ಹೆಸರು, ಅಭಾಸವಾಗಿ ಕಂಡರೂ – ಬುದ್ಧಿ, ಪ್ರಜ್ಞೆ, ಇಚ್ಛೆ, ಪ್ರಯತ್ನ – ಇವೇ ಮುಂತಾದ ಎಲ್ಲ ಮಾನಸಿಕ ಕ್ರಿಯೆಗಳೂ ಸಾಂಖ್ಯರಿಗೆ ಪ್ರಕೃತಿಯ ವಿಕಾಸಗಳೇ: ಅವಕ್ಕೂ ಸ್ಥೂಲ ಭೌತಿಕ ವಸ್ತುಗಳಿಗೂ ಇರುವ ವ್ಯತ್ಯಾಸ. ಅವುಗಳ ವಿನ್ಯಾಸದಲ್ಲಿರುವ ಸೂಕ್ಷ್ಮತೆ, ಶುದ್ಧತೆ. ಪ್ರಕೃತಿಯೆಂದರೆ ವಿರುದ್ಧ ಸ್ವಭಾವದ ಮೂರು ಶಕ್ತಿಗಳ, ಗುಣಗಳ ಸಮಾವಸ್ಥೆ. ಪ್ರಕೃತಿ ವಿಕಾಸದ ಮೂಲೋದ್ದೇಶದ ದೃಷ್ಟಿಯಿಂದ – "ವ್ಯಾಸಭಾಷ್ಯ"ದಲ್ಲಿ ಹೇಳಿರುವಂತೆ ಅದು ಇದ್ದೂ ಇಲ್ಲದ ಹಾಗೆಯೇ. ಅದು ಸೂಕ್ಷ್ಮ, ಅಪ್ರತ್ಯಕ್ಷ ಆದರೂ ವಿಶಿಷ್ಟವಾದ ಸ್ಥೂಲವಾದ ಕಾರ್ಯಕ್ಕೆ ಅವಿಶಿಷ್ಟವಾದದ್ದು ಸೂಕ್ಷ್ಮವಾದದ್ದು ಕಾರಣ ಎಂಬ ಸಾಂಖ್ಯರವಾದವನ್ನು ನಾವು ಒಪ್ಪಿಕೊಂಡದ್ದೇ ಆದರೆ, ನಾವು ಪ್ರಕೃತಿಯನ್ನು ಎಲ್ಲಕ್ಕೂ ಮೂಲವೆಂದು ಒಪ್ಪಿಕೊಳ್ಳಲೇ ಬೇಕು. ಎಲ್ಲ ಕಾರಣಗಳಿಗೂ ಕಾರಣವಾದದ್ದರಲ್ಲಿ ವಿಶಿಷ್ಟಾಂಶಲವಲೇಶವೂ ಇರಲಾರದು. ಅದನ್ನು ಶುದ್ಧಸತ್ತ್ವವೆಂದು ಬೇಕಾದರೆ ಭಾವಿಸಬಹುದು ಅಷ್ಟೆ. ಆದರೆ ಶುದ್ಧ ಸತ್ತ್ವ, ಶುದ್ಧ ಅಸತ್ತ್ವದಷ್ಟೇ ಅಚಿಂತ್ಯ ಮತ್ತು

ಊಹಾತೀತ. ಅದರಿಂದಲೇ ಪ್ರಕೃತಿಯನ್ನು ಹೀಗೆ ಅಭಾವರೀತಿಯಲ್ಲಿ ವರ್ಣಿಸಿರುವುದು.

ಸಾಂಖ್ಯದ ಪ್ರಮುಖ ನಿಲುವಿದು. ಇದರ ಬಗ್ಗೆ ಬಹಳಷ್ಟು ಚರ್ಚೆಗಳು ನಡೆದಿವೆ.

ಬುದ್ಧಿ ಮತ್ತು ದೇಹಕ್ಕಿರುವ ದ್ವಂದ್ವಾತ್ಮಕ ಸಂಬಂಧ ಭಾರತೀಯ ವೇದಾಂತದ ಬಹುಮುಖ್ಯ ಪ್ರಶ್ನೆ. ಮಹತ್ತಿನ ಕುರಿತು ಸಾಂಖ್ಯರ ನಿಲುವು ಮೇಲಿನಂತಿದೆ.

*ವಿವರಗಳಿಗೆ ನೋಡಿ: ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦*

*ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ ಪುಟ. ೨೬೨.*

**೫೮೨. ಮಹಾದೇವಿ**

ರನ್ನನ 'ಅಜಿತ ತೀರ್ಥಂಕರ ಪುರಾಣ ತಿಲಕ' ಕೃತಿಯಲ್ಲಿ ಜಿತಶತ್ರುವಿನ ಹೆಂಡತಿ ವಿಜಯಸೇನಾ ದೇವಿಯನ್ನು ವರ್ಣಿಸುವಲ್ಲಿ ಈ ಮಾತು ಬರುತ್ತದೆ:

*ಶ್ರೀ ವೀರಶ್ರೀ ಕೀರ್ತಿ*
*ಶ್ರೀ ವಾಕ್ಶ್ರೀಯೆಂಬ ದೇವಿಯರೆ ನೆಲಸಿರೆ ಸ*
*ದ್ಭಾವದೊಳೆ ವಿಜಯಸೇನಾ*
*ದೇವಿ **ಮಹಾದೇವಿ**ಯೆಂಬ ಪೆಸರಂ ಪಡೆದಳ್.*

*(ದೇವೀರಪ್ಪ. ಎಚ್. ಮತ್ತು ಜವರೇಗೌಡ. ದೇ(ಸಂ) ೧೯೫೫ ೨-೨೪)*

ಗುಪ್ತರ ಕಾಲದಲ್ಲಿ 'ಅಗ್ರಮಹಿಷಿ'ಯನ್ನು 'ಮಹಾದೇವಿ' ಎಂದು ಕರೆಯುವ ಕ್ರಮ ಬಂತು. ಈ ಕಾಲದಲ್ಲಿ 'ಅಗ್ರಮಹಿಷಿ'ಯು ಅಂತಃಪುರದ ಅತ್ಯುಚ್ಚ ಅಧಿಕಾರಿಯಾಗಿದ್ದಳು.

*ವಿವರಗಳಿಗೆ ನೋಡಿ: ರಾಣಿಯರು Dilip Kumar Ganguly 1979*

*Aspects of Ancient of Ancient Indian Administration P. ೬೪*

**೫೮೩. ಮಹಾಪಾತಕ**

ಅಂತೆನಿಸಿದರಸುಮಕ್ಕಳ್ಗತಿನೃಶಂಸಮಪ್ಪ ಕೌಟಿಲ್ಯಶಾಸ್ತ್ರ ಪ್ರಮಾಣದಿನುಪಾಂಶು ವಧೋಪದೇಶಮಂ ಮಾಳ್ಪ ನಿಪುಣನೇ ಪರಮಪಂಡಿತನೆನಿಸುಗುಂ ಅಭಿಚಾರಕ್ರಿಯಾಕ್ರೂರ ಪ್ರಕೃತಿಯಪ್ಪ ಪುರೋಹಿತನೆ ಗುರುವೆನಿಸುಗುಂ ಪರದಾರಾಭಿಗಮನಮಂ ನಿಯೋಜಿಸುವ ದುಷ್ಟನೇ ವಿಶ್ವಾಸಭೂಮಿಯೆನಿಸಿದ ಮಿತ್ರನೆನಿಸುಗುಂ ಸ್ನೇಹಾರ್ದ್ರಹೃದಯ ನಿರ್ಮಲರುಮಪ್ಪ ಸಹೋದರರುಮಂ ನಿನಗವರ್ ಪಗೆವರೆಂದವರ್ಗೆ ಭಂಗಮಂ ಮಾಡಿ ಕಿಟ್ಟು ಕಳೆಯಿಸುವ **ಮಹಾಪಾತಕ**ನೇ ಸಚಿವೋತ್ತಮನೆನಿಸುಗುಂ ಅದಜೆನಿಂತಪ್ಪ ದುಷ್ಟಚೇಷ್ಟಾಸಹಸ್ರದಾರುಣಮಪ್ಪ ರಾಜ್ಯತಂತ್ರದೊಳೆಂತಪ್ಪನುಂ ಮೋಹಿಸದಿರನದು ಕಾರಣದಿಂ (ಕರ್ಣಾಟಕ ಕಾದಂಬರಿ ೩-೧೦೩ ವ)

ಇಂತಹ ರಾಜಪುತ್ರರಿಗೆ ಕೌಟಿಲ್ಯದಿಂದ ರಚಿಸಲ್ಪಟ್ಟಿರುವ ಪರಹಿಂಸೆಯನ್ನೇ ಬೋಧಿಸುವ ಅರ್ಥಶಾಸ್ತ್ರದ ಪ್ರಮಾಣದಿಂದ ನಿಗೂಢ ಕೊಲೆಯನ್ನು ಉಪದೇಶಿಸುವ ನಿಪುಣನೇ ಉದ್ದಾಮ ಪಂಡಿತನೆನಿಸಿಕೊಳ್ಳುತ್ತಾನೆ. ಮಾಟ ಕೂಟಗಳನ್ನು ಮೂಡಿಸುವ ಸ್ವಭಾವತಃ

ನಿರ್ದಯನಾದ ಪುರೋಹಿತನೇ ಗುರುವೆನಿಸಿಕೊಳ್ಳುತ್ತಾನೆ. ಹಾದರವನ್ನು ಬೋಧಿಸುವ ದುಷ್ಟನೇ ನೆಚ್ಚಿನ ಗೆಳೆಯನೆನಿಸಿಕೊಳ್ಳುತ್ತಾನೆ. ಸಹೋದರ ಸ್ನೇಹದಿಂದ ಮೃದುವಾದ ಹಾಗೂ ಕಲ್ಮಷವಿಲ್ಲದ ಮನಸ್ಸುಳ್ಳ ಅಣ್ಣತಮ್ಮಂದಿರನ್ನು ಅವರ ನಿಮಗೆ ಶತ್ರುಗಳೆಂದು ಹೇಳಿಕೊಟ್ಟು ತೊಂದರೆಗೀಡುಮಾಡಿಸಿ ಸ್ಥಾನ ಭ್ರಷ್ಟರನ್ನಾಗಿ ಮಾಡಿಸುವ ಮಹಾಪಾಪಿಷ್ಟನೇ ಶ್ರೇಷ್ಠ ಮಂತ್ರಿ ಎನಿಸುತ್ತಾನೆ. ಆದುದರಿಂದ ಈ ಪರಿಯಾದ ಸಾವಿರಾರು ದುರ್ವ್ಯವಹಾರ ಗಳಿಂದ ಭಯಂಕರವಾದ ರಾಜಕೀಯದಲ್ಲಿ ಎಂತಹವನಾದರೂ ಭ್ರಾಂತನಾಗದಿರುವುದಿಲ್ಲ.

*ವಿವರಗಳಿಗೆ ನೋಡಿ: ಶ್ರೀ ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳು ೨೦೧೦*
*ಕೌಟಿಲೀಯ ಅರ್ಥಶಾಸ್ತ್ರ ಪುಟ. ೫೫೮-೫೭೫.*

**೫೮೪. ಮಹಾಪುರುಷರ ಲಕ್ಷಣ**

ತೊಡಗಿದ ಕೆಲಸವನ್ನು ಕೊನೆಗಾಣಿಸುವುದೇ **ಮಹಾಪುರುಷರ ಲಕ್ಷಣವು**....................

(ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ, ಶ್ಲೋಕ ೨೫)

ಮಹಾಪುರುಷರು ತಾವು ಪ್ರಾರಂಭಿಸಿದ ಕೆಲಸವನ್ನು ಅರ್ಧದಲ್ಲಿಯೇ ನಿಲ್ಲಿಸುವುದಿಲ್ಲ. ಅದನ್ನು ಕೊನೆಗಾಣಿಸುತ್ತಾರೆ. ಅದು ಮಹಾಪುರುಷರಾದವರಿಗೆ ಮಾತ್ರ ಸಾಧ್ಯ.

ದುಷ್ಟನಾದೊಡಂ ಶರಣ್ಬೊಕ್ಕನಲ್ಲಿ ಮಹಾಪುರುಷರ್ಗೆ ಪಿರಿದು ಸ್ನೇಹ ಮುಂಟಾಗಿಹುದು.................................

(ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ, ಶ್ಲೋಕ ೬೯)

ದುಷ್ಟನಾದರೂ ಮಹಾಪುರುಷರಿಗೆ ಶರಣಾದಲ್ಲಿ ಅವರಿಗೆ ಅವನ ಬಳಿ ಸ್ನೇಹ ಉಂಟಾಗುವುದು ಎಂದು ಪಂಚತಂತ್ರವು ಹೇಳುತ್ತದೆ. ಪಂಚತಂತ್ರವು ಮಹಾಪುರುಷರ ಸ್ವಭಾವವನ್ನು ಹೀಗೆ ವಿವರಿಸಿದೆ.

**೫೮೫. ಮಹಾರಥಿ**

*ಅನಿಲಜನುಂ ಧೃಷ್ಟದ್ಯು*
*ಮ್ನನುಮಂತಕತನಯನುಂ ಮಹಾಸಾತ್ಯಕಿ ಮ ॥*
*ತ್ಸ್ಯನ ಸೂನು ಶಿಖಂಡಿ ವ್ಯಾ*
*ಸನ ಮತದಿಂದಱುವರುಂ* ***ಮಹಾರಥರಲ್ತೇ*** *॥*

*(ಸಾಹಸ ಭೀಮ ವಿಜಯ ೩-೫೧)*

ಭೀಮ, ದೃಷ್ಟದ್ಯುಮ್ನ, ಧರ್ಮರಾಜ, ಸಾತ್ಯಕಿ, ಮತ್ಸ್ಯರಾಜನ ಮಗ ಶಿಖಂಡಿ- ಈ ಆರು ಜನ ವ್ಯಾಸರ ಮೇರೆಗೆ ಮಹಾರಥರು. ಹತ್ತುಸಾವಿರ ಬಿಲ್ಲಾಳುಗಳೊಂದಿಗೆ ಏಕಕಾಲಕ್ಕೆ ಯುದ್ಧಮಾಡುವವನು ಮಹಾರಥಿ ಎನಿಸಿಕೊಳ್ಳುತ್ತಾನೆ

'ರಥಿಕ' ಎಂದರೆ ಬಂಟ, ಯೋಧ. ಇದು ವೃತ್ತಿವಾಚಕ ಪದ, ಜನವಾಚಕವಲ್ಲ ಎಂದು ಶಂಬಾ ಹೇಳುತ್ತಾರೆ.

೧. ಅರ್ಧರಥಿ ೨. ಸಮರಥಿ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೬೯ ಹಾಲುಮತ ದರ್ಶನ ಸಂಪುಟ. ೩ ಪುಟ. ೮೧*

**೫೮೬. ಮಹಾಸತಿ**

*ಅಂತಿರ್ದೊಡದನೆ ದೋಷಂಗೆಯ್ದು ರೋಷಗ್ರಹಾವೇಶನಾಗಿ ನಿಷ್ಕಾರಣಂ ಪರಿಭವಿಸಿ ನೋಡಿಸಿದೆ. ಆದೊಡಮೇಂ? ಆನಂತಪ್ಪ ಒರ್ಬ ತಾಯ್ಗಂ ತಂದೆಗಂ ಪುಟ್ಟಿದೆನಾದೊಡೆ, ನಾಂ ಪತಿವ್ರತೆಯಾದೊಡೆ, ಮನೆದೈವಂಗಳೆನಗೆ ಸನ್ನಿದಮಾದೊಡೆನ್ನ ಮೂಗು ಮುನ್ನಿನಂತಾಗಲೀ ಕಟ್ಟಿರ್ದ ಕಟ್ಟೆಲ್ಲಂ ಬಿಟ್ಟು ಪೋಗಲೆವೇಟ್ಟುಂ, ಅದಲ್ಲದಾಗಳಾಂ* ***ಮಹಾಸತಿ****ಯಲ್ಲೆಂದು ಪ್ರತಿಜ್ಞೆಗೆಯ್ಯೆ.........................(ಪುಟ.೫೩)*

ಮಹಾಸತಿಯೇ ಮಾಸ್ತಿಯಾಗಿದ್ದಾಳೆ. ಮಾಸ್ತಿಕಲ್ಲು ಸತಿಯಾಚರಣೆಯನ್ನು ಸಂಕೇತಿಸುತ್ತದೆ. ಮಡಿದ ಗಂಡನೊಂದಿಗೆ, ಚಿತೆಯನ್ನು ಪ್ರವೇಶ ಮಾಡುವುದರ ಮೂಲಕ ಸಾಯುವ ವಿಧಿಯನ್ನು ಸಹಗಮನ ಎಂಬುದಾಗಿ ಕರೆಯುತ್ತಾರೆ. 'ಸತಿ' ಹೋಗುವುದು ಎಂಬುದಾಗಿಯೂ ಕೆಲವೊಮ್ಮೆ ಕರೆಯುತ್ತಾರೆ. ಈ ರೀತಿ ಅಗ್ನಿ ಪ್ರವೇಶವನ್ನು ಮಾಡಿ ಮಡಿದ ಮಹಿಳೆಯರ ಸ್ಮಾರಕಗಳೇ ಮಹಾಸತಿಗಲ್ಲುಗಳು. ಇವುಗಳನ್ನು 'ಮಾಸ್ತಿಗಲ್ಲು', 'ಮಾಸ್ತಮ್ಮ', 'ವ್ಯಾಸನತೋಳು' ಎಂಬುದಾಗಿ ಜನ ಹಲವಾರು ಕಡೆ ಇಂದಿಗೂ ಕರೆಯುತ್ತಾರೆ. ಕೆಲವು ಕಡೆಗಳಲ್ಲಿ ಇಂದಿಗೂ ಆರಾಧಿಸುತ್ತಾರೆ.

ಸಹಗಮನ ಮಾಡುವ ಪದ್ಧತಿ ಭಾರತದಾದ್ಯಂತ ಪ್ರಚಲಿತವಿದ್ದ ಒಂದು ಸಂಪ್ರದಾಯ. ಈ ಸಂಪ್ರದಾಯವು ಈ ಶತಮಾನದ ಆದಿಭಾಗದವರೆಗೂ ಇತ್ತು. ಸಹಗಮನ ಮಾಡುವುದು ಹೆಂಗಸು ತನ್ನ ಪಾತಿವ್ರತ್ಯದ ತುತ್ತತುದಿ ಏರಿದಾಗ ಅದು ಎಲ್ಲರಿಂದಲೂ ಸಾಧ್ಯವಿಲ್ಲ ಎಂಬುದನ್ನು ಅರಿತಿದ್ದ ನಮ್ಮ ಜನ ಸತಿಯಾದವಳ ಬಗ್ಗೆ ಗೌರವ ಅಷ್ಟೇ ಅಲ್ಲ ಪೂಜ್ಯಭಾವನೆಯನ್ನು ಹೊಂದಿದ್ದರು. ಈಗಲೂ ಹೊಂದಿದ್ದಾರೆ ಕೂಡ. ಈ ಪದ್ಧತಿ ಹತ್ತನೆಯ ಶತಮಾನದ ನಂತರ ವ್ಯಾಪಕವಾಗಿ ಹರಡಿತು. ಈ ಸಂಪ್ರದಾಯದಲ್ಲಿ ಮಹಿಳೆಯು ಎರಡು ರೀತಿಗಳಲ್ಲಿ ಸತಿಹೋಗುತ್ತಿದ್ದುದ್ದಾಗಿ ತಿಳಿಯುತ್ತದೆ. ಮೊದಲನೆಯದು ಸಹಗಮನ. ಅಂದರೆ, ಗಂಡನ ಹೆಣದೊಂದಿಗೆ ತಾನೂ ಸುಟ್ಟು ಹೋಗುವುದು ಅಥವಾ ಸಮಾಧಿಯಾಗುವುದು. ಎರಡನೆಯದು ಅನುಗಮನ. ಅಂದರೆ, ಗಂಡನು ದೂರದಲ್ಲಿ ಎಲ್ಲಿಯೋ ಸತ್ತಿದ್ದು. ಅಥವಾ ಅವನ ಶವವೇ ದೊರೆಯದಿದ್ದು, ಆಗ ಹೆಂಡತಿ ತನ್ನ ಗಂಡನನ್ನು ಸೇರಲು ಪ್ರತ್ಯೇಕ ಅಗ್ನಿ ಕುಂಡವನ್ನು ನಿರ್ಮಿಸಿಕೊಂಡು ಸಾಯುತ್ತಿದ್ದ ವಿಧಾನ.

ಸತಿಯಾಗಬೇಕಾಗಿದ್ದವಳು ಚಿತೆಯಲ್ಲಿ ಬಿದ್ದೇ ಪ್ರಾಣ ತ್ಯಾಗಮಾಡಬೇಕು ಎಂಬ ನಿಯಮವನ್ನೇನು ನಮ್ಮವರು ಪಾಲಿಸಿಕೊಂಡು ಬಂದಿಲ್ಲ. ಗಂಡನಾದವನ ಶವದೊಂದಿಗೆ ಇವಳು ಆ ಸಮಾಧಿಯಲ್ಲಿ ಹುಗಿಸಿಕೊಳ್ಳುತ್ತಿದ್ದಳು. ಸೊರಬದ ಒಂದು ಮಾಸ್ತಿಕಲ್ಲು ಹರವೂರಿನ ಚಾವುಂಡ ಗೌಡ ಎಂಬುವನ ಮಗ ಬೊಮ್ಮಗೌಡ ಎಂಬುವನು ಸತ್ತಾಗ

ಅವನ ಹೆಂಡತಿಯಾದ ಬೊಮ್ಮಗವುಡಿ ಎಂಬುವಳು ಅವನನ್ನು ಹುಗಿದ ಸಮಾಧಿಯಲ್ಲಿ ಕೂತು ಸಮಾಧಿಸ್ಥಳಾದ ವಿಷಯವನ್ನು ತಿಳಿಸುತ್ತದೆ. ಜೈನರು ಕೆಲವೊಮ್ಮೆ ಸಹಗಮನವನ್ನು ತಮ್ಮ ಧರ್ಮದ ವಿಧಿಗಳಲ್ಲೊಂದಾದ ಸಲ್ಲೇಖನ ವ್ರತವನ್ನು ಆಚರಿಸುವುದರ ಮೂಲಕ ಮಾಡಿದಂತೆ ತೋರುತ್ತದೆ. ಕ್ರಿ.ಶ. ೧೧೫೦ರ ಒಂದು ಶಾಸನದಿಂದ ಸತ್ಯವೆಗ್ಗಡೆ ಎಂಬುವನು ಮಡಿದಾಗ ಅವನ ಹೆಂಡತಿಯು ಸನ್ಯಸನ ವಿಧಿಯಿಂದ ಮಡಿದ ವಿವರಗಳು ದೊರೆಯುತ್ತವೆ.

ಮಹಾಸತಿಯ ಬಗೆಗಿನ ಆಚರಣೆ, ಹಬ್ಬ, ಐತಿಹ್ಯ ಮುಂತಾದ ವಿವರಗಳನ್ನು ಗುರುತಿಸುವ ಸಂದರ್ಭದಲ್ಲಿ ಅವು ಮುಖ್ಯವಾಗಿ ನಾಯಕ, ಗೊಲ್ಲ, ಗೌಡ ಹಾಗೂ ಕೆಲವು ಬಾರಿ ಅಸ್ಪೃಶ್ಯರೆಂದು ಕರೆಯಿಸಿಕೊಂಡ ಜನರಲ್ಲಿಯೇ ಉಳಿದು ಬಂದಿರುವುದನ್ನು ಕಾಣಬಹುದಾಗಿದೆ. ಮಾಸ್ತಿಗೀತೆಗಳನ್ನು ಹಾಡುವವರೂ ಈ ವರ್ಗಕ್ಕೆ ಸೇರಿದವರೇ ಆಗಿದ್ದಾರೆ. ಮಾಸ್ತಿ ಜನಪದ ಗೀತೆಗಳಲ್ಲಿ ಮಹಾಸತಿ ಮದುವೆಯ ಸಿದ್ಧತೆಯಿಂದ ಹಿಡಿದುಮ ಮದುವೆಯ ವಿವರ, ಗಂಡನಾದವನು ಹೋರಾಟಕ್ಕೆ ಹೋಗುವುದು, ಅವನ ಸಾವು, ಮಾಸ್ತಿಯ ಕೊಂಡದ ಸಿದ್ಧತೆಗಳು, ಬಂಧು – ಬಳಗ ನೆರೆದು ಶೋಕಿಸುವುದು, ಮಾಸ್ತಿ ಕೊಂಡಕ್ಕೆ ಬೀಳುವುದು ಮುಂತಾದ ವಿವರಗಳಿರುತ್ತವೆ. ಈ ವಿವರಗಳು ಮೇಲ್ನೋಟಕ್ಕೆ ಘಟನೆಯ ಬೆಳವಣಿಗೆಯ ಸ್ವರೂಪವನ್ನು ಪರಿಚಯಿಸುವಂತೆ ಕಂಡುಬಂದರೂ, ಹೆಣ್ಣಿನ ದಹನಕ್ಕೆ ಕಾರಣವಾದ ಪ್ರಭುತ್ವ ಸಂಸ್ಕೃತಿಯ ನಡವಳಿಕೆಗಳು ಹಾಗೂ ನಂಬಿಕೆಗಳ ವಿರುದ್ಧ ಸ್ಪಷ್ಟವಾದ ಭಾವವೊಂದು ಪ್ರಕಟಗೊಂಡಿರುವುದು ಕಂಡುಬರುತ್ತದೆ. ಮಾಸ್ತಿ ಜನಪದ ಗೀತೆಗಳು ನೇರವಾಗಿ ಸತಿಪದ್ಧತಿಯನ್ನು ವಿರೋಧಿಸು ವಂತೆ ಕಂಡುಬರುವುದಿಲ್ಲ. ಆದರೆ ಬಂಧುಗಳು ಸಹಗಮನ ಮಾಡಬೇಡವೆಂದು ಸತಿಯನ್ನು ಕೇಳಿಕೊಳ್ಳುವುದು, ಸಂಕಟಪಡುವುದು, ಅಸಹಾಯಕತೆಯ ವೇದನೆ ಮುಂತಾದವು ಸ್ವಲ್ಪ ಮಟ್ಟಿಗೆ ಈ ರೀತಿಯಾಗಿ ಆಲೋಚನೆ ಮಾಡುವಂತೆ ಮಾಡುತ್ತವೆ ಎಂದು ಮೋಹನ ಕೃಷ್ಣ ರೈಯವರು ಹೇಳುತ್ತಾರೆ.

*ವಿವರಗಳಿಗೆ ನೋಡಿ: ಆರ್.ಶೇಷಶಾಸ್ತ್ರಿ ೨೦೦೫ ಶಾಸನ ಪರಿಚಯ ಪುಟ. ೨೯–೩೦*
*ಮೋಹನ ಕೃಷ್ಣರೈ ಕೆ. ೨೦೦೯ ಚರಿತ್ರೆ ಕಥನ. ಪುಟ. ೬೦–೬೧*

### ೫೮೭. ಮಾತೃದೇವತೆ

ಪಂಪ ಕವಿ ತನ್ನ ವಾಗ್ವಿಳಾಸಕ್ಕಾಗಿ ಸರಸ್ವತಿಯನ್ನು ಪ್ರಾರ್ಥಿಸುತ್ತಾನೆ. 'ಪರಮ ಜಿನೇಂದ್ರ ವಾಣಿಯೆ ಸರಸ್ವತಿ. ಬೇರೊಂದು ಪೆಣ್ಣರೂಪಮಂ ಧರಿಯಿಸಿ ನಿಂದುದಲ್ತದುವೆ ಭಾವಿಸಿಯೋದುವ ಕೇಳ್ವ ಪೂಜಿಪಾದರಿಸುವ ಭವ್ಯಕೋಟಿಗೆ ನಿರಂತರ ಸೌಖ್ಯ'ವನ್ನು ಕೊಡುವಂಥಾದ್ದು ಎನ್ನುತ್ತಾನೆ. (ಆದಿಪುರಾಣ ೧–೯)

'ಪಂಪಭಾರತ'ದಲ್ಲಿ 'ಸ್ವಲ್ಪವೂ ನಾಶವಿಲ್ಲದ ಯಾರಿಂದಲೂ ಅದರ ಕೊನೆಯನ್ನು ತಿಳಿಯುವುದಕ್ಕಾಗದ, ತನಗೆ ತಾನೆ ಅಕ್ಷಯ ನಿಧಿಯಾಗಿರುವ, ಅವಳನ್ನು ಸೇವಿಸಿದವರಿಗೆ

ಅಸಾಧ್ಯವಾವುದೂ ಇಲ್ಲವೆನಿಸುವ, ಸಮಸ್ತ ವಾಙ್ಮಯಕ್ಕೆ ತಾಯಿಯಾದ ಸರಸ್ವತಿ ದೇವಿಯು ಬುದ್ಧಿಯನ್ನು ಪಾಲಿಸಲಿ' ಎಂದು ಸರಸ್ವತಿಯನ್ನು ವರ್ಣಿಸುತ್ತಾನೆ. (೧-೫)

ಹೀಗೆಯೇ 'ತನ್ನ ತ್ರಿಶೂಲದಿಂದ ಮೇಲಕ್ಕೆ ಚಿಮ್ಮುತ್ತಿರುವ ಹೊಸ ರಕ್ತವೇ ಕೆಂಪಾದ ಚಿಗುರಾಗಿರಲು, ಕಣ್ಣಿಗೆ ಭಯವನ್ನುಂಟುಮಾಡುತ್ತ ಹೊರಕ್ಕೆ ಸೂಸಿ ನೇತಾಡುತ್ತಿರುವ ಕರುಳುಗಳ ಸಮೂಹವೇ ಎಳೆಯ ತಾವರೆಯ ದಂಟಾಗಿರಲು, ಹದ್ದುಮೀರಿದ ರಾಕ್ಷಸರ ದೇಹದಲ್ಲುಂಟಾದ ಅಗಲಿಕೆಯೆಂಬ ಬೆಂಕಿಯನ್ನು ಆರಿಸುತ್ತ ತನ್ನ ಹರಿತವಾದ ಕತ್ತಿಯನ್ನು ಆಶ್ರಯಿಸಿಕೊಂಡಿರುವ ಕೃಶಾಂಗಿಯಾದ ದುರ್ಗಿಯು ಅರಿಕೇಸರಿಯ ಕತ್ತಿಯನ್ನು ಸೇರಿಕೊಂಡಿರಲಿ' ಎಂದು ದುರ್ಗೆಯ ಸ್ತುತಿ ಬರುತ್ತದೆ.

ನಾಗರಿಕರು ಅರ್ಚಿಸುವ ಈ ದೇವತೆಯರ ಪರಿಕಲ್ಪನೆಯಲ್ಲಿ ನಾಗರಿಕ ಆಚರಣೆಯ ವಿಧಗಳಿರುತ್ತವೆ. ಈ ದೇವತೆಯರ ಅರ್ಚನೆಯ ಕ್ರಮವು ವಿಧಿವತ್ತಾಗಿದ್ದು, ನಾಗರಿಕ ಜಗತ್ತಿನೊಳಗೇ ಈ ದೇವತೆಯರ ಅರ್ಚನೆಯ ಕ್ರಿಯೆಯು ನಡೆಯುತ್ತಿರುತ್ತದೆ. ಸ್ತ್ರೀ ದೇವತೆಯರ ಆಚರಣೆಯಲ್ಲಿ ತಾಯಿಯನ್ನು ಕಾಣುವ ದೃಷ್ಟಿಯಿದೆ. ಅಂತಹ ಪರಿಕಲ್ಪನೆಯಲ್ಲಿ ಮಾತೃ ಪ್ರಧಾನ ಸಮಾಜದ ಪ್ರಭಾವವಿದೆ ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಕನ್ನಡ ಕಾವ್ಯಗಳಲ್ಲಿಯೂ ಸ್ತ್ರೀ ದೇವತೆಯರನ್ನು 'ತಾಯಿ' ಎಂದು ಸಂಬೋಧಿಸುವುದನ್ನು ಗಮನಿಸಿದರೆ, ಸ್ತ್ರೀ ದೇವತಾರ್ಚನೆಯಲ್ಲಿ ತಾಯಿ-ಮಗುವಿನ ಸಂಬಂಧದ ರೂಪವನ್ನು ಕಾಣಬಹುದು. ನಾಗರಿಕ ದೇವತೆಗಳಲ್ಲಿ ಶಿಷ್ಟತೆಯು ಸ್ವಚ್ಛವಾಗಿ ರೂಪಿತವಾಗಿದ್ದು, ಅದರಲ್ಲಿ ಸಾತ್ವಿಕ ಅಂಶಗಳನ್ನು ಆರೋಪಿಸಲಾಗಿದೆ. ಇದರೊಂದಿಗೆ ಮತ ಪ್ರಭೇದಕ್ಕೆ ಅನುಗುಣವಾಗಿ ದೇವತೆಯರ ಪರಿಕಲ್ಪನೆಯೂ ವ್ಯತ್ಯಾಸಗೊಂಡಿದೆ. ಉದಾಹರಣೆಗೆ, ಜೈನರ ಪದ್ಮಾವತೀ ದೇವಿ, ಶೈವರ ಮಹಾದೇವಿ ಪರಿಕಲ್ಪನೆಯನ್ನು ಕಾಣಬಹುದು. ಕೆಲವು ಕಾವ್ಯಗಳಲ್ಲಿ ಪುರುಷ ದೇವತೆಯರ ಪತ್ನಿಯರನ್ನಾಗಿಯೂ ಈ ದೇವತೆಯರನ್ನು ಕಾಣಲಾಗಿದೆ.

ರಾಷ್ಟ್ರಕೂಟರಿಂದ ಹೊಯ್ಸಳರ ಅವನತಿಯವರೆಗಿನ ಅವಧಿಯಲ್ಲಿ ಅಸ್ತಿತ್ವದಲ್ಲಿದ್ದ ಗ್ರಾಮದೇವತೆಗಳ ಅಧ್ಯಯನ ನಡೆಸುವಾಗ ಹೆಚ್ಚಿನ ದೇವತೆಗಳು ಸ್ತ್ರೀ ದೇವತೆಗಳಾಗಿರು ವುದು ಕಂಡುಬರುತ್ತದೆ. ಪುರುಷಪ್ರಧಾನ ವ್ಯವಸ್ಥೆಯಲ್ಲಿ ಸ್ತ್ರೀದೇವತೆಗಳು ಹೇಗೆ ಪ್ರಾಮುಖ್ಯತೆಯನ್ನು ಪಡೆದುಕೊಂಡವು ಎನ್ನುವ ಪ್ರಶ್ನೆ ಈ ಸಂದರ್ಭದಲ್ಲಿ ಹುಟ್ಟಿಕೊಳ್ಳುತ್ತದೆ. ಈ ಪ್ರಶ್ನೆಗೆ ಉತ್ತರಿಸಬೇಕಾದರೆ ಗ್ರಾಮದೇವತೆಗಳ ಉಗಮದ ಚರಿತ್ರೆಯನ್ನು ಅಧ್ಯಯನ ನಡೆಸಬೇಕಾಗುತ್ತದೆ. ಮಾತೃಪ್ರಧಾನ ಕುಟುಂಬ ವ್ಯವಸ್ಥೆಯ ಪರಿಣಾಮಗಳನ್ನು ಪರಿಶೀಲಿಸುವುದು ಇಲ್ಲಿ ಅನಿವಾರ್ಯವೆನಿಸುತ್ತದೆ. ದೇವಿಪ್ರಸಾದ್ ಚಟ್ಟೋಪಾಧ್ಯಾಯರ ಪ್ರಕಾರ ಮಾತೃಪ್ರಧಾನ ಪಂಥದ ಜನಪದ ರೂಪಗಳೇ ಗ್ರಾಮದೇವತೆಗಳು. ಕೃಷಿ ಪ್ರಧಾನ ಸಮಾಜದಲ್ಲಿ ಹೆಣ್ಣನ್ನು ಫಲವಂತಿಕೆಯ ಅಥವಾ ಫಲೋತ್ಪತ್ತಿಯ ಸಂಕೇತವಾಗಿ ಪರಿಗಣಿಸಿರುವುದೇ ಈ ವ್ಯವಸ್ಥೆಯ ಹುಟ್ಟಿಗೆ ಕಾರಣ.

ಎಲ್ಲಮ್ಮನ ಕುರಿತ ಪುರಾಣ ಮೂಲದ ಕಥೆಯು ಎಲ್ಲಮ್ಮನನ್ನು ರೇಣುಕೆಯೆಂದು

ಕರೆಯುತ್ತದೆ. ರೇಣುಕರಾಜನ ಮಗಳಾಗಿ, ಪರಶುರಾಮನ ತಾಯಿಯಾಗಿ, ಜಮದಗ್ನಿಯ ಮಡದಿಯಾಗಿ ಆಕೆಯ ಕತೆ ಹೆಣೆದುಕೊಂಡಿರುವುದು ತಿಳಿದುಬರುತ್ತದೆ. ಜನಪದ ಮೂಲದ ಕತೆಗಳು ಈ ದೇವತೆಯನ್ನು ಎಲ್ಲಮ್ಮನೆಂದೇ ಕರೆಯುತ್ತವೆ. ಮೂಲತಃ ಎಲ್ಲಮ್ಮ ಎಲ್ಲೆಯ ಅಥವಾ ಸೀಮೆಯ ದೇವತೆ ಎನ್ನುವ ವಾದ ಹೆಚ್ಚು ಪ್ರಚಾರಗೊಂಡಿರುವಂತೆ ಕಂಡುಬರುತ್ತದೆ. ಈ ವಾದದ ಪ್ರಕಾರ, ಗ್ರಾಮಗಳ ಸೀಮೆಗಳನ್ನು ಗುರುತಿಸಲು ಎಲ್ಲೆಯ ಕಲ್ಲುಗಳನ್ನು ಹಾಕಲಾಗುತ್ತಿತ್ತು, ಆ ಕಲ್ಲುಗಳು ಕ್ರಮೇಣ ಪೂಜೆ, ಆರಾಧನೆಗಳನ್ನು ಕಂಡು ವಿಶೇಷತೆಯನ್ನು ಪಡೆದುಕೊಂಡವು. ಎಲ್ಲಮ್ಮ ಪ್ರಭಾವಶಾಲಿಯಾಗಿ ಬೆಳೆಯುತ್ತಲೇ ಸಮಾಜದ ನಾನಾ ವರ್ಗಗಳಿಂದ ಆಕರ್ಷಿತಳಾದಳು. ಬ್ರಾಹ್ಮಣರಿಗೆ ರೇಣುಕೆಯಾಗಿ, ವೀರಶೈವರಿಗೆ ಸತ್ಯಕ್ಕಳಾಗಿ, ಜೈನರಿಗೆ ಪದ್ಮಾವತಿಯಾಗಿ, ಕೆಳವರ್ಗದವರಿಗೆ ಹುಲಿಗೆಮ್ಮ, ಸವಾರೆಮ್ಮ, ಮಾಪುರತಾಯಿಯಾಗಿ ಪರಿವರ್ತನೆಗೊಂಡಳು ಎಂದು ಮೋಹನಕೃಷ್ಣ ರೈ ಹೇಳುತ್ತಾರೆ.

ಸಿಂಧೂ ವ್ಯವಹಾರನೀತಿಯ ಇನ್ನೊಂದು ಮುಖ್ಯಾಂಶವು 'ಮಾತೃದೇವತಾ' ಪೂಜೆಯಾಗಿತ್ತು. ಈ ಪ್ರದೇಶಗಳಲ್ಲಿ ದೇವಿಯ ಹಲವಾರು ರೂಪಗಳು ದೊರಕಿವೆ: ಹಾಗೂ ಈ ರೂಪಗಳನ್ನು ಗುರುತು ಹಿಡಿಯುವುದರಲ್ಲಿ ಸಂಶಯವೇನೂ ಇಲ್ಲ. ಹೀಗೆ ಈ ವ್ಯವಹಾರ ನೀತಿಯಲ್ಲಿರುವ ದಿವ್ಯದ ಸ್ತ್ರೀಭಾವ ಪ್ರಚುರತೆಯು ಅರ್ವಾಚೀನ ಭಾರತೀಯ ಸಂಸ್ಕೃತಿಯ ಮೇಲೆ ಬೀರಿದ ಮತ್ತೊಂದು ಅವೈದಿಕಾಂಶ. ದೇವಾಲಯಗಳಲ್ಲಿನ ದೇವಪೂಜಾ ಸಂವಿಧಾನವೂ ಈ ವ್ಯವಹಾರನೀತಿಯಲ್ಲಿ ಪ್ರಮುಖವಾಗಿತ್ತು. ಇವೆರಡು ಅಂಶಗಳೂ ಆಗಲೇ ಮೇಲೆ ವಿವರಿಸಲ್ಪಟ್ಟ ದ್ರಾವಿಡ ವ್ಯವಹಾರನೀತಿಗೆ ಸಮನಾಗಿವೆ. ಆದರೆ ಈ ವ್ಯವಹಾರ ನೀತಿಯು ವಸ್ತುತಃ ನಗರಗಳ ವ್ಯವಹಾರ ನೀತಿಯಾಗಿತ್ತು ಮತ್ತು ಅವಶೇಷಗಳು ನಗರ ನೆಲೆಗಳಲ್ಲಿ ಮಾತ್ರ ದೊರೆತಿರುವುದರಿಂದ ಅದು ಬೇರೆಯಾಗುವುದಕ್ಕೆ ಸಾಧ್ಯವಿಲ್ಲ. ಪಶು – ಪಕ್ಷಿಗಳು ಕಾಣಿಸಿಕೊಂಡಿರುವುದು ಈ ವ್ಯವಹಾರನೀತಿಯ ಮತ್ತೊಂದು ವೈಶಿಷ್ಟ್ಯವಾಗಿದೆ ಮತ್ತು ದ್ರಾವಿಡ ವ್ಯವಹಾರ ನೀತಿಗೂ ಇದು ಸಮಾನವಾಗಿದೆ. ಅನೇಕ ವಿಧಾವಾದ ಆಕೃತಿಗಳು ಸಿಕ್ಕಿವೆ: ಆದರೆ ಅವು ಅಲಂಕಾರ ವಸ್ತುಗಳೇ ಅಥವಾ ಪೂಜಾರ್ಹ ವಸ್ತುಗಳೇ ಎಂಬುದು ಅನಿಶ್ಚಿತವಾಗಿದೆ. ಅವುಗಳು ಚಿತ್ರ – ಲೇಖನ ಮಾರ್ಗದ ಬರವಣಿಗೆಯ ವರ್ಣಮಾಲೆಯಾಗಿದ್ದರೂ ಇರಬಹುದು. ಅನಿಶ್ಚಿತ ವಿಷಯಗಳು ತುಂಬಾ ಇವೆ: ಆದರೆ ಪಶುಗಳ ಪ್ರಚುರತೆಯು ನಮ್ಮ ಗಮನವನ್ನು ಸೆಳೆಯುವ ಒಂದು ವೈಶಿಷ್ಟ್ಯ.

ಋಗ್ವೇದದಲ್ಲಿಯೂ ಮಾತೃದೇವತೆಯಾದ ಉಷೆ(ಉಷಸ್) ಯ ಚಿತ್ರಣವು ಬರುತ್ತದೆ. ಮಾತೃದೇವತೆಯಾದ ಉಷ್ ಮತ್ತು ಇಂದ್ರರ ನಡುವೆ ಯುದ್ಧವು ನಡೆಯುತ್ತದೆ. ಮಾತೃದೇವತೆಯರು ಕೂಡುದಾರಿಯಲ್ಲಿ ಪುರುಷರನ್ನು ಬಲಿಕೊಡುವ ಚಿತ್ರಣವೂ ಸಿಗುತ್ತದೆ. ಇದು ಮಾತೃದೇವತೆಯರ ಪ್ರಾಬಲ್ಯವನ್ನು ಚಿತ್ರಿಸುತ್ತದೆ. ಗೌರಿಯೂ ಒಂದರ್ಥದಲ್ಲಿ ಮಾತೃದೇವತೆಯೇ ಆಗಿದ್ದಳು. ಮಾತೃದೇವತೆಯ ಆರಾಧನೆಯು

ಈಗಲೂ ನಡೆಯುತ್ತದೆ.

ಮಹಾಮಾತಾ ಸಂಪ್ರದಾಯವು ಪುರಾತನ ಜನಾಂಗದ ಮೂಲ ದೈವತ. ಭಾರತದ ಹೊರಗೂ ಆದಿ ಜನನಿಯ (Mother Goddess) ಆರಾಧನೆಯಿದ್ದಿತು. ಇದು ಮಾನವ-ಸಮಾಜವು ಮಾತೃ-ಪ್ರಧಾನ ಕುಟುಂಬ ಸಂಸ್ಥೆಯ ಹಂತದಲ್ಲಿ ಇದ್ದಾಗಿನ ದೇವತಾ ಪ್ರತಿಮೆ.

ಪಂಪನ ಎರಡೂ ಕೃತಿಗಳ ಪ್ರಾರ್ಥನೆಯ ಕ್ರಮವನ್ನು ಗಮನಿಸಿದಾಗ ಒಂದಂಶವು ಸ್ಪಷ್ಟವಾಗುತ್ತದೆ. ಪ್ರಾರ್ಥನೆಯಲ್ಲಿ ಕಾವ್ಯದ ವಸ್ತುವನ್ನು ಸೂಚ್ಯವಾಗಿ ಸೂಚಿಸುವುದು 'ಆದಿಪುರಾಣ'ವು ಜೈನ ತತ್ತ್ವವನ್ನು ನಿರೂಪಿಸುವ ಕೃತಿಯಾದುದರಿಂದ ಅದಕ್ಕೆ ಅನುಗುಣವಾದ ಪ್ರಾರ್ಥನೆ ಪದ್ಯವು ಬಂದಿದೆ. 'ಪಂಪಭಾರತ'ವು 'ಅರಿಕೇಸರಿ'ಯನ್ನು ನಾಯಕನಾಗಿರಿಸಿ, ರಚಿಸಿದ ಕೃತಿಯಾದುದರಿಂದ ಅರಿಕೇಸರಿಗೆ ಬುದ್ಧಿ ಮತ್ತು ಶಕ್ತಿಯನ್ನು ಕೊಡುವಂತೆ ಪ್ರಾರ್ಥನೆ ರಚಿತವಾಗಿದೆ. ಇದರಲ್ಲಿ ಶೌರ್ಯಕ್ಕೆ ದ್ಯೋತಕವಾದ ದುರ್ಗೆಯ ಪ್ರಾರ್ಥನೆಯು ಬಂದಿದೆ.

ಈ ಎರಡೂ ಪ್ರಾರ್ಥನೆಯ ಅಂಶಗಳಿಗೆ ಪೂರಕವಾಗುವಂತೆ ಇತಿಹಾಸ ತಜ್ಞರ ಅಭಿಪ್ರಾಯವನ್ನು ಸಂಗ್ರಹಿಸಿ ಹೇಳಬಹುದು: ಮೌರ್ಯರ ಕಾಲದಲ್ಲಿ ಯಕ್ಷಿಣಿಯರ ಆರಾಧನೆಯು ಪ್ರಚಲಿತವಾಯಿತು. ಈ ಸಂದರ್ಭ ದಕ್ಷಿಣ ಭಾರತದಲ್ಲಿ ಹೆಣ್ಣಿನ ಫಲವತ್ತತೆಯನ್ನು ಕುರಿತ ಯಕ್ಷಿಣಿಯರ ಆರಾಧನೆಯು ಹೆಚ್ಚಿತು. ಸುಮಾರು ಇದೇ ಕಾಲಕ್ಕೆ ಲಕ್ಷ್ಮೀ ಪೂಜೆ, ಶಕ್ತಿ ಪೂಜೆಯು ಬಳಕೆಯಲ್ಲಿ ಬಂದಿತು. ಸುಂಗ ಕುಶಾನರ ಕಾಲದಲ್ಲಿ ಗಜಲಕ್ಷ್ಮಿಯ ಆರಾಧನೆಯು ರೂಪುಗೊಂಡಿತು. ಇವರ ಕಾಲದಲ್ಲಿ ಉಮೆ, ಶ್ರೀಲಕ್ಷ್ಮಿ ಸರಸ್ವತಿಯರು ಮುಖ್ಯ ದೇವತೆಯರಾಗಿದ್ದರು.

ಗುಪ್ತರ ಕಾಲದಲ್ಲಿ ಮಾತೃದೇವತೆಯರ ಪೂಜೆಯೂ ಹೆಚ್ಚಿದ್ದು ಸಪ್ತಮಾತೃಕೆಯರ ಆರಾಧನೆಯು ಹೆಚ್ಚಿತು. 'ಶಕ್ತಿ'ಯ ಕುರಿತು ನಂಬಿಕೆಯು ಈ ಕಾಲದಲ್ಲಿ ಹೆಚ್ಚಾಗ ತೊಡಗಿದ್ದು ಹರ – ಗೌರಿಯರ ಕಲ್ಪನೆಯು ಬಂದಿತು. ಗುಪ್ತರ ಕಾಲಕ್ಕೆ (ಕ್ರಿ.ಶ. ನಾಲ್ಕನೆಯ ಶತಮಾನ) ದುರ್ಗೆಯ ಪೂಜೆಯು ಬಳಕೆಯಲ್ಲಿ ಬಂದಿತು. ಕ್ರಿ.ಶ ಐದನೆಯ ಶತಮಾನದ ತರುವಾಯ ಶಕ್ತಿ – ದೇವಿ ಪೂಜೆಯೂ ಭಾರತೀಯ ಪರಂಪರೆಯಲ್ಲಿ ಸ್ಪಷ್ಟವಾಗಿ ಒಡಮೂಡಿರುವುದನ್ನು ಕಾಣಬಹುದಾಗಿದೆ. ಮಾತೃ ದೇವತೆಯ ಪೂಜೆಯು ಆ ವೇಳೆಯ ತಾಂತ್ರಿಕರಲ್ಲಿ ವಿಶಿಷ್ಟವಾದ ರೂಪವನ್ನು ತಳೆಯಿತು. ಕಾಳಿ, ಕಾಮಾಕ್ಷಿ, ಮಹಾದುರ್ಗೆ, ಮತಂಗಿ, ಭುವನೇಶ್ವರಿ, ಭೈರವಿ, ಧೂಮಾವತಿ, ಏಕಜಾತ, ತಾರಾ, ಭಗವತಿ ಮುಂತಾದ ಸ್ತ್ರೀ ದೇವತೆಗಳ ಹೆಸರನ್ನು ಕ್ರಿ.ಶ ಆರನೆಯ ಶತಮಾನದ ಹೊತ್ತಿಗೆ ತಾಂತ್ರಿಕರು ತಂದರು.

ಪಂಪನ ಕೃತಿಯ ಪ್ರಾರ್ಥನೆಯಲ್ಲಿ ಉಕ್ತವಾದ ದುರ್ಗಿಯು ಶಕ್ತಿಗೆ ಸಂಕೇತವಾಗಿರುವುದು ಮೇಲಿನ ಆಧಾರದಿಂದ ಸ್ಪಷ್ಟವಾಗುತ್ತದೆ. ವಾಗ್ದೇವತೆಯ ಕುರಿತು ಹೇಳುವಾಗ ಮಾತ್ರ 'ಆದಿಪುರಾಣ'ದಲ್ಲಿ ತನ್ನ ಧಾರ್ಮಿಕ ನೆಲೆಗೆ ಅನುಸಾರವಾಗಿ ಸರಸ್ವತಿಯು ಬೇರೆ

ಹೆಣ್ಣು ರೂಪವಲ್ಲ ಎಂದು ಹೇಳುತ್ತಾನೆ. ಪೊನ್ನನು 'ಶಾಂತಿಪುರಾಣ'ದಲ್ಲಿ ಅಂಬಿಕಾಯಕ್ಷಿಯನ್ನು ಸುತ್ತಿಸುತ್ತಾನೆ. (೧-೬) ಈ ಕುರಿತು ಹಂ.ಪ.ನಾಗರಾಜಯ್ಯ ಅವರು ಶಾಂತಿಪುರಾಣದ ಪ್ರಸ್ತಾವನೆಯಲ್ಲಿ ಹೀಗೆ ಹೇಳುತ್ತಾರೆ. ಅಂಬಿಕಾಯಕ್ಷಿಯ ಕಥೆ ಪೊನ್ನನ ಕಾಲಕ್ಕಾಗಲೀ ಹೇಗೆ ಕನ್ನಡ ನಾಡಿನಲ್ಲೂ, ಜೈನಸಮಾಜದಲ್ಲೂ ಜನಜನಿತವಾಗಿತ್ತೆಂಬುದು ಶಾಂತಿಪುರಾಣದ ೧-೬ ಪದ್ಯದಿಂದ ಸ್ಪಷ್ಟವಾಗುತ್ತದೆ. ಇಲ್ಲಿ ಇನ್ನೂ ಒಂದು ಗಮನೀಯ ಅಂಶವಿದೆ. ಪೊನ್ನನ 'ಶಾಂತಿಪುರಾಣ' ಕಾವ್ಯ ಹದಿನಾರನೆಯ ತೀರ್ಥಂಕರನಾದ ಶಾಂತಿನಾಥನ ಚರಿತ್ರೆ. ಅದರಿಂದ ಈ ಕಾವ್ಯದಲ್ಲಿ ಸಹಜವಾಗಿಯೇ ಶಾಂತಿನಾಥನ ಯಕ್ಷ ಯಕ್ಷಿಯರಾದ ಗರುಡ ಯಕ್ಷ ಮತ್ತು ಮಾನಸೀ ಯಕ್ಷಿಯರ ಸುತ್ತಿ ಇರಬೇಕಾಗಿತ್ತು. ಅವರ ಪ್ರಸ್ತಾಪವೇ ಇಲ್ಲ. ಈ ಅಂಶ ಕೂಡಾ ಅಂಬಿಕೆಯ ಮಹತ್ವವನ್ನು ಸಾರುತ್ತದೆ.

ಋಗ್ವೇದದಲ್ಲಿ ವಾಕ್‌ದೇವತೆ (೧೦-೧೨೫)ಯನ್ನು ಸ್ತುತಿಸುವ ಸೂಕ್ತವಿದೆ. ನೀರಿನಲ್ಲಿ ಸಮುದ್ರದಲ್ಲಿ, ಆಕೆಯ ಸ್ಥಾನ ಐತರೇಯ ಬ್ರಾಹ್ಮಣದಲ್ಲಿ ವಾಕ್ಕನ್ನು ಸ್ತ್ರೀಯಾಗಿ ಪರಿವರ್ತಿಸಿ ಸೋಮರಸಕ್ಕೆ ಬೆಲೆಯಾಗಿ ಕೊಟ್ಟರಂತೆ. (ಐ.ಬಕ್ರ ೧-೨೭) ಅಷ್ಟೇ ಅಲ್ಲದೆ, ಸರಸ್ವತಿ ದೇವಿಯನ್ನು ಶುದ್ಧಗೊಳಿಸುವವಳು, ಅನ್ನಾದಿಗಳನ್ನು ಕೊಡುವವಳು ಐಶ್ವರ್ಯ ಕೊಡುವವಳು ಎಂದು ಭಾವಿಸಲಾಗಿದೆ. ಸರಸ್ವತಿಯನ್ನು ನದಿಯಾಗಿ, ದೇವತೆಯಾಗಿ, ಆಕಾಶಾಭಿಮಾನಿ ದೇವತೆಯಾಗಿ ವಾಗ್ದೇವಿಯಾಗಿ ಋಗ್ವೇದವು ಕಂಡಿದೆ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೧*
*ಪುಟ. ೧೩, ೧೯೦, ಸಂಪುಟ. ೩ ಹಾಲುಮತ ದರ್ಶನ ಪು. ೧೧೭, ೧೯೩*
*ವೆಂಕಟರಾವ್. ಹೆಚ್.ಪಿ (ಅನು) ೧೯೪೯ ಋಗ್ವೇದ ಪುಟ. ೬೪, ೬೮*
*ಡಿ. ಡಿ. ಕೊಸಾಂಬಿ ೨೦೦೩ ಪುರಾಣ ಮತ್ತು ವಾಸ್ತವ ಪುಟ. ೧೨೪-೧೨೬, ೧೧೮-೧೫೭*
*ಮೋಹನಕೃಷ್ಣ ರೈ ೨೦೦೪ ಪ್ರಭುತ್ವ ಮತ್ತು ಜನತೆ ಪು. ೧೪೧*
*Deviprasad Chattopadhyaya 1981 Lokayata P. 232-269*
*ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦ ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ*
*ನಾಗರಾಜಯ್ಯ ಹಂ.ಪ. ೧೯೭೨ ಪ್ರಸ್ತಾವನೆ ಪುಟ. ೧೧೨*

**೫೮೮. ಮಾತೃವಾತ್ಸಲ್ಯ**

ಜನನೀ ಸಂಬಂಧದ ಮೋಹದ ಕುರಿತ ವಿಚಾರವು 'ಆದಿಪುರಾಣ'ದಲ್ಲಿ ಬರುತ್ತದೆ. (೩-೫೦ವ) ಸಂಬಂಧದ ಮೋಹವು ಜನ್ಮಾಂತರಗಳಲ್ಲೂ ಬರುತ್ತದೆ ಎಂಬ ನಂಬಿಕೆಯು ಇಲ್ಲಿ ಒಡಮೂಡಿದೆ. ತಾಯ್ತನದ ಕುರಿತಾಗಿ ಇರುವ ಗಾಢವಾದ ಮತ್ತು ರೂಢವಾದ ನಂಬಿಕೆಯಿಂದಾಗಿ ರಕ್ತ ಸಂಬಂಧೀ ಬಂಧುತ್ವವು ಭಾರತೀಯ ಪರಂಪರೆಯಲ್ಲಿ ಹೆಚ್ಚಾಗಿ ಇರುತ್ತದೆ. ಸಂಸ್ಕೃತಿಯು ಈ ರೀತಿಯ ನಂಬಿಕೆಗಳನ್ನು ಪ್ರೇರೇಪಿಸುತ್ತದೆ. ಜನನೀ ಸಂಬಂಧ ಮೋಹವು ನೈತಿಕವಾದ ನಂಬಿಕೆಯನ್ನು ಉಳ್ಳದ್ದಾಗಿದ್ದ ಅದು ಜನಾಂಗದ ನೈತಿಕತೆಯ ಲಕ್ಷಣವಾಗಿರುತ್ತದೆ. ಇಲ್ಲಿ ತಾಯ್ತನವು ಪಾಲನೆಯ ಅರ್ಥವನ್ನು

ಪಡೆದುಕೊಳ್ಳುತ್ತದೆ. ಹಿಂದೂ ಧರ್ಮದ ಪ್ರಕಾರ 'ಮೋಕ್ಷ'ವು ಬದುಕಿನ ಅಂತಿಮಗುರಿ. (ಮೂಲ) ಪ್ರಭುಶಂಕರ (ಅನು) ೧೯೭೩ ಮು.೧೬೧) ಜೈನಧರ್ಮದ ಪ್ರಕಾರ, ಭವಾವಳಿಯು ಜನ್ಮಾಂತರವನ್ನು ಸೂಚಿಸುವಂತಹುದು. ಬೇರೆ ಬೇರೆ ಜನ್ಮಗಳನ್ನು ಎತ್ತುವ ಪ್ರಕ್ರಿಯೆ (ಶಾಮರಾಯ ತ.ಸು (ಸಂ) ೧೯೮೧ ಮು. ೧೯೦. ಪು.೧೯೧) ಇದರಂತೆ ಅರ್ಹಂತನಾದರೆ ಭವಾವಳಿಯು ಮುಕ್ತವಾಯಿತು. ಭವಾವಳಿಯ ಪರಿಭಾಷೆ ಮಾತ್ರ ಹೆಣ್ಣು ಗಂಡಿಗೆ ಸಮಾನವಾದುದು.

ಪಂಪನ 'ಆದಿಪುರಾಣ'ದಲ್ಲಿ ಲಲಿತಾಂಗನ ಭವವನ್ನು ವಿವರಿಸುವಾಗ ಈ ರೀತಿ ಬರುತ್ತದೆ. 'ಎಮ್ಮ ತಾಯ್' ಮನೋಹರಿಯು ಎಮ್ಮೊಳಪ್ಪಮೋಹಂ ಕಾರಣವಾಗಿ ತಪಮಂ ಕೈಕೊಳ್ಳದೆ – ಸರಳ ಶ್ರಾವಕ ವ್ರತಂಗಳತೆ ಕೈಕೊಂಡು (೩–೫೦ವ) ಜನನೀ ಸಂಬಂಧ ಮೋಹವು ಜನ್ಮಾಂತರಗಳಲ್ಲಿಯೂ ಬರುತ್ತದೆ ಎಂದೂ ಈ ಕೃತಿಯಲ್ಲಿ ಹೇಳಲಾಗಿದೆ. (೩–೫೧ವ)

'ವಡ್ಡಾರಾಧನೆ' ಕೃತಿಯಲ್ಲಿ ಭಟಾರರ ಪೂಜೆ ಸಲ್ಲಿಸಿ ಹೆಣ್ಣೊಬ್ಬಳು ತನಗೆ ಮಕ್ಕಳಾಗುತ್ತಾರೆಯೇ ಎಂದು ಕೇಳುತ್ತಾಳೆ. (೨– ಪು. ೯೦) ಇಲ್ಲಿ ಭಟಾರರು ಅವಧಿ ಜ್ಞಾನಿಗಳು ಎಂಬ ನಂಬಿಕೆಯೇ ಪ್ರಧಾನವಾಗಿರುವುದನ್ನು ಕಾಣಬಹುದು. ಇದೇ ಕೃತಿಯಲ್ಲಿ ಶ್ರೀ ಯಾ ದೇವತೆಯ ಅರ್ಚನೆಯಿಂದ ಮಕ್ಕಳಾಗುತ್ತದೆ ಎನ್ನುವ ನಂಬಿಕೆಯು ಪ್ರಕಟವಾಗಿದೆ. (೯.ಪು.೨೧೭) ಈ ರೀತಿಯ ಕಲ್ಪನೆಗಳು ಅನೇಕ ಕೃತಿಗಳಲ್ಲಿ ಒಡಮೂಡಿವೆ. 'ಚಾವುಂಡರಾಯ ಪುರಾಣ' (ಆದಿಪುರಾಣ–೫೧)ದಲ್ಲಿ ಮಕ್ಕಳಾಗಲು ರಾಣಿಯೊಬ್ಬಳು ವ್ರತಾಚರಣೆ ನಡೆಸಿದ ವಿಚಾರವು ಬರುತ್ತದೆ. ಆನಪದಾಭ್ಯರ್ಚನವನ್ನು ಮಾಡುವುದು, ಶಾಸನ ದೇವಿಯರನ್ನು ಅರ್ಚಿಸುವುದು, ಪ್ರತಿಮಾ ಯೋಗದಿಂದ ಇದ್ದವರನ್ನು ಬಲಗೊಳಿಸುವುದು, ಚತುರ್ವಿಧ ದಾನವನ್ನು ಮಾಡುವುದು ಈ ಕೃತಿಯಲ್ಲಿ ಉಲ್ಲೇಖಿತವಾಗಿವೆ. ಜೈನ ಧರ್ಮದ ಕೃತಿಗಳಲ್ಲಿ ಈ ರೀತಿಯ ಕಲ್ಪನೆಗಳು ಬಂದರೆ, ಜೈನೇತರ ಕೃತಿಗಳಲ್ಲಿ ಮೂಲ ಆಶಯವು ಹೀಗೆಯೇ ಇದ್ದು, ಭಿನ್ನ ರಚನೆಯ ನಂಬಿಕೆಗಳು ಬಂದಿವೆ. ನಾಗವರ್ಮನ 'ಕಾದಂಬರಿ'ಯಲ್ಲಿ ವಿಲಾಸವತಿಯು ಮಕ್ಕಳಾಗಲು ಗುರುಗಳ, ದೇವರ, ಬ್ರಾಹ್ಮಣರ ಸೇವೆಯನ್ನು ಭಕ್ತಿಯಿಂದ ಮಾಡುತ್ತಾಳೆ.

ಫಯರಸ್ಟೋನ್ ಹೇಳುವ ಪ್ರಕಾರ 'ಎಲ್ಲಾ ಮಕ್ಕಳು ತಾಯಿಯಿಂದ ಆಕರ್ಷಿತ ರಾಗುತ್ತಾರೆ. ಯಾಕೆಂದರೆ ತಾಯಿಯು ಮಗುವಿನ ಬೆಳವಣಿಗೆಯ ಮೊದಲ ರಕ್ಷಕಿಯಾಗಿರು ತ್ತಾಳೆ. ಪಿತೃಪ್ರಧಾನ ಸಂಸ್ಕೃತಿಯಲ್ಲಿ ತಾಯ್ತನ ಅನ್ನುವುದೂ ಕೂಡಾ ಒಂದು ಸಂಸ್ಥೆಯಾಗಿದ್ದು, ಅಲ್ಲಿ ತಾಯ್ತನದ ಬಗೆಗೆ ಒತ್ತಡವಿರುತ್ತದೆ. ಇಂತಹ ಸನ್ನಿವೇಶದಲ್ಲಿ ತಾಯ್ತನವು ಕೂಡಾ ಭಾವನಾತ್ಮಕ ಸಂಗತಿಗಳಿಂದ ಪ್ರೇರಿತವಾಗುವುದು ಅನಿವಾರ್ಯವಾಗಿರುತ್ತದೆ. ಹೀಗಾಗಿ ತಾಯಿ – ಮಗುವಿನ ಸಂಬಂಧವೂ ನಿರ್ದಿಷ್ಟ ಗುರಿಯುಳ್ಳದ್ದಾಗಿರುತ್ತದೆ. (ಅದೇ. ಪು.೨೫೯)

ಹೆಣ್ಣಿನ ತಾಯ್ತನದ ಬಗೆಗೆ 'ಮಹಾಭಾರತ'ದಲ್ಲಿ ಬರುವ ವ್ಯಾಖ್ಯಾನವೊಂದು

ಹೀಗಿದೆ: ಮಗುವನ್ನು ಹೊಟ್ಟೆಯಲ್ಲಿ ಧಾರಣೆ ಮಾಡುವುದರಿಂದ "ಧಾತ್ರೀ", ಜನ್ಮವೀಯುವುದರಿಂದ 'ಜನನೀ', ಸ್ತನ್ಯ – ಆಹಾರಗಳನ್ನು ಇತ್ತು ಅಂಗಾಂಗಳು ವರ್ಧಿಸುವುದರಿಂದ 'ಅಂಬಾ', ವೀರಸಂತಾನ ಪಡೆಯುವುದರಿಂದ 'ವೀರಸೂ' ಎಂದು ಆಗಿರುತ್ತಾಳೆ. ಹುಟ್ಟಿದ ಮಗುವಿಗೆ ಶುಶ್ರೂಷೆ ಮಾಡುವುದರಿಂದ 'ಶುಶ್ರೂ' ಎಂಬ ಹೆಸರೂ ಬಂದಿದೆ. (ರಾಮೇಶ್ವರಾವಾಧಾನಿ (ಸಂ) ೧೯೭೦. ಪು.೨೩, ೭೧–೭೨) ಈ ವಾಖ್ಯಾನದ ಹಿನ್ನೆಲೆಯಲ್ಲಿ 'ತಾಯ್ತನ'ವು ಹೆಣ್ಣಿನ ಎರಡನೆಯ ಪಾತ್ರವನ್ನು ಸೂಚಿಸುತ್ತದೆ. ಕುಟಂಬ ರೂಪದಲ್ಲಿ ಹೆಣ್ಣು ಮೊದಲು ಹೆಂಡತಿ, ಅನಂತರ ಆಕೆ ತಾಯಿ, ಪಿತೃಪ್ರಧಾನ ಸಂಸ್ಕೃತಿಯು ತಂದೆಯ ಅನಂತರ ತಾಯಿ ಎನ್ನುವ ಕಲ್ಪನೆಯನ್ನು ವ್ಯಕ್ತಪಡಿಸಿದರೆ, ಮಾತೃಪ್ರಧಾನ ಸಂಸ್ಕೃತಿಯು ತಾಯ್ತನಕ್ಕೆ ಮೊದಲ ಗೌರವವನ್ನು ಸಲ್ಲಿಸುತ್ತದೆ. ಫಯರ್‌ಸ್ಟೋನ್ ಹೇಳುವಂತೆ, ಪಿತೃಪ್ರಧಾನ ಸಂಸ್ಕೃತಿಯಲ್ಲಿ ತಾಯ್ತನ ಅನ್ನುವುದೂ ಕೂಡಾ ಒಂದು ಸಂಸ್ಥೆಯಾಗಿದ್ದು, ಅಲ್ಲಿ ತಾಯ್ತನದ ಬಗೆಗೆ ಬಲವಂತ ಹೇರುವಿಕೆ ಇರುತ್ತದೆ. ಈ ರೀತಿಯ ಸನ್ನಿವೇಶದಲ್ಲಿ ತಾಯ್ತನವು ಭಾವನಾತ್ಮಕ ವಿಷಯಗಳಿಂದ ಪ್ರೇರಿತವಾಗುವುದು ಅನಿವಾರ್ಯವಾಗುತ್ತದೆ. ಹೀಗಾಗಿ ತಾಯಿ – ಮಗುವಿನ ಸಂಬಂಧವೂ ನಿರ್ದಿಷ್ಟ ಗುರಿಯುಳ್ಳದ್ದಾಗಿರುತ್ತದೆ.

ಮನುವಿನ ಪ್ರಕಾರ ತಂದೆಗಿಂತ ತಾಯಿಗೆ ಸಾವಿರ ಪಾಲು ಹೆಚ್ಚು ಗೌರವ ತೋರಬೇಕು.

*ವಿವರಗಳಿಗೆ ನೋಡಿ: ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೨–೧೪೫*

## ೫೪೯. ಮಾದೆಗಿ

*"..........ಚಂಪಾನಗರದೊಳ್ ಮಾದೆಗರ್ಗೆ ಪ್ರಧಾನನಪ್ಪ ನೀಳನೆಂಬ ಮಾದೆಗಂಗಂ ಕೇಶಿಯೆಂಬ* ***ಮಾದೆ****ಗಿಗಂ............"* *(ಡಿ.ಎಲ್.ಎನ್ ೨೦೦೯ ಪುಟ.೫೭)*

*ನೀಳನೆಂಬ ಮಾದೆಗಂಗಂ ಕೌಶಂಬಿಯೆಂಬ* ***ಮಾದೆಂಗಿಗಂ*** *ಮಗಳಾಗಿ ಪೂರ್ವೋಪಾರ್ಜಿತ ಶುಭಾನುಪೂರ್ವಿನಾಮ ಕರ್ಮೋರ್ವೀರುಹ ಪರಿಪಾಕ ಫಳಮನನುಭವಿಸುತ್ತುಮೊಂದು ಪೊತ್ತಪ್ಪಡಂ ಸುಖಂಗಾಣದೆ ಹಾಹಾಭೂತಚೇತಸ್ಕೆಯಾಗಿರ್ದಳಂ ನೀಮಿಗಳ್ ಕಂಡಿರಾ............................*

*(ಸುಕುಮಾರ ಚರಿತಂ ೫–೨೧ವ)*

ಮಾದಿಗನೆಂದರೆ ಹೊಲೆಯ ಎಂದರ್ಥ. ಹೊಲೆಯ; ಹೊಲತಿ; ಮಾದಿಗ; ಇವರನ್ನು ಅಸ್ಪೃಶ್ಯರೆಂದು ಕರೆಯುತ್ತಾರೆ. ಕಿಟ್ಟೆಲ್ ನಿಘಂಟುವಿನಲ್ಲಿ ಹೀಗೆ ಬರುತ್ತದೆ. ಎನಿತುಂ ಕಾಯ್ದು ಬೆನ್ನೀರ್ ಮನೆ ಸುಡದೆ ಮ್ಯನ್ತೆ ನಿನಗವರ್ ನಿಲೆಕಾಯ್ದುಂ ಮನದೊಳ್ ಪೊಲ್ಲದನೆನ್ನುಂ ನೆನೆಯರ್; ಅದಂ ನಮ್ಮು ಕುರುಕುಲಾನ್ವಯ ಭಾನೂ (ಪುಟ.೧೦೮೬) ಪೊಲ್ ಎಂದರೆ ಹೊಲ್ ಎಂದರ್ಥ. ಅರ್ಥಹೀನ; ಕೊಳಕು; ಅಶುದ್ಧ; ಹೀನ; ಎಂಬ ಅರ್ಥಗಳಿವೆ. ಪೊಲತಿಯೆಂದರೆ ಹೀನಕುಲದಲ್ಲಿ ಜನಿಸಿದವಳು ಎಂದು ಅರ್ಥ.

ಇವರನ್ನು ಅಸ್ಪೃಶ್ಯರು ಎಂದು ಕರೆಯುತ್ತಾರೆ. ಸ್ಪೃಶ್ಯವರ್ಜಿತರು ಎಂದು ಅರ್ಥ.

**೫೯೦. ಮಾಧ್ಯಮಿಕರು**

ಮೈತ್ರೇಯನಾಥ ಯೋಗಾಚಾರ ಮತವನ್ನು ಪರಿಷ್ಕರಿಸಿದಂತೆ ನಾಗಾರ್ಜುನ (ಕ್ರಿಸ್ತಾಬ್ದ ೨೦೦?) 'ಮಹಾಯಾನ ಸೂತ್ರ'ಗಳಲ್ಲಿ ಶೂನ್ಯವಾದ ಸಿದ್ಧಿಸುವಂತೆ 'ಮಾಧ್ಯಮಿಕ'ವಾದವನ್ನು ಪರಿಷ್ಕರಿಸಿದನು. ಅವನ ಸತಾತ್ರಶಿಷ್ಯನಾದ ಆರ್ಯದೇವ (ಕ್ರಿಸ್ತಾಬ್ದ ೨೦೦-೨೨೫ ಸುಮಾರು) 'ಚತು:ಶತಿಕೆ'ಯ ಕರ್ತೃ; ನಾಗಾರ್ಜುನನ 'ಮೂಲಮಾಧ್ಯಮಿಕಕಾರಿಕೆ'ಗಳನ್ನು ಸ್ಪಷ್ಟಪಡಿಸಿದವನು ಚಂದ್ರಕೀರ್ತಿ (ಕ್ರಿ. ೬೦೦-೬೫೦ ಸುಮಾರು).

ಬುದ್ಧನ ಮಧ್ಯಮಮಾರ್ಗವನ್ನನುಸರಿಸಿದವರು ಮಾಧ್ಯಮಿಕರು. ಮಧ್ಯಮ ಮಾರ್ಗವೆಂದರೇನು? ಅತಿಯಾದ ಭೋಗ, ಅತಿಯಾದ ಕಾಯಕ್ಲೇಶ ಎರಡನ್ನೂ ಬಿಟ್ಟ ಮಧ್ಯಮ ಮಾರ್ಗವನ್ನು ಬುದ್ಧ ತನ್ನ ಪ್ರಥಮ ದೇಶದಲ್ಲಿ ಉಪದೇಶ ಮಾಡಿದನೆಂಬುದು ಸುವಿದಿತವಷ್ಟೆ. ಆದರೆ ನಾವಿಲ್ಲಿ ವಿಚಾರಿಸುವ ಮಧ್ಯಮಮಾರ್ಗ ಅದಲ್ಲ; ಇದು ಮುಂದೆ ತಿಳಿಯುತ್ತದೆ.

ಸಂಸ್ಕೃತದ ಕೋಶಗಳಲ್ಲಿ ಬುದ್ಧನ ಹಲವು ಹೆಸರುಗಳಲ್ಲಿ 'ಅದ್ವಯವಾದಿ' ಎಂಬ ಹೆಸರು ಬರುತ್ತದೆ. ಮಾಧ್ಯಮಿಕರ ಪ್ರಕಾರ ಈ ಅಭಿಧಾನದಲ್ಲಿರುವ 'ದ್ವಯ' ಎರಡು ದೃಷ್ಟಿಗಳಿಗೆ ಸಂಬಂಧಿಸಿದ್ದು. ಈ ಎರಡು ದೃಷ್ಟಿಗಳು ಯಾವುವು? ಅವು ಸತ್ತಾ-ಅಸತ್ತಾ, ಶಾಶ್ವತ-ಅಶಾಶ್ವತ, ಆತ್ಮ-ಅನಾತ್ಮ ಇತ್ಯಾದಿ. ಸಂಸ್ಕೃತ ಮತ್ತು ಪಾಳಿ ಎರಡೂ ಭಾಷೆಗಳಲ್ಲಿರುವ ಬೌದ್ಧ ಗ್ರಂಥಗಳಿಂದ ಈ ದೃಷ್ಟಿಗಳು ಅಪಾಯಕಾರಿಗಳೆಂಬುದು ಸ್ಪಷ್ಟವಾಗಿದೆ. ನಿದರ್ಶನಕ್ಕೆ, ಬುದ್ಧ ಹೀಗೆ ಹೇಳಿದನಂತೆ: "ಕಾತ್ಯಾಯನ, 'ಇದೆ', 'ಇಲ್ಲ' ಎಂಬ ಕಲ್ಪನೆಗಳಲ್ಲೇ ಜನ ಬಹುವಾಗಿ ತೊಳಗುವರಾಗಿ ಅವರಿಗೆ ಮುಕ್ತಿಯಿಲ್ಲ. ನಾಗಾರ್ಜುನ "ಸತ್ತಾ," "ಅಸತ್ತಾ" ಎಂಬುದನ್ನೇ ನೋಡುವ ಅಜ್ಞರು ದೃಶ್ಯನಿರೋಧದ ಸುಖವನ್ನರಿಯರು ಎಂದು ಹೇಳಿದ್ದಾನೆ. ಇನ್ನೊಂದೆಡೆ ಹೀಗಿದೆ: "ಕಾಶ್ಯಪ, 'ಇದೆ' ಎಂಬುದೊಂದು ನಿಶ್ಚಯ," 'ಇಲ್ಲ' ಎಂಬುದು ಇನ್ನೊಂದು. ಈ ಎರಡು ನಿಶ್ಚಯಗಳ ಮಧ್ಯೆಯಿರುವುದನ್ನು ನಿರ್ದೇಶಿಸಲಾಗುವುದಿಲ್ಲ. ಇದೇ ಕಾಶ್ಯಪ, ಮಧ್ಯಮಾರ್ಗವೆಂಬುದು, ಧರ್ಮದ ಪರೀಕ್ಷೆಗೆ ಸಾಧನರೂಪವಾದುದು. ಹೀಗೆ ಬುದ್ಧ ಎರಡೂ ನಿಶ್ಚಯಗಳನ್ನೊಪ್ಪದೆ ಮಧ್ಯಮದ ವಾದವನ್ನು ಉಪದೇಶಿಸಿದಂತೆ ನಿರ್ದಿಷ್ಟವಾಗಿ ಹೇಳಲ್ಪಟ್ಟಿದೆ. ಆದ್ದರಿಂದ ಈ ದೃಷ್ಟಿಯ ಪ್ರಕಾರ ಏನೂ ಇಲ್ಲ; ಇಲ್ಲದೆಯೂ ಇಲ್ಲ: ಯಾವುದು ಏಳುವುದೂ ಇಲ್ಲ, ಅಳಿಯುವುದೂ ಇಲ್ಲ; ಯಾವುದು ಶಾಶ್ವತವಲ್ಲ, ಯಾವುದಕ್ಕೂ ಅಂಕವಿಲ್ಲ; ಯಾವುದೂ ಸಮವೂ ಅಲ್ಲ, ವಿಷಮವೂ ಅಲ್ಲ, ಇಲ್ಲಿಯಾಗಲೇ ಅಲ್ಲಿಯಾಗಲೀ ಇಲ್ಲ. ಈ ಶಾಖೆಯ ಅನುಯಾಯಿಗಳು ಹೀಗೆ ಮಧ್ಯಮಮಾರ್ಗವನ್ನು ಒಪ್ಪಿದ್ದರಿಂದ ಮಾಧ್ಯಮಿಕರೆಂದು ಹೆಸರು. ಈ ಮೇಲಿನ ವಿಚಾರದಲ್ಲಿ ನಿಶ್ಚಿತ, ನಿಷೇಧಕ ಹೀಗೆ

ಎರಡೇ ಪಕ್ಷಗಳಿವೆ. ಆದರೆ ಕೆಲವು ಬಾರಿ ಮೂರು, ನಾಲ್ಕು ಪಕ್ಷಗಳನ್ನು ಹೇಳುತ್ತಾರೆ. ಎರಡೂ ವಿರುದ್ಧ ವಾದಗಳನ್ನು ತಿರಸ್ಕರಿಸುವ ಭಾವನೆ ಋಗ್ವೇದದಲ್ಲೇ ಬರುತ್ತದೆ: ಮುಖ್ಯವಾಗಿ 'ಸತ್-ಅಸತ್'ಗಳ ವಿಚಾರ (ಋಗ್ವೇದ ೧೦, ೧೨೯, ೧) – "ಅಲ್ಲಿ ಅಸತ್ತೂ ಇರಲಿಲ್ಲ, ಸತ್ತೂ ಇರಲಿಲ್ಲ". ಅನುಕ್ರಮದಲ್ಲಿ ಈ ಕಲ್ಪನೆ ಉಪನಿಷತ್ತುಗಳಲ್ಲೂ ಭಗವದ್ಗೀತೆಯಲ್ಲೂ (೧೩, ೧೨) ಬಂದಿತು.

ಪ್ರತೀತ್ಯಸಮುತ್ಪಾದದ ನಿಯಮವನ್ನು ಅರ್ಥಮಾಡಿಕೊಂಡರೆ ಮಾಧ್ಯಮಿಕರ ಈ ನಿಲುವು ಸ್ಪಷ್ಟವಾಗುತ್ತದೆ. ಈ ವಾದದ ಮುಖ್ಯ ತತ್ವವಾದ 'ಶೂನ್ಯವಾದ'ದಲ್ಲಿ ಈ ನಿಯಮ ಧ್ವನಿತವಾಗಿದೆ. ಕೆಲವೇ ಪಂಕ್ತಿಗಳಲ್ಲಿ ಇದನ್ನು ವಿವರಿಸುತ್ತೇವೆ:

ಪ್ರತಿವಸ್ತುವಿಗೂ ಅದರ ಸ್ವಭಾವವುಂಟೆಂದು ಹೇಳುತ್ತೀವಷ್ಟೆ, ತಾಪ ಬೆಂಕಿಯ ಸ್ವಭಾವವಿದ್ದಂತೆ. ಆದರೆ ವಸ್ತುತಃ ಅದೇನು? ಸ್ವಭಾವದ ಲಕ್ಷಣವೇನು? ಅಕೃತ್ರಿಮವಲ್ಲದುದು, ತನ್ನ ಇರುವಿಕೆಗೆ ಮತ್ತೊಂದರ ಆಶ್ರಯ ಬೇಡೆದುದು, ಮೊದಲು ಇರದೆ ನಂತರ ಬಾರದಿರುವುದು. ತಾಪವಾದರೋ ಹೇತು-ಪ್ರತ್ಯಯಗಳಿಂದ ಉಂಟಾದುದು, ಮುಂಚೆ ಇರದಿದ್ದು ನಂತರ ಬರುವುದು, ಪರತಂತ್ರವಾದುದು. ಇದು ಬೆಂಕಿಯ ಸ್ವಭಾವ ಹೇಗಾದೀತು? ಆದ್ದರಿಂದ ಬೆಂಕಿಯಲ್ಲಿ ಭೂತಭವಿಷ್ಯದ್ವರ್ತಮಾನಗಳಲ್ಲೂ ಬಿಡದೆ ಇದ್ದೇ ಇರುವ, ಮುಂಚೆ ಇರದೆ ನಂತರ ಬಾರದ, ಪರತಂತ್ರವಲ್ಲದ ಲಕ್ಷಣವಿದ್ದರೆ ಅದು ಬೆಂಕಿಯ ಸ್ವಭಾವ. ಆದರೆ ಅಂಥದು ಏನಾದರೂ ಇದೆಯೇ? ನಾವು ಹೇಳುತ್ತೇವೆ – 'ಇಲ್ಲ, ಇಲ್ಲದೆಯೂ ಇಲ್ಲ' ಎಂದು. ಆದರೂ ಅಶಿಕ್ಷಿತರಾದ ಶ್ರಾವಕರಲ್ಲಿ ಭಯ ತಪ್ಪಿಸಲು ಸಂವೃತಿಸತ್ಯದಿಂದ ಸಮಾರೋಪಮಾಡಿ 'ಇದೆ'ಯೆನ್ನುತ್ತೇವೆ.

ಆದರೆ ಅದು ಸಮಾರೋಪಿತವಾಗಿ ಸಂವೃತಿಸತ್ಯದಿಂದ ಇದೆಯೆಂದರೆ ಪರಮಾರ್ಥಸತ್ಯದಲ್ಲಿ ಅದು ಹೇಗಿದ್ದಿತು?

ಅದಕ್ಕೆ ಉತ್ತರ – "ಅದು 'ಧರ್ಮತಾ', ಧರ್ಮದ ಪಕ್ಷ". ಧರ್ಮತಾ ಎಂದರೇನು? ಸ್ವಭಾವ. ಸ್ವಭಾವವೆಂದರೇನು? ಪ್ರಕೃತಿ. ಪ್ರಕೃತಿಯೆಂದರೆ? ನೈಃಸ್ವಾಭಾವ್ಯವಾದುದು. ಹೀಗಂದರೇನು? 'ತಥತಾ' ಎಂದರೇನು? ಹಾಗಿರುವುದು, ಅವಿಕಾರಿತ್ವ, ಯಾವಾಗಲೂ ಇರುವಿಕೆ (ಸದೈವ ಸ್ಥಾಯಿತ್ವ).

"ಆದ್ದರಿಂದ ತಾಪ ಬೆಂಕಿಯ ಸ್ವಭಾವವೆಂದು ಹೇಳಬರುವುದಿಲ್ಲ. ಆದರೆ ಬೆಂಕಿಯ ಅನುತ್ಪಾದ ಸ್ವತಂತ್ರವಾದುದರಿಂದ ಅದು ಬರಿಯ ಕಲ್ಪನೆಯಲ್ಲ, ಅದು ಅದರ ಸ್ವಭಾವ ವೆಂದೇ ಅನ್ನಬೇಕು". ವಸ್ತುವಿನ ಸ್ವಭಾವ ಇರದಿದ್ದರೆ ಅದರ ಉತ್ಪತ್ತಿಯಿಲ್ಲ; ಅದು ಇಲ್ಲದಿದ್ದುದರಿಂದ ಅದರ ನಿರೋಧವೂ ಇಲ್ಲ.

ಬೆಂಕಿಯಂತೆ ಎಲ್ಲವೂ ಸ್ವಭಾವರಹಿತವಾಗಿವೆ. ಈ ನೈಃಸ್ವಾಭಾವ್ಯವೇ 'ಸರ್ವಧರ್ಮ ಶೂನ್ಯ' ಎಂದು ಮುಂತಾದ ಶಾಸ್ತ್ರ ವಚನಗಳಲ್ಲಿ ಶೂನ್ಯತೆಯೆಂಬುದು. ಓದುಗರು ಹಿಂದಿನ ಪ್ರಕರಣದಲ್ಲಿ ಇದನ್ನು ಕಾಣಬಹುದು.

ನಮಗೆ ಕಾಣುವ ವಸ್ತುಗಳು ತಮ್ಮ ಸ್ವಭಾವದಿಂದ ಕಾಣುವುದಿಲ್ಲ ಸಮಾರೋಪಿತ

ಧರ್ಮಗಳಿಂದ ಕಾಣುತ್ತವೆ. ಗ್ರಂಥವೊಂದರಲ್ಲಿ ಉದ್ಧೃತವಾಗಿರುವ ಶ್ಲೋಕ ಹೀಗೆ ಹೇಳುತ್ತದೆ: ಸಮಾರೋಪಗಳಿಂದ ಮುಕ್ತವಾದ ಸತ್ಯ ಬೆಳಗುತ್ತದೆ; 'ಶೂನ್ಯತಾ' ಮುಂತಾದ ಪದಗಳಿಂದ ಎಲ್ಲ ಸಮಾರೋಪಗಳೂ ನಿರಾಕರಿಸಲ್ಪಡುತ್ತವೆ. ಆದರೆ ದುರಾದೃಷ್ಟವಶದಿಂದ, ನಾಗಾರ್ಜುನನ ಕಾಲದಲ್ಲಿ ಕೂಡ 'ಶೂನ್ಯತೆ'ಯೆಂಬ ಪದದ ವಿಚಾರದಲ್ಲಿ ಬಹು ಅಪಾರ್ಥಗಳು ಇದ್ದುವು; ಅದು 'ಅಭಾವ', 'ನಾಸ್ತಿತಾ' ಪದಗಳಿಗೆ ಪರ್ಯಾಯವಾಗಿದ್ದಿತು. ಇದರ ಅನಿವಾರ್ಯ ದುಷ್ಫಲವನ್ನು ನೋಡಿಯೇ ನಾಗಾರ್ಜುನ ಹೀಗೆ ಬರೆಯಬೇಕಾಯಿತು (೨೪, ೧೧): ಹಾವನ್ನಾಗಲೀ ವಿದ್ಯೆಯನ್ನಾಗಲೀ ಅಪಾರ್ಥ ಮಾಡಿಕೊಂಡರೆ ಕೇಡುಂಟಾಗುವಂತೆ ಶೂನ್ಯತೆಯನ್ನು ಅಪಾರ್ಥ ಮಾಡಿಕೊಂಡರೆ ಅನರ್ಥವಾಗುತ್ತದೆ. ಇಂಥ ಅಪಾರ್ಥದ ಮಡಿಲಿಂದ ಎದ್ದ ಆಕ್ಷೇಪಗಳನ್ನು ನಾಗಾರ್ಜುನನ ಗ್ರಂಥಗಳಿಂದಲೇ ಸಂಗ್ರಹಿಸಬಹುದು (೨೪): ಎಲ್ಲವೂ ಶೂನ್ಯವಾದರೆ, ಉತ್ಪಾದವೂ ಇಲ್ಲದೆ ಭಂಗವೂ ಇಲ್ಲದಿದ್ದರೆ, ನಾಲ್ಕು ಆರ್ಯಸತ್ಯಗಳೆಲ್ಲಿ ಬಂತು? ಅವುಗಳಿಂದ ಎದ್ದ ಶೀಲವೆಲ್ಲಿ ಬಂತು? ಪುಣ್ಯ ಪಾಪಗಳ ಫಲವೆಲ್ಲಿ ಬಂತು? ಬುದ್ಧನ ಶಾಸನವೆಲ್ಲಿ? ಸಂಘವೆಲ್ಲಿ? ಹೆಚ್ಚೇಕೆ, ಬುದ್ಧನೇ ಇಲ್ಲವಲ್ಲ!

ಈ ಆಕ್ಷೇಪಗಳಿಗೆ ನಾಗಾರ್ಜುನ ಸಮಾಧಾನ ಹೇಳುತ್ತ ಉಳಿದ ವಾದಗಳ ನಡುವೆ ಸಂವೃತಿ ಸಸ್ಯ ಮತ್ತು ಪರಮಾರ್ಥಸತ್ಯಗಳೆಂಬ ಸತ್ಯದ್ವಯವನ್ನು ಹೇಳುತ್ತಾನೆ, ಶಂಕರರ ವೇದಾಂತದರ್ಶನದಲ್ಲೂ ಇದೇ ಭಾವನೆಯಿದೆ (ಆದರೆ ಇಲ್ಲಿ ಪ್ರಾತಿಭಾಸಿಕ ಸತ್ಯವೆಂಬ ಮತ್ತೊಂದು ಸತ್ಯವನ್ನು ಹೇಳುತ್ತಾರೆ). ಎರಡು ಸತ್ಯಗಳ ನಡುವೆ ಇರುವ ವ್ಯತ್ಯಾಸವನ್ನು ಅರಿಯದಿದ್ದರೆ ಬುದ್ಧನ ಉಪದೇಶದ ಆಳವನ್ನು ಅರಿಯಲು ಸಾಧ್ಯವಿಲ್ಲ ಎಂದವನ ಮತ. ಶೀಲವನ್ನು ಅನುಸಂಧಾನ ಮಾಡದೆ ಪರಮಾರ್ಥಸತ್ಯ ತಿಳಿಯುವುದಿಲ್ಲ; ಪರಮಾರ್ಥಸತ್ಯ ತಿಳಿಯದೆ ನಿರ್ವಾಣವಿಲ್ಲ. ಶೂನ್ಯತೆಯನ್ನು ಯಥಾರ್ಥವಾಗಿ ತಿಳಿದರೆ ಇಂಥ ಆಕ್ಷೇಪಗಳಿಗೆ ಎಡೆಯಿಲ್ಲ. ಶೂನ್ಯತೆಯೆಂಬುದೇ ಪ್ರತೀತ್ಯಸಮುತ್ಪಾದ: ಹೇತು-ಪ್ರತ್ಯಯಗಳಿಂದ ವಸ್ತುಗಳು ತೋರುತ್ತವೆ ಎಂಬುದೇ ಪ್ರತೀತ್ಯಸಮುತ್ಪಾದ: ನಿಜದಲ್ಲಿ ಇದು ನೈ:ಸ್ವಾಭಾವ್ಯತೆಯೇ. ಇಲ್ಲಿ ಪ್ರಪಂಚೋಪ ಶಮ.

ನಾಗಾರ್ಜುನನ ಮೂಲಮಾಧ್ಯಮಿಕದಲ್ಲಿ ಈ ಕುರಿತು ವಿಶೇಷ ಚರ್ಚೆಯಿದೆ. ಬುದ್ಧನ ಮಧ್ಯಮ ಮಾರ್ಗವನ್ನು ಅನುಸರಿಸಿದವರನ್ನು ಮಾಧ್ಯಮಿಕರೆಂದು ಕರೆಯಲಾಗುತ್ತದೆ. ಇದು ಕರ್ಮ, ಆತ್ಮದ ಕುರಿತು ಎತ್ತುವ ಪ್ರಶ್ನೆಗಳು ತತ್ವಮೀಮಾಂಸೆಯಲ್ಲಿ ವಿಶಿಷ್ಟವಾಗಿದೆ.

*ವಿವರಗಳಿಗೆ ನೋಡಿ: ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦*

*ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ ಪುಟ. ೧೭೩-೧೭೪*

**೫೯೧. ಮಾರಿ**

*ಜಯಮಂ ಬಯಸುವೊಡರಿ**ಮಾರಿ**ಯನಾರ್ತಿಸಿದರು (ಶಾಂತಿಪುರಾಣ ೩-೭೨)*

*ಗೆಲುವನ್ನು ಬಯಸಿ ಮೃತ್ಯುವನ್ನೇ ಕರೆದರು. (ಗ.ಅ) ಹಂ.ಪ.ನಾ*

ಮಾರಿಯನ್ನು ಕ್ಷುದ್ರದೇವತೆಯೆಂದು ಕರೆಯುತ್ತಾರೆ. ಸಾಮಾನ್ಯವಾಗಿ ಮಾರಿ

ಹಬ್ಬಕ್ಕೆ ಮಂಗಳವಾರ ಶ್ರೇಷ್ಠ. ಮಾರಿಯನ್ನು ಎಲ್ಲಾ ಗ್ರಾಮಗಳಲ್ಲಿ ಪೂಜಿಸುವುದರಿಂದ ಮಾರಿಯನ್ನು ಗ್ರಾಮದೇವತೆಯೆಂದೂ ಕರೆಯುತ್ತಾರೆ. ಮಾರಿದೇವತೆಯ ಸಿಟ್ಟಿನಿಂದ ದಡಾರ; ಸಿಡುಬು ಮುಂತಾದ ಕಾಯಿಲೆಗಳು ಬರುತ್ತವೆಯೆಂದು ಜನ ನಂಬುತ್ತಾರೆ. ಸಾಂಕ್ರಾಮಿಕ ಕಾಯಿಲೆಯನ್ನು ಮಾರಿಯು ಉಂಟು ಮಾಡುವುದರಿಂದ ಮತ್ತು ಅದರಿಂದ ಅನೇಕ ಸಾವುಗಳು ಸಂಭವಿಸುವುದರಿಂದ ಮಾರಿಯನ್ನು ಮೃತ್ಯುವಿಗೆ ಹೋಲಿಸುತ್ತಾರೆ. ಮಾರಿಯಮ್ಮನ ಹಬ್ಬಕ್ಕೆ ಬಲಿ ನೀಡುವುದು(ಕುರಿ, ಕೋಳಿ, ಕೋಣ, ಆಡು ಇತ್ಯಾದಿ) ಪದ್ಧತಿ. ಪುರಾಣಗಳಲ್ಲಿ ಯಮನ ಕಿಂಕರ ವರ್ಗದಲ್ಲಿ ಮೃತ್ಯುದೇವತೆಯೂ ಒಬ್ಬಳು. ಅವಳದು ಭಯಾನಕ ಸ್ವರೂಪ. ಹೊಗೆಯ ಬಣ್ಣ ಅವಳದು. ಬಣ್ಣಗಳಲ್ಲಿ ಹೊಗೆಯ ಬಣ್ಣ ಭಯಾನಕ ಮತ್ತು ಭೀಭತ್ಸ್ಯಕ್ಕೆ ಸಂಕೇತವಾಗಿರುವುದು ಇಲ್ಲಿ ಗಮನಾರ್ಹ.

ಮೃತ್ಯುವನ್ನು ಇಲ್ಲಿ ಮಾರಿ ಎಂದು ಕರೆಯಲಾಗಿದೆ. 'ಗೆಲುವನ್ನು ಬಯಸಿ ಬಂದವರಿಗೆ ಮಾರಿಯು ಎದುರಾದಂತೆ' 'ದಾರೀಲಿ ಹೋಗುವ ಮಾರಿನ್ನ ಮನೆಗೆ ಕರೆದಂಗಾಯ್ತು' – ಗಾದೆಯ ಮಾತುಗಳು.

ಒಂದು ಕಡೆಯಲ್ಲಿ ದುರ್ಗಮ್ಮ, ಮಾರಿಯಮ್ಮ ಮೊದಲಾದ ದೇವತೆಗಳು. ಇನ್ನೊಂದು ಕಡೆಯಲ್ಲಿ ಅನೇಕ ರೋಗಗಳಿಗೆ ಕಾರಣವೆಂದು ನಂಬಿದ್ದ ಕ್ಷುದ್ರ ದೇವತೆಗಳು. ಇವುಗಳ ಉಪಾಸನೆಯು ಜನಸಾಮಾನ್ಯರಲ್ಲಿ ಬಹುಮಟ್ಟಿಗೆ ಪ್ರಚಲಿತವಿತ್ತು. ಹಳ್ಳಿಗಳ ಸುತ್ತಲೂ ದುಷ್ಟಶಕ್ತಿಗಳು ಹೊಂಚು ಹಾಕಿಕೊಂಡು ಕಾಯಿಲೆಗಳನ್ನೂ, ಕಷ್ಟಗಳನ್ನೂ ಜನರಿಗೆ ಉಂಟು ಮಾಡಲು ಕಾಯುತ್ತಿದ್ದವೆಂದೂ, ಆ ಶಕ್ತಿಗಳನ್ನು ಹೋಗಲಾಡಿಸಲು ದುರ್ಗಿ, ಮಾರಿ, ಚೌಡಿ ಇತ್ಯಾದಿಗಳನ್ನು ಒಲಿಸಿಕೊಳ್ಳಬೇಕೆಂದು ಜನರು ನಂಬಿದ್ದರು.

*ವಿವರಗಳಿಗೆ ನೋಡಿ: ಡಾ॥ ಎಚ್.ತಿಪ್ಪೇರುದ್ರಸ್ವಾಮಿ ೨೦೦೭*

*ಕರ್ಣಾಟಕ ಸಂಸ್ಕೃತಿ ಸಮೀಕ್ಷೆ ಪುಟ. ೧೯೪*

### ೫೯೨. ಮಾರ್ಗದೊಳ್ ತಳ್ವುದು

'ಮಾರ್ಗಭೇದಸ್ಸಮತಾ' ಎಂದು ವಾಮನನು 'ಸಮತಾ' ಲಕ್ಷಣವನ್ನು ಹೇಳುತ್ತಾನೆ. 'ಯೇನ ಮಾರ್ಗೇಣ ಉಪಕ್ರಮಃ ತಸ್ಯ ಅತ್ಯಾಗ ಇತ್ಯರ್ಥಃ ಶ್ಲೋಕೇ ಪ್ರಬಂಧೇ ಚೇತಿ' ಎಂದು ಆ ಸೂತ್ರದ ವೃತ್ತಿ – 'ಪದ್ಯವಾಗಲಿ, ತತ್ಸಮೂಹದ ಕಾವ್ಯವಾಗಲಿ ಯಾವ ಮಾರ್ಗದಲ್ಲಿ ಪ್ರಾರಂಭವಾಗಿದೆಯೋ ಅದೇ ಮಾರ್ಗವನ್ನು ಬಿಡದೆ ಕಡೆವರೆಗೆ ಮುಟ್ಟುವುದು ಸಮತೆ' ಎಂಬುದಾಗಿ ಸೂತ್ರಾರ್ಥವನ್ನು ವೃತ್ತಿಯಲ್ಲಿ ವಿವರಿಸಿದ್ದಾನೆ. ನೋಡಿರಿ 'ಅವನು ಪ್ರಾರಂಭಿಸಿದ ಕೆಲಸವು ಮುಗಿಸಲ್ಪಟ್ಟಿತು' ಎಂಬ ಎರಡು ವಾಕ್ಯಗಳನ್ನು ಸಂದುಗೂಡಿಸಿ ಒಂದಾಗಿ ಮಾಡಿದ ವಾಕ್ಯವಿದು. ಇಲ್ಲಿ ಪೂರ್ವಾಂಗವು ಕರ್ತರಿಪ್ರಯೋಗವಾದರೆ. ಉತ್ತರಾಂಗವು ಕರ್ಮಣಿ ಪ್ರಯೋಗವಾಗಿದೆ. ಹೀಗಾದರೆ, ಒಂದೇ ವಾಕ್ಯದೊಳಗೆ ಒಂದಂಶವು ಕರ್ತೃ ಪ್ರಧಾನವಾಗಿದ್ದು, ಇನ್ನೊಂದು ಕರ್ಮಪ್ರಧಾನವಾಗಿ ತೋರುವುದರಿಂದ, ರೂಪದಲ್ಲಿ ಮಾತ್ರವೇ ಅಲ್ಲಿ ಅರ್ಥದಲ್ಲಿಯೂ ಒಂದಿಷ್ಟು ವಿಷಮತೆಯ ಗಾಳಿ ಬೀಸುತ್ತಿದೆ.

ನಾವು ವಿಷಮತೆಗಿತ್ತ ದೃಷ್ಟಾಂತ ವಾಕ್ಯವನ್ನೇ ಒಂದಿಷ್ಟು ಬದಲಿಸಿ 'ಅವನು ಪ್ರಾರಂಭಿಸಿದ ಕೆಲಸವನ್ನು ಮುಗಿಸಿದನು' ಎಂದು ರೂಪಿಸಿದರೆ 'ಸಮತೆ' ಎನ್ನಿಸುತ್ತಿದೆ. ಪಂಪನಿಂದಲೇ ದೃಷ್ಟಾಂತವನ್ನೆತ್ತಿಕೊಳ್ಳಬೇಕಾದರೆ 'ಬಗೆಪೊಸತಪ್ಪುದು ... ಒಂದುವುದು... ಪುಗುವುದು... ತಳ್ವುದು... ಒಪ್ಪುಗುಂ...' ಎಂಬುದನ್ನೇ ನೋಡಬಹುದು. ಇಲ್ಲಿ, ಉಪಮಾನೋಪಮೇಯಾದಿ ಕರ್ತೃ ಕರ್ಮಗಳೊಳಗಿನ ಅರ್ಥಮಹಿಮಾ ಸಮಾನತೆಯೂ ಪುರಾಣಚ್ಛಾಯಾನುಕಾರಿಯಾಗದೆ ಕಾಂತಿವಡೆದು ಉಜ್ವಲಿಸುತ್ತಿದೆ.

ಪಂಪನು ಇಲ್ಲಿ ವರ್ಣಿಸಿದ ಪುರಾಣಚ್ಛಾಯಾನುಕಾರಿಯಲ್ಲದ ಉಪಮೇಯೋಪಮಾನಾಂಗಗಳನ್ನು ನೋಡಿರಿ.

| ಉಪಮೇಯಾಂಗಗಳು | ಉಪಮಾನಾಂಗಗಳು |
|---|---|
| ೧. 'ಬಗೆ ಪೊಸತಪ್ಪುದು' | ೧. 'ಕೆಂದಳಿರ (ಬಿಣ್ಪೊಜೆಯಿಂ ಬಱಲ್ಪುದು)' |
| ೨. 'ಆಗಿ ಮೃದುಬಂಧದೊಳೊಂದುವುದು' | ೨. 'ಪೂವಿನ' |
| ೩. 'ಒಂದಿ ದೇಸಿಯೊಳ್ ಪುಗುವುದು' | ೩. 'ತುಂಬಿಗಳಿನೆ ತುಂಬಿ ಕೋಗಿಲೆಯ ಬಗ್ಗಿಸುವುದು' |
| ೪. ಹೀಗೆ 'ಪೊಕ್ಕ ಮಾರ್ಗದೊಳೆತಳ್ತ ಕಾವ್ಯಬಂಧವು' | ೪. ಹಾಗೆ, ಸುಗ್ಗಿಯೊಳೊಪ್ಪುವ ಎಳಮಾವಿನಂತಾಗುವುದು. |

ಮಾರ್ಗವೆಂದರೆ ಹಾದಿಯೂ ಹೌದು. ಪಂಪನು ಮಾರ್ಗದ ಪರಿಕಲ್ಪನೆಯನ್ನು ತನ್ನ ಕಾವ್ಯದ ವ್ಯಾಖ್ಯೆಯಲ್ಲಿ ವಿಶೇಷವಾಗಿ ತಂದಿರುವುದು ಗಮನಾರ್ಹ. ದೇಸಿಯಲ್ಲಿ ಹೊಕ್ಕು ಮಾರ್ಗದಲ್ಲಿ ತನ್ನ ಕಾವ್ಯವು ಮುಗಿಯುತ್ತದೆ ಎಂಬುದು ಪಂಪನ ನಿಲುವು. ಕಾವ್ಯದ ರೀತಿಯ ಪ್ರಶ್ನೆಯಾಗಿಯೂ ಇದಕ್ಕೆ ವಿಶೇಷ ಮಹತ್ವವಿದೆ ಎಂದು ಮುಳಿಯ ಪ್ರತಿಪಾದಿಸಿದ್ದಾರೆ.

*ವಿವರಗಳಿಗೆ ನೋಡಿ: ಮುಳಿಯ ತಿಮ್ಮಪ್ಪಯ್ಯ ೨೦೦೬ ನಾಡೋಜಪಂಪ.*

**೫೯೩. ಮಾರ್ಗ ಪರಂಪರೆ ಮತ್ತು ಸಂಗೀತ**

*ಗಮಕಂ ಪ್ರಯೋಗಮಾಭೋ*
*ಗಮಳಂಕಾರಂ ಪೊಗರ್ ನಯಂ ಮಿಱುಗುಪೊದ ।*
*ೞ್ದಮರೆ ಕೊಳೆ ಪಾಡುವಮರಿ ದ*
*ಲಮರ್ದಂ ಮುಕ್ಕುಳಿಸಿಯುಗುಟ್ವ ತೆಱನಂ ಪೋಲ್ತಳ್ ॥*

*(ಆದಿಪುರಾಣಂ ೭-೧೬)*

*ಜೇನ ಮೞೆ ಕೊಂಡುದಮರ್ದಿನ*
*ಸೋನೆಯೆ ಸುರಿದತ್ತು ರಸದ ತೊಱೆ ಪರಿದತ್ತೆಂ ।*
*ಬೀ ನುಡಿಯನೆ ನುಡಿಯಿಸಿದ*
*ತ್ತಾ ನಾಕಸ್ತ್ರೀಯ ಗೇಯಮಾಸ್ಥಾಯಿಕೆಯೊಳ್ ॥ (ಆದಿಪುರಾಣಂ ೭-೧೭)*

'ಆದಿಪುರಾಣ' ಕೃತಿಯಲ್ಲಿ ಹೆಣ್ಣೊಬ್ಬಳು ವೀಣೆಯನ್ನು ಬಾರಿಸುತ್ತಾ ಹಾಡಿದ ವಿಚಾರವು ಬರುತ್ತದೆ. (೪.೯ವ) ಮತ್ತೊಂದು ಕಡೆ ಇದೇ ಕೃತಿಯಲ್ಲಿ ಇದೇ ರೀತಿಯಲ್ಲಿ ಮಧುರ ಗೀತೆಯನ್ನು ಹಾಡಿದ ಸನ್ನಿವೇಶವನ್ನು ಈ ಕೃತಿಯಲ್ಲಿ ಮತ್ತೊಂದು ಕಡೆ ವರ್ಣಿತವಾಗಿದೆ. (೭-೬೦) (೯-೧೩) ಅಂತಃಪುರದ ವಾರಾಂಗನೆಯರು ಸಂಗೀತ ಹಾಡಿದ ವಿಷಯವನ್ನು ಪಂಪನು ಹೇಳುತ್ತಾನೆ. (೧೧-೭೨ವ) 'ಆದಿಪುರಾಣ'ದಲ್ಲಿ ಸಂಗೀತ ಶಾಲೆಯ ಕುರಿತು ಪಂಪನು ಉಲ್ಲೇಖಿಸುತ್ತಾನೆ. (೧೫.೩ವ) ಪಂಪಭಾರತ (೯. ೨೮ವ: ೧೪-೩೬)ರನ್ನನ 'ಗದಾಯುದ್ಧ' (೫-೪೩) ಇತ್ಯಾದಿ ಕೃತಿಗಳಲ್ಲಿ ಈ ರೀತಿಯ ಕಲ್ಪನೆಯು ಪ್ರತಿಪಾದಿತವಾಗಿದೆ.

ಈಗ ಮಾರ್ಗೀ ಸಂಪ್ರದಾಯದ ಹಾಡು ಇಲ್ಲವೆಂದು ಬಿ.ಡಿ.ಪಾಠಕ ಅವರು ಅಭಿಪ್ರಾಯ ಪಡುತ್ತಾರೆ.

ಮಾರ್ಗ ಮತ್ತು ದೇಸಿರಾಗಗಳ ಕುರಿತು ಮುಳಿಯ ತಿಮ್ಮಪ್ಪಯ್ಯನವರು ಹೇಗೆ ಹೇಳಿದ್ದಾರೆ:

ನಮ್ಮ ನಾಟದೇಶದ ಇತಿಹಾಸವು ಸಂಗೀತಶಾಸ್ತ್ರದಿಂದಲೂ ಸ್ವಲ್ಪ ಮಟ್ಟಿಗೆ ತಿಳಿದು ಬರುವಂತಿದೆ. ಸಂಗೀತವು "ಮಾರ್ಗ, ದೇಶಿ" ಎಂದೆರಡು ವಿಧವಾಗಿದೆ. ಆ ಎರಡು ಸಂಗೀತವನ್ನು ಸಂಗೀತ ಶಾಸ್ತ್ರದಲ್ಲಿ ಹೀಗೆ ವಿಂಗಡಿಸಿದೆ:-

*ಸ್ವರ್ಗೇ ಮಾರ್ಗಾಶ್ರಿತಂ ದೇಶಾಶ್ರಿತಂ ಭೂತಲರಂಜಕುಂ*
*ತತ್ತದ್ದೇಶೀಯಯಾ ರೀತ್ಯಾ ಯತ್ಸ್ಯಲ್ಲೋಕಾನ್ಮರಂಜನು*
*ದೇಶೇ ದೇಶೇನು ಸಂಗೀತಂ ತದ್ದೇಶೀತ್ಯಭಿಧೀಯತೇ*

[ಮಾರ್ಗ ಸಂಗೀತವು ಸ್ವರ್ಗದಲ್ಲಿ ಪ್ರಸಿದ್ಧವಾಗಿದೆ. ದೇಶೀ ಸಂಗೀತವು ಭೂತಲ ರಂಜಕವು. ಆಯಾ ದೇಶೀಯರೀತ್ಯನುಸಾರವಾಗಿ ಗಾನಮಾಡಲ್ಪಡುವುದರಿಂದ "ದೇಶಿ" ಎಂಬ ಹೆಸರಾಯಿತು.]

ಅಷ್ಟೇ ಅಲ್ಲ; ಗೀತ-ವಾದ್ಯ-ನೃತ್ಯಗಳೆಂಬ ಅಂಗತ್ರಯಗೂಡಿ ಸಂಗೀತವೆನಿಸುವುದು. ಅದರಿಂದ ಗೀತ-ವಾದ್ಯ-ನೃತ್ಯಗಳೆಂಬ ಮೂರರಲ್ಲಿಯೂ ಮಾರ್ಗ-ದೇಶಿಗಳೆಂಬ ಎರಡು ಭೇದಗಳಿವೆಯೆಂಬುದು ಸಿದ್ಧಾಂತವಾಗುತ್ತದೆ. ಸಂಗೀತಾಂತರ್ಗವಾದ ಗೀತವು ರಾಗಾಶ್ರಯವಾಗಿ ಮೂಡುವುದು. ಅಂತಹ ರಾಗಗಳೊಳಗೆ "ಭೈರವ, ಭೂಪಾಲ, ಶ್ರೀರಾಗ, ಫಲಮಂಜರಿ, ವಸಂತ, ಮಾಳವ, ಬಂಗಾಳ, ನಾಟಿ" ಎಂಬ ಪ್ರಸಿದ್ಧಗಳಾದ ಪುರುಷರಾಗಗಳೆಂಟು. ಮೊದಲಿನ ಐದು ರಾಗಗಳು ದೇಶೀಯಗಳೊ ಅಥವಾ ಸ್ವರ್ಗೀಯಗಳೊ ಎಂಬುದನ್ನು ವಿಚಾರಪೂರ್ವಕವಾಗಿ ನಿರ್ಣಯಿಸುವುದು ಪ್ರಕೃತಕ್ಕೆ ಸುಲಭಸಾಧ್ಯವಲ್ಲವಾದರೂ, ಮತ್ತಿನಮಾಳವ, ಬಂಗಾಳ, ನಾಟಿಗಳೆಂಬ ರಾಗಗಳು ದೇಶೀಯಗಳೆಂದು ಅವುಗಳ ಹೆಸರುಗಳಿಂದಲೆ ವ್ಯಕ್ತವಾಗುತ್ತದೆ. ಈ ಪ್ರತಿಯೊಂದು ರಾಗವನ್ನೂ ಆಶ್ರಯಿಸಿದ ಸ್ತ್ರೀರಾಗಗಳೂ, ಪುತ್ರೀಪುತ್ರ ರಾಗಗಳೂ, ದಾಸೀ ದಾಸರಾಗ ಗಳೂ, ಮಿಶ್ರರಾಗಗಳೂ ಬಹಳವಾಗಿರುತ್ತವೆ. ಇದರಿಂದ ನಮ್ಮ ನಾಟದೇಶದಲ್ಲುದಿಸಿದ

ಗೀತ – ವಾದ್ಯ ನೃತ್ಯಗಳಿಂದೊಡಗೂಡಿದ ವಿಶಿಷ್ಟವಾದ ಸಂಗೀತವೊಂದು ಅತಿಪೂರ್ವ ಕಾಲದಲ್ಲೇ ನೆಲಸಿದ್ದುದೆಂದು ಗೊತ್ತಾಗುತ್ತದೆ. ಆ ಮೇಲೆ ನಾಟ ದೇಶವು ಕರ್ಣಾಟಕ (ನಾಟ) ಸಂಗೀತವನ್ನೇ ಆಶ್ರಯಿಸುತ್ತಿದ್ದಾರೆ. ವಿಶಿಷ್ಟವಾದ ಸಂಗೀತವು ಆಯಾ ದೇಶಗಳ ವಿಶಿಷ್ಟವಾದ ಸಂಸ್ಕೃತಿ (Culture) ಯನ್ನು ಪಸರಿಸಲಿಕ್ಕೆ ಪ್ರಬಲವಾಗಿರುವುದೆಂಬುದು ಸಹೃದಯರಾದವರಿಗೆ ಹೊಸತಲ್ಲ.

*ವಿವರಗಳಿಗೆ ನೋಡಿ: ಮುಳಿಯ ತಿಮ್ಮಪ್ಪಯ್ಯ ೧೯೮೮*
*ಶ್ರದ್ಧಾಂಜಲಿ ಸಂಪುಟ. ೨ ಪುಟ. ೫೦೭–೫೦೮*
*ಪಾಠಕ ಬಿ.ಡಿ. ೧೯೭೫ ಭಾರತೀಯ ಸಂಗೀತ ಚರಿತ್ರೆ ಪುಟ. ೮*

### ೫೯೪. ಮಾಲೆಗಾರರು

"ಮುನ್ನಿನ ಭವದೊಳ್ ಮಾಲೆಗಾರ್ತಿಯೆಂ ಕಾಲಂಗೆಯ್ದು" (ವಡ್ಡಾರಾಧನೆ – ಸುಕೌಶಳಸ್ವಾಮಿಕತೆ ಅನು. ಟಿ.ಕೇಶವಭಟ್ಟ. ಪುಟ. ೮೭) ಯಾವ ಹೆಂಗಸರು ಮಾಲೆಯನ್ನು ಕಟ್ಟಿ ಮಾರುತ್ತಾರೋ ಅವರನ್ನು ಮಾಲೆಗಾರ್ತಿಯರು ಎಂದು ಕರೆಯುತ್ತಾರೆ. ಇದು ಒಂದು ಉದ್ಯೋಗವೆಂಬುದು ಗಮನಾರ್ಹ.

ವಡ್ಡಾರಾಧನೆಯಲ್ಲಿ ಮಾಲೆಗಾರ್ತಿಯರ ಉಲ್ಲೇಖವೂ ಬರುತ್ತದೆ, ನಾನಾ ಬಗೆಯ ಹೂ ಮಾಲೆಗಳನ್ನು ಸಿದ್ಧಪಡಿಸಿ, ಅವುಗಳನ್ನು ಮಾರುವ ವೃತ್ತಿಯವರೇ ಮಾಲೆಗಾರರು. ಅವರು ಮಾಲೆಗಳನ್ನು ಕಟ್ಟಲು ಹೂಗಳನ್ನು ಆಯ್ದು ತರಬೇಕಾಗುತ್ತಿತ್ತು. ವಡ್ಡಾರಾಧನೆಯ ಚಾಣಾಕ್ಯರಿಸಿಯ ಕಥೆಯಲ್ಲಿ ಅಂಥದೊಂದು ಚಿತ್ರಣವಿದೆ. "ಮರದ ಮೇಲೆ ಹೂ ಬಿಡಿಸುತ್ತಿದ್ದ ವಸಂತಕನೆಂಬ ಮಾಲೆಗಾರನು ಅರಸನನ್ನು ಇರಿದುಕೊಂದು ಕೆಸರು ತುಂಬಿದ ಬಾವಿಗೆ ನೂಕುವದನ್ನು ನೋಡಿ ಹೆದರಿ ಮರದಿಂದ ನೆಗೆದು ಓಡಿದಹೋದ" ಎಂಬ ವಿವರ ಬರುತ್ತದೆ. ಇದರಿಂದ ಅಂದು ಹೂ ಬಿಡಿಸಿ ತಂದು ಮಾಲೆಕಟ್ಟಿ ಮಾರಾಟ ಮಾಡುವ ಜನರಿದ್ದರೆಂದು ತಿಳಿಯುತ್ತದೆ. ಇಂದಿನ ಹಾಗೆ ಅಂದು ಪಟ್ಟಣಗಳಲ್ಲಿ ಇಂಥ ಮಾಲೆಗಾರರ ಸಾಲುಗಳೇ ಇರುತ್ತಿದ್ದವು, ಮುಳಗುಂದದಲ್ಲಿ ಅಯ್ವತ್ತೆಂಟು ಮಾಲೆಗಾರರಿದ್ದುದನ್ನು ಅಲ್ಲಿಯ ಒಂದು ಶಾಸನ ತಿಳಿಸುತ್ತದೆ. ಆದ್ದರಿಂದ ಆ ಕಾಲಕ್ಕೆ ಮಾಲೆಯನ್ನು ಕಟ್ಟುವವರ ಜನಾಂಗ ಇತ್ತೆಂದು ಅವರು ಮಾಲೆಗಳನ್ನು ಕಟ್ಟಿ, ಅವುಗಳನ್ನು ಮಾರಿ ಉಪಜೀವನ ನಡೆಸುತ್ತಿದ್ದರೆಂದೂ ತಿಳಿದು ಬರುತ್ತದೆ.

*ವಿವರಗಳಿಗೆ ನೋಡಿ: ಡಾ. ವಿ.ಎಲ್. ಪಾಟೀಲ್ ೨೦೦೯*
*ವಡ್ಡಾರಾಧನೆ ಜಾನಪದೀಯ ಅಧ್ಯಯನ ಪುಟ. ೧೭೭*

### ೫೯೫. ಮಾಸಕ

ಜಾತಕಗಳಲ್ಲಿ ಕೂಲಿಗಾರನು ತನ್ನ ಕೂಲಿಯಿಂದ ಜೀವಿಸಲು ಕಷ್ಟಪಡುತ್ತಿದ್ದ ಅನೇಕ ಸಂದರ್ಭಗಳನ್ನು ಕಾಣಬಹುದು. ತಾಮ್ರದ ಬಿಡಿಗಾಸಿಗೆ ಆಗ 'ಮಾಸಕ'

ಎಂದು ಕರೆಯುತ್ತಿದ್ದು ಬೋಧಿಸತ್ವ, ಕೂಲಿಗಾರನಾಗಿ "ತನಗೆ ಸಿಕ್ಕುವ ಅರ್ಧ ಅಥವಾ ಒಂದು ಬಿಡಿಗಾಸಿನಿಂದ ತನ್ನ ತಾಯಿಯನ್ನು ಸಾಕಲಾರೆ" ಎನ್ನುತ್ತಾನೆ (ಜಾತಕ III. ೩೨೬). ಹುಲ್ಲು ಕೊಯ್ಯುವವನಿಗೆ ದಿನವೆಲ್ಲ ಕೊಯ್ದ ಹುಲ್ಲಿಗೆ ಮಾರುಕಟ್ಟೆಯಲ್ಲಿ ಎರಡು ಬಿಡಿಗಾಸು ಸಿಗುತ್ತಿತ್ತು. (ಜಾತಕ III. ೧೩೦).

*ವಿವರಗಳಿಗೆ ನೋಡಿ: ಆರ್.ಎಸ್. ಶರ್ಮ ೨೦೦೪ ಪ್ರಾಚೀನ ಭಾರತದಲ್ಲಿ ಶೂದ್ರರು*

**೪೯೬. ಮಿತ್ರಗುಣ**

*ಸೊರ್ಕಿದಾನೆಯಿಂ, ದುಷ್ಟನಾದ ಮಂತ್ರಿಯಿಂ, ಹಿರಿದು ದುಃಖವಹ ಧನದಿಂ, ಕಪಟಿಯಾದ* ***ಮಿತ್ರನಿಂದೇಂ*** *ಪ್ರಯೋಜನಂ? (ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ, ಶ್ಲೋಕ ೬೧)*

ಸೊಕ್ಕಿದಾನೆಯಿಂದ, ದುಷ್ಟನಾದ ಮಂತ್ರಿಯಿಂದ, ಹೆಚ್ಚು ದುಃಖವನ್ನು ಉಂಟು ಮಾಡುವ ಧನದಿಂದ, ಕಪಟಿಯಾದ ಮಿತ್ರನಿಂದ ಯಾವ ಪ್ರಯೋಜನವಿದೆ ? ಮಿತ್ರನು ನಮ್ಮ ಕಷ್ಟಕಾಲದಲ್ಲಿ ನೆರವಾಗಬೇಕು. ಕಪಟಿಯಾದ **ಮಿತ್ರನಿಂದ** ಯಾವ ಪ್ರಯೋಜನವೂ ಇಲ್ಲ.

ಪಂಚತಂತ್ರದಲ್ಲಿ ಮಿತ್ರಗುಣವನ್ನು ಹೇಳಲಾಗಿದೆ.

*ಸ್ವಚ್ಛತನಂ, ತ್ಯಾಗಂ, ಶೌರ್ಯಂ, ಸಮಾನವಹ ಸುಖದುಃಖಂ, ಸ್ನೇಹಂ, ದಾಕ್ಷಿಣ್ಯಂ, ಸತ್ಯಂ, ಶೌಚಮೆಂಬಿವು* ***ಮಿತ್ರಗುಣಗಳ್***

*(ಕರ್ಣಾಟಕ ಪಂಚತಂತ್ರ, ಮಿತ್ರಕಾರ್ಯ ಪ್ರಕರಣ, ಪು. ೨೦೩)*

ಸ್ವಚ್ಛತನ, ತ್ಯಾಗ, ಶೌರ್ಯ, ಸಮಾನ ಮನೋಸ್ಥಿತಿ, ಸ್ನೇಹ, ದಾಕ್ಷಿಣ್ಯ, ಸತ್ಯ, ಶೌಚ ಎನ್ನುವುದು ಮಿತ್ರಗುಣಗಳು.

ಮಿತ್ರರಿಗೂ ಲಕ್ಷಣಗಳಿವೆ.

*ಶೀಲಂ ಮಹಾಸ್ನೇಹಂ ಇವು ಮೊದಲಾದ* ***ಮಿತ್ರಲಕ್ಷಣಂಗಳಾವನಲ್ಲಿಯುಂಟು,*** *ಆ ಮಿತ್ರನಲ್ಲಿ ತಾನಿಹುದು (ಕರ್ಣಾಟಕ ಪಂಚತಂತ್ರ, ಮಿತ್ರಕಾರ್ಯ ಪ್ರಕರಣ, ಪು. ೨೦೩)*

ಶೀಲ, ಮಹಾಸ್ನೇಹ ಮೊದಲಾದ ಮಿತ್ರಲಕ್ಷಣಗಳಾವನಲ್ಲಿಯಿದೆ. ಅಂತಹ ಮಿತ್ರನಲ್ಲಿ ತಾನಿರಬೇಕು.

ಮಿತ್ರಬಲದ ಕುರಿತು ಪಂಚತಂತ್ರವು ಹೇಳುತ್ತದೆ.

*ಮಿತ್ರ ಬಲದಿನಾಗದುದುಂಟೇ (೭-೧೪೭)*

ಮಿತ್ರಬಲದಿಂದ ಕೈಗೂಡಲಾರದುದು ಉಂಟೆ?

ವಾಸ್ತವದಲ್ಲಿ ಮಿತ್ರನಾದವನು ಧರ್ಮೋಪದೇಶದಿಂದ ಪಾಪಕಾರ್ಯಗಳನ್ನು ಮಾಡದಂತೆ ತಡೆಯುತ್ತಾನೆ. ಯಾವಾಗಲೂ ಸತ್ಕಾರ್ಯವನ್ನೇ ಮಾಡಲು ಪ್ರೇರೇಪಿಸುತ್ತಾನೆ. ಪ್ರಕಟ ಮಾಡಬಾರದ ವಿಷಯವನ್ನು ಗೋಪ್ಯವಾಗಿಯೇ ಇಟ್ಟಿರುತ್ತಾನೆ. ಇತರರ ಸೌಶೀಲ್ಯಾದಿ ಗುಣಗಳನ್ನು ಪ್ರಕಾಶಪಡಿಸುತ್ತಾನೆ, ತನ್ನವರು ಆಪತ್ತನ್ನು ಹೊಂದಿದ್ದರೆ ಬಿಟ್ಟು ಹೋಗದೆ

ಸಹಕರಿಸುತ್ತಾನೆ. ದು:ಖ ಸಮಯದಲ್ಲಿ ಬೇಕಾದುದನ್ನು ಕೊಡುತ್ತಾನೆ. ಇಂತಹ ಸ್ವಭಾವವಿರುವವನನ್ನೇ ಸನ್ಮಿತ್ರನೆಂದು ಸತ್ಪುರುಷರು ಹೇಳುತ್ತಾರೆ ಎಂದೂ ಅವರ ಸ್ನೇಹವು ಕೃತ್ರಿಮವಾಗಿರುವುದಿಲ್ಲ

*ವಿವರಗಳಿಗೆ ನೋಡಿ: ಭರ್ತೃಹರಿಯ ನೀತಿಶತಕ ೧೯೭೪ –ಶ್ಲೋಕ–೬೬*

**೫೯೭. ಮೀಮಾಂಸೆ**

'ಮೀಮಾಂಸಾ' ಎಂಬ ಶಬ್ದದ ಅರ್ಥ ಸಮರ್ಥನಾಪೂರ್ವಕವಾಗಿ ವ್ಯಾಖ್ಯಾನಿಸುವುದು ಎಂದು. ಆದರೆ ಸಮರ್ಥನೆಗಳನ್ನು ನೀಡಿದುದು, ಯಜ್ಞಯಾಗಾದಿ ಕ್ರಿಯೆಗಳಿಗೆ. ಆ ಕ್ರಿಯೆಗಳ ಆಚರಣೆಯಿಂದಲೇ ಮೋಕ್ಷ ಸಾಧನೆ ಎಂದು ಹೇಳಲಾಯಿತು. ಮೀಮಾಂಸದ ಪ್ರಕಾರ ವೇದಗಳು ಶಾಶ್ವತ ಸತ್ಯವನ್ನು ಒಳಗೊಂಡಿವೆ. ಈ ದರ್ಶನದ ಮುಖ್ಯ ಗುರಿಯು ಸ್ವರ್ಗ ಹಾಗೂ ಮೋಕ್ಷಗಳ ಸಾಧನೆ. ಒಬ್ಬ ಮನುಷ್ಯನು ತಾನು ಮಾಡಿದ ಪುಣ್ಯಗಳ ಸಂಗ್ರಹವು ಮುಗಿಯುವವರೆಗೆ ಸ್ವರ್ಗದಲ್ಲಿದ್ದು ಅವೆಲ್ಲ ಮುಗಿದಾಗ ಮರಳಿ ಭೂಮಿಗೆ ಬಂದು ಜನ್ಮ ತಳೆಯುತ್ತಾನೆ. ಆದರೆ ಒಮ್ಮೆ ಮೋಕ್ಷವನ್ನೇ ಪಡೆದರೆ ಅವನು ಹುಟ್ಟು, ಸಾವುಗಳ ಚಕ್ರದಿಂದ ಬಿಡುಗಡೆ ಹೊಂದುತ್ತಾನೆ.

ಮೋಕ್ಷ ಸಾಧನೆಗಾಗಿ ವೇದಗಳು ವಿಧಿಸಿರುವ ಯಜ್ಞಯಾಗಾದಿಗಳ ಆಚರಣೆಯು ಅಗತ್ಯ ಎಂದು ಮೀಮಾಂಸಕರು ಪ್ರತಿಪಾದಿಸಿದರು. ಇದಕ್ಕೆ ಪುರೋಹಿತರು ಅಗತ್ಯವಿದ್ದರು. ಇದು ವರ್ಣಗಳ ನಡುವಣ ಸಾಮಾಜಿಕ ಅಂತರವನ್ನು ಸ್ಥಿರಗೊಳಿಸಿತು, ಅದಕ್ಕೆ ಮಾನ್ಯತೆ ನೀಡಿತು. ಮೀಮಾಂಸವನ್ನು ಪ್ರಚಾರ ಮಾಡುವ ಮೂಲಕ ಬ್ರಾಹ್ಮಣರು ತಮ್ಮ ಸಾಂಸ್ಕಾರಿಕ ಅಧಿಕಾರವನ್ನು ಬಲಪಡಿಸಿಕೊಂಡು ಬ್ರಾಹ್ಮಣೀಯ ಸಿದ್ಧಾಂತಗಳ ಮೇಲೆ ನಿಂತಿದ್ದ ಸಾಮಾಜಿಕ ಅಂತಸ್ತುಗಳ ವ್ಯವಸ್ಥೆಯನ್ನು ಕಾಪಾಡಿಕೊಂಡು ಬರಲು ಪ್ರಯತ್ನಿಸಿದರು.

ಮೀಮಾಂಸೆಯು ವಿಧಿ – ವಿಧಾನಗಳನ್ನು ಹೇರುತ್ತವೆ. ನಿಯಮಾವಳಿ. ಕಟ್ಟುಪಾಡುಗಳು ಅದಕ್ಕೆ ಮುಖ್ಯ. ಮೀಮಾಂಸೆಯ ಭಾಷೆಯು ಆಜ್ಞಾರೂಪವಾದುದು. ಕಾದಂಬರಿಯ ಭಾಷೆಯಂತೆ ಮೀಮಾಂಸೆಯ ಭಾಷೆಯು ಇರುವುದಿಲ್ಲ. ಅದು ಬಹುತ್ವವನ್ನು ಹೊಂದಿರುವುದಿಲ್ಲ. ಭಾಷೆಯ ಅನೇಕತೆ ಅದಕ್ಕೆ ಮುಖ್ಯವಲ್ಲ.

*ಹೆಚ್ಚಿನ ವಿವರಗಳಿಗೆ ನೋಡಿ: ಆರ್.ಎಸ್. ಶರ್ಮ ೨೦೦೭ ಪ್ರಾಚೀನ ಭಾರತ ಪುಟ. ೨೪೯*

*M.M. Bhakthin 1981 The dialogic imagination*

**೫೯೮. ಮುಂಜಿ ಬಂಧನ**

*ಮಗಂಪುಟ್ಟಿದೊಂ ತಾಯ್ಗಂ ತಂದೆಗಮೆಲ್ಲಾನಂಟರ್ಗೆಯುತ್ಸಾಹಮುಂ ಸುಖಮುಂ ವಿಭವಮುಮಂ ಪಡೆವುದಜೆಂದಮಾ ಕೂಸಿಂಗೆ ಭದ್ರಬಾಹುವೆಂಬ ಪೆಸರನೆಲ್ಲರುಂ ನೆರೆದಿಟ್ಟೊಡಾತನಂ ಬಿದಿಗೆಯ ಚಂದ್ರನಂತೆ ಕ್ರಮ ಕ್ರಮದಿಂದ ಸುಖದಿಂ ಬೆಳೆದು*

ಮುಂಜಿಗಟ್ಟುವ ಪ್ರಾಯಮಾದೊಡೆ ಪ್ರಶಸ್ತ ದಿವಸವಾರ ನಕ್ಷತ್ರ ಮಹೂರ್ತದೊಳ್ **ಮುಂಜಿಬಂಧನ** ಕ್ರಿಯೆಯುಂ ಮಾಡಿದ ಬಟಿಕ್ಕೆ ...............

*(ಡಿ.ಎಲ್.ಎನ್.೨೦೦೯ ಪು.೧೧೭).*

ಮುಂಜಿಯೆಂದರೆ ಉಪನಯನ: ನೊದೆ ಹುಲ್ಲಿನ ಉಡಿದಾರ ವೆಂಬರ್ಥವಿದೆ.

ಉಪನಯನದ ನಿಷೇಧಕ್ಕೆ ಗುರಿಯಾದ ಶೂದ್ರನಿಗೆ ವಿದ್ಯಾಭ್ಯಾಸ ದೊರಕದಿದ್ದರೂ ಅದರಿಂದ ಮಹತ್ವರ ನಷ್ಟವೇನೂ ಆಗಿರಲಾರದು. ಏಕೆಂದರೆ, ಉತ್ತರ ವೈದಿಕ ಕಾಲದ ವಿದ್ಯಾಭ್ಯಾಸ ಕ್ರಮವೇನಿತ್ತೋ ತಿಳಿಯದು. ಶಾಂಖಾಯನ ಗೃಹ್ಯಸೂತ್ರದಂತೆ (II.೭.೨೧–೨೫). ಉಪಚಾರರಕ್ಕಷ್ಟೇ ಕ್ಷತ್ರಿಯ, ವೈಶ್ಯರು ವೇದಾಧ್ಯಯನ ಮಾಡುತ್ತಿದ್ದರು. ಬ್ರಾಹ್ಮಣರು ಮಾತ್ರವೇ ವೇದಾಧ್ಯಯನಕ್ಕೆ ಪ್ರಾಶಸ್ತ್ಯ ಕೊಟ್ಟಿದ್ದು. ಆದ್ದರಿಂದ ಆ ಕಾಲಕ್ಕೆ ಉಪನಯನವು ವಿದ್ಯೆ, ಅಧ್ಯಯನದ ಅವಕಾಶವೆನ್ನುವುದಕ್ಕಿಂತ ಸಾಮಾಜಿಕ ಮೇಲ್ಮೆ–ಪ್ರತಿಷ್ಠೆಗಳ ಸಂಕೇತವೆನ್ನಬೇಕು. ಆಗ ಎಲ್ಲರೂ ತಮ್ಮ ವೃತ್ತಿಯನ್ನೇನೋ ಕಲಿಯುತ್ತಿದ್ದರು ಮತ್ತು ಕಲಿಕೆ ಸರಳವಾಗಿತ್ತು; ಆಗಿನ್ನೂ ಬರವಣಿಗೆ ಇದ್ದದ್ದಕ್ಕೂ ಸ್ಪಷ್ಟಪುರಾವೆ ಇಲ್ಲ.

ಶೂದ್ರರು ಇನ್ನೆರಡು ಚಿಕ್ಕಪುಟ್ಟ ವಿಧಿಗಳಲ್ಲಿ ಭಾಗವಹಿಸಬಹುದಿತ್ತು; ಒಂದು ಓದನಾಸವ, ಇನ್ನೊಂದು ಮಹಾವ್ರತ. ಬೇರೆ ವರ್ಣದವರಂತೆ ಅವನೂ ಬೇಯಿಸಿದ ಅನ್ನವನ್ನು ಅರ್ಪಿಸಬಹುದಿತ್ತು; ಆದರೆ ಒಂದೊಂದು ವರ್ಣದವರಿಗೆ ಒಂದೊಂದು ಅನ್ನವೆಂದು ವಿಂಗಡಣೆ ಮಾಡಲಾಗಿದೆ. (ಸತ್ಯಾಷಾಢ ಶ್ರೌತಸೂತ್ರ XXIII. ೪–೧೭).

ಮುಂಬಯಲಲ್ಲಿ ಜನಿವಾರವನ್ನು ಹಾಕಲಾಗುತ್ತದೆ. ಜನಿವಾರವು ಜನ್ನ (ಯಜ್ಞ)ದಿಂದ ಉತ್ಪನ್ನಗೊಂಡಿದೆ. ಪ್ರಾಕೃತದ 'ಜಣ್ಣೋವಿಅ' ಸಂಸ್ಕೃತದ ಯಜ್ಞೋಪವೀತವಾಗಿದೆ. ಕನ್ನಡದಲ್ಲಿ ಇದರ ಪ್ರಾಚೀನರೂಪ 'ಜನ್ನವಿರ' (ಮೊದಲನೆಯ ಗುಣವರ್ಮನ ಶೂದ್ರಕ (ಕ್ರಿ. ಶ. ೯೦೦) ಜನ್ನವಿರ, ಪಂಪಭಾರತ, ಚಾವುಂಡರಾಯ ಪುರಾಣಗಳಲ್ಲಿ ಜನ್ನಿವರವೆಂದು ಬಂದಿದೆ. (ಪಂಪಭಾರತ ೨–೯೩. ೬–೮) ಚಾವುಂಡರಾಯಪುರಾಣ ೩೫, ೧೫) ಉಪನಯನವೆನ್ನುವುದು ಒಂದು ಸಂಸ್ಕಾರವಿಧಿ, ಎಂಟು ವರ್ಷದೊಳಗೆ ಗಂಡುಮಗುವಿಗೆ ಯಜ್ಞೋಪವೀತ ತೊಡಿಸಬೇಕೆಂದು ಹೇಳುತ್ತಾರೆ. ಅನಂತರ ಅವನು ಸಂಧ್ಯಾವಂದನೆ ಮಾಡಲು ಅರ್ಹನಾಗುತ್ತಾನೆ.

ಮನುವು ಈ ರೀತಿ ಹೇಳುತ್ತಾನೆ: ಅಥರ್ವವೇದದಲ್ಲಿ ಉಪನಯನವೆಂಬುದನ್ನು ವಿದ್ಯಾರ್ಥಿಯಾಗಿ ಸ್ವೀಕರಿಸುವುದು ಎಂಬ ಅರ್ಥದಲ್ಲಿ ಬಳಸಲಾಗಿದೆ. ಉಪನಯನವೆಂದರೆ ಜ್ಞಾನ ದೀಕ್ಷೆ, ಬ್ರಾಹ್ಮಣನಿಗೆ ಎಂಟನೆಯ ವರ್ಷದಲ್ಲಿ, ಕ್ಷತ್ರಿಯನಿಗೆ ಹನ್ನೊಂದು ಹಾಗೂ ವೈಶ್ಯನಿಗೆ ಹನ್ನೆರಡು ಕೊನೆಯ ವಯಸ್ಸು ಬ್ರಾಹ್ಮಣನಿಗೆ ಹದಿನಾರು, ಕ್ಷತ್ರಿಯನಿಗೆ ಇಪ್ಪತ್ತೆರಡು ಮತ್ತು ವೈಶ್ಯನಿಗೆ ಇಪ್ಪತ್ತನಾಲ್ಕು. ಈ ವಯಸ್ಸನ್ನು ದಾಟಿಯೂ ಉಪನಯನ ವಾಗದಿದ್ದರೆ ಪವಿತ್ರವಾದ ಸಾವಿತ್ರಿಯಿಂದ ಜಾರಿ ಅನಾರ್ಯನೆನಿಸುತ್ತಾರೆ.

ಬಾಧಾಯನ ಗೃಹ್ಯಸೂತ್ರದಲ್ಲಿ ಈ ರೀತಿ ಬಂದಿದೆ:

ಬ್ರಾಹ್ಮಣನಿಗೆ ವಸಂತ ಋತುವಿನಲ್ಲಿ, ಕ್ಷತ್ರಿಯನಿಗೆ ಗ್ರೀಷ್ಮಋತುವಿನಲ್ಲಿಯೂ, ವೈಶ್ಯನಿಗೆ

ಶರದೃತುವಿನಲ್ಲಿಯೂ, ರಥಕಾರನಿಗೆ ವರ್ಷ ಋತುವಿನಲ್ಲಿಯೂ ಉಪನಯನವನ್ನು ಮಾಡಬೇಕು. (ಬೌಧಾಯನ ಗೃಹ್ಯಸೂತ್ರ ೨ – ೫,೬)

ಉಡಿದಾರ ಅಥವಾ ಮೇಖಲಾವನ್ನು ಈ ಮಂತ್ರದೊಂದಿಗೆ ಕಟ್ಟುತ್ತಾರೆ. ಶ್ರದ್ಧೆಯ ಕುಮಾರಿ, ಋಷಿಗಳ ಸೋದರಿ, ಸಂಯಮದ ಆಗರ, ಭೂತ ದಯಾಪರ, ನೀತಿಯ ರಕ್ಷಕ, ತಪೋನಿರತ, ಪಾಪನಾಶಕ ಎಂದು ಹೇಳುತ್ತಾರೆ.

ಕ್ರಮವಾಗಿ ಮುಂಜಿ–ಮರ್ವಾ–ಶಣ ತೃಣಗಳ ಎಳೆಯಿಂದ ಮಾಡಿದ ಬಳ್ಳಿಯಿಂದ ಮೇಖಲೆಯನ್ನು ತಯಾರಿಸಬೇಕು. ಅದು ಮೂರು ಎಳೆಯಿಂದ ನೆಯ್ದಿರಬೇಕು ಎಂದು ಮನುವಿನ ಅಭಿಪ್ರಾಯ.

ಹತ್ತಿ, ಸೆಣಬು, (ಗೋಣಿ) ಕುರಿರೋಮಗಳಿಂದ ಮಾಡಿದ ನೂಲಿನ ಮೂರೆಳೆಯ ಉಪವೀತವನ್ನು ಅನುಕ್ರಮವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ಧರಿಸಬೇಕು ಎಂದು ಮನು ಹೇಳುತ್ತಾನೆ.

ಉಪನಯನ ಅಥವಾ ದೀಕ್ಷೆ ಎಂದರೆ ಮಗುವನ್ನು ಗುರುವಿನ ಬಳಿಗೆ ವಿದ್ಯಾಭ್ಯಾಸಕ್ಕಾಗಿ ಕರರೆದೊಯ್ಯುವುದು ಎಂದರ್ಥ. ಸಂಸ್ಕೃತಿಯ ದೃಷ್ಟಿಯಿಂದ ಇದು ಬಹು ಮುಖ್ಯವಾದ ಸಂಸ್ಕಾರ. ವಿದ್ಯಾರಂಭವನ್ನು ಪ್ರಾಥಮಿಕ ವಿದ್ಯಾಭ್ಯಾಸದ ಆರಂಭ ವೆಂದೂ ಉಪನಯನವನ್ನು ಉನ್ನತ ವಿದ್ಯಾಭ್ಯಾಸದ ಪ್ರಾರಂಭವೆಂದೂ ಹೇಳಬಹುದು. ಬೇರೆ ಸಂಸ್ಕೃತಿಗಳಲ್ಲಿ ಯುವಕರಿಗೆ ಸಮಾಜದ ಹಕ್ಕು ಬಾಧ್ಯತೆಗಳನ್ನು ಮೂಡಿಸಲೋಸುಗ ನಡೆಸುವ ದೀಕ್ಷಾ ಸಂಸ್ಕಾರಕ್ಕೆ ಇದನ್ನು ಹೋಲಿಸಬಹುದು ಮತ್ತು ಇದು ಅಷ್ಟೇ ಪ್ರಮುಖವಾದದ್ದು. ಉಪನಯವನ್ನು ಪಡೆಯಬೇಕಾದ ವಟುವಿಗೆ ತನ್ನ ಕುಲದ ಸಂಸ್ಕೃತಿ, ಸಮಾಜದ ಕಟ್ಟುಪಾಡುಗಳು, ಮತ್ತು ಸಂಪ್ರದಾಯಗಳು ಹಾಗೂ ಪ್ರಚಲಿತ ಸಮಸ್ಯೆಗಳ ಅರಿವನ್ನೆಲ್ಲಾ ಈಗ ಮಾಡಿಕೊಡಲಾಗುತ್ತದೆ. ಹಿಂದೂಗಳಿಗೆ ಆದರ್ಶವಾದ ಈ ಉಪನಯನವು ಸಾರ್ವತ್ರಿಕ ವಿದ್ಯಾಭ್ಯಾಸವನ್ನು ಅವಶ್ಯಕವಾಗಿ ಕಲಿಯಲೇಬೇಕೆಂಬುದರ ವಂಶಪಾರಂಪರ್ಯವಾದ ಒಂದು ಚಿಹ್ನೆ ಎಂದು ಪರಿಗಣಿತವಾಗಿದೆ. ಪ್ರಾಚೀನ ರೀತಿಯ ಹಾಗೂ ಕೆಲವು ಮತಗಳಲ್ಲಿ ಈಗಲೂ ಪ್ರಚಲಿತವಿರುವ ದೀಕ್ಷಾ ಕ್ರಮದಲ್ಲಿ ವಟುವಿನ ಸಂಯಮವನ್ನು ಪರೀಕ್ಷೆಗೊಡುವುದು ಇಲ್ಲವೆ ಅಂಗಹೀನಗೊಳಿಸುವುದು ಮುಂತಾದ ಕ್ರಮಕ್ಕಿಂತಲೂ ಹಿಂದೂಗಳ ದೀಕ್ಷಾಪದ್ಧತಿಯು ಬಹು ಪ್ರಗತಿಪರವಾಗಿದೆ. ಉಪನಯನದ ಪ್ರಮುಖ ಅಂಶವೇನೆಂದರೆ ಇದನ್ನು ಪಡೆದವನಿಗೆ ಸಾಂಸ್ಕೃತಿಕವಾಗಿ ಮತ್ತು ಆಧ್ಯಾತ್ಮಿಕವಾಗಿ ಪುನರ್ಜನ್ಮ ಲಭಿಸುತ್ತದೆಂಬ ನಂಬಿಕೆ. ಶರೀರದ ಜನನವು ಮೃಗಗಳಿಗೂ ಸಹಜವಾದದ್ದು. ಆದರೆ ಸಂಯಮ ಮತ್ತು ಜ್ಞಾನಲಾಭದಿಂದಾಗುವ ಪುನರ್ಜನ್ಮವು ಬಹು ಶ್ರೇಷ್ಠವೂ ಮತ್ತು ಪಾವನವೂ ಆದದ್ದು.

ಕಾಲಕ್ರಮದಲ್ಲಿ ಉಪನಯನದ ಅರ್ಥ ಮತ್ತು ಗುರಿಯೂ ಬದಲಾಗಿರುವುದು ಕಾಣುತ್ತದೆ. ಅಥರ್ವವೇದದಲ್ಲಿ ಉಪನಯನವೆಂಬುದನ್ನು "ವಿದ್ಯಾರ್ಥಿಯಾಗಿ ಸ್ವೀಕರಿಸುವುದು" ಎಂಬರ್ಥದಲ್ಲಿ ಬಳಸಲಾಗಿದೆ. ಬ್ರಾಹ್ಮಣ ಮತ್ತು ಸೂತ್ರಗಳ

ಕಾಲದಲ್ಲಿಯೂ ವೇದದಲ್ಲಿ ಕಂಡುಬರುವ ಅರ್ಥದಲ್ಲಿಯೇ ಬಳಸಲಾಗಿದೆ. ಆದರೆ ಅದಕ್ಕೆ ಅನುಭಾವಯುತವಾದ ಗೂಢಾರ್ಥವು ಬಂದಮೇಲೆ ಧಾರ್ಮಿಕ ವಿಧಿಗಳಿಂದ ಲಭಿಸುವ ಪುನರ್ಜನ್ಮ ಎಂಬ ಭಾವನೆಯಲ್ಲಿ ಜ್ಞಾನದೀಕ್ಷೆಯ ಕಲ್ಪನೆ ಮುಚ್ಚಿಹೋಯಿತು. ಮೂಲತಃ ಈ ಸಂಸ್ಕಾರದ ಧ್ಯೇಯವು ವಿದ್ಯಾಭ್ಯಾಸವೇ ಆಗಿದ್ದು ಕರ್ಮವಿಧಿಗಳು ಅಧೀನ ಸ್ಥಾನದಲ್ಲಿದ್ದವು. ಕಾಲಾನುಕ್ರಮದಲ್ಲಿ ಕರ್ಮಾಚರಣೆ ಹಾಗೂ ವ್ರತಾದೇಶ ಅಥವಾ ಧಾರ್ಮಿಕ ಪ್ರತಿಜ್ಞೆಯು ಪ್ರಮುಖವಾಗಿ ವಿದ್ಯಾಭ್ಯಾಸವು ಅಪ್ರಧಾನವೆನಿಸಿತು.

ಗರ್ಭಸಂಸ್ಕಾರ–ಜಾತಕರ್ಮ–ಚೂಡಾಕರ್ಮ–ಮೌಂಜೀಬಂಧನಗಳಿಂದ ಬೀಜಾದೋಷ, ಗರ್ಭದೋಷಜನ್ಯ ಪಾಪದ ವಿಮೋಚನೆಯಾಗುವುದು ಎಂದು ಮನು ಹೇಳುತ್ತಾನೆ.

ನಾಗರಪಂಚಮಿ ಶ್ರಾವಣಮಾಸದಲ್ಲಿದ್ದರೆ, ಭಾದ್ರಪದದಲ್ಲಿ ಅನಂತ ಚತುರ್ದಶಿಯಿದೆ. ಅದು ಅನಂತನ ಹುಣ್ಣಿವೆಯಾದರೆ, ಶ್ರಾವಣದಲ್ಲಿ ನೂಲಹುಣ್ಣಿವೆ. ಅನಂತ ಎಂಬುದನ್ನು ಹಾವಿನ ಪರ್ಯಾಯ ನಾಮವಾಗಿ ಕಲ್ಪಿಸಲಾಗಿದೆ. ಸರ್ಪರೂಪ ಅನಂತನ ಹೆಸರಿನಲ್ಲಿ ಪೂಜೆಪಡೆದ ಒಂದು ದಾರವನ್ನು ಕೈಗೆ ಕಟ್ಟಿಕೊಳ್ಳಲಾಗುತ್ತದೆ. ನೂಲಹುಣ್ಣಿಮೆಯ ತಿಂಗಳಲ್ಲಿ ಮಂತರಿಸಿದ ನೂಲನ್ನು ಜನಿವಾರ, ಶಿವದಾರ ಎಂಬ ಸಂಕೇತದಲ್ಲಿ ಧರಿಸಲಾಗುವುದು. ಶಿವನ ಹೆಸರಿನ ದಾರ, ಹಾವಿನ ಪ್ರತೀಕವೆಂದರೆ ಸೋಜಿಗಪಡಬೇಕಾಗಿಲ್ಲ. ಆದರೆ, ಯಜ್ಞದ ಉಪವೀತವೆಂಬುದು ವಸ್ತ್ರರೂಪದಕ್ಕೇ ಇರಬೇಕು. ವಸ್ತ್ರವು ದಾರವಾಗಿ ಪರಿಣಮಿಸಿದುದಕ್ಕೆ ನಾಗ–ಸಂಪ್ರದಾಯದ ಪ್ರಭಾವವೆ ಕಾರಣವಿರುವ ಶಕ್ಯತೆಯಿದೆ. ಜನಿವಾರದ ನೂಲಿನ ಎರಡು ತುದಿಗಳನ್ನು ಕೂಡಿಸಿ ಹಾಕುವ ಗಂಟಿನ ವಿಶಿಷ್ಟ ಪ್ರಕಾರದಲ್ಲಿ ಒಂದಕ್ಕೆ 'ರುದ್ರಗಂಟು' ಎಂದು ಹೆಸರು; ಇನ್ನೊಂದು 'ಬ್ರಹ್ಮಗಂಟು' ಈ 'ಬ್ರಹ್ಮ' ಸಂಕೇತಕ್ಕೆ ಏನು ಅರ್ಥ? 'ಸುಬ್ರಹ್ಮ(ಣ್ಯ)' ದೇವರು ಸರ್ಪರೂಪನೆಂಬುದನ್ನು ಸ್ಮರಿಸಿಕೊಂಡರೆ ಈ 'ಬ್ರಹ್ಮ'ಗಂಟಿನೊಳಗಿನ ರಹಸ್ಯಾರ್ಥವು ಬಯಲಿಗೆ ಬರಲಿದೆ. ಋಗ್ವೇದ ಕಾಲದ ತರುವಾಯ ಯಜ್ಞದ 'ಉಪವೀತ'ವು ಪ್ರತಿಷ್ಠೆಗೆ ಎರವಾಗುತ್ತದೆ. ಅದರ ಸ್ಥಳವನ್ನು ಆಕ್ರಮಿಸಿದ 'ಯಜ್ಞ'ದ ಹೆಸರಿನ ಈ ದಾರವು, ಸರ್ಪಸಾಮರ್ಥ್ಯದ ಪ್ರತೀಕವಾಗಿಯೆ ಧರಿಸಲ್ಪಡುತ್ತಿರಲಿಕ್ಕೆ ಬೇಕೆಂದು ಹೇಳಬಹುದಾಗಿದೆ ಎಂದು ಶಂಬಾ ಅಭಿಪ್ರಾಯ.

*ವಿವರಗಳಿಗೆ ನೋಡಿ: ಡಾ. ಎಂ. ಚಿದಾನಂದಮೂರ್ತಿ ೧೯೯೮*
*ಹೊಸತು–ಹೊಸತು ಪುಟ. ೩೮೭–೩೯೫*
*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೨–೨೭, ೨–೩೬, ೨–೪೧, ೨–೪೪*
*ಯುಗಾಯಾತ್ರಿ ಭಾರತೀಯ ಸಂಸ್ಕೃತಿ ೧೯೭೧ ಸಂಪುಟ. ೨ ಪುಟ. ೨೯೮, ೨೯೯*
*ಶಂಬಾ ಜೋಶಿ ೧೯೯೯ ಸಂಪುಟ. ೪ ಪುಟ. ೧೪೧*

**೫೯೯. ಮುಡಿ**

ಮುಡಿಯಂ ಪಿಡಿದೆರೆದವನಂ
ಮುಡಿಯಿಸಿ ಮತ್ತವನ ಕರುಳ ಪಿಣಿಲಿಂದೆನ್ನಂ ॥

*ಮುಡಿಯಿಸುವಿನೆಗಂ ಮುಡಿಯಂ*

*ಮುಡಿಯೆಂ ಗಡ ಕೇಳಿಮೀಗಳಾನೆ ನುಡಿ ನುಡಿವೆಂ ॥ (ಪಂಪ ಭಾರತ)*

ಸ್ತ್ರೀಯರ ಮುಡಿಯನ್ನು ಬೇರೆಯವರು ಮುಟ್ಟುವುದು ಅಮಂಗಲಕರವೆಂದು ಭಾವಿಸುತ್ತಾರೆ. (ಪಂಪಭಾರತ ೭-೫) ಈ ರೀತಿಯ ನಂಬಿಕೆಗಳೂ ಸಾಮಾಜಿಕ ಧೋರಣೆಯ ಪ್ರತಿಫಲವಾಗಿದೆ. ಮುಡಿಯನ್ನು ಮುಟ್ಟುವುದು ಅಪರಾಧ ಎನ್ನುವುದಕ್ಕೆ ಜಿ.ಎಸ್.ಶಿವರುದ್ರಪ್ಪ ಅವರು ಹೀಗೆ ಹೇಳುತ್ತಾರೆ:

ಯಾವ ರಾಜಸೂಯ ಯಾಗದಲ್ಲಿ ಅವಭೃಥ ಜಲದಿಂದ ಮಂತ್ರಪೂರ್ವಕವಾಗಿ ಸ್ನಾನವಾಗಿತ್ತೋ ಆ ಪಾಂಡವರ ಪಟ್ಟದ ರಾಣಿಯ ಜಡೆ ಮುಡಿಯನ್ನು ದುಶಾಸನನು ಎಳೆದು ಬಿಚ್ಚಿದ್ದು ದೊಡ್ಡ ಅಪಮಾನ. ಮುಖ್ಯವಾಗಿ ಈ ಒಂದು ಪರಾಭವವೇ ಕವಿಗಳ ಕಣ್ಣನ್ನು ವಿಶೇಷವಾಗಿ ಸೆಳೆದಿರುವುದು: ಕನ್ನಡದ ಆದಿಕವಿ ಪಂಪನಿಗೆ ಸಮಸ್ತ ಮಹಾಭಾರತವೇ ದ್ರೌಪದಿಯ ಕೇಶಪಾಶ ಪ್ರಪಂಚದಲ್ಲಿ ಅಡಗಿದಂತೆ ತೋರುತ್ತದೆ. ಕುವೆಂಪುರವರೂ ಈ ರೀತಿಯಲ್ಲಿಯೇ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಆ ಮುಡಿ ಬರಿಯ ಕೂದಲುಂಡೆಯಲ್ಲ, ಆ ಕೂದಲು ಯಃಕಶ್ಚಿತ್ ಸ್ತ್ರೀಯೊಬ್ಬಳದ್ದಲ್ಲ, ಅದು ಸಿರಿಮುಡಿ ಮಾತ್ರವಲ್ಲ, ಶ್ರೀಮುಡಿಯೂ ಅಹುದು. ಉದ್ದಾಮರಾದ ಋಷಿ ಮಹರ್ಷಿಗಳು ಮಂತ್ರಘೋಷ ಮಾಡುತ್ತಿರಲು ಅಂಥವರ ಹಸ್ತದಿಂದ ಪವಿತ್ರವಾದ ಪುಣ್ಯೋದಕದಿಂದ ಅಭಿಷೇಕ ಮಾಡಿಸಿಕೊಂಡ ಮೂರ್ಧಕ್ಕೆ ಸೇರಿದ ಗೌರವದ ವಸ್ತು. ಈ ಇಬ್ಬರೂ ವಿಮರ್ಶಕರೂ ಒಪ್ಪಿಕೊಂಡಂತೆ ಕೃತಿಯಲ್ಲಿ ಮುಡಿಯನ್ನು ಮುಟ್ಟಿದ ಪ್ರಕರಣವು ತೀವ್ರವಾದ ಪರಿಣಾಮವನ್ನು ಬೀರುತ್ತದೆ.

ಅನಂತರ ದ್ರೌಪದಿಯು ಬಂಧಿತರಾದ ಶತ್ರುಗಳ ಕಟ್ಟನ್ನು ಬಿಡಿಸುತ್ತಾ, 'ಎಮ್ಮಂ ಪಿಡಿದೆಳೆವಂದಿನ ನಿಮ್ಮ ದಟುಗಳೀಗಳೆತ್ತವೋದವೊ' ಎಂದು ಕೇಳುತ್ತಾಳೆ. (೭-೫೯) ಕೀಚಕನ ವಧೆಯ ಸಂದರ್ಭವೂ ಆಕೆಯ ಸೇಡು ತೀರಿಸಿಕೊಳ್ಳುವ ಮನೋಭಾವವನ್ನು ಸೂಚಿಸುತ್ತದೆ. (೮-೫೮ವ, ೭೯ವ). ಮುಡಿಯನ್ನು ಪಿಡಿಯುವುದು ಸ್ತ್ರೀಗೆ ಮಾಡುವ ಅವಮಾನವೂ ಹೌದು.

ತನಗೆ ಅಪಮಾನವಾದುದಕ್ಕೆ ಸೇಡುತೀರಿಸಿಕೊಳ್ಳುವ ಮನೋಭಾವ ದ್ರೌಪದಿಯದು. ಜಿ. ಎಸ್.ಶಿವರುದ್ರಪ್ಪ ಅವರು ಗುರುತಿಸುವಂತೆ, ದ್ರೌಪದಿಗೆ ಒದಗಿದ ಪರಾಭವಗಳಲ್ಲಿ ಮೊದಲನೆಯದಾದ ಈಕೆ ಶಾಕರ್ಷಣೆ. ಸಂಸ್ಕೃತದ ಹಾಗೂ ಕನ್ನಡ ಕವಿಗಳ ಗಮನವನ್ನು ವಿಶೇಷವಾಗಿ ಸೆಳೆದಂತೆ ತೋರುತ್ತದೆ. ಆದರೆ ಅವಳಿಗೊದಗಿದ ಪರಾಭವದಲ್ಲಿ ಎರಡನೆಯ ದಾದ ವಸ್ತ್ರಾಪಹರಣ ಪ್ರಸಂಗ, ಅನುಕ್ರಮದಲ್ಲಿ ದ್ವಿತೀಯವಾದಂತೆ, ಆ ವಿಷಯವನ್ನೆತ್ತಿ ಕೊಂಡ ಕವಿಗಳ ನಿರೂಪಣೆಯಲ್ಲೂ ಬಹುಮಟ್ಟಿಗೆ ದ್ವಿತೀಯವಾಗಿಯೆ ಉಳಿದಿದೆ.

ಕೃತಿಯಲ್ಲಿ ಸೂಚಿತವಾದಂತೆ ದ್ರೌಪದಿಗೆ ಆದ ಅಪಮಾನವು ಸಾಧಾರಣ ತರವಾದುದಲ್ಲ. ಆದುದರಿಂದಲೇ 'ಪಂಪಭಾರತ'ದಲ್ಲಿ ದ್ರೌಪದಿಗೆ ಆದ ಅಪಮಾನದ ಕುರಿತಂತೆ ಕೇಂದ್ರಿತ ದೃಷ್ಟಿಯಿದೆ. ಸೇಡನ್ನು ತೀರಿಸಿಕೊಳ್ಳುವ ಜ್ವಲಂತ ವ್ಯಕ್ತಿತ್ವವಾಗಿ

ಕಾಣಿಸಿಕೊಳ್ಳುವ ದ್ರೌಪದಿಯ ಪಾತ್ರವು ಕೃತಿಯಲ್ಲಿ ಅನೇಕ ಆಯಾಮವನ್ನು ಪಡೆದುಕೊಳ್ಳುತ್ತದೆ. ಪಂಪನು ಭೀಮನ ಮೂಲಕ ಹೇಳಿಸುವ ಮಾತು ಇದಕ್ಕೆ ಆಧಾರವಾಗಿದೆ:

*"ಇದಱಿಂ ಶ್ವೇತಾತಪತ್ರಸ್ಥಗಿತ ದಶದಿಶಾಮಂಡಲಂ ರಾಜಚಕ್ರಂ*
*ಪುದಿದಟ್ಟಾಡಿತ್ತಡಂಗಿತ್ತಿದಱಿಳೆ ಕುರು ರಾಜಾನ್ವಯಂಮತ್ತ್ರತಾಪ।*
*ಕ್ಕಿದಱಿಂದಂ ನೋಡಗುರ್ವಿದುದಿದುವೆ ಮಹಾಭಾರತಕ್ಕಾದಿಯಾಯ್ತು*
*ಬ್ಜದಳಾಕ್ಷೀ ಪೇಟಿಸಾಮಾನ್ಯಮೆ ಬಗೆಯೆ ಭವತ್ಕೇಶಪಾಶ ಪ್ರಪಂಚಂ॥*
*(ಪಂಪಭಾರತ ೧೨-೧೫೬)*

ಒಟ್ಟು ಕೃತಿಯ ಆದರ್ಶವನ್ನು ಈ ಮಾತು ಸೂಚಿಸುತ್ತದೆ. ಆದುದರಿಂದ 'ಪಂಪಭಾರತ'ವು ಹೆಣ್ಣಿನ ಸೇಡಿನ ಮನೋಭಾವವನ್ನು ಸಶಕ್ತವಾಗಿ ಚಿತ್ರಿಸುವ ಕೃತಿ.

ರನ್ನನ 'ಗದಾಯುದ್ಧ'ದಲ್ಲಿಯೂ ಇದೇ ಆಸಕ್ತಿಯು ಮುಖ್ಯವಾಗಿದೆ. (೧-೬೭)

*ವಿವರಗಳಿಗೆ ನೋಡಿ: ಶಿವರುದ್ರಪ್ಪ ಜಿ.ಎಸ್. (ಸಂ) ೧೯೮೨ ವಿಮರ್ಶೆಯ ದಾರಿ ಪುಟ. ೧೩೨*
*ಡಾ. ಕೆ.ಸಿ. ಶಿವಾರೆಡ್ಡಿ ೨೦೦೩ ಕುವೆಂಪು ಸಮಗ್ರ ಗದ್ಯ ಸಂಪುಟ. ೧*

### ೬೦೦. ಮುನಿ

'ಮುನಿ' 'ಸನ್ಯಾಸಿ' 'ಯತಿ' 'ತಪಸ್ವಿ' ಮುಂತಾದ ಪದಗಳನ್ನು ಒಂದೇ ಅರ್ಥದಲ್ಲಿ ಬಳಸುತ್ತೇವೆಯಾದರೂ ಇವುಗಳ ಅರ್ಥ ಬೇರೆಯಾಗುತ್ತವೆ. ಸಂಸ್ಕೃತ(ಆಯ್) ಭಾಷಾವರ್ಗದ ಭೂಮಿಕೆಯಿಂದ ಈವರೆಗೆ 'ಮುನಿ' ಶಬ್ದದ ನೆಲೆ ಗೊತ್ತಾಗದಿರುವುದರ ಕಾರಣವೇನು ಮತ್ತೆ? ಯಾವ ನಡೆವಳಿ – ನುಡಿವಳಿಯು ಋಗ್ವೇದದ ಮೂಲ, ವೈಚಾರಿಕ ಚೌಕಟ್ಟಿನ ಹೊರಗಿನದೊ, ಆ ದೃಷ್ಟಿಕೋನಕ್ಕೆ ಅರಿಯದ್ದೊ, ಅಂತಹ ಭಾಷೆಯಲ್ಲಿ, ಆ ಕೃತಿಯನ್ನು ಅರ್ಥೈಸುವ ಸಂಜ್ಞೆ–ಸಂಕೇತಗಳು ಅಂದಿನ ಸಂಸ್ಕೃತದಲ್ಲಿ ಇಲ್ಲದಿರುವುದು ವಾಸ್ತವವೇ ಆಗಿದೆ. 'ಮನನಾತ್ ಮುನಿಃ' ಎಂದು 'ಮುನಿ' ಶಬ್ದದ ನಿರ್ವಚನವನ್ನು ಹೇಳಲಾಗುತ್ತದೆ.! 'ಮನನ'ದ ಹಂತದ ಮುನಿ, ಉಪನಿಷತ್ತುಗಳ ಸುಮಾರಿಗೆ ಕಾಣುತ್ತಾನೆ.

ಆದಕಾರಣ, 'ಮುನಿ' ಶಬ್ದವು ಸಂಸ್ಕೃತ ಭಾಷೆಗೆ ಹೊರಗಿನದಾಗಿರಲಿಕ್ಕೇಬೇಕು. ಋಗ್ವೇದಕಾಲೀನ ವೈಚಾರಿಕ ಆ ಕೃತಿಗೆ ಹೊರಗಿನದೆಂದು ಕಂಡುಬರುತ್ತಿರುವ ಹಾಗೂ ಸಂಸ್ಕೃತ ಭಾಷೆಯಿಂದ ಶಬ್ದನಿಷ್ಪತ್ತಿಯನ್ನು ಹೇಳಲು ಅವಶ್ಯವಾಗಿರುವ ಈ 'ಮುನಿ' ಸಂಕೇತವು, ಋಗ್ವೇದ ಕಾಲದಲ್ಲಿ ಅ ಭಾಗದಲ್ಲಿ ಪ್ರಚಲಿತವಿದ್ದಿತೆಂದು ಅರಿಕೆಗೆ ಬರುತ್ತಿರುವ ಕಂದಮಿಳ ಅಥವಾ ಕೋಲುಮುಂಡಾ ಭಾಷೆಗೆ ಸಂಬಂಧಪಟ್ಟಿರಲಿಕ್ಕೇಬೇಕಾಯಿತು. ಜೀನ್ ಪ್ರಿಲಸ್ಕಿ, ಸಿಲ್ವಾನ್ ಲೆವಿ, ಪ್ರಭೃತಿಗಳಲ್ಲಿ, ಕೋಲಮುಂಡಾ ಭಾಷೆಯ ಅಭ್ಯಾಸಿಗಳಲ್ಲಿ ಯಾರು ಒಬ್ಬರೂ 'ಮುನಿ' ಸಂಕೇತವು, ಆ ಭಾಷೆಯದೆಂದು ಅಭಿಪ್ರಾಯಪಟ್ಟುದು ಕಾಣಿಸುವುದಿಲ್ಲ. ಆದಕಾರಣ 'ಮುನಿ' ಎಂಬ ಈ ಪುರಾತನ ಸಂಪ್ರದಾಯವು ಮೂಲತಃ

ಕಂದಮಿಳ ಸಂಸ್ಕೃತಿಯ ಆರಂಭಗಾರರಾದ 'ಕಣಿ' ಯರದೇ ಆಗಿರಬೇಕೆಂದು ಅನುಮಾನ ಹೊರಡುತ್ತದೆ. ಮುನಿಯು ವಿರಕ್ತನು; ಸಂಸಾರವನ್ನು ತ್ಯಾಜ್ಯವೆಂದು ಬಗೆದವನು. ಒಂದು ಬಗೆಯಲ್ಲಿ ಸಂಸಾರದ ಮೇಲೆ ಮುನಿದುಕೊಂಡವನು. ವಿರಕ್ತಭಾವವು – ವೈರಾಗ್ಯವು ಸಹಜವಾದುದಲ್ಲ. 'ಸಂಸಾರ ಹೇಯಸ್ಥಲ'ವು, ವೈರಾಗ್ಯಕ್ಕೆ ಪೂರ್ವಭಾವಿಯಾಗಿ ಆವಶ್ಯಕವಾದ – ಅನಿವಾರ್ಯವಾದ ಹಂತವಾಗಿದೆ. 'ಅಭಾವ' ವೈರಾಗ್ಯ, 'ಪ್ರಸೂತಿ' – ವೈರಾಗ್ಯ, 'ಸ್ಮಶಾನ'–ವೈರಾಗ್ಯ ಎಂಬೀ ಮಾತುಗಳು ವೈರಾಗ್ಯದ ಉಗಮಕಾಲದ ಮನೋಭಾವವನ್ನು ನಿದರ್ಶನಕ್ಕೆ ತಂದುಕೊಡುತ್ತವೆ. ಸಂಸಾರವನ್ನು ತೊರೆಯುವ ತೀವ್ರ ಮನೋವೇದನೆಗೆ ನಿರ್ವೇದಕ್ಕೆ ಕಾರಣವಗುವ ಸಂಗತಿಗಳು ಎರಡು ಬಗೆಯವು.

ಮುನಿ ಸಂಪ್ರದಾಯದ ಬಗೆಗಿನ ಈ ವರೆಗಿನ ವಿವರಣೆಯಿಂದ ಸ್ಪಷ್ಟವಾಗುವ ಸಂಗತಿಗಳು :

೧. ಇದು ಯಾಜಕ ಸಂಪ್ರದಾಯದ ಭೂಮಿಕೆಯಲ್ಲಿ ಬೆಳೆದ ವಿಚಾರವೃಕ್ಷವಲ್ಲ.
೨. ಸೈಂಧವ ಸಂಸ್ಕೃತಿಯಲ್ಲಿ ಇದರ ಕುರುಹುಗಳು ದೊರೆತಿವೆ.
೩. ಇದು ಅಖಿಲಭಾರತೀಯ ಸ್ವರೂಪದ ಸಂಪ್ರದಾಯವಿದೆ.
೪. 'ಮುನಿಯ ಸ್ವಭಾವ ವೈಲಕ್ಷಣಗಳು: ಬಾಳಿನ ಬಗೆಗೆ ತಿರಸ್ಕಾರ, ಹೇಸಿಕೆ; ಈ ಮನೋವೃತ್ತಿಯನ್ನು ಬಿಂಬಿಸಿಕೊಳ್ಳುವ ಸಾಧನೆಗೆ ಅನುಕೂಲವಾಗಿ ಅವರಲ್ಲಿ ತಲೆದೋರಿದ ತಿರಸಟ್ಟಿತನ; ನಿಸ್ಪೃಹವರತ್ತಿ. 'ತಿರಸಟ್ಟಿ' ಪುರಾತನರ ಈ ಸಂಪ್ರದಾಯವು ಸಂಸಾರದ ಮೇಲಿನ ಸಿಡುಕಿನ ವಿರಕ್ತರದು;
೫. ಕಂದಮಿಳ ಭಾಷೆಯ ಮೂಲಕ ಅರಿಕೆಗೆ ಬರುವ 'ಮುನಿ'ಯ ಮೂಲ (ಸ್ವಭಾವ) ಅರ್ಥ್ವು ಈ ಸಂಪ್ರದಾಯದ ಉಗಮದ ಮೇಲೆಯೂ ಬೆಳಕನ್ನು ಬೀರುತ್ತದೆ.
೬. ಇಲ್ಲಿಯ ಪ್ರಭೃತಿ ಸಂಶೋಧಕರ ಅಭಿಪ್ರಾಯದಂತೆ ಯೋಗ – ಸಿದ್ಧರ ವಿರಕ್ತ ಮಾರ್ಗವು ಮೂಲತಃ ಕಂದಮಿಳ ಭಾಷಿಕ ಸಂಪ್ರದಾಯವಾಗಿದೆ.
೭. ಆದರೆ, ಸಂಸ್ಕೃತ ಭಾಷಿಕ ಋಷಿಸಂಪ್ರದಾಯದ ಸಂತತಿಯೂ ಯೋಗಮಾರ್ಗದ ಸಿದ್ಧಪರಂಪರೆಯತ್ತ ಆಕರ್ಷಿಸಲ್ಪಟ್ಟುದನ್ನು ಮರೆಯಲಿಕ್ಕಾಗದು.
೮. ಆದಕಾರಣ, ಸಂಸ್ಕೃತ ಭಾಷಿಕರ ಪ್ರಭಾವಕ್ಕೆ ಒಳಗಾಗದ ಮೂಲ ಕಂದಮಿಳ ಭಾಷಿಕರ ಸಂಸ್ಕೃತಿಯ ಭಾಗವು ಯಾವುದು, ಎಷ್ಟು ಎಂಬುದನ್ನು ಊಹಿಸಿಕೊಳ್ಳುವಾಗ ಎಚ್ಚರಪಟ್ಟುಕೊಂಡಷ್ಟು ಲೇಸು ಎಂದು ಶಂಬಾ ಹೇಳುತ್ತಾರೆ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೩ ಪುಟ. ೨೩೩, ೨೩೪, ೨೩೭, ೨೩೮*

**೬೦೧. ಮೂಗುವಡು**

*ಎಂಬುದುಮಂಬುದಾಗಮದ ಕೋಗಿಲೆಯಂತಿರೆ* **ಮೂಗುವಟ್ಟು** *ನೀ*
*ಮೆಂಬುದನೆನ್ನಿಮೆಂದುಸಿರದಿರ್ದ ತನೂಜೆಯ ಭಾವಮಂ ಮಹೀ..*
*(ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೩–೨೬)*

ಮೂಗುವಡು=ಮೌನಿಯಾಗಿರು. ಇಲ್ಲಿ ಭೂತಕಾಲದ ಪ್ರಯೋಗವಿದೆ.

"ನೀವು ಹೇಳುವುದನ್ನು ಹೇಳಿ, ನಾನಂತೂ ಮಾತನಾಡಲಾರೆನು" ಎಂಬ ತನ್ನ ತನೂಜೆ(ಮಗಳು)ಯ ಭಾವವನ್ನು ತಂದೆ ಅರ್ಥೈಸಿಕೊಂಡನು. ಈಗಲೂ ಬಾಯಿ ಬಾರದವರಿಗೆ ಮೂಗರು ಎಂದು ಕರೆಯುವ ಕ್ರಮವಿದೆ.

ಅಂಬು=ನೀರು, ಅಂಬುದಾಗಮನ ಅಂದರೆ ಮಳೆಗಾಲ ಮಳೆಗಾಲದಲ್ಲಿ ಕೋಗಿಲೆ ಮೌನವಾಗಿರುವಂತೆ ಶ್ರೀಮತಿಯು ತಂದೆ-ತಾಯಿಯರು ಕೇಳಿದ ಪ್ರಶ್ನೆಗೆ ಮೌನವಾಗಿದ್ದ ಳೆಂಬ ಭಾವ.

**೬೦೨. ಮೂರ್ಖ**

*ಉದಕದಿಂದಗ್ನಿಯಂ, ಸತ್ತಿಗೆಯಿಂ ಬಿಸಿಲಂ, ಔಷಧದಿಂ ವ್ಯಾಧಿಯಂ, ಮಂತ್ರ ಪ್ರಯೋಗದಿಂ ವಿಷಮಂ, ಅಂಕುಸದಿಂದಾನೆಯಂ, ದಡಿಯಿಂದೆಟ್ಟು ಕತ್ತೆಗಳಂ ನಿಲಿಸಲ್ ಬಹುದು; ಮತ್ತೆ ಎಲ್ಲವಕ್ಕಂ ಶಾಸ್ತ್ರವಿಹಿತಮಪ್ಪೌಷಧಮುಂಟು;* **ಮೂರ್ಖಂ**ಗೌಷಧಮಿಲ್ಲ *(ಪು. ೧೬೫)*

*(ಕರ್ಣಾಟಕ ಪಂಚತಂತ್ರ, ವಿಶ್ವಾಸ ಪ್ರಕರಣ, ೧೬೯ ವಚನ)*

ಮೂರ್ಖರೆಂದರೆ ಯಾರು ಎಂಬುದನ್ನು ಪಂಚತಂತ್ರವು ಹೀಗೆ ವಿವರಿಸುತ್ತದೆ.

ಮೂರ್ಖನಿಗೆ ಹಿತವನ್ನು ನುಡಿಯಬಾರದು. ಆತನ ಸಂಗದಲ್ಲಿಯೂ ಇರಬಾರದು. ಮೂರ್ಖನಿಗೆ ಔಷಧವಿಲ್ಲ. ಬೆಂಕಿಯನ್ನು ನೀರಿನಿಂದಲೂ, ಕೊಡೆಯಿಂದ ಬಿಸಿಲನ್ನು, ಔಷಧಿಯಿಂದ ವ್ಯಾಧಿಯನ್ನು, ಮಂತ್ರಪ್ರಯೋಗದಿಂದ ವಿಷವನ್ನು, ಅಂಕುಶದಿಂದ ಆನೆಯನ್ನು; ದಂಡದಿಂದ ಕತ್ತೆಗಳನ್ನು ನಿಲ್ಲಿಸಬಹುದು. ಆದರೆ ಯಾವುದೇ ಕಾರಣಕ್ಕೆ ಮೂರ್ಖನಿಗೆ ಔಷಧಿಯಿಲ್ಲ. ಒಂಟೆಯ ಬೆನ್ನು, ನಾಯಿ ಬಾಲ, ಹಾವು, ಕಡುಮೂರ್ಖ ರನ್ನು ನೆಟ್ಟಗೆ ಮಾಡಲು ಸಾಧ್ಯವೇ ಇಲ್ಲವೆಂಬ ಸುಭಾಷಿತವೊಂದನ್ನು ನೆನಪಿಸಿಕೊಳ್ಳ ಬಹುದು. 'ಮೂರ್ಖಂಗೆ ಹಿತವನ್ನು ನೂರ್ಕಾಲ ಹೇಳಿದರೂ ಗೋರ್ಕಲ್ಲ ಮೇಲೆ ಮಳೆ ಸುರಿದಂತೆಯೇ' ಸರಿ. ಮೂರ್ಖರಿಗೆ ಸಾಮಾಜಿಕ ಮಾನ್ಯತೆಯಿಲ್ಲ.

**೬೦೩. ಮೂರ್ಧಾಭಿಷೇಕ**

*ಪಡೆ ಪನ್ನೊಂದಕ್ಷೋಹಿಣಿ*
*ಗೊಡೆಯನೆ* **ಮೂರ್ಧಾಭಿಷಿಕ್ತ**ನಯ್ *ಮೂಱುಂಬೆ ।*
*ಳ್ಗೊಡೆಯ ನಡುವಿರ್ಪ ನೀನಿ*
*ರ್ದೆಡೆಯುಮ[ದೆ]ಮಗಜೆಯದಂತುಟಾದುದೆ ಮಗನೇ ॥*

*(ಸಾಹಸ ಭೀಮ ವಿಜಯ ೩-೭೪)*

ಮೂರ್ಧಾ ಎಂದರೆ ತಲೆ. ಮೂರ್ಧಾಭಿಷೇಕವೆಂದರೆ ತಲೆಯ ಮೇಲೆ ಅಭಿಷೇಕ

ಮಾಡುವುದು ಎಂದರೆ ಅಭಿಷೇಕಗೊಂಡವನು. ತಲೆಯ ಮೇಲೆ ಅಭಿಷೇಕ ಮಾಡುವುದನ್ನು ಮೂರ್ಧಾಭಿಷೇಕವೆಂದು ಕರೆಯುತ್ತಾರೆ.

ಬೆಳ್ಗೊಡೆಯೆಂದರೆ ಬಿಳಿಯ ಕೊಡೆ ಅದು ಚಕ್ರವರ್ತಿಗಳಿಗೆ, ರಾಜರಿಗೆ ಇರುವ ಬಿಳಿಯ ಛತ್ರಿ. ಅದನ್ನು ಶ್ವೇತ ಛತ್ರವೆಂದು ಕರೆಯುತ್ತಾರೆ.

ಮೂರ್ಧಾಭಿಷೇಕವನ್ನು ವಿಶೇಷ ಸಂದರ್ಭದಲ್ಲಿ ಮಾಡುತ್ತಾರೆ ಎಂಬುದು ಗಮನಾರ್ಹ. ಪಟ್ಟಕಟ್ಟುವಾಗ ಮೂರ್ಧಾಭಿಷೇಚನ ಮಾಡುತ್ತಾರೆ. ಮೂರ್ಧಾಭಿಷಿಕ್ತರು ಎಂದರೆ ರಾಜರು, ಪಟ್ಟಾಭಿಷಿಕ್ತರು, ಮಕುಟವರ್ಧನರು ಕಿರೀಟಧಾರಿಗಳು. ಆಳುಗಳಿಗೆ ಕಿರೀಟವಿಲ್ಲ. ಕಿರೀಟವಿರುವುದು ರಾಜರಿಗೆ, ಆದುದರಿಂದ ರಾಜರಿಗೆ ಮೂರ್ಧಾಭಿಷಿಕ್ತರು, ಕಿರೀಟ ಧಾರಿಗಳು ಎಂದೂ ಕರೆಯುತ್ತಾರೆ.

'ಕಿರೀಟ ಹೊತ್ತವನಿಗೆ ಕಿರುಕುಳ ತಪ್ಪಿದ್ದಲ್ಲ'ವೆಂಬುದೊಂದು ಗಾದೆ.

**೬೦೪. ಮೂಲಾನಕ್ಷತ್ರ**

*ಕದನಂ ಮಾರ್ಗಶಿರದ ಶು*
*ದ್ಧದಿನಂ ತೇರಸಿ [ಯ ತಾರೆ ] ಭರಣಿಯೊಳಾ* **ಮೂ** *।*
**ಲದ** *ಕಡೆಯಮವಾಸೆಯ ಪ*
*ರ್ವದೊಳಂ ನಿರ್ಮೂಲಮಾಯ್ತು ಕೌರವವಂಶಂ ॥*

*(ಸಾಹಸ ಭೀಮ ವಿಜಯ ೯-೩೭)*

ಕರ್ಣಾಟಕ ಕಾದಂಬರಿಯಲ್ಲಿಯೂ ಮೂಲಾ ನಕ್ಷತ್ರದ ಕುರಿತು ಬರುತ್ತದೆ. (ಕರ್ಣಾಟಕ ಕಾದಂಬರಿ, ೧-೨೨೭).

ಜ್ಯೋತಿಷ್ಯದ ಪ್ರಕಾರ ಮೂಲಾ ನಕ್ಷತ್ರದಲ್ಲಿ ಹುಟ್ಟಿದ ಹೆಣ್ಣನ್ನು ಮದುವೆಯಾದರೆ ಗಂಡಿನ ಅಣ್ಣನಿಗೋ, ಗಂಡಿನ ತಾಯಿಗೋ ಅಪಾಯವಿದೆ. ಅಂತಹವರಿಗೆ ಮದುವೆಯು ವಿಳಂಬವಾಗುತ್ತದೆಯೆಂಬ ನಂಬಿಕೆಯಿದೆ. ಮೂಲ ಎಂದರೆ ಹಿರಿಯರು. ಮೂಲಕ್ಕೆ ಏಟು ಎನ್ನುವುದು ಇಲ್ಲಿಯ ಭಾವನೆ.

ಮಹಾಭಾರತ ಯುದ್ಧದ ಸಂಪೂರ್ಣ ಚಿತ್ರಣವು ಈ ಕೆಳಗಿನಂತಿದೆ:

ಮೊದಲಿಂದ ಹತ್ತುದಿನಗಳವರೆಗೆ ಭೀಷ್ಮನೂ, ಮುಂದಿನ ಐದು ದಿನ ದ್ರೋಣನೂ, ಆಮೇಲೆ ಎರಡು ದಿನ ಕರ್ಣನೂ, ಬಳಿಕ ಅರ್ಧ ದಿನ ಶಲ್ಯನೂ ಯುದ್ಧಮಾಡಿದರು. ಇನ್ನುಳಿದ ಅರ್ಧ ದಿನದಲ್ಲಿ ಗದಾಯುದ್ಧ ಮುಗಿಯಿತು. ಹೀಗೆ ಹದಿನೆಂಟು ದಿನಗಳವರೆಗೆ ಭೀಕರವಾದ ಭಾರತ ಯುದ್ಧ ನಡೆಯಿತು. ಯುದ್ಧಾರಂಭವಾದುದು ಮಾರ್ಗಶಿರ ಶುದ್ಧತ್ರಯೋದಶಿ ಭರಣೀ ನಕ್ಷತ್ರದಲ್ಲಿ; ಅಮಾವಾಸ್ಯೆಯ ದಿನ ಮೂಲಾನಕ್ಷತ್ರದ ಕಡೆಯ ಚರಣದಲ್ಲಿ ಕೌರವ ವಂಶವು ನಿರ್ವಂಶವಾಯಿತು. ಇಲ್ಲಿ ಅಮವಾಸ್ಯೆ ಭರಣಿ ನಕ್ಷತ್ರ: ಅಮವಾಸ್ಯೆ: ಮೂಲಾ ನಕ್ಷತ್ರದ ಕೊನೆಯ ಚರಣವು ಒಳ್ಳೆಯ ಗಳಿಗೆಯಲ್ಲವೆಂದು ಜ್ಯೋತಿಷ್ಯ ಪ್ರತಿಪಾದಿಸುತ್ತದೆ.

**೬೦೫. ಮೂವಿಟ್ಟಿ**

*ಕೆಯ್ಸೆಱೆಯಂ ಕೊಟ್ಟಳವಟ್ಟ ಸಾರ ಧನಮಂ* ಮೂವಿಟ್ಟಿಗಂ *ಪೂಣ್ದು ಕಾಲ್ಗೆಱಗಿತ್ತಂತರಿಗಂಗೆ ಬೆರ್ಚಿ ಭಯದಿಂ ಗ್ರಾಮಂ ಕುಳಂ ರಾಜಕಂ................*

(*ಪಂಪಭಾರತ. ೬-೩೦*)

ದಾರಿಯುದ್ದಕ್ಕೂ ರಾಜನು ಧರ್ಮಕಾರ್ಯಗಳ್ನು ಮಾಡುತ್ತಿದ್ದನು. ಸೈನ್ಯದ ಚಲನೆಯು ಸುಗಮವಾಗಿರುವುದಕ್ಕಾಗಿ ದಾರಿಯನ್ನು ಸಿದ್ಧಪಡಿಸಲು ಸೈನ್ಯಕ್ಕಿಂತ ಮುಂಚೆಯೇ ಪಥ ತಂತ್ರಜ್ಞರು ತಮ್ಮ ಸಿಬ್ಬಂದಿಯೊಡನೆ ಹೋಗಿ ಆಯಾ ಗ್ರಾಮದ ಜನಗಳಿಂದ 'ಬಿಟ್ಟಿ' (ಸಂ>ವಿಷ್ಟಿ) ಕೆಲಸವನ್ನು ಮಾಡಿಸುತ್ತಿದ್ದರು. ಬಿಟ್ಟಿಯು ಮೂರು ತೆರನಾದುದು (ಇದೇ ಶಾಸನಗಳಲ್ಲಿ ಬರುವ ಮೂವಿಟ್ಟಿ'). ೧) ಶೋಧನ ಕರ್ಮ - ಮಾರ್ಗಮಧ್ಯದ ರಸ್ತೆಯನ್ನು ಸರಿಪಡಿಸುವುದು; ಸೇತುವೆ, ನದಿ, ಬಾವಿ ಇತ್ಯಾದಿಗಳನ್ನು ಪರೀಕ್ಷಿಸುವುದು. ೨) ವಹನ ಕರ್ಮ - ಆಯುಧ, ಕವಚ, ಧಾನ್ಯ ಮುಂತಾದುವನ್ನು ಹೊರುವುದು. ೩) ಅಪನಯನ ಕರ್ಮ - ಪೆಟ್ಟುತಿಂದು ಕೆಳಕ್ಕೆ ಬಿದ್ದ ಸೈನಿಕರನ್ನು ಅವರ ಆಯುಧಗಳ ಸಮೇತ ಹೊರುವುದು.

ಇವುಗಳಲ್ಲಿ ಮೊದಲನೆಯ ಕರ್ಮವು ಸೇನೆ ಬರುವುದಕ್ಕಿಂತ ಮೊದಲೂ, ಎರಡನೆಯ ಕರ್ಮವು ಸೇನೆಯ ಜೊತೆಯಲ್ಲೂ, ಮೂರನೆಯ ಕರ್ಮವು ಯುದ್ಧರಂಗದಲ್ಲೂ ನಡೆಯಬೇಕಾದುವು. ಸೋತುಹೋದ ರಾಜ್ಯನ ಪ್ರಜೆಗಳಿಂದಲೂ ಬಲವಂತವಾಗಿ ಈ ಕೆಲಸಗಳನ್ನು ಮಾಡಿಸುತ್ತಿದ್ದರು.

ಜನರು ಈ ಕೆಲಸಗಳನ್ನು ಪ್ರತಿಫಲವಿಲ್ಲದೆ ಮಾಡಬೇಕಿದ್ದಿತು. ಬಿಟ್ಟಿಯು ಒಂದು ರೀತಿಯಲ್ಲಿ ಹಂಗಿನ ಕೆಲಸವೂ ಹೌದು. ಅನೇಕ ಅಗ್ರಹಾರಗಳಿಗೆ ಅನೇಕ ತೆರಿಗೆಗಳ ಜೊತೆಯಲ್ಲಿ "ವಿಷ್ಟಿ" ಯನ್ನೂ ತೆಗೆದು ಹಾಕಿರುವುದನ್ನು ನೋಡಿದರೆ. ಬಿಟ್ಟಿ ಎಂದರೆ ಜನರು ಬಹು ಭಯಪಡುತ್ತಿದ್ದರೆಂದು ಕಾಣುತ್ತದೆ. ತಾವು ಮಾಡುವ ಬಿಟ್ಟಿ ಕೆಲಸವು ರಾಜನಿಗೆ ತಿಳಿಯಬೇಕು, ಅವನಿಂದ ಮಾನ್ಯತೆ ಪಡೆಯಬೇಕೆಂಬ ಭಾವನೆ ಹಲವರಿಗೆ ಬಂದಿರಲೂ ಸಾಧ್ಯ. ಈಗಲೂ ಬಿಟ್ಟಿ ಕೆಲಸವೆಂಬ ಮಾತು ಚಾಲ್ತಿಯಲ್ಲಿರುವುದು ಗಮನಾರ್ಹ. ಕೆಲಸಕ್ಕೆ ಯಾವುದೇ ಪ್ರತಿಫಲ ಇಲ್ಲದಿರುವುದಕ್ಕೆ ಬಿಟ್ಟಿ ಕೆಲಸವೆಂದು ಕರೆಯುತ್ತಾರೆ.

**೬೦೬. ಮೃಗಯಾವಿನೋದದ ದೇಸಿಯ ಉಪಸಂಹಾರ**

'.........*ಬಲ್ಲೆನೆಂದು ಬಿನ್ನಪಂಗಯ್ವೆನಂತುಮಲ್ಲದೆ ಬಲ್ಮೆಗಂ ಬಸನಕ್ಕಂ ಸವಿಯಪ್ಪ ಕಿಱುವೇಂಟೆಯುಂ ಪೆರ್ವೇಂಟೆಯುಮಲ್ಲದುೞಿದ ಬೇಂಟೆಯಂ ಬೇಂಟೆಯೆನ್ನೆಂ* - (*ವಿಕ್ರಮಾರ್ಜುನವಿಜಯ ೫-೪೬ವ*)

ಇದರಿಂದ, ಅತಿಪ್ರಯತ್ನ ಶಕ್ತಿ ಸೂರತೆಗಳಿಗೆ ಸಾಧ್ಯಗಳಾದರೂ, ಅಧಾರ್ಮಿಕ ಗಳಾಗಿರುವ 'ದೀವದ ಬೇಂಟೆ', 'ಪಂದಿವೇಂಟೆ'ಗಳೆಂದರೆ ಬಲ್ಮೆಗೆ ಸಲ್ಲದುವುಗಳು

ಮಾತ್ರವಲ್ಲ ಬಸನ (ಮೃಗಯಾ ವ್ಯಸನ)ಕ್ಕೂ ಸವಿಯಲ್ಲದವುಗಳಂತೆ. ಹೀಗೆನ್ನಲಿಕ್ಕೇನು ಮಾತ್ರವಲ್ಲ ಧಾರ್ಮಿಕನಾದ 'ಪುರಾಣ'ಕಾರನು. ಆದರೆ, ಅಹಿಂಸಾತತ್ವವನ್ನು ಮಹಾವ್ರತವನ್ನಾಗಿ ಆಚರಿಸುವುದೆಂದರೆ ಜೈನರೊಳಗೂ ಸರ್ವಸಾಧ್ಯವಲ್ಲ. 'ಚತುರಂತ ಬಲಭಯಂಕರಣ' ನಾದ 'ಚತುರಂಗ' 'ಬಲಭಯಂಕರಣ'ನಾದ ನಾಡೋಜನೆಂದಿನಸಿದ ಪಂಪನು ಲೌಕಿಕವಾದ ಈ ಬೇಟೆಯೊಳಗಿನ ಅಧಾರ್ಮಿಕಾಂಶವನ್ನು ಅಲ್ಲಗಳೆದು, ತಕ್ಕಮಟ್ಟಿಗಾದರೂ ಸಮ್ಮತವಾದ ದೇಸಿಯನ್ನು ಮಾರ್ಗಗೊಳಿಸಿದ ಜಾಣ್ಮೆಯೇ ಈ ವಚನದಲ್ಲಿ ಸೂಸುತ್ತಿದೆ. ಕಾಳಿದಾಸನು ಇಡಿ ಮೃಗಯೆಯ 'ರಾಸಿಗೇ ಪೋಲಿ' ಹಾಕಿಹೊಗಳಿದರೆ, ಪಂಪನು ಜಳ್ಳುನೆಲ್ಲುಗಳನ್ನು ಗಾಳಿಗೊಡ್ಡಿ, ನೆಲ್ಲನ್ನು ಮಾತ್ರವೇ ಆರಿಸಿದನು. ಅದಕ್ಕಾಗಿಯೇ ಇಷ್ಟೊಂದು ವಿಸ್ತರಿಸಬೇಕಾಗಿ ಬಂದುದು ಎಂಬುದನ್ನವ ಗಾಗಹಿಸಿಕೊಳ್ಳಬೇಕು. ಹಾಗೆ ಬಿನ್ನಪಂಗೆಯ್ದ ಬೇಂಟೆಯಾತಂಗೆ ಮೃಗವ್ಯಾಯಾಮ ಕಾರ್ತಿಕೇಯಂ ಮೆಚ್ಚುಗೊಟ್ಟು ತೊವಲನಿಕ್ಕೆಂದು ಮುಂದೆ ಪೇೞ್ದಟ್ಟಿ'ದನು ಹಿಂದೆ ೪೩ನೆಯ ವಚನದಲ್ಲಿ ತೋರಿದ ಬೇಡನ ಬಾಯಿಂದ ಹೊರಡುವ 'ಕುಮಾರಸ್ವಾಮಿ' ಎಂಬುದೂ, ಈ 'ಮೃಗವ್ಯಾಯಾಮಕಾರ್ತಿಕೇಯ' ಎಂಬುದೂ, ಅರಿಕೇಸರಿಯ ಎರಡು ಬಿರುದುಗಳಾಗಿರಬೇಕೆಂದು ವಾಚಕರಿಗೆ ವಿದತವಾಗಿರಬಹುದು. ಆದರೆ ಈ ಬಿರುದನ್ನು ಬೇರಾವ ಕಡೆಯಲ್ಲಿಯೂ ಉಪಯೋಗಿಸದೆ ಈ ಬೇಟೆಯೆಡೆಯಲ್ಲಿ ಮಾತ್ರವೇ ಬೆರಸಿದ್ದಾನೆ. ಈ 'ಕಾರ್ತಿಕೇಯ'ನೆಂದರೆ ನಮ್ಮ ಸುಬ್ರಹ್ಮಣ್ಯಕ್ಷೇತ್ರದಲ್ಲಿ, ಅಥವಾ ಪಂಪನೆನ್ನುವ 'ಕಂದಮಹೀಧರ'ದಲ್ಲಿ ನೆಲಸಿದ ಕುಮಾರಸ್ವಾಮಿ. ಮುಂದೆ ಬೆಳ್ಳಡಿಯನಾಗಿ ಬೇಟೆಗೈದಿದ ಶಿವನ 'ಕಿರಾತದೂತ'ನಾಗಿ ಈ ಗುಹನೇ ವಿಕ್ರಮಾರ್ಜುನ ನಲ್ಲಿಗೈದಿದುದೆಂಬುದನ್ನೂ ಭಾವಿಸಿಕೊಳ್ಳಬೇಕು. ಹಾಗೆ ಬೆಳ್ಳಡಿಯನ ಭಕ್ತರಾದ ಬೆಳ್ಳ (ಬೇಂಟೆಗ)ರು. ಆ ಕಾರ್ತಿಕೇಯನನ್ನೇ ಬೆಂಟೆದೆವ್ವವನ್ನಾಗಿ ನಂಬುವುದು ಸಕಾರಣವಾದ ದೇಸಿ ಎಂಬುದನ್ನು ಊಹಿಸಿಕೊಳ್ಳಬಹುದು.

ಆಮೇಲೆ ವಿಕ್ರಮಾರ್ಜುನನು

*'........ನಾರಾಯಣನುಂ ತಾನುಮಂತಃಪುರ ಪರಿವಾರಂಬೆರಸು ಬೇಂಟೆಗೆ ಪೊಱಮಟ್ಟು ಪರಿಯು ತಾಣಕ್ಕೆ ವಂದು ಬೇಲಿಂಯು ಕೆಲದೊಳಲ್ಲದೆ ಪೆಱಗಣುಲಿಪಿಂಗಳಮುಳ್ಳೊಳಕ್ಕಂ....' (ವಿಕ್ರಮಾರ್ಜುನವಿಜಯ ನಿಘಂಟು, ಪು.೪೩೧)*

'ಒಳಗಿನ ಒಳಗು' ಎಂಬ ವ್ಯುತ್ಪತ್ತಿಗನುವಾಗಿ 'ಉಳ್ಳೊಳ'ವೆಂದರೆ, ವನದ 'ಅಂತರಾಂತರ ಪ್ರದೇಶ'ವೆಂಬ ಅರ್ಥವಿರಬಹುದು. ಅಂತಃಪುರಾಂಗನೆಯರೊಡಗೂಡಿ ಬಿಡಬೇಕಾದ ಬೀಡನ್ನು, ವನದ 'ಕೋಟ್ಮೆ'ಗ (ಕ್ರೂರ ಮೃಗ) ಗಳಿಗಾಸರೆಯಾದ ಆ 'ಉಳ್ಳೊಳ'ದ ಹತ್ತಿರದಲ್ಲಿ ನೆಲೆಗೊಳಿಸುವುದು ಅನುಚಿತ. ಅದಕ್ಕೆ 'ಗಂಟಾಗಿ' ಬೀಡನ್ನು ರಚಿಸಿದುದುರಿಂದ ಆ ಬೇಡನ ಪ್ರತ್ಯುತ್ಪನ್ನ ಮತಿತ್ವವು ಭಾಸವಾಗುತ್ತಿದೆ. ಆ ಮೇಲೆ ಅರಿಕೇಸರಿ ಮೃಗಯಾಚಾತರ್ಯವನ್ನು ಒಂದಿಷ್ಟು ನಿರೂಪಿಸುತ್ತಾನೆ. 'ಕಂಡಿಯ ಬಾಗಿಲೊಳುದಾತ್ತ ನಾರಾಯಣನುಂ ನಾರಾಯಣನುಮಿರ್ದ'ರಂತೆ ಮುಂದಿನ ಭಾಗವನ್ನೀಕ್ಷಿಸಿರಿ.

'.........ಪುಗಿಲ ಪುಲ್ಲೆಯ ಮೊದಲುರಮುಮಂ ಪೆಟಿಗಣ ಪುಲ್ಲೆಯ ನಡುವುಮನೆಯ್ದಱಿೊಳ್ ಮೂಱುಮಂ ಮೂಱಿೊಳೆರಡುಮನೆಡಱಿೊಳೊಂದುಮನೆಚ್ಚು ಬಿಲ್ಲ ಬಲ್ಮೆಯಂ ಮೞೆದು – (ವಿಕ್ರಮಾರ್ಜುನವಿಜಯ ೫–೪೭ವ)

ಮುಂದಣ ಮಿಗಮಂ ಕಟಿಪದೆ
ಸಂದಿಸಿ. ಬಟಿಗೊಳ್ವ ಮಿಗಮುಮಂ ಕಟಿಪದೆ ತಾ ।
ನೊಂದಳವಿದಪ್ಪುದೆಚ್ಚು ಬ
ಲಿಂದಮನಿಂ ಬಿಲ್ಲ ಬಲ್ಮೆಯಂ ಪೊಗಟಿಸಿದಂ ॥

(ವಿಕ್ರಮಾರ್ಜುನವಿಜಯ ೫–೪೮)

ಎಂದು ಬಣ್ಣಿಸುತ್ತಾನೆ. ಈ ಭಾಗದ ತಾತ್ಪರ್ಯವೇನೆಂದು ಸ್ಫುಟವಾಗುವುದಿಲ್ಲ. ಕಂಡಿಯ ಬಾಗಿಲಲ್ಲಿ ನಿಂತ ಪೂರ್ವೋಕ್ತರಾದ ಇಬ್ಬರೂ ಬೇಡೆಯಾಡಿದ್ದಿರಬೇಕೊ? ಆದರೆ ಕಡೆಗೆ 'ಬಲಿಂದಮ (ಕೃಷ್ಣ) ನಿಂ ಬಿಲ್ಲ ಬಲ್ಮೆಯಂ ಪೊಗಟಿಸಿದ' ನೆಂದುದರಿಂದ ಅರ್ಜುನ ನೊಬ್ಬನೇ ಆಡಿದುದೆಂದೇ ತೋರುತ್ತಿದೆ. ಹಿಂದಿನ ವಚನಭಾಗವನ್ನವಧರಿಸಿರಿ 'ಅಯ್ದುರೊಳಗೆ ಮೂರನ್ನೂ, ಮೂರರೊಳಗೆ ಎರಡನ್ನು, ಎರಡರೊಳಗೆ ಒಂದನ್ನು' ಎಸೆದುದರಿಂದ ಮತ್ತೂ ಮೃಗಗಳು ಉಳಿದುವಲ್ಲದೆ ಎಲ್ಲವೂ ಕಳೆದುಹೋಗದುದರಿಂದ 'ಬಿಲ್ಲ ಬಲ್ಮೆ' ಏನು? ಎಂದು ಸಂದೇಹವಾಗುವಂತೆ ತೋರುತ್ತಿದೆ. ನಮ್ಮೆಣಿಕೆಯಲ್ಲಿ ಈ ಭಾಗದ ತಾತ್ಪರ್ಯವು ಹೀಗಾಗಿರಬಹುದು.

ಉದಾತ್ತನಾರಾಯಣ ನಾರಾಯಣರಿಬ್ಬರೂ ಕಂಡಿಯಲ್ಲಿ ಧನುರ್ಧಾರಿಗಳಾಗಿ ನಿಂತರು. ಬೇಟೆಗರ ಸೋವಿಗೊಳಗಾದ ಮೃಗಗಳು ಓಡತೊಡಗಿದುವು. 'ಪುಗಿಲ ಪುಲ್ಲೆಯ ಮೊದಲುರ'ವನ್ನು ಉದಾತ್ತನಾರಾಯಣನೆಚ್ಚನು. 'ಪೆಟಿಗಣ ಪುಲ್ಲೆಯ ನಡು'ವನ್ನು ನಾರಾಯಣನಂಟಿಸಿದನು. ಮೊದಲು ಪೋಗುವ 'ಅಯ್ದಱಿೊಳ್ ಮೂಱುಮಂ' ವಿಕ್ರಮಾರ್ಜುನನವಗಡಿಸಿದನು. ಮತ್ತಿನ ಪಂಗಡದ 'ಮೂಱಿೊಳೆರಡ'ನ್ನು ಶ್ರೀಕೃಷ್ಣನುರುಳಿಸಿದನು. ಆ ಎರಡು ಮಿಗವಂಗಡಗಳೊಳಗೆ ಕ್ರಮವಾಗಿ ಮೊದಲಿನದ ರೊಳಗೆ ಎರಡು, ಮತ್ತಿನದರೊಳಗೆ ಒಂದು ಮಿಗಗಳುಳಿದುವು. ಆ ಮೇಲೆ ಅರಿಕೇಸರಿ ಆ 'ಎರಡಱಿೊಳೊಂದುಮನೆಚ್ಚು ಬಿಲ್ ಬಲ್ಮೆಯಂ ಮೆಱೆದ' ಬಳಿಕ, ಕ್ರಮವಾಗಿ ಮುಂದಿನ ಪಂಗಡದಲ್ಲಿ ಒಂದು, ಹಿಂದಿನ ಪಂಗಡದಲ್ಲಿ ಒಂದು ಹೀಗೆ ಒಂದೊಂದು ಮೃಗಗಳುಳಿದುವು. ಆ ಇಪ್ಪಂಗಡದೊಳಗೆ ಅಳಿದುಳಿದ ಎರಡರೊಳಗಿನ 'ಮುಂದಿನ ಮಿಗಮಂ ಕಳಿಪದೆ, ಸಂದಿಸಿ ಬಟಿಗೊಳ್ವ ಮಿಗಮುಮಂ ಕಳಿಪದೆ ತಾನೊಂದಳವಿದಪ್ಪುದೆಚ್ಚು' ಕೆಡಹಿ 'ಬಲಿಂದನು'ನಿಂದ ಅರಿಕೇಸರಿ ತನ್ನ ಬಿಲ್ಲಬಲ್ಮೆಯಂ ಪೊಗಟಿಸಿದನು, ಎಂಬುದೇ ಈ ಭಾಗದ ತಾತ್ಪರ್ಯವಾಗಿರಬೇಕು. 'ಮುಂದಿನ ಮಿಗಮಂ ಬಟಿಗೊಳ್ವ ಮಿಗಮುಮಂ' ಎಂಬಲ್ಲಿ ತೋರುವ ಏಕ ವಚನವೂ ಈ ತಾತ್ಪರ್ಯವನ್ನೇ ಸೂಚಿಸುತ್ತದೆ.

ಇರಲಿ, ಪಂಪನು ಬೇಟೆಯ ಹಲವು ದೇಸಿಗಳನ್ನು ಮಾರ್ಗವಡೆಯಿಸಿ ತನ್ನ ಉದ್ದೇಶವನ್ನು ಹೇಗೆ ಗೊನೆಗೊಳಿಸಿದ್ದಾನೆಂಬುದನ್ನು ಸಾಧ್ಯವಾದಷ್ಟು ವಿವರಿಸಿದೆವು.

'ಉಣ್ಮೆಪೊಣ್ಮುವೀ ದೇಸಿಗಳ'ನ್ನು ಬೆರೆಸಿ 'ಮಾರ್ಗಮಂ ಪೊಸಯಿ'ಸದೆ 'ಉಂತೆ ನಾಡೊವಜನಾದನೋ ಪೇೞ್ ಕವಿತಾಗುಣಾರ್ಣವಂ?' ಎಂಬುದನ್ನು ಹೇಳಿ ಈ ದೀರ್ಘ ಪರಿಚ್ಛೇದವನ್ನು ಪರಿಚ್ಛೇದಿಸುತ್ತೇವೆ ಎಂದು ಮುಳಿಯ ಹೇಳಿದ್ದಾರೆ.

ಮೃಗಯಾವಿನೋದದ ವಿವರಗಳನ್ನು ಮುಳಿಯ ಈ ರೀತಿ ಮಂಡಿಸಿದ್ದಾರೆ. ಮೃಗಯಾ ವಿನೋದವೆನ್ನುವುದು ಹೆಸರು ಸೂಚಿಸುವಂತೆ ವಿನೋದಕ್ಕಾಗಿರುವ ಬೇಟೆ. ಇದನ್ನು ವಿನೋದವೆಂದು, ವ್ಯಸನವೆಂದು ಎರಡು ಅರ್ಥಗಳಲ್ಲಿ ಬಳಸುತ್ತಾರೆ.

*ವಿವರಗಳಿಗೆ ನೋಡಿ: ಮುಳಿಯ ತಿಮ್ಮಯ್ಯ ೨೦೦೬ ನಾಡೋಜ ಪಂಪ ಪುಟ. ೨೬೯-೭೧*

## ೬೦೭. ಮೃದುಬಂಧ

ಪದಗಳ ಸರಳವಾದ ಜೋಡಣೆಯನ್ನು ಪಂಪನು ಮೃದುಬಂಧವೆಂದು ಕರೆದಿದ್ದಾನೆ. (ಪಂಪ ಭಾರತ ೧-೮)

"ಬಗೆ ಪೊಸತಪ್ಪುದಾಗಿ **ಮೃದು ಬಂಧದೊಳೊಂದುವುದು"** ಎಂಬುದು ಪಂಪನ ವಾಕ್ಯ. ಬಂಧವೆಂದರೆ ಜೋಡಣೆ. ಮೃದು ಎಂದರೆ ಸರಳ. ಸರಳವಾದ ಪದಗಳ ಜೋಡಣೆಯು ಮೃದು ಬಂಧವೆನಿಸಿಕೊಳ್ಳುತ್ತದೆ.

ನಾಗವರ್ಮನ ಕಾವ್ಯಾವಲೋಕನದ ಉದಾಹರಣೆ:

ಮೃದುಬಂಧಕ್ಕೆ
ಶರದದೊಳೊನಲ್ದು ಬಿಡುತುಂ
ಧರೇಂದ್ರಗಿರಿಕರಿಗಳುಡಿಯೆ ಪಾಯ್ವುದ್ವು ಕಾಯ್ದಿಂ
ಕರಟತಟಗಳಿತ ಮದಜಳ
ಪರಿಮಳಸಮುವಿದಳದಳಿಕುಳಂ ನಗಕುಳಮಂ
(ಕಾವ್ಯಾವಲೋಕನಂ ತೃತೀಯಾಧಿಕರಣಂ ಸೂತ್ರ ಸಂಖ್ಯೆ ೧೧೮-೫೦೨)

ಸ್ಫುಟಬಂಧಕ್ಕೆ
ಅಂಭೋನಿಧಿಗಂಭೀರಂ
ಶುಂಭದ್ಭುಜಗೇಂದ್ರ ಭೋಗನಿಭ ಭುಜಪರಿಘಂ
ಜಂಭಾರಿವೈಭವಂ ವಿ
ಶ್ವಂಭರೆಗಧಿನಾಥನಶ್ವಕಂಠಂ ಖಚರಂ
(ಕಾವ್ಯಾವಲೋಕನಂ ತೃತೀಯಾಧಿಕರಣಂ ಸೂತ್ರ ಸಂಖ್ಯೆ ೧೧೮-೫೦೩)

ಮಿಶ್ರಬಂಧಕ್ಕೆ
ಹಸ್ತಾವಚಯದಿನುರು ಪು
ಷ್ಪಸ್ತಬಕಮನುನ್ಮದಭ್ರಮದ್ಭ್ರಮರ ಪರಿ
ತ್ರಸ್ತಮತಿ ಮೆಲ್ಲನೆಱಿಗಿ ಘ
ನಸ್ತನವತಿ ಕೊಯ್ದಳಾಮ್ರಶಾಖೆಯೊಳೊರ್ವಳ್
(ಕಾವ್ಯಾವಲೋಕನಂ ತೃತೀಯಾಧಿಕರಣಂ ಸೂತ್ರ ಸಂಖ್ಯೆ ೧೧೮-೫೦೪)

ಕೃತಿಯ ಬಂಧವೆಂದರೆ ಕೃತಿಯು ಭಾಷಿಕನೆಲೆ ಅಥವಾ ಕೃತಿಯ ರೀತಿ ಎಂಬ ಅರ್ಥ ಬರುತ್ತದೆ. ಮೃದು ಬಂಧದಲ್ಲಿ ಮೂರು ವಿಧಗಳಿವೆ. ಮೃದು ಬಂಧ ಇದರಲ್ಲಿ ಭಾಷೆ ಲಾಲಿತ್ಯ ಸೇರಿಕೊಂಡಿರುತ್ತದೆ. ಎರಡನೆಯ ಸ್ಫುಟಬಂಧದಲ್ಲಿ ಸ್ಫುಟತೆ (ಸ್ಪಷ್ಟತೆ) ಮತ್ತು ಕೊಂಚ ಗಾಂಭೀರ್ಯವನ್ನು ಕಾಣಬಹುದು. ಮೂರನೆಯದು ಮೊದಲ, ಎರಡರ ಮಿಶ್ರಬಂಧ. ಮುಳಿಯ ತಿಮ್ಮಪ್ಪಯ್ಯನವರು ಹೀಗೆ ವಿವರಿಸುತ್ತಾರೆ.

'ಮೃದುಬಂಧದೊಳೊಂದುವುದು'

ಹಿಂದೆ ದೃಷ್ಟಾಂತಿಸಿದ ಆದಿಪುರಾಣದ ಪದ್ಯದಲ್ಲಿಯೂ 'ಮೃದುಸಂದರ್ಭ'ವೆಂದು ಈ ಗುಣವನ್ನೆ ಸೂಚಿಸಿದುದು. ಕವಿ ನಿರೂಪಿಸಿದ 'ಮೃದುಬಂಧ, ಮೃದು ಸಂದರ್ಭ' ಎಂಬ ಇಕ್ಕಡೆಯ ಹೇಳಿಕೆಗಳಲ್ಲಿಯೂ ಪದಗತ 'ಮೃದು'ತ್ವವೇ ಸೂಚಿತವಾಗುವುದೆಂದು ತೋರುತ್ತಿದೆ. ಯಾಕೆಂದರೆ, ಅರ್ಥಗತ ಮೃದುತ್ವ ಶ್ಲೇಷಗಳೇ ಮೊದಲಾದ ಉಳಿದ ಅವಶ್ಯಕ ಗುಣಗಳೆಲ್ಲವೂ ಸೇರಿಯೇ, ಹಿಂದೆಂದ ಕಾಂತಿಯೂ ಮುಂದೆ ವಿವರಿಸಲಿರುವ ದೇಸಿ – ಸಮತೆಗಳೂ ಒದಗುತ್ತಿವೆ ಎಂದೆಣಿಸಲಿಕ್ಕಾಸ್ಪದವಿದೆ. ಅನುಕೂಲಾಕ್ಷರಗಳಿಂದ ನೆಯ್ದು, ಸಂದಿಲ್ಲದಂತೆ ತೋರುವ ನುಡಿಗಳ ಕಟ್ಟನ್ನೇ ಕವಿ 'ಮೃದುಬಂಧ' ವೆನ್ನುವುದು. ಅದಕ್ಕೇ 'ಶ್ಲೇಷ' ಅಥವಾ 'ನಿಬಿಡ' ಎಂಬ ಹೆಸರಾಗುವುದೆಂಬ ಆಲಂಕಾರಿಕ ಅಭಿಪ್ರಾಯವನ್ನು ಮೊದಲೇ ಸೂಚಿಸಿದ್ದೇವೆ. ಆದರೆ ದಂಡಿಯನ್ನನುಸರಿಸಿದ 'ಕವಿರಾಜಮಾರ್ಗಕಾರನು' 'ಸಮ' (ಸಮತೆ) ಎಂಬ ಗುಣದೊಳಗೆ 'ಮೃದುಬಂಧ', 'ಸ್ಫುಟಬಂಧ'ಗಳೆಂಬ ಎರಡು ಭೇದಗಳಿವೆ ಎನ್ನುತ್ತಾನೆ.

ಮೃದುತರ ವರ್ಣಾನುಗಮಾ
ಸ್ಪದ ವಿರಚನೆಯೊಳಗೆ ತೋರ್ಪುದದು ಮೃದುಬಂಧಂ
ವಿದಿತ ಸ್ಫುಟಕ್ಷರಾಧಿಕ
ಪದವಿರಚಿತಮಪ್ಪುದಕ್ಕುಮಾ ಸ್ಫುಟಬಂಧಂ (ಕವಿರಾಜಮಾರ್ಗ ೨–೫೭)

ಆದರೆ ಪಂಪನು 'ಪೊಕ್ಕಮಾರ್ಗದೊಳೆ ತಳ್ವುದು' ಎಂಬುದರಿಂದಲೇ ದಂಡಿ, ನೃಪತುಂಗನೆಂದರೆ ಆ 'ಸಮತೆ'ಯನ್ನು ಸೂಚಿಸುವುದರಿಂದ, ಈ 'ಮೃದು ಬಂಧ'ವೆಂಬ ಸ್ಪಷ್ಟೋಕ್ತಿಯಲ್ಲಿ ತೋರುವುದು ಅದೇ ಆಗಿರಲಾರದು. ಕಾಂತಿಪೋಷಕವಾದ 'ಶ್ಲೇಷ, ಸೌಕುಮಾರ್ಯ'ಗಳ ಕೂಟವನ್ನೇ ಈ ಹೆಸರಿನಿಂದ ಕರೆದಿದ್ದಾನೆ ಎನ್ನಬಹುದು ನೋಡಿರಿ.

'ನಲ್ಲರೊಳ್ಮೊಗಂ ನಗೆ ಮೊಗದೊಳ್ಪಳಂಚಲೆಯೆ'...

'ಎನೆ ನೆಗಟ್ದಿ ಕುಲದ ಚಲದೊಳ್ಪಿನ ಭೂಪನನೆನಗೆ ತೇರನೆಸಗೆಂದೊಡೆ'

ವಿಕ್ರಮಾರ್ಜುನ ವಿಜಯ

ಇಲ್ಲಿ ನಿಬಿಡತೆ, ಸುಕುಮಾರತೆಗಳಿಂದ ಕೂಡಿದ ಅದೊಂದು ಮೃದುಪದಗಳ ಬಂಧವನ್ನೇ ಕವಿ ಹೇಳಿದುದೆಂದು ಸಿದ್ಧವಾಗುತ್ತದೆ.

*ವಿವರಗಳಿಗೆ ನೋಡಿ: ಮುಳಿಯ ತಿಮ್ಮಪ್ಪಯ್ಯ ೨೦೦೬ ನಾಡೋಜಪಂಪ*

## ೬೦೮. ಮೌನ

*ಮೌನಂ ಸರ್ವಾರ್ಥಸಾಧನಂ ಎಂಬುದುಂಟೆಂದುಸಿರದಿರ್ಪುದುಂ..........*

*(ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ, ೩೯ ವಚನ)*

ಪಂಚತಂತ್ರದಲ್ಲಿ ಮೌನ ಸರ್ವತ್ರ ಸಾಧನವೆಂದು ಬರುತ್ತದೆ. ಮೌನವು ಅನೇಕವನ್ನು ಸಾಧಿಸುತ್ತವೆಯೆಂಬುದು ಇದರ ಭಾವ. ಅಂದರೆ ಕೆಲವಕ್ಕೆ ಪ್ರತಿಕ್ರಿಯೆಯನ್ನು ನೀಡುವುದು ಅನಗತ್ಯ. ಅನಪೇಕ್ಷಣೀಯ, ಮಾತು ಮತ್ತು ಮೌನದ ಬಗ್ಗೆ ನಮ್ಮಲ್ಲಿ ಹೇರಳ ಅಭಿಪ್ರಾಯಗಳಿವೆ. ಮಾತು ಮನೆ ಕೆಡಿಸಿತು, ತೂತು ಒಲೆ ಕೆಡಿಸಿತು, ಇಂಥವುಗಳಲ್ಲಿ ಒಂದು. ಅತಿಯಾದ ಮಾತು ಮನೆಯನ್ನು ಕೆಡಿಸುತ್ತದೆ. ಮೌನ ಸರ್ವಾರ್ಥ ಸಾಧನವಾಗಿದೆ. ಯಾರು ಮೌನವಾಗಿರುತ್ತಾರೋ ಅವರನ್ನು ಮುನಿಗಳೆಂದು ಕರೆಯುತ್ತಾರೆ. ಜೈನ ಧರ್ಮದಲ್ಲಿ ಮೌನವು ಒಂದು ವ್ರತವಾಗಿದೆಯೆಂಬುದನ್ನು ಇಲ್ಲಿ ನೆನಪಿಸಿಕೊಳ್ಳ ಬಹುದು. ಮೌನವ್ರತವು ಸಾಮಾಜಿಕ ಪ್ರತಿಭಟನೆಯ ಸಂಕೇತವಾಗಿದೆ.

## ೬೦೯. ಮಱವಾೞು

'ವಡ್ಡಾರಾಧನೆ' ಕೃತಿಯಲ್ಲಿ 'ಸುಕುಮಾರ ಸ್ವಾಮಿಯ ಕಥೆ'ಯಲ್ಲಿ ಅನೈತಿಕತೆಯ ವ್ಯವಹಾರ ನಡೆದುದಕ್ಕೆ, ಅನೈತಿಕ ವ್ಯವಹಾರದಲ್ಲಿ ತೊಡಗಿದ ಗಂಡಿಗೆ ಮತ್ತು ಹೆಣ್ಣಿಗೆ ಅರಸನು ಶಿಕ್ಷೆ ಕೊಟ್ಟ ವಿಚಾರವು ಬರುತ್ತದೆ. ಅದು ಹೀಗಿದೆ (ಸುಕುಮಾರ ಸ್ವಾಮಿಯ ಕತೆ ಪು. ೪೯): "..... ಮೋದಾಳಿ ತನ್ನ ತವರ್ಮನೆಯೊಳಿರ್ದಳ್ ಮತ್ತಮಾ ಪೊೞಲೊಳ್ ನಾಗದತ್ತನೆಂಬೊಂ ಪರದನಾತನ ಭಾರ್ಯೆ ಗಂಗೆಯೆಂಬೊಳಾ ಇರ್ವರ್ಗಂ ಮಗಂ ನಾಗಸೂರನೆಂಬೊರ್ನಾತಂಗೆಣ್ಬರ್ ಪೆಂಡಿರೊಳ್ ಸಂತೋಷಂ ಬಡೆಯದೆ ಮೋದಾಳಿಯೊಳ್ **ಮಱವಾೞುತ್ತಿರ್ಕುಂ** ಇಂತು ಕಾಲಂ ಸಲೆ ಮತ್ತೊಂದು ದಿವಸಂ ನಾಗಸೂರಂ ಮೋದಾಳಿಯನೊಡಗೊಂಡು ಚಂಪಾನಗರಕ್ಕೆ ವಂದೊಡೆ ತಳಾಱಂ ಕಂಡಾರ್ಯಿರ್ವರುಮಂ ಪಿಡಿದು ಕೊಂಡುಪೋಗಿ ಅರಸಂಗೆ ತೋಱಿದೊಡರಸನು ಮಿರ್ವರುಮನೆರಡು ಕಾಯ್ದ ಕರ್ಬೊನ್ನ ಪ್ರತಿಮೆಗಳನಪ್ಪವೇೞೆಂದು ತಳಾಱಂಗೆ ಬೆಸವೇೞ್ದೊಡವರಿರ್ವರುಮಂ ಕೊಲಲ್ ಕೊಂಡು ಪೋಪನ್....."

ಈ ಸಂದರ್ಭ ಆಶಯವು ಹೀಗಿದೆ:

ಗಂಡು ತನಗೆ ಮದುವೆಯಾಗಿದ್ದರೂ, ತನ್ನ ಹೆಂಡಿರಲ್ಲಿ ತೃಪ್ತಿ ಕಾಣದೆ ಬೇರೊಂದು ಹೆಣ್ಣನ್ನು ಕೂಡುವುದು. ಕವಿಯು ಈ ಸಂದರ್ಭವನ್ನು 'ಮಱವಾೞು' ಎಂದು ಕರೆಯುತ್ತಾನೆ.

ಕೃತಿಯಲ್ಲಿ ಸೂಚಿತವಾದಂತೆ 'ಮಱವಾೞು' ನಡೆಸುತ್ತಿದ್ದ ಅವರು ನಗರಕ್ಕೆ ಬಂದಾಗ 'ತಳಾಱ'ನು ಅವರನ್ನು ಬಂಧಿಸುತ್ತಾನೆ. ಇದು 'ಅನೈತಿಕತೆ'ಯನ್ನು ಕುರಿತ ಆ ಹೊತ್ತಿನ ಸಾಮಾಜಿಕ ನಿಲುವನ್ನು ಸೂಚಿಸುತ್ತಿರಬಹುದು. ಯಾಕೆಂದರೆ, ಈ ಕತೆಯಲ್ಲಿ ಅನಂತರ ರಾಜನು ಶಿಕ್ಷೆಯನ್ನು ಕೊಡುವ ವಿಷಯವು ಬಂದಿದ್ದು ಮೇಲಿನ ವಿಚಾರಕ್ಕೆ ಆಧಾರ ದೊರೆತ ಹಾಗಾಗಿದೆ.

ಇಡಿಯ ಕತೆಯನ್ನು ಗಮನಿಸಿದಲ್ಲಿ ಈ ವಿವಾಹೇತರ ಲೈಂಗಿಕ ಸಂಬಂಧಕ್ಕೆ ಕವಿಯು ಹೆಚ್ಚಿನ ಪ್ರಾಶಸ್ತ್ಯವನ್ನು ಕೊಟ್ಟಿಲ್ಲ. ಈ ಸಂದರ್ಭದಲ್ಲಿ ಕೃತಿಕಾರನು ಹೇಳುವ 'ಮಱವಾಯಿ ತಳಾಱನು ಬಂಧಿಸುವುದು' ಇತ್ಯಾದಿ ವಿಷಯಗಳು ತತ್ಕಾಲೀನ ಸಮಾಜ ಸ್ಥಿತಿಯನ್ನು ನೇರವಾಗಿ ಹೇಳುತ್ತವೆ. ಹೀಗಾಗಿ ಕತೆಯಲ್ಲಿ ಘಟನೆಯು ಸಮಕಾಲೀನ ಸಮಾಜದ ಪ್ರತಿಬಿಂಬವಾಗಿದ್ದು, ಕೃತಿಕಾರನ ಉದ್ದೇಶದಿಂದ ನೈತಿಕತೆಯನ್ನು ಅಭಿವ್ಯಕ್ತಿಸುವುದು ಸ್ಪಷ್ಟವಾಗುತ್ತದೆ. ಕಣ್ಮರೆ ಎಂದರೆ ಕಣ್ಣಿಂದ ಮರೆಯಾಗುವುದು, ಮಱವಾಲು ಎಂದರೆ ಮರೆಯಾಗಿ ಬಾಳುವುದು ಎಂದರ್ಥ.

ಈ ರೀತಿಯ ಆಶಯವುಳ್ಳ ಮತ್ತೊಂದು ಘಟನೆಯು 'ಗಜಕುಮಾರನ ಕತೆ'ಯಲ್ಲಿ ಬರುತ್ತದೆ. 'ಪಂಗುಳನೆಂಬ ಸುವರ್ಣಕಾರನ ಹೆಂಡತಿ ವಸುಂಧರಿಯೆಂಬವಳ ರೂಪಕ್ಕೆ ಮರುಳಾದ ಗಜಕುಮಾರನು ಆಕೆಯನ್ನು ತನ್ನ ಮನೆಯಲ್ಲಿರಿಸಿ ಬಾಳುತ್ತಿದ್ದನು' (ಅದೇ. ಪು. ೧೦೭). ಹೆಣ್ಣೊಬ್ಬಳು ಮದುವೆಯಾದ ತರುವಾಯ ಬೇರೊಬ್ಬನ ಮನೆಯಲ್ಲಿ ವಾಸವಾಗಿರುವುದನ್ನು ಮೇಲಿನ ಕತೆಯು ತಿಳಿಸುತ್ತದೆಯಾದರೂ, ಗಂಡು ಪರಹೆಣ್ಣಿಗೆ ಆಶಿಸಿದ್ದನ್ನು ಕತೆಯು ಸೂಚಿಸುತ್ತದೆ.

'ವಡ್ಡಾರಾಧನೆ'ಯ 'ಕಾರ್ತಿಕ ಋಷಿಯ ಕತೆ'ಯಲ್ಲಿ ಅಗ್ನಿರಾಜನು, '... ಕಿಱಿಯ ಮಗಳಪ್ಪ ಕೃತ್ತಿಕೆಯ ರೂಪುಂ ತೇಜಮುಂ ಗಾಡಿಯುಮಂ ಕಂಡಾಕೆಗಾಟಿಸಿ' ತನ್ನ ಸಾಮಂತರ ಎದುರು ಆ ವಿಷಯವನ್ನು ಹೇಳುವ ವಿಷಯವು ಉಕ್ತವಾಗಿದೆ (ಅದೇ ಪು. ೨೩೧). ತಂದೆಯೇ ಮಗಳ ರೂಪವನ್ನು ಕಂಡು ಮರುಳಾಗುವ ಈ ವಿಷಯವು ಕತೆಯಲ್ಲಿ ನಿರಾಕರಣೆಯ ಧ್ವನಿಯಲ್ಲಿ ಪ್ರತಿಪಾದಿತವಾಗಿದೆ. ಈ ರೀತಿಯ ನಿರಾಕರಣೆಯು ಇಲ್ಲಿ ವ್ಯಕ್ತವಾಗಿದೆ. ತಂದೆ – ಮಗಳ ಲೈಂಗಿಕ ಸಂಬಂಧದ ಅಪೇಕ್ಷೆಯು ಭಾರತೀಯ ಪರಂಪರೆಯಲ್ಲಿ ನಿಷೇಧಿತವಾಗಿರುವುದು ಇದಕ್ಕೆ ಕಾರಣ. ವಿವಾಹಾನಂತರ ರಾಣಿಯೊಬ್ಬಳು (ವೀರಶ್ರೀ) ವಿವಾಹೇತರ ಲೈಂಗಿಕ ಸಂಬಂಧವನ್ನು ಇರಿಸಿಕೊಂಡಳು ಎಂಬ ತಪ್ಪು ಕಲ್ಪನೆಯಿಂದ ರಾಜನು ಆಕೆಯನ್ನು ಈಟಿಯಿಂದ ಇರಿದು ಕೊಲ್ಲುತ್ತಾನೆ (ಅದೇ ಪು. ೨೩೪).

ಪಂಪನ 'ವಿಕ್ರಮಾರ್ಜುನ ವಿಜಯ'ದಲ್ಲಿ ಪರಾಶರ ಮತ್ತು ಮತ್ಸ್ಯಗಂಧಿಯರ ವಿವಾಹ ಪೂರ್ವ ಲೈಂಗಿಕ ಸಂಬಂಧದ ಉಲ್ಲೇಖವಿದ್ದು, ಪರಾಶರನು ಮತ್ಸ್ಯಗಂಧಿಗೆ 'ಪುನಃ ಕನ್ಯಾಭಾವಮಂ ದಯೆಗೆಯ್ದು' ಹೋದ ವಿಚಾರವು ಬರುತ್ತದೆ. (ಅನಂತರಂಗಾಚಾರ್. ಎನ್. (ಅನು) ೧೯೭೭ ೧–೬೫ವ) ಇಲ್ಲಿ ಪ್ರಯೋಗವಾಗಿರುವ 'ಕನ್ಯಾಭಾವ' ಎನ್ನುವುದು ಮೈನೆರೆಯುವುದಕ್ಕಿಂತ ಮೊದಲಿನ ಸ್ಥಿತಿ ಎಂದು ಭಾವಿಸಬಹುದು. 'ವ್ಯಾಸ ಭಾರತ'ದಲ್ಲಿಯೂ ಈ ಕಲ್ಪನೆಯಿದೆ. ಹಾಗೆಯೇ, 'ಪಂಪ ಭಾರತ'ದಲ್ಲಿ ಬರುವ ಶರದ್ವತ ಮತ್ತು ಜಲಚರೆಯರ ಲೈಂಗಿಕ ಸಂಬಂಧ (ಅದೇ ೨–೩೩) ಅರ್ಜುನ ಮತ್ತು ಮದನಲತೆಯರ ಸಂಬಂಧ (ಅದೇ ೪–೧೫ವ) 'ಪಂಪ ಭಾರತ'ದಲ್ಲಿ ತೀರಾ ವಿಶಿಷ್ಟವಾದ ಸಂದರ್ಭಗಳೇನೂ ಅಲ್ಲ. ಈ ಸಂದರ್ಭಗಳೆಲ್ಲವೂ ವ್ಯಾಸಭಾರತದಲ್ಲಿ ಉಕ್ತವಾಗಿರುವಂತೆಯೇ ಇವೆ.

ಕ್ರಿ.ಶ.೯೧೬ರ ಪರ್ಷಿಯಾ ದೇಶದ ಸುಲೇಮಾನ್ ಎಂಬ ಪ್ರವಾಸಿಗ ಹೀಗೆ ಹೇಳುತ್ತಾನೆ. 'ವ್ಯಭಿಚಾರ ಮಾಡಿದವರನ್ನು ಮರಣದಂಡನೆಗೆ ಗುರಿ ಮಾಡುತ್ತಾರೆ. ಈ ಶಿಕ್ಷೆ ಇಂಡಿಯಾ ದೇಶದಲ್ಲೆಲ್ಲಾ ಇದೆ. ಆದರೆ ಗಂಡಸು ಹೆಂಗಸಿನ ಮೇಲೆ ಬಲಾತ್ಕಾರ ಮಾಡಿದರೆ ಗಂಡಸಿಗೆ ಮಾತ್ರ ಮರಣದಂಡನೆ ಹೆಂಗಸಿನ ಒಪ್ಪಿಗೆಯಿಂದ ವ್ಯಭಿಚಾರ ಮಾಡಿದರೆ ಆಕೆಗೂ ಆಕೆಯ ಮಿಂಡನಿಗೂ ಮರಣದಂಡನೆ ವಿಧಿಸುತ್ತಾರೆ.

*ವಿವರಗಳಿಗೆ ನೋಡಿ: ನಾಗೇಗೌಡ ಎಚ್. ಎಲ್ (ಸಂ) ೧೯೬೪*

*ಪ್ರವಾಸಿ ಕಂಡ ಇಂಡಿಯಾ ಪುಟ. ೩೦೭*

# ಯ

**೬೧೦. ಯಂತ್ರದ ಕಲ್ಲುಗಳು**

ಸಾಮಾನ್ಯವಾಗಿ ಹಳ್ಳಿಗಳ ಮುಂದೆ ಈ ಬಗೆಯ ಶಾಸನಗಳನ್ನು ಗಮನಿಸಬಹುದು. ಪೀಡಾ ಪರಿಹಾರಕ್ಕಾಗಿ ಯಂತ್ರವನ್ನು ಬರೆದು ನಿಲ್ಲಿಸಿರುತ್ತಾರೆ. ಇವುಗಳನ್ನು ಹಳ್ಳಿಯ ಜನ ಇಂದಿಗೂ ಪೂಜಿಸುವುದನ್ನು ಗಮನಿಸಬಹುದಾಗಿದೆ. ಈ ರೀತಿ ಪೂಜಿಸುವುದರಿಂದ ತಮ್ಮ ದನಕರುಗಳಿಗೆ ಅಥವಾ ತಮಗೆ ಒದಗಿರುವ ಪೀಡೆಯು ಪರಿಹಾರವಾಗುತ್ತದೆಂದು ಅವರ ನಂಬಿಕೆ ಈ ಬಗೆಯ ಆರಾಧನೆಗೆ ಒಳಗೊಂಡವುವೆಲ್ಲಾ ಯಂತ್ರಗಳೆಂದು ಹೇಳಬರುವುದಿಲ್ಲ. ಕೆಲವೊಮ್ಮೆ ವಿಗ್ರಹಗಳೂ, ಇತರೆ ಶಾಸನಗಳೂ ಆರಾಧನೆಗೆ ಪಾತ್ರವಾಗಿರಬಹುದು. ಇವು ಕಾಲಕ್ರಮೇಣ ತಮ್ಮ ಮೂಲ ಸ್ವರೂಪವನ್ನು ಕಳೆದುಕೊಂಡು ಜನರ ದೃಷ್ಟಿಯಲ್ಲಿ ಮತ್ತೊಂದು ರೀತಿಯಿಂದ ಪರಿಗಣಿಸಲ್ಪಡುತ್ತವೆ. 'ಗುಲ್ಬರ್ಗ ಜಿಲ್ಲೆಯ ಬಂಕೂರಿನ ವರ್ಧಮಾನ ತೀರ್ಥಂಕರನ ವಿಗ್ರಹವು ಈಗ ಬತ್ತಲೆ ಗೌರಮ್ಮ ಆಗಿದೆ. ಮಕ್ಕಳಾಗದ ಹೆಂಗಸರು ಅದನ್ನು ಪೂಜಿಸುತ್ತಾರೆ. ಹಿಂದೆ ಮಹಾವೀರ ತೀರ್ಥಂಕರನ ಪೀಠ ಹೊತ್ತಿದ್ದ ಸಿಂಹಗಳ ಶಿಲ್ಪವಿರುವ ಪೀಠವು ಈಗ ಅಣಕಿಸುವ ಕಲ್ಲು ಆಗಿದೆ. ಬಾಯಿಹುಣ್ಣಾಗಿರುವ ಹುಡುಗರು ಹೋಗಿ ಅದರ ಮುಂದೆ ನಿಂತು ಅಣಕಿಸಿದರೆ ಹುಣ್ಣು ವಾಸಿಯಾಗುತ್ತದೆ. ಮತ್ತೊಂದು ಜೈನ ವಿಗ್ರಹಗಳಿರುವ ಕಲ್ಲಿದೆ. ನರ ಉಳುಕಿದರೆ ಹೋಗಿ ಅದಕ್ಕೆ ತಿಕ್ಕಿದರೆ ಸಾಕು ಉಳುಕು ವಾಸಿಯಾಗುತ್ತದೆ ಇತ್ಯಾದಿ". ಎಂಬುದಾಗಿ ಡಾ॥ ಚಿದಾನಂದಮೂರ್ತಿಯವರು ತಿಳಿಸುತ್ತಾರೆ. ಆರ್. ಶೇಷಶಾಸ್ತ್ರಿಯವರು ಯಂತ್ರದ ಕಲ್ಲುಗಳ ಕುರಿತು ಮೇಲಿನಂತೆ ಹೇಳಿದ್ದಾರೆ. ಯಂತ್ರದ ಕಲ್ಲುಗಳು ಮೇಲೆ ಉಲ್ಲೇಖಿಸಿರುವಂತೆ ತಂತ್ರದ, ಪೂಜೆಯ, ಅಂಶಗಳನ್ನು ಸೂಚಿಸುತ್ತವೆಯೆಂದು ಅವರು ಹೇಳುತ್ತಾರೆ.

*ವಿವರಗಳಿಗೆ ನೋಡಿ: ಆರ್. ಶೇಷಶಾಸ್ತ್ರಿ ೨೦೦೫ ಶಾಸನ ಪರಿಚಯ ಪುಟ. ೪೩*

೬೧೧. ಯಕ್ಷಿಯರು

*ಪೊನ್ನ ಬಣ್ಣಕ್ಕೆಣೆಯೆನೆಗರುಡಂ ವಾಹ ಮಾಗಿರ್ಪ ಚಕ್ರೇ*
*ಶ್ವರಿ ಭಾಸ್ವದ್ಧರ್ಮ ಚಕ್ರಾಕ್ರಮಿಗಳನಲೆ ದಾಟಿಕ್ಕೆ ವಿಕ್ರಾಂತದಿಂದಂ*
(ಆದಿಪುರಾಣ ೧-೭)

ಪಂಪನ 'ಆದಿಪುರಾಣ'ದಲ್ಲಿ ವೃಷಭ ತೀರ್ಥಂಕರರ ಯಕ್ಷಿಯಾದ ಚಕ್ರೇಶ್ವರಿಯ ಪ್ರಸ್ತಾವ ಬರುತ್ತದೆ. ಈಕೆಗೆ ಹನ್ನೆರಡು ತೋಳು, ಎರಡರಲ್ಲಿ ಕ್ರಮವಾಗಿ ವರದ ಮತ್ತು ಪದ್ಮ, ಮತ್ತೆರಡರಲ್ಲಿ ವಜ್ರ, ಉಳಿದ ಎಂಟರಲ್ಲಿ ಚಕ್ರಗಳು. ಈಕೆಗೆ ತೋಳು ಹದಿನಾರು ಎಂಬ ಕಲ್ಪನೆಯೂ ಉಂಟು. ಆಗ ಚಕ್ರಗಳ ಸಂಖ್ಯೆ ಹನ್ನೆರಡು ಆಗುವುದು. ಪಂಪನು ಈಕೆಯನ್ನು ಗರುಡವಾಹನೆಯೆಂದೂ, ಚಕ್ರೇಶ್ವರಿಯೆಂದೂ ವರ್ಣಿಸುತ್ತಾನೆ. (೧-೭)

ಜೈನಮತೀಯ ಕವಿಗಳು ಸ್ತ್ರೀ ದೇವತೆಯರನ್ನು ಉಲ್ಲೇಖಿಸುವಾಗ ಜೈನ ಮತಕ್ಕೆ ಅನುಸಾರವಾಗಿ ಗುರುತಿಸಿ ಹೇಳಿದ್ದಾರೆ. ಈ ಉಲ್ಲೇಖಗಳು ಸಾಂಪ್ರದಾಯಿಕ ಸಂದರ್ಭ ಗಳಲ್ಲಿ ಕಾಣಿಸಿಕೊಳ್ಳುತ್ತವೆ.

ಕೃತಿಯನ್ನು ಪ್ರಾರಂಭಿಸುವಾಗ ಯಾವುದಾದರೂ ದೇವತೆಯನ್ನು ಸ್ತುತಿಸಿ ಪ್ರಾರಂಭ ಮಾಡುವ ಕ್ರಮವು ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಇದೆ. ಇದರ ಮುಖ್ಯ ವಿನ್ಯಾಸವನ್ನು ಪಂಪನ 'ಆದಿಪುರಾಣ' ಮತ್ತು 'ವಿಕ್ರಮಾರ್ಜುನ ವಿಜಯ' ಕೃತಿಗಳ ನಿದರ್ಶನಗಳಿಂದ ಕೊಡಬಹುದು:

'ಯಕ್ಷಿ' ಎನ್ನುವುದಕ್ಕೆ ತೀರ್ಥಂಕರರ ತಪೋರಕ್ಷಣೆ ಮಾಡುತ್ತ ಸೇವೆ ಸಲ್ಲಿಸುವ ಭಕ್ತ, ಶಾಸನ ದೇವತೆ, ಈಕೆಯ ಪತಿ 'ಯಕ್ಷ' ಎಂದು 'ಜೈನ ಪರಿಭಾಷಾ ರತ್ನಕೋಶ' ದಲ್ಲಿ ಅರ್ಥ ಕೊಟ್ಟಿದ್ದಾರೆ. (ಶಾಮರಾಯ. ತ.ಸು. ಮತ್ತು ನಾಗರಾಜಯ್ಯ. ಪ.೧೯೮೧. ಪು.೨೧೨) ಇಪ್ಪತ್ತನಾಲ್ಕು ಜನ ತೀರ್ಥಂಕರರಿಗೆ ಇಪ್ಪತ್ತನಾಲ್ಕು ಯಕ್ಷರಿರುತ್ತಾರೆ. ಈ ಇಪ್ಪತ್ತನಾಲ್ಕು ಯಕ್ಷರಿಗೆ ಇಪ್ಪತ್ತನಾಲ್ಕು ಯಕ್ಷಿಣಿಯರಿರುತ್ತಾರೆ. ಇವರಿಗೆ ಬೇರೆ ಬೇರೆ ಲಾಂಛನಗಳಿರುತ್ತದೆ. ಜೈನ ಧರ್ಮದ 'ಯಕ್ಷಿ'ಯನ್ನು ಪಂಪನು ತನ್ನ ಕಾವ್ಯದಲ್ಲಿಯೂ ಪ್ರಾರ್ಥನೆ ಮಾಡುತ್ತಾನೆ.

'ಯಕ್ಷಿ' ಎನ್ನುವುದು ತೀರ್ಥಂಕರರ ತಪೋ ರಕ್ಷಣೆ ಮಾಡುತ್ತ ಸೇವೆ ಸಲ್ಲಿಸುವ ಭಕ್ತೆ ಶಾಸನ ದೇವತೆ. ಈಕೆಯ ಪತಿ 'ಯಕ್ಷ' ಎಂದು ಜೈನ ಪರಿಭಾಷಾ ರತ್ನಕೋಶದಲ್ಲಿ ಅರ್ಥಕೊಟ್ಟಿದ್ದಾರೆ. (ತ.ಸು.ಶಾಮರಾಯ ಮತ್ತು ಹಂ.ಪ.ನಾ. ೧೯೮೧ ಪುಟ.೨೧೨) ಇಪ್ಪತ್ತನಾಲ್ಕು ಜನ ತೀರ್ಥಂಕರರಿಗೆ ಇಪ್ಪತ್ತನಾಲ್ಕು ಯಕ್ಷರಿರುತ್ತಾರೆ. ಈ ಇಪ್ಪತ್ತನಾಲ್ಕು ಯಕ್ಷರಿಗೆ ಇಪ್ಪತ್ತನಾಲ್ಕು ಯಕ್ಷಿಣಿಯರಿರುತ್ತಾರೆ. ಇವರಿಗೆ ಬೇರೆ ಬೇರೆ ಲಾಂಛನವಿರುತ್ತದೆ.

ಮೌರ್ಯರ ಕಾಲದಲ್ಲಿ ಯಕ್ಷಿಣಿಯರ ಆರಾಧನೆಯು ಪ್ರಚಲಿತವಾಯಿತು. ಈ ಸಂದರ್ಭ ದಕ್ಷಿಣ ಭಾರತದಲ್ಲಿ ಹೆಣ್ಣಿನ ಫಲವತ್ತತೆಯನ್ನು ಕುರಿತ ಯಕ್ಷಿಣಿಯರ ಆರಾಧನೆಯು ಹೆಚ್ಚಿತು. ಸುಮಾರು ಇದೇ ಕಾಲಕ್ಕೆ ಲಕ್ಷ್ಮೀ ಪೂಜೆ, ಶಕ್ತಿಪೂಜೆಯು ಬಳಕೆಯಲ್ಲಿ ಬಂದಿತು. ಸುಂಗ ಕುಶಾಣರ ಕಾಲದಲ್ಲಿ ಗಜಲಕ್ಷ್ಮಿಯ ಆರಾಧನೆಯು ರೂಪುಗೊಂಡಿತು.

ಇವರ ಕಾಲದಲ್ಲಿ ಉಮೆ ಶ್ರೀ ಲಕ್ಷ್ಮಿ, ಸರಸ್ವತಿಯರು ಮುಖ್ಯ ದೇವತೆಯರಾಗಿದ್ದರು. ಗುಪ್ತರ ಕಾಲದಲ್ಲಿ ಮಾತೃ ದೇವತೆಯರ ಪೂಜೆಯೂ ಹೆಚ್ಚಿದ್ದು ಸಪ್ತ ಮಾತೃಕೆಯರ ಆರಾಧನೆಯು ಹೆಚ್ಚಿತು. ಶಕ್ತಿಯ ಕುರಿತ ನಂಬಿಕೆಯು ಈ ಕಾಲದಲ್ಲಿ ಹೆಚ್ಚಾಗತೊಡಗಿದ್ದು ಹರ – ಗೌರಿಯರ ಕಲ್ಪನೆಯು ಬಂದಿತು. ಗುಪ್ತರ ಕಾಲಕ್ಕೆ (ಕ್ರಿ.ಶ. ೪ನೆಯ ಶತಮಾನ) ದುರ್ಗೆಯ ಪೂಜೆಯು ಭಾರತೀಯ ಪರಂಪರೆಯಲ್ಲಿ ಸ್ಪಷ್ಟವಾಗಿ ಒಡಮೂಡಿರುವುದನ್ನು ಕಾಣಬಹುದಾಗಿದೆ. ಮಾತೃದೇವತೆಯ ಪೂಜೆಯು ಈ ವೇಳೆಯ ತಾಂತ್ರಿಕರಲ್ಲಿ ವಿಶಿಷ್ಟವಾದ ರೂಪವನ್ನು ತಳೆಯಿತು. ಕಾಳಿ, ಕಾಮಾಕ್ಷಿ, ಮಹಾದುರ್ಗೆ, ಮತಂಗಿ, ಭುವನೇಶ್ವರಿ, ಭೈರವಿ, ಧೂಮಾವತಿ, ಏಕಜಾತ, ತಾರಾ ಭಗವತಿ ಮುಂತಾದ ಹೆಸರುಗಳನ್ನು ತಾಂತ್ರಿಕರು ತಂದರು. ಶಕ್ತಿ ಆರಾಧನೆಯಲ್ಲಿ ಸ್ತ್ರೀತ್ವದ ಶಕ್ತಿಗೆ ಪ್ರಾಧ್ಯಾನತೆಯಿದೆಯೆಂಬುದು ಗಮನಾರ್ಹ. ಹೆಣ್ಣಿನ ತಾಯ್ತನಕ್ಕೆ ಹೆಚ್ಚಿನ ಗೌರವವು ಸಲ್ಲುತ್ತದೆಯೆಂಬುದು ಕೂಡಾ ಗಮನಿಸಬೇಕಾದ ವಿಚಾರವಾಗಿದೆ.

*ವಿವರಗಳಿಗೆ ನೋಡಿ: ಪುಟ್ಟಸ್ವಾಮಿ ಡಿ. ೧೯೬೫ ಜೈನತತ್ತ್ವಸಾರ ಸಂಗ್ರಹ ಪುಟ. ೫೩*

*ಮಹದೇವ ಪ್ರಭಾಕರ ಪೂಜಾರ ೧೯೭೬ ಜೈನಧರ್ಮ ಪರಿಭಾಷೆ ಪುಟ. ೧೩೫*

*ಹಂ.ಪ. ನಾಗರಾಜಯ್ಯ ೧೯೮೨ ಶಾಂತಿಪುರಾಣ ಪುಟ. ೧೧೧–೧೧೨*

*O.P. Misra 1985 Mother Goddess in Central India P. 23-27*

**೬೧೨. ಯಜಮಾನ**

*"ಸಲಿಲ ತುಹಿನಕರ* ***ಯಜಮಾನ*** *ಮೂರ್ತಿಯಂ" (೪–೨೬ ವ)*

ಎಂದು ಪಂಪ ಭಾರತದಲ್ಲಿ ಬರುತ್ತದೆ.

ಯಾರು ಯಜ್ಞ ಮಾಡುತ್ತಾರೋ ಅವರನ್ನು ಯಜಮಾನನೆಂದು ಕರೆಯುತ್ತಾರೆ.

ಮಂತ್ರೋಚ್ಚಾರಕ್ಕೆ ಬಹಳ ಮಹತ್ವ ದೊರೆತಿತ್ತು. ಯಜಮಾನನ ಯಶಸ್ಸು ಯಜ್ಞಕಾಲದಲ್ಲಿ ಕರಾರುವಾಕ್ಕಾದ ಮಂತ್ರೋಚ್ಚಾರದ ಮಾಯಾ ಬಲವನ್ನೇ ಆಧಾರಗೊಂಡಿದೆಯೆಂದು ನಂಬಲಾಗಿತ್ತು. ವೈದಿಕ ಆರ್ಯರ ಕೆಲವು ಸಂಸ್ಕಾರ ಕ್ರಿಯೆಗಳು ಇಂಡೋ – ಯೂರೋಪಿಯನ್ ಜನರಿಗೆಲ್ಲ ಸಮಾನವಾದುದಾದರೂ ಕೆಲವು ಭಾರತದಲ್ಲೇ ರೂಪು ತಳೆದಂತಹವು.

ಅದು 'ಯಜಮಾನ' ಮತ್ತು ಅವನ ಆಳುವ ವರ್ಗಗಳ ನಡುವಣ ಸಂಬಂಧ. ಇದು ಕೇವಲ ಸಂಘರ್ಷವಾಗಿರಬೇಕೆಂದೇನೂ ಇಲ್ಲ. ಅವುಗಳ ನಡುವೆ ಬೇರೆ ಬೇರೆ ರೀತಿಯ ಸಂವಾದಗಳಿರುತ್ತವೆ. ಪ್ರಭುತ್ವ ಮತ್ತು ಅದು ಆಳುವ ಸಾಮಾನ್ಯ ವರ್ಗಗಳ ನಡುವೆ ಇರುವ ಸಂವಾದಗಳು ಹೀಗಿರುತ್ತವೆ.

ಪ್ರಭುತ್ವವನ್ನು ಅನುಕರಿಸುವ ವರ್ಗ, ಇದನ್ನು ವಿಶಾಲವಾದ ಅರ್ಥದಲ್ಲಿ ಎಂ.ಎನ್.ಶ್ರೀನಿವಾಸರು 'ಸಂಸ್ಕೃತೀಕರಣ' ಮತ್ತು 'ಪಾಶ್ಚಾತ್ಯೀಕರಣ' ಎಂದು ಗುರುತಿಸಿದರು.

ಆಳುವ ವರ್ಗವನ್ನು (ಪ್ರಭುತ್ವವನ್ನು) ಅನುಕರಿಸುವ ವರ್ಗ, ಇದನ್ನು ಪ್ರೋ.ಮಿ.ಕೆ.

ಬಾಬಾ ಅವರು ಅನುಕರಣಾತ್ಮಕ ನೆಲೆ ಎಂದು ಕರೆಯುತ್ತಾರೆ.

ಪ್ರತಿರೋಧಾತ್ಮಕ: ಇದು ಪ್ರಭುತ್ವವನ್ನು ಪ್ರತಿರೋಧಿಸುವ ಮೂಲಕ ತನ್ನ ಅನನ್ಯತೆಯನ್ನು ಉಳಿಸಿಕೊಳ್ಳುತ್ತದೆ ಅಥವಾ ಉಳಿಸಿಕೊಳ್ಳುವ ಪ್ರಯತ್ನವನ್ನು ಮಾಡುತ್ತವೆ. ಒಂದು ರೀತಿಯಲ್ಲಿ ಇಲ್ಲಿ ನಡೆಯುವ ಪ್ರತಿರೋಧವು ಸಶಸ್ತ್ರ ಅಥವಾ ನಿಶಸ್ತ್ರದ ಮೂಲಕವೇ ತನ್ನ ಸಾಂಸ್ಕೃತಿಕ, ರಾಜಕೀಯ ಪ್ರತಿರೋಧವನ್ನು ಒಡ್ಡುತ್ತವೆ.

ಇಡಿಯ ಪ್ರಭುತ್ವವನ್ನು ನಿರಾಕರಿಸುವುದರ ಮೂಲಕ ಯಜಮಾನಿಕೆಗೆ ಒಂದು ನಿರ್ಲಕ್ಷ್ಯ ತೋರಿಸುವುದು ಮತ್ತೊಂದು ಪ್ರಕ್ರಿಯೆ. ಈ ಸಂದರ್ಭದಲ್ಲಿ ಪ್ರಭುತ್ವದ ಯಾವುದೇ ನಡೆ-ನುಡಿಯನ್ನು ಪ್ರತಿಯಾಗಿ ಕಟ್ಟಿಕೊಂಡು ಆಳಿಸಿಕೊಳ್ಳುವ ವರ್ಗ ಇರುತ್ತದೆ ಎಂದು ಹೇಳಲಾಗುವುದಿಲ್ಲ. ಪರ್ಯಾಯ ಮಾರ್ಗೋಪಾಯವನ್ನು ರೈಲ್ವೇ ಹಳಿಯ ರೀತಿಯಲ್ಲಿ ಕಟ್ಟುವುದಿಲ್ಲ ಎಂಬುದನ್ನು ಅರಿಯಬೇಕು. ಆಳ್ವಿಕೆಯಿಲ್ಲದಿದ್ದರೆ ಆಳಿಸುವ ವರ್ಗ ಹೊಸ ಪರಿಭಾಷೆಯನ್ನು ಕಟ್ಟಿಕೊಳ್ಳುವುದಿಲ್ಲ

ಪ್ರಭುತ್ವವು ಮತ್ತೊಂದು ಕೆಲಸವನ್ನು ಮಾಡುತ್ತದೆ. ಆಳಿಸಿಕೊಳ್ಳುವ ವರ್ಗವನ್ನು ತನಗೆ ಬೇಕಾದ ರೀತಿಯಲ್ಲಿ ನಿರ್ವಚಿಸುವುದು ಮತ್ತು ಆಳಿಸಿಕೊಳ್ಳುವ ವರ್ಗದ ಮನಸ್ಸು ಮತ್ತು ದೇಹ ತನ್ನ ವ್ಯಾಖ್ಯಾನಕ್ಕೆ ಅನುಸಾರವಾಗಿ ನಿರೂಪಿಸುವುದು. ಒಬ್ಬ ವ್ಯಕ್ತಿ ಹೆಚ್ಚು ಹೆಚ್ಚು ಯಜಮಾನಿಕೆಯನ್ನು ತೋರಿಸಿಕೊಂಡಂತೆ, ಆಳಿಸಿಕೊಳ್ಳುವ ವರ್ಗದ ಬುದ್ಧಿಶಕ್ತಿಯು ಬೇರೆ ಬೇರೆ ರೂಪಾಂತರವನ್ನು ಕಂಡುಕೊಳ್ಳಬಹುದು. ಪ್ರಭುತ್ವವು ಈ ಕಾರಣಕ್ಕಾಗಿ ಒಂದು ಹೊಸ ಚರಿತ್ರೆಯನ್ನು ಕಟ್ಟಬಹುದು. ಮತ್ತು ವ್ಯಕ್ತಿಗೆ 'ಪ್ರಜ್ಞೆ'ಯ ಮೇಲೆ ಕಟುವಾದ ನಿಯಂತ್ರಣ ಹೇರಬಹುದು. ಈ ಕೆಲಸವು ಪ್ರಜ್ಞೆಯ ಮೇತೆ ತರುವ ಒತ್ತಡವೂ ಆಗಿರುತ್ತದೆ. ಪ್ರಭುತ್ವ ಪ್ರಜ್ಞೆಯ ಮೇಲೆ ಹಿಡಿತ ಸಾಧಿಸಿಕೊಂಡರೆ ಮತ್ತೆ ಆ ಪ್ರಜ್ಞೆಯಿಂದ ಹೊರಗಡೆ ಬರುವಂತಿಲ್ಲ. ಮಾನಸಿಕವಾಗಿ ಪ್ರಜ್ಞೆಯ ನಿಯಂತ್ರಣ ಮಾಡಿದಾಗ ವ್ಯಕ್ತಿ - ಸಮಾಜ ಒಂದು ಸಮತಲದ ರಚನಾ ಕ್ರಮದಲ್ಲಿ ರೂಪುಗೊಳ್ಳುತ್ತದೆ.

ಹೀಗೆ 'ಅಧಿಕಾರದ ವ್ಯಾಪ್ತಿ'ಯು ಬೇರೆ ಬೇರೆ ಮಾದರಿಗಳಲ್ಲಿ ಇರುತ್ತವೆ. ಆದರೆ ನಾವೀಗ 'ಅಧಿಕಾರ' ಎನ್ನುವುದನ್ನು 'ನೇಶನ್' ಎಂಬ ಅರ್ಥದಲ್ಲಿ ಬಳಸುತ್ತಿದ್ದೇವೆ. ಅಧಿಕಾರ ಸಾಮಾಜಿಕ ಪ್ರಕ್ರಿಯೆಯಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತದೆ. ಒಂದು ಸಂಸ್ಥೆಯಿದ್ದರೆ ಅದು ಆಳುತ್ತದೆ ಮತ್ತು ಗುಂಪಿನ ಪರವಾಗಿ ಅಧಿಕೃತ ವಕ್ತಾರರಂತೆ ವಹಿಸುತ್ತದೆ. ಯಜಮಾನ್ಯವೆನ್ನುವುದು ಸಾಮಾಜಿಕ ವ್ಯವಸ್ಥೆಯಲ್ಲಿ ಮುಖ್ಯ ಪಾತ್ರ ವಹಿಸುವಂತೆಯೇ ಅದರ ಜೊತೆಯಲ್ಲಿ ಅದು ತನ್ನದೇ ನಿಯಮ ಹೊಂದಿರುತ್ತದೆ. ಅಧಿಕಾರವನ್ನು ಯಾರು ಹಿಡಿಯುತ್ತಾರೋ ಅವರ ಚಟುವಟಿಕೆಯು ಒಂದು ವ್ಯವಸ್ಥೆಯನ್ನು ಸಿದ್ಧಪಡಿಸಿಕೊಳ್ಳಲು ಉಳಿದವರನ್ನು "ಅಧೀನ" ಎಂಬಂತೆ ನೋಡಿಕೊಳ್ಳುತ್ತಾರೆ. ಅಧಿಕಾರ ಹೊಂದಿದವರಿಗೆ ಕೆಲವು ವಿಶಿಷ್ಟ ಅಂಶಗಳ ಹಕ್ಕುಗಳು ಕೂಡಾ ಇರುತ್ತವೆ. ಅದಕ್ಕೆ ಸಂಬಂಧಿಸಿದಂತೆ ನಿಯಮಗಳು ರೂಪಿಸಲ್ಪಡುತ್ತವೆ. ಆಳುವ ವರ್ಗದ ಲಕ್ಷಣಗಳು ಆಯಾ ಸಮಾಜ ಮತ್ತು ಸಂಸ್ಕೃತಿಗೆ ಅನುಸಾರವಾಗಿ ಬೇರೆಯಾಗಬಹುದು. ಎಷ್ಟೋ

ಸಂದರ್ಭಗಳಲ್ಲಿ 'ಅಧಿಕಾರ' ಪಡೆದುಕೊಳ್ಳುವ ರೀತಿ ರಿವಾಜುಗಳು ಬೇರೆಯಾಗುತ್ತವೆ. ಅದೇ ರೀತಿಯಲ್ಲಿ ಜನಾಂಗದಿಂದ ಜನಾಂಗಕ್ಕೆ ಬೇರೆಯಾಗುತ್ತವೆ. ಆಳುವ ವರ್ಗ ಆಯಾ ಸಂದರ್ಭ ಮತ್ತು ಪ್ರದೇಶಗಳಲ್ಲಿ ತಮಗೆ ಬೇಕಾದ ರೀತಿಯಲ್ಲಿ ನಿಯಮ ರೂಪಿಸುತ್ತಾರೆ ಮತ್ತು ಅದಕ್ಕೆ ಬೇಕಾದ ಸ್ಥಾನ ನಿರ್ಣಯಗಳಾಗುತ್ತವೆ. ಉದಾ: ಬೇರೆ ಬೇರೆ ಜಾತಿಯಲ್ಲಿರುವ ಗುರಿಕಾರರು, ಪುರೋಹಿತರು ಇತ್ಯಾದಿ.

*ವಿವರಗಳಿಗೆ ನೋಡಿ: ಆರ್.ಎಸ್. ಶರ್ಮ ೨೦೦೭ ಪ್ರಾಚೀನ ಭಾರತ ಪುಟ. ೮೭*

*Ranajit guha Dominance without Hegemony*

*Sudipta Kaviraj 1997 (Ed) Politics in India*

**೬೧೩. ಯತಿ**

ಪಂಪ ಭಾರತದಲ್ಲಿ ದ್ರೌಪದಿಯು ಧರ್ಮರಾಯನಿಗೆ ಮತ್ತೊಮ್ಮೆ ಹೀಗೆ ಹೇಳುತ್ತಾಳೆ "**ಶಮ**ಮನೆ ಕೆಯ್ಕೊಳ್ವಡೆ ಬಿಲ್ಲುಮಂಬುಮಂ ಬಿಸುಟು ತಪಕೆ ನೀಂಬಗೆವೊಡೆ ವಿಕ್ರಮಮಂ ಪಗೆಯಂ ಕಿಡಿಸುವ ಶಮದಿಂ ಮುನಿಗಾಯ್ತು ಸಿದ್ಧಿ ಭೂಪತಿಗಾಯ್ತೇ" (೭-೫೧) ಈ ಮಾತು ಭಗವದ್ಗೀತೆಯ ಸಾರಸರ್ವಸ್ವ. "ಬಿಲ್ಲನ್ನೂ ಅಂಬನ್ನೂ ಬಿಸುಟು ಶಾಂತಿಯಿಂದ ತಪಸ್ಸು ಮಾಡಲು ನೀನೇನೋ ಸಿದ್ಧನಿರಬಹುದು; ಆದರೆ ಅದು ಯತಿಧರ್ಮ; ರಾಜನಾದವನಿಗೆ ಅದು ಸಿದ್ಧಿಸುವುದಿಲ್ಲ." - ಒಂದು ವೇಳೆ ತಪದಲ್ಲಿ ನಿರತನಾದರೂ ಕೂಡಾ ರಜೋಗುಣ ಪ್ರಧಾನನಾದ ಕ್ಷತ್ರಿಯ ಕೊನೆಯತನಕ ನಿಷ್ಕಾಮವಾಗಿ ತಪವೆಸಗಲಾರನೆಂದು ದ್ರೌಪದಿಯ ಅಭಿಪ್ರಾಯ. "ತಪ್ಪು ಮಾಡಿದವರನ್ನು ಶಿಕ್ಷಿಸಬೇಕಾದುದು ಪರಾಕ್ರಮಿಗಳ ಲಕ್ಷಣ. ನೀನಾದರೋ ಅಪರಾಧಿಗಳನ್ನೂ ಹಾಗೆ ಬಿಟ್ಟು ತಲೆಯ ಮೇಲೆ ಕೈಹೊತ್ತು ಕಾಡಿನಲ್ಲಿ ಕುಳಿತಿರುವೆ! ಇದು ನಿನಗೆ ಸರಿಯಾದುದೆ?" ಇವಿಷ್ಟೂ ದ್ರೌಪದಿಯ ವಾಕ್ಯಗಳು.

ಭೀಮನೆದ್ದು "ನುಡಿಯದೆ ಪೆಱತಂ ದ್ರೌಪದಿ ನುಡಿವಳ್ ತಕ್ಕುದನೆ ಕೇಳಿಮಿಂ ಕೇಳದಿರಿಂ -

ನೀವು ಕೇಳಿದರೆ ಕೇಳಿ, ಬಿಟ್ಟರೆ ಬಿಡಿ, ದ್ರೌಪದಿ ಬೇರೆ ಏನನ್ನೂ ಹೇಳಲಿಲ್ಲ, ಹೇಳಬೇಕಾದುದನ್ನೇ ಹೇಳಿದ್ದಾಳೆ. (ಪಂಪಭಾರತ ೭-೫೧)

**ಯತಿ**ಗಳೆಂದರೆ ಒಂದೆಡೆ ನಿಲ್ಲುವವರಲ್ಲ. ಸಂಚರಿಸುವ ಋಷಿಗಳು. ಯತಿಗಳು ಪರಿಕರಗಳು - ಬ್ರಹ್ಮಸೂತ್ರ, ತ್ರಿದಂಡ, ಚರ್ಮವಸ್ತು, ಶಿಕ್ಯ, ಬ್ರುಸಿ, ಕೌಪೀನ, ಕಟಿವೇಷ್ಟನ.

ಜೈನ ಯತಿಗಳ ಕುರಿತು 'ವಡ್ಡಾರಾಧನೆಯಲ್ಲಿ ಬರುವ ವಿವರಗಳು ಇಂತಿವೆ:

ಯತಿಗಳು ಸಂಚರಿಸುವಾಗ ಎಲ್ಲಿ 'ನೇಸರ್ಪಟ್ಟತ್ತಲ್ಲಿಯೆ' ನಿಲ್ಲುತ್ತಿದ್ದರು ಮತ್ತು ಮಳೆಗಾಲದ ನಾಲ್ಕು ತಿಂಗಳು ಸಂಚಾರ ಮಾಡದೇ ಇರುತ್ತಿದ್ದರು. ಇದನ್ನು ಚಾತುರ್ಮಾಸ ವೆಂದು ಕರೆಯುತ್ತಾರೆ. "ಅವರ ಉಗ್ರತಪಸ್ಸಿನ ಫಲವಾಗಿ ಅಮೋಷಧಿ. ಖೇಳೋಷಧಿ, ಜಪ್ಲೋಷಧಿ, ವಿಪ್ಲೋಷಧಿ, ಸವೋಷಧಿ ಮುಂತಾದ ಸಾಮರ್ಥ್ಯಗಳು ಅವರಿಗೆ

ಉಂಟಾಗುತ್ತಿದ್ದರೂ ಅವುಗಳನ್ನು ತಮ್ಮ ಮೇಲೆ ಪ್ರಯೋಗಿಸಿಕೊಳ್ಳದೇ ವ್ಯಾಧಿಗಳನ್ನು ಪರಿಹರಿಸಿಕೊಳ್ಳದೆ ಘೋರವೀರ ತಪಶ್ಚರ್ಯವನ್ನು ಆಚರಿಸುತ್ತಿದ್ದರು. ಈ ತಪಸ್ಸನ್ನು ಬಸದಿ ಗುಹೆ, ಬಹಿರುದ್ಯಾನವನ, ಬೆಟ್ಟದ ಒಂದು ಬಂಡೆ, ತೊರೆಯ ತಡೆ, ಪೊಲ. ಇತ್ಯಾದಿ ಸ್ಥಳಗಳಲ್ಲಿ ರಾತ್ರಿ ಪ್ರತಿಮೆ, ಸೂರ್ಯ ಪ್ರತಿಮೆ, ಕಾಯೋತ್ಸರ್ಗ ಭಂಗಿಯಲ್ಲಿ ನಿಂತು, ತಪವೆಸಗಿ ಸಾಧನೆ ಮಾಡುತ್ತಿದ್ದರು. ತಪದಲ್ಲಿಯೇ ಲೀನವಾಗಿರುವ ಈ ಯತಿ "ಗಿಡಿಗಿಡಿಜಂತ್ರ ಮಿಳಿಮಿಳಿ ನೇತ್ರ"ರಾಗಿ ಕಾಣುತ್ತಿದ್ದರು. ತಪದಲ್ಲಿ ತಲ್ಲೀನರಾಗಿರುವ ಯತಿಯನ್ನು "ಸ್ವಜನ ಪರಿಜನ ಬಂಧುವರ್ಗಮುಂ ಶ್ರಾವಕರ್ಕಳುಂ ಬಂದರ್ಚಿಸಿ" ನಮಸ್ಕರಿಸಿ ಹೋಗುತ್ತಿದ್ದರು.

ಶಮವೆನ್ನುವುದು ಯತಿಗಳ ಧರ್ಮ. ಅದು ರಾಜಧರ್ಮವಲ್ಲ. ದ್ರೌಪದಿಯ ಅಭಿಪ್ರಾಯದಲ್ಲಿ ಶಾಂತಿಯೆನ್ನುವುದು ಸನ್ಯಾಸಿಗಳಿಗೆ. ರಾಜನಾದವನ ಕೆಲಸವು ಬೇರೆ. ಕ್ಷತ್ರಿಯನದು ರಜೋಗುಣ. ಯುದ್ಧ ಕ್ಷಾತ್ರಧರ್ಮವೆಂದು ಅವಳ ಅಭಿಪ್ರಾಯ. ಅವಳ ಮಾತಿಗೆ ಭೀಮನ ಪ್ರತಿಕ್ರಿಯೆಯು ಗಮನಾರ್ಹ.

ಯತಿಗಳು ಧಾರಣಮಾಡುವ 'ದಂಡ'ಕ್ಕೆ ಅವರವರ ಪಂಥಕ್ಕನುಸರಿಸಿ ಇಂತಿಷ್ಟ ಕಣ್ಣು (>ಗಣ್ಣು) ಇರಬೇಕೆಂಬ ಬೇರೆ ಬೇರೆ ರೂಢಿಗಳಿವೆ. ಸುಭದ್ರಾಹರಣಕ್ಕಾಗಿ ಬಂದ ನರನು ತ್ರಿದಂಡೀ ಅವರ ಪ್ರಕಾರ ಸಂನ್ಯಾಸಿಯಾಗಿದ್ದನಂತೆ ಎಂದು ಶಂಬಾ ಹೇಳುತ್ತಾರೆ.

ಅವರ ಪ್ರಕಾರ ಯತಿಗಳೂ ಚಮತ್ಕಾರ ಸಿದ್ಧಿಗಳುಳ್ಳವರೆಂದು ಧ್ವನಿತಪಡಿಸುವ ಉಲ್ಲೇಖ ದೊರೆಯುತ್ತಿವೆ. ಮೌನವು ಮುನಿಯ ವೈಶಿಷ್ಟ್ಯವಾಗಿದ್ದರೆ, ಯಮ – ನಿಯಾಮಾದಿ ಸಾಧನವು ಯತಿಯ ವೈಶಿಷ್ಟ್ಯವಿರಬೇಕೆಂದು, 'ಯತಿ' (ಯಮ್–ಯತ್) ಎಂಬ ಈ ವರ್ಗದ ನಾಮಸಂಕೇತಗಳು ವೇದಕಾಲೀನ ವಿವಿಧ ವಿರಕ್ತಮರ್ಗೀ ಸಾಧಕವರ್ಗದ ಅಸ್ತಿತ್ವವನ್ನು ಬೆಳಕಿಗೆ ತರುತ್ತಿವೆ. ಅಗಸ್ತ್ಯ, ಕಶ್ಯಪಾದಿಗಳು ಋಷಿ ಹಾಗೂ ಮುನಿ ಇವೆರಡೂ ಪಂಥಗಳನ್ನು ಜೋಡಿಸುವ ಮಧ್ಯಸ್ಥರು. ಯತಿಗಳನ್ನು ಇಂದ್ರನು ಸಂಹರಿಸಿದ ಕಥೆ ಬ್ರಾಹ್ಮಣ ಗ್ರಂಥಗಳಲ್ಲಿ ಬರುತ್ತದೆ. ಆದರ್‍ರ್ಯ, ಇವರಲ್ಲಿ ಒಪ್ಪಂದವಾಗಿ 'ಯತಿ' ಸಂಪ್ರದಾಯದ ಕೆಲವೊಂದು ಜನ ಉಳಿದುದಾಗಿ 'ಯತಿ' ಸಂಪ್ರದಾಯದ ಕೆಲವೊಂದು ಜನ ಉಳಿದುದಾಗಿ ಸಾಂಪ್ರದಾಯಿಕ ಕಥೆಯಿದೆ. ಹಿಂದಿನ ಕಾಲದಲ್ಲಿ ಯಾಜಕ ಸಂಪ್ರದಾಯ ಮತ್ತು ಯತಿಸಂಪ್ರದಾಯಗಳಲ್ಲಿ ಆದ ಸಂಘರ್ಷ ತಪ್ಪಿಸುವ ಒಂದು ಪ್ರಯತ್ನವು, ಈ ಕಥೆಯ ಮೂಲಕ ಅರಿಕೆಗೆ ಬರುತ್ತದೆ. ಮುನಿಯು ಇಂದ್ರನ ಸಖನಾಗಿದ್ದ ಉಲ್ಲೇಖವು ಋಗ್ವೇದದಲ್ಲಿ ಬರುವುದು. ಆದರೆ, ಇಂದ್ರನು ಮುನಿಜನದ ತಪೋಭಂಗ ಮಾಡುವನೆಂಬ ಪುರಾಣಕಥೆ, ಇವುಗಳಿಂದ ಋಷಿ ಹಾಗೂ ಮುನಿ – ಯತಿ ಈ ಉಭಯ ಪಂಥಗಳಲ್ಲಿ ಇದ್ದ ಸ್ಪರ್ಧೆಯು ಬಯಲಿಗೆ ಬರುತ್ತಿದೆ: ಇಂದ್ರ–ವರುಣಾದಿ ಯಾಜಕ ಸಂಪ್ರದಾಯದ ದೈವತಗಳು ಹಿಂದೆ ಬೀಳುತ್ತವೆ. ಆ ಸ್ಥಳದಲ್ಲಿ ರುದ್ರ–ಶಿವ, ವಿಷ್ಣು–ನಾರಾಯಣ, ದೇವಿ : ಶಕ್ತಿ ಮೊದಲಾದ ದೈವತಗಳು

ಪ್ರಮುಖವಾಗುತ್ತವೆ. ಇವುಗಳಿಗೆ ವೇದದಲ್ಲಿ ಗೌಣ ಸ್ಥಾನವಿತ್ತು. ನಾರಾಯಣ ಹಾಗೂ ಶಕ್ತಿದೇವಿಯ ಸ್ಪಷ್ಟ ಉಲ್ಲೇಖಗಳು ಸಹ ಇಲ್ಲ. ರುದ್ರನಿಗೆ 'ಶಿವ'ನೆಂದು ಕರೆವ ವಾಡಿಕೆ ಲುಪ್ತವಿತ್ತು. ಈ ಘಟನೆಗಳಿಂದ ಮೇಲೆ ಸೂಚಿಸಿದಂತೆ, ಈ ದೈವತಗಳಲ್ಲಿ ಎರಡು ವಿಭಾಗಗಳು ಇದ್ದುದಾಗಿ ಮೇಲೆಯೆ ಕಾಣುವಂತಿದೆ. ಇಂದ್ರ ವರುಣಾದಿಗಳ ಗುಂಪು ಒಂದು; ಇವು ದ್ಯು (ಸೌರ) ಲೋಕದ ದೈವತಗಳು; ತೇಜೋರೂಪಿ. ರುದ್ರ ವಿಷ್ಣು–ಶಕ್ತಿ ಇವುಗಳ ಪಂಗಡ ಒಂದು. ಇವು ಅಪ: ರಸತತ್ತ್ವಾಧಿಷ್ಟಿತ ಪ್ರತಿಮೆಗಳು, ಎಂಬುದನ್ನು ಸಾಧಾರವಾಗಿ ಈ ಮೊದಲೆ ವಿವರಿಸಿದ್ದಾಗಿದೆ. ಈ ಸಂಶೋಧನೆಯನ್ನು ಮುಂದುವರಿಸಿದಾಗ ಋಗ್ವೇದದ ಅದಿತಿ–ಅಂಭೃಣಿ–ಸರಸ್ವತೀ ದೇವಿಯರ ಮೂಲವಾಗಿ, ಆಪ : ರಸ ತತ್ತ್ವಾಧಿಷ್ಠಿತ ಇಡೀ ದೇವತಾ ಮಂಡಲವೆ ಒಂದರೊಡನೊಂದು ಹೊಂದಿಕೊಂಡುದು ಹೊರಬರುತ್ತದೆ! ಭಾವನೆಗಳನ್ನು ನಿಯಂತ್ರಿಸಿ: ನಿರ್ಲಿಪ್ತ ಮನೋಧರ್ಮವನ್ನು ಕೈಗೊಳ್ಳುವುದು 'ದಮ' ವೃತ್ತಿಯೆಂದು ಕರೆಯುತ್ತಾರೆ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೪ ಪುಟ. ೩೫೪,*

*ಸಂಪುಟ. ೩ ಪುಟ. ೩೩೫, ೩೩೬*

*ಮುಳಿಯ ತಿಮ್ಮಪ್ಪಯ್ಯ ೧೯೮೮ ಶ್ರದ್ಧಾಂಜಲಿ ಪುಟ. ೯೯*

**೬೧೪. ಯುದ್ಧ ಧರ್ಮ**

*ಒದವಿದ ಭೀತಿಯಿಂದಪರದಿನತಬ್ಧಿಯ ನೋಡಿ ಪೊಕ್ಕೊಡಾ*
*ಗದು ಕೊಲಲೆಂದು ಮಾಣ್ದನದು ತಕ್ಕುದೆ ಲಿಂಗಮನಪ್ಪುಕೆಯ್ದು ಪಿಂ ।*
*ಗದೆ ನಿಲೆ ನೀರನೋಡಿ ಪುಗೆ ಪೆಣ್ಣುಡೆಯುಟ್ಟಿರೆ ಪುತ್ತನೇಜೆಕೊ*
*ಲ್ಲದ ತುಜೆಲಾಳ್ತನಕ್ಕೆ ಸಮನಾವನೊ ಸಾಹಭೀಮಭೂಪನೊಳ್ ॥*

*(ಸಾಹಸ ಭೀಮ ವಿಜಯ ೧–೨೨)*

ಯುದ್ಧಧರ್ಮ ಯಾವುದು ಎಂದು ರನ್ನನು "ಸಾಹಸ ಭೀಮ ವಿಜಯ'ದಲ್ಲಿ ಹೀಗೆ ನಿರೂಪಿಸಿದ್ದಾನೆ.

ಇದು ಭೀಮನ ಮೂಲಕ ರನ್ನ ಹೇಳಿಸುವ ಮಾತುಗಳು.

ಯುದ್ಧದ ಭೀತಿಯಿಂದ ಅಪರಾಧಿತನದಿಂದ. ಸಮುದ್ರವನ್ನು ಹೊಕ್ಕವವನ್ನು ಕೊಲ್ಲುವುದು ಉಚಿತವಲ್ಲ ದೇವರನ್ನು (ಶಿವಲಿಂಗ) ಅಪ್ಪಿಕೊಂಡವನನ್ನು. ನೀರಲ್ಲಿ ಹೊಕ್ಕವನನ್ನು; ಹೆಣ್ಣಿನ ಸೀರೆಯ ಸೆರಗಿನಲ್ಲಿ ಮುಖವನ್ನು ಒಡ್ಡಿ ನಿಂತವನನ್ನು: ಹುತ್ತವನ್ನು ಹತ್ತಿ ಏರಿನಿಂತವವನನ್ನು; ಕೊಲ್ಲುವುದು ಕ್ಷತ್ರಿಯ ಅಥವಾ ಯುದ್ಧಧರ್ಮವೆಲ್ಲವೆಂದು ಸೂಚಿತವಾಗಿದೆ. ಕುಮಾರವ್ಯಾಸನಲ್ಲಿಯೂ ಇದೇ ರೀತಿಯ ಮಾತುಗಳನ್ನು ಕಾಣಬಹುದು. ಯಾರನ್ನು ಯುದ್ಧದಲ್ಲಿ ಕೊಲ್ಲಬಹುದು, ಯಾರನ್ನು ಯುದ್ದದಲ್ಲಿ ಕೊಲ್ಲಬಾರದು ಎನ್ನುವುದನ್ನು ರನ್ನನು ಪರೋಕ್ಷವಾಗಿ ಹೇಳಿದ್ದಾನೆ. ಇದು ರಾಜನೀತಿ.

| | |
|---|---|
| ಹೇಡಿ | ಯುದ್ಧವೀರ. |
| ೧. ಸಮುದ್ರವನ್ನು ಹೊಕ್ಕವನು (ಇಲ್ಲಿ ವ್ಯಂಗ್ಯವಿದೆ.) | ಎದುರು ನಿಂತು ಹೋರಾಟ ಮಾಡಬೇಕು. |
| ೨. ದೇವರನ್ನು ಮೊರೆ ಹೋದವನು | ದೇವರನ್ನು ಯುದ್ಧ ಸಂದರ್ಭ ಅಪ್ಪಿ ಹಿಡಿಯುವುದು ಯುದ್ಧಧರ್ಮವಲ್ಲ. |
| ೩. ನೀರಲ್ಲಿ ಹೊಕ್ಕರೆ. | ಯುದ್ಧವೀರ ನೀರಲ್ಲಿ ಅಡಗಿ ಕುಳಿತು ಕೊಳ್ಳುವುದು ಹೇಡಿತನದ ಸಂಕೇತ. |
| ೪. ಹುತ್ತವನ್ನು ಏರಿನಿಂತವನು | ಶತ್ರುವಿನಿಂದ ಮರಣ ಹೊಂದುವುದ ಕ್ಕಿಂತಲೂ ಹಾವಿನ ಕಡಿತದಿಂದ ಸಾಯಬಹುದು ಎಂದು ಭಾವಿಸಿಕೊಂಡಿರುತ್ತಾನೆ. |
| ೫. ಹೆಣ್ಣಿನ ಸೆರಗಿನಲ್ಲಿ ಮುಖ ಮರೆಸಿಕೊಂಡವನು. | ಇವನು ಮುಖ ಮರೆಮಾಡಿರುವುದು ನಪುಂಸತ್ವದ ಲಕ್ಷಣ. |

ಇಂಥವರೊಡನೆ ಯುದ್ಧ ಸಲ್ಲದು ಎನ್ನುವುದು ಕ್ಷಾತ್ರಧರ್ಮ ಅಥವಾ ಯುದ್ಧಧರ್ಮ ಎಂದೆನ್ನಿಸಿಕೊಂಡಿದೆ. ರನ್ನನ ಗದಾಯುದ್ಧದಲ್ಲಿ ಈ ಅಂಶವೇ ಪ್ರತಿ ಪಾದಿತವಾಗಿವೆ.

ಸ್ಮೃತಿಗಳಲ್ಲಿ 'ವರ್ಣಧರ್ಮ' 'ಆಶ್ರಮಧರ್ಮ' 'ವರ್ಣಾಶ್ರಮ ಧರ್ಮ' 'ಗುಣಧರ್ಮ' 'ನಿಮಿತ್ತಧರ್ಮ' ಮತ್ತು ಸಾಧಾರಣ ಧರ್ಮವೆಂದು ಆರು ಬಗೆಯಿದೆ. ಉಪನಯನ ಮದ್ಯಪಾನ ವರ್ಜನ ಮೊದಲಾದವುಗಳು ವರ್ಣಧರ್ಮ, ಭಿಕ್ಷಾ ದಂಡಧಾರಣ ಮೊದಲಾದವು ಆಶ್ರಮಧರ್ಮ. ಮೇಖಲಾ(ಮಂಜಿ ಹುಲ್ಲಿನಿಂದ ಮಾಡಿದ ನಡುಧಾರ) ಪಲಾಶದಂಡ ಧಾರಣಾದಿಗಳು ವರ್ಣಾಶ್ರಮ ಧರ್ಮದಲ್ಲಿಯೂ ಪಟ್ಟಾಭಿಷಿಕ್ತನಾದ ರಾಜಧರ್ಮಗಳು ಗುಣಧರ್ಮದಲ್ಲಿಯೂ, ಪ್ರಾಯಶ್ಚಿತ್ತಾದಿಗಳು ನೈಮಿತ್ತಿಕ ಧರ್ಮದಲ್ಲಿಯೂ ಸೇರುತ್ತವೆ. ಮಿತಾಕ್ಷರದಲ್ಲಿಯೂ ಆರು ಧರ್ಮಗಳನ್ನು ಹೇಳಲಾಗಿದೆ.

**೬೧೫. ಯುದ್ಧ ಭಂಗಿಗಳು**

*ಅಂತು ಸಮರೋತ್ಸುಕಚಿತ್ತನಾಗಿ ಸಾಹಸಭೀಮಂ ದ್ರೋಣಾಚಾರ್ಯಂಗೆ ಮನದೊಳ್ ನಮಸ್ಕಾರಂಮಾಡಿ ದುರ್ಯೋಧನಂ ಬಲದೇವಂಗೆನಮಸ್ಕಾರಂಗೆಯ್ದು ಪಂಚಷಡಂಗುಲಾಯಾಮಮುಂ ಸಹಸ್ರಾಂಗುಲವಲಯನಿರ್ಮಿತಮಷ್ಟಾಂಗುಲ*

*ಸ್ಥೂಲಮೂಲಾಗ್ರಮುಮಪ್ಪುತ್ತಮಗದೆಯೊಳಂಚತುಃಷಡಂಗುಲಾಯಾಮಮುಂ ಶತಾಂಗುಲವಲಯಪರಿಮಿತಮುಂ ಚತುರಂಗುಲಾಗ್ರಮೂಲಮುಮಪ್ಪಮಧ್ಯಮ ಗದೆಯೊಳಂತ್ರಿಷಡಂಗುಲಾಯಾಮಮುಂ ಷಟ್ತ್ರಿಂಶದ್ವಲಯಾಂಗುಲಮುಂ ದ್ವ್ಯಂಗುಲಾಗ್ರಮೂಲಮುಮಪ್ಪಧಮಗೆದೆಯೊಳಂ ತಾಮುತ್ತಮಪುರುಷರಪ್ಪುದಜೆಂತ ಮಗನುರೂಪಮಪ್ಪುತ್ತಮ ಗದೆಯೊಳಂ ದಶಾಂಗುಲಪರಿಣಾಹಾಗ್ರಕನತ್ಕನಕ*

*ವಿಚಿತ್ರಾಲಂಕೃತಸ್ವರೂಪಸಮನ್ವಿತಂಗಳುಮಪ್ಪಗದೆಗಳುಮನಿರ್ವರುಮಾಯ್ದುಕೊಂಡು...... ಆಲೀಢಪ್ರತ್ಯಾಲೀಢಸಮವಾದವೈಷ್ಣವಮಂಡಲಾಗ್ರಮುಮೆಂಬ ಪಂಚವಿಧಸ್ಥಾನಂಗಳೊಳಂವಾಮದಕ್ಷಿಣಬಾಹ್ಯಾಭ್ಯಂತರಾಸ್ಫಾಲನ ವಿಭೇದಂಗಳೊಳಂ ವಿಳಂಬಿತಮಾಕುಂಚಿತಮಾಸ್ಫೋಟಿತಮಾಕ್ಷಿಪ್ತಮುದ್ಭ್ರಮಿತಂದಿಗ್ಭ್ರಾಮಿತ ಮುಚಿತವಿರುದ್ಧಮಚಿಂತ್ಯಮುಮೆಂಬೆಣ್ಬಂತೆಱದ ಪ್ರಹರಣಂಗಳೊಳಂ ಅತಿಪರಿಚಿತರಾಗಿ ವೈಶಾಖಸ್ಥಾನದೊಳ್ ನಿಂದು –* *(ಸಾಹಸಭೀಮವಿಜಯ ೮–೧ವ)*

ಮೇಲಿನ ವಚನ ಭಾಗದ ವಿವರಣೆಯು ಈ ಕೆಳಗಿನಂತಿದೆ:

ರಣೋತ್ಸಾಹಿಯಾಗಿ ಭೀಮನು ಗುರುಗಳಾದ ದ್ರೋಣಾಚಾರ್ಯರಿಗೆ ಮನಸ್ಸಿನಲ್ಲಿಯೆ ನಮಸ್ಕಾರ ಮಾಡಿದನು. ದುರ್ಯೋಧನನು ಬಲರಾಮನಿಗೆ ನಮಸ್ಕರಿಸಿದನು ಗದೆಗಳಲ್ಲಿ ಉತ್ತಮ, ಮಧ್ಯಮ ಮತ್ತು ಅಧಮ ಎಂದು ಮೂರು ವರ್ಗಗಳುಂಟು; ಮೂವತ್ತು ಅಂಗುಲ ಉದ್ದವಾಗಿಯೂ, ಒಂದು ಸಾವಿರ ಅಂಗುಮ ಸುತ್ತಳತೆಯುಳ್ಳದಾಗಿಯೂ ಎಂಟಂಗುಲ ಗಾತ್ರದ ತುದಿಯುಳ್ಳದು ಉತ್ತಮಗದೆ, ಉದ್ದಳತೆ ಇಪ್ಪತ್ತನಾಲ್ಕು ಅಂಗುಲ, ಸುತ್ತಳತೆ ನೂರಂಗುಲ ಹಾಗೂ ತುದಿ ನಾಲ್ಕುಂಗುಲವಾಗಿರುವುದು ಮಧ್ಯಮ ಗದೆ: ಉದ್ದಳತೆ ಹದಿನೆಂಟು ಅಂಗುಲ, ಸುತ್ತಳತೆ ಮೂವತ್ತಾರಂಗುಲ, ತುದಿ ಎರಡಂಗುಲವಾಗಿರುವುದು. ಅಧಮ ಗದೆ. ಭೀಮ ದುರ್ಯೋಧನರು ಉತ್ತಮ ವೀರರಾದುದರಿಂದ ಹತ್ತಂಗುಲಗಳವರೆಗೆ ಮೇಲೆ ಚಿನ್ನದ ಕುಸುರಿ ಕೆಲಸದಿಂದ ಅಲಂಕೃತವಾದ ಉತ್ತಮ ಗದೆಗಳನ್ನು ತೆಗೆದುಕೊಂಡರು; ಆಲೀಢ. ಪ್ರತ್ಯಾಲೀಢ. ಸಮಪಾದ, ವೈಷ್ಣವ, ಮಂಡಲಾಗ್ರ ಎಂಬ ಐದು ಬಗೆಯ ಸ್ಥಾನಗಳಲ್ಲಿಯೂ ವಾಮ, ದಕ್ಷಿಣ, ಬಾಹ್ಯ, ಅಭ್ಯಂತರ ಎಂಬ ಆಸ್ಫಾಲನ ಪ್ರಕಾರಗಳಲ್ಲಿಯೂ, ವಿಲಂಬಿಕ, ಆಕುಂಚಿತ, ಆಸ್ಫೋಟಿತ, ಆಕ್ಷಿಪ್ತ, ಉದ್ಭ್ರಾಮಿತ, ದಿಗ್ಭ್ರಾಮಿತ, ಉಚಿತವಿರುದ್ಧ, ಅಚಿಂತ್ಯ ಎಂಬ ಎಂಟು ಬಗೆಯ ಪ್ರಹಾರಗಳಲ್ಲಿಯೂ ತುಂಬ ಪ್ರವೀಣರಾಗಿದ್ದ ಅವರು ವೈಶಾಖಸ್ಥಾನದಲ್ಲಿ ನಿಂತುಕೊಂಡರು. ನರ್ತನದಲ್ಲಿಯೂ, ಯುದ್ಧದಲ್ಲಿಯೂ ನಿಂತುಕೊಳ್ಳುವ ಐದು ಬಗೆಯ ರೀತಿಗಳಿಗೆ ಸ್ಥಾನ ಅಥವಾ ಸ್ಥಾನಗಳೆಂದು ಹೆಸರು. ಇವುಗಳಲ್ಲಿ 'ಆಲೀಢ'ವೆಂದರೆ ಬಲಗಾಲನ್ನು ಮುಂದೆ ಚಾಚಿ, ಎಡಗಾಲನ್ನು ಹಿಂದೆ ಮಣಿಸಿ ನಿಲ್ಲುವುದು. 'ಪ್ರತ್ಯಾಲೀಢ'ವೆಂದರೆ ಎಡಗಾಲನ್ನು ಮುಂದಕ್ಕೆ ಚಾಚಿ, ಬಲಗಾಲನ್ನು ಹಿಂದೆ ಮಣಿಸಿ ನಿಲ್ಲುವುದು. 'ಸಮಪಾದ'ವೆಂದರೆ ಎರಡೂ ಪಾದಗಳನ್ನು ಸಮವಾಗಿಟ್ಟು ಸಹಜವಾಗಿ ನಿಲ್ಲುವುದು. 'ವೈಷ್ಣವ'ವೆಂದರೆ ಒಂದು ಕಾಲನ್ನು ಸಮವಾಗಿರಿಸಿ ಅದರಿಂದ ಎರಡೂವರೆ ಗೇಣು ಅಂತರದಲ್ಲಿ ಇನ್ನೊಂದು ಕಾಲಿನ ಬೆರಳುಗಳನ್ನು ಪಾರ್ಶ್ವಕ್ಕೆ ಮಾಡಿ ನಿಲ್ಲುವುದು. 'ಮಂಡಲಾಗ್ರ'ವೆಂದರೆ ಕಾಲುಗಳನ್ನು ಒಂದು ಗೇಣಂತರವಿರುವಂತೆ ತ್ರಿಭಂಗಿಯಲ್ಲಿಟ್ಟು ಮೊಣಕಾಲನ್ನು ಎರಡೂವರೆ ಗೇಣು ಮೇಲಕ್ಕೆತ್ತಿ ಸೊಂಟಕ್ಕೆ ಸಮಮಾಡಿ ನಿಲ್ಲುವುದು. ವೈಶಾಖಸ್ಥಾನ: ಎರಡೂ ಪಾದಗಳ ನಡುವೆ ಒಂದು ಗೇಣಂತರವಿರುವಂತೆ ನಿಂತುಕೊಳ್ಳುವುದು.

೬೧೬. ಯೂಪ

"..........ಸ್ಥಾಪಿತ **ಯೂಪ** ಕೋಟಿ ಬಳವತ್ಕಾಮಾಗ್ನಿ" (ಪಂಪ ಭಾರತ ೪-೫೯)

ಎಂದು 'ಪಂಪ ಭಾರತ'ದಲ್ಲಿ ವರ್ಣನೆ ಬರುತ್ತದೆ.

ಯೂಪವೆಂದರೆ ಯಜ್ಞಪಶುವನ್ನು ಕಟ್ಟುವ ಕಂಬ. ಯಜ್ಞಗಳಿಗೆ ಪಶು ಬಲಿ ಆಗಿನ ಆಚರಣೆಗಳಲ್ಲಿ ಒಂದು ಎಂಬುದು ಗಮನಾರ್ಹ. ಯಜ್ಞದಲ್ಲಿ ಪಶುಗಳು ಆಹುತಿಯಾಗುತ್ತಿದ್ದವು. ಯಜ್ಞದ ಆಹುತಿಗೆ ಬಲಿಯಾಗುತ್ತಿದ್ದ ಪ್ರಾಣಿಗಳೆಂದರೆ ಆಡು, ಕುರಿ, ಆಕಳು, ಎತ್ತು, ಎಮ್ಮೆ, ಕೋಣ, ಜಿಂಕೆ, ಕುದುರೆಗಳು. ಅಶ್ವಮೇಧದಲ್ಲಿ ೬೦೯ ಪ್ರಾಣಿಗಳನ್ನು ಬಲಿಗಾಗಿ ಬಳಸಿಕೊಳ್ಳುತ್ತಿದ್ದರಂತೆ. ಕೃಷ್ಣ ಯಜುರ್ವೇದ ತೈತಿರಿಯಾ ಬ್ರಾಹ್ಮಣವು ಯಾವ ಯಾವ ದೇವತೆಗೆ ಯಾವ ಯಾವ ಬಲಿ ನೀಡಬೇಕೆಂದು ಹೇಳುತ್ತದೆ. ಇಂದ್ರನಿಗೆ ದಪ್ಪ ಕಾಲುಗಳುಳ್ಳ ಆಕಳು, ವಿಷ್ಣು - ವರುಣರಿಗೆ ಬಂಜೆ ಆಕಳು, ಪೂಷನ್ ದೇವತೆಗೆ ಕೃಷ್ಣವರ್ಣದ ಹಸು, ರುದ್ರನಿಗೆ ಕೆಂಪುವರ್ಣದ ಆಕಳು, ಶ್ವೇತ ವರ್ಣದ ಬಂಜೆ ಆಕಳು ಸೂರ್ಯನಿಗೆ, ಬಣ್ಣದ ಮಿಶ್ರ ಆಕಳು ಮಿತ್ರಾವರುಣರಿಗೆ ಇತ್ಯಾದಿ. ಆಹುತ ಪ್ರಾಣಿಯನ್ನು ಯಜ್ಞ ಭಾಗಿಗಳಿಗೆ ಹಂಚುತ್ತಿದ್ದರು; ಪ್ರಸ್ತೋತನಿಗೆ ಆಹುತ ಪ್ರಾಣಿಯ ನಾಲಿಗೆಯನ್ನೊಳಗೊಂಡು ಎರಡು ದವಡೆಗಳು ಸಿಕ್ಕಿದವು. ಪ್ರತಿಹರ್ತನಿಗೆ ಕುತ್ತಿಗೆ ಮತ್ತು ಡುಬ್ಬ, ಉದ್ಗಾರ್ತನಿಗೆ ಹದ್ದಿನಂತಹ ನೆಣ, ನೇಷ್ಠನಿಗೆ ಬಲದೋಳು. ಸದಸ್ಯನಿಗೆ ಎಡದೋಳು, ಯಜ್ಞವನ್ನು ಜರುಗಿಸಿದ ಗೃಹಪತಿಗೆ, ಯಜಮಾನನಿಗೆ ಎರಡು ಬಲ ಪಾದಗಳು, ಅವನ ಪತ್ನಿಗೆ ಎರಡು ಎಡಪಾದಗಳು ಇತ್ಯಾದಿ. ನರಬಲಿಯೂ ನಡೆಯುತ್ತಿತ್ತು.

*ವಿವರಗಳಿಗೆ ನೋಡಿ: ವೇದವ್ರತ ವೈಶಂಪಾಯನ ೧೯೮೪ ಋಗ್ವೇದ ಪುಟ. ೧೦೭-೧೪೬*

೬೧೭. ಯೋಗ

ಯೋಗ ದರ್ಶನದ ಪ್ರಕಾರ ಧ್ಯಾನ ಮತ್ತು ಶಾರೀರಿಕ ಶಿಸ್ತುಗಳ ಮೂಲಕ ಮನುಷ್ಯನು ಮೋಕ್ಷವನ್ನು ಪಡೆಯಬಹುದು. ಇಂದ್ರಿಯ ಸೌಖ್ಯ, ಮನೋಪ್ರವೃತ್ತಿ ಹಾಗೂ ಅಂಗಾಗಗಳ ಮೇಲಿನ ನಿಯಂತ್ರಣವು ಈ ಪದ್ಧತಿಯ ಕೇಂದ್ರಬಿಂದು. ಮೋಕ್ಷವನ್ನು ಸಾಧಿಸಲು ಬಯಸುವವರು ನಾನಾ ಭಂಗಿಗಳಲ್ಲಿ ಶರೀರಕ್ಕೆ ವ್ಯಾಯಾಮ ನೀಡುವಂತಹ ಆಸನಗಳು ಮತ್ತು ಉಸಿರಾಟದ ನಿಯಂತ್ರಣವಾದ ಪ್ರಾಣಾಯಾಮ ಇವುಗಳನ್ನು ಅಭ್ಯಾಸ ಮಾಡಬೇಕೆಂದು ಯೋಗ ಹೇಳುತ್ತದೆ. ಈ ವಿಧಾನಗಳಿಂದ ಮನಸ್ಸು ಪ್ರಾಪಂಚಿಕ ವಿಚಾರಗಳಿಂದ ದೂರ ಸರಿದು, ಏಕಾಗ್ರತೆಯನ್ನು ಸಾಧಿಸುತ್ತದೆ ಎಂದು ಭಾವಿಸಲಾಗಿದೆ. ಪ್ರಾಚೀನ ಕಾಲದಲ್ಲಿ ದೇಹರಚನೆ ಹಾಗೂ ಅಂಗಾಗಗಳ ರಚನೆಯನ್ನು ಕುರಿತು ಇದ್ದ ತಿಳಿವಳಿಕೆಯನ್ನು ಈ ವ್ಯಾಯಾಮಗಳು ವ್ಯಕ್ತಪಡಿಸುತ್ತವೆ. ಆದರೆ ಅವು ಈ ಜಗತ್ತಿನ ಕಷ್ಟಗಳಿಂದ ಪಲಾಯನವಾಗುವ ಪ್ರವೃತ್ತಿಯನ್ನೂ ಸೂಚಿಸುತ್ತವೆ.

ಯೋಗವು ದೇಹ ಮತ್ತು ಮನಸ್ಸುಗಳ ಮೇಲೆ ನಿಯಂತ್ರಣ ಸಾಧಿಸುವ ಸಾಧನಗಳು.

ಈ ಯೋಗದಿಂದ ಕಾಯಿಲೆಯನ್ನು ನಿಯಂತ್ರಿಸಬಹುದೆಂದು ಭಾವಿಸುತ್ತಾರೆ. ಯೋಗದ ಮೂಲಕ ಸಿದ್ಧಿಯನ್ನು ಪಡೆಯುವುದು ಯೋಗಿಗಳ ಶಕ್ತಿಯಾಗಿದೆ.

*ವಿವರಗಳಿಗೆ ನೋಡಿ: ಸ್ವಾಮಿ ಆದಿದೇವಾನಂದ ೧೯೭೦ ಪಾತಂಜಲ – ಯೋಗದರ್ಶನ*
*ಆರ್.ಎಸ್. ಶರ್ಮ ೨೦೦೭ ಪ್ರಾಚೀನ ಭಾರತ ಪುಟ. ೨೪೮*

# ರ

## ೬೧೮. ರಂಗಭೂಮಿ

*"............ಚೌಪಳಿಗೆಗಳ್ ಪಲವಂ ಸಮದಲ್ಲಿ ರತ್ನಂ*
*ಬೆರೆಸಿದ ಬಣ್ಣದೊಲ್ ಮೇಱೆಯೆ ಕಟ್ಟಿಸಿ ಪುಟ್ಟಿಸಿ*
***ರಂಗಭೂಮಿಯಂ"** (ಪಂಪ ಭಾರತ ೩–೪೦)*

ಸ್ವಯಂವರ ಶಾಲೆಯನ್ನು ಅನೇಕ ರತ್ನಗಳಿಂದ ರಚಿತವಾಗಿರುವ ಹಾಗೆ ಮಾಡಿಸಿ ರಾಜರುಗಳಿರುವುದಕ್ಕಾಗಿ ಸಾಲಾಗಿ ಅನೇಕ ತೊಟ್ಟಿಯ ಮನೆಗಳನ್ನು ನಿರ್ಮಿಸಿ ಕೆಂಪು ಬಣ್ಣದಿಂ ಪ್ರಕಾಶಿಸುವ ಹಾಗೆ ರಂಗಸ್ಥಳವನ್ನು ದ್ರುಪದನು ನಿರ್ಮಿಸಿದನು. (ಪಂಪ ಭಾರತ ೩–೪೦) ಸಾಮಾನ್ಯರ ಕ್ರಿಯೆ ಮತ್ತು ವೇದಿಕೆಯ ನಡುವಣ ಕ್ರಿಯೆಯನ್ನು ವ್ಯತ್ಯಾಸಗೊಳಿಸಲು ರಂಗವೇದಿಕೆಯು ಅವಕಾಶ ಕಲ್ಪಿಸುತ್ತದೆ.

*ವಿವರಗಳಿಗೆ ನೋಡಿ: ಆಮೂರ ಜಿ. ಎಸ್. ೨೦೦೬ ಶ್ರೀರಂಗ ಸಾರಸ್ವತ (ಸಂಪುಟ. ೮) ಪುಟ. ೬೪೪.*

## ೬೧೯. ರಂಗವಲ್ಲಿ

*................**ರಂಗವಲಿ**ಯಿದಕ್ಕಿಂತೆ (ಪಂಪಭಾರತ ೨–೧೨ ವ)*

ಈ ಮೊದಲೇ ಸೂಚಿಸಿರುವಂತೆ ಒಳಾಂಗಣ ಆಟಗಳಲ್ಲಿ ಮಾನಸಿಕ ಚಟುವಟಿಕೆಯೇ ಪ್ರಧಾನವಾದುದಾಗಿರುತ್ತದೆ. ಸ್ತ್ರೀಯರು ರಂಗೋಲಿಯನ್ನು ಬಿಡಿಸುವ ವಿಷಯವನ್ನು ಪಂಪನು 'ಪಂಪಭಾರತ'ದಲ್ಲಿ ಸೂಚ್ಯವಾಗಿ ವರ್ಣಿಸುತ್ತಾನೆ. (ಪಂಪ ಭಾರತ ೨–೧೨ವ)

'ರಂಗೋಲಿ' ಸ್ತ್ರೀಯರದ್ದೇ ವಿಶೇಷವಾದ ಆಟವೆಂದು ಪರಿಗಣಿಸಬಹುದು. ಈಗಲೂ 'ರಂಗೋಲಿ ಸ್ಪರ್ಧೆ'ಯು ಸ್ತ್ರೀಯರಿಗಾಗಿ 'ಏರ್ಪಡಿಸುವ ಸ್ಪರ್ಧೆಗಳಲ್ಲಿ ಒಂದಾಗಿದೆ. ವಾತ್ಸಾಯನನು ತನ್ನ 'ಕಾಮಸೂತ್ರ' ಕೃತಿಯಲ್ಲಿ ಸ್ತ್ರೀಯರ ಕ್ರೀಡೆಗಳ ಕುರಿತಂತೆ ಹೇಳುವಾಗ 'ತಂಡುಲ ಕುಸುಮ ಬಲಿವಿಕಾರ' ಎಂದು ಹೇಳುತ್ತಾನೆ. ಇದು ಬಣ್ಣದ ಅಕ್ಕಿಯಿಂದ ರಂಗೋಲಿ ಬರೆಯುವುದನ್ನು ಸೂಚಿಸುತ್ತದೆ. (ವೆಂಕಟಭಸ್ಮೆ ಜಿ.(ಅನು) ೧೯೮೩. ಪುಟ. ೧೦) ಭಾರತದಲ್ಲಿ ರಂಗವಲ್ಲಿಯು ಪುರಾತನ ಕಾಲದಿಂದಲೂ ಬಂದ ಗೃಹಾಲಂಕಾರದ ಒಂದು ಕಲೆಯಾಗಿದೆ. ಪುರಾಣ, ಕಾವ್ಯ, ಇತಿಹಾಸ ಮೊದಲಾದ

ಸಾಹಿತ್ಯಗಳಲ್ಲೂ ರಂಗವಲ್ಲಿಯ ಉಲ್ಲೇಖಗಳಿವೆ. (ಹೂಗಾರ: ಎಸ್.ಕೆ. ೧೯೭೭ ಪುಟ. ೩೪-೩೫)

ಕ್ರೀಡೆಯನ್ನು ಮನೋಲ್ಲಾಸ ಕೊಡುವ ಪ್ರಕಾರಗಳಲ್ಲೆ ಒಂದು ಎಂದು ತಿಳಿದುಕೊಂಡರೆ, ವಾತ್ಸಾಯನನ ವಾದವನ್ನು ಒಪ್ಪಿಕೊಳ್ಳಬಹುದು. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಉಕ್ತವಾದಂತೆ, ಸ್ತ್ರೀಯರು ರಂಗೋಲಿಯನ್ನು ಬರೆಯುವುದರಲ್ಲಿ ಮನೋಲ್ಲಾಸ ಪಡೆಯುತ್ತಿದ್ದರು.

ಕ್ರೀಡೆಗಳ ಬಗೆಗೆ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಉಕ್ತವಾದ ವಿಚಾರಗಳನ್ನು ಆ ಕಾಲದ ವಾಸ್ತವವೆಂದು ಗ್ರಹಿಸಬಹುದು.

ಪಂಪನ 'ವಿಕ್ರಮಾರ್ಜುನ ವಿಜಯ' ದಲ್ಲಿ ಭಾನುಮತಿಯು ಪಣವನ್ನು ಒಡ್ಡಿ, ನೆತ್ತವಾಡಿದ ವಿಷಯವು ಉಕ್ತವಾಗಿದೆ. (೯-೬೯).

### ೬೨೦. ರಜೋಗುಣ

*ಗೂಗೆ ವೊಂಗುವೊಂಗದೆ ರಜದಿಂ (ಶಾಂತಿಪುರಾಣ ೨-೩೫)*

(ಗೂಬೆಯ ಗರ್ವ ರಜೋಗುಣದಿಂದ ವರ್ಧಿಸದಿರುವುದೆ)

ಸಾತ್ವಿಕ; ರಜಸ್ಸು; ತಮಸ್ಸು ಎಂಬುದು ಮೂರು ಗುಣಗಳು. ಈ ಮೂರು ಗುಣಗಳಿಗೆ ಮೂವರು ಅಧಿದೇವತೆಯರು. ಸತ್ವಕ್ಕೆ ವಿಷ್ಣು, ರಜಸ್ಸಿಗೆ ಬ್ರಹ್ಮ ಮತ್ತು ತಮಸ್ಸಿಗೆ ಶಿವ. ಹಾಗೆಯೇ ಈ ಮೂವರು ಅಧಿದೇವತೆಯರು ಸೃಷ್ಟಿ, ಸ್ಥಿತಿ ಮತ್ತು ಲಯವನ್ನು ಸೂಚಿಸುತ್ತಾರೆ. ರಜೋಗುಣವೆಂದರೆ ರಾಜತ್ವಕ್ಕೆ ಸಂಬಂಧಿಸಿದ್ದು. ಸಾತ್ವಿಕ ಗುಣಕ್ಕಿಂತ ಭಿನ್ನವಾದುದು.

ಸಾತ್ವಿಕರು ದೇವತೆಗಳನ್ನು ಪೂಜಿಸುತ್ತಾರೆ. ರಾಜಸರು ಯಕ್ಷ ರಾಕ್ಷಸರನ್ನು ಪೂಜಿಸುತ್ತಾರೆ. ತಾಮಸರು ಪ್ರೇತ ಭೂತಗಳನ್ನು ಪೂಜಿಸುತ್ತಾರೆ. (ಗೀತೆ ೧೭-೪) ರಾಜಸ ಗುಣದವರು ಕರ್ಮಠರು, ಮನಸ್ಸಿನ ಯೋಜನೆಗಳನ್ನು ಹಾಕಿಕೊಂಡು ಅದನ್ನು ಸಾಧಿಸಲು ಪ್ರಯತ್ನಿಸುತ್ತಾರೆ. ಆದುದರಿಂದ ಯಕ್ಷ ರಾಕ್ಷಸರನ್ನು ಆರಾಧಿಸುತ್ತಾರೆ. ತಾಮಸರು ಅಭಿಚಾರಕರ್ಮದಲ್ಲಿ ತೊಡಗಿರುತ್ತಾರೆ. ಭೂತ ಪ್ರೇತಗಳನ್ನು ನಂಬುತ್ತಾರೆ. ಭಗವದ್ಗೀತೆಯಲ್ಲಿ ತಾಮಸರ ಕುರಿತು ಬಂದಿರುವ ಮತ್ತೊಂದು ವಿಷಯ ಗಮನಾರ್ಹ. ಸತ್ವ, ರಜ, ತಮಗುಣಗಳು, ಆತ್ಮಜ್ಞಾನದಿಂದ ತಿಳಿಯುವ ಜ್ಞಾನ ಸಾತ್ವಿಕ ಜ್ಞಾನ. ಯಾವ ಬೇರೆ ಬೇರೆ ತರಹದ ಪ್ರಾಣಿಗಳಲ್ಲಿ ಬೇರೆ ಬೇರೆ ಆತ್ಮರುಗಳು ಇದ್ದಾರೆ ಎಂದು ತಿಳಿಯುತ್ತದೋ ಅದು ರಾಜಸ ಜ್ಞಾನವೆಂದು ಹೇಳುತ್ತಾರೆ. ತಾಮಸರು ತತ್ವಾರ್ಥರಹಿತರು. ಅಧಮ ಅಧಿಕಾರಿಗಳು ಆತ್ಮ ತತ್ವವನ್ನು ಗುರುತಿಸುವುದಿಲ್ಲ. ರಾಜಸ ಅಹಂಕಾರದಿಂದ ಕೂಡಿರುತ್ತದೆ. ಭೋಗದ ಇಚ್ಛೆಯಿರುತ್ತದೆ. ತಾಮಸರು ದೇಹವನ್ನು ಕುಂದಿಸುತ್ತಾರೆ.

ತಾಮಸರು ದೇಹವನ್ನು ಕುಂದಿಸುತ್ತಾರೆ ಎಂಬ ಅಂಶ ಗಮನಾರ್ಹ. ಜೈನಧರ್ಮದಲ್ಲಿ

ತಪೋಧನರು ದೇಹವನ್ನು ಕುಂದಿಸುತ್ತಾರೆ. ಭಗವದ್ಗೀತೆಯ ಪ್ರಕಾರ ಯಾರು ದೇಹವನ್ನು ಕುಂದಿಸುತ್ತಾರೋ ಅವರು ತಾಮಸರು.

ಕಾಮಜನಕ ತಮೋಗುಣಕ್ಕಿಂತ ರಜಸ್ಸು, ಅರ್ಥಕಾರಕ ರಜೋಗುಣಕ್ಕಿಂತ ಸತ್ವ ಶ್ರೇಷ್ಠವಾಗಿದೆ. ಸತ್ವವು ಧರ್ಮಜನಕವಾಗಿದೆ. ಅರ್ಥಕಾಮಗಳು ಧರ್ಮದಿಂದ ನಿರಾಬಾಧವಾಗಿ ಬರುವುವು ಎಂದು ಮನು ಹೇಳುತ್ತಾನೆ. ಅವನ ಪ್ರಕಾರ ಸತ್ವಗುಣಯುಕ್ತರು ದೇವತ್ವವನ್ನು, ರಜೋಗುಣ ಪ್ರಧಾನರು ಮನುಷ್ಯತ್ವವನ್ನು, ತಾಮಸಿಗಳು ಪ್ರಾಣಿಜನ್ಮವನ್ನು ಹೊಂದುತ್ತಾರೆ.

*ವಿವರಗಳಿಗೆ ನೋಡಿ: ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೧೨-೩೮*
*ಡಿ.ವಿ.ಜಿ ೧೯೯೬ ಭಗವದ್ಗೀತೆ-೧೪-೪೩೬: ೩೮; ೪೪೪-೪೮*

**೬೨೧. ರತ್ನತ್ರಯ**

*ಜೀವಾದಿನವ ಪದಾರ್ಥದೊ*
*ಳಾವಗಮಟ್ಟಿಯೆನೆ ಮಾಡು ಮೂಢ ತ್ರಯದೊಳ್।*
*ಭಾವಮೆನೆ ಬಿಸುಡು ಬೆಳಗುಗು*
*ಮೀ ವಿಧದಿಂ ನೆಗಟಿ ನಿನ್ನದ ದರ್ಶನರತ್ನಂ ॥* (ಆದಿಪುರಾಣ ೫-೫೬)

ಮೋಕ್ಷ ಪಡೆಯಲು ಸಾಧನವಾದ ಮೂರು ರತ್ನಗಳು. ಸಮ್ಯಗ್ದರ್ಶನ (ತೀರ್ಥಂಕರರಲ್ಲಿಯೂ ಅವರು ಬೆಳಗಿದ ಆಗಮಗಳಲ್ಲಿಯೂ ಗುರುಗಳಲ್ಲಿಯೂ ಪೂರ್ಣವಾದ ನಂಬಿಕೆ), ಸಮ್ಯಕ್‌ಜ್ಞಾನ (ಸಮ್ಯಗ್ದರ್ಶನದಿಂದ ಕಂಡು ಗ್ರಹಿಸಿದುದನ್ನು ಸ್ವಲ್ಪವೂ ಸಂಶಯವಿಲ್ಲದಂತೆ ಚೆನ್ನಾಗಿ ತಿಳಿಯುವುದು), ಸಮ್ಯಕ್ಚಾರಿತ್ರ (ಸಮ್ಯಕ್ ಜ್ಞಾನವು ಪ್ರಾಪ್ತವಾದ ಮೇಲೆ ಸಾಧಕನು ಅವಲಂಬಿಸುವ ಸದಾಚಾರ).

ಜೀವಾದಿ ಒಂಬತ್ತು (ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರೆ, ಮೋಕ್ಷ, ಪುಣ್ಯ, ಪಾಪ) ಪದಾರ್ಥಗಳಲ್ಲಿ ನಂಬಿಕೆಯಿಡಬೇಕು. ದೇವತಾ ಮೂಢ, ಲೋಕ ಮೂಢ, ಮಿಥ್ಯಾ ಮೂಢಗಳಲ್ಲಿ ನಂಬಿಕೆಯಿಡಬಾರದು. ಹೀಗೆ ಮಾಡಿದಾಗ ಮಾತ್ರ ಸಮ್ಯಗ್ ದರ್ಶನವು ದೊರೆಯುವುದು.

ದರ್ಶನ ಎಂದರೆ ಶುದ್ಧಸ್ವಭಾವದ ಅವಲೋಕನೆ, ಜ್ಞಾನ ಎಂದರೆ ಶುದ್ಧ ಸ್ವಭಾವವನ್ನು ಪ್ರತ್ಯಕ್ಷ ತಿಳಿದುಕೊಳ್ಳುವುದು ಮತ್ತು ಚಾರಿತ್ರವೆಂದರೆ ಶುದ್ಧಸ್ವಭಾವದಲ್ಲಿ ಸ್ಥಿರವಾಗಿರುವುದ ರಿಂದಲೇ ಸಾಧ್ಯದ ಸಿದ್ಧಿಯಾಗುತ್ತದೆ - ಇದೇ ಮೋಕ್ಷಮಾರ್ಗವಿದೆ ಬೇರೆಯಿಲ್ಲ ಎಂದು ಸಮಯಸಾರದಲ್ಲಿ ಬರುತ್ತದೆ.

ಜೈನ ಮತವು ದೇವರುಗಳು ಅಸ್ತಿತ್ವವನ್ನು ಮಾನ್ಯ ಮಾಡಿದರೂ ಅವು ಜಿನನಿಗಿಂತ ಕೆಳ ಹಂತದವು. ಬೌದ್ಧ ಮತವು ವರ್ಣ ವ್ಯವಸ್ಥೆಯನ್ನು ಖಂಡಿಸಿದಂತೆ ಜೈನವು ಖಂಡಿಸಲಿಲ್ಲ. ಹಿಂದಿನ ಜನ್ಮದ ಪಾಪ ಅಥವಾ ಪುಣ್ಯ ಕಾರ್ಯಗಳಿಗೆ ಅನುಗುಣವಾಗಿ ಮನುಷ್ಯನು ಮೇಲು ಅಥವಾ ಕೀಳು ವರ್ಣದಲ್ಲಿ ಹುಟ್ಟುತ್ತಾನೆ ಎಂಬುದು ಮಹಾವೀರನ

ಅಭಿಪ್ರಾಯ. ಅವನು ಚಂಡಾಲನಲ್ಲಿಯೂ ಮಾನವೀಯ ಮೌಲ್ಯಗಳನ್ನು ಕಾಣುತ್ತಾನೆ. ಶುದ್ಧವೂ, ಉದಾತ್ತವೂ ಆದ ಜೀವನ ನಡೆಸಿದರೆ ಕೀಳು ಜಾತಿಯವರು ಸಹ ಮುಕ್ತರಾಗುತ್ತಾರೆ ಎಂಬುದು ಅವನ ಅಭಿಪ್ರಾಯ. ಜೈನಮತದ ಪ್ರಮುಖ ಗುರಿ ಪ್ರಾಪಂಚಿಕ ಬಂಧನಗಳಿಂದ ಮುಕ್ತಿ ಗಳಿಸುವುದು. ಅದಕ್ಕೆ ಯಾವ ಸಂಸ್ಕಾರ ಕ್ರಿಯೆಯ ಅಗತ್ಯವೂ ಇಲ್ಲ. ಸುಜ್ಞಾನ, ಸದ್ವಿಶ್ವಾಸ ಹಾಗೂ ಸತ್ಕಾರ್ಯಗಳಿಂದ ಮನುಷ್ಯನು ಮುಕ್ತಿ ಗಳಿಸಬಹುದು. ಅವು ಮೂರನ್ನು ಜೈನ ಮತದ ತ್ರಿರತ್ನಗಳು ಎಂದು ಭಾವಿಸಲಾಗಿದೆ.

*ವಿವರಗಳಿಗೆ ನೋಡಿ: ಆರ್.ಎಸ್. ಶರ್ಮ ೨೦೦೭ ಪ್ರಾಚೀನ ಭಾರತ ಪುಟ. ೯೬*

*ಹಿಮ್ಮತಲಾಲ ಜೇಠಾಲಾಲ ಶಾಹ (ಮೂಲ) ಶ್ರೀ ಎಂ. ಬಿ. ಪಾಟೀಲ ೨೦೦೪ ಸಮಯಸಾರ ಪುಟ. ೫೧*

## ೬.೨೨. ರಸವದಲಂಕಾರ

ಒಂಬತ್ತು ಬಗೆಯ ರಸಗಳು ಮನದಟ್ಟಾಗುವಂತೆ ನಿರೂಪಿಸುವ ವಚನವಿರಚನೆ 'ರಸವದಲಂಕಾರ' ಎಂದು ಕವಿರಾಜಮಾರ್ಗಕಾರನು ಹೇಳುತ್ತಾನೆ. ಇಲ್ಲಿ ನವರಸಗಳನ್ನು ಹೇಳುವುದು ಗಮನಾರ್ಹವಾಗಿದೆ.

(ಕವಿರಾಜ ಮಾರ್ಗ ೩, -೧೮೭-೧೮೮)

ಇದರ ವಿವೇಚನೆಯನ್ನು ಎಂ.ವಿ.ಸೀತಾರಾಮಯ್ಯ ಹೀಗೆ ಮಾಡಿದ್ದಾರೆ: ಮಾರ್ಗಕಾರನು ಇಲ್ಲಿ ಒಂಬತ್ತು ರಸಗಳನ್ನು ಹೆಸರಿಸಿರುವುದು ಗಮನಾರ್ಹ: 'ಮಾರ್ಗದ್ವಿತಯ ಗತಿಗಳಂ ಬೆರಸಿ ಪೇಳ್ಗೆರಸವಿಶೇಷದೊಳ್' ಎಂದು ಹೇಳುವಾಗಲೂ ಪಾಠಕರ ಪ್ರತಿಯಲ್ಲಿ, 'ಮರ್ದಿಸು(ವು)ವನೆ(ವೆ)ನೆ' ಎಂದು ತಿದ್ದುಪಡಿಯಿಂದ ಕೂಡಿದ ಪಾಠದಿಂದ ನಾವು '-ಸುವುವವೆನೆ' ಎಂಬ ಪಾಠವನ್ನು ಅಂಗೀಕರಿಸಿದ್ದಾಗಿದೆ. ಮದ್ರಾಸು ಪ್ರತಿಯಲ್ಲಿ 'ಮರ್ದಿಸುವವನೆನೆ' ಎಂದು ಪಾಠವಿದೆ. ಯಾವ ಪಾಠದಲ್ಲಿಯೂ ಅರ್ಥ ಸರಿಯಾಗಿ ಹೊಂದುವುದಿಲ್ಲ. ಆದ್ದರಿಂದ, 'ಮರ್ದಿಸವವುವೆನೆ' (ಮರ್ದಿಸವು+ಅವು+ಎನೆ) ಎಂದು ಅತ್ಯಲ್ಪವಾದ ಮಾರ್ಪಾಟು ಮಾಡಿಕೊಂಡರೆ ಮೇಲು.

ಅವನು ಒಂಬತ್ತು ರಸಗಳ ವಿಚಾರವನ್ನು ಪ್ರಸ್ತಾವಿಸಿರುವುದನ್ನು ಇಲ್ಲಿ ಸ್ಮರಿಸಬಹುದು. ಭರತಮುನಿ ತನ್ನ 'ನಾಟ್ಯಶಾಸ್ತ್ರ'ದಲ್ಲಿ ಎಂಟು ರಸಗಳನ್ನು ಮಾತ್ರ ಪ್ರತಿಪಾದಿಸಿದ್ದಾನೆ. ಆ ಗ್ರಂಥದ ಕೆಲವು ಮಾತೃಕೆಗಳಲ್ಲಿ ಶಾಂತರಸವನ್ನು ಹೇಳುವ ಭಾಗ ಪ್ರಕ್ಷಿಪ್ತವೆಂದು ವಿದ್ವಾಂಸರ ಮತ. 'ಅಷ್ಟರಸಾಶ್ರಯವಾದ ನಾಟಕಾಭಿನಯದ ಪ್ರಸಕ್ತಿ ಕಾಳಿದಾಸನ 'ವಿಕ್ರಮೋರ್ವಶಿಯ'ದಲ್ಲಿ ಬರುತ್ತದೆ. 'ಅಮರಕೋಶ'ದಲ್ಲಿಯೂ ಎಂಟೇ ರಸಗಳ ಉಲ್ಲೇಖವಿದೆ. ಮಾರ್ಗಕಾರನು ಬಹುಮಟ್ಟಿಗೆ ದಂಡಿಯನ್ನು ಅನುಸರಿಸಿರುವನಷ್ಟೆ. ದಂಡಿ **ರಸವದಲಂಕಾರ**ವನ್ನು ನಿರೂಪಿಸುವಲ್ಲಿ ದೃಷ್ಟಾಂತಪೂರ್ವಕ ರಸಗಳ ಹೆಸರುಗಳನ್ನು ಹೇಳಿದ್ದಾನೆ: ಆದರೆ ಅವನು ಶಾಂತರಸದ ಹೆಸರನ್ನೂ ಎತ್ತಿಲ್ಲ. ಈಗ ತಿಳಿದುಬಂದಿರುವ ಮಟ್ಟಿಗೆ ಸಂಸ್ಕೃತ ವಾಙ್ಮಯದಲ್ಲಿ ಶಾಂತರಸದ ಉಲ್ಲೇಖ ಮೊದಲಿಗೆ ಬಂದಿರುವುದು ಉದ್ಭಟನ 'ಕಾವ್ಯಾಲಂಕಾರ ಸಂಗ್ರಹ'ದಲ್ಲಿ. ಭಾಮಹನನ್ನು ಅನುಸರಿಸಿರುವ ಉದ್ಭಟನ

ಕಾಲ ಕ್ರಿ.ಶ. ಸು. ೭೭೬-೮೦೭ (ಎಂದರೆ ನೃಪತುಂಗನು ಪಟ್ಟಕ್ಕೇರುವುದಕ್ಕಿಂತ ಆರೇಳು ವರ್ಷ ಮುಂಚಿನದು). ಭಾಮಹನು ಕೂಡ '**ರಸವದ್**' ಅಲಂಕಾರದ ವಿಷಯವನ್ನು ಹೇಳುವಾಗ 'ರಸವದ್ ದರ್ಶಿತ ಸ್ಪಷ್ಟಶೃಂಗಾರಾದಿ ರಸಂ' (ಶೃಂಗಾರಾದಿ ರಸಗಳು ಎಲ್ಲಿ ಸ್ಪಷ್ಟ ಗೋಚರಗಳೋ ಅಲ್ಲಿ 'ರಸವತ್' ಎಂಬ ಅಲಂಕಾರವಿರುವುದು') ಎಂದು ಒಟ್ಟಿನ ಮೇಲೆ ಹೇಳಿರುವನೇ ಹೊರತು, ರಸಗಳ ಸಂಖ್ಯೆಯನ್ನಾಗಲಿ ಶಾಂತರಸದ ಹೆಸರನ್ನಾಗಲಿ ತಿಳಿಸಿಲ್ಲ. "ಉದ್ಭಟನ ನಿರೂಪಣೆಯನ್ನು ನೋಡಿಕೊಂಡು ಈತನು( ಎಂದರೆ, ಮಾರ್ಗಕಾರನು) ಬರೆದನೆಂದು ಹೇಳಲು ಸಾಕಾದಷ್ಟು ಆಧಾರವಿಲ್ಲ" ಎಂದೂ "ಶಾಂತರಸ"ದ ಚರಿತ್ರೆಯನ್ನು ನೆನೆದರೆ, ಇಲ್ಲಿ ಅದು ಹೊಸದಾಗಿ ಸೇರಿರುವುದಕ್ಕೆ ಈ ಗ್ರಂಥಕಾರನು ಜೈನನಾಗಿದ್ದುದು ಕಾರಣವಾಗಿರಬಹುದೆನ್ನಿಸುತ್ತದೆ" ಎಂದೂ ಪ್ರೊ. ತೀ.ನಂ.ಶ್ರೀ. ಅಭಿಪ್ರಾಯಪಟ್ಟಿದ್ದಾರೆ. (ಭಾ.ಕಾ.ಮೀ., ಮೊದಲ ಮುದ್ರಣ: ಪು. ೪೪೧). ಮಾರ್ಗಕಾರನು ಜೈನನಾಗಿದ್ದುದರ ಜೊತೆಗೆ, ಕ್ರಿ.ಶ. ೫ನೆಯ ಶತಮಾನದ 'ಅನುಯೋಗದ್ವಾರಸೂತ್ರ'ವೆಂಬ ಪ್ರಾಕೃತ ಜೈನಧರ್ಮ ಗ್ರಂಥವನ್ನು ಈ ವಿಚಾರದಲ್ಲಿ ಅನುಸರಿಸಿರಬಹುದೆಂದು ಊಹಿಸಬಹುದಾಗಿದೆ. ಆ ಗ್ರಂಥದಲ್ಲಿ 'ಶಾಂತರಸ'ವನ್ನು 'ಪ್ರಶಾಂತ' ಎಂಬ ನಾಮಾಂತರದಿಂದ ಕರೆದಿದೆ.

ರಸದ್ಯೋತಕ ವಚನ ವಿರಚನೆಯನ್ನು ವಿವರಿಸುವಾಗ, 'ಪ್ರಸನ್ನ ಗಂಭೀರತರೋಕ್ತಿಯಿಂ ಪ್ರಕಟಮಕ್ಕೆ ರಸಂ ಸತತಂ ಪ್ರಶಾಂತದಂ' ಎಂದು ಹೇಳಿ 'ಶಾಂತ'ವನ್ನು 'ಪ್ರಶಾಂತ' ಎಂದು ಹೆಸರಿಸಿರುವುದು ಈ ಊಹೆಗೆ ಬೆಂಬಲ ನೀಡುತ್ತದೆ. ಪದ್ಯದ ಛಂದಸ್ಸಿನ ನಿರ್ಬಂಧಕ್ಕೆ ಒಳಗಾಗಿ ಹೀಗೆ ಪದಪ್ರಯೋಗ ಮಾಡಿರಬಹುದು ಎಂಬ ಆಕ್ಷೇಪಕ್ಕೂ ಅವಕಾಶವಿದೆ.

ದಂಡಿ 'ರಸವದ್ ರಸಪೇಶಲಂ'(ರಸಮಯವಾಗಿ ಕೋಮಲವಾಗಿರುವುದು ರಸವದಲಂಕಾರ) ಎಂದಿಷ್ಟೇ ಹೇಳಿ (೨-೨೭೫) ಮುಂದೆ ಸಾಗಿ, ರಸವದಲಂಕಾರದ ಕೆಲವು ದೃಷ್ಟಾಂತಗಳನ್ನು ಕೊಟ್ಟು ವಾಚ್ಯಸ್ಯಗ್ರಾಮ್ಯತಾಯೋನಿರ್ಮಾಧುರ್ಯೇ ದರ್ಶಿತೋ ರಸಃ ಇಹ ತ್ವಷ್ಟ ರಸಯತ್ತಾ ರಸವತ್ತಾ ಸ್ಮೃತಾ ಗಿರಾಂ (ಮಾಧುರ್ಯ ಗುಣದಲ್ಲಿ ಕಂಡುಬರುವ ಮಾತಿನ ರಸವು ಅಗ್ರಾಮ್ಯತೆಯಲ್ಲಿಯೆ ಜನ್ಮ ತಾಳುತ್ತದೆ; ಆದರೆ ಇಲ್ಲಿ ಅಷ್ಟರಸಾಯತ್ತವಾದ ನಿರೂಪಣೆಯೆ ರಸವದ್ ಅಲಂಕಾರ') ಎಂದು ಹೇಳಿ ರಸವದಲಂಕಾರ ನಿರೂಪಣೆಯನ್ನು ಮುಗಿಸಿದ್ದಾನೆ. ಮಾರ್ಗಕಾರನು 'ಗುಣ'ಗಳಿಗೆ ರಸಪರತ್ವವನ್ನು ಹೇಳುವ ಕಲ್ಪನೆಗೆ ಇಲ್ಲಿ ಸೂಚನೆ ಇರುವಂತೆ ಕಂಡುಬರುತ್ತದೆ. ಗುಣವು ರಸವ್ಯಂಜಕವಾಗಬಲ್ಲದೆಂದು ಮಾರ್ಗಕಾರನ ಅಭಿಪ್ರಾಯ ಎಂದು ಗ್ರಹಿಸಬಹುದು. (ಎಂದರೆ, ಅಲ್ಲಿ ರಸವು ವ್ಯಂಗ್ಯವಾದಂತಾಯಿತು). ದಂಡಿಯ ದೃಷ್ಟಿಯಲ್ಲಿ ಇದು 'ರಸವದಲಂಕಾರ'ವಲ್ಲ. ಗುಣಾಶ್ರಿತವಾಗಿರದೆ, 'ರಸಮಯವಾಗಿರುವ ವಚನ'ವೆ 'ರಸವದಲಂಕಾರ'. ಲಕ್ಷ್ಯ ಪದ್ಯಗಳಲ್ಲಿಯೂ 'ರಸವದ್ವಚಃ', 'ರಸವತ್ವಂ ಗಿರಾಂ' ಎಂಬ ಉಕ್ತಿಗಳು ಬರುತ್ತವೆ. ಇವನ್ನೆಲ್ಲ ಅನುಲಕ್ಷಿಸಿಯೇ ಮಾರ್ಗಕಾರನು, 'ಇಹತ್ವಷ್ಟರಸಾಯತ್ತಾ ರಸವತ್ತಾ ಸ್ಮೃತಾ ಗಿರಾಮ್' ಎಂಬ ದಂಡಿಯ ವಾಕ್ಯವನ್ನೇ 'ನವವಿಧರಸಂಗಳಂ

ಮನಕೆ ವರೆ ನಿರೂಪಿಸುವ ವಚನವಿರಚನೆ' ಎಂದು ಸ್ಫುಟಗೊಳಿಸಿ 'ಅಷ್ಟರಸ'ವನ್ನು 'ನವರಸ'ವಾಗಿ ಮಾಡಿದ್ದಾನೆ.

**೬೨೩. ರಸವಿದ್ಯೆ**

ತಾಂತ್ರಿಕ ಕೈ ಬರಹಗಳಂತೆಯೇ ಧಾತುವಿದ್ಯೆ ಹಾಗೂ ದೀರ್ಘಾಯುಷ್ಯವನ್ನು ಒದಗಿಸುವ (ರಸಾಯನ) ಪಾದರಸದ ಮದ್ದುಗಳನ್ನು ಕುರಿತಾದ ಎಲ್ಲಕ್ಕೂ ಹಳೆಗಾಲದ ಸಂದರ್ಭಗಳನ್ನು ನಮಗೆ ಒದಗಿಸುತ್ತದೆ. 'ಮಂತ್ರ ಸಾಧನ' ಎನ್ನುವುದು (ಮಂತ್ರಗಳ ಸಾಧನೆಯನ್ನು ಕೈಕೊಳ್ಳುವುದು) ಒಂದು ವಿಶಿಷ್ಟವಾದ ತಾಂತ್ರಿಕ ಪದವಾಗಿದೆ. ಬಾಣನ ಕಾಲದವರೆಗೆ ತಾಂತ್ರಿಕ ಪೂಜಾ ಪದ್ಧತಿಯು ಪೂರ್ತಿ ಬೆಳೆದಿತ್ತಲ್ಲದೆ ಅದು ದಕ್ಷಿಣ ಭಾರತದಲ್ಲಿ ಎದ್ದು ಕಾಣುವ ಹಾಗೆ ಕೇಂದ್ರಿತಕೃತಗೊಂಡಿತ್ತೆಂಬುದು ಈ ನಿಜ ಸಂಗತಿಗಳಿಂದ ಕಂಡುಬರುತ್ತದೆ.

ಇದಕ್ಕೆ ಪೂರಕವಾಗಿ ಕರ್ಣಾಟಕ ಕಾದಂಬರಿಯಲ್ಲಿ ಬರುವ ವಿವರಗಳನ್ನು ಗಮನಿಸಬಹುದು. (ಕರ್ಣಾಟಕ ಕಾದಂಬರಿ ೮-೨ ರಿಂದ ೫)

*ವಿವರಗಳಿಗೆ ನೋಡಿ: ಡೇವಿಡ್. ಎನ್. ಲಾರೆಂಜೆನ್ ೨೦೦೫*

*ಕಾಪಾಲಿಕರು ಮತ್ತು ಕಾಳಾಮುಖರು ಪುಟ. ೨೫*

*ರಸವಿದ್ಯೆಯು ತಾಂತ್ರಿಕರ ವಿದ್ಯೆಗಳಲ್ಲಿ ಒಂದು ಕಡವ ಶಂಭು ಶರ್ಮ ೧೯೫೫ ಗೋರಕ್ಷ ಸಿದ್ಧಾಂತ ಸಂಗ್ರಹ*

**೬೨೪. ರಸವಿಶೇಷಗಳು**

*ಬಗೆದು ಮಾರ್ಗದ್ವಿತಯಗತಿಗಳಂ*
*ಪ್ರಗುಣಗುಣಗಣೋದಯರ್ಕಳ್ ವಿತರ್ಕದಿಂ*
*ಸೊಗಯಿಸುವಂತು ವಚನರಚನೆಯಿಂ*
*ನೆಗಟ್ದಿರೆ ಬೆರಸಿ ಪೇೞ್ಗೆ ರಸವಿಶೇಷದೊಳ್ (ಕವಿರಾಜಮಾರ್ಗಂ ೨-೯೮)*

*ವೀರರಸಂ ಸ್ಫುಟೋಕ್ತಿಯಿನುದಾರತಮಂ ಕರುಣಾರಸಂ ಮೃದೂ*
*ಚ್ಚಾರಣೆಯಿಂದಮದ್ಭುತರಸಂ ನಿಬಿಡೋಕ್ತಿಗಳಿಂದಮಲ್ತೆ ಶೃಂ*
*ಗಾರರಸಂ ಸಮಂತು ಸುಕುಮಾರತರೋಕ್ತಿಗಳಿಂ ಪ್ರಸನ್ನಗಂ*
*ಭೀರತರೋಕ್ತಿಯಿಂ ಪ್ರಕಟಮಕ್ಕೆ ರಸಂ ಸತತಂ ಪ್ರಶಾಂತ (ದಾ)ಂ*
*(ಕವಿರಾಜಮಾರ್ಗಂ ೨-೯೯)*
*ಉತ್ಸವದಿಂದೆ ಹಾಸ್ಯರಸಮಾ ಮಧುರೋಕ್ತಿಗಳಿಂದಮಲ್ತೆ ಬೀ*
*ಭತ್ಸರಸಾಂತರಂ ಶಿಥಿಲಬಂಧನದಿಂದ ಸತತಂ ಭಯಾನಕೋ*
*ದ್ಯತ್ಸುರಸಂ ಕರಂ ವಿಷಮ ಬಂಧನದಿಂ ನೃಪತುಂಗದೇವ ಮಾ*
*ರ್ಗೋತ್ಸವಮೂರ್ಜಿತೋಕ್ತಿಗಳಿನಕ್ಕತಿರೌದ್ರರಸಂ ರಸಾವಹಂ*
*(ಕವಿರಾಜಮಾರ್ಗಂ ೨-೧೦೦)*

ರಸವಿಶೇಷ, ಅದರಸ್ವರೂಪ, ರಸಗಳ ಸಂಖ್ಯೆಯ ಕುರಿತು ಕವಿರಾಜಮಾರ್ಗಕಾರನು ಮೇಲಿನಂತೆ ವಿವರಿಸಿದ್ದಾನೆ. ಸುಕುಮಾರ ವೃತ್ತಿಗಳಿಂದ ಪ್ರಸನ್ನತೆಯು ಬರುತ್ತದೆ. ಉಕ್ತಿಗೂ ರಸಕ್ಕೂ ಇರುವ ಸಂಬಂಧ ಮುಖ್ಯವೆಂದು ಅವನ ವಾದ ಭಾರತೀಯ 'ಕಾವ್ಯಮೀಮಾಂಸೆಯಲ್ಲಿ ರಸ ಸಿದ್ಧಾಂತವು ಪ್ರಾಚೀನವಾದುದು. ಒಂದು ದೃಷ್ಟಿಯಿಂದ ರಸ ಸಿದ್ಧಾಂತವನ್ನು ಭಾರತೀಯ ಕಾವ್ಯ ಮೀಮಾಂಸೆಯ ಅಡಿಗಲ್ಲು ಎಂದು ಕರೆಯಬಹುದು. ಇದನ್ನು ಭಾರತೀಯ ಆದಿ ಆಲಂಕಾರಿನಾದ ಭರತನೇ ಪ್ರತಿಪಾದಿಸಿದ್ದಾನೆ. ಕಾಲಾನಂತರದಲ್ಲಿ ರಸ ಸಿದ್ಧಾಂತದ ಪ್ರಾಮುಖ್ಯತೆಯು ಹೊರಟು ಹೋಗಿ ಅದರ ಬದಲು ಗುಣ; ರೀತಿ; ಅಲಂಕಾರ; ಧ್ವನಿ ಮುಂತಾದ ಪ್ರಸ್ಥಾನಗಳು ಬಂದವು. ರಸವೆಂಬ ಮಾತು ಪ್ರಾಚೀನವಾದುದು ಎಂಬುದರಲ್ಲಿ ಎರಡು ಮಾತಿಲ್ಲ. 'ರಸ' ಎಂಬುದು 'ರಸ್' ಎಂಬ ಮಾತಿನಿಂದ ಬಂದಿದೆ. ರಸ ಎಂದರೆ ರುಚಿನೋಡು ಎನ್ನುವ ಅರ್ಥವಿದೆ. ಉಪ್ಪು ಹುಳಿ; ಖಾರ ಮೊದಲಾದ ಷಡ್ರಸಗಳು ಇದರಿಂದ ಸಿದ್ಧವಾದವುಗಳು. ಇನ್ನೊಂದು 'ಅರ್ಷ' ಎನ್ನುವ ಧಾತುವಿನಿಂದ ಬಂದಿದೆ. 'ಅರ್ಷ' ಎಂದರೆ ಹರಿಯುವಿಕೆ ಎನ್ನುವ ಅರ್ಥವಿದೆ. ವನಸ್ಪತಿಗಳಲ್ಲಿ ಹರಿಯುವ ದ್ರವ ಅಥವಾ ಸಾರ; ಸೋಮರಸ ಮುಂತಾದ ಅರ್ಥಗಳೂ ಇವೆ.

ಅಥರ್ವವೇದದಲ್ಲಿಯೂ ರಸವೆಂಬ ಮಾತಿನ ಉಲ್ಲೇಖವಿದೆ. ಅದರಲ್ಲಿ ಒಂದು ಕಡೆ ಮಂತ್ರತಂತ್ರಾದಿಗಳ ಪರಿಣಾಮವನ್ನು: ಮತ್ತೊಂದು ಕಡೆ ಉನ್ನತ ತತ್ವಚಿಂತನೆಯನ್ನು ಸೂಚಿಸುತ್ತದೆ. ಅದರಲ್ಲಿ ರಸವೆಂದರೆ ಮಾಧುರ್ಯವೆಂಬ ಅರ್ಥವೂ ಬಂದಿದೆ.

ಉಪನಿಷತ್ತುಗಳಲ್ಲಿಯೂ ರಸವೆಂಬ ಪದದ ಬಳಕೆಯಿದೆ. ರಸವೆಂದರೆ ಸಾರಭೂತವಾದ ತತ್ವವೆಂಬ ಅರ್ಥವು ಅದರಲ್ಲಿದೆ. ತೈತ್ತೀರಿಯೋಪನಿಷತ್ತಿನಲ್ಲಿ 'ರಸೋ ವೈ ಸಃ' ಎಂಬ ಮಾತು ಬರುತ್ತದೆ. ಉಪನಿಷತ್ತಿನ ಪ್ರಕಾರ ಅದೊಂದು ಆನಂದವಾದ ಸ್ಥಿತಿಯೂ ಹೌದು. ಭಗವದ್ಗೀತೆಯಲ್ಲಿ ರಸವೆಂದರೆ – ಇಂದ್ರಿಯಗಳನ್ನು ಆಕರ್ಷಿಸುವ ಬಯಕೆ. ಅದಕ್ಕೂ ರುಚಿಗೂ ಸಂಬಂಧವನ್ನು ಕಲ್ಪಿಸಲಾಗಿದೆ. ತರ್ಕ ಮೀಮಾಂಸೆ ಮೊದಲಾದ ಶಾಸ್ತ್ರಗ್ರಂಥಗಳಲ್ಲಿಯೂ ರಸವೆಂಬುದಕ್ಕೆ ರುಚಿಯೆಂಬ ಅರ್ಥವು ಬಂದಿದೆ. ಉಪ್ಪು ಹುಳಿ, ಖಾರ ಮೊದಲಾದವು ಷಡ್ರಸಗಳು ಕಾವ್ಯಾನುಭವಕ್ಕೆ ಇದನ್ನು ಹೋಲಿಸಲಾಗಿದೆ. ರಾಮಾಯಣದಲ್ಲಿಯೂ ರಸದ ಉಲ್ಲೇಖವಿದೆ.

ರಸವನ್ನು ಭರತನು ಪ್ರಸ್ತಾಪಿಸಿರುವುದು ಮಾನಸಿಕ ವಿಶ್ಲೇಷಣೆಯ ಹಿನ್ನೆಲೆಯಲ್ಲಿ ಪ್ರೇಕ್ಷಕನ ಮೇಲೆ ನಾಟಕವೊಂದು ಬೀರುವ ಪ್ರಭಾವ ಮತ್ತು ಅನುಭವವು ಭರತನ ರಸಸೂತ್ರದಲ್ಲಿ ಮುಖ್ಯವಾದುದು. ಅನಂತರ ಅಭಿನವಗುಪ್ತನು ಭರತನ ರಸಸೂತ್ರದ ಕುರಿತು ವಿವರವಾಗಿ ಚರ್ಚಿಸಿದ.

ರಸಗಳ ಕುರಿತಂತೆ ಕವಿರಾಜಮಾರ್ಗಕಾರನು ಹೀಗೆ ವಿವರಿಸಿದ್ದಾನೆ.

ಭರತನಿಗೆ ರಸದ ಪ್ರಶ್ನೆ ಪೂರ್ತಿಯಾಗಿ ಪ್ರಯೋಗಿಕವಾದುದು ಮತ್ತು ಅದು ನಾಟಕದ ಅಂಗಾಂಶಗಳ ಪೂರ್ಣ ವಿಶ್ಲೇಷಣೆಯ ಆಧಾರದ ಮೇಲೆ ನಿಂತಿದೆ. ಈ ಅಂಶಗಳು ನಾಟಕದಲ್ಲಿ ಸಂಯೋಜಿತವಾದಾಗ ಹೇಗೆ ರಸದಲ್ಲಿ ಪರ್ಯವಸಾನವಾಗುತ್ತದೆ

ಎನ್ನುವುದು ಭರತನಿಂದ ರಸಸೂತ್ರ ಎಂಬ ಸೂತ್ರದಲ್ಲಿ ಹೇಳಲ್ಪಟ್ಟಿದೆ. ಆ ಸೂತ್ರ ಹೀಗಿದೆ:

"ವಿಭಾವಾನುಭಾವ – ವ್ಯಭಿಚಾರಿ – ಸಂಯೋಗಾತ್ ರಸನಿಷ್ಪತ್ತಿಃ"

ಗುರಿಯೊಂದನ್ನು ಸಾಧಿಸುವ ದಿಕ್ಕಿನಲ್ಲಿ ಸಾಗಿರುವ ಕ್ರಿಯಾಸರಣಿಯೊಂದರ ಮುಖ್ಯ ಮೂಲ ಒಂದು ಭಾವವಾಗಿರುತ್ತದೆ ಎಂಬುದನ್ನು ನಾವು ನಿಜಜೀವನದಲ್ಲಿ ಕಾಣುತ್ತೇವೆ. ಅದು ಒಂದು ಸಂದರ್ಭದಿಂದ ಒಂದು ಕೇಂದ್ರದ ಕಡೆಗೆ ಪ್ರಚೋದಿತವಾಗುತ್ತದೆ. ಆದ್ದರಿಂದ ಆ ಸಂದರ್ಭವನ್ನು ಆ ಭಾವದ ಕಾರಣ ಎಂದು ಪರಿಗಣಿಸಲಾಗಿದೆ. ಈ ಭಾವವು ಗುರಿಮುಟ್ಟುವವರೆಗೆ ಇರುತ್ತದೆ. ಕಣ್ಣು ಮತ್ತು ಹುಬ್ಬುಗಳ ವಿಲಕ್ಷಣ ಚಲನಗಳು, ಮುಖದ ಬಣ್ಣದ ವ್ಯತ್ಯಾಸ, ಪ್ರೇಮದ ಸಾಮಾನ್ಯ ವರ್ತನೆಯಲ್ಲಿ ಆರ್ದ್ರತೆ ಮೊದಲಾದ ದೈಹಿಕ ಮತ್ತು ಮಾನಸಿಕ ಬದಲಾವಣೆಗಳ ಮೂಲಕ ಈ ಭಾವವು ತನ್ನನ್ನು ಅಭಿವ್ಯಕ್ತಗೊಳಿಸಿಕೊಳ್ಳುತ್ತದೆ. ಆದ್ದರಿಂದ ಈ ಬದಲಾವಣೆಗಳು ಆ ಭಾವದ ಪರಿಣಾಮ ಗಳು. ಆ ಸ್ಥಾಯಿಭಾವದ ಜೊತೆಯಲ್ಲಿ ನಿರ್ವೇದ, ಗ್ಲಾನಿ ಮೊದಲಾದ ಕೆಲವು ಕ್ಷಣಿಕಭಾವಗಳು ಬರುತ್ತವೆ. ಅವುಗಳನ್ನು ಸಹಚಾರಿಭಾವಗಳೆಂದು ಪರಿಗಣಿಸಿದೆ. ನಿಜಜೀವನದಲ್ಲಿ ಆಗುವುದು ಇದೇ.

ಆದರೆ ರಂಗದ ಮೇಲೆ ಪ್ರದರ್ಶಿತವಾಗಿ, ಪ್ರೇಕ್ಷಕನಿಂದ ಅನುಭೂತವಾಗುವ ಸ್ಥಾಯಿಭಾವದ ವಿಷಯದಲ್ಲಿ ನಾಟಕದ ನಾಯಕನ ಪಾತ್ರವನ್ನು ವಹಿಸಿರುವ ನಟನು ಎದುರಿಸುವ ಸನ್ನಿವೇಶವನ್ನು ಅವನ ಭಾವದ ಕಾರಣವೆಂದು ಹೇಳಲಾಗದು. ಅಂತೆಯೇ ಪ್ರೇಕ್ಷಕನು ಅನುಭವಿಸುವ ಭಾವವು ಆ ಸನ್ನಿವೇಶದಿಂದ ಜನಿಸಿದ್ದೆಂದು ಹೇಳಲಾಗದು. ನಟನಿಗಾಗಲಿ, ಪ್ರೇಕ್ಷಕನಿಗಾಗಲಿ ಆ ಸನ್ನಿವೇಶವು ಪ್ರದರ್ಶಿತವಾಗುವುದಿಲ್ಲ.

ನಾಗವರ್ಮನು ಕರುಣ: ವೀರ: ರೌದ್ರ: ಅದ್ಭುತ; ಹಾಸ್ಯ: ಬೀಭತ್ಸ್ಯ; ಭಯಾನಕ ಮುಂತಾದ ರಸಗಳ ಕುರಿತು ಹೇಳಿ ರಸಗಳಿಗೂ ಬಣ್ಣಗಳಿಗೂ ಸಂಬಂಧವನ್ನು ವಿವರಿಸಿದ್ದಾನೆ.

ವೀರಂ ಗೌರಂ ರೌದ್ರಮ
ದಾರಕಂ ಪೀತಮದ್ಭುತಂ ಶ್ಯಾಮಂ ಶೃಂ ।
ಗಾರಂ ಶ್ವೇತಂ ಹಾಸ್ಯಂ
ಕಾರುಣ್ಯಂ ಧೂಮ್ರಸಿತಮುಟಿದುವವೆರಡುಂ ॥ (ಸೂತ್ರಂ ೨೦೮)
ಭಾರತಿಯ ಕೊಂಕು ಸತ್ವೋ
ದಾರತೆ ಸರಸಾರ್ಥಮುದ್ಧತ ಸ್ಥಿತಿಯಿವಜೆಂ
ಭಾರತಿ ಸಾತ್ವತಿ ಕೈಶಿಕಿ
ಯಾರಭಟಿಯೆನಿಪ್ಪ ವೃತ್ತಿಗಳ್ ನಾಲ್ಕಕ್ಕುಂ. (ಸೂತ್ರಂ ೨೯)

ವೀರಗೌರ, ಅದ್ಭುತ ಪೀತ, ಶ್ಯಾಮ (ಕಪ್ಪು) ಬಿಳಿ + ಹಾಸ್ಯ, ಕರುಣ – ಧೂಮ ಎಂದು ಹೆಸರಿಸಿ ಭಾರತಿ, ಸಾತ್ವಕಿ, ಕೈಶಿಕಿ, ಆರಭಟಿಯನಿಪ್ಪ ನಾಲ್ಕು ವೃತ್ತಿಗಳ ಕುರಿತು ಹೇಳಿದ್ದಾನೆ. (ರೀತಿ, ಕ್ರಮ, ರಸ, ನಿರೂಪಣಾಧಿಕರಣ ೨೦೮–೨೯)

*ವಿವರಗಳಿಗೆ ನೋಡಿ: ಜಿ.ಟಿ.ದೇಶಪಾಂಡೆ ೨೦೦೦ ಅಭಿನವಗುಪ್ತ.*

## ೬೨೫. ರಸಸಿದ್ಧ

'ಜ್ಯೋತಿ (ಅಗ್ನಿ – ಸೂರ್ಯ) ಸಂಕೇತದಿಂದ ಸೂಚಿತವಾದ ಸಂಪ್ರದಾಯವು ಅಂದಿನ ಯಾಜಕ ಋಷಿವರ್ಗದ್ದು: ಆಪ: ರಸ ಸಂಕೇತದಿಂದ ಸೂಚಿತವಾದ ಸಂಪ್ರದಾಯವು ಯತಿ – ಮುನಿ – ಯೋಗಿಗಳದು. ಈ 'ರಸ'ದ ಅನುಸಂಧಾನವು ಜೀವನದ ವಿವಿಧ ಕ್ಷೇತ್ರಗಳಿಗೆ ನೀಡಿರುವ ಕಾಣಿಕೆ ಉಲ್ಲೇಖನೀಯವಾಗಿದೆ. ಸಿದ್ಧರಲ್ಲಿ, ರಸೌಷಧಿಗಳಲ್ಲಿ ಪ್ರಗತಿಯನ್ನು ಹೊಂದಿದ 'ರಸಸಿದ್ಧ'ರ ಪರಂಪರೆ ಒಂದು ಇತ್ತು. ಸಂಗೀತ – ನರತ್ಯ, ತಾಳ – ಲಯದಲ್ಲಿ ಲೀನರಾಗಿ ಇದರಲ್ಲಿ ಪಡೆದ ಸಿದ್ಧಿಯ ಫಲವಾಗಿ 'ರಾಗ' – ರಸದ ಕಾಣಿಕೆ ದೊರೆಯಲು ಕಾರಣರಾದವರು, ಈ 'ರಸಾನಂದಿ'ಗಳ ಬಳಗದವರೆ. 'ರಾಗ ರಸ, ಪದ ಕಸ' ಎಂಬ ಒಂದು ಗಾದೆಯಂತೆ, ಪದ್ಯ ರಚನೆಯಲ್ಲಿ, ಕವಿತ್ವದಲ್ಲಿ ಕಥಾರಚನೆಯಲ್ಲಿ, ನಾಟಕ ರಚನೆಯಲ್ಲಿ, ರಸಾಸ್ವಾದನ –ಸಮುದ್ಭೂತ ಆನಂದವನ್ನು ಲೋಕಕ್ಕೆ ನೀಡಿದ ಮೊದಲಿಗರ ಪೀಳಿಗೆಯು ಈ ಸಿದ್ಧಯೋಗಿಗಳಿಂದಲೆ ಪ್ರಾರಂಭವಾಗಿದೆ. 'ರಸೋ ವೈಸಃ' ಎಂಬ ಆನಂದರೂಪ ಬ್ರಹ್ಮಸಿದ್ಧಿಯ ಯೋಗ, ಕುಂಡಲಿನೀ ಯೋಗದ ಪರಮಸಿದ್ಧಿ ಇಂತಿವೆಲ್ಲವೂ, ಆಪ: ರಸ ಸಂಪ್ರದಾಯದ ಶಾಖೋಪಶಾಖೆಗಳ ನಾನಾವಿಧದ ಸಿದ್ಧಿಗಳಗಿವೆ. ಮಹಾಯೋಗಿ ರುದ್ರ – ಶಿವನಿಂದ ಅನೇಕ ಜ್ಞಾನಶಾಖೆಗಳು ಪ್ರಾರಂಭವಾದ ಪವಾಡಕಥೆಗಳು ಇದಕ್ಕೆ ನಿದರ್ಶನ. ಕಮಲಾಸನಸ್ಥ ಸರಸ್ವತಿಯು ನಾನಾ ಕಲಾ – ಸಾಹಿತ್ಯದ ಅಧಿದೇವಿ, ಎಂದರೂ 'ರಸ'ವೆ ಈ ಎಲ್ಲ ವಿದ್ಯೆಗಳ ಉಗಮಸ್ಥಾನವೆಂದು, ಆ ದೇವಿಯು ಪ್ರಾತಿನಿಧಿಕ ಸಂಕೇತಗಳಿಂದಲೂ ಸಿದ್ಧವಾಗುತ್ತದೆ. ಋಗ್ವೇದದೊಳಗಿನ ಸರಸ್ವತಿಯ ವರ್ಣನೆಗಳಲ್ಲಿ ಈ ದೇವಿಯು ಆಪ: ರಸದ ಪ್ರತೀಕವೆಂಬ ಮಾತು ನಿಃಸಂದಿಗ್ಧವಾಗಿದೆ. ಅಲ್ಲದೆ, ಪುರಾಣಕಾಲದಿಂದ ಪ್ರಚಲಿತವಿರುವ ಪ್ರತಿಮಾಶಾಸ್ತ್ರದಂತೆ ಸರಸ್ವತಿಯು ಶುಭ್ರ – ಪದ್ಮಾಸನಸ್ಥಳೆಂಬ ಸಂಕೇತದಿಂದ ಈ ದೇವಿಯು ಆಪ: ರಸ ಸ್ವರೂಪಿಯಾಗಿರುವುದನ್ನೆ ಸೂಚಿಸಿದಂತಿದೆ. 'ಆಪವೇ ಪುಷ್ಕರ (ಕಮಲ)' ಎಂದು ಶತಪಥ ಬ್ರಾಹ್ಮಣದಲ್ಲಿ ಹೇಳಿದೆ. ಎಂದರೆ ಪುಷ್ಕರ (ಕಮಲ) ಆಸನವೆಂಬ ಸಂಕೇತದಲ್ಲಿ ಈ ದೇವಿಯ ಮೂಲ ಸ್ವರೂಪದ ಸೂಚನೆಯೆ ಇದೆ ಎಂದು ಶಂಬಾ ಜೋಶಿ ಹೇಳುತ್ತಾರೆ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೩ ಪುಟ. ೨೩೫*

## ೬೨೬. ರಾಗಹೇತು

*ಅಂತು ಸಕಲದಿಗ್ವಲಯಮಂ ನಿಜಪ್ರಭೆಯಿನಲಂಕರಿಸುವ ಸುಪ್ರಭೆಯೆಂಬ ಸಿವಿಗೆಯನೇಱಿ* ***ರಾಗಹೇತುಕಂ***

*ತಾನಾಗಿಯುಂ ತನಗೆ ವಿರಾಗಹೇತುವಾದ ಸಹೇತುಕವನಕ್ಕೆ ಸಕಲಭುವನಭವನ ಪಾವನಮಪ್ಪ ಪರಮೇಶ್ವರಂ ಬರೆ;*

*(ಅಜಿತತೀರ್ಥಂಕರ ಪುರಾಣ ತಿಲಕಂ ೬–೮೮)*

ರಾಗಹೇತುವೆಂದರೆ ಅನುರಾಗ ಕಾರಣವಾಗಿ ಎಂದರ್ಥ. ಸುಪ್ರಭೆಯೇ ರಾಗಹೇತು (ರಾಗ ಕಾರಣ) ವಾದಳು ಎಂದು ಮೇಲಿನ ಪದ್ಯಭಾಗವು ವಿವರಿಸುತ್ತದೆ.

*ಆರನಜಿಯದೊ ರಾಗಂ (ಶಾಂತಿಪುರಾಣ ೮-೬೧)*

ಸೂರ್ಯನ ರಾಗವೆ ಕುಂಕುಮ ವರ್ಣವಾಗಿ ಪಶ್ಚಿಮ ದಿಕ್ಕನ್ನು ವಿಶಾಲವಾಗಿ ಅಲಂಕರಿಸಿತು. ರಾಗವು ಬೇರೆ ಬೇರೆ ಅರ್ಥಗಳಲ್ಲಿ ಬಳಕೆಯಾಗುತ್ತವೆ. ಒಂದು ರಾಗವೆಂದರೆ ವಿಶ್ವಾಸ, ಪ್ರೀತಿಯೆಂಬ ಅರ್ಥದಲ್ಲಿ. ಮತ್ತೊಂದು ಸಂಗೀತದಲ್ಲಿ ಬಳಕೆಯಾಗುವುದು. ಇದು ತಾಳಲಯಬದ್ಧವಾದ ಸ್ವರವಿನ್ಯಾಸವನ್ನು ಸಂಗೀತದಲ್ಲಿ ರಾಗವೆಂದು ಕರೆಯುತ್ತಾರೆ. ಸಂಗೀತದಲ್ಲಿ ಪುರುಷ; ಸ್ತ್ರೀ; ನಪುಂಸಕ ರಾಗಗಳಿವೆಯೆಂದು ಹೇಳುತ್ತಾರೆ. ಭೈರವಿ ಕೌಶಿಕಿ; ಹಿಂದೋಳ; ದೀಪ; ಶ್ರೀ – ಇವು ಮೂಲರಾಗಗಳೆಂದು ಕರೆಯುತ್ತಾರೆ. ರಾಗವೆಂದರೆ ಅನುರಾಗ; ಲೇಪನವೆಂಬ ಅರ್ಥವೂ ಇದೆ. ಶಾಂತಿಪುರಾಣದಲ್ಲಿ ಈ ಅರ್ಥದಲ್ಲಿಯೇ ಹೇಳಲಾಗಿದೆ.

ರಾಗತತ್ತ್ವವನ್ನು ಅಭಿನವಗುಪ್ತ ಹೀಗೆ ವಿವರಿಸಿದ್ದಾನೆ:

ಕ್ರಿಯಾ ಮತ್ತು ಜ್ಞಾನಶಕ್ತಿಗಳು ಎಲ್ಲಾ ಜೀವಾತ್ಮರಿಗೂ ಸಮಾನವಾಗಿವೆ. ಆದ್ದರಿಂದ ಪ್ರತಿಯೊಬ್ಬ ಜೀವನೂ ತನ್ನ ಸ್ವಂತ ಕ್ರಿಯಾ ವಿಷಯವನ್ನು ಆರಿಸಿಕೊಳ್ಳುವುದು ಏತಕ್ಕೆ? ಈ ಪ್ರಶ್ನೆಗೆ ಉತ್ತರ ನೀಡಲು ಪ್ರತ್ಯಭಿಜ್ಞಾದರ್ಶನವು ರಾಗ ಎಂಬ ತತ್ತ್ವವನ್ನು ಅಂಗೀಕರಿಸುತ್ತದೆ. ವ್ಯಕ್ತಿಯೊಬ್ಬನು ತನಗೆ ತಿಳಿದಿರುವ ಉಳಿದೆಲ್ಲವನ್ನೂ ಬಿಟ್ಟು ತನ್ನ ನಿರ್ದಿಷ್ಟ ಕ್ರಿಯೆಯೊಂದಕ್ಕೆ ನಿರ್ದಿಷ್ಟ ವಿಷಯವೊಂದನ್ನು ಮಾತ್ರ ಆಯ್ಕೆಮಾಡುವುದಕ್ಕೆ ಕಾರಣವಾದ ಕ್ರಿಯೆಯೇ ರಾಗ; ಈ ರಾಗವು ಯಾವುದೇ ನಿರ್ದಿಷ್ಟ ವಸ್ತುವಿಗೆ ಸಂಬಂಧಿಸಿರದಿದ್ದರೂ ಅದನ್ನು ಒಂದು ವಿಷಯದ ಬಗ್ಗೆ ಇಚ್ಛೆ ಎನ್ನಬಹುದು. ರಾಗವು ಅನುರಾಗದ ಸಂಬಂಧವಿರಿಸಿಕೊಂಡಿದೆಯೆನ್ನುವುದು ಗಮನಾರ್ಹ.

*ವಿವರಗಳಿಗೆ ನೋಡಿ: ಜಿ.ಟಿ.ದೇಶಪಾಂಡೆ ೨೦೦೦ ಅಭಿನವಗುಪ್ತ ಪುಟ. ೫೮*

**೬೨೭. ರಾಜಧರ್ಮ**

*ಈಯಲಿಜಿಯಲ್ ಶರಣ್ಬುಗೆ*
*ಕಾಯಲ್ ಕ್ಷತ್ರಿಯರೆ ಬಲ್ಲರ ಬ್ರಹ್ಮಣ್ಯಂ ॥*
*ಭೋಯೆನಲುಂ ಬ್ರಾಹ್ಮಣರವಿ*
*ಧಾಯೆನಲುಂ ಬಲ್ಲರೀಯಲಿಜಿಯಲವರೆಂತಜಿವರ್...*

*(ಸಾಹಸ ಭೀಮ ವಿಜಯ (೨-೧೬)*

ದಾನ ಮಾಡುವುದು, ಯುದ್ಧ ಮಾಡುವುದು ಹಾಗೂ ಮೊರೆಹೊಕ್ಕವರನ್ನು ಕಾಪಾಡುವುದು – ಈ ಮೂರನ್ನು ಕ್ಷತ್ರಿಯರೇ ಬಲ್ಲರು. ಗೌರವದಿಂದ ಕರೆಯುವಾಗ 'ಭೋ' ಎಂದೂ, ಯಾರಾದರೂ ಕೊಲ್ಲಲು ಬಂದಾಗ 'ಧೋ' ಎಂದೂ ನುಡಿಯಲು ಮಾತ್ರ ಬಲ್ಲರಲ್ಲದೆ ಬ್ರಾಹ್ಮಣರು ಯುದ್ಧ ಮಾಡಲು ಅದೆತ್ತ ಬಲ್ಲರು? ಬ್ರಾಹ್ಮಣರ ಬಗ್ಗೆ

ಬಂದಿರುವ ಟೀಕೆಯಿದು. ಆದರೆ ಕ್ಷತ್ರಿಯರು ಏನು ಮಾಡಬೇಕೆಂದು ಹೇಳುತ್ತದೆ. ಇದು ಕ್ಷತ್ರಿಯ ಧರ್ಮವನ್ನೂ ಸೂಚಿಸುತ್ತದೆ.

ದಾನಂ ಪ್ರಿಯವಾಕ್ಸಹಿತಂ
ಜ್ಞಾನಮಗರ್ವಂ ಕ್ಷಮಾನ್ವಿತಂ ಶೌರ್ಯಮೆನಿ।
ಪ್ಪೀ ನುಡಿಯನೆ ನುಡಿಯಿಸಿದುದು
ದಾನಂ ಜ್ಞಾನಂ ಕ್ಷಮಾಗುಣಂ ಧರ್ಮಜನಾ ॥

(ಸಾಹಸ ಭೀಮ ವಿಜಯ ೩-೧೯)

ಈ ಪದ್ಯದ ವಿವರಣೆಯನ್ನು ಈ ರೀತಿಯಲ್ಲಿ ನೀಡಲಾಗಿದೆ. ದಾನವೆಂದರೆ ಸವಿಮಾತಿನಿಂದ ಕೂಡಿರಬೇಕು; ಜ್ಞಾನವು ಗರ್ವರಹಿತವಾಗಿರಬೇಕು; ಶೌರ್ಯವು ಕ್ಷಮಾಯುಕ್ತವಾಗಿರಬೇಕು. ಧರ್ಮರಾಜನ ದಾನ, ಜ್ಞಾನ, ಶೌರ್ಯಗಳು ಹೀಗಿದ್ದು ಹೊಗಳಿಸಿಕೊಂಡುವು. ಇದು ರಾಜಧರ್ಮವನ್ನು ಸೂಚಿಸುತ್ತದೆ. ದಾನಕ್ಕೆ ಸವಿಮಾತು. ಜ್ಞಾನಕ್ಕೆ ಗರ್ವರಾಹಿತ್ಯತೆ ಶೌರ್ಯ ಕ್ಷಮಯುಕ್ತತೆ ಇರಬೇಕೆಂಬುದು ಅದರ ಭಾವಾರ್ಥವಾಗಿದೆ. ವ್ಯಾಖ್ಯಾನ ಶಕ್ತಿ, ವೀರತ್ವ, ಮೇಧಾಶಕ್ತಿ, ಪರಿಣಾಮದರ್ಶಿತ್ವ, ನೀತಿನೈಪುಣ್ಯ, ಕರ್ತವ್ಯದ ವಿವೇಕಗಳು ರಾಜಧರ್ಮಗಳಾಗಿವೆ.

ಅಸಮಾನವಾದ ಪರಾಕ್ರಮದ ರೀತಿ. ಔದಾರ್ಯ ಗುಣ. ನೇರವಾದ ಸತ್ಯವಾಕ್ಕು – ಇವು ಮೂರು ನಾಲ್ಕೇ ರಾಜಗುಣಗಳು. (ಪಂಪ ಭಾರತ ೧೨-೯೩)

ರಾಜನಲ್ಲಿ ಅಷ್ಟದಿಕ್ಪಾಲರ ಎಲ್ಲ ಗುಣಧರ್ಮಗಳು ಸಮಾವಿಷ್ಟವಾಗಿರುವುದರಿಂದ ಅವನು ಅವರಿಗೆ ಸಮನು ಎನ್ನವುದು ಮನುವಿನ ಅಭಿಪ್ರಾಯ. ಅವನ ಪ್ರಕಾರ ಪ್ರತಿದಿನ ಲಕ್ಷ ಗೋದಾನವುಳ್ಳ ಯಜ್ಞವನ್ನು ಮಾಡಿದ ಫಲವು ರಾಜನಿಗೆ ಧರ್ಮಬದ್ಧವಾದ ಪ್ರಜಾಪಾಲನೆಯಿಂದ ಲಭಿಸುವುದು.

*ವಿವರಗಳಿಗೆ ನೋಡಿ: ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೭-೭, ೮-೩೦೭*

**೬೨೮. ರಾಜ ಧೈರ್ಯ**

*ತಾಱವಟೞಾಗೆ ಜಯಂ ಜೊ*
*ಮ್ಮೇಱಿಸುವ ಟಿಂಟಣಿಸುವರಸನರಸನೆ ವಿರಸಂ*
*ಬೇಱಿ ನಯಮಿರೆ ವಿರೋಧಿಗೆ*
*ಮಾಟೞಂಪೊಂ ತನ್ನ ಮೇಲೆ ತಾಂ ಮರಗಡಿವೊಂ ॥*

*(ಶಾಂತಿಪುರಾಣ ೨-೪೧)*

ದೊರೆಗೆ ದಡೂತಿ ದೇಹವಿದ್ದರೆ ಸಾಲದು, ಧೈರ್ಯವೂ ಬೇಕು, ವಿಜಗೀಷುತ್ವ ಇರಬೇಕು, ಪೂರ್ವಾಪರ ಫಲಗಳನ್ನು ಹಣವರಿತು ಹದವರಿತು ಅರಿಯಬಲ್ಲ ವಿವೇಕವೂ ಬೇಕು; ತನಗೆ ಬರಬೇಕಾದ ಗೆಲುವು ಸ್ವಲ್ಪ ಹೆಚ್ಚು ಕಡಮೆಯಾದಾಗ ಹೆದರಿ ಹಿಂದೆಗೆಯುವ ದೊರೆ ದೊರೆಯಲ್ಲ, ಆತ ಅಯೋಗ್ಯನೇ ಸರಿ. ಬೇರೆಯ ಉಪಾಯಗಳು ಇರುವಾಗ

ನೇರವಾಗಿ ಹಗೆಯ ಮೇಲೆ ದಂಡೋಪಾಯವನ್ನು ಕೈಕೊಂಡರೆ ಅದು ಮರವನ್ನು ಕಡಿದು ಮೈಮೇಲೆ ಹಾಕಿಕೊಂಡಂತೆ, ಹಗೆಯ ಒಡ್ಡನ್ನು ಬಡಿದು ಚೂರುಮಾಡಬಲ್ಲ ಕಸುವು ಇರುವ ರಾಜನೇ ಗಟ್ಟಿಗ, ಗೆಲುವಿಗೆ ಈಡು;

ಒದವಿದ ರಿಪುವಂ ಸೂೞೆ
ಲದಿಕ್ಕಿಗೆಲ್ದತುಳ ಬಲದ ಮಲ್ಲನುಮೆಚ್ಚಾ
ಡಿದ ಬಿಲ್ಲುಮಿರ್ದ ತೆಱನಿ
ರ್ಮದನಱಿಪುಗಮವನವಾರ್ಯ ವೀರ್ಯಂ ಶೌರ್ಯಂ ॥

(ಶಾಂತಿಪುರಾಣ ೨-೪೫)

ತನ್ನ ಮೇಲೆ ಏರಿಬಂದ ಹಗೆಯನ್ನು ತಿರುಗಿ ಏಳದಂತೆ ಮೆಟ್ಟಿಗೆದ್ದ ಎಣೆಯಿಲ್ಲದ ಮಲ್ಲನ್ನೂ, ಕಾಳಗದಲ್ಲಿ ಆತನು ಬಳಸಿದ ಬಿಲ್ಲೂ ಸುಭದ್ರವಾಗಿರುವ ಸ್ಥಿತಿಯನ್ನು ನೋಡಿದರೇನೇ ಅವನೆಂತಹ ಅಜೇಯ ವೀರನೆಂಬುದು ತಾನೇ ಸ್ಪಷ್ಟವಾಗುತ್ತದೆ. ಪ್ರಭುಶಕ್ತಿಯೂ ಜತೆಗೆ ಮಂತ್ರಶಕ್ತಿಯೂ ರಾಜನಿಗಿರಬೇಕು;

ಪೊಱಗಣರಿವರ್ಗಮಂ ತ
ಳ್ತಿಱಿದು ಗೆಲಲ್ಬರ್ಕುಮೊಳಗಣರಿಷಡ್ವರ್ಗಂ
ನೆಱೆದಿರೆ ಬಾರದು ಗೆಲಲದ
ನಱಿದೀ ಬಲದೇವನಂತು ಗೆಲ್ದರುಮೊಳರೇ ॥ (ಶಾಂತಿಪುರಾಣ ೨-೧೭)

ಹೊರಗಣ ಹಗೆಗಳನ್ನು ಅಡಗಿಸುವುದು ಸುಲಭವಾದರೂ ಒಳಗಿರುವ ಅರಿಷಡ್ ವರ್ಗವನ್ನು ಹತೋಟಿಯಲ್ಲಿಡುವುದು ಕಡುಕಷ್ಟವೆಂಬುದು ಮನನೀಯವಾದ ಮಾತು (ಭಾಸನ ಪ್ರತಿಮಾ ನಾಟಕದಲ್ಲೂ ಅನ್ಯತ್ರವೂ ಇದಕ್ಕೆ ಸಂವಾದಿಯಾದ ಹೇಳಿಕೆಗಳಿವೆ). ಒಮ್ಮೊಮ್ಮೆ ಬಂಧುಗಳ ಮಾತು ಕೇಳುವುದೊ, ಸಚಿವರ ಸಲಹೆ ಸ್ವೀಕರಿಸುವುದೊ ಎಂಬುದು ತಿಳಿಯದೆ ಒಡೆಯನಿಗೇ ಪೇಚಿಗೆ ಸಿಕ್ಕಿದಂತಾಗಿ ಒಳತೋಟಿ ಬರುತ್ತದೆ. ಭಿನ್ನಾಭಿಪ್ರಾಯಗಳು ಬಂದಾಗ ಅಂತರ್ಮುಖತೆಯೊಂದೇ ಆತನಿಗೆ ಆತ್ಮೀಯ ಸಲಹೆಗಾರನಾಗಬೇಕಾಗುತ್ತದೆ:

ಈ ಕುಲವೃದ್ಧ ಮಂತ್ರಿಯ ಮತಂ ನೃಪನೀತಿಯೊಳೊಂದಿ ನಿಂದುದ
ವ್ಯಾಕುಲಮೀ ಕುಮಾರನ ಮತಂ ಚಲಮುಂ ಪುದಿದಿರ್ದುದಿಂತಿವೇ
ಕೈಕ ವಿರುದ್ಧಮೆಂದುಭಯ ಪಕ್ಷ ವಿಲಂಭನದಿಂದ ವಿಲೋಲ ಡೋ
ಲಾಕುಲ ವೃತ್ತಿಯಾದುದಪರಾಜಿತ ರಾಜ ವಿರಾಜ ಮಾನಸಂ ॥

(ಶಾಂತಿಪುರಾಣ ೨-೬೩)

ಅಂತು ಸುಪ್ತಮಿನಾಚ್ಛೋದಮಾನಸ ಸರೋವರೋಪಮಾನಂ ನಿಮಿಲಿತಲೋಚನಂ ಪ್ರಸನ್ನಾದ್ರಾಶಯುಂ ಕಿರಿದು ಬೇಗಮಿನಿರ್ದು ತನ್ನ ಮನಮೆ ಮಧ್ಯಸ್ಥ ಮಂತ್ರಿಯಾಗಾಳೋಚಿಸಿ ನಿಶ್ಚಯಿಸಿ (೨-೬೩) ಕಾರ್ಯಪ್ರವೃತ್ತರಾಗುವುದುಂಟು. ಮೀನುಗಳೆಲ್ಲ ಮಲಗಿ ಶಾಂತವಾಗಿರುವುದರಿಂದ ತಿಳಿಯಾಗಿರುವ ಮಾನಸ ಸರೋವರ

ದಂತೆ ತನ್ನ ಕಣ್ಣುಗಳನ್ನು ಮುಚ್ಚಿಕೊಂಡು ಮನಸ್ಸಿನಲ್ಲಿ ಪ್ರಸನ್ನತೆಯುಂಟಾಗುವಂತೆ ಸ್ವಲ್ಪ ಸಮಯದವರೆಗೆ ಮೌನವಾಗಿದ್ದು ತನ್ನ ಮನದೊಡೆನೆಯೆ ಮಂತ್ರಾಲೋಚನೆ ಮಾಡಿಕೊಂಡು ಒಂದು ನಿರ್ಧಾರಕ್ಕೆ ಬಂದನಂತೆ – ಇದೇ ರಾಜನಿಗೆ, ರಾಜನೀತಿಗೆ, ಪ್ರಜಾಧರ್ಮಕ್ಕೆ ಒಪ್ಪುವ ರಾಜಮಾರ್ಗ, ಋಜುಮಾರ್ಗ. 'ಆತನು ನವಯುವಕನಾಗಿದ್ದರೂ ಯಾವುದೇ ಏಳು ವ್ಯಸನಗಳಿಗೆ ಒಳಗಾಗಿಲ್ಲ. ಶೂರನಾಗಿದ್ದರೂ ತನ್ನ ದೇಹ ರಕ್ಷಣೆಗೆ ಮಾತ್ರ ಪರಾಕ್ರಮವನ್ನು ಬಳಸುತ್ತಾನೆ. ರಾಜನೀತಿಶಾಸ್ತ್ರ ಪ್ರವೀಣನಾಗಿದ್ದರೂ ವಾಕ್ ಸಂಪತ್ತಿಯಿದ್ದರೂ ಮಂತ್ರಿಗಳ ಸಲಹೆ ಪಡೆಯುತ್ತಾನೆ. (೨–೪೩) ಎಂಬುದು ಗಮನಾರ್ಹ ವಾಗಿದೆ. ಯೋಗ್ಯವಾದ ಮಾತುಗಳನ್ನು ಮಂತ್ರಿಯೇ ಅಲ್ಲದೆ ಚಿಕ್ಕ ಮಕ್ಕಳು ಹೇಳಿದರೂ ವಿರೋಧಿಸದೆ ಒಪ್ಪಿಕೊಳ್ಳಬೇಕು(೨–೮೦). (ಹಂ.ಪ.ನಾ. ಶಾಂತಿಪುರಾಣದ ಮುನ್ನುಡಿ)

**೬೨೯. ರಾಜನೀತಿ**

*ಇದು ರಾಜ್ಯವಿದ್ಯೆಯೊಳಗಾ*
*ವುದು ವಿದ್ಯೆಯೊ ಷಡ್ಗುಣಂಗಳೊಳಗಾವ ಗುಣಂ ।*
*ಪುದಿದೊದವಿದ ಮೆಯ್ಗಾಪಿ*
*ಲ್ಲದರಣ್ಯದೊಳಿರ್ಪುದಾವ ನೀತಿಗಳೊಳಗೋ ॥ (ಆದಿಪುರಾಣ ೯–೯೧)*

ಸಾಮ, ದಾನ, ಭೇದ, ದಂಡ ರಾಜನಿಗೆ ಬೇಕಾಗಿರುವುದು. ರಾಜನಿಗೆ ಇರಬೇಕಾದ ಆರು ಗುಣಗಳು ಹೀಗಿವೆ: ಸಂಧಿ, ವಿಗ್ರಹ, ಯಾನ, ಆಸನ, ಸಂಶಯ ಮತ್ತು ದ್ವೈಧೀಭಾವ. ಇವುಗಳನ್ನು ರಾಜನ ಷಡ್ಗುಣಗಳೆಂದು ಕರೆಯುತ್ತಾರೆ.

ರಾಜನೀತಿ, ಸಕಲ ಶಾಸ್ತ್ರದ ಪ್ರಾವಿಣ್ಯತೆ, ಬ್ರಾಹ್ಮಣ ಜನ್ಮ, ನಿಶಿತಮತಿ, ಉದಾರತೆ, ಧೀರತೆ, ಪ್ರಭುಶಕ್ತಿ, ಮಂತ್ರಶಕ್ತಿಯು ರಾಜನಿಗಿರಬೇಕು. ಸಂಧಿ, ವಿಗ್ರಹ, ಯಾನ, ಆಸನ, ದ್ವೈಧ, ಸಂಶ್ರಯಗಳೆಂಬ ಆರು ಗುಣಗಳನ್ನು ರಾಜನು ಹೊಂದಿರಬೇಕು. ಧರ್ಮ, ಅರ್ಥ, ಕಾಮವೆಂಬ ತ್ರಿವರ್ಗಗಳಲ್ಲಿ ಶುದ್ಧಿಯನ್ನು ಕಾಪಾಡಬೇಕು ಎಂದು ನಾಗವರ್ಮನು ಕರ್ಣಾಟಕ ಕಾದಂಬರಿಯಲ್ಲಿ ಹೇಳುತ್ತಾನೆ (೨–೨೩).

ಪೊನ್ನನಲ್ಲಿ ರಾಜನೀತಿಶಾಸ್ತ್ರವೆಂಬ ನಾಟಕವನ್ನು ಆರಂಭಿಸುವುದಕ್ಕೆ ತಾನೆ ಸೂತ್ರಧಾರ ನಾಗಿ, ತನ್ನ ಮಂತ್ರಿ ಪ್ರಮುಖರೆದುರಿಗೆ ಆ ನಾಟಕದ ಪೂರ್ವರಂಗಕ್ಕೆ ಯಥೋಚಿತವಾದ ಪ್ರಸ್ತಾವನೆಯನ್ನು ರಚಿಸಿದನು. ಎಂಬ ಮಾತು ಬರುತ್ತದೆ.

ಪೊನ್ನನು ಇಲ್ಲಿ "ರಾಜನೀತಿಶಾಸ್ತ್ರನಾಟಕ" ವೆಂದು ಪ್ರಯೋಗಿಸಿದ್ದಾನೆ. ರಾಜನೀತಿ ಯೆಂದರೆ ರಾಜರಿಗೆ ಅತ್ಯವಶ್ಯಕವಾಗಿ ಇರಬೇಕಾದ ನೀತಿಶಾಸ್ತ್ರ. ಭಾರತದಲ್ಲಿ ನೀತಿಗಿರುವ ಪ್ರಾಧಾನ್ಯತೆಯನ್ನು ಇದು ವಿವರಿಸುತ್ತದೆ. "ರಾಜನೀತಿ"ಯೆನ್ನುವುದೇ ಪ್ರತ್ಯೇಕವಾದ ಶಾಸ್ತ್ರವಾಗಿದೆ ಎಂಬುದು ಗಮನಾರ್ಹ. ಈ ಕುರಿತು ಪೊನ್ನನು ಹೀಗೆ ಹೇಳಿದ್ದಾನೆ:

ಆದುದರಿಂದ ರಾಜನೀತಿಶಾಸ್ತ್ರದ ವಿಧಾನದಲ್ಲಿಯೂ ಹನ್ನೆರಡು ಬಗೆಯ ರಾಜರಲ್ಲಿಯೂ ಸಮರ್ಥನಾಗಿ ಪೂಜ್ಯನೆನಿಸಿಕೊಂಡಿರುವ ವಿಜಿಗೀಷುವು (ವಿಜಯಾ

ಪೇಕ್ಷಿಯು) ನಯೋಪಾಯವನ್ನು ಬಯಸುವುದಿಲ್ಲ; ಹಾಗೆಯೆ ವೈದ್ಯಶಾಸ್ತ್ರ ಸಂಪನ್ನನಾಗಿದ್ದು, ತ್ರಿದೋಷಗಳು ಸಮ ಪ್ರಮಾಣದಲ್ಲಿರುವ ಹಾಗೂ ಸಪ್ತಧಾತುಗಳನ್ನು ಸಮನಾಗಿಟ್ಟುಕೊಂಡಿರುವ ಆರೋಗ್ಯಶಾಲಿಯು (ತನ್ನ ಆರೈಕೆಗಾಗಿ) ಯಾರನ್ನಾದರೂ ಹಿತವಂತರನ್ನು ಬಳಿಯಲ್ಲಿಟ್ಟುಕೊಳ್ಳಲು ಬಯಸುವುದಿಲ್ಲ. ದಮಿತಾರಿಯಾದರೋ, ಖೇಚರರಲ್ಲಿ ಚಕ್ರವರ್ತಿ; ಶ್ರೇಷ್ಠನಾದವನು; ಅಸುರರನ್ನು ಗೆದ್ದವನು; ಉತ್ತಮರಾದ ಸಚಿವರನ್ನು ಇರಿಸಿಕೊಂಡವನು. ಆದುದರಿಂದ ಆತನು ಈವರೆಗೆ ಆತನ ದೃಷ್ಟಿಯಿಂದ "ಯಾತನ್ಯ"ರೂ(ಅಭಿಯೋಗಪಾತ್ರರೂ) ಆಜ್ಞಾವಿಧಿಗೆ ಪಾತ್ರರೂ ಆಗಿರುವ ನಮ್ಮಲ್ಲಿ ನಯೋಪಾಯವನ್ನು ಪ್ರಯೋಗಿಸಿದನು. ಆತನು ನಮಗೆ "ವ್ಯವಹಾರ ಸಮಾನ"ನೂ ಅಲ್ಲ; ಅಸಮಾನನೂ ಅಲ್ಲ. ಆದುದರಿಂದ ಈಗ ನಾವು ಯಾವ ರೀತಿಯಾಗಿ ನಡೆದುಕೊಳ್ಳಬೇಕು?" ಹೀಗೆಂದು ಪೂರ್ವಪಕ್ಷವನ್ನು ಮಂಡಿಸಿ, ಅದರ ಸಿದ್ಧಿಯನ್ನು ವಿವರಿಸುವುದಕ್ಕೆ ಅವಕಾಶವಾಗುವಂತೆ ನುಡಿದು ಮಾತನ್ನು ಮುಗಿಸಿದನು. ಆಗ ಆ ಅರಸನ ಮಾತೆಲ್ಲವನ್ನೂ ಸವಿಸ್ತರವಾಗಿ ವ್ಯಾಖ್ಯಾನಿಸಿ, ಸಕಲ ಸಚಿವ ಸಭೆಗಳನ್ನು ಚಕಿತಗೊಳಿಸಿದವನೂ, ರಾಜನೀತಿಶಾಸ್ತ್ರದ ಅನೇಕ ಬೀಜಗಳನ್ನು ಬಿತ್ತಿ(ಉಪಾಯಗಳನ್ನು ಪ್ರಯೋಗಿಸಿ)ಸಮಸ್ತ ಶತ್ರು ಸಚಿವರ ಬುದ್ಧಿವಂತಿಕೆಯನ್ನು ಸೋಲಿಸಿದವನೂ ಆದ ಸನ್ಮತಿಯೆಂಬ ಮಂತ್ರಿಯು ನುಡಿದನು ಎಂದು ಶಾಂತಿಪುರಾಣದಲ್ಲಿ ಬರುತ್ತದೆ.(೨–೩೫ ವ)

ಆರುಂ ಗುಣದೆರೆವೆಟ್ಟೀ
ರಾರುಂ ಮಂಡಲದ ನಾಭಿ ಷಡ್ಬಲದ ಬಲಂ ।
ಮೂರುಂ ಸಿದ್ಧಿಯ ನೆಲೆ ನಿಲೆ
ಮೂರುಂ ಶಕ್ತಿಯ ವಿಪಾಕಭೂಮಿ ದಲಾತಂ ॥ (ಶಾಂತಿಪುರಾಣಂ ೨–೪೬)

ಆತನು ಆರು ಗುಣಗಳಿಗೆ ಮೂಲಾಶ್ರಯನು; ಹನ್ನೆರಡು ರಾಜಮಂಡಲಗಳಲ್ಲಿ ಪ್ರಮುಖನಾದವನು; ಆರು ಬಗೆಯ ಬಲಗಳುಳ್ಳವನು; ಮೂರು ಬಗೆಯ ಸಿದ್ಧಿಗಳಿಗೆ ತವರು; ಮೂರು ಶಕ್ತಿಗಳಿಗೆ ವೃದ್ಧಿಸ್ಥಾನನು.

ರಾಜನು ಆರುಗುಣಗಳಿಗೆ; ಹನ್ನೆರಡು ರಾಜಮಂಡಲಗಳಿಗೆ ಪ್ರಮುಖನಾದವನು. ಇಲ್ಲಿ ಗಮನಿಸಬೇಕಾಗಿರುವುದು ಹನ್ನೆರಡು ರಾಜಮಂಡಲ. ರಾಜನ ಅಧಿಕಾರದ ವ್ಯಾಪ್ತಿಯನ್ನು ಇದು ಸೂಚಿಸುತ್ತದೆ.

ಐದು ಬಗೆಯ ಶತ್ರುಸಮೂಹವನ್ನೂ, ಪಂಚವಿಧವಾದ ದುರ್ಗಗಳನ್ನೂ, ಶತ್ರುಗಳ ಪಂಚ ಪ್ರಕಾರವಾದ ಮಂತ್ರೋಪಾಯಗಳನ್ನೂ ಸುಲಭವಾಗಿ ನಾಶಮಾಡಬಲ್ಲವು ಆತನ ಪ್ರಭುಶಕ್ತಿ ಹಾಗೂ ಮಂತ್ರಶಕ್ತಿಗಳು; ಅವು ಅಷ್ಟು ಪ್ರಚಂಡವಾಗಿವೆ...ಶಾಂತಿಪುರಾಣಂ ೨–೪೭)

ಮನು ಈ ಕೆಳಗಿನಂತೆ ಹೇಳಿದ್ದಾನೆ:

ರಾಜನು ಶಿಕ್ಷಕನಾಗಿರುವುದರಿಂದ ಅವನಿಗೆ ರಾಜನೀತಿ ಕರ್ಮಗಳಲ್ಲಿ ಅಶೌಚ

ದೋಷವಿಲ್ಲ. ಅದರಂತೆ ಚಾಂದ್ರಾಯಣಾದಿ ವ್ರತಗಳಲ್ಲಿ ನಿರತರಾದ ವ್ರತಿಗಳಿಗೂ ಹಾಗೂ ಯಾಗಗಳಲ್ಲಿ ಪ್ರವೃತ್ತರಾದ ಸತ್ರಿ(ದೀಕ್ಷಿತ)ಗಳಿಗೂ ಅಶೌಚದೋಷವಿಲ್ಲ. ಏಕೆಂದರೆ ಈ ಎಲ್ಲರೂ ಲೋಕಕಲ್ಯಾಣಕಾರಿಯಾದ ವಿಶೇಷ ಕರ್ಮಗಳಲ್ಲಿ ನಿರತರಾಗಿರುವರು.

ವೇದಸಂಸ್ಕಾರವಾದ ಉಪನಯನ ಸಂಸ್ಕಾರವನ್ನು ಹೊಂದಿದವನು ರಾಜನಾಗಿ ಪ್ರಜಾರಕ್ಷಣ ಕಾರ್ಯವನ್ನು ನ್ಯಾಯವಾಗಿ ಮಾಡಬೇಕು.

ಊರಿನಲ್ಲಿ ರಾಜನಿಲ್ಲದಿದ್ದರೆ ಎಲ್ಲರಿಗೂ ಪರಸ್ಪರ ಭಯವು. ಇಂತಹ ಆಪತ್ತಿನ ರಕ್ಷಣೆಗೆ ರಾಜನು ಬೇಕಾಗುವನು.

ರಾಜ್ಯಾರ್ಜನೆ. ರಾಜ್ಯರಕ್ಷಣೆ, ರಾಜ್ಯವಿಸ್ತರಣೆ, ಮತ್ತು ಇದರ ಅನುಭವ ರಾಜನ ಕರ್ತವ್ಯಗಳು ಎಂದು ಕೌಟಿಲ್ಯನ ಅಭಿಪ್ರಾಯ.

ನೃಪಸಭೆಯನ್ನೈದಲೆವೇಟ್ಟುಂ. ನೃಪರ್ ಮನ್ನಿಸುವ ಪುರುಷರಂ ಕಾಣಲೆವೇಟ್ಟುಂ, ಎತ್ತ

ಲಾನುಮರ್ಥಮಿಲ್ಲದಿರ್ದೊಡಂ ತನಗೆ ಬಂದನರ್ಥಮಂ ಪರಿಹರಿಸಲ್‌ಬಹುದು. (ಸಿ.ಪಿ.ಕೆ. ಪುಟ.೩೮)

ನೃಪಸಭೆಯನ್ನು ಪ್ರವೇಶಿಸಲೇಬೇಕು. ನೃಪರು ಮನ್ನಿಸುವ ಪುರುಷರನ್ನು ಕಾಪಾಡಲೇಬೇಕು. ಇದರಿಂದ ಪ್ರಯೋಜನವಿಲ್ಲದಿದ್ದರೂ ತನಗೆ ಬಂದ ಅನರ್ಥವನ್ನು ಪರಿಹರಿಸಿಕೊಳ್ಳಬಹುದು ಎಂಬ ರಾಜನೀತಿಯುಂಟು.

ಮೌರ್ಯರ ಕಾಲದಲ್ಲಿ ಪ್ರಭುತ್ವದ ಹತೋಟಿ ರಾಜನು ಧರ್ಮಶಾಸ್ತ್ರಗಳು ವಿಧಿಸಿರುವ ಕಟ್ಟುಕಟ್ಟಳೆಗಳು ಹಾಗೂ ದೇಶದಲ್ಲಿ ಪ್ರಚಲಿತವಿರುವ ರೂಢಿಗಳಿಂದ ಮಾರ್ಗದರ್ಶನ ಪಡೆಯಬೇಕು ಎಂಬುದನ್ನು ಬ್ರಾಹ್ಮಣೀಯ ನ್ಯಾಯಶಾಸ್ತ್ರ ಗ್ರಂಥಗಳು ಒತ್ತಿ ಒತ್ತಿ ಹೇಳಿವೆ. ವರ್ಣ, ಆಶ್ರಮಗಳ ಆಧಾರದ ಮೇಲಿನ ಸಮಾಜ ವ್ಯವಸ್ಥೆಯು ಅವನತಿಯಾದಾಗ ರಾಜನು ಧರ್ಮವನ್ನು ಮರಳಿ ಸ್ಥಾಪಿಸಬೇಕೆಂದು ಕೌಟಿಲ್ಯ ಹೇಳಿದ್ದಾನೆ. ರಾಜನು ಧರ್ಮಪ್ರವರ್ತಕ ಅಂದರೆ ಸಮಾಜ ವ್ಯವಸ್ಥೆಯನ್ನು ಎತ್ತಿಹಿಡಿಯುವವನು. ಇತರ ಎಲ್ಲ ಕಟ್ಟುಕಟ್ಟಳೆಗಳಿಗಿಂತಲೂ ರಾಜಾಜ್ಞೆಯೇ ಬಲವತ್ತರವಾದುದು ಎಂಬುದನ್ನು ಅಶೋಕನು ತನ್ನ ಶಾಸನಗಳಲ್ಲಿ ಮೇಲಿಂದ ಮೇಲೆ ಒತ್ತಿ ಹೇಳಿದ್ದಾನೆ. ಅಶೋಕನು ಧರ್ಮವನ್ನು ಘೋಷಿಸಿ ಅದರ ಮುಖ್ಯ ತತ್ವಗಳನ್ನು ಜನರಲ್ಲಿ ಪ್ರಸಾರ ಮಾಡಿ, ಅನುಷ್ಠಾನಕ್ಕೆ ತರುವಂತೆ ಮಾಡಲು ದೇಶದಲ್ಲೆಲ್ಲಾ ಅಧಿಕಾರಿಗಳನ್ನು ನಿಯಮಿಸಿದನು.

*ವಿವರಗಳಿಗೆ ನೋಡಿ: ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೫-೯೩*

*ಎಂ.ವಿ. ಕೃಷ್ಣರಾವ್ ೧೯೫೩ ಕೌಟಿಲ್ಯ ಪುಟ. ೧೬*

*ಆರ್.ಎಸ್. ಶರ್ಮ ೨೦೦೭ ಪ್ರಾಚೀನ ಭಾರತ ಪುಟ. ೧೩೯*

**೬೩೦. ರಾಜಪ್ರಶಂಸೆ**

ರನ್ನನು 'ಸಾಹಸ ಭೀಮ ವಿಜಯ'ದಲ್ಲಿ ಸತ್ಯಾಶ್ರಯನನ್ನು ಭೀಮನಿಗೆ ಹೋಲಿಸಿ

ಬರೆದಿದ್ದಾನೆ. ಅವನ ಗುಣಸ್ವಭಾವಗಳನ್ನು ಈ ಪದ್ಯದಲ್ಲಿ ವಿವರಿಸಿದ್ದಾನೆ.

*ಎರೆವರ್ಗೀವಂ ಭಯದಿಂ*
*ಶರಣ್ಗೆವರೆ ಕಾವನೀವ ಕಾವ ಗುಣಕ್ಕಾರ್ ॥*
*ದೊರೆ ಪೆಱರಿಱಿವಬೆಡಂಗನ ।*
*ಕೊರಲೊಳ್ ಕೊಂಕುಂಟೆ ನುಡಿಯೊಳೇಂ ತೊದಳುಂಟೇ ॥*

*(ಸಾಹಸ ಭೀಮವಿಜಯಂ ೨-೬)*

ಬೇಡಿದವರಿಗೆ ದಾನ ಕೊಡುತ್ತಾನೆ; ಭಯದಿಂದ ಮೊರೆ ಹೊಕ್ಕವರನ್ನು ಕಾಪಾಡುತ್ತಾನೆ. ಹೀಗೆ ಕೊಡುವ ಹಾಗೂ ಕಾಪಾಡುವ ಗುಣಗಳಲ್ಲಿ ಇರಿವಬೆಡಂಗನಿಗೆ ಸಮನಾದವರು ಯಾರು ? ಇರಿವಬೆಡಂಗನ ಕೊರಳಲ್ಲಿ ಕೊಂಕಾಗಲಿ ಮಾತಿನಲ್ಲಿ ಹುಸಿಯಾಗಲಿ ಎಂದೂ ಇಲ್ಲ.

ಬೇಡಿದವರಿಗೆ ದಾನ ಕೊಡುವುದು; ಭಯದಿಂದ ಶರಣಾದವರನ್ನು ಕಾಪಾಡುವುದು ಶ್ರೇಷ್ಠ ಕ್ಷತ್ರಿಯರ ಧರ್ಮವಾಗಿದೆ. ಕೊಡುವುದು ಮತ್ತು ಕಾಪಾಡುವುದು ರಾಜನಾದವನ ಗುಣ. ಅವನಲ್ಲಿ ಕೊಂಕಾಗಲಿ ಮಾತಿನಲ್ಲಿ ಹುಸಿಯಾಗಲಿ ಇಲ್ಲವೆಂದು ರನ್ನ ಹೇಳುತ್ತಾನೆ. ಮೇಲಿನ ಮಾತುಗಳಲ್ಲಿ ರಾಜನ ಲಕ್ಷಣಗಳನ್ನು ಹೇಳಲಾಗಿದೆ. ರಾಜನ ಪ್ರಮುಖ ಕರ್ತವ್ಯವೆಂದರೆ ಆರ್ತರನ್ನು ರಕ್ಷಿಸುವುದು ದುಷ್ಟರನ್ನು ನಿಗ್ರಹಿಸುವುದು. ಆದುದರಿಂದ ರಾಜನಿಗೆ 'ಪ್ರಜಾಪತಿ' ಎಂಬ ಹೆಸರು ಇದೆ.

ಈ ರೀತಿಯ ರಾಜದಂಡದ ಪರಿಕಲ್ಪನೆಯು ಶಿಕ್ಷೆಯ ಮೂಲಕ ಎಲ್ಲವನ್ನು ಹತ್ತಿಕ್ಕಿತ್ತು. ರಾಜನ ರಾಜಕೀಯ ವ್ಯವಸ್ಥೆಯಲ್ಲಿ ಈ ರಾಜದಂಡವು ಪ್ರಧಾನವಾದ ಪಾತ್ರವನ್ನು ವಹಿಸುತ್ತಿತ್ತು. ಈ ರಾಜದಂಡದ ಪರಿಭಾಷೆಯು ಮತ್ತು ಅದರ ಬಳಕೆಯು ಒಬ್ಬ ವ್ಯಕ್ತಿಗೆ ಮೀಸಲಾದ ಪ್ರಶ್ನೆಯಾದರೂ ಭಾರತೀಯ ಪಾರಂಪರಿಕ ಸಮಾಜದಲ್ಲಿ ಅದು ಅನಧಿಕೃತವಾಗಿತ್ತು. ಈ ರಾಜದಂಡದ ಎದುರಿಗೆ ಪುರುಷನಾಗಲಿ, ವರ್ಗವಾಗಲೀ, ಜಾತಿಯಾಗಲೀ, ಮುಖ್ಯವಲ್ಲ. ರಾಜದಂಡವು ಎಲ್ಲರನ್ನೂ ಹಿಡಿತದಲ್ಲಿಟ್ಟುಕೊಳ್ಳುವ ಒಂದು ಸಾಧನ ಮಾತ್ರ. ವಸಾಹತುಶಾಹಿ ಅನುಭವದಲ್ಲಿ ಈ ಪರಿಭಾಷೆಗಳು ಬದಲಾದವು.

ಪ್ರಸಿದ್ಧವಾದ ತನ್ನ ರಥ, ಧ್ವಜ, ಮಹಾರಣವಾದ್ಯ, ಚಕ್ರಾಯುಧ ಮತ್ತು ರಾಜಚಿಹ್ನೆಗಳು ತನ್ನ ಆಗಮನವನ್ನು ಶತ್ರುಗಳಿಗೆ ತಿಳಿಸುತ್ತಿರಲಾಗಿ ಜಯಾಪೇಕ್ಷಿಯಾಗಿ ಮುಂದುವರಿದನು ಎಂದು ಶಾಂತಿಪುರಾಣದಲ್ಲಿ (೪-೪೦) ಬರುತ್ತದೆ.

ರಥ, ಧ್ವಜ, ಮಹಾರಣವಾದ್ಯ (ಯುದ್ಧದ ಸಂದರ್ಭದಲ್ಲಿ ಮೊಳಗುವ ವಾದ್ಯ,) ಚಕ್ರಾಯುಧ, ದೈವಜ್ಞಾನ, ಶ್ವೇತಛತ್ರ ಮೊದಲಾದವುಗಳು ರಾಜಚಿಹ್ನೆಗಳು.

ಆ ಮಹಾ ಸೈನ್ಯ ಹೊರಟಿತು. ಇತ್ತ ಚಕ್ರವರ್ತಿಯು ತನ್ನ ಕುಲಧನಗಳು ಹಾಗೂ ರಾಜ್ಯಚಿಹ್ನೆಗಳು ಇವೆರಡನ್ನು ಉಳಿಸಿಕೊಂಡು ಉಳಿದ ಬಂಗಾರ, ರತ್ನ ಮೊದಲಾದ ಬೆಲೆಯುಳ್ಳ ದ್ರವ್ಯಗಳನ್ನು ಪುಣ್ಯನಿಮಿತ್ತವಾಗಿ ಹೊಗಳುಭಟ್ಟರು, ಸ್ತುತಿಪಾಠಕರು ಮೊದಲಾದವರಲ್ಲಿ ಮುಖ್ಯರಾದವರಿಗೆ ಉಚಿತವಾಗಿ ಕೊಟ್ಟನು. (ಶಾಂತಿಪುರಾಣಂ

೩-೧೦೭ ವ)

ಕುಲಧನ ಮತ್ತು ರಾಜಚಿಹ್ನೆಗಳನ್ನು ರಾಜನು ಕೊನೆಯವರೆಗೂ ಕಾಪಾಡಿಕೊಂಡು ಬರಬೇಕೆಂಬುದು ಇಲ್ಲಿಯ ವಾದವಾಗಿದೆ.

*ವಿವರಗಳಿಗೆ ನೋಡಿ: Ranajith Guha 1998 Dominance without hegemony*

**೬.೩.೧. ರಾಜರ ಗುಣಸ್ವಭಾವ**

'ರಾಜಾಕಾಲಸ್ಯಕಾರಣಂ' ಎಂಬ ವಕ್ರೋಕ್ತಿಯಿದೆಯೆಂದು ಪಂಚತಂತ್ರದಲ್ಲಿ ಬರುತ್ತದೆ (ಪಂಚತಂತ್ರ ಭೇದ ಪ್ರಕರಣ, ೧೩೪ ವ.).

*ಮತ್ತಮದಲ್ಲದೆಯುಂ, ಅರಸುಗಳ್ಗೆ ವಿರಸಮಾದವಸರದೊಳ್ ಚಾಗಿಯಂಲುಬ್ಧ ನೆಂಬರ್; ಭೋಗಿಯಪ್ಪನಂ ಪೂಜೆಗನೆಂಬರ್; ಸೌಭಾಗ್ಯಮುಳ್ಳವನಂ ಪಾಣ್ಬ ನೆಂಬರ್; ತ್ಯಾಗಿಯಂ ಅರ್ಥದೂಷಕನೆಂಬರ್; ಅರ್ಥದೂಷಕನಂ ತ್ಯಾಗಿಯೆಂಬರ್; ಏಗೆಯ್ದುಂ ಪೆಱವೆಣ್ಗಾಟಿಸುವನಂ ಶುಚಿಯೆಂಬರ್; ಶುಚಿಯಂ ಅಶುಚಿಯೆಂಬರ್; ಧೂರ್ತನಂ ಛಾಂದಸನೆಂಬರ್; ಮೇಕುದೋಱೆ ಓರೊರ್ವರ ಗುಣಕ್ಕೆ ಮಚ್ಚರಿಸಿ ತೋಱುತ್ತಿರ್ಪರೀ ಕಾಲದರಸುಗಳ್*

*(ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ, ೧೦೧ ವಚನ)*

ಅರಸರು ವಿಷಮ ಸ್ವಭಾವದವರು ಎಂದು ದುರ್ಗಸಿಂಹನು ಹೇಳುತ್ತಾನೆ. ಕುಲಹೀನನ್ನು ಒಳ್ಳೆಯ ಕುಲದವನು ಎಂದು ಹೇಳುತ್ತಾರೆ. ಭೋಗಿಯನ್ನು ಒಳ್ಳೆಯ ಕುಲದವನು ಎಂದು ಹೇಳುತ್ತಾರೆ. ಭೋಗಿಯನ್ನು ಪೂಜಾರಿಯೆನ್ನುತ್ತಾರೆ. ತ್ಯಾಗಿಯನ್ನು ಕೆಟ್ಟವನೆಂದು, ಅರ್ಥದೂಷಕನೆಂದೂ ಹೇಳುತ್ತಾರೆ. ಪರ ಹೆಣ್ಣಿಗೆ ಆಸೆ ಪಡುವವನನ್ನು ಶುಚಿಶೀಲನೆಂದೂ, ಶುಚಿಶೀಲನನ್ನು ಅಶುಚಿಯೆಂದೂ, ಧೂರ್ತನನ್ನು ಛಂದಃಶ್ಯಾಸ್ತ್ರಜ್ಞ (ವೇದಾಭ್ಯಾಸಿ ಎಂದೂ,) ಜ್ಞಾನಿಯೆಂದೂ ಒಬ್ಬೊಬ್ಬರ ಗುಣಕ್ಕೆ ಮತ್ಸರಿಸಿ ಅರಸರು ತೋರಿಬರುವವರು. ಇಲ್ಲಿ ಅರಸರ ಟೀಕೆಯಿದೆ. ಅವರ ವಿಷಮ ಸ್ವಭಾವದ ಚಿತ್ರಣವಿದೆ. ಅರಸರು ಕುಲಜಾತನನ್ನು ಕುಲಹೀನನೆಂದು ಕರೆಯುವರು. ಕಲಿಯನ್ನು ಹೇಡಿ ಎಂದೂ, ಹೇಡಿಯನ್ನು ಸೌಭಾಗ್ಯವಂತನೆಂದೂ, ವೀರನೆಂದು ಕೊಂಡಾಡುವರು. ಸತ್ಯ ನುಡಿಯುವವನನ್ನು ಸುಳ್ಳುಗಾರನೆಂದು ಕರೆಯುವರು ಸುಳ್ಳು ಹೇಳುವನನ್ನು ಸತ್ಯವಂತನೆಂದು ಕೊಂಡಾಡುವರು. ಅರಸರ ಸ್ವಭಾವವಿದು, ಅವಿವೇಕಿಗಳೂ, ಅಜ್ಞಾನಿಗಳೂ ಆದ ಅರಸರ ಸೇವೆಯನ್ನು ಮಾಡುವುದು ಕಷ್ಟ.

ಅರಸುಗಳ್ ತಮ್ಮ ಪೊರೆಯೊಳಿರ್ದೋಲೈಸುವ ಮನುಜಂ ವಿದ್ಯೆಯಿಲ್ಲದವ ನಾದೊಡಂ ಅಕುಲೀನನಾದೊಡಂ, ಅಯೋಗ್ಯನಾದೊಡಂ, ಸ್ವೀಕರಿಸುವರ್, ಸ್ತ್ರೀಯರ್ಕಳ್ ಆವನೊರ್ವಂ ಕೆಲದೊಳಿರ್ದಪನವನನೇ ಪಿಡಿವರ್, ಲತೆಗಳ್ ಸಮೀಪದಲಾವ ಮರನಿರ್ದಪುದದನೇ ಪಿಡಿವುವು. (ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ, ಶ್ಲೋ: ೧೧ ವಚನ)

ದುರ್ಗಸಿಂಹನು ಅರಸರು ಯಾವ ರೀತಿಯಲ್ಲಿರುತ್ತಾರೆ ಎಂಬುದನ್ನು ವಿವರಿಸಿದ್ದಾನೆ. ಅರಸನು ತಮ್ಮನ್ನು ಓಲೈಸುವರನ್ನು ಹತ್ತಿರವಿರಿಸಿಕೊಳ್ಳುತ್ತಾನೆ. ಅವರು ಬುದ್ಧಿಹೀನರಾದರೂ, ಅಕುಲೀನರಾದರೂ, ಅಯೋಗ್ಯರಾದರೂ, ಅವಿದ್ಯಾವಂತರಾದರೂ ಅವರನ್ನು ಅಂತರಂಗಕ್ಕೆ ಸೇರಿಸಿಕೊಳ್ಳುತ್ತಾನೆ. ಸ್ತ್ರೀಯರೂ ಹಾಗೆಯೇ ಹತ್ತಿರವಿರುವವರನ್ನೇ ಹಿಡಿದುಕೊಳ್ಳುತ್ತಾರೆ. ಅದರಂತೆ ಬಳ್ಳಿಗಳು ಹತ್ತಿರವಿರುವ ಮರವನ್ನು ಅಪ್ಪಿಕೊಳ್ಳುತ್ತದೆ. ಅರಸರ ಕುರಿತ ವಿಡಂಬನೆಯಿದು. ಅರಸರ ಕುರಿತಂತೆ ಪಂಚತಂತ್ರವು ಕಡುಟೀಕೆಯೂ ಹೌದು. ಅದನ್ನು ಮರೆಯಬಾರದು. ಆದರೆ ಅರಸೊತ್ತಿಗೆಯ ವಿಜೃಂಭಣೆಯ ಕಾಲದಲ್ಲಿಯೇ ಈ ಕೃತಿಯು ಬಂದಿದೆ.

ಅಥರ್ವವೇದವು ರಾಜನನ್ನು ಪ್ರಪಂಚದ ಅಧಿಪತಿಯಾದ ಭಗವಂತನ ಪ್ರತಿನಿಧಿಯೆಂದು ತಿಳಿಯುತ್ತದೆ. (೭–೮–೩)

ಶೂರನನ್ನು, ಹೇಡಿಯಾಗಿ ಮಾಡುವ, ಪೂರ್ಣಹೇಡಿಯನ್ನು ಉತ್ತಮ ಶೂರನನ್ನಾಗಿ ಮಾಡುವ, ಯೋಗ್ಯನನ್ನು ಹೊಲೆಯನನ್ನಾಗಿ ಮಾಡುವ, ಮೊದಲು ಹೊಲೆಯನಾಗಿದ್ದವ ನನ್ನು ಪೂರ್ಣಯೋಗ್ಯನನ್ನಾಗಿ ಮಾಡುವ, ತಮ್ಮಲ್ಲಿ ಅತ್ಯಧಿಕವಾಗಿ ಹಬ್ಬಿರುವ ಅವಿವೇಕತೆಯಿಂದ ರಾಜರ ಮನಸ್ಸಿನ ಸ್ಥಿತಿ ಬಹಳ ಚಂಚಲವಾದುದು. ಆದುದ್ದರಿಂದ ರಾಜರನ್ನು ಸೇವೆ ಮಾಡಿ ಬಾಳುವುದೇ ಕಷ್ಟ.

(ಪಂಪ ಭಾರತ ೧೨–೯೨)

ರಾಜರ ಮನೋಸ್ಥಿತಿಯು ಚಂಚಲವಾದುದು ಎಂಬುದನ್ನು ಶಲ್ಯನ ಬಾಯಿಯಿಂದ ಪಂಪನು ಹೊರಡಿಸಿದ್ದಾನೆ. ಹೊಲೆಯರ ಬಗೆಗೆ ಇರುವ ತಿರಸ್ಕಾರದ ಧೋರಣೆಯನ್ನು ಈ ಮಾತುಗಳು ಸೂಚಿಸುತ್ತವೆಯೆಂಬುದು ಗಮನಾರ್ಹ. ರಾಜತ್ವವು ಹೊಲೆಯನನ್ನು ಯೋಗ್ಯನನ್ನಾಗಿ; ಯೋಗ್ಯನನ್ನು ಹೊಲೆಯನನ್ನಾಗಿ ಮಾಡುವುದು ರಾಜಗುಣವೆಂಬುದು ಇಲ್ಲಿಯ ಭಾವಾರ್ಥವಾಗಿದೆ.

'ರಾಷ್ಟ್ರಿಕ', ಅಧಿಕಾರ' ಎಂಬರ್ಥದ ಪದ. 'ರಾಜ್'; ರಾಜನೆಂದರೆ ಆಳುವವನು, ಹೊಳೆಯುವವನು, 'ರಾಜ್'ದಿಂದ ಸಾಧಿಸಿದ 'ರಾಷ್ಟ್ರಿಕ' ಇದು ಆಳುವ–ಅಧಿಕಾರಿ ಎಂಬರ್ಥವುಳ್ಳುದಾಗಿದೆ ಎಂದು ಶಂಬಾ ಹೇಳುತ್ತಾರೆ.

ಐತರೇಯ ಬ್ರಾಹ್ಮಣದಲ್ಲಿ 'ರಾಜ' ಎಂಬರ್ಥಲ್ಲಿ 'ಭೋಜ' ಬಂದಿದೆ; 'ಭೌಜ್ಯ' ರಾಜಪದವಿ. ಅಧಿಕಾರಿ' ಎಂಬರ್ಥದಲ್ಲಿ 'ರಾಷ್ಟ್ರೀಕ'ಕ್ಕಿಂತ; 'ಭೋಜ' ಇದುವೆ ಪ್ರಾಚೀನ. ರಾಷ್ಟ್ರಿಕ (ರಿಸ್ಟಿಕ) – ಭೋಜಕ ಎಂದರೆ ಅಧಿಕಾರಿಗಳು ಎಂದು ಅರ್ಥವಾಯಿತು. 'ರಾಷ್ಟ್ರಿಕ' ಅಥವಾ 'ಭೋಜಕ' ಇವೆರಡರಲ್ಲೂ ನಿಜವಾಗಿ ಜನ – ಪಂಗಡ ಎಂಬ ಭಾವವು ಇಲ್ಲ. ಆದರೂ ಇವು ಸಮೂಹ, ಪಂಗಡ, ಜನವಾಚಕ ಲಕ್ಷಣಾರ್ಥ ಪಡೆದಿವೆ! 'ಭೋಜಕ' ಪಾಣಿನಿಯಲ್ಲಿದೆ. ಭೋಜನಕ್ಕೆ ಸಂಬಂಧಿಸಿದ ಅರ್ಥಗಳು ಭೋಜ ಮತ್ತು ಭೋಜಕದಲ್ಲಿವೆ. ಭೋಗಿ, ಭೋಗಿಸುವವನು – ಆಳುವವನು ಎಂಬ ಭಾವಾರ್ಥಗಳು ಇಲ್ಲಿ ಗಮನಕ್ಕೆ ಬರುತ್ತವೆ. ಇದಕ್ಕೆ ಪ್ರತಿಯಾಗಿ, ದೈನ್ಯದಿಂದ ಕೈಯೊಡ್ಡಿ ನಿಂತವನು,

ಆಜ್ಞೆಗಾಗಿ ಕಾಯುತ್ತಿರುವವನು ಎಂಬರ್ಥವೂ ಇಲ್ಲಿ ಇಲ್ಲದಿಲ್ಲ; ೪ – ೫ನೆಯ ಶತಮಾನದ ಸುಮಾರಿನ ಪ್ರಯೋಗ ದೊರೆಯುತ್ತದೆ. 'ಜೀ' ಎನೆ ಧರಿತ್ರಿಯಂ ಬೇಡಿಕೊಳ್ಳದೆ' ಎಂಬ ಪ್ರಯೋಗ ಪಂಪನಲ್ಲಿದೆ. ಭೋ – ಪರಾಕು; ಜೀ – ಸ್ವಾಮೀ. ಬೋ – ಜೀ ಎಂದು ಬಾಳುವ ಜನ: ಭೋಜಿಗಳು – ಭೋಜರು, ಎಂಬ ಅರ್ಥದ ಒಂದು ಶಕ್ಯತೆ ಹೀಗಿದೆ. ಭೋಜಿಗಳೂ 'ಮಹಾರಾಷ್ಟ್ರಿಕ'ರಂತೆ ಈ ನಾಡವರೆ (Native) ಆಗಿರಬೇಕು.

*ವಿವರಗಳಿಗೆ ನೋಡಿ: ಶ್ರೀ ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳು ೨೦೧೦*
*ಕೌಟಲೀಯ ಅರ್ಥಶಾಸ್ತ್ರ ಪುಟ. ೧೩*
*ಶೇಷ ನವರತ್ನ ೧೯೪೯ ನಾಲ್ಕು ವೇದಗಳು ಪುಟ. ೨೪*
*ಶಂಬಾ ಜೋಶಿ ೧೯೯೯ ಸಂಪುಟ. ೩ ಹಾಲುಮತ ದರ್ಶನ ಪು. ೮೧, ೮೨*

**೬.೩.೨. ರಾಜ್ಯ**

ರಾಜರು ತಮ್ಮ ನಂತರ ತಮ್ಮ ಅರಸು ಪದವಿಯನ್ನು ತಮ್ಮ "ಪಿರಿಯ ಮಗಂಗೆ" ವಹಿಸಿ ಆತನಿಗೆ "ರಾಜ್ಯ ಪಟ್ಟಂಗಟ್ಟು" ತಿದ್ದರು. ರಾಜನು ಆಕಸ್ಮಿಕ ಮರಣ ಅಪ್ಪಿದ ಸಂದರ್ಭದಲ್ಲೂ ಸಹ "ಸಾಮಂತ, ಮಹಾಸಾಮಂತರ್ಕಳುಂ ಪರಿವಾರಮುಂ ನೆರೆದು ಪಿರಿಯ ಮಗಂಗೆ ರಾಜ್ಯಪಟ್ಟಂ" ಕಟ್ಟುತ್ತಿದ್ದರು. ಅನಂತವೀರ್ಯನಿಗೆ ಈ ರೀತಿ ಪಟ್ಟಗಟ್ಟಿದ ಉಲ್ಲೇಖ 'ಗುರುದತ್ತ ಭಟಾರರ ಕಥೆ'ಯಲ್ಲಿ ಬರುತ್ತದೆ. ಎಷ್ಟೋ ಸಂದರ್ಭಗಳಲ್ಲಿ ಹಿರಿಯ ಮಗ ಅನನುಭವಿಯಾದ ಬಾಲಕನಾಗಿಯೂ ಇರುತ್ತಿದ್ದ. ಅದೇ 'ಗುರುದತ್ತ ಭಟಾರರ ಕಥೆ'ಯಲ್ಲಿ ಎಂಟನೆಯ ವರುಷದಂದು ಗುರುದತ್ತಂಗೆ ವಿಜಯದತ್ತ ನೃಪತಿ ರಾಜ್ಯಪಟ್ಟಂಗಟ್ಟಿದ ಉದಾಹರಣೆಯುಂಟು. ಹೀಗೆ ರಾಜನ ಪದವಿಯು ವಂಶಾನುಗತವಾಗಿ ತಂದೆಯಿಂದ ಸಾಮಾನ್ಯವಾಗಿ ಹಿರಿಯ ಮಗನಿಗೆ ದೊರೆಯುತ್ತಿತ್ತು. ಆಗ ರಾಜ್ಯವಾಳಲು ಯಾರು ಅರ್ಹರೆಂಬುದನ್ನು ತಿಳಿದುಕೊಳ್ಳಲು ರಾಜನು ಮಕ್ಕಳಿಗೆ ಗೊತ್ತಿಲ್ಲದೆ ವಿಚಿತ್ರ ಪರೀಕ್ಷೆಗಳನ್ನು ಒಡ್ಡಿ ಅದರಲ್ಲಿ ಜಯಶೀಲನಾದವನನ್ನು ಅರಸನನ್ನಾಗಿ ಮಾಡಲಾಗುತ್ತಿದ್ದ. ಉದಾಹರಣೆಗಳುಂಟು. 'ಚಿಲಾತಪುತ್ರನ ಕಥೆ'ಯಲ್ಲಿ ಉಪಶ್ರೇಣಿಕ ಮಹಾರಾಜ ಅಯ್ನೂರು ಮಕ್ಕಳಿಗೆ ಒಂದು ಪಂತಿಯಲ್ಲಿ ಪಾಯಸವನ್ನು ಬಡಿಸಿ ಅಯ್ನೂರು ನಾಯಿಗಳನ್ನು ಅವರ ಮೇಲೆ ಬಿಟ್ಟೊಡೆ ಶ್ರೇಣಿಕನು ಮಾತ್ರ ನಾಯಿಗಳಿಗೆ ಪಾಯಸವನ್ನು ಇಕ್ಕಿ ತಾನು ಸಹ ಉಂಡನು. ಉಳಿದವರೆಲ್ಲರು ಓಡಿ ಹೋದರು. ಇನ್ನೊಂದು ದಿನ ಅರಮನೆಯಲ್ಲಿ ಕಿಚ್ಚು ಕಾಣಿಸಿಕೊಂಡಾಗ ಉಳಿದ ಮಕ್ಕಳೆಲ್ಲ ಆನೆ, ಕುದುರೆ, ಭಂಡಾರ, ಆಯುಧಗಳನ್ನು ರಕ್ಷಿಸಲು ಹೋದರು. ಶ್ರೇಣಿಕ ರಾಜಚಿಹ್ನೆಂಗಳಂ ಕೈಕೊಂಡನು. ಅದರಿಂದ ಅರಸ ಈತನೇ ರಾಜನಾಗಲು ಅರ್ಹನೆಂದು ತಿಳಿದು, ಅವನು ಅಲ್ಲಿಯೇ ಇದ್ದರೆ ಹಲವರು ಅವನ ಮೇಲೆ ಮುನಿಯುವರೆಂದು ಬಗೆದು ನೀನು ನಾಯಿಯೊಡನೆ ಊಟ ಮಾಡಿದೆ. ರಾಜ್ಯ ಚಿಹ್ನೆಗಳನ್ನು ತೆಗೆದುಕೊಂಡೆ, ನಾನು ಬದುಕಿರುವಾಗಲೇ ಅರಸುತನಕ್ಕೆ ಅಸೆಪಟ್ಟೆ

ಆದ್ದರಿಂದ ನೀನು ಇಲ್ಲಿ ಇರಕೂಟದು ಹೊರಟುಹೋಗು ಎಂದು ನೆಪಹೇಳಿ ಕಳುಹಿಸಿ ಬಿಟ್ಟ. ಈ ಉಲ್ಲೇಖದಿಂದ ರಾಜನಾಗುವ ಸಹೋದರನನ್ನು ಕಂಡು ಇತರ ಸಹೋದರರು ಆತನಿಗೆ ತೊಂದರೆಗಳನ್ನು ಕೊಡುತ್ತಿದ್ದರೆಂದು ವಿದಿತವಾಗುತ್ತದೆ. ಆದ್ದರಿಂದಲೇ ರಾಜನಾಗುವ ಮಗುವನ್ನು ಬೇರೆ ಕಡೆಯಲ್ಲಿ ಉತ್ತಮ ರೀತಿಯಿಂದಲೂ ಬೆಳೆಸುತ್ತಿದ್ದರು. ಮುಂದೆ ಪಟ್ಟಾಭಿಷೇಕ ಮಾಡಿ ಆತನಿಗೆ ರಾಜನೀತಿಯನ್ನು ಸಹ ಬೋಧಿಸುತ್ತಿದ್ದರು.

ಋಗ್ವೇದದಲ್ಲಿ ಸಾಮ್ರಾಜ್ಯ, ಭೌಜ್ಯ, ಸ್ವಾರಾಜ್ಯ, ವೈರಾಜ್ಯ, ಪಾರಮೇಷ್ಠರಾಜ್ಯ, ಅಧಿಪತ್ಯಮಯ ಸಮಂತಪರ್ಯಾಯೀ ಎಂದು ಎಂಟು ಪ್ರಕಾರದ ರಾಜ್ಯಗಳನ್ನು ಕುರಿತು ಉಲ್ಲೇಖವಿದೆ.

೧. ಸಾಮ್ರಾಜ್ಯ – ಆಚಾರ್ಯಋಷಿಗಳ ಅನುಸಾರ ವಿಸ್ತಾರವಾದ ಭೂಪ್ರದೇಶವನ್ನು ವಶಮಾಡಿಕೊಂಡು ರಾಜನಾದವನು ತನ್ನ ಸಾಮ್ರಾಜ್ಯವನ್ನು ಸ್ಥಾಪಿಸಬೇಕಾಗುತ್ತಿತ್ತು. ಅಧಿಕ ಭೂಭಾಗವನ್ನು ತನ್ನ ಆಡಳಿತದ ಪ್ರಭಾವವಲಯದಲ್ಲಿ ಸಮೀಕರಿಸುವ ಸಾಹಸ ಮಾಡಿ, ಅನ್ಯ ರಾಜರನ್ನೆಲ್ಲ ಪರಾಸ್ತಗೊಳಿಸಿ ಅವರನ್ನು ಮಾಂಡಲೀಕರನ್ನಾಗಿ ಮಾಡಿಕೊಳ್ಳುವುದಾಗಿತ್ತು. 'ಕೃಣ್ವಂತೋ ವಿಶ್ವಮ್ ಆರ್ಯಮ್' ಎಂಬ ಋಗ್ವೇದದ ಮಾತನ್ನಿಲ್ಲಿ ಅರ್ಥೈಸಬಹುದು.

೨. ಭೌಜ್ಯ – ಎಂದರೆ, ವಿಶಿಷ್ಟ ಸೀಮಾರೇಖೆಗಳಿಂದ ಮರ್ಯಾದಿತವಾದ ಭೂಭಾಗವೆಂದೂ, ಪ್ರಜೆಗಳ ಸಮೃದ್ಧಿಯನ್ನು, ಸಂರಕ್ಷಣೆಯನ್ನು ಸಮರ್ಥವಾಗಿ ಮಾಡಬಲ್ಲ ಪ್ರಜಾಹಿತದ ರಾಜ್ಯವೆಂದೂ ಅರ್ಥಯಿಸಬೇಕು.

೩. ಸ್ವರಾಜ್ಯ – ಇಲ್ಲಿ 'ಸ್ವರಾಜ್ಯ'ದ, ಕಲ್ಪನೆ ಇದೆ. ಆಡಳಿತವು ವಿದೇಶೀ ಹಸ್ತಕ್ಷೇಪದಿಂದ ಮುಕ್ತವಾಗಿರಬೇಕು ಎಂಬ ಅಭಿಪ್ರಾಯ ಅಂತರ್ನಿತವಾದಂತಿದೆ.

೪. ವೈರಾಜ್ಯ – ವಿಗತರಾಜಕಂ ವೈರಾಜ್ಯಂ ಎಂದರೆ ಇಲ್ಲಿ ಶಾಸಕನಾದ ಒಬ್ಬನೇ ಸರ್ವಾಧಿಕಾರಿಯಾದ ಪ್ರಭುವಿಗೆ ಅಸ್ಪದವಿಲ್ಲ. ಎಲ್ಲ ಶಾಸನವೂ ಜನತೆಯ ಅಭೀಷ್ಟದಂತೆ ನಡೆಯಬೇಕು.

೫. ಪಾರಮೇಷ್ಠರಾಜ್ಯ – ಪರಮೇಷ್ಠಿ ಎಂದರೆ ಪ್ರಜಾಪತಿ ಅಥವಾ ಪರಮಾತ್ಮ. ಎಲ್ಲವೂ ಅವನ ರಾಜ್ಯವೇ ಆಗಿರುವಾಗ ವ್ಯಕ್ತಿಯ ಅಹಂಕಾರದ ಆಡಳಿತ ಸಲ್ಲದು.

೬. ಮಹಾರಾಜ್ಯ – ಅಂದರೆ ಅನೇಕ ಸಣ್ಣ ಸಣ್ಣ ಘಟಕಗಳು ಕೂಡಿ ಒಂದು ವಿಶಾಲವಾದ ಗಣತಂತ್ರ ಪ್ರಜಾರಾಜ್ಯವಾಗುವುದು ಎಂದರ್ಥ. ಅನೇಕ ರಾಜ್ಯಗಳು ಕೂಡಿ ಒಂದು ಮಹಾರಾಜ್ಯವಾಗುತ್ತದೆ.

೭ ಆಧಿಪತ್ಯಮಯ – ಅಂದರೆ ರಾಷ್ಟ್ರದ ಸುಭದ್ರತೆಗೆ ಅವಶ್ಯವಾದ ಆಧಿಪತ್ಯವನ್ನು ಕೆಲವು ಸಮರ್ಥರು ನಡೆಸಬೇಕೆಂಬುದನ್ನು ಇದು ಹೇಳುತ್ತದೆ.

೮. ಸಮಂತಪರ್ಯಾಯೀ – ಮಹಾರಾಜ್ಯದಲ್ಲಿ ಅಂತರ್ಗತವಾಗಿರುವ ವಿವಿಧ ಘಟಕಗಳ ಆಡಳಿತವು ಸಾಮಂತ ಅಧಿಕಾರಿಗಳ ಕಡೆಗೆ ಇರಬೇಕು.

ಇದಲ್ಲದೆ ಜನರಾಜ್ಯ, ಗಣರಾಜ್ಯ ಮುಂತಾದುವುಗಳ ಉಲ್ಲೇಖವಿದೆ. ಋಗ್ವೈದಿಕ

ರಾಜನೀತಿಯು ಗಣರಾಜ್ಯವಾದಿಯೂ, ಪ್ರಜಾಪ್ರಭುತ್ವವಾದಿಯೂ ಆಗಿದ್ದು ಜನತೆಯ ಅಪೇಕ್ಷೆಯಂತೆ ಶಾಸನದ ಸೂತ್ರಗಳು ಸಾಗಬೇಕೆಂಬುದನ್ನು ಹೇಳಲಾಗಿದೆ ಎಂದು ನಿರ್ಣಯಿಸಬಹುದು.

ಧರ್ಮ ಸೂತ್ರಗಳಿಗನುಸಾರವಾಗಿ ಕ್ರೋಧ, ಲೋಭಗಳಿಂದ ದೂರನಾಗಿ ಮುಖ್ಯ ನ್ಯಾಯಧೀಶರು ಮತ್ತು ನ್ಯಾಯದರ್ಶಿ ಮಂಡಳಿಯ ಸದಸ್ಯರಿಂದ ಕೂಡಿದವನೂ, ಕಾರ್ಯಕಲಾಪದರ್ಶಿ ಯೋಗ್ಯ ಬ್ರಾಹ್ಮಣ ಗಣ ಸಹಿತನೂ, ಶಾಂತಚಿತ್ತನೂ ಕಾರ್ಯ ಸರಣಿ ಮತ್ತು ಕಾರ್ಯವಿಧಾನ ಪರಿಶೀಲಿಸುವವನೂ, ನಿಷ್ಪಕ್ಷಪಾತಿಯೂ, ಕುತೂಹಲಕಾರಿಯೂ ಆದ ಶೋತೃವಿನಂತೆ ಇದ್ದುಕೊಂಡು ರಾಜನು ವಿವಾದಗಳನ್ನು ಪರಿಶೀಲಿಸಬೇಕೇ ಹೊರತು ಸಭೆಯಲ್ಲಿ ತಾನೇ ಏನನ್ನೂ ನಿಶ್ಚಯಿಸಬಾರದು.

ಭೂಮಿಯನ್ನು ರತ್ನಗರ್ಭಾ ಎಂದು ಕರೆಯುತ್ತಾರೆ. ರಾಜನು ಧನಧಾನ್ಯ ರತ್ನಾದಿ ಗಳನ್ನು ಅದರಿಂದ ಪಡೆಯಬೇಕಾದರೆ ಮೊದಲು ತನ್ನ ಪ್ರಜೆಗಳನ್ನು ಚೆನ್ನಾಗಿ ರಕ್ಷಿಸಬೇಕು. ಹಸುವನ್ನು ಕರೆಯಬೇಕಾದರೆ ಅದರ ಮುಂದೆ ಕರುವಿರಬೇಕು. ಚೆನ್ನಾಗಿ ಹಾಲು ಕರೆಯಬೇಕೆಂದು ಗೋಪನು ಕರುವಿನ ರಕ್ಷಣೆಯನ್ನು ಮಾಡುತ್ತಾನೆ. ಭೂಮಿಯೆಂಬ ಧೇನುವಿಗೆ ಪ್ರಜೆಗಳೇ ಕರುಗಳು. ಪ್ರಜೆಗಳು ಸುಖವಾಗಿದ್ದರೆ ಭೂಮಿಯಲ್ಲಿ ಸಸ್ಯಾದಿ ಸಮೃದ್ಧಿಯುಂಟಾಗುತ್ತದೆ. ಹೀಗೆ ಚೆನ್ನಾಗಿ ಲೋಕ ಪರಿಪಾಲನೆ ಮಾಡುತ್ತಾ ಭೂಮಿಯಿಂದ ರತ್ನಾದಿಗಳನ್ನು ಅಪೇಕ್ಷಿಸಿದರೆ ಕಲ್ಪವೃಕ್ಷದಂತೆ ಅದು ನಾನಾರೂಪ ಫಲವನ್ನು ಕೊಡುತ್ತದೆ.

ಧರ್ಮ ಪರಿಪಾಲನೆ ಮಾಡುವವನನ್ನು 'ರಾಜನ್' ಎಂದೂ ಅಧರ್ಮ ಪ್ರವರ್ತಕನಾದ ಪ್ರಭುವನ್ನು ವಿಠ್ಠಲನೆಂದೂ ಕರೆಯುತ್ತಾರೆ.

*ವಿವರಗಳಿಗೆ ನೋಡಿ: ಡಾ.ಎಂ ಚಿದಾನಂದಮೂರ್ತಿ ೨೦೦೮*
*ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪುಟ. ೫೧೮*
*ಡಾ. ವಿ.ಎಲ್.ಪಾಟೀಲ್ ೨೦೦೯ ವಡ್ಡಾರಾಧನೆ ಜಾನಪದೀಯ ಅಧ್ಯಯನ ಪುಟ. ೧೯೨-೧೯೩*
*ಶೇಷನವರತ್ನ ೨೦೦೮ ಯಜುರ್ವೇದ ಪುಟ. ೪೦-೪೨*
*ಡಾ. ಟಿ.ವಿ.ವೆಂಕಟಾಚಲಶಾಸ್ತ್ರೀ ೧೯೯೯ ಶ್ರೀ ವತ್ಸ ನಿಘಂಟು ಪುಟ. ೩೨೫*
*ಯುಗಯಾತ್ರೀ ಭಾರತೀಯ ಸಂಸ್ಕೃತಿ ೧೯೭೧ ಸಂಪುಟ. ೨ ಪುಟ. ೩೨೬*
*ಭರ್ತೃಹರಿಯ ನೀತಿಶತಕ ೧೯೭೪- ಶ್ಲೋಕ - ೩೮*
*ಎಂ. ವಿ. ಕೃಷ್ಣರಾವ್ ೧೯೫೩ ಕೌಟಿಲ್ಯ ಪುಟ. ೧೦*

**೬.೩.೩. ರಾಣಿಯರ ವೇಷಭೂಷಣಗಳು**

ಚಿತ್ರಾವಳಿ, ಪಳಿ, ಅಡವಟ್ಟೆ, ಚೀಲ, ತಿವಟ, ಪೂವಡೆ ಮೊದಲಾದ ವಸ್ತ್ರಗಳನ್ನು ವಸನಾಂಗ ವೃಕ್ಷಗಳು ಒದಗಿಸುವುವು.

(ಶಾಂತಿಪುರಾಣ ೬-೧೧೧ ವ)

ಅಂತಃಪುರದ ಸ್ತ್ರೀಯರು ತೊಟ್ಟುಕೊಂಡ ಕುಪ್ಪುಸ ಮತ್ತು 'ಸವಂಗ' (ಅಂಗಿ)ದ ಕುರಿತು ಪಂಪನು 'ಆದಿಪುರಾಣ'ದಲ್ಲಿ ಹೇಳುತ್ತಾನೆ. (೧೧-೭೩) ರಾಣಿಯರ ವೇಷ

ಭೂಷಣವು ಆಡಂಬರದಿಂದ ಕೂಡಿತ್ತು. (೧೧–೪೫) ದಿವ್ಯವಸ್ತ್ರವನ್ನು ರಾಣಿಯರು ತೊಟ್ಟುಕೊಳ್ಳುತ್ತಿದ್ದರು. (೧೧–೯೦) 'ವಿಕ್ರಮಾರ್ಜುನ ವಿಜಯ'ದಲ್ಲಿ ರೇಶ್ಮೆಯ ವಸ್ತ್ರದ ಬಳಕೆಯ ಕುರಿತು ಬರುತ್ತದೆ (೫–೧೭). ಎರಡನೇ ನಾಗವರ್ಮನು ತನ್ನ 'ವರ್ಧಮಾನ ಪುರಾಣ'ದಲ್ಲಿ 'ಮೇಲಿಂದ' ಕುರಿತು ವರ್ಣಿಸುತ್ತಾನೆ (೩–೭೩, ೭೮) ನಯಸೇನನ 'ಧರ್ಮಾಮೃತ'ದಲ್ಲಿ ಬರುವ ರಾಣಿಯರ ವೇಷಭೂಷಣದ ಕುರಿತು ಬಿ.ವಿ. ಮಲ್ಲಾಪುರ ಅವರು ಹೀಗೆ ಹೇಳುತ್ತಾರೆ (ಮಲ್ಲಾಪುರ ಬಿ.ವಿ. ೧೯೭೮ ಪು.೩೨೦). 'ಶ್ರೀಮಂತರು' ರಾಣಿಯರು, ದುಕೂಲ, ಮಡಿಸೀರೆ, ಚೀನಾಂಬರ ಮೊದಲಾದ ಬೆಳೆಯುಳ್ಳ ಸೀರೆಗಳನ್ನು ಉಡುತ್ತಿದ್ದರು (೩–೭೭, ೪–೧೩೭, ೭–೧೭೭). ರಾಣಿಯರ 'ದಿವ್ಯದುಕೂಲ'ದ ಕುರಿತು ಕರ್ಣಪಾರ್ಯನೂ ಹೇಳುತ್ತಾನೆ. ನಾಗವರ್ಮನ 'ಅಭಿದಾನ ರತ್ನಮಾಲಾ ಕರ್ಣಾಟಕ ಟೀಕೆ' ಯಲ್ಲಿ ಹೀಗೆ ಹೇಳಲಾಗಿದೆ (ವೆಂಕಟರಾವ್ ವಿ. ಶೇಷಯ್ಯಂಗಾರ್. ಎಚ್(ಸಂ) ೧೯೭೯ ಪು.೯೦). ಚೀಲಂ, ಚೀರಂ, ವಾಸ, ಕರ್ಪಟಂ, ಅಚ್ಛಾದನಂ, ಅಂಬರಂ, ಅಂಕುಶಂ, ವಸ್ತ್ರಂ, ಸಿಚಯ, ಪಟ, ಈ ಹತ್ತು ಸೀರೆ (೩೯೪). 'ಕಾರ್ಪಾಸಂ, ಬಾದರಂ – ಇವು ಎರಡು, ಹತ್ತಿಯಿಂದಾದ ಸೀರೆ. ಅಂಚಳಮೆಂಬುದು ಸೀರೆಯ ಸೆಱಗು, ಅಹತಮೆಂಬುದು ಹೊಸ ಸೀರೆ, ಪಟಚ್ಚರಮೆಂಬುದು ಹಳೆಯ ಸೀರೆ (೩೯೬)'.

'ಕಂಚುಕ: ವಾರವಾಣ, ಕೂರ್ಪಾನ, ನಿಚೋಳಕ, ಈ ನಾಲ್ಕು ಕುಪ್ಪಸಂ (೩೯೮)'.

ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಕಂಡು ಬರುವ ರಾಣಿಯರ ವಸ್ತ್ರದ ಕುರಿತು ಕೆ. ಶ್ರೀಕಂಠಯ್ಯ ಅವರು ಹೀಗೆ ಗುರುತಿಸುತ್ತಾರೆ. "ಹೆಣ್ಣು ಮಕ್ಕಳು ರೇಶಿಮೆಯ ಪೀತಾಂಬರ (ಪುರಂದರದಾಸ ಕೀರ್ತನೆ, ೧–೧೪೦) ವನ್ನಾಗಲೀ ನೂಲಿನ ಸೀರೆಗಳನ್ನಾಗಲೀ ನಿರುಕೆ ಹಾಕಿ ಉಡುವರು (ಭರತೇಶ ವೈಭವ ೩೧–೪೧), ಕೆಲವರು ಶುಭ್ರದೂವಟಗಳನ್ನು (ದುಪ್ಪಟ) ಉಡುವರು. ಹೆಂಗಸರಲ್ಲಿ ಕೆಲವರು ಮಾಗ ಪಾವುಡ, ಪಾವುಡ, ಪಾವುಡೆ ಬಟ್ಟೆ – ಪ್ರಾಭೃತ (ಸಂ) ಮುಖಕ್ಕೆ ಹಾಕಿಕೊಳ್ಳುವ (ಬಂರುಕೆ) ಹಾಕಿಕೊಳ್ಳುವರು. ಕುಪ್ಪಸ ತೊಡುವರು (ಪುರಂದರದಾಸ ಕೀರ್ತನೆ ೧–೭೫). ಚಲ್ಲಣ ಉಟ್ಟು (ಪ್ರಭುಲಿಂಗ ಲೀಲೆ ೪–೨೯) ಮೇಲೆ ಕಾಸೆ ಕಟ್ಟುವವರೂ ಉಂಟು. ಆದರೆ ಈ ರೂಢಿ ಪರಿಚಾರಿಕೆಯರಲ್ಲಿ ವಿಶೇಷವಾಗಿದ್ದಂತೆ ತೋರುತ್ತದೆ".

ನಾಗವರ್ಮನ 'ಕಾದಂಬರಿ'ಯ ಕುರಿತು ಹೇಳುತ್ತಾ ಸಿ.ಪಿ. ಕೃಷ್ಣಕುಮಾರ್ ಅವರು, 'ಅವಕುಂಠನ ಪದ್ಧತಿಯೂ ಆಗ ಇದ್ದಂತೆ ತೋರುತ್ತದೆ' ಎನ್ನುತ್ತಾರೆ. ಇದರಿಂದ ಅವಕುಂಠನ ಪದ್ಧತಿಯು ಬಳಕೆಯಲ್ಲಿತ್ತು ಎಂದು ತಿಳಿದುಕೊಳ್ಳಬಹುದಾಗಿದೆ. ರಾಣಿಯರ ವೇಷಭೂಷಣ ವೈಭವ ಪೂರ್ಣವಾಗಿತ್ತು ಎಂದು ಕವಿಗಳೂ ವರ್ಣಿಸಿದ್ದಾರೆ.

*ವಿವರಗಳಿಗೆ ನೋಡಿ: ನಾಗರಾಜಯ್ಯ ಹಂ.ಪ. ಮತ್ತು ಕುಲಕರ್ಣಿ ಆರ್.ವಿ. (ಅನು) ೧೯೮೧ ಚಂದ್ರಪ್ರಭ ಪುರಾಣ ಪುಟ. ೩೭೮, ೫೦*

*ಶ್ರೀಕಂಠಯ್ಯ ಕೆ. ೧೯೮೩ ವಿಜಯನಗರ ಕಾಲದ ಸಾಹಿತ್ಯದಲ್ಲಿ ಜನಜೀವನ ಚಿತ್ರಣ ಪುಟ. ೨೪೮, ೪೦೩*

*ಸಿ.ಪಿ. ಕೃಷ್ಣಕುಮಾರ್ ೧೯೭೬ ನಾಗವರ್ಮನ ಕರ್ಣಾಟ ಕಾದಂಬರಿ – ಒಂದು ತೌಲನಿಕ ಹಾಗೂ ವಿಮರ್ಶಾತ್ಮಕ ಅಧ್ಯಯನ ಪುಟ. ೧೦೦*

೬೩೪. ರಾಣಿಯರು

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ರಾಣಿಯರಿಗೆ ಈ ಕೆಳಗಿನ ಕೆಲವು ಹೆಸರುಗಳು ಬಳಕೆಯಾಗಿವೆ.

ಕುಲಲಲನೆ (ಆದಿಪುರಾಣ – ೩–೭೧ವ): ಇದು ಕುಟುಂಬದೊಳಗಣ ಕರ್ತವ್ಯವನ್ನು ಸೂಚಿಸುವಂತಹುದು. ಅಷ್ಟಪ್ರಧಾನ ದೇವಿಯರು (ಆದಿಪುರಾಣ. ೧೩ವ) (೫–೨೨) ಅರಸನಿಗೆ ಬೇಟದರಸಿ, ಪಿರಿಯರಸಿಯರಿರುತ್ತಾರೆ. (ಶಾಂತಿಪುರಾಣ ೯–೫೦ವ, ೫೧, ೫೧ವ)

ಅಗ್ರಮಹಿಷಿ (ಆದಿಪುರಾಣ – ೪–೫೬) ಪಟ್ಟಮಹಿಷಿ ಅಂತಲೂ ಬಳಕೆಯಾಗಿದೆ. ಹೆಚ್ಚಿನ ಕಾವ್ಯಗಳಲ್ಲಿ ಈ ಹೆಸರುಗಳು ಬಳಕೆಯಾಗಿದ್ದು ಈ ಹೆಸರುಗಳು ಕೆಲವು ಸಂದರ್ಭಗಳಲ್ಲಿ ಸ್ಥಾನ ಸೂಚಕವಾಗಿದ್ದು, ಇನ್ನು ಕೆಲವು ಸಂದರ್ಭದಲ್ಲಿ ಅವಳು ಕೌಟುಂಬಿಕವಾಗಿ ಸ್ಥಾನ ನಿರ್ವಹಿಸುವ ಸೂಚನೆಗಳನ್ನು ಕೊಡುತ್ತವೆ.

ಗುಪ್ತರ ಕಾಲದಲ್ಲಿ ರಾಣಿಯರನ್ನು 'ದೇವಿ' ಎಂದು ಕರೆಯುವ ಕ್ರಮವು ಬಂದಿತು. ಈ ಕಾಲದಲ್ಲಿ 'ಅಗ್ರಮಹಿಷಿ'ಯನ್ನು 'ಮಹಾದೇವಿ' ಕರೆಯುವ ಪರಿಪಾಠವು ಬೆಳೆಯಿತು. ರಾಜರ ಕಾಲದ ದೊರೆಗಳು ರಾಣಿಯರನ್ನು 'ರಾಜ್ಞಿ' ಮತ್ತು 'ಮಹಿಷಿ' ಎಂದು ಕರೆದು ಮುಖ್ಯರಾಣಿಯರನ್ನು 'ಅಗ್ರಮಹಿಷಿ' 'ಪಟ್ಟಮಹಿಷಿ' 'ಪಟ್ಟಮಹಾದೇವಿ' ಮಹಾರಾಜ್ಞಿ' ಎಂದೂ ಕರೆದಿದ್ದಾರೆ. (ಅದೇ ಪು. ೬೬) (ಅಗ್ರಮಹಿಷಿಯು ಅಂತಃಪುರದ ಅತ್ಯುಚ್ಚ ಅಧಿಕಾರಿಯಾಗಿದ್ದಳು)

ಋಗ್ವೇದದ ಪ್ರಕಾರ ರಾಜನಿಗೆ ನಾಲ್ವರು ರಾಣಿಯರು ಮುಖ್ಯವಾಗಿ,

೧. ಮಹಿಷಿ – ಈಕೆ ಬ್ರಾಹ್ಮಣ ಕನ್ಯೆ. ರಾಜನು ಮೊದಲು ಮದುವೆಯಾದ ಹೆಣ್ಣು.
೨. ವಾವಾಕ್–ಮಧ್ಯಮ ಜಾತ್ಯ. ಮೊದಲನೆಯವಳು ಬಂಜೆಯಾದುದಕ್ಕೆ ಮದುವೆಯಾದವಳು.
೩. ಪರಿವೃತ್ತಿ – ಅರಸನಿಗೆ ಪ್ರಿಯಳಾದವಳು.
೪. ಪಾಲಾಗಲೀ – ಅರಸನ ಆಸ್ಥಾನದ ನ್ಯಾಯಾಧಿಕಾರಿಯ ಮಗಳು.

*ವಿವರಗಳಿಗೆ ನೋಡಿ: Dilip Kumar Ganguly 1979 Aspects of Ancient Indian Administration P. 50;78*

೬೩೫. ರುದ್ರ

ರುದ್ರ ಶಬ್ದವು 'ರುದ್' ಎಂಬ ಧಾತುವಿನಿಂದ ನಿಷ್ಪನ್ನವಾಗಿದ್ದು ರುದ್ ಎಂದರೆ ಚೀರು, ಕೂಗು, ಅಳು ಎಂಬ ಅರ್ಥಗಳು ಹೊಮ್ಮುತ್ತವೆ. ಈ ಅರ್ಥದ ಜಾಡು ಹಿಡಿದು ಹೊರಟ ಯಾಸ್ಕ, ಸಾಯಣ ಹಾಗೂ ಕೆಲವು ಪಾಶ್ಚಾತ್ಯ ಭಾಷ್ಯಕಾರರು ರುದ್ರನನ್ನು ಬಿರುಗಾಳಿಯ ದೇವತೆ, ಅಥವಾ ಛಿಳಿಛಿಟಿಸುವ ಅಗ್ನಿ ಮುಂತಾಗಿ ಅರ್ಥೈಯಿಸಿದ್ದಾರೆ.

*ವಿವರಗಳಿಗೆ ನೋಡಿ: ಶೇಷನವರತ್ನ ೨೦೦೮ ಋಗ್ವೇದ ಪುಟ. ೧೮೨.*

೬೩೬. ರುದ್ರ–ಶಿವ–ಅಭವ

ವೇದಕಾಲದಿಂದ ವರ್ಣಿತವಾಗುತ್ತ ಬಂದ 'ಶಿವರುದ್ರ'ದಲ್ಲಿಯ ಮೂಲ ಕೆಂಪು ಅರ್ಥದ ಪೂರ್ಣ ಸಾಕ್ಷಾತ್ಕಾರವಿದೆ. "ಅಸೌಯಃ ತಾಮ್ರ ಅರುಣ ಉತ ಬಭ್ರುಃ" ಎಂದು ಹೇಳಿ ಮುಂದೆ ಉಪುಯುಕ್ತವಾಗುವ ಮಂಗಲ ಶಬ್ದ 'ಶಿವ' ಶಬ್ದದ ಅರ್ಥವನ್ನು ವಿವರಿಸುವ ಭಾಷ್ಯವಾಗುತ್ತದೆ. ಶಿವ ಅಂದರೆ ಕೆಂಪು ಆಕಸ್ಮಿಕವಾಗಿ ಕಂಡರೆ ಶುಭಸೂಚಕ, ಮಂಗಲದಾಯಕವೆಂಬ ನಂಬಿಕೆಯಿದೆ. ಚಂದ್ರನಂತೆ 'ಶಿವ' ಶಬ್ದ 'ಶಿನ್', ಚೆನ್' ವರ್ಗದ ಶಬ್ದವಾಗಿದ್ದರೆ ಶಿವ ಪತ್ತಿಜನರ ಮೂಲದೇವತೆ ಎಂಬ ಮಾತು ಸಿದ್ಧವಾಗುತ್ತದೆ.

ಪತ್ತಿಜನರ ಆತ್ಮೀಯ ದೇವತೆ ಶಿವನಾಗಿದ್ದನೆಂದು ವೈದಿಕೃತಿಗಳು 'ಪತ್ತೀನಾಂ ಪತಿ' ಎಂದು ಹಾಡಿದರೆಂಬುದರಲ್ಲಿ ಸಂಶಯವಿಲ್ಲ. ಪತ್ತಿಜನರನ್ನು ಮುಂದೆ 'ಹಟ್ಟಿ' ಇಲ್ಲವೆ ಹಟ್ಟಿಗಾರರೆಂದು ಗುರುತಿಸಲಾಗುತ್ತಿತ್ತು. ಇದರಿಂದ ದೇವತೆಯ ನಾಮಾಂತರವೂ ಆಗಿದ್ದರೆ ಆಶ್ಚರ್ಯವಿಲ್ಲ ಎಂದು ಶಂಬಾ ಅಭಿಪ್ರಾಯ.

*ವಿವರಗಳಿಗೆ ನೋಡಿ: ರಸವಿದ್ಯೆ ಶಂಬಾ ಜೋಶಿ ೧೯೯೯ ಸಂಪುಟ. ೧ ಪುಟ. ೧೭೬*

೬೩೭. ರೂಪಕ

ಕವಿರಾಜಮಾರ್ಗಕಾರನು ಅದೇ ಇದು ಎಂಬಂತೆ ಅಭೇದದಿಂದ ಹೇಳುವುದು ರೂಪಕವಾಗಿರುತ್ತದೆಯೆಂದು ಹೇಳುತ್ತಾನೆ. (ಕವಿರಾಜಮಾರ್ಗ ೩ – ೧೧)

ಇದರಲ್ಲಿ ಸಮಸ್ತರೂಪಕ, ವ್ಯಸ್ತ ರೂಪಕ, ಸಾವಯವ ರೂಪಕ, ಅವಯವಿ ರೂಪಕ, ವಿಷಮ ರೂಪಕ, ಹೇತು ರೂಪಕ, ಶ್ಲೇಷ ರೂಪಕ, ವಿಭಿನ್ನ ರೂಪಕ, ರೂಪಕೋರು ರೂಪಕ, ರೂಪಕಾಪಹ್ನುತಿ; ಯುಕ್ತ ರೂಪಕ, ವ್ಯಾಜ ರೂಪಕಗಳಿವೆ ಯೆಂದು ಕವಿರಾಜ ಮಾರ್ಗಕಾರನು ಹೇಳುತ್ತಾನೆ.

(ಕವಿರಾಜಮಾರ್ಗ ೩ – ೧೧ ರಿಂದ ೨೬)

ರೂಪಕದ ಕುರಿತು ಕವಿರಾಜ ಮಾರ್ಗಕಾರನು ಈ ಕೆಳಗಿನಂತೆ ವಿವರಿಸಿದ್ದಾನೆ.

**ರೂಪಕ**ಮೆಂಬುದು ಪೆಱವಱ
ರೂಪಾದಿಗುಣಂಗಳಾನಭೇದೋಕ್ತಿಗಳಿಂ ।
ರೂಪಿಸುವುದಿಂತು ಬಾಹುಲ
ತಾ ಪಾದಾಂಬುಜ ಮುಖೇಂದು ನಯನಾಳಿಗಳಿಂ ॥ (೩–೧೨)

ರೂಪಕವೆಂದರೆ ಭೇದವನ್ನಳಿಸುವುದು ಎಂದು ಅವನು ಹೇಳಿದ್ದಾನೆ. ಆ ಭೇದವೇ ಇಲ್ಲಿ ಮುಖ್ಯ ಸಮಸ್ತರೂಪಕ, ವ್ಯಸ್ತರೂಪಕ, ಸಾವಯವ ರೂಪಕ, ಅವಯವಿರೂಪಕ, ಎಂದು ಅವನ್ನು ಗುರುತಿಸುತ್ತಾನೆ.

ರೂಪಕವನ್ನು ಸಾಮಾನ್ಯವಾಗಿ ಎರಡು ರೀತಿಯಲ್ಲಿ ಬಳಸಲಾಗುತ್ತದೆ. ೧. ಒಂದು ಅಲಂಕಾರದ ಹೆಸರಾಗಿ ರೂಪಕಾಲಂಕಾರವಾಗಿ ಹಾಗೂ ೨. ದೃಶ್ಯಕಾವ್ಯದ ಒಂದು ಜಾತಿಯಾಗಿ 'ರೂಪಕ' ಎಂದು ಬಳಸಲಾಗುತ್ತಿದೆ. ಉಪಮೆಯಲ್ಲಿ ಎರಡು ವಿಭಿನ್ನ

ವಸ್ತುಗಳ ಸಾಧಾರಣ ಧರ್ಮವನ್ನು ಲಕ್ಷಿಸಿ ಸಾದೃಶ್ಯೀಕರಿಸಿದರೆ, ರೂಪಕದಲ್ಲಿ ಎರಡು ವಿಭಿನ್ನ ವಸ್ತುಗಳ ನಡುವೆ ಅಭಿನ್ನತೆ ಅಥವಾ ಅಭೇದವನ್ನು ಸಾಧಿಸಲಾಗುತ್ತದೆ.

ಉದಾ: ಬಾಹುಲತೆ: ಪಾದಾಂಬುಜ, ನಯನಾಳಿ.

ರೂಪಕಾಲಂಕಾರದಲ್ಲಿ ಸುಮಾರು ೩೮ ಬಗೆಗಳನ್ನು ಅಲಂಕಾರಿಕರು ಗುರ್ತಿಸುತ್ತಾರೆ. ಅವುಗಳಲ್ಲಿ ಪ್ರಮುಖವಾದವುಗಳು: ೧.ಅಭೇದ ರೂಪಕಾಲಂಕಾರ, ೨. ತಾದ್ರೂಪ್ಯ ರೂಪಕ ೩. ಅಧಿಕ ತಾದ್ರೂಪ್ಯ ರೂಪಕ, ೪. ಮಾನ್ಯ ತಾದ್ರೂಪ್ಯ ರೂಪಕ. ೫. ಮಾಲಾರೂಪಕ, ೬. ಪರಂಪರಿತ ರೂಪಕ, ೭. ಶ್ಲಿಷ್ಟರೂಪಕ ಮುಂತಾದವು.

*ವಿವರಗಳಿಗೆ ನೋಡಿ : ಕವಿರಾಜಮಾರ್ಗದಲ್ಲಿನ ಎಂ.ವಿ. ಸೀತಾರಾಮಯ್ಯನವರ ಟಿಪ್ಪಣಿ*

**೬೩೮. ರೇಚಕ**

*ಕರಣಂ ರೇಚಕಮಂಗಹಾರಮಿನಿತೆಂದೋದುತ್ತುಮಿರ್ಪೋದದ*
*ತ್ತಿರಲೀ ನಾಟ್ಯರಸಂ............*

*(ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೭-೧೨೦)*

ಪಂಪ ವಿಕ್ರಮಾರ್ಜುನ ವಿಜಯದಲ್ಲಿ 'ಇಟ್ಟಳಮಾಯ್ತು ದೇಸಿ' ಎಂದು ಹೇಳುತ್ತಾನೆ. (೮-೯೧)

ನಾಟ್ಯದಲ್ಲಿ ನಾಲ್ಕು ಭಂಗಿಗಳಿವೆ. ೧. ಸಮಭಂಗ - ದೇಹದಲ್ಲಿ ಯಾವ ಬಾಗುವಿಕೆಯೂ ಇಲ್ಲ. ೨. ಅಭಂಗ - ಸ್ವಲ್ಪ ಬಾಗುವಿಕೆ. ಒಂದು ಕಾಲಲ್ಲಿ ಹಾಕಿ ನಿಲ್ಲುವುದು. ೩. ಅತಿಭಂಗ - ತೀರ ಬಾಗುವಿಕೆ. ತಾಂಡವದ ಲಕ್ಷಣ - ಬಾಣ ಬಿಡುವಾಗ ೪. ತ್ರಿಭಂಗ - ಮೂರು ಕಡೆ ಬಾಗುವಿಕೆ, ರುಂಡ, ಮುಂಡ, ಕೈ ಕಾಲುಗಳ ಬಾಗುವಿಕೆ, ಲಾಸ್ಯದ ಲಕ್ಷಣ.

ರೇಚಕವು ಇನ್ನೊಂದು ರೀತಿಯ ಚಲನೆ. ಒಂದು ಅಂಗದ ವರ್ತುಲಾಕಾರದ ಚಲನೆಗೆ ರೇಚಕವೆಂದು ಕರೆಯುತ್ತಾರೆ. ಇದರಲ್ಲಿ ನಾಲ್ಕು ವಿಧ: ಪಾದರೇಚಕ, ಕಟಿರೇಚಕ, ಹಸ್ತರೇಚಕ, ಗ್ರೀವಾರೇಚಕ ಅಂದರೆ ರೇಚಕವು ಚಲನೆಯನ್ನು ಸೂಚಿಸುತ್ತದೆ.

ಉಸಿರು ಬಿಡುವುದು; ನಿಶ್ವಾಸವನ್ನು ರೇಚಕವೆಂದು ಕರೆಯುತ್ತಾರೆ.

*ವಿವರಗಳಿಗೆ ನೋಡಿ: ವೈಶಾಖಸ್ಥಾನ, ಅಘುವಿಘಾತ; ಕರಣ*
*ಆದ್ಯರಂಗಾಚಾರ್ಯ ೧೯೮೩ ಶ್ರೀ ರಂಗ ನಾಟ್ಯಶಾಸ್ತ್ರ ಸಂಗ್ರಹ*

**೬೩೯. ಲಕ್ಷಣ**

'ಲಕ್ಷಣ' ಎನ್ನುವುದು ತ್ರಿಕಾಲವನ್ನು; ಐಶ್ವರ್ಯಾದಿಗಳನ್ನೂ ಸೂಚಿಸುತ್ತದೆ.

(ಚಾವುಂಡರಾಯ ಪುರಾಣ-ಶಾಂತಿ ಪುರಾಣಂ ಪುಟ. ೧೬೯)

ಲಕ್ಷಣಗಳಿಗೆ ಸ್ವತಂತ್ರ ಅಸ್ತಿತ್ವ ಇದೆ ಎಂದು ಭಾವಿಸುವುದಾದರೆ ಅವು ವ್ಯಾಪಿಸಬಹುದಾದ ಪದಾರ್ಥಗಳ ಸಾಧ್ಯತೆಗಳೆಂದರೆ ೧) ಲಕ್ಷಣಗಳು ಇರುವ ಪದಾರ್ಥಗಳು ೨) ಲಕ್ಷಣಗಳಿಲ್ಲದ ಪದಾರ್ಥಗಳು ೩) ಲಕ್ಷಣಗಳಿರುವ/ಇಲ್ಲದಿರುವ ವಸ್ತುಗಳು.

ಇಲ್ಲಿಗೆ ಅವರ ಪೂರ್ಣ ಪ್ರಾಪಂಚಿಕ ಸಾಧ್ಯತೆಗಳು ಮುಗಿಯುತ್ತವೆ. ಈ ಮೂರೂ ಅವಸ್ಥೆಗಳಲ್ಲಿ ಲಕ್ಷಣಗಳು ಸ್ವತಂತ್ರವಾಗಿ ಇರಲು ಸಾಧ್ಯವಿಲ್ಲ. ಹಾಗಾಗಿ ಅವುಗಳಿಗೆ ಸ್ವಭಾವವಿಲ್ಲವೆಂದೇ ಅರ್ಥ ಎನ್ನುವುದು ನಾಗಾರ್ಜುನನ ವಾದ.

*ವಿವರಗಳಿಗೆ ನೋಡಿ: ಎಸ್. ನಟರಾಜ ಬೂದಾಳು ೨೦೦೬ ನಾಗಾರ್ಜುನನ ಮೂಲಮಾಧ್ಯಮಿಕಕಾರಿಕಾ ಪುಟ. ೨೯*

*ಡಾ॥ ಟಿ.ವಿ.ವೆಂಕಟಾಚಲಶಾಸ್ತ್ರಿ ೧೯೯೯ ಶ್ರೀವತ್ಸ ನಿಘಂಟು ಪುಟ. ೩೩೦*

**೬೪೦. ಲಕ್ಷ್ಮೀ**

ಪಂಪನು ಸಂಪತ್ತಿನ ಸೂಚಕವಾಗಿ ಲಕ್ಷ್ಮಿಯ ಹೆಸರನ್ನು ಬಳಸುತ್ತಾನೆ. (ಆದಿಪುರಾಣ ೨-೬, ೪-೬೧ವ, ೮-೨೬ವ, ಪಂಪಭಾರತ ೬-೬೬ವ) 'ಪಂಪಭಾರತ'ದಲ್ಲಿ ಲಕ್ಷ್ಮಿ, ಜಯಲಕ್ಷ್ಮಿ, ಕೀರ್ತಿಲಕ್ಷ್ಮಿ ಎನ್ನುವ ಹೆಸರುಗಳೂ ಬಳಕೆಯಾಗಿವೆ. (೮-೧, ೯-೧ ಇತ್ಯಾದಿ) ಇದಿಷ್ಟೇ ಅಲ್ಲದೆ, 'ಪಂಪಭಾರತ'ದಲ್ಲಿ ಐಶ್ವರ್ಯಕ್ಕೆ ದ್ಯೋತಕವಾದ ಲಕ್ಷ್ಮೀ ದೇವತೆಯು ವಿವರವಾದ ಚಿತ್ರಣವೂ ದೊರೆಯುತ್ತದೆ. ದುರ್ಯೋಧನನ ಊರುಭಂಗವಾದ ಬಳಿಕ ಲಕ್ಷ್ಮಿಯು ಹೊರಟು ಹೋಗುವಾಗ ಅಶ್ವತ್ಥಾಮನು ಲಕ್ಷ್ಮಿಯಲ್ಲಿ ಹೀಗೆ ಹೇಳುತ್ತಾನೆ. "ಮಿಂಚುತಿರ್ಪ ಕೂರಸಿಗಳ ಮೇಲೆ ಸಂಚರಿಪೆ ವೈರಿನರಾಧಿಪ ಸೈನ್ಯ ವಾರ್ಧಿಯಂ, ಸೂಸದೊಡೆ ಪುಟ್ಟಿದೀ ನಿನಗೆ ವಕ್ರಿಸಲೆನ್ನನದೆಂತು ತೀರ್ಗುಮೋ" (೧೩-೧೦೧) ಹೀಗೆ ಹೇಳಿ ಅಶ್ವತ್ಥಾಮನು ಆಕೆಯನ್ನು ಹಿಂತಿರುಗಿಸುತ್ತಾನೆ. ಇದೇ ರೀತಿಯ ಕಲ್ಪನೆಯು ರನ್ನನ 'ಸಾಹಸಭೀಮ ವಿಜಯ' ಕೃತಿಯಲ್ಲಿಯೂ ಬಂದಿದೆ. (೯-೩, ೧೫) ಇದರಲ್ಲಿ ಅಶ್ವತ್ಥಾಮನು ಲಕ್ಷ್ಮಿಗೆ ಹೀಗೆ ಹೇಳುತ್ತಾನೆ.

ಕಲಿಪಂದೆಯೆಂದು ಬಗೆಯದೆ
ಕುಲಜಂ ಕುಲಹೀನನೆಂದು ಬಗೆಯದೆ ತರುಣಂ ।
ಸಲೆ ವೃದ್ಧನೆಂದು ಬಗೆಯದೆ
ನೆಲಸುವೆ ನಿನ್ನಿಂ ನಿಕೃಷ್ಟರೆಂಬರುಮೊಳರೇ ॥

ಈ ಎರಡೂ ಕೃತಿಗಳಲ್ಲಿ ಬಂದಿರುವ ಲಕ್ಷ್ಮಿಯ ಪಾತ್ರವನ್ನೇ ಹೋಲುವ 'ಆದಿಪುರಾಣ'ದ ಲಕ್ಷ್ಮಿಯ ಬಗೆಗಿನ ವಿವರವನ್ನು ಗಮನಿಸಬಹುದು. ಬಾಹುಬಲಿಯು ಭರತನಲ್ಲಿ ಹೇಳುತ್ತಾನೆ. "ನಿನ್ನೊಲಿದ ಲತಾಂಗಿಗಂ ಧರೆಗಮಾಟಿಸಿದಂದು ನೆಗಳ್ತೆ ಮಾಸದೇ" (ಆದಿಪುರಾಣ – ೧೪–೧೨೮) ಈ ಆಧಾರಗಳ ಹಿನ್ನೆಲೆಯಲ್ಲಿ ಪಂಪನು ಚಿತ್ರಿಸುವ 'ಲಕ್ಷ್ಮಿ'ಯ ಪಾತ್ರ ಚಿತ್ರಣವು ಅನೇಕ ಅಂಶಗಳನ್ನು ಅನುರಣಿಸುತ್ತದೆ.

ಪಂಪನ ಕಾವ್ಯಗಳಲ್ಲಿ ಹೆಣ್ಣುಗಳನ್ನು ಲಕ್ಷ್ಮಿಗೆ ಸಮಾನವಾಗಿ ಸೂಚಿಸಲಾಗಿದೆ. ಭೂಮಿ ಮತ್ತು ಹೆಣ್ಣಿನ ಅಧಿಕಾರವು ಹೋರಾಟದ ಮೂಲಕ ದೊರೆಯುವುದು ಎನ್ನವುದನ್ನು ಇದು ಸೂಚಿಸುತ್ತಿರಬಹುದು.

ಕೃತಿಗಳಲ್ಲಿ ಉಕ್ತವಾದಂತೆ ಲಕ್ಷ್ಮಿಯು ಆಶ್ರಿತಳು. ವೈದಿಕ ಪರಂಪರೆಯ ಪ್ರಕಾರ ಲಕ್ಷ್ಮಿಯು ಆರಾಧನೆಗೊಳ್ಳುವವಳು. ಯಕಶ್ಚಿತ್ ರಾಜರು ಆಕೆಯನ್ನು ಬಂಧಿಸಲಾರರು ಅಥವಾ ಹಿಡಿತದಲ್ಲಿರಿಸಿಕೊಳ್ಳಲಾರರು.

ಪಂಪ ಭಾರತದಲ್ಲಿ ಉಕ್ತವಾದಂತೆ, ಮಥನದ ಮೂಲಕ ಹುಟ್ಟುವ ಹೆಣ್ಣು – ಲಕ್ಷ್ಮಿ. 'ಮಥನ' ಎನ್ನುವುದಕ್ಕೆ ಅನೇಕ ಅರ್ಥಗಳು ಸಂಪ್ರಾಪ್ತಿಯಾಗುತ್ತವೆ. (೧) ಮಥನ – ಕೇವಲ ಪೌರಾಣಿಕ ಅರ್ಥವನ್ನು ಧ್ವನಿಸುವಂತಹುದು ಇದು ಸಮುದ್ರ ಮಂಥನವನ್ನು ಸೂಚಿಸುತ್ತದೆ. (೨) ಮಂಥನ ಹೋರಾಟವನ್ನು ಸೂಚಿಸುವಂತಹುದು. ಇಲ್ಲಿ ಮಂಥನ ಲೌಕಿಕ ಅರ್ಥವನ್ನು ಸೂಚಿಸುತ್ತದೆ. ಪಂಪನ ಎರಡೂ ಕೃತಿಗಳಲ್ಲಿ ಉಕ್ತವಾದ ಈ ಪ್ರಸಂಗ, ಮತ್ತು ರನ್ನನ ಗದಾಯುದ್ಧದದ ಪ್ರಸಂಗಗಳಿಗೆ ಈ ಎರಡೂ ಅರ್ಥಗಳನ್ನು ಅನ್ವಯಗೊಳಿಸಬಹುದು. 'ಆದಿಪುರಾಣ'ದ ಭರತ ಬಾಹುಬಲಿ ಪ್ರಸಂಗದಲ್ಲಿ ಬಾಹುಬಲಿಯು ಹೇಳುವ 'ಭಟಖಡ್ಗ ಮಂಡಲೋತ್ಪಲವನ ವಿಭ್ರಮ ಭ್ರಮರಿಯಪ್ಪ' 'ಚಲಾಚಲ ರಾಜ್ಯಲಕ್ಷ್ಮಿ' (ಮನೋಹರೀ ರಾಜ್ಯಲಕ್ಷ್ಮಿ ೪–೧೨೮) 'ಮಥನ'ದ ಅರ್ಥವನ್ನು ಸೂಚಿಸುತ್ತದೆ. 'ಪಂಪ ಭಾರತ'ದಲ್ಲಿ 'ಮಿಂಚುತಿರ್ಪ ಕೂರಸಿಗಳ ಮೇಲೆ ಸಂಚರಿಸುವ ಲಕ್ಷ್ಮಿ' (೧೩–೧೦೧) ಗದಾಯುದ್ಧದಲ್ಲಿ ಬರುವ ನಿನ್ನಿಂದಾಗಿ ಅಣ್ಣತಮ್ಮಂದಿರು, ತಂದೆ – ಮಗ, ಗುರು – ಶಿಷ್ಯರು ಹೋರಾಡುತ್ತಾರೆ. (೯–೭) ಎನ್ನುವ ಮಾತುಗಳು ಹೋರಾಟದ ಅರ್ಥವನ್ನು ಸೂಚಿಸುತ್ತವೆ.

ಇದರೊಂದಿಗೆ ಸಾಮಾನ್ಯವಾಗಿ ಕಾವ್ಯಗಳಲ್ಲಿ ಸೂಚಿತವಾದಂತೆ – ರಾಜ ಹೊಂದುವ ಎಲ್ಲಾ ವಿಷಯಗಳು 'ಲಕ್ಷ್ಮಿ'ಯ (ಸಂಪತ್ತಿನ) ಅರ್ಥವನ್ನು ಪಡೆದುಕೊಳ್ಳುತ್ತದೆ. ರಾಜ್ಯಲಕ್ಷ್ಮಿ, ವೀರಲಕ್ಷ್ಮಿ, ಧನಲಕ್ಷ್ಮಿ, ಯಶೋಲಕ್ಷ್ಮಿ, ಜಯಲಕ್ಷ್ಮಿ ಇತ್ಯಾದಿ ಇವೆಲ್ಲಾ ರಾಜನ ಸಂಪತ್ತುಗಳು.

ಈ ಮೇಲಿನ ವಿವರಣೆಗಳ ಮೂಲಕ, ಭೂಮಿಯನ್ನು 'ಲಕ್ಷ್ಮಿ'ಯಾಗಿ ನಾಟಕೀಯ ಅಭಿವ್ಯಕ್ತಿಯಾಗಿಸಿ ಪಂಪನು ತನ್ನ ಕೃತಿಗಳಲ್ಲಿ ತಂದಿದ್ದಾನೆ ಎನ್ನಬಹುದು.

ಕಂಜನವನದಂತೆ **ಲಕ್ಷ್ಮೀ**
ರಂಜಿತಮುಂ ಚಿತ್ರಪತ್ರಮುಂ ಚಕ್ರಾಂಕ ।
ವ್ಯಂಜಿತಮುಮಪ್ಪ ಬೀಡಂ
ಮುಂಜಿಜೀವಂತಿರುಳೊಳಿಜೆದಶ್ವತ್ಥಾಮಂ ॥ (ಸಾಹಸ ಭೀಮ ವಿಜಯ ೯–೩೨)

ವಿಲಕ್ಷ್ಮೀರಂಜಿತಹಿವಾದ ೧. ಲಕ್ಷ್ಮೀದೇವತೆಯಿಂದೊಡಗೂಡಿ ಶೋಭಿಸುವ. ೨. ಐಶ್ವರ್ಯದಿಂದ ವಿಜೃಂಭಿಸುವ), ವಿಚಿತ್ರಪತ್ರಹಿ ವಾದ ೧. ಬಗೆಬಗೆಯ ಎಲೆಗಳನ್ನುಳ್ಳ, ವ್ಯಕ್ತವಾದ. ೨. ರಥದ ಗಾಲಿಗಳ ಗುರುತಿನಿಂದ ಕೂಡಿದ) ಆ ಶಿಬಿರವನ್ನು ಬಂದು ಕಮಲ ಸರೋವರವನ್ನು ಹಿಮವು ಘಾತಿಸುವಂತೆ, ಅಶ್ವತ್ಥಾಮನು ಘಾತಿಸಿದ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೪ ಪುಟ. ೩೧೬.*

**೬೪೧. ಲಕ್ಷ್ಯಸಿದ್ಧಿ**

*ಗುರುಲಕ್ಷ್ಯಸಿದ್ಧಿ ಯಿಲ್ಲೆನೆ*
*ಪರಿವಂಬಂ ಪರಿದು ಪಿಡಿದು ತರ್ಪಂತಿರೆ...............*

*(ಸಾಹಸ ಭೀಮ ವಿಜಯ ೬-೨೯)*

ಇಲ್ಲಿ ಲಕ್ಷ್ಯ ಎಂದರೆ ಗುರಿಯೆಂದರ್ಥ. ಸಿದ್ಧಿ ಎಂದರೆ ಗುರಿಯೆಡೆಗೆ ಸಾಧನೆ ಎಂದರ್ಥ.

ಹಠಯೋಗದ ಪ್ರಕಾರ ಮನಸ್ಸನ್ನು ಕೇಂದ್ರೀಕರಿಸಿ ಧ್ಯಾನಸ್ಥ ಸ್ಥಿತಿಗೆ ಹೋಗುವುದು. ಇಲ್ಲಿ ಲಕ್ಷ್ಯಸಿದ್ಧಿಯು ಹಾಗೆಯೇ ಬಿಲ್ಲು ವಿದ್ಯೆಯಲ್ಲಿ ಗುರಿಯನ್ನು ಸಾಧಿಸುವುದಕ್ಕೆ ಲಕ್ಷ್ಯಸಿದ್ಧಿಯೆಂದು ಕರೆಯುತ್ತಾರೆ. ಯುದ್ಧ ತಂತ್ರಗಳಲ್ಲಿ ಗುರಿಸಾಧನೆಯು ಮುಖ್ಯ.

**೬೪೨. ಲಾವಣಿಗೆ**

*ಸೋದಿಗೆ* ***ಲಾವಣಿಗೆ*** *ಘೃತ ಪೂರಂ ಲಡ್ಡುಗೆ ಮಂಡಗೆ ಮೊದಲಾಗೊಡೆಯ ಪದಿನೆಂಟು ತೆಱದ ಭಕ್ಷ್ಯರೂಪಂಗಳುಮಂ.............*

*(ಡಿ.ಎಲ್.ಎನ್. ೨೦೦೯ ಪುಟ.೧೨೨)*

ಲಾವಣಿಯೆಂದರೆ ಉಪ್ಪಿನಕಾಯಿ ಎಂದು ಅರ್ಥ. ವಡ್ಡಾರಾಧನೆಯಲ್ಲಿ ಹದಿನೆಂಟು ರೀತಿಯ ಭಕ್ಷ್ಯಗಳಲ್ಲಿ ಉಪ್ಪಿನಕಾಯಿಯನ್ನು ಹೆಸರಿಸಲಾಗಿದೆ. ಉಪ್ಪಿನ ನೀರಿನಲ್ಲಿ ಹಾಕಿದ ಕಾಯಿಯೇ ಉಪ್ಪಿನಕಾಯಿ. ಊಟಕ್ಕೆ ಉಪ್ಪಿನಕಾಯಿ ಇದ್ದಹಾಗೆ ಎಂಬ ಮಾತು ಚಾಲ್ತಿಯಲ್ಲಿದೆ. ಉಪ್ಪಿನಕಾಯಿಯು ಉಪ್ಪುಕಾರ; ಮತ್ತು ಕಾಯಿಯ ಮಿಶ್ರಣ. ಇದು ಊಟದ ತಟ್ಟೆ ಅನ್ನದಂತೆ ಪ್ರಧಾನವಲ್ಲ. ನೆಂಚಿಕೊಳ್ಳಲು ಇರುವ ಪದಾರ್ಥ. ಕಾಯಿಯನ್ನು ಉಪ್ಪಿನಲ್ಲಿ ಹಾಕಿಡುವುದರಿಂದ ಇದಕ್ಕೆ ಉಪ್ಪಿನಕಾಯಿ ಎಂದು ಕರೆಯಲಾಗಿದೆ.

**೬೪೩. ಲೆಂಕರು**

ಅರಸನು ಸತ್ತಾಗ ಅವನೊಂದಿಗೆ ಕೆಲವರು ಸಾಯಲು ಹೋಗುತ್ತಾರೆ. ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ. ಇಂಥವರನ್ನು 'ಲೆಂಕರು' 'ವೇಳೆವಾಳಿಗಳು' 'ಕೀಲ್ಗುಂಟೆ' ಎಂದು ಕರೆಯುತ್ತಾರೆ.

"ಅರಸನು ಸತ್ತಾಗ ಅವನೊಂದಿಗೆ ಅವನ ಆಪ್ತರಾದ ಕೆಲವರು ಆತ್ಮ ಹತ್ಯೆಯನ್ನು ಮಾಡಿಕೊಳ್ಳುವುದರ ಮೂಲಕ ತಮ್ಮ ಒಡೆಯನನ್ನು ಅನುಸರಿಸುವ ಒಂದು ಸಂಪ್ರದಾಯ

ಪ್ರಾಚೀನ ಕರ್ನಾಟಕದಲ್ಲಿತ್ತು. ಇದು ಸೇವಕನೆನ್ನಿಸಿಕೊಂಡವನು ತನ್ನ ಒಡೆಯನಾದವನಿಗೆ ತೋರುವ ನಿಷ್ಠೆಯ ಪರಾಕಾಷ್ಠೆ. ಈ ರೀತಿ ತಮ್ಮ ಒಡೆಯನನ್ನು ಅನುಸರಿಸುವುದು ಒಂದು ಬಲವಂತವಾದ ಹತ್ಯೆಯಾಗಿರದೆ, ಒಂದು ಸ್ವಪ್ರೇರಿತ ಅಂಶವಾಗಿತ್ತೆಂದೇ ತಿಳಿಯುತ್ತದೆ. ಅರಸನು ಬದುಕಿರುವಾಗಲೇ ಯಾರು ಮೊದಲೇ ಪ್ರತಿಜ್ಞೆ ಮಾಡಿರುತ್ತಾರೆಯೋ ಅಂಥ 'ಲೆಂಕರು', 'ವೇಳೆವಾಳಿ'ಗಳು 'ಕೀಱ್ಗುಂಟೆ' ಮತ್ತು 'ಗರುಡ' ಎಂಬುದಾಗಿ ಕರೆದಿದೆ. ಕ್ರಿ.ಶ ೮೬೫ರ ಮೇವುಂಡಿಯ ಶಾಸನವೊಂದು ರೆಟ್ಟಿಯಣ್ಣ ಎಂಬುವನು, ತನ್ನ ಒಡೆಯನು ರೋಗದಿಂದ ನರಳುತ್ತಿರುವುದನ್ನು ಕಂಡು ಸಹಿಸಲಾರದೆ, ತನ್ನ ಒಡೆಯನಂತೆ ತಾನೂ ಯಾತನೆಯನ್ನು ಅನುಭವಿಸಬೇಕೆಂದು, ಊಟವನ್ನು ಬಿಟ್ಟು ಮೂವತ್ತು ಗಾವುದ ನಡೆದು ಹಿಂತಿರುಗಿ ಬರುವ ವೇಳೆಗೆ, ತನ್ನ ಅರಸನು ಸತ್ತು ಹೋಗಿದ್ದು, ಅವನನ್ನು ಸುಡುತ್ತಿರುವ ದೃಶ್ಯವನ್ನು ಕಾಣುತ್ತಾನೆ. ಆಗ ತಕ್ಷಣ ಅವನು ತನ್ನ ಒರೆಯಿಂದ ಕತ್ತಿಯನ್ನು ತೆಗೆದು ಇರಿದುಕೊಂಡನೆಂದು ತಿಳಿಸುತ್ತದೆ.

ಸುಮಾರು ಹತ್ತನೆಯ ಶತಮಾನಕ್ಕೆ ಸೇರಿದ ಶಾಸನವೊಂದರಲ್ಲಿ "ಲೆಂಕರ ಕೊಂದವರಿಲ್ಲ, ನಾಯ ತಿಂದವರಿಲ್ಲ" ಎಂದಷ್ಟೆ ಬರೆಯಲಾಗಿದೆ. ಅಂದರೆ ನಾಯಿಯ ಮಾಂಸವನ್ನು ತಿನ್ನುವವರು ಎಷ್ಟು ಅಪರೂಪವೋ ಅಷ್ಟೇ ಅಪರೂಪ ಲೆಂಕರನು ಕೊಲ್ಲುವುದು ಎಂಬುದು ಇದರ ಅಂತರಾರ್ಥ. ಲೆಂಕರು ತಮ್ಮ ಜೀವನ ಇರುವವರೆಗೆ ತಮ್ಮ ಅರಸನಿಗಾಗಿ ಹೋರಾಡಿ ಅವನನ್ನು ರಕ್ಷಿಸುತ್ತಿದ್ದರು. ಅವನನ್ನು ರಕ್ಷಿಸುವುದು ಅಸಾಧ್ಯದ ಪ್ರಶ್ನೆಯಾದಾಗ ಅವನನ್ನು ಸಾವಿನಲ್ಲಿಯೂ ಹಿಂಬಾಲಿಸುತ್ತಿದ್ದರು. ಇಂಥ ಲೆಂಕರೊಡನೆ ಅವರ ಪತ್ನಿಯರೂ ಕೆಲವೊಮ್ಮೆ ಸಹಗಮನ ಮಾಡುತ್ತಿದ್ದರು.

ಲೆಂಕ ಎಂದರೆ ಆಪ್ತ ಸೇವಕವೆಂದೂ ಅರ್ಥವಿದೆ. ಹಾಗೆಯೇ ಭಕ್ತ ಎಂದು ಕೂಡಾ. ವೇಳೆವಾಳಿಯೆಂದರೆ ಒಡೆಯನು ಸತ್ತರೆ ತಾನೂ ಸಾಯುವೆನೆಂದು ಪ್ರತಿಜ್ಞೆ ಮಾಡುವ ವ್ಯಕ್ತಿ. ತನ್ನ ಬಾಳನ್ನು ಅರಸನಿಗಾಗಿ ಮುಡಿಪಾಗಿಟ್ಟ ಸ್ವಾಮಿಭಕ್ತನನ್ನು ಗರುಡನೆಂದು ಕರೆಯುತ್ತಾರೆ.

*ವಿವರಗಳಿಗೆ ನೋಡಿ: ಆರ್. ಶೇಷಶಾಸ್ತ್ರಿ ೨೦೦೫ ಶಾಸನ ಪರಿಚಯ ಪುಟ. ೩೫*

## ವ

**೬೪೪. ವಂಧ್ಯರು**

*ಪಸವಿನ್ನೊಳನ್ನಮಂ ಪಸಿದು ಬಂದವರ್ಗಿಕ್ಕುವ ಯುದ್ಧರಂಗದೊಳ್*
*ಕುಸಿಯದೆ ಸೂಜಿಗೊಳ್ಳದೆ ರಣಕ್ಕೆ ಶುಚಿತ್ವಮನಪ್ಪುಕೆಯ್ವ ಮಾ ॥*
*ನಸಿಕೆಯ ನಾಲ್ವರುಂ ನಮಗೆ **ವಂಧ್ಯರ**ವಂದಿರೊಳೀತನಲ್ತೆ ಸಾ*
*ಹಸಧನನೆಂದು ಕಯ್ಮುಗಿದನಂದಭಿಮನ್ಯುಗೆ ಕೌರವೇಶ್ವರಂ ॥*

*(ಸಾಹಸಭೀಮ ವಿಜಯಂ ೪-೬೦)*

ಹಸಿದವನಿಗೆ ಅನ್ನನೀಡುವವನು; ಯುದ್ಧರಂಗದಲ್ಲಿ ಕುಸಿಯದವನು; ಸುಲಿಗೆ ಮಾಡದವನು; ಯುದ್ಧ ಧರ್ಮ ಮೀರದವನು; ಅಂಥವರು ಮಹಾತ್ಮ ಎಂದೆನ್ನಿಸಿ ಕೊಳ್ಳುವರು. ಲೋಕದಲ್ಲಿ ನಾಲ್ಕು ಮಂದಿಯು ಪೂಜಾರ್ಹರಾಗಿರುತ್ತಾರೆ. ತಾನು ಹಸಿದಿರುವಾಗ, ಹಸಿದು ಬಳಲಿ ಬಂದವನಿಗೆ ಉಣಲಿಕ್ಕುವಾತನು, ರಣರಂಗದಲ್ಲಿ ಹಿಂಜರಿಯದವನು, ಪರರ ಸೊತ್ತನ್ನು ಸುಲಿಗೆ ಮಾಡದಾತನು, ಯುದ್ಧದಲ್ಲಿ ಧರ್ಮವನ್ನು ಅಂಗೀಕರಿಸುವಾತನು. ಈ ನಾಲ್ವರ ಗುಣವೆಲ್ಲವೂ ಮಡಿದ ಅಭಿಮನ್ಯು ಕುಮಾರನಲ್ಲಿದೆ. ಇದು ಮಹಾತ್ಮನಾದ ಅಭಿಮನ್ಯುಗೆ ಸುಯೋಧನನ ಶ್ರದ್ಧಾಂಜಲಿ; ಶೋಕಗೀತೆ.

**೬೪೫. ವಂಧ್ಯಾಲಯ**

*ಸತಿ* ***ವಂಧ್ಯಾಲಯ****ದಂತಿದೆ*
*ಪಲಕಾಲಂ ಪುಷ್ಪವತಿಯೆನಾದಪೆನೆಂದುಂ*
*ಫಲವತಿಯಾದಪೆನಿಲ್ಲೆಂದು....................(ಸುಕುಮಾರ ಚರಿತ್ರೆ ೯-೯೮)*

ವಂಧ್ಯಾಲಯವೆಂದರೆ ಬಂಜೆಯ ಮನೆ; ಮಕ್ಕಳಿಲ್ಲದ ಮನೆ ಎಂದರ್ಥ. ವಂಧ್ಯಾ ಎಂದರೆ ಬಂಜೆಯೆಂದರ್ಥ. ಪ್ರಾಣಿಗಳಲ್ಲಾದರೆ ಗೊಡ್ಡು ಎಂಬ ಪದ ಬಳಸುತ್ತೇವೆ. ಉದಾ: ಗೊಡ್ಡು ಆಕಳು, ಗೊಡ್ಡು ಎಮ್ಮೆ ಇತ್ಯಾದಿ.

ಬಂಜೆಯ ಬಗ್ಗೆ ಸಾಮಾಜಿಕ ಧೋರಣೆಗಳು ವಿಭಿನ್ನವಾಗಿದೆ. ಬಂಜೆಯನ್ನು ಕೀಳಾಗಿ ನೋಡುವ ರೂಢಿಯು ಈಗಲೂ ಇದೆ. ಮಕ್ಕಳಿಲ್ಲದ ಹೆಣ್ಣನ್ನು ಬಂಜೆ ಎಂದು ಕರೆಯುವುದು ಮಾತ್ರವಲ್ಲ, ಅವಳ ಜೀವನವು ಕೂಡ ವ್ಯರ್ಥವೆಂದು ಟೀಕಿಸಲಾಗುತ್ತದೆ.

**೬೪೬. ವಕ್ಖಾಣಿಸು**

*ಕ್ರಿಯಾಕಾರಕ ಸಂಬಂಧದಿನೆಲ್ಲಮಂ* ***ವಕ್ಖಾಣಿಸಿ*** *ತೋಱಿದೊಡರಸಂ.........*
*(ಡಿ.ಎಲ್.ಎನ್. ೨೦೦೯ ಪುಟ.೬೭)*

ವಕ್ಖಾಣಿಸು ಎಂದರೆ ವ್ಯಾಖ್ಯಾನಿಸು ಎಂದು ಅರ್ಥ. ಉದ್ಧೃತ ಭಾಗದಲ್ಲಿರುವಂತೆ ಕ್ರಿಯಾಕಾರಕ ಸಂಬಂಧವನ್ನು ವ್ಯಾಖ್ಯಾನಿಸುವುದು. ವಾಸ್ತವವಾಗಿ ವ್ಯಾಖ್ಯಾನಕಾರರು ಪಠ್ಯ ಮತ್ತು ಶ್ರೋತೃಗಳ ನಡುವೆ ಸಂಬಂಧವನ್ನು ಬೆಸೆಯುತ್ತಾರೆ. ವ್ಯಾಖ್ಯಾನದ ಕೆಲಸ ವೆಂದರೆ ಪಠ್ಯದ ಶಬ್ದಾರ್ಥಗಳನ್ನು ವಿವರಿಸುವುದು. ವಾಕ್ಯದ ವಿಶಿಷ್ಟತೆ ಅದರ ಕ್ರಿಯಾಕಾರಕ ಸಂಬಂಧಗಳನ್ನು ವಿಶದಪಡಿಸುವುದು ವ್ಯಾಖ್ಯಾನಕಾರರ ಪ್ರಮುಖ ಕೆಲಸವಾಗಿದೆ. ಈ ದೃಷ್ಟಿಯಿಂದ ವಡ್ಡಾರಾಧನೆಯಲ್ಲಿ ಬರುವ ಈ ವಿಷಯವು ಸಾಂಸ್ಕೃತಿಕವಾಗಿ ಮಹತ್ವವಾದದ್ದು. ಟೀಕೆ, ಟಿಪ್ಪಣಿ, ವ್ಯಾಖ್ಯಾನ ಇವುಗಳೆಲ್ಲಾ ಸಮಾನ ಅರ್ಥದ ಧ್ವನಿ ಎಂದು ಸೂಚಿಸುತ್ತದೆ.

**೬೪೭. ವಡ್ಡಾರಾಧನೆ ಕತೆ**

ಕನ್ನಡದ ಕೃತಿಗಳ ಪ್ರಾಚೀನತೆಯ ಹೆಜ್ಜೆಯಲ್ಲಿ ಗದ್ಯ ಕೃತಿ ಕಾಣಸಿಗುವುದು ವಡ್ಡಾರಾಧನೆಯೊಂದೇ.

''ಕತೆಯನ್ನು ಹೇಳುವುದೆಂದರೆ ಕತೆಯನ್ನು ಮಾತ್ರ ಹೇಳುವುದು"

"ಕತೆಯನ್ನು ಹೇಳುವುದೆಂದರೆ ವೈಯಕ್ತಿಕ ಅನುಭವವನ್ನು ನಿರೂಪಿಸುವುದು"

"ಕತೆಯನ್ನು ಬಿಟ್ಟುಕೊಡುವುದೇ ಓದುಗರಿಗೆ" "ಕತೆಯೆಂದರೆ ಅದು ಒಂದು ಘಟನೆಯ ಕೇಂದ್ರಸ್ಥ ನಿರೂಪಣೆ" – ಈ ತರಹದ ನಮ್ಮ ಸೀಮಿತ ಗ್ರಹಿಕೆಗಳ ವ್ಯಾಖಾನದಿಂದ ಈ 'ಕತೆ'ಗಳನ್ನು ಓದುವುದು ಸಾಧ್ಯವೆ? ವಡ್ಡಾರಾಧನೆಯನ್ನು ಓದುವಾಗ ಇದು ಕೇವಲ ಕಥಾಸಂಕಲನ ಮಾತ್ರ ಅಂತ ಅನಿಸುವುದಿಲ್ಲ. ಮತ್ತು ಇಡಿಯ ಸಂಕಲನವನ್ನು ನೋಡಿದರೆ ಇವು ಒಂದಕ್ಕೊಂದು ಪರಸ್ಪರ ಮಿಳಿತಗೊಂಡ ಹಾಗೆ ಅನಿಸುತ್ತವೆ. ಸುಕುಮಾರಸ್ವಾಮಿಯ ಕತೆಗೂ: ಸುಕೌಶಳಸ್ವಾಮಿಯ ಕತೆಗೂ ಒಳಗಡೆ ಒಂದು ಸಂಬಂಧವನ್ನು ನಿರೂಪಕ ಕಲ್ಪಿಸಿದ್ದಾನೆ. ಈ ಸಂಬಂಧದ ಕಲ್ಪನೆಯು ಒಂದು ಕತೆಯಿಂದ ಮತ್ತೊಂದು ಕತೆಗೆ ಹೋಗವ ಕತೆಯೊಳಗೆ ಕತೆಯನ್ನು ಇಡುವುದಕ್ಕೆ ಇರಬೇಕಿಲ್ಲ. "ಸುಕುಮಾರಸ್ವಾಮಿ" ಕತೆಯನ್ನು ನೋಡಿ: ಈ ಕತೆಯಲ್ಲಿ ನಾಗಶ್ರೀ ತಂದೆಯ ಜೊತೆಯಲ್ಲಿ ಹೋಗುವಾಗಲೂ ಬೇರೆ ಬೇರೆ ಕತೆಗಳು ಬರುತ್ತವೆ. ಈ ಕತೆಯೊಳಗೆ ಕತೆಗಳು ಒಂದು ಕತೆಗೆ ಮತ್ತೊಂದು ಕತೆಯ ಸಂಬಂಧ ಇರು ನಮಗೆ ಹೆಚ್ಚಾಗಿ ಕಾಣಸಿಗುವುದು ಜೈನ ಕವಿಗಳಲ್ಲಿಯೇ. ಅದರಲ್ಲಿಯೂ ಜೈನ ಸಂಬಂಧಿ ಕಾವ್ಯಗಳಲ್ಲಿ ಈ ರೀತಿಯ ಕಥನ ಕ್ರಮವು ಹೆಚ್ಚು ಕಾಣಸಿಗುತ್ತದೆ. "ಆದಿಪುರಾಣ", "ಮಲ್ಲಿನಾಥ ಪುರಾಣ", "ಅಜಿತ ತೀರ್ಥಂಕರ ಪುರಾಣ" ಹೀಗೆ ಅನೇಕ ಕಾವ್ಯಗಳಲ್ಲಿ ಕಥನ ಕ್ರಮವು ಒಂದೇ ಹಿಡಿತದಲ್ಲಿ ಸಿಗುವಂಥದ್ದಲ್ಲ. ಅನೇಕ ಸಣ್ಣ ಸಣ್ಣ ಕತೆಗಳು ಮತ್ತು ಒಂದಕ್ಕೊಂದು ಸಂಬಂಧವಿಲ್ಲದಂತೆ ಬರುವ ಚಿತ್ರಗಳನ್ನು ಜೈನ ಕವಿಗಳು ಮಹಾಕಾವ್ಯದಲ್ಲಿ ನಿರೂಪಿಸಿದರು. ಅಂದರೆ: ಈ ತರಹ ಕಥನ ನಿರೂಪಣೆಯು ಜೈನಕಾವ್ಯಗಳಲ್ಲಿ ಇವೆ ಮತ್ತು "ಮಹಾಪುರಾಣ"ದಲ್ಲಿಯೂ ಈ ತರಹದ್ದೇ ನಿರೂಪಣೆಯಿದೆಯಾದರೂ ಮಹಾ ಪುರಾಣದ ಗಮನವು ಬೇರೆ ಕಡೆಗಿದೆ. ಹತ್ತನೆಯ ಶತಮಾನದ ಪ್ರಧಾನ ತಾತ್ವಿಕತೆಯು ಈ ರೀತಿಯ ನಿರೂಪಣೆಯ ಕಡೆಗೆ ಒಲಿದಿದ್ದರ ಹಿಂದಿರುವ ಗುಟ್ಟೇನು? ವಡ್ಡಾರಾಧನೆ ಯನ್ನು ಕತೆಗಳ ಗುಚ್ಛವೆಂದು ತಿಳಿದುಕೊಂಡರೆ ಅವುಗಳು ಒಂದೇ ಮಾದರಿಯಲ್ಲಿ ಇಲ್ಲ ಮತ್ತು ಈ ಕತೆಗಳು ಒಂದೇ ರೀತಿಯಲ್ಲಿ ಮುಗಿಯುವುದೂ ಇಲ್ಲ. ಬೇರೆ ಬೇರೆ ಸಂಗತಿಗಳು ಪರಸ್ಪರ ಸುರುಳಿಸುತ್ತಿಕೊಂಡಿವೆ. ಕತೆಯೊಳಗಿನ ಪಯಣದ ಹಾದಿಯಲ್ಲಿ ಧರ್ಮ: ರಾಜಕಾರಣ: ಕುಟುಂಬ: ಮರುಜನ್ಮವೆಲ್ಲವೂ ಪರಸ್ಪರ ಒಂದಕ್ಕೊಂದು ಸೇರಿಕೊಂಡೇ ನಡೆಯುತ್ತವೆ. ಮತ್ತೊಂದು ತರಹ ಹೇಳಬೇಕೆಂದರೆ, ಪ್ರೀತಿ: ಪ್ರೇಮ: ಹುಟ್ಟು: ಸಾವು ಜೀವನಕ್ರಮ ಈ ಯಾವ ಸಂಗತಿಗಳೂ ಇಲ್ಲಿ ಮುಖ್ಯವಲ್ಲ.

೬೪೮. ವಡ್ಡಾರಾಧನೆಯ ಕಥನಕ್ರಮ

ಹಿಂದಿನಿಂದಲೂ ನಮ್ಮಲ್ಲಿ ಕತೆಯನ್ನು ಹೇಳುವ ಕ್ರಮಗಳಿಗೆ ನಿರ್ದಿಷ್ಟವಾದ ಮಾದರಿಗಳಿವೆ. ಪಂಚತಂತ್ರದ ಕತೆಗಳು ಜನಪದಕತೆಗಳು ಇತ್ಯಾದಿಗಳಿಗೆ ಒಂದು ರೀತಿಯ ತರ್ಕಗಳಿವೆ. ಈ ತರ್ಕಗಳು ನಿರ್ದಷ್ಟವಾದ ಕಾಲಾನುಕ್ರಮಣಿಕೆಯನ್ನು ಕೂಡಾ ಹೊಂದಿವೆ. ಈ "ಕಾಲಾನುಕ್ರಮಣಿಕೆ" "ಕಾಲ–ದೇಶಬದ್ಧ" ದೃಷ್ಟಿಕೋನವೆಂಬುದು ಕತೆಯನ್ನು ಹೇಳುವ ಕ್ರಮದಲ್ಲಿ ಒಂದು ನಿಯಮವನ್ನು ತಂದಿರುವ ಹಾಗೆಯೇ ಅದು ಸರಳ ನಿರೂಪಣೆಯ ಕ್ರಮವನ್ನು ರೂಪಿಸಿತು. ವಡ್ಡಾರಾಧನೆಯ ಕತೆಗಳು ಸರಳವಲ್ಲ ಮತ್ತು ಸಮಯಬದ್ಧವೂ ಅಲ್ಲ. ವಡ್ಡಾರಾಧನೆಯ ಕತೆಗಳನ್ನು ಓದುವಾಗ ನಮ್ಮ ನೆನಪು ತುಂಬು ಕಟ್ಟೆಚ್ಚರವನ್ನು ವಹಿಸಬೇಕು. ತಂತಿಯ ಮೇಲಿನ ನಡಿಗೆಯ ಅನುಭವ ವನ್ನು ಈ ಕತೆಗಳು ಕೊಡುತ್ತವೆ. ನೆನಪು ಸ್ವಲ್ಪ ಕೈಕೊಟ್ಟರೂ ಸಾಕು ಮತ್ತೆ ಮರಳಿ ಓದಬೇಕು, ಮತ್ತು ನೆನಪಿಟ್ಟುಕೊಳ್ಳಬೇಕು. ಗುಂಡು ಸೂಜಿಯ ಮೊನೆಯು ಒಂದೆಡೆಗೆ ಚುಚ್ಚಿಕೊಳ್ಳವಂತೆ, ಈ ಕತೆಗಳು ಒಂದೆಡೆಗೆ ಚುಚ್ಚಿಕೊಳ್ಳುವುದಿಲ್ಲ. ವಿಷಯಗಳು ಹರಡಿಕೊಂಡಿರುತ್ತವೆ ಮತ್ತು ವಿಷಯಗಳು ಜಾರಿಕೊಳ್ಳುತ್ತವೆ. ಅಷ್ಟೇ ಅಲ್ಲ. ಈ ಕತೆಗಳನ್ನು ಓದುವಾಗ ನಾವು ಕೂಡಾ ಭವಾವಳಿಯ ಕೋಟಲೆಯಲ್ಲಿ ಸಿಕ್ಕಿಹಾಕಿಕೊಂಡ ಅನುಭವವನ್ನು ಪಡೆಯುತ್ತೇವೆ.

"ಸಮ್ಯಕ್ ಜ್ಞಾನ", "ಪರೀಷಹ", "ಸಮ್ಯಕ್ ಚಾರಿತ್ರ್ಯ", "ಸಮ್ಯಕ್ ದರ್ಶನ" ಈ ತರಹದ ಪದಗಳನ್ನು ನೋಡಿ: ಈ ಪದಗಳು ನಮಗೆ ಅಪರಿಚಿತ. ಮತ್ತು ಕತೆಗಳನ್ನು ಓದುವಾಗ ಫಕ್ಕನೇ ಎದುರಾಗುವ ಪದಗಳಿವು. ಬ್ರಾಹ್ಮಣರು ಬರೆದ ಕತೆಗಳಲ್ಲಿ ಉಪನಯನ: ಗರ್ಭಾದಾನ: ಸೀಮಂತ: ಮದುವೆ: ಅರ್ಘ್ಯಜಲ ಮುಂತಾದ ಪರಿಭಾಷೆಗಳು ಎದುರಾಗುವ ಹಾಗೆಯೇ ಈ ಪದಗಳು ಒಂದು ರೀತಿಯಿಂದ ಧರ್ಮದ ವಾಸನೆಯನ್ನು ಹಿಡಿದು ಕೊಂಡಿವೆ ಮತ್ತು ಈ ರೀತಿಯ ಧಾರ್ಮಿಕತೆಯ ಪರಿವೇಶಗಳು ಕತೆಯ ಓದಿನಲ್ಲಿ ಮುಖ್ಯವಾಗಬಹುದು ಅಥವಾ ಆಗದೆಯೂ ಇರಬಹುದು. ಆದರೆ ಇವು ನಮ್ಮನ್ನು ಹಿಡಿದು ನಿಲ್ಲಿಸುತ್ತವೆ ಎಂಬುದು ನಿಜ. ಇಷ್ಟೇ ಜೋರಾಗಿ ಮತ್ತು ಪುನಾರಾವರ್ತಿತವಾಗಿ ಬರುವ ಕೆಲವು ಸಂಗತಿಗಳು ಈ ಕೃತಿಯಲ್ಲಿವೆ. ಹಿಂಸೆ ಮತ್ತು ದೇಹದಂಡನೆ; ಪರಹಿಂಸೆ: ಸ್ವ–ಜೀವಹಿಂಸೆ: ಮರುಭವ ಇತ್ಯಾದಿ. ಸುಕುಮಾರಸ್ವಾಮಿಯ ಕತೆಯಲ್ಲಿ ಸುಕುಮಾರ ಸ್ವಾಮಿಯು ಅನುಭವಿಸುವ ಹಿಂಸೆಗೆ ಹಿಂದಿನ ಭವದ ಕಾರಣಗಳಿವೆ. ಆದರೆ ಆ ಹಿಂಸೆಯ ಅನುಭವ ವ್ಯಕ್ತಿತ್ವವನ್ನು ಬದಲಾಯಿಸುತ್ತದೆ. ಅದೇ ರೀತಿ ಒಂದೆರಡು ದಿನವಷ್ಟೇ ತನ್ನ ಆಯುಷ್ಯವು ಉಳಿದಿದೆಯೆಂದು ತಿಳಿದಾಗ ಅಣ್ಣಿಕಾಪುತ್ರನು ವೈರಾಗ್ಯಪರ ಸಾಗುತ್ತಾನೆ.

ವಡ್ಡಾರಾಧನೆಯಲ್ಲಿ ಬರುವ ಜೈನಧರ್ಮದ ವಿವರಣೆಯಾಗಲಿ, ಅದು ಕತೆಯನ್ನು ಹೇಳುವ ಕ್ರಮವಾಗಲೀ, ಅಷ್ಟೇ ಈ ಕೃತಿಯ ವಿಶೇಷವಲ್ಲ. ಈ ಕೃತಿಯಲ್ಲಿ ಅನೇಕ ರೂಪಗಳ ಸಂಘರ್ಷಗಳಿವೆ. ಅವಕ್ಕೆ ಅನೇಕ ಸಾಂಸ್ಕೃತಿಕ ವಿವರಗಳು ಕೂಡಾ ಇವೆ.

ಈ ದೃಷ್ಟಿಯಿಂದ ಕಾಷ್ಠಕೂಟನನ್ನು ಯೋಚಿಸುವ ಹಾಗೆಯೇ ನಾಗಶ್ರೀಯನ್ನು ಕೂಡಾ ಯೋಚಿಸಲು ಸಾಧ್ಯ. ಸೌದೆ ಮಾರುವವನನ್ನು ಕುರಿತು ಇಲ್ಲಿ ಕತೆಯಿರುವ ಹಾಗೆಯೇ ಕಳ್ಳನ ಬಗೆಗೂ ಕತೆಯಿದೆ. ಇವುಗಳ ಮುಖೇನ ಒಂದು ನಿರ್ದಿಷ್ಟವಾದ ವಿವರಣೆ ಯೆಂಬುದು ಅಸಾಧ್ಯವಾದ ಸನ್ನಿವೇಶವನ್ನು ಈ ಕೃತಿಯು ಹೊಂದಿದೆ. ಯಾಕೆ ಹೀಗಾಗಿದೆಯೆಂದರೆ ವಡ್ಡಾರಾಧನೆಯು ಚಾರಿತ್ರಿಕವಾದ ತನ್ನ ಅಗತ್ಯವನ್ನು ಅದು ಪೂರೈಸಿಕೊಂಡಿದೆ. ಚಾರಿತ್ರಿಕ ಅಗತ್ಯವೆಂದು ಹೇಳಿದೆ. ಚಾರಿತ್ರಿಕ ಅಗತ್ಯವನ್ನು ನೋಡಿ ೧೦ ನೆಯ ಶತಮಾನದ ಹೊತ್ತಿಗೆ ಸಂಸ್ಕೃತದಲ್ಲಿ ಇದ್ದ ಕಥಾ ಪರಂಪರೆಗೆ ಒಂದು ನೆಲೆಗಟ್ಟು ಇತ್ತು ಮತ್ತು ಆಗಲೇ ಸ್ಥಾಪನೆಗೊಂಡ ವೈದಿಕ ಸಂಪ್ರದಾಯದ ಕಥನದ ಬಲವಿತ್ತು. ವಡ್ಡಾರಾಧನೆಯು ಅದನ್ನು ನಿರಾಕರಿಸಬೇಕಾಯಿತು. ವಡ್ಡಾರಾಧನೆಗೆ ಬೇಕಾದ ಶಕ್ತಿಯನ್ನು ಒದಗಿಸಿದ್ದು ಆ ಹೊತ್ತಿನ ಕನ್ನಡದ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಸನ್ನಿವೇಶವೇ ಹೊರತು ಅದರ ಹಿಂದಿನ ಕಥನ ಪರಂಪರೆಯ ನೆಲೆಗಳಲ್ಲ. ಒಂದು ರೀತಿಯಲ್ಲಿ ವಡ್ಡಾರಾಧನೆಗಿಂತ ಪೂರ್ವದಲ್ಲಿ ಕಥನ ಪರಂಪರೆಯ ನೆಲೆಗಳ ವಿರೋಧ ಮತ್ತು ತಾನು ನಂಬಿಕೆಯಿರಿಸಿಕೊಂಡಿದ್ದ ನಂಬಿಕೆಗಳ ಪುನರ್‌ಸೃಷ್ಟಿಗೆ ಬೇಕಾದ ಆಕರಗಳನ್ನು ಒದಗಿಸುವುದು ವಡ್ಡಾರಾಧನೆಯಲ್ಲಿ ಎದ್ದು ಕಾಣುವ ಅಂಶವಾಗಿದೆ.

**೬೪೯. ವರ್ಣಕ-ಹಾಡುಗಬ್ಬ**

ವರ್ಣಕ ಮತ್ತು ಹಾಡುಗಬ್ಬದ ನಡುವಣ ಸಂಬಂಧದ ಚರ್ಚೆಯನ್ನು ಹತ್ತನೆಯ ಶತಮಾನದ ಕಾವ್ಯಗಳಿಂದಲೇ ಕಾಣಬಹುದು. ಕಾವ್ಯಾವಲೋಕನದಲ್ಲಿಯೂ ಇದರ ಚರ್ಚೆಯು ಬಂದಿದೆ. ಹಾಡುಗಬ್ಬ ಪ್ರಕಾರವು ಬಹಳ ಹಿಂದಿನದು. ವರ್ಣಕವನ್ನು ಹಾಡುಗಬ್ಬವೆಂದು ಕಡೆಂಗೋಡ್ಲು ಅಭಿಪ್ರಾಯಪಡುತ್ತಾರೆ:

ವರ್ಣಕವನ್ನು ಹಾಡುಗಬ್ಬವೆಂದೇನೋ ಹೇಳಬಹುದು; ಅಲ್ಲದೆ ಹಾಡುಗಬ್ಬ ಎನ್ನುವುದು ಅದರ ಸಂಪೂರ್ಣಾರ್ಥವನ್ನು ಆಕರಿಸುವುದಿಲ್ಲ. ಕಾವ್ಯಾವಲೋಕನದಲ್ಲಿ ಹಾಡುಗಬ್ಬದ ಉಲ್ಲೇಖನವುಂಟು. ಅದರ ಲಕ್ಷಣ ಕಥನವೂ ಉಂಟು. "ಕಂದಮುಂ ಪೆಟಿತೊಂದಳಿಕೆಯ ವೃತ್ತಜಾತಿಯುಂ" ಸಂಧಿಸಿದ ಪಕ್ಷದಲ್ಲಿ ಅದಕ್ಕೆ ಪದವೆಂದೂ, ಇಂತಹ ಪದಗಳು ಹನ್ನೆರಡರವರೆಗೆ ಇದ್ದರೆ, ಆ ಪದ್ಯಗುಂಫನವು 'ಮೆಲ್ವಾಡು' ಎನಿಸುವುದೆಂದೂ, ಹದಿನೈದು ಅಥವಾ ಇಪ್ಪತ್ತೈದು ಪದಗಳು ಯಥಾ ಸಂಭವವಾಗಿ ಸೇರಿದ ಪಕ್ಷದಲ್ಲಿ ಅದು ರಸಾಸ್ಪದವಾದ ಪಾಡು; ಪಾಡುಗಳಿಂದ ಮಾಡಿದ ಕಬ್ಬ ಹಾಡುಗಬ್ಬ; ಎಂದೂ ನಾಗವರ್ಮನು ಹೇಳುತ್ತಾನೆ. ನೃಪತುಂಗನಿಂದ ಪ್ರಸ್ತುತವಾದ ಬೆದಂಡೆ ಚತ್ತಾಣಗಳೂ ಹಾಡುಗಬ್ಬಗಳಾಗಿವೆ ಎಂಬುದು ಸ್ಪಷ್ಟವೇ. ಹಾಡುಗಬ್ಬ ಎನ್ನುವುದರ ವಿಶಿಷ್ಟ ರೂಪವನ್ನು ಪ್ರಾಚೀನ ಲಾಕ್ಷಣಿಕರು ಎತ್ತಿ ತೋರಿಸಿರುವರು.

ಪೂರ್ವೋಕ್ತವಾದ ವರ್ಣಕಕಾವ್ಯಗಳು ಹಾಡುವುದಕ್ಕೆ ಸುಗಮವಾಗಿರಬಹುದು. ಗುಣವಿಶಿಷ್ಟವಾದ" ಹಾಡುಗಬ್ಬಗಳಲ್ಲ ಎನ್ನುವಾಗ ಅತಿವ್ಯಾಪ್ತಿಯುತ್ತದೆ.

ವರ್ಣಕದ ಲಕ್ಷಣ:–

ವರ್ಣಕದ ಲಕ್ಷಣದ ಕುರಿತು ಕಡೆಂಗೋಡ್ಲು ಈ ರೀತಿಯಾಗಿ ಅಭಿಪ್ರಾಯ ಪಡುತ್ತಾರೆ.

"ವರ್ಣ ಎಂದರೆ ಉಜ್ವಲವರ್ಣನೆ ಅಥವಾ ರಸಿಕರಂಜನಗುಣ ಎಂದು ಭಾವಿಸಿದರೆ ತಪ್ಪಾದೀತೇ? ವರ್ಣಕ ಕಾವ್ಯಗಳನ್ನು ಹೆಚ್ಚಾಗಿ, ಅಥವಾ ಅವುಗಳಲ್ಲಿ ಹೆಚ್ಚಿನವುಗಳನ್ನು ಹಾಡುಗಬ್ಬಗಳಾಗಿ ಪ್ರಯೋಗಿಸಿರಬಹುದು. ಹಾಡುಗಬ್ಬಗಳು ರಾಗತಾಳಗಳಿಗೆ ಹೊಂದಿ ವಾಚನೀಯವಾಗಿರಬೇಕಲ್ಲದೆ, ಅರ್ಥಸ್ಫುಟತೆ ಸುಲಭತೆಗಳಿಂದಲೂ ಕೂಡಿರಬೇಕು. ಇಂತಹ ಸಂಸ್ಕಾರಗಳಿರಬೇಕಾದರೆ ಶುದ್ಧ ವ್ಯಾಕರಣಾದಿ ಲಕ್ಷಣಗಳನ್ನು ಪಾಲಿಸುವುದು ದುಷ್ಕರವೆಂಬುದು ಸಾಹಿತ್ಯ ವ್ಯವಸಾಯಿಗಳಿಗೆ ವಿದಿತವೇ ಸರಿ. ಗದ್ಯ ಪದ್ಯದ ಮಿಶ್ರದಿಂದಾದ ಕಾವ್ಯದಲ್ಲಿ ಪದ್ಯವು ರಾಗರಸ ಬದ್ಧವಾಗಿ ಗಾನಯೋಗ್ಯವಾಗಿದ್ದರೂ ಗದ್ಯವು ಹಾಗಿಲ್ಲ; ಗದ್ಯವು ಹೆಚ್ಚಾಗಿ ಕಥಾಖ್ಯಾನ ಸಂದರ್ಭದಲ್ಲಿ ಬಳಕೆಗೊಂಡಿದೆ. ಅಂಶತಃ ಗಾನಯೋಗ್ಯ ವಲ್ಲದ ಚಂಪುವನ್ನು, ಈ ಕಾರಣದಿಂದ ವರ್ಣಕ ಕಾವ್ಯದಿಂದ ಬೇರ್ಪಡಿಸುವ ಅಭ್ಯಾಸ ಪಂಪನ ಅನಂತರದ ಹಲ ಕವಿಗಳಲ್ಲಿ ಕಂಡು ಬರುತ್ತದೆ. ಪ್ರಾಚೀನ ಕವಿಗಳು 'ವರ್ಣಕ' ಎಂದು ಗುರುತಿಸಿದ ಕಾವ್ಯಗಳು ಹೆಚ್ಚಾಗಿ ದೇಶೀಯ ಛಂದೋನಿಬದ್ಧವಾಗಿವೆ. ದೇಶೀಯ ಛಂದಸ್ಸು ಮಾತ್ರಾಗಣ ರೂಪಿತವಾದ ಕಾರಣದಿಂದ ಗತಿಗಮಕಗಳಲ್ಲಿ ಅಕ್ಷರಗಣ ಭೂಯಿಷ್ಠ ಛಂದಸ್ಸಿಗಿಂತ ಹೆಚ್ಚು ವಿಲಂಬಿತವೂ ವಿಸ್ತಾರವೂ ಶಿಥಿಲವೂ ಆಗಿದ್ದು ಆ ಪ್ರಮಾಣದಲ್ಲಿ ಪೂರ್ವ ವ್ಯಾಕರಣ ಸಂಪ್ರದಾಯವನ್ನು ಮೀರುವಂತಿದೆ. ಛಂದಸ್ಸು ಸಹ ವಸ್ತುಕ ಅಥವಾ ವರ್ಣಕಗಳ ವಿಶಿಷ್ಟ ಗುಣಗಳಲ್ಲ; ಎನ್ನುವುದಕ್ಕೆ ಯಶೋಧರಚರಿತೆಯೆ ಸಾಕ್ಷಿ. ಅದರ ಛಂದಸ್ಸು ಚಂಪೂ ಕಾವ್ಯಗಳ ಛಂದಸ್ಸಿನಂತೆಯೇ ಇದೆ. ಗದ್ಯವು ಮಾತ್ರ ಅದರಲ್ಲಿಲ್ಲ. ಗದ್ಯಯುಕ್ತವಾಗದಿರುವುದೊಂದೆ, ಇದರ ಬಾಹ್ಯ ಗುಣವೈಶಿಷ್ಟವಾಗಿ ತೋರುತ್ತದೆ. ಅಂತೂ ವರ್ಣಕ ಎಂದರೆ ಹಾಡುಗಬ್ಬ ಎನ್ನುವ ಲಕ್ಷಣವನ್ನು ಒಪ್ಪಿಕೊಂಡರೆ ಕಾವ್ಯಸ್ವರೂಪ ನಿಷ್ಕರ್ಷೆಯಾಗುವುದಿಲ್ಲ. ಹಲಕವಿಗಳ ವಾಕ್ಯಗಳನ್ನು ಉದ್ಧರಿಸಿದರೆ ಪರಸ್ಪರ ವಿಸಂವಾದಿಯಾದ ಅಭಿಪ್ರಾಯ ಜಾಲವೆ ನಮ್ಮ ವಿಚಾರವನ್ನು ತಡೆಹಿಡಿಯು ವಂತಾಗುತ್ತದೆ. ಲಕ್ಷಣಕ್ಕಿಂತ ಮೊದಲು ಲಕ್ಷ್ಯ ಎಂದು ಬೇರೆ ಹೇಳಬೇಕಾಗಿಲ್ಲ. ಲಕ್ಷಣವು ನಿಸ್ಸಂದೇಹವಾಗಿ ಮುಂಚೆ ಲಕ್ಷ್ಯವಾಗಿ ತೋರುವವುಗಳು ನಮ್ಮನ್ನು ಗೊಂದಲದಲ್ಲಿ ಕೆಡಹುವುದರಿಂದ ಲಕ್ಷ್ಯಗಳನ್ನು ಕೂಡ ಜಾಗರೂಕತೆಯಿಂದ ಹೆಕ್ಕಬೇಕಾಗುತ್ತದೆ. ಯಾರು ಬರೆದಿರುವರೋ ಅವರ ಕೃತಿಗಳನ್ನೇ ಆಧಾರವಾಗಿ ಸ್ವೀಕರಿಸಬೇಕಾಗುತ್ತದೆ".

ವರ್ಣಕವೆಂದರೆ ಹಾಡುಗಬ್ಬವೆಂಬ ಏಕಕೇಂದ್ರಿತ ನಿಲುವು ಸರಿಯಲ್ಲ ಎಂಬ ವಾದವು ಗಮನಾರ್ಹವಾಗಿದೆ. ಎರಡನೆಯದಾಗಿ ವರ್ಣಕವು ಹಾಡುಗಬ್ಬವೆಂಬ ವರ್ಗದಲ್ಲಿ ಬರುತ್ತದೆಯೆಂಬುದು ಗಮನಾರ್ಹ. ಕನ್ನಡದ ವಿಶೇಷ ಪರಿಭಾಷೆಯಾಗಿಯೂ ವರ್ಣಕಕ್ಕೆ ವಿಶೇಷ ಮಹತ್ವವಿದೆಯೆಂಬುದನ್ನು ಪರಿಶೀಲಿಸಬೇಕು.

*ವಿವರಗಳಿಗೆ ನೋಡಿ: ಮುಳಿಯ ತಿಮ್ಮಪ್ಪಯ್ಯ ೧೯೬೬ ಶ್ರದ್ಧಾಂಜಲಿ*

*ವಸ್ತುಕ–ವರ್ಣಕ ಕಡೆಂಗೋಡ್ಲು ಶಂಕರಭಟ್ಟ(ಲೇಖನ) ಪುಟ. ೧೯೩–೨೦೧*

೬೫೦. ವರ್ಣಧರ್ಮಗಳು

ಅಧ್ಯಯನ, ಅಧ್ಯಾಪನ, ಯಜನ, ಯಾಜನ, ದಾನ, ಪ್ರತಿಗ್ರಹ ಎಂಬ ಷಟ್ಕರ್ಮಗಳು ಬ್ರಾಹ್ಮಣ ಧರ್ಮಗಳಾಗಿವೆ, ಅಧ್ಯಯನ, ಯಜನ, ದಾನ, ಶಸ್ತ್ರಗಳಿಂದ ಜೀವಿಸುವುದು ಪ್ರಾಣಿಗಳನ್ನು ಕಾಪಾಡುವುದು–ಇವು ಕ್ಷತ್ರಿಯರ ಧರ್ಮಗಳು. ಅಧ್ಯಯನ, ಯಜನ, ದಾನ, ಭೂವ್ಯವಸಾಯ, ಪಶುಪಾಲನೆ, ವ್ಯಾಪಾರ – ಇವು ವೈಶ್ಯರ ಧರ್ಮಗಳು ಎಂದು ಕೌಟಿಲ್ಯನ ಅಭಿಪ್ರಾಯ.

ವರ್ಣವೆಂದರೆ ಬಣ್ಣ. ಆದರೆ ಭಗವದ್ಗೀತೆ ವರ್ಣವನ್ನು ನಾಲ್ಕೆಂದು ಗುರುತಿಸಲಾಗಿದೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಹೀಗೆ. ಆದರೆ ಮಿರ್ಜಿ ಅಣ್ಣಾರಾಯರು 'ವರ್ಣ' ಎಂಬುದನ್ನು ಅರ್ಥವಿಸಿಕೊಳ್ಳುವ ಕ್ರಮ ಬೇರೆ. ಇನ್ನು ಋಗ್ವೇದದಲ್ಲಿ (ವರ್ಣ) ಎಂಬ ಪದವು ಮಾನವನ ದೇಹದ ಬಣ್ಣಗಳನ್ನು ಸೂಚಿಸುತ್ತದೆ. ಯಾಕೆಂದರೆ ದಾಸ ಹಾಗೂ ಆರ್ಯರ ಮೈಬಣ್ಣಗಳಲ್ಲಿ ಅಂತರವಿತ್ತು. ಉಳಿದ ಸಂಹಿತೆ ಮತ್ತು ಬ್ರಾಹ್ಮಣ ಗ್ರಂಥಗಳಲ್ಲಿ ಚತುರ ವರ್ಣಗಳ ನಿರ್ದೇಶವಿದೆ. ಅದರಿಂದ ಋಗ್ವೇದಕ್ಕೂ ಉಳಿದ ಸಂಹಿತೆಗಳಿಗೂ ಈ ವಿಷಯದಲ್ಲಿ ಮೇಲಿನ ಮತ ಭೇದವಿದೆ ಎಂದು ಮಿರ್ಜಿಯವರು ಹೇಳುತ್ತಾರೆ.

ಇನ್ನು ಬಣಗಳಾಚೆಗೂ, ಬಣಗಳ ಒಳಗೂ ಆದ ಘರ್ಷಣೆಯಿಂದ ಆರ್ಯರ ಬುಡಕಟ್ಟು ಸಮಾಜ ಒಡೆದು ಸಾಮಾಜಿಕ ವರ್ಗಗಳು ಸೃಷ್ಟಿಯಾದದ್ದನ್ನು ಪರೀಕ್ಷಿಸಬೇಕು. ಋಗ್ವೇದದಲ್ಲಿ ಆರ್ಯರಿಗೂ (III.34.9) ದಾಸರಿಗೂ (VII.40.6) 'ವರ್ಣ' ಎಂಬ ಪದ ಬಳಸಿದ್ದರೂ, ಮುಂದೆ ಸಾಮಾಜಿಕ ವರ್ಗ ಸೂಚಕವಾದ ಶ್ರಮ ವಿಭಜನೆಯನ್ನು ಅದು ಸೂಚಿಸುವುದಿಲ್ಲ. ಆರ್ಯ–ದಾಸ ಎಂಬ ದೊಡ್ಡ ವರ್ಣಗಳೆರಡೂ ಬುಡಕಟ್ಟಿನ ಸ್ಥಿತಿಯಿಂದ ವರ್ಗೀಕೃತ ಸಮಾಜದೆಡೆಗೆ ವಿಘಟಿತವಾಗುತ್ತಿದ್ದವು. ಎಂದು ಆರ್.ಎಸ್. ಶರ್ಮರ ಅಭಿಪ್ರಾಯ.

ಮನು ಕೌಟಿಲ್ಯರಿಬ್ಬರ ದೃಷ್ಟಿಯಲ್ಲೂ ಸಮಾಜ ನಾಲ್ಕು ವರ್ಣಗಳ ಆಧಾರದ ಮೇಲೆ ವ್ಯವಸ್ಥಿತವಾಗಿದೆ. ಒಂದೊಂದು ವರ್ಣಕ್ಕೂ ನಿರ್ದಿಷ್ಟವಾದ ಕರ್ತವ್ಯಗಳೂ, ಹಕ್ಕುಗಳೂ ಇವೆ. ಈ ಚಾತುರ್ವರ್ಣ್ಯ ಸಮಾಜ ವ್ಯವಸ್ಥೆ ಬೇರೆ ಬೇರೆ ಬುಡಕಟ್ಟುಗಳ ಮತ್ತು ಬೇರೆ ಬೇರೆ ಬಣ್ಣದ ಜನರಲ್ಲಿದ್ದ ಪರಸ್ಪರ ಪಕ್ಷಪಾತದಿಂದ ಹುಟ್ಟಿದ್ದು ಎಂಬ ವಾದ ಸರಿಯಲ್ಲ. ಅದರ ಮೂಲವನ್ನು ಜನರ ಸ್ವಭಾವಜನ್ಯವಾದ ಅವರ ನೈಸರ್ಗಿಕ ಗುಣಗಳಿಗನುಸಾರವಾದ ಕಸುಬುಗಳ ಮತ್ತು ಕರ್ತವ್ಯಗಳ ಆಧಾರದಮೇಲೆ ನಿರ್ಣಯಿಸಬೇಕು. ಸಮಾಜದಲ್ಲಿ ಪ್ರತಿಯೊಬ್ಬನೂ ತನ್ನ ನೈಜವಾದ ಸಾಮರ್ಥ್ಯಕ್ಕೆ ಅನುಗುಣವಾದ ಕರ್ಮಗಳನ್ನು ಮಾಡುತ್ತಾ ಸರ್ವರೂ ಸರ್ವರ ಹಿತೈಷಿಗಳಾಗಿ ಸೌಹಾರ್ದ ಸಹಕಾರಗಳಿಂದ ಬಾಳಬೇಕೆಂಬುದೇ ಚಾತುರ್ವರ್ಣ್ಯ ತತ್ವದ ಉದ್ದೇಶ. ಆದರೆ ಸಮಾಜದ ನಿತ್ಯ ವ್ಯವಹಾರದಲ್ಲಿ ಈ ಆದರ್ಶ ಈಡೇರಲಿಲ್ಲ. ಜನರಲ್ಲಿ ಮೇಲು ಕೀಳು ಎಂಬ ಭಾವನೆಗಳು ಬೆಳೆದವು. ರಾಜ್ಯಗಳು ವಿಸ್ತಾರವಾದಂತೆ ಹೊಸ ಹೊಸ ಜನಾಂಗಗಳ ಸಮ್ಮಿಲನವಾದಂತೆ ವರ್ಣಸಂಕರ ಉಂಟಾಯಿತು. ವರ್ಣವನ್ನು ನಾನೇ ಸೃಷ್ಟಿಸಿದೆ. ಹಾಗೂ ವರ್ಣಕ್ಕೂ–

ಕರ್ಮಕ್ಕೂ ಸಂಬಂಧವಿದೆಯೆಂದು ಕೃಷ್ಣನು ಹೇಳುತ್ತಾನೆ.

ಸಮಾಜದ ಸುವ್ಯವಸ್ಥೆಗೆ ಅಗತ್ಯವಾದ ಇನ್ನೊಂದು ತತ್ವ ಆಶ್ರಮಧರ್ಮ. ವ್ಯಕ್ತಿಯ ಆಯುಃ ಪರಿಮಿತಿಯ ನಾಲ್ಕು ಘಟ್ಟಗಳೇ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸ ಎಂಬ ನಾಲ್ಕು ಆಶ್ರಮಗಳು. ವರ್ಣಧರ್ಮ ಪಾಲನೆಯಲ್ಲಾದಂತೆ ಆಶ್ರಮಧರ್ಮದ ಅನುಷ್ಠಾನದಲ್ಲೂ ಆದರ್ಶಕ್ಕೂ ವ್ಯವಹಾರಕ್ಕೂ ವ್ಯತ್ಯಾಸ ಉಂಟಾಯಿತು. ಕೊನೆಯ ಎರಡು ಆಶ್ರಮಗಳ ಹಂತವನ್ನು ಮುಟ್ಟುವವರ ಸಂಖ್ಯೆಯಂತೂ ಅತ್ಯಂತ ವಿರಳವಾಯಿತು. ಧೀಮಂತರಾಗಿ ವಿರಕ್ತರಾಗಿ ಲೋಕಹಿತಸಾಧಕರಾಗಿ ಸಮಾಜದಲ್ಲಿ ಕೀರ್ತಿಗಳಿಸಿದ ಮಹಾತ್ಮರು ಎಲ್ಲೋ ಕೆಲವರು. ಇವು ವಾಸ್ತವವಾಗಿ ನಾಲ್ಕು ಹಂತಗಳು. ಜೀವನದಲ್ಲಿ ಮೊದಲಿಗೆ "ಬ್ರಹ್ಮಚರ್ಯ"ವನ್ನು ಪಾಲಿಸಬೇಕು. ಅನಂತರ ಗೃಹಸ್ಥಧರ್ಮಕ್ಕೆ ಬರಬೇಕು. ಗೃಹಸ್ಥಧರ್ಮವೆಂದರೆ ಮದುವೆಯಾಗಿ ಸಂಸಾರವನ್ನು ಹೊಂದುವುದು. ಸಂಸಾರ ಧರ್ಮದಲ್ಲಿ ಗಂಡ-ಹೆಂಡತಿಯರ "ಧರ್ಮ"ವೇ ಮುಖ್ಯ. ಸಂಸಾರ ಜೀವನದ ಅನಂತರ ವಾನಪ್ರಸ್ಥ. ವಾನಪ್ರಸ್ಥವು ಮೂರನೆಯ ಹಂತ. ಹೆಸರೇ ಸೂಚಿಸುವಂತೆ ವಾನಪ್ರಸ್ಥವೆಂದರೆ– ಕಾಡಿಗೆ ತೆರಳುವುದು. ಅನಂತರ ಸನ್ಯಾಸ. ಅಂದರೆ –ಎಲ್ಲವನ್ನು ತ್ಯಾಗ ಮಾಡಿ;(ನ್ಯಾಸ) ಇಂದ್ರಿಯಗಳನ್ನು ಹತೋಟಿಗೆ ತಪವಾಚರಿಸುವುದು. ಇದನ್ನು ಜೈನಕಾವ್ಯಗಳೂ ಪ್ರತಿಪಾದಿಸುತ್ತವೆ. ವಿವರಗಳಿಗೆ 'ಆದಿಪುರಾಣ' ಕೃತಿಯನ್ನು ನೋಡಬಹುದು.

ಕ್ಷತ್ರಿಯರಿಗೆ ಸತ್ಯ, ಜಲಸ್ಥಲಯಾತ್ರೆ ವೈಶ್ಯರಿಗೆ, ಶುಶ್ರೂಷಾದಿಯನ್ನು ಮಾಡುವ ಕೆಲಸವನ್ನು ಆದಿದೇವನು ನೀಡಿದನೆಂದು ಚಾವುಂಡರಾಯ ಪುರಾಣದಲ್ಲಿ ಬರುತ್ತದೆ. (ಚಾವುಂಡರಾಯ ಪುರಾಣ – ಆದಿಪುರಾಣ ೪೩ ವ). ಇದನ್ನು ಗಮನಿಸಿದರೆ ವರ್ಣ ಮತ್ತು ವೃತ್ತಿಗಳ ನಡುವಣ ಸಂಬಂಧದ ಸ್ವರೂಪ ತಿಳಿಯುತ್ತದೆ.

*ವಿವರಗಳಿಗೆ ನೋಡಿ: ಜಾತಿ ಶ್ರೀ ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳು ೨೦೧೦*

*ಕೌಟಲೀಯ ಅರ್ಥಶಾಸ್ತ್ರ ಪುಟ. ೩೪*

*ಗುರುಲಿಂಗಕಾಪಸೆ (ಸಂ ೧) ೨೦೦೬ ಮಧುರಚೆನ್ನರ ಲೇಖನಗಳು ಪುಟ. ೬*

*ಆರ್. ಎಸ್. ಶರ್ಮ ೨೦೦೪ ಪ್ರಾಚೀನ ಭಾರತದಲ್ಲಿ ಶೂದ್ರರು ಪುಟ. ೧೫*

*ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦ ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ ಪುಟ. ೧೦೯*

*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ*

### ೬೫೧. ವಶೀಕರಣ

ಯಕ್ಷರು, ಕಿನ್ನರರು ಮೊದಲಾದ ಅರ್ಧದೇವತೆಗಳ ಸಂಖ್ಯೆ ಹೆಚ್ಚಿದಂತೆ ಅಸಂಖ್ಯಾತ ಪ್ರಮಾಣದಲ್ಲಿ ಧಾರ್ಮಿಕ ವಿಧಿಕ್ರಿಯೆಗಳೂ ಹುಟ್ಟಿಕೊಂಡುವು. ಈ ಗೋಜಲು ಗೋಜಲಾದ ಕ್ರಿಯೆಗಳೊಂದಿಗೆ, ಅವುಗಳನ್ನು ಮನೋಯೋಗದೊಂದಿಗೆ ಬಳಸಬಲ್ಲಂಥ ರಹಸ್ಯಮಯ ಮಂತ್ರಯಾನಿಗಳೂ ಹುಟ್ಟಿಕೊಂಡರು. ಐತಿಹಾಸಿಕ ವ್ಯಕ್ತಿಯಾಗಿದ್ದ ಬುದ್ಧ ಸರ್ವಶಕ್ತನಾದ ದೇವತೆಯಾಗಿ ಪರಿಣಮಿಸಿದ. ಬೌದ್ಧಧರ್ಮ ಒಂದು ವಿಚಿತ್ರವಾದ ಹಾಗೂ ಅಲೌಕಿಕವಾದ

ಮಜಲನ್ನು ಪ್ರವೇಶಿಸಿತು. ರಹಸ್ಯಪೂರ್ಣ ವ್ಯಕ್ತಿತ್ವವನ್ನು ಹೊಂದಿದ್ದಂಥ ಮಂತ್ರವಾದಿಗಳು ಇದಕ್ಕೆ ಸೂತ್ರಧಾರರಾಗಿ ಪರಿಣಮಿಸಿದರು. ದೀರ್ಘವಾಗಿದ್ದ ಸೂತ್ರಗಳನ್ನು ಅವರು ಕಿರಿದಾಗಿಸಿದರು; ಮತ್ತೆ ಅವುಗಳನ್ನು ಇನ್ನಷ್ಟು ಕಿರಿದಾಗಿಸಿ ಮಂತ್ರಗಳನ್ನಾಗಿಸಿದರು. ಸುಮಾರು ಈ ಕಾಲದ ಹೊತ್ತಿಗೆ ಸ್ಥೂಲವಾದ, ಹೆಚ್ಚು ಹೆಚ್ಚು ಲಾಭಕರವಾದ ದೈಹಿಕ ಪ್ರಕ್ರಿಯೆಗಳು ಎಂಬ ಅರ್ಥದಲ್ಲಿ 'ಯೋಗ' ಶಬ್ದವನ್ನು ಬಳಸತೊಡಗಿದರು. ಹಠಯೋಗ ತನ್ನ ಭಯಂಕರ ಯಾತನಾಪೂರ್ಣ ಪ್ರಕ್ರಿಯೆಗಳೊಂದಿಗೆ ಪ್ರೇಕ್ಷಕರಲ್ಲಿ ಭಯವನ್ನು ಮೂಡಿಸತೊಡಗಿತು. ಮಂತ್ರಯಾನದ ಸಿದ್ಧರು ಹಾಗೂ ಜಟಿಲ ಪ್ರಕ್ರಿಯೆಗಳಲ್ಲಿ ತೊಡಗುತ್ತಿದ್ದ ರಹಸ್ಯಪೂರ್ಣ ವ್ಯಕ್ತಿತ್ವದ ಸಾಧಕರು ವಿಹಾರಗಳಲ್ಲಿ ಕುಳಿತು ಹಠಯೋಗದ ಪ್ರಕ್ರಿಯೆಗಳ ಮೂಲಕ ಅಲೌಕಿಕ ಶಕ್ತಿಗಳನ್ನು ಸಂಚಯಿಸಿಕೊಳ್ಳತೊಡಗಿದರು. ಅವರಿಗೆ ಸಮ್ಮೋಹನಗೊಳಿಸುವ ಹಾಗೂ ಉಚ್ಚಾಟನೆಗೊಳಿಸುವ ಶಕ್ತಿಗಳು ಕೈವಶವಾಗ ತೊಡಗಿದುವು. ಈ ಪ್ರಕ್ರಿಯೆಗಳಿಂದ ಲಭಿಸುವ ಶಕ್ತಿ ಇಂದು ನಮ್ಮಲ್ಲಿ ವಶೀಕರಣ (Mesmerism) ಮತ್ತು ಸಮ್ಮೋಹನ (Hypnotism) ವಿದ್ಯೆಗಳನ್ನು ಅಭ್ಯಾಸ ಮಾಡಿರುವ ವ್ಯಕ್ತಿಗಳಲ್ಲಿ ಕಾಣಸಿಗುವಂಥ ಶಕ್ತಿಯೇ ಆಗಿತ್ತು. ಹಠಯೋಗ ಜನರ ಮೇಲೆ ಮಂತ್ರಸದೃಶ ಪ್ರಭಾವವನ್ನು ಬೀರಿತು. ಮಠ ಮತ್ತು ವಿಹಾರಗಳ ಅಂಗಗಳೆಲ್ಲ ಈ ಸಿದ್ಧರ ಪ್ರಯೋಗಗಳಿಂದ ಚಕಿತರಾದ ಹಾಗೂ ಭಯಭೀತರಾದ ನರ-ನಾರಿಯರಿಂದ ತುಂಬಿ ಹೋಗಿದ್ದುವು. ಅಕ್ರಿಯ ಉಪಾಸಕರು ಸಮ್ಮೋಹನದ ಪ್ರಭಾವಕ್ಕೆ ಒಳಗಾಗಿ ನೇರವಾಗಿ ಈ ಸಿದ್ಧರ ಗುಲಾಮರಾಗಿಬಿಟ್ಟರು. ವಿಹಾರಗಳಲ್ಲಿ ಹಣದ ಸುರಿಮಳೆಯೇ ಆಗತೊಡಗಿತು. ಮಠಗಳ ನೆಲ-ಅಂತಸ್ತಿನ ಗುಹೆಗಳಂತಿದ್ದ ಕೋಣೆಗಳಿಗೆ ಸುಂದರ ಸ್ತ್ರೀಯರು, ಸಂಕೇತ ಮಾತ್ರದಿಂದಲೇ ಕರೆದೊಯ್ಯಲಾಗುವ ಅಂಧರಂತೆ, ಸದ್ದಿಲ್ಲದೆ ಸಾಗತೊಡಗಿದರು. ಆ ಅಂಧಕಾರಮಯ ಕೋಣೆಗಳಲ್ಲಿ ಪಾಪಭಕ್ತಿಯ ವೇಷವನ್ನು ಧರಿಸಿಕೊಂಡು ಕೂತಿರುತ್ತಿತ್ತು. ಈ ಶ್ರದ್ಧಾವಂತರು ಅಲ್ಲಿಗೆ ಬಂದು ಸೇರಿದ ಕೂಡಲೇ ಅದು ಅವರನ್ನು ನುಂಗಿ ನೀರು ಕುಡಿಯುತ್ತಿತ್ತು. ಹಠಯೋಗ, ಮಂತ್ರ ಮತ್ತು ಮೈಥುನ-ಇವೇ ಮಂತ್ರಯಾನದ ಮೂರು ಹೆಜ್ಜೆಗಳಾಗಿಬಿಟ್ಟುವು.

*ವಿವರಗಳಿಗೆ ನೋಡಿ: ಭಗವತ್ ಶರಣ ಉಪಾಧ್ಯಾಯ ೨೦೦೪*
*ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ ಪುಟ. ೨೦೮.*

**೬೫೨. ವಸಂತತಿಲಕೆ**

ವಸಂತತಿಲಕೆ ಜೈನಕವಿಗಳಿಗೆ ಪ್ರಿಯನಾದ ಪಾತ್ರ, ವೈರಾಗ್ಯ ಪ್ರತಿಪಾದನೆಗೆ ಹೇಳಿಮಾಡಿಸಿದ ಹೆಣ್ಣು. ದಿಗಂಬರ ಹಾಗೂ ಶ್ವೇತಾಂಬರ ಅಮ್ನಾಯಗಳಲ್ಲಿ ಈಕೆಯ ಕಥೆ ಉಲ್ಲೇಖಗೊಂಡಿದೆ (ಸು. ೪ನೆ ಶತಮಾನ). ವಸುದೇವ ಹಿಂಡಿ, ಜಂಬೂಚರಿಯ, ಸ್ವಾಮಿಕುಮಾರನ ಕತ್ತಿಗೆಯಾಣುಪೆಕ್ಖಾ (ಕಾರ್ತಿಕೇಯಾನುಪ್ರೇಕ್ಷೆ) ಮೊದಲಾದ ಪ್ರಾಕೃತ ಗ್ರಂಥಗಳಲ್ಲಿ ಈ ಕಥೆ ಕುಡಿಯಿಟ್ಟಿದೆ. ಶ್ರೀಚಂದ್ರನ (ಅಪಭ್ರಂಶ) ಕಹಕೋಸುವಿನಲ್ಲೂ

ಪ್ರಭಾಚಂದ್ರನ ಕಥಾಕೋಶದಲ್ಲೂ ಪಲ್ಲವಿಸಿದೆ. ಹರಿಷೇಣನ ಬೃಹತ್ಕಥಾಕೋಶ (೧೦ನೆಯ ಶತಮಾನ) ಹಾಗೂ ಹೇಮಚಂದ್ರನ ತ್ರಿಷಷ್ಟಿಶಲಾಕಾ ಪುರುಷಚರಿತದ (೧೨ನೆಯ ಶತಮಾನ) ಕಡೆಯ ಭಾಗವಾದ ಪರಿಶಿಷ್ಟಪರ್ವದಲ್ಲೂ (ಸ್ಥಪರಾವಲಿಚರಿತ) ಹೊಳಲುಗಟ್ಟಿದೆ. ಈ ಕಥೆಯಲ್ಲಿನ ಮುಖ್ಯಪಾತ್ರಗಳು ತಾಯಿ, ಮಗ ಮತ್ತು ಮಗಳು; ವಸಂತಸೇನೆ (ಕುವೇರಸೇಣಾ, ಕುಬೇರಸೇನೆ, ಧನದೇವ (ಕುಬೇರದತ್ತ) ಮತ್ತು ಕಮಲೆ(ಕುಬೇರದತ್ತೆ). ಹೆಸರುಗಳಲ್ಲಿ, ವಿವರಗಳಲ್ಲಿ ಕೃತಿಯಿಂದ ಕೃತಿಗೆ ಕೊಂಚ ವ್ಯತ್ಯಾಸಗಳಿವೆ. ಇದೇ ಕಥೆ ಟಿಬೆಟಿನ್ ಟೇಲ್ಸ್‌ನಲ್ಲಿ (ಇದರ ಇಂಗ್ಲೀಷ್ ಅನುವಾದ ರಾಲ್ಸ್ ಟೊನ್, ೧೮೮೨) ಬರುವ ಉತ್ಪಲವರ್ಣಾಳ ಕಥೆಗೆ ಚೆನ್ನಾಗಿ ಹೋಲುತ್ತದೆ. ವಸಂತತಿಲಕೆ, ಕುಬೇರಸೇನಾ, ಉತ್ಪಲವರ್ಣಾ–ಇವೆಲ್ಲಾ ಒಂದೇ ಆಶಯದ ತ್ರಿಮೂರ್ತಿಗಳು. ಕನ್ನಡದಲ್ಲಿ ಚಂದ್ರಸಾಗರವರ್ಣಿನೆಂಬ (ಬ್ರಹ್ಮಣಾಂಕ) ಕವಿ 'ವಸಂತತಿಲಕೆ' ಎಂಬ ಕೃತಿಯನ್ನೇ ಬರೆದಿದ್ದಾನೆ.

ಈ ಜನಪ್ರಿಯ ಕಥೆ ಇನ್ನೂ ಆರಂಭದ ಅವಸ್ಥೆಯಲ್ಲಿದ್ದಾಗಿನ ಪ್ರಸ್ತಾಪ ಪೊನ್ನನ ಮೂಲಕ ಕನ್ನಡಕ್ಕೆ ಕಾಲಿಟ್ಟಿದೆ. ತರುವಾಯ ಬಂಧುವರ್ಮ (೧೨೦೦) ತನ್ನ 'ಜೀವ ಸಂಬೋಧನೆ'ಯಲ್ಲಿ ಇದನ್ನು ನಿರೂಪಿಸಿದ್ದಾನೆ. ವಿಸಂಗತವೂ ವಿಪರೀತವೂ, ಅನೈತಿಕವೂ ಆದ ದೇಹಸಂಬಂಧದ ವೈಪರೀತ್ಯವನ್ನು ನಿವೇಗಭಾವನೆ ನೆಲೆಗೊಳ್ಳಲು ನೆರವಾಗುವಂತೆ ಈ ಕಥೆ ರಚಿತವಾಗಿದೆ. ಕಥೆಯ ಸಂಕ್ಷಿಪ್ತರೂಪ; ಉಜ್ಜಯಿನಿಯ ಹೆಸರಾಂತ ಸೂಳೆ ವಸಂತತಿಲಕೆ (ವಸಂತಸೇನೆ, ಕುಬೇರಸೇನೆ, ಕುವೇರಸೇಣಾ). ಆಕೆಗೆ ಗಂಡು ಮತ್ತು ಹೆಣ್ಣು ಅವಳಿ ಮಕ್ಕಳು ಹುಟ್ಟಿದರು. ಆಕೆ ಅವಳಿಗಳನ್ನು ದಾಸಿಗೆ ಕೊಟ್ಟು ಊರಾಚೆ ಪ್ರತ್ಯೇಕ ಕಡೆಗಳಲ್ಲಿ ಇಟ್ಟು ಬರಲು ಕಳಿಸಿದಳು. ಮಕ್ಕಳನ್ನು ಮುದ್ರಿಕೆಗಳೊಡನೆ ತೊಟ್ಟಿಲಲ್ಲಿಟ್ಟು ಜಮುನಾ(ಜಉಣಾ)ನದಿಯಲ್ಲಿ ಮಕ್ಕಳನ್ನು ತೇಲಿಬಿಟ್ಟಳೆಂದು ಜಂಬೂಚರಿಯಲ್ಲಿ ಹೇಳಿದೆ. ಹಾಗೆ ಬೇರೆಯಾಗಿ ಹೊರಟು ಎಲ್ಲೋ ಸೇರಿ ಬೆಳೆದವರು ಕಮಲೆ(ಕುಬೇರದತ್ತೆ)ಮತ್ತು ಧನದೇವ(ಕುಬೇರದತ್ತ). ಮುಂದೆ ಇವರು ಅಣ್ಣ ತಂಗಿಯರೆಂದು ತಿಳಿಯದೆ ಗಂಡಹೆಂಡತಿಯಾದರು. ಒಮ್ಮೆ ಧನದೇವ ವ್ಯಾಪಾರಕ್ಕಾಗಿ ಅಲ್ಲಿ ಇಲ್ಲಿ ಹೊರಟು ಉಜ್ಜಯಿನಿಗೆ ಬಂದನು. ಗಣಿಕೆ ವಸಂತತಿಲಕೆಯನ್ನು ಕಂಡು ಸೋತು ಅವಳ ಒಡೆಯನಾಗಿ ಅವಳಲ್ಲೇ ಇರತೊಡಗಿದ. ತಾಯಿಮಗನ ಈ ದಾಂಪತ್ಯದಿಂದ ಒಂದು ಮಗು ಹುಟ್ಟಿತು. ಜೈನಯತಿಯಿಂದ ಈ ಸಂಗತಿ ತಿಳಿದ ಕಮಲೆಯೂ ಗೊರವಬ್ಬೆ ವೇಷದಿಂದ ವಸಂತತಿಲಕೆ ಮನೆಗೆ ಬರುತ್ತಾಳೆ. ಆಗ ಅಲ್ಲಿ ತೊಟ್ಟಿಲಲ್ಲಿ ಮಲಗಿದ್ದ ಮಗುವನ್ನು ತೂಗುತ್ತಾ ಕಮಲೆ ಜೋಗುಳ ಹಾಡುತ್ತಾ ಒಂದು ಒಡಪು ಹೇಳುತ್ತಾಳೆ. ಆ ಒಗಟಿನಲ್ಲಿ ಮೂವರ ಸಂಬಂಧವೂ ಧ್ವನಿತವಾಗುತ್ತದೆ. ಸತ್ಯದ ಸ್ಫೋಟವಾದ ಮೇಲೆ ಮೂವರೂ ದೀಕ್ಷೆ ತೆಗೆದುಕೊಳ್ಳುತ್ತಾರೆ. ಎಂದು ಹಂ.ಪ.ನಾ. ವಿವರಿಸಿದ್ದಾರೆ.

ವಿವರಗಳಿಗೆ ನೋಡಿ: ಹಂ.ಪ.ನಾ ೧೯೮೫ ಶಾಂತಿಪುರಾಣ

೬೫೩. ವಸ್ತುಕ–ವರ್ಣಕ

*ತ್ರಿದಶಸ್ತುತ್ಯಮಿದಾದಿದೇವಚರಿತಂ ಕರ್ಣಾಮೃತಸ್ಯಂದಿಯ*
*ಕ್ಕಿದು ಭವ್ಯಾವಳಿಗೆಂದು ಪೇಟಿಸೆ ಬುಧರ್ ಸ್ವರ್ಗಾಪವರ್ಗಕ್ಕಮಾ*
*ಸ್ಪದಮಪ್ಪಾದಿಪುರಾಣ**ವಸ್ತುಕೃತಿಯಂ** ಪೇೞ್ದಿಂ ಬೆಡಂಗಪ್ಪ ಮಾ*
*ರ್ಗದೊಳಂ ದೇಸೆಯೊಳಂ ಪೊದೞ್ದೆಸೆವಿನಂ ಸಂಸಾರಸಾರೋದಯಂ*

*(ಪಂಪ–ಆದಿ ಪುರಾಣ.)*

***ವರ್ಣಕಂ** ಕತೆಯೊಳೊಡಂಬಡಂ ಪಡೆಯೆ ಪೇೞ್ವೊಡೆ ಪಂಪನೆ ಪೇೞ್ಗುಮೆಂದ ಪಂ*

*ಡಿತರೆ ತಗುಳ್ದು ಬಿಚ್ಚಟಿಸೆ ಪೇೞಲೊಡರ್ಚಿದೆನೀ ಪ್ರಬಂಧಮಂ ॥ ಆದಿ ಪಂಪ– ವಿಕ್ರಮಾರ್ಜುನವಿಜಯ.*

ಕರ್ಣಾಟಕ ಸಾಹಿತ್ಯದಲ್ಲಿ ವಸ್ತುಕ–ವರ್ಣಕ ಎನ್ನುವ ಎರಡು ಸಂಪ್ರದಾಯಗಳಿವೆ ಎಂದು ಹಲಕವಿಗಳೂ ಗತಾನುಗತಿಕವಾಗಿ ಹೇಳುತ್ತಾ ಅವುಗಳ ಲಕ್ಷಣಗಳನ್ನು ಸ್ಥೂಲರೂಪದಲ್ಲಿ ಸಹ ಕೊಟ್ಟಿಲ್ಲ. ಪ್ರಾಚೀನರಿಗೆ ಸ್ಪಷ್ಟವಾಗಿದ್ದು ನಿರೂಪಣೆ ಅನವಶ್ಯವಾಗಿ ತೋರಿರಬಹುದು; ಆದುದರಿಂದ ಅಂತಹ ಲಕ್ಷಣಗಳನ್ನು ಗ್ರಹೀತವಾಗಿ ಇಟ್ಟುಕೊಂಡು, ನಾಮನಿರ್ದೇಶನವನ್ನು ಮಾತ್ರ ಲಾಕ್ಷಣಿಕರಲ್ಲಿ ತಿರುಮಲಾರ್ಯನೊಬ್ಬನೆ "ಇದಕ್ಕೆ(ಗದ್ಯ ಪದ್ಯ ಮಿಶ್ರತೆಯಿಂದಾ ಚಂಪುವೆಂದುಂ ವಸ್ತುಕಮೆಂದುಂ ಪೆಸರ್" ಎಂದು ಮಾತ್ರ ಹೇಳಿ ಆ ಪ್ರಸ್ತಾವವನ್ನು ಮುಗಿಸಿಬಿಟ್ಟಿದ್ದಾನೆ. ಆಧುನಿಕರಲ್ಲಿ ಕನ್ನಡ ಕೈಪಿಡಿಯ ಸಂಪಾದಕರು ಆಸಿದ್ದಾರೆ. "ಸಂಸ್ಕೃತ ಚಂಪೂ ಲಕ್ಷಣವನ್ನೂ ಸರಣಿಯನ್ನೂ ಅನುಸರಿಸಿ ಪದ್ಯಾತ್ಮಕವಾದ ಕಾವ್ಯಕ್ಕೆ ವಸ್ತುಕವೆಂದೂ, ಯಾವುದೊಂದು ವಿಶೇಷ ಕಾವ್ಯ ಸಂಸ್ಕೃತ ಕಾವ್ಯದ ಮಾದರಿಯನ್ನಾಗಲಿ, ಇಟ್ಟುಕೊಳ್ಳದೆ ಬರೆದಿರುವ ಪದ್ಯ ಕಾವ್ಯವೆಂದು ಹೆಸರು ಸಲ್ಲುವಂತೆ ಹೇಳಬೇಕಾಗುತ್ತದೆ"–ಎಂದು ಅವರ ಅಭಿಪ್ರಾಯ ಕವಿಗಳ ಉಕ್ತಿಯನ್ನು ಅನುವಾದಿಸಿದಲ್ಲಿ, ಸರ್ವಲಕ್ಷಣಸಮನ್ವಿತ ಕಾವ್ಯವೆಂದು ಸ್ಥೂಲವಾಗಿ ನಿರೂಪಿಸಬಹುದು. ಇದರ ಸೂಕ್ಷ್ಮನಿರೂಪಣೆ ವರ್ಣಕವಾದರೂ ಭಿನ್ನ ಭಿನ್ನ. ಕವಿಚಿತ್ತವೃತ್ತಿಗೆ ಅನುಸಾರವಾಗಿ ನಾನಾ ಪ್ರಕಾರ ಎಡೆಗೊಟ್ಟಂತೆ ತೋರುತ್ತದೆ. ಎಂದರೆ ಪೂರ್ವಕಾವ್ಯಗಳಲ್ಲಿ ದೊರೆಯುವು ಗಳು, ವಿಷಯ ನಿರ್ಣಯದ ದಾರಿಯಲ್ಲಿ ಬಲುದೂರ ಕೊಂಡೊಯ್ಯಲಾಗದು.

ಚಂಪು ವಸ್ತುಕವೆ ಎಂಬ ಜಿಜ್ಞಾಸೆಯನ್ನು ಕಡೆಂಗೋಡ್ಲು ಶಂಕರಭಟ್ಟರು 'ವಸ್ತುಕ–ವರ್ಣಕ' ಲೇಖನದಲ್ಲಿ ಚರ್ಚಿಸಿದ್ದಾರೆ:

"ಚಂಪೂ –ವಸ್ತುಕಗಳನ್ನು ಪರ್ಯಾಯ ಪದಗಳನ್ನಾಗಿ ಸ್ವೀಕರಿಸಿದವನು ತಿರುಮಲಾರ್ಯನೊಬ್ಬನೆ. ಈ ಮತವನ್ನು ಪ್ರಮಾಣವಾಗಿ ಒಪ್ಪಿಕೊಳ್ಳುವುದು ಅಸಾಧ್ಯ. ಅರ್ಥದ್ಯೋತನವು ವಿಶದವಾಗಬೇಕಾದರೆ ಪದದ ಪೂರ್ವಾಪರಗಳನ್ನು ಚೆನ್ನಾಗಿ ವಿಚಾರಿಸಬೇಕಾಗುತ್ತದೆ. ವಸ್ತು ಎನ್ನುವ ಪದಕ್ಕೆ ನಾನಾರ್ಥಗಳಿವೆ. ನಿಜವಾದುದು, ಸ್ಥಿರವಾದುದು, ಸತ್ಯಸ್ಥಿತಿಗೆ ಅನುಗುಣವಾದುದು, ಮೊದಲಾದ ಅರ್ಥಗಳಲ್ಲದೆ,

ಸಾಮಾನ್ಯವಾದ ಒಡವೆಯೆಂದೂ, ಕಾವ್ಯ ರೂಪಕಗಳ ಕಥಾಂಶ ಅಥವಾ ಇತಿವೃತ್ತವೆಂದೂ ಅರ್ಥವಾಗಬಹುದು. ಇವುಗಳಲ್ಲಿ ಸಂದರ್ಭೋಚಿತವಾದ ಅರ್ಥವನ್ನು ಗ್ರಹಿಸಿ ಪೂರ್ವಕವಿಗಳು ರಚಿಸಿದ ವಸ್ತುಕ ಕಾವ್ಯ ಲಕ್ಷಣಗಳ ಮುಖ್ಯಾಂಶವನ್ನೂ ಇದನ್ನೂ ಹೊಂದಿಸುವುದಕ್ಕೆ ಯತ್ನಿಸಿದಲ್ಲಿ ಒಂದು ಆತಂಕವನ್ನು ಉತ್ತರಿಸಿದಂತಾಗುವುದು.

ವಸ್ತುಕ ಪದವು ವ್ಯಾಪಕಾರ್ಥವನ್ನು ಒಳಕೊಂಡಿರುವುದರಿಂದ ಗದ್ಯ ಪದ್ಯಾತ್ಮಕವಾಗಿ ಅಥವಾ ಚಂಪೂ ರೂಪದಲ್ಲಿ ರಚಿತವಾದ ಕೆಲ ಕಾವ್ಯಗಳನ್ನು ಆ ಪದದಲ್ಲಿ ಅಳವಡಿಸಿ ಕೊಳ್ಳಬಹುದೇ ಹೊರತು ಈ ಎರಡರಲ್ಲಿ ಅಭೇದಾಧ್ಯ ವ್ಯವಸಾಯ ಮಾಡುವುದು ಯುಕ್ತವಾಗಲಾರದು. ಅಲ್ಲದೆ ಕನ್ನಡ ಕೈಪಿಡಿಯಲ್ಲಿ ಹೇಳಿದಂತೆ ಸಂಸ್ಕೃತ ಚಂಪೂ ಕಾವ್ಯಮಾರ್ಗಾನುಸಾರಿಯಾದ ಕನ್ನಡ ಕಾವ್ಯವು ವಸ್ತುಕವೆನ್ನುವುದಕ್ಕೂ ಆಧಾರವಿಲ್ಲ. ಚಂಪೂ ಕಾವ್ಯದ ಉತ್ಪತ್ತಿ ವಿಕಾಸದ ಚರಿತ್ರೆಯನ್ನು ಅವಲೋಕಿಸಿದಲ್ಲಿ ಈ ವಿಷಯವು ಸ್ಫುಟವಾದೀತು."

ಕನ್ನಡ ಕಾವ್ಯ ಸಂಪ್ರದಾಯಗಳ ಕುರಿತ ವಿಶಿಷ್ಟ ಚರ್ಚೆಗಳಲ್ಲಿ ಇದೂ ಒಂದು. ಚಂಪುವನ್ನು ವಸ್ತುಕವೆಂದು ಕರೆಯಬೇಕೆ ಬೇಡವೆ ಎನ್ನುವುದು ಹಿರಿಯ ವಿದ್ವಾಂಸರ ಚರ್ಚೆಯ ವಸ್ತುವಾಗಿತ್ತು ಎಂಬುದು ಗಮನಾರ್ಹ.

ಚಂಪೂ ಕಾವ್ಯದ ಆರಂಭ ಕನ್ನಡದಲ್ಲಿ ಆಯಿತೆನ್ನುವುದಕ್ಕೆ ಪ್ರಾಮಾಣಿಕವಾದ ಆಧಾರಗಳಿವೆ. ಹತ್ತನೆಯ ಶತಮಾನಕ್ಕಿಂತ ಪೂರ್ವದ ಸಂಸ್ಕೃತ ಚಂಪೂ ಕಾವ್ಯಗಳು ಉಪಲಬ್ಧವಾಗಿಲ್ಲ. ಈ ಶತಮಾನದ ತ್ರಿವಿಕ್ರಮ ಭಟ್ಟನೆಂಬಾತನು ದಮಯಂತಿ ಕಥೆ, ಮದಾಲಸಾ ಚಂಪೂ ಕಾವ್ಯಗಳನ್ನು ರಚಿಸಿದನೆಂದು ಶಾಸನಗಳಿಂದ ತಿಳಿದುಬರುತ್ತದೆ. ಆದರೆ ಈ ಕಾಲದಲ್ಲಿ ಗಣನೀಯವಾದ ಆದ್ಯ ಚಂಪುವೆಂದರೆ ಸೋಮದೇವನ ಯಶಸ್ತಿಲಕ (ಕ್ರಿ.ಶ.೯೫೯) "ಅಭಯ ರುಚಿಕುಮಾರಂ ಮಾರಿದತ್ತಂಗೆ ಹಿಂಸಾ। ರಭಸಮತಿಗೆ" ಹೇಳಿ ಆತನನ್ನು ಧರ್ಮಮಾರ್ಗಕ್ಕೆ ತಂದ ಶುಭಕಥನವನ್ನು ಕನ್ನಡ ಕವಿ ಜನ್ನನು ಯಶೋಧರ ಚರಿತೆ ಎಂಬ ನಾಮಾಂಕಿತದಿಂದ ಬರೆದಿದ್ದಾನೆ; ಅದನ್ನೆ ಅವನಿಗಿಂತ ಹಿಂದಿನ ಕವಿ ಸೋಮದೇವನು ಯಶಸ್ತಿಲಕ ಚಂಪುವಿನಲ್ಲಿ ಮಂಡಿಸಿದನು. ಇದುವರೆಗೆ ಸಂಸ್ಕೃತದಲ್ಲಿ ಪದ್ಯ ಬಂಧಗಳೆ ಹೆಚ್ಚಾಗಿದ್ದುವು. ಸುಬಂಧು, ದಂಡಿ, ಬಾಣಭಟ್ಟರು ಗದ್ಯ ಕಾವ್ಯ ವ್ಯವಸಾಯಮಾಡಿದ್ದರೂ ಅವರ ಸಂಪ್ರದಾಯವು ಜನ ಪ್ರಾಚುರ್ಯವನ್ನು ಹೊಂದಿದಂತೆ ತೋರುವುದಿಲ್ಲ. ಅಲ್ಲದೆ ಗದ್ಯ ಲೇಖನವು ಸುಲಭವಾಗಿಯೂ ಇರಲಿಲ್ಲ. "ಗದ್ಯಂ ಕವೀನಾಂ ನಿಕಷಂ" ಎನ್ನುವ ಮಾತಿನಿಂದ ಆ ಕಾಲದಲ್ಲಿ ಅಪ್ರಚುರವಾಗಿದ್ದ ಗದ್ಯವು ಎಂತಹ ಮನ್ನಣೆಯನ್ನು ಪಡೆದಿತ್ತೆಂಬುದನ್ನು ಊಹಿಸಬಹುದು. ಭೋಜರಾಜನು ತನ್ನ ಚಂಪೂ ರಾಮಾಯಣದಲ್ಲಿ "ಗದ್ಯಾನುಬಂಧ ರಸಮಿಶ್ರಿತಪದ್ಯಸೂಕ್ತಿ । ವಾದ್ಯ ಕಲಯಾ ಕಲಿತೇವ ಗೀತಿಃ" ಎಂದು, ಸಂಗೀತದಲ್ಲಿ ವಾದ್ಯಕ್ಕೆ ಯಾವ ಅದನ್ನು ಗದ್ಯಕ್ಕೆ ಕೊಟ್ಟಿರುತ್ತಾನೆ. ಅಲ್ಲದೆ ಗದ್ಯಾನುಬಂಧವು "ರಸಮಿಶ್ರಿತ"ತ್ವವಾಗುವುದೆಂಬುದನ್ನೂ ತಿಳಿಸಿದ್ದಾನೆ. ಸಂಸ್ಕೃತ ಸಾಹಿತ್ಯದಲ್ಲಿ ಗದ್ಯ ಪದ್ಯ

ಕಾವ್ಯವು ತನ್ನ ನೆಲೆಯನ್ನು ಹುಡುಕುತ್ತಿದ್ದಾಗ, ಕನ್ನಡದಲ್ಲಿ ಈ ಬಗೆಯ ಕಾವ್ಯ ದೊರಕಿದ್ದಿತೆಂಬುದನ್ನು ಗಮನಿಸಬೇಕು.

ಚಂಪೂವಿನ ಕುರಿತ ಶಂಕರಭಟ್ಟರ ಈ ನಿಲುವು ಗಮನಾರ್ಹವಾಗಿದೆ.

ವಸ್ತುಕ, ವಸ್ತುಬಂಧ, ವಸ್ತುಕೃತಿ, ಅರ್ಥಕೃತಿ, ಪುರಾಣ, ಮೊದಲಾದ ಪದಗಳು ಬೇರೆ ಬೇರಾಗಿ ಪ್ರಯುಕ್ತವಾಗಿವೆ. ನೃಪತುಂಗನು "ಮಹಾಧ್ವಕೃತಿ"ಯನ್ನು ಉಲ್ಲೇಖಿಸುತ್ತಾನೆ. ಒಂದನೆಯ ನಾಗವರ್ಮನು ಲಕ್ಷಣಲಕ್ಷ್ಯಸಮಸ್ತವಸ್ತು ಸಂಯುತವಾದ, ಪರಿಪೂರ್ಣ ರಸೋಚಿತವಾದ, ಅರ್ಥಯುಕ್ತವಾದ, ಉಚಿತಪುರಾಣಮಾರ್ಗಪದಪದ್ಧತಿಬಂಧುರ ಬಂಧವುಳ್ಳ ಕಾವ್ಯ ಮಾರ್ಗವನ್ನು ಪ್ರಸ್ತಾವಿಸಿದ್ದಾನೆ. ಇದನ್ನೆ ಅರ್ಥಕೃತಿಯೆಂದು ನಾಮಾಂತರ ದಿಂದ ಹೇಳಿದ ಹಾಗೂ ತೋರುತ್ತದೆ. ಕಾದಂಬರಿಯಂತೂ "ದೋಷಮೊಂದದ ಳಂಕಾರದ ವಸ್ತುಬಂಧ"ವಾಗಿರುವುದು. ಅಗ್ಗಳನ ಚಂದ್ರಪ್ರಭ ಪುರಾಣವು ವಸ್ತುಕೃತಿ. ಹಂಪೆಯ ಹರಿಹರ ರಗಳೆಯ ಕವಿಯಾಗಿದ್ದ. ಗಿರಿಜಾಕಲ್ಯಾಣ ಮಹಾಪ್ರಬಂಧವನ್ನು "ಸೊಗಸೊಗುವಂತಹ ವಸ್ತುಕವನ್ನು ನೆಗಳಿದ" ಕಾರಣ ವಸ್ತುಕ ಕವಿಗಳಲ್ಲಿ ಪ್ರಸಿದ್ಧಿಯನ್ನು ಪಡೆದ. ವಸ್ತುಕದೊಳಗೆ ಲಕ್ಷಣ ಲಕ್ಷಿತಗಳ ವಿನ್ಯಸ್ತವಲ್ಲದೆ ಪೆರತಿಲ್ಲ; ಎಂದು ಪದ್ಮರಸನೂ, ಓದುಗಬ್ಬವನ್ನೇ ವರ್ಣಕವಾಗಿ ಗ್ರಹಿಸಿ "ಸಕಲಲಕ್ಷಣವು ವಸ್ತುಕಕೆ' ಎಂದು ರತ್ನಾಕರವರ್ಣಿಯೂ ಹೇಳುತ್ತಿರುವುದನ್ನು ನಾವು ಗಮನಿಸಬಹುದು. ಆದರೆ ಹಲವು ವಿಷಯಗಳಲ್ಲಿ ನಮಗೆ ಪಂಪನೇ ಮಾರ್ಗದರ್ಶಕನಾಗಿರುವನು. ಲಾಕ್ಷಣಿಕರು ಲಕ್ಷಣಗಳನ್ನು ಕೊಟ್ಟಿದ್ದಾರೆ. ಆದರೆ ಅವುಗಳ ಆದರ್ಶ ಬಿಂಬಗಳನ್ನು ಮಹಾಕವಿಗಳಲ್ಲಿ ಹುಡುಕಬೇಕಾಗಿದೆ. ಈ ಭಾಗದಲ್ಲಿ ಪಂಪನ ದಿಗ್ದರ್ಶನ ಎಂತಹದೆಂಬುದನ್ನು ಪ್ರಬಂಧದ ಮೊದಲಲ್ಲಿ ಕೊಟ್ಟ, ಆದಿಪುರಾಣದ ಅಂತ್ಯಾಶ್ವಾಸದಿಂದ ಉದ್ಧೃತವಾದ "ತ್ರಿದಶಸ್ತುತ್ಯ..." ಎಂಬ ಪದ್ಯದಿಂದ ಗ್ರಹಿಸಬೇಕಾಗಿದೆ. ಅದರ ಅನುವಾದ ಹೀಗಿದೆ: ಇದು ಆದಿದೇವಚರಿತ; ಇದು ಕರ್ಣಾಮೃತಸ್ಯಂದಿ; ಸ್ವರ್ಗಕ್ಕೂ ಅಪವರ್ಗಕ್ಕೂ ಕಾರಣೀಭೂತವಾದುದು. ಇದು ಆದಿಪುರಾಣ ಎಂಬ ವಸ್ತುಕೃತಿ. ಮುಂದಿನ ಪದ್ಯದಲ್ಲಿ ಇನ್ನಷ್ಟು ವಿಸ್ತಾರವಾಗಿ ಲಕ್ಷಣವನ್ನು ಕೊಡುತ್ತಾನೆ. ಇದು ರಸಭಾಸವೋಪೇತ ಧರ್ಮಾಮೃತರಸಮಯ; ಘೋರ ಸಂಸಾರನಾನಾವ್ಯಸನವ್ಯುಚ್ಛಿತ್ತಿ; ಧಾರ್ಮಿಕ ಜನಜನಿತಾನಂದಸಂದೋಹವಿದ್ಯಾರಸ; ಇದರಿಂದ ಪಂಪನಿಗೆ ಉದ್ದಿಷ್ಟವಾದ ವಸ್ತುಕೃತಿಯ ಸ್ವರೂಪ ಜ್ಞಾನವಾಗುವುದು. ಇನ್ನೊಬ್ಬ ಕವಿರತ್ನನಾದ ರನ್ನನು ತನ್ನ ವಸ್ತುಕೃತಿಯಾದ ಅಜಿತ ಪುರಾಣದಲ್ಲಿ ಈ ಬಗೆಯ ಮತ್ತು ತದ್ಭಿನ್ನ ಕಾವ್ಯ ಸಂಪ್ರದಾಯಗಳನ್ನು ಸೂಚಿಸಿದ್ದಾನೆ:

ಜಿತಕಂದರ್ಪಮೆನಿಪ್ಪ ಶಾಂತರಸಮೆತ್ತುದ್ದಾಮಶೃಂಗಾರಮೆ
ತ್ತತಿಗಂಭೀರಜಿನೋಕ್ತಿಯೆತ್ತ ಸಕಲಂ ಲೋಕೋಕ್ತಿಯೆತ್ತಾಗಮ
ಮೃತಮೆತ್ತನ್ಯಮತಪ್ರಚಂಡವಿಷಮೆತ್ತೆಂಬಂತು ಕಿಂ ಕೇನ ಸಂ
ಗತಮೆಂಬಂತಿರೆ ಪೇಳ್ದಧರ್ಮಕಥೆಯಂ ಪಾಪಕ್ಕೆ ಪಕ್ಕಪ್ಪುದೇ?

ಇದು "ಜಿತಕಂದರ್ಪಂ ಎನಿಪ್ಪ" ಶಾಂತರಸವೇ ಪ್ರಧಾನವಾಗುಳ್ಳ ಕಾವ್ಯ; ಅತಿ

ಗಂಭೀರ ಜಿನೋಕ್ತಿಯಿಂದ ಕೂಡಿದುದು. ಆಗಮಾಮೃತಪೂರ್ಣವಾಗಿರುವುದು. ಇಂತಹ ಕೃತಿಯಲ್ಲಿ ಉದ್ದಾಮಶೃಂಗಾರಕ್ಕೂ ಸಕಲಲೋಕೋಕ್ತಿಗೂ ಅನ್ಯಮತಪ್ರಚಂಡವಿಷಕ್ಕೂ ಸ್ಥಾನವೆಲ್ಲಿ? ರನ್ನಕವಿವಾಕ್ಯದಂತೆ ಇದು ವಸ್ತುಕೃತಿಯ ಲಕ್ಷಣವಾಗಿದೆ ಎಂದು ಕಡೆಂಗೋಡ್ಲು ಶಂಕರಭಟ್ಟರು ಅಭಿಪ್ರಾಯ ಪಡುತ್ತಾರೆ.

**೬೫೪. ವಾನಪ್ರಸ್ಥ**

ಬ್ರಹ್ಮಚರ್ಯ, ಭೂಮಿಯಲ್ಲಿ ಮಲಗುವುದು, ಜಟೆ ಮತ್ತು ಕೃಷ್ಣಾಜಿನಗಳನ್ನು ಧರಿಸುವುದು, ಅಗ್ನಿಹೋತ್ರ, ಮೂರು ಹೊತ್ತುಸ್ನಾನ, ದೇವತಾಪಿತೃ ಅತಿಥಿಗಳನ್ನು ಪೂಜಿಸುವುದು, ಗೆಡ್ಡೆ ಗೆಣಸುಗಳನ್ನು ಸೇವಿಸುವುದು, ವನದಲ್ಲಿ ವಾಸಿಸುವುದು ವಾನಪ್ರಸ್ಥನ ಲಕ್ಷಣಗಳಾಗಿವೆ. ಇವು ವಾನಪ್ರಸ್ಥನ ಧರ್ಮಗಳು. ಪಾಂಡು ವಾನಪ್ರಸ್ಥಕ್ಕೆ ಹೋಗಿರುವುದನ್ನು ನೆನಪಿಸಿಕೊಳ್ಳಬಹುದು.

*ವಿವರಗಳಿಗೆ ನೋಡಿ: ಶ್ರೀ ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳು ೨೦೧೦ ಕೌಟಲೀಯ ಅರ್ಥಶಾಸ್ತ್ರ ಪುಟ. ೩೫.*

**೬೫೫. ವಾರವನಿತೆ**

*ನೀನಶೀತಭವದೊಳ್ ಉಪಾರ್ಜಿತೋರ್ಜಿತಪುಣ್ಯನೆಯಾಗಿ ಸೌಧರ್ಮ ಕಲ್ಪದೊಳ್ ದೇವನಾದೈ ನಿನ್ನ ಮೂವರ್ಮಗಳ್ದಿರೊಳಗಿರ್ವರಲ್ಲಿಯೆ ದಿವಿಜರಾದರ್ ಒರ್ವಳನಂಗ ರಾಗರಸ ರಸಿಕತೆಯಿಂದಮಪ್ಸರಃಸಮಯದೊಳಮರ ವಾರವನಿತೆಯಾದಳ್............ (ಶಾಂತಿಪುರಾಣ ೬-೮೫ ವ)*

ವಾರಾಂಗನೆ; ವಾರಸ್ತ್ರೀ; ಎಂದರೆ ಸೂಳೆಯೆಂದರ್ಥ. ಪೊನ್ನನು ಇಲ್ಲಿ ಒಬ್ಬಳು ಸಮ್ಯಕ್ತ್ವವಿಲ್ಲದೆ ಕಾಮಾಸಕ್ತಿ ಹೊಂದಿದುದರಿಂದ "ಅಮರ ವಾರವನಿತೆಯಾದಳ್" ಎಂದು ಕವಿಯು ಬಣ್ಣಿಸುತ್ತಾನೆ. ಲೌಕಿಕದಲ್ಲಿ ಸಮ್ಯಕ್ತ್ವವಿಲ್ಲದುದರಿಂದ; ರಸಿಕತೆಯ ಕಾರಣದಿಂದ ಮರುಜನ್ಮದಲ್ಲಿ ಅವಳು ಸೂಳೆಯಾಗುತ್ತಾಳೆ. ವಾರವಧು, ವಾರವಾಣೀ (ಬಹುಜನರ ಆದರಕ್ಕೆ ಪಾತ್ರಳಾದ ವೇಶ್ಯೆ). ವಾರಸುಂದರೀ(ವೇಶ್ಯೆ, ಸೂಳೆ) ವಾರಸ್ತ್ರೀ (ವೇಶ್ಯೆ) ಎಂಬ ಪದಗಳು 'ವಾರವನಿತೆ'ಗೆ ಪರ್ಯಾಯ ಪದಗಳಾಗಿವೆ.

*ವಿವರಗಳಿಗೆ ನೋಡಿ: ಡಿ.ಡಿ. ಕೊಸಾಂಬಿ ೨೦೦೩ ಪುರಾಣ ಮತ್ತು ವಾಸ್ತವ ಪುಟ. ೯೪-೯೬.*

**೬೫೬. ವಿಜಾತಿ**

ವಿಜಾತಿಯ ಪರಿಕಲ್ಪನೆಯೂ ವಡ್ಡಾರಾಧನೆಯಲ್ಲಿ ಬರುತ್ತದೆ. ವಿಜಾತಿ ಎಂದರೆ ಜಾತಿಹೀನ ಕುಲವಿಲ್ಲದವನು ಎಂಬ ಅರ್ಥವನ್ನು ಸೂಚಿಸುತ್ತದೆ. ಜಾತಿ ಶ್ರೇಣೀಕರಣದಲ್ಲಿ ಜನ್ಮಕ್ಕೆ ಮತ್ತು ಜಾತಿಗೆ ಸಂಬಂಧವಿದೆ. ಮನುಷ್ಯ ಯಾವ ಜಾತಿಯಲ್ಲಿ ಹುಟ್ಟುತ್ತಾನೋ ಆ ಜಾತಿಯ ಮೂಲಕ ಅವನನ್ನು ಗುರುತಿಸಲಾಗುತ್ತದೆ. ಈ ದೃಷ್ಟಿಯಿಂದ ಜಾತಿ

ಎನ್ನುವುದು ನಮ್ಮ ಸಮಾಜದಲ್ಲಿ ಸ್ಥಾನಮಾನದ ಪ್ರಶ್ನೆಯಾಗಿದೆ. ಯಾರು ಜಾತಿಯ ಚೌಕಟ್ಟಿನ ಒಳಗಡೆ ಇರುವುದಿಲ್ಲವೋ ಅವರನ್ನು ವಿಜಾತಿ ಎಂದು ಕರೆಯಲಾಗುತ್ತದೆ. ಜಾತಿ ಮಾನದಂಡದ ದೃಷ್ಟಿಯಿಂದ ವಿಜಾತಿಯರು ಯಾವುದೇ ಸ್ಥಾನಮಾನವನ್ನು ಪಡೆದುಕೊಳ್ಳುವುದಿಲ್ಲ. ಜಾತಿ ಚೌಕಟ್ಟಿನಿಂದ ಹೊರಗಡೆ ಇರುವುದರಿಂದ ಅವರಿಗೆ ಸಾಮಾಜಿಕ ಸೌಲಭ್ಯವು ಇಲ್ಲ. ವ್ಯಭಿಚಾರದಿಂದ ಹುಟ್ಟಿದ ಮಕ್ಕಳನ್ನು ವಿಜಾತಿಯರೆಂದು ಗುರುತಿಸಲಾಗುತ್ತದೆ.

**೬೫೭. ವಿದ್ಯಾಧರಕರಣ**

ಗದಾಯುದ್ಧದ ವರಸೆಯೊಂದನ್ನು ವಿದ್ಯಾಧರ ಕರಣವೆಂದು ಪಂಪ ಹೇಳುತ್ತಾನೆ. (ಪಂಪ ಭಾರತ ೧೩-೯೪ ವ)

ಆಕಾಶಗಾಮಿನಿ ವಿದ್ಯೆಗೆ ಮತ್ತೊಂದು ಹೆಸರು.

ಆಯುಧಗಳನ್ನು ಬಿಡುವಾಗ ಆರು ರೀತಿಯ ಸ್ಥಾನಕಗಳು ಇವೆ. ೧.ವೈಷ್ಣವ ೨.ಸಮಪಾದ ೩.ವೈಶಾಖ ೪.ಮಂಡಲ ೫.ಪತ್ಯಾಲೀಢ ೬.ಆಲೀಢ. ಇದಕ್ಕೆ ಸಂಬಂಧಿಸಿದಂತೆ ನಾಲ್ಕು ನ್ಯಾಯಗಳಿವೆ: ೧) ಭರತನು ಬಿಡುವ ಆಯುಧವು ಸೊಂಟಕ್ಕೆ ತಗಲಬೇಕು, ಕಟಿಚ್ಛೇದ ೨) ಸತ್ವತ್ತನು ಪಾದಚ್ಛೇದವನ್ನು ೩) ವಾರ್ಷಗಂಗನು ವಕ್ಷಚ್ಛೇದವನ್ನೂ ೪) ಕೈಶಿಕನು ಶಿರಚ್ಛೇದವನ್ನು ಮಾಡಬೇಕೆಂಬುದು ಯುದ್ಧ ನ್ಯಾಯ. ನಾಟ್ಯದಲ್ಲಿಯೂ ಹದಿನಾರು ಭೌಮಾಚಾರಿಗಳು ೧೬ ಆಕಾಶಚಾರಿಗಳೂ ಇವೆ. ಯುದ್ಧ ಕ್ರಮದಲ್ಲಿಯೂ ನೆಲದ ಮೇಲೆ ನಿಂತು; ರಥದ ಮೇಲೆ ನಿಂತು; ಕುದುರೆಯ ಮೇಲೆ ಕುಳಿತು, ಆನೆಯ ಮೇಲೆ ಕುಳಿತು ಯುದ್ಧ ಮಾಡುವ ಕ್ರಮವಿದೆ.

ವಿವರಗಳಿಗೆ ನೋಡಿ: ಯು.ಎಸ್. ಕೃಷ್ಣರಾವ್ ೧೯೭೧ ಆಧುನಿಕ ಭಾರತದಲ್ಲಿ ನೃತ್ಯಕಲೆ ಪುಟ. ೫೯

**೬೫೮. ವಿದ್ಯಾಭ್ಯಾಸ**

ವಡ್ಡಾರಾಧನೆಯ ಕಾಲದ ವಿದ್ಯಾಭ್ಯಾಸದಲ್ಲಿ ಕಾವ್ಯ, ನಾಟಕ, ಸಾಮುದ್ರಿಕ, ವಾತ್ಸ್ಯಾಯನ, ವೈದ್ಯ ಇತ್ಯಾದಿಗಳು ವಿಷಯಗಳಾಗಿದ್ದವು

ಶ್ರೀವತ್ಸ ನಿಘಂಟುವಿನಲ್ಲಿ ವಿದ್ಯೆ ಮತ್ತು ಕಲೆಗೆ ಸಂಬಂಧಿಸಿದಂತೆ ವಿವರವಾದ ಪ್ರಸ್ತಾಪವಿದೆ.

ವಿದ್ಯಾ-೨ : (ಅ) ಪರಾ, ಅಪರಾ (ಮುಂಡಕ. ೧-೧-೪) ಸಗುಣವಿದ್ಯೆ, ನಿರ್ಗುಣ- (ಕೇನ. ಭಾ. ೮) ಶಸ್ತ್ರವಿದ್ಯೆ, ಶಾಸ್ತ್ರ - (ಹಿತೋಪದೇಶ-ಸಂ. ೭) ; (ಈ) ಬಲಾ, ಅತಿಬಲಾ (ವಾರಾಮಾ. ಬಾಲ. ೨೨-೧೭), (ಉ) ಸಂಭೂತಿ (ವಿದ್ಯೆ), ಅಸಂಭೂತಿ (ಅವಿದ್ಯೆ), (ಸಾಂಖ್ಯ. ೬).

ವಿದ್ಯಾ-೩ : (ಅ) ನೋ. ವೇದ-೩ (ಆ) ಪ್ರಹರಣ, ವಾರಣ, ಬಂಧಮೋಚನ (ಚಾವುಂ.ಪು). (ಇ) ಕುಲವಿದ್ಯೆ, ಜಾತಿ-, ಸಾದಿತ- (ಚಾವುಂ.ಪು).

ವಿದ್ಯಾ–೪ : (ಅ) ನೋ. ವೇದ–೪. (ಆ) ಆನ್ವೀಕ್ಷಕೀ (ತರ್ಕಶಾಸ್ತ್ರ), ತ್ರಯೀ (ವೇದವಿದ್ಯೆ), ವಾರ್ತಾ (ಉಪಜೀವನ ವೃತ್ತಿ), ದಂಡನೀತಿ (ರಾಜನೀತಿ) (ಭಾಗ. ३–೧೨–೪೪; ಕಾಮಂದಕೀಯ – (ಆಪ್ಟೆ).

ವಿದ್ಯಾ–೬ : ನೋ. ಕರ್ಮ–೬ (ಎ).

ವಿದ್ಯಾ–೮ : ಜ್ಞಾನದರ್ಶನ, ಮನೋಮಯ ಕಾಯನಿರ್ಮಾಣ, ಋದ್ಧಿವಿಧ, ದಿವ್ಯಶ್ರೋತ್ರ, ಚೇತೋಪರಿಯಜ್ಞಾನ, ಪೂರ್ವನಿವಾಸಾನುಸ್ಮೃತಿಜ್ಞಾನ, ಸತ್ವಗಳ ಚ್ಯುತೋಪಪಾತಜ್ಞಾನ, ಆಸ್ರವಕ್ಷಯ ಜ್ಞಾನ (ಮೂಪಾಸೂ. ೪೧).

ವಿದ್ಯಾ–೧೦ : ಉದ್ಗೀಥ ವಿದ್ಯೆ, ಸಂವರ್ಗ–, ಮಧು–, ಪಂಚಾಗ್ನಿ–, ಉಪಕೋಸಲ, ಶಾಂಡಿಲ್ಯ–, ದಹರ–, ಭೂಮ–, ದೀರ್ಘಾಯುಷ್ಯ–, ಮಂಥ– (ರಾಮಗೀತಾ– ಸಂ. ೧೭೧).

ವಿದ್ಯಾ–೧೧ : ವ್ಯಾಕರಣ, ಗಾಂಧರ್ವವೇದ, ಸಾಮುದ್ರಿಕ, ವೈದ್ಯಕ, ಅಸ್ತ್ರವಿದ್ಯೆ, ಯೋಗಶಾಸ್ತ್ರ, ಭಕ್ತಿಶಾಸ್ತ್ರ, ರುದ್ರಯಾವಲಾದಿ ತಂತ್ರಶಾಸ್ತ್ರ, ಸಾಬರಾದಿ ಮಂತ್ರಶಾಸ್ತ್ರ, ಸ್ವರೋದಯ, ಸರ್ವಪ್ರಕಾರದ ಕಥೆ (ಸಂ. ೧೪೧).

ವಿದ್ಯಾ–೧೪ : ೪ ವೇದಗಳು (ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ), ೬ ವೇದಾಂಗಗಳು (ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪ), ಮೀಮಾಂಸೆ, ನ್ಯಾಯ, ಪುರಾಣ, ಧರ್ಮಶಾಸ್ತ್ರ (ಗೌಧಸೂ. ಪು. ೧ ; ೭–೧ ವ್ಯಾ ; ಭವಿಪು. ೨–೬; ವಿಷ್ಣು ಪು. ೭–೬–೨೭).

ವಿದ್ಯಾ–೧೬ : ಸತ್ಯವಿದ್ಯೆ, ದಹರ–, ವೈಶ್ವಾನರ–, ಪಂಚಾಗ್ನಿ–, ಷೋಡಶಕಲಾ, ಉದ್ಗೀಥ–, ಶಾಂಡಿಲ್ಯ–, ಪುರುಷ–, ಪರ್ಯಂಕ–, ಅಕ್ಷರ–, ಸಂವರ್ಗ–, ಮಧು–, ಪ್ರಾಣ–, ಉಪಕೋಸಲ–, ಸತ್–, ಭೂಮ– (ಸಂ. ೨೦೧).

ವಿದ್ಯಾ–೧೮ : ಚತುರ್ದಶ ವಿದ್ಯೆಗಳು + ೪ ಉಪವೇದಗಳು (ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ಅರ್ಥಶಾಸ್ತ್ರ) (ಭಾಗ. ೫–೫ : ವಿಷ್ಣು ಪು. ३–೬–೨೭, ೨೮. ವಾಯುಪು. ೬೧–೭೪, ೭೯ ; ಶಿವತ, ೧–೧–೨೭–३೦).

ವಿದ್ಯಾ–३೨ : (ಅ) ವೃಕ್ಷವಿದ್ಯೆ, ಪಶು–, ಮನುಷ್ಯ–, ಸಂಸೇಚನ–, ಸಂಹರಣ, ಸ್ತಂಭನ–, ದೃತಿ–, ಭಸ್ಮೀಕರಣ–, ಸಂಕಟ–, ಪಾರ್ಥಕ್ಯ–, ತರೀ–, ನೌ–, ನೌಕಾ–, ಅಶ್ವ–, ಪಥ–, ಘಂಟಾಪಥ–, ಸೇತು–, ಶಕುಂತ–, ವಿಮಾನ–, ವಾಸೋ–, ಕುಟ್ಟೀ, ಮಂದಿರ–, ಪ್ರಾಸಾದ–, ದುರ್ಗ–, ಕೂಟ–, ಆಕರ–, ಯುದ್ಧ–, ಆಪಣ–, ರಾಜವರಾಲಯ–, ನಗರರಚನಾ–, ವನೋಪವನ–, ದೇವಾಲಯ–(ಭೃಗುಸಂಹಿತಾ, ಅ. ೧–ಸಂ. ೨೨೬). (ಆ) ಈಶ್ವರ, ಪರಮಪುರುಷ, ಸದ್‌ವಿದ್ಯಾ, ಆನಂದಮಯ, ಪರಂಜ್ಯೋತಿ, ಶಾಂಡಿಲ್ಯ, ಪರ್ಯಂಕ, ಉದ್ದಾಲಕ, ಅಕ್ಷರಾಕ್ಷರ, ಭೂಮ, ಗಾರ್ಗೀಅಕ್ಷರ, ಸತ್ಯಕಾಮ, ದಹರ, ಅಂಗುಷ್ಠಮಾತ್ರ, ಜ್ಯೋತಿಷಾಂ ಜ್ಯೋತಿ, ಮೈತ್ರೇಯೀ, ಗಾಯತ್ರೀ, ಉಷಸ್ತಿ ಕಹೋಲ, ಅಂತ ರಾದಿತ್ಯ, ಉಪಕೋಶಲ, ಮಧು, ಬಾಲಾಕಿ, ಆಕಾಶ, ಪ್ರಾಣ,

ಪ್ರತರ್ದನ, ನಾಚಿ ಕೇತ, ವೈಶ್ವಾನರ, ಸಂವರ್ಗ, ಪಂಚಾಗ್ನಿ, ಅಕ್ಷಿ, ಭೃಗುವಾರುಣಿ, ಶ್ರೀಮನ್ನ್ಯಾಸ

**(The thirty-two Vidyas-K. Narayana Swami Aiyar, Adyar, Madras, 20. p. 8)**.

ಪರೀಕ್ಷಾ–೩ ವಿಧ : ವ್ರಣಚಿಕಿತ್ಸೆಯ–ದರ್ಶನ, ಸ್ಪರ್ಶ, ಸಂಸ್ಪರ್ಶ (ಚರಕ. **II 25-21**).

ಚರಕ ಮೂರು ವಿಧದ ವಿದ್ಯೆಯನ್ನು ಹೇಳುತ್ತದೆ. ನಾಡಿ, ಮೂತ್ರ, ಮಲ, ಜಿಹ್ವೆ, ಶಬ್ದ, ಸ್ಪರ್ಶ, ನೇತ್ರ, ರೂಪ (ಆಕೃತಿ) (ನಿಘಂಟು ರತ್ನಾಕರ–ಸಂ. ೧೪೭).

ಕಾರಣ, ಕರಣ, ಕಾರ್ಯಯೋನಿ, ಕಾರ್ಯ, ಕಾರ್ಯಫಲ, ಅನುಬಂಧ, ದೇಶ, ಕಾಲ, ಪ್ರವೃತ್ತಿ, ಉಪಾಯ ಚರಕಸಂಹಿತೆಯು ಹೇಳುವ ವಿದ್ಯೆಗಳು.

ಮತ್ತು ಕಲೆಯು ಒಂದು ರೀತಿಯ ವಿದ್ಯೆಯೇ. ಶ್ರೀವತ್ಸ ನಿಘಂಟು ಇದರ ಕುರಿತು ಹೀಗೆ ವಿವರಣೆ ನೀಡಿದೆ.

ನಾವೀಗ ಬಳಸುತ್ತಿರುವ ಪರೀಕ್ಷೆ ಎನ್ನುತ್ತಿರುವುದಕ್ಕೂ ಬೇರೆ ಬೇರೆ ರೀತಿಯ ಅರ್ಥಗಳಿವೆ : ಚರಕ ಸಂಹಿತೆಯ ಪ್ರಕಾರ ವ್ರಣ ಚಿಕಿತ್ಸೆಯ ದರ್ಶನ ; ಸ್ಪರ್ಶ, ಸಂಸ್ಪರ್ಶ. ನಿಘಂಟು ರತ್ನಾಕರದಲ್ಲಿ ಪರೀಕ್ಷಾ ಎಂದರೆ ಎಂಟು ವಿಧ : ನಾಡಿ, ಮೂತ್ರ, ಮಲ, ಜಿಹ್ವೆ, ಶಬ್ದ, ಸ್ಪರ್ಶ, ನೇತ್ರ, ರೂಪ. ಇದು ದೇಹವನ್ನು ಪರೀಕ್ಷಿಸುವುದಕ್ಕಾಗಿ ಬಳಸಿಕೊಳ್ಳುವ ವಿಧಾನ.

ಮತ್ತೊಂದು ಪರೀಕ್ಷಾ ಇದೆ. ಅದು ಹತ್ತು ವಿಧ, ಕಾರಣ, ಕರಣ, ಕಾರ್ಯಯೋನಿ, ಕಾರ್ಯ, ಕಾರ್ಯಫಲ, ಅನುಬಂಧ, ದೇಶ, ಕಾಲ, ಪ್ರವೃತ್ತಿ, ಉಪಾಯ (ಚರಕ–೨೬೦).

ಕಲಾ–೬೪ : (ಅ) ವಾತ್ಸ್ಯಾಯನ ಕಾಮಸೂತ್ರದಲ್ಲಿ ೬೪ ವಿದ್ಯೆ ಹೇಳಲಾಗಿದೆ.

ಇಂಗ್ಲಿಷಿನಲ್ಲಿ ಎಜುಕೇಶನ್ ಎನ್ನುವ ಪದ ಬಂದಿರುವುದು ಲ್ಯಾಟಿನ್ ಮೂಲದಿಂದ.

೧. **Edu Care** ಅಂದರೆ **to lead forth**

೨. **Edu Care** ಅಂದರೆ **to bring out**

ಇಂಗ್ಲೀಷಿನಲ್ಲಿ **Literate** ಮತ್ತು **Illiterate** ಎಂಬ ಪದವನ್ನು ಬಳಸುತ್ತಾರೆ. **Literate** ಎಂದರೆ ಅಕ್ಷರಸ್ಥರು ಎಂದೂ **Illiterate** ಎಂದರೆ ಅನಕ್ಷರಸ್ಥರು ಎಂದು ಅರ್ಥ. ಈ ಪದಗಳ ಹಿಂದಿರುವ ಇತಿಹಾಸವು ಗಮನಾರ್ಹ. ವಿದ್ಯೆಯೆಂದರೆ – ತಿಳಿಯು, **being found : pursuit of learning** ಎಂದು ಕಿಟ್ಟೆಲ್ ಹೇಳುತ್ತಾರೆ (ಕಿಟ್ಟೆಲ್ ಕೋಶ, ಸಂ. **IV**, ೧೪೮೨) ಶಿಕ್ಷಣ ಅಂದರೆ ಕಲಿಕೆ. ಪಾಠಶಾಲೆ = ಓದುವ ಮನೆ (ಕಿಟ್ಟೆಲ್, ಅದೇ, ೧೫೩೦), ರೋಮನ್‌ನಲ್ಲಿ **Littera**, ಲ್ಯಾಟಿನ್‌ನಲ್ಲಿ **Letter** (ಅಕ್ಷರಮಾಲೆ) ಎಂಬುದನ್ನು ಸೂಚಿಸುತ್ತದೆ. ಕ್ರಿ.ಶ. ೧೫ನೇ ಶತಮಾನದಲ್ಲಿ **Literate** ಎನ್ನುವುದಕ್ಕೆ ವಿಶೇಷ ಅರ್ಥ ಬಂತು. ಅದಕ್ಕೆ ಸಾಹಿತ್ಯಕ ಅರ್ಥವಂತಿಕೆಯೂ ದೊರೆಯಿತು.

**Illiterate** ಅಂದರೆ ಸರಿಯಾಗಿ ಓದುಲು, ಬರೆಯಲು ಬಾರದ ಎಂಬ ಅರ್ಥ ದೊರೆಯುತ್ತದೆ. ಹಾಗೆಯೇ ಮುಗ್ಧ ಎಂಬ ಅರ್ಥ ಕೂಡಾ. Literati ಅಂದರೆ ತುಂಬಾ ಓದಿದವನು ಎಂಬ ಅರ್ಥವಿದೆ. ಸಾಹಿತ್ಯ ಮತ್ತು ಅಕ್ಷರ ಚಳುವಳಿಯು ೧೮ನೇ ಶತಮಾನದ ಪೂರ್ವದಲ್ಲಿ ಯುರೋಪಿನಲ್ಲಿ ವ್ಯಾಪಕವಾಯಿತು. ಅದರೊಂದಿಗೆ ಬರವಣಿಗೆ ಮತ್ತು ಸಂವಹನವು ವಿಶೇಷ ಮಾಧ್ಯಮವಾಯಿತು. ಚಿತ್ರಕಲೆ, ಸಂಗೀತ, ದಂತ ಬರವಣಿಗೆಯು ಕೂಡಾ ಒಂದು ರೀತಿಯ ಅಭಿವ್ಯಕ್ತಿ ಮಾಧ್ಯಮ. ಹದಿನೆಂಟನೆಯ ಶತಮಾನದಲ್ಲಿ ಅಕ್ಷರ ಮಾಧ್ಯಮವೆನ್ನುವುದು ಮುದ್ರಣ ಮಾಧ್ಯಮವಾಗಿ ಪರಿವರ್ತಿತವಾಯಿತು. ಇದರಿಂದ ಹೊಸ ಸಾಧ್ಯತೆಗಳು ರೂಪುಗೊಂಡವು. ೧೯ನೆಯ ಶತಮಾನದ ಪೂರ್ವದಲ್ಲಿ ಅನಕ್ಷರತೆ ಮತ್ತು ಸಾಕ್ಷರತೆ ಎನ್ನುವುದು ಯುರೋಪಿನ ಸಮಾಜದಲ್ಲಿ ಪ್ರಮುಖ ಸಾಮಾಜಿಕ ಪರಿಕಲ್ಪನೆಗಳಾದವು. ಸಾಮಾಜಿಕ ಅಭಿವೃದ್ಧಿಯ ಪ್ರಮಾಣವನ್ನು ಅಳೆಯಲು ಇದು ಕೂಡ ಒಂದು ಸಾಧನವಾಯಿತು. ವಿದ್ ಎಂದರೆ ತಿಳಿ ಎಂದು ಅರ್ಥವಿದೆ.

ವಿವರಗಳಿಗೆ ನೋಡಿ: ಟಿ.ವಿ. ವೆಂಕಟಾಚಲಶಾಸ್ತ್ರೀ ೧೯೯೯ ಶ್ರೀವತ್ಸ ನಿಘಂಟು

**೬೫೯. ವಿಧವೆ**

ವಿಧವೆಯು ಅವಲಕ್ಷಣ ಸ್ವರೂಪಿಯಾಗಿದ್ದಾಳೆ ಎಂಬ ನಂಬಿಕೆಯು ನಾಗವರ್ಮನ 'ಕರ್ಣಾಟಕ ಕಾದಂಬರಿ'ಯಲ್ಲಿ ಬರುತ್ತದೆ. (೪–೭೪) ಪಾತಿವ್ರತ್ಯವನ್ನು ವೈಭವೀಕರಿಸುವ ಹಿನ್ನೆಲೆಯಲ್ಲಿ ಈ ರೀತಿಯ ನಂಬಿಕೆಯು ರೂಪು ತಳೆದಿರಬೇಕು.

ಪಂಪನ 'ಆದಿಪುರಾಣ'ಕೃತಿಯಲ್ಲಿ ವಿಧವೆಯೊಬ್ಬಳು ಪತಿ ವಿಯೋಗದಿಂದ ದುಃಖಿಸುವ ವಿಚಾರವು ಉಕ್ತವಾಗಿದೆ. ವಿಧವೆಯಾದ ಆಕೆಯು ಸಮೀಪಕ್ಕೆ ಮಹತ್ತರ ದೇವಿಯರು ಒಂದು, "ಇಂತು ಬಾಯಲಟಿ(ಳಿ)ಪುದೆ ಚಿ:ಗಾಂಪು: ಬಗೆಗೊಂಡು ಜನಪತಿಯಂ ಪೂಜಿಸು ಪಡೆವೆಯಿನಿಯನಂ ಮಱುಭವದೊಳೆ ಎನ್ನುತ್ತಾರೆ. ಅಂತೆಯೇ ಅವಳು 'ಗುರುಪಂಚಕಮಂನೆನೆಯುತ್ತೆ' ಅನಂತರ ಪ್ರಾಣ ಬಿಡುತ್ತಾಳೆ (ಬಸವರಾಜು. ಎಲ್. ೧೯೭೬. ೩–೧೫). ಪತಿವಿಯೋಗದಿಂದ ತಪ್ತಳಾದ ಹೆಣ್ಣು ದುಃಖಿಸುವುದು ಸಹಜ. ಮಹತ್ತರ ದೇವಿಯರು – ಅಲೌಕಿಕ ಸ್ಥಿತಿಯ ಪ್ರತಿಪಾದಕ ಪಾತ್ರಗಳಾಗಿರುವುದರಿಂದ (ಕೃತಿಯಲ್ಲಿ ಆದರ್ಶ) ಅವು ಹೇಳುವ ನೆಲೆಯೂ ಧಾರ್ಮಿಕ ಮುಖದಿಂದ ಪ್ರೇರಿತವಾಗಿದೆ.

'ವಡ್ಡಾರಾಧನೆ' ಯಲ್ಲಿ ವಿಧವೆಯೊಬ್ಬಳು ತನ್ನ ಮಕ್ಕಳಿಗೆ ವಿದ್ಯೆಕಲಿಸುವಂತೆ ತನ್ನಣ್ಣನಿಗೆ ಪತ್ರ ಬರೆಸುವ ಸನ್ನಿವೇಶವು ಬಂದಿದೆ (ಕೇಶವ ಭಟ್ಟ ಟಿ (ಅನು) ೧೯೭೬ ೧–ಪು.೧೧). ವಿಧವೆಯಾಗಿದ್ದು ಮಕ್ಕಳ ವಿದ್ಯಾಭ್ಯಾಸಕ್ಕೆ ಅಣ್ಣನನ್ನು ಆಶ್ರಯಿಸುವುದು – ಅವಳ ಆರ್ಥಿಕ ಸ್ಥಿತಿ ಚೆನ್ನಾಗಿರಲಿಲ್ಲ ಎನ್ನುವುದನ್ನು ಸೂಚಿಸುತ್ತದೆ.

ರನ್ನನ 'ಅಜಿತ ತೀರ್ಥಂಕರ ಪುರಾಣ ತಿಲಕ' ದಲ್ಲಿ ವಿಧವೆಯಾದ ಅತ್ತಿಮಬ್ಬೆಯ

ವಿಚಾರವು ಬರುತ್ತದೆ. ಅತ್ತಿಮಬ್ಬೆಯು ತನ್ನ ಜೀವನವಿಡೀ ವ್ರತದ ಮೂಲಕ ಕಳೆದ ವಿಚಾರ ಪ್ರತಿಪಾದಿತವಾಗಿದೆ. ಸಂತತಿಯನ್ನು ಕಾಯುತ್ತಾ, ಉಪವಾಸ ಮಾಡುತ್ತಾ, ದಾನ ಇತ್ಯಾದಿಗಳನ್ನು ಪೂಡುತ್ತಾ ಜಿನ ಪ್ರತಿಮೆಗಳನ್ನು ಮಾಡಿಸುತ್ತಾ ಆಕೆಯು ತನ್ನ ಜೀವನವನ್ನು ಕಳೆದಳು ಎಂದು ರನ್ನನು ಹೇಳುತ್ತಾನೆ. (ದೇವೀರಪ್ಪ ಎಚ್. ಮತ್ತು ಜವರೇಗೌಡ ದೆ ೧೯೫೫ ೧-೪೭-೪೮) ಇದೇ ರೀತಿಯ ವಿವರಗಳು ಅತ್ತಿಮಬ್ಬೆಯ ಶಾಸನದಲ್ಲಿಯೂ ಪ್ರತಿಪಾದಿತವಾಗಿದೆ. ಉನ್ನತ ವರ್ಗಕ್ಕೆ ಸೇರಿದ ವಿಧವೆಯರು ಧಾರ್ಮಿಕ ನಿಷ್ಠೆಯ ಮೂಲಕ ತಮ್ಮ ಜೀವನವನ್ನು ಸವೆಸುತ್ತಿದ್ದರು ಎಂಬುದು ಈ ಮೇಲಿನ ಆಧಾರಗಳಿಂದ ಸ್ಪಷ್ಟವಾಗುತ್ತದೆ.

ವಿಧವೆಯರ ಬದುಕು ಕಷ್ಟಕರವಾಗಿತ್ತು. ಎನ್ನುವುದನ್ನು ನಾಗವರ್ಮನೂ ತನ್ನ 'ಕಾದಂಬರಿ'ಯಲ್ಲಿ ಸೂಚ್ಯವಾಗಿ ತಿಳಿಸುತ್ತಾನೆ. ವಿಧವೆಯಾದ ಸ್ತ್ರೀಯರ ಬದುಕು ಅತ್ಯಂತ ದುಃಖಕಾರಕವಾಗಿತ್ತು ಎನ್ನುವುದರ ಪರಿಪೂರ್ಣ ಚಿತ್ರವನ್ನು ಮಹಾಶ್ವೇತೆ ಪರಿಯೆಂದೇ ಭಾವಿಸುತ್ತಾಳೆಂಬುದು ಮೂಲದಲ್ಲಿ ಸೂಚ್ಯವಾಗಿದ್ದರೆ ನಾಗವರ್ಮ ಅದನ್ನು ವಾಚ್ಯವಾಗಿಯೇ ಅವಳ ಬಾಯಲ್ಲಿ ಹೇಳಿಸಿದ್ದಾನೆ: ಆತ್ಮವಲ್ಲಭಾಂತರಿತೆ (ಪು. ೭೦೪) ಪತಿ. ದುಃಖ ಭಜನೆ (ಪು.೭೦೫) ಪುರುಷ ಭಿಕ್ಷಮನಿಕ್ಕಿಂ (ಪು. ೯೨೫) ಮುಂತಾದ ಉಕ್ತಿಗಳನ್ನು ಗಮನಿಸಬೇಕು ಎಂದು (ಸಿ.ಪಿ.ಕೆ ೧೯೭೬ ಪು.೨೩೬) ಅವರು ಗುರುತಿಸುವ ಹಾಗೆ, 'ಸಹಗಮನ ಅಥವಾ ಸತೀ ಪದ್ಧತಿ ಅಂದು ವಿಶೇಷವಾಗಿ ಪ್ರಚಲಿತವಾಗಿದ್ದುದರಲ್ಲಿ ಸಂಶಯವಿಲ್ಲ. (ಹರ್ಷಚರಿತದಲ್ಲಿ ಇದಕ್ಕೆ ಸ್ಪಷ್ಟ ಆಧಾರವಿದೆ) ಚಂದ್ರಾಪೀಡ ಮಹಾಶ್ವೇತೆಗೆ ಸಹಗಮನ ನಿಷ್ಪ್ರಯೋಜಕತೆಯನ್ನು ಕುರಿತು ಹೇಳುವುದನ್ನು ಲಕ್ಷಿಸಬಹುದು: (ಅದೇ ಪು.೧೦೦) ಹಾಗೆಯೇ, "ವಿಧವಾ ವಿವಾಹ ಜಾರಿಯಲ್ಲಿರಲಿಲ್ಲ. ವಿಧವೆಯರು ಎಲ್ಲ ಅಲಂಕಾರಗಳನ್ನು ತೊರೆದು ಸರಳ ಜೀವನ ನಡೆಸುತ್ತಿದ್ದರು. ಅವಕುಂಠನ ಪದ್ಧತಿಯೂ ಆಗ ಇದ್ದಂತೆ ತೋರುತ್ತದೆ." (ಅದೇ ಪು.೧೦೦) ಸಿ.ಪಿ.ಕೃಷ್ಣಕುಮಾರ್ ಅವರು ಅತ್ಯಂತ ಸರಿಯಾಗಿಯೇ 'ವಿಧವೆ'ಯರ ಸ್ಥಿತಿಯ ಬಗೆಗೆ ಗ್ರಹಿಸಿದ್ದಾರೆ.

ವಿಧವೆಯರು ಮುಂಗುರುಳಲ್ಲಿ ಮಂದಾರದ ಹೂವಿಟ್ಟುಕೊಳ್ಳುವುದಿಲ್ಲ ಎಂದು ಪಂಪನು 'ಆದಿಪುರಾಣ'ದಲ್ಲಿ ವರ್ಣಿಸುತ್ತಾನೆ (೩-೧೩). ಗಂಡನನ್ನು ಕಳೆಕೊಂಡವರು ಮುಡಿಯನ್ನು ಕಟ್ಟುವುದಿಲ್ಲ ಎಂಬ ವಿಷಯ 'ವಿಕ್ರಮಾರ್ಜುನ ವಿಜಯ'ದಲ್ಲಿ ಬರುತ್ತದೆ (೧೪-೫). ವಿಧವೆಯರು ಎಲ್ಲಾ ಅಲಂಕಾರಗಳನ್ನು ತೊರೆದು ಸರಳ ಜೀವನವನ್ನು ನಡೆಸುತ್ತಿದ್ದರು ಎಂದು ನಾಗವರ್ಮನ 'ಕಾದಂಬರಿ'ಯಲ್ಲಿ ಬರುತ್ತದೆ. ದುಃಖಿತೆಯರಾದ ಸ್ತ್ರೀಯರು ತಲೆಯನ್ನು ಕೆದರಿರುತ್ತಾರೆ. ಅವರಿಗೆ ಅಲಂಕಾರದಲ್ಲಿ ಆಸಕ್ತಿಯಿರುವುದಿಲ್ಲ ಎಂದು ರನ್ನನು 'ಅಜಿತ ತೀರ್ಥಂಕರ ಪುರಾಣ ತಿಲಕಂ' ಕೃತಿಯಲ್ಲಿ ಹೇಳುತ್ತಾನೆ (೧೦-೪೧ಪ; ೪೪). ರನ್ನನ 'ಗದಾಯುದ್ಧ' ಕೃತಿಯಲ್ಲಿಯೂ ಈ ರೀತಿಯ ಚಿತ್ರಣವಿದೆ (೧೦-೧೪; ೧೭). ಕೆದರಿದ ಮುಡಿಯ ವಿಧವೆಯನ್ನು ಹರಿಹರನು 'ಗಿರಿಜಾಕಲ್ಯಾಣ'ದಲ್ಲಿ

ವರ್ಣಿಸುತ್ತಾನೆ (೮-೫೬, ೫೭ವ). ಈ ರೀತಿಯ ಚಿತ್ರಣಗಳು ಅನೇಕ ಕೃತಿಗಳಲ್ಲಿ ದೊರೆಯುತ್ತದೆ.

ಇದಕ್ಕೆ ಪೂರಕವಾಗಿ ವಿಧವೆಗೆ 'ಮುಂಡೆ' ಎಂಬ ಪದ ಪ್ರಯೋಗವಾಗಿರುವುದನ್ನು ಕಾಣಬಹುದು 'ಮುಂಡೆ' ಎನ್ನುವ ಪದಕ್ಕೆ ಈ ಅರ್ಥಗಳು ಬರುತ್ತವೆ. 1) A close – shaved woman; a window. 2) A female mendicant. 3) an unchaster woman. A harlot (kittal. F.1894 p.126) ವಿಧವೆಯ ತಲೆಯನ್ನು ಬೋಳಿಸುವ ಪದ್ಧತಿಯು ಪ್ರಾಚೀನ ಕಾಲದಲ್ಲಿ ಇರಲಿಲ್ಲ. 'ಪಾತಿವ್ರತ್ಯ ವೈಭವೀ' ಕರಿಸಿದ್ದರ ಫಲವಾಗಿ ವಿಧವೆಗೆ ಮರು ಮದುವೆಯ ಅವಕಾಶ ತಪ್ಪಿತು. ವಿಧವೆಗೆ ಕಠಿಣ ಜೀವನವನ್ನೂ ವಿಧಿಸಿದ್ದರಿಂದ ಸೌಭಾಗ್ಯಕ್ಕೆ ಎಲ್ಲಿಲ್ಲದ ಪ್ರಾಮುಖ್ಯ ಬಂತು. ಹತ್ತನೇ ಶತಮಾನದ ತರುವಾಯ ಉಲ್ಬಣಗೊಂಡ 'ಸತಿಪದ್ಧತಿ'ಯು ದಕ್ಷಿಣ ಭಾರತದಲ್ಲೆಲ್ಲಾ ಪ್ರಚುರಗೊಂಡಿತು. ಪಲ್ಲವ, ಚೋಳ, ಮೊದಲಾದ ಮನೆತನದ ಶಾಸನಗಳ ಮೂಲಕ ಇವನ್ನು ಅರ್ಥ ಮಾಡಿಕೊಳ್ಳಬಹುದಾಗಿದೆ. ಈ ಕಾರಣಗಳಿಂದ ಹತ್ತನೆಯ ಶತಮಾನದ ತರುವಾಯ ವಿಧವೆಯರು ಮಂಡೆ ಬೋಳಿಸಿಕೊಳ್ಳುವ ಪದ್ಧತಿಯೂ ಬಂದಿರಬೇಕು.

ಮನುಸ್ಮೃತಿಯು ವಿಧವೆಯರ ಪುನರ್ ವಿವಾಹವನ್ನು ಒಪ್ಪಿಕೊಳ್ಳುವುದಿಲ್ಲ. ಪರಾಶರ ಮತ್ತು ನಾರದರು ವಿಧವಾ ವಿವಾಹವನ್ನು ಒಪ್ಪುತ್ತಾರೆ. ನಾರದ ಐದು ಪರಿಸ್ಥಿತಿಗಳಲ್ಲಿ ಒಬ್ಬಳು ಹೆಂಗಸು ಇನ್ನೊಬ್ಬನನ್ನು ಮದುವೆಯಾಗಬಹುದು ಎಂದು ಹೇಳುತ್ತಾನೆ. ಮೊದಲನೆಯ ಗಂಡಸು ನಶಿಸಿದರೆ ಅಥವಾ ಮೃತಪಟ್ಟರೆ ವಿದೇಶವಾಸ ಮಾಡಿದರೆ ನಪುಂಸಕನಾಗಿದ್ದರೆ ಜಾತಿಭ್ರಷ್ಟನಾದರೆ ವಿಧವೆಯು ಪುನರ್ವಿವಾಹ ಮಾಡಿಕೊಳ್ಳಬಹುದು. ೧೮೫೬ರಲ್ಲಿ ವಿಧವೆಯರ ಪುನರ್ ವಿವಾಹ ಅಧಿನಿಯಮ ಬಂತು. ಒಬ್ಬ ವಿಧವೆಯು ತನ್ನ ಗೋತ್ರಜನನ್ನು ಮದುವೆಯಾಗಬಹುದು. ಅವಳ ಮೊದಲ ವಿವಾಹದಲ್ಲಿ ತನ್ನ ತಂದೆಯ ಗೋತ್ರವನ್ನು ಕಳೆದುಕೊಳ್ಳುತ್ತಾಳೆ. ಎರಡನೆಯದಾಗಿ ಅವಳು ಪುನರ್ ವಿವಾಹವಾದರೆ ತನ್ನ ಮೊದಲನೆಯ ಗಂಡನ ಸ್ವತ್ತಿನ ಅಧಿಕಾರ ಹೊಂದಿರುವುದಿಲ್ಲ. ೧೮೫೭ರಲ್ಲಿ ವಿಧವೆಯರ ವಿವಾಹವನ್ನು ಕಾನೂನು ಬದ್ಧಗೊಳಿಸಲಾಯಿತು.

ವಿಧವಾ – ವಿವಾಹದ ಬಗೆಗೆ ಋಗ್ವೇದವು ಪ್ರಜ್ಞಾವಂತರಲ್ಲಿ ಹೆಚ್ಚು ವಾಸ್ತವವಾದ, ಸಹಾನುಭೂತಿಪರವಾದ ಸೌಮ್ಯ ಸಮ್ಮತಿ ಕಂಡು ಬರುತ್ತದೆ. 'ಕೋ ವಾಂಶಯುತ್ತಾ ವಿಧವೇವ ದೇವರಂಮರ್ಯಂನಯೋಷಾ ಕೃಣುತೇ ಸಧಸ್ಥ ಆ' (೧೦–೪೦–೨). ಪತಿಯ ಮೃತ್ಯುವಿನ ನಂತರ ವಿಧವೆಯು ತನ್ನ ಮೈದುನನನ್ನು, ಕನ್ಯೆಯು ವಿವಾಹಕ್ಕಾಗಿ ಪುರುಷನನ್ನು ಆಕರ್ಷಿಸುವಂತೆ ಆಕರ್ಷಿಸಿದಳು.

ಮನುವು ವಿಧವಾ ವಿವಾಹವನ್ನು ನಿಷೇಧಿಸಿದ್ದಾನೆ. ವಿಧವೆಯರಾದ ಅಂಬಾಲಿಕೆ; ಅಂಬಿಕೆ ಇವರ ಗಂಡ ವಿಚಿತ್ರ ವೀರ್ಯನು ಸತ್ತಾಗ ವ್ಯಾಸರಿಂದ ನಿಯೋಗ ಪದ್ಧತಿಯ ಮೂಲಕ ಮಕ್ಕಳನ್ನು ಪಡೆಯುತ್ತಾರೆ. (ಪಂಪ ಭಾರತ ೧–೮೪ ವ)

ನಾರದ ಸ್ಮೃತಿಯಲ್ಲಿ, ಸ್ತ್ರೀಯರ ಪುನರ್ ವಿವಾಹ; ನಿಯಮಾನುಸಾರವಾಗಿ

ದ್ಯೂತಕ್ಕೆ ಅವಕಾಶ ಕಲ್ಪಿಸಲಾಗಿದೆ. ಮನು ಮತ್ತು ಬೃಹಸ್ಪತಿ ಇಬ್ಬರೂ ನಿಯೋಗವನ್ನು ವಿರೋಧಿಸಿದ್ದಾರೆ.

ಭೌದಾಯನ ಮತ್ತು ಗೌತಮರು ನಿಯೋಗವನ್ನು ಒಪ್ಪಿದ್ದಾರೆ.

ನಿಯೋಗಕ್ಕೆ ಬಾಲವಿಧವಾ ವಿವಾಹಕ್ಕೆ ವಸಿಷ್ಠನ ಸಮ್ಮತಿಯಿದೆ. ಅವನು ಬ್ರಾಹ್ಮ, ದೈವ, ಆರ್ಷ, ಗಾಂಧರ್ವ, ಕ್ಷಾತ್ರ, ಮಾನುಷವೆಂದು ಆರು ಬಗೆಯ ವಿವಾಹವನ್ನು ಹೇಳಿದ್ದಾನೆ.

ನಿಯೋಗದ ವಿಷಯ ಪಂಪ ಭಾರತದಲ್ಲಿ ಉಕ್ತವಾಗಿದೆ.

ಪತಿಯ ಮೃತ್ಯುವಿನ ಅನಂತರ ವಿಧವೆಯು ತನ್ನ ಮೈದುನನ್ನು ಕನ್ಯೆಯು ವಿವಾಹಕ್ಕಾಗಿ ಪುರುಷನನ್ನು ಅಕರ್ಷಿಸುವಂತೆ ಅಕರ್ಷಿಸಿದಳು. (ಋಗ್ವೇದ ೧೦-೪೦-೨)

ನಾರೀ ವೈಧವ್ಯ ದಿವ್ಯ ದೀಕ್ಷಾದಕ್ಷಂ. . . . ಎಂದು ಪಂಪ ಭಾರತದಲ್ಲಿ ಬಂದಿರುವುದು ಗಮನಾರ್ಹ. (೭-೧) ವೈಧವ್ಯ ದೀಕ್ಷೆಯೆನ್ನುವುದು ಗಮನಾರ್ಹ ಪದವಾಗಿದೆ.

ಗಂಡನು ಸತ್ತರೆ ಸ್ತ್ರೀ ತನ್ನ ದೇಹವನ್ನು ಪರಿಪುಷ್ಟ ಆಹಾರದಿಂದ ಉತ್ತೇಜಿಸಬಾರದು. ಪರಪುರುಷರನ್ನು ಸ್ಮರಿಸಬಾರದು ಎಂದು ಮನು ಹೇಳುತ್ತಾನೆ.

'ವಿಧವಾ ವಿವಾಹ'ವೆನ್ನುವುದು ವಾಸ್ತವಿಕವಾಗಿ ವೈದಿಕ ಧರ್ಮದ ಪ್ರಶ್ನೆ. ರಾಷ್ಟ್ರೀಯ ಆಂದೋಲನ ಸಂದರ್ಭದಲ್ಲಿ ಆಧುನಿಕತಾವಾದಿಗಳು (ಉದಾ : ರಾಜಾರಾಂ ಮೋಹನ ರಾಯ್) ಈ ಕುರಿತು ದೊಡ್ಡ ಚರ್ಚೆಯನ್ನು ಎತ್ತಿಕೊಂಡರು. ಇದರ ಪ್ರಭಾವ ದ.ಕ. ಜಿಲ್ಲೆಯಲ್ಲಿಯೂ ಕಾಣಿಸಿಕೊಂಡಿತ್ತು. ದ.ಕ. ಜಿಲ್ಲೆಯ ಬ್ರಾಹ್ಮಣೇತರ ಕೆಲ ವರ್ಗಗಳಲ್ಲಿ ಮರುಮದುವೆಗೆ 'ಕೈಪತ್ತುನೆ'ಯೆಂಬ ತುಳು ಪಾರಿಭಾಷಿಕ ಪದಚಾಲ್ತಿಯಲ್ಲಿದೆ. ಕೈ ಹಿಡಿಯುವುದು ಎಂಧು ಇದರ ಅರ್ಥ. ಇದು ಬ್ರಾಹ್ಮಣರಲ್ಲಿ ಇಲ್ಲ. ವಿಧವೆಯರ ಸಮಸ್ಯೆ ಹಾಗೂ ಸ್ತ್ರಯಾಚರಣೆಗೆ ಇರುವ ಸಂಬಂಧ ಚರ್ಚೆಯಾಗಬೇಕಾಗಿದೆ. ವಿಧವೆಯರ ಮಂಡೆಬೋಳಿಸುವುದು (ಆದ್ದರಿಂದ ಮುಂಡೆ) ಅವರು ಶೃಂಗರಿಸಿಕೊಳ್ಳದಿರುವುದು ಪುರುಷಕೇಂದ್ರಿತ ಚಿಂತನೆಯ ಒತ್ತಾಸೆಯೆಂದು ಕರೆಯಲಾಗಿದೆ. ಆದರೂ ಈ ಸಮಸ್ಯೆಯ ನಿಜವಾದ ರೂಪ ಚರ್ಚೆಗೆ ಒಳಗಾಗಬೇಕಾಗಿದೆ.

*ವಿವರಗಳಿಗೆ ನೋಡಿ: Partha chatarjee 1986 Nationalist thought and the colonial world*

*ಅಣ್ಣಿಗೇರಿ, ಎಂ.ಎಂ. ಮತ್ತು ಶೇಷಶಾಸ್ತ್ರಿ ಆರ್ (ಸಂ) ೧೯೮೨ ಶಾಸನ ಸಂಗ್ರಹ ಪುಟ. ೯-೨೫*

*ಸಿ.ಪಿ. ಕೃಷ್ಣಕುಮಾರ್ ೧೯೭೬ ಕರ್ನಾಟಕ ಕಾದಂಬರಿ ಪುಟ. ೧೦೦*

*ಚಿದಾನಂದ ಮೂರ್ತಿ. ಎಂ ೧೯೭೭ ಗ್ರಾಮೀಣ ಪುಟ. ೧೫೩*

*ಕೆ.ಎಚ್.ಪ್ರಭು ? ಹಿಂದೂ ಕಾನೂನು ಪುಟ. ೭೮*

*ಶೇಷ ನವರತ್ನ ೨೦೦೮ ಋಗ್ವೇದ ಪುಟ. ೩೪*

*ಶೇಷ ನವರತ್ನ ೧೯೮೯ ನಾಲ್ಕು ವೇದಗಳು ಪುಟ. ೪೬*

*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೫-೧೬೧*

*ಯುಗಯಾತ್ರೀ ಭಾರತೀಯ ಸಂಸ್ಕೃತಿ ೧೯೭೧ ಸಂಪುಟ. ೨ ಪುಟ. ೨೨೨. ೨೨೫. ೨೨೬.*

**೬೬೦. ವಿಧಾತ್ರ**

ಬ್ರಹ್ಮನನ್ನು ವಿಧಾತ್ರನೆಂದು ಕರೆಯುತ್ತಾರೆ. (ಪಂಪ ಭಾರತ ೧-೫೮ ವ, ೨-೩೯ ವ)

ವಿಧಿಯೆಂದರೆ ಹಣೆಯ ಬರಹ. ವಿಧಿಯು ಹಣೆಯ ಮೇಲೆ ಬರೆಯುತ್ತಾನೆ ಎನ್ನುವುದು ನಂಬಿಕೆ. ಪ್ರಜಾಪತಿ ಒಂದು ಕಾಲದಲ್ಲಿ ದೇವತೆಗಳಲ್ಲಿ ಒಬ್ಬನಾಗಿದ್ದು ಸವಿತೃವಿನ ಒಂದು ರೂಪವಾದದ್ದು. ಪರಮದೇವತೆ ಅನಂತರ ಬ್ರಹ್ಮನಾಗುತ್ತಾನೆ. ವೇದಗಳಲ್ಲಿ ವಿಧಿಯೆಂದರೆ ಅನುಷ್ಠಾನಕ್ಕೆ ಅರ್ಹವಾದ ಮಂತ್ರಗಳು. ವಿಧಿಯು ಹೀಗೆ ಮಾಡಬೇಕೆಂದು ನಿರ್ದೇಶಿಸುತ್ತದೆ. 'ಯಜ್ಞದ ಹೆಸರುಗಳಿಗೆ 'ಅನಾಮಧೇಯ' ಎಂದು ಕರೆದಿದ್ದಾರೆ. ಇಂಥ ಕಾರ್ಯವನ್ನು ಮಾಡಬಾರದು ಎಂಬುದು ನಿಷೇಧ. ಎರಡನೆಯದಾಗಿ ವಿಧಿವಾದದಲ್ಲಿ ಎಲ್ಲವನ್ನೂ ವಿಧಿಗೆ ಅರ್ಪಿಸುತ್ತೇವೆ. ಅಂದರೆ ಸ್ವಯಂ ಸಾಧನೆಯ ಪ್ರಶ್ನೆಯು ಇದರಲ್ಲಿ ಬರುವುದಿಲ್ಲ. ಬ್ರಹ್ಮನೆಂದರೆ ಶುದ್ಧ ಚೈತನ್ಯವೆಂದು ಅದ್ವೈತವು ಹೇಳುತ್ತದೆ. (ಅಹಂ ಬ್ರಹ್ಮಾಸ್ಮಿ) ಶಂಕರರ ಸೂತ್ರವನ್ನು ಶುದ್ಧ ಬ್ರಹ್ಮಾದ್ವೈತವೆಂದು ಕರೆಯುತ್ತಾರೆ. ಬ್ರಹ್ಮನಿಗೆ ಮೂರ್ತರೂಪವಿಲ್ಲ. ಮತ್ತು ಬ್ರಹ್ಮನಿಗೆ ಅರ್ಚನಾದಿ ವಿಧಿಗಳೂ ಇಲ್ಲ. ಬ್ರಹ್ಮವೊಂದೇ ಪರಮಾರ್ಥ ಪದಾರ್ಥ. ಇದನ್ನು ಮುರಾರಿ ಮಿಶ್ರನು ಹೇಳುತ್ತಾನೆ. ಧರ್ಮಿ, ಧರ್ಮ, ಆಧಾರ ಪ್ರದೇಶ ವಿಶೇಷಗಳು. ಹಾಗೆಯೇ ವೇದಾಂತಕ್ಕೂ ಬ್ರಹ್ಮಮೀಮಾಂಸೆಯೆಂದು ಕರೆಯುತ್ತಾರೆ. ಉಪನಿಷತ್ತುಗಳಲ್ಲಿ ದರ್ಶನ ಚಿಂತನೆಗಳಿವೆ. ಆದರೆ ಬ್ರಹ್ಮತತ್ವವೆನ್ನುವುದು ವೈದಿಕರಲ್ಲಿ ಹೆಚ್ಚು ಮುಂಚೂಣಿಗೆ ಬಂತು. ಆದರೆ ಬ್ರಹ್ಮನೆಂಬ ದೇವರಲ್ಲ. ಈ ದೃಷ್ಟಿಯಿಂದ ಪಂಪ ಅಲ್ಲಲ್ಲಿ ಬಳಸುವ "ವಿಧಿ" "ವಿಧಾತ್ಮ" ಇನ್ನಷ್ಟು ಚರ್ಚಿಸಬೇಕಾದ ಸಂಗತಿಯಾಗಿದೆ. ಮತ್ತು ಬ್ರಹ್ಮವೆಂದರೆ ಮಾಯೆಯೆಂದೂ ಬಳಕೆಯಾಗಿದೆ.

ಇಲ್ಲಿ ಪಂಪ ವಿಧಾತೃಯೋಗವೆಂದು ಬಳಸಿದ್ದಾನೆ. ವಿಧಾತೃ ಯೋಗವೆಂದರೂ ವಿಧಿವಶವೆಂದರ್ಥ. ಹಣೆಯಲ್ಲಿ ಬರೆದುದು ಎಲೆಯಲ್ಲಿ ಒರಸಿದರೆ ಪೋದೀತೆ ಎಂಬ ನಾಣ್ಣುಡಿಯನ್ನು ನೆನಪಿಸಿಕೊಳ್ಳಬಹುದು.

*ವಿವರಗಳಿಗೆ ನೋಡಿ; ಡಾ.ಎಂ. ಪ್ರಭಾಕರ ಜೋಶಿ ೨೦೦೮ ಭಾರತೀಯ ತತ್ವಶಾಸ್ತ್ರ ಪ್ರವೇಶ*

**೬೬೧. ವಿಭಂಗಜ್ಞಾನ**

*ವಿಭಂಗಜ್ಞಾನದಿಂದೆನ್ನ ಪಗೆವನೀತನೆಂದಜಿ ಪಾಪಕರ್ಮಾ ನಿಷ್ಕಾರಣಮನ್ವಂ ಜಲಕ್ರೀಡೆಯಾಡುವೊನಂ.................*

*ಕೊಜೆದಿಕ್ಕಿ ಕಳತ್ರಸಹಿತಂ ಪಿಡಿದೆತ್ತಿಕೊಂಡು ಪೋಗಿ ಸಮುದ್ರದೊಳ್ ಮಹಪಾತಾಳದ ಮೊದಲೊಳಿಕ್ಕಿ ಪುಡುಕುನೀರಬ್ಬುತ್ತಂ ಪಿರಿದು ಬೇಗಂ ದುಃಖಮನೆಯ್ದಿಸಿ. (ಡಿ.ಎಲ್.ಎನ್.೨೦೦೯ ಪು.೧೮೯).*

ಮೇಲಿನ ಗದ್ಯ ಭಾಗದಲ್ಲಿ ದ್ವೇಷ ಸಾದಿಸುವುದನ್ನು ಹೇಳಲಾಗಿದೆ. ವಿಭಂಗಜ್ಞಾನದಿಂದ

ಎನ್ನ ಪಗೆವನೀತನೆಂದಱಿದು ಎಂದು ವಡ್ಡಾರಾಧನೆಯಲ್ಲಿ ಬರುತ್ತದೆ. ವಿಭಂಗ ಭಗ್ನಗೊಂಡ ನಾಶಗೊಂಡಜ್ಞಾನವೆಂದು ಅರ್ಥ. ವಿಭಂಗಜ್ಞಾನವೆಂದರೆ ಮಿಥ್ಯಾತ್ವಯುಕ್ತ ಅವಧಿಜ್ಞಾನ. ಇದರಲ್ಲಿ ಆತ್ಮನಿಗೆ ಅಹಿತವನ್ನುಂಟುಮಾಡುವ ಪದಾರ್ಥಗಳನ್ನು ತಿಳಿದುಕೊಳ್ಳಬಹುದು ಮೇಲಿನ ಗದ್ಯಭಾಗದಲ್ಲಿ ವಿಭಂಗ ಜ್ಞಾನದಿಂದ ತನ್ನ ಶತ್ರು (ಪಗೆ)ಯಾರೆಂಬುದನ್ನು ತಿಳಿದುಕೊಳ್ಳುವ ಬಗೆಯಿದೆ.

*ಅನ್ನೆಗಂ ಪರಸ್ಪರ ಕಲಹಕಲುಷಿತಗೃಹಕೋಕಿಳಂಗಳೊಂದೊಂದಂತಿನೆ ಪನಿತ ಶೋಣಿತಬಿಂದುಗಳ್ ತನ್ನ ಮೆಯ್ಗೆ ಪಾಪಪರಿಪಾಕದಿಂ ತಣ್ಪಂ ಪಡೆಯೆ ಪರಮೌಷಧಮಂ ಪಡೆದೆನೆಂದು ಕರೆಮೊಸೆದರವಿಂದಂ ಕುರುವಿಂದನಂ ಕರೆದುತ್ಪನ್ನ***ವಿಭಂಗಜ್ಞಾನದಿಂ** *ಮೃಗಂಗಳಿರ್ದೆಡೆಯನರಿದು.....(ಡಿ.ಎಲ್. ಎನ್. ೨-೧೪.ವ)*

ಮಿಥ್ಯತ್ವ ಕರ್ಮಗಳ ಉದಯದಿಂದ ಇದು ಹುಟ್ಟುತ್ತದೆ. ಇದಕ್ಕೆ ಕುಅವಧಿಜ್ಞಾನವೆಂದೂ ಹೆಸರು. ಆತ್ಮನಿಗೆ ಅಹಿತವನ್ನುಂಟುಮಾಡುವ ಪದಾರ್ಥಗಳನ್ನು ಇದು ಪ್ರತ್ಯಕ್ಷವಾಗಿ ತಿಳಿಯಬಲ್ಲುದು. ಆದರೆ ಹಿತಕರಪದಾರ್ಥಗಳ ಸ್ವರೂಪವು ಇದಕ್ಕೆ ತಿಳಿಯುವುದಿಲ್ಲ.

ವಿಭಂಗವೆಂದರೆ ಒಡೆದ; ಛಿದ್ರಗೊಂಡ, ಭಾಗ ಎಂದು ಅರ್ಥವಿದೆ. ವಿಭಂಗ ಜ್ಞಾನವೆಂದರೆ ಸಂಪೂರ್ಣವಾದ ಜ್ಞಾನವಲ್ಲ. ಅರೆಕೊರೆಯಾದ ತಿಳುವಳಿಕೆ. ಅಥವಾ ಖಂಡಜ್ಞಾನ.

**೬೬೨. ವಿಮಾನ**

*ಬಗೆ ಪೋಯ್ತಿಂತಿದು ನಾಕಲೋಕವಿಭವಂ ಮದ್ವೃತ್ತಕಂ ತಪ್ಪದೀ*
*ಮೃಗಶಾಬೇಕ್ಷಣೆ ಮನ್ಮನೋರಮೆ* **ವಿಮಾನಂ** *ಮದ್ವಿಮಾನಂ ಮನಂ....*
*(ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೩-೮೮)*

ವಿಮಾನವೆಂದರೆ ಊರ್ಧ್ವ ಲೋಕದಲ್ಲಿ ಪುಣ್ಯಜೀವಿಗಳು ವಾಸಿಸುವ ಸ್ಥಳ. ಇಲ್ಲಿ ನಾಕಲೋಕವೆಂದರೆ ಸ್ವರ್ಗಲೋಕವೆಂದು ಬಳಕೆಯಾಗಿರುವುದು ಗಮನಾರ್ಹ.

ವಿಮಾನಗಳು:- ಪುಣ್ಯವಂತರ ವಾಸಸ್ಥಾನಗಳು. ೮೪೯೭೦೨೩ಗಳುಂಟು. ಅವು ಅಸಂಖ್ಯ ಯೋಜನ ವಿಸ್ತೀರ್ಣವಾಗಿವೆ. ವಿಮಾನವಾಸಿಗಳಾದ ವೈಮಾನಿಕ ದೇವರಲ್ಲಿ ಕಲ್ಪೋಪಪನ್ನರೆಂದೂ, ಕಲ್ಪಾತೀತರೆಂದೂ ಎರಡು ವರ್ಗಗಳು. ಕಲ್ಪಾತೀತದೇವತೆಗಳಲ್ಲಿ ಭೇದಗಳಿಲ್ಲ. ಅಲ್ಲಿ ಎಲ್ಲರೂ ಇಂದ್ರರೇ. ಅದರಿಂದ ಅವರಿಗೆ ಅಹಮಿಂದ್ರ ಎಂಬ ಹೆಸರು.

ವಡ್ಡಾರಾಧನೆಯಲ್ಲಿ ವಿಮಾನ ಎನ್ನುವ ಪದವು ವಿಶಿಷ್ಟ ಅರ್ಥದಲ್ಲಿ ಬಳಕೆಯಾಗಿದೆ.

ಆ ಕಾಡ ನಟ್ಟ ನಡುವಣ ದಡದ ತುತ್ತತುದಿಯೊಳು ವಿಮಾನದ ಮಂಗಳನು ಕಡೆ ಹತ್ತಿ ಉರಿಕರಿಯಾದ ಕರಿಕೊಳ್ಳಿಗಳನಜಿಸಿ............. ಕಾಯುತಿರ್ದನಿರುಳು ಹಗಲೆನ್ನದೊಡೆಯಂ ಬೆಸಿದಂತೆ ವಸುಧಾಧೀಶನು ಅಚ್ಚರಿಯೊಳಾ ವಿಮಾನದ ಪೆಣಕೆ ಪ್ರಾಣ ಬರಲರಸ ನಮಿಸಿದನು ಬಳಿಕಂ (ಪ್ರಭು.ಪು ೭-೬೨)

ಶವವನ್ನು ಸಾಗಿಸುವ ಚಟ್ಟ ಅಥವಾ ಶವಮಂಟಪ.

ವಡ್ಡಾರಾಧನೆಯಲ್ಲೂ ಇದೇ ಅರ್ಥದಲ್ಲಿ ಬಳಕೆಯಾಗಿದೆ. ಜೈನಧರ್ಮದಲ್ಲಿ ವಿಮಾನವೆಂದರೆ ಊರ್ಧ್ವಲೋಕದ ಪುಣ್ಯ ಜೀವಿಗಳ ವಾಸ ಸ್ಥಾನ. ವಿಮಾನ ಎನ್ನುವುದಕ್ಕೆ ಇನ್ನೂ ಕೆಲವು ಅರ್ಥಗಳಿವೆ. ಅವಮಾನ, ಅವಮರ್ಯಾದೆ ಅರಮನೆ, ರಾಜಗೃಹ.

ವಿವರಗಳಿಗೆ ನೋಡಿ: ಮಹದೇವ ಪ್ರಭಾಕರ ಪೂಜಾರ ೧೯೭೩ ಜೈನಧರ್ಮ ಪರಿಭಾಷೆ ಪುಟ. ೫೯.

**೭೭೩. ವಿವಾಹದ ರೀತಿಗಳು**

ಯಜ್ಞ ಮಾಡುವ ಋತ್ವಿಜನಿಗೆ ದಕ್ಷಿಣೆಯೆಂದು ಕನ್ಯೆಯನ್ನು ಕೊಡುವುದು ದೈವವಿವಾಹ. ವರನಿಂದ ಆಕಳು-ಎತ್ತುಗಳ ಜೋಡಿಯನ್ನು ತೆಗೆದುಕೊಂಡು ಕನ್ಯೆಯನ್ನು ಕೊಡುವುದು ಆರ್ಷ. ಕನ್ಯೆಯನ್ನು ಅಲಂಕರಿಸಿ ವಿವಾಹ ಮಾಡಿಕೊಡುವುದು ಪ್ರಾಜಾಪತ್ಯ, ವರನಿಂದ ತನಗಾಗಿ ಇಲ್ಲವೆ ಕನ್ಯೆಗಾಗಿ ಧನವನ್ನು ತೆಗೆದುಕೊಂಡು ಮಾಡುವ ವಿವಾಹವು ಆಸುರ. ಪರಸ್ಪರ ಒಪ್ಪಿಗೆ ವರ ಕನ್ಯೆಯರು ಮದುವೆಯಾಗುವುದು ಗಾಂಧರ್ವ, ಯುದ್ಧ ಮಾಡಿ ಸೋಲಿಸಿ ಕನ್ಯೆಯನ್ನು ಒಯ್ದು ಮಾಡಿಕೊಳ್ಳುವ ವಿವಾಹವು ರಾಕ್ಷಸ, ಕನ್ಯೆಯು ನಿದ್ರಿಸಿದಾಗ ಇಲ್ಲವೆ ಅಜಾಗೃತ ವಿದ್ದಾ ಅಪಹರಿಸಿ ಮದುವೆಯಾಗುವುದು ಪೈಶಾಚ ಎಂದು ಯಾಜ್ಞವಲ್ಕ್ಯ ಹೇಳುತ್ತಾನೆ.

ಬ್ರಾಹ್ಮಣನಿಂದ ಒಂದು ಎತ್ತಾಗಲಿ, ಗೋವಾಗಲಿ ಅಥವಾ ಎರಡನ್ನೂ (ಜೋಡಿ) ತಕ್ಕೊಂಡು ಮಾಡುವ ಕನ್ಯಾದಾನವು ಆರ್ಷ ವಿವಾಹವು ಎಂದು ಮನುವಿನ ಅಭಿಪ್ರಾಯ. ಅವನ ಪ್ರಕಾರ ವರನನ್ನು ಸತ್ಕರಿಸಿ, 'ನೀವಿಬ್ಬರು ಸಹಜೀವನವನ್ನು ನಡೆಸಿರಿ' ಎಂದು ಕನ್ಯಾದಾನ ಮಾಡುವುದು ಪ್ರಾಜಾಪತ್ಯ ವಿವಾಹ.

ಮನಬಂದಂತೆ ಕನ್ಯಾಬಂಧುಗಳಿಗೆ ಹಣಕೊಟ್ಟು ಹುಡುಗಿಯನ್ನು ಧನದಿಂದ ಸಂತೋಷಪಡಿಸಿ ಕನ್ಯಾಸ್ವೀಕಾರವು ಆಸುರವು.

ಹುಡುಗ-ಹುಡುಗಿಯರು ತಾವೇ ಸ್ವೇಚ್ಛೆಯಿಂದ ಅನ್ಯೋನ್ಯ ಸಂಬಂಧವನ್ನು ಹಿರಿಯರ ತಿಳುವಳಿಕೆ ಇಲ್ಲದೆ ಮಾಡುವುದು ಗಾಂಧರ್ವವು. ಈ ವಿವಾಹದಲ್ಲಿ ಯಾರಿಗೂ ಧನಾದಿದಾನವಿಲ್ಲದೆ ಕಾಮವೇ ನಿಯಾಮಕವಾಗಿದೆ.

ಹುಡುಗಿಗೆ ಇಷ್ಟವಿಲ್ಲದಿದ್ದರೂ, ಅಳುತ್ತಿದ್ದರೂ, ವಿರೋಧಿಸುವವರಿದ್ದರೆ ಹೊಡೆದು-ಬಡಿದು ಬಲಾತ್ಕಾರದ ಕನ್ಯಾಪಹಾರವು ರಾಕ್ಷಸವು.

ಹುಡುಗಿಯು ನಿದ್ದೆ ಮಾಡುತ್ತಿರುವಾಗ, ಮದ್ಯ-ಮತ್ತಳಾದಾಗ, ಅಜಾಗರೂಕಳಾಗಿ ಒಂಟಿಯಾಗಿರುವಾಗ, ಅವಳ ಶೀಲಭಂಗ ಮಾಡಿ ಆಗುವ ಮದುವೆಯು ಪೈಶಾಚವು.

ಉಪನಯನ ಸಂಸ್ಕಾರ ಇರುವವರಿಗೆ (ಬ್ರಾಹ್ಮಣ) ಕನ್ಯಾದಾನವನ್ನು ಜಲಧಾರಾ ಪೂರ್ವಕವಾಗಿ ಮಾಡುವುದು ಪ್ರಶಸ್ತ. ಇತರರಿಗೆ ವಿಧಿಪೂರ್ವಕ ದಾನಸ್ವೀಕಾರ ವಿಲ್ಲದಿರುವುದರಿಂದ ಪರಸ್ಪರ ಸಮ್ಮತಿಯೇ ಸಾಕಾಗಿ(ರುವುದು)ದೆ.

ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ; ಆಸುರ, ಗಾಂಧರ್ವ, ರಾಕ್ಷಸ, ಪೈಶಾಚ-

ಎಂದು ಎಂಟು ವಿವಾಹಗಳು.

ಮೊದಲಿನಿಂದ ಆರು ವಿಪ್ರನಿಗೆ, ಕೊನೆಯಿಂದ ನಾಲ್ಕು ಕ್ಷತ್ರಿಯನಿಗೆ, ರಾಕ್ಷಸವೊಂದು ಹೊರತು ವಿಟ್ಶೂದ್ರರಿಗೆ ಉಳಿದ ಮೂರು–ವಿವಾಹಗಳು ಧರ್ಮಸಮ್ಮತಗಳು.

(ಪಾಣಿಗ್ರಹಣ) ವಿವಾಹದಲ್ಲಿ ಹೇಳಬೇಕಾದ ವೇದಮಂತ್ರಗಳಲ್ಲಿ ಕನ್ಯಾಪದವಿರುವುದರಿಂದ ಋತುಮತಿಯು, ಪುರುಷಸ್ಪರ್ಶವುಳ್ಳವಳು ಅಲ್ಲದ ಹುಡುಗಿಯ ವಿವಾಹವು ಮುಖ್ಯವಾದ ಧರ್ಮವಿವಾಹವೆಂದು ಆಗುವುದು. ಕ್ಷತಯೋನಿಯಾದ ಗರ್ಭಿಣೀ ಸಂಸ್ಕಾರವನ್ನು ಮನು ಸಮ್ಮತಿಸುತ್ತಾನೆ. ಗಂಧರ್ವ ವಿವಾಹದಲ್ಲಿಯೂ ಬಳಿಕ ಮಂತ್ರ ವಿವಾಹವು ಧರ್ಮವು. ಆದುದರಿಂದ ದುರದೃಷ್ಟದಿಂದ ಅಕನ್ಯಾ ವಿವಾಹವು ಮಂತ್ರ ಪೂರ್ವಕವಾದರೂ ಅದು ಧಾರ್ಮಿಕವಾದ ವಿವಾಹವಲ್ಲ. ಹಾಗಾಗಿ ಕನ್ಯಾದೂಷಣೆಯಲ್ಲಿ ದಂಡನೆಯು.

ಹುಡುಗಿಯು ಹೆಂಡತಿಯಾಗುವುದು ಮಂತ್ರಗಳಿಂದ. ಸುಖ, ಧನ, ಪರಿಚರ್ಯೆಗಳನ್ನು ಸಂಬಳದವಳೂ ಕೊಡಬಹುದು. ದೀರ್ಘಕಾಲದ ವಿವಾಹ ಸಂಸ್ಕಾರದಲ್ಲಿ ಸಪ್ತಪದಾ ವಿಧಿಯಲ್ಲಿ ಮಂತ್ರವು ಗೆಳತಿಯಾಗೆಂದು ಹೇಳುವುದರಿಂದ ಆ ಬಳಿಕ ವಿಚ್ಛೇದವಿಲ್ಲದ ಸಂಬಂಧ. ಈ ಮೊದಲು ವರನು ಮೃತಪಟ್ಟರೆ, ದೋಷ(ರೋಗ)ವುಳ್ಳವನೆಂದು ತಿಳಿದರೆ ಯೋಗ್ಯ ವರನೊಡನೆ ಬೇರೆ ವಿವಾಹ ಮಾಡಬಹುದು.

ಕೌಟಿಲ್ಯನು ಬ್ರಾಹ್ಮ, ಪ್ರಾಜಾಪತ್ಯ, ಆರ್ಷ ಮತ್ತು ದೈವ ಪದ್ಧತಿಯ ವಿವಾಹಗಳು ಪ್ರಾಚೀನವಾದುದು ಎಂದು ಹೇಳುತ್ತಾನೆ. ಅವನ ಪ್ರಕಾರ ಗಾಂಧರ್ವ, ಅಸುರರಾಕ್ಷಸ, ಪೈಶಾಚ ವಿವಾಹಗಳು ಸಮಾಜದಲ್ಲಿ ಮನ್ನಣೆ ಹೊಂದಲು ಸಾಧ್ಯ, ಕೌಟಿಲ್ಯನ ಪ್ರತಿಲೋಮ ವಿವಾಹವನ್ನು ಒಪ್ಪುವುದಿಲ್ಲ.

ಹಿಂದೂ ವಿವಾಹವು ಉಭಯತರ ಪೈಕಿ ಯಾರಾದರೂ ಒಬ್ಬರ ಸಮಾಜದೊಳಗಿನ ಸಾಂಪ್ರದಾಯಿಕ ವಿಧಿಗಳಿಂದ ಇಲ್ಲವೆ ಸಂಸ್ಕಾರಗಳಿಂದ ನೆರವೇರಿಸಲ್ಪಡಬಹುದು. ಅಂತಹ ಕ್ರಮ ಅಥವಾ ಸಂಸ್ಕಾರಗಳು ಸಪ್ತಪದಿಯನ್ನು ಒಳಗೊಂಡಿದ್ದರೆ ಏಳನೆಯ ಹೆಜ್ಜೆ ಇಟ್ಟಾಗ ವಿವಾಹವು ಪೂರ್ಣವಾಗುವುದು ಮತ್ತು ಬಂಧನಕಾರಕವಾಗಬಹುದು.

ರತಿಗಾಗಿ, ಪುತ್ರನಿಗಾಗಿ, ಧರ್ಮಕ್ಕಾಗಿ ಹೀಗೆ ಮೂರು ಪ್ರಕಾರದ ವಿವಾಹಗಳುಂಟು ಎಂದು ಯಾಜ್ಞವಲ್ಕ್ಯನ ಅಭಿಪ್ರಾಯ.

*ವಿವರಗಳಿಗೆ ನೋಡಿ: ನಿಯೋಗ*

*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೮–೨೨೬, ೨೭, ೩–೨೯; ೩೫*

*ದಿ. ನಾಗೇಶ ರಂಗೋ ಕುಲಕರ್ಣಿ (ಅನು) ೨೦೦೭ ಯಜ್ಞಾವಲ್ಕ್ಯಸ್ಮೃತಿ ವಿವಾಹ ಪ್ರಕರಣ ಪುಟ. ೫೫, ೫೯–೬೨*

*ಎಂ. ವಿ. ಕೃಷ್ಣರಾವ್ ೧೯೫೩ ಕೌಟಿಲ್ಯ*

*ಸಿ. ವೀರಣ್ಣ ೧೯೮೬ ಪ್ರಾಚೀನ ಸಾಹಿತ್ಯ ರಾಜಸತ್ತೆಯ ವೈಭವದ ಕಾಲ ಪುಟ. ೯೬,೧೩೩,೧೫೫,೧೬೦,೨೦೬,೨೨೮*

*ಪಿ. ವಿ. ಕಾಣೆ ೨೦೦೩ ಧರ್ಮಶಾಸ್ತ್ರದ ಇತಿಹಾಸ ಪುಟ. ೧೫೭*
*ಶ್ರೀಕಂಠಯ್ಯ.ಕೆ. ೧೯೮೩ ವಿಜಯ ನಗರ ಕಾಲದ ಅರಸೊತ್ತಿಗೆಯ ಜನಜೀವನ ಚಿತ್ರಣ ಪುಟ. ೨೮೯*
*ಶೇಷ ನವರತ್ನ ೨೦೦೮ ಯಜುರ್ವೇದ ಪುಟ. ೩೪*
*ಶೇಷ ನವರತ್ನ ೧೯೮೬ ನಾಲ್ಕು ವೇದಗಳು ಪುಟ. ೧೯೩-೨೨೬*
*ಯುಗಯಾತ್ರೀ ಭಾರತೀಯ ಸಂಸ್ಕೃತಿ ೧೯೭೧ ಸಂಪುಟ. ೨ ಪುಟ. ೩೦೧, ೩೦೨.*

**೬೬೪. ವಿವಾಹ ನಿಷೇಧಗಳು**

'ವಡ್ಡಾರಾಧನೆ'ಯಲ್ಲಿ ಅಣ್ಣನಿಗೆ ನಿಶ್ಚಯವಾದ ಹೆಣ್ಣನ್ನು ತಮ್ಮನಿಗೆ ಕೊಡಬೇಕೆಂದು ನಿರ್ಧರಿಸಿದಾಗ, ಅಣ್ಣನಿಗೆ ನಿಶ್ಚಯವಾದ ಹೆಣ್ಣನ್ನು ತಾನು ಮದುವೆಯಾಗುವುದಿಲ್ಲ ಎಂದು ತಮ್ಮನು ಹೇಳುತ್ತಾನೆ. ಅನಂತರ ಆತನ ಅಣ್ಣನು ಅಲ್ಲಿಗೆ ಬಂದಾಗ ಅವನಿಗೆ ಆ ಹೆಣ್ಣನ್ನು ಮದುವೆ ಮಾಡಿಕೊಡಬೇಕೆಂದು ಹಿರಿಯರು ಆಲೋಚಿಸುತ್ತಾರೆ. ಆದರೆ, ತಮ್ಮನಿಗೆ ನಿಶ್ಚಯವಾದ ಹೆಣ್ಣನ್ನು ತಾನು ಮದುವೆಯಾಗಲಾರೆ ಎಂದು ಅಣ್ಣನು ಹೇಳುತ್ತಾನೆ. ಇದರಿಂದ ಮದುವೆಯು ನಿಂತು ಹೋಗುತ್ತದೆ (ಕೇಶವ ಭಟ್ಟ ಟಿ (ಅನು) ೧೯೭೬ ಪು. ೪೮) ಅಣ್ಣನ ಹೆಂಡತಿಯು ಮೈದುನನಿಗೆ ಪೂಜನೀಯಳು ಮತ್ತು ಮಾತೃಸ್ಥಾನದಲ್ಲಿ ಇರುವವಳು. ಹಾಗೆಯೇ ತಮ್ಮನ ಹೆಂಡತಿಯು ಅಣ್ಣನಿಗೆ ಮಗಳ ಸಮಾನಳು ಎನ್ನುವ ನಂಬಿಕೆಯೇ ಈ ರೀತಿಯ ನಿಷೇಧದ ರೂಪದಲ್ಲಿ ಕಾಣಿಸಿಕೊಂಡಿರಬೇಕು. ಮುಖ್ಯವಾಗಿ, ಇದು ಬಹುಪತಿತ್ವ ಅಳಿದು ಹೋದ ಅನಂತರದ ಬೆಳವಣಿಗೆಯಾಗಿ ರೂಪುಗೊಂಡಿರಬೇಕು. 'ರಾಮಾಯಣ'ದಲ್ಲಿ ಈ ರೀತಿಯ ಕಲ್ಪನೆಯಿದೆ. ಆದರೆ 'ಮಹಾಭಾರತ'ದಲ್ಲಿ ಇದು ಸಮ್ಮತವಾಗಿ ಈ ರೀತಿಯ ನಿಷೇಧವು ಸ್ಪಷ್ಟವಾಗಿ ತಲೆದೂರಿತು (ಅದೇ ಪು.೬೮). ಈ ರೀತಿಯ ವಿವಾಹದ ಸಾಧ್ಯತೆಯು ಸೋದರಿಕೆ ಸಂಬಂಧದ ಮಾದರಿಯಲ್ಲಿರುತ್ತದೆಂದು ಸಮಾಜ ವಿಜ್ಞಾನಿಗಳು ಒಪ್ಪಿಕೊಳ್ಳುತ್ತಾರೆ (ಅದೇ ಪು.೯೧).

'ಪಂಪ ಭಾರತ'ದಲ್ಲಿ ಭೀಮ ಮತ್ತು ಹಿಡಿಂಬೆಯರ ಮದುವೆ ವಿಚಾರವು ಹೀಗೆ ಬರುತ್ತದೆ (ಅನಂತರಂಗಾಚಾರ್ ಎನ್ (ಅನು) ೧೯೭೭ ೩-೮೧ವ) "ಕೊಂತಿಯುಂ ಧರ್ಮಪುತ್ರನುಮೀಕೆ ಸಾಮಾನ್ಯ ವನಿತೆಯಲ್ಲಿವಳ್ ರಾಕ್ಷಸ ಸ್ತ್ರೀಯೆಂದು ಭಾವಿಸಲ್ವೇಡೀಕೆಯಂ ಕೆಯ್ಕೊಳ್ವುದೆ ಕಜ್ಜಮೆಂದಾಕೆಗಂ ಭೀಮಸೇನಂಗಂ ಗಂಧರ್ವ ವಿವಾಹಮಂ ಮಾಡಿದೊಡೆ" ಇಲ್ಲಿ ರಾಕ್ಷಸ ಸ್ತ್ರೀ ಮತ್ತು ಕ್ಷತ್ರಿಯ ಪುರುಷರಿಗೆ ವಿವಾಹವು ಸಲ್ಲದು ಎನ್ನುವ ಧ್ವನಿಯು ವ್ಯಕ್ತವಾಗಿದೆ. ವ್ಯಾಸ ಭಾರತದ ಸ್ಪಷ್ಟವಾದ ಉಕ್ತಿಯಿಂದ ಈ ವಿಚಾರವು ವ್ಯಕ್ತವಾಗಿದೆ. ಮಹಾಭಾರತದಲ್ಲಿ ಹಿಡಿಂಬೆಯು ಕುಂತಿಯಲ್ಲಿ ಹೀಗೆ ಹೇಳುತ್ತಾಳೆ: ಕುಲ ಧರ್ಮವನ್ನೂ ಮೀರಿ ನಿನ್ನ ಮಗನನ್ನು ವರಿಸಿರುತ್ತೇನೆ. ಭೀಮನು ನನ್ನನ್ನು ಪರಿಗ್ರಹಿಸುವಂತೆ ಹೇಳು. ಕುಲಧರ್ಮವನ್ನು ಮೀರಿದ ವಿವಾಹವು ಸಲ್ಲದು ಎನ್ನುವುದು ಇಲ್ಲಿಯ ಭಾವವಾಗಿದೆ.

ಬೇರೆ ಬೇರೆ ಮತಗಳಿಗೆ ಸೇರಿದವರು ಮದುವೆಯಾಗಬಾರದು ಎನ್ನುವ ನಿಷೇಧವು ಇಲ್ಲಿ ವ್ಯಕ್ತವಾಗಿದೆ. ಇದು ಧಾರ್ಮಿಕತೆಯ ಬಗೆಗಿನ ಕುರುಡು ಹುಟ್ಟಿರುವುದಾಗಿದೆ.

೧೯೭೬ರಲ್ಲಿ ಹಿಂದೂ ವಿವಾಹ ಕಾಯಿದೆ ತಿದ್ದುಪಡಿ ಮಾಡಲಾಯಿತು. ಇದರಲ್ಲಿ ನಿಷೇಧಿತ ಸಂಬಂಧಗಳ ಕುರಿತು ಹೇಳಲಾಗಿದೆ: ೧. ಒಂದೊಮ್ಮೆ ಒಂದು ಇನ್ನೊಂದು ಪಕ್ಷದ ಪಿತೃವಂಶೀಯ ಪೂರ್ವಜರಾಗಿದ್ದಾರೆ. ೨. ಒಂದೊಮ್ಮೆ ಒಂದು ಪಕ್ಷ ಇನ್ನೊಂದು ಪಕ್ಷದ ಪಿತೃವಂಶೀಯ ಪೂರ್ವಜನ ಅಥವಾ ಪಿತೃವಂಶಜನ ಪತ್ನಿ ಅಥವಾ ಪತಿಯಾಗಿದ್ದರೆ ಒಂದೊಮ್ಮೆ ಒಂದು ಪಕ್ಷವು ಇನ್ನೊಂದು ಪಕ್ಷದ ಸಹೋದರ ಅಥವ ತಂದೆಯ ಅಥವಾ ತಾಯಿಯ ಸಹೋದರನ ಅಥವಾ ತಂದೆಯ ಅಥವಾ ತಾಯಿಯ ಸೋದರನ ಅಥವಾ ಅಜ್ಜನ ಅಥವಾ ಅಜ್ಜನ ಸಹೋದರನ ಪತ್ನಿಯಾಗಿದ್ದರೆ ೪. ಒಂದೊಮ್ಮೆ ಉಭಯತರು ಸೋದರನ ಮತ್ತು ಸೋದರಿಯಾಗಿದ್ದರೆ ಸೋದರಮಾವ ಅಥವಾ ಸೋದರಸೊಸೆಯಾಗಿದ್ದರೆ ಸೋದರ ಅತ್ತೆ ಅಥವಾ ಸೋದರಳಿಯನಾಗಿದ್ದರೆ ಅಥವಾ ಸಹೋದರನ ಅಥವಾ ಸಹೋದರಿಯ ಮಕ್ಕಳಾಗಿದ್ದರೆ ಅಥವಾ ಇಬ್ಬರು ಸಹೋದರರ ಅಥವಾ ಸಹೋದರಿಯ ಮಕ್ಕಳಾಗಿದ್ದರೆ ಹಾಗೂ ೧. ಪೂರ್ಣರಕ್ತದಂತೆ ಅರ್ಧರಕ್ತ ಮತ್ತು ಏಕೋದರ ರಕ್ತ ೨. ಅನೌರಸ ರಕ್ತಸಂಬಂಧ ೩. ದತ್ತಕದಿಂದ ಹಾಗೂ ರಕ್ತದಿಂದ ಸಂಬಂಧ.

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಲ್ಲಿ ಕ್ರಮಶಃ ಮೊದಲನೆಯವರಿಗೆ ಅನಂತರ ಜಾತಿಯ ಎಲ್ಲ ಸ್ತ್ರೀಯರು ವಿವಾಹಯೋಗ್ಯರು.

ಪ್ರಥಮ ವಿವಾಹದಲ್ಲಿ ಶೂದ್ರ ಸ್ತ್ರೀಯನ್ನು ಬಿಡಬೇಕು. ಸವರ್ಣ ಸ್ತ್ರೀಯು ಸರ್ವಥಾ ಸಿಗದಿದ್ದರೂ ಈವರೆಗೆ ಅನ್ಯವರ್ಣದ ಸ್ತ್ರೀಯನ್ನು ಮದುವೆಯಾದ ಉದಾಹರಣೆ ಇಲ್ಲ ಎಂದು ಮನು ಹೇಳುತ್ತಾನೆ.

*ವಿವರಗಳಿಗೆ ನೋಡಿ: ಕಪಾಡಿಯಾ .ಕೆ.ಎಂ (ಮೂಲ) ಮಹೇಶ್ವರಪ್ಪ (ಅನು) ೧೯೭೮*
*ಭಾರತದಲ್ಲಿ ವಿವಾಹ ಮತ್ತು ಕುಟುಂಬ ಪುಟ. ೭೧*
*ರಾಮೇಶ್ವರಾವಧಾನಿ (ಸಂ) ೧೯೭೨–೭೬ ಮಹಾಭಾರತ (ಸಂಪುಟ–೧–೧೧) ಪುಟ. ೧೦೨೨*
*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೩–೧೩;೧೪.*

### ೬.೬.೫. ವೀರಗಲ್ಲುಗಳು

ವೀರಗಲ್ಲುಗಳು ಸಾಮಾನ್ಯ ರೀತಿಯಾದವಲ್ಲ. ಯುದ್ಧದಲ್ಲಿ ಮಡಿದ ವೀರನ ನೆನಪಿಗಾಗಿ ವೀರಗಲ್ಲುಗಳನ್ನು ನೆಡುತ್ತಾರೆ.

ಹೋರಾಟದಲ್ಲಿ ಮಡಿದ ವೀರನ ಸ್ಮಾರಕವಾಗಿ ನೆಟ್ಟಕಲ್ಲುಗಳನ್ನು ವೀರಗಲ್ಲುಗಳು ಎಂಬುದಾಗಿ ಕರೆಯುತ್ತಾರೆ. ಈ ವೀರಗಲ್ಲುಗಳು ಬರಹವನ್ನು ಮಾತ್ರವಲ್ಲದೆ ಶಿಲ್ಪದ ವಿವರಗಳನ್ನೂ ಹೊಂದಿರುತ್ತವೆ. ಅಂದರೆ, ಶಾಸನ ಮತ್ತು ಶಿಲ್ಪ, ಆ ವೀರಗಲ್ಲು ಯಾವ ವೀರನ ಸ್ಮಾರಕವಾಗಿದೆಯೋ ಆ ವೀರನ ಪರಾಕ್ರಮವನ್ನು ಸಾರುವಂತಹವೇ

ಆಗಿರುತ್ತವೆ. ವೀರಗಲ್ಲುಗಳ ರಚನಾಕ್ರಮವು ಬಹುಮಟ್ಟಿಗೆ ದಾನಶಾಸನಗಳ ರಚನಾಕ್ರಮವನ್ನೇ ಅನುಸರಿಸುತ್ತವೆ. ವೀರತ್ವದ ಪ್ರತಿಪಾದನೆ ಮುಖ್ಯ.

ವೀರಗಲ್ಲುಗಳ ಪಾಠದ ಮುಖ್ಯ ಲಕ್ಷಣವೆಂದರೆ ಅದು ತನ್ನ ಗಮನವನ್ನು ಮುಖ್ಯವಾಗಿ ವೀರನ ಬಗ್ಗೆ ಮತ್ತು ವೀರತನದ ಬಗ್ಗೆ ಒಲವನ್ನು ಹೊಂದಿರುವುದೇ ಆಗಿದೆ. ವೀರಗಲ್ಲುಗಳಲ್ಲಿ ಪ್ರಾರ್ಥನಾ ಶ್ಲೋಕಗಳ ಜೊತೆಗೇ ಅಥವಾ ಶಾಸನದ ಆರಂಭದಲ್ಲಿಯೇ ವೀರತನವನ್ನು ಸಾರುವ ಈ ಶ್ಲೋಕಗಳು ಉದ್ಧೃತವಾಗಿರುವುದುಂಟು.

ದ್ವಾವಿಮೌ ಪುರುಷೌಲೋಕೇ ಸೂರ್ಯಮಂಡಲ ಭೇದಿನೌ
ಪರಿವ್ರಾಡ್ಯೋಗ ಯುಕ್ತಾಶ್ವ ರಣೇಚ ಅಭಿಮುಖೇಹತಃ

ಅಂದರೆ, ಈ ಲೋಕದಲ್ಲಿ ಇಬ್ಬರು ಮಾತ್ರ ಸೂರ್ಯ ಮಂಡಲವನ್ನು ಬೇಧಿಸಿಕೊಂಡು ಹೋಗುವ ಶಕ್ತಿಯುಳ್ಳವರಾಗಿದ್ದಾರಂತೆ. ಅವರು ಯಾರೆಂದರೆ ಸಾಧನೆಯನ್ನು ಮಾಡಿ ಸಿದ್ಧಿ ಪಡೆದವನು ಒಬ್ಬನಾದರೆ, ಯುದ್ಧರಂಗದಲ್ಲಿ ಅಸಾಧಾರಣ ಪರಾಕ್ರಮವನ್ನು ಮೆರೆದು ಮಡಿದವನು ಮತ್ತೊಬ್ಬನಂತೆ. ವೀರ ಮೌಲ್ಯವನ್ನು ಇದು ಸೂಚಿಸುತ್ತದೆ.

ವೀರಗಲ್ಲುಗಳಲ್ಲಿ ಹೋರಾಡಿದ ವೀರನ ಸ್ತುತಿಯಿರುತ್ತದೆ. ಅವನು ಎಷ್ಟು ಶೌರ್ಯವಂತನಾಗಿದ್ದ ಎಂಬುದನ್ನು ವೀರಗಲ್ಲುಗಳು ತಿಳಿಯಪಡಿಸುತ್ತವೆ. ವೀರಗಲ್ಲುಗಳಲ್ಲಿ ಶೌರ್ಯ, ವೀರರ ಪರಾಕ್ರಮಗಳನ್ನು ಬೇರೆ ಬೇರೆ ರೀತಿಯಲ್ಲಿ ವರ್ಣಿಸುವುದನ್ನು ನಾವು ಕಾಣಬಹುದು.

ವೀರಗಲ್ಲುಗಳನ್ನು ಹೋರಾಟದ ದೃಷ್ಟಿಯಿಂದ ಈ ಕೆಳಕಂಡಂತೆ ವಿಂಗಡಿಸುವುದು ಸೂಕ್ತವೆಂದು ತೋರುತ್ತದೆ.

ಯುದ್ಧದಲ್ಲಿ ಮಡಿದ ವೀರರ ವೀರಗಲ್ಲುಗಳು. ತುರುಗಾಳಗ ಅಂದರೆ, ಗೋಗ್ರಹಣ ದಲ್ಲಿ ಮಡಿದ ವೀರರ ವೀರಗಲ್ಲುಗಳು.

ಬೇಟೆಯಲ್ಲಿ ಮಡಿದ ವೀರರ ವೀರಗಲ್ಲುಗಳು. ಹೆಂಗಸರ ಮಾನಭಂಗ ಪ್ರಸಂಗ ಗಳಲ್ಲಿ, ಹೋರಾಡಿ ಮಡಿದ ವೀರರ ವೀರಗಲ್ಲುಗಳು. ಊರಳಿವಿನಲ್ಲಿ ಮಡಿದ ವೀರರ ವೀರಗಲ್ಲುಗಳು. ಕಳ್ಳರು ಮತ್ತು ದಾರಿಗಳ್ಳರೊಡನೆ ಹೋರಾಡಿ ಮಡಿದ ವೀರರ ವೀರಗಲ್ಲುಗಳು. ಸೀಮಾಸಂಬಂಧದಲ್ಲಿ ಮಡಿದ ವೀರರ ವೀರಗಲ್ಲುಗಳು. ಎಂಬುದಾಗಿ ಏಳು ಗುಂಪುಗಳಾಗಿ ವಿಂಗಡಿಸುವುದು ಸೂಕ್ತ. ರಾಜ್ಯ ವಿಸ್ತರಣೆಗಾಗಿಯೋ, ವ್ಯಕ್ತಿ ಮಾತ್ಸರ್ಯದಿಂದಲೋ ಅರಸರಲ್ಲಿ ಯುದ್ಧಗಳು ನಡೆಯುತ್ತಿದ್ದುವು. ಇಂಥ ಹೋರಾಟಗಳಲ್ಲಿ ಸೈನಿಕರದೇ ಮಹತ್ವದ ಪಾತ್ರವಾಗಿತ್ತು. ಒಂದು ರೀತಿಯಲ್ಲಿ ಹೇಳುವುದಾದರೆ ಎರಡು ಕಡೆಯ ಸೈನಿಕರ ಸೂಲು ಗೆಲುವುಗಳೇ ಅರಸರ ಸೋಲು ಗೆಲುವುಗಳಾಗಿದ್ದವು. ತಮ್ಮ ಪರವಾಗಿ ಹೋರಾಡಿ ಮಡಿದ ವೀರನ ಸೇವೆಯನ್ನು ಮೆಚ್ಚಿ, ಅವನ ವೀರತನವನ್ನು ಹೊಗಳುವ ಸ್ಮಾರಕಶಿಲೆಗಳನ್ನು ಅರಸರೋ ಅಥವಾ ಅವನ ಕೈಕೆಳಗಿನ ಅಧಿಕಾರಗಳೋ ಹಾಕಿಸುತ್ತಿದ್ದರು. ಇದೇ ಸ್ಮಾರಕಗಳಲ್ಲಿ ವೀರನ ಮನೆಯವರಿಗೆ ದತ್ತಿ ಬಿಟ್ಟ ವಿಷಯವನ್ನು ಬರೆಯಿಸುತ್ತಿದ್ದರು. ಆದ್ದರಿಂದ ವೀರಗಲ್ಲುಗಳು ಒಂದು ರೀತಿ ದಾನಶಾಸನಗಳೂ

ಆಗುತ್ತವೆ, ಸ್ಮಾರಕ ಶಿಲೆಗಳೂ ಆಗುತ್ತವೆ. ಇದು ಸ್ಮಾರಕವೆಂಬುದನ್ನು ಮರೆಯಬಾರದು.

ವೀರಗಲ್ಲುಗಳು ಮೇಲೆ ಹೇಳಲಾಗಿರುವಂತೆ ಬೇರೆ ಬೇರೆ ವಿಧದಲ್ಲಿರುತ್ತದೆ.

ಮಧ್ಯಕಾಲೀನ ಗ್ರಾಮಗಳಲ್ಲಿ ಅಸಂಖ್ಯಾತ ವೀರಗಲ್ಲುಗಳನ್ನು ಕಾಣಬಹುದಿತ್ತು. ಇವೆಲ್ಲಾ ಸಾಮಾನ್ಯವಾಗಿ ಕದನಗಳಲ್ಲಿ ಮರಣ ಹೊಂದಿದ ವೀರರ ಸ್ಮಾರಕಗಳಾಗಿದ್ದವು. ಸಾಮಾನ್ಯವಾಗಿ ಈ ಕದನಗಳಲ್ಲಿ ಸ್ಥಳೀಯವಾಗಿ ದನಗಳಿಗೋಸ್ಕರ ನಡೆದಂತಹ ಕದನಗಳಾಗಿದ್ದವು, ಈ ಯೋಧರ ಸ್ಥಾನ-ಮಾನ, ಸಾಧಾರಣ ಹಳ್ಳಿಗನಿಗಿಂತ ಮೇಲ್ಮಟ್ಟದ್ದಾಗಿತ್ತು. ಹಿಂದಿನ ಕಾಲದಲ್ಲಿ ಪ್ರಾದೇಶಿಕ ರಕ್ಷಣೆಗೆಂದೇ ನೇಮಿಸಿದ್ದ ಗುಲ್ಮಗಳು ರಕ್ಷಿತವಾದ ಹಳ್ಳಿಗಳ ರಕ್ಷಣೆಯನ್ನು ಮಾಡುತ್ತಿದ್ದವು. ವಿವಿಧ ಹಳ್ಳಿಗಳಲ್ಲಿ ಚದುರಿಕೊಂಡಿದ್ದ ಒಂದು ನಿರ್ದಿಷ್ಟ ಗುಂಪಿನ ಜನರಿಗೆ ಶಸ್ತ್ರ ಧರಿಸುವ ಅಧಿಕಾರವನ್ನು ವಹಿಸಿಕೊಡಲಾಯ್ತು. ಕರೆ ಬಂದ ತಕ್ಷಣ ರಕ್ಷಣೆಗೆ ಧಾವಿಸುವುದು ಅವರ ಕರ್ತವ್ಯವಾಗಿತ್ತು. ತಮ್ಮ ದೊರೆಯ ಶ್ರೇಯಸ್ಸಿಗಾಗಿ, ದೇವರ ವಿಗ್ರಹವೊಂದರ ಮುಂದೆ ತಮ್ಮ ತಲೆಯನ್ನು ಕತ್ತರಿಸಿಕೊಂಡ ಗಂಗ ಸಾಮಂತರ ಪ್ರಶಂಸೆಯನ್ನು ಹಲವಾರು ಶಾಸನಗಳಲ್ಲಿ ಕಾಣಬಹುದು. ದೊರೆಯ ಪಾರ್ಥಿವ ಶರೀರದೊಡನೆ ಭಸ್ಮವಾಗಬೇಕೆಂದು ೧೩ನೇ ಶತಮಾನದ ಪಾಂಡ್ಯ ಸಾಮಂತರು ದೊರೆಯ ಚಿತೆಗೇ ಹಾರುತ್ತಿದ್ದರು ಎಮದು ಮಾರ್ಕೋಪೋಲೋ ವರದಿ ಮಾಡಿದ್ದಾನೆ. ಇದು ಭಕ್ತಿಯ ಮನಃಸ್ಥಿತಿಗೆ ಚೆನ್ನಾಗಿ ಹೊಂದಿಕೊಳ್ಳುತ್ತದೆ. ಅಮಾನುಷ ಎನಿಸಬಹುದಾದ ಇಂತಹ ಸ್ವಾಮಿನಿಷ್ಠೆಯನ್ನು ಕಿರಾತ ಬುಡಕಟ್ಟಿನ ಮುಖಂಡನು, ತನ್ನ ಹಿಂಬಾಲಕರಿಂದ ತೀರಾ ಅಸಾಧಾರಣವಾದ ಕೆಲವು ಸಂದರ್ಭಗಳನ್ನು ಬಿಟ್ಟರೆ ಉಳಿದಂತೆ ನಿರೀಕ್ಷಿಸಲು ಸಾಧ್ಯವಿರಲಿಲ್ಲ.

ವೀರ ಸ್ಮಾರಕವು ವೀರಗಲ್ಲು ಎಂಬ ಹೆಸರಲ್ಲಿಯೂ ಕಾಣಸಿಗುತ್ತದೆ. ಹೆಸರೇ ಸೂಚಿಸುವಂತೆ ಇದು ವೀರರ ಸ್ಮಾರಕಗಳಾಗಿವೆ.

*ವಿವರಗಳಿಗೆ ನೋಡಿ: ಆರ್. ಶೇಷಶಾಸ್ತ್ರಿ ೨೦೦೫ ಶಾಸನ ಪರಿಚಯ ಪುಟ. ೫೬-೫೭*

**೬೬೬. ವೀರಜನನಿ**

*ಪಲರಿರ್ದು ಕಾದಿದರ್ ಮೆ*
*ಯ್ಗಲಿಗಳ್ ನಿನ್ನೊಂದು ಮೆಯ್ಯೊಳಂ ತವೆ ಕೊಂದಯ್ ।*
*ಪಲರಂ ನಿನ್ನ ಪೆತ್ತಳ್*
*ಮೊಲೆವೆತ್ತಳೆ ವೀರಜನನಿವೆಸರಂ ಪೆತ್ತಳ್ ॥*

*(ಸಾಹಸಭೀಮ ವಿಜಯಂ ೪-೫೬)*

ಅಭಿಮನ್ಯುವಿನ ಕುರಿತು ಹೇಳುತ್ತಾ ನಿನ್ನನ್ನು ಹಡೆದವಳು ಕೇವಲ ಮೊಲೆವೆತ್ತ ಹೆಣ್ಣಲ್ಲ. ವೀರಜನನಿವೆಸರಂ ಪೆತ್ತಳ್ ಎಂದು ಕೌರವನು ಅಭಿಮನ್ಯು ಹೆಣವನ್ನು ನೋಡಿ ಹೇಳುತ್ತಾನೆ. ವೀರನಾದ ಮಗುವನ್ನು ಹೆತ್ತವಳು ವೀರ ಜನನಿಯೆಂಬ ಹೆಸರನ್ನು ಪಡೆಯುತ್ತಾಳೆ.

ರನ್ನನ 'ಅಜಿತ ತೀರ್ಥಂಕರ ಪುರಾಣ' ಕೃತಿಯಲ್ಲಿ ತಾಯ್ತನವು ಪಾವನವಾದುದು ಎನ್ನುವ ನಂಬಿಕೆಯೂ ವ್ಯಕ್ತವಾಗಿದೆ. (೬-೪) ಅವನ 'ಗದಾಯುದ್ಧ'ದಲ್ಲಿಯೂ ವೀರ ಜನನಿಯಾಗುವುದು ಹೆಮ್ಮೆಯ ಸಂಗತಿ ಎಂಬ ವಿಚಾರವು ಬರುತ್ತದೆ. (೪-೫೬) ಹತ್ತನೇ ಶತಮಾನದ ವೀರಯುಗಕ್ಕೆ ಸಂಬಂಧಿಸಿದಂತೆ ಈ ರೀತಿಯ ಆಶಯವು ಹುಟ್ಟಿಕೊಂಡಿರಬೇಕು.

ಹತ್ತನೆಯ ಶತಮಾನದ ವೀರಯುಗದ ಸಂದರ್ಭದಲ್ಲಿ ಶೂರನಾದವನಿಗೆ ಸಮಾಜದಲ್ಲಿ ಅಪಾರ ಗೌರವವಿದ್ದಿತ್ತು. "ಆಯುಧಯುಕ್ತನಂ ಮೆಚ್ಚದರಾರ್" ಎಂದಿದೆ ಕವಿರಾಜಮಾರ್ಗ. ವೀರನನ್ನು ಪೋಷಿಸಿಕೊಂಡು ಬರುವುದು ತಮ್ಮ ಕರ್ತವ್ಯವೆಂದು ಜನರು ಭಾವಿಸಿದ್ದರು. ಅತ್ತಿಮಬ್ಬೆಯಂತಹ ಸ್ತ್ರೀಯರು ಯುದ್ಧ ವೀರರನ್ನು ಸಾಕುತ್ತಿದ್ದರು. ಕೀರ್ತಿಸುತ್ತಿದ್ದರೆಂದು ತಿಳಿಯುತ್ತದೆ. ವೀರತ್ವವು ದೈವತ್ವದ ಮಟ್ಟಕ್ಕೇರಿತು. ಸ್ತ್ರೀಯರೂ ವೀರಜನನಿ ವೀರಮಡದಿ ಎಂದು ಕರೆಯಿಸಿಕೊಳ್ಳಲು ಇಷ್ಟ ಪಡುತ್ತಿದ್ದ ಕಾಲವದು. ವೀರ ಮಕ್ಕಳಿಗಾಗಿ ಹಂಬಲಿಸುತ್ತಿದ್ದ ಮಾತೆಯರಿದ್ದಿದ್ದರು.

"ನಿನ್ನಂ ಪೆತ್ತಳ್ ಮೊಲೆವೆತ್ತಳೆ. ವೀರಜನನಿವೆಸರಂ ಪೆತ್ತಳ್"

ಎಂದು ಜನರಿಂದ ಹೊಗಳಿಸಿಕೊಳ್ಳುವ ಇಚ್ಛೆ ಆ ಕಾಲದ ಸ್ತ್ರೀಯರಲ್ಲಿ ಪ್ರಬಲವಾಗಿತ್ತು.

ತಾಯ್ತನವು ಸಾರ್ಥಕವಾಗುವುದು ವೀರಪುತ್ರರನ್ನು ಪಡೆಯುವಲ್ಲಿ ಎನ್ನುವುದು ಇದೇ ಕೃತಿಯಲ್ಲಿ ಪ್ರತಿಪಾದಿತವಾಗಿದೆ. ವಿಕ್ರಮಾರ್ಜುನ ವಿಜಯ (೧-೧೧೭) ಇದು ವೀರಯುಗವನ್ನು ಸಂಕೇತಿಸುತ್ತದೆ. ಮಾತೃತ್ವದ ತೀವ್ರ ಹಂಬಲದ ಕುರಿತಂತೆ ಪಂಪನು 'ಕಾಂತೆ ಸುತ ಭ್ರಾಂತೆ' (೧-೧೨೩) ಎನ್ನುವ ಪದವನ್ನು ಬಳಸಿದ್ದು, ಇದು ಆ ಕಾಲದ ಒಟ್ಟು ಹಿನ್ನೆಲೆಯನ್ನು ಸೂಚಿಸುತ್ತದೆ. ಹಾಗೆಯೇ ಕುಂತಿಯು, 'ಕುಡುರಿಪು ತಂತ್ರ ಕ್ಷಯಕರನ ನೆನಗೆ ಹಿತನಂ ಸುತನಂ' (೧-೧೨೪) ಎಂದು ಹೇಳುವಲ್ಲಿ ಆ ಕಾಲದ ಸಾಮಾಜಿಕ ಚಿತ್ರವನ್ನು ಸೂಚಿಸುತ್ತದೆ. ಹತ್ತನೆಯ ಶತಮಾನದಲ್ಲಿನ ರಾಜಕೀಯ ವ್ಯವಸ್ಥೆಯಲ್ಲಿ ವೀರತ್ವ ಪ್ರಧಾನ ಮೌಲ್ಯವಾಗಿತ್ತು. ಜೊತೆಗೆ ಇದು ಆಸ್ತಿ, ಕುಟುಂಬ, ಪಿತೃಪ್ರಧಾನ ವ್ಯವಸ್ಥೆಯ ಮೌಲ್ಯಗಳನ್ನೂ ಹೊಂದಿದೆ. ಹಿರಿಯ ಗಂಡು ಮಕ್ಕಳಿಗೆ ಪಟ್ಟ ಎನ್ನುವುದು ಈ ರೀತಿಯ ವ್ಯವಸ್ಥೆಯ ಮುಖ್ಯ ಅಂಶ. ಆದ್ದರಿಂದಲೇ ಇಂತಹ ಸಾಮಾಜಿಕ ವ್ಯವಸ್ಥೆಯು ಹೆಣ್ಣಿನ ತಾಯ್ತನಕ್ಕೆ ಒತ್ತು ಕೊಡುತ್ತದೆ.

ಜನ ಯಾವುದನ್ನು ಪಾರಮಾರ್ಥಿಕದೃಷ್ಟಿಯಿಂದ ಶ್ರೇಷ್ಠವಾದುದೆಂದು ಭಾವಿಸಿದ್ದರೋ ಅದಕ್ಕೆ ಸಮಾನವಾದುದು ಈ ಯುದ್ಧದಲ್ಲಿ ಮಡಿಯುವುದು, ಎಂಬುದಾಗಿ ನಮ್ಮ ಜನ ನಂಬಿದ್ದರೆಂದು ಇದರಿಂದ ತಿಳಿಯಬಹುದಾಗಿದೆ. ಈ ಕಾರಣದಿಂದಲೇ ವೀರಸ್ವರ್ಗದ ಕಲ್ಪನೆ ಹುಟ್ಟಿಕೊಂಡದ್ದು. ವೀರಮರಣವನ್ನು ಪಡೆಯುವುದು ವೀರನಿಗೆ ಮಾತ್ರವಲ್ಲ ; ಆತನ ತಾಯಿಗೂ ಹೆಮ್ಮೆಯ ಸಂಗತಿಯಾಗಿತ್ತು.

*ವಿವರಗಳಿಗೆ ನೋಡಿ: ಡಾ. ಆರ್. ಶೇಷಶಾಸ್ತ್ರಿ ೨೦೦೪ ಕರ್ನಾಟಕದ ವೀರಗಲ್ಲುಗಳು ಪುಟ. ೪೩.*

೬೬೭. ವೀರಮರಣ

*ಜಿತೇನ ಲಭ್ಯತೇ ಲಕ್ಷ್ಮೀ ಮೃತೇನಾಪಿ ಸುರಾಂಗನಾ*

*ಕ್ಷಣ ವಿಧ್ವಂಸಿನಿ ಕಾಯೇ ಕಾ ಚಿಂತಾ ಮರಣೇ ರಣೇ*

ಇದು ವೀರಯುಗದ ಮಾತೂ ಹೌದು. ಕರ್ನಾಟಕದ ಅನೇಕ ವೀರಗಲ್ಲುಗಳು ಇದಕ್ಕೆ ಸಾಕ್ಷಿಯಾಗಿವೆ. ಕ್ಷಣಮಾತ್ರದಲ್ಲಿ ಸಾಯುವ ಈ ದೇಹವನ್ನು ಯುದ್ಧದಲ್ಲಿ ಕಳೆದುಕೊಂಡರೆ ಯಾಕೆ ಚಿಂತಿಸಬೇಕು ಎಂಬುದು ಧ್ಯೇಯವಾಕ್ಯ. ಯುದ್ಧದಲ್ಲಿ ಸಾಯುವುದಕ್ಕೆ ಚಿಂತಿಸಬಾರದು ಎಂಬುದು ಇದರ ಆಶಯವಾಗಿದೆ.

೬೬೮. ವೀರಶೈವ ಧರ್ಮ

ಮೊಹೆಂಜೊದಾರೊ ಮತ್ತು ಹರಪ್ಪಗಳ ಈಚಿನ ಸಂಶೋಧನೆಗಳಿಂದ ಸಿಂಧೂ ನದಿಯ ಕೊಳ್ಳದ ಪ್ರದೇಶದಲ್ಲಿ ಊರ್ಜಿತ ಸ್ಥಿತಿಯಲ್ಲಿದ್ದ ಒಂದು ಜನಾಂಗದಲ್ಲಿ ನಾಗರಿಕತೆಯು ಬಹಳ ಮುಂದುವರೆದಿದ್ದಿತೆಂದು ಸಿದ್ಧವಾಗಿರುತ್ತದೆ. ಕ್ರಿ.ಶ.ಪೂರ್ವದ ೩೦೦೦ ವರ್ಷಗಳ ಹಿಂದೆ ರೂಢವಾಗಿದ್ದ ಆ ಕಂಚಿನಯುಗದಲ್ಲಿಯ ಸಿಂಧೂನದಿಯ ಕೊಳ್ಳದ ಈ ಜನಾಂಗಕ್ಕೆ ಬಹಳ ಉನ್ನತವಾದ ಸಂಸ್ಕೃತಿಯೂ ಇತ್ತು: ಮತ್ತು ಈ ಸಂಸ್ಕೃತಿಯ ಮೇಲೆ ಭಾರತದೇಶದ ಆರ್ಯಜನಾಂಗದ ಪ್ರಭಾವದ ಗುರುತು ಎಷ್ಟೊ ಇದ್ದಿಲ್ಲ ಎಂಬ ಅಂಶವನ್ನು ಆ ಸಂಶೋಧನೆಗಳು ವ್ಯಕ್ತಗೊಳಿಸುತ್ತವೆ. ಸರ್ ಜಾನ್ ಮಾರ್ಶಲ್ ಅವರು 'ಮೊಹೆಂಜೊದಾರೊ ಮತ್ತು ಸೈಂಧವ ಸಂಸ್ಕೃತಿ' ಎಂಬ ಹೆಸರಿನ ತಮ್ಮ ಗ್ರಂಥದಲ್ಲಿ ಈ ಜನಾಂಗವು ಅನುಸರಿಸುತ್ತಿದ್ದ ಧರ್ಮವನ್ನು ಕುರಿತು ಬರೆಯುವಾಗ ಅದಕ್ಕಾಗಿ ಸಮಗ್ರವಾದ ಒಂದು ಅಧ್ಯಾಯವನ್ನೇ ಮೀಸಲಾಗಿರಿಸಿದ್ದಾರೆ. ಅದರಲ್ಲಿ ಅವರು ಈ ಜನಾಂಗವು ಒಂದು ಸ್ತ್ರೀದೇವತೆ – ಶಕ್ತಿಮಾತೆಯನ್ನೂ ಮತ್ತು ಒಬ್ಬ ಪುರುಷದೇವತೆ ಶಿವನನ್ನೂ ಪೂಜಿಸುತ್ತಿದ್ದರೆಂದು ನಿರ್ಣಯಿಸಿದ್ದಾರೆ. ಆ ಪ್ರದೇಶದ ವಿವಿಧ ಭಾಗಗಳಲ್ಲಿ ಕಂಡುಹಿಡಿದ ಮುದ್ರೆ ಮೂರ್ತಿ ಕೆತ್ತನೆ ಹಾಗೂ ಇನ್ನಿತರ ಚಿಹ್ನೆಗಳಲ್ಲಿ ಕಾಣುವ ಪುರುಷದೇವತೆಯನ್ನು 'ಶಿವ' ಎಂದು ಗುರುತಿಸಲಾಗಿದೆ: ಯಾಕೆಂದರೆ ಶಿವನಿಗಿರುವ ವಿಶಿಷ್ಟವಾದ ಮೂರು ಕಣ್ಣುಗಳು ಈ ದೇವತೆಗೆ ಇರುತ್ತವೆ. ಈ ಶಿವನು ಒಬ್ಬ ಮಹಾಯೋಗಿ ಎಂದೂ ಗಣಿಸಲಾಗಿದೆ. ಈ ಜನರು ಲಿಂಗ ಸೂರ್ಯ ಪ್ರಾಣಿ ವೃಕ್ಷ ಇತ್ಯಾದಿಗಳನ್ನು ಪೂಜಿಸುತ್ತಿದ್ದರೆಂದೂ ಮಾರ್ಶಲ್ ಅವರು ತಿಳಿಸುತ್ತಾರೆ. "ಸಿಂಧೂ ನದಿಯ ಜನಾಂಗದ ಧರ್ಮದಲ್ಲಿ ಇನ್ನುಳಿದ ದೇಶಗಳಲ್ಲಿಯ ಧರ್ಮ ತತ್ವಗಳಿಗೆ ಸಮಾನವಾದ ಅನೇಕ ಅಂಶಗಳು ಇರುತ್ತವೆ. ಈ ಮಾತು ಇತಿಹಾಸ ಪೂರ್ವದ ಮತ್ತು ಇತಿಹಾಸ ಕಾಲದ ಅನೇಕ ಧರ್ಮಗಳ ವಿಷಯದಲ್ಲಿಯೂ ಸತ್ಯವಾಗಿರುತ್ತದೆ. ಒಟ್ಟಾರೆ, ಅವರ ಧರ್ಮವು ವೈಶಿಷ್ಟ್ಯಪೂರ್ಣವಾದ ಭಾರತೀಯ ಧರ್ಮವಾಗಿದೆ. ಇಂದು ಪ್ರಚಾರದಲ್ಲಿರುವ ಹಿಂದೂಧರ್ಮಕ್ಕೆ ಇಲ್ಲವೆ ಪ್ರಾಕೃತಿಕವಸ್ತು ಪೂಜೆಗೆ ಹೊಂದಿಕೆಯಾಗುವ ಹಿಂದೂ ಧರ್ಮದ ಆ ಸ್ವರೂಪಕ್ಕೆ ಅದು ಬಹಳ ಅಭ್ಯಂತರವಾಗಿರುವುದಿಲ್ಲ.

ಅಥವಾ ಈಗಲೂ ಜನಸಾಮಾನ್ಯರ ಪೂಜೆಯಲ್ಲಿ ಅತಿಶಯವಾದ ಪ್ರಭಾವವನ್ನು ಬೀರಿರುವ ಶೈವ ಮತ್ತು ಶಾಕ್ತ ಮತಗಳ ತತ್ವಗಳಿಗೆ ಅದರ ತತ್ವಗಳು ಬಹಳ ಭಿನ್ನವಾಗಿರುವುದಿಲ್ಲ" – ಎಂದು ಸರ್ ಜಾನ್ ಮಾರ್ಶಲ್ ಅವರು ಸೈಂಧವ ಜನಾಂಗದ ಧರ್ಮದ ಬಗೆಗೆ ಅಭಿಪ್ರಾಯ ಪಡುತ್ತಾರೆ. ಶೈವ ಧರ್ಮದ ಟೀಕೆ ಅನೇಕ ಕಾವ್ಯಗಳಲ್ಲಿಯೂ ಬಂದಿರುವುದು ಗಮನಾರ್ಹ.

*ವಿವರಗಳಿಗೆ ನೋಡಿ: ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦*

*ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ ಪುಟ. ೪೦೩*

**೬೬೯. ವೇಷಭೂಷಣ**

*ಕುಲಿಶಿಯ ತೋಳ್ಗಳೊಳಮುರ*
*ಸ್ಥಲದೊಳ್ ಕರತಲದೊಳೆಸೆವ ಮಣಿಬಂಧದೊಳಂ ।*
*ಗುಲಿಯೊಳ್ ನಖದೊಳ್ ನರ್ತನ*
*ವಿಲಾಸಮಂ ಮೆಱೆದರಿಂದ್ರಸೌಂದರಿಯರ್ಕಳ್ ॥*

*(ಅಜಿತತೀರ್ಥಂಕರ ಪುರಾಣ ತಿಲಕ ೫–೨೦)*

ನರ್ತನದಲ್ಲಿ ವೇಷಭೂಷಣವನ್ನು ರನ್ನನು ವರ್ಣಿಸಿದ್ದಾನೆ. ಕುಲಿಶಿಯ ತೋಳು. (ಕುಲಿಶಿ ಎಂದರೆ ಇಂದ್ರ) ಮಣಿ ಬಂಧ; ಎಂದರೆ ಮಣಿ ಕಂಕಣ; ತೋಳಿನ ಆಭರಣ. ನರ್ತನದ ಸಂದರ್ಭದಲ್ಲಿ ಇಂದ್ರನ ತೋಳಿನ ಆಭರಣವು ಗಮನ ಸೆಳೆಯಿತು ಎಂದು ಭಾವಾರ್ಥ.

ವೇಷ ಭೂಷಣಗಳ ಕುರಿತ ಕೆಲವು ತಾಂತ್ರಿಕ ಪದಗಳು ಹೀಗಿವೆ:

ಚೀನಾಂಬರ – ಪಚ್ಚೆವಸ್ತ್ರ; ರೇಷ್ಮೆವಸ್ತ್ರ.
ಮೇಲುದ – ಹೆಗಲಿನಿಂದ ಇಳಿಬಿಡುವ ವಸ್ತ್ರ (?) ಉತ್ತರೀಯ
ಸವಂಗ – ಅಂಗಿ
ಕುಪ್ಪುಸ – ರವಿಕೆ
ಶಿರಪೇಷ – ಕಿರೀಟದ ತುದಿಯ ಗುಚ್ಛ
ಚೂಡಾರತ್ನ – ಚೂಡಾಮಣಿ
ಚುಲಕ – ಸೀರೆ
ಚೂಳೆಯ – ತಿಲಕ
ಚೋಲಿ – ರವಿಕೆ
ದುಕೂಲ – ರೇಷ್ಮೆವಸ್ತ್ರ
ಉಡೆ – ಉಡುವ ಬಟ್ಟೆ
ಉರಚಲಿ – ಮೊಲೆಕಟ್ಟು
ನೂಲಿನ ವಸ್ತ್ರ – ಕಪ್ಪುವಸ್ತ್ರ ಇತ್ಯಾದಿ....

೬೭೦. ವೈಯಾಕರಣ

*ಮೆಟ್ಟಿಯುಂ ಅಟ್ಟೆಯ ಬೆಟ್ಟಫಟ್ಟದಿಟ್ಟೆಡೆಗಳೊಳ್ ನಿಟ್ಟಿಸಿಯುಂ* **ವೈಯಾಕರಣನಂತೆ** *ಶಬ್ದಮನಾಲಿಸಿಯುಂ ಬೇಟೆಕಾರನಂತೆ ಅಡಿವಜ್ಜೆಯನಜಿಸಿಯುಂ ಗರುಡನಂತೆ ಹಾವಿನಹಟಿವಿಗೆಯನಾರಯ್ದು ನೋಡಿಯುಂ ವೈದ್ಯನಂತಹಿತಗದನ್ವೇಷಣಂಗೆಯ್ದು ನೋಡಿಯುಂ ಮುನ್ನಂ ಪರಶುರಾಮನೀ ನೆಲದೊಳುಳ್ಳರಸುಮಕ್ಕಳೆಲ್ಲರುಮ ನಿರ್ಪತ್ತೊಂದು ಸೂಟ್ಟಿರೆಗಂ ಪಿಳ್ಳೆಪೆಸರಿಲ್ಲದಂತು ಮಾಡಿದ ಸ್ಯಮಂತಕಪಂಚಕಂಗಳೆಂಬ ಪೆಸರ ಪೆರ್ಮಡುವಂ ತಂದೆಗೆ ನೀರ್ಗುಡಲುಮೆಂದು ಮಾಡಿದ ಸ್ಯಮಂತಪಂಚಕಗಳೆಂಬ ಪೆಸರ ಪೆರ್ಮಡುಗಳೊಳಗೆ ಮೂಡಿ ಮುಟಿಕ್ಕಾಡಿ ನೋಡಿಯುಂ ನಾಲ್ವಾತ್ತೆಣ್ಗಾವುದ ಪರಿಪ್ರಮಾಣ ಕುರುಕ್ಷೇತ್ರದೊಳೆಲ್ಲಿಯುಂ ದುರ್ಯೋಧನನಂ ಅಜಿಸಿ ಕಾಣದೆ ವಿಸ್ಮಯಂಬಟ್ಟವನ ಬಿಟ್ಟ ಬೀಡಿಂಗೆನಿಟ್ಟುರಿಗೊಂಡು–*

*(ಸಾಹಸ ಭೀಮ ವಿಜಯ ೬–೨೯ ವ)*

ಬೇರೆ ಬೇರೆ ಉದ್ಯೋಗಿಗಳು ಬೇರೆಬೇರೆ ವಿಧದಲ್ಲಿ ಪರೀಕ್ಷಿಸುವ ವಿಧಾನವನ್ನು ಮೇಲೆ ವರ್ಣಿಸಿದೆ ಅದರ ವಿವರಣೆಯು ಈ ಕೆಳಗಿನಂತಿದೆ:

ವೈಯಾಕರಣನಂತೆ ಶಬ್ದ ೧) ಅಕ್ಷರಗಳಿಂದಾದ ಪದ. ೨. ಸೊಪ್ಪುಳ, (ಧ್ವನಿ)ವನ್ನು ಕಿವಿಗೊಟ್ಟು ಆಲಿಸಿ, ಬೇಟೆಗಾರನಂತೆ ಹೆಜ್ಜೆ ಗುರುತುಗಳನ್ನು ಹುಡುಕುತ್ತ, ಗರುಡನಂತೆ ಸರ್ಪಧ್ವಜವನ್ನು ಕಾಣಲು ಹುಡುಕಾಡಿ ನೋಡಿ, ವೈದ್ಯನಂತೆ ವಿಅಹಿತ ಗದಾನ್ವೇಷಣಹಿ ಮಾಡಿ ೧) ಅಹಿತಕಾರಿಯಾದ ರೋಗವನ್ನು ಕಂಡುಹಿಡಿಯಲು ಪ್ರಯತ್ನಿಸಿ. ೨. ವೈರಿಯ ಗದೆಗಾಗಿ ಹುಡುಕಾಡಿ) ನೋಡಿದನು; ಪೂರ್ವಕಾಲದಲ್ಲಿ ಪರಶುರಾಮನು ಭೂಮಿಯ ಮೇಲಿರುವ ಕ್ಷತ್ರಿಯರಾಜರನ್ನೆಲ್ಲ ಒಂದು ಪಿಳ್ಳೆ ಕೂಡ ಉಳಿಯದಂತೆ ಇಪ್ಪತ್ತೊಂದು ಬಾರಿ ಸುತ್ತಾಡಿ ಕೊಂದು ಅವರ ನೊರೆಸಹಿತವಾದ ರಕ್ತದಿಂದ ತುಂಬಿದ ಐದು ಕೊಳಗಳನ್ನು ತನ್ನ ತಾಯಿಗೆ ಸೂತಕಸ್ನಾನ ಮಾಡಲೂ ತಂದೆಗೆ ತರ್ಪಣ ಬಿಡಲೂ ನಿರ್ಮಿಸಿದ್ದನು; ಭೀಮನು ಕೌರವನನ್ನು ಹುಡುಕುವ ಸನ್ನಿವೇಶದ ಚಿತ್ರ ಇದರಲ್ಲದೆ. ಪದ್ಯ ಶ್ಲೇಷಾತ್ಮಕವಾಗಿದೆ. ವೈಯಾಕರಣನೆಂದರೆ ವ್ಯಾಕರಣಶಾಸ್ತ್ರ ತಿಳಿದವನು. ಇಲ್ಲಿ ವೈಯಾಕರಣೆಯ ಕರ್ಮವನ್ನು ರನ್ನನು ವಿವರಿಸುವುದು ಗಮನಾರ್ಹ.

೬೭೧. ವೈಶಾಖಸ್ಥಾನ

*ಲೋಕಾಕಾರಮನಭಿನಯಿ*
*ಪಾಕಾರಂ ನೆಗಟೆನಿಂದು* **ವೈಶಾಖಸ್ಥಾ** *।*
*ನಾಕಾರದೊಳ್ ಮರು [ದ್ ವೃ]ತ*
*ನಾ ಕುಳಿಶಾಯುಧನದೊಂದು ಚೆಲ್ವಂ ಪಡೆದಂ ॥ (ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೭–೧೧೬)*

ಅಭಿನಯದ ಮಾದರಿಯೊಂದನ್ನು ಪಂಪನು ಪ್ರಸ್ತಾವಿಸಿದ್ದಾನೆ. ಲೋಕಾಕಾರ

ಅಭಿನಯ ಅಂದರೆ ಲೋಕವೃತ್ತಿಯ ಅನುಕರಣೆ. ಎರಡನೆಯದಾಗಿ ವೈಶಾಖಸ್ಥಾನ ಅಂದರೆ ಎರಡೂ ಪಾದಗಳನ್ನು ಅಡ್ಡಲಾಗಿ ಅಗಲಿಸಿ ಕಿಸುಗಾಲಿನಲ್ಲಿ ನಿಲ್ಲುವುದು. ಸೊಂಟದ ಮೇಲೆ ಎರಡು ಕೈಗಳಿರುತ್ತವೆ.

ಎರಡು ಹೆಜ್ಜೆ ಸರಿಸಿದರೆ ಅದು 'ಕರಣ' ಮತ್ತು ಕರಣಗಳ ಸಮಾಯೋಗ (ಒಂದಕ್ಕಿಂತ ಹೆಚ್ಚು ಕೂಡಿ ಬರಬಹುದು) 'ಖಂಡ', ಮೂರು ಇಲ್ಲವೆ ನಾಲ್ಕು ಖಂಡಗಳ ಸಮಾಯೋಗ 'ಮಂಡಲ' ಎನ್ನಿಸುವುದು, ಶಸ್ತ್ರಮೋಕ್ಷ, ಆಕಾಶಯಾನ ಮುಂತಾದುವುಗಳು ಚಾರೀಗಳಿಂದಲೆ ಅಭಿನಯಿಸುವುದು ಶಕ್ಯ. ನೃತ್ಯ ಮತ್ತು ಯುದ್ಧಗಳಲ್ಲಿ ಬಳಸಬೇಕಾದ ಚಾರೀಗಳು ಹದಿನಾರು:–ಸಮಪಾದ, ವಾರ್ತಾ, ಶಕಟಾಸ್ಯಾ, ಅಧ್ಯರ್ಧಿಕಾ, ಚಾಷಗತಿ, ವೀಚವಾಕ್, ಏಡಕಾಕ್ರೀಡಿತಾ, ಬದ್ಧಾ, ಊರೂದ್ ವೃತ್ತಾ, ಉಡ್ಡಿತಾ, ಉತ್‌ಸ್ಯಂದಿತಾ, ಜನಿತಾ, ಸ್ಯಂದಿತಾ, ಅಪಸ್ಯಂದಿತಾ, ಸಮೋತ್ಸಾರಿತಮತಲ್ಲೀ, ಮತ್ತು ಮತಲ್ಲೀ.

ಮೇಲಿನ ಹದಿನಾರು ಭೂಮಿಯ ಮೇಲೆ ಹೆಜ್ಜೆಗಳನ್ನಿಡಬೇಕಾದಾಗ ಅಭಿನಯಿಸುವ ಚಾರೀಗಳು. ಇನ್ನು ಆಕಾಶದಲ್ಲಿ ಹೆಜ್ಜೆಗಳನ್ನಿಡುವ ಅಭಿನಯಕ್ಕಾಗಿ ಬೇರೆ ಹದಿನಾರು ಇವೆ. ಅವೆಂದರೆ, ಅತಿಕ್ರಾಂತಾ, ರಸಕ್ರಾಂತಾ, ಪಾರ್ಶ್ವಕ್ರಾಂತಾ, ಊರ್ಧ್ವಜಾನು, ಸೂಚೀ, ನೂಪುರ ಪಾದಿಕಾ, ದೋಲಾಪಾದಾ, ಆಕ್ಷಿಪ್ತಾ, ವ್ಯಾವಿದ್ಧಾ, ಉದ್‌ವೃತ್ತಾ, ವಿದ್ಯುದ್ ಭ್ರಾಂತಾ, ಅಲಾತಾ, ಭುಜಂಗನಾಸಿತಾ, ಮೃಗಪ್ಲುತಾ, ದಂಡಾಪಾದಾ ಮತ್ತು ಭ್ರಮರೀ.

ಕಾಲು, ಕೈ, ಸೊಂಟ, ಎದೆ, ತಲೆ–ಇವೆಲ್ಲವೂ ಒಂದೇ ರೇಖೆಯಲ್ಲಿರಬೇಕು. ಶಸ್ತ್ರಮೋಕ್ಷ ಮೊದಲಾದವುಗಳ ಅಭಿನಯಕ್ಕಾಗಿ ನಿಂತುಕೊಳ್ಳುವ ಭಂಗಿ ಆರು ವಿಧದ್ದಿದೆ; ವೈಷ್ಣವ, ಸಮಪಾದ, ವೈಶಾಖ, ಮಂಡಲ, ಪ್ರತ್ಯಾಲೀಢ ಮತ್ತು ಅಲೀಢ. ಉದಾ: ಎರಡೂ ಪಾದಗಳ ನಡುವೆ ಎರಡೂವರೆ ಹೆಜ್ಜೆ ಅಂತರವನ್ನಿಟ್ಟು, ಹಿಂದಿನ ಕಾಲನ್ನು ಸ್ಥಿರವಾಗಿ ನೇರಾಗಿ ಇಟ್ಟು, ಮುಂದಿನ ಕಾಲನ್ನು ಕೆಳದೊಡೆಯನ್ನು ತುಸು ಬಗ್ಗಿಸಿಟ್ಟು ನಿಲ್ಲುವುದು ವೈಷ್ಣವಸ್ಥಾನ; ಈ ಸ್ಥಾನ(ಭಂಗಿ)ದಲ್ಲಿ ನಿಂತು ರಾಜರು, ಉತ್ತಮ ಪಾತ್ರಗಳು ಸಂಲಾಪವನ್ನು ನಡೆಸಬೇಕು. ಕೆಲವರ ಅಭಿಪ್ರಾಯದಲ್ಲಿ ಈ ಭಂಗಿಯನ್ನು ಧನುರ್ಧಾರಣಕ್ಕಾಗಿಯೂ ಬಳಸಬಹುದೆಂದಿದೆ. ಇದೇ ರೀತಿಯಲ್ಲಿ ಮಿಕ್ಕ ಐಯ್ದೂ ಸ್ಥಾನಗಳಲ್ಲಿ ಪಾದಗಳು, ಮೇಲೆ ಕಾಣಿಸಿದ ಮಿಕ್ಕ ನಾಲ್ಕು ಅವಯವಗಳನ್ನು ಹೇಗೆ ಇಡಬೇಕೆಂಬುದನ್ನು ವಿವರಿಸಲಾಗಿದೆ. ಇನ್ನೊಂದು ಉದಾ: ಬಲಗಾಲನ್ನು ಮಡಚಿ, ಎಡಗಾಲನ್ನು ಹಿಂದೆ ದೂರ ಚಾಚಿ ಶಸ್ತ್ರವನ್ನು ಹಿಡಿಯುವುದು ಆಲೀಢ ಸ್ಥಾನ. ಈ ಬೇರೆ ಬೇರೆ ಸ್ಥಾನ(ಭಂಗಿ)ಗಳಿಂದ ನಿಂತಾಗ ಸೊಂಟ, ಪಾದ, ಎದೆ, ತಲೆ ಇವುಗಳನ್ನು ಭಾರತೀ, ಸಾತ್ವತೀ, ಕೈಶಿಕೀ ವೃತ್ತಿಗಳ ನಾಟ್ಯದಲ್ಲಿ ಬೇರೆ ಬೇರೆಯಾಗಿ ಇಡಬೇಕು ಎಂದೂ ಹೇಳಲಾಗಿದೆ." ಇದು ಸತ್ಯವೂ ಹೌದು.

ಗದಾಯುದ್ಧದ ಸಂದರ್ಭದಲ್ಲಿ ವೈಶಾಖಸ್ಥಾನದ ಪ್ರಸ್ತಾಪ ಬಂದಿದೆ. ಎಂಟುಂ ತೆಱದ ಪ್ರಹರಣಗಳೊಳಂ ಅತಿಪರಿಚಿತರಾಗಿ

......................ವೈಶಾಖಸ್ಥಾನದೊಳ್ ನಿಂದು.........................(ಗ.ಯು. ೮-೧ ವಚನ) ಎಂದಿದೆ.

ಇಲ್ಲಿ ವೈಶಾಖಸ್ಥಾನ=ಸಮಪಾದದ ಒಂದು ಭಂಗಿ ಎಂಬರ್ಥವಿದೆ.

*ವಿವರಗಳಿಗೆ ನೋಡಿ: ಆದ್ಯರಂಗಾಚಾರ್ಯ ೧೯೮೩ ಶ್ರೀರಂಗ ನಾಟ್ಯಶಾಸ್ತ್ರ ಸಂಗ್ರಹ ಪುಟ. ೬೦೭.*

**೬೭೨. ವೈಷ್ಣವ**

"**ವೈಷ್ಣವದಿಂ ಮುರಾಂತಕಂ**" ಎಂದು ಪಂಪ ಭಾರತದಲ್ಲಿ ಬರುತ್ತದೆ.

(ಪಂಪ ಭಾರತ ೯-೬೦)

ವಿಷ್ಣುವಿನ ಶಕ್ತಿಯೇ ವೈಷ್ಣವ.

ವೈಷ್ಣವ=ವಿಷ್ಣುವಿನ ಆರಾಧಕ, ಭಕ್ತ ಎಂಬ ಅರ್ಥದಲ್ಲಿಯೂ ಬಳಕೆಯಲ್ಲಿದೆ. (ವೈಷ್ಣವರು)

ವೈಷ್ಣವ=ವಿಷ್ಣು ಸಂಬಂಧಿಯಾದ.

ಹಾಗೆಯೇ ವೈಷ್ಣವಾಸ್ತ್ರವು ಭಗದತ್ತನಿಂದ ಅರ್ಜುನನ ಮೇಲೆ ಪ್ರಯೋಗಿಸಲ್ಪಟ್ಟಿತು. ಇದು ವರಹಾವತಾರದ ಕಾಲದಲ್ಲಿ ಭೂದೇವಿಗೆ ವರಾಹನ ದಾಡೆ ಕೊಡಲ್ಪಟ್ಟಿತು. ಆಕೆಯಿಂದ ಈ ಅಸ್ತ್ರವು ತನ್ನ ಮಗನಾದ ನರಕಾಸುರನಿಗೆ; ಅನಂತರ ಅವನ ಮಗ ಭಗದತ್ತನಿಗೆ ಕೊಡಲ್ಪಟ್ಟಿತು. ಅವನಿಂದ ಶ್ರೀ ಕೃಷ್ಣನ ಕೈ ಸೇರಿತು. ವೈಷ್ಣಾಗಮಗಳಿಗೆ ವಿಷ್ಣುವೇ ಪರಬ್ರಹ್ಮ. ವೈಷ್ಣವ ಪಂಥದಲ್ಲಿ ವಿಷ್ಣುವೇ ವೇದಪುರುಷ. ಅವನಿಗೆ(ಯಜ್ಞಕ್ಕೆ ಸಂಬಂಧಿಸಿದಂತೆ) ಯಜ್ಞ ನಾರಾಯಣ ಎಂದು ಕರೆಯುತ್ತಾರೆ. ನಾರಾಯಣ, ವಾಸುದೇವ, ವಿಷ್ಣುಕಲ್ಪನೆಗಳು ಇದರಲ್ಲಿ ಬರುತ್ತವೆ. ಶತಪಥ ಬ್ರಾಹ್ಮಣ, ಮಹಾಭಾರತ, ಭಗವದ್ಗೀತೆ, ಭಾಗವತ ಪುರಾಣಗಳು ವಿಷ್ಣು ಕೇಂದ್ರಿತ. ವೈಷ್ಣವರಲ್ಲಿ ನಾಲ್ಕು ಪಂಥಗಳು: ಶ್ರೀ ಸಂಪ್ರದಾಯ(ವಿಶಿಷ್ಟಾದ್ವೈತ) ಬ್ರಹ್ಮ ಸಂಪ್ರದಾಯ-ತತ್ವವಾದ(ದ್ವೈತ) ರುದ್ರ ಸಂಪ್ರದಾಯ (ಶುದ್ಧಾದ್ವೈತ) ಸನಕ ಸಂಪ್ರದಾಯ(ದ್ವೈತಾ ದ್ವೈತ) ಎಂದು ಭಾರತೀಯ ತತ್ವಶಾಸ್ತ್ರ ಪ್ರವೇಶದಲ್ಲಿ ಬರುತ್ತದೆ.

ಜಲಶಾಯಿ : ನಾಗಸ್ವರೂಪೀ 'ವಿಷ್ಣ'ವು ಚಂದ್ರರೂಪವೇ ಹೊರತು ಸೂರ್ಯನಾಗಲು ಶಕ್ಯವಿಲ್ಲ. 'ಸೂರ್ಯ -ನಾರಾಯಣ' ಎಂಬ ರೂಢಿಯ ಮಾತಿನಲ್ಲಿ 'ನಾರಾಯಣ' ಎಂಬುದು ಸೂರ್ಯನ ಪರ್ಯಾಯನಾಮ, ಎಂಬ ಹಾಗಿನ ಸಂಭ್ರಮಕ್ಕೆ ಅವಕಾಶವನ್ನು ಕಲ್ಪಿಸಲಾಗಿದೆ. ಇದು ಶಂಬಾ ಅವರ ಅಭಿಪ್ರಾಯ.

ಶ್ರೀಮದ್ ಭಗವದ್ಗೀತೆಯ ತಳಹದಿಯಲ್ಲಿ ನಾಗ : ಸರ್ ಪ ತತ್ವಜ್ಞಾನವೇ ಇರಲಿಕ್ಕೆ ಬೇಕೆಂಬುದನ್ನು ಅಲ್ಲಗಳೆಯಲಿಕ್ಕೆ ಆಗುವುದಿಲ್ಲ 'ಕಾಲೋಸ್ಮಿ' ಎಂದು ತಾನೇ ಸಾರಿ-ಸಾರಿ ಹೇಳುತ್ತಿರುವ ವಿಷ್ಣು: (ಕೃಷ್ಣ), ಕಾಲ: ಸರ್‌ಪ ಎಂಬುದನ್ನು ಸಿದ್ಧಪಡಿಸುವ ಆವಶ್ಯಕತೆಯುಂಟೆ? ಇಷ್ಟರಿಂದಲೇ ಸಮಾಧಾನವಾಗದವರು ವಿಷ್ಣುವಿನ ಪರ್ಯಾಯ ನಾಮಾವಳಿಯನ್ನು ನೋಡಬಹುದು; 'ಅನಂತ': ಹಾವಿನ ರೂಪ; ಹಾವಿನ ಮೇಲೆ

ಒದಗಿರುವ ವಿಷ್ಣುವನ್ನು ನಾನಾ ಚಿತ್ರ, ಮೂರ್ತಿ ರೂಪದಲ್ಲಿ ನೋಡಲು ದೊರೆಯುತ್ತದೆ.

ನಾಗಭೂಷಣ: ರುದ್ರ; ಅನಂತ : ನಾರಾಯಣನು ವಿಷ್ಣು, ದುರ್ಗೆ, ಕಾಲಿ: (ಸರ್ಪಿಣಿ) ದೇವಿ ಈ ಪರ್ಯಾಯನಾಮಗಲು ನಮ್ಮ ದೈವತ ಪ್ರತಿಮೆಗಳ ಮೂಲ ಆಕೃತಿಯನ್ನು ಬೆಳಕಿನಲ್ಲಿ ತರುತ್ತಿವೆ ಎಂಬುದು, ಸಂಶೋಧನ ಪದ್ಧತಿಯ ಒಂದು ಆಧುನಿಕ ಸೂತ್ರ; ತಂತ್ರದಿಂದಲೂ ಹೀಗೆ ನಿರ್ಧರಿಸಲ್ಪಡುತ್ತಿದೆ ಎಂದು ಶಂಬಾ ಹೇಳುತ್ತಾರೆ.

*ವಿವರಗಳಿಗೆ ನೋಡಿ: ಪ್ರಭಾಕರ ಜೋಶಿ .ಎಂ ೨೦೦೮ ಭಾರತೀಯ ತತ್ವಶಾಸ್ತ್ರ ಪ್ರವೇಶ*
*ಶಂಬಾ ಜೋಶಿ ೧೯೯೯ ಸಂಪುಟ. ೪ ಪುಟ. ೧೫೬, ೧೭೩, ೧೭೪.*

**೬೭೩. ವೈಷ್ಣವಾಸ್ತ್ರ**

*.............ನಾರಾಯಣಾಸ್ತ್ರಮಂ ನಾರಾಯಣನುಪಾಯದೊಳೆಗೆಲ್ದ ನನ್ನೆಗಂ*

*(ಪಂಪ ಭಾರತ ೧೨-೩೨ ವ)*

ಅಂದು ಬಾಳನೊಳಗಿನ ಜೀವನ-ಮೂಲ್ಯಗಳಾಗಿ 'ಅಹಿ' ಸ್ವರೂಪೀ ಶತ್ರುವನ್ನು ಎದುರಿಸುವವನೆಂಬ ದೈವತ ಪ್ರತಿಮೆಯನ್ನು ಎಂದರೆ ಇಂದ್ರನನ್ನು, ಭ್ರಷ್ಟಗೊಳಿಸಿದ ಈ ನಾರಾಯಣೀಯ ಅಸ್ತ್ರ: ವಿಷ್ಣುಮಾಯೆ ಅಮೋಘವಲ್ಲವೆ? ಎಂದು ಶಂಬಾ ಅಭಿಪ್ರಾಯ. ಅಸ್ತ್ರಗಳಲ್ಲಿ ಬೇರೆ ಬೇರೆ ಮಾದರಿಗಳಿರುವುದು ಗಮನಾರ್ಹ: ಇಂದ್ರಾಸ್ತ್ರ ಆಗ್ನೇಯಾಸ್ತ್ರ; ವರುಣಾಸ್ತ್ರ ಇತ್ಯಾದಿ. ಅಸ್ತ್ರಗಳು ಆಯಾಗುಣ ಧರ್ಮಗಳನ್ನು ಸೂಚಿಸುತ್ತವೆ. ವರುಣಾಸ್ತ್ರ-ಮಳೆ; ಆಗ್ನೇಯಸ್ತ್ರ-ಬೆಂಕಿ; ಸರ್ಪಾಸ್ತ್ರ-ಸರ್ಪಭಾಣ; ಇತ್ಯಾದಿ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೪ ಪುಟ. ೪೨೭*

**೬೭೪. ವ್ಯೂಹ**

'ಗೋಪಕುಮಾರರಣಿಯ ನಡುವೆ' ಎಂದು ಪಂಪ ಭಾರತದಲ್ಲಿ ಬರುತ್ತದೆ.

(ಪಂಪ ಭಾರತ ೧೦-೫೭ ವ)

ಅಣಿಯೆಂದರೆ ಪದಾತಿ ಸೈನ್ಯ. ಪದಾತಿ ಸೈನ್ಯ ನೆಲದ ಮೇಲೆ ನಿಂತು ಯುದ್ಧ ಹೂಡುವವರು. ಇವರನ್ನು ಕಾಲಾಳುಗಳು ಎಂದು ಕರೆಯುತ್ತಾರೆ. ಯುದ್ಧದ ಸಂದರ್ಭದಲ್ಲಿ ಮೊದಲು ಎದುರು ಇರುವುದು ಪದಾತಿ ಸೈನ್ಯ. ಅದರ ಅನಂತರ ಅಶ್ವಾರೋಹಿ; ಮತ್ತು ಆನೆಯ ಮೇಲೆ ನಿಂತು ಯುದ್ಧ ಮಾಡುವವರು. ತರುವಾಯ ರಥಾರೋಹಿಗಳು.

(ಪಂಪ ಭಾರತ-೩-೬೭, ೮೯, ೧೦೫೧)

ಭೀಷ್ಮನದು ಮಕರ ವ್ಯೂಹ. ಅದರೆದುರು ಇರುವುದು ಸೂಚಿವ್ಯೂಹ.

(ಪಂಪ ಭಾರತ ೧೦-೫೨ ವ)

ಯುದ್ಧದಲ್ಲಿ ಮೊದಲು ಕಾಲಾಳು ಪಡೆ. ಅದರ ಹಿಂದೆ ಗಜ ನಡುವೆ ರಥ. ರಾಜನ ಎರಡೂ ಭಾಗಗಳಲ್ಲಿ ಶ್ರೇಷ್ಠವಾದ ಕುದುರೆಗಳು ಇರುತ್ತವೆ. ಸೂಚ್ಯಗ್ರದಂತೆ ಮುಂಭಾಗದಲ್ಲಿ ನಿಯಮಿತವಾದ ಕೆಲವೇ ಸೈನಿಕರನ್ನಿಟ್ಟು ಸೇನಾಪತಿಗಳ ಸಂಕೇತಗಳಿಗೆ

ಅನುಸಾರವಾಗಿ ಕೆಲವುಸೈನಿಕರು ಧನುಷ್ಯಗಳನ್ನು ಧರಿಸಿ ಮುಂದೆ ಸಾಗಬೇಕು ಎಂದು ಅಥರ್ವವೇದದಲ್ಲಿ ಬರುತ್ತದೆ. (೧-೨೭-೨)

ಯಜುರ್ವೇದದಲ್ಲಿ ಹೀಗೆ ಬರುತ್ತದೆ: ಸೇನಾನಾಯಕನಾಗಿ ಇಂದ್ರನ ಜೊತೆಗೆ ಅವನ ಮಂತ್ರಿಯಾದ ಬೃಹಸ್ಪತಿಯಿರಲಿ. ಯಜ್ಞಪುರುಷನು ದಕ್ಷಿಣಭಾಗದಲ್ಲಿ, ಸೋಮನು ಮುಂಭಾಗದಲ್ಲಿ ಅಥವಾ ಯಜ್ಞ ಸೋಮರು ಸೇನೆಯ ಬಲಭಾಗದಲ್ಲಿ ಮುನ್ನಡೆಯುತ್ತಿರಲಿ.

ಬೇರೆ ಬೇರೆ ರೀತಿಯ ವ್ಯೂಹಗಳಿವೆ – ಗರುಡ, ಮಕರ, ಶ್ಯೇನ, ಅರ್ಧಚಂದ್ರ, ವಜ್ರ, ಮೆಂಡ, ಸರ್ವತೋಭದ್ರ, ಚಕ್ರ, ಸೂಚೀ, ಪದ್ಮ ಇತ್ಯಾದಿ.

ಯುದ್ಧದ ಸಂದರ್ಭದಲ್ಲಿ ವ್ಯೂಹ ರಚನೆಯ ಸಂದರ್ಭದಲ್ಲಿಯೂ ಇದು ಪ್ರಧಾನ ಪಾತ್ರ ವಹಿಸುತ್ತದೆಯೆಂಬುದು ಗಮನಾರ್ಹ.

ದಂಡ, ಶಕಟ, ವರಾಹ, ಮಕರ, ಸೂಚಿ, ಗರುಡ ಎಂಬ ಆಕೃತಿಯಲ್ಲಿ ಸೇನಾರಚನೆಯನ್ನು ಮಾಡಬಹುದು. ಎದುರು ಸೇನಾಧ್ಯಕ್ಷನು, ಮಧ್ಯದಲ್ಲಿ ರಾಜನು, ಹಿಂದೆ ಸೇನಾಪತಿ, ಪಕ್ಕಗಳಲ್ಲಿ ಆನೆ, ಕುದುರೆಗಳು, ಕಾಲಾಳುಗಳು –ಹೀಗೆ ದೋಣ್ಣೆಯಂತೆ ನಿಲ್ಲಿಸಿ ಮಾಡುವ ವ್ಯೂಹವು ದಂಡವ್ಯೂಹ. ಶತ್ರು ಭಯವು ಸುತ್ತಲಿನಿಂದ ಇದ್ದರೂ ಅದರ ರಕ್ಷಣೆಗೆ ಈ ವ್ಯೂಹವು ಉಪಯೋಗಿಯು. ಸೂಚೀ ವ್ಯೂಹವು ಹಿಂದೆ ದೊಡ್ಡದಾದರೆ ಅದು ಶಕಟವ್ಯೂಹ. ಅದು ಹಿಂದಿನಿಂದ ಭಯವಿದ್ದರೆ, ಎರಡು ತುದಿ ಕೃಶವಾಗಿ ನಡು ಅಗಲವಾದರೆ ವರಾಹ ವ್ಯೂಹ. ನಡು ಇನ್ನೂ ದೊಡ್ಡದಾದರೆ ಗರುಡ ವ್ಯೂಹ. ಪಾರ್ಶ್ವಭಯ ನಿವಾರಕವು. ನಡು ಸಣ್ಣದು ತುದಿ ದೊಡ್ಡದು ಇದ್ದರೆ ಮಕರವ್ಯೂಹ. ಇದು ಹಿಂದೆ–ಮುಂದೆ ಭಯವಿದ್ದರೆ ಇರುವೆ ಸಾಲಿನಂತೆ ಪಿಪೀಲಿಕಾ ವ್ಯೂಹ. ಇದು ಎದುರಿನ ಭಯ ಶತ್ರು ಸೇನಾಭೇದಗಳಿಗೆ ನಿವಾರಕವು ಎಂದು ಮನು ಹೇಳುತ್ತಾನೆ.

ಸೂಚ್ಯಗ್ರಹದಂತೆ ಮುಂಭಾಗದಲ್ಲಿ ನಿಯಮಿತವಾದ ಕೆಲವೇ ಸೈನಿಕರನ್ನು ಇಟ್ಟುಕೊಂಡು ಸೇನಾಪತಿಗಳ ಸಂಕೇತಕ್ಕೆ ಅನುಸಾರವಾಗಿ ಕೆಲವು ಸೈನಿಕರು ಧನುಸ್ಸನ್ನು ಧರಿಸಿ ಮುಂದೆ ಎಂದು ಅರ್ಥವೇದದಲ್ಲಿ ಬರುತ್ತದೆ. (೧-೨೩-೨)

*ವಿವರಗಳಿಗೆ ನೋಡಿ: ವೇದವ್ರತ ವೈಶಂಪಾಯನ ೧೯೮೪ ಋಗ್ವೇದ ಪುಟ. ೧೯೭*

*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೭-೧೮೭.*

**೬೭೫. ವ್ರತ**

*ವ್ರತದಿಂದಂ ಪಡೆದಿಂದ್ರಲೋಕವಿಭವಂ ಮುನ್ನಾದ ದೇವಾಂಗನಾ. . .*

*(ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೨-೭೬)*

ವ್ರತವನ್ನು ಬ್ರತ; ನೋಂಪಿಯೆಂದೂ ಕರೆಯುತ್ತಾರೆ. ವ್ರತವೆಂದರೆ ಆಚಾರ–ವಿಚಾರಗಳಲ್ಲಿ ಶುದ್ಧಿಯನ್ನು ಕಾಪಾಡಿಕೊಳ್ಳುವುದು. ಋತ ಎನ್ನುವುದಕ್ಕೂ ವ್ರತವೆಂಬ ಅರ್ಥವಿದೆ. ವ್ರತವೆನ್ನುವುದು ಎರಡು ಅರ್ಥಗಳಲ್ಲಿ ಬಳಕೆಯಾಗುತ್ತವೆ; ಒಂದು–

ಏಕಾಗ್ರ ನಿಷ್ಠೆಯಿಂದ ಮಾಡುವ ತಪಸ್ಸು. ಎರಡನೆಯದು ನಿಷ್ಠೆ. ಉದಾ: ಪತಿವ್ರತೆ– ಪತಿಯನ್ನೇ ಅವಲಂಬಿಸಿಕೊಂಡು ಅವನಿಂದ ಹೊರತುಪಡಿಸಿ ಬೇರೆ ಯಾರನ್ನೂ ಚಿಂತಿಸದಿರುವವಳು. ವ್ರತವು ಅಂತರಂಗ ಮತ್ತು ಬಹಿರಂಗ ಶುದ್ಧಿಯನ್ನು ಬಯಸುತ್ತದೆ.

ಹಿಂಸಾ ಹಿನ್ರೃತಸ್ತೇಯಾ ಬ್ರಹ್ಮಪರಿಗ್ರಹೇಭ್ಯೋವಿರತಿರ್ವ್ರತಂ ।

ಹಿಂಸೆ, ಕಳವು, ಅಸತ್ಯ, ಅಬ್ರಹ್ಮ ಮತ್ತು ಪರಿಗ್ರಹದಿಂದ ವಿರಕ್ತವಾಗುವುದೇ ವ್ರತವೆನಿಸುತ್ತದೆ. (ತ.ಸೂ ೭–೧)

## ಶ

**೬೭೬. ಶಕುನ**

*ಬಿಡೆ ತಿರ್ದಿದ* **ಶಕುನ***ದ ನಯ*

*ದಡಿವಿಡಿದು ಪುರೋಹಿತಂ ನೃಪಂಗೀ ನುಡಿಯಂ....*

*(ಕೆ.ಎಲ್. ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೫–೬)*

ಶಕುನಶಾಸ್ತ್ರ (ವಡ್ಡಾರಾಧನೆ ಟಿ. ಕೇಶವಭಟ್ಟ ೨೦೧೦. ಪು. ೧೫೮)ದ ಲಕ್ಷಣ ಅಂಗ, ಸ್ವರ, ವ್ಯಂಜನ, ಭೌಮ, ಅಂತರಿಕ್ಷ, ಸ್ವಪ್ನಚಿಹ್ನ. ಶಕುನಗಳು ಎರಡು ಬಗೆ– ಒಂದು ಶುಭಶಕುನ ಮತ್ತೊಂದು ಅಪಶಕುನ. ಶುಭಶಕುನದಿಂದ ಶುಭ ದೊರೆಯುತ್ತದೆ. ಅಪಶಕುನದಿಂದ ಕೆಟ್ಟದಾಗುತ್ತದೆಯೆಂಬ ನಂಬಿಕೆಯಿದೆ. ಶಕುನದ ಬಗೆಗಿನ ನಂಬಿಕೆಗಳು ಎಲ್ಲಾ ಜನಾಂಗ ಮತ್ತು ದೇಶಗಳಲ್ಲಿ ಇರುತ್ತದೆ. ಬೆಕ್ಕು ಅಡ್ಡ ಹೋದರೆ; ಸೌದೆ ಹೊರುವವನು ದಾರಿಯಲ್ಲಿ ಸಿಕ್ಕಿದರೆ; ಹಲ್ಲಿಯು ಮೈಮೇಲೆ ಬಿದ್ದರೆ; ಕಾಗೆಯು ನೀರು ಕುಡಿಯುವುದನ್ನು ನೋಡಿದರೆ; ಎಡಮಗ್ಗುಲಲ್ಲಿ ಎದ್ದರೆ; ಹೊರಡುವಾಗ ಯಾರಾದರೂ ಎಲ್ಲಿಗೆ ಎಂದು ಕೇಳಿದರೆ ಅದಕ್ಕೆ ಅಪಶಕುನವೆಂದು ಕರೆಯುತ್ತಾರೆ. ನರಿಯ ಮುಖ ನೋಡಿದರೆ; ಬಲಗಣ್ಣು ಅದುರಿದರೆ; ದಾರಿಯಲ್ಲಿ ಕಬ್ಬಿಣ ಸಿಕ್ಕಿದರೆ ಅವುಗಳನ್ನು ಶುಭ ಶಕುನಗಳೆಂದು ಕರೆಯುತ್ತೇವೆ. ಇವು ನಂಬಿಕೆಗಳು ಮಾತ್ರ.

...............ಬೇಗದೊಳುರ್ವರಾಸ್ಯ ತಿಲಕಂಗತ್ಯುನ್ನತಂ ದಕ್ಷಿಣಾಂ

ಸದ ಬದ್ಧಶ್ಲಥ ಬಾಹುಕೀರ್ತಿ ಕಳೆದತ್ತಂದಾದ ಸಂದೇಹಮಂ ॥

(ಶಾಂತಿಪುರಾಣ ೫–೧೪೮)

ಬಲದೋಳು ಸ್ಫುರಿಸುವುದು ಶುಭಶಕುನವೆಂದು ಪೊನ್ನ ಬರೆಯುತ್ತಾನೆ.

ಕೆಲವು ಕಡೆಗೆ ಅಭಿಚಾರಕ ಸೂಕ್ತಗಳಲ್ಲಿ (ಹತ್ತನೆಯ ಮಂಡಲ) ವಾಮಾಚಾರದ ಮಾರ್ಗವನ್ನು ಅನುಸರಿಸಿದಂತೆ ಕಂಡುಬರುತ್ತದೆ. ಪರಿಸರದಲ್ಲಿಯ ಅಶುಭ ಘಟನೆಗಳ ಪೂರ್ವಸೂಚಿತ ಶಕುನವನ್ನು ಕೆಲವು ಹಕ್ಕಿಗಳು ನುಡಿಯುತ್ತವೆ. ಇಂಥ ಹಕ್ಕಿಗಳ ಶಕುನವನ್ನಾಲಿಸಿದಾಗ ರಕ್ಷಣಾರ್ಥವಾಗಿ ಕೆಲವು ವಿಶಿಷ್ಟ ಸೂಕ್ತಗಳನ್ನು ಜಪಿಸಬೇಕೆಂದು

ವಿಧಿಸಲಾಗಿದೆ. ಮರಣ ಶಯ್ಯೆಯಿಂದ ಮನುಷ್ಯನನ್ನು ಬದುಕಿಸುವ ಸಲುವಾಗಿ ಹೇಳಬೇಕಾದ ಮಂತ್ರಗಳು ಹತ್ತನೆಯ ಮಂಡಲದ ೫೮ ಮತ್ತು ೬೦ ನೆಯ ಸೂಕ್ತದಲ್ಲಿವೆ. ರೋಗೋಚ್ಚಾಟನೆಗಾಗಿಯೂ ದೇವತೆಗಳನ್ನು ಪ್ರಾರ್ಥಿಸಿದ್ದಾರೆ.

*ವಿವರಗಳಿಗೆ ನೋಡಿ: ಶೇಷನವರತ್ನ ೨೦೦೮ ಯಜುರ್ವೇದ ಪುಟ. ೯೬.*

**೬೭೭. ಶರೀರ**

*ಧನಮಂ ಮಿತ್ರನಂ ಹೆಂಡತಿಯಂ ಭೂಮಿಯಂ ಇವೆಲ್ಲಮಂ ಮರಳಿ ಹಡೆಯಬಹುದು,*

*ಶರೀರಮೆಂಬುದಂ ಮರಳಿ ಹಡೆಯಲ್ಬಾರದು.*

*(ಭೇದ ಪ್ರಕರಣ, ಶ್ಲೋಕ ೧೦೩)*

ಶರೀರವನ್ನು ಮರಳಿ ಪಡೆಯಲಾಗದು, ಧನವನ್ನು, ಮಿತ್ರರನ್ನು, ಭೂಮಿಯನ್ನು, ಹೆಂಡತಿಯನ್ನು ಮರಳಿ ಪಡೆಯಬಹುದು. ಆದರೆ ಸತ್ತ ಮೇಲೆ ಪುನಃ ದೇಹವನ್ನು ಪಡೆಯಲು ಬರುವುದಿಲ್ಲವೆಂದು ಕರ್ಣಾಟಕ ಪಂಚತಂತ್ರದಲ್ಲಿ ಬರುತ್ತದೆ

ಈ ಶರೀರದಲ್ಲಿರುವ ಜೀವಾತ್ಮನು ಬಾಲ್ಯ, ಯೌವನ, ಮುಪ್ಪಿಗೆ ಸಾಗಿ ಮತ್ತೊಂದು ದೇಹಕ್ಕೆ ಹೋಗುತ್ತಾನೆ. (ಭಗವದ್ಗೀತೆ ೨–೧೩) ಶರೀರದಲ್ಲಿ ಐದು ಸೂಕ್ಷ್ಮಭೂತಗಳು, ಅಹಂಕಾರವು ಮಹತ್ತತ್ವವು ಅವ್ಯಕ್ತವು. ಹತ್ತು ಇಂದ್ರಿಯಗಳು ಹನ್ನೊಂದನೆಯದಾದ ಮನಸ್ಸು ಐದು ಇಂದ್ರಿಯಗಳಿಗೆ ಗೋಚರವಾಗುವ ವಿಷಯಗಳು ಸೇರಿಕೊಂಡಿರುತ್ತವೆ. (ಭಗವದ್ಗೀತೆ – ೧೩–೬,೭) ಪ್ರಕೃತಿಯಿಂದ ಬಂದಿರುವ ಸತ್ವ, ರಜಸ್ಸು, ತಮಸ್ಸುಗಳೆಂಬ ಗುಣಗಳು ಶರೀರವನ್ನು ಕಟ್ಟಿಹಾಕುತ್ತವೆ. (ಭಗವದ್ಗೀತೆ –೧೪–೫) ಶರೀರಗಳು ಬೇರೆ ಬೇರೆಯಾಗಿ ಕಂಡು ಬಂದರೂ ಅವೆಲ್ಲವುಗಳನ್ನ ಒಬ್ಬನೇ ಆತ್ಮನು ವ್ಯಾಪಿಸಿರುತ್ತಾನೆ. (ಭಗವದ್ಗೀತೆ ೧೮–೨೦) ಶರೀರವು ಧರ್ಮಸಾಧನವೂ ಹೌದು. ಆದರೆ ಜೈನಧರ್ಮದ ಪ್ರಕಾರ ಶರೀರ ದಂಡನೆಯೂ ಮೋಕ್ಷದ ಹಾದಿಯಾಗಿದೆ.

*ವಿವರಗಳಿಗೆ ನೋಡಿ: ಡಿ.ವಿ.ಜಿ. ೧೯೯೬ ಭಗವದ್ಗೀತೆ ೧೮–೨೦.*

**೬೭೮. ಶವ ಸಂಸ್ಕಾರ**

*ಆಗಳ್ ಮಂತ್ರಿಪುರೋಹಿತಸೇನಾನಾಯಕಾಂತಃಪುರಾವರೋಧಜನಂಗಳ್ ಹಾಹಾ ಕರುಣ ಧ್ವನಿಬಧಿರಿತಾಶಾವಳಯರರಸಂಗಮ ರಸಿಯರ್ಗಂ ಸತ್ಯಭಾಮೆಗಂ ಶರೀರಪೂಜೆಯಂ ಮಾಡಿ ಕರ್ಪೂರಾಗರು ತುರುಷ್ಕ ಚಂದನ ಹರಿಚಂದನಾದಿ ನಾನಾವಿಧ ಸುರಭಿತರೇಂಧನಂಗಳೊಳ್ ಶರೀರ ಸಂಸ್ಕಾರ ವಿಧಿಯಂ ವಿಧಿಪೂರ್ವಕಂ ನಿರ್ವರ್ತಿಸಿ ರಾಜ್ಯಾರ್ಹನಪ್ಪಿಂದ್ರನ ಮಗಂ ಚಂದ್ರನಂ ಧರಾಭಾರ ಧುರಂಧರಂ ಮಾಡಿದರಿತ್ತ ಶ್ರೀಷೇಣಂಗಮಾ ಮೂವರುಮಂಗನೊತ್ತಮೆಯರ್ಗಮುತ್ತಮಪಾತ್ರದಾನದ ದಾನಾನುವೋದದ್ಧ ಭೂತಪುಣ್ಯದಿಂ ಧಾತಕೀಷಂಡದ ಮೂಡಣ ಮಂದರುತ್ತರದಿಗ್ಭಾಗ*

ದೊಳುತ್ತರ ಕುರುವೆಂಬುತ್ತಮ ಭೋಗಭೂಮಿ ಸಮುತ್ಪತ್ತಿಸ್ಥಾನಮಾದುದಲ್ಲಿ...... *(ಶಾಂತಿಪುರಾಣ, ೬-೯೭ವ)*

ಇದನ್ನು ಹೊಸಗನ್ನಡಕ್ಕೆ ಹಂ.ಪ.ನಾ.ಹೀಗೆ ಅನುವಾದಿಸಿದ್ದಾರೆ:

ಆಗ ಮಂತ್ರಿ, ಪುರೋಹಿತ, ಸೇನಾಪತಿ, ಅಂತಃಪುರದ ಸ್ತ್ರೀಯರು ಮುಂತಾದವರೆಲ್ಲರೂ ಕರುಣಾಜನಕವಾದ ಹಾಹಾಕಾರದಿಂದ ದಿಕ್ಕುಗಳೆಲ್ಲ ಕಿವುಡು ಬೀಳುತ್ತಿರಲಾಗಿ ಅರಸನಿಗೂ, ಅರಸಿಯರಿಗೂ, ಸತ್ಯಭಾಮೆಗೂ ಕಳೇವರ ಪೂಜೆಮಾಡಿ ಕಪ್ಪುರ, ಅಗರು, ಶ್ರೀಗಂಧ, ಹರಿಚಂದನ ಮೊದಲಾದ ಶ್ರೀಗಂಧದ ಇಂಧನಗಳನ್ನೊಟ್ಟಿ ಆ ದೇಹಗಳಿಗೆ ವಿಧಿವತ್ತಾಗಿ ಅಗ್ನಿಸಂಸ್ಕಾರವನ್ನು ನೆರವೇರಿಸಿದರು. ಇಂದ್ರನ ಮಗನಾದ ಚಂದ್ರನೆಂಬವನಿಗೆ ಪಟ್ಟಿಗಟ್ಟಿ ರಾಜ್ಯಾಧಿಕಾರವನ್ನಿತ್ತರು. ಇತ್ತ ಶ್ರೀಷೇಣನಿಗೆ ಉತ್ತಮವಾದ ಪಾತ್ರದಾನದ ಪುಣ್ಯವೂ ಆ ಮೂವರೂ ಸ್ತ್ರೀಯರಿಗೆ ದಾನಾನುಮೋದದ ಪುಣ್ಯವೂ ಲಭಿಸಿ ಅವರೆಲ್ಲರಿಗೆ ಧಾತಕೀಷಂಡದ ಪೂರ್ವಮಂದರಕ್ಕೆ ಉತ್ತರ ದಿಕ್ಕಿನಲ್ಲಿರುವ ಉತ್ತರಕುರುವೆಂಬ ಭೋಗಭೂಮಿಯಲ್ಲಿ ಜನ್ಮವಾಯಿತು.

ಇವುಗಳಲ್ಲಿ ಎರಡು ವಿಷಯಗಳು ಮುಖ್ಯವಾಗಿವೆ. ಒಂದನೆಯದಾಗಿ ಅಗ್ನಿಸಂಸ್ಕಾರದ ವಿಷಯದ ವಿಷಯ. ಭಾರತದಲ್ಲಿ ಶವಸಂಸ್ಕಾರಗಳು ಎರಡು ರೀತಿಯಲ್ಲಿ ನಡೆಯುತ್ತವೆ: ಒಂದು ಅಗ್ನಿ ಸಂಸ್ಕಾರ. ಹೆಣವನ್ನು ಸುಡುವ ಪದ್ಧತಿ. ಇನ್ನೊಂದು ಹೆಣವನ್ನು ಹೂಳುವ ಪದ್ಧತಿ. ಆದರೆ ಈ ಎರಡೂ ಸಂಸ್ಕಾರಗಳಿದ್ದರೂ ಸತ್ತ ನಂತರ ಮರುಹುಟ್ಟು ಇದೆಯೆಂದು ಕೆಲವು ಮತಗಳು ವಾದಿಸುತ್ತವೆ. ಮತ್ತೆ ಕೆಲವರ ಪ್ರಕಾರ ಯಾರು ಲೌಕಿಕದಲ್ಲಿ ಪುಣ್ಯಮಾಡಿರುತ್ತಾರೋ ಅವರು ಸ್ವರ್ಗ ಸೇರುತ್ತಾರೆ. ಆದರೆ ಜೈನಧರ್ಮದ ಪ್ರಕಾರ ಮರುಜನ್ಮವಿದೆ.

ವಿಧವೆಯರಾದ ಅನೇಕ ಸ್ತ್ರೀಯರು ತಮ್ಮ ಪತಿಗಳ ಶವಸಂಸ್ಕಾರ ವಿಧಿಯನ್ನು ನೆರವೇರಿಸುವ ಸನ್ನಿವೇಶವು 'ಪಂಪ ಭಾರತ'ದಲ್ಲಿ ಉಕ್ತವಾಗಿದೆ (೧೪-೮). ಇದರಿಂದ ವಿಧವೆಯರು ಬದುಕಿ ಉಳಿಯುವುದು ಮಾತ್ರವೇ ಅಲ್ಲ, ಗಂಡನ ಶವಸಂಸ್ಕಾರವನ್ನೂ ಅವರೇ ಮಾಡುತ್ತಿದ್ದರು ಎಂದು ತಿಳಿಯಬಹುದಾಗಿದೆ.

*ವಿವರಗಳಿಗೆ ನೋಡಿ: ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರಿ ೧೯೯೯ ಶ್ರೀವತ್ಸ ನಿಘಂಟು*

**೬೭೯. ಶಾಕಟಿಕ**

*ಮತ್ತೊಂದು ದಿವಸಂ ಪಲಂಬರ* ***ಶಾಕಟಿಕ*** *ಪರದರುಂಬೆರಸು ಬಂಡಿಗಳೊಳ್......... ಧಾನ್ಯಮಂ ತೀವಿಕೊಂಡು (ಡಿ.ಎಲ್.ಎನ್. ೨೦೦೯ ಪುಟ.೭೬)*

ವಡ್ಡಾರಾಧನೆಯಲ್ಲಿ ಶಾಕಟಿಕ ಎನ್ನುವ ಪದ ಪ್ರಯೋಗವಿದೆ ಶಾಕಟಿಕ ಎಂದರೆ ಸರಕುಳ್ಳ ಬಂಡಿಯನ್ನು ನಡೆಸುವವನು. ಇದು ಉದ್ಯೋಗ ಸಂಬಂಧಿಯೂ ಹೌದು. ಹುಟ್ಟು ಹಾಕುವವನು ಅಂಬಿಗ ಸಾರಥ್ಯ ನಡೆಸುವವನು ಸಾರಥಿ ರಥ ನಡೆಯಿಸುವವನು ರಥಿಕನೆನ್ನುವಂತೆ.

೬೮೦. ಶಾಸನಗಳ ಪ್ರಾರ್ಥನಾ ಶ್ಲೋಕಗಳು

ಸಾಮಾನ್ಯವಾಗಿ ಕಾವ್ಯಗಳು ಪೀಠಿಕೆಯಿಂದ ಪ್ರಾರಂಭವಾಗುತ್ತವೆ. ಪೀಠಿಕಾಸಂಧಿಯು ದೇವರ ಸ್ಮರಣೆಯೊಂದಿಗೆ ಪ್ರಾರಂಭವಾಗುತ್ತದೆ. ಅಂತೆಯೇ ಆಯಾ ಮತಧರ್ಮಕ್ಕೆ ಅನುಸಾರ ಪೀಠಿಕಾಪದ್ಯಗಳು ಬೇರೆಯಾಗಿರುತ್ತವೆ. ಅಂತೆಯೇ ಶಾಸನಗಳಲ್ಲಿಯೂ ಕೂಡಾ ಆರಂಭದ ಶಾಸನಗಳಲ್ಲಿ ಮತ್ತು ಕೆಲವು ಚಿಕ್ಕ ಚಿಕ್ಕ ಶಾಸನಗಳಲ್ಲಿ ಬರಹದ ಆರಂಭದಲ್ಲಿಯೇ ಓಂ, ಸಿದ್ಧಂ, ಶ್ರೀ, ಸ್ವಸ್ತಿ, ಶ್ರೀ ಎಂಬ ಅಕ್ಷರಗಳನ್ನು ಗಮನಿಸಬಹುದಾಗಿದೆ. ಅನಂತರದ ಶಾಸನಗಳಲ್ಲಿ ಈ ಅಂಶಗಳ ಜೊತೆಗೆ, ಶಾಸನವನ್ನು ಯಾವ ವ್ಯಕ್ತಿ ಹಾಕಿಸಿರುತ್ತಾನೆಯೋ ಅಥವಾ ಯಾವ ದೇವಾಲಯಕ್ಕೆ ದತ್ತಿ ಬಿಡುತ್ತಾನೆಯೋ ಅಥವಾ ಯಾವ ಸಂಸ್ಥೆಗೆ ದತ್ತಿಬಿಡುತ್ತಾನೆಯೋ, ಆ ವ್ಯಕ್ತಿಯ, ದೇವಾಲಯದ, ಸಂಸ್ಥೆಯ ಪ್ರಕಾರ ಯಾವ ದೇವರು ಶ್ರೇಷ್ಠವೆಂದು ಭಾವಿಸಲಾಗಿರುತ್ತದೆಯೋ ಆ ದೇವರನ್ನು ಕುರಿತು ಶೋಕವಿರುತ್ತದೆ.

ಶಿವೋಪಾಸಕರ ಶಾಸನಗಳಲ್ಲಿ ಸಾಮಾನ್ಯವಾಗಿ,

ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ
ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ॥

ಎಂಬ ಶಿವನನ್ನು ಸುತ್ತಿಸುವ ಶ್ಲೋಕವು ಬರುತ್ತದೆ.

ಜಯತ್ಯಾವಿಷ್ಕೃತಂ ವಿಷ್ಣೋರ್ವಾರಾಹಂ ಕ್ಷೋಭಿತಾರ್ಣವಂ
ದಕ್ಷಿಣೋನ್ನತದಂಷ್ಟ್ರಾಗ್ರ ವಿಶ್ರಾಂತ ಭುವನಂ ವಪುಃ॥

ಎಂಬ ವಿಷ್ಣು ಸ್ತುತಿಯನ್ನು ಗಮನಿಸಬಹುದುದಾಗಿದೆ.

ಜೈನಧರ್ಮದ ಅನುಯಾಯಿಗಳ ಪರವಾದ ಶಾಸನಗಳಲ್ಲಿ

ಶ್ರೀಮತ್ಪರಮಗಂಭೀರ ಸ್ಯಾದ್ವಾದಾ ಮೋಘ ಲಾಂಛನಂ
ಜೀಯಾತ್ ತ್ರೈಲೋಕ್ಯನಾಥಸ್ಯ ಶಾಸನಂ ಜಿನಶಾಸನಂ॥

ಎಂಬ ಶ್ಲೋಕವನ್ನು ಗಮನಿಸಬಹುದಾಗಿದೆ.

ಕೆಲವು ಕನ್ನಡ ಶಾಸನಗಳಲ್ಲಿ ಈ ಸಂಸ್ಕೃತ ಶ್ಲೋಕಗಳಲ್ಲದೆ, ಕನ್ನಡ ಭಾಷೆಯಲ್ಲಿಯೂ ಪದ್ಯ ರೂಪದಲ್ಲಿ ಆಯಾ ಧರ್ಮದ ದೇವರನ್ನು ಸ್ತುತಿಸಿರುವ ನಿದರ್ಶನಗಳನ್ನು ಗಮನಿಸಬಹುದಾಗಿದೆ. ಕ್ರಿ.ಶ. ೧೨೩೨ರ ಒಂದು ಶಾಸನದಲ್ಲಿ ಶಿವನನ್ನು ಪ್ರಾರ್ಥಿಸುವ ಕಂದ ಪದ್ಯವೊಂದು ಈ ರೀತಿ ಇದೆ.

ಪತ್ತಿರೆ ಗಂಗೆಯ ಪನಿಗಳು
ಮುತ್ತಿನ ಬಾಸಿಗವಿದೆನಿಸಿ ವಾಸುಗಿ ಸುಖದಿಂ ।
ಸುತ್ತಿರ್ದ ಜೂಟದ ದೇ
ವೋತ್ತಮನೆಮಗೊಸೆದು ಕೊಡುಗೆ ಸುಖ ಸಂಪದಮಂ ॥

ತಲೆಯ ಮೇಲಿನ ಗಂಗೆಯ ಹನಿಗಳು ಶಿವನ ಹಣೆಯ ಮೇಲೆ ಬಿದ್ದು ಮುತ್ತಿನ

ಬಾಸಿಂಗದಂತೆ ಶೋಭಿಸುತ್ತಿದೆಯಂತೆ, ವಾಸುಕಿ ಶಿವನ್ನನು ಆಪ್ಯಾಯಮಾನವಾಗಿ ಬಳಸಿಕೊಂಡಿದ್ದು ಶೋಭಿಸುತ್ತಿದೆಯಂತೆ, ಈ ರೀತಿಯಿರುವ ದೇವೋತ್ತಮನಾದ ಶಿವನು ನಮಗೆ ಸುಖ ಸಂಪದಗಳನ್ನಿತ್ತು ಹಾರೈಸಲಿ ಎಂದು ಶಾಸನ ಕವಿ ಬೇಡುತ್ತಾನೆ ಕಾವ್ಯಗಳ ಪ್ರಾರಂಭದಂತೆ ಶಾಸನಗಳ ಪ್ರಾರಂಭವೂ ವಿಶಿಷ್ಟವಾಗಿರುತ್ತದೆ. ಮತ್ತು ನಿರ್ದಿಷ್ಟ ಸಂಕೇತಗಳಿರುತ್ತವೆ ಎನ್ನುವುದು ಶೇಷಶಾಸ್ತ್ರಿಯವರ ನಿಲುವು.

*ವಿವರಗಳಿಗೆ ನೋಡಿ: ಆರ್. ಶೇಷಶಾಸ್ತ್ರಿ ೨೦೦೫ ಶಾಸನ ಪರಿಚಯ ಪುಟ. ೮೯*

**೬೮೧. ಶಾಸನಗಳಲ್ಲಿ ಕೆರೆಯ ಉಲ್ಲೇಖಗಳು**

ನದಿಗಳು ಹರಿಯದೆ ಇರುವ ಪ್ರದೇಶಗಳಲ್ಲಿನ ಕೃಷಿಕರು ಕೆರೆ ಮತ್ತು ಬಾವಿಗಳನ್ನು ನೀರಾವರಿಗಾಗಿ ಅವಲಂಬಿಸಬೇಕಾಗಿತ್ತು. ಕೆರೆಗಳಲ್ಲಿ ಮಳೆಯ ನೀರನ್ನು ಸಂಗ್ರಹಿಸಲಾಗುತ್ತಿತ್ತು. ಕೆರೆಗಳನ್ನು ಅರಸರು ಹಾಗೂ ಇತರ ಖಾಸಗಿ ವ್ಯಕ್ತಿಗಳು ಕಟ್ಟಿಸುತ್ತಿದ್ದರು. ಪ್ರತಿಯೊಂದು ಹಳ್ಳಿಯಲ್ಲಿಯೂ ಅಲ್ಲಿನ ಬೇಸಾಯದ ಭೂಮಿಯ ವಿಸ್ತಾರ ಹಾಗೂ ಬೆಳೆಯುವ ಬೆಳೆ ಇವುಗಳನ್ನು ಅವಲಂಬಿಸಿಕೊಂಡು ಕೆರೆಗಳಿರುತ್ತಿದ್ದವು. ಪ್ರತಿಯೊಂದು ಕೆರೆಗೂ ಹೆಸರುಗಳಿರುತ್ತಿದ್ದವು. ಕೆರೆಗಳನ್ನು ಕಟ್ಟಿಸಿದವರ ಹೆಸರು ಅಥವಾ ಯಾರ ಗೌರವಾರ್ಥವಾಗಿ ಕಟ್ಟಿಸಲಾಗಿದೆಯೋ ಅವರ ಹೆಸರನ್ನು ಆಯಾ ಕೆರೆಗಳಿಗೆ ಇಡುವುದು ರೂಢಿಯಲ್ಲಿತ್ತು. ಇದಕ್ಕೆ ಉತ್ತಮ ಉದಾಹರಣೆಯೆಂದರೆ, ಪ್ರಧಾನ ವೀರದಂಡನಾಯಕನು ಕಟ್ಟಿಸಿದ ನಾಲ್ಕು ಕೆರೆಗಳು. ವೀರದಂಡನಾಯಕನು ತನ್ನ ತಂದೆ, ತಾಯಿ, ಸಹೋದರ ಹಾಗೂ ತನ್ನದೇ ಹೆಸರಿನಲ್ಲಿ ರದ್ರ ಸಮುದ್ರ, ಗಂಗ ಸಮುದ್ರ, ಅಚ್ಯುತ ಸಮುದ್ರ ಹಾಗೂ ವೀರ ಸಮುದ್ರ ಎನ್ನುವ ಕೆರೆಗಳನ್ನು ನಿರ್ಮಿಸಿದನು. (ಎ.ಕ. ೫. ೧೬೫. ೧೧೮೬.) ಮಾಚಗಾವುಂಡ ಎನ್ನುವವನು ರಾಮಪುರದಲ್ಲಿ ಒಂದು ಕೆರೆ ಮತ್ತು ತೂಬು ನಿರ್ಮಿಸಿದ ಉಲ್ಲೇಖ ಶಾಸನದಲ್ಲಿದೆ. ಒಡೆದುಹೋದ ಇಲ್ಲವೇ ಬಿರುಕುಬಿಟ್ಟ ಕೆರೆಗಳನ್ನು, ತೂಬುಗಳನ್ನು ಸರಿಪಡಿಸುತ್ತಿದ್ದರ ಉಲ್ಲೇಖಗಳು ಶಾಸನಗಳಲ್ಲಿ ಸಿಗುತ್ತವೆ. ಇದಕ್ಕೆ ಒಂದು ಉದಾಹರಣೆಯೆಂದರೆ, ಅರಸೀಕೆರೆ ಕೆರೆಯ ತೂಬನ್ನು ಹೊಯ್ಸಳರ ಎರಡನೆಯ ವೀರನರ ಸಿಂಹನ ಅನುಮತಿಯಂತೆ ಮಹಾಪ್ರಧಾನ ದಂಡನಾಯಕನು ದುರಸ್ತಿ ಮಾಡಿದುದು. ಕೆರೆಗಳಲ್ಲಿ ಕೆಸರು ತುಂಬಿಕೊಂಡು ನೀರು ನಿಲ್ಲುವ ಪ್ರಮಾಣ ಕಡಿಮೆಯಾದಾಗ ಕೆಸರನ್ನು ಕೆರೆಗಳಿಂದ ಹೊರತೆಗೆಯುವ ಕಾರ್ಯವೂ ನಡೆಯುತ್ತಿತ್ತು. ಕೆರೆಯಿಂದ ಹೂಳನ್ನು ತೆಗೆಯುವ ಕೆಲಸಕ್ಕಾಗಿ ಬಂಡಿಯನ್ನು ದಾನ ನೀಡಿರುವ, ಬಂಡಿಗಳ ಚಾಲಕರ ನಿರ್ವಹಣೆಗಾಗಿ ಭೂಮಿಯನ್ನು ದಾನ ನೀಡಿರುವ ಉಲ್ಲೇಖಗಳು ಶಾಸನಗಳಲ್ಲಿ ಸಿಗುತ್ತವೆ.

ಮಾಚಗೌಂಡನ ಶಾಸನದ ಕಾಲ ಕ್ರಿ.ಶ. ೧೦೦೮. (ಎಂ.ಎ.ಆರ್. ೧೯೮)

ಮಹಾದಂಡನಾಯಕನ ಶಾಸನದ ಕಾಲ ಕೆರೆಯಿಂದ ಹೂಳು ತೆಗೆಯುವ ಕೆಲಸಕ್ಕಾಗಿ ಬಂಡಿಯನ್ನು ನಿರ್ವಹಿಸುವವ ಭೂದಾನ ನೀಡಿದ ವಿವರಗಳು ಅರಸೀಕೆರೆ ೧೧೬.

ಕ್ರಿ.ಶ. ೧೨೩೪; ನಾಗಮಂಗಲ ಕ್ರಿ.ಶ. ೧೨೩೭.) ಈ ಶಾಸನಗಳ ವಿವರಗಳಲ್ಲಿ ನೀರಾವರಿಯ ಬಗ್ಗೆ ಹಿಂದೆ ಕೊಟ್ಟಿರುವ ಆದ್ಯತೆಗಳು ಏನು ಎಂಬುದು ತಿಳಿಯುತ್ತವೆ ಎಂಬುದು ಮೋಹನಕೃಷ್ಣ ರೈಯವರ ಅಭಿಪ್ರಾಯ.

*ವಿವರಗಳಿಗೆ ನೋಡಿ: ಮೋಹನಕೃಷ್ಣ ರೈ ೨೦೦೪ ಪ್ರಭುತ್ವ ಮತ್ತು ಜನತೆ ಪುಟ. ೨೨.*

## ೬೮೨. ಶಾಸನಗಳು ಮತ್ತು ಸ್ತ್ರೀಯರು

ಕರ್ನಾಟಕದ ಅನೇಕ ಶಾಸನಗಳಲ್ಲಿ ಸ್ತ್ರೀಯರ ಧಾರ್ಮಿಕ ಸಹಭಾಗಿತ್ವದ ಬಗೆಗಿನ ಉಲ್ಲೇಖಗಳಿವೆ: ಶ್ರವಣ ಬೆಳಗೊಳದ ಶಾಸನವೊಂದು ಶಾಂತಲೆಯ ತಾಯಿ ಮಾಜಿಕಬ್ಬೆಯು ವ್ರತ ಹಿಡಿದು ಮರಣವನ್ನಪ್ಪಿದ ವಿಷಯವನ್ನು ತಿಳಿಸುತ್ತದೆ. ಇದರ ಕಾಲ ಕ್ರಿ.ಶ. ೧೧೩೧. ಮತ್ತೊಂದು ಶಾಸನವು ಅಹಲ್ಯೆಯ ನಿರ್ವಾಣವನ್ನು ಸೂಚಿಸುತ್ತದೆ. ಶ್ರವಣಬೆಳಗೊಳದ ನೂರೆಂಟು ನಿಶಿಧಿ ಶಾಸನಗಳಲ್ಲಿ ಇಪ್ಪತ್ತೆರಡು ಶಾಸನಗಳು ಸ್ತ್ರೀಯರಿಗೆ ಸಂಬಂಧಿಸಿರುವವು ಗಳು. ಅದರಲ್ಲಿ ೧೩ ಶಾಸನಗಳು ಕಂತಿ ಅವ್ವೆಯವರ ಮರಣವನ್ನು ಸೂಚಿಸುತ್ತದೆ. ನಾಲ್ಕು ಶಾಸನಗಳು ರಾಜಪರಿವಾರದ ಸ್ತ್ರೀಯರ ಕುರಿತಂತೆ ಹೇಳುತ್ತವೆ. ಐದು ಶಾಸನಗಳು ಸಾಮಾನ್ಯ ಸ್ತ್ರೀಯರ ಮರಣವನ್ನು ಸೂಚಿಸುತ್ತವೆ.(ಅದೇ ಪುಟ.೧೧) ಕೊಂಗಾಳ್ವನಬ್ಬೆ ಪೋಚಬ್ಬರಸಿಯ ಧಾರ್ಮಿಕ ಸೇವೆಯನ್ನು ಶಾಸನವೊಂದು (ಕಾಲ: ೧೧ನೇ ಶತಮಾನ) (ಎ.ಕ..ಸಂ:೧ ೧೯೭೨ ಪುಟ.೪೫) ವರ್ಣಿಸುತ್ತದೆ.

ಶ್ರವಣಬೆಳಗೊಳದ ಶಾಸನವೊಂದು ವೈಜಬ್ಬೆಯು ನೋಂತ ಸನ್ಯಾಸನವನ್ನು ತಿಳಿಸುತ್ತದೆ. (ಎ.ಕೆ.ಸಂ:೨ ೧೯೭೩ ಪುಟ.೫೫) ಗುಣಮತಿ ಅಬ್ಬೆಯ ನಿಶಿಧಿಗೆ ಸಂಬಂಧಿಸಿದಂತೆ ಮತ್ತೊಂದು ಶಾಸನವು ತಿಳಿಸುತ್ತದೆ. (ಅದೇ ಪುಟ.೭೭) ಶ್ರವಣಬೆಳಗೊಳದ ಮತ್ತೊಂದು ಶಾಸನದಲ್ಲಿ ಲಕ್ಷ್ಮೀಮತಿಯು ಸನ್ಯಸನದ ಮೂಲಕ ದೇವಲೋಕಕ್ಕೆ ಸಂದ ವಿಚಾರವಿದೆ. (ಇದರ ಕಾಲ. ಕ್ರಿ.ಶ. ೧೦೪೪) (ಅದೇ ಪುಟ.೯) ಹತ್ತನೇ ಶತಮಾನದ ನಂಜನಗೂಡಿನ ಶಾಸನವೊಂದು ಅತ್ತೆಯ್ಯನ ಅಬ್ಬೆಯು ಸನ್ಯಸನಂಗೆಯ್ದು ಮುಡುಪಿದ ವಿಚಾರವನ್ನು ಪ್ರಸ್ತಾವಿಸುತ್ತದೆ. (ಅದೇ ಸಂ: ೩ ಪುಟ.೩೦೦) ಧಾರ್ಮಿಕ ವಿಚಾರಗಳಲ್ಲಿ ಸಕ್ರಿಯವಾಗಿ ಅನೇಕ ಸ್ತ್ರೀಯರು ಭಾಗವಹಿಸಿದ ವಿಚಾರವನ್ನು ಇನ್ನೂ ಕೆಲವು ಶಾಸನಗಳು ಹೇಳುತ್ತವೆ. ಶಾಸನಗಳಲ್ಲಿ ಬಂದಿರುವ ವಿಷಯಗಳನ್ನು ಸ್ಥೂಲವಾಗಿ ಪರಿಶೀಲಿಸಲಾಗಿದೆ. ಈ ಆಧಾರಗಳ ಹಿನ್ನೆಲೆಯಲ್ಲಿ ಧಾರ್ಮಿಕ ರಂಗದಲ್ಲಿ ಸ್ತ್ರೀಯರು ಭಾಗವಹಿಸಿರುವ ವಿಚಾರಗಳನ್ನು ಎರಡು ನೆಲೆಗಳಲ್ಲಿ ಗಮನಿಸಬಹುದು:

೧. ಸಾಮಾಜಿಕ ಸ್ಥಾನಮಾನಕ್ಕಾಗಿ ಧಾರ್ಮಿಕ ಸೇವೆಯನ್ನು ಕೈಗೊಂಡಿರುವ ಸಂಗತಿಗಳು. ಉದಾ: ಜೈನ ಬಸದಿಗೆ ಸೇವೆ. ಇವು ಶ್ರೀಮಂತ ವರ್ಗದ ಸ್ತ್ರೀಯರು ಕೈಗೊಂಡಿರುವ ಸೇವೆಗಳಾಗಿರುತ್ತವೆ.

೨. ಸನ್ಯಸನವನ್ನು ಸ್ವೀಕರಿಸಿ ಅದರ ಮೂಲಕ ಪ್ರಾಣಹರಣವನ್ನು ಮಾಡಿಕೊಳ್ಳು

ವುದು ಇದು ಆತ್ಮಾಹುತಿಯ ಪ್ರಕಾರಗಳಲ್ಲಿ ಒಂದಾಗಿ ಸಂಸ್ಕೃತಿಯಲ್ಲಿ ಮೂಡಿ ಬಂದಿದೆ. ಇಲ್ಲಿಯೂ ಧಾರ್ಮಿಕ ಶ್ರದ್ಧೆಯೇ ಪ್ರಧಾನವಾದ ಅಂಶವಾಗಿದೆ.

ರಾಣಿಯಾದ ಶಾಂತಲೆಯು ಜೈನೆಯಾಗಿದ್ದರೂ ವೈಷ್ಣವ ದೇವಾಲಯವನ್ನು ಸ್ಥಾಪಿಸಿದ ವಿಚಾರವು ಈಗಾಗಲೇ ಸಾಕಷ್ಟು ಪ್ರಚಲಿತವಾದ ವಿಚಾರವಾಗಿದೆ. ಈಕೆಯ ಕಾಲ ಕ್ರಿ.ಶ.೧೧೩೧. ಈಕೆಯು ಸನ್ಯಸನ ವಿಧಿಯ ಮೂಲಕವೇ ತನ್ನನ್ನು ಮುಡುಪಿ ಕೊಂಡಳು. ಖಾಸಗಿಯಾಗಿ ಒಂದು ಧರ್ಮಕ್ಕೆ ಸೇರಿದ್ದು, ಮತ್ತೊಂದು ಧರ್ಮದ ಕೆಲಸವನ್ನು ಮಾಡುವ ಕ್ರಮವೂ ಇತ್ತು ಎನ್ನುವುದಕ್ಕೆ ಮೇಲಿನ ಮಾತು ಸಾಕ್ಷ್ಯವನ್ನು ಒದಗಿಸುತ್ತದೆ.

*ವಿವರಗಳಿಗೆ ನೋಡಿ: ಕಲಬುರ್ಗಿ ಎಂ.ಎಂ. ೧೯೮*

*ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು ಪುಟ.*

*Gururaj achar .S 1974 Some aspect of economic & Social Life in Karnataka P. 24*

**೬೮೩. ಶಾಸನವೆಂದರೇನು?**

ಶಾಸನವೆಂದರೆ ಅಪ್ಪಣೆ. (ಮೂಲಾರ್ಥ) ರಾಜಾಜ್ಞೆ ಎಂದು.

ಕ್ರಮೇಣ-ಕಲ್ಲಿನಲ್ಲಿ ಶಾಶ್ವತವಾಗಿಇರಬೇಕೆಂಬ ದೃಷ್ಟಿಯಲ್ಲಿ ಕೊರೆದು ಬರೆ ಬರೆಹ(Inscription)ಎಂಬರ್ಥದಲ್ಲಿ ಬಳಕೆಯಾಯಿತು. ಉದಾಹರಣೆಗೆ 'ಕಲ್ಲೊಳಿ ಅಕ್ಕರಂ' ಎಂಬ ಮಾತನ್ನು ನೆನೆಯಬಹುದು. ಇಲ್ಲಿಯೂ ಶಾಸನವೆಂದ (Inscription)ಎಂಬ ಅರ್ಥದಲ್ಲಿಯೇ ಬಳಕೆಯಾಗಿದೆ.

ಶಾಸನವೆಂದರೆ ಪ್ರಭುತ್ವ, ಅಪ್ಪಣೆ, ಕಾನೂನು, ಕರಾರು, ತಾಮ್ರ ಅಥವಾ ಕಲ್ಲಿ ಮೇಲೆ ಕೊರೆದಿಟ್ಟ ಬರಹವೆಂದು ಅರ್ಥವಿದೆ. ಶಾಸಿಸು ಎಂದರೆ ನಿಯಂತ್ರಿಸು ಶಾಸನ ಕುರಿತು ಆರ್. ಶೇಷಶಾಸ್ತ್ರಿಯವರು ಹೀಗೆ ಹೇಳಿದ್ದಾರೆ. 'ಶಾಸನ' ಎಂಬ ಪದವನ ವಿದ್ವಾಂಸರು ಆಂಗ್ಲ ಪದವಾದ 'Inscription' ಎಂಬ ಪದಕ್ಕೆ ಸಮಾನಾರ್ಥಕ ಪದವಾ ಬಳಸುತ್ತಾರೆ. ಇನ್ಸ್‌ಕ್ರಿಪ್‌ಷನ್ ಎಂದರೆ ಬಹುಕಾಲ ಉಳಿಯಬಲ್ಲ ಶಾಶ್ವತವಾದ ವಸ್ತುವಿ ಮೇಲೆ ಕೊರೆಯಲ್ಪಟ್ಟ ಬರಹ ಎಂದು ಅರ್ಥ. ಇದೇ ಅರ್ಥದಲ್ಲಿ 'ಶಾಸನ' ಎಂ ಪದವನ್ನು ಇಂದು ನಾವು ಬಳಸುವುದು. 'ಕೊರೆಯುವ ಕ್ರಿಯೆ' ಮತ್ತು ಬಹುಕಾ ಉಳಿಯುವ ಲೇಖನ ಶಾಮಗ್ರಿ – ಈ ಎರಡೂ ಅಂಶಗಳು ಯಾವ ರೀತಿಯ ಬರ 'ಶಾಸನ' ಅಥವಾ 'ಶಾಸನ'ವಲ್ಲ ಎಂಬುದನ್ನು ನಿರ್ಧರಿಸುವಂತಹವುಗಳಾಗಿ ಶಾಸನವೆಂದರೆ ಪ್ರಾಚೀನ ಬರಹಗಳೇ ಆಗಿರಬೇಕೆಂಬ ನಿಯಮವೇನೂ ಇಲ್ಲ. ಇಂದ ಕಲ್ಲು, ತಾಮ್ರ, ಬೆಳ್ಳಿ ಮುಂತಾದ ಲೋಹಗಳ ಮೇಲೆ ಕೊರೆಯಲ್ಪಟ್ಟ ಬರಹಗಳ ಸಹ ಶಾಸನಗಳೇ.

ಭೂರ್ಜಪತ್ರ, ತಾಳೇಗರಿ ಮುಂತಾದ ಲೇಖನ ಸಾಮಗ್ರಿಗಳ ಮೇಲೆ ಕಂಠದಿಂ ಕೊರೆದು ಬರೆದಿರುವ ಬರಹಗಳು ಭಾರತದಲ್ಲಿ ನಮಗೆ ವಿಫುಲವಾಗಿ ದೊರೆಯುತ್ತ ಇವುಗಳು ಬಹುಕಾಲ ಉಳಿಯುವ ಲೇಖನ ಸಾಮಗ್ರಿಗಳಾಗದೆ ಇರುವುದರಿಂದ ಇಂ

ಬರಹಗಳನ್ನು ಶಾಸನಗಳೆಂದು ಪರಿಗಣಿಸಲಾಗುವುದಿಲ್ಲ. ಹಾಗೆಯೇ ಬಹುಕಾಲ ಉಳಿಯ ಬಹುದಾದ ಸಾಮಾಗ್ರಿಗಳ ಮೇಲೆ ಮಸಿಯಿಂದಲೋ, ಬಣ್ಣದಿಂದಲೋ ಬರೆದಿರುವ ಬರಹಗಳು ನಮಗೆ ದೊರೆಯುತ್ತವೆ. ಇವುಗಳನ್ನು ಶಾಸನಗಳೆಂದು ಪರಿಗಣಿಸಲಾಗದು. ಆದ್ದರಿಂದ 'ಇನ್‌ಸ್ಕ್ರಿಪ್‌ಷನ್' ಎಂಬ ಆಂಗ್ಲ ಪದಕ್ಕೆ ಪರ್ಯಾಯವಾಗಿ ಬಳಸುವ 'ಶಾಸನ' ಎಂಬ ಪದವು ಬರಹದ ಮೇಲ್ಮೈ ಲಕ್ಷಣವನ್ನು ಕುರಿತದ್ದೇ ವಿನಾ ಅದರ ಆಂತರಿಕ ವಿಷಯವನ್ನಲ್ಲ ಎಂಬುದನ್ನು ಮರೆಯಬಾರದು ಎಂಬ ಅರ್ಥದಲ್ಲಿಯೇ ಪ್ರಯೋಗವಾಗಿದೆ. 'ಶಾಸನ' ಎಂಬ ಪದದ ಧಾತುವಾದ 'ಶಾಸ್' ಎಂಬುದಕ್ಕೆ ಆಜ್ಞೆಮಾಡು, ಶಿಕ್ಷಿಸು, ನಿಯಂತ್ರಿಸು, ಮೊದಲಾದ ಅರ್ಥಗಳಿವೆ. ಪ್ರಾಚೀನ ಭಾರತದ ಆಡಳಿತ ಪದ್ಧತಿಯ ಬಗ್ಗೆ ತಿಳಿಸುವ ಗ್ರಂಥಗಳಾದ ಶುಕ್ರನೀತಿಸಾರ, ಕೌಟಿಲ್ಯನ ಅರ್ಥಶಾಸ್ತ್ರ ಮುಂತಾದ ಗ್ರಂಥಗಳು 'ಶಾಸನ' ಎಂಬ ಪದವನ್ನು ರಾಜಾಜ್ಞೆ ಎಂಬ ಅರ್ಥದಲ್ಲಿ ಪ್ರಯೋಗಮಾಡಿದೆ. ಶಾಸನವೆಂದರೆ ಲಿಖಿತ ಮಾಧ್ಯಮವೂ ಹೌದು. ಶಾಸನವನ್ನು ಅಳಿಸಲಾಗುವುದಿಲ್ಲ. ಹತ್ತನೆಯ ಶತಮಾನದ ಶಾಸನಗಳು ಚಾರಿತ್ರಿಕವಾಗಿಯೂ ಮಹತ್ವದವು. ಎರಡನೆಯದಾಗಿ ಶಾಸನಗಳು ಚಿರಸ್ಥಾಯಿಯೆಂಬ ಪರಿಕಲ್ಪನೆಯೂ ಕೂಡಾ ಶಾಸನ ಲಿಖಿತಕ್ಕೆ ಕಾರಣವಾಗಿರಬೇಕು.

*ವಿವರಗಳಿಗೆ ನೋಡಿ: ಆರ್. ಶೇಷಶಾಸ್ತ್ರಿ ೨೦೦೫ ಶಾಸನ ಪರಿಚಯ ಪುಟ. ೨.*

**೬೮೪. ಶಿವಾಗಮ ಮತ್ತು ಜೈನಧರ್ಮದ ಆಂತರಿಕ ಸಂಬಂಧ**

"ಶೈವಧರ್ಮಕ್ಕೆ ಶಿವಾಗಮಗಳೇ ಮೂಲವೆಂದು ಶೈವಾಚಾರ್ಯರು ಪ್ರತಿಪಾದಿಸಿದ್ದಾರೆ. ಶಿವಾಗಮಗಳಲ್ಲಿ ಬರುವ ವಿಷಯಗಳನ್ನೆಲ್ಲ ನಾಲ್ಕು ಪಾದಗಳಲ್ಲಿ ವಿಂಗಡಿಸಲಾಗಿದೆ. ಅವುಗಳಿಗೆ ೧) ಕ್ರಿಯಾಪಾದ ೨) ಚರ್ಯಾಪಾದ ೩) ಯೋಗಪಾದ ೪) ಜ್ಞಾನ ಪಾದಗಳೆಮದು ಹೆಸರುಗಳಿವೆ. ಇವುಗಳಲ್ಲಿ ಕ್ರಮವಾಗಿ ಮೂರ್ತಿ ನಿರ್ಮಾಣ, ಸ್ಥಾಪನೆ, ಪೂಜಾಕ್ರಮ, ಶುದ್ಧಾಚರಣೆ, ಯೋಗಿಕ ಸಾಧನ ಮತ್ತು ಜೀವ – ಶಿವರ ಸಂಬಂಧ. ಲೋಕವಿಚಾರ, ಪದಾರ್ಥಗಳ ಸ್ವರೂಪ ವಿವರಣೆಯು ವಿವರವಾಗಿ ಬರುವುದು. ಈ ವಿಷಯುಗಳೆಲ್ಲ ಶೈವದರ್ಶನದ 'ಅಸ್ತಿವಾರದಂತಿವೆ. ಬಹು ವಿಸ್ತಾರವಾಗಿಯೂ ಮೂಲದಲ್ಲಿ ವಿವರಿಸಲ್ಪಟ್ಟಿರಬೇಕು. ಪ್ರತಿಯೊಂದು ಆಗಮದಲ್ಲಿ ಇರುವ ಗ್ರಂಥ ಸಂಖ್ಯೆಯನ್ನು ಗಮನದಲ್ಲಿ ತಂದರೆ ಈ ಮಾತು ಲಕ್ಷ್ಯದಲ್ಲಿ ಬರುವುದು ಕಾರಣಾಗಮದ ಸಂಖ್ಯೆ ಕೋಟಿ, ಸೂಕ್ಷ್ಮಾಗಮದ ಸಂಖ್ಯೆ ಪದ್ಮ, ಅಜಿತಾಗಮ ಸಂಖ್ಯೆಯಲ್ಲಿ ನಿಯತವೆಂದು ಹೇಳಿದೆ. ಹೀಗೆ ಆಗಮ ಗ್ರಂಥಗಳ ಸಂಖ್ಯಾ ಪ್ರಮಾಣವು ಬೆಳೆಯುತ್ತ ಹೋಗುವುದು.

ಇಲ್ಲಿ ಋಗ್ವೇದದಲ್ಲಿ, ಭಗವಾನ್ ಋಷಭದೇವನ ವರ್ಣನೆಯು ಬರುವಲ್ಲಿ 'ಹೇ ಶೈವ–ಜೈನ ದರ್ಶನಗಳು ರುದ್ರತುಲ್ಯದೇವ' ಎಂದು ವರ್ಣನೆಯು ಆರಂಭವಾಗಿರುವು ದೆಂದು ವೈದಿಕ ವಿದ್ವಾಂಸರಾದ ಪ್ರೊ. ವಿರುಪಾಕ್ಷ ಎಂ.ಎ ವೇದತೀರ್ಥ ಅವರು ಒಂದೆಡೆಗೆ, ಸೂಚಿಸುವರು. ಶ್ರಮಣ ಸಂಪ್ರದಾಯದ ಋಷಭದೇವರನು ಜೈನರ ಆದಿತೀರ್ಥಂಕರನು ಅವೈದಿಕ ಜನಾಂಗ ದೇವರು ಋಷಭನು ತಪಸ್ಸು ಮಾಡಿ

ಮುಕ್ತನಾದುದು ಕೈಲಾಸ ಶಿಖರದಲ್ಲಿ. ಅವನ ಸಮವಸರಣದಲ್ಲಿಯೂ ಅನೇಕ ಗಣಧರರಿದ್ದಾರೆ. ಅವನ ಲಾಂಛನ ಎತ್ತು. ಇವನೂ ಲೋಕ ಕಲ್ಯಾಣಕರವಾದ ಧರ್ಮವನ್ನು ಬೋಧಿಸಿದ್ದಾನೆ. ಋಷಭದೇವ ದಿಗಂಬರ, ಸರ್ವಜ್ಞ ಜ್ಞಾನರೂಪಿ, ಶಿವಸ್ವರೂಪಿಯೆನಿಸಿದ್ದಾನೆ. ಅವನಿಗೆ ಶಿವನೆಂದೂ ಒಂದು ಹೆಸರಿದೆ.

ಜೈನಧರ್ಮ ದರ್ಶನಗಳು ಪ್ರಾಚೀನ ಕಾಲದಿಂದಲೂ ಭಾರತದ ವಿವಿಧ ಭಾಗಗಳಲ್ಲಿ ಪ್ರಚಾರದಲ್ಲಿವೆ. ಇವುಗಳನ್ನು ಪ್ರಸಿದ್ಧಿಸಿದವರು. ತ್ರಿಷಷ್ಠಿ ಶಲಾಕಾ ಪುರುಷರು, ಇವರ ಚರಿತ್ರೆಗಳನ್ನು ವರ್ಣಿಸುವ ಗ್ರಂಥವು "ಮಹಾಪುರಾಣ"ವೆಂದು ಜೈನಾಗಮಗಳಲ್ಲಿ ಪ್ರಸಿದ್ಧವಾಗಿವೆ. ಮಹಾಪುರುಷರ ಸಂಖ್ಯೆಯಲ್ಲಿಯೂ ಶೈವ ಜೈನ ಸಂಪ್ರದಾಯಗಳು ಒಂದೇ ಧ್ವನಿಯನ್ನು ಎತ್ತಿವೆ. ಇವರು ನಮ್ಮ ನಮ್ಮ ಸಂಸ್ಕೃತಿಯಲ್ಲಿ ಆದರ್ಶ ಪುರುಷರು. ಧರ್ಮೋದ್ಧಾರಕರು, ಐತಿಹಾಸಿಕ ವ್ಯಕ್ತಿಗಳೂ ಆದುದು. ಇವರು ಆಯಾ ಧರ್ಮಗಳ ಇತಿಹಾಸವನ್ನು ರೂಪಿಸಿದ್ದಾರೆ. ಪರಮಪೂಜ್ಯರೆನಿಸಿದ್ದಾರೆ."

ಮಿರ್ಜಿ ಅಣ್ಣಾರಾಯರು ಮೇಲಿನಂತೆ ಶಿವಾಗಮನದ ಕುರಿತು ವಿವರಿಸಿದ್ದಾರೆ. ಶೈವಧರ್ಮಕ್ಕೆ ಶಿವಾಗಮಗಳೇ ಮೂಲವೆಂದು ಅವರ ನಿಲುವಾಗಿದೆ. ಅವರ ಪ್ರಕಾರ ಶೈವ ಮತ್ತು ಜೈನ ಧರ್ಮಗಳು ಒಂದೇ ರೀತಿಯ ಧ್ವನಿಯನ್ನು ಎತ್ತಿವೆ.

*ವಿವರಗಳಿಗೆ ನೋಡಿ: ಗುರುಲಿಂಗಕಾಪಸೆ (ಸಂ ೧) ೨೦೦೬ ಮಧುರಚೆನ್ನರ ಲೇಖನಗಳು*
*(ಮಿರ್ಜಿ ಅಣ್ಣಾರಾಯರ ಆಯ್ದ ಲೇಖನಗಳು)*

**೬೮೫. ಶುಕ್ಲಧ್ಯಾನ**

*'**ಶುಕ್ಲಧ್ಯಾನ**ಮಂ ಧ್ಯಾನಿಸಿ ಘಾತಿಕರ್ಮಂಗಳಂ ಕಿಡಿಸಿ ಕೇವಲಜ್ಞಾನಿಯಾದೊಡೆ ಚತುರ್ವಿಧಮಪ್ಪ ದೇವನಿಕಾಯಂ ಬಂದರ್ಚಿಸಿ ಪೂಜಿಸಿ ಪೋದೊಡವರುಂ ಬಟಿಕ್ಕೆ ಘಾತಿಕರ್ಮಂಗಳಂ ಕಿಡಿಸಿ ಮೋಕ್ಷಕ್ಕೆ ವೋದರ್...............*

*(ಡಿ.ಎಲ್.ಎನ್.೨೦೦೯ ಪು.೧೪೮)*

ಎಂದು ವಡ್ಡಾರಾಧನೆಯಲ್ಲಿ ಬರುತ್ತದೆ ಶುಚಿತ್ವ ಸಮೇತವಾದದ್ದು ಶುಕ್ಲಧ್ಯಾನ. ಧರ್ಮಧ್ಯಾನವನ್ನು ಮುಗಿಸಿ ಮುಕ್ತಿ ಹೊಂದುವುದನ್ನು ಕುರಿತು ಚಿಂತಿಸುವುದು. ಶುಕ್ಲಧ್ಯಾನವು ಸಾಕ್ಷಾತ್ತಾಗಿ ಮುಕ್ತಿಗೆ ಸಾಧನವಾಗುವುದು ಅಘಾತಿಕರ್ಮ ಎಂದರೆ ಆತ್ಮನ ಗುಣಗಳನ್ನು ನಾಶಮಾಡದ ಕರ್ಮ. ಇದು ನಾಲ್ಕು ತೆರ:

ಆಯು = ಆಯಸ್ಸಿನ ಅವಧಿಯನ್ನು ನಿರ್ಣಯಿಸುವ ಕರ್ಮ.

ನಾಮ = ವ್ಯಕ್ತಿಯ ತೂಕ, ಎತ್ತರ, ಗಾತ್ರ, ಬಣ್ಣ ಮುಂತಾದುವನ್ನು ನಿರ್ಣಯಿಸುವ ಕರ್ಮ.

ಗೋತ್ರ=ವ್ಯಕ್ತಿಯ ವಂಶ, ಕುಲ, ದೇಶವನ್ನು ನಿರ್ಣಯಿಸುವ ಕರ್ಮ.

ವೇದನೀಯ = ಇಹಜೀವನದಲ್ಲಿ ಸುಖದುಃಖ ಕಾರಣವಾದ ಕರ್ಮ.

*(ಡಿ.ಎಲ್.ಎನ್.೨೦೦೯ ಪು.೧೪೮)*

ಧ್ಯಾನ ಮಾಡುತ್ತ ಮಾಡುತ್ತ ಸಾಧುವಿಗೆ ಬುದ್ಧಿಪೂರ್ವಕ ರಾಗ ಸಮಾಪ್ತವಾದ ಮೇಲೆ ಯಾವ ನಿರ್ವಿಕಲ್ಪ ಸಮಾಧಿ ಪ್ರಕಟವಾಗುವುದೋ ಅದಕ್ಕೆ ಶುಕ್ಲಧ್ಯಾನವೆಂದು ಅಥವಾ ರೂಪಾತೀತ ಧ್ಯಾನವೆಂದು ಹೆಸರು. ಇದು ಸಾಕ್ಷಾತ್ ಮೋಕ್ಷದ ಕಾರಣವಾಗಿರುತ್ತದೆ. ಆತ್ಮವು ಅತಿ ಶುದ್ಧ ಅಥವಾ ಶುಕ್ಲವಾಗಿರುವುದರಿಂದ ಈ ಹೆಸರು ಪ್ರಾಪ್ತವಾಗಿದೆ. ಇದರಲ್ಲಿ ೪ ಭೇದಗಳಿವೆ. ಮೊದಲ ಎರಡನ್ನು ಶುಕ್ಲವೆಂದೂ ಉಳಿದೆರಡನ್ನು ಪರಮಶುಕ್ಲವೆಂದೂ ಕರೆಯುತ್ತಾರೆ. ಪರಮ ಶುಕ್ಲವೆಂದರೆ ಪರಮೋಚ್ಚವಾದ ಬಿಳಿಯೆಂದು ಅರ್ಥ.

**೬೮೬. ಶುಭಲಕ್ಷಣ**

*ಅರುಣೋತ್ಪಲದಳಲೋಹಿತ*
*ಕರಂಗಳೊಳ್ ಶಂಖಚಕರಚಿಹ್ನಂಗಳನಾಂ ।*
*ತಿರೆ ಮುರವೈರಿಯ ಕರದಂ*
*ತಿರೆ ಕರಮೆಸೆದಪುದು ಕರಯುಗಂ ಬಾಲಕನಾ ॥*

*ಕರಿತುರಗಾತಪತ್ರ ಶತಪತ್ರಪರಿಸ್ಫುಟರೇಖೆಗಳ್ ಮನೋ*
*ಹರತರಮಾಗೆ ಕಲ್ಪತರು ಕೋಮಲಪಲ್ಲವದಂತೆ ಮೆಲ್ಪಿನಿಂ ॥*
*ಪೊರೆದ ನರೇಂದ್ರವೃಂದ ಮಣಿಮೌಳಿಕದಂಬಕಚುಂಬನೋಚಿತಂ*
*ಚರಣಯುಗಂ ಮನಂಗೊಳಿಸುತಿರ್ದಪುದಿಂತಿದೆನಲ್ ಕುಮಾರನಾ ॥*

*(ಕರ್ಣಾಟಕ ಕಾದಂಬರಿ, ೨–೧೧೨)*

ಕೆಂದಾವರೆಯ ಎಸಳುಗಳಂತೆ ಕೆಂಪಾದ ಈ ಎರಡು ಕೈಗಳು, ಶಂಖ, ಚಕ್ರ ರೇಖೆಗಳನ್ನು ಹೊಂದಿರಲಾಗಿ ಶ್ರೀಮನ್ನಾರಾಯಣನ ಕೈಗಳಂತೆ ಶೋಭಿಸುತ್ತಿವೆ.

ಈ ಶಿಶುವಿನ ಎರಡು ಕಾಲುಗಳಲ್ಲಿ ಆನೆ, ಕುದುರೆ, ಛತ್ರಿ, ಕಮಲ ರೇಖೆಗಳು ಬಹಳ ಮೃದುವಾದ ಕಾಲಿಗೆರಗುವ ಅಸಂಖ್ಯಾತ ರಾಜರ ಕಿರೀಟಗಳ ತಗಲುವಿಕೆಗೆ ಪಾತ್ರವಾಗುವ ಈ ಚರಣಯುಗಳವು ಬಹಳ ಮನೋಹರವಾಗಿದೆ. ಮಗುವಿನ ಶುಭಲಕ್ಷಣಗಳನ್ನು ಇಲ್ಲಿ ಹೇಳಲಾಗಿದೆ. ಇದು ಹಸ್ತ ಮತ್ತು ಪಾದರೇಖೆಗಳಿಗೆ ಸಂಬಂಧಿಸಿದ ಶಾಸ್ತ್ರಗಳಿಗೆ ಸಂಬಂಧಿಸಿದೆ. ಮಗುವಿನ ಭವಿಷ್ಯವನ್ನು ಇದು ಸೂಚಿಸುತ್ತದೆ. ಮುಂದೆ ಅಸಂಖ್ಯಾತ ರಾಜರು ಮಗುವಿನ ಪಾದಕ್ಕೆ ಎರಗಲಿದ್ದಾರೆಂದು ಇದು ಸೂಚಿಸುತ್ತದೆ.

**೬೮೭. ಶೂದ್ರ**

ಶೂದ್ರಾತಿಶೂದ್ರ ಮತ್ತು ಶೂದ್ರವೆಂಬ ಪರಿಕಲ್ಪನೆಯು ಭಾರತೀಯ ಸಾಮಾಜಿಕ ಸ್ವರೂಪವನ್ನು ವಿವರಿಸುತ್ತದೆ ಮತ್ತು ಬ್ರಾಹ್ಮಣರನ್ನು ಕೇಂದ್ರವಾಗಿರಿಸಿಕೊಂಡಿದೆ. ಬ್ರಾಹ್ಮಣರು ಶೂದ್ರರೆಂದು ಕರೆದು, ಬ್ರಾಹ್ಮಣರು ತಮ್ಮನ್ನು ಪ್ರತ್ಯೇಕ ವರ್ಗವಾಗಿರಿಸಿಕೊಂಡರು. ಇದು ಬ್ರಾಹ್ಮಣರನ್ನು 'ಕುಲದ ಅಗ್ಗಳಿಕೆಗೂ' ಶೂದ್ರರನ್ನು 'ಕೀಳರಿಮೆ'ಗೂ ತಳ್ಳಿತು. ಈ ಅಭಿಪ್ರಾಯ ಜ್ಯೋತಿಭಾಪುಲೆಯವರಿಗೂ ಇತ್ತು.

ಅಂತೆಯೇ ಭಾರತದ ವಾಯುವ್ಯದಲ್ಲಿದ್ದ ಎಲ್ಲ ಬುಡಕಟ್ಟುಗಳವರನ್ನೂ ನಿಕೃಷ್ಟರನ್ನಾಗಿಯೇ ಕಾಣಲಾಗುತ್ತಿತ್ತು. "ಶೂದ್ರ ಹೆಂಗಸು" ಎಂದಾಗ ಅದು ಒಂದು ಬುಡಕಟ್ಟಿನ ಸೂಚನೆಯಾಗಿ ಕಾಣುತ್ತದೆ. ಅದೇ ಅಥರ್ವ ವೇದ ಮಂತ್ರವು ಪೈಪ್ಪಲಾದ ಸಂಹಿತೆಯಲ್ಲಿಯೂ ಬರುತ್ತದೆ (೧೩. ೧.೯); ಆದರೆ ಅಲ್ಲಿ 'ಶೂದ್ರ' ಎಂಬ ಪದದ ಬದಲು 'ದಾಸೀ' ಎಂಬ ಪದವನ್ನು ಬಳಸಲಾಗಿದೆ. ಆ ಮಂತ್ರದ ಕರ್ತೃವಿನ ದೃಷ್ಟಿಯಲ್ಲಿ 'ಶೂದ್ರ' ಮತ್ತು 'ದಾಸೀ' ಪದಗಳ ನಡುವೆ ವ್ಯತ್ಯಾಸವಿರಲಿಲ್ಲ. ಇದೆಲ್ಲದರಿಂದ ತೀರ್ಮಾನಿಸಬಹುದಾದ ಅಂಶ ಇದು : ಅರ್ಥರ್ವವೇದದ ಅತಿ ಪ್ರಾಚೀನ ಘಟ್ಟದಲ್ಲಿ 'ಶೂದ್ರ' ಪದವು ಒಂದು ಬುಡಕಟ್ಟು ಸೂಚಕವೇ ಹೊರತು ಒಂದು ವರ್ಣದ ಹೆಸರಾಗಿ ಬರುವುದಿಲ್ಲ.

ವೈದಿಕ ಕಾಲದ ಕಡೆಯ ವೇಳೆಗೆ, ಕೆಲವು ಆಚರಣೆಗಳ ಸಂದರ್ಭದಲ್ಲಿ ಶೂದ್ರನನ್ನು ಮುಟ್ಟುವುದು ಮತ್ತು ನೋಡುವುದು ಕೂಡದೆಂಬ ನಿಯಮ ಅಸ್ತಿತ್ವಕ್ಕೆ ಬಂದಿತು. ಅವನೊಡನೆ ಮಾತನಾಡಕೂಡದು ಕೂಡ (ಶ.ಬ್ರಾ. III.೧.೧.೧೦). ಸೋಮಯಾಗದ ಪೂರ್ವಭಾಗವಾದ ಪ್ರವರ್ಗ್ಯವೆಂಬ ಆಚರಣೆಯ ಸಮಯದಲ್ಲಿ ಯಾಗ ಮಾಡುವವನು ಶೂದ್ರ ಮತ್ತು ಸ್ತ್ರೀ ಇಬ್ಬರನ್ನೂ ದೂರವಿಡಬೇಕು; ಏಕೆಂದರೆ ಅವರು ಅಸತ್ಯ ಎನ್ನುತ್ತದೆ ಶತಪಥ ಬ್ರಾಹ್ಮಣ (XIV.1.1.31). ಕಾಠಕ ಸಂಹಿತೆಯಲ್ಲಿ ಬರುವ ಇಂತಹ ಮಾತನ್ನು ಬಿಟ್ಟರೆ ಶೂದ್ರ ಮತ್ತು ಸ್ತ್ರೀಯರನ್ನು ಹೀಗೆ ಒಟ್ಟಾಗಿಸಿರುವ ಭಾಗಗಳಲ್ಲಿ ಇದೇ ಅತ್ಯಂತ ಪ್ರಾಚೀನವಾದ ಆಕರ. ಒಬ್ಬ ಬಡಗಿಯೇನಾದರೂ ಯಜ್ಞಪಾತ್ರೆಗಳನ್ನು ಮುಟ್ಟಿಬಿಟ್ಟರೆ ಆಚರಣೆಯೆಲ್ಲಾ ಅಶುದ್ಧವಾಗುತ್ತದೆಂಬ ಮಾತೂ ಇದೆ.

ಚಾತುರ್ವರ್ಣ್ಯದ ಹೊರಗಿನ ಪಂಚಮರೂ ಅದಿತಿಯೇ ಅಹುದು, ಎಂದಂತಾಯಿತು. ಉಚ್ಚವರ್ಣದವರೆಂದು ಬಗೆಯಲಾದ ತ್ರೈವರ್ಣಿಕರಲ್ಲದೆ 'ಶೂದ್ರ' ಎಂಬ ಇನ್ನೂ ಒಂದು ವರ್ಣವೂ (ಅಂದಿನ ಸಮಾಜ ರೂಪೀ) ವಿರಾಟ್ ಪುರುಷನ ಅಂಗವಾಗಿದ್ದುದರ ಪ್ರತಿಮಾ ಉಲ್ಲೇಖವು ಋಗ್ವೇದದ 'ಸಹಸ್ರಶೀರ್ಷ': ಪುರುಷನ ವರ್ಣನೆಯಲ್ಲಿ ಬರುತ್ತದೆ. ಚಾತುರ್ವರ್ಣ್ಯದ ಹೊರಗೆ ಇರುವ ಐದನೆಯ ಗುಂಪೂ ಒಂದು, ಆಗ ಇರಬೇಕೆಂದು, ಅದಿತಿಯ ಭಕ್ತಕೋಟಿಯ ಯಾದಿಯಿಂದ ತಿಳಿಯುತ್ತದೆ. ಮೊದಲಿನ ನಾಲ್ಕೂ ವರ್ಣದ ಜನ, ಪಂಚಮರನ್ನು ತಮ್ಮಿಂದ ಬೇರೆ ಎಂದು ಬಗೆಯುತ್ತಿರಬೇಕು. ಅವರನ್ನು ತಮ್ಮ ಸಮಾಜದಿಂದ ದೂರವಿರಿಸುತ್ತಿರಬೇಕು. ಪುಳಿಂದ ಮೊದಲಾದವರ ಉಲ್ಲೇಖಗಳು ಮುಂದಿನ ಕಾಲದಲ್ಲಿ ಬರುತ್ತವೆ. ಋಗ್ವೇದದ ಅದಿತಿದೇವಿಯ ವಿರಾಟ್ ರೂಪದಲ್ಲಿ ಪಂಚಮರೂ ಅದಿತಿಯೇ ಆಗಿದ್ದಾಳೆ ಎಂಬ ಈ ಮಾತು ಅಪೂರ್ವವಾಗಿದೆ. ಅಥರ್ವಣದಲ್ಲಿ ಬರುವ 'ವ್ರಾತ್ಯಸ್ತೋಮ'ವನ್ನು ಇಲ್ಲಿ ನೆನೆದುಕೊಳ್ಳಬೇಕು. ಆ ಕಾಲದ ವ್ರಾತ್ಯ (ಜನ)ರನ್ನು ಸಂಸ್ಕಾರಪೂರ್ವಕ ತಮ್ಮಲ್ಲಿ ಪತಿತ–ಪರಾವರ್ತನದ ಇತಿಹಾಸ ದೃಷ್ಟಿಯಿಂದ ಸ್ವೀಕರಿಸುತಿದ್ದುದಾಗಿ ಈ ಹೋಮದ ಉದ್ದೇಶವಿರುವುದಾಗಿ ಬಲ್ಲಿದರ ಅಭಿಪ್ರಾಯ ಎಂದು ಶಂಬಾ ಹೇಳುತ್ತಾರೆ.

ವಜ್ರಸೂಚಿಯಲ್ಲಿ ಈ ಕೆಳಗಿನಂತೆ ಬರುತ್ತದೆ: ಶೂದ್ರನೂ ಬ್ರಾಹ್ಮಣನಾಗಬಲ್ಲ. ಹೇಗೆಂಬುದನ್ನು ಮಾನವ ಧರ್ಮದಲ್ಲಿ ಹೇಳಲಾಗಿದೆ – "ಮಹಾಮುನಿ ಕಠನು ಅರಣಿಯ ಗರ್ಭದಿಂದ ಜನಿಸಿದನು–ತಪಸ್ಸಿನಿಂದ ಅವನು ಬ್ರಾಹ್ಮಣನಾದ. ಆದ್ದರಿಂದ ಜಾತಿಯು ಬ್ರಾಹ್ಮಣತ್ವಕ್ಕೆ ಕಾರಣವಾಗುವುದಿಲ್ಲ" (೨೨) "ಮಹರ್ಷಿ ವ್ಯಾಸನು ಒಬ್ಬ ಬೆಸ್ತರವಳ ಗರ್ಭದಿಂದ ಜನಿಸಿದ. ಅವನೂ ತಪಸ್ಸಿನ ಸಾಮರ್ಥ್ಯದಿಂದ ಬ್ರಾಹ್ಮಣನಾದ. ಆದ್ದರಿಂದ ಬ್ರಾಹ್ಮಣನಾಗಲು ಹುಟ್ಟೇ ಆಧಾರವಾಗಬೇಕಾಗಿಲ್ಲ" (೨೩) "ಮಹಾಮುನಿ ವಸಿಷ್ಠನು ಊರ್ವಶಿಯ ಗರ್ಭದಿಂದ ಜನಿಸಿದವನು. ತಪೋ ಬಲದಿಂದ ಅವನು ಮುಂದೆ ಬ್ರಾಹ್ಮಣನಾದ". ಆದ್ದರಿಂದ ಜನ್ಮದಿಂದ ಬ್ರಾಹ್ಮಣನಾಗುತ್ತಾನೆ ಎಂಬುದರಲ್ಲಿ ಹುರುಳಿಲ್ಲ.(೨೪) "ಪ್ರಖ್ಯಾತ ಮಹಾಮುನಿ ಋಷ್ಯಶೃಂಗ ಒಂದು ಜಿಂಕೆಯಿಂದ ಉಗಮಿಸಿದ ಮತ್ತು ತನ್ನ ಉತ್ಕೃಷ್ಟ ತಪಸ್ಸಿನಿಂದ ಅವನೂ ಬ್ರಾಹ್ಮಣನಾದ, ಬ್ರಾಹ್ಮಣತ್ವ ಪ್ರಾಪ್ತವಾಗಲು ಕಾರಣ ಜಾತಿ ಅಲ್ಲ." (೨೫) "ಮಹಾಸಂತ ವಿಶ್ವಾಮಿತ್ರ ಒಬ್ಬ ಚಾಂಡಾಲಿನಿಯ ಗರ್ಭದಿಂದ ಜನಿಸಿದ, ಉಗ್ರ ತಪಸ್ಸಿನಿಂದ ಬ್ರಾಹ್ಮಣನಾದ, ಬ್ರಾಹ್ಮಣ ನಾಗಲು ಕಾರಣ ಜಾತಿ ಅಲ್ಲ" (೨೬) "ಮಹರ್ಷಿನಾರದ ತಂಡೂಲಿ (ಮನೆ ಕೆಲಸದವಳು)ಯ ಗರ್ಭದಲ್ಲಿ ಜನಿಸಿದನು. ತಪೋಬಲದಿಂದ ಅವನು ಬ್ರಾಹ್ಮಣನಾದ. ಜಾತಿಯು ಬ್ರಾಹ್ಮಣತ್ವಕ್ಕೆ ಕಾರಣವಲ್ಲ." (೨೭) ಆತ್ಮ ಸಂಯಮಿಯಾದ ವ್ಯಕ್ತಿಯನ್ನು ಜಿತೇಂದ್ರಿಯ 'ಯತಿ' ಅಥವಾ 'ಸಂತ' ಎಂದೂ ಕರೆಯುತ್ತಾರೆ. ತಪಸ್ಸಿನಿಂದ ವ್ಯಕ್ತಿ ತಪಸ್ವಿಯಾಗುತ್ತಾನೆ. ಹಾಗೆಯೇ ಬ್ರಹ್ಮಚರ್ಯೆ ಪಾಲನೆ ಅಂದರೆ ಇಂದ್ರಿಯ ಸುಖ ವಿರಕ್ತಿಯ ಮೂಲಕ ಅವನು ಬ್ರಾಹ್ಮಣ ಎಂದು ಕರೆಯಲ್ಪಡುತ್ತಾನೆ. (೨೮) ಸಮಾಜದಲ್ಲಿ ಬ್ರಾಹ್ಮಣ ರೆಂದು ಗುರುತಿಸಲ್ಪಡುವ ಬ್ರಾಹ್ಮಣಸ್ತ್ರೀಯ ಪುತ್ರರು ಬ್ರಾಹ್ಮಣರಲ್ಲ. ಶೀಲ ಸಚ್ಚಾರಿತ್ರ್ಯಗಳಿಂದ ಕೂಡಿದವರು ಬ್ರಾಹ್ಮಣರು. ಆದ್ದರಿಂದ ಕುಟುಂಬವು ಬ್ರಾಹ್ಮಣತ್ವಕ್ಕೆ ಕಾರಣವಾಗುವುದಿಲ್ಲ. (೨೯) "ಒಬ್ಬ ವ್ಯಕ್ತಿ ಬ್ರಾಹ್ಮಣ ಕುಟುಂಬದಲ್ಲಿ ಹುಟ್ಟಿದ್ದರೂ ಅವನಿಗೆ ಸಚ್ಚಾರಿತ್ರ್ಯವಿಲ್ಲವಾದರೆ ಏನು ಪ್ರಯೋಜನ. ಕೆಳಸ್ತರದ ಕುಟುಂಬಗಳಲ್ಲಿ ಜನಿಸಿದವರಾದರೂ ಅನೇಕ ಸದ್ಗುಣ ಸಂಪನ್ನರಾದ ಧೀರರು ಅವರ ನಡತೆಯಿಂದ ಸ್ವರ್ಗವನ್ನು ತಲುಪಿದ್ದಾರೆ." (೩೦) ಪಾಣಿನಿ ಮತ್ತು ಮನುಗಳು ಶಕ; ಹೂಣರನ್ನು ಶೂದ್ರರೆಂದು ಕರೆಯುತ್ತಾರೆ. ಬೌದ್ಧಮತದ ಬಹುತೇಕ ಕೃತಿಗಳು ಕ್ಷತ್ರಿಯರಿಗೆ ಬ್ರಾಹ್ಮಣರಿಗಿಂತ ಹೆಚ್ಚಿನ ಮಹತ್ವವನ್ನು ಕೊಟ್ಟಿವೆ. ಬುಡಕಟ್ಟು ಜನರ ಗುರಿಕಾರ ಮತ್ತು ಜಮೀನುದಾರನಿಗಿಂತಲೂ ಕ್ಷತ್ರಿಯನಿಗೆ ಹೆಚ್ಚಿನ ಪ್ರಾಶಸ್ತ್ಯವಿತ್ತು.

*ವಿವರಗಳಿಗೆ ನೋಡಿ: ಬಿ.ವಿ. ವೀರಭದ್ರಪ್ಪ ೨೦೦೭ ಅಶ್ವಘೋಷನ ವಜ್ರಸೂಚಿ ಪುಟ. ೧೮–೧೯*

*ಶಂಬಾ ಜೋಶಿ ೧೯೯೯ ಸಂಪುಟ. ೩ ಹಾಲುಮತ ದರ್ಶನ ಪುಟ. ೧೪೪, I. ೧.೩.೧೨*

*Romila Thapar 1975 The Past and Prejudice P.15-16, 34*

೭೮೮. ಶೂದ್ರರ ಮದುವೆ ಆಚರಣೆಗಳು ಮತ್ತು ಮಿಶ್ರ ಜಾತಿಗಳ ರಚನೆ

ಅರ್ಥಶಾಸ್ತ್ರವು ಮುಖ್ಯವಾಗಿ ಆರ್ಥಿಕ ಹಾಗೂ ರಾಜಕೀಯ ನೀತಿಗಳಿಗೆ ಸಂಬಂಧಿಸಿದ ಕೃತಿಯಾದ್ದರಿಂದ ಶೂದ್ರರ ಸಾಮಾಜಿಕ ಪರಿಸ್ಥಿತಿಯನ್ನು ಕುರಿತು ಧರ್ಮಸೂತ್ರಗಳು ಕೊಡುವಷ್ಟು ಮಾಹಿತಿಯನ್ನು ಅದು ಕೊಡುವುದಿಲ್ಲ. ಆದಾಗ್ಯೂ ಅದು ಶೂದ್ರರ ಮದುವೆ ನಡಾವಳಿ ಹಾಗೂ ಶೂದ್ರ ಹೆಂಗಸರ ಸ್ಥಾನಮಾನದ ಬಗ್ಗೆ ಬೆಳಕನ್ನು ಚೆಲ್ಲುತ್ತದೆ. ಮೂರು ಉಚ್ಚ ವರ್ಣಗಳ ಮದುವೆ ಪದ್ಧತಿ ಪ್ರಕಾರ, ಪಾಣಿಗ್ರಹಣಕ್ಕೆ ಮುಂಚೆಯೇ ಮದುಮಗಳನ್ನು ತಿರಸ್ಕರಿಸಿದ್ದಾದರೆ ಅದು ಊರ್ಜಿತ; ಆದರೆ ಶೂದ್ರರಲ್ಲಿ ಕೂಡಿಕೆಗೆ ಮುಂಚೆ ಹೆಣ್ಣನ್ನು ತಿರಸ್ಕರಿಸಬಹುದು ಎಂದು ಅರ್ಥಶಾಸ್ತ್ರ (III. ೧೫) ತಿಳಿಸುತ್ತದೆ. ಸಮ್ಮತಿಸಲ್ಪಟ್ಟ ವಿವಾಹ ಪದ್ಧತಿಗಳ ಪೈಕಿ ಮೊದಲ ನಾಲ್ಕು ಬಗೆಯ ವಿವಾಹಗಳಲ್ಲಿ ವಿಚ್ಛೇದನಕ್ಕೆ ಅನುಮತಿಯಿಲ್ಲ ಎಂದು ಅದು ಹೇಳುತ್ತದೆ (III. ೩); ಅಂದರೆ ಗಾಂಧರ್ವ, ಅಸುರ, ರಾಕ್ಷಸ ಮತ್ತು ಪೈಶಾಚ ರೀತಿಯ ವಿವಾಹಗಳಲ್ಲಿ ವಿಚ್ಛೇದನಕ್ಕೆ ಅಡ್ಡಿಯಿಲ್ಲ ಎಂದಾಗುತ್ತದೆ. ಸಮ್ಮತವಾದ ವಿವಾಹ ಪದ್ಧತಿಗಳಲ್ಲಿ ತಂದೆಯ ಒಪ್ಪಿಗೆ ಪಡೆಯತಕ್ಕದ್ದೆಂದು ಮತ್ತು ಮಾನ್ಯವಿರದ ಪದ್ಧತಿಗಳಲ್ಲಿ ತಾಯಿಯ ಒಪ್ಪಿಗೆ ಸಹ ಅಗತ್ಯವೆಂದು ಕೌಟಿಲ್ಯ ಹೇಳುತ್ತಾನೆ (III. ೨). ಮಾತೃ ಆಳ್ವಿಕೆ ಸಮಾಜದ ಮೂಲ ಲಕ್ಷಣಗಳು ಕೆಳ ದರ್ಜೆ ಜನರಲ್ಲಿ ಇನ್ನೂ ಪ್ರಚಲಿತವಿದ್ದದ್ದರಿಂದ ಅವು ಆ ದರ್ಜೆಯ ಹಂಗಸರಿಗೆ ಸ್ವಲ್ಪಮಟ್ಟಿನ ಪ್ರಾಮುಖ್ಯತೆ ತಂದುಕೊಟ್ಟಿದ್ದವು ಎಂಬುದನ್ನು ಇದು ಪರೋಕ್ಷವಾಗಿ ತೋರಿಸುತ್ತದೆ. ಕೌಟಿಲ್ಯನ ಇತರ ಕಟ್ಟಳೆಗಳನ್ನು ವಿಶ್ಲೇಷಿಸಿದಾಗ ಶೂದ್ರರಲ್ಲಿ ಮದುವೆಯ ಬಂಧ ಉಚ್ಚ ವರ್ಣಗಳಲ್ಲಿದ್ದಷ್ಟು ಬಲವಾಗಿರಲಿಲ್ಲವೆಂದೂ, ಉಚ್ಚ ವರ್ಣಗಳ ಹೆಂಗಸರು ತಮ್ಮ ಗಂಡಂದಿರನ್ನು ಹೆಚ್ಚಾಗಿ ಅವಲಂಬಿಸಿದ್ದರೆಂದೂ ತಿಳಿದುಬರುತ್ತದೆ.

ನಟರು, ಆಟಗಾರರು (ಹಾವಾಡಿಗರು) ಹಾಡುಗಾರರು, ಮೀನುಗಾರರು, ಬೇಟೆಗಾರರು, ಮಂದೆ ಕಾಯುವವರು, ಮದ್ಯದ ಭಟ್ಟಿ ಇಳಿಸುವವರು, ಮಾರಾಟಗಾರರು ಮತ್ತು ಇಂಥ ಇತರ ಕಸುಬುಗಾರರು (ತಮ್ಮ ತಮ್ಮ ಉದ್ಯೋಗಗಳನ್ನು ಅನುಸರಿಸುತ್ತ) ಮಾಡುವ ಪ್ರವಾಸದಲ್ಲಿ ಅವರ ಹೆಂಗಸರೂ ಅವರೊಡನಿರುತ್ತಾರೆ ಎಂದು ಕೌಟಿಲ್ಯ ತಿಳಿಸುತ್ತಾನೆ (III. ೩).

ಪಾಣಿನಿಯು ಚಂಡಾಲರನ್ನು ಶೂದ್ರ ವರ್ಣದಲ್ಲಿ ಸೇರಿಸಿದಂತಿದೆ ಎಂಬುದನ್ನು ಈಗಾಗಲೇ ನೋಡಿದ್ದೇವೆ. ಆದರೆ ಕೌಟಿಲ್ಯ ಅವರನ್ನು ಶೂದ್ರರೆಂದು ಪರಿಗಣಿಸುವುದಿಲ್ಲ. ಚಾತುರ್ವರ್ಣ್ಯ ಸಂಘಟನೆಯೊಳಗೆ ಶೂದ್ರರಿಗೆ ಸ್ಥಾನವಿರಲಿಲ್ಲ ಎಂಬ ವಿಷಯ ಕೌಟಿಲ್ಯನು ದಂಡ ವಿಧಿಸುವಾಗ ತೋರುವ ತಾರತಮ್ಯದ ನೀತಿಯಿಂದ ಗೊತ್ತಾಗುತ್ತದೆ. ಚಂಡಾಲರ ಪ್ರಾಣಿ ಪಕ್ಷಿಗಳಿಗೆ ಘಾಸಿಯುಂಟುಮಾಡುವವರಿಗೆ ವಿಧಿಸುವ ದಂಡ, ಅಂಥದೇ ಅಪರಾಧಕ್ಕೆ ಚಾತುರ್ವರ್ಣ್ಯ ಸದಸ್ಯರಿಗೆ ವಿಧಿಸುವ ದಂಡದಲ್ಲಿ ಅರ್ಧದಷ್ಟು ಇರಬೇಕೆಂದು ಅವನು ಹೇಳುತ್ತಾನೆ (IV. ೧೦). ಚಂಡಾಲನು ಆರ್ಯ ಮಹಿಳೆಯನ್ನು ಮುಟ್ಟಿದ್ದಾದರೆ ಅವನಿಗೆ ಒಂದು ನೂರು ಪಣಗಳ ದಂಡ ಹಾಕಬೇಕೆಂದು ಹೇಳಲಾಗಿದೆ; ಆದರೆ

ಅವನು ಶೂದ್ರ ಸ್ತ್ರೀಯನ್ನು ಮುಟ್ಟಿದ್ದಾದರೆ ಅಂಥ ದಂಡ ವಿಧಿಸಬೇಕೆಂದು ಹೇಳಿಲ್ಲ. ಹಾಗೆಯೇ ಚಂಡಾಲನು ಉಪಯೋಗಿಸುವ ಕೆರೆಯ ನೀರನ್ನು ಇತರರು ಯಾರೂ ಉಪಯೋಗಿಸುವ ಹಾಗಿರಲಿಲ್ಲ (ಅ.ಶಾ. I. ೧೪). ಆದ್ದರಿಂದ ಚಂಡಾಲರನ್ನು ಅಸ್ಪೃಶ್ಯರೆಂದು ಪರಿಗಣಿಸಲಾಗಿತ್ತೆಂಬುದು ನಿಸ್ಸಂಶಯವಾಗಿದೆ. ಆದರೆ ನಿಷಾದ, ಪಾರಶವ ಮುಂತಾದ ಮಿಶ್ರ ಜಾತಿಗಳ ಬಗ್ಗೆ ಕೌಟಿಲ್ಯ ಇಂಥ ನಿಲುವನ್ನು ತಾಳುವುದಿಲ್ಲ.

ವ್ಯಭಿಚಾರಕ್ಕೆ ಸಂಬಂಧಿಸಿದ ಕಾನೂನಿನ ಪ್ರಕಾರ ಒಬ್ಬ ಬ್ರಾಹ್ಮಣನು, ರಕ್ಷಣೆಯೊಲ್ಲದ ಮೂರು ಕೆಳವರ್ಣಗಳ ಸ್ತ್ರೀಯರನ್ನು ಸಮೀಪಿಸಿದ್ದಾದರೆ ಅವನಿಗೆ ೫೦೦ ಪಣಗಳ ದಂಡ ಹಾಕಬೇಕು; ಒಬ್ಬ ಅಂತ್ಯಜಳ ಮೇಲೆ ಇಂತಹುದೆ ಅಪರಾಧವೆಸಗಿದರೆ ದಂಡವನ್ನು ೧೦೦೦ ಪಣಗಳಿಗೆ ಏರಿಸಬೇಕು (VIII. ೩೮೫). ರಕ್ಷಣೆ ಹೊಂದಿರುವ ಶೂದ್ರ ಹೆಂಗಸಿನೊಡನೆ ಸಂಭೋಗ ನಡೆಸುವ ಒಬ್ಬ ಕ್ಷತ್ರಿಯ ಅಥವಾ ವೈಶ್ಯನಿಗೆ ಒಂದೇ ಸಮನಾದ ದಂಡ ವಿಧಿಸತಕ್ಕದ್ದು (VIII. ೩೮೩). ಬ್ರಾಹ್ಮಣನೊಬ್ಬನು ಒಬ್ಬ ವೃಷಲೀ ಯೊಡನೆ ಚಕ್ಕಂದವಾಡುತ್ತ ಒಂದು ರಾತ್ರಿ ಕಳೆದರೆ ಅವನು ಮೂರು ವರ್ಷಗಳ ಕಾಲ ಭಿಕ್ಷಾಟನೆ ಮತ್ತು ನಿತ್ಯ ಮಂತ್ರಪಠಣ ಮಾಡುತ್ತ ಜೀವಿಸಿದ್ದಾದರೆ ಆ ಪಾಪವನ್ನು ಕಳೆದುಕೊಳ್ಳುವನು ಬ್ರಾಹ್ಮಣನು ಅಡ್ಡ ದಾರಿ ಹಿಡಿಯದೆ ತನ್ನ ಸದಾಚಾರವನ್ನು ಕಾಯ್ದುಕೊಂಡಿರಲಿ ಎಂಬುದೇ ಈ ಬಹುತೇಕಕಾಯ್ದೆಗಳ ಉದ್ದೇಶವಾಗಿದೆ. ಅದೇ ಸಮಯಕ್ಕೆ ಶೂದ್ರ ಹೆಂಗಸಿನ ಸಚ್ಚಾರಿತ್ರ್ಯವನ್ನು ಸಹ ಮನು ರಕ್ಷಿಸುತ್ತಾನೆ ಎಂಬುದನ್ನು ಈ ಕಾಯ್ದೆಗಳು ಸ್ಪಷ್ಟಪಡಿಸುತ್ತವೆ. ನಾಲ್ಕೂ ವರ್ಣಗಳಿಗೆ ಸೇರಿದ ಸ್ತ್ರೀಯರು ಸುರಕ್ಷಿತಾಗಿರಬೇಕು ಎಂಬ ಮನು ತತ್ವಕ್ಕೆ ಇವು ಅನುಗುಣವಾಗಿವೆ (VIII. ೩೫೯).

ಬೇರೆಯವರ ಪತ್ನಿಯರೊಂದಿಗೆಯಾಗಲೀ ಅಥವಾ ಒಬ್ಬ ಯಜಮಾನ ಅಡಿಯಲ್ಲಿ ಕೆಲಸ ಮಾಡುವ ಹೆಣ್ಣು ಗುಲಾಮರೊಂದಿಗೆಯಾಗಲೀ ಜನರು ಸಂಭಾಷಣೆ ನಡೆಸಿದ್ದಾದರೆ ಅಂತಹವರು ಒಂದು ಸಣ್ಣ ಮೊತ್ತದ ದಂಡ ಕೊಡಬೇಕೆಂದು ಮನು ನಿಯಮಿಸುತ್ತಾನೆ (VIII.೩೬೩). ಬೌದ್ಧ ಹಾಗೂ ಜೈನ ಸಂನ್ಯಾಸಿಯರೊಡನೆ ಮಾತನಾಡಿದಾಗಲೂ ಇದೇ ದಂಡ ಅನ್ವಯಿಸುತ್ತದೆ (ಮನು, ಅದೇ). ಶೂದ್ರ ವ್ಯಭಿಚಾರಿಗೆ ಮನು ಅತಿ ಕಠಿಣ ಶಿಕ್ಷೆಯನ್ನು ವಿಧಿಸುತ್ತಾನೆ. ಶೂದ್ರನು ಒಬ್ಬ ರಕ್ಷಣೆಯಿಲ್ಲದ ದ್ವಿಜಾತಿ (ಬ್ರಾಹ್ಮಣ) ಸ್ತ್ರೀಯೊಡನೆ ಸಂಭೋಗ ನಡೆಸಿದರೆ ಅಂತಹವನು ತನ್ನ ಶಿಶ್ನವನ್ನೂ ಎಲ್ಲ ಆಸ್ತಿಯನ್ನೂ ಕಳೆದುಕೊಳ್ಳುವನು; ರಕ್ಷಣೆಗೆ ಒಳಪಟ್ಟ ಸ್ತ್ರೀಯ ಮೇಲೆ ಈ ಅಪರಾಧವೆಸಗಿದರೆ ಅವನು ಎಲ್ಲವನ್ನೂ – ತನ್ನ ಜೀವ ಸಹಿತ – ಕಳೆದುಕೊಳ್ಳುವನು ಎನ್ನುತ್ತಾನೆ ಮನು (VIII. ೩೭೪). ಕ್ಷತ್ರಿಯರು ಮತ್ತು ವೈಶ್ಯರು ಒಬ್ಬ ಶ್ರೇಷ್ಠ ಬ್ರಾಹ್ಮಣರ ಪತ್ನಿಯ ಮೇಲೆ ಅಪರಾಧ ಮಾಡಿದರೆ ಶೂದ್ರನಿಗೆ ಕೊಡುವ ಶಿಕ್ಷೆಯೇ ಅಂಥವರಿಗೆ ಸಲ್ಲುತ್ತದೆ ಅಥವಾ ಒಣ ಹುಲ್ಲಿನ ಬೆಂಕಿಯಲ್ಲಿ ಅವರನ್ನು ಸುಡಬೇಕು (VIII. ೩೭೭). ಕ್ಷತ್ರಿಯ ಹಾಗೂ ವೈಶ್ಯ ಅಪರಾಧಿಗಳ ವಿಷಯದಲ್ಲಿ ಹೇಳಲ್ಪಟ್ಟಿರುವ ಜೀವಸಹಿತ ಸುಡುವ ಮರಣ ದಂಡನೆ ವಸಿಷ್ಠನಲ್ಲಿಯೂ ಕಂಡುಬರುತ್ತದೆ (ವಸಿಷ್ಠ ಧರ್ಮಸೂತ್ರ XXI. ೨–೩);

ಆದರೆ ಕೌಟಿಲ್ಯ ಈ ಉಗ್ರ ಶಿಕ್ಷೆಯನ್ನು ಶೂದ್ರನಿಗೆ ಸೀಮಿತಗೊಳಿಸುತ್ತಾನೆ (ಅ.ಶಾ. IV. ೧೩). ಶೂದ್ರ ವ್ಯಭಿಚಾರಿಗೆ ವಿಧಿಸಿರುವ ದಂಡನೆಯನ್ನು ಇತರ ಮೂಲಗಳೂ ಸಮರ್ಥಿಸುತ್ತವೆಯಾದ್ದರಿಂದ ಮನುವಿನ ಈ ಶಿಕ್ಷೆ ಪರಿಣಾಮರಹಿರವಾಗಿತ್ತೆಂದು ಹೇಳಲಿಕ್ಕಾಗುವುದಿಲ್ಲ.

ವಿಧವೆಯ ಪುನರ್ವಿವಾಹ ಹಾಗೂ ನಿಯೋಗ ಪದ್ಧತಿಗಳು ಪಶುಧರ್ಮವೆಂದು ಶಾಸ್ತ್ರಗಳನ್ನು ಬಲ್ಲ ದ್ವಿಜರು ಪರಿಗಣಿಸುತ್ತಾರೆ (X. ೬೬).

ಶೂದ್ರ ಮೂಲಪುರುಷ ವಸಿಷ್ಠ ಎಂದೂ (III. ೧೯೬-೯೮), ನಾಮಧೇಯ (ನಾಮಕರಣ) ಪದ್ಧತಿಯನ್ನು ಅವರು ಆಚರಿಸಬಹುದೆಮದೂ (II. ೩೦-೩೧) ಹೇಳಲಾಗಿದೆ. ಶೈವ ಹಾಗೂ ಬೌದ್ಧ ಸಂಪ್ರದಾಯದವರಾಗಿದ್ದ ಕುಷಾಣ ರಾಜರು ಕೆಳವರ್ಗದ ಜನರ ಬಗ್ಗೆ ಉದಾರ ಧಾರ್ಮಿಕ ಮನೋಧರ್ಮವನ್ನು ತಾಳಿದ್ದರಿಂದಲೂ ಶೂದ್ರರ ಸ್ಥಿತಿ ಉತ್ತಮಗೊಂಡಿತೆಂದು ಹೇಳಬಹುದು. ಕ್ರಿಸ್ತಶಕದ ಮೊದಲ ಹಾಗೂ ಎರಡನೆಯ ಶತಮಾನಗಳಲ್ಲಿ ಬೌದ್ಧಮತದ ಪ್ರಭಾವವಿದ್ದ ಸಾತಾವಾಹನರ ರಾಜ್ಯಗಳೂ ಇದೇ ರೀತಿಯ ಬದಲಾವಣೆಗಳನ್ನು ಕಂಡಿರುವ ಶಕ್ಯತೆಯಿದೆ.

ಆದಾಗ್ಯೂ, ಸ್ತ್ರೀ ಗುಲಾಮರು ಹಾಗೂ ಹೆಣ್ಣಾಳುಗಳು ಶ್ರೀಮಂತರ ಮನೆಗಳಲ್ಲಿ ಕೆಲಸ ಮಾಡಿಕೊಂಡಿದ್ದರೆನ್ನುವುದಕ್ಕೆ ಸಾಕಷ್ಟು ಸಾಕ್ಷ್ಯಾಧಾರವಿದೆ. ಬಹು ಸಂಖ್ಯೆಯ ಸ್ತ್ರೀ ಗುಲಾಮರು ಹಾಗೂ ಮನೆಗೆಲಸದವರನ್ನು ಬುಡಕಟ್ಟು ಜನರಿಂದ ಹಿಡಿದು ತರಲಾಯಿತೆಂದು ಈ ಕಾಲದ ಜೈನ ಕೃತಿಗಳು ತಿಳಿಸುತ್ತವೆ. (ಬೃಹತ್‌ಕಲ್ಪ ಭಾಷ್ಯಗಾಥಾ ಎಂಬ ಕೃತಿಯಲ್ಲಿ ನಾಪಿತ-ದಾಸಿಯರ ಪ್ರಸ್ತಾಪವಿದೆ).

ರೈತರನ್ನು ವೈಶ್ಯರೆಂದು ಕರೆಯುವ ಸಾಂಪ್ರದಾಯಿಕ ನಿಲುವು ಈ ಕಾಲದ ಸಾಹಿತ್ಯದಲ್ಲಿ ಪುನರುಕ್ತವಾಗಿದೆ. ಜಮೀನುಗಳನ್ನು ಬ್ರಾಹ್ಮಣರಿಗೆ ದತ್ತಿಯಾಗಿ ಕೊಟ್ಟಾಗ ಅಥವಾ ಇತರರಿಗೆ ವರ್ಗಾಯಿಸಿದಾಗ ಸಹ ಕೃಷಿಕರು ಆಯಾ ಜಮೀನುಗಳ ಫಸಲು-ಪಾಲುದಾರರಾಗಿ ಮುಂದುವರಿದರೆಂದು ಪಲ್ಲವರ (ಕ್ರಿ.ಶ. ೨೫೦-೩೫೦) ಎರಡು ಭೂ ದತ್ತಿ ಶಾಸನಗಳು ತಿಳಿಸುತ್ತವೆ.

*ವಿವರಗಳಿಗೆ ನೋಡಿ: ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃ*
*ದಿ. ನಾಗೇಶ ರಂಗೋ ಕುಲಕರ್ಣಿ ೨೦೦೭ ಯಾಜ್ಞವಲ್ಕ್ಯ ಸ್ಮೃತಿ*
*ಆರ್.ಎಸ್. ಶರ್ಮ ೨೦೦೪ ಪ್ರಾಚೀನ ಭಾರತದಲ್ಲಿ ಶೂದ್ರರ*

**೬೮೯. ಶೇಷಾಕ್ಷತ**

*ಸೂಸುವ **ಶೇಷಾಕ್ಷತಮಂ** ಸಮಂತು ಪಿರಿದುಂ ಮನ ಸಂತಸದಿಂದಮಾಂತು*
*(ಪಂಪ ಭಾರತ ೪-೧೦)*

ಆ ಪಟ್ಟಣದ ಬೆಡಗನ್ನು ವಿಶೇಷವಾಗಿ ಮೆಚ್ಚಿ ದೇವೇಂದ್ರನ ವೈಭವದಿಂದ ಕೂಡಿ ಪಾಂಡವರು ನಡೆದು ಬಂದಾಗ ಪಟ್ಟಣದ ಸ್ತ್ರೀಜನರು ವಿಶೇಷ ಸಂತೋಷದಿಂದ

ಕೂಡಿ ಆದರದಿಂದ ಹರಸಿದರು. ಅವರು ಚೆಲ್ಲುವ ಮಂತ್ರಾಕ್ಷತೆಗಳನ್ನೂ ಸಂಪೂರ್ಣವಾಗಿ ಮನಸ್ಸಂತೋಷದಿಂದ ಸ್ವೀಕರಿಸಿ ಉಪ್ಪರಿಗೆಯನ್ನು ಆದರದಿಂದ ಹತ್ತಿ ಸುಖವಾಗಿ ನೆಲಸಿದರು ಎಂದು ಪಂಪ ಭಾರತದಲ್ಲಿ ಬರುತ್ತದೆ.

ಆಶೀರ್ವಾದ ಮಾಡಿದ ಮಂತ್ರಾಕ್ಷತೆಯನ್ನು ಶೇಷಾಕ್ಷತವೆಂದು ಕರೆಯುತ್ತಾರೆ. ಕ್ಷತ=ತುಂಡಾದ, ಖಂಡವಾದ ಅ–ಕ್ಷತ=ತುಂಡಾಗದ, ಇಡಿಯಾದ ಅಖಂಡವಾದ ಎಂಬರ್ಥವಿದೆ. ಅಕ್ಷತೆ ಎಂಬುದಕ್ಕೆ ಅರ್ಥವಾಗಿ ಕುಂಕುಮ ಬೆರೆಸಿದ ಅಕ್ಕಿಕಾಳು ಎಂಬುದೇ ಹೆಚ್ಚು ಬಳಕೆಯಲ್ಲಿದೆ. ಆದ್ದರಿಂದಲೇ ಅಕ್ಷತೆಗೆ ಇಡಿಯಕ್ಕಿಯನ್ನೇ ಬಳಸುತ್ತಾರೆ. ಶೇಷೆ ಎಂದರೂ ಮಂತ್ರಾಕ್ಷತೆ ಎಂದೇ ಅರ್ಥ.

### ೬೯೦. ಶೈವ ದರ್ಶನ ಮತ್ತು ಜೈನ ದರ್ಶನ

ಶೈವದರ್ಶನ ಮತ್ತು ಜೈನ ದರ್ಶನದ ನಡುವೆ ಇರುವ ಸಂಬಂಧಗಳನ್ನು ಕೆಲವು ಸಮಾನಾಂತರ ಆಶಯಗಳನ್ನು ಕುರಿತು ಮಿರ್ಜಿಯವರು ಈ ರೀತಿಯಲ್ಲಿ ಹೇಳುತ್ತಾರೆ:

ಶೈವ ದರ್ಶನದಲ್ಲಿ ಜೀವಾತ್ಮನು ಪಶು, ಅವನು ಅಣುಸ್ವರೂಪಿ, ಕ್ಷೇತ್ರಜ್ಞ ಶಾಶ್ವತನೂ ಸರ್ವವ್ಯಾಪಿಯೂ ಆಗಿರುವನು. ಇಂಥ ಜೀವಾತ್ಮರು ಅನೇಕರಿರುವರು. ಪಾಶ ಹರಿದ ನಂತರ ಜೀವನು ಶಿವಸ್ವರೂಪವನ್ನು ಹೊಂದುವನು. ಈ ವಿಚಾರದಲ್ಲಿ ಜೈನ – ಶೈವ ದರ್ಶನಗಳಲ್ಲಿ ತುಂಬ ಹೊಂದಿಕೆಯಿದೆ. ಜೀವನಗಳು ಅನೇಕ, ಅನಂತ ಎಂಬ ಸಂಗತಿಯನ್ನು ಅದೂ ಪ್ರತಿಪಾದಿಸಿದೆ. ಪಾಶ ಹರಿಯುವ ಮಾತನ್ನು ಕರ್ಮ ಬಂಧನದಿಂದ ಬಿಡುಗಡೆ ಶೈವದರ್ಶನ ಹೊಂದುವುದೆಂದು ಜೈನ ದರ್ಶನವು ಹೇಳುವುದು, ಕರ್ಮಬಂಧ ಕಳೆದುಕೊಂಡವನೇ ಮುಕ್ತ. ಅವನೇ ಸಿದ್ಧಾತ್ಮ, ಪರಮಾತ್ಮ ಅವನನ್ನೇ ಶಿವ ಸ್ವರೂಪಿ ಯೆಂದೂ ಹೇಳಬಹುದು

*ವಿವರಗಳಿಗೆ ನೋಡಿ: ಗುರುಲಿಂಗಕಾಪಸೆ (ಸಂ ೧) ೨೦೦೬*
*ಮಧುರಚೆನ್ನರ ಲೇಖನಗಳು (ಮಿರ್ಜಿ ಅಣ್ಣಾರಾಯ) ಪುಟ. ೬೯.*

### ೬೯೧. ಶೈವ ಮತ್ತು ಶಾಕ್ತ ಮತ

ತಮಿಳು ದೇಶದಲ್ಲಿ ಪ್ರಚಾರದಲ್ಲಿರುವ ಶೈವಮತಕ್ಕೆ ಶೈವ ಸಿದ್ಧಾಂತವೆಂದು ಹೆಸರು. ಪ್ರಮಾಣಗಳಿಂದ ನಿಶ್ಚಯವಾಗಿರುವ ತೀರ್ಮಾನಕ್ಕೆ ಸಿದ್ಧಾಂತವೆನ್ನುವರು. ಶೈವ ಸಿದ್ಧಾಂತವು ಶೈವೇತರ ಮತಗಳಿಗಿಂತಲೂ ಇತರ ಶೈವ ಸಂಪ್ರದಾಯಗಳಿಗಿಂತಲೂ ಬೇರೆಯಾಗಿದೆ ಯೆಂಬುದನ್ನು ತೋರಿಸುತ್ತದೆ. ಈ ಶೈವ ಸಿದ್ಧಾಂತವಲ್ಲದ ಇತರ ಮತಗಳನ್ನು ನಾಲ್ಕು ವಿಭಾಗಗಳಾಗಿ ವಿಂಗಡಿಸಬಹುದು.

೧. ಪುರಪ್ – ಪುರಾಕ್ – ಚಮಯುಮ್ (ಎಲ್ಲಕ್ಕಿಂತಲೂ ಹೊರಗಿನದು)
೨. ಪುರಾಕ್ – ಚಮಯನ್ (ಹೊರಗಿನದು)
೩. ಅಹಪ್ – ಪುಕಾರ್ – ಚಮಯುಮ್ (ಆಂತರ್ಯವಾದದ್ದು)

೪. ಅಹಕ್ – ಚಮಯಮ್ (ಆಂತರ್ಯತಮವಾದದ್ದು)

ಲೋಕಾಯತ, ಜೈನ ಮತ್ತು ಬೌದ್ಧ ಮೊದಲಾದ ವೇದ ಬಾಹ್ಯಮತಗಳು ಸಿದ್ಧಾಂತಕ್ಕೆ ವೇದವನ್ನೂ ದೇವರನ್ನೂ ನಂಬುವುದಿಲ್ಲ. ನ್ಯಾಯ, ಮೀಮಾಂಸ ಏಕಾತ್ಮವಾದ, ಸಾಂಖ್ಯ ಯೋಗ ಮತ್ತು ಪಾಂಚರಾತ್ರಗಳು ಹೊರಗಿನವು. ಇವುಗಳು ವೇದಪ್ರಾಮಾಣ್ಯವನ್ನು ಒಪ್ಪಿದರೂ ಶೈವಾಗಮಗಳನ್ನು ಆಧಾರವಾಗಿ ಅಂಗೀಕರಿಸುವುದಿಲ್ಲ. ಆಂತರ್ಯ ಮತಗಳಾದ ಪಾಶುಪತ, ಮಹಾವ್ರತ ಕಾಲ, ವಾಮಭೈರವ ಮತ್ತು ಐಕ್ಯವಾದ ಮೊದಲಾದ ಕೆಲವು ಮತಗಳು ಶಿವನನ್ನು ಪರತತ್ತ್ವವೆಂದು ಒಪ್ಪಿವೆ: ಆದರೆ ಸಿದ್ಧಾಂತದಲ್ಲಿ ಪ್ರತಿಪಾದಿಸಿರುವ ತತ್ತ್ವವಿಭಾಗವನ್ನು ಒಪ್ಪುವುದಿಲ್ಲ. ಪಾಶಣವಾದ ಶೈವ, ಶಿವಸಮವಾದ, ಶಿವಸಂಕ್ರಾಂತವಾದ, ಈಶ್ವರ ಅವಿಕಾರವಾದ ಮತ್ತು ಶಿವಾದ್ವೈತ ಇವೇ ಮೊದಲಾದ ಶೈವ ಸಂಪ್ರದಾಯಗಳು ಆಂತರ್ಯ ಕರವಾದವುಗಳಾಗಿವೆ. ಇವು ಸಿದ್ಧಾಂತದ ಎಲ್ಲಾ ತತ್ತ್ವಗಳನ್ನೂ ಅಂಗೀಕರಿಸುತ್ತವೆ. ಆದರೂ ಕೆಲವು ತತ್ತ್ವಗಳ ನಿರೂಪಣೆಯಲ್ಲಿ ಭಿನ್ನಾಭಿಪ್ರಾಯವುಳ್ಳವುಗಳಾಗಿವೆ. ಈ ರೀತಿಯಾಗಿ ಸಿದ್ಧಾಂತಿಯು ಬಹಳ ಹತ್ತಿರದ ಮತ್ತು ಬಹಳ ದೂರದ ಮತ ಸಂಪ್ರದಾಯಗಳನ್ನು ಪ್ರಚಾರದಲ್ಲಿರುವ ತಾತ್ತ್ವಿಕ ಕ್ರಮದಿಂದ ವಿಮರ್ಶಿಸಿ ತನ್ನ ಸಿದ್ಧಾಂತವನ್ನು ಸಮರ್ಥಿಸುತ್ತಾನೆ. ಇಲ್ಲಿ ಸಿದ್ಧಾಂತದ ಮುಖ್ಯ ತತ್ತ್ವಗಳನ್ನು ಪ್ರತಿಪಾದಿಸುವುದೇ ಈ ಪ್ರಬಂಧದ ಉದ್ದೇಶವಾಗಿದೆ. ನಾವು ಈ ವಿಷಯ ಪ್ರವೇಶಕ್ಕೆ ಪೂರ್ವಭಾವಿಯಾಗಿ ಶೈವ ಸಿದ್ಧಾಂತ ಸಂಪ್ರದಾಯಗಳ ಆಧಾರ ಗ್ರಂಥಗಳನ್ನು ವಿವರಿಸುತ್ತೇವೆ.

ಶಕ್ತಿಯು ಎರಡನೆಯ ತತ್ತ್ವ ಮತ್ತು ಸೃಷ್ಟಿಕ್ರಮದಲ್ಲಿ ಶಿವನ ತರುವಾಯ ಬರುತ್ತದೆ. ಅದನ್ನು ಎರಡನೆಯದು ಎಂದು ಕರೆಯುವುದೂ ಕಷ್ಟವೇ, ಏಕೆಂದರೆ ಅದರ ಅಭಿವ್ಯಕ್ತಿಯು ಸ್ವಲ್ಪ ಹೆಚ್ಚು ಕಡಿಮೆ ಮೊದಲನೆಯದರ ಸಮಕಾಲದಲ್ಲಿಯೇ ಆಗುತ್ತದೆ. ಅಭಿವ್ಯಕ್ತವಾದುದರ ಅರಿವು ಇಲ್ಲದಿದ್ದಲ್ಲಿ, ಅದು ಅಭಿವ್ಯಕ್ತವಾಯಿತು ಎಂದು ಹೇಳುವುದಾದರೂ ಹೇಗೆ? ಆದರೂ ಅದನ್ನು ಎರಡನೆಯದೆಂದು ಪರಿಗಣಿಸಬೇಕು, ಏಕೆಂದರೆ ಕಿರಣಗಳು ಜ್ವಾಲೆಯೊಂದನ್ನು ಪೂರ್ವಭಾವಿಯಾಗಿ ಒಳಗೊಳ್ಳುವಂತೆ ಜ್ಞಾನವು ಅವಶ್ಯವಾಗಿ ಅಸ್ತಿತ್ವವನ್ನು ಪೂರ್ವಭಾವಿಯಾಗಿ ಒಳಗೊಳ್ಳುತ್ತದೆ. ಜ್ವಾಲೆಯಿಲ್ಲದಿದ್ದಲ್ಲಿ ಕಿರಣಗಳು ಇಲ್ಲದಿರುವಂತೆಯೇ, ಅಸ್ತಿತ್ವವಿರದಿದ್ದಲ್ಲಿ ಯಾವುದೇ ಜ್ಞಾನ ಇರಲಾರದು ಈ ಅಭಿವ್ಯಕ್ತಿಯು ನಾನು ಎಂಬುದಕ್ಕೆ ಇದ್ದೇನೆ ಎಂಬ ಅಂಶದ ಅನ್ವಯದ ಮೂಲಕ "ನಾನು ಇದ್ದೇನೆ" (ಅಹಂ ಅಸ್ಮಿ) ಎಂಬುದಾಗಿ ಸೂಚಿತವಾಗುತ್ತದೆ. ಸೃಷ್ಟಿಯ ಈ ಹಂತದಲ್ಲಿ ಆನಂದಶಕ್ತಿಯು ಪ್ರಧಾನವಾಗಿರುತ್ತದೆ.

ಶಕ್ತಿತತ್ತ್ವದ ಕುರಿತು ಅಭಿನವಗುಪ್ತನ ನಿಲುವು ಮೇಲಿನಂತಿದೆ.

ಶಾಕ್ತಪಂಥದ ಅನುಯಾಯಿಗಳು ಒಳಗೆ ಬಂದ ನಂತರ ಶೈವರಲ್ಲಿ ಈ ಪ್ರಕಾರದ ಅನಾಚಾರಗಳು ಹೆಚ್ಚಾಗಿರುವ ಸಂಭವವಿದೆ. ಯೋನಿ-ಲಿಂಗ ಪೂಜಕರಾದ ಶಾಕ್ತ ಸಂಪ್ರದಾಯ ಶೈವರಿಗಿಂತ ಭಿನ್ನವಾಗಿದ್ದು ಅದು ಮುಂದೆ ಶೈವಸಂಪ್ರದಾಯದಲ್ಲಿ

ಒಂದಾಗಿರುವ ಸಾಧ್ಯತೆ ಇದೆ. ಇದರಿಂದ ಶೈವಪಂಥ ಮೂಲದಲ್ಲಿ ವೈದಿಕವಾಗಿತ್ತೆಂದು ಕೆಲವರು ಹೇಳಬಹುದಾಗಿದೆ. ಆದರೆ, ಶಿವ ಎಂಬ ಶಬ್ದ ಮೂಲದಲ್ಲಿ ಸಂಸ್ಕೃತವಾಗಿರದೆ ಆರ್ಯೇತರ ದ್ರಾವಿಡವರ್ಗದ ಭಾಷೆಯಿಂದ ಬಂದದ್ದಾಗಿದೆ. ಇದರಿಂದ, ಶಿವ–ದೇವತೆ ಮತ್ತು ಶೈವಪಂಥ ಇವು ವೈದಿಕ ಮಾರ್ಗದಿಂದ ಭಿನ್ನ ಎಂದು ಹೇಳಬೇಕಾಗುತ್ತದೆ ಎಂದು ಶಂಬಾ ಅಭಿಪ್ರಾಯ.

ಕರ್ಣಾಟಕ ಕಾದಂಬರಿಯಲ್ಲಿ ಸ್ನಾನಮಾಡಿ ಪರಮೇಶ್ವರನ ದರ್ಶನ ಮಾಡುವ ವಿಷಯವು ಬರುತ್ತದೆ. (೮–೧೧೫)

ಅಭವವೆಂದರೆ ಭವವಿಲ್ಲದವನು ಎಂದು ಅರ್ಥ. ಶಿವನನ್ನು ಕರ್ಣಾಟಕ "ಭವವಿಲ್ಲದ, ಭವರಹಿತ, ಹುಟ್ಟಿಲ್ಲದ, ಶಿವ ಜಿನ,: ಅರ್ಹಂತೆ ಇಲ್ಲದಿರುವಿಕೆ, ನಾಶ". ಕಾದಂಬರಿ ಹೀಗೆ ಹೇಳುತ್ತದೆ.

*ವಿವರಗಳಿಗೆ ನೋಡಿ: ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦ ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ ಶಂಬಾ ಜೋಶಿ ೧೯೯೯ ಸಂಪುಟ. ೧ ಪುಟ. ೧೩*

**೬೯೨. ಶೌಚಚಾರ**

ವಡ್ಡಾರಾಧನೆಯಲ್ಲಿನ ವಿದ್ಯುಚ್ಚೋರನೆಂಬ ರಿಸಿಯ ಕಥೆಯಲ್ಲಿ ಇದು ಉಕ್ತಗೊಂಡಿದೆ. ಪಾಲ್ಮರವೆಂದರೆ ಹಾಲು ಸುರಿಸುವ ಮರಗಳು ಎಂದರ್ಥ. ಆಲ, ಅಶ್ವತ್ಥ, ಅತ್ತಿ, ಇಪ್ಪೆ, ಗೋಳಿ – ಈ ಐದು ಬಗೆಯ ಮರಗಳು ಪಾಲ್ಮರಗಳಾಗಿವೆ.

(ಟಿ. ಕೇಶವಭಟ್ಟ ೨೦೧೦. ಪು.೨೧೬)

ಅಂದರೆ ಈ ರೀತಿಯ ಮರಗಳ ವಿಶಿಷ್ಟತೆಯೆಂದರೆ ಎಲೆಯನ್ನೋ, ಅದರ ರೆಂಬೆಯನ್ನೋ ಚಿವುಟಿದಾಗ ಅದರಲ್ಲಿ ಹಾಲಿನಂಥ ರಸ ಜಿನುಗುತ್ತದೆ. ಆದುದರಿಂದ ಯಾವುದು ಹಾಲನ್ನು ನೀಡುತ್ತದೋ ಅವುಗಳನ್ನು ಪಾಲ್ಮರವೆಂದು ಕರೆಯುತ್ತಾರೆ.

**೬೯೩. ಶ್ರಾವಕ**

ಪ್ರಾಚಿನ ಜೈನ ಸಾಹಿತ್ಯ ಕೃತಿಗಳಲ್ಲಿ ಶ್ರಾವಕರು; ಅವರ ತಪೋ ಸಿದ್ಧಿಗಳು ಅವರ ಉಪವಾಸಗಳ ಕುರಿತು ಹೇರಳವಾದ ವಿವರಗಳು ಬರುತ್ತವೆ. ಜೈನ ಸಮಾಜವನ್ನು ಮುನಿ(ಸನ್ಯಾಸಿ) ಆರ್ಯಿಕಾ (ಸನ್ಯಾಸಿನಿ) ಶ್ರಾವಕ (ಗೃಹಸ್ಥ). ಶ್ರಾವಕಿ(ಗೃಹಿಣಿ) ಹೀಗೆ ನಾಲ್ಕು ಗುಂಪುಗಳಲ್ಲಿ ವಿಂಗಡಿಸಲಾಗಿದೆ. ಇದನ್ನೇ ಚಾತುರ್ವರ್ಣ್ಯ ಸಂಘ. ಎಂದು ಕರೆಯುತ್ತಾರೆ. ಚಾತುರ್ವರ್ಣ ಶ್ರವಣಸಂಘ ಎಂಬ ಮಾತು ಅನೇಕ ಶಾಸನ ಮತ್ತು ಜೈನ ಧಾರ್ಮಿಕ ಗ್ರಂಥಗಳಲ್ಲಿ ಬರುತ್ತದೆ. ಇದು ಮುನಿಗಳಿಗೆ ಮತ್ತು ಜೈನ ಸಮಾಜಕ್ಕೆ ಸಂಪರ್ಕವನ್ನು ಕಲ್ಪಿಸಲು ಮಾಡಿದ ಪ್ರಯತ್ನಗಳಲ್ಲೊಂದು. ಇದು ಜನಸಾಮಾನ್ಯರಲ್ಲಿ ಜೈನಧರ್ಮ ಪ್ರಸಾರ ಮಾಡಲು ಅವರಲ್ಲಿ ಜೈನ ಧರ್ಮದ ಮೇಲಿನ ಶ್ರದ್ಧೆ ಕುಂದದಂತೆ ಮಾಡಲು ಅನುಸರಿಸಿದ ಮಾರ್ಗಗಳಲ್ಲಿ ಒಂದಾಗಿದೆ. ಇಲ್ಲಿ ಬರುವ ಶ್ರಾವಕ ಮತ್ತು

ಶ್ರಾವಕಿಯರು ಮನೆ ಮಾಡಿಕೊಂಡಿದ್ದು ಗೃಹಸ್ಥ ಜೀವನವನ್ನು ನಡೆಸುತ್ತಿರುತ್ತಾರೆ. ಇವರು ಸಾಮಾನ್ಯವಾಗಿ ಜನಪದರೇ ಆಗಿರುತ್ತಾರೆ. ಇವರಿಗೆ ಜೈನ ಸಂಘದಲ್ಲಿ ಬಹಳ ಮಹತ್ವದ ಸ್ಥಾನವಿದೆ. ಇವರಿಲ್ಲದೇ ಮುನಿಯ ಅವಸ್ಥೆಯಲ್ಲಿರುವ ಸಂಘ ಮುಂದುವರಿಯಲು ಸಾಧ್ಯವಾಗುವುದಿಲ್ಲ. ಮುನಿಗಳೆಲ್ಲ ಮೊದಲು ಶ್ರಾವಕರೇ ಆಗಿರುತ್ತಾರೆ. ಆದ್ದರಿಂದ ಶ್ರಾವಕ ಆಚಾರವು ಮುನಿಜೀವನ ಚಾರಿತ್ರದ ಮೂಲಭೂಮಿಕೆಯಾಗಿರುತ್ತದೆ. ಶ್ರಾವಕರಲ್ಲಿ ಪಾಕ್ಷಿಕ ಶ್ರಾವಕ ಮತ್ತು ನೈಷ್ಠಿಕ ಶ್ರಾವಕರೆಂದು ಎರಡು ಬಗೆ. ಪಾಕ್ಷಿಕ ಶ್ರಾವಕ–ಅಣುವ್ರತ ಮೊದಲಾಗೊಡೆಯ ಎಂಟು ವ್ರತಗಳನ್ನು ಕೈಕೊಂಡರೆ, ನೈಷ್ಠಿಕ ಶ್ರಾವಕರು ಅಣುವ್ರತ, ಗುಣವ್ರತ, ಶಿಕ್ಷಾವ್ರತ ಎಂಬ ಹನ್ನೆರಡು ಬಗೆಯ ವ್ರತಗಳನ್ನು ಸ್ವೀಕರಿಸುತ್ತಾರೆ. ಇನ್ನು ಮುನಿಗಳಿಗೆ ಮಹಾವ್ರತಗಳನ್ನು ಉಪದೇಶಿಸಲಾಗಿದೆ. ಗೃಹಸ್ಥ ನಾಗಿದ್ದುಕೊಂಡು ಶಕ್ಯಾನುಸಾರ ಧರ್ಮಾಚಾರಣೆ ಮಾಡುವುದು ಶ್ರಾವಕ ಧರ್ಮವಾದರೆ ಸನ್ಯಾಸಿಯಾಗಿ ಸಂಪೂರ್ಣ ಧರ್ಮಾಚರಣೆ ಕೈಕೊಳ್ಳುವುದು ಮುನಿಧರ್ಮವೆಂದೂ ವಿಭಾಗಿಸಿದರೂ ಅವರೆಡೂ ಪರಸ್ಪರ ಪೂರಕವಾದಂತಹವು.

(೧) ಮುನಿ (೨) ಯತಿ (೩) ಸನ್ಯಾಸಿ.

*ವಿವರಗಳಿಗೆ ನೋಡಿ: ವಿ. ಎಲ್. ಪಾಟೀಲ್ ೨೦೦೯*

*ವಡ್ಡಾರಾಧನೆ ಜಾನಪದೀಯ ಅಧ್ಯಯನ ಪುಟ. ೧೪೬–೧೪೯*

**೬೫೪. ಶ್ರುತಜ್ಞಾನ**

ಅನುಮಾನದವರೆಗೆ ಹೇಳಿದ ಜ್ಞಾನವು ಮತಿಜ್ಞಾನವು. ಎಂದರೆ ಇಂದ್ರಿಯ ಸಂಶ್ಲಿಷ್ಟವಾದುದು. ಶ್ರುತಜ್ಞಾನವು ನಿತ್ಯಸತ್ಯದ ಭಾಂಡಾರವು. ಅದು ನಮ್ಮ ಇಂದ್ರಿಯಗಳಿಗೆ ಸಂಬಂಧಿಸಿದುದಲ್ಲ. ಇದನ್ನು ಆಗಮವೆಂದು ಹೇಳುವರು. ಜೈನರು ಋಗ್ವೇದಾದಿ ಚತುರ್ವೇದಗಳನ್ನು ಆಗಮಗಳೆಂದು [ಪ್ರಮಾಣವೆಂದು] ಹೇಳುವುದಿಲ್ಲ. ಅವರಲ್ಲಿ ಸರ್ವಜ್ಞರಾದ ತೀರ್ಥಂಕರರ ವಚನ ಸಮೂಹಗಳೇ ಆಗಮಗಳು. ಜೈನರು ತಮ್ಮ ಆಗಮಗಳನ್ನು ವೇದಗಳೆಂದು ಹೇಳುವರು. ಅವರು ತಮ್ಮ ವೇದಗಳನ್ನು ನಾಲ್ಕು ಭಾಗವಾಗಿ ವಿಂಗಡಿಸಿರುವರು. ಮತಿಜ್ಞಾನದಲ್ಲಿ ಅವಗ್ರಹ ಮೊದಲಾದ ನಾಲ್ಕು ಭಾಗಗಳನ್ನು ಹೇಳಿರುವಂತೆ ಶ್ರುತಜ್ಞಾನದಲ್ಲಿಯೂ ಲಬ್ಧಿ, ಭಾವನೆ, ಉಪಯೋಗ, ನಯ ಎಂದು ನಾಲ್ಕು ಪ್ರಕಾರಗಳನ್ನು ಹೇಳಿರುವರು.

ಶ್ರುತಜ್ಞಾನ – **ಶ್ರುತಜ್ಞಾನಾವರಣ** ಕರ್ಮದ ಕ್ಷಯೋಪಶಮವಾಗಲು ಚಕ್ಷುರಾದಿ ಇಂದ್ರಿಯಗಳು, ಮನಸ್ಸು ಇವುಗಳ ಸಹಾಯದಿಂದ ಆತ್ಮನಿಗೆ ಆಗುವ ಮೂರ್ತ, ಅಮೂರ್ತ ಪದಾರ್ಥಗಳ ವಿಕಲಜ್ಞಾನವು, ಶ್ರುತಜ್ಞಾನವು. ಶ್ರುತಜ್ಞಾನಕ್ಕೆ ಮತಿಜ್ಞಾನವು ಕಾರಣವು. ಎಂದರೆ ಮೊದಲು ಮತಿಜ್ಞಾನವು ಬಳಿಕ ಶ್ರುತಜ್ಞಾನವು. ಮತಿಜ್ಞಾನದಲ್ಲಿ ಸಮಾವೇಶವಾಗುವ ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ ಇವುಗಳಲ್ಲಿ ಯಾವುದೊಂದು ಜ್ಞಾನವಾದ ಬಳಿಕ ಉಂಟಾಗುವ ಜ್ಞಾನವು ಶ್ರುತಜ್ಞಾನವು. ಉದಾ :– ಈ ದಿನ

ಪಂಚಕಲ್ಯಾಣೋತ್ಸವವುಂಟೆಂದು ಒಬ್ಬನು ನಮಗೆ ಹೇಳಲು ಆ ಉತ್ಸವ ದರ್ಶನದಿಂದ ಪುಣ್ಯ ಸಂಪಾದನ ಮಾಡಬೇಕೆಂದೆನಿಸುವುದು. ಇಲ್ಲಿ ಪಂಚಕಲ್ಯಾಣೋತ್ಸವವುಂಟೆಂಬ ಶಬ್ದಗಳನ್ನು ಕೇಳಿದರಿಂದ ಮತಿಜ್ಞಾನವು, ಪುಣ್ಯಸಂಪಾದನೆ ಮಾಡಬೇಕೆಂಬ ಜ್ಞಾನವು ಶ್ರುತಜ್ಞಾನವು. ಶ್ರುತಜ್ಞಾನದಲ್ಲಿ ದ್ರವ್ಯಶ್ರುತ, ಭಾವಶ್ರುತ, ಇಲ್ಲವೆ ಅಂಗಬಾಹ್ಯ, ಅಂಗಪ್ರವಿಷ್ಟ ಎಂಬ ಎರಡು ಭೇದಗಳು. ಅಂಗಪ್ರವಿಷ್ಟದಲ್ಲಿ ಆಚಾರಾಂಗ ಮೊದಲಾದ ೧೨ ಅಂಗಗಳುಂಟು. ಉತ್ಪಾದಪೂರ್ವ ಮೊದಲಾದ ೧೪ ಪೂರ್ವಗಳು ಶ್ರುತಜ್ಞಾನದಲ್ಲಿ ಸೇರುವುವು. ಅಂಗಬಾಹ್ಯಗಳು ಹಲವುಂಟು.

*ವಿವರಗಳಿಗೆ ನೋಡಿ: ಮಹಾದೇವ ಪ್ರಭಾಕರ ಪೂಜಾರ್ ೧೯೭೬*
*ಜೈನಧರ್ಮ ಪರಿಭಾಷೆ ಪುಟ. ೮, ೪೨-೪೩*
*ಜಯಚಂದಭಾಬಡಾ ೨೦೧೦ ಅಷ್ಟಪಾಹುಡ ಪುಟ. ೯-೧೨*

**೬೯೪. ಶ್ರುತಸ್ಕಂಧ**

*ಅನುಯೋಗಕುಸುಮಪಾದಪ*
*ಮನೇಕನಯಲತಿಕಮಂಗಫಲಮಹಿಜಂ ಸ ।*
*ದ್ವನಜವನಮೆಮಗೆ ವಿಶ್ರಮ*
*ವನಮಕ್ಕತಿವಿಶ್ರುತ**ಶ್ರುತಸ್ಕಂಧ**ವನಂ ॥ (ಆದಿಪುರಾಣ ೧-೧೦)*

ತೀರ್ಥಂಕರರ ಉಪದೇಶದ ಅನುಸಾರ ಗಣಧರರು ರಚಿಸಿದ ದ್ವಾದಶಾಂಗ ಸೂತ್ರಗಳು; ಧರ್ಮಗ್ರಂಥಗಳ ಸಮೂಹ. ಇದರಲ್ಲಿ ನಾಲ್ಕು ವಿಭಾಗಗಳಿವೆ: ಮೊದಲನೆಯ ದಾದ ಪ್ರಥಮಾನುಯೋಗದಲ್ಲಿ ೨೪ ತೀರ್ಥಂಕರರು. ೧೨ ಚಕ್ರವರ್ತಿಗಳು. ೯ ಬಲದೇವರು, ೯ ವಾಸುದೇವರು, ೯ ಪ್ರತಿವಾಸುದೇವರು–ಈ ಅರವತ್ತು ಮೂವರು ಶಲಾಕಾಪುರುಷರ ಚರಿತ್ರೆಗಳನ್ನು ವಿವರಿಸಿದೆ. ಮಹಾಪುರಾಣ ಮೊದಲಾದವು ಪ್ರಥಮಾನುಯೋಗಕ್ಕೆ ಸೇರಿದವು. ಎರಡನೆಯದು ಕರಣಾನುಯೋಗ. ಇದರಲ್ಲಿ ಮೂರು ಲೋಕಗಳ ಕ್ಷೇತ್ರಪ್ರಮಾಣ ಮೊದಲಾದ ವಿವರಗಳು ದೊರೆಯುತ್ತವೆ. ಸೂರ್ಯಪ್ರಜ್ಞಪ್ತಿ. ಚಂದ್ರ ಪ್ರಜ್ಞಪ್ತಿ. ಜಯಧವಳ ಮೊದಲಾದ ಗ್ರಂಥಗಳು ಕರಣಾನುಯೋಗಕ್ಕೆ ಸೇರಿದವು. ಮೂರನೆಯದು ಚರಣಾನುಯೋಗ. ಈ ಅನುಯೋಗದಲ್ಲಿ ಜೈನಮುನಿಗಳೂ ಶ್ರಾವಕರೂ ಅನುಸರಿಸಬೇಕಾದ ಆಚಾರಶುದ್ಧಿ ವರ್ಣಿತವಾಗಿದೆ. ನಾಲ್ಕನೆಯದು ದ್ರವ್ಯಾನುಯೋಗ. ಇದರಲ್ಲಿ ಜೀವಾದಿ ದ್ರವ್ಯಗಳನ್ನು ವಿವರಿಸಿದೆ; ಇವು ತತ್ವಾರ್ಥಸೂತ್ರ ಗೊಮ್ಮಟಸಾರ ಮೊದಲಾದವು. ಪ್ರಥಮಾನುಯೋಗಕ್ಕೆ ಸೇರಿದ ಪುರಾಣಗ್ರಂಥಗಳಲ್ಲಿ ಉಳಿದ ಮೂರು ಅನುಯೋಗಗಳ ಮುಖ್ಯ ವಿಷಯಗಳನ್ನು ಅಲ್ಲಲ್ಲಿ ಪ್ರತಿಪಾದಿಸಿರುವುದು ಕಂಡುಬರುತ್ತದೆ.

ಶ್ರುತವೆಂದರೆ ಹೇಳಲ್ಪಟ್ಟ ಸ್ಕಂಧವೆಂದರೆ ಭಾಗವೆಂಬ ಅರ್ಥ. ಶ್ರುತಸ್ಕಂಧವೆಂದರೆ ಹೇಳಲಾಗಿರುವ ಭಾಗಗಳು. ವಿಶ್ರುತ ಶ್ರುತಸ್ಕಂಧವೆಂದು ಅವನು ಹೇಳುತ್ತಾನೆ.

ವಿಶ್ರುತವೆಂದರೆ ವಿಶೇಷವಾಗಿ ಹೇಳಿರುವ ಶ್ರುತಸ್ಕಂಧವು; 'ತೀರ್ಥಂಕರರ

ಉಪದೇಶಗಳು' ನಮಗೆ ಒಳ್ಳೆಯದನ್ನು ಕೊಡಲಿ ಎಂದು ಪಂಪ ಹಾರೈಸುತ್ತಾನೆ. ಈ ಎಲ್ಲವೂ ಆಗಮಿಕದ ಪರಿಕಲ್ಪನೆಗಳು ಎಂಬುದನ್ನು ಗಮನಿಸಬೇಕು.

*ವಿವರಗಳಿಗೆ ನೋಡಿ: ಯೋಗ; ಆಗಮಿಕ; ಅರಹಂತ*

**೬೯೬. ಶ್ವೇತಾಂಬರ–ದಿಗಂಬರರು**

ಜೈನ ಧರ್ಮ ಭರತಖಂಡದ ಹಲವು ಪ್ರಮುಖ ಧರ್ಮಗಳಲ್ಲಿ ಒಂದು. ಇದರಲ್ಲಿ ಎರಡು ಪ್ರಮುಖ ಪಂಥಗಳಿವೆ. ಒಂದು ಶ್ವೇತಾಂಬರ ಇನ್ನೊಂದು ದಿಗಂಬರ. ಶ್ವೇತಾಂಬರ ಉತ್ತರ ಭಾರತದಲ್ಲಿಯೂ, ದಿಗಂಬರ ದಕ್ಷಿಣ ಭಾರತದಲ್ಲೂ ಈಗ ಪ್ರಚಲಿತವಾಗಿವೆ.

ಶ್ವೇತಾಂಬರವೆಂದರೆ ಬಿಳಿಯ ವಸನಗಳನ್ನು ಧರಿಸುವುದಂಥ ಬಿಳಿಯ ವಸನ ಶುಭ್ರತೆ ಅಕಳಂಕತೆಯನ್ನು ಸಂಕೇತಿಸುತ್ತದೆ. ದಿಕ್ಕೇ ಅಂಬರ (ವಸನ) ವಾಗಿರುವುದು ದಿಗಂಬರತ್ವ ದಿಗಂಬರರು ಬಟ್ಟೆಯನ್ನು ಧರಿಸುವುದಿಲ್ಲ.

'ಪ್ರಾಚೀನ ಕರ್ನಾಟಕದಲ್ಲಿ ದಿಗಂಬರ ಪಂಥವೇ ಪ್ರಮುಖವಾಗಿತ್ತು. ಆದರೂ ಅಲ್ಲಿ ಇಲ್ಲಿ ಶ್ವೇತಾಂಬರರು ಇದ್ದರೆಂದು ಶಾಸನಗಳಿಂದ ಮತ್ತು ಗ್ರಂಥಗಳಿಂದ ತಿಳಿದು ಬರುತ್ತದೆ. ಕ್ರಿ.ಶ ಪೂರ್ವದಲ್ಲಿ ಉತ್ತರ ಭಾರತದಲ್ಲಿ ದೊಡ್ಡ ಕ್ಷಾಮ ತಲೆದೋರಿದಾಗ ಭದ್ರಬಾಹು ಮುನಿಗಳು ತಮ್ಮ ಶಿಷ್ಯ ಸಮೂಹದೊಂದಿಗೆ 'ಕಳ್ವಪ್ಪು'ಗೆ ಬರುವದರೊಂದಿಗೆ ಜೈನಧರ್ಮ ಕರ್ನಾಟಕದಲ್ಲಿ ಕಾಲಿಸಿರಿತೆಂಬುದು ವಿದ್ವಾಂಸರು ಒಪ್ಪಿಕೊಂಡಿರುವ ಮಾತು. ಇದು ವಡ್ಡಾರಾಧನೆಯ ಭದ್ರಬಾಹು ಭಟಾರರ ಕಥೆಯಲ್ಲಿಯೂ ಸಹ ಮೂಡಿ ಬಂದಿದೆ. ಭದ್ರಬಾಹು ಭಟಾರರ ಜೊತೆಗೆ ಸಂಪ್ರತಿ ಚಂದ್ರಗುಪ್ತನು (ಮೌರ್ಯ ದೊರೆ ಅಶೋಕನ ಮೊಮ್ಮಗ) ಬಂದದ್ದನ್ನು ಅದು ದಾಖಲಿಸಿದೆ. ಅಲ್ಲದೆ ಶ್ವೇತಾಂಬರ ಪಂಥಗಳಂತೆ ಜೈನ ಧರ್ಮದಲ್ಲಿ 'ಯಾಪನೀಯ' ಎಂಬ ಇನ್ನೊಂದು ಪಂಥಗಳಂತೆ ಅದಕ್ಕೆ 'ದಕ್ಷಿಣಾಪಥದೊಳ್ ಸಾಮಳಿಪುತ್ರನೆಂಬರಸನಪ್ಪನವರಯೆ ಸಂತತಿಯ ಶ್ವೇತಭಿಕ್ಷು ಜಾಪುಲಿ ಸಂಘಕ್ಕೆ ಮೊದಲಿಗನಾದಂ' ಎಂದು ವಡ್ಡಾರಾಧನೆ ಹೇಳುತ್ತದೆ. 'ಯಾಪನೀಯ' ಎಂಬುದು 'ಜಾಪುಲಿ' ಆಗಿದೆ. ಒಬ್ಬ ಶ್ವೇತಾಂಬರ ವ್ಯಕ್ತಿ ಅದನ್ನು ದಕ್ಷಿಣ ಭಾರತದಲ್ಲಿ ಸ್ಥಾಪಿಸಿದ. ಈ ಯಾಪನೀಯ ಪಂಥದ ಆಡುಂಬೊಲ ಉತ್ತರ ಕರ್ನಾಟಕವೇ ಆಗಿತ್ತು. ಬೆಳಗಾಂವ ಜಿಲ್ಲೆಯ ಹಲ್ಸಿ, ಧಾರವಾಡ ಜಿಲ್ಲೆಯ ದೋಣಿ, ನವಲಗುಂದ, ಗುಲ್ಬರ್ಗಾ ಜಿಲ್ಲೆಯ ಆಡಕಿ, ಸೇಡಂ ಇತ್ಯಾದಿಗಳು ಇದರ ಕೇಂದ್ರ ನೆಲೆಗಳಾಗಿದ್ದವು. ಕರ್ನಾಟಕದ ಕದಂಬ ರಾಷ್ಟ್ರಕೂಟ, ಇತ್ಯಾದಿ ವಂಶಗಳ ರಾಜರು ಈ ಸಂಘಕ್ಕೂ ಈ ಸಂಘದ ಆಚಾರ್ಯರಿಗೂ ಅನೇಕ ದಾನಗಳನ್ನು ಕೊಟ್ಟು ಪ್ರೋತ್ಸಾಹಿಸಿದ್ದರು. 'ರಾಜರಿಂದ, ಜನತೆಯಿಂದ ಮಾನ್ಯತೆಯನ್ನು ಪಡೆದು ಅನೇಕ ಕ್ರಾಂತಿಕಾರ ಸುಧಾರಣೆಗಳಿಂದೊಡಗೂಡಿದ್ದ ಈ ಜೈನಶಾಖೆಯು ೧೩–೧೪ನೇ ಶತಮಾನಗಳಿಂದ ಈಚೆಗೆ ಕರ್ನಾಟಕದಿಂದ ಲುಪ್ತವಾಗಿ ಹೋಯಿತು'. ಎಂದು ವಿ. ಎಲ್. ಪಾಟೀಲರು ಉಲ್ಲೇಖಿಸಿದ್ದಾರೆ.

ಜೈನರಲ್ಲಿ ದಿಗಂಬರ ಪಂಥಿಗಳಿಗಿಂತ ಶ್ವೇತಾಂಬರರು ಅರ್ವಾಚೀನರೆಂದು ಆ ಸಂಪ್ರದಾಯಗಳ ಇತಿಹಾಸದಿಂದಲೂ ತಿಳಿಯುವಂತಿದೆ. ಬೌದ್ಧಧರ್ಮದ ಒಟ್ಟಿನ ಆಚಾರ-ವಿಚಾರಗಳ ಆಕೃತಿ, ಜೈನ ಧರ್ಮಕ್ಕಿಂತ ಅರ್ವಾಚೀನ ಎಂದು ಶಂಬಾ ಅಭಿಪ್ರಾಯ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೪ ಪುಟ. ೨೪೪*

*ಡಾ. ವಿ.ಎಲ್. ಪಾಟೀಲ್ ೨೦೦೯ ವಡ್ಡಾರಾಧನೆ ಜಾನಪದೀಯ ಅಧ್ಯಯನ ಪುಟ. ೧೩೪*

## ಷ

### ೬೯೭. ಷಡಾವಶ್ಯಕಗಳು

*ಹಿತಸಾಧುಸಮಾಧಿ ವ್ಯಾ*
*ಪೃತಿ ಗುರುವಂದಿತ ಜಿನಪ್ರವಚನ* ***ಷಡಾವ***
***ಶ್ಯತೆಯೆನಿಸಿ*** *ನೆಗಟ್ದು ವೀಜಿನ*
*ಪತಿಶಾಸನ ದೀಪಕತೆ ಶ್ರುತಾಭಿಪ್ರಣಯಂ ॥ (ಶಾಂತಿಪುರಾಣ ೯-೧೧೬)*

ಸಮಾಧಿ, ವೈಯಾಪೃತ್ಯ, ಆಚಾರ್ಯಭಕ್ತಿ, ಜಿನೋಕ್ತವಾದ ಷಡಾವಶ್ಯಕ, ಜಿನಶಾಸನ ದೀಪಕವಾದ ರತ್ನತ್ರಯಗಳು ಮತ್ತು ಸದ್ಧರ್ಮಪ್ರೇಮ.

ಮೂಲಾಚಾರದಲ್ಲಿ ಷಡಾವಶ್ಯಕಗಳ ಸಂಕ್ಷಿಪ್ತ ಸ್ವರೂಪವನ್ನು ಹೀಗೆ ಹೇಳಿದ್ದಾರೆ,-

೧) ಪರದ್ರವ್ಯಗಳಿಂದ ರಾಗ-ದ್ವೇಷರಹಿತರಾಗಿ ಸಾಮ್ಯಭಾವವಿಟ್ಟುಕೊಳ್ಳುವುದು ಅದು ಸಾಮಾಯಿಕವಾಗಿದೆ.

೨) ಋಷಭ, ಅಜಿತ ಮೊದಲಾದ ಚೌವ್ವೀಸ ತೀರ್ಥಂಕರುಗಳಲ್ಲಿ ಯಾರಾದರೂ ಓರ್ವ ತೀರ್ಥಂಕರ ಅಥವಾ ಎಲ್ಲರ ಗುಣಗಳ ಸ್ತುತಿ ಮಾಡುವುದು ಹಾಗೂ ಮನ-ವಚನ-ಕಾಯಗಳ ವಿಶುದ್ಧಿಯೊಡನೆ ಅವರಿಗೆ ನಮಸ್ಕಾರ ಮಾಡುವುದು ಅದು ಸ್ತವನವಾಗಿದೆ.

೩) ಅರಹಂತ ಮತ್ತು ಸಿದ್ಧರ ಪ್ರತಿಬಿಂಬಗಳ ದರ್ಶನ-ಪೂಜನ ಮತ್ತು ಶ್ರುತಧರ ಹಾಗೂ ತಪಸ್ಸಿನಲ್ಲಿ ವಿಶೇಷರಾದ ಗುರುಗಳು ಮನ-ವಚನ-ಕಾಯಗಳಿಂದ ಸ್ತುತಿಪೂರ್ವಕವಾಗಿ ನಮಸ್ಕಾರ ಮಾಡುವುದು ಅದು ವಂದನೆಯಾಗಿದೆ.

೪) ದ್ರವ್ಯ-ಕ್ಷೇತ್ರ-ಕಾಲ-ಭಾವಗಳ ಆಶ್ರಯದಿಂದ ಅಹಿಂಸೆ ಮೊದಲಾದ ವ್ರತಗಳಲ್ಲಿ ತಗಲಿದ ದೋಷಗಳನ್ನು ನಿಂದೆ ಗರ್ಹ್ಯಗಳ ಮುಖಾಂತರ ಪರಿತ್ಯಾಗ(ನಾಶ) ಮಾಡುವುದು ಅದು ಪ್ರತಿಕ್ರಮಣವಾಗಿದೆ.

೫) ವಾಚನ, ಪೃಚ್ಛನೆ, ಅನುಪ್ರೇಕ್ಷೆ, ಆಮ್ನಾಯ ಮತ್ತು ಧರ್ಮೋಪದೇಶರೂಪದಿಂದ ಶಾಸ್ತ್ರಗಳ ಅಧ್ಯಯನ ಮತ್ತು ಆತ್ಮ ಚಿಂತನವು ಅದು ಸ್ವಾಧ್ಯಾಯವಾಗಿದೆ.

೬) ನಿತ್ಯ ಮತ್ತು ನೈಮಿತ್ತಿಕ ಕ್ರಿಯೆಗಳಲ್ಲಿ ಜಿನೇಂದ್ರ ದೇವರ ಗುಣಗಳ ಸ್ಮರಣೆ

ಮಾಡುತ್ತಿರುವಾಗ ಆ ಶರೀರದ ಕುರಿತಾಗಿರುವ ಮಮತ್ವಥ ತ್ಯಾಗವಾಗುತ್ತದೆ. ಅದನ್ನು ಕಾಯೋತ್ಸರ್ಗವೆಂದು ಹೇಳುತ್ತಾರೆ. ಇಲ್ಲಿ ಸಾಮಾಯಿಕೆ; ಸ್ತವನ; ವಂದನೆ; ಪ್ರತಿ ಕ್ರಮಣ (ಪಡಿಕಮಣ) ಸ್ವಾಧ್ಯಾಯ; ಕಾಯೋತ್ಸರ್ಗಗಳಿಗೆ ಅರ್ಥ ಪ್ರಭೇದವಿದೆಯೆಂಬುದನ್ನು ಗಮನಿಸಬೇಕು.

*ವಿವರಗಳಿಗೆ ನೋಡಿ: ಶ್ರೀಮದ್ ಭಗವತ್ಕುಂದಕುಂದಾಚಾರ್ಯವಿರಚಿತ ೨೦೦೯ ಪ್ರವಚನಸಾರ ಶ್ರೀ ಎಂ. ಬಿ. ಪಾಟೀಲ ೨೦೧೦ ತತ್ವಾರ್ಥಸೂತ್ರ*

**೯೮೮. ಷೋಡಶ ಭಾವನೆಗಳು**

*ಸ್ವಾಧ್ಯಾಯಧ್ಯಾನವ್ಯುತ್ಸರ್ಗಂಗಳಂ ಕೈಕೊಂಡು ಪನ್ನೆರಡು ತಪದೊಳ್ ನೆಜೆದಿರ್ಪತ್ತೆರಡುಪರೀಷಹಂಗಳಂ ಗೆಲ್ದು ಗಣಧರನಗಣಮಂ ಬಿಟ್ಟೇಕವಿಹಾರಿಯಾಗಿ ಬಳಿಯಂತ್ರೈಲೋಕ್ಯಕ್ಷೋಭಕಾರಣ ತೀರ್ಥಕರಪುಣ್ಯಹೇತುಗಳಪ್ಪ* ***ಷೋಡಶಭಾವನೆಗಳಂ*** *ಭಾವಿಸಿ, ಭಾವನೆಯೊಳಾದ ಬುದ್ಧಿತಪೋವಿಕ್ರಿಯೌಷಧಿರಸಬಲಾಕ್ಷೀಣಾಭಿಧಾನ ಸಪ್ತರ್ಧಿಗಳೊಳಂ ನೆರೆದು, ಬಳಿಯಂ ಮೋಹನೀಯಕರ್ಮೋಪಶಮದೊಳ್....................*

(ಆದಿಪುರಾಣ ೬-೩೩ ವ)

ಷೋಡಶ ಭಾವನೆಗಳೆಂದರೆ ಈ ಕೆಳಗಿನವುಗಳು. ಆದರೆ ಇವು ಜೈನ ಧರ್ಮದ ಆಚರಣೆಗಳು ಎಂಬುದನ್ನು ಸೂಚಿಸುತ್ತದೆ.

ಈ ಪರಿಕಲ್ಪನೆಯು ಹೆಚ್ಚಿನ ಜೈನಕಾವ್ಯಗಳಲ್ಲಿ ಕಾಣಿಸಿಕೊಂಡಿದೆ. ಚಾವುಂಡರಾಯ ಪುರಾಣದಲ್ಲಿ ಹೀಗೆ ಬರುತ್ತದೆ :

"ದಿಗಂಬರನಾಗಿ ಷೋಡಶ ಭಾವನೆಗಳಂ ಭಾವಿಸಿ" (ಆದಿಪುರಾಣ ೨೯ ವ).

ಷೋಡಶ ಭಾವನೆಗಳು (೬-೩೩ ವ): ತೀರ್ಥಂಕರತ್ವವನ್ನು ಸಾಧಿಸಿಕೊಡುವುದೇ ತೀರ್ಥಂಕರತ್ವ

ನಾಮಕರ್ಮ ಭಾವನೆಗಳು. ಅವು ಹದಿನಾರು: ೧. ದರ್ಶನವಿಶುದ್ಧಿ-ಸಮ್ಯಗ್ದರ್ಶನವನ್ನು ದೋಷರಹಿತವಾಗಿ ಪಾಲಿಸಲು ಸದಾ ಚಿಂತನೆ ಮಾಡುವುದು. ೨. ವಿನಯಸಂಪನ್ನತೆ-ವಿನಯವನ್ನು ನೆಲೆಗೊಳಿಸುವ ಭಾವನೆ. ೩. ಶೀಲೇಷ್ವನತಿಚಾರ-ಅಹಿಂಸೆ, ಕ್ರೋಧವರ್ಜನ ಮುಂತಾದ ಶೀಲಗಳಲ್ಲಿಯೂ ವ್ರತಗಳಲ್ಲಿಯೂ ದೋಷ ಬಾರದಂತೆ ಭಾವಿಸುವುದು. ೪. ಆಭೀಕ್ಷ್ಣಜ್ಞಾನೋಪಯೋಗ-ಪ್ರತಿಕ್ಷಣವೂ ಸಮ್ಯಗ್ದರ್ಶನದ ಉಪಯೋಗವನ್ನು ಭಾವಿಸುವುದು. ೫. ಸಂವೇಗ-ಧರ್ಮಾನುರಾಗ, ಸಂಸಾರಭೋಗ ಗಳಲ್ಲಿ ವೈರಾಗ್ಯ ೬. ಶಕ್ತಿತಸ್ತ್ಯಾಗ-ಶಕ್ತಿ ಉಳಿಸಿಕೊಳ್ಳದೆ ತ್ಯಾಗ ಮಾಡಲು ಭಾವಿಸುವುದು. ೭. ಶಕ್ತಿತಸ್ತಪ-ಶಕ್ತಿ ಉಳಿಸಿಕೊಳ್ಳದೆ ತಪಸ್ಸು ಮಾಡಲು ಭಾವಿಸುವುದು. ೮. ಸಾಧುಸಮಾಧಿ-ಸಾಧುಗಳ ತಪಸ್ಸಿಗೆ ವಿಘ್ನಗಳುಂಟಾದರೆ ಅದನ್ನು ದೂರ ಮಾಡುವುದು. ೯. ವೈಯಾವೃತ್ಯಕರಣ-ಗುಣವಂತರ ಕಷ್ಟಗಳನ್ನು ನಿರ್ದುಷ್ಟರೀತಿಯಿಂದ ಪರಿಹರಿಸುವುದು. ೧೦. ಅರ್ಹದ್ಭಕ್ತಿ-ಅರ್ಹಂತರ ಗುಣಗಳನ್ನು ಭಾವಶುದ್ಧಿಯಿಂದ ಸ್ಮರಿಸುವುದು. ೧೧.

ಆಚಾರ್ಯಭಕ್ತಿ ೧೨. ಉಪಾಧ್ಯಾಯಭಕ್ತಿ ೧೩. ಪ್ರವಚನ ಭಕ್ತಿ–ಜಿನವಾಣಿಯಲ್ಲಿ ಭಕ್ತಿಯಿಟ್ಟು ಅದನ್ನು ಗ್ರಹಿಸುವುದು. ೧೪. ಆವಶ್ಯಕಾಪರಿಹಾಣಿ–ಮುನಿಯಾಗಲಿ, ಶ್ರಾವಕನಾಗಲಿ ತನ್ನ ನಿತ್ಯದ ಆವಶ್ಯಕ ಕ್ರಿಯೆಗಳನ್ನು ಬಿಡದೆ ಮಾಡುತ್ತಿರುವುದು. ೧೫. ಮಾರ್ಗಪ್ರಭಾವನೆ–ಮೋಕ್ಷಮಾರ್ಗದ ವೃದ್ಧಿಯನ್ನು ಭಾವಿಸುವುದು. ೧೬. ಪ್ರವಚನವತ್ಸಲತ್ವ–ಸಧರ್ಮೀಯರಲ್ಲಿ ವಾತ್ಸಲ್ಯ ಇಡುವುದು. (ಆದಿಪುರಾಣ ೬–೩೩ ವ)

**೬೯೯. ಷೋಡಶ ಸಂಸ್ಕಾರ**

***"ಅಂತವನೆಧಿಜಾತಕರ್ಮ ನಾಮಕರಣಾನ್ನ ಪ್ರಾಶನ ಚೌಲೋ***

***ಪನಯನಾದಿ ಷೋಡಶ ಕ್ರಿಯೆಗಳಂ......... (ಪಂಪ ಭಾರತ ೮೭ ವ)***

ಸಂಸ್ಕಾರ ಎಂಬ ಸಂಸ್ಕೃತ ಪದವು 'ಕೃ' ಎಂಬ ಮೂಲ ಧಾತುವಿನಿಂದ ಜನಿಸಿ 'ಸಂ' ಎಂಬ ಉಪಸರ್ಗ ಮತ್ತು 'ಘನ್' ಎಂಬ ಅಂತ್ಯ ಪ್ರತ್ಯಯದಿಂದೊಡಗೂಡಿ ಅನೇಕ ಅರ್ಥಗಳಲ್ಲಿ ಬಳಕೆಯಾಗಿದೆ. ವಿವಿಧ ದರ್ಶನಗಳು ಈ ಪದವನ್ನು ವಿವಿಧ ಅರ್ಥಗಳಲ್ಲಿ ಬಳಸಿವೆ. ಮೀಮಾಂಸಕರು 'ಯಜ್ಞಾಹುತಿಯ ಪ್ರೋಕ್ಷಣೆ ಮುಂತಾದ ಕರ್ಮದಿಂದುದಿಸುವ ಗುಣಧರ್ಮ' ಎಂಬುದಾಗಿಯೂ, ಅದ್ವೈತಿಗಳು 'ಶರೀರ ಪ್ರವೃತಿಯಿಂದುದಿಸಿದ ಆತ್ಮದ ಒಂದು ಕೃತಕ ಗುಣಧರ್ಮ'ವೆಂದೂ, ನೈಯಾಯಿಕರು 'ಅನುಭವಗಳಾಗಿರುವ ಸ್ವಯಂ ಪುನರುತ್ಪತ್ತಿ ಶಕ್ತಿ ಅಥವಾ ಸಾಮರ್ಥ್ಯ'ವೆಂದೂ ಇದನ್ನೂ ಅರ್ಥ ಮಾಡಿಕೊಂಡಿದ್ದಾರೆ. ಪ್ರಮಾಣಭೂತವಾದ ಸಂಸ್ಕೃತ ಸಾಹಿತ್ಯ, ಸಂಸ್ಕಾರವೆಂದರೆ ಶಿಕ್ಷಣ, ತರಬೇತಿ, ಅಭಿವೃದ್ಧಿ, ಶಿಷ್ಟಾಚಾರ, ನೈಪುಣ್ಯ, ವ್ಯಾಕರಣ ಸ್ವಚ್ಛತೆ, ಗುಣವರ್ಧನ, ಒಪ್ಪು ಹಾಕುವುದು, ಅಲಂಕಾರ ಮತ್ತು ಆಭರಣ, ಆಕಾರ, ಮುದ್ರೆ, ಹಸ್ತಕ್ರಿಯೆ, ಪ್ರಭಾವ; ಜ್ಞಾನ ಸಂಚಯಕ್ಕೆ ಕಾರಣವಾದ ಕ್ರಿಯಾಪ್ರವೃತ್ತಿ, ಪ್ರಾಯಶ್ಚಿತ್ತವಿಧಿ, ಪವಿತ್ರಮಯ ಅನುಷ್ಠಾನ ಮತ್ತು ಆಚಾರ, ದೀಕ್ಷೆ, ಪಾವಿತ್ರ್ಯಗೊಳಿಸುವಿಕೆ ಮತ್ತು ಪ್ರೋಕ್ಷಣೆ, ನಡೆದುಹೋದ ಕಾರ್ಯದ ಫಲ, ಕಾರ್ಯದಿಂದಾದ ಪುಣ್ಯ, ಮುಂತಾದ ಅರ್ಥಗಳಲ್ಲಿ ಬಳಸಿ, ಹಿಂದೂ ಸಂಸ್ಕಾರಗಳು ಕೇವಲ ಸಾಂಪ್ರದಾಯಿಕವಾದ ಶಾರೀರಿಕ ಶುದ್ಧತೆಯೊಂದನ್ನೇ ಗುರಿಯಾಗಿಟ್ಟುಕೊಳ್ಳದೆ, ಪರಿಗ್ರಾಹಕನಲ್ಲಿ ಒಂದು ವಿಶಿಷ್ಟವಾದ ಅರ್ಹತೆಯನ್ನುಂಟುಮಾಡಿ ಅವನ ಪೂರ್ಣ ವ್ಯಕ್ತಿತ್ವವನ್ನು ಪವಿತ್ರಗೊಳಿಸಿ ನೈಪುಣ್ಯ, ಶಿಷ್ಟಾಚಾರವನ್ನೊದಗಿಸುತ್ತವೆ ಎಂಬುದನ್ನು ಸೂಚಿಸುತ್ತದೆ. ವೈದಿಕ ಧರ್ಮದ ಷೋಡಶ ಸಂಸ್ಕಾರಗಳು ಈ ರೀತಿಯಿವೆ: ೧. ಗರ್ಭಧಾರಣ ೨. ಪುಂಸವನ ೩. ಸೀಮಂತೋನ್ನಯನ ೪. ಜಾತಕರ್ಮ ೫. ನಾಮಕರಣ ೬. ನಿಷ್ಕ್ರಮಣ ೭. ಅನ್ನಪ್ರಾಶನ ೮. ಚೂಡಾಕರಣ ೯. ಕರ್ಣವೇಧ ೧೦. ವಿದ್ಯಾರಂಭ ಅಥವಾ ಅಕ್ಷರಾರಂಭ ೧೧. ಉಪನಯನ ೧೨. ವೇದಾರಂಭ ೧೩. ಕೇಶಾಂತ ೧೪. ಸಮಾವರ್ತನ ೧೫. ವಿವಾಹ ೧೬. ಅಂತೇಷ್ಟಿ ಇವು ಹತ್ತು ಹನ್ನೆರಡು ಮತ್ತು ಹದಿಮೂರು ಆಮೇಲೆ ಆರಂಭವಾದವು.

*ವಿವರಗಳಿಗೆ ನೋಡಿ: ಯುಗಾಯಾತ್ರೀ ಭಾರತೀಯ ಸಂಸ್ಕೃತಿ ೧೯೭೧ ಪುಟ. ೨೯೧.*

# ಸ

### ೨೦೦. ಸಂಕೇತ

*ಅಂತಾಗಳೊಂದುತ್ತರಂ ಬಳೆಯೆ ಸೊಗಯಿಸುವ*
*ಪೊಱಲೊಳಪ್ಪಶೋಭೆಯಂ ಮಾಡಿ ದುರ್ಯೋಧನನ*
***ಸಂಕೇತದೊಳ್** ಮುನ್ನಮೆ ಸಮೆದಿರ್ದ ಪುರೋಚನಂ.....*

*(ಪಂಪ ಭಾರತ ೩-೨ ವ)*

ಸಂಕೇತವೆಂದರೆ ಚಿಹ್ನೆ ಅಥವಾ ಸೂಚನೆ. ಪಂಪನು ಅದನ್ನು ಹೇಳುತ್ತಾನೆ.

ದುರ್ಯೋಧನನ ಸೂಚನೆಯ ಪ್ರಕಾರ ಮೊದಲೇ ಸಿದ್ಧವಾಗಿದ್ದ ಪುರೋಚನನು ಗೋರೋಚನ, ಅಕ್ಷತೆ, ಗರಿಕೆಯ ಚಿಗುರು, ಮೊದಲ ಹಣ್ಣು, ಕನ್ನಡಿ, ಕಳಮಾಕ್ಷತೆ ಮೊದಲಾದವುಗಳನ್ನು ಕೈಯ್ಯಲ್ಲಿ ಧರಿಸಿದ್ದ ಸ್ತ್ರೀಯರು ಮಂಗಳವಾದ್ಯಗಳು ಮೊದಲಾದವುಗಳಿಂದ ಕೂಡಿ ಎದುರಿಗೆ ಬಂದು ದೀರ್ಘದಂಡ ನಮಸ್ಕಾರ ಮಾಡಿ ಪಾಂಡವರನ್ನು ಮುಂದಿಟ್ಟುಕೊಂಡು ಬಂದು ಪಟ್ಟಣವನ್ನು ಪ್ರವೇಶ ಮಾಡಿಸಿ ಎಲ್ಲಿ ಬೀಡು ಬಿಡೋಣ? ಎಂದು ಪಾಂಡವರು ಪ್ರಶ್ನೆ ಮಾಡಲು, ಅವನು ನಿಮ್ಮಯ್ಯನಾದ ಧೃತರಾಷ್ಟ್ರನ ಆಜ್ಞೆಯ ಪ್ರಕಾರ ಮೊದಲೇ ಮನೆಯನ್ನು ಸಿದ್ಧಪಡಿಸಿದ್ದೇನೆ ಎನ್ನುತ್ತಾನೆ. ಆಧುನಿಕ ಸಾಹಿತ್ಯದಲ್ಲಿ ಸಂಕೇತದ ಅರ್ಥವು ಭಿನ್ನವಾಗಿದೆ.

*ವಿವರಗಳಿಗೆ ನೋಡಿ: ಜಿ. ಎಸ್. ಶಿವರುದ್ರಪ್ಪ ಕಾವ್ಯಾರ್ಥಚಿಂತನ*

### ೨೦೧. ಸಂಚಿತ

ಜೇನುನೊಣಗಳು ಸಂಗ್ರಹಿಸಿದ ಜೇನನ್ನು ಜನರು ಕೊಂಡು ಹೋಗುತ್ತಾರೆ. ಐಶ್ವರ್ಯವನ್ನು ಸಂಚಿತ ಮಾಡಿಕೊಂಡರೆ ಅದರಿಂದ ಯಾವ ಉಪಯೋಗವೂ ಇಲ್ಲ. ಐಶ್ವರ್ಯವಿದ್ದಾಗ ಪರಪುರುಷಾರ್ಥ ಮಾಡಬೇಕು. ಮತ್ತೆ ತಾವು ಉಣ್ಣಬೇಕು ಎಂದು ಕರ್ಣಾಟಕ ಪಂಚತಂತ್ರದಲ್ಲಿ ಬರುತ್ತದೆ. (ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ, ಶ್ಲೋಕ ೪೪)

ಸಂಚಿತವೆಂದರೆ ಆರ್ಜಿತ, ಕೂಡಿಟ್ಟ ಎಂಬ ಅರ್ಥವಿದೆ. ಸಂಚಿತವೆನ್ನುವುದು ಆಧ್ಯಾತ್ಮಿಕ ಪರಿಭಾಷೆಯಲ್ಲಿ ಸಂಚಿತಕರ್ಮವೆಂಬ ಅರ್ಥದಲ್ಲಿಯೂ ಬಳಕೆಯಾಗಿರುವುದು ಗಮನಾರ್ಹ. ನಾವು ಯಾವುದನ್ನು ಆರ್ಜಿಸಿರುತ್ತೇವೆಯೋ ಅದರ ಪ್ರತಿಫಲವು ನಮಗೆ ದಕ್ಕುತ್ತದೆ.

### ೨೦೨. ಸಂಧಿವಿಗ್ರಹಿ

***ಸಂಧಿವಿಗ್ರಹಾ**ಸ್ಪದಮನಾತ್ಮಸಾತ್ಕೃತನೃಪತ್ರಿವರ್ಗಂ ದುರ್ಗಂ. (ಪಂಚತಂತ್ರ, ೪೨)*

ದುರ್ಗಸಿಂಹ ತಾನು ಸಂಧಿ ವಿಗ್ರಹಿಯೆಂಬ ಪದವಿಯನ್ನು (ಬಿರುದನ್ನು) ಪಡೆದೆನೆಂದು ಹೇಳುತ್ತಾನೆ. ವಾಸ್ತವವಾಗಿ ಸಂಧಿ ವಿಗ್ರಹಿಯೆಂದರೆ ಯುದ್ಧ-ರಾಜಿಗಳ

ಬಗೆಗಿನ ಮಂತ್ರಿ.

ರಾಜರು ಯುದ್ಧಕ್ಕಿಂತ ಮೊದಲು ಸಂಧಿಯೋ ಸಮರವೋ ಎಂದು ನಿರ್ಣಯಿಸಲು ಯಾರಾದರೂ ಒಬ್ಬರನ್ನು ಕಳಿಸುತ್ತಿದ್ದರು. ಇದಕ್ಕೆ ಪೂರಕವಾಗಿ ಕೃಷ್ಣಸಂಧಾನವನ್ನು ನೆನಪಿಸಿಕೊಳ್ಳಬಹುದು. ಮಂತ್ರಿಗಳನ್ನು ಸಂಧಿ–ವಿಗ್ರಹಿಗಳೆಂದು ಕರೆದಿರುವುದೂ ಇದೆ. (ಶಾಂತಿಪುರಾಣಂ ೩–೭೩)

ಕೌಟಿಲ್ಯನು ಆತ್ಮಾಮಿಷ, ಆತ್ಮರಕ್ಷಣ, ಅದೃಷ್ಟಪುರುಷ ಸಂಧಿ ದಂಡೋಪನತಸಂಧಿ, ಪರಿಕ್ರಯಸಂಧಿ, ಉಪಗ್ರಹಸಂಧಿ, ಸುವರ್ಣಸಂಧಿ, ಕಪಾಲಸಂಧಿ, ಆದಿಷ್ಟಸಂಧಿ, ಉಚ್ಛಿನ್ನಸಂಧಿ, ಅವಶ್ರಯಸಂಧಿಗಳ ಕುರಿತು ಅರ್ಥಶಾಸ್ತ್ರದಲ್ಲಿ ಹೇಳಿದ್ದಾನೆ.

*ವಿವರಗಳಿಗೆ ನೋಡಿ: ಶ್ರೀ ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳು ೨೦೧೦*
*ಕೌಟಲೀಯ ಅರ್ಥಶಾಸ್ತ್ರ ಪುಟ. ೩೭೬–೩೮೪.*

**೭೦೩. ಸಂನ್ಯಸನ**

*ಸುರಚಾಪಂಬೋಲೆ ವಿದ್ಯುಲ್ಲತೆಗಳೆಜಿವೋಲೆ ಮಂಜುವೋಲ್ ತೋಱಿ ಬೇಗಂ.*
*ಪಿರಿಗುಂ ಶ್ರೀರೂಪ ಲೀಲಾ ಧನ ವಿಭವ ಮಹಾರಾಶಿಗಳ್ ನಿಲ್ಲವಾರ್ಗ್ಗಂ*
*ಪರಮಾರ್ತ್ಥಂ ಮೆಚ್ಚೆನಾನೀಧರಣಿಯುಳಿರವಾನೆಂದು **ಸನ್ಯಸನಂಗೆ***
*ಯ್ದುರುಸತ್ವನ್ನಂದಿಸೇನ ಪ್ರವರ ಮುನಿವರನ್ ದೇವಲೋಕಕ್ಕೆ ಸಂದಾನ್*

ಇದರ ಕುರಿತು ಆರ್ ಶೇಷಶಾಸ್ತ್ರಿಯವರು ಹೀಗೆ ಹೇಳುತ್ತಾರೆ: ಮುನಿಗಳ ಜೀವನ ದರ್ಶನವನ್ನು ನಾಲ್ಕು ಸಾಲುಗಳಲ್ಲಿ ಒಂದು ಶಾಸನ ಈ ರೀತಿ ಮಾಡಿಕೊಡುತ್ತದೆ.

ಅಂದರೆ, ಈ ಪ್ರಂಪಚದ ಎಲ್ಲಾ ವೈಭೋಗಗಳೂ ಕಾಮನವಿಲ್ಲಿನಂತೆ, ಮಿಂಚಿನ ಬೆಳಕಿನಂತೆ, (ಸುರಚಾಪ) ಮಂಜಿನಂತೆ (ಮಂಜು) ಕ್ಷಣ ಮಾತ್ರ ನಮ್ಮನ್ನು ಆಕರ್ಷಿಸಿ ಬೇಗ ಮಾಯವಾಗುವಂಥವು. ಇವು ಯಾರಿಗೂ ಬಹುಕಾಲ ಉಳಿಯುವಂಥದ್ದಲ್ಲ. ಮುಂದಿನ ಸುಕೃತಕ್ಕಾಗಿ ಆಶಿಸಿ ನಂದಿಸೇನ ಮುನಿವರರು ಈ ಭೂಲೋಕದ ಆಸೆ ಆಮಿಷಗಳನ್ನು ತೊರೆದು ಸನ್ಯಸನವಿಧಿಯಿಂದ ದೇಹತ್ಯಾಗ ಮಾಡಿ ದೇವಲೋಕಕ್ಕೆ ಸೇರಿಹೋದರೆಂತೆ, ಜೀವನದ ನಶ್ವರತೆ, ಸಾವನ್ನು ಎದುರಿಸಿದ ನಂದಿಸೇನ ಮುನಿಗಳ ಮನಸ್ಸಿನ ದೃಢತೆಯನ್ನು ಶಾಸನಕಾರ ಮನೋಜ್ಞವಾಗಿ ಸೆರೆ ಹಿಡಿದಿದ್ದಾನೆ.

ಶ್ರವಣಬೆಳಗೊಳದ ೧೧೩೧ರ ಮತ್ತೊಂದು ಶಾಸನವು ವಿಷ್ಣುವರ್ಧನನ ಹೆಂಡತಿ ಶಾಂತಲೆಯ ತಾಯಿಯಾದ ಮಾಚಿಕಬ್ಬೆಯ ಸನ್ಯಸನ ಮರಣವನ್ನು ಮನಮಿಡಿಯುವಂತೆ ಚಿತ್ರಿಸುತ್ತದೆ. ಉಪದೇಶ ಮಾಡುತ್ತ. ಸೋತ್ರಗಳನ್ನು ಹೇಳುತ್ತ ಗುರುಗಳ ಎದುರು, ತದೇಕ ಚಿತ್ತದಿಂದ ಕುಳಿತು ಆಲಿಸುತ್ತಿದ್ದ ಮಾಚಿಕಬ್ಬೆಯ ಶ್ರದ್ಧಾಸಕ್ತಿಗಳನ್ನು, ಅವಳು ಅನುಸರಿಸುತ್ತಿದ್ದ ಕಠೋರ ವಿಧಿಗಳನ್ನು ಚಿತ್ರಿಸುವ ಸಂದರ್ಭದಲ್ಲಿಯೇ, ಅವಳ ಈ ಘೋರ ವ್ರತಾಚರಣೆಯನ್ನು ಲೌಕಿಕ ದೃಷ್ಟಿಯಿಂದ ಪರಿಗಣಿಸಿ, ತೀವ್ರವಾದ ಚಿತ್ರಣವನ್ನು ಶಾಸನಕಾರ ನೀಡುತ್ತಾನೆ. ತನ್ನ ಬಂಧುಗಳನ್ನು ಸಮಾಧಾನ ಪಡಿಸಿ, ಅವರ ದುಃಖದಿಂದ

ತಾನು ವಿಚಲಿತಳಾಗದೆ ಒಂದು ತಿಂಗಳಕಾಲ ಉಪವಾಸ ಮಾಡಿ ದೇಹತ್ಯಾಗ ಮಾಡುತ್ತಾಳೆ. ಅವರ ಧಾರ್ಮಿಕ ನಿಷ್ಠೆಯನ್ನು ಶಾಸನ ಮುಕ್ತ ಕಂಠದಿಂದ ಹೊಗಳಿದೆ.

*ವಿವರಗಳಿಗೆ ನೋಡಿ: ಶ್ರೀ ಶೇಷಶಾಸ್ತ್ರಿ ೨೦೦೫ ಶಾಸನ ಪರಿಚಯ*

## ೭೦೪. ಸಂಬಳಿಕೋಲು

*ಕರತಳದೊಳ್ ತಳೆದದೊಂದು* ***ಸಂಬಳಿಗೋಲಿಂ***
*ದಿರದೆ ಪಳಂಚಿಸಿದಳ್ ಜ*
*ರ್ಝರರವಮೊಗೆಯಲ್ಕೆ ನೃಪಸಭಾಕುಟ್ಟಿಮಮಂ*

*(ಕರ್ಣಾಟಕ ಕಾದಂಬರಿ ೧–೩೧)*

ಕೈಯಲ್ಲಿ ಹಿಡಿದುಕೊಳ್ಳುವ ಬಿದಿರ ಕೋಲನ್ನು ಸಂಬಳಿ ಕೋಲು ಎಂದು ಕರೆಯುತ್ತಾರೆ. ಅಸ್ಪೃಶ್ಯರು ಹಾದಿಯಲ್ಲಿ ಬರುವಾಗ ಮೇಲು ಜಾತಿಯವರು ಬಂದರೆ ತಾವು ಬರುತ್ತಿದ್ದೇವೆ ಎಂದು ಸೂಚಿಸಲು ಬಿದಿರ ಕೋಲನ್ನು ನೆಲಕ್ಕೆ ಕುಟ್ಟಿ, 'ಸಂಭೋಳಿ' ಎಂದು ಹೇಳುತ್ತಾರೆ. ಆದುದರಿಂದ ಅವರ ಕೈಯಲ್ಲಿರುವ ಬಿದಿರ ದೊಣ್ಣೆಗೆ ಸಂಬಳಿಕೋಲು ಎಂದು ಬಂದಿರಬೇಕು. ಅಸ್ಪೃಶ್ಯೆಯಾದ ಚಾಂಡಾಲ ಕನ್ಯೆಯು ಸಭಾಪ್ರದೇಶ ಮಾಡಿ ನೆಲವನ್ನು ಕುಟ್ಟಿ ಧ್ವನಿಗೈದಳು ಎಂದು ಕಾದಂಬರಿ ಕಾವ್ಯದಲ್ಲಿ ವರ್ಣನೆಯಿದೆ.

'ಸಂಬಳಿಗೋಲು' ಎಂಬುದು ತುದಿ ಜಜ್ಜಿ ಸೀಳುಬಿಟ್ಟ ಬಿದಿರು ಗೋಲಾಗಿರುವುದು ಸಂಭವ ಎಂದಾಯಿತು. ಅದನ್ನು ಹೊಲೆಯರು ತಮ್ಮ ಗುರುತಾಗಿ ಉಪಯೋಗಿಸುತ್ತಿದ್ದರು ಎಂದೂ ಇಟ್ಟುಕೊಳ್ಳಬಹುದು. ಈ ಕೋಲನ್ನು ಕುಟ್ಟಿ ಸದ್ದುಮಾಡಿ ಜನರಿಗೆ 'ಎಚ್ಚರಿಕೆ' ಕೊಡುತ್ತಿದ್ದರು ಎಂಬುದನ್ನು 'ಸಂಬಳಿ' ಶಬ್ದದ ಪರಿಶೀಲನದಿಂದ ತಿಳಿಯಬಹುದು.

(ಣೇ)–ಕ್ರಿಯಾಪದ, ರಕ್ಷಣಕರಣೇ, ಪಾಳಣೇ, ಕಾಳಜೀಘೇಣೇ to protect, to take care, to rear.

(ಸಂಸ್ಕೃತ–ಸಂಭಾರಯತಿ, ಸಂಭಾರಃ (ಯೋಗಕ್ಷೇಮ), ಬಂಗಾಳಿ–ಸಾಮಾಲಾ. ಪಾಳಿ–ಸಂಭಾರೋ (ಏಕೀಕರಣ, ಪುಂಜ) . . . .ಸಂಪಾಲಯತಿ ಎಂಬುದರಿಂದ ಸಂಭಾಳಣೇ ಎಂಬುದರ ವ್ಯುತ್ಪತ್ತಿ ಹೆಚ್ಚು ಗ್ರಾಹ್ಯವಾಗಿದೆ).

೧. ಯ. ರಾ. ದಾತೆಯವರ 'ಮಹಾರಾಷ್ಟ್ರ ಶಬ್ದಕೋಶ'ದಲ್ಲಿ (೧೯೩೮: ಸಂಪುಟ ೭,ಪುಟ. ೩೦೨೪) ಹೀಗೆ ಹೇಳಿದೆ:

ಸಂಭಾಳ– . . . . ಅಕರ್ಮಕ ಕ್ರಿಯಾಪದ, ಜಪಣೇ, ಕಾಳಜೀಯೇಣೇ, ಸಾವಧರಾಹಣೇ. 'ಸಂಭಾಳ, ಅಪಥ್ಯ ಕೇರ್ಲೇಸತರ ಕುಖಣೇ ವಾಢೇಲ.'

ಇವುಗಳಿಂದ 'ಸಂಭಾಳ' ಶಬ್ದಕ್ಕೆ ಸಂರಕ್ಷಿಸು, ಪಾಲಿಸು, ಯೋಗಕ್ಷೇಮ ನೋಡಿಕೊ, ಒಟ್ಟುಗೂಡಿಸು ಎಂಬ ಅರ್ಥಗಳಲ್ಲದೆ 'ಎಚ್ಚರಿಕೆ!' ಎಂಬ ಅರ್ಥವೂ ಇದೆ ಎಂದು ಗೊತ್ತಾಗುತ್ತೆ. ಇದೂ ಪಾಲನದಿಂದ ಬಂದ ಅರ್ಥವೇ. 'ನಿನ್ನನ್ನು ರಕ್ಷಿಕೋ' ಎಂಬುದನ್ನೇ ಹುಷಾರ್! ಜೋಕೆ! ಎಚ್ಚರಿಕೆ!' ಎಂದು ಒಂದು ಮಾತಿನಲ್ಲಿ ಹೇಳುತ್ತೇವೆ. ಈ ಅರ್ಥದಲ್ಲಿ

ಮಹಾರಾಷ್ಟ್ರ ಶಬ್ದಕೋಶವು ಒಂದು ಪ್ರಯೋಗವನ್ನು ಮೇಲೆ ಕೊಟ್ಟಿದೆ. ಆ ವಾಕ್ಯಕ್ಕೆ 'ಅಪಥ್ಯ ಮಾಡಿದರೆ ರೋಗ ಹೆಚ್ಚಾದೀತು!' ಎಂದು ಅರ್ಥ> ಈ ಮಾತು ಈ ಅರ್ಥದಲ್ಲಿ ಇಂದಿಗೂ ಮರಾಠಿಗರ ಬಾಯಲ್ಲಿ ಕೇಳ ಬರುತ್ತದೆ.

*ವಿವರಗಳಿಗೆ ನೋಡಿ: ಎ.ಆರ್. ಕೃಷ್ಣಶಾಸ್ತ್ರಿ – ಸಂಬಳಿಗೋಲು (ಲೇಖನ)*

**೭೦೫. ಸಂಸರ್ಗ**

*ಸಂಸರ್ಗಂ ಜನಿಯಿಸುಗುಂ ಗುಣದೋಷೋಪನ*

*ತತ್ವಮನ್..... (ಪಂಚತಂತ್ರ) (೩–೭೯)*

ನಿನ್ನ ತಮ್ಮನ ದುರಾಚರಣೆಯಿಂದಾಗಿ ನೀನೂ ದುರಾಚಾರಿಯಾಗಬೇಕಾಯಿತು. ಈ ಭೂಮಿಯಲ್ಲಿ ಎಲ್ಲಿಯಾದರೂ ಅಷ್ಟೇ– ಗುಣದೋಷಗಳು ಸಂಸರ್ಗದಿಂದಲೇ ಉದ್ಭವಿಸುತ್ತವೆ.

ಸಂಸರ್ಗವೆಂದರೆ ಸಹಯೋಗವೆಂದು ಎಂದು ಅರ್ಥ. ವೇದಾಂತಸಾರದಲ್ಲಿ ಈ ಕೆಳಗಿನಂತೆ ಬರುತ್ತದೆ:

ಅದನ್ನು ಹೀಗೆ ಹೇಳಿದೆ–"ಸಂಸರ್ಗ(ರೂಪ) ವಾದ ಅಥವಾ ವಿಶಿಷ್ಟ (ರೂಪ) ವಾದ ವಾಕ್ಯಾರ್ಥ ಇಲ್ಲಿ ಸಮ್ಮತವಲ್ಲ. ಅಖಂಡೈಕ ರಸರೂಪವಾದ ವಾಕ್ಯಾರ್ಥ ವಿದ್ವಾಂಸರ ಅಭಿಮತ." ಸಂಸರ್ಗವಾದ – ಅಭೇದರೂಪಸಂಸರ್ಗ ವಿಶಿಷ್ಟವಾದ – ಭೇದರೂಪ ಸಂಸರ್ಗ ವಾಕ್ಯಾರ್ಥ ಇಲ್ಲಿ – ತತ್ವಮಸಿ ಎಂಬ ವಾಕ್ಯದಲ್ಲಿ ಅಖಂಡೈಕ ರಸರೂಪವಾದ – ನಿರವಯುವವಾದ ಏಕಾಕಾರವಾದ ಶುದ್ಧ ಚೈತನ್ಯ ವಾಕ್ಯಾರ್ಥ ವಿದ್ವಾಂಸರ – ವೇದಾಂತಶಾಸ್ತ್ರಜ್ಞರ ಅಭಿಮತ – ವಾಕ್ಯವೃತ್ತಿ–೩೮

ಅಭೇದ ರೂಪ ಸಂಸರ್ಗದಲ್ಲಿ ಜೀವ ಮತ್ತು ಪರಮಾತ್ಮನಿಗೆ ಭೇದವಿಲ್ಲ. ಎರಡೂ ಒಂದೇ. ಭೇದರೂಪದಲ್ಲಿ ಜೀವಾತ್ಮ ಮತ್ತು ಪರಮಾತ್ಮದಲ್ಲಿ ಭಿನ್ನತೆಯಿದೆ. ತತ್ವಮಸಿ ಎನ್ನುವಲ್ಲಿ ಬ್ರಹ್ಮ ನೀನೇ ಆಗಿರುವೆಯೆಂಬ ವಾದವಿದೆ.

*ವಿವರಗಳಿಗೆ ನೋಡಿ: ಸುಕುಮಾರ್ ಅಟಿಕೋಡ್ ೨೦೦೫ ತತ್ವಮಸಿ*

*ಎನ್. ಬಾಲಸುಬ್ರಹ್ಮಣ್ಯ ೧೯೭೩ ವೇದಾಂತಸಾರ ಪುಟ. ೯೦*

**೭೦೬. ಸಂಸಾರ**

*ಸಿಂಬುಟು ಕೀವು ಕೆರಂಕ ಸೃ*

*ಗಂಬು ಮಲಂ ಮೂತ್ರಮಾ ಪುರೀಷಂ ಜೀವಂ ।*

*ಬೆಂಬಿಡದೀ ಪಂದೊವಲ ಪ*

*ಸುಂಬೆಯೊಳೀಯೊಡಲೊಳಾವ ಸುಖಕಿರ್ದಪುದೋ ॥ (೬–೫೪)*

*ಸಕಲ ಸ್ವ ರ್ಗಾದಿಚತು*

*ರ್ವಿಕಲ್ಪಗತಿಭೇದಭಿನ್ನಮಂತದೆ ಪಂಚಾ ।*

ತ್ಮಕಮಕ್ಕುಂ ದ್ರವ್ಯಕ್ಷೇ
ತ್ರಕಾಲಭವಭೇದದಿಂದಮೀ ಸಂಸಾರಂ. ॥

(ಅಜಿತತೀರ್ಥಂಕರ ಪುರಾಣ ತಿಲಕಂ ೬-೫೫)

ಪೊನ್ನನ 'ಶಾಂತಿಪುರಾಣ'ದಲ್ಲಿ ಸಂಸಾರಕ್ಕೆ ಹೇಸಿ, ತಪವಾಚರಿಸಿ ಸಾಯುವ ಸ್ತ್ರೀಯರ ಚಿತ್ರಣವಿದೆ (೪-೬೬ವ, ೪-೮೪, ೯-೧೦೧ವ, ಇತ್ಯಾದಿ).

ಸಂಸಾರಸ್ಥ- ಶುದ್ಧ ನಿಶ್ಚಯನಯಾನುಸಾರವಾಗಿ ಜೀವನ ಸಂಸಾರರಹಿತನೂ, ನಿತ್ಯಾನಂದೈಕ ರೂಪನೂ ಆಗಿದ್ದರೂ ಅಶುದ್ಧನಯಾನುಸಾರವಾಗಿ ದ್ರವ್ಯ, ಕ್ಷೇತ್ರ, ಭವ, ಭಾವರೂಪವಾದ ಪಂಚವಿಧ ಸಂಸಾರದಲ್ಲಿರುವವನು.

ಸಿಂಬಳ, ಕೀವು, ಮಲ-ಮೂತ್ರಾದಿಗಳಿಂದ ಕಷ್ಟಗಳಿಂದ ಹಸುಬೆಯಂತಿರುವ ಚರ್ಮದ ಈ ದೇಹ ಯಾವ ಸುಖಕ್ಕಿರುವುದು? ಸಕಲ ಸ್ವರ್ಗ ಚತುರ್ವಿಕಲ್ಪ ಗತಿಭೇದ, ಪಂಚಾತ್ಮ ಕಾಲ, ಭವ, ಭೇದಗಳಿಂದ ಈ ಸಂಸಾರವು ಕೂಡಿದೆಯೆಂದು ರನ್ನ ಹೇಳುತ್ತಾನೆ.

ಸಂಸಾರವೆಂಬುದು ಯಥಾರ್ಥವಲ್ಲವೆಂಬುದನ್ನು ವೇದಾಂತಿಗಳು ಹೇಳುತ್ತಾರೆ. ಸಂಸಾರವು ಒಂದು ಬಂಧವಷ್ಟೇ ಅಲ್ಲ, ಅದು ಕಲ್ಪಿತವಾಗಿರುವುದು ಕೂಡಾ. ಸುಷುಪ್ತಿ ಕಾಲದಲ್ಲಿ ಮನಸ್ಸು ಲಯವಾಗಿರುವಾಗ ಯಾವುದೊಂದು ವಸ್ತುವೂ ಇರುವುದಿಲ್ಲ ವೆಂಬುದು ಜಗತ್ಪ್ರಸಿದ್ಧವಾದ ವಿಷಯ. ಆದುದರಿಂದ ಮನುಷ್ಯನಿಗೆ ಸಂಸಾರವು ಮನಸ್ಸಿನಿಂದಲೇ ಕಲ್ಪಿತವಾಗಿರುವುದು, ಯಥಾರ್ಥವಾಗಿರುವುದಿಲ್ಲ.

ಸಂಸಾರವು ಅಸಾರವೆಂದೂ ದುಃಖಪ್ರದವೆಂದು ಕಂಡು ಎಷ್ಟೋ ಜನರು ಸಂಸಾರ ಬಂಧನದಿಂದ ಮುಕ್ತವಾಗಿ ಬ್ರಹ್ಮ ಪದವನ್ನು ಪ್ರಾಪ್ತಿ ಮಾಡಿಕೊಳ್ಳುವರು.

(ಯೋಗವಸಿಷ್ಠ. ೨೦೦೭. ಪು. ೭೫)

ಕೌಟುಂಬಿಕ ಸಂಬಂಧಗಳ ಕುರಿತು ಪಂಪನು ವಿಕ್ರಮಾರ್ಜುನ ವಿಜಯದಲ್ಲಿ ಬಕಾಸುರವಧೆಯ ಸಂದರ್ಭದಲ್ಲಿ ವಿವರಿಸಿದ್ದಾನೆ. ಬ್ರಾಹ್ಮಣನು ತನ್ನ ಸಂಸಾರದ ಕುರಿತು ಈ ರೀತಿಯಾಗಿ ಹೇಳುತ್ತಾನೆ: 'ಮನೆಯೊಳಾನುಮೆಮ್ಮ ಧರ್ಮ ಪತ್ನಿಯುಂ, ಮಗನುಂ ಮಗಳುಮೀಂತೀ ನಾಲ್ವರೆ ಮಾನಸರೆಮ್ಮ ಪೆಂಡತಿಯ ನೀವೆನೆಪ್ಪೊಡಾಕೆಯಿಂ ಬಚಿಯಮೀ ಕೂಸುಗಳಂ ನಡೆಪುವರಿಲ್ಲೀ ಮಗಳ ನೀವೆಪ್ಪೊಡೆ ಕೊಡಗೂಸೆಂಬುದು ಪೆಜರೊಡವೆ ಮಗನನೀವೆನಪ್ಪೊಡೆ ಸಂತತಿಚ್ಛೇದಮುಂ ಪಿಂಡಚ್ಛೇದಮುಮಕ್ಕು.......(೩-೨೫ ವ) ನಮ್ಮ ಮನೆಯಲ್ಲಿ ನಾನು; ಧರ್ಮಪತ್ನಿ, ಮಗ, ಮಗಳು ಎಂದು ನಾಲ್ಕು ಜನರಿದ್ದೇವೆ. ಹೆಂಡತಿಯನ್ನು ಬಕಾಸುರನಿಗೆ ಒಪ್ಪಿಸಿದರೆ ಮಕ್ಕಳನ್ನು ಸಾಕುವವರಿಲ್ಲ. ಮಗಳನ್ನು ಕೊಡುವೆನೆಂದರೆ(ಕೊಡಗೂಸು) ಪರರ ಒಡವೆ. ಮಗನನ್ನು ಕೊಟ್ಟರೆ ನಿರ್ವಂಶವಾಗುತ್ತದೆ. ಮತ್ತು ಪಿಂಡ ಪ್ರಧಾನ ಮಾಡಲು ಯಾರೂ ಇಲ್ಲ. ಇಲ್ಲಿ ಹೆಂಡತಿಯನ್ನು ಧರ್ಮಪತ್ನಿಯೆಂದು ಕರೆಯಲಾಗಿದೆ. ಮದುವೆಯ ಸಂದರ್ಭದಲ್ಲಿ 'ಧರ್ಮೇಚ; ಅರ್ಥೇಚ; ಕಾಮೇಚನಾತಿ ಚರಾಮಿ ಎಂದು ದಂಪತಿಗಳು ಹೇಳುತ್ತಾರೆ. ಇದು ಬ್ರಾಹ್ಮ ವಿವಾಹ ಪದ್ಧತಿಯಲ್ಲಿ ಬರುತ್ತದೆ. ಆದುದರಿಂದ ಇಲ್ಲಿ ಹೆಂಡತಿಯನ್ನು ಧರ್ಮಪತ್ನಿ ಎಂದಿರುವುದು

ಗಮನಾರ್ಹ. ಎರಡನೆಯದು ಮಗಳ ಕುರಿತ ಉಲ್ಲೇಖ. ಇಲ್ಲಿ ಎರಡು ಮಾತನ್ನು ಪಂಪ ಬಳಸುತ್ತಾನೆ. ಕೊಡಗೂಸು ಮತ್ತು ಮಗಳು ಪರರೊಡನೆ ಪರರ ಒಡವೆಯನ್ನು ಕೊಡುವ ಹಕ್ಕಿಲ್ಲ. ಮಗನ ಕುರಿತು ಹೇಳುವಾಗ ಮಗನು ಸತ್ತು ಹೋದರೆ ವಂಶಚ್ಛೇದ ಮತ್ತು ಪಿಂಡ ಪ್ರಧಾನ ಮಾಡಲು ಯಾರೂ ಇರುವುದಿಲ್ಲ. ಅಂದರೆ ವೈದಿಕ ಧರ್ಮವು ಕುಟುಂಬವನ್ನು ವ್ಯಾಖ್ಯಾನಿಸುವುದು ಹೀಗೆ.

*ವಿವರಗಳಿಗೆ ನೋಡಿ: ಸ್ವಾಮಿ ಆದಿದೇವಾನಂದ ೧೯೮೧ ವಿವೇಕ ಚೂಡಾಮಣಿ ಶ್ಲೋಕ ೧೭೧*

*ಛಾಂದೋಗ್ಯ ಉಪನಿಷತ್ತು ೬-೬-೫*

**೭೦೭. ಸಂಸಾರದ ಭಯ**

*ಜೈನತತ್ವ ಸಂಪನ್ನರನಾಜವಂಜವ*

*ಭಯಂ ಗೆಲಲಾರ್ಕುಮೊ ಮೀರಲಾರ್ಕುಮೊ (ಶಾಂತಿಪುರಾಣ ೭-೭೯)*

ಜೈನತತ್ವ ಅರಗಿಸಿಕೊಂಡು ಆಚರಿಸುವ ಸಂಪನ್ನರಿಗೆ ಸಂಸಾರದ ಭಯವಿದೆಯೆ? ಆಯುಷ್ಯ ಅವರನ್ನು ಸೋಲಿಸಬಲ್ಲುದೆ? ಸಂಸಾರವೆಂದರೆ ಅಜ್ಞಾನ; ಆತ್ಮಜ್ಞಾನಿಯಲ್ಲದವನು ಅನುಭವಿಸುವ ಹುಟ್ಟು ಸಾವುಗಳ ಕೋಟಲೆಯೆಂದು ಅದ್ವೈತವು ನಂಬುತ್ತದೆ. ವಿಶಿಷ್ಟಾದ್ವೈತದ ಪ್ರಕಾರ ಕರ್ಮದಿಂದ ಜನ್ಯವಾದ ಸಂಬಂಧಗಳು. 'ಜೀವಾತ್ಮನಿಗೆ ಮತ್ತು ಪಂಚಭೂತಗಳಿಗೆ ಇರುವ ಸಂಬಂಧವೇ ಸಂಸಾರ. ಜೈನಧರ್ಮ ಸಂಸಾರವನ್ನು ಒಂದು ಬಗೆಯ ಮೋಹವೆಂದು ಕರೆಯುತ್ತದೆ.

ಶಿವೋಪಾಸಕ ಬ್ರಾಹ್ಮಣನಾದ ನಾಗವರ್ಮನು ಬರೆದ 'ಕಾದಂಬರಿ'ಗೆ ಮೂಲವಾದ ಹೊತ್ತಿಗೆ ವೈದಿಕ ಧರ್ಮವು ಪ್ರಾದುರ್ಭಾವವನ್ನು ಪಡೆದಿತ್ತು. ನಾಗವರ್ಮನು ಮೂಲ ಆಶಯವನ್ನು ಹೆಚ್ಚು ಬದಲಾಯಿಸದೆ ಕನ್ನಡದಲ್ಲಿ ಕೃತಿ ರಚಿಸಿದ್ದಾನೆ. ಎರಡೂ ಕಾವ್ಯಗಳ ಕೇಂದ್ರ ಬಿಂದು ಪ್ರೇಮದ ದಿವ್ಯತೆಯನ್ನು ಪ್ರಕಟಿಸುವುದೇ ಆಗಿದ್ದರೂ, ಅದರಲ್ಲಿ ವೈದಿಕ ಧರ್ಮದ ಪ್ರತಿಪಾದನೆಯಾಗಿರುವುದು ಕಂಡು ಬರುತ್ತದೆ. ವಿಲಾಸವತಿಯೂ ಮತ್ತೊಬ್ಬಳು ಸ್ತ್ರೀಯು ಸಂಸಾರಕ್ಕೆ ಹೇಸಿ ತಪ ಕೈಗೊಳ್ಳುತ್ತಾಳೆ. (೧೫-೪೨ವ)

ಬಹುತೇಕ ತತ್ವಜ್ಞಾನಿಗಳೂ, ಭಕ್ತರು, ಯೋಗಿಗಳು ಸಂಸಾರವನ್ನು ಬಂಧನವೆಂದು ಪರಿಗಣಿಸಿದ್ದಾರೆ. ಸಂಸಾರವನ್ನು ತೊರೆಯುವುದರಿಂದ ಮಾತ್ರ ಮುಕ್ತಿ ಸಾಧ್ಯವೆಂದು ಎಲ್ಲಾ ಮತ ಪ್ರಚಾರಕರು ನಂಬಿದ್ದಾರೆ.

ಆತ್ಮ ಚಿಂತನದಲ್ಲಿ, ನಿಷ್ಠೆಯುಳ್ಳವರೂ ಧೀಮಂತರೂ (ತಮ್ಮ ಬುದ್ಧಿಯನ್ನು ವಶದಲ್ಲಿಟ್ಟಿರುವವರು) ಆದ ವಿವೇಕಿಗಳು ಸರ್ವಕರ್ಮಗಳನ್ನೂ (ಕರ್ಮಕಾಂಡದಲ್ಲಿ ಹೇಳಿರುವ ಕಾಮ್ಯಕರ್ಮಗಳನ್ನು) ತ್ಯಜಿಸಿ ಸಂಸಾರವೆಂಬ ಕಟ್ಟಿನಿಂದ ಬಿಡಿಸಿಕೊಳ್ಳಲು ಪ್ರಯತ್ನಿಸಲಿ.

ಬ್ರಹ್ಮ ವಿಷಯವನ್ನೇ ಯಾವಾಗಲೂ ಚಿಂತಿಸುತ್ತ, ಅದನ್ನೇ ಮಾತಾಡುತ್ತ, ಅದಕ್ಕೆ ವಿರುದ್ಧವಾದ ಭಾವನೆಗಳನ್ನು ನಿರಾಕರಿಸುತ್ತ, ಅದರಲ್ಲೇ ತನ್ಮಯವಾಗಿರುವುದು ಆತ್ಮಾಭ್ಯಾಸ.

ತಚ್ಚಿಂತನಂ ತತ್ಕಥನಮನ್ಯೋ ನ್ಯಂ ತತ್ತ್ರಬೋಧನಮ್ । ಏತದೇಕಪರತ್ವಂಚ ಬ್ರಹ್ಮಾಭ್ಯಾಸಂ ವಿದುರ್ಬುಧಾಃ ॥ (ಲಘುವಾಕ್ಯವೃತ್ತಿ ೧೭).

*ವಿವರಗಳಿಗೆ ನೋಡಿ: ಶಂಕರಾಚಾರ್ಯ – ವಿವೇಕ ಚೂಡಾಮಣಿ ಶ್ಲೋಕ ೧೦.*

**೭೦೮. ಸತ್ ಅಸತ್**

ಋ.ವೇ ೧೦.೧೨೯ನೆಯ ಸೂಕ್ತದಂತೆ, ಆದಿಕಾಲದಲ್ಲಿ "ಅಸತ್ತೂ" ಇರಲಿಲ್ಲ "ಸತ್ತೂ" ಇರಲಿಲ್ಲ: ಗಾಳಿಯ ಲೇಶವಾಗಲೀ ಆಕಾಶವಾಗಲೀ ಇರಲಿಲ್ಲ: ಎಂತಹುದೇ ಆಶ್ರಮವಾಗಲೀ, ಶರಣನಾಗಲೀ, ನೀರಾಗಲೀ, ಗಭೀರವಾದ ಮಡುವಾಗಲೀ, ಸಾವಾಗಲೀ, ಅಮರತ್ವವಾಗಲೀ, ರಾತ್ರಿಯಾಗಲೀ, ಹಗಲಾಗಲೀ ಇರಲಿಲ್ಲ: "ಇದ್ದುದು ಅದೊಂದೇ ತನ್ನದೇ ಸ್ಪರ್ಧೆಯಿಂದ (ಸಹಜಶಕ್ತಿ) ವಾಯುವಿಲ್ಲದೆಯೂ ಉಸಿರಾಡುತ್ತಿತ್ತು". ಅದರ ಜೊತೆಯಲ್ಲಿ ಬೇರೊಂದೇನೂ ಇರಲಿಲ್ಲ. ಅಂಧಕಾರವೇ ಅಂಧಕಾರದಲ್ಲಿ ಸುತ್ತಿಹೋಗಿ ಎಲ್ಲವೂ ವಿವೇಚಿಸಲಾಗದ "ದ್ರವ"(ಸಲಿಲ) ಅನಂತರ "ಆಗಬೇಕಾಗಿರುವ" (ಆಭೂ) ಶೂನ್ಯ (ತುಚ್ಛ)ದಲ್ಲಿ ಅಡಗಿದ್ದ ಅದು ತಪಸ್ಸಿನ ಮಹಾಪ್ರಭಾವದಿಂದ ಆವಿಷ್ಕೃತವಾಯಿತು. ಮನಸ್ಸಿನ ಮೊದಲಬೀಜವಾದ ಕಾಮ ಇದರ ಮೇಲೆ ಕಂಡುಬಂದಿತು. ಧ್ಯಾನದಿಂದ (ಮನೀಷಾ) ತಮ್ಮ ಹೃದಯಗಳೊಳಗೇ ಹುಡುಕಿದ ಋಷಿಗಳು "ಭಾವ"ದ "ಬಂಧ" (ಕಾರಣ)ವನ್ನು "ಅಭಾವ"ದಲ್ಲಿ ಕಂಡರು. ಮೇಲೆ ಕೆಳಗೆ ಎಲ್ಲಕಡೆ ಬಳಸಿ ಎಳೆದು ಹಿಡಿದ ಅವರ ನಿರ್ಧಾರಣೆಗೆ ಬಳಸಿದ ಹಗ್ಗವು "ರೇತೋಧಾಃ" (ಬೀಜ ನೆಡುವವರು) ಮತ್ತು "ಹಿರಿಯ ಶಕ್ತಿಗಳು" (ಮಹಿಮಾನಃ) "ಸ್ವಧಾ(ಸಹಜಶಕ್ತಿ)" ಎಂಬುವು ಕೆಳಗೂ, "ಪ್ರಯತಿ: (ಪ್ರಯತ್ನಶೀಲತೆ) ಮೇಲೆಯೂ ಇರುವುದನ್ನು ಗುರುತಿಸಿತು.

ಸತ್-ಅಸತ್‌ಗಳ ಬಗ್ಗೆ ಭಗವದ್ಗೀತೆ ಮತ್ತು ಶಂಕರಾಚಾರ್ಯರ ಮಾತುಗಳಲ್ಲಿಯೂ ಕಾಣಿಸಿಕೊಂಡಿದೆ.

*ವಿವರಗಳಿಗೆ ನೋಡಿ: ಡಿ.ವಿ.ಜಿ ೧೯೬೬ ಭಗವದ್ಗೀತೆ ಎನ್. ಬಾಲಸುಬ್ರಹ್ಮಣ್ಯ ೧೯೭೩ ವೇದಾಂತಸಾರ*
*ಸ್ವಾಮಿ ಆದಿದೇವಾನಂದ ೧೯೮೧ ವಿವೇಕಚೂಡಾಮಣಿ*
*ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦ ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ*

**೭೦೯. ಸತಿಧರ್ಮ**

'ಪಂಚತಂತ್ರ' ಕೃತಿಯಲ್ಲಿ ಹೆಂಡತಿಯು ತನಗೆ ಅನುಕೂಲೆಯಾಗಿದ್ದಲ್ಲಿ ಜೀವನವು ಸುಖಕರವಾಗುತ್ತದೆ ಎನ್ನುವ ನಂಬಿಕೆಯು ಪ್ರಕಟವಾಗಿದೆ. (ಭೇದಪ್ರಕರಣ. ಪು. ೬೬) ಆದರೆ ಕಥೆಗಳ ಒಟ್ಟು ಆಶಯ ದುಡಿದಿರುವುದು ಮಾತ್ರ. ವೈದಿಕ ಪುನರುತ್ಥಾನದ ಮೂಲಕ ವರ್ಣಾಶ್ರಮಗಳನ್ನು ಭದ್ರಪಡಿಸಲೆಂದೇ ಎಂಬುದರಲ್ಲಿ ಮಾತ್ರ ಅನುಮಾನವಿಲ್ಲ. ಈ ಪುನರುತ್ಥಾನದ ಚಳುವಳಿಯಲ್ಲಿ ಹೆಣ್ಣಿನ ಸ್ಥಿತಿ ಏನೆಂಬುದನ್ನು ಪಟ್ಟಸಾಲಿಗನ ಹೆಂಡತಿ, ಮೊಸಳೆ ಹೆಂಡತಿ, ನಾವಿದನ ಹೆಂಡತಿ ಇವರನ್ನು ಚಿತ್ರಿಸಿರುವ ರೀತಿ, ಇಲ್ಲಿ

ಅವರ ಸ್ಥಿತಿಯನ್ನು ಹೇಳುತ್ತಾರೆ.

"ಬಾಯ್ಗೆ ವಂದಂತೆ ಭಂಗಿಸಿ ಪೆಂಡಿರಂ ಬಯ್ವಂತೆ"

"ತುಡುಗಣಿ ತೊತ್ತನಂತೆ ಬಾಯಂ ತೊಡೆದು"

ಮುಂತಾದ ಮಾತುಗಳೆಲ್ಲ ವೈದಿಕ ಪುನರುತ್ಥಾನ ಚಳವಳಿ ಹೆಣ್ಣನ್ನು ಮತ್ತು ತುಚ್ಛವಾಗಿ ನಡೆಸಿಕೊಂಡಿತೆಂಬುದನ್ನೇ ಸೂಚಿಸುತ್ತದೆ.

ಪೆಂಡಿರ ಮಾತಂ ಸತಿ ಕೈ
ಕೊಂಡಂರಭಿಮತದೆ ನಡೆವನಪ್ಪೊಡೆ ಗಂಡು ।
ಗಂಡನಣ ಮಾಗಲಜೆಯಂ
ಭಂಡಂ ಮೇಣ್ ಷಂಡನಕ್ಕುಮಾ ಚಂಡಾಲಂ ॥

ಎಂಬ ಒಂದು ಪದ್ಯವೇ ಸಾಕು ಆ ಮನೋಭಾವವನ್ನು ಚೆನ್ನಾಗಿ ಸ್ಪಷ್ಟಪಡಿಸುತ್ತದೆ. ಹೆಂಗಸರು ಆ ಕಾಲದಲ್ಲಿ ಬೇರೆ ಧರ್ಮಕ್ಕೆ ಗಂಡಂದಿರನ್ನು ಎಳೆಯುತ್ತಿದ್ದುದೂ ಈ ಬಗೆಯ ಕೋಪಕ್ಕೆ ಕಾರಣವಿರಬಹುದು.

*ವಿವರಗಳಿಗೆ ನೋಡಿ: ಡಾ. ಸಿ. ವೀರಣ್ಣ ೧೯೮೬*
*ಪ್ರಾಚೀನ ಸಾಹಿತ್ಯ ರಾಜಸತ್ತೆಯ ವೈಭವದ ಕಾಲ ಪುಟ. ೩೪೦*

**೭೧೦. ಸತ್ಕಾರ**

*ಅವನಾನೊರ್ವನ ಮನೆಗೆ ಬಂದ ತಿಥಿ ಭಗ್ನಮನಸ್ಕನಾದೊಡೆ ತಾಂ ಮಾಡಿದ ಪಾಪಮಂ*

*ಗೃಹಸ್ಥಂಗೆ ಕೊಟ್ಟು ಆ ಗೃಹಸ್ಥನುಪಾರ್ಜಿಸಿದ ಪುಣ್ಯಮನುಯ್ವಂ.......*

*(ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ, ಶ್ಲೋಕ ೮೮)*

ಅಪರಾಧವನ್ನು ಮಾಡಿದ್ದರೂ ಹೊಸದಾಗಿ ಬಂದವನನ್ನು ಸತ್ಕರಿಸಬಾರದು. ಪೂರ್ವಾಶ್ರಿತನಲ್ಲದೆ ಮತ್ತೊಬ್ಬನು ರಾಜ್ಯವನ್ನು ಸಾಧಿಸಲರಿಯನು ಎಂದು ಕರ್ಣಾಟಕ ಪಂಚತಂತ್ರದಲ್ಲಿ ಬರುತ್ತದೆ (ಭೇದ ಪ್ರಕರಣ, ಶ್ಲೋಕ ೫೯). ಯಾರನ್ನು ಸತ್ಕರಿಸಬೇಕು, ಯಾರನ್ನು ಸತ್ಕರಿಸಬಾರದು ಎಂದು ಮೇಲಿನ ವಾಕ್ಯವು ಹೇಳುತ್ತದೆ.

ಅತಿಥಿ ಸತ್ಕಾರ್ಯಕ್ಕೆ ವಿಶೇಷ ಮಹತ್ವವಿದೆ. ಯಾರಾದರೂ ಮನೆಗೆ ಬಂದರೆ ಅವರನ್ನು ಅತಿಥಿಗಳು ಎಂದು ಕರೆಯುತ್ತೇವೆ. ಅತಿಥಿಗಳನ್ನು ಅಭ್ಯಾಗತರು ಎಂದೂ ಕರೆಯುತ್ತಾರೆ. ರೂಢಿಯಲ್ಲಿ ಮನೆಗೆ ಅತಿಥಿಗಳಿಗೆ ಕಾಲು ತೊಳೆಯಲು ನೀರನ್ನು ಕೊಟ್ಟು, ಅನಂತರ ಅವರನ್ನು ಮನೆಯೊಳಗೆ ಕರೆತರುತ್ತೇವೆ. ಹಾಗೆಯೇ ಅವರಿಗೆ ದಾಹ ಇಂಗಿಸಲು ನೀರನ್ನು ಕೊಟ್ಟು ಅನಂತರ ಕುಶಲೋಪರಿ ನಡೆಸುತ್ತೇವೆ. ಅವರ ಸುಖದುಃಖ ವಿಚಾರಿಸಿ. ಅನಂತರ ಅವರನ್ನು ಸತ್ಕರಿಸುತ್ತೇವೆ. ಹಿಂದಿನ ಕಾಲದಲ್ಲಿ ಅವರಿಗೆ ಮಧು ಪರ್ಕಾದಿಗಳನ್ನು ಕೊಟ್ಟು ಸತ್ಕರಿಸುತ್ತಿದ್ದರು. ಅತಿಥಿಗಳನ್ನು ದೇವರ ಸಮಾನ ಎಂದೂ ಕರೆಯುತ್ತಿದ್ದರು. ಅತಿಥಿ ದೇವೋಭವ. ಅಂದರೆ ಅತಿಥಿಗಳು ದೇವರಿಗೆ ಸಮಾನ.

ಅವರನ್ನು ಮನೆಯಿಂದ ಹೊರಡುವಾಗಲು ಅವರನ್ನು ಸತ್ಕರಿಸಿ ಬೀಳ್ಕೊಡುವುದು ಕ್ರಮ.

ಮನೆಗೆ ಬಂದ ಅತಿಥಿಯು ಪಾಪಿಷ್ಠನಾದರೆ ತನ್ನ ಪಾಪವನ್ನು ಮನೆಯವನಿಗೆ ಕೊಟ್ಟು, ಮನೆಯವನ ಪುಣ್ಯವನ್ನು ಅವನು ಕೊಂಡೊಯ್ಯುತ್ತಾನೆ. ಮನೆಗೆ ಬರುವ ಅತಿಥಿಯು ಸದ್ಗುಣವನ್ನು ಹೊಂದಿರಬೇಕು. ಅವನು ಸದ್ಗುಣವಂತನಲ್ಲವಾದರೆ ಗೃಹಸ್ಥನಿಗೆ ತೊಂದರೆ, ಅವನು ತನ್ನ ಪಾಪದ ಬೀಜವನ್ನು ಗೃಹಸ್ಥನ ಮನೆಯಲ್ಲಿ ಬಿತ್ತಿ ಹೋಗುತ್ತಾನೆ. ಅತಿಥಿಯೆಂದರೆ ಅವನು ಗೃಹಸ್ಥನ ಮನೆಯಲ್ಲಿ ಹೇಗೆ ವ್ಯವಹರಿಸಬೇಕೆಂಬುದನ್ನು ತಿಳಿದಿರಬೇಕು.

ವಡ್ಡಾರಾಧನೆ ಕೃತಿಯಲ್ಲಿ ನಂದಿಮಿತ್ರನ ಹೆಂಡತಿಯು ತನ್ನ ಊಳಿಗದವರಿಗೆ ನಂದಿಮಿತ್ರನ ಆದೇಶವಿದ್ದರೂ ಒಂದು ದಿನ ಪ್ರೀತಿಯಿಂದ ಬಡಿಸುವ ಚಿತ್ರಣವು ಬರುತ್ತದೆ. (ಭದ್ರಬಾಹು ಭಟಾರರ ಕತೆ. ಪು.೧೫೮) ಈ ಸನ್ನಿವೇಶದಲ್ಲಿ ಗಂಡನು ಹೆಚ್ಚು ಕಟ್ಟುನಿಟ್ಟು ನಿಯಮಗಳನ್ನು ಪಾಲಿಸುತ್ತಿದ್ದು, ಹೆಂಡತಿಯು ಕರುಣೆಯನ್ನು ಪ್ರತಿಪಾದಿಸುವವಳಾಗಿದ್ದಾಳೆ. ಕೆಲಸದ ವಿಭಾಗೀಕರಣದ ದೃಷ್ಟಿಯಿಂದ ಇದು ಬಹು ಮುಖ್ಯವಾದ ಅಂಶ. ಇದು ಕುಟುಂಬದ ಉಗಮದಿಂದ ಪ್ರಾರಂಭವಾಗುತ್ತದೆ. ಮನೆಯ ಹೊರಗಿನ ಕೆಲಸವನ್ನು ಗಂಡನು ಮಾಡಿದರೆ ಮನೆಯ ಒಳಗಿನ ಕೆಲಸವನ್ನು ಹೆಂಡತಿಯು ಮಾಡುತ್ತಾಳೆ. ಹೀಗಾಗುವುದಕ್ಕೆ ಲೈಂಗಿಕ ವ್ಯತ್ಯಾಸವು ಮುಖ್ಯ ಕಾರಣವಾದರೂ ಮಾನವ ಜನಾಂಗದ ಇತಿಹಾಸದಲ್ಲಿ ಇದು ಅತಿ ಮುಖ್ಯವಾದ ಹೆಜ್ಜೆಯಾಗಿದೆ. ಹಿಂದೂ ಧರ್ಮದಲ್ಲಿ ಮನೆಯ ಹೆಂಗಸನ್ನು ಅನ್ನಪೂರ್ಣೇಶ್ವರಿ ಎಂದು ಕರೆಯುವುದು ಈ ಹಿನ್ನೆಲೆಯಲ್ಲಿ.

ಅತಿಥಿ ಸಂಸ್ಕಾರವನ್ನು ಹೆಂಡತಿಯು ಮಾಡುತ್ತಾಳೆ ಮತ್ತು ಗಂಡನಿಗೆ ಅನುಗುಣವಾಗಿ ಹೆಂಡತಿಯು ಇರುತ್ತಾಳೆ ಎನ್ನುವ ದೃಷ್ಟಿಯು ಇದೇ ಕೃತಿಯಲ್ಲಿ ಮತ್ತೊಂದು ಕಡೆ ಬರುತ್ತದೆ. (ಕಾರ್ತಿಕ ಋಷಿಯ ಕತೆ. ಪು.೨೩೫)

### ೭೧೧. ಸತ್ಪಥ

*......................................ಚಾರಣಮುನೀಂದ್ರರ್ ಬೆಸಸಿ **ಸತ್ಪಥೋನ್ನತಿಯಂ** ನನ್ನಿಮಾಡುವಂತೆ **ಸತ್ಪಥಿ**ಗಳಾದರ್......................*

*(ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೫ –೨೦ವ)*

ಚಾರಣ ಮುನೀಂದ್ರ: ಸಂಚಾರಿಯಾದ ಮುನಿ. ಸತ್ಪಥ: ಒಳ್ಳೆಯ ದಾರಿ. ಇಲ್ಲಿ ಸನ್ಮಾರ್ಗ ಎಂಬರ್ಥ. ನನ್ನಿ ಮಾಡುವಂತೆ: ಸತ್ಯಮಾಡುವಂತೆ. ಸತ್ಪಥಾತಿಥಿ: ಸನ್ನಡತೆಯ ಅತಿಥಿಗಳು.

ಜೈನಧರ್ಮದಲ್ಲಿ ಮಾತ್ರ ಚಾರಣ ಮುನೀಂದ್ರರ ಪರಿಕಲ್ಪನೆಯಿದೆ. ಸಂಚಾರಿಯಾಗಿರುವ ಮುನಿಗಳು ಜನರನ್ನು ಸತ್ಪಥಕ್ಕೆ ಕರೆದೊಯ್ಯುತ್ತಿದ್ದರು. ಇಲ್ಲಿ ಮುನಿಗಳ ಸಂಚಾರವೆನ್ನುವುದು ಮುಖ್ಯ. ವೈದಿಕ ಧರ್ಮದ ಋಷಿಗಳು; ಮುನಿಗಳು; ಸನ್ಯಾಸಿಗಳು

ತಮ್ಮ ಆಶ್ರಮದಲ್ಲಿ ವಾಸವಾಗಿರುವ ಕಲ್ಪನೆಗಳಿವೆ. ಆಯಾ ವಂಶಗಳಿಗೆ ಬೇರೆ ಬೇರೆ ರಾಜಗುರುಗಳಿದ್ದು ಅವರು ರಾಜರಿಗೆ ಮಾರ್ಗದರ್ಶನ ಮಾಡುವುದು ಕೂಡಾ ಇದೆ. ಉದಾ: ವಸಿಷ್ಠ ಋಷಿಯಾದರೂ ಸೂರ್ಯವಂಶದ ಕುಲಗುರು.

**೭೧೨. ಸತ್ಯ**

*ವೈದ್ಯನುಂ ವಿದ್ವಾಂಸನುಂ ಮಂತ್ರಿಯಿಂ ಅರಸಿನಿಚ್ಚೆಯನೆ ನುಡಿದಹರ್; ಆ ನೃಪ ನಾರೋಗ್ಯಧರ್ಮಕೋಶಂಗಳ ದೆಸೆಯಿಂ ಬೇಗಂ ಹೀಯಮಾನನಹನು*

*(ಐತಾಳ, ಪು. ೧೫೮)*

***ಸತ್ಯವಾದಿಯಯ್*** *ಪೋಗಬ್ಬಾ ಎಂದು ಪೋಗಲ್ವೇಟಿಸ್ಕೊಡೆ..........*

*(ಡಿ.ಎಲ್.ಎನ್.೨೦೦೯ ಪು.೬೧).*

ಜೈನಧರ್ಮವು ಅತ್ಯಂತ ಹೆಚ್ಚು ನಂಬುವ ಅಂಶಗಳಲ್ಲಿ ಸತ್ಯವೂ ಒಂದು. ಹಾಗೆ ನೋಡುವುದಿದ್ದರೆ **ಸತ್ಯ**ವನ್ನು ಹೆಚ್ಚಿನ ಸಂದರ್ಭಗಳಲ್ಲಿ ಎಲ್ಲಾ ಧರ್ಮಗಳೂ ಮತಗಳೂ ಒಪ್ಪಿಕೊಂಡಿವೆ. 'ಋಣಂ ಕೃತ್ವಾ ಘೃತಂ ಪಿಬೇತ್' (ಸಾಲಮಾಡಿಯಾದರೂ ತುಪ್ಪತಿನ್ನು) ಎನ್ನುವುದಕ್ಕೂ ಅಹಿಂಸೆ ಸತ್ಯ ಎಂಬ ಈ ವಾದಕ್ಕೂ ಅಜಗಜಾಂತರ ವ್ಯತ್ಯಾಸವಿದೆ.

ವೈದ್ಯರು ಅರಸನ ಇಚ್ಚೆಗೆ ಅನುಸಾರವಾದುದನ್ನು ಮಾತ್ರ ಹೇಳಬಾರದು. ಇರುವ ಸತ್ಯವನ್ನು ಹೇಳಬೇಕು. ಯಾಕೆಂದರೆ ಅದು ಅವನ ಆರೋಗ್ಯಕ್ಕೆ ಸಂಬಂಧಿಸಿದ ವಿಷಯ. ವೈದ್ಯನು ಸುಳ್ಳು ಹೇಳಿದರೆ ಅರಸನ ಆರೋಗ್ಯಕ್ಕೆ ಹಾನಿಯೂ ಆಗುವುದು. ವಿದ್ವಾಂಸನೂ ಸತ್ಯವನ್ನು ಮಾತಾಡಬಾರದು. ಮಂತ್ರಿಯೂ ಕೂಡಾ ಅರಸನ ಇಚ್ಚೆಗೆ ಬೇಕಾದ ರೀತಿಯಲ್ಲಿ ಮಾತಾಡುವುದು ಸರಿಯಲ್ಲ. ಮಂತ್ರಿಯು ಕೂಡಾ ಸತ್ಯವನ್ನೇ ಹೇಳಬೇಕು. ಇಲ್ಲವೆಂದಾದರೆ ರಾಜ್ಯವು ಕೆಡುವುದು ಎಂದು ಕರ್ಣಾಟಕ ಪಂಚತಂತ್ರದಲ್ಲಿ ಬರುತ್ತದೆ (ಭೇದ ಪ್ರಕರಣ, ಶ್ಲೋಕ ೯೬).

ಸತ್ಯಕ್ಕಿರುವ ವಿಶಿಷ್ಟಮೌಲ್ಯಗಳನ್ನ ಇದು ಸೂಚಿಸುತ್ತದೆ. ಭಾರತೀಯ ಸಂಸ್ಕೃತಿಯಲ್ಲಿ ಸತ್ಯಕ್ಕೆ ವಿಶೇಷ ಮೌಲ್ಯವಿದೆಯೆಂಬುದು ಗಮನಾರ್ಹ ಸಂಗತಿಯಾಗಿದೆ. 'ಸರ್ವಾತ್ಮದಲ್ಲಿ ಸಂಕಲ್ಪ ನಗರಗಳು ಮಿಲನವಾಗುವುದಿಲ್ಲವೆಂಬುದೂ ಸತ್ಯವು; ಮಿಲನವಾಗುವುದೆಂಬುದೂ ಸತ್ಯವು. ಸತ್ಯವಿಲ್ಲ. ಅದರ ಅಸ್ತಿತ್ವವಿಲ್ಲ. ಮಿಥ್ಯವಿಲ್ಲ. ಅದರ ಅಸ್ತಿತ್ವವೂ ಇಲ್ಲ. ಯಾಕೆಂದರೆ ಸರ್ವಾತ್ಮದಲ್ಲಿ ಎಲ್ಲವೂ ಸರ್ವಥಾ ಸರ್ವದಾ ಸ್ಥಿತವಾಗಿರುವವು" 'ಸತ್ಯ ಬ್ರಹ್ಮನಲ್ಲಿ ಸತ್ಯ ಅಸತ್ಯಗಳು ಒಂದೇ ಆಗಿವೆ. ಆದುದರಿಂದ ಎಲ್ಲವೂ ಕಾಷ್ಠಮಾನ ಹಾಗೂ ಚಿದ್ರೂಪವಾಗಿದೆ ಯೆಂದು ಯೋಗವಾಸಿಷ್ಠದಲ್ಲಿ ಬರುತ್ತದೆ.(ಯೋಗವಾಸಿಷ್ಠ ೨೦೦೭ ಪುಟ.೩೯೭) ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹಗಳಿಗೆ ಯಮವೆಂದು ಹೆಸರು., ಜ್ಞಾನವನ್ನು ಇತರರಿಗೆ ತಿಳಿಸಲು ವಾಕ್ಕನ್ನು ಉಪಯೋಗಿಸುತ್ತೇವೆ. ವಾಕ್ಕಿನಲ್ಲಿ ಸತ್ಯವಿರ ಬೇಕಾದರೆ ವಂಚನೆ, ಭ್ರಾಂತಿ ಇರಕೂಡದು. ವಾಕ್ ಮನಸುಗಳು ಯಥಾರ್ಥವನ್ನನು ಸರಿಸುವುದು ಸತ್ಯ ನೋಡಿದಂತೆ. ಅನುಮಾನ ಮಾಡದಂತೆ, ಕೇಳಿದಂತೆ ಮಾತಾಡುವುದು

ಮತ್ತು ಆಲೋಚಿಸುವುದು ಸತ್ಯ. ಭಗವದ್ಗಿತೆಯಲ್ಲಿ ಸತ್ಯದ ಬಗ್ಗೆ ಬರುತ್ತದೆ.

ಸಾಯಣಾಚಾರ್ಯರ ಪ್ರಕಾರ ಮನಸ್ಸಿನಲ್ಲಿ ಯಥಾರ್ಥವನ್ನು ಕುರಿತ ಚಿಂತನೆ "ಋತ" ಮಾತಿನಿಂದ ನುಡಿದ ಯಥಾರ್ಥ ವರ್ಣನೆ "ಸತ್ಯ"

"ಋತ" ಶಬ್ದವು ಬಹುಶಃ ಸತ್ಯ ಎಂಬ ಶಬ್ದಕ್ಕಿಂತಲೂ ಪ್ರಾಚೀನವಾದದ್ದಾಗಿದ್ದರೂ ಇರಬಹುದು. ಶಂಕರಾಚಾರ್ಯರವರ ಕಾಲಕ್ಕೆ ಸತ್ಯ ಎಂಬ ಪದವು ಋತ ಎಂಬುದಕ್ಕಿಂತ ಹೆಚ್ಚು ಬಳಕೆಯಲ್ಲಿಯೂ ಇದ್ದಿರಬಹುವೆಂದು ಊಹೆ ಮಾಡಲು ಒಂದು ಕಾರಣ ತೋರುತ್ತದೆ.

ಹೀಗಿದು ಚಾಂದ್ರಸತ್ಯದ-ಪ್ರಕಾಶ : ನೀರ-ಅಂಜನ=ದೀಪ : ಅಥವಾ 'ಹರಿವಾಣ' ಸೇವೆಯ ಕದಲಾರತಿ ಪ್ರಕಾಶ, ಇವು ರಾತ್ರೀ 'ಸಮೆ' (=ಸಮಯ) ಆಚಾರ ಸಂಪ್ರದಾಯವಾಗಿ ಇಂದಿಗೂ ಉಳಿದಿವೆ! ಸತ್ಯವು ಸಾಂಕೇತಿಕವಿದ್ದು, ಸಾಂಕೇತಾತ್ಮಕ ಸತ್ಯವು, ನಿನ್ನೆ-ಇಂದುಗಳಂತೆ. ನಾಳೆಗಳಲ್ಲಿಯೂ ಉಳಿದು ಬರಬಲ್ಲ ತ್ರಿಕಾಲ ಸತ್ಯ=ತ್ರಿವಾರ ಸತ್ಯ ಆಗಿದೆ. ವಿಧ್ವನಿಯಾಮಾಧಿಷ್ಠಿತ 'ಋತ' ಸ್ವರೂಪೀ ಸತ್ಯ ಸತ್ಯ ಎಂದರೆ ಇದು. (ಡಿ.ವಿ.ಜಿ)

*ವಿವರಗಳಿಗೆ ನೋಡಿ: ಸ್ವಾಮಿ ಆದಿದೇವಾನಂದ ೧೯೭೦*

*ಪಾತಂಜಲಿ ಯೋಗ ದರ್ಶನ ೧೯೭೦ XXI*

*ಡಿ.ವಿ.ಜಿ. ೧೯೯೬ ಶ್ರೀಮದಗವದ್ಗಿತೆ ಪುಟ. ೨೭೭*

*ಡಿ. ವಿ. ಜಿ. ೧೯೭೫ ಋತ, ಸತ್ಯ, ಧರ್ಮ ಪುಟ. ೧೩*

*ಶಂಬಾ ಜೋಶಿ ೧೯೯೯ ಸಂಪುಟ. ೪ ಪುಟ. ೨೯.*

## ೭೧೩. ಸನ್ಯಾಸಿ

ಭಾರತೀಯ ಮುಂಡ, ಮುಂಡಿ : ಬೋಳುತಲೆಯವ: ಸಂನ್ಯಾಸಿ ಎಂಬ ಅರ್ಥದ ಸಂಕೇತದ ಆಕೃತಿಯ ಹೋಲಿಕೆ ಇದೆ. ಈ ಸೈಕ್ಲೋಪಸರು ಒಂದೊಂದು ಗುಹೆಯಲ್ಲಿ ವಾಸವಾಗುತ್ತಿದ್ದ ವಿರಕ್ತ-ಯತಿಪಂಥಿಗಳೂ ಇರಬೇಕೆಂದು ಈ ತುಲನೆ ಹೇಳುತ್ತಿದೆ. ಪ್ರತಿಯೊಬ್ಬರೂ ಬೇರೆ ಬೇರೆ ಇರುವುದು, ಇವರು ಯಾಯಾವರ : ಯತಿ<ಯಾತಿ ವರ್ಗದವರಾಗಿರುವ ಸೂಚಕವಾಗಿದೆ ಎಂದು ಶಂಬಾ ಅಭಿಪ್ರಾಯ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೪ ಪುಟ. ೪೧೯.*

## ೭೧೪. ಸಪ್ತ ವ್ಯಸನಗಳು

ಸುಳ್ಳು: ಕೊಲೆ: ಕಳವು: ಪರಸ್ತ್ರೀ ವ್ಯಸನಗಳೆಂದು ಹಲವು ವಿಧಗಳಿವೆ. ಇವು ಮನುಷ್ಯರ ಭವಬಂಧನಕ್ಕೆ ಕಾರಣವಾಗಿವೆ. ದ್ಯೂತ ಮದ್ಯ, ಮಾಂಸ, ವ್ಯಸನಗಳು ಮನುಷ್ಯರನ್ನು ಭವಸಾಗರದಲ್ಲಿ ಮುಳುಗಿಸುತ್ತದೆ ಎಂದು ರನ್ನ ಅಜಿತತೀರ್ಥಂಕರ ಪುರಾಣ ತಿಲಕಂ ಕೃತಿಯಲ್ಲಿ ಹೇಳುತ್ತಾನೆ. (೨-೬೩)

ಅದು ಕಾರಣದಿನೀಗಳ್ ಪಿಂಗಳಕನಪ್ಪೊಡೆ ಮಹಾವ್ಯಸನಮಂ ಕೈಕೊಂಡಂ;

*ಅವಾವುವೆಂದೊಡೆ ಅರಸನಪ್ಪಾತಂಗೆ ಸ್ವಭಾವ ಪ್ರದೋಷ ಪ್ರಸಂಗಗುಣಪ್ರತಿಲೋಮ ದಿನಮೆಂದಯ್ದು ಮೂಲ ವ್ಯಸನಂಗಳಕ್ಕುಂ. ಅವಱೊಳ್ ಅವಱೊಳ್ ಸ್ವಾಮ್ಯಮಾತ್ಯ ಜನಪದ ದುರ್ಗಸುಹೃತ್‌ಕೋಶದಂಡೆಮೆಂಬೇೞಿಂಗದೊಳೇಕಾಂಗಂ ವಿಕಳಮಾದೊಡಂ ಸ್ವಭಾವಮೆಂಬುದಕ್ಕುಂ. ಬಾಹ್ಯಂತಃಪ್ರಕೃತಿಗಳೆರಡುಮೊರ್ಮೆಯೆ ಪ್ರಕೋಪಂಗೆಯ್ವುದು ಪ್ರದೋಷಮೆಂಬುದಕ್ಕುಂ. ಅಂಗನಾದ್ಯೂತಮೃಗಯಾಪಾನ ವಾಗ್ದಂಡಹರ್ಷಾರ್ಥ ದೂಷಣಂಗಳೆಂಬೇೞುಂ ಪ್ರಸಂಗಗುಣಮೆಂಬುದಕ್ಕುಂ. ಕಾಂತಾದ್ಯೂತಮೃಗಯಾ ಪಾನಂಗಳ್ ನಾಲ್ಕುಂ ಕಾಮಜಂಗಳ್; ಉೞಿದ ವಾಗ್ದಂಡಹರ್ಷಾರ್ಥದೂಷಣಂಗಳ್ ಮೂಱುಂ ಕ್ರೋಧಜಂಗಳಕ್ಕುಂ. ಸಂಧಿವಿಗ್ರಹಯಾನಾಸನದ್ವೈಧೀಭಾವಸಮಾಶ್ರಯಂ ಗಳೆಂಬಾಱುಗುಣಂಗಳೊಳಂ ಸಂಧಿಕಾರ್ಯದೆಡೆಯೊಳ್ ವಿಗ್ರಹಮನೆತ್ತಿಕೊಳ್ವುದುಂ, ವಿಗ್ರಹಮಪ್ಪೆಡೆಯೊಳ್ ಸಂಧಿಯನೊಡರ್ಚುವುದುಮುೞಿದ ಗುಣಂಗಳುಮನೀಯಂದ ದೊಳ್ ಪ್ರತಿಲೋಮಂಗೆಯ್ವುದುಂ ಪ್ರತಿಲೋಮವೆಂಬ ವ್ಯಸನಮಕ್ಕುಂ, ವೈರಾಗ್ಯ, ಅಗ್ನಿ, ಉದಕ, ವ್ಯಾತಂಕ, ಮಾರಿಗುತ್ತ, ದುರ್ಭಿಕ್ಷ, ಅತಿವೃಷ್ಟಿ, ಅನಾವೃಷ್ಟಿಗಳೆಂಬೆಂಟುಂ ಪೀಡನಮೆಂಬುದಕ್ಕುಂ. ಇಂತೈದುಂ ವ್ಯಸನಂಗಳೊಳ್ ನಮ್ಮ ರಸನಪ್ಪ ಪಿಂಗಳಕಂ ಪಶುವಂಗೆ ವಶಗತನಾಗಿ ವಿರಕ್ತ ಪ್ರಕೃತಿಯಪ್ಪುದಱಿಂ ಸ್ವಭಾವಮೆಂಬ ವ್ಯಸನಂಗೂಡಿ ವಿರಕ್ತನಾಗಿರ್ದಪಂ. ಅದಱಿಂದಾತಂಗೆ ಸಂಜೀವಕನೊಳ್ ವಿರಕ್ತಿಯಂ ಮಾಡುವುದೆ ಕಜ್ಜಮೆನೆ – ಕರಟಕಂ ಅಂತಪ್ಪೊಡೆ ನಿನ್ನ ಪೇೞ್ದ ಗುಣಂಗಳೀಗಳಿವರಿರ್ಬರ್ಗಂ ವಿರಕ್ತಿಯಂ ಮಾಡುವುದುಂ ನಾಡೆಯುಂ ಗಹನಮೆನೆ ದವನಕನದಾವ ಗಹನಂ, ಬುದ್ಧಿಗಸಾಧ್ಯ ಮಾವುದುಮಿಲ್ಲೆಂಬುದು ಕೇಳ್ದಱಿವುದಿಲ್ಲಕ್ಕುಮೆಂದಿಂತೆಂದಂ:....... (ಕರ್ಣಾಟಕ ಪಂಚತಂತ್ರ ೧೯೪೪ ಪುಟ. ೨೧)*

**೭೧೫. ಸಪ್ತಾಂಗ**

*ಪೆಱರ್ ಗಂಡರಂತಿರಲೇವಂ ಬಡೆದಿರ್ದೊಡಟ್ಟಿ ಕಿಡುಗುಂ **ಸಪ್ತಾಂಗ**ಮೀ ರಾಜಕ ।*

*(ಪಂಪ ಭಾರತ ೪–೮)*

ಈ ಭೂದೇವಿಗೆ ಪಾಂಡುರಾಜನಾದ ಮೇಲೆ ಬೇರೆ ಒಡೆಯರಾದವರಾರೂ ಇಲ್ಲ. ಹಾಗಿರುವಾಗ ನಿಮ್ಮ ಮಾತ್ಸರ್ಯಕ್ಕೊಳಗಾದರೆ ರಾಜ್ಯದ ಸಪ್ತಾಂಗಗಳೂ ನಾಶವಾಗುತ್ತವೆ. ಈ ರಾಜ್ಯಕ್ಕೆ ಧರ್ಮರಾಯನು ರಾಜನಾಗಲಿ ಎಂದು ರಾಜ ನೀತಿಗನುಗುಣವಾಗಿ ಆ ಧರ್ಮರಾಜನಿಗೆ ಉತ್ಸಾಹದಿಂದ ಪಟ್ಟವನ್ನು ಕಟ್ಟಿದರು. ಎಂದು ಪಂಪ ಭಾರತದಲ್ಲಿನ ಪ್ರಸಂಗವೊಂದರಲ್ಲಿ ಬರುತ್ತದೆ.

ಸ್ವಾಮಿ, ಅಮಾತ್ಯ, ಸುಹೃತ, ಕೋಶ, ರಾಷ್ಟ್ರ, ದುರ್ಗ, ಬಲ ಎಂಬ ರಾಜ್ಯದ ಈ ಏಳು ಅಂಗಗಳು.

ಮಂತ್ರಿ ಪರಿಷತ್ತಿನಲ್ಲಿ ಹನ್ನೆರಡು ಜನರು ಇರಬೇಕೆಂದು ಮನುಶಿಷ್ಯರ ಮತ. ಹದಿನಾರು ಎಂದು ಬೃಹಸ್ಪತಿ ಶಿಷ್ಯರು ಹೇಳುತ್ತಾರೆ. ಇಪ್ಪತ್ತು ಜನರಿರಬೇಕೆಂದು

ಶುಕ್ರಶಿಷ್ಯರು. ಕೌಟಿಲ್ಯ ಮಾತ್ರ ಮಂತ್ರಿ ಸಂಖ್ಯೆಯ ನಿಗದಿಯು ಮಂತ್ರಾಲೋಚನೆಯಲ್ಲಿ ತೊಡಗುವ ಜನರ ಸಾಮರ್ಥ್ಯ ಅವಲಂಬಿಸಿದೆ ಎಂದೆನ್ನುವನು.

ಅಜ್ಜ-ಮುತ್ತಜ್ಜರಾದಿಯಾಗಿ ಹಿತಚಿಂತಕರಾದವರು, ಶಾಸ್ತ್ರಜ್ಞರು, ಶೂರರು, ಶಸ್ತ್ರಾಸ್ತ್ರ ನಿಪುಣರು, ಸತ್ಕುಲ ಪ್ರಸೂತರು ಆದವರನ್ನು ಯೋಗ್ಯರೆಂದು ಕಂಡುಕೊಂಡು ಏಳುಮಂದಿ ಮಂತ್ರಿಗಳನ್ನು ನಿಯಮಿಸಬೇಕು ಮನು ಹೇಳುತ್ತಾನೆ.

ಕೌಟಿಲ್ಯನ ಪ್ರಕಾರ ಸಪ್ತಾಂಗಗಳಲ್ಲಿ ಮಂತ್ರಿಯೇ ಮುಖ್ಯ. ವೇದಗಳ ಕಾಲದಲ್ಲಿ ಪುರೋಹಿತನಿಗೆ ರಾಜಕೀಯದಲ್ಲಿ ಮುಖ್ಯ ಪಾತ್ರವಿತ್ತು. ಕೌಟಿಲ್ಯನ ಅರ್ಥಶಾಸ್ತ್ರದ ಸಪ್ತಾಂಗಗಳಲ್ಲಿ ಅವನನ್ನು ಸೇರಿಸಿಲ್ಲ. ಮಂತ್ರಿ ಮಂಡಲಕ್ಕೆ ಅರ್ಥಶಾಸ್ತ್ರದಲ್ಲಿ ಪರಿಷತ್ತು ಎಂದು ನಮೂದಿಸಿದೆ. ಪ್ರಧಾನಮಂತ್ರಿ, ಪುರೋಹಿತ, ಸೇನಾಪತಿ, ಯುವರಾಜ ಇವರುಗಳಿಂದ ಕೂಡಿದ ಒಳಮಂಡಲ ದೌವಾರಿಕ, ಅಂತರ್ವಂಶಿಕ, ಪ್ರಾಶಾಸ್ತ್ರ, ಸಮೂಹರ್ತಾ, ಸನ್ನಿಧಾತಾ, ಪ್ರದೇಷ್ಟಾ ಮತ್ತು ಇತರ ಅಮಾತ್ಯರಿಂದ ಕೂಡಿದ ಹೊರಮಂಡಲ.

*ವಿವರಗಳಿಗೆ ನೋಡಿ: R.P. Kangle 1965*
*The kautiliya Artha sastra (part-3) P. 194-215*
*ಎಂ. ವಿ. ಕೃಷ್ಣರಾವ್ ೧೯೫೩ ಕೌಟಿಲ್ಯ ಪುಟ. ೨೦*
*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೭-೫೪*

**೭೧೬. ಸಮಬಂಧ**

ಸಮ(ಬಂಧ) (ದಕ್ಷಿಣ ಮಾರ್ಗ): 'ಸಮನಿಸಿ ಕಿವಿಗೆ ಎಡರೆ ಬಾರದೆ ಅಂದಂಬಟ್ಟು ಇಂ(ಇನ್) ಸಮೆದ ಪದದಾ ವಿಭೇದ ಕ್ರಮಂ'= 'ಕೇಳುವುದಕ್ಕೆ ತೊಂದರೆಯಾಗದಂತೆ (ಎಂದರೆ, ಶ್ರವಣ ಸುಭಗವಾಗಿ) ಅಂದವನ್ನು ಹೊಂದಿ ಜೋಡಿಸಿದ ಪದಗಳ ಜೋಡಣೆಯ ಕ್ರಮವೆ 'ಸಮ'(ಎಂದರೆ, ವಿಷಮವಲ್ಲದ್ದು). ಇದರಲ್ಲಿ ಮತ್ತೆರಡು ವಿಧ: ೧) ಮೃದು ಬಂಧ; ೨) ಸ್ಫುಟಬಂಧ (ದಂಡಿಯು ಸಮಬಂಧವನ್ನು 'ಮೃದು', 'ಸ್ಫುಟ', 'ಮಧ್ಯಮ' ಎಂದು ಮೂರು ಬಗೆಯಾಗಿ ವಿಂಗಡಿಸಿದ್ದಾನೆ. ಮೃದು ವರ್ಣಗಳುಳ್ಳದ್ದು ಎಂದರೆ ಅಲ್ಪಪ್ರಾಣಾಕ್ಷರ ಸಹಿತವಾದದ್ದು ಮೃದುಬಂಧ; ಸ್ಫುಟವರ್ಣಗಳು ಎಂದರೆ ಮಹಾಪ್ರಾಣಗಳನ್ನುಳ್ಳದ್ದು ಸ್ಫುಟಬಂಧ; ಮಿಶ್ರವರ್ಣಗಳುಳ್ಳದ್ದು ಮಿಶ್ರಬಂಧ). ಮೃದು ಸ್ಫುಟ ಬಂಧಗಳ ಲಕ್ಷಣ ವಿವರಣೆಯಲ್ಲಿ ಮಾರ್ಗಕಾರನು ದಂಡಿಯನ್ನೇ ಅನುಸರಿಸಿದ್ದಾನೆ. (ಪ.೫೭). ಸಮಬಂಧದ ಎರಡು ಭೇದಗಳಿಗೂ ಲಕ್ಷ್ಯಗಳು ೫೮ನೆಯ ಪದ್ಯದಲ್ಲಿ ಅಡಕಗೊಂಡಿವೆ. ಅಲ್ಪಪ್ರಾಣಗಳಾದ ಮೃದುವರ್ಣಗಳು ಪದ್ಯದ ಪೂರ್ವಾರ್ಧದಲ್ಲಿಯೂ, ಮಹಾಪ್ರಾಣ ಸಹಿತಗಳಾದ (ಫ,ಧ,ಭ,ಖ) ಸ್ಫುಟ (ಬಿಡಿ ಬಿಡಿಯಾದ) ವರ್ಣಗಳು ಉತ್ತರಾರ್ಧದಲ್ಲಿಯೂ ಪ್ರಯೋಗವಾಗಿರುವುದನ್ನು ಗಮನಿಸಬಹುದು. ಆಯತ=ವಿಸ್ತಾರವಾದ, ವಿಶಾಲವಾದ, ಕರುಣಾಪಾಂಗ=ಕರುಣೆಯಿಂದ

ಕೂಡಿದ ಕಡೆಗಣ್ಣ ನೋಟ, ಜಘನ=ಸೊಂಟದ ಹಿಂಭಾಗ, ನಿತಂಬ, ಪಯೋಧರ=ಮೊಲೆ, ವಿಧುರೆ=ಧರಿಸಿದವಳು, ಹೊತ್ತವಳು, ವಿಧುಮುಖಿ=ಚಂದ್ರಮುಖಿ.

'ವಿಷಮಬಂಧಮಿನ್ನಿಂತಕ್ಕುಂ'– 'ವಿಷಮಬಂಧವು ಹೀಗಿರುತ್ತದೆ' ಎಂದು ಹೇಳಿ, ಪದ್ಯದ ಉತ್ತರಾರ್ಧದಲ್ಲಿ ಆ ಬಂಧದ ಉದಾಹರಣೆಯನ್ನು ಕೊಟ್ಟಿದ್ದಾನೆ. ಸಮಬಂಧವಲ್ಲದ್ದು ವಿಷಮಬಂಧ. ಎಂದ ಮೇಲೆ, ಇದು ದಕ್ಷಿಣ ಮಾರ್ಗ.

(ಕವಿರಾಜಮಾರ್ಗ ೧–೫೬–೫೮)

**೭೧೭. ಸಮರಥಿ**

*ಕುರುರಾಜ ನೀನುಮಾ ಮ*
*ದ್ರರಾಜನುಂ [ಸೋಮದತ್ತನುಂ] ಕೃಪ ಕೃತವ ।*
*ರ್ಮರುಮೊಡನೆ ಶಕುನಿಯುಂ ಕೂ*
*ಡಿರೆ **ಸಮರಥರೆಂ**ಬರಲ್ತೆ ನಿಮ್ಮಱುವರುಮಂ ॥*

*(ಸಾಹಸ ಭೀಮ ವಿಜಯ ೩–೫೩)*

ದುರ್ಯೋಧನರಾಜನೆ, ನೀನು, ಶಲ್ಯರಾಜ, ಸೋಮದತ್ತ, ಕೃಪ, ಕೃತವರ್ಮ ಮತ್ತು ಶಕುನಿ – ಈ ಆರು ಜನರನ್ನು ಸಮರಥರು ಎಂದು ಕರೆಯುತ್ತಾರೆ. ತನಗೆ ಸಮಾನರಾದವರೊಂದಿಗೆ ಕಾದಾಡುವವರನ್ನು (ಅದು ರಥದಲ್ಲಿ ನಿಂತುಕೊಂಡು) ಸಮರಥರು ಎಂದು ಕರೆಯುತ್ತಾರೆ.

ಸಮರಥರು ಅರ್ಧರಥರಿಗಿಂತ ಕೆಳದರ್ಜೆಯವನಾಗಿರುತ್ತಾನೆ. ಒಮ್ಮೆಗೆ ಒಬ್ಬನನ್ನಷ್ಟೇ ಎದುರಿಸಿ ಕಾದಾಡಬಲ್ಲಾತನು ಸಮರಥಿಯಾಗಿರುತ್ತಾನೆ.

*ವಿವರಗಳಿಗೆ ನೋಡಿ : ಅತಿರಥ, ಅರ್ಧರಥ, ಮಹಾರಥ*

**೭೧೮. ಸಮರಾಯುಧಗಳು**

*ನಿಮ್ಮಯ ಮೆಲ್ಲಡಿ **ಭಿಂಡಿವಾಳದಂ***
***ಬಿನ ಕರವಾಳ ಕಕ್ಕಡೆಯ ಕೊಂತದ** ಧಾರೆಗಳುರ್ಚೆ ಸಂಯುಗಾ ।*
*ವನಿತಳದೊಳ್ ವಿಧಾತ್ರವಶದಿಂ ನಿಮಗಂ ನಡೆವಂತುಟಾದುದೇ.........*

*(ಸಾಹಸ ಭೀಮವಿಜಯ ೪–೧೮)*

ಭಿಂಡಿವಾಳ ಅಂದರೆ ಬಂಡಿವಾಲ. ಕರವಾಳ ಅಂದರೆ ಖಡ್ಗ. ಕಕ್ಕಡೆ ಎಂಬುದೊಂದು ಆಯುಧ. ಕೊಂತ ಎಂದರೆ ಒಂದು ಬಗೆಯ ಈಟಿ, ಸಬಳ. ಮೇಲಿನ ಪದ್ಯದ ವಿವರಣೆಯು ಹೀಗಿದೆ. ಶತ್ರು ಮಾಂಡಲಿಕರ ಕಿರೀಟಗಳು ಬಾಗಿ ಬಡಿಯುತ್ತಿರುವ ಸಿಂಹಾಸನದ ಪಾದಪೀಠದ ಮೇಲೆ ಕಮಲಗಳಂತೆ ಶೋಭಿಸುವ ನಿಮ್ಮ ಮೃದು ಪಾದಗಳಿವು, ಈಗ ಭಿಂಡಿವಾಳ, ಬಾಣ, ಖಡ್ಗ, ಕಕ್ಕಡೆ ಮೊದಲಾದ ಆಯುಧಗಳ ಅಲಗುಗಳಿಂದ ಚುಚ್ಚಿಸಿಕೊಳ್ಳುತ್ತ ರಣಭೂಮಿಯಲ್ಲಿ ನಡೆಯುವಂತಾಯಿತೆ? ನಿಮಗೆ

ಈ ಸ್ಥಿತಿ ಬಂದಿತೆ? ಎಂದು ಸಾಹಸಭೀಮವಿಜಯದಲ್ಲಿ ವರ್ಣಿಸಲಾಗಿದೆ. ಇವುಗಳೆಲ್ಲ ಯುದ್ಧದ ಸಂದರ್ಭದಲ್ಲಿ ಬಳಸುವ ಆಯುಧಗಳೆಂಬುದು ಗಮನಾರ್ಹ.

ಆಕ್ರಮಣಕಾರಿ ಆಯುಧಗಳಲ್ಲಿ ಪ್ರಧಾನವಾದ ಪಾತ್ರವಹಿಸಿದ ಆಯುಧವೆಂದರೆ ಖಡ್ಗ. ಈ ಕಾರಣದಿಂದಲೇ ಖಡ್ಗಗಳು ವೀರನಾದವನಿಗೆ ದೈವದತ್ತವಾದದ್ದು ಎಂಬ ಹಲವಾರು ಐತಿಹ್ಯಗಳು ಸೃಷ್ಟಿಯಾಗಿರುವುದನ್ನು ಗಮನಿಸಬಹುದಾಗಿದೆ. ಆಯುಧದ ಹೆಸರು ಒಂದೇ ಆದರೂ ಇವು ವಿವಿಧ ಆಕಾರಗಳಲ್ಲಿರುವುದನ್ನು ಗಮನಿಸಬಹುದಾಗಿದೆ. ವೀರಗಲ್ಲುಗಳಲ್ಲಿ ಖಡ್ಗವನ್ನು ಕಡಿತಲೆ, ಖಡ್ಗ, ಕರವಾಳ್, ಬಾಳ್, (ವಾಳ್), ಖಂಡೆಯ ಮುಂತಾದ ಹೆಸರುಗಳಿಂದ ಕರೆಯಲಾಗಿದೆ. ಈ ರೀತಿಯ ಪರ್ಯಾಯ ಪದಗಳು ಹುಟ್ಟಲು ಬಹುಶಃ ಅವುಗಳಲ್ಲಿನ ಆಕಾರ ವ್ಯತ್ಯಾಸವೇ ಕಾರಣವಿರಬಹುದು. ಕತ್ತಿಯ ಆಕಾರವು ವೀರಗಲ್ಲುಗಳ ಶಿಲ್ಪದಲ್ಲಿ ಹಲವು ರೀತಿಯಲ್ಲಿ ಬಂದಿರುವುದನ್ನು ಗಮನಿಸಬಹುದು.

**ಕಠಾರಿ – ಕಟಾರಿ:**

ಇದು ಕತ್ತಿಗಿಂತಲೂ ಚಿಕ್ಕದಾದದ್ದು. ಇದನ್ನು ಇರಿಯುವುದಕ್ಕಾಗಿ ಉಪಯೋಗಿಸುತ್ತಿದ್ದರು.

**ಭರ್ಜಿ:**

ಕತ್ತಿಯನ್ನು ಬಿಟ್ಟರೆ ಪ್ರಯೋಗದಲ್ಲಿದ್ದ ಮತ್ತೊಂದು ಪ್ರಮುಖ ಆಯುಧವೆಂದರೆ ಭರ್ಜಿ. ಇದರ ಮೊನೆಯ ಭಾಗದ ಆಕಾರವನ್ನು ಅನುಸರಿಸಿ ಎಲೆ ಭರ್ಜಿ, ಸೂಜಿ ಭರ್ಜಿ ಎಂಬುದಾಗಿ ಗುರುತಿಸುತ್ತಾರೆ. ಇದು ಯಾವುದೇ ವಾಹನದ ಮೇಲೆ ಕುಳಿತು ಪ್ರಯೋಗಿಸುವುದಕ್ಕೆ ಅನುಕೂಲವಾಗುವುದರಿಂದ, ಶತ್ರುವು ತನ್ನ ಮೇಲೆರಗಿ ಬಂದು ಅಪಾಯ ಮಾಡುವ ಮೊದಲೇ, ದೂರದಿಂದಲೇ ಶತ್ರುಸಂಹಾರ ಮಾಡಬಹುದಾದ ಮಾರಕಾಸ್ತ್ರವಾಗಿತ್ತು. ಕುದುರೆಯ ಮೇಲೆ ಕುಳಿತು ಭರ್ಜಿಗಳಿಂದ ಯುದ್ಧ ಮಾಡುತ್ತಿರುವ ದೃಶ್ಯವನ್ನು ನಾವು ಕಾಣಬಹುದು ಭರ್ಜಿಯನ್ನು ದೂರದಿಂದಲೇ ಶತ್ರುವಿಗೆ ಎಸೆಯಬಹುದು.

**ಬಾಕು:**

ಕತ್ತಿಯ ಆಕಾರವನ್ನೇ ಹೋಲುವ ಈ ಗೇಣುದ್ದದ ಆಯುಧವು ಆರಂಭದ ವೀರಗಲ್ಲುಗಳಿಂದ ಹಿಡಿದು ವಿಜಯನಗರದವರೆಗಿನ ವೀರಗಲ್ಲುಗಳ ಶಿಲ್ಪದಲ್ಲಿ ನಿರೂಪಿತವಾಗಿದೆ. ಇದನ್ನು ವೀರರು ಸೊಂಟಕ್ಕೆ ಕಟ್ಟಿಕೊಳ್ಳುತ್ತಿದ್ದರು. ಇರಿಯಲು ಇದನ್ನು ಉಪಯೋಗಿಸುತ್ತಿದ್ದರು. ಶತ್ರು ಹತ್ತಿರವಿದ್ದಾಗ ಇದರ ಪ್ರಯೋಗ ಸಾಧ್ಯ.

**ಸಬಳ:**

ಇದು ಈಟಿಯಂತಹುದೇ ಆಯುಧ. (ಆದರೆ ಈಟಿಯ ಮೊನೆಯಭಾಗದಲ್ಲಿ

ಅಡ್ಡಲಾಗಿ ಇನ್ನೊಂದು ಮೊನೆಯಾದ ಭಾಗವನ್ನು ಸಿಕ್ಕಿಸುತ್ತಿದ್ದರು) ಇದು ವಿಶೇಷವಾಗಿ ಕೋಟೆಕಾಳಗದಲ್ಲಿ ಉಪಯೋಗವಾಗುತ್ತಿತ್ತು.

**ಕೊಂತ:**

ಇದು ಕತ್ತಿಯಂತಹುದೇ ಒಂದು ಆಯುಧ. ವೀರನು ಒಂದು ಕೈಯಲ್ಲಿ ಗುರಾಣಿಯನ್ನು ಮತ್ತೊಂದು ಕೈಯಲ್ಲಿ ಕೊಂತವನ್ನು ಹಿಡಿದು ಹೋರಾಡಿದ ವರ್ಣನೆ ಬರುತ್ತದೆ.

**ಬಿಲ್ಲು – ಬಾಣಗಳು:**

ಇವುಗಳನ್ನು ಪ್ರಾಚೀನ ಕರ್ನಾಟಕದಲ್ಲಿ ಪದಾತಿಗಳು ಬಹಳವಾಗಿ ಉಪಯೋಗಿಸುತ್ತಿದ್ದರು. ಇವುಗಳ ಹೆಸರು ಮತ್ತು ಯುದ್ಧದಲ್ಲಿ ಇವುಗಳ ಉಪಯೋಗದ ಬಗ್ಗೆ ಸಾಕಷ್ಟು ಮಾಹಿತಿ ಶಾಸನಗಳಿಂದ ಮತ್ತು ಕಾವ್ಯಗಳಿಂದ ತಿಳಿದುಬರುತ್ತದೆ. ಇವುಗಳನ್ನು ಯುದ್ಧದಲ್ಲಿ ಮಾತ್ರವಲ್ಲದೆ ಬೇಟೆಯಲ್ಲಿಯೂ ಸಹ ಉಪಯೋಗಿಸುತ್ತಿದ್ದರು.

ಬಾಣವು ಆದಷ್ಟು ಬಿರುಸಾಗಿ ಹೋಗಿ ಶತ್ರುವನ್ನು ತಾಗಲಿ ಎಂಬ ಉದ್ದೇಶದಿಂದ ಬಿಲ್ಲನ್ನು ವಿವಿಧ ರೀತಿಗಳಲ್ಲಿ ಬಾಗಿಸಿಕಟ್ಟುತ್ತಿದ್ದರು. ಬಾಣವು ಶತ್ರುವಿನ ದೇಹವನ್ನು ನಾಟುವುದೆಂದು ವಿವಿಧ ರೀತಿಯ ಮೊನಚಾದ ಭಾಗಗಳನ್ನು ಮಾಡುತ್ತಿದ್ದರು. ಅವುಗಳನ್ನು ಹಿಡಿದು ಬಿಲ್ಲಿಗೆ ಹೂಡುವುದಕ್ಕೆ ಅನುಕೂಲವಾಗಿ ಅವುಗಳ ವೇಗ ಹೆಚ್ಚಲೆಂದು ಬಾಣಗಳ ಹಿಂಭಾಗದಲ್ಲಿ ಗರಿಗಳನ್ನು ಕಟ್ಟುತ್ತಿದ್ದರು. ಬಾಣಗಳನ್ನು ಇಟ್ಟುಕೊಳ್ಳಲು ಬೆನ್ನಿಗೆ ಬತ್ತಳಿಕೆಯನ್ನು ಕಟ್ಟಿಕೊಳ್ಳುತ್ತಿದ್ದರು. ಸಾಹಸ ಭೀಮ ವಿಜಯದಲ್ಲಿ ಅಂಬು ಎಂದು ಪ್ರಯೋಗವಾಗಿರುವುದು ಗಮನಾರ್ಹ.

**ಕರ್ಕಡೆ – ಕಕ್ಕಡೆ:**

ಇದು "ಕೈಯಿಂದ ಎಸೆಯುವ ಶೂಲದಂತಹ ಆಯುಧ" ಎಂಬುದಾಗಿ ಡಾ. ಎಂ. ಚಿದಾನಂದ ಮೂರ್ತಿಯವರು ಅಭಿಪ್ರಾಯ ಪಡುತ್ತಾರೆ. ಅವರ ಅಭಿಪ್ರಾಯವನ್ನು ಸಮರ್ಥಿಸುವ ಅಂಶ ಶಾಸನವೊಂದರಿಂದ ದೊರೆಯುತ್ತದೆ. ಅಂತಪಾಲನೆಂಬ ದಂಡಾಧೀಶನ ನಾಲ್ವರು ತಮ್ಮಂದಿರನ್ನು ಹೊಗುಳುತ್ತಾ ಶಾಸನಕಾರ, "ಆರ್ದ್ರಾಂತೂರ್ಪ್ಪಿಡುವ ಕಕ್ಕಡೆಯೆಂಬವೋಲಿರ್ದಪರ್" ಎಂಬುದಾಗಿ ವರ್ಣಿಸುತ್ತಾನೆ. ಕಾಯ್ಕಿಣಿಯ ಮೂರು ವೀರಗಲ್ಲುಗಳ ಪಾಠದಿಂದ ವೀರರು, 'ಚಿನ್ನದಿಂದ ಮಾಡಿದ ಕಕ್ಕಡೆ' ಎಂಬ ಆಯುಧವನ್ನು ಹಿಡಿದು ಯುದ್ಧಕ್ಕೆ ಹೊರಟ ವಿಷಯ ತಿಳಿಯುತ್ತದೆ. ಕಾಯ್ಕಿಣಿಯ ವೀರಗಲ್ಲುಗಳ ಶಿಲ್ಪವನ್ನು ಅವಲಂಬಿಸಿ ಕರ್ಕ್ಕಡೆಯ ಬಗ್ಗೆ ಹೇಳುವುದಾದರೆ, ಇದು ಅರ್ಧಭಾಗ ಕತ್ತಿಯ ಆಕಾರವನ್ನೂ, ಉಳಿದ ಅರ್ಧಭಾಗ ಈಟಿಯನ್ನೂ ಹೋಲುತ್ತದೆ. ನಡುಭಾಗದಲ್ಲಿ ಹಿಡಿದುಕೊಳ್ಳಲು ಬರುವಂತಿದೆ. ಇದರಿಂದ ಇರಿಯಲು

ಮತ್ತು ಎಸೆಯಲು ಸಹ ಬರುವಂತೆ ತೋರುತ್ತದೆ.

**ಸುರಿಗೆ:**

ಇದನ್ನು ಯುದ್ಧದಲ್ಲಿ ಮತ್ತು ಬೇಟೆಯಲ್ಲಿ ಉಪಯೋಗಿಸುತ್ತಿದ್ದರು. ಇದು ಕಬ್ಬಿಣದ ಸಲಾಕೆಯ ಹಾಗೆ ಉದ್ಧವಾಗಿದ್ದು ತಳಭಾಗದಲ್ಲಿ ಹಿಡಿಯುತ್ತದೆ. ಇದರ ಮೊನಚಾದ ಭಾಗಕ್ಕೆ ವಿಷವನ್ನು ಸವರಿರುತ್ತಾರೆಂಬ ನಂಬಿಕೆ ಇದೆ. ಶತ್ರುಗಳ ಅಸ್ತ್ರಗಳಿಂದ ಆಗುವ ಪೆಟ್ಟನ್ನು ತಪ್ಪಿಸಿಕೊಳ್ಳುವ ಸಲುವಾಗಿ ಉಪಯೋಗಿಸುತ್ತಿದ್ದ ರಕ್ಷಣಾಯುಧವೇ 'ಗುರಾಣಿ'. "ಕನ್ನಡದಲ್ಲಿ ಗುರಾಣಿಯನ್ನು ಪಲಗೆ ಎಂದು ಕರೆಯುತ್ತಾರೆ" ಇದನ್ನು ವೀರಗಲ್ಲುಗಳಲ್ಲಿ 'ಹರಿಗೆ'. 'ಅಡ್ಡಣ ಎಂಬುದಾಗಿ 'ಅಡಣ' ಎಂಬುದಾಗಿ ಹೆಸರಿಸಲಾಗಿದೆ.

ಆಯುಧಗಳ ಕುರಿತು ಶಂಬಾ ಜೋಶಿ ಹೀಗೆ ಹೇಳಿದ್ದಾರೆ:

ಸಂಸ್ಕೃತದಲ್ಲಿ 'ಕುಂತ' ಎಂದರೆ ಇಂದಿನ ದೇಶಿಯಲ್ಲಿ ಈಟಿ, ಭರ್ಚಿ, ಭಾಲೆ. 'ಭಾಲಾ' (ಭಲ್ಲೂಕ) ಎಂಬುದು ಮರ್‍ಯಾಟಿಯಲ್ಲಿ ಈಗ ವಿಶೇಷ ರೂಢಿಯಲ್ಲಿದೆ. ಈ ಆಯುಧದ 'ಕುಂತ' ಎಂಬ (ಸಂಕೇತ) ಪ್ರತಿಮೆಯಲ್ಲಿ ಅದು ಮೂಲದಲ್ಲಿ ಯಾವ ಆಕಾರದ್ದಿರಬೇಕೆಂಬ ಸೂಚನೆಯು ಅಳವಟ್ಟಿದೆ. ಕೊಂಕು–ಕೋಲು (ಕುಡು–ಕೋಲು) ಹೀಗೆ ಕುಂತವು ಕೊಂಕುಳ್ಳ ಆಯುಧವಾಗಿರುವ ಶಕ್ಯತೆಯಿದೆ. ಕಬ್ಬಿಣವು ಗೊತ್ತಾಗುವ ಮುನ್ನ 'ಬೂಮರಾಂಗ'ದಂತಹ ಬಿಸುಡುವ 'ಬಡಿಗೋಲು' ಆಗಿರುವ ಶಕ್ಯತೆಯಿದೆ. 'ಈಟಿ' ಇದು ಕುಟ್ಟಿ ಹೊಡೆವ ಸಾಧನ. ಇಂದಿನ ಕಡುಗೋಲು, ಕೊಂಕು (ವೃತ್ತಾಕಾರದ್ದು) ಇದ್ದರೂ, ಅದರ 'ಹಿಡಿಕೆ' (ಕೈಯಲ್ಲಿ ಹಿಡಿವಮಟ್ಟಿಗೆ ಇರುವುದರಿಂದ) ಕೋಲು ಎಂಬ ಹೆಸರಿನ ಅರ್ಹತೆಯನ್ನು ಕಳೆದುಕೊಂಡಿದೆ. ಕೊಲಲುವುದಕ್ಕಾಗಿ ಬಳಸುವುದು 'ಕೋಲು'. ಇದೇ ಶರ; ಬಾಣ. ಪ್ರಾಥಮಿಕ ಮಾನವನು 'ಆತ್ತಸಜ್ಜ–ಧನುಷ'ನಾಗಿ, ಬತ್ತಳಿಕೆಯನ್ನು ಬೆನ್ನಿಗೆ ಕಟ್ಟಿಕೊಂಡು ಹೊರಬೀಳಬೇಕಾಗುತ್ತಿದ್ದ ಕಾಲವೊಂದಾಯ್ತು.

ಆಯುಧಗಳ ಕುರಿತು ಚಿದಾನಂದ ಮೂರ್ತಿಯವರು ಈ ರೀತಿ ಹೇಳಿದ್ದಾರೆ:

ಯುದ್ಧಕ್ಕಾಗಿ ನಡೆಯುತ್ತಿದ್ದ ಸೇನೆಯು ತನ್ನೊಡನೆ ಕೊಂಡೊಯ್ಯುತ್ತಿದ್ದ ಪರಿಕರಗಳ ಒಂದು ಚಿತ್ರವು ಸೂಕ್ತಿಸುಧಾರ್ಣದಲ್ಲಿ ದೊರೆಯುತ್ತದೆ. ಗುಡಿ (=ಧ್ವಜ), ಹಗ್ಗ, ಕಾಂಡಪಟ (=ತೆರೆ), ಮೊರ, ಗಳಗೆ (=ಧಾನ್ಯದ ಕಣಜ), ತೊತ್ತು, ಎತ್ತು, ಬಂಡಿ, ಸಂಗುಡಿ (=?), ಕಂಟಣೆ (=ಪ್ರಾಣಿಗಳ ಮೇಲೆ ಹೇರುವ ಇಬ್ಭಾಗದ ಚೀಲ), ದಂಡಿಗೆ (=ಪಲ್ಲಕ್ಕಿ), ಸವಂಗ (=ಕವಚ), ಮೊಚ್ಚೆ (=ಪಾದರಕ್ಕೆ), ಹಲ್ಲಣ (=ಜೀನು), ಕುಡುಗೋಲು, ಕತ್ತಿ, ದಬ್ಬಳ, ಕೊಡಲಿ, ಗೂಟ, ಹಾರೆ, ಹಾರಂಗಿ, ತಾಮ್ರದ ಪಾತ್ರೆಗಳು – ಇವಿಷ್ಟೂ "ದಂಡಿಂಗೆ ಸಾಮ್ರಗಿಗಳ್" ಈ ಸಾಮಾನುಗಳ ಜೊತೆಯಲ್ಲಿ ಬಿಲ್ಲು, ಸರಳು, ಈಟಿ, ತೋಮರ, ಖಡ್ಗ – ಮುಂತಾದ ಆಯುಧಗಳನ್ನು ಹೇರಿಕೊಂಡು ಬಂಡಿಗಳು ಬರುತ್ತಿದ್ದವು. ಅರಮನೆಯ ಖಜಾನೆಯೂ ('ಕೊಟ್ಟಗೆ' <ಕೋಷ್ಠಾಗಾರ) ರಾಜನ ಜೊತೆಯಲ್ಲಿ ಬರುತ್ತಿತ್ತು. ಆಯುಧಗಳಿಗೆ ಸಾಣೆಹಿಡಿದು ಹರಿತ ಮಾಡುವವರು

ಬರುತ್ತಿದ್ದರು. ರಾಣಿವಾಸದ ಕೆಲವರು ಸ್ತ್ರೀಯರೂ, ಹಿರಿಯ ಅಧಿಕಾರಿಗಳ ಸ್ತ್ರೀಯರೂ, ಸೇನೆಯ ಜೊತೆಗೆ ಬರುತ್ತಿದ್ದರೆಂಬುದಕ್ಕೆ ಶಾಸನಾಧಾರಗಳಿವೆ.

*ವಿವರಗಳಿಗೆ ನೋಡಿ: ಡಾ.ಎಂ ಚಿದಾನಂದಮೂರ್ತಿ ೨೦೦೮*
*ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪುಟ. ೨೮೪-೨೮೫*
*ಡಾ. ಆರ್. ಶೇಷಶಾಸ್ತ್ರಿ ೨೦೦೪ ಕರ್ನಾಟಕದ ವೀರಗಲ್ಲುಗಳು ಪುಟ. ೨೨೧-೨೨೪*
*ಶಂಬಾ ಜೋಶಿ ೧೯೯೯ ಸಂಪುಟ. ೩ ಪುಟ. ೫೭.*

## ೭೧೯. ಸಮಾನಶೀಲ ವ್ಯಸನ

*ಸುರಭಿಕುಸುಮಮಾಲಾಲಂಕೃತೋತ್ತಮಾಂಗನುಂ, ಸರ್ವಾಭರಣಭೂಷಿತನುಮಾಗಿ ಕತಿಪಯ **ಸಮಾನಶೀಲವ್ಯಸನ** ಸಹಾಯರ್ವೆರಸು.......... (ಭೇದ ಪ್ರಕರಣ, ವ. ೧೨೩)*

ಕರ್ನಾಟಕ ಪಂಚತಂತ್ರದಲ್ಲಿ ಈ ವಿಷಯದ ಕುರಿತು ಬರುತ್ತದೆ. ಸಮಾನಶೀಲರು ಸಮಾನ ಮನಸ್ಕರು ಒಂದಾಗಿ ನಡೆಯುತ್ತಾರೆ ಎಂಬುದು ಇದರ ಭಾವ. ಸಮಾನಶೀಲರಿಗೆ ಮತ್ತು ಸಮಾನ ಮನಸ್ಕರಿಗೆ ಸಮಾನವಾದ ಆಲೋಚನೆಯ ಕ್ರಮವಿರುತ್ತದೆ. ಸಮಾನಶೀಲವೆಂದರೆ ಸಮಾನ ಗುಣ ಮತ್ತು ಸಮಾನ ಮನೋಸ್ಥಿತಿಯು ಗೆಳೆತನಕ್ಕೆ ಕಾರಣವಾಗುತ್ತದೆ. 'ಸಮಾನ ಶೀಲ ವ್ಯಸನೇಷು ಸಖ್ಯಂ' – ಎಂಬ ಸಂಸ್ಕೃತೋಕ್ತಿಯೂ ಇದೆ.

## ೭೨೦. ಸರಸ್ವತಿ

*ಪರಮಜಿನೇಂದ್ರವಾಣಿಯೆ ಸರಸ್ವತಿ ಬೇಱಿದು ಪೆಣ್ಣ ರೂಪಮಂ*
*ಧರಿಯಿಸಿ ನಿಂದುದಲ್ತದುವೆ ಭಾವಿಸಿಯೋದುವ ಕೇಳ್ವ ಪೂಜಿಪಾ ।*
*ದರಿಸುವ ಭವ್ಯಕೋಟಿಗೆ ನಿರಂತರ ಸೌಖ್ಯಮನೀವುದಾನದ*
*ರ್ಕೆರೆದಪೆನಾ **ಸರಸ್ವತಿಯೆ** ಮಾೞ್ಕೆಮಗಿಲ್ಲಿಯೆ ವಾಗ್ವಿಳಾಸಮಂ ॥*

*(ಆದಿಪುರಾಣ ೧-೯)*

ಸರಸ್ವತಿಯನ್ನು ಪಂಪ ಗ್ರಹಿಸುವ ಕ್ರಮವೇ ಬೇರೆ. ಪರಮಜಿನೇಂದ್ರವಾಣಿಯೆ ಸರಸ್ವತಿ ಅಂದರೆ ಜಿನನ ಮಾತು ಸರಸ್ವತಿ. ಅದು ವೈದಿಕ ಕಲ್ಪನೆಯ ಸರಸ್ವತಿಯ ರೀತಿಯದಲ್ಲ ಅದು ಹೆಣ್ಣು ರೂಪವನ್ನು ಹೊಂದಿಲ್ಲ. ಭಾವಿಸಿ ಓದುವ ಕೇಳುವ ಪೂಜಿಸುವ ಆದರಿಸುವ ಜನರಿಗೆ ನಿರಂತರ ಸೌಖ್ಯವನ್ನು ನೀಡಲಿ. ನನಗೆ ವಾಗ್ವಿಲಾಸವನ್ನು ಜಿನವಾಣಿಯು ನೀಡಲಿ ಎಂದು ಪ್ರಾರ್ಥಿಸುತ್ತಾನೆ. ವಿಶೇಷವೆಂದರೆ ವಾಣಿಯ ಪರಿಕಲ್ಪನೆಯು ಸಾಹಿತ್ಯದ ಜೊತೆಗೆ ಸಂಬಂಧವನ್ನು ಇರಿಸಿಕೊಂಡಿದ್ದು. ಇದು ಸಂಪ್ರದಾಯ ರೂಪವಾಗಿ ಬಂದಿದ್ದು. ವೈದಿಕ ಕವಿಗಳು ಬ್ರಹ್ಮನ ಹೆಂಡತಿ ವಾಣಿ ಎಂತಲೂ ಕರೆಯುತ್ತಾರೆ. ಪುಸ್ತಕವನ್ನು ಮತ್ತು ಅಕ್ಷರವನ್ನು ಸರಸ್ವತಿ ರೂಪವಾಗಿ ಕಾಣುತ್ತಾರೆ. ಮೊದಲ ಅಕ್ಷರಭ್ಯಾಸ ಸಂದರ್ಭದಲ್ಲಿ ಗಣಪತಿಯನ್ನು ಮತ್ತು ಸರಸ್ವತಿಯನ್ನು ಪೂಜಿಸುವ ಕ್ರಮವಿದೆ. ಆದ್ದರಿಂದಲೇ

ವಾಣಿಯು ವಾಗ್ದೇವಿಯಾಗಿದ್ದಾಳೆ.

ವಾಗ್ದೇವಿ ಎಂದರೆ ವಾಕ್+ದೇವತೆ. ವಾಕ್ ಅಂದರೆ ಮಾತು. ವಾಗ್ದೇವತೆಯ ಪರಿಕಲ್ಪನೆಯು ಮೂಲತಃ ಸಂಸ್ಕೃತದ್ದು ಮತ್ತು ವೈದಿಕ ಮೂಲವಾದುದು.

ಕವಿರಾಜಮಾರ್ಗದಲ್ಲಿಯೂ ಇದೇ ರೀತಿಯ ಪರಿಕಲ್ಪನೆಯಿದೆ.

ಚತುರ್ಮುಖ ಬ್ರಹ್ಮನ ಮುಖಕಮಲವನದ ಹೆಣ್ಣು ಹಂಸದಂತೆ ಬಿಳಿಯ ವರ್ಣವುಳ್ಳವಳೂ ಆದ ಸರಸ್ವತಿ ನನ್ನ ಮನಸ್ಸಿನಲ್ಲಿ ನಿತ್ಯವೂ ನಲಿಯಲಿ ಎಂದು ಕವಿರಾಜ ಮಾರ್ಗಕಾರನು ಹೇಳುತ್ತಾನೆ. ಕವಿಯು ಜೈನನಾದುದರಿಂದ ಸರಸ್ವತಿಯನ್ನು ಧವಳವರ್ಣಕ್ಕೆ ಹೋಲಿಸಿದ್ದಾನೆ. (ಕವಿರಾಜಮಾರ್ಗ ೧-೨) (ನೋಡಿ: ವಾಣಿ)

ಋಗ್ವೇದದಲ್ಲಿ 'ವಾಕ್'ನ ವಿಷಯವು ಉಕ್ತವಾಗಿದೆ. ಅದರಲ್ಲಿ ದೇವೀಂ ವಾಚಂ ಅಜನಯಂತ ದೇವಾಃ ತಾಂ ವಿಶ್ವರೂಪಾಃ ಪಶವಃ ವದಂತಿ (VIII -೧೦೦-೧೦೧)

ವಾಕ್‌ದೇವಿ. ಈ ವಾಕ್, ಆಪಃ, ರಸ ಪಾತಳಿಯ ಜೀವನ ರೀತಿ ಮೈದಾಳುತ್ತದೆ. ಹಾಗೆಯೇ 'ಯತ್ ಪ್ರೈರತಃ ಸಂದೃಕ್(ದರ್ಶನ) ಭೂಮಿಕೆಯೇ ವಾಕ್ಕು ಋಗ್ವೇದದಲ್ಲಿ ವಾಕ್ ಎಂಬುದನ್ನು ನಾಲ್ಕು ಪ್ರಕಾರವಾಗಿ ವಿಂಗಡಿಸಲಾಗಿದೆ. ನಾಲ್ಕು ಪಾದಗಳಿಂದ ಅದು ಪರಿಮಿತವಾಗಿದೆ. ಈ ನಾಲ್ಕು ಪಾದಗಳನ್ನು ಮನೀಷಿಗಳಾದ ಬ್ರಾಹ್ಮಣರು ತಿಳಿದಿರುತ್ತಾರೆ. ನಾಲ್ಕನೆಯ ಪಾದವನ್ನು ಮನುಷ್ಯರು ಮಾತಾಡುತ್ತಾರೆ. ಸಾವಿತ್ರಿಯೇ ವಾಕ್. ಸರಸ್ವತಿ ವಾಕ್‌ನ ಅಧಿದೇವತೆ ವಾಕ್ ಪವಿತ್ರವೆಂಬ ಭಾರತೀಯ ಸಾಂಸ್ಕೃತಿಕ ನಂಬಿಕೆಯಿಂದ ಈ ನಿಲುವುಗಳು ಹುಟ್ಟಿಕೊಂಡಿವೆ.

*ವಿವರಗಳಿಗೆ ನೋಡಿ: ಚಿದಂಬರಾನಂದ ೧೯೭೭ ಋಗ್ವೇದ ರಹಸ್ಯ ಪುಟ. ೩೬೮*

### ೭೨೧. ಸರಳ ಶ್ರಾವಕ ವ್ರತ

ಸ್ತ್ರೀಯು ಮಕ್ಕಳ ಮೇಲಣ "ಮೋಹ ಕಾರಣವಾಗಿ ತಪಮಂ ಕೈಗೊಳ್ಳದೆ - **ಸರಳ ಶ್ರಾವಕ ವ್ರತಂ**ಗಳನೆ ಕೈಕೊಂಡು, ಪಲವುಂ ತೆರೆದ ನೋಂಪಿಗಳಂ ನೋಂತು ಜೀವಿತಾಂತದೊಳಾ ಈಶಾನಕಲ್ಪದೊಳ್ ಶ್ರೀಪ್ರಭ-ವಿಮಾನದೊಳ್ ಲಲಿತಾಂಗ ದೇವನಾದಂ" ಎಂದು ಬರುತ್ತದೆ (ಆದಿಪುರಾಣ -೩-೪೯ವ). ಜೈನ ತತ್ವಜ್ಞಾನ ಈ ರೀತಿಯ ತಪದಿಂದ ಉಂಟಾಗುವ ಮರಣಕ್ಕೆ ಆತ್ಮಘಾತವಲ್ಲ, ಅದು 'ಮೋಕ್ಷ' ಎನ್ನುತ್ತದೆ. ಜೈನದರ್ಶನದಲ್ಲಿಯೂ ಆತ್ಮಘಾತಕ್ಕೆ ಹಿಂಸೆಯೆಂದು ಪರಿಗಣಿಸಲಾಗಿದೆ (ಅಣ್ಣಾರಾಯ: ಮಿರ್ಜಿ: ೧೯೬೯. ಪು. ೪೮೨). ಸಾಧಕನು ರಾಗ, ದ್ವೇಷ, ಕ್ರೋಧ, ಮಾನ, ಮಾಯಾ, ಲೋಭಗಳನ್ನು ತ್ಯಜಿಸಿ, ಶುದ್ಧ ಅಹಿಂಸಾತ್ಮಕ ವೃತ್ತಿಯನ್ನು ಪಾಲಿಸುತ್ತ ಸಮಾಧಿ ಮರಣವನ್ನು ಹೊಂದುತ್ತಾನೆ (ಅದೇ. ಪು. ೪೮೩). ಆತ್ಮಹತ್ಯೆಯನ್ನು 'ಮೋಕ್ಷ'ವೆಂದು ಪರಿಭಾವಿಸುವ ಧಾರ್ಮಿಕ ಸಂಕಲ್ಪವೇ ಪ್ರಧಾನವಾಗಿ ರೂಪುಗೊಂಡಿರುವುದನ್ನು ಮೇಲಿನ ಸನ್ನಿವೇಶದಲ್ಲಿ ಸ್ತ್ರೀಗೆ ತನ್ನ ಮಕ್ಕಳ ಮೋಹವಿರಬಾರದು ಎನ್ನುವುದನ್ನು ಪಂಪನ

ಕೃತಿಯು ಬಣ್ಣಿಸುತ್ತದೆ.

'ಪ್ರಭಾವತಿಯುಂ ಪದ್ಮಾವತ್ಯಾರ್ಯಿಕಾ ಪಾದಮೂಲದೊಳ್ ಪಾಲಿತ ರತ್ನಾವಳಿ ತಪದೊಳ್ ಅಚ್ಯುತ ಕಲ್ಪದೊಳ್ ಪ್ರತೀಂದ್ರ ಪದವಿಯಂ ಪಡೆದಳ್' (ಅದೇ. ೩-೫೬ವ). ಇದು ಕೂಡಾ ಆತ್ಮಾಹುತಿಯ ಲಕ್ಷಣವನ್ನೇ ಸೂಚಿಸುತ್ತದೆ. ಇಲ್ಲಿಯ ತಪಸ್ಸು ಒಂದು ವಿಶಿಷ್ಟ ಕ್ರಮದಲ್ಲಿ ಹತ್ತು ಪಾರಣೆಗಳಿರುವ ಮೂವತ್ತು ಉಪವಾಸಗಳನ್ನು ಮಾಡುವುದು ಎಂದು ಡಾ. ಎಲ್. ಬಸವರಾಜು ಅವರು ಹೇಳುತ್ತಾರೆ (ಅದೇ. ಪು. ೮೧. ಅಡಿಟಿಪ್ಪಣಿ).

'ಆದಿಪುರಾಣ' ಕೃತಿಯಲ್ಲಿಯೂ ಹೆಣ್ಣೊಬ್ಬಳು ಸನ್ಯಾಸನವನ್ನು ಸ್ವೀಕರಿಸಿ, 'ಗುರುಪಂಚಕಮಂ ನೆನೆಯುತ್ತೆ ಭೋಂಕನುತ್ಪನ್ನ ಶರೀರೆಯಾದಳ್' ಎಂದು ಬರುತ್ತದೆ (೩-೧೬). ಈ ಹೆಣ್ಣು 'ಬಹಳ ಸುಕುಮಾರಿಯು ನೊಂದವಳೂ ಆದುದರಿಂದ ಪಂಪನು ಕರುಣೆಯಿಂದಲೇ ಎಂಬಂತೆ 'ಗುರುಪಂಚಕಂ ನೆನೆಯುತ್ತೆ ಭೋಂಕನುತ್ಪನ್ನ ಶರೀರೆಯಾದಳು' ಎಂದು ನವುರಾಗಿ ನಡೆಸಿಕೊಂಡಿದ್ದಾನೆ. ಆದರೆ ಧರ್ಮನಿಷ್ಠುರರಾದ ಜಿನಸೇನಾಚಾರ್ಯರ ಪ್ರಕಾರ – ಆಕೆ ಆರು ತಿಂಗಳು ಜಿನಪೂಜೆಮಾಡಿ ಆಮೇಲೆ 'ಮೂತೀ ಚೈತ್ರಕಲೋ: ಸಮ್ಯಕ್ ಸ್ವರಂತೀ ಗುರು ಪಂಚಕಂ, ಸಮಾಧಿನಾ ಕೃತಿ ಪ್ರಾಣತ್ಯಾಗಾ ಪ್ರಾಚಷ್ಪ ಸಾದಿವ:' (೬-೫೬; ೫೭) (ಬಸವರಾಜು ಎಲ್. (ಸಂ) ೧೯೭೬ ಅಡಿಟಿಪ್ಪಣಿ ಪು. ೬೧). ಹೆಣ್ಣು ತಪಸ್ಸಿನ ಮೂಲಕ, ನಿರಾಹಾರದ ಮೂಲಕ ಆತ್ಮಹತ್ಯೆಯನ್ನು ಮಾಡಿಕೊಂಡಳು ಎನ್ನುವುದು ಇಲ್ಲಿಯ ಧಾರ್ಮಿಕ ಆಶಯವಾಗಿದೆ. ಧಾರ್ಮಿಕವಾಗಿ ಪ್ರಚಲಿತವಿರುವ ತ್ಯಾಗಪೂರ್ಣವಾದ ಆತ್ಯಹತ್ಯೆಯನ್ನು ಸಾಂಸ್ಕೃತಿಕ ಸಂದರ್ಭವೇ ಸೃಷ್ಟಿಸುತ್ತದೆ. ಈ ರೀತಿಯ ಆತ್ಮಹತ್ಯೆಗಳನ್ನು ನಾಲ್ಕು ವರ್ಗೀಕರಣದಲ್ಲಿ ಡುರ್ಕೈಮ್ (Durkheim) ನಿಲ್ಲಿಸುತ್ತಾನೆ: ಅಹಂಕಾರ ಜನ್ಮ (Egostic)

ಪರಹಿತಾಸಕ್ತಿಗಾಗಿ (Altruistic)

ವಿಧಿವಿರೋಧ ಮನೋಭಾವ (Anomic)

ಅದೃಷ್ಟವಾದ ಅಥವಾ ದೈವಯುಕ್ತವಾದ (Fatalistic)

ಪರಹಿತಾಸಕ್ತಿಗಾಗಿ ತನ್ನ ಆತ್ಮಹತ್ಯೆಯನ್ನು ಮಾಡಿಕೊಳ್ಳುವಲ್ಲಿ ವೈಯಕ್ತಿಕ ನೆಲೆಯೇ ಪ್ರಧಾನವಾಗಿರುತ್ತದೆ. ದೈವಯುಕ್ತವಾದದಲ್ಲಿ ಈ ನೆಲೆಯೇ ಗುಂಪಿನ ಮೂಲಕ ವ್ಯಕ್ತವಾಗುತ್ತದೆ. ಇದು ಗುಲಾಮರಲ್ಲಿ ಹೆಚ್ಚಿರುತ್ತದೆ. ಈ ಮೇಲಿನ ಎರಡೂ ರೀತಿಯ ಆತ್ಮಹತ್ಯೆಯು ಸರಳ ಸಮಾಜದಲ್ಲಿ ಕಾಣಿಸಿಕೊಳ್ಳುತ್ತದೆ. ಇಲ್ಲಿ ವ್ಯಕ್ತಿತ್ವಕ್ಕೂ ಸಾಮಾಜಿಕ ಸಂದರ್ಭಕ್ಕೂ ಉಂಟಾಗುವ ಬಿರುಕೇ ಕಾರಣವಾಗಿರುತ್ತದೆ (Durkheim; ೧೯೭೦. P. ೨೨೮) (Abercrombic; Nicholes ೧೯೭೪. P. ೪೪). ಜೈನಧರ್ಮವನ್ನು ಪ್ರತಿಪಾದಿಸುವ ಕಾವ್ಯಗಳಲ್ಲಿ ಸಾಮಾನ್ಯವಾಗಿ ಬಂದಿರುವ ಅಂಶವೆಂದರೆ, ಸ್ತ್ರೀಯು ತಪವಾಚರಿಸಿ ಅದರ ಮೂಲಕ ಮರಣವಪ್ಪುವುದು. ಇಲ್ಲಿ ಧಾರ್ಮಿಕ ಗುಲಾಮಿತನವು ಪ್ರಧಾನವಾಗಿರುತ್ತದೆ. ದೈವಯುಕ್ತವಾದವೇ ಇಲ್ಲಿಯ ಮುಖ್ಯ ನೆಲೆಯಾಗಿರುತ್ತದೆ.

ಜೈನಧರ್ಮ ಹೊಸದೊಂದು ಸಾಮಾಜಿಕ ಸಂದರ್ಭದಲ್ಲಿ ಹುಟ್ಟಿರುವಾಗ, ಹೊಸದಾದ ಆಚರಣೆಯು ರೂಪುಗೊಂಡಿರುವುದನ್ನು ಇದು ಸೂಚಿಸುತ್ತದೆ. ಈ ಆಚರಣೆಯು ಗುಂಪಿನ ಮನೋಭಾವವನ್ನು ಪ್ರಕಟಿಸುತ್ತದೆ. ಈ ಧಾರ್ಮಿಕ ಆಚರಣೆಯು ಭೌತಿಕ ಗುಲಾಮಿತನವನ್ನು ನಿರಾಕರಿಸಿ, ಅಲೌಖಿಕ ಗುಲಾಮಿತನವನ್ನು ಪ್ರದರ್ಶಿಸುತ್ತದೆ.

(೧) ಸಲ್ಲೇಖನ. (೨) ಲೆಂಕರು. (೩) ವೇಳೆವಾಳಿ.

*ವಿವರಗಳಿಗೆ ನೋಡಿ: Durkhein .E. 1970 Suicide P. 228*

*Nicholas Abercrombie 1984 The dominant Ideology & Thesis P. 44.*

*- S. ಶೆಟ್ಟರ್.*

### ೭೨೨. ಸರ್ಪಮೇಧ

ಪುರುಷಮೇಧ, ಸರ್ಪಮೇಧ ಮತ್ತು ಅಶ್ವಮೇಧ ಇವುಗಳಲ್ಲಿರುವ ಪುರುಷ : ಸರ್ಪ : ಅಶ್ವ ಈ ಸಾಂಕೇತಿಕ ಪ್ರತಿಮೆ ಸಮಾನವಿರುವುದರಿಂದ ಇವು ಅಪ : ರಸ ಪಂಥೀಯ 'ಗೌತಮಾಗ್ನೀ' ಕುಂಡದಲ್ಲಿ ='ಆಪ'ದಲ್ಲಿ ನಡೆವ ಹೋಮದ ಪ್ರಕಾರಗಳೇ ಎಂದಲ್ಲಿ ತಪ್ಪಾಗಲಾರದಷ್ಟೇ. ಮೊದಲನೆಯದು ವಿರಾಟ್-ಸಿದ್ಧಿಗಾಗಿ ಪರಿವ್ರಾಜಕ : ಜಂಗಮ ದೀಕ್ಷೆ ಪಡೆವಾಗಿನ 'ಸತ್ರ'; ಶತಪಥದ 'ಪುರುಷ ಮೇಧೀ' ನಾರಾಯಣನೇ ಸಾಕ್ಷಿ. ಇದಕ್ಕೆ ಎರಡನೆಯದು ಸರ್ಪ-ಸತ್ರ; ಇದು ಕೇವಲ ಕಾಲ್ಪನಿಕ. ಇಂದ್ರನು ಅಹಿ ತಕ್ಷಕನೂ ಉಳಿಯಲೇ ಬೇಕು, ಎಂಬ ನೀತಿಬೋಧಕ ಕಟ್ಟುಕತೆ () ಇನ್ನು ಅಶ್ವಮೇಧ ವಿಚಾರ : ಸಂನ್ಯಾಸ ಪಂಥೀಯ ಭೂಮಿಕೆಯಿಂದ ಮಾಡಲಾಗಿರುವ ವಿಜಗೀಷು ವೃತ್ತಿಯ ವಿಡಂಬನ: ಈ ಅಶ್ವಮೇಧ ಆಚಾರವಿಧಿ. ಕ್ಷತ್ರಿಯ ವೃತ್ತಿಯ ಮೂಲ ಪ್ರೇರಣೆಯಾದ ಪೌರುಷವನ್ನೇ ತುಂಡರಿಸಿ ಬಿಡುವ ಅಶ್ವಮೇಧದ ಈ ಕೃತಿಯು, ಆ ಯಜಮಾನನಿಗೆ ಸಾಮ್ರಾಟ್ ಪದವಿಯ ಅರ್ಹತೆಯನ್ನು ತರಲು ಶಕ್ಯವಿಲ್ಲ. ಆದುದರಿಂದ, ಈ ಅಶ್ವಮೇಧವು ಸಹ, ಇಂದ್ರ-ತ್ರಿತ ಸಂಪ್ರದಾಯದ ಆ ಮೂಲ ಸಮಯದ ವಿಕೃತಿಯೆ ಇರಲಿಕ್ಕೆ ಬೇಕೆಂದು ಊಹಿಸಬೇಕಾಗುತ್ತದೆ ಎಂದು ಶಂಬಾ ಅಭಿಪ್ರಾಯ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೪ ಪುಟ. ೪೬೩.*

### ೭೨೩. ಸರ್ವತೋಭದ್ರ

*ಅದಱೊಳಗೆ ಸುತ್ರಾಮನೆ ಸೂತ್ರಧಾರನಾಗಿಯುಂ ಕಲ್ಪಜರೆ ಶಿಲ್ಪಿಗಳಾ*
*ಗಿಯುಂ ಸಮೆದ ಚೆಲ್ವಿಂಗೆ **ಸರ್ವತೋಭದ್ರಮೆ**ನಿಸಿದ ಸರ್ವತೋಭದ್ರಂಗಳೊಳಂ ॥*

*(ಕೆ.ಎಲ್.ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೪)*

ಸರ್ವತೋಭದ್ರಮೆನಿಸಿದ ಎಂದರೆ ಮಂಗಳಕರವಾದುದು. ಚೌಕಾಕಾರವಾಗಿ ಕಟ್ಟಿಸಿದ ಮನೆ. ದೇವಸ್ಥಾನಗಳಿಗೆ ಸರ್ವತೋಭದ್ರವೆಂದು ಕರೆಯುತ್ತಾರೆ.

'ಸರ್ವತೋಭದ್ರ ೧ ಎಪ್ಪತ್ತೈದು ಉಪವಾಸಗಳೂ ಇಪ್ಪತ್ತೈದು ಪಾರಣೆಗಳೂ

ಇರುವ ಒಂದು ವ್ರತದ ಹೆಸರು.

೨ ಅರಮನೆಯ ಗೋಪುರ (ಭರತನ)

೩ ಅರ್ಧ ಮಾಂಡಳಿಕರು ಮಾಡುವ ಜಿನಪೂಜೆ.

೪ ವರ್ತುಲಾಕಾರದಲ್ಲಿ ಕಟ್ಟಿರುವ ವಿಶೇಷಾಕೃತಿಯ ಮನೆ.

ಇಲ್ಲಿ ಶಿಲ್ಪಿಗಳ ಉಲ್ಲೇಖ ಬಂದಿರುವುದರಿಂದ ಸರ್ವ ರೀತಿಯಿಂದಲೂ ಭದ್ರವಾಗಿರುವ ಮನೆಯೆಂಬ ಅರ್ಥದಲ್ಲಿ ನಾಲ್ಕನೆಯದೇ ಹೌದೆನಿಸುತ್ತದೆ. ಇಲ್ಲಿ ಭದ್ರ ಎನ್ನುವುದು ಗಮನಾರ್ಹ.

## ೭೨೪. ಸಲ್ಲೇಖನ ವ್ರತ

*ಅಂತು ಮಹಾಬಳಖಚರೇಂದ್ರಂ ಪ್ರಾಯೋಪಗಮನವಿಧಿಯಿಂದಮಾತ್ಮೀಯಶರೀರ ಭಾರಮನಿರಿಪಿ ತತ್ಸಮಯದೊಳನಲ್ಪಸುಖನಿವಾಸಮೆನಿಸಿದೀಶಾನ ಕಲ್ಪದೊಳಪ್ರತಿಹತ ಚಂಚತ್ಪಂಚರತ್ನ ಪ್ರಭಾಪ್ರಸರಪ್ರಕಟಿತ ಸಂಧ್ಯಾಭ್ರವಿಭ್ರಮಭ್ರಾಜಿ ಯಪ್ಪ ದಿವ್ಯತಳ್ಪತಳದ ಪೊರೆಯೊಳಗೆ ತೊಳತೊಳತೊಳಗಿ ಪೊರಮಡುವೆಳನೇಸರಿ ಬಳಗದ ಬೆಳಗನೊಳಕೊಂಡು. (ಆದಿಪುರಾಣಂ ಪುಟ. ೩೨ (೨-೬೧ ವ)*

ಇದು ಜೈನಧರ್ಮದ ಒಂದು ವೈಶಿಷ್ಟವಾಗಿದೆ. ಶ್ರಾವಕನು ತನ್ನ ಆಯುರವಸಾನವನ್ನು ತಿಳಿದ ಬಳಿಕ ಗುರುಗಳ ಸನ್ನಿಧಿಯಲ್ಲಿ ಜೀವಿತಾವಧಿಯಲ್ಲಿ ಘಟಿಸಿದ ಎಲ್ಲ ವಿಚಾರಗಳನ್ನು ಆಲೋಚಿಸಬೇಕು. ಎಲ್ಲರಲ್ಲಿಯೂ ಕ್ಷಮೆಯನ್ನು ಯಾಚಿಸಬೇಕು. ಕ್ರಮದಿಂದ ಆಹಾರವನ್ನು ತೊರೆದು, ಶುದ್ಧಾತ್ಮ ಸ್ವರೂಪವನ್ನು ಚಿಂತಿಸುತ್ತಾ, ಪಂಚಪದಗಳನ್ನು ಭಾವಿಸಿ, ದೇಹದ ಭಾರವನ್ನು ಇಳುಹುವುದು ಈ ಸಲ್ಲೇಖನೆಯಲ್ಲಿ ಶರೀರ ಸಲ್ಲೇಖನೆ ಮತ್ತು ಕಷಾಯ ಸಲ್ಲೇಖನೆಗಳೆಂದು ಎರಡು ಭೇದಗಳುಂಟು. ಉಪವಾಸ ಮೊದಲಾದುವುಗಳಿಂದ ಶರೀರವನ್ನು ಕೃಶ ಮಾಡುವುದು ಶರೀರ ಸಲ್ಲೇಖನೆಯಾದರೆ, ಪರಿಣಾಮದ ಉತ್ಪತ್ತಿಗಳಿಗೆ ಕಾರಣಗಳಾದ ಸಮಸ್ತ ವಸ್ತುಗಳನ್ನು ತೊರೆಯುವುದು, ಕಷಾಯಗಳನ್ನು ಇಲ್ಲದಂತೆ ಮಾಡುವುದೂ ಕಷಾಯ ಸಲ್ಲೇಖನೆಯೆನಿಸುವುದು ಒಟ್ಟಿನಲ್ಲಿ ಧರ್ಮಕ್ಕಾಗಿ ಶರೀರವನ್ನು ಬಿಡುವುದು ಸಲ್ಲೇಖನ ವ್ರತವೆನಿಸುತ್ತದೆ. ಇದು ತಪದ ಫಲ ಈ ರೀತಿಯಲ್ಲಿ ತಪಸ್ವಿಗಳು ಮರಣ ಹೊಂದಿದರೆ ಅದನ್ನು ಜೈನಧರ್ಮದಲ್ಲಿ ಸಮಾಧಿ ಮರಣವೆನ್ನಲಾಗುವುದು.

ಸಮಂತ್ರಭದ್ರಂ 'ರತ್ನಕರಂಡ ಶ್ರಾವಕಾಚಾರ'ದಲ್ಲಿ ಸಲ್ಲೇಖನದ ಕುರಿತು ಹೀಗೆ ಹೇಳಲಾಗಿದೆ:

***ಉಪಸರ್ಗೇ ದುರ್ಭಿಕ್ಷೇ ಜರಸಿ ರುಜಾಯಾಂ ಚ ನಿಃಪ್ರತಿಕಾರೇ ।***
***ಧರ್ಮಾಯ ತನುವಿಮೋಚನಮಾಹುಃ ಸಲ್ಲೇಖನಾಮಾರ್ಯಾಃ ॥೧೨॥***

ಅರ್ಥ: ಪರಿಹಾರವು ಕಂಡುಬಾರದಂಥ ನಾಶದ ಉಪಾಯವು ಕಂಡುಬಾರದಂಥ ಉಪಸರ್ಗವಾದ ಮೇಲೆ, ದುರ್ಭಿಕ್ಷವು ಬಂದ ಮೇಲೆ, ವೃದ್ಧಾವಸ್ಥೆಯು ಬಂದ ಮೇಲೆ, ರೋಗವಾಗಿ ಹೋದ ಮೇಲೆ, ಧರ್ಮದ ರಕ್ಷಣೆಯ ಸಲುವಾಗಿ ಯಾವ ಶರೀರದ ತ್ಯಾಗ ಮಾಡಲಾಗುತ್ತದೆ ಅದನ್ನು ಗಣಧರದೇವರು ಸಲ್ಲೇಖನವೆಂದು ಹೇಳುತ್ತಾರೆ.

ಭಾವಾರ್ಥ: ದೇಹದಲ್ಲಿರುವುದು, ಮತ್ತು ದೇಹದ ರಕ್ಷಣೆ ಮಾಡುವುದಂತೂ

ಧರ್ಮವನ್ನು ಧಾರಣ ಮಾಡುವುದರ ಸಲುವಾಗಿ ಇದೆ; ಮನುಷ್ಯತನ, ಇಂದ್ರಿಯಗಳು ಮತ್ತು ಮನಸ್ಸು ಇತ್ಯಾದಿಗಳನ್ನು ಪ್ರಾಪ್ತ ಮಾಡಿಕೊಳ್ಳುವುದೆಲ್ಲವೂ ಧರ್ಮದ ಪಾಲನೆ ಮಾಡುವುದರಿಂದಲೇ ಸಾರ್ಥಕವಿವೆ. ಎಲ್ಲಿ ಧರ್ಮದ ನಾಶವಾಗುತ್ತಿರುವುದೇ ಕಂಡು ಬರುತ್ತದೆ, ಈಗ ಧರ್ಮವು ಉಳಿಯಲಾರದೆಂದು ನಿಶ್ಚಯವಾಗಿ ಹೋಗುತ್ತದೆ, ಶ್ರದ್ಧೆ-ಜ್ಞಾನ-ಚಾರಿತ್ರಗಳು ನಷ್ಟವಾಗಿ ಹೋಗಬಹುದೆಂದು ಎನಿಸುತ್ತದೆ ಅಲ್ಲಿ ಧರ್ಮದ ರಕ್ಷಣೆಯ ಸಲುವಾಗಿ ದೇಹದ ತ್ಯಾಗ ಮಾಡುವುದು ಅದು ಸಲ್ಲೇಖನವಾಗಿದೆ.

'ಚಾವುಂಡರಾಯ ಪುರಾಣ'ದಲ್ಲಿಯೂ ವ್ರತಾಚರಣೆ ಮಾಡುವ ಮತ್ತು ಅದರ ಮೂಲಕ ಆತ್ಮಹತ್ಯೆ ಮಾಡಿಕೊಳ್ಳುವ ಸ್ತ್ರೀಯರು ಉಲ್ಲೇಖಗೊಂಡಿದ್ದಾರೆ (ಆದಿಪುರಾಣ, ಪು. ೬೮; ಅದೇ. ಪು. ೭೬, ಶೀತಲನಾಥ ಪುರಾಣಂ. ಪು. ೧೨೫ ಇತ್ಯಾದಿ).

ಪ್ರಾಯೋಪಗಮನ ಎನ್ನುವುದು ಜೈನಧರ್ಮ ಮತ್ತೊಂದು ಪ್ರಮುಖ ಪರಿಕಲ್ಪನೆಯಾಗಿದೆ. ಆದರೆ ಇದು ಕೂಡಾ ಸ್ವಯಂ ಮರಣವನ್ನು ಆಹ್ವಾನಿಸುವ ಕ್ರಮವನ್ನು ಸೂಚಿಸುತ್ತದೆ.

ಪ್ರಾಯೋಪಗಮನ: ಜೈನಯತಿಗಳು ತಮ್ಮ ರೋಗಕ್ಕೆ ತಾವೂ ಚಿಕಿತ್ಸೆ ಮಾಡಿಕೊಳ್ಳದೆ, ಬೇರೆಯವರು ಮಾಡಲೂ ಎಡೆಗೊಡದೆ ಧ್ಯಾನದಲ್ಲಿ ಲೀನರಾಗಿ, ಅಚಲರಾಗಿದ್ದುಕೊಂಡು ಪ್ರಾಣತ್ಯಾಗಮಾಡುವುದು.

ಯಾವುದರಿಂದ ಅಧಿಕ ಸಮಯದವರೆಗೆ ಒಳ್ಳೆಯ ರೀತಿಯಿಂದ ಮುನಿತನ, ಶ್ರಾವಕತನ ಮತ್ತು ಮಹಾವ್ರತ, ಅಣುವ್ರತಗಳನ್ನು ಪಾಲಿಸುತ್ತಿರುವುದು ಕಂಡು ಬರುತ್ತದೆ; ಸ್ವಾಧ್ಯಾಯ, ಧ್ಯಾನ, ಶೀಲ, ತಪ, ವ್ರತ, ಉಪವಾಸ ಮೊದಲಾದುವನ್ನು ಮಾಡುತ್ತಿರುವರು; ಜಿನಪೂಜೆ, ಸ್ವಾಧ್ಯಾಯ, ಧರ್ಮೋಪದೇಶ, ಧರ್ಮಶ್ರವಣ, ನಾಲ್ಕು ಆರಾಧನೆಗಳ ಸೇವನೆಯನ್ನು ಒಳ್ಳೆಯ ರೀತಿಯಿಂದ ನಿರ್ವಿಘ್ನವಾಗಿ ಸಾಧಿಸುತ್ತಿರುವರು; ದುರ್ಭಿಕ್ಷೆ ಮೊದಲಾದವುಗಳ ಭಯವುಂಟಾಗಿಲ್ಲ, ಶರೀರದಲ್ಲಿ ಅಸಾಧ್ಯ ರೋಗವುಂಟಾಗಿಲ್ಲ, ಸ್ಮರಣಶಕ್ತಿ ಮತ್ತು ಜ್ಞಾನವನ್ನು ನಷ್ಟ ಮಾಡುವಂಥ ವೃದ್ಧಾವಸ್ಥೆಯೂ ಪ್ರಾಪ್ರವಾಗಿಲ್ಲ; ದಶಲಕ್ಷಣ ಧರ್ಮ ಮತ್ತು ರತ್ನತ್ರಯ ಧರ್ಮವನ್ನು ದೇಹದಿಂದ ಪಾಲಿಸುತ್ತಿದ್ದಾರೆ ಅಂಥವರು ಆಹಾರವನ್ನು ತ್ಯಾಗ ಮಾಡಿ ಸಮಾಧಿ ಮರಣ ಮಾಡುವುದು ಯೋಗ್ಯವಿಲ್ಲ.

ಧರ್ಮದ ಸಾಧನೆಯಾಗುತ್ತಿದ್ದರೂ ಕೂಡ ಅವನು ಆಹಾರದ ತ್ಯಾಗ ಮಾಡಿ ಮರಣ ಹೊಂದುತ್ತಿದ್ದರೆ ಅವನು ಧರ್ಮದಿಂದ ಪರಾಙ್ಮುಖನಾಗಿ ತ್ಯಾಗ, ವ್ರತ, ಶೀಲ, ಸಂಯಮ ಮೊದಲಾದವುಗಳಿಂದ ಮೋಕ್ಷದ ಸಾಧಕನು ಉತ್ತಮ ಮನುಷ್ಯ ಪರ್ಯಾಯದಿಂದ ವಿರಕ್ತನಾಗಿ ತನಗೆ ದೀರ್ಘಾಯುಷ್ಯವಿದ್ದರೂ ಕೂಡ ಮತ್ತು ಧರ್ಮದ ಸೇವನೆಯಾಗುತ್ತಿದ್ದರೂ ಕೂಡ ಆಹಾರಾದಿಗಳ ತ್ಯಾಗ ಮಾಡುವಂಥವನು ಆತ್ಮಘಾತನಾಗುತ್ತಾನೆ.

(ರತ್ನಕರಂಡ ಶ್ರಾವಕಾಚಾರ – ಶ್ರೀ ಎಂ. ಬಿ. ಪಾಟೀಲ, ಸೇಡಬಾಳ)

*ವಿವರಗಳಿಗೆ ನೋಡಿ: Durkhein .E. 1970 Suicide P. 228*

*Nicholas Abercrombie 1984 The dominant Ideology & Thesis P. 44*

೭೨೫. ಸವತಿ

ಸವತಿಗೆ ಮಕ್ಕಳಾದಾಗ ಹೆಣ್ಣು ತನ್ನ ತಾಯ್ತನಕ್ಕಾಗಿ ಚಿಂತಿಸುತ್ತಾಳೆ. ಸವತಿ ಮಾತ್ಸರ್ಯದ ಕುರಿತು ಈ ಕೃತಿಯಲ್ಲಿಯೂ ಉಲ್ಲೇಖವು ಬರುತ್ತದೆ. ಕರ್ಣಾಟಕ ಕಾದಂಬರಿ (೩-೩೯) ಸವತಿ ಮಾತ್ಸರ್ಯವಿರುವುದು ಬಹುಪತ್ನಿತ್ವ ಇರುವ ಕಡೆ ಎನ್ನುವುದು ಸ್ಪಷ್ಟವಾಗಿಯೇ ಇದೆ. ಅರಸೊತ್ತಿಗೆಯಲ್ಲಿ ಬಹುಪತ್ನಿಯರಿರುವುದು ಸಾಮಾನು ವಿಚಾರ. ರಾಜರ ಕುರಿತು ವರ್ಣಿಸುವಾಗ ಬಹುಪತ್ನಿವಲ್ಲಭ ಎಂಬ ಬಿರುದನ್ನು ಪ್ರಾಚೀನ ಕವಿಗಳು ಕೊಟ್ಟಿದ್ದಾರೆ. ರಾಜನು 'ಬಹುಪತ್ನೀವಲ್ಲಭ' ನಾಗುವ ಸಾಧ್ಯತೆಗಳು ಹೀಗಿವೆ.

ರಾಜನು ಸಂಪನ್ಮೂಲದ ಅತ್ಯುಚ್ಚ ಅಧಿಕಾರಿಯಾಗಿರುವುದರಿಂದ ಮದುವೆಯ ಸಂಬಂಧದ ಸುಲಭ ಸಾಧ್ಯತೆ. ಯಾಕೆಂದರೆ, ಮದುವೆಗೆ ಆರ್ಥಿಕತೆಯೂ ಪ್ರಬಲವಾದ ಕಾರಣ ವಾಗಿರುತ್ತದೆ.

ಮೈತ್ರಿಯ ಕಾರಣಕ್ಕಾಗಿ ಮದುವೆ. ಈ ಸಂದರ್ಭದಲ್ಲಿ ಹೆಣ್ಣನ್ನು ಒಂದು ಮಾಧ್ಯಮವಾಗಿ ಮಾಡಲಾಗುತ್ತದೆ. ಇದು ರಾಜಕೀಯ ಕಾರಣ.

"ಸವತಿ ಮಾತ್ಸರ್ಯ"ವು ಈ ನೆಲೆಯಿಂದ ಆರ್ಥಿಕ ಸಂಪನ್ಮೂಲತೆಯ ಮತ್ತೊಂದು ಪರಿಣಾಮವಾದ ಅಧಿಕಾರ, ರಾಜನನ್ನು (ಇಲ್ಲಿ ಗಂಡ) ಒಲಿಸಿಕೊಳ್ಳಬೇಕೆಂಬ ಬಯಕೆ: ಒಡೆತನ ಇತ್ಯಾದಿಗಳಿಂದ ಪ್ರೇರಿತವಾಗಿರುತ್ತದೆ. ಮೇಲು ವರ್ಗದಲ್ಲಿ ಸ್ಪಷ್ಟವಾಗಿ ಕಾಣಿಸುವ 'ಸವತಿ ಮಾತ್ಸರ್ಯ'ದ ಕಲ್ಪನೆಯು ಕೆಳವರ್ಗದಲ್ಲಿ ಇರುವುದಿಲ್ಲ. (ಇದಕ್ಕೆ ಚಾರಿತ್ರಿಕ ದಾಖಲೆಗಳಾಗಲೀ, ಕಾವ್ಯಗಳಲ್ಲಿ ಕುರುಹಾಗಲೀ ಅಷ್ಟಾಗಿ ಕಾಣಸಿಗುವುದಿಲ್ಲ.) ಯಾಕೆಂದರೆ ಅಲ್ಲಿ ಲಿಂಗಭೇದಕ್ಕೆ ಅನುಗುಣವಾಗಿ ದುಡಿಮೆಯಲ್ಲಿ ಹೆಚ್ಚಿನ ವ್ಯತ್ಯಾಸ ಇರುವುದಿಲ್ಲ. ಉತ್ಪಾದನೆಯ ಸರಿಸಮವಾದ ಹಂಚುವಿಕೆಯು ಸಾಮಾನ್ಯವಾಗಿ ಇರುತ್ತದೆ.

*ವಿವರಗಳಿಗೆ ನೋಡಿ: ಸಿ.ಪಿ. ಕೃಷ್ಣಕುಮಾರ್ ೧೯೭೬*

*ನಾಗಾರ್ಜುನನ ಕರ್ಣಾಟಕ ಕಾದಂಬರಿ ಪುಟ. ೨೦೧.*

೭೨೬. ಸಹಗಮನ

*ಕಟಿದವರ್ಗಳ್ವುದಟಿಸ್ತೊಡವರೇಟಿಸ್ತೊಡಮಂತವರಿಂಬಜೆಕ್ಕೆ ತಾ*
*ಮುಟಿವೊಡಮೇಬಿರಂತವರಣಂ ತಮಗಂ ಬರ್ದುಕಿಲ್ಲ ಧರ್ಮಮಂ ।*
*ಗಟಿಯಿಸಿಕೊಳ್ವು ದೊಂದೆಚದುರಿಂತುಟು ಸಂಸ್ಕೃತಿಧರ್ಮಮೇಕೆ ಬಾ*
*ಯಟಿವುದಿದೇಕೆ ಚಿಂತಿಸುವುದೇಕೆ ಪಲಂಬುವುದೇಕೆ ನೋವುದೊ ॥*

*(ಪಂಪ ಭಾರತ: ಅನಂತರಂಗಾಚಾರ್. ಎನ್ (ಅನು) ೧೯೭೭. ೨-೨೭)*

ಮೇಲಿನ ಪದ್ಯಭಾಗದಲ್ಲಿ ಉಕ್ತವಾದಂತೆ, ಸಾಯುವುದಕ್ಕಿಂತ ಜೀವಂತವಾಗಿದ್ದು ಕೊಂಡು ಉನ್ನತಿಯನ್ನು ಸಾಧಿಸಬಹುದು. ಬದುಕಿದ್ದುಕೊಂಡು ಧರ್ಮ ಸಂಗ್ರಹ ಮಾಡುವುದು ಒಳ್ಳೆಯದು ಎನ್ನುವುದು ಸಹಗಮನದ ನಿರಾಕರಣೆಯನ್ನು ಸೂಚಿಸುತ್ತದೆ. ಎರಡು ಜನ ಪತ್ನಿಯರಿದ್ದಾಗ ಒಬ್ಬಳ ಸಹಗಮನವನ್ನು ಆಚರಿಸುತ್ತಿದ್ದ ಪದ್ಧತಿಯು

ಇದ್ದಿರಬೇಕು.

ಪಂಪನ 'ವಿಕ್ರಮಾರ್ಜುನ ವಿಜಯ'ದಲ್ಲಿ ಬರುವ ವಿಧವೆಯರ ಪಾತ್ರಗಳು ವ್ಯಾಸ ಭಾರತದ ಚೌಕಟ್ಟಿನಲ್ಲಿಯೇ ಒಡ ಮೂಡಿದವುಗಳು. ವಿಧವೆಯರ ಸಹಗಮನವು ಮಹಾಕಾವ್ಯದ ಕಾಲಕ್ಕೆ ಅಪರಿಚಿತವಾಗಿತ್ತು ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಕ್ರಿ.ಶ ಐದನೆಯ ಶತಮಾನದ ಹೊತ್ತಿಗೆ ಸತಿಪದ್ಧತಿಯು ಜಾರಿಗೆ ಬಂದಿತು. ಈ ಕಾಲದಲ್ಲಿ ವಿಧವೆಯು ಬ್ರಹ್ಮಚರ್ಯವ್ರತವನ್ನು ಪಾಲಿಸಬೇಕು ಅಥವಾ ಸತಿ ಆಚರಣೆಯನ್ನು ಮಾಡಬೇಕು ಎನ್ನುವ ಪದ್ಧತಿಯು ಬಂದಿತು ಎಂದು ಇತಿಹಾಸಕಾರರು ಅಭಿಪ್ರಾಯ ಪಡುತ್ತಾರೆ. ಈ ಕಾರಣದಿಂದಲೇ ಮಹಾಭಾರತದಲ್ಲಿ ಸಹಗಮನವು ಕೆಲವೆಡೆಯಲ್ಲಿ ಮಾತ್ರವೇ ಉಕ್ತವಾಗಿದೆ. 'ಪಂಪ ಭಾರತ'ದಲ್ಲಿ ಪಾಂಡುವಿನ ಇಬ್ಬರು ಪತ್ನಿಯರಲ್ಲಿ ಒಬ್ಬಳು ಮಾತ್ರ (ಮಾದ್ರಿ) ಸಹಗಮನ ಮಾಡುತ್ತಾಳೆ. ಕುಂತಿಯು ಮಕ್ಕಳನ್ನು ಸಾಕುವ ಸಲುವಾಗಿ ನಿಲ್ಲಬೇಕಾಗುತ್ತದೆ. ಶೋಕ ಕ್ರಾಂತೆಯಾದ ಕುಂತಿಯನ್ನು ಕುರಿತು ತಾಪಸರು ಹೀಗೆ ಹೇಳುತ್ತಾರೆ:

ಸತಿಸಹಗಮನ ಮತ್ತು ವಿಧವೆಯರ ಸ್ಥಾನಮಾನವು ಪರಸ್ಪರ ಸಂಬಂಧಿಯಾದ ಮತ್ತು ನೈತಿಕ ನೆಲೆಯಲ್ಲಿ ಹೆಣ್ಣಿನ ಪರಿಕಲ್ಪನೆಯನ್ನು ರೂಪಿಸುವ ವ್ಯವಸ್ಥೆಯಾಗಿ ಮೂಡಿಬಂದಿರುವುದನ್ನು ಪ್ರಾಚೀನ ಕನ್ನಡ ಸಾಹಿತ್ಯವು ಹೇಳುತ್ತವೆ.

'ಮಾರ್ಕಂಡೇಯ ಪುರಾಣ: ವಿಷ್ಣು ಪುರಾಣ, ಮುಂತಾದವುಗಳು ಬ್ರಾಹ್ಮಣ ಸಂಸ್ಕೃತಿಯ ಅತ್ಯುಚ್ಚವಾದ ಕಾಲದಲ್ಲಿ ರೂಪುಗೊಂಡವು. ಈ ಕಾಲದಲ್ಲಿ ವಿಧವೆಯರು 'ಸಹಗಮನ'ದ ಮೂಲಕ ಗಂಡನನ್ನು ಅನುಸರಿಸಬೇಕಾಗಿ ಬಂತು. ಈ ಸಂಸ್ಕೃತಿಯ ಸಂಕೀರ್ಣವಾದ ಸ್ಥಿತಿಯನ್ನು ಆ ಕಾಲದ ಕಾವ್ಯಗಳು ಪ್ರತಿಪಾದಿಸುತ್ತವೆ'. "ಅಲ್ಲದೆ ಬೃಹದ್ಧರ್ಮ ಪುರಾಣ"ದಲ್ಲಿ ಪತಿಯೊಡನೆ ಚಿತೆಯನ್ನೇರುವ ಅವನ ವಿಧವೆ ಪತ್ನಿ ಎಂತಹ ಪಾಪ ಮಾಡಿದ್ದರೂ ಅವನ ಆತ್ಮಕ್ಕೆ ಶ್ರೇಯಸ್ಸು ಕೋರುತ್ತಾಳೆ ಎಂದಿದೆ. ಆದರೆ ಶಾಸ್ತ್ರಜ್ಞರು ತಾರುಣ್ಯಾವಸ್ಥೆಯನ್ನು ಪಡೆಯನ್ನು ಪಡೆಯದ ಪತ್ನಿಯನ್ನು, ಗರ್ಭಿಣಿಯನ್ನು ಮತ್ತು ಚಿಕ್ಕ ಮಕ್ಕಳಿರುವ ತಾಯಿಯನ್ನು ಸತಿಯಾಗದಂತೆ ನಿಷೇಧಿಸುತ್ತಾರೆ. ಅಂತೆಯೇ 'ಅಲ್‌ಬೆರೂನಿ' 'ವಯಸ್ಕ ಮಹಿಳೆಯರು ಮಕ್ಕಳಿರುವವರು ಸಹಗಮನ ಮಾಡುತ್ತಿರಲಿಲ್ಲ. ಎಂದಿದ್ದಾನೆ. ಆತನೇ ಮುಂದುವರಿದು, 'ವಿಧವೆಯು ನೆಂಟರಿಷ್ಟರ ಹೀನಾಯದಲ್ಲಿ ಬಾಳ್ವೆ ಮಾಡುವುದಕ್ಕಿಂತಲೂ ಜೀವಂತವಾಗಿ ಸುಟ್ಟು ಹೋಗುವುದು ಉತ್ತಮವೆಂದು ಭಾವಿಸಿದ್ದಳು' ಎನ್ನುತ್ತಾನೆ. ಆದರೆ ಈ ಕಾಲದಲ್ಲಿ (ಕ್ರಿ.ಶ.೫೦೦ರ ಬಳಿಕ) ವಿಧವೆಯರು ಸಹಗಮನ ಮಾಡಲೇಬೇಕೆಂಬ ನಿಯಮವಿರಲಿಲ್ಲ. 'ಪತಿಯಾಗುವ ಅಥವಾ ಬಿಡುವ ನಿರ್ಧಾರ ಸಹಗಮನ ಮಾಡಲಿದ್ದ ಮಹಿಳೆಯನ್ನು ಸಂಪೂರ್ಣವಾಗಿ ಅಥವಾ ಬಿಡುವ ನಿರ್ಧಾರ ಸಹಗಮನ ಮಾಡಲಿದ್ದ ಮಹಿಳೆಯನ್ನು ಸಂಪೂರ್ಣವಾಗಿ ಅವಲಂಬಿಸಿತ್ತು' ಎಂದು ವ್ಯಾಪಾರಿ ಸುಲೀಮಾನ್ (ಒಂಬತ್ತನೆಯ ಶತಮಾನ) ಹೇಳುತ್ತಾನೆ. ಹೀಗೆ ಬ್ರಾಹ್ಮಣ ಧರ್ಮವು ಅತ್ಯಂತ ಸಂಕೀರ್ಣವಾದ ಸ್ಥಿತಿಯನ್ನು ತಲುಪಿದ್ದರಿಂದ.

ಅದಕ್ಕೆ ವಿರೋಧವಾಗಿ ಹುಟ್ಟಿದ ಜೈನ ಧರ್ಮವು ಪರ್ಯಾಯ ಸಂಸ್ಕೃತಿಯ ಭಾವುಕತೆಯಲ್ಲಿ ವಿರಮಿಸಿತು. ಇದರ ಪರಿಣಾಮವೆಂದರೆ ಕೆಳವರ್ಗದ ಜನಜೀವನದ ಆಶಯಗಳನ್ನು ಇದು ಹೊಂದಿದ್ದರೂ ನಿರ್ದಿಷ್ಟವಾಗಿ ಪರ್ಯಾಯ ಸಂಸ್ಕೃತಿಯನ್ನೇ ಹುಟ್ಟು ಹಾಕುವ ಮುಖ್ಯ ಪ್ರಯತ್ನದಲ್ಲಿ ಇದು ತೊಡಗಿತು. "ಜೈನಧರ್ಮ ಸ್ತ್ರೀಯರಿಗೆ ಮೋಕ್ಷವಿಲ್ಲೆಂದು ಹೇಳಿದ್ದರೂ. ಅವರು ವ್ರತಗಳನ್ನು ಮಾಡಿ ಪುರುಷ ಜನ್ಮ ಪಡೆದು ಮೋಕ್ಷ ಪಡೆಯಬಹುದೆಂದು ಹೇಳಿತ್ತು. ಆದ್ದರಿಂದ ಸನ್ಯಾಸಿನಿಯರು, ಕಂತಿಯರು ಅಜ್ಜಿಯರು ಈ ಧರ್ಮದಲ್ಲಿ ಸ್ಥಾನ ಪಡೆದಿದ್ದರು. 'ಆದಿ ಪುರಾಣ'ದಲ್ಲಿ ಬರುವ ವಿಧವೆಯ ಪಾತ್ರವು ಜೈನಧರ್ಮದ ಪ್ರತಿನಿಧಿಯಾಗಿದೆ. ಯಾಕೆಂದರೆ ಈ ಪಾತ್ರವು ಸೂಚಿಸುವ ಅಂಶಗಳು ವೈದಿಕ ಮತದ ದೃಷ್ಟಿಕೋನದಿಂದ ಭಿನ್ನವಾಗಿದ್ದು ಜೈನತತ್ತ್ವವನ್ನು ಪ್ರತಿಪಾದಿಸುತ್ತದೆ. ಇಲ್ಲಿಯ ವಿಧವೆಗೆ ಪುನರ್ವಿವಾಹದ ಉಲ್ಲೇಖವಿಲ್ಲ. ಸ್ಮೃತಿಗಳು ಹೇಳಿರುವ ಅಪುತ್ರವತಿ ಯಾಗಿದ್ದಲ್ಲಿ 'ನಿಯೋಗ' ಆಚರಿಸಬಹುದೆನ್ನುವ ಕಲ್ಪನೆಯೂ ಪ್ರತಿಪಾದಿತವಾಗಿಲ್ಲ. ಆಯಸ್ಸು ಕೊನೆಯಾಗುವವರೆಗೆ ಗುರು ಪಂಚಕವನ್ನು ನೆನೆಯುತ್ತಾ ಮರಣವಪ್ಪುತ್ತಾಳೆ ಎಂದು ಪಂಪನು ಚಿತ್ರಿಸುತ್ತಾನೆ.

ಇಂತಹ ಸಹಗಮನ ಪಂಪಭಾರತದ ಮಾದ್ರಿಯಲ್ಲಿ ಪೌರಾಣಿಕವಾಗಿ ಕಂಡುಬಂದರೆ, ಅಜಿತಪುರಾಣದ ಗುಂಡಮಬ್ಬೆಯದು ಐತಿಹಾಸಿಕವಾಗಿದೆ. ಅನಂತನಾಥ ಪುರಾಣದಲ್ಲಿ ಸುನಂದೆಯ ಶವದೊಡನೆ ಚಿತೆಯೇರುವ ಚಂಡಶಾಸನನೊಂದಿಗೆ ಅವನ ರಾಣಿಯರು ಚಿತೆಯೇರುತ್ತಾರೆ. ಪತಿಯೊಂದಿಗೆ ಮಹಾಸತಿಯಾಗಿ ಸಾಯುವುದು ಅಷ್ಟೇ ಶ್ರೇಯವೆಂಬುದು ಜನರ ಮನೋಧರ್ಮವಾಗಿತ್ತು.

ಕ್ರಿ.ಶ. ಆರನೆಯ ಶತಮಾನದ ವೇಳೆಗೆ ರಾಜನನ್ನು 'ಪ್ರತ್ಯಕ್ಷ ದೈವ'ವೆಂದು ನಂಬುವ ಪರಿಕಲ್ಪನೆಯು ಬೆಳೆದು ಬಂತು. ಈ ಹೊತ್ತಿನಲ್ಲಿ ರಾಜನ ಬಿರುದುಗಳು ಸಾಮಾನ್ಯವಾಗಿ 'ರಾಜಾಧಿರಾಜ' 'ರಾಜಾ ಪ್ರತ್ಯಕ್ಷದೇವತಾ' ಮುಂತಾವುಗಳಿಂದ ಕೂಡಿದ್ದವು. ಇದೇ ಕಾರಣಕ್ಕೆ ರೂಪುಗೊಂಡ 'ಸತಿ' ಪದ್ಧತಿಯು ಹೊಸ ರಾಜಕೀಯ ವ್ಯವಸ್ಥೆಯ ಪರಿಣಾಮವೇ ಆಗಿತ್ತು. ರಾಜಕೀಯ ವ್ಯವಸ್ಥೆಯು ನಂಬಿದ ಹೊಸ ನೈತಿಕ ಮೌಲ್ಯಗಳ ಪರಿಣಾಮವೆಂದರೆ – ಸತಿಪದ್ಧತಿ, 'ಮೇಲು ವರ್ಗವು ನಂಬಿದ ಮೌಲ್ಯಗಳ ಆದರ್ಶೀಕರಣ' ವನ್ನು ಆ ಕಾಲದ ಜನಜೀವನದ ಕ್ರಮವನ್ನು ವಿಸ್ತರಿಸುವ ಯತ್ನವನ್ನು ರಾಜಕೀಯ ವ್ಯವಸ್ಥೆಯು ಮಾಡಿದುದನ್ನು ಕಾಣಬಹುದು. ಪದ್ಧತಿಗೂ ನೈತಿಕ ಮೌಲ್ಯದ ವಿಸ್ತೃತತೆಗೂ ಸಂಬಂಧವಿದೆ. ಕಾರಣಗಳು ಹೀಗಿವೆ.

ಸತಿ ಪದ್ಧತಿಯ ಮೂಲಕವೇ ಮೋಕ್ಷವು ಸಿಗುವುದೆಂಬ ನಂಬಿಕೆ ಅಂದರೆ ಇದು ಗಂಡನೇ ಪರದೈವೆಂಬ ನಂಬಿಕೆಯ ಬೆಳವಣಿಗೆಯಾಗಿದೆ. ಸತಿ ಪದ್ಧತಿಯೆಂದರೆ ಅತ್ಯಂತ ಪವಿತ್ರವಾದ ಕೆಲಸವೆನ್ನುವ ಪರಿಕಲ್ಪನೆಯನ್ನು ಈ ಕಾಲದ ಸಾಹಿತ್ಯವು ಪ್ರತಿಪಾದಿಸುತ್ತವೆ. ಇದರೊಂದಿಗೆ ಊಹಿಸಬಹುದಾದ ಮತ್ತೊಂದು ಕಾರಣವೆಂದರೆ – ರಾಜಕೀಯ ಯುದ್ಧಗಳು ಮತ್ತು ಹೆಣ್ಣಿನ ಅಪಹರಣದ ಸಾಧ್ಯತೆ.

- 'ಏಕಪತಿತ್ವ ಮತ್ತು ಹೆಣ್ಣಿನ ಪಾತಿವ್ರತ್ಯದ ಮೇಲೆ ನಂಬಿಕೆಯು ಹೆಚ್ಚಾಗಿರುವುದು.
- ಜಾತಿಯ ನಂಬಿಕೆಗಳು ಹೆಚ್ಚಾಗಿರುವುದು.
- ಆಸ್ತಿಯ ಮೇಲೆ ಏಕ ಪ್ರಭುತ್ವ ರೂಪಿತವಾದುದು.

ಬಹುಶಃ ಈ ಮೇಲಿನ ಕಾರಣಗಳಿಂದ 'ಸತಿಪದ್ಧತಿ'ಯ ಆಚರಣೆಯನ್ನು ಸ್ತ್ರೀಯರು ಆಚರಿಸುವ ಸ್ಥಿತಿಯು ಬಂತು. ಒಂದು ವೇಳೆ 'ಸತಿ'ಯಾಚರಣೆ ಮಾಡದಿದ್ದ ಸ್ತ್ರೀಯು (ವಿಧವೆ) ಸರಳವಾದ ಜೀವನವನ್ನು ನಡೆಸಬೇಕೆಂಬ ನಿಯಮವು ಬಂದಿರಬೇಕು. ಹೆಣ್ಣಿನ ಅಪಯಶಸ್ಸಿನ (ಅವಲಕ್ಷಣದ) ಕಾರಣದಿಂದಲೇ ಗಂಡನ ಮರಣವುಂಟಾಗುತ್ತದೆ. ಆ ಕಾರಣದಿಂದಲೇ ಹೆಣ್ಣು (ವಿಧವೆಯು) ವ್ರತಾಚರಣೆ ಮಾಡಬೇಕೆಂಬ ನಂಬಿಕೆಯು ನಾಗವರ್ಮನ ಕೃತಿಯಲ್ಲಿ ಪ್ರತಿಪಾದಿತವಾಗಿದೆ. (ಅದೇ ೬-೧೯೩, ೧೯೮) ಮೇಲೆ ಉಲ್ಲೇಖಿಸಲಾದ ಕಾರಣಗಳಿಂದ ಈ ಮಾತು ಸ್ಪಷ್ಟವಾಗುತ್ತದೆ. ಬ್ರಾಹ್ಮಣಧರ್ಮದ ಅತ್ಯಂತ ವೈಭವ ಕಾಲದಲ್ಲಿ ಸೃಷ್ಟಿಯಾದ 'ಕಾದಂಬರಿ'ಯಲ್ಲಿ ಈ ಮಾತುಗಳು ತೀರಾ ಸಹಜವಾಗಿ ಹೊರ ಹೊಮ್ಮಿದೆ.

ವಿಧವೆಯರ ಸಹಗಮನವು ಮಹಾಕಾವ್ಯದ ಕಾಲಕ್ಕೆ ಅಷ್ಟೊಂದು ಪ್ರಚಲಿತ ವಾಗಿರಲಿಲ್ಲ. ಕ್ರಿ.ಶ. ೫ನೆಯ ಶತಮಾನದ ಅನಂತರ ಸತಿಪದ್ಧತಿಯು ಜಾರಿಗೆ ಬಂತು. ಈ ಕಾಲದಲ್ಲಿ ವಿಧವೆಯು ಬ್ರಹ್ಮಚರ್ಯವ್ರತವನ್ನು ಪಾಲಿಸಬೇಕು ಅಥವಾ ಸತಿಯಾಚರಣೆ ಮಾಡಬೇಕು ಎನ್ನುವ ಪದ್ಧತಿಯು ಜಾರಿಗೆ ಬಂತು ಎಂದು ರೊಮಿಲಾ ಥಾಪರ್ ಹೇಳುತ್ತಾರೆ. (೧೯೮೨ ಪು.೧೫೨) ಈ ಕಾರಣದಿಂದ ಮಹಾಭಾರತದಲ್ಲಿ ಕೆಲವೆಡೆ ಮಾತ್ರ ಸತಿಯಾಚರಣೆಯ ವಿವರ ಬರುತ್ತದೆ. ಹತ್ತನೆಯ ಶತಮಾನದ ತರುವಾಯ ಉಲ್ಬಣಗೊಂಡ 'ಸತಿಪದ್ಧತಿ'ಯು ದಕ್ಷಿಣ ಭಾರತದಲ್ಲೆಲ್ಲಾ ಪ್ರಚುರಗೊಂಡಿತು. ಪಲ್ಲವ, ಚೋಳ, ಪಾಂಡ್ಯ ಮೊದಲಾದ ಮನೆತನಗಳ ಶಾಸನಗಳ ಮೂಲಕ ಇವನ್ನು ಅರ್ಥಮಾಡಿಕೊಳ್ಳಬಹುದು.

ಕಾಲಾನಂತರದಲ್ಲಿ ಹೂಣರು ಗುಪ್ತರು ವಿಶಾಲ ಸಾಮ್ರಾಜ್ಯದ ಮೇಲೆ ಎರಗಿ ಅದನ್ನು ಚೆಲ್ಲಾಪಿಲ್ಲಿಯಾಗಿಸಿಬಿಟ್ಟರು. ಅವರ ಜೊತೆಯಲ್ಲಿ ಗುರ್ಜರರೇ ಮೊದಲಾದ ಅನೇಕ ವಿದೇಶೀಯ ಸಮುದಾಯಗಳು ಭಾರತವನ್ನು ಪ್ರವೇಶಿಸಿದುವು ಹಾಗೂ ತಮ್ಮ ತಮ್ಮ ಸಾಮ್ರಾಜ್ಯಗಳನ್ನು ಸ್ಥಾಪಿಸಿದವು. ಅವುಗಳಿಂದ ಭಾರತದಲ್ಲಿ ರಾಜಪೂತರ ಅನೇಕ ಸಮುದಾಯಗಳು ಜಾಟರು, ಗುರ್ಜರರು ಮೊದಲಾದ ಸಮುದಾಯಗಳು – ಹುಟ್ಟಿ ಕೊಂಡುವು. ಸಮಾಜದ ಪವಿತ್ರತೆಯ ಬಗೆಗಿನ ಕಲ್ಪನೆ ದಿನೇ ದಿನೇ ಹದಗೆಡಲಾರಂಭಿಸಿತು. ಇವುಗಳಲ್ಲಿ ಅನೇಕ ಸಮುದಾಯಗಳು ತಮ್ಮ ತಾಯ್ನಾಡುಗಳಲ್ಲಿ ತಮ್ಮ ಹೆಣ್ಣುಮಕ್ಕಳನ್ನು ಕೊಂದುಹಾಕುವ ಪದ್ಧತಿಯನ್ನಿರಿಸಿಕೊಂಡಿದ್ದಂಥವು. ಅವರು ಭಾರತಕ್ಕೆ ಬಂದ ಮೇಲೂ ಅನೇಕ ಅಂಶಗಳಲ್ಲಿ ತಮ್ಮ ಹಿಂದಿನ ಪದ್ಧತಿಗಳನ್ನು ಮುಂದುವರಿಸಿಕೊಂಡು ಬಂದರು. ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಸಹಗಮನ ಪದ್ಧತಿ ಒಂದಲ್ಲ ಒಂದು ರೂಪದಲ್ಲಿ ಎಂದಿನಿಂದಲೂ ನಡೆದುಕೊಂಡು ಬಂದಿತ್ತು ಎಂಬುದು ನಿಜ. ಆದರೆ, ಅದೀಗ

ತುಂಬ ಪ್ರಬಲವಾಗಿ ಪರಿಣಮಿಸಿತು; ಅಗ್ನಿ ಪ್ರವೇಶದ ರೂಪವನ್ನೇ ಪಡೆದುಕೊಂಡುಬಿಟ್ಟಿತು.

ಸಹಗಮನ ಪದ್ಧತಿಯು ಪ್ರಾಚೀನ ಕರ್ನಾಟಕದಲ್ಲಿ ಪ್ರಚಲಿತದಲ್ಲಿದ್ದರೂ, ಕೆಲವಾರು ವೀರಗಲ್ಲುಗಳನ್ನು ಸತ್ತವೀರನ ಹೆಂಡತಿಯೇ ಹಾಕಿಸಿರುವ ನಿದರ್ಶನಗಳು ದೊರೆಯುತ್ತವೆ. ಇದರಿಂದ ಸಹಗಮನ ಪದ್ಧತಿಯು ಕಡ್ಡಾಯವಾದ ಸಂಪ್ರದಾಯವಾಗಿರಲಿಲ್ಲವೆಂದು ತೋರುತ್ತದೆ.

*ವಿವರಗಳಿಗೆ ನೋಡಿ: ಮಹಾಸತಿ*

*ಡಾ. ಆರ್. ಶೇಷಶಾಸ್ತ್ರಿ ೨೦೦೪ ಕರ್ನಾಟಕದ ವೀರಗಲ್ಲುಗಳು ಪುಟ. ೧೦೬*

*ಭಗವತ್ ಶರಣ್ ಉಪಾಧ್ಯಾಯ ೨೦೦೪*

*ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ ಪುಟ. ೨೦೧-೨೦೨*

*ಎಸ್.ಕೆ.ಡೇ. (ಸಂ) ೧೯೭೧ ಯುಗಯಾತ್ರೀ ಭಾರತೀಯ ಸಂಸ್ಕೃತಿ*

*(ಮೊದಲ ಸಂಪುಟ) ಪುಟ. ೪೫೪-೪೫೫*

*Althsar A.S. 1962 The Position of Women in Hindu Civilisation P.128*

*ಎಂ. ಎಂ. ಕಲಬುರ್ಗಿ ೧೯೮೮ ಮಾರ್ಗ-ಸಂಪುಟ. ೧*

*Barth .A. 1963 The Religion of India P. 96*

*ವೀರಣ್ಣ ಸಿ. ೧೯೮೬ ಪ್ರಾಚೀನ ಸಾಹಿತ್ಯ ರಾಜಸತ್ತೆಯ ವೈಭವದ ಕಾಲ ಪುಟ. ೬೭-೬೮*

**೭೨೭. ಸಾಂಖ್ಯ**

ಸಾಂಖ್ಯ ಎಂಬ ಶಬ್ದದ ಅರ್ಥ ಎಣಿಸುವುದು ಎಂದು. ಇದು ಮೊದಲಿಗೆ ರೂಪುಗೊಂಡ ದರ್ಶನ ಎಂದು ತೋರುತ್ತದೆ. ಆರಂಭಿಕ ಸಾಂಖ್ಯ ದರ್ಶನದ ಪ್ರಕಾರ ಜಗತ್ತಿನ ಸೃಷ್ಟಿಗೆ ಯಾವುದೇ ಬಗೆಯ ದೈವಶಕ್ತಿಯು ಸಹ ಇರಬೇಕಾದ ಅಗತ್ಯವಿಲ್ಲ. ಜಗತ್ತು ಸೃಷ್ಟಿಯಾಗಿ ವಿಕಾಸಗೊಂಡುದಕ್ಕೆ ದೇವರಿಗಿಂತ ಪ್ರಕೃತಿಯೇ ಹೆಚ್ಚು ಕಾರಣ. ಇದು ವಿಚಾರವಾದಿ ಹಾಗೂ ವೈಜ್ಞಾನಿಕ ದೃಷ್ಟಿಕೋನ. ಕ್ರಿ.ಶ. ನಾಲ್ಕನೆಯ ಶತಮಾನದ ವೇಳೆಗೆ ಸಾಂಖ್ಯ ದರ್ಶನ ಪದ್ಧತಿಯಲ್ಲಿ ಪ್ರಕೃತಿಯ ಜೊತೆಗೆ ಪುರುಷ ಅಥವಾ ಚೈತನ್ಯವೆಂಬ ಇನ್ನೊಂದು ಅಂಶವನ್ನು ಸೇರಿಸಿ ಜಗತ್ತಿನ ಸೃಷ್ಟಿಗೆ ಪ್ರಕೃತಿ ಮತ್ತು ಪುರುಷ ಇವೆರೆಡೂ ಕಾರಣ ಎಂದು ಹೇಳಲಾಯಿತು. ಈ ಹೊಸ ದೃಷ್ಟಿಯ ಪ್ರಕಾರ ಪ್ರಕೃತಿ ಹಾಗೂ ಚೈತನ್ಯ ಇವರೆಡೂ ಸಂಯುಕ್ತವಾಗಿ ಜಗತ್ತನ್ನು ಸೃಷ್ಟಿಸಿದವು. ಹೀಗೆ ಆರಂಭದಲ್ಲಿ ಸಾಂಖ್ಯದರ್ಶನವು ಭೌತವಾದಿಯಾಗಿದ್ದು, ಅನಂತರ ಚೈತನ್ಯವಾದದತ್ತ ವಾಲಿತು. ಆದರೂ ಈ ದರ್ಶನದ ಪ್ರಕಾರ ವ್ಯಕ್ತಿಯು ನಿಜವಾದ ಜ್ಞಾನರ್ಜನೆಯ ಮೂಲಕ ಮುಕ್ತಿಯನ್ನು ಗಳಿಸಬಹುದು. ಅವನ ಸಂಕಟಗಳೆಲ್ಲಾ ಆಗ ಪರಿಹಾರವಾಗುತ್ತವೆ. ಈ ಜ್ಞಾನವನ್ನು ಗ್ರಹಿಕೆ, ಊಹೆ ಮತ್ತು ಶ್ರವಣ (ಶಬ್ದ ಕೇಳುವುದು)ಗಳಿಂದ ಪಡೆಯಬಹುದು. ಇಂತಹ ವಿಧಾನವು ವೈಜ್ಞಾನಿಕ ಚಿಂತನದ ಹೆಗ್ಗುರುತು.

*ವಿವರಗಳಿಗೆ ನೋಡಿ: ಆರ್. ಎಸ್. ಶರ್ಮ ೨೦೦೭ ಪ್ರಾಚೀನ ಭಾರತ ಪುಟ. ೨೪೭-೨೪೮.*

## ೭೨೮. ಸಾಮಂತ

**ಸಾಮಂತ ಚೂಡಾಮಣಿ**ಯನಣಿಯರಂ ಬಂದು ಕಂಡು ಸುರೇಂದ್ರಂ

(ಪಂಪ ಭಾರತ ೭-೯೫)

ಸಾಮಂತರೆಂದರೆ ಹತ್ತಿರದವರು ಮತ್ತು ಪರ್ಯಾಯ ಆಡಳಿತಗಾರರು. ಆಡಳಿತದ ವಿಕೇಂದ್ರಿಕರಣದ ಸೂಚನೆಗಳಿವು.

ಅಗ್ರಹಾರದ ಅರ್ಥ ಹುಡುಕಬೇಕು

ಸಾಮಂತ ಚೂಡಾಮಣಿಯೆಂದರೆ ಸಾಮಂತರ ಸಾಲಿನಲ್ಲಿ ಚೂಡಾಮಣಿಯಾಗಿದ್ದವನು. ಅಂದರೆ ಸಾಮಂತ ಶ್ರೇಷ್ಠವೆಂದರ್ಥ. ಚೂಡಾಮಣಿಯೆಂದರೆ ತಲೆಯ ಆಭರಣ. ಚೂಡಾರತ್ನವೆಂದೂ ಕರೆಯುತ್ತಾರೆ.

*ವಿವರಗಳಿಗೆ ನೋಡಿ : Romila Thapar 1975 The Past and Prejudice P. 56*

*ಡಾ. ವಿ. ಚಿದಾನಂದ ಮೂರ್ತಿ ೨೦೦೮ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ.*

## ೭೨೯. ಸಾರ್ಥಾಧಿಪತಿ

ಬೆಲೆಬಾಳುವ ಸರಕಿನ ಬಂಡಿಗಳ ಶ್ರೇಣಿಗೆ ಒಡೆಯ.

(ವ್ಯಾಪಾರಿಗಳ ತಂಡದ ಮುಖ್ಯಸ್ಥ, ವರ್ತಕರ ಮುಖಂಡ ಎಂಬ ಅರ್ಥಗಳಿವೆ.)

ಸರಕು ಸಾಗಾಣಿಕೆ ಎನ್ನುವುದು ವ್ಯವಹಾರ ಉದ್ದಿಮೆಯಲ್ಲಿ ಪ್ರಮುಖ ಪಾತ್ರ ವಹಿಸಿದಾಗ ಈ ರೀತಿಯ ಪರಿಭಾಷೆಗಳು ಹುಟ್ಟಿಕೊಳ್ಳುತ್ತದೆ.

ವರ್ತಕರಲ್ಲಿ ಬೇರೆ ಬೇರೆ ವರ್ಗೀಕರಣ ಇರುವುದನ್ನು ಇದು ಸೂಚಿಸುತ್ತದೆ. ವರ್ತಕರಲ್ಲಿ ಮೇಲುಜಾತಿಯ ವರ್ತಕರನ್ನು ಸಾರ್ಥಾಧಿಪತಿ ಎಂದು ಕರೆಯಲಾಗಿದೆ. ಮತ್ತು ವರ್ತಕರು ಬೇರೆ ಬೇರೆ ಸ್ಥಳಗಳಿಂದ ಸರಕುಗಳನ್ನು ತಂದು ಮಾರಾಟ ಮಾಡುವ ಸಂಗತಿಯೂ ಇದರಲ್ಲಿ ವ್ಯಕ್ತವಾಗುತ್ತದೆ.

## ೭೩೦. ಸಾಲಿಗರ ಬಿರ್ದ್ದಿ

*ಪಿರಿದು ತಂತ್ರಮಂ ಮಾಡಿ* ***ಸಾಲಿಗರ***

***ಬಿರ್ದ್ದಿಯ*** *ಪೇಟ್ದಿಂತೆ ನಂದನ ನಾಡಂ ಕಿಡಿಸಿ ಸಾಮಂತ ಮಹಾಸಾಮಂತರ್ಕ*

*ಳಂ ದ್ರವ್ಯದಿಂ ಭೇದಿಸಿ ತತ್ಪ್ರತಿಪಕ್ಷಮಂ..............*

(ಡಿ.ಎಲ್.ಎನ್.೨೦೦೯ ಪುಟ. ೨೩೩).

ಸಾಲಿಗರೆಂದರೆ ನೇಕಾರರು ಎಂದರ್ಥ. ವಿರ್ದಿನ ಎಂದರೆ ಅತಿಥಿ, ಬಿರ್ದ್ದಿ ಎಂಬುದು (ವೃದ್ಧಾ) ಮುದುಕಿ ಹೆಂಗುಸು ಎಂಬ ಅರ್ಥವನ್ನು ಕೊಡುತ್ತದೆ. ಆದ್ದರಿಂದ ನೇಕಾರರ ವೃದ್ಧಸ್ತ್ರೀ ಎಂಬ ಅರ್ಥವೇ ಇಲ್ಲಿ ಬಂದಿದೆ. ವಾಸ್ತವವಾಗಿ ಬೀದಿಗಳಿಗೂ ಜಾತಿಗಳಿಗೂ ಇರುವ ನಂಟು ಬಹಳ ಮುಖ್ಯವಾದುದು. ಉದಾ: ಬ್ರಾಹ್ಮಣ ಬೀದಿ; ನೇಕಾರ ಬೀದಿ; ಇತ್ಯಾದಿ.

**೭೩೧. ಸಾಷ್ಟಾಂಗ ಪ್ರಣತ**

*ಅಂತು ವಜ್ರದಂತಚಕ್ರವರ್ತಿ ಲಬ್ಧಾವಧಿಲೋಚನಂ ತ್ರೈಲೋಕ್ಯಲೋಚನಂಗೆ **ಸಾಷ್ಟಾಂಗಪ್ರಣತನಾಗಿ** ಮಗುಬ್ಬಿ ಬಂದು..................*

*(ಕೆ.ಎಲ್. ನರಸಿಂಹಶಾಸ್ತ್ರಿ ೨೦೦೯ ಆದಿಪುರಾಣ ೩-೨೯ವ )*

ಸಾಷ್ಟಾಂಗ ಪ್ರಣತನೆಂದರೆ ಸಾಷ್ಟಾಂಗ ನಮಸ್ಕಾರವೆಂದು ಅರ್ಥ. ಆದುದರಿಂದ ಇಲ್ಲಿ ಬರುವ ಸಾಷ್ಟಾಂಗ ನಮಸ್ಕಾರವೆನ್ನುವುದಕ್ಕೆ ವಿಶೇಷ ಅರ್ಥವಿದೆ. ಸ+ಅಷ್ಟಾಂಗ ಪ್ರಣಾಮಗಳು ಎಂಬುದು ಇದರ ಭಾವಾರ್ಥ. ಅಷ್ಟಾಂಗವೆಂದರೆ ದೇಹದ ಎಂಟು ಅಂಗಗಳು. ಹಣೆ; ಎದೆ; ಎರಡುಕಾಲು; ಮೂಗು; ಎರಡೂ ಮಂಡಿ; ಎರಡು ಪಾದಗಳು; ಭೂಮಿಗೆ ಸ್ಪರ್ಶಿಸುವಂತೆ ನಮಸ್ಕರಿಸುವ ವಿಧಿಯೇ ಸಾಷ್ಟಾಂಗ ನಮಸ್ಕಾರ. ಯೋಗಶಾಸ್ತ್ರ ಅಷ್ಟಾಂಗ ಯೋಗದ ವಿಚಾರ ಬರುತ್ತದೆ.

ಇನ್ನೊಂದು ರೀತಿಯಲ್ಲಿ – ಉರ(ಎದೆ), ಶಿರ, ಮನ, ಮಾತು, ಹಸ್ತ, ಪಾದ, ದೃಷ್ಟಿ. ಮೂಗು– ಈ ಅಷ್ಟಾಂಗಗಳ ಸಮೇತ ನಮಸ್ಕರಿಸುವುದು.

**೭೩೨. ಸಿಂಗದಮುಪ್ಪು**

*"**ಸಿಂಗದ ಮುಪ್ಪಂ**ನೆಗಟ್ದೇಗಾಂಗೇಯರಮುಪ್ಪುಮಿೞಿಕೆವಡೆಗುಮೇ................"*

*(ಪಂಪಭಾರತ ೧೦-೧೯)*

ಇೞಿಕೆ=ಕಡಿಮೆಯಾಗು, ತಗ್ಗು, ಅವಜ್ಞೆಗೆ ಗುರಿಯಾಗು ಎಂದರ್ಥ.

ಸಿಂಹದ ಮುಪ್ಪು ಆನೆಗಳಿಗೆ ಅವಜ್ಞೆಯೇ? ಅದೇ ರೀತಿಯಲ್ಲಿ ಭೀಷ್ಮರ ಮುಪ್ಪನ್ನು ಅವಜ್ಞೆ ಮಾಡುವಂತಿಲ್ಲ ಎಂಬುದು ಭಾವಾರ್ಥ. ಅವಜ್ಞೆ ಅಥವಾ ಔದಾಸೀನ್ಯವು ಮನುಷ್ಯರಿಗೆ ಮಾಡುವ ಅವಮಾನವೂ ಹೌದು. ಸಿಂಹವನ್ನು ಮೃಗರಾಜ ಎಂದು ಕರೆಯುವುದಿದೆ. ಅರಣ್ಯ ನೀತಿಯ ಪ್ರಕಾರ ಸಿಂಹವು ಆನೆಯ ಕುಂಭಸ್ಥಲ (ಹಣೆಯ ಭಾಗ.) ಹೊಡೆದು ಸಾಯಿಸುತ್ತದೆ. ಆದುದರಿಂದ ಆನೆಯಂಥ ದೊಡ್ಡ ದೇಹದ ಪ್ರಾಣಿಯೂ ಕೂಡಾ ಸಿಂಹಕ್ಕೆ ಹೆದರುತ್ತದೆ. ಅರಣ್ಯ ಶಾಸ್ತ್ರದ ಹಿನ್ನೆಲೆಯಿಂದ ಹೇಳುವುದಿದ್ದರೆ – ಶಕ್ತಿಶಾಲಿ ಬದುಕುತ್ತಾನೆ. ದುರ್ಬಲ ಸಾಯುತ್ತಾನೆ. ಇದರಲ್ಲಿ ಶಕ್ತಿ ಪ್ರಧಾನ ಹೊಡೆದು ತಿನ್ನುವುದು ಅರಣ್ಯನ್ಯಾಯ ಆದುದರಿಂದ ಸಿಂಹವು ಮುಪ್ಪಾದರೂ ಮೃಗರಾಜನು ರಾಜನೇ. ಅದರಂತೆ ಭೀಷ್ಮ – ಮುಪ್ಪಾದರೂ ಅವನು ಸಿಂಹದ ತರಹ ಬದುಕಿದ್ದಾನೆಂದು ಭಾವಾರ್ಥ.

*ವಿವರಗಳಿಗೆ ನೋಡಿ: ಡಿ.ಎಲ್. ನರಸಿಂಹಾಚಾರ್ ೧೯೭೧ ಪಂಪ ಭಾರತ ದೀಪಿಕೆ*

*ಎನ್. ಅನಂತರಂಗಾಚಾರ್ ೨೦೧೦ ಪಂಪ ಭಾರತಂ.*

**೭೩೩. ಸಿಬಿಗೆ**

*ಪೆಂಡವಾಸದಗ್ಗಳದ ಸೂಳೆಯರ್ಕಳುಂ ಬೆರಸು ವೇಸರಿಗಟ್ಟಿಗಳುಂ*

*ಪಿಡಿಗಳುಂ ಸಿಬಿಗೆಗಳುಮನೇಜೆ......................(ವಡ್ಡಾರಾಧನೆ ಪುಟ.೧೨೪-೧೫)*

***ಶಿವಿಗೆಯ** ಕೆಲದೊಳ್ ತಾನುಂ ತುರಂಗಾರೂಢನಾಗಿ ಬರ್ಪಂದಮಂ.............*

*(ಚಾವುಂಡರಾಯ ಪುರಾಣ ಪುಟ.೩೦೪)*

ಪಲ್ಲಕ್ಕಿ, ದಂಡಿಗೆ ಎಂದು ಅರ್ಥ. ಹೆಣವನ್ನು ಹೊರುವ ಸಾಧನ; ಶವವನ್ನು ಸ್ಮಶಾನಕ್ಕೂ, ಸಮಾಧಿಗೂ ಕೊಂಡೊಯ್ಯಲು ಚಟ್ಟವನ್ನು ನಿರ್ಮಿಸುತ್ತಾರೆ. ಚಟ್ಟವು ಸಾಮಾನ್ಯವಾಗಿ ಬಿದಿರಿನಿಂದ ರಚಿಸಲಾಗುತ್ತದೆ. ಚಟ್ಟವನ್ನು ಹೊರಲು ನಾಲ್ಕು ಜನರು ಇರುತ್ತಾರೆ. ಮೇಲಿನ ಎರಡು ಗದ್ಯಭಾಗಗಳಲ್ಲಿ ಪಲ್ಲಕ್ಕಿ, ದಂಡಿಗೆ ಎಂಬ ಅರ್ಥವೇ ಬಂದಿದೆ.

**೭೩೪. ಸೀಮಾ ಸಂಬಂಧದ ಕಲಹ**

ಸೀಮೆಯೆಂದರೆ ಎಲ್ಲೆ, ಗಡಿ, ಮೇರೆ ಎಂದರ್ಥ. ಇದು ಎಲ್ಲೆಯ ಗುರುತು ಕೂಡಾ ಹೌದು. ಊರಿನ ಮೇರೆಯನ್ನು ಸೀಮಾರೇಖೆಯು ಗುರುತಿಸುತ್ತದೆ. ಸೀಮಾರೇಖೆಯನ್ನು ದಾಟಿದಾಗ ಎರಡು ಸೀಮೆಯವರಿಗೆ ಜಗಳವಾಗುವುದು ಸಹಜ.

ನಾವು ಗಡಿಕಲ್ಲುಗಳು ಎಂಬ ಶಾಸನ ಪ್ರಭೇದ ಒಂದರ ಶೀರ್ಷಿಕೆಯಡಿಯಲ್ಲಿ ನೋಡುವಂತೆ, ಒಂದು ಗ್ರಾಮಕ್ಕೂ ಮತ್ತೊಂದು ಗ್ರಾಮಕ್ಕೂ ಗ್ರಾಮಗಳ ಎಲ್ಲೆಗಳ ಬಗ್ಗೆ ಆಗಾಗ ಜಗಳಗಳು ಆಗುತ್ತಿದ್ದವು. ಇವು ಕೆಲವೊಮ್ಮೆ ಪ್ರಾಣ ಹಾನಿಯಾಗದೆ ತೀರ್ಮಾನವಾಗುತ್ತಿದ್ದುದು ಉಂಟು. ಕೆಲವೊಮ್ಮೆ ಉದ್ವೇಗದಿಂದ ಕೈ ಕೈ ಮಿಲಾಯಿಸಿ ಪ್ರಾಣ ಹತ್ಯೆಗೆ ಆಸ್ಪದ ನೀಡಿದ ನಿದರ್ಶಗನಳೂ ಉಂಟು. ಇಂಥ ಹೋರಾಟದಲ್ಲಿ ಮಡಿದವರಿಗೆ ಸ್ಮಾರಕಗಳನ್ನು ಆಯಾ ಗ್ರಾಮದವರು ಹಾಕಿಸುತ್ತಿದ್ದರು. ಈ ದೃಷ್ಟಿಯಿಂದ ಚಿಕ್ಕಮಗಳೂರು ತಾಲ್ಲೂಕಿನ ಒಂದು ಶಾಸನ ಗಮನಾರ್ಹವಾಗಿದೆ. 'ಉಪ್ಪರವಳ್ಳಿ' ಎಂಬ ಗ್ರಾಮದವರಿಗೂ ಮತ್ತು ಆ ಗ್ರಾಮದ ಪಕ್ಕದ ಗ್ರಾಮದವರಿಗೂ ಸೀಮಾ ಸಂಬಂಧದಲ್ಲಿ ವ್ಯಾಜ್ಯ ನಡೆಯುತ್ತದೆ. ನಡೆದ ಈ ಜಗಳದಲ್ಲಿ ಎರಡೂ ಕಡೆಯವರಲ್ಲಿ ಕೆಲವರು ಸಾಯುತ್ತಾರೆ. ನಡೆಯುತ್ತಿರುವ ಈ ಅನ್ಯಾಯವನ್ನು ಕಂಡು ಬೇರೆಯ ಊರಿನ ಹಿರಿಯರು ನಡುವೆ ಪ್ರವೇಶ ಮಾಡಿ ವೃಥಾ ಸಾವುನೋವು ಸಲ್ಲದು ಎಂದು ಇಬ್ಬರಿಗೂ ಬುದ್ಧಿವಾದ ಹೇಳಿ ಹಿಂದಿನ ದಾಖಲೆಗಳನ್ನು ಪರಿಶೀಲಿಸಿ ಮೇರೆಗಳನ್ನು ನಿಗದಿ ಮಾಡಿ ಜಗಳದಲ್ಲಿ ವ್ಯಕ್ತಿಗಳ ಮನೆಯವರಿಗೆ ಪರಿಹಾರ ದೊರಕಿಸಿ ಕೊಡುತ್ತಾರೆ.

ಕ್ರಿ.ಶ ೧೪೦೨ರ ಒಂದು ವೀರಗಲ್ಲು ಎರಡು ಊರುಗಳವರಿಗೆ ನಡೆದ ಜಗಳವನ್ನು ತಿಳಿಸುತ್ತದೆ. ಮಲ್ಲಿಸೆಟ್ಟಿ ಎಂಬುವನನ್ನು ಲಾಯದಕೇರಿ ಎಂಬ ಗ್ರಾಮದ ಮಲ್ಲಿಶೆಟ್ಟಿ ಎಂಬುವವನು ಕೊಲ್ಲುತ್ತಾನೆ. ತನ್ನ ಅಣ್ಣನನ್ನು ಕೊಂದ ಲಾಯದಕೇರಿಯ ಮಲ್ಲಿಸೆಟ್ಟಿಯನ್ನು ಕೊಂದು ಮುಯ್ಯಿ ತೀರಿಸಿಕೊಳ್ಳಲು ಮಲ್ಲಿಸೆಟ್ಟಯ ತಮ್ಮ ಬೋವನು ತನ್ನೂರಿನವರನ್ನು

ಜೊತೆ ಮಾಡಿಕೊಂಡು ಲಾಯದಕೇರಿಗೆ ಹೋಗಿ ಜಗಳ ಮಾಡುತ್ತಾನೆ. ಬೋವನು ತನಗೆ ಎದುರಾದ ಲಾಯದ ಕೇರಿಯ ಮಲ್ಲಿಸೆಟ್ಟಿಯ ಮಗ ಸಾವಂಣ ಎಂಬುವವನ್ನು ಕೊಂದು ಹೋರಾಟದಲ್ಲಿ ತಾನೂ ಸಾಯುತ್ತಾನೆ.

ಮೇಲೆ ಗಮನಿಸಿದ ಎಲ್ಲಾ ವಿಧವಾದ ವೀರಸ್ಮಾರಕಗಳಲ್ಲಿಯೂ ಅಂದರೆ, ವೀರನೊಡನೆ ಅವನ ಹೆಂಡತಿ ಸಹಗಮನ ಮಾಡಿದ್ದರೆ ಅವರ, ಅವಳ ಪ್ರಸ್ತಾಪ ಬರುತ್ತದೆಯಾದರೂ ಇಲ್ಲಿ ಮುಖ್ಯವಾಗಿ ವೀರನಿಗೆ ಪ್ರಾಶಸ್ತ್ಯ ದೊರೆತಿರುತ್ತದೆ ಎಂಬುದರಲ್ಲಿ ಸಂದೇಹವಿಲ್ಲ. (ಆರ್. ಶೇಷಶಾಸ್ತ್ರೀ)

ಗಡಿಗಾಗಿ ವ್ಯಾಜ್ಯದಲ್ಲಿ ಮರಣ ಹೊಂದಿದವರು ಕೂಡಾ ವೀರರೆಂದೇ ಪರಿಗಣಿಸಲ್ಪಟ್ಟಿದ್ದರು. ಮುಯ್ಯಿ ಮುಯ್ಯಿ ಎನ್ನುವ ತತ್ವ ಊರಿನ ಬಗೆಗಿನ ಅಭಿಮಾನವು ಇದರಲ್ಲಿ ವ್ಯಕ್ತವಾಗುತ್ತದೆ. ಇಲ್ಲಿ ಸೀಮಾ ರೇಖೆಯೆನ್ನುವುದು ಮುಖ್ಯ. ಒಂದು ಊರಿಗೂ ಮತ್ತೊಂದು ಊರಿಗೂ ಕಲ್ಪಿತ ರೇಖೆಗಳಿರುತ್ತವೆ. ಹಿಡುವಳಿ ಜಮೀನಿಗೂ ಕೂಡಾ ಬಾಂದಿನ ಕಲ್ಲು ಮುಖ್ಯವಾಗಿದೆ. ದೇಶಾಭಿಮಾನ; ನಾಡಿನ ಅಭಿಮಾನ; ಊರಿನ ಅಭಿಮಾನ, ಕುಟುಂಬದ ಅಭಿಮಾನವೆಂದು ಬೇರೆ ಬೇರೆ ರೀತಿಯ ಅಭಿಮಾನಗಳಿರುತ್ತವೆ.

*ವಿವರಗಳಿಗೆ ನೋಡಿ: ಆರ್. ಶೇಷಶಾಸ್ತ್ರೀ ೨೦೦೫ ಶಾಸನ ಪರಿಚಯ ಪುಟ. ೨೮–೨೯.*

**೭೩೫. ಸುಪುಷ್ಪ ಪಟ್ಟ**

**ಸುಪುಷ್ಪ ಪಟ್ಟ**ಮನೊಡಂಬಡೆಯೆಂದು ಪಂಪ ಭಾರತದಲ್ಲಿ ಬರುತ್ತದೆ.

(ಪಂಪ ಭಾರತ ೧–೧)

ಪುಷ್ಪಪಟ್ಟವೆಂಬುದು ಶಿಲ್ಪಶಾಸ್ತ್ರಕ್ಕೆ ಸಂಬಂಧಿಸಿದ್ದು. ರಾಜರೂ ದೇವತೆಗಳು ಧರಿಸುವ ಶಿರೋಭರಣದಲ್ಲಿ 'ಜಟಾ' ಚೂಡ, ಮಕುಟ, ಪಟ್ಟವೆಂಬ ಹನ್ನೆರಡು ವಿಧಾನಗಳಿವೆ. ಅರಿಕೇಸರಿಯು ಸಾಮಾನ್ಯ ರಾಜನಲ್ಲದುದರಿಂದ ಸುಪುಷ್ಪ ಪಟ್ಟ ಧರಿಸಿದ್ದಾನೆ. ಇವುಗಳಲ್ಲಿ ಪಟ್ಟವೆಂಬುದು ಪತ್ರಪಟ್ಟ, ರತ್ನಪಟ್ಟ, ಪುಷ್ಪವೃಷ್ಟಿ ಎಂದು ಮೂರು ವಿಧ. ಇಲ್ಲಿಯ ಪುಷ್ಪವೃಷ್ಟಿಯೆಂಬ ಪಾಠವನ್ನು ಪುಷ್ಪಪಟ್ಟ ಎಂದು ತಿಳಿದುಕೊಳ್ಳಬೇಕು.

ಸುಪುಷ್ಪವೃಷ್ಟಿ

ಇಲ್ಲಿಯ 'ಸುಪುಷ್ಪ ವೃಷ್ಟಿ' (ಸುಪುಷ್ಪಗಳಮಳೆ) ಎಂಬುದಕ್ಕೆ 'ಸುಪುಷ್ಪದೃಷ್ಟಿ' (ಚೆನ್ನಾಗಿ ಬಲಿತ ಕಣ್ಣು) ಎಂಬ ಭಿನ್ನಪಾಠವಿದೆ. ಆದರೆ ನಾರಾಯಣ ಮತ್ತು ಅರಿಕೇಸರಿ ಇಬ್ಬರಿಗೂ ಸುಪುಷ್ಪವೃಷ್ಟಿಯಾಯಿತೆಂದಾಗಲೀ, ಸುಪುಷ್ಪ ದೃಷ್ಟಿಗಳಿವೆ ಎಂದಾಗಲೀ ಹೇಳಿದರೆ ನಾರಾಯಣನಿಗಿಂತ ಅರಿಕೇಸರಿ 'ಉದಾತ್ತ'ನೆಂದು ಹೇಳಿದ ಹಾಗಾಗುವುದಿಲ್ಲ. ಈ ಎರಡೂ ಪಾಠಗಳು ಅಪ್ರಯೋಜಕವೆಂದು ಹೇಳುತ್ತ ಡಾ. ಡಿ. ಎಲ್. ನರಸಿಂಹಾಚಾರ್ ಅವರು ಇನ್ನೆರಡು ಪಾಠಗಳನ್ನು ಊಹಿಸುತ್ತಾರೆ. ಅವು ಸುಪುಷ್ಪ ಪಟ್ಟ ಮತ್ತು ಸುಪುಷ್ಪದೃಷ್ಟಿ ಇವುಗಳಲ್ಲಿ ಮೊದಲನೆಯದರ ವಿವರಣೆ ಹೀಗಿದೆ. " ರಾಜರೂ ದೇವತೆಗಳೂ ಧರಿಸಬಹುದಾದ ಶಿರೋ ವೇಷ್ಟನಗಳಲ್ಲಿ ಜಟಾ, ಮೌಳಿ, ಕಿರೀಟ, ಕರಂಡ ಶಿರಸ್ತ್ರಕ,

ಕುಂಡಲ (ಕುಂತಲ?) ಕೇಶಬಂಧ, ಧಮ್ಮಿಲ್ಲ, ಅಲಕ, ಚೂಡ, ಮಕುಟ ಮತ್ತು ಪಟ್ಟ– ಎಂಬ ೧೨ ವಿಧಾನಗಳಿವೆ. ಕೊನೆಯದಾದ 'ಪಟ್ಟ' ಎಂಬುದರಲ್ಲಿ ಪತ್ರಪಟ್ಟ, ರತ್ನಪಟ್ಟ ಪುಷ್ಪಪಟ್ಟ ಎಂಬ ೩ ಬಗೆಗಳಿವೆ. ಇಲ್ಲಿ ಬರುವ ಪುಷ್ಪಪಟ್ಟ ಎಂಬುದು ತಲೆಗೆ ಹಾಕಿಕೊಳ್ಳುವ ಒಂದು ತೆರನಾದ ಕಿರೀಟವೆಂದು ಹೇಳಬಹುದು.

*ವಿವರಗಳಿಗೆ ನೋಡಿ: ಪಂಪ ಭಾರತ ಗದ್ಯಾನುವಾದ*

*ಡಾ. ಎಂ. ಎಂ. ಕಲಬುರ್ಗಿ ೧೯೮೮ ಮಾರ್ಗ ೧ ಮತ್ತು ಮಾರ್ಗ ೨ ಪುಟ. ೭೧–೭೨.*

*ಮುಳಿಯ ತಿಮ್ಮಪ್ಪಯ್ಯ – ನಾಡೋಜ ಪಂಪ.*

**೭೩೬. ಸೂತಕ**

*ಅಂತುಕಂಡು ಮನಂಗೊಂಡೆತ್ತಿಕೊಂಡು ಮನೆಗೆ*
*ತಂದು ರಾಧೆಯೆಂಬ ತನ್ನ ನಲ್ಲಳ ಸೋಂಕಿಲೊಳ್*
*ಕೂಸನಿಟ್ಟೊಡಾಕೆ ರಾಗಿಸಿ ಸುತನ* ***ಸೂತಕಮಂಕೊಂಡಾಡೆ***

*(ಪಂಪ ಭಾರತ ೧–೯೬ ವ)*

ಜನನವನ್ನು ಸೂತಕವೆಂದು ಪಂಪ ಭಾರತದಲ್ಲಿ ಹೇಳಲಾಗಿದೆ. ಇಲ್ಲಿ ರಾಧೆಯ ತಮಗೆ ಮಗನು ಹುಟ್ಟಿದ ಸೂತಕ (ಮೈಲಿಗೆ)ವನ್ನಾಚರಿಸಿದಳೆಂಬ ವರ್ಣನೆ ಬಂದಿದೆ.

ಪೆಣನಂ ಮುಟ್ಟಲುಂ ಬಾರದು. ಕರ್ಬಿನ ತೋಟಮಂ ಪುಗಲುಂ ಬಾರದು

(ಪಂಚತಂತ್ರ ೧–೭೦ ವಚನ)

ಹೆಣವನ್ನು ಮುಟ್ಟಬಾರದು. ಕಬ್ಬಿನ ತೋಟವನ್ನು ಪ್ರವೇಶಿಸಲಾಗದು ಎಂಬುದು ನಾಣ್ನುಡಿ. ಹೆಣವನ್ನು ಮುಟ್ಟಿದರೆ ಮತ್ತೆ ಸ್ನಾನ ಮಾಡಿ ಮನೆಯೊಳಗೆ ಪ್ರವೇಶಿಸಬೇಕು. ಹೆಣವನ್ನು ಮುಟ್ಟುವುದೆಂದರೆ ಅದು ಅಪವಿತ್ರವಾದ ಕೆಲಸ. ಹಾಗೆಯೇ ಕಬ್ಬಿನ ಗದ್ದೆಯನ್ನು ಪ್ರವೇಶಿಸಬಾರದು. ಅದರಿಂದ ಹೊರಗೆ ಬರುವುದು ಕಷ್ಟ.

ರಜಸ್ವಲೆಯಾದ ಸ್ತ್ರೀಯನ್ನು ಮುಟ್ಟಬಾರದು ಎನ್ನುವ ನಂಬಿಕೆಯು 'ಪಂಪಭಾರತ'ದಲ್ಲಿ ಬಂದಿದೆ. (೭–೪) ರಜಸ್ವಲೆಯಾದ ಸ್ತ್ರೀಯನ್ನು ಮುಟ್ಟಬಾರದು ಎನ್ನುವ ನಂಬಿಕೆಯು ಅನೇಕ ಜನಾಂಗಗಳಲ್ಲಿಯೂ ಇದೆ. ಅನೇಕ ಜನಾಂಗಗಳಲ್ಲಿ ಋತುಮತಿಯಾದ ಸ್ತ್ರೀಯರನ್ನು ಪ್ರತ್ಯೇಕವಾದ ಜಾಗದಲ್ಲಿ ನಿಗದಿಗೊಳಿಸುತ್ತಾರೆ. ಕಾಡುಗೊಲ್ಲರಲ್ಲಿ ಈ ರೀತಿಯ ಸಂಪ್ರದಾಯವಿದೆ. (ಶಂಕರನಾರಾಯಣ. ತೀ.ನಂ. ೧೯೮೨. ಪು ೧೫೦) ಮಾನವಶಾಸ್ತ್ರಜ್ಞರು ಈ ಕುರಿತು ಹೀಗೆ ಹೇಳುತ್ತಾರೆ. ಕನ್ಯೆಯು ಋತುಮತಿಯಾದ ಕಾಲದಲ್ಲಿ ಆಕೆಯನ್ನು ಪ್ರತ್ಯೇಕವಾದ ಸ್ಥಳದಲ್ಲಿ ಇರಿಸಿರುತ್ತಾರೆ. ಆಕೆಯು ಪುರುಷರ ಮುಖ ನೋಡಕೂಡದು. ಹಾಗೆಯೇ ಪುರುಷರೂ ಸಹ ಅವಳ ಮುಖವನ್ನು ನೋಡ ಬಾರದು ಎಂಬ ನಿಷೇಧವಿದೆ. (ನಂಜಮ್ಮಣ್ಣಿ ಎಂ ೧೯೭೧ ಪು.೧೫೩) ಮತ್ತು ಇದಕ್ಕೆ ಮುಟ್ಟಿನ ಬಗೆಗೆ ಇಟ್ಟುಕೊಂಡಿರುವ ಭೀತಿಯೇ ಕಾರಣ (ಅದೇ. ಪು. ೨೦೩)

ಹಾಗೆಯೇ ಶವವನ್ನು ಬೂದಿ ಮಾಡಿದ ವಿಷಯವು ಕೂಡಾ ಪ್ರಾಚೀನ ಕನ್ನಡ

ಸಾಹಿತ್ಯದಲ್ಲಿ ಬರುತ್ತದೆ. ಸಾವು ಎಂಬುದು ಸೂತಕವೂ ಹೌದು.

ಉತ್ತರಕ್ರಿಯೆಯ ಆಚರಣೆಗಳಲ್ಲಿ ಪ್ರದೇಶ, ಜಾತಿ, ಜನಾಂಗಗಳಲ್ಲಿ ವ್ಯತ್ಯಾಸವಿದೆ. ಇದು ಸಹಜ ಆಚರಣೆ ಸತ್ತ ವ್ಯಕ್ತಿಯನ್ನು ಸುಡುವುದು; ಏಳುದಿನದ ಸೂತಕ; ಅನಂತರ ಉತ್ತರ ಕ್ರಿಯೆ ಹಾಗೂ ಗುರಿಕಾರ ಸತ್ತವರ ಜೀವನವನ್ನು ಹಿರಿಯರು ಸೇರಿಸಿಕೊಳ್ಳುವಂತೆ ಪ್ರಾರ್ಥಿಸುವುದು ಗಮನಾರ್ಹ ಅಂಶವಾಗಿದೆ. ಆದರೆ 'ಇವರಲ್ಲಿ ಸತ್ತರೆ ಹೂಳುವೆಯೂ ಸುಡುವ ಎರಡೂ ಕ್ರಮಗಳಿವೆ. ಸತ್ತ ಏಳನೇ ದಿನ ಹೂಳಿಟ್ಟ ಸ್ಥಳದಲ್ಲಿ ಸಣ್ಣ ಚಪ್ಪರ ಕಟ್ಟಿ ಅದರ ಮೇಲೆ ಮಡಿವಸ್ತ್ರವನ್ನು ಅಗಸನಿಂದ ಹಾಕಿಸುವರು ಮತ್ತು ತೆಂಗಿನ ಕಾಯಿ ಒಡೆದು ಒಂದು ಗಡಿಗೆಯಲ್ಲಿ ಎಣ್ಣೆ ಹೊಯ್ದು ಚಪ್ಪರದ ಮೂಲೆಯಲ್ಲಿ ದೀಪ ಇಡುವುದು. ಅನಂತರ ಅಕ್ಕಿಕಾಳನ್ನು ಚಪ್ಪರಕ್ಕೆ ಬಿಸಾಡುವರು' ಸತ್ತವರು ಲೋಕವನ್ನು ಸೇರುತ್ತಾರೆಂಬ ತಿಳುವಳಿಕೆಯು ಇರುವುದು ಗಮನಾರ್ಹ.

ಜೈನಕಾವ್ಯಗಳಲ್ಲಿ ಎರಡು ರೀತಿಯ ಸಾವಿನ ಪರಿಕಲ್ಪನೆಗಳಿರುತ್ತವೆ. ಯುದ್ಧ ಮುಂತಾದವುಗಳಿಂದ ಬರುವ ಸಾವು, ಇದಕ್ಕೆ ನಡೆಯುವ ಶವ ಸಂಸ್ಕಾರ ಪ್ರಕ್ರಿಯೆಗಳು. ಉದಾ: ಪಂಪಭಾರತ, ರನ್ನನಗದಾಯುದ್ಧ, ಇನ್ನೊಂದು ಸಾವನ್ನು ಆಹ್ವಾನಿಸುವ ಕ್ರಿಯೆ, ಅದು ಸಲ್ಲೇಖನ ವ್ರತದಿಂದ ಬರುತ್ತದೆ. ಇದನ್ನು ಸಮಾಧಿ ಮರಣವೆಂದೂ ಕರೆಯುತ್ತಾರೆ.

ಸ್ತ್ರೀಯರು ಮುಟ್ಟಾದಾಗ ಯಾರಿಂದಲೂ ಮುಟ್ಟಿಸಿಕೊಳ್ಳಬಾರದು ಎನ್ನುವ ಆಚಾರ ವಿಚಾರವು ಸರ್ವೆ ಸಾಮಾನ್ಯ. ಸ್ತ್ರೀಯರ ಮುಟ್ಟಿನ ಬಗ್ಗೆ ಇರುವ ಭಯವೂ ಒಂದು ಕಾರಣವಿರಬಹುದು. ಮತ್ತು ಕೆಲವು ಜನಾಂಗಗಳಲ್ಲಿ ಸ್ತ್ರೀಯರು ಮುಟ್ಟಾಗುವುದು ಶಾಪವೆಂಬಂಥ ನಂಬಿಕೆಯೂ ಇರುತ್ತದೆ. 'ಕೇರಿಯ ಬಳಿ ಕಟ್ಟಿದ ಚಿಕ್ಕದೊಂದು ಗುಡಿಸಲಿನಲ್ಲಿ ಆಕೆ ಕುಳಿತು, ಬೀಳಲಿನ ಬುಟ್ಟಿ ಹೆಣೆಯುತ್ತಿದ್ದಳು. ಅದು ಮುಟ್ಟಿನ ಮನೆ, ಕುಡಿಯರಲ್ಲಿ ಸ್ತ್ರೀಯರು ಹೊರಗಾದಾಗ ಆ ಮನೆಯಲ್ಲಿ ದಿನ ಕಳೆಯುವುದು ವಾಡಿಕೆ' ಮುಟ್ಟು ಅಸ್ಪೃಶ್ಯತೆಯ ಪರಿಕಲ್ಪನೆಯನ್ನು ಹಾಗೂ ರೂಢಿಗತ ಸಂಪ್ರದಾಯವನ್ನು ರೂಪಿಸಿಕೊಂಡಿದೆಯೆನ್ನುವುದಕ್ಕೆ ಇದು ಉದಾಹರಣೆ. ಮಡಿ-ಮೈಲಿಗೆಯೆನ್ನುವುದು ಒಂದು ಜೀವನ ದೃಷ್ಟಿಮಾತ್ರ. ಮೈಲಿಗೆಯೆಂದರೆ 'ಹೊರಗೆ' ಎಂಬರ್ಥ ಹಾಗೂ ಮೈಲಿಗೆಗೆ ದ. ಕ. ಜಿಲ್ಲೆಯಲ್ಲಿ 'ಹೊರಗೆ' ಎಂಬ ಮಾತು ಹೆಚ್ಚು ಪ್ರಚಲಿತ.

*ವಿವರಗಳಿಗೆ ನೋಡಿ: ಪಂಪ ಭಾರತ ಗದ್ಯಾನುವಾದ.*

**೭೩೭. ಸೂತಾವತಾರ**

*ಅನಿಮೇಷಾದ್ಯವತಾರಂ*
*ತನಗಾಗೆ ದಶವತಾರಮನಿತಜಿಳಿರದ ।*
*ರ್ಜುನನ ರಥಮೆಸಗಿ ಪನ್ನೊಂ*
*ದನೆಯದು* ***ಸೂತಾವತಾರಮುಂ*** *ಹರಿಗಾಯ್ತೇ ॥*

*(ಸಾಹಸಭೀಮವಿಜಯಂ ೩-೪೪)*

ಕೃಷ್ಣನ ಕುರಿತು ಕೌರವನು 'ಸಾಹಸಭೀಮವಿಜಯ'ದಲ್ಲಿ ಹೇಳುವ ಮಾತಿದು. ಸೂತ ಎಂದರೆ ಅಂಬಿಗ ಎಂಬ ಅರ್ಥವೂ ಇದೆ. ಕರ್ಣನನ್ನು ಸೂತಪುತ್ರ (ಅಂಬಿಗನ ಮಗ) ಎಂದು ಕರೆಯುತ್ತಾರೆ ಸೂತನೆಂದರೆ ರಥನಡೆಸುವವನು ಎಂದರ್ಥವಿದೆ. ಇಲ್ಲಿ ಎರಡನೆಯ ಅರ್ಥವು ಅನ್ವಯವಾಗಿದೆ. ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿಯೆಂಬ ಹತ್ತು ಅವತಾರಗಳನ್ನು ಎತ್ತಿದ ಕೃಷ್ಣ ಈಗ ಅರ್ಜುನನ ಸಾರಥಿಯಾಗಿ ಹನ್ನೊಂದನೆಯ ಅವತಾರವನ್ನೆತ್ತಿದನೇ ಎಂದು ಕೌರವ ಹೇಳುತ್ತಾನೆ. ಇಲ್ಲಿರುವ ವ್ಯಂಗ್ಯ ಗಮನಾರ್ಹ.

**೭೩೮. ಸೂದಕರ್ಮಿ**

*ಸಕಲಜನನಿಂದ್ಯೋಲೋಕೋ*
*ತ್ಸುಕನಯ್ ನೀಂ ಸಕಲ ಭಾಉವನ ದೂಷಕನಯ್*
*ತ್ರಕನಲ್ಲಿ ವಲಲನಯ್* **ಸೂ** *।*
**ದ ಕರ್ಮಿ** *ನಿನಗಿಂತು ಗಂಡಗರ್ವಮುಮಾಯ್ತೇ*

*(ಸಾಹಸ ಭೀಮ ವಿಜಯ ೭-೩೬)*

ನೀನು ಸಕಲ ಜನರ ನಿಂದೆಗೆ ಪಾತ್ರನಾಗುವಂತೆ ವರ್ತಿಸಿದವನು. ಮೂರು ಲೋಕದಲ್ಲಿಯೂ (ಭೂಮಿ ಸ್ವರ್ಗ; ಪಾತಾಳ) ಅಯೋಗ್ಯನಾದವನು ವಿರಾಟರಾಜನ ಆಶ್ರಯದಲ್ಲಿ ವಲಲನೆಂದು ಅಡುಗೆ ಭಟ್ಟನಾಗಿದ್ದ ನಿನಗೆ ಈಗ ಬಂಟನೆಂಬ ಗರ್ವವು ಬಂದಿತೆ? ಎಂದು ಸುಯೋಧನನು ಭೀಮನನ್ನು ಮೂದಲಿಸುತ್ತಾನೆ. ಸೂದಕರ್ಮಿಯನ್ನು ಬಾಣಸಿಗ ಎಂದು ಕರೆಯುತ್ತಾರೆ.

ಅಡುಗೆಯ ಭಟ್ಟನಾಗುವುದು ಹೇಯಕರವೆಂಬ ಭಾವನೆಯು ಇಲ್ಲಿ ವ್ಯಕ್ತವಾಗಿದೆ. ನೀತಿಶಾಸ್ತ್ರದ ಪ್ರಕಾರ ಬ್ರಾಹ್ಮಣನು ದರ್ಭೆಯನ್ನು ಹಿಡಿಯಬೇಕು. ಹೊರತು ಅಡುಗೆಯ ಸೌಟನ್ನು ಅಲ್ಲ. ಬ್ರಾಹ್ಮಣನು ಅನ್ನವಿಕ್ರಯಿಸಿ ಬಾಳಬಾರದು. ಅದು ಪಾಪವೆಂಬ ಭಾವನೆಯು ಇಲ್ಲಿದೆ.

*ವಿವರಗಳಿಗೆ ನೋಡಿ: ದರ್ಭಾಧಿಕಾರ.*

**೭೩೯. ಸೆಟ್ಟಿ (ವ್ಯಾಪಾರಿ)**

ವಡ್ಡಾರಾಧನೆಯಲ್ಲಿ ಜೈನಧರ್ಮಿಯರು ವಾಣಿಜ್ಯಕ್ಕೆ ತಿರುಗಿದ ವಿಷಯ ಬರುತ್ತದೆ. ಇದರಲ್ಲಿ ಈ ಕೆಳಗಿನ ವಿವರವಿದೆ.

*"ಕೌಶಂಬಿಯೆಂಬ ಪೊಳಲೊಳ್ ಸುಮಿತ್ರನೆಂಬೊಂ* **ಶ್ರೇಷ್ಠಿ** *ಕೋಟಿ ಕಸವರ ಮನೊಡೆಯೊ*
*ನಾತನ ಮಗಂ ವಸುಮಿತ್ರನೆಂ ಬೊಂಗೆ*
*ಸರ್ಪ ದಪ್ಪಮಾದೊಡೆ ಸತ್ತನೆಂದು ಶ್ಮಶಾನಕ್ಕೆ ಕೊಂಡು ಪೋಗಿ........*

*(ನರಸಿಂಹಾಚಾರ್ ಡಿ.ಎಲ್.೨೦೦೯ ಪುಟ. ೫೮)*

ಇದೇ ಕತೆಯಲ್ಲಿ ಮತ್ತೊಂದು ಕಡೆಗೆ ಶ್ರೇಷ್ಠಿಯ ವಿಚಾರ ಬರುತ್ತದೆ.

*ಪಾಟಳೀಪುತ್ರವೆಂಬ ಪುರಮಲ್ಲಿ ಶ್ರೇಷ್ಠಿಸುದತ್ತನೆಮಬೊನಾತನ ಮಗಳ್ ಸುದಾಮೆಯೆಂಬ ಕನ್ನೆಯೊಂದು ದಿವಸಂ ಗಂಗೆಯಂ ಮೀಯಲ್ವೋಗಿ ಮೀವಲ್ಲಿ ನೆಗಳ್ ಪಿಡಿದೊಡಾದಮಾನು ಮಂಜಿ ತಡಿಯೊಳಿರ್ದ ಧನದತ್ತನೆಂಬೊಂ ಸ್ರೋದರ (ಅದೇ. ಪು. ೫೯)*

ಇದೇ ಕತೆಯಲ್ಲಿ ಇನ್ನೊಂದು ಉಲ್ಲೇಖವು ಹೀಗಿದೆ.

*ಧರ್ಮಪುರಮೆಂಬುದು ಪೊರೆಲಲ್ಲಿ ನಾಗದತ್ತನೆಂಬೊಂ ಶ್ರೇಷ್ಠಿಯಾತನ ಬಂಟಂ ವೈನಾಕನೆಂಬೊನಾತನೊಂದು ದಿವಸಂ ಕರ್ಬಿನಕೆಯ್ಯ ನುಬೊಂ ನಿದಾನಮಂ ಕಂಡದಂಮಜಿಸಲ್ವೇಡಿ ತನ್ನ ಹೆಂಡತಿಯ ಮನಮಂ ಪರೀಕ್ಷಿಸಲ್ವೇಡಿ ಕೃತಕ ಗರ್ಭಮಂ ತಾಳ್ದಿರೆ ಪೆಂಡತಿ ಕಂಡಿದೇನ್*

ಶ್ರೇಷ್ಠಯೆಂದರೆ ವರ್ತಕರು ಎಂಬುದು ಇಲ್ಲಿ ಗಮನಾರ್ಹವಾಗಿದೆ.

*ವೈರಾಗ್ಯಂ ಕಾರಣಮಾಗಿ ಸೂರದತ್ತಸೆಟ್ಟಿ ಸುಕುಮಾರಸ್ವಾಮಿಗೆ **ಸೆಟ್ಟಿ**ವಟ್ಟಂಗಟ್ಟಿ ತಪಂಬಟ್ಟಂ... (ಡಿ.ಎಲ್. ನರಸಿಂಹಾಚಾರ್ ೨೦೦೯ ಪುಟ. ೬೮)*

ಇಲ್ಲಿ ಶ್ರೇಷ್ಠಿಯೆನ್ನುವುದು ಸೆಟ್ಟಿಯೆಂದಾಗಿದೆ. ಆದರೆ ಸೆಟ್ಟಿಗೂ ಕೂಡಾ ಪಟ್ಟಗಟ್ಟಲಾಗುತ್ತದೆ.

ಧರ್ಮಪುರಮೆಂಬುದು ಪೊಟಲಲ್ಲಿ ನಾಗದತ್ತನೆಂಬೊಂ ಶ್ರೇಷ್ಠಿ........

(ಡಿ.ಎಲ್.ಎನ್.೨೦೦೯ ಪು.೬೨).

ಜೈನ ಮತಾವಲಂಬಿಗಳು ಅತ್ಯಂತ ಹೆಚ್ಚು ಆಸಕ್ತಿಯನ್ನು ತೋರಿಸಿದ್ದು ವ್ಯಾಪಾರದಲ್ಲಿ, ವರ್ತಕರಾಗುವುದೆಂದರೆ ಆಗಿನ ಕಾಲದಲ್ಲಿ ವ್ಯಾಪಾರಕ್ಕೂ ಹೆಚ್ಚಿನ ಮಹತ್ವವಿತ್ತು ಎಂಬುದನ್ನು ಸೂಚಿಸುತ್ತದೆ.

ಶ್ರೇಷ್ಠಿಯೆಂಬುದು ವರ್ತಕರನ್ನು ಉದ್ದೇಶಿಸಿ ಹೇಳಲಾಗಿರುವ ಪದ ಜೈನಧರ್ಮಕ್ಕೂ ವರ್ತಕ ವರ್ಗದ ಉದಯಕ್ಕೂ ಒಂದು ನಿರ್ದಿಷ್ಟ ಸಂಬಂಧವಿದೆ. (ನೋಡಿ : ದಮ್ಮ)

ವ್ಯಾಪಾರ ಮಾಡುವುದಕ್ಕೆ ಯೋಗ್ಯ ಸ್ಥಳ ಬೇಕು. ವ್ಯಾಪಾರಕ್ಕೆ ಯೋಗ್ಯ ಸ್ಥಳವನ್ನು ಆಯ್ಕೆ ಮಾಡಿಕೊಳ್ಳದಿದ್ದಲ್ಲಿ ಕೀಲನ್ನು ತೆಗೆದ ಮಂಗನಂತಾಗುವನು. (ಕರ್ಣಾಟಕ ಪಂಚತಂತ್ರ ಭೇದ ಪ್ರಕರಣ ೬) (ಸಿ.ಪಿ.ಕೆ ಪುಟ. ೨೨)

ವ್ಯಾಪಾರವು ಉದ್ಯೋಗಕ್ಕೆ ಸಂಬಂಧಿಸಿರುವುದು. ಅದು ಕಾರ್ಯಾಸಕ್ತಿಯನ್ನು ಸೂಚಿಸುತ್ತದೆ.

ಮರುಳಲ್ಲದರಸಿಲ್ಲ, ಬುದ್ಧಿಯುಳ್ಳ ಭಾಂದಸರಿಲ್ಲ, ಜಾಣೆಯಲ್ಲದ ಸ್ತ್ರೀಯಿಲ್ಲ, ಹುಸಿಯದ ವ್ಯವಹಾರಿಯಿಲ್ಲ.

(ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ, ಶ್ಲೋಕ ೫೩)

ಮರುಳಲ್ಲದ ಅರಸನಿಲ್ಲ. ಬುದ್ಧಿವಂತನಾದ ಭಾಂದಸನಿಲ್ಲ, ಜಾಣೆಯಿಲ್ಲದ ಸ್ತ್ರೀಯಿಲ್ಲ. ಹಾಗೆಯೇ ಸುಳ್ಳು ಹೇಳದ ವ್ಯವಹಾರಿಯಿಲ್ಲ. ಇಲ್ಲಿ ಪ್ರತಿಯೊಬ್ಬರ ಗುಣ ಸ್ವಭಾವವನ್ನು

ಹೇಳಲಾಗಿದೆ. ಅರಸರಿಗೆ ಮರುಳಿದ್ದೇ ಇರುತ್ತದೆ. ಅವರದು ಗಳಿಗೆಗೊಂದು ಚಿತ್ತಸ್ಥಿತಿ. ಬುದ್ಧಿವಂತನಾದ ಛಾಂದಸನಿಲ್ಲ. ಹಾಗೆಯೇ ಸ್ತ್ರೀಯರು ಜಾಣರು. ಮತ್ತು ಸುಳ್ಳು ಹೇಳದ ವ್ಯವಹಾರಿಯಿಲ್ಲ. ಅದರಂತೆ ಲೋಕದ ವ್ಯವಹಾರವು ನಡೆಯುತ್ತದೆ. ವ್ಯಾಪಾರಿಯ ಮುಖ್ಯ ಲಕ್ಷಣವೆಂದರೆ ಮೇಲಿನ ಒಳ್ಳೆಯ ಗುಣವನ್ನು ಹೇಳುವುದು ಮತ್ತು ಅದಕ್ಕೆ ಒಂದೆರಡರಷ್ಟು ಬೆಲೆ ಹೇಳುವುದು. ವ್ಯಾಪಾರಿಯು ಸತ್ಯವಂತನಾದರೆ ಉಳಿಗಾಲವಿಲ್ಲ ಎಂಬುದು ಇದರ ಭಾವಾರ್ಥ.

ಹಳೆಗನ್ನಡದಲ್ಲಿ ಬರುವ ಪರದರು. ಸೆಟ್ಟಿಗಳು ವೈಶ್ಯಪದಕ್ಕೆ ಪರ್ಯಾಯಗಳಾಗಿವೆ. (ಸೆಟ್ಟಿ; ವರ್ತಕ; ಪರದರು)

ವರ್ತಕರು ಮತ್ತು ವ್ಯಾಪಾರದ ಸಾಂಸ್ಕೃತಿಕ ಬೆಳವಣಿಗೆಯು ಕುತೂಹಲದಾಯಕ.

ವ್ಯಾಪಾರವನ್ನು ವೃತ್ತಿಯಾಗಿಸಿಕೊಂಡವರನ್ನು ವರ್ತಕರು ಎಂಬ ಹೆಸರಿನಿಂದ ಕರೆಯಲಾಗಿದೆ. ವರ್ತಕರಲ್ಲಿ ಎರಡು ರೀತಿಯ ಪ್ರಕಾರಗಳೂ ಕಂಡುಬರುತ್ತವೆ. ಅವರುಗಳೆಂದರೆ, ವಿನಿಮಯ ವರ್ತಕರು ಮತ್ತು ಉತ್ಪಾದಕ ವಿನಿಮಯ ವರ್ತಕರು. ಸೆಟ್ಟಿ–ಬಣಂಜಿಗ, ಸೆಟ್ಟಿಗುತ್ತ, ನಕರ, ಮುಂಮುರಿದಂಡ, ವಡ್ಡ ವ್ಯವಹಾರಿ, ಗಾತ್ರಿಗ, ಸೆಟ್ಟಿಕಾರ, ಹಲರು, ಎಳಮೆ, ಸಾಲಿಕೆ ಬಲ್ಲಾಳುಗಳು, ನಾನಾದೇಶಿ, ಉಭಯ ನಾನಾ ದೇಶಿಗಳು ಮುಂತಾದವರು ವ್ಯಾಪಾರವನ್ನೇ ವೃತ್ತಿಯನ್ನಾಗಿಸಿಕೊಂಡ ವಿನಿಮಯ ವರ್ತಕರು, ಅಕ್ಕಸಾಲಿ, ಮಾದಿಗ, ಸಮಗಾರ ಮೇದ ಮೊದಲಾದವರು ಉತ್ಪಾದಕ–ವಿನಿಮಯ ವರ್ತಕರು. ಇವರೆಲ್ಲರೂ ಮಧ್ಯಕಾಲೀನ ಕರ್ನಾಟಕದಲ್ಲಿ ನಗರ ವ್ಯವಸ್ಥೆಯೊಂದು ಕಾಣಿಸಿಕೊಳ್ಳುವುದಕ್ಕೆ ಕಾರಣರಾದರು. ವ್ಯಾಪಾರಸ್ಥರು ಆಂತರಿಕ ವ್ಯಾಪಾರ ಮಾತ್ರವಲ್ಲದೆ ವಿದೇಶಿ ವ್ಯಾಪಾರವನ್ನೂ ನಡೆಸುತ್ತಿದ್ದರು. ಕ್ರಿ. ಶ. ೧೧೫೪ರ ಶಾಸನವೊಂದು ವ್ಯಾಪಾರಸ್ಥರು ಭೂ ಮತ್ತು ಜಲಮಾರ್ಗದ ಮೂಲಕ ಹೊರರಾಜ್ಯಗಳೊಡನೆ ವ್ಯಾಪಾರ ನಡೆಸುತ್ತಿದ್ದ ಮಾಹಿತಿ ನೀಡುತ್ತದೆ. ಸಮುದ್ರ ವ್ಯಾಪಾರವು ಮುಖ್ಯವಾಗಿ ಹೊನನಾವರ, ಭಟ್ಕಳ, ಮಂಗಳೂರು ಮುಂತಾದ ಬಂದರುಗಳ ಮೂಲಕ ನಡೆಯುತ್ತಿತ್ತು ಎನ್ನುವ ವಿಚಾರ ಅರಬ್ ಪ್ರವಾಸಿಗರ ಬರಹಗಳಿಂದ ತಿಳಿದಿಬರುತ್ತದೆ. ದೋರಸಮುದ್ರ, ಬೇಲೂರು, ವಿಷ್ಣು ಸಮುದ್ರ, ಶ್ರವಣಬೆಳಗೊಳದ ವ್ಯಾಪಾರಸ್ಥರು ಸಮುದ್ರ ವ್ಯಾಪಾರದಲ್ಲಿ ಹೆಚ್ಚು ಭಾಗವಹಿಸುತ್ತಿದ್ದರು ಎನ್ನುವುದು ಶಾಸನಗಳಿಂದ ತಿಳಿದುಬರುತ್ತದೆ. ಚೀಣಾ, ಮಲಯಾ, ಜಾವ, ಸಿಲೋನ್, ಮಲಾಕ್ಕ, ಫಾರ್ಮೋಸಾ, ಮುಂತಾದ ದೇಶಗಳೊಂದಿಗೆ ವ್ಯಾಪಾರ ಸಂಪರ್ಕವನ್ನು ಇಟ್ಟುಕೊಳ್ಳಲಾಗಿತ್ತು. ಕರ್ನಾಟಕದ ಕರಾವಳಿ ಪ್ರದೇಶಗಳನ್ನು ವಿದೇಶಿ ವ್ಯಾಪಾರಕ್ಕಾಗಿ ಬಳಸಿಕೊಳ್ಳಲಾಯಿತು. ವಿದೇಶಿ ವ್ಯಾಪಾರಿ ಹಡಗುಗಳು ಹೊನ್ನಾವರ, ಭಟ್ಕಳ, ಮಂಗಳೂರು ಮುಂತಾದ ಬಂದರುಗಳಿಗೆ ಬರುತ್ತಿದ್ದವು.

ವೈಶ್ಯ ಜಾತಿ ಅನ್ನುವುದು ಭಾರತದಲ್ಲಿ ಒಂದು ಅಸ್ಪಷ್ಟ ಜಾತಿಯಾಗಿದೆ. ಬ್ರಾಹ್ಮಣ ನೀತಿ ಸಂಹಿತೆಗಳ ಪ್ರಕಾರ ವೈಶ್ಯ ಜಾತಿಯೆನ್ನುವುದು ಮೂರನೆಯ ವರ್ಣಕ್ಕೆ ಸೇರುತ್ತದೆ.

ಆದರೆ ಬೌದ್ಧ ಪಂಥದ ಪ್ರಕಾರ ಸೆಟ್ಟಿ-ಗ್ರಹಪತಿಗಳು ವರ್ತಕರು. ಮತ್ತು ವೈಶ್ಯವರ್ಣಕ್ಕೆ ಹತ್ತಿರವಾದವರು ಮಾತ್ರ. ಬೌದ್ಧ ಮತವು ಹೆಚ್ಚು ಪ್ರಭಾವಶಾಲಿಯಾದಾಗ ಅದು ಪಟ್ಟಣಗಳನ್ನು ತನ್ನ ಹಿಡಿತಕ್ಕೆ ತೆಗೆದುಕೊಂಡಿತು. ಮತ್ತು ವರ್ತಕರು ಸಮಾಜದಲ್ಲಿ ಪ್ರಧಾನ ಪಾತ್ರ ವಹಿಸಿದರು.

ವರ್ತಕರು ಹಿಂದಿನ ಕರ್ನಾಟಕದಲ್ಲಿ ಸಮಾಜದ ಅತ್ಯಂತ ಪ್ರಮುಖ ಭಾಗವಾಗಿದ್ದರು. ಈಗಲೂ ಕುಂಬಾರರೂ ಗಾಣಿಕರೂ ಇವರೇ ಮೊದಲಾದವರು ತಮ್ಮನ್ನು ತಾವು "ಶೆಟ್ಟಿಗಳು" ಎಂದು ಕರೆದುಕೊಳ್ಳುವುದರ ಮೂಲಕ (ಕುಂಬಾರ ಶೆಟ್ಟರು, ಗಾಣಿಗ ಶೆಟ್ಟರು) ತಾವೂ ವರ್ತಕರೆಂದು ಭಾವಿಸುವುದರಿಂದ, (ವಾಸ್ತವವಾಗಿ ಅವರು ಮಡಕೆ, ಎಣ್ಣೆ ಮಾರುವ ವರ್ತಕರೆ ತಾನೆ!), ಶಾಸನ ಪಾಠದ ಆರಂಭದ 'ಸ್ವಯಂಭು ಸೆಟ್ಟಿ', 'ಪಸುಂಬೆ ಸೆಟ್ಟಿ' ಮಾತುಗಳು ಕುಂಬಾರರು ತಮ್ಮ ಕುಲದ (ಕುಂಬಾರ ಜಾತಿಯ) ನಾಯಕರನ್ನೇ ಉದ್ದೇಶಿಸಿ ಹೇಳಿರುವಂತಿದೆ ಎಂಬ ಊಹೆಗೂ ಅವಕಾಶವಿದೆ. ಉಳಿದ ವರ್ತಕ ಸಮೂಹವೇ ವಿಷಯದಲ್ಲಿ ಬಳಸುವ ಮಾತುಗಳನ್ನೇ ತಮ್ಮ ಕುಲದ ಮುಖ್ಯರಿಗೂ, ಬಳಸಿರಬಹುದೆಂದೂ ಹೇಳಬಹುದು. ಆದರೆ "ಐಸಾವಂತರ ಪ್ರಶಸ್ತಿಯೆಂತೆಂದಡೆ... ಉತ್ತಮ ಸಮಯಕ್ಕೆ ನಮಸ್ಕಾರವಂ ಮಾಡಿದೆವು. ಅವಧಾರಿಸಿ ಸ್ವಾಮಿಗಳಿರಾ" ಎಂಬ ಮಾತಿನ ಹಿನ್ನೆಲೆಯಲ್ಲಿ ಮತ್ತ "ಪಸುಂಬೆ"ಯು ಅಕ್ಕಿ ಬೇಳೆ ಬೆಲ್ಲದಂತಹ ಮಾರಾಟದ ವಸ್ತುಗಳನ್ನು ಕೊಂಡೊಯ್ಯುವ ಹಸುಬೆ ಚೀಲವನ್ನು ಸೂಚಿಸುವುದರ ಹಿನ್ನೆಲೆಯಲ್ಲಿ (ಹಸುಬೆ ಚೀಲದಲ್ಲಿ ಮಡಕೆಗಳನ್ನು ಕೊಂಡೊಯ್ಯುಲು ಸಾಧ್ಯವಿಲ್ಲ ತಾನೆ!), "ಪಟ್ಟಣಾಧೀಶ್ವರ" (ಪಟ್ಟಣಸ್ವಾಮಿ, ಪಟ್ಟಣಶೆಟ್ಟಿ)ಒಂದು ನಗರದ ವರ್ತಕ ಸಮೂಹದ ಮುಖ್ಯಸ್ಥನನ್ನು ಸೂಚಿಸುವ ಪಾರಿಭಾಷಿಕ ಪದವಾಗಿರುವುದರಿಂದ, "ನಮ್ಮ ಎಂಬ ಪಾಠವೇ ಸ್ವೀಕಾರಾರ್ಹ. ಒಂದು ರೀತಿಯ ಮಾರಾಟಗಾರರೂ ಆಗಿರುವ ಅಯಾವಂತ ಅಥವಾ ಕುಂಬಾರರು ತಮ್ಮಗಿಂತ ಮೇಲೆ ಜಾತಿಗೆ ಸೇರಿದ ಬಣಜಿಗ ವರ್ತಕರ (ಚಿನ್ನ, ಬೆಳ್ಳಿ, ಧಾನ್ಯ, ಬಟ್ಟೆ ವ್ಯಾಪಾರಿಗಳ) ಮುಖ್ಯರಿಗೆ ಗೌರವವನ್ನು ತೋರಿ ("ಉತ್ತಮ ಸಮಯಕ್ಕೆ ನಮಸ್ಕಾರವಂ ಮಾಡಿದೆವು") ತಮ್ಮ ಕುಲೋತ್ಪತ್ತಿಯ ಕತೆಯನ್ನು ಅವರಿಗೆ ನಿವೇದಿಸಿಕೊಂಡ ಧಾಟಿಯಲ್ಲಿ ಶಾಸನವು ರಚಿತವಾಗಿದೆ.

ಬಣ ಎಂಬುದಕ್ಕೆ ವಿಸ್ ಎಂಬ ಇನ್ನೊಂದು ಪರ್ಯಾಯ ಶಬ್ದವನ್ನು ಸಹ ಋಗ್ವೇದದಲ್ಲಿ ಕಾಣಬಹುದು. ಅದು ೧೭೦ ಬಾರಿ ಬರುತ್ತದೆ. ಬಹುಶಃ ಈ ವಿಸ್ ಕಾದಾಡುವ ಸಣ್ಣ ಘಟಕಗಳಾದ ಗ್ರಾಮಗಳಾಗಿ ವಿಂಗಡಗೊಂಡಿರುತ್ತಿತ್ತು. ಗ್ರಾಮಗಳು ಒಂದನ್ನೊಂದು ಎದುರಿಸಿ ನಿಂತು ಹೋರಾಡುವುದು ಸಂಗ್ರಾಮ ಅಥವಾ ಯುದ್ಧ. ವಿಪುಲ ಜನಸಂಖ್ಯೆಯಿಂದ ಕೂಡಿದ ವೈಶ್ಯರ್ಣವು ಈ ವಿಸ್ನಿಂದಾಗಿಯೇ (ಪ್ರಜೆಗಳಿಂದ) ಉದ್ಭವಿಸಿತು.

ಯಜುರ್ವೇದ ಸಾಹಿತ್ಯದಲ್ಲಿ ಮಾತ್ರ ಯಾವುದೇ ಸಂದೇಹಗಳಿಗೆ ಎಡೆಕೊಡದಷ್ಟು ಸ್ಪಷ್ಟವಾಗಿ ವರ್ಣವ್ಯವಸ್ಥೆಯ ನಿರ್ಮಾಣ, ಅದರ ಉದ್ದೇಶಗಳೆರಡನ್ನೂ ವಿವರಿಸಲಾಗಿದೆ.

ಋಗ್ವೇದದಲ್ಲಿ ಸಮುದಾಯದ ಸಾಮಾನ್ಯ ಜನತೆಯನ್ನು 'ವಿಶ್' ಪ್ರಜೆಗಳು ಎನ್ನಲಾಗಿದೆ. ಈಗ ಇದನ್ನು ಕೃಷಿಕರು ಎಂಬ ಅರ್ಥದಲ್ಲಿ ಪ್ರಯೋಗಿಸಲು ಆರಂಭವಾಯಿತು. ಈ ಮೂಲದಿಂದಲೇ 'ವೈಶ್ಯ' ಎಂಬ ವರ್ಣದ ಹೆಸರು ಬಂತು. ಈ 'ವಿಶ್' ಜನಗಳಿಗೆ ಸಂಬಂಧಿಸಿದ ದೇವರುಗಳು ಮರುತ್ತರು. ಇಂದ್ರನಿಗೂ ಮರುತ್ತರಿಗೂ ಋಗ್ವೇದದಲ್ಲೇ ಶತ್ರುತ್ವವಿದೆ. ರಾಜನು 'ವಿಶ್' ಜನರನ್ನು ಭುಂಜಿಸಿದಂತೆ, ಇಂದ್ರನು ಮರುತ್ತರನ್ನು ಭುಂಜಿಸುತ್ತಾನೆ ಎಂದು ಋಗ್ವೇದದಲ್ಲಿ ಹೇಳಿದ್ದಾರೆ. ಋಗ್ವೇದ ಕಾಲದಲ್ಲೇ ಸಾಮಾನ್ಯ ಸಮುದಾಯ ಸಭ್ಯರನ್ನು ಸಮುದಾಯ ಮುಖ್ಯರು ಪೀಡಿಸುತ್ತಿದ್ದಿರಬೇಕು. ಕೃಷಿ ಸಮಾಜ ಬರುವ ಹೊತ್ತಿಗೆ ಈ ಪೀಡನೆ ಹೆಚ್ಚುತ್ತಾ ಹೋಗಿರಬೇಕು. ಶತಪಥ ಬ್ರಾಹ್ಮಣಗಳಲ್ಲಿ ಮರುತ್ತರನ್ನು ಸಾಮಾನ್ಯ ಕೃಷಿಕರು ಎನ್ನಲಾಗಿದೆ. ಐತ್ತರೇಯ ಬ್ರಾಹ್ಮಣದಲ್ಲಿ ವೈಶ್ಯನು ಇತರರಿಗೆ ಅಧೀನನಾಗಿರುತ್ತಾನೆಂದೂ, ಇತರರಿಂದ ಭುಂಜಿಸಲ್ಪಡುತ್ತಾನೆಂದೂ, ಮನಬಂದಂತೆ ಪೀಡನೆಗೆ ಒಳಗಾಗುತ್ತಾನೆಂದೂ ಹೇಳಲಾಗಿದೆ. ಶೂದ್ರರು ಸೇವಕರೆಂದೂ, ಇಷ್ಟಾನುಸಾರವಾಗಿ ಇವರನ್ನು ಹೊಡದಟ್ಟಲಾಗುತ್ತದೆಂದೂ, ಮನಬಂದಂತೆ ಇವರನ್ನು ಸಾಯಿಸಲಾಗುತ್ತದೆಂದೂ ಹೇಳಿದ್ದಾರೆ. ಯಜ್ಞದ ಆಚರಣೆಯ ಉದ್ದೇಶವೂ ಈ ಕಾಲಕ್ಕೆ ಸಾಕಷ್ಟು ಬದಲಾಯಿತು. ಶತಪಥ ಬ್ರಾಹ್ಮಣದಲ್ಲಿ ವೈಶ್ಯ ಶೂದ್ರ ಜನರನ್ನೂ ಪುರೋಹಿತರ ನೆರವಿನಿಂದ ಅಧೀನಪಡಿಸಿಕೊಳ್ಳುವುದಕ್ಕೆ ರಾಜರುಗಳು ಯಜ್ಞಗಳನ್ನು ಮಾಡಿದರೆಂಬುದಕ್ಕೆ ಪುರಾವೆಗಳಿವೆ ಎಂದು ಕೊಸಾಂಬಿಯವರು ಹೇಳುತ್ತಾರೆ. ಯಜ್ಞದ ಅಂಗವಾಗಿ ಪ್ರದಕ್ಷಿಣೆ ಮಾಡುವಾಗ ಪುರೋಹಿತರು ಒಂದು ಬದಿಗೆ, ರಾಜರುಗಳು ಒಂದು ಬದಿಗೆ ನಿಂತು, ಶೂದ್ರ ವೈಶ್ಯ ಜನರನ್ನು ಮಧ್ಯಕ್ಕೆ ಬರುವಂತೆ ಆವರಿಸಿ ಅಧೀನಗೊಳಿಸಿಕೊಳ್ಳಬೇಕೆಂದು ಆ ಬ್ರಾಹ್ಮಣಗಳಲ್ಲಿ ಹೇಳಲಾಗಿದೆ.

*ವಿವರಗಳಿಗೆ ನೋಡಿ: ಡಿ.ಡಿ. ಕೊಸಾಂಬಿ ೧೯೮೮ ಪ್ರಾಚೀನ ಭಾರತದ ಚರಿತ್ರೆ ಪುಟ. ೯*

*ಮೋಹನಕೃಷ್ಣ ರೈ ೨೦೦೪ ಪ್ರಭುತ್ವ ಮತ್ತು ಜನತೆ ಪುಟ. ೯೦–೯*

*Romila Thapar ೧೯೭೫ The Past and Prejudice P. ೩*

*ಡಾ. ಎಂ. ಚಿದಾನಂದಮೂರ್ತಿ ವಿವಾಹ ಪುರಾಣ ಲೇಖನ*

*ಆರ್. ಎಸ್. ಶರ್ಮ ೨೦೦೭ ಪ್ರಾಚೀನ ಭಾರತ ಪುಟ. ೭*

### ೭೪೦. ಸೆರಗಿಲ್ಲದ ಗಂಡ

*ಮೇಲೆ ಬಂದ ಕೃತಾಂತರಾಜವಾಹಿನಿ ಸಿತ ಪತಾಕೆಗಳನನ್ನುಕರಿಸುವ ಪಳಿತಂಗಳಂ ದರ್ಪಣದೊಳ್ನೋಡಿ ಕಂಡು ಪರಪತಾಕಿ ನೀಪತಾಕೆಯಂ ಕಂಡು* ***ಸೆರಗಿಲ್ಲದ ಗಂಡ****ನಂತಿನಿಸಪ್ಪೊಡಂ ಮಾಣದೆ.... (ಆದಿಪುರಾಣ ೧–೭೯. ವ)*

ಸೆರಗು ಎಂದರೆ ಭಯ. ಸೆರಗಿಲ್ಲದ ಗಂಡನೆಂದರೆ ಅಸಹಾಯ ಶೂರನೆಂದರ್ಥ. ಯಾರ ನೆರವು ಸಹಾಯವನ್ನೂ ಬಯಸದೆ ಸ್ವತಃ ಹೋರಾಡುವ ಶೂರ ಸೆರಗು ಎಂಬ ಪದವು ಪಂಪಭಾರತದಲ್ಲಿಯೂ ಹಲವಡೆ ಬಳಕೆಯಾಗಿದೆ. ಉದಾಹರಣೆಗೆ

'ಸೆರಗಿಲ್ಲದೆ ಪಿಡಿಯೆಂದನಿದೇಂ ಕಲಿಯೋ ಚಾಗಿಯೋ ರವಿತನಯಂ' ಎಂಬ ಮಾತು ಕರ್ಣನ ದಾನಶೂರತೆಯನ್ನು ವರ್ಣಿಸುವಲ್ಲಿ ಬಳಕೆಯಾಗಿದ್ದನ್ನು ಸ್ಮರಿಸಬಹುದು.

**೭೪೧. ಸೇನಾನಾಯಕ**

ಆನೆ, ಕುದುರೆ, ರಥ, ಪದಾತಿಗಳ ಪತಿಯು ಪತ್ತಿಕನು. ಹತ್ತು ಪತ್ತಿಕರಿಗೆ ಪತಿ ಸೇನಾಪತಿ, ಹತ್ತು ಸೇನಾಪತಿಗಳಿಗೆ ಒಬ್ಬ ಸೇನಾನಾಯಕ. ಅವನೇ ಬಲಾಧ್ಯಕ್ಷ. ಭಯವಿರುವಲ್ಲಿಗೆ ಸೇನಾಪತಿ ಸೇನಾನಾಯಕರನ್ನು ನಿಲ್ಲಿಸಬೇಕು.

*ವಿವರಗಳಿಗೆ ನೋಡಿ: ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೭–೧೮೯.*

**೭೪೨. ಸೇವಕರು**

*ಪರಸೇವೆಯೆಂಬುದು ಬಾಳ ಬಾಯ್ಧಾರೆಯಂ ನಕ್ಕಿದಂತೆಯುಂ, ಸಿಂಗಮನಾಲಿಂಗಿಸಿ ದಂತೆಯುಂ, ಪಾವಿನ ನಂಜುವಾಯನಂಜದೆ ಚುಂಬಿಸಿದಂತೆಯುಮಿರ್ಕುಂ, (ಪುಟ. ೯೩ ಐತಾಳ ಪುಟ. ೧೫೮ ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ, ವಚನ ೯೫)*

ಪರಸೇವೆಯೆನ್ನುವುದು ಕತ್ತಿಯ ಅಥವಾ ಅಲಗಿನ ಹರಿತವಾದ ಬಾಯ್ಧಾರೆಯನ್ನು ನೆಕ್ಕಿದಂತೆ. ಸಿಂಹವನ್ನು ಆಲಿಂಗಿಸಿದಂತೆ, ಹಾವಿನ ವಿಷದ ಬಾಯಿಯನ್ನು ಹೆದರದೆ ಚುಂಬಿಸಿದಂತೆ. ಪರಸೇವೆಯನ್ನುವುದು ಯಾವಾಗಲೂ ಅಪಾಯಕಾರಿ. ಪರರನ್ನು ಸೇವಿಸುವುದೆಂದರೆ ಅವರ ಅಭಿರುಚಿಗೆ ತಕ್ಕಂತೆ ದುಡಿಯುವುದು. ಆದರೆ ಪರಸೇವೆಯು ಯಾವತ್ತೂ ಸರಿಯಾಗುವುದಿಲ್ಲ.

**೭೪೩. ಸೋಮಪಾನ**

*ಪುರೋಡಾಶ ಪವಿತ್ರೋದರನುಂ **ಸೋಮಪಾನ** ಕಷಾಯಿತೋದರನುಮಾಗಿ ಮೂವತ್ತೆರಡು ದಿವಸದೊಳ್ ಕ್ರತುವಂ ನಿರ್ವರ್ತಿಸಿ ಮಹಾದಾನಂ ಗೆಯ್ದು.....................*

*(ಪಂಪ ಭಾರತ ೬–೩೮ ವ)*

ಧರ್ಮರಾಜನು ಪುರೋಡಾಶದಿಂದ ಪವಿತ್ರೀಕೃತವಾದ ಹೊಟ್ಟೆಯುಳ್ಳವನೂ ಸೋಮರಸ ಪಾನದಿಂದ ಕದಡಿದ ಉದರವುಳ್ಳವನೂ ಆಗಿ ಆ ಮುವ್ವತ್ತೆರಡು ದಿವಸಗಳಲ್ಲಿ ಯಜ್ಞವನ್ನು ಮುಗಿಸಿ ಮಹಾದಾನವನ್ನು ಮಾಡಿ ದಕ್ಷಿಣೆಯನ್ನು ಕೊಡುವ ಕಾಲದಲ್ಲಿ.

ಕಷಾಯಿತವೆಂದರೆ ಕಷಾಯದಿಂದ ವ್ಯಾಪ್ತವಾದ. ಮನಃ ಕಷಾಯ – ಮನಸ್ಸಿನ ದುಗುಡಕ್ಕೆ ಸಂಬಂಧಿಸಿದ್ದು. ಇಲ್ಲಿ ಧರ್ಮರಾಯ ಸೋಮಪಾನದಿಂದ ಕಷಾಯಿತೋದರನು ಆಗಿದ್ದಾನೆಂಬುದು ಇಲ್ಲಿ ಗಮನಾರ್ಹ. ಪುರೋಡಾಶವೆಂದರೆ ಹವಿಸ್ಸು. ಯಾಗದಲ್ಲಿ ಹಿಟ್ಟಿನಿಂದ ಮಾಡಿದ ಹೋಮಸಾಧನ ದ್ರವ್ಯ. ಯಜ್ಞದಲ್ಲಿ ಸೋಮಪಾನ ಆಚರಣೆಯ ಒಂದು ಭಾಗ.

*ವಿವರಗಳಿಗೆ ನೋಡಿ: ಆಸವ.*

೭೪೪. ಸೌರಮತ

ಐದಂ ತಿಥಿಭಿ: ತದ್ವತ್ ಸಂಕ್ರಾಂತ್ಯ ಸೌರ ಉಚ್ಯತೆ. ಮೇಷ, ವೃಷಭ, ಕರ್ಕಾಟಕ ಇತ್ಯಾದಿ ಹನ್ನೆರಡು ತಿಂಗಳುಗಳ ಲೆಕ್ಕವನ್ನು ಸೌರಮಾನವೆಂದು ಕರೆಯುತ್ತಾರೆ.

ಚಾಂದ್ರ ಮಾತೃಪ್ರಧಾನ ಕುಟುಂಬ ಪದ್ಧತಿಯು ಅಮಾನ್ಯವಾಗಿ ಸೌರ ಪಿತೃಪ್ರಧಾನ ಕುಟುಂಬ ಪದ್ಧತಿ ರೂಢಿಗೆ ಬಂದುದು ನಿಜವಿದ್ದರೂ ಪ್ರಪಂಚದಲ್ಲಿ ಏಕಂ : ಸತ್ ಭೂಮಿಕೆಯ ಚಾಂದ್ರ ಸಂಪ್ರದಾಯದ ದೈವತಗಳು ಹಾಗೂ ಸಮಯಾಚಾರಗಳೇ ಒಟ್ಟಿನಲ್ಲಿ ಉಳಿದಿವೆಯೆ ಹೊರತು; ಋತ: ಸತ್ಯದ ಭೂಮಿಕೆಯ ಸೌರ ದೈವತಗಳಾಗಲಿ ಸಮಯಾಚಾರಗಳಾಗಲಿ ಎಲ್ಲಿಯೂ ಜೀವಂತ ಕಾಣುವುದಿಲ್ಲ.

ಸೌರ=ಪ್ರಕಾಶ ತತ್ವದ ದೈವತ ಪೂಜೆಯ ಹಂತಕ್ಕೆ ಬಂದಿದ್ದ ಮಾನವ ಸಮಸ್ಕೃತಿಯು ಮರಳಿ ಚಾಂದ್ರ : ನೀರ-ಅಂಜನ ಪ್ರಕಾಶದ ರಾತ್ರೀ 'ಸಮೆ' (:ಸಮಯ)=ನಾಗಹೆಡೆವಣೆಯ ಬೆಳಕಿನಲ್ಲಿ ಬಾಳಬಟ್ಟೆಯಲ್ಲಿ ಸಾಗಿದ್ದು ಕಾಣಿತ್ತಿದೆ. ಆದರೆ ಒಮ್ಮೆ ಕೆಲಕಾಲವಾದರೂ ರೂಢಿಯಲ್ಲಿ ಇದ್ದಿತೆಂಬ ಸೌರ : ಪ್ರಕಾಶ ಪೂಜಾ ಸಮಯಾಚಾರದ ಏನೂ ಅವಶೇಷಗಳೇ ಉಳಿಯದೆ ಅದು ನಾಮಶೇಷವಾಗಲಾರದು ಎಂದು ಶಂಬಾ ಅಭಿಪ್ರಾಯ.

ಅವರ ಪ್ರಕಾರ ಆಪ: ರಸ ಪಂಥೀಯ ನಾಗಾರಾಧನೆಯು, ಭಾರತೀಯ ಮೂಲದ್ದು-ಭೂಮಧ್ಯ ಸಮುದ್ರ, ಇರಾಕದವರೆಗಿನ ಕ್ರಿ.ಪೂ.೪೦೦೦ ವರುಷಗಳ ಸುಮಾರಿನ ಸಂಸ್ಕೃತಿಗೆ ಸಂಬಂಧಪಟ್ಟುದು ಅಥವಾ ಸುಮಾರಾಗಿ ಆ ಸಮಾನ ಆಕೃತಿಯದು ಆಗಿದೆಯೆಂದು ಗ್ರಹಿಸಬೇಕಾಗುತ್ತದೆ. ಸೌರ ಪ್ರತಿಮಾ ಪೂಜಕರ ಅಗ್ನ್ಯಾರಾಧನೆಯು ಇರಾಣ ದತ್ತಣಿಂದ ಭಾರತಕ್ಕೆ ಪಂಚನದ ದೇಶಕ್ಕೆ ಬಂದಿತೆಂದು ಋಗ್ವೇದದ ಹಲವು ಋಚೆಗಳ ಮೂಲಕ ಊಹಿಸಲು ಅವಕಾಶವಿದೆ.

'ರಸೋಹಂ ಅಪ್ಸು' ಎಂಬ ಗೀತೆಯ ಭಗವಂತನಿಗೆ, 'ಸೋಮ'ಪಾಯಿಗಳ ಯಜ್ಞವು, ಎಂದರೆ ನೆಲದ ಮೇಲೆ ರಚಿಸಿದ ಅಗ್ನಿಕುಂಡದಲ್ಲಿ ಆಹುತಿ ಹಾಕಿ ಮಾಡುತ್ತಿದ್ದ ಸೌರ ಪರಂಪರೆಯ ಯಜ್ಞವು ಅಮಾನ್ಯವಿತ್ತು. ೧೪ ಆಪ: ರಸ ಪಂಥೀಯ ಈ 'ಪ್ರಾಜಾಪತ್ಯ ಯಜ್ಞ'ವು ಲೋಕಪ್ರಿಯವಾಗಿ, ಸೌರಪಂಥೀಯ ಯಜ್ಞ ವಿಧಾನವು ತಿರಸ್ಕೃತವಾಗುತ್ತದೆ. 'ಪ್ರಾಜಾಪತ್ಯ ಅಗ್ನಿ'೧೫ 'ಪ್ರಾಜಾಪತ್ಯ ಸೂರ್ಯ', ಎಂಬ ನೂತನ ಅಗ್ನಿ, ನೂತನ ಸೂರ್ಯರ ಪ್ರತಿಮಾ: ಸಂಕೇತಗಳು ತಲೆಯೆತ್ತುತ್ತವೆ.

ಸೌರ ಪಂಥೀಯರ ಅಕೃತ್ಯಗಳಿಂದ 'ಸವಿತೃ'ಪ್ರತಿಮೆಗೆ ಕುಂದುಬಂದಂತೆ ಆಪ : ರಸ ಪಂಥೀಯರು ಈ ದಿವ್ಯ ತೇಜೋಮಯ ಸವಿತೃವನ್ನು 'ಅಪಾಂ ನಪಾತ್' : (ನೀರೊಳಗಿನ ಅಗ್ನಿ : ಸರ್ಪ) ಈ ದೈವತದ ಸಾಲಿನಲ್ಲಿ ತಂದು ನಿಲ್ಲಿಸುವಲ್ಲಿ, ಆಗಿರುವ ಅರ್ಥ : ಮೂಲ್ಯ : ಸೌಂದರ್ಯದ ಅಪಾರ ಹಾನಿ ಎಂದೂ ತುಂಬಿ ಬರಲಾರದು.

ಇದು ಅಖಿಲ ಭಾರತೀಯ ಶ್ರದ್ಧಾಸ್ಥಾನ. ಕರ್ಣಾಟ-ಮರ್ಹಾಟಿಗಳಲ್ಲಿ ಹಿಂದಿನ ಕಾಲದ ಸೂರ್ಯದೇವಾಲಯಗಳಿವೆ. ರವಿ, ಆದಿತ್ಯ, ಭಾನು-ಭಾಸ್ಕರಾದಿ ಹೆಸರಿನಲ್ಲಿ ಪೂಜೆ ಸಲ್ಲುತ್ತಿತ್ತು. ಈ ದೇವನಾಮದ ಸ್ಥಲನಾಮಗಳೂ ಉಂಟು.

ಸೂರ್ಯಾರಾಧನೆ 'ಮಾರ್ತಂಡ' ರೂಪದಲ್ಲಿ ಮುಖ್ಯವಾಗಿ ಮೈಲಾರ ಸಂಪ್ರದಾಯದಲ್ಲಿ ಈಗಲೂ ಉಳಿದಿದೆ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೩, ೪*
*ಹಾಲುಮತ ದರ್ಶನ ಪುಟ. ೩೩, ೯೮, ೧೭೮, ೧೮೧.*

**೭೪೫. ಸ್ತ್ರೀಧನ**

*ಪಂಪನ 'ಆದಿಪುರಾಣದಲ್ಲಿ'* ಮುತ್ತಮ್ *ಆತ್ಮೀಯ ಸ್ಥಪತಿ ರತ್ನ ವಿರಚಿತ ಮಣಿ ಕನಕ ಖಚಿತ ಶಿಬಿಕಾಂದೋಳಾದಿ ಯಾನಂಗಳು ಮಂ: ಕನಕಮಯ ಯೋಗಾಳಂಕೃತ ಗಳಾಗಿ ಮೆಟ್ಟುವ ಬಜ್ಜರಿಗರ್ತೆಗಳುಮಂ,* ವ್ಯೋಢದೊಳ್ ನಿಟ್ಟೆ ಪಟ್ಟ, ಮಣಿಮಯ *ಮಂಡನಾಯೋಗದೊಳೋಡಂ ಬಟ್ಟ ಪಿಡಿಗಳುಮಂ,* ಮುಖಿವ *ತಿಳಿದ ಗಂಡರ ಪೆಂಡಿರ ನುಡಿಗಳಿಗೆ ಬಂಡಳಿಸುವ ಪುರುಳಿಗಳುಮನ್, ಆಕಾಂಡ ತಾಂಡವಾರಂಭ, ಶೌಂಡ ಶಿಖಂಡಿ* ಮಂಡಳಮುಮಂ; *ಲೀಲಾಲಸಹಮನಮನ್: ಅಲಸಗಮನೆಯಗುರ್ಪದೇಶಂಗೆಯ್ವ ದೀವದ ರಾಜಹಂಸೆಗಳುಮಂ: ಕಬ್ಜ–ವಾಮನ – ಬಧಿರ–ಮೂಕ–ಕಿರಾತೋನ್ಮತ್ತ ಬಡ ಜನಂಗಳುಮಂ: ಗಾಯಕ – ವಾದಕ – ನರ್ತಕ – ಕಥಕ –* ಪುಣ್ಯ *ಪಾಠಕ –* ವೈತಾಳಿಕ ನಿಕರಮುಮಂಕೊಟ್ಟು, ಪಂಡಿತೆಯುಮನ್ ಒಡವೋಪಂತು ಮಾಡಿ" ಎಂದು *ಬರುತ್ತದೆ. (೪–೫೪ವ)*

ತಂದೆಯು ಮಗಳಿಗಾಗಿ ಇವೆಲ್ಲವನ್ನೂ ಕೊಡುತ್ತಾನೆ. ಕಾತ್ಯಾಯನನು ಸ್ತ್ರೀಧನದ ಕುರಿತು ವಿವರವಾದ ಚರ್ಚೆಯನ್ನು ಮಾಡುತ್ತಾನೆ.

ಇದು 'ಪಿತೃದತ್ತ' ಆಸ್ತಿಯ ವರ್ಗಕ್ಕೆ ಸೇರುವಂಥ ಆಸ್ತಿಯಾಗಿದೆ.

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಆಸ್ತಿಯು ಸಂಪತ್ತಿನ ಸೂಚಕವಾಗಿ ಬರುತ್ತದೆ. ಭಾರತೀಯ ಪರಂಪರೆಯಲ್ಲಿ ಚಾರಿತ್ರಿಕವಾಗಿ ಗಮನಿಸಿದಾಗ, ಆಸ್ತಿಯನ್ನು ನೇರವಾಗಿ ಹೆಣ್ಣಿಗೆ ಕೊಡುವ ವಿಚಾರವು ಅಷ್ಟಾಗಿ ಉಕ್ತಗೊಂಡಿಲ್ಲ. ಬಹುತೇಕ ಸಂದರ್ಭಗಳಲ್ಲಿ ಸ್ತ್ರೀ ಧನದ ಕುರಿತಂತೆ ಉಲ್ಲೇಖಗಳು ದೊರೆಯುತ್ತವೆ. ಇದಕ್ಕೆ ದಾಯಾಭಾಗ ಎಂದೂ ಕರೆಯಲಾಗಿದೆ. ಸ್ತ್ರೀಗೆ ನೇರವಾಗಿ ಆಸ್ತಿಯ ಹಕ್ಕು ಇಲ್ಲವಾದರೂ, ಅವಳ ಜೊತೆ ಬಂದ ಬಳುವಳಿಯನ್ನು ಅವಳ ಸಂಪತ್ತೆಂದು ಪರಿಗಣಿಸಿದ್ದು ಕಂಡು ಬರುತ್ತದೆ.

ಇದೇ ಕೃತಿಯಲ್ಲಿ ಹೆಣ್ಣೊಬ್ಬಳು ರಾಜ್ಯಸೂತ್ರವನ್ನು ಕೈಗೆ ಎತ್ತಿಕೊಂಡ ವಿಷಯವು ಬರುತ್ತದೆ (೪–೮೧ವ). ಮತ್ತೊಂದು ಕಡೆ, ಹೆಣ್ಣನ್ನು ಕನ್ಯಾರತ್ನವೆಂದು ಕರೆಯಲಾಗಿದೆ (ಅದೇ ೮–೧೫ವ). ಮೊದಲನೆಯ ಘಟನೆಯಲ್ಲಿ ಹೆಣ್ಣಿಗೂ – ಆಸ್ತಿಗೂ ನೇರ ಸಂಬಂಧ ಕಲ್ಪಿತವಾಗಿದೆ. ಎರಡನೆಯ ಘಟನೆಯಲ್ಲಿ ಹೆಣ್ಣನ್ನು ಆಸ್ತಿಗೆ, ರತ್ನಕ್ಕೆ ಹೋಲಿಸಲಾಗಿದೆ. ಕನ್ನಡ ಕಾವ್ಯಗಳಲ್ಲಿ ಈ ರೀತಿಯ ಕಲ್ಪನೆಯು ಪದೇ ಪದೇ ಕಾಣಿಸುತ್ತದೆ. ಲಕ್ಷ್ಮಿಯು ಮಾತೃಮೂಲೀಯ ಅಂಶವುಳ್ಳ ದೇವತೆಯಾದರೂ ನಂತರ ಬ್ರಾಹ್ಮಣ ಪ್ರಾಬಲ್ಯವು ಉಂಟಾದಾಗ ಇದಕ್ಕೆ ಹೊಸ ಅರ್ಥವು ಪ್ರಾಪ್ತವಾಯಿತು. ಇವಳು ವಿಷ್ಣುವಿನ

ಹೆಂಡತಿಯೆಂಬ ಹೋಲಿಕೆಯನ್ನು ಕೊಡಲಾಯಿತು

ಈ ಕೃತಿಯಲ್ಲಿ ಹೆಣ್ಣೊಬ್ಬಳಿಂದ ರಾಜ್ಯವನ್ನು ವಶಪಡಿಸಿಕೊಂಡು, ಅನಂತರ ಅವಳನ್ನೇ ರಾಜ್ಯದ ಉತ್ತರಾಧಿಕಾರಿಯಾಗಿ ನೇಮಿಸಿದ ವಿಚಾರವು ಬರುತ್ತದೆ (ಅದೇ. ೧೩-೬೭ವ).

ಮತ್ತೊಂದು ಕಡೆ, ಅಣ್ಣಂದಿರು ತಂಗಿಯರನ್ನು ಅರಸನಿಗೆ ಒಪ್ಪಿಸಿ, ಅದರ ಜೊತೆಯಲ್ಲಿ ರತ್ನಾದಿಗಳನ್ನು ಬಳುವಳಿಯಾಗಿ ಕೊಟ್ಟ ವಿಚಾರವು ಉಕ್ತವಾಗಿದೆ (ಅದೇ. ೧೩-೮೦). ಈ ಎರಡೂ ಸನ್ನಿವೇಶಗಳು 'ಪೂರ್ವಪುರಾಣ'ದಲ್ಲಿ ಉಕ್ತವಾಗಿವೆ.

'ಪಂಪಭಾರತ'ದಲ್ಲಿ ತಂದೆಯು ತನ್ನ ಮಗಳ ಮಕ್ಕಳಿಗೆ ಆಸ್ತಿಯು ಸಲ್ಲಬೇಕೆಂದು ಕೇಳುತ್ತಾನೆ (೧-೭೦ವ). ಅನಂತರ ಇದೇ ಹೆಣ್ಣು ತನ್ನ ರಾಜ್ಯದ ಮತ್ತು ಕುಲದ ಬೆಳವಣಿಗೆಯ ಬಗ್ಗೆ ಚಿಂತಿಸುತ್ತಾಳೆ (೧-೮೪ವ). ಇವೆಲ್ಲಾ ಮುಖ್ಯವಾಗಿ ಆಸ್ತಿ ಸಂಬಂಧಿತ ಆಸಕ್ತಿಯಾಗಿದೆ.

ಮದುವೆಯ ಸಂದರ್ಭದಲ್ಲಿ ಅಣ್ಣನು ತಂಗಿಗೆ ಆಭರಣ, ಆನೆ, ಕುದುರೆ, ವೇಶ್ಯಾಸ್ತ್ರೀ ಮುಂತಾದ ಸೊತ್ತುಗಳನ್ನು ಬಳುವಳಿಯಾಗಿ ಕೊಡುತ್ತಾನೆ. (ಅದೇ. ೫-೨೬ವ) ಇದನ್ನು ಧಾಯಾಭಾಗದ ಕಾನೂನಿನ ದೃಷ್ಟಿಯಿಂದ 'ಯೌತಕ' ಎಂದು ಕರೆಯಬಹುದು.

ಒಂದನೆಯದರಲ್ಲಿ ನಾಲ್ಕು ವಿಭಾಗಗಳಿವೆ:

ಶುಲ್ಕ – ಇದು 'ಮಿತಾಕ್ಷರ'ದ ಪದ್ಧತಿಯನ್ನೇ ಅನುಸರಿಸುತ್ತದೆ.

ಯೌವತಕ (Yautaka) – (೧) ಮದುವೆಯಾಗದ ಮಗಳಿಗೆ (೨) ಮದುವೆಯಾದ ಮಗಳಿಗೆ.

ಅನ್ವಧೇಯ (Anvadheya and ) ಮತ್ತು ಭ್ರಾತೃಪ್ರೀತಿ ದತ್ತ (Bhatripriti-datta)

ಗಂಡು ಮಕ್ಕಳಿಗೆ ಮತ್ತು ಮದುವೆಯಾಗದ ಹೆಣ್ಣು ಮಕ್ಕಳಿಗೆ.

ಗಂಡು ಮಕ್ಕಳಿಗೆ ಮತ್ತು ಮದುವೆಯಾದ ಹೆಣ್ಣು ಮಕ್ಕಳಿಗೆ

ಹೆಣ್ಣು ಮಕ್ಕಳ ಭಾಗ.

ಗಂಡು ಮಕ್ಕಳ ಮಕ್ಕಳಿಗೆ.

ಇತರ ಕ್ರಮಗಳು: ಮಿತಾಕ್ಷರದ ಅನುಸಾರವಾಗಿ.

ಎರಡನೆಯ ಭಾಗವಾದ – ಅಪರಿಭಾಷಿಕ (Non-Technical) ಸ್ತ್ರೀಧನವು ಮಗನಿಗೆ: ಮಗನ ಮಗನಿಗೆ: ಮಗನ ಮಗನ ಮಗನಿಗೆ, ಮಗಳಿಗೆ ಮಗಳ ಮಗನಿಗೆ, ಮಗಳ ಮಗಳಿಗೆ, ಮತ್ತು ಅದೇ ರೀತಿಯಲ್ಲಿ ಸಲ್ಲುತ್ತದೆ. ಶುಲ್ಕಂ: ಹೆಣ್ಣು ಮದುವೆಯಾಗಿ ಗಂಡನ ಮನೆಗೆ ಹೋಗುವಾಗ ಅವಳ ಮನವೊಲಿಸುವಂತೆ ಮತ್ತು ಗಂಡನ ಮನೆಗೆ ಹೋಗುವಂತೆ ಪ್ರೇರಿಸುವ ಬಹುಮಾನ.

ಯೌತಕ: ರಕ್ತ ಸಂಬಂಧಗಳಿಂದ ಮತ್ತು ಅತಿಥಿಗಳಿಂದ ಮದುವೆಯ ಸಂದರ್ಭದಲ್ಲಿ ಕೊಡುವ ಬಹುಮಾನ.

ಪಿತೃದತ್ತ: ಮದುವೆಯ ಅನಂತರ ತಂದೆಯಿಂದ ವಧುವಿಗೆ ಬರುವ ಬಹುಮಾನ.

ಆಯುಕ್ತ: ಬಂಧುಗಳಿಂದ ಮತ್ತು ರಕ್ತ ಸಂಬಂಧಿಗಳಿಂದ ಮದುವೆಯ ಪೂರ್ವ ಅಥವಾ ಅನಂತರ ಸಿಗುವ ಉಡುಗೊರೆ. (ಅದೇ ಪು.೮೯)

ಸ್ಥೂಲವಾಗಿ, ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಹೆಣ್ಣಿನ ಆಸ್ತಿಯ ಪರಿಕಲ್ಪನೆಯ ಚಿತ್ರಣವು ಮೇಲಿನಂತಿದೆ.

ಆಸ್ತಿಯು ಸಂಪತ್ತಿನ ಸೂಚನೆಯಾಗಿದ್ದರೆ ಕೇಂದ್ರಿತ ಕುಟುಂಬ ವ್ಯವಸ್ಥೆಯಲ್ಲಿ ಸಂಪತ್ತು ಪುರುಷ ಕೈಯೊಳಗೆ ಇರುತ್ತದೆ. ಕ್ರಿ.ಶ. ಆರನೇ ಶತಮಾನದ ಹೊತ್ತಿಗೆ ಭಾರತೀಯ ಪರಂಪರೆಯಲ್ಲಿ ಉತ್ಪಾದನಾ ಸಂಬಂಧಗಳ ದೃಷ್ಟಿಯಿಂದ ಮಹತ್ವದ ಬದಲಾವಣೆಯಾದುದು ಕಂಡುಬರುತ್ತದೆ. ಈ ಬದಲಾವಣೆಯು ಆಸ್ತಿಯನ್ನು ಕೊಳ್ಳುವ ಮತ್ತು ಮಾರುವ ದೃಷ್ಟಿಯಿಂದ 'ಏಕಕೇಂದ್ರಿತವಾಗಿರುವುದು ತಿಳಿದುಬರುತ್ತದೆ. ಆಸ್ತಿ ಮತ್ತು ಉತ್ಪಾದನಾ ಸಂಬಂಧದ ಅತ್ಯಂತ ಸಂಕೀರ್ಣವಾದ ವ್ಯಾಖ್ಯೆಯನ್ನು ಸೂತ್ರಗಳು ಮಾಡುತ್ತವೆ ಈ ರೀತಿಯ ಬದಲಾವಣೆಯ ಹಿನ್ನೆಲೆಯಲ್ಲಿ ಹೆಣ್ಣಿಗೆ ಆಸ್ತಿಯ ಕೆಲವಂಶ ಮಾತ್ರವೇ ಸಿಗುತ್ತದೆ ಎಂಬುದನ್ನು ಕಾತ್ಯಾಯನ, ಮನು ಮೊದಲಾದವರ ಸೂತ್ರಗಳು ಪ್ರತಿಪಾದಿಸುತ್ತವೆ.

ಎರಡನೆಯದಾಗಿ, ರಾಜಕೀಯ ಪ್ರಾಬಲ್ಯದ ಸ್ಥಿತಿಯು ರಾಜನನ್ನು ಕೇಂದ್ರಿತ ವ್ಯಕ್ತಿಯನ್ನಾಗಿ ಮಾಡುತ್ತದೆ. ಈ ಕೇಂದ್ರಿತ ಅರ್ಥವ್ಯವಸ್ಥೆಯ ಒಟ್ಟು ಪರಿಣಾಮವೆಂದರೆ, ರಾಣಿಯರಿಗೆ ಆಸ್ತಿಯ ವಿಚಾರದಲ್ಲಿ ಹೆಚ್ಚು ಹಕ್ಕಿಲ್ಲದೇ ಇರುವುದು, ಕನ್ನಡ ಕಾವ್ಯಗಳಲ್ಲಿ ಬರುವ ಕೆಲವು ರಾಣಿಯರ ಉಲ್ಲೇಖವು ಕೂಡಾ ರಾಜನಿಗೆ ಶರಣಾಗುವ ರೀತಿಯಲ್ಲಿ ಇರುವುದನ್ನು ಗಮನಿಸಿದಾಗ ಇದು ಸ್ಪಷ್ಟವಾಗುತ್ತದೆ. ಮುಖ್ಯವಾಗಿ ಇದು ಪುರುಷ ಪ್ರಾಬಲ್ಯದ ಸ್ಥಿತಿಯನ್ನು ಸೂಚಿಸುತ್ತದೆ. ಮೇಲು ವರ್ಗದ ಸ್ತ್ರೀಯರನ್ನು ಸಂಕೇತಿಸುವ ರಾಣಿಯರು ಕೆಲವೆಡೆಯಲ್ಲಿ ಆಕಸ್ಮಿಕವಾಗಿ ರಾಜ್ಯವನ್ನು ಹೊಂದಿದ್ದರೂ ಅವರು ಕಾವ್ಯಗಳಲ್ಲಿ ಪುರುಷನಿಗೆ ಶರಣಾಗುವ ರೀತಿಯು ಚಿತ್ರಿತವಾಗಿದೆ. ಇದಕ್ಕೆ ಕಾರಣವೆಂದರೆ: ಗಂಡಿನ ಪ್ರಾಬಲ್ಯದ ಎದುರು ಹೆಣ್ಣು ಶರಣಾಗುವುದು.

ಈ ಕಾರಣದಿಂದಲೇ ಹೆಣ್ಣಿಗೆ ಸ್ಥಿರ ಆಸ್ತಿಯು ವಂಶಪಾರಂಪರ್ಯವಾಗಿ ಬಂದ ಸೂಚನೆಗಳು ಕನ್ನಡ ಕಾವ್ಯದಲ್ಲಿ ಕಾಣಸಿಗುವುದಿಲ್ಲ.

ಸ್ತ್ರೀಧನದ ಕುರಿತಂತೆ ಕನ್ನಡ ಕಾವ್ಯಗಳಲ್ಲಿ ಉಲ್ಲೇಖಗಳಿವೆ. ತಂದೆ ಅಥವಾ ಸಹೋದರನು ಮಗಳು ಅಥವಾ ತಂಗಿಯನ್ನು ಮದುವೆ ಮಾಡಿಕೊಡುವಾಗ ಜೊತೆಯಲ್ಲಿ ಬಳುವಳಿಯನ್ನು ಕೊಡುವ ಕ್ರಮವು ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ವಿಶೇಷವಾಗಿ ಉಲ್ಲೇಖವಾಗಿದೆ. ವರನನ್ನು (ಗಂಡನ್ನು) ಆದರ್ಶೀಕರಿಸಿದ್ದರ ಪ್ರತಿಫಲವಿದು. ಗಂಡು ಆರ್ಥಿಕ ವ್ಯವಸ್ಥೆಯನ್ನು ಕೈಗೆತ್ತಿಕೊಂಡುದರ ಬಗೆಗೆ ಈಗಾಗಲೇ ಉಲ್ಲೇಖಿಸಲಾಗಿದೆ. ಎರಡನೆಯದಾಗಿ ಬಳುವಳಿಯು ಹೆಣ್ಣಿನ ಜೊತೆಯಲ್ಲಿ ಬರುವುದರಿಂದ ಇದು ಆಕೆಯ 'ಚರ' ಸೊತ್ತು ಆಗುತ್ತದೆ. ಬಳುವಳಿ ರೂಪದಲ್ಲಿ ಸಿಗುವ ಸೊತ್ತು ಕೂಡಾ ಅಂತಿಮವಾಗಿ

ಅವಳ ವಿನಿಯೋಗಕ್ಕೆ ಸಲ್ಲುವಂಥದ್ದು ಆಗಿದ್ದರೂ, ಪರೋಕ್ಷವಾಗಿ ಗಂಡಿಗೆ ಅದರ ಮೇಲೆ ಅಧಿಕಾರವಿರುತ್ತದೆ.

ಕೇಂದ್ರಿತ ಕುಟುಂಬ ಸ್ವರೂಪದಲ್ಲಿ ಗಂಡು ಆರ್ಥಿಕ ಉಸ್ತುವಾರಿಯನ್ನು ನೋಡುವವನಾಗಿರುತ್ತಾನೆ. ಇದರಿಂದ ಆಸ್ತಿ ಇತ್ಯಾದಿ ವಿಚಾರಗಳು ನೇರವಾಗಿ ಆಸ್ತಿಯ ಹಕ್ಕು ತರುವುದಿಲ್ಲ. ಅವಳಿಗೆ ಆಸ್ತಿಯು ಸಿಕ್ಕಿದರೂ ಕೇವಲ ಆಕಸ್ಮಿಕ ಅಷ್ಟೆ. ಈ ನೆಲೆಯಿಂದ ಹೆಣ್ಣಿಗೆ – ಅವಳು ಹೆಂಡತಿಯಾಗಿ ಕಾರ್ಯ ನಿರ್ವಹಿಸುವ ಅಂಶವು ಮತ್ತು ತಾಯಿಯಾಗಿ ಮಗುವನ್ನು ಹೆರುವ ಅಂಶವು ಮಾತ್ರವೇ ಮುಖ್ಯವೆನ್ನುವಂತೆ ಕನ್ನಡ ಕವಿಗಳು ಚಿತ್ರಿಸಿದ್ದಾರೆ. ಇದರಿಂದ ಅವಳಿಗೆ ನೇರವಾಗಿ ಆಸ್ತಿಯ ಅಧಿಕಾರವಿದೆ ಎನ್ನುವ ಅಂಶವನ್ನು ಕವಿಗಳು ಪರೋಕ್ಷವಾಗಿ ನಿರಾಕರಿಸಿದ್ದಾರೆ.

೧೯೫೬ರ ಹಿಂದೂ ಕಾನೂನಿನ ಅಧಿನಿಯಮದ ಪ್ರಕಾರ–

ಪತ್ನಿ, ವಿಧವೆಸೊಸೆ, ಮಕ್ಕಳು ಮತ್ತು ವಯಸ್ಸಾದ ತಂದೆ ತಾಯಿಗಳು ಮಗಳಂದಿರು, ಅಧರ್ಮಜ ಮಗಂದಿರು, ವಯಸ್ಸಾದ ತಂದೆ ತಾಯಿಗಳು, ಮೃತನ ಅಥವಾ ಮೃತಳ ತಂದೆ, ಅವನ ತಂದೆ ತಾಯಿ, ಅವನ ವಿಧವೆ, ಅವನ ಮಗ, ಅವನ ಅವಿವಾಹಿತ ಮಗಳಂದಿರು ವಿಧವೆಯಾದ ಮಗಳು, ಅವಳ ಮಗನ ವಿಧವೆ ಅವನ ಅಪ್ರಾಯಸ್ಥ ಅಧರ್ಮಜ ಮಗ, ಅವನು ಅಧರ್ಮಜ ಅವಿವಾಹಿತ ಮಗಳು – ಇಷ್ಟು ಜನರು ಧನಕ್ಕೆ ಪಾಲುದಾರರಾಗಿರುತ್ತಾರೆ. ಹಳೆಯ ಹಿಂದೂ ಕಾನೂನಿನ ಪ್ರಕಾರ ಒಬ್ಬ ತಂದೆಯು ತನ್ನ ಅವಿವಾಹಿತೆಯರಾದ ಮಗಳಂದಿರನ್ನು ಪೋಷಿಸಲು ಬಾಧ್ಯ, ತಂದಯ ಮರಣದ ಬಳಿಕ ತನ್ನ ಅವಿವಾಹಿತೆಯರಾದ ಮಗಳಂದಿರನ್ನು ತಂದೆಯ ಆಸ್ತಿಯ ಹಕ್ಕಿಗೆ ಪಾಲುದಾರರಾಗಿದ್ದರು.

ಮಿತಾಕ್ಷರದ ಪ್ರಕಾರ ಒಬ್ಬ ದಾಯಾದಿಯು ಸ್ತ್ರೀ ಉತ್ತರಾಧಿಕಾರಿಯನ್ನು ಬಿಡದೆ ಅಥವಾ ಸ್ತ್ರೀವಾರಸುದಾರರೂ ಸ್ವತ್ತಿನಲ್ಲಿ ಪಾಲು ಪಡೆಯಲು ಹಕ್ಕುದಾರರಾಗುವರು. ಉತ್ತರಾಧಿಕರತ್ವವು ಪ್ರೀತಿ ಮತ್ತು ಮಮಕಾರದ ಮೇಲೆ ಆಧಾರಿತವಾಗಿದೆ. ಪಿಂಡ ಪ್ರಧಾನ ಮಾಡುವ ಹಕ್ಕಿನ ಮೇಲೆ ಆದ್ಯತರಯ ಹಕ್ಕು ನೀಡಲಾಗಿದೆ. ಗೋತ್ರಜ ಅಥವಾ ಬಂಧುವಿಗೆ ವಾರಸುದಾರರಾಗುವ ಹಕ್ಕು ಕೊಡಲಾಗಿದೆ. ಒಬ್ಬ ಅವಿವಾಹಿತ ಹೆಂಗಸಿಗೆ, ಒಬ್ಬ ವಿಧವೆಗೆ ಅಥವಾ ತನ್ನ ಗಂಡನಿಂದ ಅಭಿತ್ಯಜಿಸಲ್ಪಟ್ಟ ಒಬ್ಬ ಹೆಂಗಸಿಗೆ ತನ್ನ ತಂದೆಯ ಮನೆಯಲ್ಲಿ ನಿವಾಸ ಮಾಡುವ ಹಕ್ಕು ಇದೆ. ಒಬ್ಬ ವಿಧವೆಯು ಉತ್ತರಾಧಿಕಾರ ಪಡೆಯುವೆಂದು – ಆಕೆಯು ಪುನರ್ವಿವಾಹಿತೆಯಾಗಿದ್ದರೆ ಆಕೆಯು ವಾರಸಿನ ಹಕ್ಕು ಪಡೆಯಲಾರಳು, ಮಗಳು, ವಿಧವೆ, ತಾಯಿ, ಪೂರ್ವ ಮೃತನ ಮಗನ ಮಗಳು, ಪೂರ್ವಮೃತ ಮಗನ ಪೂರ್ವ ಮೃತನ ಮಗನ ವಿಧವೆ, ಪೂರ್ವಮೃತ ಮಗಳ ಮಗಳು ಹಕ್ಕುದಾರರಾಗಿರುತ್ತಾರೆ.

ಸ್ತ್ರೀಯ ಸೊತ್ತನ್ನು ಸ್ತ್ರೀಧನವೆಂದು ಕರೆಯುತ್ತಾರೆ. ಗೌತಮ ಧರ್ಮ ಸೂತ್ರದಲ್ಲಿ ಇದರ ಉಲ್ಲೇಖವಿದೆ. "ಅಧ್ಯಗ್ನಿಗಿಂತ ಮೊದಲು ಏನು ಕೊಡಲಾಗಿದೆಯೋ, ಪ್ರೀತಿಯ

ಸಂಕೇತವಾಗಿ ಏನು ನೀಡಲಾಗಿದೆಯೋ ಮತ್ತು ಸೋದರನಿಂದ ಪಡೆಯಲಾಗಿದೆಯೋ, ಒಬ್ಬ ತಾಯಿಯಿಂದ ತಂದೆಯಿಂದ ಪಡೆಯಲಾಗಿದೆಯೋ ಇವು ಸ್ತ್ರೀಧನಗಳಾಗುತ್ತವೆ ಯೆಂದು ಮನುವು ಹೇಳುತ್ತಾನೆ. ನಾರದನು ಇದರ ಜೊತೆಗೆ ಗಂಡನಿಂದ ಪಡೆಯಲಾಗಿರುವುದು ಕೂಡಾ ಸ್ತ್ರೀಧನವಾಗುತ್ತದೆಯೆಂದು ಹೇಳುತ್ತಾನೆ.

ಹೆಣ್ಣಿಗೆ ತಂದೆಯಿಂದ, ತಾಯಿಯಿಂದ, ಗಂಡನಿಂದ, ಸಹೋದರನಿಂದ ಕೊಡಲ್ಪಟ್ಟದ್ದು ಅಥವಾ ಅಧ್ಯಗ್ನಿಯ ಕಾಲದಲ್ಲಿ ಅವಳಿಂದ ಪಡೆಯಲ್ಪಡ್ಡುದು ಅಥವಾ ಅತ್ಯಧಿವೇಶನದಲ್ಲಿ ಕೊಡಲ್ಪಟ್ಟುದು ಸ್ತ್ರೀಯ ಸೊತ್ತಾಗುತ್ತದೆಯೆಂದು ಯಾಜ್ಞವಲ್ಕ್ಯ ಹೇಳುತ್ತಾನೆ. ಕಾತ್ಯಾಯನನು ಕರಕುಶಲತೆಯಿಂದ ಮಾಡಿದ ಸಂಪಾದನೆ ಮತ್ತು ಯೌವನಾವಸ್ಥೆ ಅಥವಾ ದಿಬ್ಬಣ ಅಥವಾ ವೈಧವ್ಯದಲ್ಲಿ ಆದರೆ ದಾಂಪತ್ಯದಲ್ಲಲ್ಲದ ಅಪರಿಚಿತರಿಂದ ನೀಡಲ್ಪಟ್ಟ ಕೊಡುಗೆ.

ಮಿತಾಕ್ಷರದಲ್ಲಿ ತಂದೆಯಿಂದ, ತಾಯಿಯಿಂದ, ಗಂಡನಿಂದ, ಸೋದರನಿಂದ, ಸೋದರಮಾವನಿಂದ, ಅಧ್ಯಗ್ನಿಗಿಂತ ಮೊದಲು ಕೊಡಲ್ಪಟ್ಟುದು, ಎರಡನೆಯ ವಿವಾಹದಲ್ಲಿ ಮಾಡಲಾದ ಕೊಡುಗೆ, ಅತ್ಯಧಿವೇಶನದಲ್ಲಿ ಕೊಡಲಾದ ಕೊಡುಗೆ, ವಾರಸಿನಿಂದ ಖರೀದಿಯಿಂದ ವಿಭಜನೆಯಿಂದ ಪ್ರತಿಕೂಲ ಕಬ್ಜೆಯಿಂದ ತೀರ್ಪಿನಿಂದ ಪಡೆಯಲಾದ ಸ್ವತ್ತು ಸ್ತ್ರೀಧನಗಳೆಂದು ಹೇಳಲಾಗಿದೆ.

ಹೆಚ್ಚುವರಿ ಉತ್ಪಾದನಾ ಅಥವಾ ಮಿಗುವ ಮೌಲ್ಯದಲ್ಲಿ ಹೆಣ್ಣು ಗಂಡು ಸಮಾನ ಹಕ್ಕುದಾರರು.

*ವಿವರಗಳಿಗೆ ನೋಡಿ: ಪಿ.ವಿ ಕಾಣೆ. ೧೯೮೦ ಧರ್ಮಶಾಸ್ತ್ರದ ಇತಿಹಾಸ ಪುಟ. ೨೭೫, ೨೭೬*

*D.D. Kosambi; 1983 Myth & Reality P. 170*

*Jack Goody(Ed) 1973 The Character of Kinship P.89*

*Romila Thapar 1975 The Past and Prejudice P. 55*

**೭೪೬. ಸ್ತ್ರೀ ಮತ್ತು ರಾಜಕಾರಣ**

ಗುಪ್ತ ಅರಸರ ಕಾಲದಲ್ಲಿ (ಕ್ರಿ.ಪೂ. ನಾಲ್ಕರಿಂದ ಕ್ರಿ.ಶ. ನಾಲ್ಕನೇ ಶತಮಾನದವರೆಗೆ) ರಾಜಕೀಯ ಮತ್ತು ಆರ್ಥಿಕ ವ್ಯವಸ್ಥೆಯಲ್ಲಿ ಹೆಣ್ಣಿನ ಸ್ಥಾನ-ಮಾನದ ಬಗ್ಗೆ ಆ ಕಾಲದ ಮಹತ್ವದ ದಾಖಲೆಯಾಗಿರುವ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ವಿವರಗಳು ದೊರೆಯುತ್ತವೆ.

ಶಾತವಾಹನರ ಕಾಲದಲ್ಲಿ ಸ್ತ್ರೀಗೆ ಕೆಲವು ವಿಧದ ಸ್ವಾತಂತ್ರ್ಯವಿತ್ತೆಂದು ತೋರುತ್ತದೆ. ಅಂದಿನ ಹಲವರು ಸ್ತ್ರೀಯರು ಬೌದ್ಧ ದೇವಾಲಯಗಳಿಗೆ ವಿಪುಲವಾದ ದಾನವನ್ನು ನೀಡಿದ್ದರು. ದೇವಿ (ರಾಣಿ)ಯನ್ನು ತನ್ನಲ್ಲಿಗೇ ಕರೆಸಿಕೊಳ್ಳಬೇಕು. ಅವಳದ್ದಲ್ಲಿಗೇ ರಾಜನು ಹೋಗುವುದರಿಂದ ಅಪಾಯ ಸಂಭವಿಸಬಹುದು

*ವಿವರಗಳಿಗೆ ನೋಡಿ: ಶ್ರೀ ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳು ೨೦೧೦*

*ಕೌಟಲೀಯ ಅರ್ಥಶಾಸ್ತ್ರ ಪುಟ. ೭೯*

*ಎಂ.ವಿ. ಕೃಷ್ಣರಾವ್ ಮತ್ತು ಕೇಶವ ಭಟ್ಟ ಎಂ. ೧೯೭೦ ಕರ್ನಾಟಕ ಇತಿಹಾಸ ದರ್ಶನ*

*ಕೃಷ್ಣ ಭಟ್ಟ .ಕೆ. ೧೯೭೨ ಕೌಟಿಲ್ಯನ ಅರ್ಥಶಾಸ್ತ್ರ*

೭೪೭. ಸ್ತ್ರೀಯರು

ಸ್ತ್ರೀಯರು ನೀಚರಿಂದ ಭೋಗಿಸಲ್ಪಡುವರು. ಅರಸುಗಳು ಯೋಗ್ಯರಲ್ಲದವರನ್ನು ಸಲಹುತ್ತಾರೆ. ಅತಿಲೋಭಿಗಳಿಗೆ ವಸ್ತು ಸೇರುವುದು ಇಂದ್ರನು ಮಳೆ ಸುರಿಯುವುದು ನಾಡಿಗಲ್ಲ. ಗಿರಿಸಮುದ್ರಗಳಿಗೆ ಮಳೆ ಸುರಿಯುತ್ತಾನೆ (ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ, ಶ್ಲೋಕ ೯೨)

ಸ್ತ್ರೀಯರ ಬಗೆಗೆ ಪಂಚತಂತ್ರವು ತಳೆಯುವ ಧೋರಣೆಯನ್ನು ಇದು ಸೂಚಿಸುತ್ತದೆ. ಆದರೆ ಈ ಅಭಿಪ್ರಾಯ ವಿಶ್ವಾತ್ಮಕ ಧೋರಣೆಯೆಂದು ನಾವು ತಿಳಿಯುವಂತಿಲ್ಲ. ಇದು ಕೇವಲ ಒಂದು ಅಭಿಪ್ರಾಯ. ಸ್ತ್ರೀಯರು ನೀಚರಿಂದ ಭೋಗಿಸಲ್ಪಡುವರು ಎನ್ನುವ ವಾಕ್ಯಕ್ಕೆ ಪೂರಕವಾಗಿ ಉಳಿದ ಮಾತುಗಳು ಬಂದಿವೆ.

'ವಿಶಾಲವಾದ ಹೃದಯದ ಜ್ಞಾನಿ ಪುರುಷನು ನಾರಿಶರೀರದಿಂದ ಮೋಹವಶನಾಗುವುದಿಲ್ಲ. ಸ್ತ್ರೀಯರಲ್ಲಿ ರಮಣೀಯತೆಯನ್ನು ಕಾಣುವುದು ಮೋಹದಿಂದ ಮನದಲ್ಲಿ ವಿಕಾರಗಳನ್ನು ಉತ್ಪನ್ನ ಮಾಡುವ ಮದಿರೆಯಲ್ಲಿಯೂ ಯುವ ಸ್ತ್ರೀಯಲ್ಲಿಯೂ ಯಾವ ಅಂತರವೂ ಇರುವುದಿಲ್ಲ. ಯುವತಿಯು ಕಾಮ ಭಾವವನ್ನು ಜಾಗೃತಗೊಳಿಸುತ್ತಾಳೆ.

ಸ್ತ್ರೀಯರಿಗೆ ಪುರುಷದೋಹಕತ್ವವು ಜನ್ಮಸಿದ್ಧವು. ಆದುದರಿಂದ ಬುದ್ಧಿವಂತರು ಸ್ತ್ರೀಯರ ವಿಷಯದಲ್ಲಿ ಅಜಾಗರೂಕತೆ ವಹಿಸಬಾರದು.

ಹೆಣ್ಣು, ರತ್ನ, ವಿದ್ಯೆ, ಧರ್ಮ, ಶೌಚ, ಸೂಕ್ತಿ, ಶಿಲ್ಪಗಳನ್ನು ಎಲ್ಲಿದ್ದರೂ ಸ್ವೀಕರಿಸಬಹುದು ಎಂದು ಮನು ಹೇಳುತ್ತಾನೆ.

ಬ್ರಹ್ಮನು ತನ್ನ ದೇಹವನ್ನು ವಿಂಗಡಿಸಿ ಸ್ತ್ರೀ ಮತ್ತು ಪುರುಷರಿಗೆ ಜನ್ಮ ನೀಡಿದನು. (ಮನುಸ್ಮೃತಿ. ೧-೩೨)

ಸ್ತ್ರೀ ಎಂಬ ರತ್ನವನ್ನು ಯಾವ ಕುಲದಿಂದ ಬೇಕಾದರೂ ಆರಿಸಿಕೊಳ್ಳಬಹುದು. (ಮನುಸ್ಮೃತಿ. ೧-೧೩೮)

ಸ್ತ್ರೀಯರಿಗೆ ಮೊದಲು ದಾರಿ ಬಿಡಬೇಕು. (ಮನುಸ್ಮೃತಿ. ೧-೧೩೮)

ಸ್ತ್ರೀಯರು ಬಾಲ್ಯದಲ್ಲಿ ತಂದೆಯ ವಶದಲ್ಲಿಯೂ ಯೌವನದಲ್ಲಿ ಗಂಡನ ವಶದಲ್ಲಿಯೂ ಗಂಡ ಸತ್ತ ಮೇಲೆ ಮಗನ ಆಶ್ರಮದಲ್ಲಿಯೂ ಇರಬೇಕು. ಈ ದೃಷ್ಟಿಯಿಂದ ಸ್ತ್ರೀಯು ಸ್ವಾತಂತ್ರ್ಯಕ್ಕೆ ಅರ್ಹಳಲ್ಲ. (ಮನುಸ್ಮೃತಿ. ೫-೧೪೮)

ಸರಿಯಾದ ವಯಸ್ಸಿಗೆ ಮದುವೆ ಮಾಡದ ತಂದೆಯೂ, ಪ್ರೀತಿಸದ ಗಂಡನೂ, ಗಂಡ ತೀರಿದಾಗ ರಕ್ಷಿಸದ ಮಕ್ಕಳೂ ನಿಂದಾರ್ಹರು. (ಮನುಸ್ಮೃತಿ. ೯-೪)

ಅನ್ಯ ಪೂರ್ವ ಸ್ತ್ರೀಯರು ಎರಡು ಪ್ರಕಾರದವರಿದ್ದಾರೆ. ಒಬ್ಬಳು ಪುನರ್ಭೂ ಎರಡನೆಯವಳು ಸ್ವೈರಿಣಿ ಪುನರ್ಭೂಗಳಾದರೂ ಎರಡು ಪ್ರಕಾರದವರಿರುವರು. ಒಬ್ಬಳು ಕ್ಷತಾ, ಎರಡನೆಯವಳು ಅಕ್ಷತಾ. ಸಂಸ್ಕಾರಕ್ಕೆ ಮುಂಚಿತವಾಗಿ ಪುರುಷ ಸಂಬಂಧದಿಂದ ದೂರವಾದವಳು ಕ್ಷತಾ.

ಪ್ರಾಚೀನ ಸಂಕೇತಗಳಂತೆ ಸ್ತ್ರೀ–ಮತ್ತು ನೀರು ಇವುಗಳಲ್ಲಿ ನಿಕಟ ಸಂಬಂಧವಿರಬೇಕೆಂದು ಕಂಡುಬರುತ್ತದೆ. ನೀರಿನ ಸ್ತ್ರೀ–ಪ್ರತಿಮೆಗಳ ತಾರತಮ್ಯದಲ್ಲಿ ಅದ್ಭುತ ಪ್ರತಿಭೆಯು ವ್ಯಕ್ತವಾಗುತ್ತಿದೆ. ಇಡಾ, ಇರಾ, ಸರಸ್ವತಿ, ಮಹಿ (ರಸಾ–ಭೂಮಾತೆ), ಅದಿತಿ ಹಾಗೂ ಶ್ರೀದೇವಿ ಇವರ ವಿಚಾರವು ಆಗಿದೆ. ಈ ಆಪೋ ದೇವಿಯರು ಮಾನವ ಕುಲದ ಉದ್ಧಾರಕ ಶಕ್ತಿಗಳು. ಇವರಿಗೆ ನಾರೀಮಣಿಗಳು ಎನ್ನಬಹುದು.

ಈ ಸಂಕೇತದಲ್ಲಿ ಎರಡು ಅಂಶಗಳು ಅಡಕವಾಗಿರುವಂತಿದೆ. (೧) 'ನಾರ'(ಋ) ಸಂಪ್ರದಾಯವು ಇಂದ್ರನನ್ನು ಹೆದರಿಸುವಷ್ಟು ಪ್ರಬಲವಾಗಿತ್ತು.(೨) ಅಪ್ ಸರೆ ಇವಳು 'ನಾರ'ದಿಂದಾದ ನಾರಿ. ಅರ್ಥಾತ್ ನೀರೆ. ದೇಶೀಯ ನಾರಿ ಸಂಸ್ಕೃತದಲ್ಲಿ ಪ್ರೌಢ ಗೃಹಿಣಿಯಾಗುತ್ತಾಳೆ. 'ಗೃಹಂತು ಗೃಹಿಣೀ ಹೀನಂ ಕಾಂತಾರಾತ್ ಅತಿರಿಚ್ಯತೇ' ಎನ್ನುವಷ್ಟು ಗೃಹಸ್ಥನ ಮನೆಯ ಆಕರ್ಷಕ ವಿಷಯಳಾಗುತ್ತಾಳೆ ಎಂದು ಶಂಬಾ ಅಭಿಪ್ರಾಯ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಹಾಲುಮತ ದರ್ಶನ ಸಂಪುಟ. ೩ ಪುಟ. ೧೫೬*

*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೨–೨೪೦*

## ೭೪೮. ಸ್ತ್ರೀಯರು ಮತ್ತು ಧರ್ಮ

ಕರ್ನಾಟಕ ಅನೇಕ ಶಾಸನಗಳಲ್ಲಿ ಸ್ತ್ರೀಯರ ಧಾರ್ಮಿಕ ಸಹಭಾಗಿತ್ವದ ಬಗೆಗಿನ ಉಲ್ಲೇಖಗಳಿವೆ: ಶ್ರವಣ ಬೆಳಗೊಳದ ಶಾಸನವೊಂದು ಶಾಂತಲೆಯ ತಾಯಿ ಮಾಚಿಕಬ್ಬೆಯು ವ್ರತ ಹಿಡಿದು ಮರಣವನ್ನಪಿದ ವಿಷಯವನ್ನು ತಿಳಿಸುತ್ತದೆ. ಇದರ ಕಾಲ ಕ್ರಿ.ಶ. ೧೧೩೧. ಮತ್ತೊಂದು ಶಾಸನವು ಅಹಲ್ಯೆಯ ನಿರ್ವಾಣವನ್ನು ಸೂಚಿಸುತ್ತದೆ (ಕಲಬುರ್ಗಿ; ಎಂ.ಎಂ. ೧೯೮೦. ಪು. ೬). ಶ್ರವಣ ಬೆಳಗೊಳದ ನೂರೆಂಟು ನಿಶಿಧಿ ಶಾಸನಗಳಲ್ಲಿ ಇಪ್ಪತ್ತೆರಡು ಶಾಸನಗಳು ಸ್ತ್ರೀಯರಿಗೆ ಸಂಬಂಧಿಸಿರುವವುಗಳು. ಅದರಲ್ಲಿ ೧೩ ಶಾಸನಗಳು ಕಂತಿ ಅವ್ವೆಯುವರ ಮರಣವನ್ನು ಸೂಚಿಸುತ್ತದೆ. ನಾಲ್ಕು ಶಾಸನಗಳು ರಾಜಪರಿವಾರದ ಸ್ತ್ರೀಯರ ಕುರಿತಂತೆ ಹೇಳುತ್ತವೆ. ಐದು ಶಾಸನಗಳು ಸಾಮಾನ್ಯ ಸ್ತ್ರೀಯರ ಮರಣವನ್ನು ಸೂಚಿಸುತ್ತವೆ (ಅದೇ. ಪು. ೧೧). ಕೊಂಗಾಳ್ವನಬ್ಬೆ ಪೋಚಬ್ಬರಸಿಯ ಧಾರ್ಮಿಕ ಸೇವೆಯನ್ನು ಶಾಸನವೊಂದು (ಕಾಲ: ೧೧ನೇ ಶತಮಾನ) (ಎ.ಕ. ಸಂ: ೧. ೧೯೭೨. ಪು. ೪೫). ಶ್ರವಣಬೆಳಗೋಳದ ಶಾಸನವೊಂದು ವೈಜಬ್ಬೆಯು ನೋಂತು ಸನ್ಯಾಸನವನ್ನು ಸ್ವೀಕರಿಸಿದ ವಿಷಯವನ್ನು ತಿಳಿಸುತ್ತದೆ (ಎ.ಕ. ಸಂ: ೨, ೧೯೭೩. ಪು ೫೫). ಗುಣಮತಿ ಅಬ್ಬೆಯ ನಿಶಿಧಿಗೆ ಸಂಬಂಧಿಸಿದಂತೆ ಮತ್ತೊಂದು ಶಾಸನವು ತಿಳಿಸುತ್ತದೆ (ಅದೇ. ಪು. ೭೭). ಶ್ರವಣಬೆಳಗೊಳದ ಮತ್ತೊಂದು ಶಾಸನದಲ್ಲಿ ಲಕ್ಷ್ಮೀಮತಿಯು ಸನ್ಯಸನ ಮೂಲಕ ದೇವಲೋಕಕ್ಕೆ ಸಂದ ವಿಚಾರವಿದೆ (ಇದರ ಕಾಲ. ಕ್ರಿ.ಶ. ೧೦೪೪) (ಅದೇ. ಪು. ೯೯). ಹತ್ತನೇ ಶತಮಾನದ ನಂಜನಗೂಡಿನ ಶಾಸನವೊಂದು ಅತ್ತಯ್ಯನ ಅಬ್ಬೆಯು ಸನ್ಯಸನಂತೆಯ್ದು ಮುಡುಪಿದ ವಿಚಾರವನ್ನು ಪ್ರಸ್ತಾವಿಸುತ್ತದೆ (ಅದೇ. ಸಂ: ೩. ಪು. ೩೦೦). ಧಾರ್ಮಿಕ ವಿಚಾರಗಳಲ್ಲಿ ಸಕ್ರಿಯವಾಗಿ ಅನೇಕ ಸ್ತ್ರೀಯರು ಭಾಗವಹಿಸಿದ

ವಿಚಾರವನ್ನು ಇನ್ನೂ ಕೆಲವು ಶಾಸನಗಳು ಹೇಳುತ್ತವೆ. ಶಾಸನಗಳಲ್ಲಿ ಬಂದಿರುವ ವಿಷಯಗಳನ್ನು ಸ್ಥೂಲವಾಗಿ ಪರಿಶೀಲಿಸಲಾಗಿದೆ. ಈ ಆಧಾರಗಳ ಹಿನ್ನೆಲೆಯಲ್ಲಿ ಧಾರ್ಮಿಕ ರಂಗದಲ್ಲಿ ಸ್ತ್ರೀಯರು ಭಾಗವಹಿಸಿರುವ ವಿಚಾರಗಳನ್ನು ಎರಡು ನೆಲೆಗಳಲ್ಲಿ ಗಮನಿಸಬಹುದು:

ಸಾಮಾಜಿಕ ಸ್ಥಾನಮಾನಕ್ಕಾಗಿ ಧಾರ್ಮಿಕ ಸೇವೆಯನ್ನು ಕೈಗೊಂಡಿರುವ ಸಂಗತಿಗಳು. ಉದಾ: ಜೈನ ಬಸದಿಗೆ ಸೇವೆ. ಇವು ಶ್ರೀಮಂತ ವರ್ಗದ ಸ್ತ್ರೀಯರು ಕೈಗೊಂಡಿರುವ ಸೇವೆಗಳಾಗಿರುತ್ತವೆ.

ಸನ್ಯಸನವನ್ನು ಸ್ವೀಕರಿಸಿ ಅದರ ಮೂಲಕ ಪ್ರಾಣಹರಣವನ್ನು ಮಾಡಿಕೊಳ್ಳುವುದು ಇದು ಆತ್ಮಾಹುತಿಯ ಪ್ರಕಾರಗಳಲ್ಲಿ ಒಂದಾಗಿ ಸಂಸ್ಕೃತಿಯಲ್ಲಿ ಮೂಡಿಬಂದಿದೆ. ಇಲ್ಲಿಯೂ ಧಾರ್ಮಿಕ ಶ್ರದ್ಧೆಯೇ ಪ್ರಧಾನವಾದ ಅಂಶವಾಗಿದೆ.

ರಾಣಿಯಾದ ಶಾಂತಲೆಯು ಜೈನೆಯಾಗಿದ್ದರೂ ವೈಷ್ಣವ ದೇವಾಲಯವನ್ನು ಸ್ಥಾಪಿಸಿದ ವಿಚಾರವು ಈಗಾಗಲೇ ಸಾಕಷ್ಟು ಪ್ರಚಲಿತವಾದ ವಿಚಾರವಾಗಿದೆ. ಈಕೆಯ ಕಾಲ. ಕ್ರಿ.ಶ. ೧೧೩೧. ಈಕೆಯು ಸನ್ಯಾಸನ ವಿಧಿಯ ಮೂಲಕವೇ ತನ್ನನ್ನು ಮುಡುಪಿ ಕೊಂಡಳು. ಖಾಸಗಿಯಾಗಿ ಒಂದು ಧರ್ಮಕ್ಕೆ ಸೇರಿದ್ದು, ಮತ್ತೊಂದು ಧರ್ಮದ ಕೆಲಸವನ್ನು ಮಾಡುವ ಕ್ರಮವೂ ಇತ್ತು ಎನ್ನುವುದಕ್ಕೆ ಮೇಲಿನ ಮಾತು ಸಾಕ್ಷ್ಯವನ್ನು ಒದಗಿಸುತ್ತದೆ.

ದಕ್ಷಿಣದ ಚೋಳ ಅರಸರ ಕಾಲದಲ್ಲಿ ಯೋಗಿಣಿ ಮತ್ತು ಯೋಗೀಶ್ವರ ದೇವತೆಗಳ ಅರ್ಚನೆ ಮತ್ತು ಅವರ ನೈವೇದ್ಯಕ್ಕಾಗಿ ಮಧ್ಯದ ವ್ಯವಸ್ಥೆಯೂ ಇತ್ತೆಂದು ಇತಿಹಾಸಕಾರರು ಊಹಿಸುತ್ತಾರೆ (ಕೃಷ್ಣರಾವ್. ಕಪಟರಾಳ ೧೯೭೦.ಪು. ೨೮).

ಈ ಮೇಲಿನ ಆಧಾರಗಳಿಂದ ದೇವಾಲಯದ ನೃತ್ಯ ಪದ್ಧತಿಯ ಬಗೆಗೆ ಕೆಲವು ಅಂಶಗಳನ್ನು ಗಮನಿಸಬಹುದಾಗಿದೆ.

ದೇವಾಲಯದ ನೃತ್ಯ ಪದ್ಧತಿಯು ಆಚರಣೆ ಬದ್ಧ ಸ್ವರೂಪವನ್ನು ಇಟ್ಟುಕೊಂಡ ವೇಶ್ಯಾ ಪದ್ಧತಿಯಾಗಿದೆ. 'ದಾಸಿ' ಪದವು ವರ್ಗೀಕೃತ ಸಮಾಜದ ಕೆಳಗಿನ ದರ್ಜೆಯ ಗುಲಾಮತನದ ಸೂಚಕ ಪದವಾಗಿದೆ. ದೇವರ ಗುಲಾಮ ಹೆಣ್ಣುಗಳ ಸಂಸ್ಕೃತಿಯನ್ನು ದೇವದಾಸಿ ಪದ್ಧತಿಯು ಸೂಚಿಸುವುದಾದರೂ, ಇದಕ್ಕೂ ರಾಜಕೀಯ ಸಂಸ್ಕೃತಿಗೂ ಸ್ಪಷ್ಟವಾದ ಸಂಬಂಧವಿರುವುದನ್ನು ಶಾಸನಗಳು ಪ್ರತಿಪಾದಿಸುತ್ತವೆ. ಆದುದರಿಂದ ರಾಜ್ಯಶಾಹಿ ವ್ಯಕ್ತಿತ್ವವು ಕೆಳವರ್ಗದ ಸ್ತ್ರೀಯರನ್ನು 'ದೇವದಾಸಿ'ಯನ್ನಾಗಿ ಮಾಡಿರುವುದನ್ನು ಗಮನಿಸಬಹುದಾಗಿದೆ. ಈ ದೃಷ್ಟಿಯಿಂದ ದೇವದಾಸಿ ಪದ್ಧತಿಯ ಮೇಲೆ ಇಬ್ಬಗೆಯ ಪ್ರಭಾವವು ಉಂಟಾಗಿರುವುದನ್ನು ಕಾಣಬಹುದು.(ಅ)ರಾಜ್ಯಶಾಹಿ ಪ್ರಭಾವ (ಆ)ಮತ್ತು ಧಾರ್ಮಿಕ ಗುಲಾಮಿತನ.

ಕನ್ನಡ ಕವಿಗಳು ದೇವಸ್ಥಾನದಲ್ಲಿ ನೃತ್ಯಮಾಡುವ ಪದ್ಧತಿಯ ಕುರಿತ ಚಿತ್ರಣವನ್ನು ಕೊಡುತ್ತಾರೆ. ನೇರವಾಗಿ ದೇವದಾಸಿ ಪದ್ಧತಿಯ ಕುರಿತ ಚಿತ್ರಣವನ್ನು ಕೊಡುವುದಿಲ್ಲ.

ದೇಗುಲ ಸಂಸ್ಕೃತಿಯಲ್ಲಿ ದೇವಾಲಯಕ್ಕೂ ನೃತ್ಯಕ್ಕೂ ಕವಿಗಳು ಸಂಬಂಧವನ್ನು ಕಲ್ಪಿಸಿದ್ದಾರೆ. ಕನ್ನಡ ಕಾವ್ಯಗಳಲ್ಲಿ ಗುರುತಿಸಲಾಗಿರುವ ನರ್ತಕಿಯರು ರಂಗಭೋಗದ ಅನಿವಾರ್ಯ ಅಂಗಗಳಾಗಿ ಚಿತ್ರಿತರಾಗಿದ್ದಾರೆ.

*ವಿವರಗಳಿಗೆ ನೋಡಿ: ಎಂ. ಎಂ. ಕಲಬುರ್ಗಿ ೧೯೮೦*
*ಸಮಾಧಿ–ಬಲಿದಾನ–ವೀರಮರಣ ಸ್ಮಾರಕಗಳು ಪುಟ. ೬*
*Gururajachar .S 1974 Some aspect of economic & Social Life in Karnataka P.249*
*Basham; A.L. (Ed) 1975 Basham A.L. (Ed) A Cultural History of India P. 58-59*
*Stein; Burton. (Ed) 1976 Stein, Burton (Ed) Essays on South India P. 48*
*ಶಿವಾನಂದ ವಿರಕ್ತಮಠ ೧೯೭೭ ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ ಪುಟ. ೬೧*
*ಶ್ರೀಕಂಠಯ್ಯ ಕೆ. ೧೯೮೩ ಭಾರತೀಯ ಸಂಸ್ಕೃತಿ ಪುಟ. ೨೦೫, ೨೬೧, ೨೪೯*

**೭೪೯. ಸ್ವಭಾವ**

*ತನ್ನ ಪ್ರಕೃತಿ ಬಿಡದಿರಲ್ ಅಜಿಕೆಯೇನಂ ಮಾಡುವುದು ? ಎಂಬ ಪುರಾಣವಾಕ್ಯಮೇಕೆ ಪುಸಿಯಕ್ಕುಂ*

*(ಪಂಚತಂತ್ರ ಪುಟ. ೧೩)*

ತನ್ನ ಸ್ವಭಾವವನ್ನು ಬಿಡಲು ಸಾಧ್ಯವಿಲ್ಲದಿದ್ದ ಮೇಲೆ ತಿಳುವಳಿಕೆ ಎಷ್ಟಿದ್ದರೇನು ? ಎನ್ನುವುದು ಪುರಾಣ ವಾಕ್ಯ. ಅದು ಸುಳ್ಳಾಗುವುದಿಲ್ಲ.

'ವಿದ್ಯಾದದಾತಿ ವಿನಯಂ ವಿನಯಾದ್ಯಾತಿ ಪಾತ್ರತಾಂ' ಹಿನ್ನೆಲೆಯಲ್ಲಿ ವಿದ್ಯೆಯಿಂದ ವಿನಯ ವಿನಯದಿಂದ ವ್ಯಕ್ತಿಗೆ ಯೋಗ್ಯತೆ ಎಂಬುದು ಮೇಲಿನ ಶ್ಲೋಕಾರ್ಥ ಓದು(ವಿದ್ಯೆ) ಮನುಷ್ಯನ ಸ್ವಭಾವವನ್ನು ಪರಿವರ್ತಿಸದಿದ್ದರೆ ಅದೆಂತಹ ವಿದ್ಯೆ? ಎಂಬರ್ಥದಲ್ಲಿ ದುರ್ಗಸಿಂಹ ಬಳಸಿದ್ದಾನೆ.

ಸ್ವಭಾವವು ಮನುಷ್ಯರ ಗುಣಕ್ಕೆ ಸಂಬಂಧಿಸಿರುವುದು. 'ಅದು ಅವರವರ ಸ್ವಭಾವ' ಎಂದು ಲೋಕೋಕ್ತಿಯಿದೆ. ಇದರಲ್ಲಿ ವ್ಯಕ್ತಿಯ ಅನನ್ಯತೆಯು ಮುಖ್ಯ.

**೭೫೦. ಸ್ವಮತ ಶ್ರೇಷ್ಠತೆ**

ಹೇಳಿಕೇಳಿ ಪೊನ್ನ ಸವಣ, ಅದರಿಂದ ಆತ ತನ್ನ ಧರ್ಮ ಕುರಿತು ಹೇಳುವ ಅವಕಾಶ ಸಿಕ್ಕಿದರೆ ಉಪಯೋಗಿಸಿದೆ ಬಿಡುವುದಿಲ್ಲ. ಪಂಚ ಪರಮೇಷ್ಠಿಗಳನ್ನು ಪರಿಚಯಿಸುವಾಗಲೂ ಈ ಕೆಲಸ ಮಾಡುತ್ತಾನೆ:

*ಕ್ಷಾಯಿಕ ದೃಷ್ಟಿ ತುಷ್ಟಿಯೊಳೊಡಂಬಡೆ ಜೈನ ವಚೋಮೃತಂ ಮುಖ*
*ಶ್ರೀಯ ಪೊದಳ್ಕೆಯಿಂ ಬೆಳಗೆ ಸೌಗತ ಸಾಂಖ್ಯ ಶಿವಾಗಮಂಗಳಂ*
*ನ್ಯಾಯ ನಯ ಪ್ರಮಾಣ ಸುವಚಃ ಕ್ರಮದಿಂ ಸಲೆ ಸೋಲೆ ಗೆಲ್ದುಪಾ*
*ಧ್ಯಾಯರಜೇಯರೀಗೆಮಗೆ ಮುಕ್ತಿ ನಿವೇಶಮನಪ್ರಣಾಶಮಂ ॥*

ಕ್ಷಾಯಿಕ ದೃಷ್ಟಿಯು ಸಂತೋಷ ಸಮಾಧಾನಗೊಳ್ಳಲು ಜೈನವಾಣಿಯೆಂಬ ಅಮೃತವು ಮುಖಲಕ್ಷ್ಮಿಯ ವ್ಯಾಪಕತೆಯನ್ನು ಬೆಳಗಲು ಬೌದ್ಧ-ಸಾಂಖ್ಯ-ಶಿವಾಗಮಗಳನ್ನು ನ್ಯಾಯ-ನಯ ಪ್ರಮಾಣಗಳ ಒಳ್ಳೆಯ ಮಾತಿನ ರೀತಿಯಿಂದ ಸಂಪೂರ್ಣವಾಗಿ ಸೋಲಿಸಿ ಗೆದ್ದವರು ಉಪಾಧ್ಯಾಯರು. ಅವರನ್ನು ಗೆಲ್ಲುವುದು ಅಸಾಧ್ಯ. ಅಂಥ ಅಜೇಯರಾದ ಉಪಾಧ್ಯಾಯರು ನಮಗೆ ಶಾಶ್ವತವಾದ ಮುಕ್ತಿಯನ್ನು ದಯಪಾಲಿಸಲಿ. (ಹಂ.ಪ.ನಾ, ಶಾಂತಿಪುರಾಣದ ಮುನ್ನುಡಿ ಪುಟ. ೧೩೩)

ಧರ್ಮವು ಇಳಿಮುಖವಾದಾಗ ಧರ್ಮ ಧರ್ಮಗಳಲ್ಲಿ ಪರಸ್ಪರ ಸ್ಪರ್ಧೆ ಏರ್ಪಟ್ಟ ಸಂದರ್ಭದಲ್ಲಿ ಜೈನ ಧರ್ಮದ ಕವಿಗಳು ಸ್ವಮತ ಶ್ರೇಷ್ಠತೆಯನ್ನು ಹೇಳುವುದು ಅನಿವಾರ್ಯವಾಗಿತ್ತು. ತರುಗಳಲ್ಲಿ ಮಲಯಜದಂತೆ, ನಕ್ಷತ್ರಗಳಲ್ಲಿ ಚಂದ್ರನಂತೆ, ದೇವತೆಗಳಲ್ಲಿ ಸುರೇಶ್ವರನಂತೆ, ಭೂಲೋಕದ ದೇವರುಗಳಲ್ಲಿ ಜಿನೇಶ್ವರನಿದ್ದಾನೆ ಎನ್ನುತ್ತಾನೆ ನಯಸೇನ(೩-೧೮)

"ಜೈನರು ತ್ರಿಕರಣ ಪೂರ್ವಕವಾಗಿ ಅಹಿಂಸೆಯನ್ನು ಪಾಲಿಸುತ್ತಾರೆ. ಇನ್ನೊಬ್ಬರನ್ನು ಕೊಲ್ಲು ಎನ್ನುವುದಿಲ್ಲ. ಹಿಂಸೆಗೆ ಯಾವ ರೀತಿಯಿಂದಲೂ ಅವರು ಪ್ರೋತ್ಸಾಹಿಸುವುದಿಲ್ಲ. ಆದ್ದರಿಂದ ಜೈನರಿಗಿಂತ ದಯಾಪರರು ಯಾರೂ ಇಲ್ಲ" ಎನ್ನುತ್ತಾನೆ ಬ್ರಹ್ಮಶಿವ. (೧-೩೦)

**೭೫೧. ಸ್ವಯಂವರ**

ಅನುರೂಪನಾದ ವರನು ದೊರೆಯದೆ ಹೋದಾಗ, ಅಂತಹ ಸಂದರ್ಭದಲ್ಲಿ ಸ್ವಯಂವರದ 'ಏರ್ಪಾಟು ಮಾಡಲಾಗುತ್ತದೆ' (ಶಾಂತಿಪುರಾಣ ೪-೮೮ವ)

ಮತ್ತೊಂದು ರೀತಿಯ ವಿವಾಹದ ಕ್ರಮವೆಂದರೆ – ಸ್ವಯಂವರ ಪದ್ಧತಿ. ಪಣವನ್ನು ಗೆದ್ದ ಗಂಡನ್ನು ಹೆಣ್ಣು ವರಿಸುತ್ತಾಳೆ. ಈ ಕುರಿತು ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಹೇರಳ ಉಲ್ಲೇಖಗಳು ದೊರೆಯುತ್ತವೆ.

ಸ್ವಯಂವರದಲ್ಲಿ ಇಡುವ ಪಣವುಪಮುಖವಾಗಿ ಗಂಡಿನ ಅರ್ಹತೆಯನ್ನು ಪ್ರಶ್ನಿಸುವಂತಿರುತ್ತದೆ. ಮತ್ಸ್ಯ ಯಂತ್ರದ ಭೇದ. ಗತಿಯುದ್ಧ; ವೀಣೆ ಬಾರಿಸುವುದು. ಕನ್ಯಾಶುಲ್ಕವನ್ನು ತೆತ್ತು ಹೆಣ್ಣನ್ನು ವಿವಾಹ ಮಾಡಿಕೊಳ್ಳುವುದು ಮಹಾಭಾರತದಲ್ಲಿ ಉಕ್ತವಾಗಿದೆ. ಪಂಪನಲ್ಲಿ ಈ ಅಂಶವು ಉಕ್ತವಾಗಿಲ್ಲ. ಈ ಪದ್ಧತಿಯು ಕರ್ನಾಟಕದಲ್ಲಿ ಸಾಕಷ್ಟು ಪ್ರಚಲಿತವಾಗಿತ್ತು. ಆದರೆ ನಿಧಾನವಾಗಿ ಇದಕ್ಕೆ ಸಾಮಾಜಿಕವಾಗಿ ಆಕ್ಷೇಪಗಳು ಬಂದವು.

ಕೆಲವನ್ನು ಮಾತ್ರ ಇಲ್ಲಿ ಉಲ್ಲೇಖಿಸಬಹುದು:

'ಪಂಪಭಾರತ' ಬರುವ ದ್ರೌಪದಿ ಸ್ವಯಂವರ.

(ಅನಂತರಂಗಾಚಾರ್ ಎನ್. (ಅನು) ೧೯೭೭ ಪು.೨೦೬)

ಪೊನ್ನನ 'ಶಾಂತಿಪುರಾಣದಲ್ಲಿ ಬರುವ ಸುಮತಿಯ ಸ್ವಯಂವರ.

(ನಾಗರಾಜಯ್ಯ. ಹಂ.ಪ. (ಅನು) ೧೯೮೨ ಪುಟ. ೧೨೪)

'ವಡ್ಡಾರಾಧನೆ'ಯಲ್ಲಿ ಮನೋಹರಿಯ ಸ್ವಯಂವರದ ವರ್ಣನೆಯು ಬರುತ್ತದೆ. (ಅದೇ ಪು. ೮೫-೮೬) ಇದರಿಂದ ಪ್ರಾಯಕ್ಕೆ ಬಂದ ಮೇಲೆ ಹೆಣ್ಣಿನ ವಿವಾಹವನ್ನು ನಡೆಸುವ ಕ್ರಮವು ಇತ್ತೆಂದು ಊಹಿಸಬಹುದು. ಪ್ರಾಯ ಪ್ರಬುದ್ಧೆಯಾದ ಸಂಧ್ಯಾವಳಿಯು ಗಂಡಿಗೆ ಪತ್ರ ಬರೆಯುವ ಸನ್ನಿವೇಶವು 'ವಡ್ಡಾರಾಧನೆ'ಯಲ್ಲಿ ಉಕ್ತವಾಗಿದೆ. (ಸನತ್ಕುಮಾರ ಚಕ್ರವರ್ತಿಯ ಕತೆ ಅದೇ ಪುಟ. ೧೨೫)

ಪಂಪನ 'ಆದಿಪುರಾಣದಲ್ಲಿಯೂ ಶ್ರೀಮತಿಯ ಯೌವನದಲ್ಲಿ ಆಕೆಗೆ ವಿವಾಹ ನಡೆಯುತ್ತದೆ ಎನ್ನುವ ವಿವರವು ಬಂದಿದೆ. (ಬಸವರಾಜು ಎಲ್ (ಸಂ) ೧೯೭೬ ೪-೨೧ವ) ಈ ಕೃತಿಯಲ್ಲಿ ಬೇರೆಡೆಯೂ ಇದೇ ರೀತಿಯ ಕಲ್ಪನೆಯು ಬಂದಿದೆ. (೪-೫೨ವ) 'ಪಂಪಭಾರತ'ದಲ್ಲಿಯೂ ಹೆಣ್ಣಿಗೆ ಯೌವನ ಪ್ರಾಪ್ತಿಯಾದ ಮೇಲೆ ಮದುವೆಯು ಆಗುತ್ತದೆ ಎನ್ನುವ ವಿಚಾರವು ಪ್ರತಿಪಾದಿತವಾಗಿದೆ. 'ಚಾವುಂಡರಾಯ ಪುರಾಣ' ಕೃತಿಯಲ್ಲಿಯೂ ಪ್ರಭಾವತಿಗೆ 'ಯೌವನ' ನೆರೆದ ಮೇಲೆ ಮದುವೆ ನಡೆಯುತ್ತದೆ. (ಕಮಲ ಹಂ.ಪ.ನಾ ಆದಿಪುರಾಣ (ಅನು) ೧೯೮೩ ಪು.೨೩)

ರನ್ನನ 'ಅಜಿತ ತೀರ್ಥಂಕರ ಪುರಾಣ'ದಲ್ಲಿಯೂ ಹೆಣ್ಣಿಗೆ ಯೌವನದಲ್ಲಿಯೇ ಮದುವೆ ಎನ್ನುವ ಅಂಶವು ಸೂಚ್ಯವಾಗಿ ಪ್ರತಿಪಾದಿತವಾಗಿದೆ. (ದೇವೀರಪ್ಪ ಎಚ್ (ಸಂ) ೧೯೫೯, ೯-೩೫)

ಸ್ವಯಂವರ ಮಂಟಪದಲ್ಲಿ ಉಳಿದ ರಾಜರನ್ನು ಪರಾಜಿತಗೊಳಿಸಿ ಪಡೆಯುವ ಭಾರ್ಯೆಯು ಅತಿಪ್ರಿಯಳಾಗುತ್ತಾಳೆಂದು ವ್ಯಾಸಭಾರತದಲ್ಲಿ ಬರುತ್ತದೆ.

ಎಂಟು ರೀತಿಯ ಮದುವೆಗಳಲ್ಲಿ ವರನನ್ನು ಆಯ್ಕೆ ಮಾಡುವ ಸ್ವಾತಂತ್ರ್ಯ ಹೆಣ್ಣಿನದೇ ಹೆಣ್ಣು ಋತುಮತಿಯಾಗಿ ಮೂರು ವರ್ಷಗಳ ಒಳಗೆ ತಂದೆ ಮದುವೆ ಮಾಡಲು ಅಶಕ್ತನಾದರೆ ಕನ್ಯೆಯೇ ಅವನ ಸಮ್ಮತಿ ಪಡೆದು ವರನನ್ನು ಹುಡುಕಿಕೊಳ್ಳಬಹುದು.

ಅಥರ್ವವೇದದ ಎರಡನೆಯ ಕಾಂಡ ಮೂವತ್ತನೆಯ ಪ್ರೇಮ ಪೂರ್ವಕ ಸ್ವಯಂವರ ವಿಧಾನದ ವರ್ಣನೆಯಿದೆ. ಹೆಣ್ಣಿಗೆ ತನಗೆ ಒಪ್ಪಿಗೆಯಾದಂಥ ಪುರುಷನ ಆಯ್ಕೆ ಮಾಡಲು ಸ್ವಾತಂತ್ರ್ಯ ನೀಡಲಾಗಿದೆ.

*ವಿವರಗಳಿಗೆ ನೋಡಿ: ಶೇಷ ನವರತ್ನ ೧೯೯೯ ನಾಲ್ಕು ವೇದಗಳು ಪುಟ. ೪೦*

*ರಾಮೇಶ್ವರಾವಧಾನಿ (ಸಂ) ೧೯೭೨-೭೬ ಮಹಾಭಾರತ (ಸಂಪುಟ-೧-೧೧) ಪುಟ. ೬೯೮*

*ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೯-೯೦*

## ೭೫೨. ಹತ್ತನೆಯ ಶತಮಾನದ ರಾಜಕಾರಣ

೧೦ನೇ ಶತಮಾನದಿಂದ ೧೨ನೇ ಶತಮಾನದ ಮಧ್ಯದವರೆಗಿನ ಕಾಲವು ರಾಜಕೀಯ ಮುಂತಾದ ದೃಷ್ಟಿಯಿಂದ ಉಜ್ಜಲವಾದರೂ ಅಸ್ಥಿರವಾದುದು. ಅರಸು ಮನೆತನಗಳು, ಮತಗಳು, ಆ ಕಾಲದಲ್ಲಿ ಏಳುಬೀಳುಗಳನ್ನು ಅನುಭವಿಸುತ್ತಿರುತ್ತವೆ. ಆದರೂ ವೀರಸತ್ವವು ಕನ್ನಡನಾಡನ್ನು ಆಕ್ರಮಣದಿಂದ ಕಾಯ್ದುಕೊಂಡು ಬಂದು ಮತಧರ್ಮಗಳಿಗೆ ಉದಾರವಾದ ಆಶ್ರಯವನ್ನು ನೀಡಿದ್ದು ಕಂಡುಬರುತ್ತದೆ. ೮ನೇ ಶತಮಾನದಲ್ಲಿ ತಲೆಯೆತ್ತಿ ೯ನೇ ಶತಮಾನದಲ್ಲಿ ಹೆಸರು ಪಡೆದು ರಾಷ್ಟ್ರಕೂಟ ವಂಶವು ೧೧ನೇ ಶತಮಾನದಲ್ಲಿ ದಿಗ್ವಿಜಯವನ್ನು ಹೊಂದಿ ವೈಭವದ ಎತ್ತರವನ್ನು ಮುಟ್ಟಿ ಬೆಳಗಾಗುತ್ತಲೇ ಕೆಳಗೆ ಬಿದ್ದಿತು. ಈ ವಂಶದಲ್ಲಿ ಹಿಂದೆ ನೃಪತುಂಗನು ಲೋಕಪ್ರಸಿದ್ಧನಾದಂತೆ ಈಗ ಮೂರನೇ ಕೃಷ್ಣನು ಹೆಸರುವೆತ್ತಿದನು. ಉತ್ತರದ ಚೇದಿ, ದಕ್ಷಿಣದ ಚೋಳ ಮುಂತಾದ ರಾಜರನ್ನು ಗೆದ್ದು ಆತನು ರಾಷ್ಟ್ರಕೂಟ ರಾಜ್ಯದ ಮೇರೆಗಳನ್ನು ಹಿಗ್ಗಲಿಸಿದನು. ಈ ವಿಸ್ತಾರವಾದ ಸಾಮ್ರಾಜ್ಯದಲ್ಲಿ ಭಾಗಗಳನ್ನು ಮಾಂಡಲಿಕರು ಆಳುತ್ತಿದ್ದರು. ಇವರಲ್ಲಿ ತಲಕಾಡಿನ ಗಂಗರೂ, ವೇಮುಲನಾಡಿನ ಚಾಲುಕ್ಯರು ಪ್ರಮುಖರಾಗಿದ್ದರು. ತಮ್ಮ ಶಕ್ತಿಯಿಂದಲೂ, ಸಾಮ್ರಾಜ್ಯದ ಅಳಿವು ಉಳಿವುಗಳು ತಮ್ಮ ಕೈಯಲ್ಲಿಲ್ಲದಂತೆ ಮರೆಯುವ ಸ್ವತಂತ್ರ ಪ್ರಭುಗಳಾಗಿದ್ದರು. ಆದಿಪಂಪನ ಪೋಷಕನಾದ ಎರಡನೆಯ ಅರಿಕೇಸರಿ ಮೂರನೆಯ ರಾಷ್ಟ್ರಕೂಟ ಮೂರನೆಯ ಕೃಷ್ಣನ ಸಾಮಂತನಾಗಿದ್ದರೂ ಸಾಮ್ರಾಟನ ಜುರುಬಿನಿಂದ ನಡೆಯುತ್ತಿರಬೇಕು. ಕಾಮುಕ ದೊರೆಯನ್ನು ಕಿತ್ತೊಗೆದು ಹೋರಾಡಿ ಬೇರೊಬ್ಬನನ್ನು ರಾಷ್ಟ್ರಕೂಟ ಚರ್ಕವರ್ತಿಯನ್ನಾಗಿಸಿದ ಶ್ರೇಯಸ್ಸು ಅರಿಕೇಸರಿಯದು. ಇದು ಪಂಪನ ಕಾವ್ಯದಲ್ಲಿ ವ್ಯಕ್ತವಾಗಿದೆ. ೧೦ನೇ ಶತಮಾನದ ಕೊನೆಗೆ ರಾಷ್ಟ್ರಕೂಟರ ದೌರ್ಬಲ್ಯ ಸಾಧಿಸಿ ಬಾದಾಮಿ ಚಾಲುಕ್ಯರ ವಂಶದ ಮೇಲಿನ ಸೇಡುತೀರಿಸಿ ಸ್ವತಂತ್ರರಾದರು. ಕಲ್ಯಾಣ ಚಾಲುಕ್ಯವಂಶವು ತಲೆದೋರಿತು. ಚೋಳರ ಹೊಡೆತಕ್ಕೆ ಸಿಕ್ಕು ಗಂಗರಾಜ್ಯವು ನಿಸ್ಸತ್ವವಾಯಿತು. ೧೧ನೇ ಶತಮಾನದಿಂದ ರಾಜಕೀಯ, ಸಾಮಾಜಿಕ ಜೀವನದಲ್ಲಿ ಹೊಸ ಮನ್ವಂತರವು ಮೊದಲಾಯಿತು. ೧೧-೧೨ನೇ ಶತಮಾನದಲ್ಲಿ ಎಲ್ಲ ಕಡೆಯಲ್ಲಿ ಯುದ್ಧದ ಮೇಲೆ ಯುದ್ಧಗಳಾದವು. ರಾಜಕೀಯ ರಂಗದಲ್ಲಿ ಚಾಲುಕ್ಯರಿಗೂ, ಚೋಳರಿಗೂ ಸತತವಾಗಿ ಕಾಳಗಗಳು ನಡೆಯುತ್ತಿದ್ದವು. ಜಯಶ್ರೀ ಒಮ್ಮೆ ಅವರಿಗೆ ಮತ್ತೊಮ್ಮೆ ಇವರಿಗೆ ಒಲಿಯುತ್ತಿದ್ದಳು. ಒಟ್ಟಿನಲ್ಲಿ ಶೂರರಾದ ಚಾಲುಕ್ಯರು ವಿಶೇಷವಾಗಿ ಶಕಪುರುಷನಾದ ೬ನೆಯ ವಿಕ್ರಮಾದಿತ್ಯನು ಚೋಳರನ್ನು ಹಿಮ್ಮೆಟ್ಟಿಸಿ ಕರ್ನಾಟಕವನ್ನು ಸಂರಕ್ಷಿಸಿದನು.

ವಿವರಗಳಿಗೆ ನೋಡಿ: ರಂ. ಶ್ರೀ. ಮುಗಳಿ ೧೯೬೦ ಸಾಹಿತ್ಯ ಚರಿತ್ರೆ ಪುಟ. ೧೦೧-೧೦೨

೭೫೩. ಹನ್ನೆರಡು ನಿಧಾನಗಳು

ಮಾನವನು ಸದ್ಯದ ಜೀವನದಲ್ಲಿ ಹಿಂದಿನ ಫಲವೂ ಮುಂದಿನದರ ನಿಯೋಗಿಯೂ ಆಗಿರುತ್ತಾನೆಂದು ಕಲ್ಪಿಸುವುದರ ಮೂಲಕ ಈ ತತ್ವವು ಕಾಲದ ಮೂರು ಪರಿಮಾಣಗಳನ್ನೂ ಒಳಗೊಂಡಿದೆ. ಪ್ರಾಸಂಗಿಕವಾಗಿ ಇದನ್ನೂ ಹೇಳಬೇಕು. ಮುಂದೆ ಇದು ಅತ್ಯಂತ ಗಹನವಾದ ತಾತ್ವಿಕ ಸಮಸ್ಯೆಗಳನ್ನು ತಂದೊಡ್ಡಿತು. ಹಿಂದು, ಇಂದು ಮತ್ತು ಮುಂದಿನ ಕರ್ಮಗಳನ್ನು ಒಂದಾಗಿ ಹೆಣೆದ ಅಗೋಚರ ಸೂತ್ರ ನೈತಿಕ ಇಚ್ಛೆ. ಬೌದ್ಧಿಕಾಂಶದೊಡನೆ ಹದವಾಗಿ ಕೂಡಿ ಅದು ಕೆಲಸಮಾಡುತ್ತದೆ. ಅದು ದೋಷಪೂರ್ಣವಾಗಿದ್ದರ ಪುನರ್ಜನ್ಮಕ್ಕೆ ಎಡೆಗೂಡುತ್ತದೆ. ಪರಿಪೂರ್ಣವಾಗಿದ್ದರೆ ಮೋಕ್ಷಕ್ಕೆ ಅಥವಾ ಜನನ ಪ್ರವಾಹವನ್ನು ಬತ್ತಿಸುವುದಕ್ಕೆ ದಾರಿಮಾಡುತ್ತದೆ. ಏಕೆಂದರೆ ಸಂಸಾರ ನಿರ್ವಾಣಗಳೆರಡೂ ಬುದ್ಧಿಯ ಕಾರ್ಯಭಾರದ ಮೇಲೆ ನಿಂತಿವೆ. ಅಜ್ಞಾನ ಬದುಕಬೇಕೆಂಬ ಆಕಾಂಕ್ಷೆಗೆ ದುಃಖಕ್ಕೆ ಕಾರಣವಾದರೆ ಅಂತರ್ದೃಷ್ಟಿ ವಿಮೋಚನೆಗೆ, ಅದರ ಮಾರ್ಗಕ್ಕೆ ಕಾರಣ. ಈ ಕಾರಣ ಸರಪಣಿಯಲ್ಲಿ ಹನ್ನೆರಡು ಕೊಂಡಿಗಳಿವೆ. ಕ್ರಮವಾಗಿ ಹಿಂದಿನ ಪ್ರತಿಯೊಂದೂ ಮುಂದಿನದರ ಪ್ರವೇಶಕ್ಕೆ ಕಾರಣವಾಗುತ್ತದೆ. (ಪ್ರತೀತ್ಯ ಸಮುತ್ಪಾದ) ಈ ಕೊಂಡಿಗಳು: ಅವಿದ್ಯಾ, ಸಂಸ್ಕಾರ, ವಿಜ್ಞಾನ, ನಾಮ–ರೂಪ, ಷಡಾಯತನ, ಸ್ಪರ್ಶ ವೇದನಾ, ತೃಷ್ಣಾ, ಉಪಾದಾನ, ಭವ, ಜಾತಿ ಮತ್ತು ಜರಾ–ಮರಣ.

ಒಂದು ಜೀವಿ ಹಿಂದಿನ ಜನ್ಮದಲ್ಲಿ ಆಸೆಯ (ಕಾಮಲೋಕ) ರೂಪದ (ರೂಪಲೋಕ) ಮತ್ತು ರೂಪರಹಿತ (ಅರೂಪಲೋಕ) ಲೋಕಗಳಲ್ಲಿ ಯಾವುದಾದರೂ ಒಂದರಲ್ಲಿ ಅಜ್ಞಾನದ ಪ್ರಭಾವಕ್ಕೆ ಸಿಕ್ಕಿ ವರ್ತಿಸಿದ್ದರೆ, ಅವನು ಒಂದು ರಾಶಿ ಸಂಸ್ಕಾರಗಳನ್ನು ಕೂಡಿಸಿಕೊಂಡಿರುತ್ತಾನೆ. ಅದು ಪುನರ್ಜನ್ಮಕ್ಕೆ ಎಡೆಗೊಡುತ್ತದೆ. ಅದೇ ಅವನ ಇಂದಿನ ಜನ್ಮ. ಹಿಂದಿನ ಮತ್ತು ಇಂದಿನ ಜನ್ಮಗಳನ್ನು ಒಂದುಗೂಡಿಸುವ ಕೊಂಡಿಯು ಮಾತೃಗರ್ಭದಲ್ಲಿ ರೂಪುದಾಳುವ ಅಸ್ಪಷ್ಟ ಪ್ರಜ್ಞೆಯಾಗಿ ಕಾಣಿಸಿಕೊಳ್ಳುತ್ತದೆ. ಹಿಂದಿನ ಜನ್ಮದ ಆಸೆಗಳು ಅರ್ಹತೆಗಳಿಗೆ ತಕ್ಕುದಾದ ಗರ್ಭವನ್ನು ಆರಿಸುತ್ತವೆ. ಕ್ರಮೇಣ ಭ್ರೂಣವು ಒಂದು ಮಾನಸಿಕ (ನಾಮ) ಮತ್ತು ಒಂದು ದೈಹಿಕ (ರೂಪ) ಆಕೃತಿಯನ್ನು ಪಡೆಯಲು ತೊಡಗುತ್ತದೆ. ಬೆಳವಣಿಗೆಯ ನಿಧಾನವಾದ ಘಟ್ಟಗಳಲ್ಲಿ ಮಗುವು ಗರ್ಭದಲ್ಲಿ ಆರು ಇಂದ್ರಿಯಗಳಿಂದ – ದರ್ಶನ, ಶ್ರವಣ, ಘ್ರಾಣ, ರುಚಿ, ಸ್ಪರ್ಶನಗಳೆಂಬ ಐದು ಬಾಹ್ಯ ಇಂದ್ರಿಯಗಳು ಮತ್ತು ಮನಸ್ಸು ಅಥವಾ ಅರಿವು ಎಂಬ ಆಂತರಿಕ ಇಂದ್ರಿಯ – ಸಜ್ಜಾಗಿ ಪೂರ್ಣವಾಗಿ ಬೆಳೆಯುವ ವರೆಗೆ ಈ ಕ್ರಿಯೆ ನಡೆಯುತ್ತದೆ. ಜನನದೊಡನೆ ಇಂದ್ರಿಯಗಳು ಪ್ರಪಂಚದೊಡನೆ ಸಂಪರ್ಕ ಪಡೆಯಲು ತೊಡಗುತ್ತವೆ. ವಸ್ತುಗಳ ಗುಣ ಸಂವೇದನೆ ಅಥವಾ ಅನುಭವ ಆಗ ತೊಡಗುತ್ತದೆ. ಮಧುರ ಅಥವಾ ಕಡು ಅಥವಾ ತಟಸ್ಥ ಪರಿಣಾಮದ ಬಣ್ಣ ಅದಕ್ಕೆ ಲೇಪಿತವಾಗುತ್ತದೆ. ಮಧುರ ಅನುಭವದಿಂದಾಗಿ ತೃಷ್ಣೆ ಅಥವಾ ಹಂಬಲ ಕಾಣಿಸಿಕೊಳ್ಳುತ್ತದೆ. ಮಗು ವಸ್ತುಗಳನ್ನು ಬಯಸತೊಡಗುತ್ತದೆ. ದೇಹದ ಬಯಕೆಗಳನ್ನೂ ಅರಿಯುತ್ತದೆ. ಆಸೆಗಳು ಮನಸ್ಸಿನಲ್ಲಿ ಉತ್ಪನ್ನವಾಗುವುದು

ಮಾತ್ರವಲ್ಲ. ಒಂದು ಬಗೆಯಾಗಿ ಅಂಟಿಕೊಂಡು ಪೂರ್ಯೆಕೆಯ ಒತ್ತಡವನ್ನು ತಂದಾಗ ಮೋಹವು ಕೆಲಸ ಮಾಡತೊಡಗುತ್ತದೆ. ಮೋಹ ನಿರ್ದೇಶಿತವಾದ ಕರ್ಮದಿಂದ ಹುಟ್ಟಿದ ಪಾಪ ಅಥವಾ ಪುಣ್ಯಗಳ ಪರಿಣಾಮವಾಗಿ ಇವೆರಡರ ಜೊತೆಗೆ ಮೂರನೆಯದಾದ ಅಸ್ತಿತ್ವದ ಅಂಶವೊಂದು ಅಥವಾ ಮತ್ತೆ ಮತ್ತೆ ಹುಟ್ಟಬೇಕೆಂಬ ಆಶೆಯ ಅಂಶವೊಂದು ಮೂಡುತ್ತದೆ. ಈ ಹೊಸ ಸಂಸ್ಕಾರವೇ ಮುಂದಿನ ಜನ್ಮಕ್ಕೆ ಹೊಣೆ. ಜನನದ ಅನಿವಾರ್ಯ ಪರಿಣಾಮ ಮುಪ್ಪು ಮತ್ತು ಮರಣ. ಇವುಗಳ ಜೊತೆಗೆ ಸಂಕಟ. ದುಃಖ, ನರಳಿಕೆ, ಕಾತರ, ಬೇಸರ, ಜುಗುಪ್ಸೆ, ಮುಂತಾದ ಕ್ಲೇಶಗಳು ಅನಿವಾರ್ಯಗಳಾಗುತ್ತವೆ. ಯಾವ ಜೀವಿಯೂ ಇವುಗಳಿಲ್ಲದೆ ಇಲ್ಲ.

ಈ ಕಾರಣ ಪರಿಣಾಮ ಪರಂಪರೆಗೆ ಅಂತಿಮವಾಗಿ ಕಾರಣವಾದ ಅಜ್ಞಾನ (ಅವಿದ್ಯಾ) ಎನ್ನುವುದು ನಾಲ್ಕು ಆರ್ಯ ಸತ್ಯಗಳ ಬಗೆಗೆ ಇರುವ ಅಜ್ಞಾನ. ಅದರಲ್ಲಿಯೂ ಮುಖ್ಯವಾಗಿ ಜೀವನವು ದುಃಖಮಯವಲ್ಲ, ಸಂತೋಷ ಸುಖಗಳ ವಿಕಸನ ಎನ್ನುವ ಭ್ರಮೆ. ಬುದ್ಧನ ವಿಚಾರಧಾರೆಯಲ್ಲಿ, ಅದನ್ನು 'ಮಾಯಾ'ತತ್ವಕ್ಕೆ ಸಮ ಎನ್ನಬೇಕೆಂದಾಗಲಿ, ಶಾಶ್ವತ ಅಶಾಶ್ವತಗಳ ಸಮಾನತೆಯನ್ನು ಗುರುತಿಸಲು ಸಾಧ್ಯವಾಗದ ಸೋಲು ಎಂದಾಗಲಿ ಇದ್ದಂತೆ ಕಾಣುವುದಿಲ್ಲ. ಸಂಸ್ಕಾರಗಳು ಸೂಚಿಸುವುದು ವ್ಯಕ್ತಿಯು ಕಾಯಾ, ವಾಚಾ, ಮನಸಾ ಮಾಡುವ ಕೆಲಸಗಳಿಂದಾಗಿ ಸಂಗ್ರಹಿಸುವ ಪಾಪ ಪುಣ್ಯಗಳನ್ನು ಅದರಲ್ಲಿಯೂ ಮುಂದಿನ ಜನ್ಮಕ್ಕಾಗಿ ಹಂಬಲಿಕೆಯೆಂಬ ಅಂಶದ ಪೋಷಣೆ ಒದಗಿದಾಗ ಅವು ಹೊಸ ಜನ್ಮವಾಗಿ ರೂಪದಾಳುತ್ತವೆ. ಸಂಸ್ಕಾರಗಳನ್ನು ಬೇರುಸಹಿತವಾಗಿ ಕಿತ್ತು ಹಾಕುವವರೆಗೂ ನೂತನ ಜನ್ಮಧಾರಣೆಯ ಮೊಳಕೆ ಅನಿವಾರ್ಯ. ದೇಹದ ಮತ್ತು ಅದರ ಸುಖಗಳ ಅಶಾಶ್ವತವೂ ಚಂಚಲವೂ ಆದ ಲಕ್ಷಣಗಳನ್ನು ಅರಿತಾಗ ಮತ್ತು ಸಮ್ಯಗ್‌ಜ್ಞಾನವನ್ನು ಪಡೆದು ಅದರಿಂದ ಸಂಸ್ಕಾರಗಳನ್ನು ನಾಶ ಪಡಿಸಿದಾಗ "ಸಂಕಾರಗಳು ಅಶಾಶ್ವತ, ಮೂಡುತ್ತವೆ ಮುಳುಗುತ್ತವೆ: ಹೇಗೆ ಉದಿಸಿದುವೋ ಹಾಗೆಯೇ ಅಸ್ತವಾಗುತ್ತವೆ. ಅವುಗಳ ನಿರ್ಗಮನವೇ ಸಂತೋಷ'. ಆದರೆ ಈ ಕಾರಣತಾವಾದವು ಒಬ್ಬ ವಿಧಾಯಕನಾಗಲಿ, ಒಂದು ಭದ್ರವಾದ ತಳಹದಿಯಾಗಲಿ ಇಲ್ಲದೆ ಕೆಲಸಮಾಡುತ್ತದೆ. ವೈದಿಕ ಋತದಂತೆ, ಬ್ರಾಹ್ಮಣಗಳ ಮಂತ್ರಶಕ್ತಿ ಮತ್ತು ಅಪೂರ್ಣಗಳಂತೆ ಕರ್ಮನಿಯಮವೂ ಸ್ವತಂತ್ರವಾಗಿ ಕೆಲಸಮಾಡುತ್ತದೆ. ಯಾಜ್ಞವಲ್ಕ್ಯನು ಬೃಹದಾರಣ್ಯಕೋಪನಿಷತ್ತಿನಲ್ಲಿ ವಿಶ್ವದ ಕ್ರಿಯೆಗೆ ಅಗತ್ಯವೆಂದು ಕಲ್ಪಿಸಿದ ಅವಿನಾಶಿ ತತ್ವದಂತಹ, ವಿಧಾಯಕ ಮನವೊಂದರ ಆಜ್ಞೆಯಿಲ್ಲದೆ ಅದು ಕೆಲಸಮಾಡುತ್ತದೆ. ಅಜ್ಞಾನ ನಾಶವಾಗುವ ವರೆಗೆ ಅದರ ಪರಿಣಾಮವಾಗಿ ತನಗೆ ತಾನೆ ಸಂಸ್ಕಾರಗಳು ನಾಶಗೊಂಡು, ನೂತನ ಜನ್ಮದ ಹಂಬಲಿಕೆಯ ಕ್ರಿಯೆ ನಡೆಯದಂತೆ ಮಾಡುವವರೆಗೆ, ರೂಪಗಳಾದ ಮೇಲೆ ರೂಪಗಳು ಬರುತ್ತಲೇ ಹೋಗುತ್ತವೆ. ಕಾರಣ ನಿಯಮ ಬಾಹ್ಯವಾಗಿ ಮಾತ್ರವಲ್ಲ. ಆಂತರಂಗಿಕ ವಾಗಿಯೂ ಪ್ರಭುತ್ವ ನಡೆಸುತ್ತದೆ. ಆದ್ದರಿಂದ ಮಾನವನು ಹಿಂದಿನ ಮನಸ್ಥಿತಿಗಳ ಪರಿಣಾಮ ರೂಪದಲ್ಲಿ ಇಂದು ಇದ್ದರೂ, 'ಇಂದಿನ ಚಿಂತನೆ ಹಾಗೂ ಸಂಕಲ್ಪಗಳನ್ನು

ನಿಯಂತ್ರಿಸಿಕೊಳ್ಳುವುದರಿಂದ ಮುಂದೆ ಏನಾಗಬೇಕೆಂದು ಬಯಸುತ್ತಾನೋ ಹಾಗಾಗಬಹುದು. ಸಂಸ್ಕಾರಗಳನ್ನು ಸುಟ್ಟುಹಾಕುವ ಜ್ಞಾನದ ಈ ಹೆಜ್ಜೆಗಳನ್ನು ಕಾಣುವುದು ಕಷ್ಟ. ಆದರೆ ಸಂಯುಕ್ತ ನಿಕಾಯದಲ್ಲಿ ದುಃಖದಿಂದ ಜ್ಞಾನದವರೆಗಿನ ಸರಣಿಯನ್ನು ಹೀಗೆ ಕೊಟ್ಟಿದೆ: ದುಃಖ, ಶ್ರದ್ಧೆ, ಸಂತೋಷ, ಆನಂದ, ಶಾಂತಿ, ಪ್ರಮೋದ, ಧ್ಯಾನ, ಜ್ಞಾನ ಹಾಗೂ ಅಂತರ್ದೃಷ್ಟಿಗಳಲ್ಲಿನ ಪರಿಹಾರವನ್ನು ಹುಡುಕಲು ದಾರಿಯಾಗಬಹುದು. ವಸ್ತುವಿನ (ಜ್ಞೇಯ) ನಿಜರೂಪವನ್ನು ಮುಚ್ಚುವುದರ ಮೂಲಕ (ಆವರಣ) ಕೆಡಕುಗಳಿಗೆ (ಕ್ಲೇಶ) ಕಾರಣವಾಗುವುದು ಅಜ್ಞಾನ. ಅದಕ್ಕೆ ವಿರುದ್ಧವಾದುದು ಜ್ಞಾನ.

ನಿಧಾನಗಳ ಬಗ್ಗೆ ಜೈನ ಧರ್ಮದ ನಿಲುವು ಗಮನಾರ್ಹವಾದುದು. ಅದನ್ನು ವಿಶಿಷ್ಟ ಪರಿಭಾಷೆಯಾಗಿ ಜೈನ ಧರ್ಮವು ಬಳಸಿಕೊಂಡಿದೆ. ನಿಧಾನವೆನ್ನುವುದು– ಅವಸರಪಡದಿರುವುದನ್ನು ಸೂಚಿಸುತ್ತದೆ.

ವಿವರಗಳಿಗೆ ನೋಡಿ: ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦
ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ ಪುಟ. ೧೬೪

**೨೫೪. ಹಲ್ಮಿಡಿ ಶಾಸನ**

ಇದುವರೆಗೆ ದೊರೆತಿರುವ ಕನ್ನಡಲಿಪಿ ಮತ್ತು ಕನ್ನಡ ಭಾಷೆಯ ಅತ್ಯಂತ ಪ್ರಾಚೀನ ಶಾಸನವೆಂದರೆ ಹಲ್ಮಿಡಿಯ ಶಾಸನ. ಇದರ ಕಾಲವನ್ನು ಸುಮಾರು ಕ್ರಿ.ಶ ೪೫೦ ಎಂಬುದಾಗಿ ವಿದ್ವಾಂಸರು ತಿಳಿಸುತ್ತಾರೆ. ಇದಕ್ಕಿಂತ ಹಿಂದಿನ ಶಾಸನಗಳಲ್ಲಿ ಲಿಪಿಯು ಮೂಲ ಲಿಪಿಯಾದ ಬ್ರಾಹ್ಮಿಯಿಂದ ಕ್ರಮೇಣ ಬದಲಾವಣೆ ಹೊಂದುತ್ತಾ ಬಂದಿರುವುದನ್ನು ಗಮನಿಸಬಹುದು. ಹಲ್ಮಿಡಿ ಶಾಸನದ ಕಾಲದ ವೇಳೆಗೆ ಕನ್ನಡ ನಾಡಿನ ಶಾಸನಗಳ ಲಿಪಿಯು ತಮ್ಮದೇ ಆದ ರೂಪವನ್ನು ಹೊಂದಿರುವುದು ಕಂಡುಬರುತ್ತದೆ. ಈ ಲಿಪಿಯು ಮುಂದೆ ಗಂಗ, ಚಾಲುಕ್ಯ ರಾಷ್ಟ್ರಕೂಟ, ಕಾಲದಲ್ಲಿ ಸ್ವಲ್ಪ ಸ್ವಲ್ಪ ಬದಲಾವಣೆಗಳನ್ನು ಹೊಂದಿ ಹೊಯ್ಸಳರ ಕಾಲಕ್ಕೆ ಸುಂದರವಾದ ರೂಪವನ್ನು ಹೊಂದಿದುವು. ಆದರೆ ವಿಜಯನಗರದ ಕಾಲದಲ್ಲಿನ ಶಾಸನಗಳ ಲಿಪಿಗಳು ತಮ್ಮ ಹಿಂದಿನ ಅಂದವನ್ನು ಕೆಡಿಸಿಕೊಂಡು ಮುಂದುವರಿದುವು. ಈಗ ನಾವು ಬಳಸುವ ಲಿಪಿಗಳು ಆ ವೇಳೆಗಾಗಲೇ ಬಹುಪಾಲು ಈಗಿನ ರೂಪವನ್ನು ಪಡೆದಿದ್ದವು. ಎಂದು ಶೇಷಶಾಸ್ತ್ರಿಯವರು ಹೇಳುತ್ತಾರೆ.

*ವಿವರಗಳಿಗೆ ನೋಡಿ: ೧) ಆರ್. ಶೇಷಶಾಸ್ತ್ರಿ ೨೦೦೫ ಶಾಸನ ಪರಿಚಯ*
*೨) ಎಸ್. ಶೆಟ್ಟರ್ – ಶಂಗಂ ತಮಿಳಗಂ*

**೨೫೫. ಹಾರೀತ**

ಹಾರೀತ ಧರ್ಮ ಸೂತ್ರದಲ್ಲಿ ಮೂವತ್ತು ಅಧ್ಯಾಯಗಳಿವೆ. ಅವನು ಯಜುರ್ವೇದಕ್ಕೆ ಸಂಬಂಧಿಸಿದವನು ಎಂಬ ಪ್ರತೀತಿಯೂ ಇದೆ. ಎಲ್ಲ ವೇದಗಳು ವೇದಾಂಗಗಳು ಧರ್ಮಶಾಸ್ತ್ರ, ತತ್ವಶಾಸ್ತ್ರ, ಶ್ರುತಗಳಾಗಿ ಆಚಾರ ವಿಚಾರಗಳು (ಸ್ಥಿತಿ) ಇವನ್ನು ಅವನು ಉಲ್ಲೇಖಿಸಿದ್ದಾನೆ. ಎಂಟು ಬಗೆಯ ವಿವಾಹಗಳು ಅವನಿಂದ ನಿರೂಪಿತವಾಗಿವೆ.

ಅವುಗಳಲ್ಲಿ ಆರ್ಷ, ಪ್ರಾಜಪತ್ಯಗಳಿಗೆ ಬದಲಾಗಿ ಬಂದಿವೆ. ಬ್ರಹ್ಮವಾದಿನೀ (ತಪೋನಿಷ್ಠೆ) ಸದ್ಯೋವಧೂ(ಹೊಸದಾಗಿ ವಿವಾಹಿತಳು) ಎಂದು ಎರಡು ಬಗೆಯ ಸ್ತ್ರೀಯರ ವಿಚಾರವನ್ನು ಹಾರೀತನು ಹೇಳಿದ್ದಾನೆ. ಅವರಲ್ಲಿ ಮೊದಲನೆಯ ಬಗೆಗೆ ಉಪನಯನ, ಅಗ್ನಿಕಾರ್ಯ, ವೇದಾಧ್ಯಯನ, ಸ್ವಗೃಹದಲ್ಲಿ ಭಿಕ್ಷೆ ಇವುಗಳ ಅಧಿಕಾರವುಂಟು. ಅವನು ನಟವೃತ್ತಿಯನ್ನು ಲಘುವಾಗಿ ಕಾಣುವುದಲ್ಲದೆ ಬ್ರಾಹ್ಮಣ ನಟನಿಗೆ ಶ್ರಾದ್ಧ ನಿಮಂತ್ರಣ ಕೊಡುವುದನ್ನೂ ನಿಷೇಧಿಸಿದ್ದಾನೆ. ಕಾಲ. ಸು. ಕ್ರಿ.ಪೂ. ೬೦೦ರಿಂದ ಕ್ರಿ.ಪೂ. ೩೦೦.

*ವಿವರಗಳಿಗೆ ನೋಡಿ: ಯುಗಯಾತ್ರೀ ಭಾರತೀಯ ಸಂಸ್ಕೃತಿ ೧೯೭೧*
*ಸಂಪುಟ. ೨ ಪುಟ. ೨೨೩.*

**೭೫೬. ಹಿಂಸೆ**

ಒಲೆ, ಬೀಸುವಕಲ್ಲು, ಕಸಬರಿಗೆ, ಒರಳು, ಒನಕೆ, ಜಲಪಾತ್ರ ಇವು ಐದು ಹಿಂಸಾಸಾಧನಗಳು. ಇವು ಅನಿವಾರ್ಯವಾದ ಹಿಂಸೆಗಳು, ಆದರೂ ಪಾಪವಿದೆ ಎಂದು ಮನುವಿನ ಅಭಿಪ್ರಾಯ.

ಅತಿಥಿಸತ್ಕಾರ, ಯಜ್ಞ, ದೇವ ಪಿತೃಕಾರ್ಯ ಈ ನಾಲ್ಕು ಸಂದರ್ಭಗಳಲ್ಲಿ ಮಾತ್ರ ಪಶುಹಿಂಸೆಯು ಧರ್ಮವೆಂದು ಮನುಮತವು.

ಅಹಿಂಸೆಯನ್ನೇ ಪ್ರಧಾನವಾಗಿ ಎತ್ತಿಹಿಡಿಯುವ ಜೈನ ಧರ್ಮವೂ "ಸಾಮಾನ್ಯ ಮನುಷ್ಯನನ್ನು ಗಮನದಲ್ಲಿಟ್ಟುಕೊಂಡು ನಾಲ್ಕುವಿಧವಾದ ಹಿಂಸೆಗೆ ಅವಕಾಶವನ್ನು ಕೊಟ್ಟಿದೆ. ಸಂಕಲ್ಪೀ, ವಿರೋಧೀ, ಆರಂಭೀ, ಉದ್ಯೋಗೀ, ವಿರೋಧೀಹಿಂಸಾ ಎಂದರೆ ಒಬ್ಬ ವ್ಯಕ್ತಿ ತನ್ನ ಅಥವಾ ಇತರರ ರಕ್ಷಣೆಗಾಗಿ ಹೋರಾಡುವಾಗಿನ ಹಿಂಸೆ. ಒಬ್ಬನು ತನ್ನ ರಾಜ್ಯವನ್ನೋ ಧರ್ಮವನ್ನೋ ರಕ್ಷಣೆ ಮಾಡುವುದಾಕ್ಕಾಗಿ ಯುದ್ಧ ಮಾಡಬಹುದು. ಕಳ್ಳರನ್ನು ಶಿಕ್ಷಿಸುವುದಕ್ಕಾಗಿ ಅವರನ್ನು ಕೊಲ್ಲಬಹುದು. ಈ ಮೂಲಕ ಜೈನಧರ್ಮವೂ ಹಿಂಸೆಯ ಬಗ್ಗೆ ತನ್ನ ಸ್ಪಷ್ಟವಾದ ಅಭಿಪ್ರಾಯವನ್ನು ವ್ಯಕ್ತಪಡಿಸಿದೆ ಎಂದು ಶೇಷಶಾಸ್ತ್ರಿ ಹೇಳುತ್ತಾರೆ.

*ವಿವರಗಳಿಗೆ ನೋಡಿ: ಚಕ್ರಕೋಡಿ ಈಶ್ವರಶಾಸ್ತ್ರಿ ೧೯೬೭ ಮನುಸ್ಮೃತಿ ೩-೬೮, ೫-೪೧*
*ಡಾ. ಆರ್. ಶೇಷಶಾಸ್ತ್ರಿ ೨೦೦೪ ಕರ್ನಾಟಕದ ವೀರಗಲ್ಲುಗಳು ಪುಟ. ೩೭*

**೭೫೭. ಹಿತಕರ ನುಡಿ**

ಅಪ್ರಿಯವಾದೊಡಂ ಮೇಲೆ **ಹಿತಕರಮಪ್ಪ ನುಡಿಯಂ** ನುಡಿಯಬಲ್ಲವನುಂ ನುಡಿದುದನಜೆದು ಕೇಳಬಲ್ಲವನುಮೆಲ್ಲಿಯುಂಟು ಅಲ್ಲಿ ಸಂಪತ್ತುಮಪ್ಪುವು.

*(ಕರ್ಣಾಟಕ ಪಂಚತಂತ್ರ, ಭೇದ ಪ್ರಕರಣ, ಶ್ಲೋಕ ೬೨)*

ಅಪ್ರಿಯವಾದರೂ ಮುಂದೆ ಹಿತಕರವಾದ ನುಡಿಯನ್ನು ಹೇಳಬಲ್ಲವನೂ, ಹೇಳಿದುದನ್ನು ತಿಳಿದುಕೇಳಬಲ್ಲವನೂ ಇರುವಲ್ಲಿ ಸಂಪತ್ತು ಇರುವುದು. ಅರಸನಿಗೆ

ಸದಾ ಕಾಲವು ಹಿತವನ್ನು ನುಡಿಯಬಲ್ಲ ಮನುಷ್ಯರು ಅನೇಕರಿರುವರು. ಅಪ್ರಿಯವಾದರೂ ಹಿತವನ್ನು ಹೇಳುವವನು, ಕೇಳಬಲ್ಲವನು ಸಿಕ್ಕುವುದು ದುರ್ಲಭ (ಗದ್ಯಾನುವಾದ ಚಂದ್ರಶೇಖರ ಐತಾಳ).

ಹಿತವಂ ಸ್ನೇಹಿತರ ಮಾತನಾವನೊರ್ವಂ ಕೇಳದೆ ಇರ್ಪನಾತಂ ಕಿಡುವಂ

ಹಿತವನ್ನು ಮಾಡುವ ಸ್ನೇಹಿತರ ಮಾತನ್ನು ಯಾವನು ಕೇಳದಿರುವನೋ ಅವನು ಕೆಡುವನು (ಭೇದ ಪ್ರಕರಣ, ೧೧೦ ವಚನ).

ಎಂದು ಪಂಚತಂತ್ರದಲ್ಲಿ ಬರುತ್ತದೆ.

**೭೫೮. ಹೀನಾಯಾನ ಮತ್ತು ಮಹಾಯಾನ**

ಮಹಾಯಾನವು ಮಾಡಿದಂತೆ ಪ್ರಾಚೀನ ಬೌದ್ಧಧರ್ಮವು ಸರ್ವಜನ ಗ್ರಾಹ್ಯವಾದ ಮತ್ತು ರಹಸ್ಯವದ ಉಪದೇಶಗಳ ನಡುವೆ ಭೇದವನ್ನು ಎಣಿಸಲಿಲ್ಲ. ತನ್ನಿಂದ ಸಾಧ್ಯವಾದಷ್ಟು ನೆರವು ನೀಡುವುದಕ್ಕಾಗಿ ಸಂಸಾರದಲ್ಲೇ ಉಳಿದುಕೊಳ್ಳುವ ನಿರ್ವಾಣ ಹೊಂದುವುದನ್ನು ಮುಂದೂಡುವ ಭಾವನೆಯನ್ನು ಅದು ಪ್ರೋತ್ಸಾಹಿಸಿಲ್ಲ. ಎಲ್ಲ ಅರ್ಹಂತರೂ ಬೋಧಿಸತ್ವರ ಜೀವನವನ್ನು ಪ್ರಾರಂಭಿಸಲು ಸಂಕಲ್ಪಿಸಬಹುದು. ಕೊನೆಗೆ ಬುದ್ಧರಾಗಬಹುದು ಎಂಬ ಹುಚ್ಚು ಆಸೆಯನ್ನು ಅದು ಪೋಷಿಸಲಿಲ್ಲ. ಸುಲಭ ಆದರ್ಶವಾದವನ್ನೂ, ಶೂನ್ಯ ವಾದವನ್ನೂ ಅದು ನಿರುತ್ಸಾಹಗೊಳಿಸಿತು. ಆಧ್ಯಾತ್ಮಿಕ ಸಾಧಕರಿಗೆ ಅಡ್ಡಿಗಳನ್ನು ಒಡ್ಡುವಷ್ಟು ಮಟ್ಟಿಗಾದರೂ ಪ್ರಪಂಚವು ಸತ್ಯವಾಗಿದೆ ಎಂದು ನೋಡುವಂತೆ ಅದು ಜನರಿಗೆ ಹೇಳಿತು. ಮುಂಬರಿದ ಚೇತನಗಳ ಏಕಾಂತತೆಯನ್ನೂ, ಹೊರಗಿನ ನೆರವನ್ನೂ ಬಯಸದೆ ಅಥವಾ ವಿಶ್ವಸತ್ವದಲ್ಲಿ ಲೀನನಾಗುವೆನೆಂಬ ಆಸೆಯನ್ನಿಟ್ಟುಕೊಳ್ಳದೆ ಸ್ವಂತ ಪರಿಶ್ರಮದಿಂದ ಮೋಕ್ಷವನ್ನು ಗಳಿಸಬೇಕೆಂಬುದನ್ನೂ ಒತ್ತಿ ಹೇಳಿತು. ಅದೊಂದು ಕಠಿಣಯಾನ (ಕಷ್ಟದ ದಾರಿ) ಮುಂದೆ ಧರ್ಮಪರಿಣಾಮದ ನಂಬಿಕೆಯಲ್ಲಿ ಕಂಡುಬಂದ ಸಹಜಯಾನ (ಸುಲಭವಾದ ದಾರಿ)ಕ್ಕೆ ವಿರುದ್ಧವಾದುದು ಮುಕ್ತನಿಗೆ ಯಾವುದೇ ಆನಂದಮಯ ಸ್ವರ್ಗದ ಭರವಸೆಯನ್ನು ಅವು ಕೊಡಲಿಲ್ಲ.

ಹಾಗಾದರೆ ಅದೊಂದು ಸ್ವಾರ್ಥದಿಂದ ಕೂಡಿದ ಧರ್ಮವೆ? ಪ್ರತಿಯೊಬ್ಬನೂ ತನಗೆ ತಾನೇ ಬೆಳಕಾಗಬೇಕು: ಇನ್ನೊಬ್ಬರ ಆಧ್ಯಾತ್ಮಿಕ ವಿಮೋಚನೆಯನ್ನು ಅಲಕ್ಷಿಸಿ ತನ್ನ ವೈಯುಕ್ತಿಕ ಪರಿಶ್ರಮದಿಂದ ಮೋಕ್ಷಗಳಿಸಿಕೊಳ್ಳಬೇಕೆಂದು ಹೇಳಿಲ್ಲವೆ? ಇದು ಸತ್ಯವಲ್ಲ. ಏಕೆಂದರೆ ಬುದ್ಧನು ಮೋಕ್ಷ ರಹಸ್ಯವನ್ನು ತನ್ನಲ್ಲಿಯೇ ತಾನು ಇಟ್ಟುಕೊಳ್ಳುವ ಪ್ರಲೋಭನೆಯನ್ನು ಹತ್ತಿಕ್ಕಿದನು. ಮಳೆಗಾಲದ ಹೊರತು ಬೇರೆ ಎಲ್ಲ ಸಮಯಗಳಲ್ಲಿಯೂ ಭಿಕ್ಷುಗಳು ದೇಶಾದ್ಯಂತ ತಿರುಗುತ್ತಾ ಪ್ರಾಪಂಚಿಕ ಮನಸ್ಥಿತಿಯುಳ್ಳ ಸಾಮಾನ್ಯ ಜನಸಮುದಾಯದ ಮನೆಬಾಗಿಲಿಗೆ ಮೋಕ್ಷ ರಹಸ್ಯದ ಸಂದೇಶವನ್ನು ಒಯ್ಯಬೇಕೆಂದು ವಿಧಿಸಿದನು. ಆದರೂ ಮಹಾಯಾನವು ಅದನ್ನು ಹೀನಯಾನ ಎಂದು ಕರೆದಿತು. ಪ್ರತಿಯೊಬ್ಬ ಶ್ರಾವಕನೂ ತನ್ನ ಮೋಕ್ಷವಲ್ಲದೆ ಬೇರೆ ಗುರಿಯನ್ನಿಟ್ಟುಕೊಳ್ಳುತ್ತಿರಲಿಲ್ಲ

ವಾದುದರಿಂದ ಜನಸಮೂಹದ ಧಾರ್ಮಿಕ ಪ್ರಗತಿಯ ಕಡೆಗೆ ಗಮನವಿಲ್ಲದೆ ಆದಷ್ಟು ಬೇಗ ತನ್ನ ಮುಕ್ತಿಯನ್ನು ತಾನು ಸಾಧಿಸಿಕೊಳ್ಳಬೇಕೆಂಬ ಭಾವನೆ ಅಲ್ಲಿ ಗಮನವಿಲ್ಲದೆ ಆದಷ್ಟು ಬೇಗ ತನ್ನ ಮುಕ್ತಿಯನ್ನು ತಾನು ಸಾಧಿಸಿಕೊಳ್ಳಬೇಕೆಂಬ ಭಾವನೆ ಅಲ್ಲಿ ಇದ್ದುದರಿಂದ ಶ್ರಾವಕಯಾನ ಅಥವಾ ಅರ್ಹತ್ ಯಾನವು ಒಂದು ಚಿಕ್ಕ ದೋಣಿ (ಹೀನ –ಯಾನ) ಜೀವನ ಸಮುದ್ರದ ಬಿರುಗಾಳಿಯ ಮಧ್ಯೆ ಸುರಕ್ಷಿತವಾಗಿ ಒಬ್ಬನೇ ಒಬ್ಬನನ್ನು ಆಚೆ ದಡಕ್ಕೆ ಕೊಂಡೊಯ್ಯಬಲ್ಲುದು. ಬುದ್ಧಯಾನ ಅಥವಾ ಬೋಧಿಸತ್ವಯಾನ ಹಾಗಲ್ಲ. ಅದು ದೊಡ್ಡ ದೋಣಿ (ಮಹಾ – ಯಾನ) ಸನ್ಯಾಸಿಯು ತನ್ನ ವಿಸ್ತಾರವಾದ ದೋಣಿಯಲ್ಲಿ ಸಂಸಾರದ ಅಪಾಯಕರ ಸಾಗರದ ಆಚೆಗೆ ಇತರ ಜೀವಿಗಳನ್ನೂ ಒಯ್ಯಬಲ್ಲನು.

ಔತ್ತರೇಯ ಮತ್ತು ದಾಕ್ಷಿಣಾತ್ಮ ಬೌದ್ಧ ಧರ್ಮಗಳ ನಡುವೆ ಒಂದು ಭಿನ್ನತೆಯನ್ನು ಯಾವ ಆಕ್ಷೇಪಕ್ಕೂ ಎಡೆಯಾಗದಂತೆ ಹೀಗೆ ತೋರಿಸಬಹುದು: ಸಿಲೋನ್, ಬರ್ಮ ಸಯಾಂಗಳು ಮೊದಲಿನ ಧರ್ಮದ ಭದ್ರ ನೆಲೆಗಳು, ನೇಪಾಲ, ಟಿಬೆಟ್, ಚೈನಾ ಮತ್ತು ಜಪಾನ್ಗಳು ಎರಡನೆಯದರ ನೆಲೆಗಳು ಪ್ರವಾಸಿಗರ ಹೇಳಿಕೆಗಳಿಂದ, ಪುರಾತತ್ವ ಅವಶೇಷಗಳ ಆಧಾರದಿಂದ, ಸಾಹಿತ್ಯಿಕ ಸಾಕ್ಷಿಯಿಂದ ಭೌಗೋಳಿಕ ಹಂಚಿಕೆಯೂ ಖಚಿತವಾದುದಾಗಿರಲಿಲ್ಲವೆಂದೂ, ಔತ್ತರೇಯ ಮತ್ತು ದಾಕ್ಷಿಣಾತ್ಯ. ಹೀನಯಾನ ಮತ್ತು ಮಹಾಯಾನ ಪಂಥಗಳೆರಡೂ ಒಟ್ಟೊಟ್ಟಿಗೆ ಅಕ್ಕಪಕ್ಕದಲ್ಲಿಯೇ ಒಮ್ಮೊಮ್ಮೆ ಒಂದೇ ಮಠದ ಆವರಣದಲ್ಲಿಯೇ ಬೆಳೆಯುತ್ತಿದ್ದವೆಂದೂ ತಿಳಿಯುತ್ತದೆ. ಆದ್ದರಿಂದ ನಾವು ಇಷ್ಟು ಇಟ್ಟುಕೊಳ್ಳಬಹುದು. ಭಾಷೆ (ಸಂಸ್ಕೃತ ಅಥವಾ ಪಾಲಿ ಅಥವಾ ಮಿಶ್ರಿತ ಸಂಸ್ಕೃತ) ಶಿಲ್ಪ, ಧಾರ್ಮಿಕ ಮತ್ತು ತಾತ್ವಿಕ ನಂಬಿಕೆ, ನೈತಿಕ ಸಾಧನೆಗಳ ಉಗ್ರತೆ ಧರ್ಮಸಾಹಿತ್ಯದ ವ್ಯಾಪ್ತಿ – ಮುಂತಾದುವುಗಳಲ್ಲಿ ಭಿನ್ನತೆ ತಲೆದೋರಿತು. ಬುದ್ಧನ ಅನುಯಾಯಿಗಳನ್ನು ಎರಡು ಮುಖ್ಯ ಪಂಗಡಗಳಾಗಿ ವಿಭಾಗಿಸಿತು. ಅಲ್ಲಿ ಬೌದ್ಧ ಚಿಂತನೆಯ ವಿವಿಧ ಪ್ರಕಾರಗಳು ಕೂಡಿದವು. ಅನ್ಯಶ್ರದ್ಧೆ ಚಿಂತನೆಗಳ ಸಂಪರ್ಕದಿಂದಾಗಿ ಔತ್ತರೇಯ ಬೌದ್ಧಧರ್ಮದಲ್ಲಿ ಹೆಚ್ಚಿನ ಸುಧಾರಣೆಗಳಾದುವು, ದಾಕ್ಷಿಣಾತ್ಯ ಧರ್ಮವು ತನ್ನ ಸುತ್ತ (ಸಿದ್ಧಾಂತ) ವಿನಯ (ನಿಯಮ ಪಾಲನೆ) ಮತ್ತು ಅಭಿಧಮ್ಮ(ತತ್ವ)ಗಳೆಂಬ ತ್ರಿಪಿಟಕಗಳೊಡನೆ ಹಾಗೆಯೇ ಉಳಿಯಿತು.

"ಬುದ್ಧನ ಮರಣಾನಂತರದಲ್ಲಿ ಬೌದ್ಧಧರ್ಮವು ಅನೇಕ ಶಾಖೆಗಳಾಗಿ ಕವಲೊಡೆಯಿತು. ಶಾಖೆಗಳ ನಡುವೆ ಭೇದವೂ ಹುಟ್ಟಿತು. ಅವುಗಳಲ್ಲಿ ತುಂಬ ಪ್ರಸಿದ್ಧವಾದವು– ಹೀನಯಾನ ಹಾಗೂ ಮಹಾಯಾನಗಳು. ಭಾರತದ ದಕ್ಷಿಣ ಹಾಗೂ ಪೂರ್ವ ದೇಶಗಳಾದ ಸಿಂಹಳ, ಬರ್ಮಾ, ಸಯಾಮ್, ಜಾವಾ ಇತ್ಯಾದಿ ದೇಶಗಳಲ್ಲಿ ಹೀನಯಾನವು ಪ್ರಚಾರದಲ್ಲಿದೆ. ಹೀನಯಾನ ಮತ್ತು ಮಹಾಯಾನಗಳ ಪ್ರಮುಖ ಭೇದವನ್ನು ಬೋಧಿ ಅಥವಾ ಜೀವನ್ಮುಕ್ತಿಯ ಕಲ್ಪನೆಯಲ್ಲಿ ಕಾಣಬಹುದು.

ಹೀನಯಾನವು ಶ್ರಾವಕ ಬೋಧಿಯ ಆದರ್ಶವನ್ನು ಹೊಂದಿದೆ. ಬುದ್ಧನ ಬಳಿಯಲ್ಲಿ

ಧರ್ಮವನ್ನು ಕಲಿಯುವಾತ ಶ್ರಾವಕ. ಅವನು ಸ್ವತಃ ಆರ್ಯ ಅಷ್ಟಾಂಗಿಕ ಮಾರ್ಗವನ್ನು ಅನುಸರಿಸಿದರೆ ಸಂಸಾರದ ಬಂಧನದಿಂದ ಬಿಡುಗಡೆಯನ್ನು ಹೊಂದಿ ಅರ್ಹತನೆನಿಸುತ್ತಾನೆ. ಅನಂತರ ತನ್ನ ವ್ಯಕ್ತಿಗತ ಕಲ್ಯಾಣ ಸಾಧನೆಯಲ್ಲಿ ನಿರತನಾಗಿರುತ್ತಾನೆ. ಅವನಿಗೆ ಮತ್ತೊಬ್ಬನಿಗೆ ನಿರ್ವಾಣವನ್ನು ದೊರಕಿಸಿಕೊಡುವ ಯೋಗ್ಯತೆ ಇರುವುದಿಲ್ಲ. ಮಹಾಯಾನಕ್ಕೆ ಬೋಧಿಸತ್ವನೇ ಆದರ್ಶ. 'ಬೋಧಿಸತ್ವ' ಎಂದರೆ ಬೋಧಿಯನ್ನು ಹೊಂದಲು ಇಚ್ಛೆಯುಳ್ಳ ವ್ಯಕ್ತಿ ಎಂದರ್ಥ. ಈ ಅವಸ್ಥೆಯನ್ನು ಹೊಂದಿರುವ ಸಾಧಕನ ಜೀವನದ ಗುರಿಯು ಅತ್ಯಂತ ಉದಾತ್ತವಾದುದು. ಜಗತ್ತಿನ ಕಲ್ಯಾಣವೇ ಅವನ ಧ್ಯೇಯ. ಮಹಾಮೈತ್ರೀ ಮತ್ತು ಮಹಾಕರುಣೆಗಳು ಅವನ ವೈಶಿಷ್ಟ್ಯಗಳು. ಇರುವೆಯಿಂದ ಹಿಡಿದು ಆನೆಯವರೆಗಿನ ಸಮಸ್ತ ಪ್ರಾಣಿಗಳ ದುಃಖ ನಿವಾರಣೆಯಾಗುವವರೆಗೆ ತನ್ನ ಮುಕ್ತಿಯನ್ನು ಬಯಸದ ಮಹನೀಯ ಅವನು.

ಹೀನಯಾನದ ಅರ್ಹತನು ಕೇವಲ ತನ್ನ ಮುಕ್ತಿಗೆ ಪ್ರಯತ್ನಿಸುವವನಾದ್ದರಿಂದ ಅದು ಚಿಕ್ಕದೋಣಿ(ಹೀನಯಾನ). ಮಹಾಯಾನವು ಎಲ್ಲರನ್ನೂ ಮುಕ್ತರನ್ನಾಗಿಸಲೆಳಸುವುದರಿಂದ ಅದು ದೊಡ್ಡದು ಎನ್ನಲಾಗಿದೆ. ಮೇಲಾಗಿ ಹೀನಯಾನವು ನಿವೃತ್ತಿಪರವಾದುದು; ಜ್ಞಾನದ ಸಾಧನೆಗೇ ಅಲ್ಲಿ ಪ್ರಾಧಾನ್ಯ. ಮಹಾಯಾನವು ಪ್ರವೃತ್ತಿಪರ; ಜ್ಞಾನದ ಜೊತೆಗೆ ಭಕ್ತಿಯೂ ಇದೆ. ಬುದ್ಧನ ಮೂರ್ತಿ ಸ್ಥಾಪನೆ ಮಾಡಿ ಅದನ್ನು ಪೂಜಿಸುವುದು, ದೇವತೆಗಳನ್ನು ಶ್ರೇಷ್ಠರೆನ್ನುವುದೇ ಮುಂತಾದವು ಮಹಾಯಾನದಲ್ಲಿದೆ."

ಇದಕ್ಕೆ ವಾಸ್ತವವಾಗಿ ಮರುವಿವರಣೆ ಅನಗತ್ಯ. ಬುದ್ಧನ ಅನಂತರ ಹುಟ್ಟಿಕೊಂಡ ಶಾಖೆಗಳಲ್ಲಿ ಹೀನಾಯಾನ ಮತ್ತು ಮಹಾಯಾನ ಎರಡು ಪ್ರಮುಖ ದಾರಿಗಳು. ಮೇಲಿನ ವಿವರಣೆಯಂತೆ ಹೀನಾಯಾನ ಮತ್ತು ಮಹಾಯಾನ ಎರಡು ಕೂಡಾ ಅವುಗಳದೇ ನಿಲುವುಗಳನ್ನು ಪ್ರತಿಷ್ಠಾಪಿಸಿದವು. ಆದರೆ ಮಹಾಯಾನವು ಉದಾರವಾದಿ ದೃಷ್ಟಿಕೋನವನ್ನು ತಳೆದಿದೆಯೆಂಬುದು ಇಲ್ಲಿ ಗಮನಾರ್ಹ ವಿಷಯವಾಗಿದೆ.

*ವಿವರಗಳಿಗೆ ನೋಡಿ: ಡಾ. ಸರ್ವಪಲ್ಲಿ ರಾಧಾಕೃಷ್ಣನ್ ೧೯೭೦*
*ತತ್ವಶಾಸ್ತ್ರ: ಪ್ರಾಚ್ಯ ಮತ್ತು ಪಾಶ್ಚಾತ್ಯ ಪುಟ. ೧೭೩-೧೭೪*
*ಡಾ.ಎಂ. ಪ್ರಭಾಕರ ಜೋಶಿ ೨೦೦೮ ಭಾರತೀಯ ತತ್ವಶಾಸ್ತ್ರ ಪ್ರವೇಶ ಪುಟ. ೪೮.*

**೭೫೯. ಹೆಂಡದ ಪೂಜೆ**

*ಮೂನೂಱಱುವತ್ತು ಜಾತಿಯ ಕಳ್ಗಳಂ ಮುಂದಿಟ್ಟು ಮಧುಮಂತ್ರದಿಂ ಮಧುದೇವತೆಗಳನರ್ಚಿಸಿ ಪೊನ್ನ ಬೆಳ್ಳಿಯ ಪದ್ಮರಾಗದ ಪಚ್ಚೆಯ (ಹೊನ್ನು ಬೆಳ್ಳಿ ಮಾಣಿಕ ಪಚ್ಚೆಗಳಿಂದೆಸಗಿದ) ಗಿಳಿಯ ಕೋಗಿಲೆಯ ಕೊಂಚೆಯ ಕುಂತಳಿಕೆಯ ಮಾಯ ಸಿಪುಗಳೊಳ್ ತೀವಿ ಮಧುಮಂತ್ರಂಗಳಿಂ ಮಂತ್ರಿಸಿ ನೆಲದೊಳೆಱೆದು ತಲೆಯೊಳ್ ತಳಿದು ಕಳ್ಳೊಳ್ ಬೊಟ್ಟ ನಿಟ್ಟುಕೊಂಡು ಕೆಲದರ್ಗೆಲ್ಲಂ ಬೊಟ್ಟಿಟ್ಟು ಕಿಱಿಯರ್ಪಿರಿಯರಱಿದು ಕುಡಿಱಿದರ ಕುಡಿಯ ಮಾವಿನ ಮಿಡಿಯ ಮಾರುದಿನ ಮೆಣಸುಗಡಲೆಯ*

ಪುಡಿಯೊಳಡಸಿದಲ್ಲ ವಲ್ಲಣಿಗೆಯ ಚಿಕ್ಕಣಂಗಳಂ ಸವಿಸವಿದು......... (ವಿ.ವಿಜಯ).

ಇಲ್ಲಿ ಆ ಹೆಂಗುಸರೆಲ್ಲರೂ ನಿಯಮಿತವಾದ ಆ ರಾತ್ರಿಯಲ್ಲಿ ನಿಶ್ಚಿತವಾದೊಂದೆಡೆ ಯಲ್ಲಿ ಕೂಡಿ ಮಧುದೇವತಾರ್ಚನೆಗೈದು ತೀರ್ಥಪ್ರಸಾದಗಳನ್ನು ಕೈಕೊಂಡು ಕೃತಾರ್ಥವೆವಡೆಯುತ್ತಿದ್ದರೆಂಬುದು ವ್ಯಕ್ತವಾಗುತ್ತಿದೆ. ಇದನ್ನೋದುವಲ್ಲಿ, ನಮ್ಮ ಕನ್ನಡ ನಾಡಿನೊಳಗೆ ನಾಮಾವಶೇಷವಾಗುತ್ತ ಬಂದರೂ, ಇನ್ನೂ ಅವಶಿಷ್ಟವಾಗಿರುವ 'ಮೂನೂಱಱುವತ್ತುಜಾತಿಯ ಕಳ್ಗಳ್', 'ಮಧುದೇವತೆಗಳ್' ಎಂಬ ಬಹುತ್ವನ್ನೆಣಿಸಿದರೆ, ಆ ಕಳ್ಳುಗಳ ಜಾತಿಸಂಖ್ಯೆಯಷ್ಟೇ ದೇವತೆಗಳೂ ಅರ್ಚಿಸುವ ಮಂತ್ರಗಳೂ ಇದ್ದಿರಬೇಕೆಂಬುದು ಸಿದ್ಧವಾಗುತ್ತಿದೆ. ಮಾತ್ರವಲ್ಲ. ಕಳ್ಳುಗಳ ಸಂಖ್ಯೆಯನ್ನೆಣಿಸಿದರೆ, ವರ್ಷದೊಳಗಿನ ದಿನಸಂಖ್ಯಾನುಸಾರವಾದ ತೀರ್ಥಸೇವನೆಗೂ ತಕ್ಕಂತೆ ಭಿನ್ನ ಭಿನ್ನ ಜಾತಿಯ ಕಳ್ಳುಗಳನ್ನೆಲ್ಲ ಶೇಖರಿಸಿ ಪೂಜಿಸುವ ವಾರ್ಷಿಕ ದೇವಕಾರ್ಯವದು, ಎಂದು ಭಾವಿಸಬೇಕು. ಭೂಮಾತೆಯ ತೃಪ್ತಿಗಾಗಿ, ಪೂಜಾರ್ತಿ ಹೆಂಗುಸು ಆ ತೀರ್ಥವನ್ನು 'ನೆಲದೊಳೆಱೆ'ವ ಹಾಗೆ ಶುದ್ಧಿವಡೆದ ಸ್ಥಳದಲ್ಲಿ ತೀರ್ಥದಾನಕ್ಕಾಗಿ ಕುಳಿತು ಆತ್ಮಶುದ್ಧಿಗಾಗಿ 'ತಲೆಯೊಳ್ ತಳಿ'ವ ಮಂತ್ರಪೂತ ತೀರ್ಥವಾದ ಕಳ್ಳಿನಿಂದ ಕ್ರಮವಾಗಿ 'ಬೊಟ್ಟನಿಟ್ಟುಕೊಂಡು ಕೆಲದರ್ಗೆಲಂ ಬೊಟ್ಟ'ನ್ನಿಡುವ, ಕಿಱಿಯರ್ಪಿರಯರಜೆದು' ಹರಸುವ ಪೊಡವಡುವ ಅದೊಂದು ಮಾರ್ಗದಲ್ಲಡಿಯಿಟ್ಟು ತೋರುವ ವಾಮಾಚಾರದ ದೇಸಿಯಾದ ಹಜ್ಜೆಗಳು ಈ ವರ್ಣನೆಯಲ್ಲಿ ಹೊಳೆದು ತೋರುತ್ತಿವೆ (ಮುಳಿಯ ತಿಮ್ಮಪ್ಪಯ್ಯ ೨೦೦೬ ಪು. ೨೪೩-೨೪೪).

ಸೂಳೆಯರು ಹೆಂಡದ ಪೂಜೆಯನ್ನು ಮಾಡಿ ಕಳ್ಳಿನಿಂದಲೇ ಮುಖಕ್ಕೆ ಬೊಟ್ಟನಿಟ್ಟು ಕಿರಿಯರಾದವರು ಹಿರಿಯರಾದವರನ್ನು ಗುರುತಿಸಿ ನಮಸ್ಕಾರ ಮಾಡಿ ಉಚಿತವಾಗಿ ದಾನ ಮಾಡಬೇಕಾದವರಿಗಾಗಿ ಮೀಸಲಾದುದನ್ನು ಅವರಿಗೆ ದಾನ ಮಾಡಿದರು (೪-೮೮) ಈ ರೀತಿಯ ನಂಬಿಕೆಗಳು ಸೂಳೆಯರಲ್ಲಿವೆ ಎನ್ನುವುದನ್ನು ಕೃತಿಯ ಪಠ್ಯವೇ ಸೂಚಿಸುತ್ತದೆ. ಇದು ಆಹಾರ, ಪಾನೀಯದ ಬಗೆಗಿನ ಗೌರವವನ್ನು ಸೂಚಿಸುವ ನೆಲೆಯಲ್ಲಿ ಬಂದಿರಬೇಕು. ಆಹಾರ ಮತ್ತು ಪಾನೀಯಕ್ಕೆ ನಿಕಟ ಸಂಬಂಧವಿದ್ದು ಅದನ್ನು ಸೇವಿಸುವಾಗ ಮನುಷ್ಯರು ದೇವತೆಗಳು ಆಸೆ ಬಿಡುತ್ತಾರೆ ಎನ್ನುವುದಕ್ಕೆ ಈ ಪೂಜೆಯು ಬಂದಿರಬೇಕು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕೊರಗತನಿಯ ಭೂತಕ್ಕೆ ಕಳ್ಳು ಪ್ರಧಾನ ನೈವೇದ್ಯವಾಗಿದೆ. ಈ ರೀತಿಯ ಆರಾಧನೆಯು ಸ್ಥಳೀಯ ಆಹಾರ ಮತ್ತು ಪಾನೀಯಕ್ಕೆ ಮಾತ್ರ ಸಂಬಂಧಿಸಿರುತ್ತದೆ. ಉದಾಹರಣೆಗೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಕ್ಕಿಯು ಪ್ರಧಾನ ಬೆಳೆಯಾದುದರಿಂದ ಅದಕ್ಕೆ ಅನುಗುಣವಾದ ನಂಬಿಕೆಯು ಬೆಳೆಯುತ್ತದೆ ಆಮದಾದ ಆಹಾರ ಮತ್ತು ಪಾನೀಯಗಳಿಗೆ ಈ ರೀತಿಯ ಆರಾಧನೆಯ ಕ್ರಮವಿರುವುದಿಲ್ಲ ಉದಾ: ಕಾಫೀ ಈ ರೀತಿಯ ನಂಬಿಕೆಗಳು ಬೇಕು - ಬೇಡ, ಒಳಿತು ಕೆಡುಕುಗಳ ದ್ವಂದ್ವಾತ್ಮಕ ಸಂಬಂಧದ ಹಿನ್ನೆಲೆಯಲ್ಲಿ ರೂಪು ತಳೆಯುತ್ತವೆ. ಕಾವ್ಯಭಾಗದಲ್ಲಿ ಉಕ್ತವಾದ ಸೂಳೆಯರ ಹೆಂಡದ ಪೂಜೆಯ ಆಚರಣೆಯಲ್ಲಿ, ಹೆಂಡವು ಅವರ ಜೀವನದ ಭಾಗದಲ್ಲಿ

ಒಂದಂಶವಾಗಿರಬೇಕು. ಮತ್ತು ಸಂಶಯ ನಿವಾರಣೆಯ ಭಾಗವಾಗಿ ಹೆಂಡವನ್ನು ಪೂಜೆಮಾಡುವ ಕ್ರಮವು ಬೆಳೆದಿರಬೇಕು.

ಹಿಂದೆ ವಿಭಾಗಿಸಿ ನಿರೂಪಿಸಿದ 'ಕಳ್ಳೊಳಮಮರ್ದಿನೊಳಂ ಪುಟ್ಟಿದ ಪೆಂಡಿರಂತೆ ಸೊಗಯಿಸುವ ಪಲರುಮೊಳ್ವೆಂಡಿರೊಂದೆಡೆಯೊಳಿರ್ದು' ಮಧುದೇವತಾರ್ಚನೆಗೈವ ಬೀದಿಯಲ್ಲಿ ಅರಿಕೇಸರಿ ಹೋಗುತ್ತಾನೆ.

ಮದ್ಯ-೪ವಿಧ: ಮಾರ್ದ್ವೀಕ (ದ್ರಾಕ್ಷಿಯ ಮದ್ಯ), ಮಾಧವ(ಜೇನಿನ ಮದ್ಯ), ಗೌಡಿಕ (ಬೆಲ್ಲದ ಮದ್ಯ), ಪೈಷ್ಟಿಕ(ಹಿಟ್ಟಿನ ಮದ್ಯ) (ಚರಕ.II ೨೬-೨೨)

ಮದ್ಯ-೧೦ ವಿಧ: ಮಾಧೂಕ, ಐಕ್ಷವ, ಟಾಂಕ, ಕೌಲ, ಖಾರ್ಜೂರ, ಪಾನಸ, ಮೃದ್ವೀಕಾರಸ, ಮಾರ್ದ್ವೀಕ, ಮೈರೇಯ, ನಾರಿಕೇಲಜ (ವಿಷ್ಣುಸ್ಮೃತಿ. ೨೩-ಸ್ಮೃತಿ ಸಂದರ್ಭ ೪೪೪).

ಮದ್ಯದ ಗುಣಗಳು-೧೪: ಲಘು, ಉಷ್ಣ, ತೀಕ್ಷ್ಣ, ಸೂಕ್ಷ್ಮ, ಆಮ್ಲ, ವ್ಯವಾಯ, ಆಶುಗ, ರೂಕ್ಷ, ವಿಕಾಸಿ, ವಿಶದ, ಮಧುರ, ಕಷಾಯ, ಕಟುಕ, ತಿಕ್ತ(ಚರಕ.II ೩೪೭, ೩೬೧).

*ವಿವರಗಳಿಗೆ ನೋಡಿ: ಡಾ॥ ಟಿ.ವಿ.ವೆಂಕಟಾಚಲಶಾಸ್ತ್ರಿ ೧೯೯೯*
*ಶ್ರೀ ವತ್ಸ ನಿಘಂಟು ಪುಟ. ೨೭೭*

**೭೬೦. ಹೆಣ್ಣಿನ ವೇಷ-ಭೂಷಣ**

ಹೆಂಗಸರ ವೇಷ-ಭೂಷಣಗಳ ಕುರಿತು ವೆಯಿಟ್ಜ್ [Waitz] ಈ ರೀತಿ ಹೇಳುತ್ತಾರೆ: ಪುರುಷನ ಅಸೂಯೆಯೇ ಹೆಣ್ಣಿನ ವೇಷ ಭೂಷಣದ ತೊಡುವಿಕೆ ಮತ್ತು ನೂತನತೆಗೆ ಕಾರಣವಾಗಿದೆ. ಡಿಡೆರೊಲ್ ಇದನ್ನೇ ಒತ್ತಿ ಹೇಳುತ್ತಾರೆ. 'ಆದಿವಾಸಿಗಳ ಕೆಲವು ಜನಾಂಗಗಳಲ್ಲಿ ಸ್ತ್ರೀಯರು ಮದುವೆಯಾದ ಮೇಲೆ ವೇಷ ಭೂಷಣಗಳನ್ನು ತೊಟ್ಟುಕೊಳ್ಳುವಾಗ ಮುಖ್ಯವಾಗಿ ಲೈಂಗಿಕ ಆಕರ್ಷಣೆಗೆ ಒಳಗಾಗುವ ಅಂಗಗಳಿಗೆ ಮಾತ್ರ ಒಡವೆಗಳನ್ನು ತೊಟ್ಟಿರುತ್ತಾರೆ. ಈ ವಾದವು ಮಾನಸಿಕ ಪ್ರಕ್ರಿಯೆಯನ್ನು ಸೂಚಿಸುತ್ತದೆ. ಇದರ ಪ್ರಕಾರ, ಅಲಂಕಾರವು ಕೇವಲ ಮಾನ ಮುಚ್ಚುವುದಕ್ಕೆ ಇರುವಂಥದಲ್ಲ, ಅದರಲ್ಲಿ ಲೈಂಗಿಕ ಆಕರ್ಷಣೆಯೇ ಪ್ರಧಾನವಾಗಿರುತ್ತದೆ. ಅಲಂಕಾರದ ಮೇಲೆ ಪ್ರಾದೇಶಿಕತೆಯ ಪ್ರಭಾವವೂ ಇರುತ್ತದೆ.

ಭಾರತೀಯ ಪರಂಪರೆಯಲ್ಲಿ ಉಡುಗೆ ತೊಡುಗೆಗೆ ಕ್ರಮಬದ್ಧವಾದ ಬೆಳವಣಿಗೆಯಿದ್ದು, ಅದನ್ನು ಕುರಿತ ಸ್ಪಷ್ಟ ಕಲ್ಪನೆಯು 'ಅಮರ ಕೋಶ'ದಲ್ಲಿ ಹೀಗೆ ಬರುತ್ತದೆ (ರಂಗನಾಥ ಶರ್ಮ; ಎನ್. ಪು. ೧೪೦-೧೪೭).

| | |
|---|---|
| ವಾಲಪಾಶ್ಯಾ, ಪಾರಿತಥ್ಯಾ | – ಕೇಶದಲ್ಲಿ ಧರಿಸುವ ಜಡಬಿಲ್ಲೆ. |
| ಪತ್ರಪಾಶ್ಯಾ, ಲಲಾಟಿಕಾ | – ಹಣೆಯ ಮೇಲ್ಗಡೆ ತೂಗುವ ಆಭರಣ. |
| ಕರ್ಣಿತಾ, ತಾಲಪತ್ರ | – ಸ್ತ್ರೀಯರು ಧರಿಸುವ ಓಲೆ. |

| | |
|---|---|
| ಕರ್ಣವೇಷ್ಟನ | – ಕಿವಿಯುಂಗುರ. |
| ಗ್ರೈವೇಯಕ, ಕಂಠಭೂಷಣ | – ಅಡ್ಡಿಕೆ, ತಾಳಿ ಮೊದಲಾದ ಕಂಠಾಭರಣ. |
| ಪ್ರಾಲಂಬಿಕಾ | – ಚಿನ್ನದ ಸರ. |
| ಉರಸ್ಸೂತ್ರಿಕಾ, ಹಾರ, ಮುಕ್ತಾವಲೀ | – ಮುತ್ತಿನ ಸರ. |
| ದೇವಚ್ಛಂದ | – ನೂರು ಎಳೆಗಳಿರುವ ಮುತ್ತಿನ ಸರ. |

ಮುಂದಿನವುಗಳು ಸಂಖ್ಯಾಭೇದದಿಂದ ಆಗುವ ವಿವಿಧ ಮುತ್ತಿನ ಸರಗಳು:–

| | |
|---|---|
| ೩೨ ಎಳೆ | – ಗುತ್ಸಾ. |
| ೨೪ ಎಳೆ | – ಗುತ್ಸಾರ್ಧ. |
| ೩೪ ಎಳೆ | – ಗೋಸ್ತನ. |
| ೨೦ ಎಳೆ | – ಅರ್ಧಹಾರ, ಮಾಣವಕ. |
| ೧ ಎಳೆ | – ಏಕಾವಲಿ |
| ೨೭ ಮುತ್ತುಗಳುಳ್ಳ ಒಂದೆಳೆಯ ಸರ | – ನಕ್ಷತ್ರಮಾಲಾ. |
| ಅವಾಪಕ, ಪಾರಿಹಾಯಣ, ಕಟಕ, ವಲಯ | – ಕೈ ಬಳೆ. |
| ಕೇಯೂರ, ಅಂಗದ | – ತೋಳಿನ ಒಡವೆ. |
| ಅಂಗುಲೀಯಕ, ಜಾರ್ಮಿಕಾ | – ಉಂಗುರ. |
| ಕಂಕಣ | – ಮಣಿಬಂಧದಲ್ಲಿ ಧರಿಸುವ ಹಸ್ತಾಭರಣ. |
| ಮೇಖಲಾ, ಕಾಂಚೀ, ಸಪ್ತಕೀ, ರಶನಾ, ಸಾರಸನ | – ಹೆಂಗಸರ ಸೊಂಟದ ಆಭರಣ. |
| ಮಂಜೀರ, ನೂಪುರ, ಹಂಸಕ, ಪಾದಕಟಕ | – ಕಾಲಂದಿಗೆ. |
| ಕ್ಷುದ್ರ ಘಂಟಿಕಾ | – ಗೆಜ್ಜೆ, ಕಿರುಗಂಟೆ. |
| ಕಾರ್ಪಾಸ, ಬಾದರ | – ಹತ್ತಿಯ ಬಟ್ಟೆ. |
| ಪತ್ರೋರ್ಣ | – ಒಗೆದ ರೇಶ್ಮೆಯ ಬಟ್ಟೆ. |
| ದುಕೂಲ | – ಪಡೆವಸ್ತ್ರ. |
| ಪಟ್ಟಚ್ಚರ | – ಹರಕು ಬಟ್ಟೆ. |
| ಅಂತರೀಯ, ಉಪಸಂವ್ಯಾನ, ಪರಿಧಾನ, ಅಧೋಂಶುಕ | – ಕೆಳವಸ್ತ್ರ. |
| ಚೋಲ, ಕೂರ್ಪಾಸಕ | – ಹೆಂಗಸರ ಕುಪ್ಪಸ. |
| ಅರ್ದೋರುಕ, ಚಂಡಾತಕ | – ಹೆಂಗಸರ ಲಂಗ. |
| ಆಪ್ರಪದೀನ | – ತುದಿಕಾಲಿನವರೆಗೆ ಇರುವ ಬಟ್ಟೆ. |
| ಪತ್ರಲೇಖಾ, ವತ್ರಾಂಗುಲಿ | – ಹೆಂಗಸರ ಕೆನ್ನೆ, ಕೈ ಮುಂತಾದ |

| | | |
|---|---|---|
| | | ಸ್ಥಳಗಳಲ್ಲಿ ಅಲಂಕಾರಕ್ಕಾಗಿ ಬರೆವ ಚಿತ್ರಲೇಖಿ. |
| ತಮಾಲಪತ್ರ, ತಿಲಕ, ಚಿತ್ರಕ, ವಿಶೇಷಕ | – | ಹಣೆಯ ಮೇಲೆ ಇಟ್ಟುಕೊಳ್ಳುವ ಬಟ್ಟು |
| ರಚನಾ, ಪರಿಸ್ಪಂದ | – | ವಸ್ತ್ರಾದಲಂಕಾರಗಳಲ್ಲಿ ಕೌಶಲ್ಯ ಪ್ರದರ್ಶನ. |

ಕೆಲವು ಮುಖ್ಯವಾದ ಅಂಶಗಳನ್ನು ಮಾತ್ರ ಇಲ್ಲಿ ಗುರುತಿಸಲಾಗಿದೆ. ಇವುಗಳು ಭಾರತೀಯ ಚರಿತ್ರೆಯ ಸ್ತ್ರೀಯರ ವೇಷ ಭೂಷಣದ ಬೆಳವಣಿಗೆಯನ್ನು ಸೂಚಿಸುತ್ತದೆ.

ರನ್ನನ 'ಸಾಹಸಭೀಮ ವಿಜಯ'ದಲ್ಲಿ ವಾಕ್ಸುಂದರಿಯ ಕುರಿತು ಹೇಳುವಾಗ, 'ಪದಿನಾಱಿಲ್ಲವಲಂಕ್ರಿಯಾ ರಚನೆ' ಎಂದು ಬರುತ್ತದೆ (೧; ೭). ಈ ಮಾತಿಗೆ ಟಿಪ್ಪಣಿಯನ್ನು ಮಂಡಿಸುತ್ತಾ ಪ್ರೊ. ಪಿ. ಸುಬ್ರಾಯ ಭಟ್ ಅವರು ಸ್ತ್ರೀಯರ ಹದಿನಾರು ಅಲಂಕಾರಗಳನ್ನು ಹೀಗೆ ಗುರುತಿಸುತ್ತಾರೆ: 'ಸ್ನಾನ, ವಿಲೇಪನ, ವಸ್ತ್ರ, ಶಿರೋಭೂಷಣ, ಒಡ್ಯಾಣ, ನೂಪುರ, ಆಲಕ್ತಲೇಪನ' (ಸುಬ್ರಾಯ ಭಟ್. ಪಿ. (ಅನು) ೧೯೭೫. ಪು. ೭) ಇವು ಮುಖ್ಯವಾಗಿ ಸ್ತ್ರೀಯರ ಅಲಂಕಾರವನ್ನು ಸೂಚಿಸುತ್ತವೆ. ಎಂದಿದ್ದಾರೆ.

*ವಿವರಗಳಿಗೆ ನೋಡಿ: James Hastings: (Ed): 1967*

*Encyclopedia Religion & Ethics (Vol-5) – (Vol-10) P. 42.*

### ೭೬೧. ಹೈಹಯರು

ತ್ರಿಪುರಿಯ ಚೇದಿವಂಶದ ರಾಜರು ಹೈಹಯರೆಂದು ವಾಡಿಕೆಯಿದೆ. ಬಾದಾಮಿಯ ಮಂಗಳೀಶನು ಹೈಹಯ ವಂಶದ ಬುದ್ಧರಾಜನನ್ನು ಗೆದ್ದು ತಂದ ಸಂಪತ್ತಿನಿಂದ ಮಹಾಕೂಟದ ಹತ್ತಿರ ವಿಜಯಸ್ತಂಭವನ್ನು ನಿಲ್ಲಿಸಿದನು (ಕ್ರಿ. ಶ. ೫೯೭). ಚೇದಿಯರ ಮನೆತನದ ಕನ್ನೆಯರನ್ನು ಮಳಖೇಡಿನ ರಾಷ್ಟ್ರಕೂಟರು ಮದುವೆಯಾಗುತ್ತಿದ್ದರು. ಕಂನಾಡಿನಲ್ಲಿ ಹೈಹಯರು ಬಂದು ಕಂನಾಡವರೇ ಆಗಿಬಿಟ್ಟುದೂ ಉಂಟು. ಇಲ್ಲಿ ಆಳಿದ ಬಿಜ್ಜಳಾದಿ ಕಲಚೂರಿಗಳು ಹೈಹಯರು ಬಂದು ಕಂನಾಡವರೇ ಆಗಿಬಿಟ್ಟುದೂ ಉಂಟು. ಇಲ್ಲಿ ಆಳಿದ ಬಿಜ್ಜಳಾದಿ ಕಲಚೂರಿಗಳು ಹೈಹಯರು. ಕಾರ್ತವೀರ್ಯಾರ್ಜುನನ ವಂಶದವರೆಂದುಕೊಳ್ಳುವ ಕೆಲವು ಕ್ಷತ್ರಿಯರು ಈಗ ಈ ನಾಡಿನಲ್ಲಿದ್ದಾರೆ. ಇದು ಶಂಬಾರವರ ಅಭಿಪ್ರಾಯ.

*ವಿವರಗಳಿಗೆ ನೋಡಿ: ಶಂಬಾ ಜೋಶಿ ೧೯೯೯ ಸಂಪುಟ. ೨ ಪುಟ. ೧೮೦.*

### ೭೬೨. ಹೊರಾಂಗಣ ಕ್ರೀಡೆ

'ಕ್ರೀಡೆ' ಎನ್ನುವುದಕ್ಕೆ ಅಮರಕೋಶದಲ್ಲಿ ಹೀಗೆ ಹೇಳಲಾಗಿದೆ:

'ದ್ರವ, ಕೇಲಿ, ಪರೀಹಾಸ, ಕ್ರೀಡಾ, ಲೀಲಾ, ನರ್ಮನ್ – ಕ್ರೀಡೆ, ವಿನೋದ ಮತ್ತು ಕ್ರೀಡಾ ಖೇಲಾ, ಕೂರ್ದನ – ಆಟ (ರಂಗನಾಥ ಶರ್ಮಾ. ಎನ್., ೧೯೭೫.

ಪು. ೪೮-೪೯). ಈ ಅರ್ಥದಲ್ಲಿ 'ಕ್ರೀಡೆಯೆಂದರೆ, ವಿನೋದವನ್ನು ಉಂಟುಮಾಡುವಂತಹುದು ಎಂದು ಗ್ರಹಿಸಬಹುದು. 'ಕ್ರೀಡೆ'ಯು ಮನೋಲ್ಲಾಸವನ್ನು ಉಂಟುಮಾಡುತ್ತದೆ. ಈ ಅರ್ಥದ ಹಿನ್ನೆಲೆಯಲ್ಲಿಯೇ ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಉತ್ತಮವಾಗಿರುವ ಕ್ರೀಡೆಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಉಲ್ಲೇಖಗೊಂಡ ಹೊರಾಂಗಣ ಕ್ರೀಡೆಗಳಲ್ಲಿ ಮುಖ್ಯವಾದುದು – ಜಲಕ್ರೀಡೆ ಮತ್ತು ವನಕ್ರೀಡೆ, ಕನ್ನಡ ಬಹುತೇಕ ಕೃತಿಗಳಲ್ಲಿ ಈ ಕ್ರೀಡೆಗಳ ಉಲ್ಲೇಖಗಳಿವೆ. ಅಷ್ಟಾದಶ ವರ್ಣನೆಗಳಲ್ಲಿ ಜಲಕ್ರೀಡೆ ಮತ್ತು ವನ ವಿಹಾರದ ವರ್ಣನೆಗಳು ಬರುತ್ತವೆಯಾದ್ದರಿಂದ ಈ ಕ್ರೀಡೆಗೆ ಪ್ರಾಶಸ್ತ್ಯ ಸಂದಿರಬೇಕು. ಕೆಲವನ್ನು ಮಾತ್ರ ಉದಾಹರಿಸಬಹುದು:

'ವಡ್ಡಾರಾಧನೆ'ಯಲ್ಲಿ ಸ್ತ್ರೀಯೊಬ್ಬಳಿಗೆ ಅವಳು ಗರ್ಭಿಣಿಯಾಗಿದ್ದಾಗ ಅವಳಿಗೆ ಜಲಕ್ರೀಡೆಯಾಡುವ ಬಯಕೆಯು ಉಂಟಾಗುತ್ತದೆ (೧೧-೨೩೨). ಇದೇ ಕೃತಿಯಲ್ಲಿ ಸ್ತ್ರೀಯರ ವನ ಕ್ರೀಡೆಯ ವಿಚಾರವು ಬರುತ್ತದೆ (೧೧-೨೩೨). ಪಂಪನ 'ಆದಿಪುರಾಣ'ದಲ್ಲಿ ವನಕ್ರೀಡೆ, ಜಲಕ್ರೀಡೆ, ನರ್ತನ ಕ್ರೀಡೆಯೆನ್ನುವ ಉಲ್ಲೇಖವಿದ್ದು, ಇವು ಸ್ತ್ರೀ ಸಂಬಂಧಿಯಾಗಿದೆ (ಬಸವರಾಜು ಎಲ್. (ಸಂ) ೧೯೭೬. ಪು. ೨೧). ಭರತನು ತನ್ನ ಅಂತಃಪುರದ ಸ್ತ್ರೀಯರೊಡನೆ ವಿಹಾರಮಾಡಿದ ವರ್ಣನೆಯು ದೀರ್ಘವಾಗಿ ಪಂಪನ 'ಆದಿಪುರಾಣ'ದಲ್ಲಿ ಬರುತ್ತದೆ (೧೧-೬೯, ೧೪೮). ಇದರಲ್ಲಿ 'ಕುಸುಮಾಪಚಯ ಕ್ರೀಡೆ' (೧೧-೯೩ವ) ವನಕ್ರೀಡೆ (ಅದೇ)ಯ ವಿವರವು ಬರುತ್ತದೆ. ಪಂಪನು ನಾನಾ ಕ್ರೀಡೆಗಳನ್ನು ಹೀಗೆ ಬಣ್ಣಿಸುತ್ತಾನೆ (೧೧-೬೯-೧೪೮): 'ಸ್ತ್ರೀಯರು ಅಶೋಕದ ವೃಕ್ಷಗಳನ್ನು ಎಡಗಾಲಿಂದ ತುಳಿದರು. ಮುಖ ಕಮಲದ ಮಧ್ಯವನ್ನು ಉಗುಳುವುದರಿಂದ ಬಕುಳದ ಮರಗಳು ಅರಳಿದವು. ಉನ್ನತ ಸ್ತನಗಳಿಂದ ಮರವನ್ನು ಆಲಂಗಿಸಿದರು. ಮುಕ್ಕುಳಿಸಿದ ಹಾಲಿನ ಸೇಚನೆಯಿಂದ ಸಂಪಿಗೆ ಮರಗಳು ಅರಳಿದವು. ಈ ರೀತಿಯಾಗಿ ಅವರು ಉಪವನದ ಕ್ರೀಡೆಯನ್ನು ಪೂರೈಸಿದರು. ನಂತರ ಅವರ ಜಲಕ್ರೀಡೆಯನ್ನು ಆಡಿದರು.

ಇಲ್ಲಿ ವನಕ್ರೀಡೆಯೂ, ಜಲಕ್ರೀಡೆಯೂ ಮುಖ್ಯವಾದುದು. ಅಂತಃಪುರದ ಸ್ತ್ರೀಯರಿಗೆ ಉಂಟಾದ ಜಡತ್ವವನ್ನು ನೀಗಿಸುವುದಕ್ಕೆ ಈ ವನಕ್ರೀಡೆ, ಜಲಕ್ರೀಡೆಗಳು ರೂಪುಗೊಂಡಿರುವುದನ್ನು ಕಾವ್ಯಗಳು ತಿಳಿಸುತ್ತವೆ. ವನಕ್ರೀಡೆಯ ಉಪವಿಭಾಗವಾಗಿ ಪುಷ್ಪಾಚಯ ಕ್ರೀಡೆ [ಪುಷ್ಪಾಚಯ ಎಂದರೆ Gathering or collecting of flowers ಎಂದು ಕಿಟ್ಟೆಲ್ ಹೇಳಿದ್ದಾರೆ (ಮರಿಯಪ್ಪಭಟ್, ೧೯೭೫, ಕಿಟ್ಟೆಲ್ ಕೋಶ Vol III. P. ೧೦೫೫)]ಯು ಬರುತ್ತದೆ. ಪುಷ್ಪಾಚಯದ ಕ್ರೀಡೆಯು ಚೇಷ್ಟೆಯ ರೂಪದಲ್ಲಿಯೂ ವ್ಯಕ್ತವಾಗುವುದರಿಂದ, ಉಪವನದ ಕ್ರೀಡೆಯು ಅಂತಃಪುರದ ಸ್ತ್ರೀಯರಿಗೆ ಹೊರಗಿನ ಪ್ರಪಂಚದ ಅರಿವೇ ಇರುವ ಸಾಧ್ಯತೆಯು ಇಲ್ಲದ್ದರಿಂದ ಪುಷ್ಪಾಪಚಯವೂ ಒಂದು ಕ್ರೀಡೆಯಾಗುತ್ತದೆ ಮತ್ತು ಈ ಕ್ರೀಡೆಯು ಮೇಲುವರ್ಗದ ಸ್ತ್ರೀಯರ ಅಭಿವ್ಯಕ್ತಿಯೂ

ಆಗುತ್ತದೆ. ಜಲ ಕ್ರೀಡೆಯಲ್ಲಿ ಇರುವ ಭಿನ್ನ ವಿಧಗಳನ್ನು ಪಂಪನು ಈ ರೀತಿಯಾಗಿ ಹೆಸರಿಸುತ್ತಾನೆ:.

ಕಮಲ, ನೀಲೋತ್ಪಲ, ಆನೆಯ ಸೊಂಡಿಲು ಮತ್ತು ಹಂಸಿಯ ಮುಖಗಳ ಆಕೃತಿಯಲ್ಲಿರುವ ಜೀರ್ಕೊಳವೆಗಳಿಂದ ನೀರಾಟ (ಅದೇ),

ಪಂಪನ 'ವಿಕ್ರಮಾರ್ಜುನ ವಿಜಯ'ದಲ್ಲಿ ಮಾದ್ರಿಯು ಕ್ರೀಡಾನುಶೀಲಿಯಾಗಿ ವನಕ್ರೀಡೆಗೆ ಒಬ್ಬಳೇ ಹೋದ ವಿಚಾರವು ಉಲ್ಲೇಖಿತವಾಗಿದೆ (೨-೧೫ವ). ಇದರಿಂದ ವನಕ್ರೀಡೆಯು ಪುರುಷರೊಂದಿಗೆ ಇದ್ದಂತೆಯೇ ಸ್ತ್ರೀಯರೂ ತಮ್ಮ 'ಏಕಾಂತ ಮನೋರಂಜನೆ'ಗಾಗಿ ವನಕ್ರೀಡೆಯನ್ನು ಮಾಡುತ್ತಿದ್ದರು ಎಂದು ತಿಳಿಯಬಹುದಾಗಿದೆ.

ಸ್ತ್ರೀಯರ ಉಯ್ಯಾಲೆಯಾಟದ ಕುರಿತು ಅನೇಕ ಕೃತಿಗಳಲ್ಲಿ ಉಲ್ಲೇಖಗಳಿವೆ. ಕೆಲವು ಕೃತಿಗಳನ್ನು ಇಲ್ಲಿ ಉಲ್ಲೇಖಿಸಬಹುದು: ಪೊನ್ನನ 'ಶಾಂತಿಪುರಾಣ' (೪-೯೬),

ವಿದೇಶಿ ಪ್ರವಾಸಿಗರು ಕೋಲಾಟವನ್ನು ಕುರಿತು ಹೇಳಿದ್ದನ್ನು ಡಾ. ಶಿವಾನಂದ ವಿರಕ್ತಮಠ ಅವರು ಗುರುತಿಸುತ್ತಾರೆ (ಶಿವಾನಂದ ವಿರಕ್ತಮಠ, ೧೯೭೮. ಪು. ೬೨): "ಸಮವಯಸ್ಕರಾದ ಸ್ತ್ರೀ ಪುರುಷರು ಒಂದೇ ಆಕಾರದ ಪೋಷಾಕು ಧರಿಸಿ ಸಮೂಹಗಾನ ಹಾಡುತ್ತ ಕೋಲಾಟವನ್ನಾಡುತ್ತಿದ್ದರೆಂದೂ, ಆ ಕಾಲಕ್ಕೆ ಮೃದಂಗ ಹಾಗೂ ನಾನಾ ಪ್ರಕಾರದ ವಾದ್ಯ ವಿಶೇಷವನ್ನು ಬಳಸುತ್ತಿದ್ದರೆಂದೂ 'ಪೈಟ್ರೋಡೆಲ್ಲ್ ವೆಲ್ಲಿ (Pietrodella Valle) ಎಂಬ ಪ್ರವಾಸಿ ಇಕ್ಕೇರಿಯಲ್ಲಿ ತಾನು ಕಂಡ ಕೋಲಾಟವನ್ನು ವರ್ಣಿಸುತ್ತಾನೆ" ಇದರಿಂದ ಸ್ತ್ರೀಯರ ಕೋಲಾಟದ ಬಗೆಗೆ ಐತಿಹಾಸಿಕವಾಗಿಯೂ ದಾಖಲೆ ಸಿಕ್ಕಿದಂತಾಗಿದೆ.

ಪಂಪನ 'ವಿಕ್ರಮಾರ್ಜುನ ವಿಜಯ'ದಲ್ಲಿ ಮತ್ತೊಂದು ಕ್ರೀಡೆಯ ಕುರಿತು ಸೂಚನೆಯು ಬರುತ್ತದೆ (೪೯೦ವ) 'ಅಂತಾಕೆಗಳ ತೂಗಿತೂನೆವ ತೊನೆಪಂಗಳುಮಂ ಮರಸರಿಗೆವಿಡಿದು ಬಿಲ್ವಿಡಿದಾಡುವ ಬೂತಾಡಗಳುಮಂ...'

ಇದನ್ನು ಅನುವಾದಿಸುತ್ತಾ ಅನಂತ ರಂಗಾಚಾರ್ ಹೀಗೆ ಹೇಳುತ್ತಾರೆ (ಅದೇ): "ಹಾಗೆ ಅವರು ಆ ಕಡೆಗೂ ಈ ಕಡೆಗೂ ಅಳ್ಳಾಡುವ ತೂಗಾಟಗಳನ್ನೂ ಮರಸರಿಗೆ (?) ಯನ್ನೂ ಬಿಲ್ಲನ್ನೂ ಹಿಡಿದು ಭೂತಗಳ ಆಟವನ್ನು(ಬೂತಾಟಂ ?) ಡಿ.ಎಲ್. ನರಸಿಂಹಾಚಾರರು 'ಮರಸರಿಗೆ ವಿಡಿದು'=ದೊಡ್ಡ ಚೆಂಬನು ಹಿಡಿದುಕೊಂಡು – ಎಂದಷ್ಟೇ ಸೂಚಿಸಿದ್ದಾರೆ (ಡಿ.ಎಲ್. ನರಸಿಂಹಾಚಾರ್. ೧೯೭೬..ಪು. ೧೬೯). ಡಾ. ಅರವಿಂದ ಮಾಲಗತ್ತಿಯವರು ಹೀಗೆ ಹೇಳುತ್ತಾರೆ.

"ಪಂಪ ಭಾರತದಲ್ಲಿ ಗೋಲಿ ಆಟದ ಉಲ್ಲೇಖ ಸ್ಪಷ್ಟವಾಗಿ ಬಂದಿದೆ ಎಂದು ಹೇಳಲಾಗದಿದ್ದರೂ ಊಹಿಸದೆ ಇರಲಾಗದು. ಹೆಣ್ಣು ಮಕ್ಕಳು ಸೇರಿಕೊಂಡು ನಲಿದಾಡುವ ಸಂದರ್ಭದಲ್ಲಿ..." ಮರಸರಿಗೆವಿಡಿದು, ಬಿಲ್ವದಾಡುವ... ಎಂದು ಮುಂತಾಗಿ ಬರುತ್ತದೆ. 'ಮರಸರಿಗೆ' ಎಂಬ ಶಬ್ದಕ್ಕೆ ಪಂಪ ಭಾರತದ ಕಥಾಲೋಕದಲ್ಲಿ ದೊಡ್ಡ ಚೆಂಬೂ ಎಂದು ಅರ್ಥೈಸಲಾಗಿದೆ (ಅನಂತರಾಮಯ್ಯ ಆರ್.ಎಲ್. ಪಂಪ ಭಾರತದ

ಕಥಾಲೋಕ – ೬೯). ಅನಂತರಾಮಯ್ಯ ಅವರು ಕೊಡುವ ಅರ್ಥ ಅಷ್ಟಾಗಿ ಒಪ್ಪಿಸಬೇಕೆನಿಸದು. ಏಕೆಂದರೆ ಬಳಕೆಯಾಗುವ ಆಟದ ಉಪಕರಣ ಮತ್ತು ಅಲ್ಲಿಯ ಸಂದರ್ಭ, ಇವೆರಡಕ್ಕೂ 'ದೊಡ್ಡ ಜೊಂಬು' ಎನ್ನುವ ಅರ್ಥ ದೂರವಾಗುತ್ತದೆ ಆದರೆ ಮರಸರಿಗೆ ಎಂಬುದು ಆಟದ ಆಟಿಕೆಯ ಹೆಸರು ಎನ್ನುವುದು ಸ್ಪಷ್ಟ. ಮರ – ದೊಡ್ಡ, ಸರಿಗೆ – ಜೊಂಬು ಎಂದು ಶಬ್ದಶ: ಅರ್ಥಕ್ಕೆ ಒಡೆದು ನೋಡಿದಂತಿದೆ. ಇಲ್ಲಿ ಸರಿಗೆ ಎಂಬ ಶಬ್ದಕ್ಕೆ ಬಳಸಲಾದ ಅರ್ಥ ಸಂದೇಹಾಸ್ಪದವಾಗಿದೆ. ಈಗಲೂ ಹಳ್ಳಿಗಳಲ್ಲಿ 'ಸರಿಗೆ' ಎಂದರೆ ಮುಂಗೈ ಅಥವಾ ತೋಳುಗಳಲ್ಲಿ ಹಾಕಿಕೊಳ್ಳುವ ಬೆಳ್ಳಿ ತಂತಿಯಿಂದ ಮಾಡಿದ ಗೊಲಾಕಾರವಾದ (ಗಾಲಿಯ ಆಕಾರ) ಆಭರಣ ಎಂದು ಹೇಳುವುದಿದೆ (ಸರಿಗೆಯನ್ನು ದುರಮಾಮಾ ಅಥವಾ ಕೋದಂಡ ಮಾಮಾಗಳು ಬೀರುಗಳಿಂದ ಮಾಡಿ ಹಾಕಿಕೊಳ್ಳುವುದು ಇಲ್ಲಿ ನೆನೆಯ ಬಹುದು). ಬಹುಶಃ ಈ ಸರಿಗೆಯೇ ಅಲ್ಲಿ 'ಗಾಲಿ' ಎನ್ನುವ ಅರ್ಥದಲ್ಲಿ ಬಳಸಿರಬೇಕು. ಇನ್ನು ಮರಗೆರಸೆ ಎಂದರೆ 'ಕಟ್ಟಿಗೆಯಿಂದ ಮಾಡಿದ ಗಾಲಿ' ಅಥವಾ 'ಹಿರಿದಾದ ಗಾಲಿ' ಎಂದಾಗುತ್ತದೆ.

*ವಿವರಗಳಿಗೆ ನೋಡಿ: ಅರವಿಂದ ಮಾಲಗತ್ತಿ ೧೯೮೫ ಜಾನಪದ ಕ್ರೀಡೆಗಳು ಪುಟ. ೬*

*ಡಾ. ಶಿವಾನಂದ ವಿರಕ್ತಮಠ ೧೯೭೮ ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ ಪುಟ. ೬*

*ಡಿ.ಎಲ್. ನರಸಿಂಹಾಚಾರ್ ೧೯೭೧ ಪಂಪಭಾರತ ದೀಪಿಕೆ ಪುಟ. ೧೬*

# ಮೂಲಕೃತಿಗಳು

ಟಿ.ಕೇಶವಭಟ್ಟ, ೨೦೧೦, ವಡ್ಡಾರಾಧನೆ ಗದ್ಯಾನುವಾದ, ಕನ್ನಡ ಸಾಹಿತ್ಯ ಪರಿಷತ್ತು ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ ಬೆಂಗಳೂರು.

ಎಂ.ವಿ.ಸೀತಾರಾಮಯ್ಯ, ೨೦೦೫, ಶ್ರೀ ವಿಜಯ ಕೃತ ಕವಿರಾಜಮಾರ್ಗಂ ಕನ್ನಡ ಸಾಹಿತ್ಯ ಪರಿಷತ್ತು, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ ಬೆಂಗಳೂರು.

ಡಾ॥ ಟಿ.ವಿ.ವೆಂಕಟಾಚಲಶಾಸ್ತ್ರಿ, ೨೦೦೬, ಪಂಪ ಸಂಪುಟ ಆದಿಪುರಾಣಂ ವಿಕ್ರಮಾರ್ಜುನ ವಿಜಯಂ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ ಹಂಪಿ.

ಎಸ್.ಜಿ. ನರಸಿಂಹಾಚಾರ್, ೧೯೦೦, ಪಂಪಕವಿ ವಿರಚಿತಂ ಆದಿಪುರಾಣಂ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ನೃಪತುಂಗ ರಸ್ತೆ ಬೆಂಗಳೂರು.

ಎನ್.ಅನಂತರಂಗಾಚಾರ್, ೨೦೧೦, ಪಂಪ ಮಹಾಕವಿ ವಿರಚಿತ ಪಂಪ ಭಾರತಂ (ವಿಕ್ರಮಾರ್ಜುನ ವಿಜಯ) (ಗದ್ಯಾನುವಾದ), ಕನ್ನಡ ಸಾಹಿತ್ಯ ಪರಿಷತ್ತು, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ ಬೆಂಗಳೂರು.

ಆರ್.ವಿ.ಕುಲಕರ್ಣಿ, ೨೦೦೮, ಕವಿಚಕ್ರವರ್ತಿ ಕವಿರನ್ನ ವಿರಚಿತಂ ಸಾಹಸ ಭೀಮ ವಿಜಯಂ (ಗದಾಯುದ್ಧಂ) (ಗದ್ಯಾನುವಾದ), ಕನ್ನಡ ಸಾಹಿತ್ಯ ಪರಿಷತ್ತು, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು.

ಬಿ.ಎಸ್.ಸಣ್ಣಯ್ಯ, ಡಾ.ರಾಮೇಗೌಡ, ೨೦೦೪, ರನ್ನ ವಿರಚಿತ ಅಜಿತ ತೀರ್ಥಂಕರ ಪುರಾಣಂ, ಕನ್ನಡ ಸಾಹಿತ್ಯ ಪರಿಷತ್ತು, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ ಬೆಂಗಳೂರು.

ಹ.ವೆ. ನಾರಾಯಣಶಾಸ್ತ್ರಿ, ೧೯೯೯, ನಾಗವರ್ಮ ವಿರಚಿತ ಕರ್ಣಾಟಕ ಕಾದಂಬರಿ (ಗದ್ಯಾನುವಾದ), ಕನ್ನಡ ಸಾಹಿತ್ಯ ಪರಿಷತ್ತು ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ ಬೆಂಗಳೂರು.

ಡಾ। ಸಿ.ಪಿ.ಕೃಷ್ಣಕುಮಾರ್, ೧೯೯೪, ದುರ್ಗಸಿಂಹ ವಿರಚಿತ ಕರ್ನಾಟಕ ಪಂಚತಂತ್ರಂ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

ಡಾ. ವೀರೇ ಬಡಿಗೇರ, ೨೦೦೨, ವಿಷ್ಣುಶರ್ಮನ ಪಂಚತಂತ್ರ ಕಥೆಗಳು, ಕನ್ನಡ ಸಾರಸಂಗ್ರಹ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ ಹಂಪಿ.

ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್, ೨೦೦೬, ನಾಗವರ್ಮ ಸಂಪುಟ ಕಾವ್ಯಾವಲೋಕನಂ, ಕರ್ಣಾಟಕ ಭಾಷಾ ಭೂಷಣಂ ಅಭಿಧಾನವಸ್ತುಕೋಶಂ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

ಟಿ.ಎಸ್. ಶಾಮರಾವ್, ಡಿ.ಎಲ್. ನರಸಿಂಹಾಚಾರ್, ೧೯೫೪, ಶಾಂತಿನಾಥ ಕವಿಯ ಸುಕುಮಾರ ಚರಿತಂ, ಕರ್ನಾಟಕ ಸಂಘ, ಶಿವಮೊಗ್ಗ.

ಕೆ.ಎಲ್. ನರಸಿಂಹಶಾಸ್ತ್ರಿ, ೨೦೦೯, ಪಂಪಮಹಾಕವಿ ವಿರಚಿತ ಆದಿಪುರಾಣ, ಕನ್ನಡ ಸಾಹಿತ್ಯ ಪರಿಷತ್ತು, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು.

